ಶ್ರೀ

ಶ್ರೀರಾಮಚಂದ್ರ ಪರಬ್ರಹ್ಮಣೇನಮಃ

ಕರ್ಣಾಟಕ ಟೀಕಾ, ತಾತ್ಪರ್ಯ, ವ್ಯಾಖ್ಯಾನ ಷಟ್ಕ ಸಮೇತವಾದ

# ಶ್ರೀಮದ್ವಾಲ್ಮೀಕಿ ರಾಮಾಯಣ

# ಯುದ್ಧಕಾಂಡ

ಸಂಪಾದಕರು

ಮೋಟಗಾನಹಳ್ಳಿ, ವೇ॥ ಬ್ರಂ॥ ಸುಬ್ರಹ್ಮಣ್ಯಶಾಸ್ತ್ರಿಗಳು

ಮುದ್ರಾಪಕರು ಮತ್ತು ಪ್ರಕಾಶಕರು

ವಾಜಪೇಯಂ ಗೋವಿಂದಯ್ಯನವರು

ಶ್ರೀ ವೆಂಕಟಾದ್ರಿ ಮುದ್ರಾಕ್ಷರಶಾಲಾಧ್ಯಕ್ಷರು

ಬೆಂಗಳೂರು ಸಿಟಿ

1938

# ವಿ ಷ ಯಾ ನು ಕ್ರ ಮ ಣಿ ಕೆ

# ಚಿತ್ರಗಳು

ಓಂ

ಶ್ರೀರಾಮಚಂದ್ರ ಪರಬ್ರಹ್ಮಣೇನಮಃ

# ಶ್ರೀ ಮ ದ್ರಾ ಮಾ ಯ ಣೇ

## ಯುದ್ಧಕಾಂಡೇ ಪ್ರಥಮಸರ್ಗ ಪ್ರಾರಂಭಃ

ಕೂಜಂತಂ ರಾಮ ರಾಮೇತಿ ಮಧುರಂ ಮಧುರಾಕ್ಷರಂ ।
ಆರುಹ್ಯ ಕವಿತಾಶಾಖಾಂ ವಂದೇ ವಾಲ್ಮೀಕಿ ಕೋಕಿಲಂ ॥

¶ **ಶ್ರುತ್ವಾ ಹನುಮತೋ ವಾಕ್ಯಂ ಯಥಾವದಭಿಭಾಷಿತಂ ।**

**—: ಅ ವ ತಾ ರಿ ಕೆ :—**

ಜಯತಿ ರಘುವಂಶತಿಲಕಃ ಕೌಸಲ್ಯಾಹೃದಯ ನಂದನೋ ರಾಮಃ ।
ದಶವದ ನಿಧನಕಾರೀ ದಾಶರಥಿಃ ಪುಂಡರೀಕಾಕ್ಷಃ ॥

ಸುಂದರಕಾಂಡದಲ್ಲಿ ಪುರುಷಾಕಾರಭೂತೆಯಾದ ಸೀತಾದೇವಿ (ಲಕ್ಷ್ಮಿ)ಯ ಕೃತ್ಯವು ಹೇಳಲ್ಪಟ್ಟಿತು. ಈ ಕಾಂಡವು ಆಕೆಯನ್ನು ಹೊಂದಲು ಶ್ರೀರಾಮಮೂರ್ತಿಯ ಉಪಾಯಕೃತ್ಯವನ್ನು ಹೇಳಲುಪಕ್ರಮಿಸಿದೆ. ಇದರಲ್ಲಿ ಮೊದಲನೆಯದಾಗಿ ಪ್ರಭುವಾದವನು, ತಾನು ಆಜ್ಞಾಪಿಸಿದ ಕಾರ್ಯವನ್ನು ನಿರ್ವಹಿಸಿಕೊಂಡು ಬಂದ ಭೃತ್ಯನಲ್ಲಿ ಹೇಗೆ ನಡೆದುಕೊಳ್ಳಬೇಕೆಂಬ ವಿಚಾರವನ್ನು ಲೋಕಕ್ಕೆ ಉಪದೇಶ ಮಾಡಲೋಸುಗ ಶ್ರೀರಾಮಮೂರ್ತಿಯು ಸುಗ್ರೀವನೇ ಮೊದಲಾದ ವಾನರಯೂಥಪತಿಗಳ ಉತ್ಸಾಹವನ್ನು ವೃದ್ಧಿಗೊಳಿಸುತ್ತ, ತನ್ನ ಪ್ರಿಯೆಯಾದ ಸೀತಾದೇವಿಯ ವೃತ್ತಾಂತವನ್ನು ತಂದು ಹೇಳಿದ ಹನುಮಂತನನ್ನು ಸತ್ಕರಿಸುವನು. (ಗೋವಿಂದರಾಜರು)

ಸುಂದರಕಾಂಡದಲ್ಲಿ ವಾನರವೀರನಾದ ಹನುಮಂತನು ದುಸ್ತರವೂ, ಅಪಾರವೂ ಆದ ಮಹಾಸಾಗರವನ್ನು ಗೋಷ್ಪದದಂತೆ ದಾಟಿ, ನಿರಾತಂಕವಾಗಿ ಲಂಕಾಪಟ್ಟಣವನ್ನು ಪ್ರವೇಶಿಸಿ, ಸೀತಾದೇವಿಯನ್ನು ಹುಡುಕಿ ಕಂಡುದು ಮಾತ್ರವಲ್ಲದೆ, ಅಶೋಕವನಭಂಗವೇ ಮೊದಲಾದ ಅಮಾನುಷ ಕಾರ್ಯಗಳನ್ನು ಮಾಡಿ ಪುನಃ ಹಿಂತಿರುಗಿ ಬಂದು, ಅಂಗದ ಜಾಂಬವದಾದಿ ವಾನರವೀರರೊಡನೆ ಕಿಷ್ಕಿಂಧೆಗೈತಂದು, ಸುಗ್ರೀವ ರಾಮರನ್ನು ಸಂದರ್ಶಿಸಿ, ಅಭಿಜ್ಞಾನಪೂರ್ವಕವಾಗಿ ಸೀತಾ ವೃತ್ತಾಂತವನ್ನವರಿಗೆ ಅರಿಕೆ ಮಾಡಿದನೆಂಬ ಕಥಾಭಾಗವು ನಿರೂಪಿತವಾಯಿತು. ಈ ಕಾಂಡದಲ್ಲಿ ಆದಿಕವಿಯು ಮುಂದಣ ಕಥೆಯನ್ನು ನಿರೂಪಿಸುವವನಾಗಿ ಮೊದಲಲ್ಲಿ ಹನುಮಂತನರಿಕೆಮಾಡಿದ ಪ್ರಿಯೋದಂತದಿಂದ ಸುಪ್ರೀತನಾಗಿ (ಪ್ರಭುವಾದವನು ಕೃತಕಾರ್ಯನಾದ ಭೃತ್ಯನಲ್ಲಿ ನಡೆಯಬೇಕಾದ ನಡೆವಳಿಯನ್ನು ಲೋಕಕ್ಕೆ ಉಪದೇಶ ಮಾಡುವವನಾಗಿ) ಸುಗ್ರೀವನೇ ಮೊದಲಾದ ವಾನರವೀರರನ್ನು ಉತ್ಸಾಹಗೊಳಿಸುತ್ತ ಆ ಹನುಮಂತನನ್ನು ಸತ್ಕರಿಸಿದ ವೃತ್ತಾಂತವನ್ನು ನಿರೂಪಿಸುವನು. (ಮ + ತಿ + ರಾ)

---

¶ ಇಲ್ಲಿ "ಪ್ರತ್ಯಕ್ಷೇ ಗುರವಃ ಸ್ತುತ್ಯಾಃ ಪರೋಕ್ಷೇ ಮಿತ್ರ ಬಾಂಧವಾಃ । ಕಾರ್ಯಾಂತೇ ದಾಸಭೃತ್ಯಾಶ್ಚ ನಕದಾಚನ

**ರಾಮಃ ಪ್ರೀತಿಸಮಾಯುಕ್ತೋ ವಾಕ್ಯಮುತ್ತರಮಬ್ರವೀತ್ ॥೧॥ ***ಕೃತಂ ಹನುಮತಾ ಕಾರ್ಯಂ ಸುಮಹದ್ಭುವಿ ದುರ್ಲಭಂ । ಮನಸಾಪಿ ಯದನ್ಯೇನ ನಶಕ್ಯಂ ಧರಣೀತಲೇ ॥೨॥ ನಹಿ ತಂ ಪರಿಪಶ್ಯಾಮಿ ಯಸ್ತರೇತ \$ ಮಹಾರ್ಣವಂ । ಅನ್ಯತ್ರ ಗರುಡಾದ್ವಾಯೋ ರನ್ಯತ್ರಚ ಹನೂಮತಃ ॥ ೩ ॥ ದೇವದಾನವಯಕ್ಷಾಣಾಂ ಗಂಧರ್ವೋರಗರಕ್ಷಸಾಂ ।**

ರಾಮಃ - ಶ್ರೀರಾಮನು, ಯಥಾವತ್ - ಯಥಾರ್ಥವಾಗಿ, ಅಭಿಭಾಷಿತಂ - ಹೇಳಲ್ಪಟ್ಟ, ಹನುಮತಃ - ಆಂಜನೇಯನ, ವಾಕ್ಯಂ - ಮಾತನ್ನು, ಶ್ರುತ್ವಾ - ಕೇಳಿ, ಪ್ರೀತಿ....ಕ್ತಃ - ವಿಶ್ವಾಸದಿಂದ ಕೂಡಿದವನಾಗಿ, ಉತ್ತರಂ-ಹಿತವಾರ್ತೆಯನ್ನು ಕೇಳಿದ ಬಳಿಕ ನುಡಿಯತಕ್ಕದಾದ, ವಾಕ್ಯಂ- ಮಾತನ್ನು, ಅಬ್ರವೀತ್ - ನುಡಿದನು. ॥ ೧ ॥ ಧರಣೀತಲೇ - ಭೂಮಂಡಲದಲ್ಲಿ, ಅನ್ಯೇನ - ಮತ್ತೊಬ್ಬನಿಂದ, ಯತ್ - ಯಾವ ಕಾರ್ಯವು, ಮನಸಾಪಿ - ಮನಸ್ಸಿನಿಂದಲೂ ಕೂಡ, (ಕರ್ತುಂ - ಮಾಡುವುದಕ್ಕೆ,) ನಶಕ್ಯಂ - ಆಗುವುದಿಲ್ಲವೋ, ಭುವಿ - ಭೂಮಂಡಲದಲ್ಲಿ, ದುರ್ಲಭಂ - ಅಲಭ್ಯವಾದ, ಸುಮಹತ್ - ಮಹತ್ತರವಾದ, ಕಾರ್ಯಂ - (ಸಮುದ್ರಲಂಘನ - ಲಂಕಾಧರ್ಷಣ - ಸೀತಾದರ್ಶನಾದಿ) ಕಾರ್ಯವು, ಹನುಮತಾ - ಆಂಜನೇಯನಿಂದ, ಕೃತಂ - ಮಾಡಲ್ಪಟ್ಟಿತು. ॥ ೨ ॥ ಗರುಡಾತ್ - ಗರುಡನಿಗಿಂತಲೂ, ವಾಯೋಃ - ವಾಯುವಿಗಿಂತಲೂ, ಅನ್ಯತ್ರ - ಮತ್ತೊಂದು ಸ್ಥಳದಲ್ಲಿ, ಹನೂಮತಃ - ಆಂಜನೇಯನಿಗಿಂತಲೂ, ಅನ್ಯತ್ರ - ಮತ್ತೊಂದು ಸ್ಥಳದಲ್ಲಿ, ಯಃ - ಯಾವನು, ಮಹಾರ್ಣವಂ - ಮಹಾ ಸಮುದ್ರವನ್ನು, ತರೇತ - ದಾಟುವನೋ, ತಂ - ಅಂತಹ ಪುರುಷನನ್ನು, ನಪರಿಪಶ್ಯಾಮಿಹಿ - ಎಲ್ಲಿಯೂ ಕಾಣಲೇ ಕಾಣೆನಷ್ಟೆ. ॥೩॥ ದೇವ....ಣಾಂ - ದೇವತೆಗಳು, ದಾನವರು, ಯಕ್ಷರು ಇವರಿಂದಲೂ, ಗಂಧ....ಸಾಂ - ಗಂಧರ್ವರು, ನಾಗರು, ರಾಕ್ಷಸರು ಇವರಿಂದಲೂ,

ಈ ಪ್ರಕಾರವಾಗಿ ಹನುಮಂತನು ಹೇಳಿದ ಯಥಾರ್ಥ ವಚನಗಳನ್ನು ಕೇಳಿ ಶ್ರೀರಾಮಮೂರ್ತಿಯು ಸಂತೋಷಭರಿತನಾಗಿ ಹೀಗೆಂದನು. "ಈ ಹನುಮಂತನು ಭೂಮಂಡಲದಲ್ಲಿ ಯಾರಿಂದಲೂ ಸಾಧಿಸಲಸಾಧ್ಯವಾದ ಮಹತ್ಕಾರ್ಯವನ್ನು ಸಾಧಿಸಿದನು. ಈಗ ಈತನೆಸಗಿರುವ ಅದ್ಭುತ ಕಾರ್ಯವು ಮನಸ್ಸಿನಿಂದಲೂ ಊಹಿಸಲಸದಳವಾದುದು. ಗರುತ್ಮಂತನನ್ನೂ, ವಾಯುವನ್ನೂ, ಹನುಮಂತನನ್ನೂ ಬಿಟ್ಟು ಈ ಮಹಾಸಾಗರವನ್ನು ಲಂಘಿಸಬಲ್ಲ ಬೇರೊಬ್ಬ ವೀರನನ್ನು ಎಲ್ಲಿಯೂ ನಾನು ಕಂಡುದಿಲ್ಲವು. ದೇವತೆ

ಭೃತ್ಯಕಾಃ" ಎಂಬ ನೀತಿಶಾಸ್ತ್ರ ವಚನಾನುಸಾರವಾಗಿ ಶ್ರೀರಾಮಮೂರ್ತಿಯು ಕೃತಕಾರ್ಯನಾಗಿ ಬಂದಿರುವ ಭೃತ್ಯನಾದ ಹನುಮಂತನನ್ನು ಸ್ತುತಿಸುವನೆಂಬುದಾಗಿ ಗ್ರಾಹ್ಯವು. (ಗೋ)

ಈ ಶ್ಲೋಕದಲ್ಲಿ "ಶ್ರುತ್ವಾ ಹನುಮತಃ" ಎಂಬಲ್ಲಿರುವ "ಮ" ಎಂಬ ಐದನೆಯ ಅಕ್ಷರವು ಗಾಯತ್ರೀ ಮಂತ್ರದ ಹದಿನೈದನೆಯ ಅಕ್ಷರವಾಗಿ ಪರಿಗಣಿತವಾಗಿದೆ. ಇಲ್ಲಿಗೆ ಹದಿನಾಲ್ಕುಸಾವಿರ ಶ್ಲೋಕಗಳು ಮುಗಿದು ಹದಿನೈದನೆಯ ಸಾವಿರವು ಮೊದಲಾಗುವುದು. (ಗೋ+ಮ)

* ಇಲ್ಲಿನ ಸ್ವಾರಸಿಕಾರ್ಥ :— ಇಲ್ಲಿ ಮಹತ್-ಸುಮಹತ್-ದುರ್ಲಭಂ ಮನಸಾಪಿ ನಶಕ್ಯಂ ಎಂಬ ನಾಲ್ಕು ಪದಗಳು ಪ್ರಯುಕ್ತವಾಗಿವೆ. ಇವು ನಾಲ್ಕಕ್ಕೂ ಗೋವಿಂದರಾಜರು ಪ್ರಯೋಜನವನ್ನು ಹೇಳುವರು. ಮಹತ್ ಎಂಬುದರಿಂದ ಸಾಗರತರಣವೂ, ಸುಮಹತ್ ಎಂಬುದರಿಂದ ಲಂಕಾಪ್ರವೇಶವೂ, ದುರ್ಲಭಂ ಎಂಬುದರಿಂದ ಲಂಕಾಧರ್ಷಣವೂ, ಮನಸಾಪಿ ನಶಕ್ಯಂ ಎಂಬುದರಿಂದ ಹಿಂತಿರುಗಿ ಬರೋಣವೂ ಹೇಳಲ್ಪಟ್ಟಿರುವುದು. ಈ ವಿಷಯವನ್ನು ಮುಂದೆ ಶ್ರೀರಾಮನೇ ವಿಸ್ತರಿಸಿ ಹೇಳಿರುವನು.

\$ "ಮಹೋದಧಿಂ" ತಿ. ಪಾ.

ಅಪ್ರಧೃಷ್ಯಾಂ ಪುರೀಂ ಲಂಕಾಂ ರಾವಣೇನ ಸುರಕ್ಷಿತಾಂ । § ಯೋ ವೀರ್ಯಬಲ ಸಂಪನ್ನೋ ದ್ವಿಷದ್ಭಿರನಿವಾರಿತಃ । ಪ್ರವಿಷ್ಟಸ್ಸತ್ವಮಾಶ್ರಿತ್ಯ ‡ ಶ್ವಸನ್ನೋ ನಾಮ ನಿಷ್ಕ್ರಮೇತ್? ॥೪॥ ಕೋ ವಿಶೇತ್ಸುದುರಾಧರ್ಷಾಂ ರಾಕ್ಷಸೈಶ್ಚ ಸುರಕ್ಷಿತಾಂ । ಯೋ ವೀರ್ಯಬಲಸಂಪನ್ನೋ ನಸಮಃ ಸ್ಯಾದ್ಧನೂಮತಃ ? ॥೫॥ ಭೃತ್ಯಕಾರ್ಯಂ ಹನುಮತಾ ಸುಗ್ರೀವಸ್ಯ ಕೃತಂ ಮಹತ್ । ಏವಂ ವಿಧಾಯ ಸ್ವಬಲಂ ಸದೃಶಂ ವಿಕ್ರಮಸ್ಯಚ ॥ ೬ ॥ ಯೋಹಿ ಭೃತ್ಯೋ ನಿಯುಕ್ತಸ್ಸನ್ಭರ್ತ್ರಾ ಕರ್ಮಣಿ ದುಷ್ಕರೇ । ಕುರ್ಯಾತ್ತದನುರಾಗೇಣ ತಮಾಹುಃ ಪುರುಷೋತ್ತಮಂ ॥ ೭ ॥ $ ನಿಯುಕ್ತೋ

ಅಪ್ರಧೃಷ್ಯಾಂ - ತಿರಸ್ಕರಿಸಲಸಾಧ್ಯವಾದ, ರಾವಣೇನ - ರಾವಣನಿಂದ, ಸುರಕ್ಷಿತಾಂ - ಚನ್ನಾಗಿ ಪಾಲಿಸಲ್ಪಟ್ಟ, ಸತ್ವಂ - ಬಲವನ್ನು, ಆಶ್ರಿತ್ಯ - ಆಶ್ರಯಿಸಿ, ಲಂಕಾಂಪುರೀಂ - ಲಂಕಾಪಟ್ಟಣವನ್ನು, ಪ್ರವಿಷ್ಟಃ - ಹೊಕ್ಕವನಾಗಿ, ಶ್ವಸನ್-ಜೀವವಂತನಾಗಿ, ಕೋನಾಮ - ಯಾವನುತಾನೇ, ನಿಷ್ಕ್ರಮೇತ್-ಹೊರಟುಬರುವನು. ॥೪॥ ಯಃ - ಯಾವ ಪುರುಷನು, ವೀರ್ಯಸಂಪನ್ನಃ - ಪರಾಕ್ರಮದಿಂದಲೂ ದೇಹಶಕ್ತಿಯಿಂದಲೂ ಕೂಡಿದವನಾದರೂ, ಹನೂಮತಃ - ಆಂಜನೇಯನಿಗೆ, ನಸಮಃ - ಸಮನಲ್ಲ, ಕಃ-ಯಾವ ಪುರುಷನು, ಸುದುರಾಧರ್ಷಾಂ-ತಿರಸ್ಕರಿಸಲಸಾಧ್ಯವಾದ, ರಾಕ್ಷಸೈಶ್ಚ-ಅಸುರರಿಂದಲೂ, ಸುರಕ್ಷಿತಾಂ - ಪಾಲಿಸಲ್ಪಟ್ಟ ಲಂಕಾಪಟ್ಟಣವನ್ನು, ವಿಶೇತ್ - ಪ್ರವೇಶಿಸಿಯಾನು. ॥೫॥ ಹನುಮತಾ-ಆಂಜನೇಯನಿಂದ, ಸುಗ್ರೀವಸ್ಯ - ಸುಗ್ರೀವನ, ಮಹತ್ - ಮಹತ್ತರವಾದ, ಭೃತ್ಯಕಾರ್ಯಂ - ಸಮುದ್ರಲಂಘನಾದಿ ರೂಪವಾದ ಭೃತ್ಯನ ಕೆಲಸವು, ಕೃತಂ - ಮಾಡಲ್ಪಟ್ಟಿತು, ಏವಂ - ಈ ರೀತಿ, ವಿಧಾಯ - ಭೃತ್ಯಕಾರ್ಯವನ್ನು ಮಾಡಿ, ವಿಕ್ರಮಸ್ಯ - ಪರಾಕ್ರಮಕ್ಕೆ, ಸದೃಶಂ - ಸಮಾನವಾದ, ಸ್ವಬಲಂಚ - ಹೇಳಲ್ಪಡದಿರುವ ವೃಕ್ಷಭಂಗಾದಿ ರೂಪವಾದದ್ದೂ ಸಹ, ಕೃತಂ - ಮಾಡಲ್ಪಟ್ಟಿತು. ॥೬॥ ಯಃಭೃತ್ಯಃ - ಯಾವ ಭೃತ್ಯನು, ದುಷ್ಕರೇ - ಮಾಡಲಸಾಧ್ಯವಾದ, ಕರ್ಮಣಿ - ಕೃತ್ಯದಲ್ಲಿ, ನಿಯುಕ್ತಸ್ಸನ್ - ನಿಯಮಿಸಲ್ಪಟ್ಟವನಾಗಿ, ತತ್ - ಆ ಕಾರ್ಯವನ್ನು, ಅನುರಾಗೇಣ - ಅನುಕೂಲದಿಂದ ಕೂಡಿರುವ (ಹೇಳಿದ ಕೆಲಸವನ್ನೂ), ಕುರ್ಯಾತ್ - ಮಾಡುವನೋ, ತಂ - ಆ ಭೃತ್ಯನನ್ನು,

ಗಳು, ಯಕ್ಷರು, ಗಂಧರ್ವರು, ಪನ್ನಗರು, ರಾಕ್ಷಸರು ಇವರೆಲ್ಲರಿಗೂ ರಾವಣ ಪಾಲಿತವಾದ ಲಂಕಾಪಟ್ಟಣವು ಕಣ್ಣೆತ್ತಿ ನೋಡುವುದಕ್ಕೂ ಸಾಧ್ಯವಲ್ಲವು. ಅಂತಹ ಲಂಕಾಪಟ್ಟಣವನ್ನು ಪ್ರವೇಶಿಸಿ ಪುನಃ ಬದುಕಿ ಬರುವವನಾವನಿರುವನು? ಹನುಮಂತನಿಗೆ ಸಮಾನವಾದ ಬಲಪರಾಕ್ರಮಗಳಿಲ್ಲದ ಮತ್ತೊಬ್ಬನಾವನೂ, ಅಪ್ರಧೃಷ್ಯವೂ, ರಾಕ್ಷಸರಿಂದ ಸುರಕ್ಷಿತವೂ ಆಗಿರುವ ಲಂಕಾಪಟ್ಟಣವನ್ನು ಪ್ರವೇಶಿಸಲು ಸಮರ್ಥನಲ್ಲವು. ॥ ೧-೫ ॥ ಸುಗ್ರೀವನ ಭೃತ್ಯನಾದ ಈ ಹನುಮಂತನು ಸುಗ್ರೀವನ ಆಣತಿಯಂತೆ ಭೃತ್ಯಕಾರ್ಯವನ್ನು ನೆರವೇರಿಸಿದನು. ಹೀಗೆ ತನಗಾಜ್ಞಾಪಿಸಿದ ಕಾರ್ಯವನ್ನು ನೆರವೇರಿಸಿದುದಲ್ಲದೆ, ತನ್ನ ಪರಾಕ್ರಮಕ್ಕೆ ಉಚಿತವಾದ ಬಲದಿಂದ ಲಂಕಾದಹನವೇ ಮೊದಲಾದ ಅಸಾಧ್ಯ ಕಾರ್ಯಗಳನ್ನೂ ಮಾಡಿದನು. ಲೋಕದಲ್ಲಿ ಯಾವ ಭೃತ್ಯನು ತನ್ನ ಯಜಮಾನನಿಂದ ಅಸಾಧ್ಯ ಕಾರ್ಯದಲ್ಲಿ ನಿಯೋಜಿತನಾಗಿ ಆ ಕಾರ್ಯವನ್ನು ನಿರ್ವಹಿಸಿ, ಯಜಮಾನನು ತನಗೆ ಆಜ್ಞಾಪಿಸದಿರುವ, ಆ ಕಾರ್ಯಕ್ಕನುಕೂಲವಾದ ಇತರ ಕಾರ್ಯಗಳನ್ನೂ ಮಾಡಿಕೊಂಡು ಬರು

§ ಈ ಪಾದವು ಗೋ. ಪಾಠದಲ್ಲಿ ಅಧಿಕ. ‡ "ಜೀವನ್" ತಿ. ಮ. ಪಾ. $ "ಯೋನಿಯುಕ್ತಃ" ತಿ. ಪಾ.

¶ಯಃ ಪರಂ ಕಾರ್ಯಂ ನಕುರ್ಯಾನ್ನೃಪತೇಃ ಪ್ರಿಯಂ । ಭೃತ್ಯೋ ಯುಕ್ತಃ ಸಮರ್ಥಶ್ಚ ತಮಾಹುರ್ಮಧ್ಯಮಂ ನರಂ ॥ ೮ ॥ ನಿಯುಕ್ತೋ ನೃಪತೇಃ ಕಾರ್ಯಂ ನಕುರ್ಯಾದ್ಯಸ್ಸಮಾಹಿತಃ । ಭೃತ್ಯೋ ಯುಕ್ತಸ್ಸಮರ್ಥಶ್ಚ ತಮಾಹುಃ ಪುರುಷಾಧಮಂ ॥೯॥ ತನ್ನಿಯೋಗೇ ನಿಯುಕ್ತೇನ ಕೃತಂ ಕೃತ್ಯಂ ಹನೂಮತಾ । ನಚಾತ್ಮಾ ಲಘುತಾಂ ನೀತಸ್ಸುಗ್ರೀವಶ್ಚಾಪಿ ತೋಷಿತಃ ॥೧೦॥ ಅಹಂಚ ರಘುವಂಶಶ್ಚ ಲಕ್ಷ್ಮಣಶ್ಚ ಮಹಾ

ಪುರುಷೋತ್ತಮಂ - ಉತ್ತಮ ಪುರುಷನೆಂದು, ಆಹುರ್ಹಿ - ಹೇಳುವರಷ್ಟೆ. ॥ ೭ ॥ ಯಃಭೃತ್ಯಃ - ಯಾವ ಸೇವಕನು, ನಿಯುಕ್ತಃ - ನಿಯಮಿಸಲ್ಪಟ್ಟವನಾಗಿ, ಸಮರ್ಥಃ - ಕಾರ್ಯಸಮರ್ಥನಾದರೂ, ಯುಕ್ತಃ - ಉತ್ಸಾಹಯುಕ್ತನಾಗಿ, ನೃಪತೇಃ - ರಾಜನಿಗೆ, ಪ್ರಿಯಂ - ಇಷ್ಟವಾದ, ಕಾರ್ಯಂ - ಕೆಲಸವನ್ನು, ನಕುರ್ಯಾತ್ - ಮಾಡುವನೋ, ತಂನರಂ - ಆ ಪುರುಷನನ್ನು, ಮಧ್ಯಮಂ - ಮಧ್ಯಮ ಪುರುಷನನ್ನಾಗಿ, ಆಹುಃ - ಹೇಳುವರು. ॥ ೮ ॥ ಯಃಭೃತ್ಯಃ - ಯಾವ ಭೃತ್ಯನು, ನಿಯುಕ್ತಃ - ನಿಯಮಿಸಲ್ಪಟ್ಟವನಾದರೂ, ಸಮಾಹಿತಃ - ಸಾವಧಾನಚಿತ್ತನಾಗಿ, ಯುಕ್ತಃ - ಉತ್ಸಾಹವುಳ್ಳವನಾಗಿ, ಸಮರ್ಥಶ್ಚ - ಸಮರ್ಥನೂ ಆಗಿ, ನೃಪತೇಃ - ಅರಸನ, ಕಾರ್ಯಂ - ಕೃತ್ಯವನ್ನು, ನಕುರ್ಯಾತ್ - ಮಾಡದಿರುವನೋ, ತಂ - ಅವನನ್ನು, ಪುರುಷಾಧಮಂ - ಅಧಮ ಪುರುಷನೆಂದು, ಆಹುಃ - ನುಡಿವರು. ॥ ೯ ॥ ತತ್ - ಆ ಕಾರಣದಿಂದ, ನಿಯೋಗೇ - ಸೀತಾನ್ವೇಷಣರೂಪ ಕಾರ್ಯದಲ್ಲಿ, ನಿಯುಕ್ತೇನ - ನಿಯಮಿಸಲ್ಪಟ್ಟ, ಹನೂಮತಾ - ಆಂಜನೇಯನಿಂದ, ಕೃತ್ಯಂ - ಮಾಡತಕ್ಕ ಕಾರ್ಯವು, ಕೃತಂ - ಮಾಡಲ್ಪಟ್ಟಿತು, ಆತ್ಮಾಚ - ತಾನು ಕೂಡಾ, ಲಘುತಾಂ - ಶತ್ರುಪಟ್ಟಣದಲ್ಲಿ ಲಾಘವವನ್ನು, ನೀತಃ - ಹೊಂದಿಸಲ್ಪಡಲಿಲ್ಲ, ಸುಗ್ರೀವಶ್ಚಾಪಿ - ಸುಗ್ರೀವನೂ ಕೂಡ, ತೋಷಿತಃ - ಸಂತೋಷಗೊಳಿಸಲ್ಪಟ್ಟನು. ॥೧೦॥ ಅದ್ಯ - ಈಗ, ವೈದೇಹ್ಯಾಃ - ವಿದೇಹ ರಾಜಪುತ್ರಿ

ವನೋ ಆ ಭೃತ್ಯನು ಉತ್ತಮ ಭೃತ್ಯನೆನಿಸುವನು. ಯಾವ ಭೃತ್ಯನು, ಉತ್ಸಾಹಿಯೂ, ಸಮರ್ಥನೂ ಆಗಿ ಯಜಮಾನನು ತನಗಾಜ್ಞಾಪಿಸಿದ ಕಾರ್ಯವನ್ನು ಮಾತ್ರ ನಿರ್ವಹಿಸಿ, ಆತನಿಗೆ ಪ್ರಿಯವಾಗುವ ಇತರ ಅನುಕೂಲ ಕಾರ್ಯಗಳನ್ನು ಮಾಡುವುದಿಲ್ಲವೋ ಆ ಭೃತ್ಯನು ಮಧ್ಯಮ ಭೃತ್ಯನೆನಿಸುವನು. ಯಾವ ಭೃತ್ಯನಾದರೆ ಜಾಗರೂಕನೂ, ಉತ್ಸಾಹಶೀಲನೂ, ಸಮರ್ಥನೂ ಆಗಿ ಯಜಮಾನನು ತನಗೆ ಆಜ್ಞಾಪಿಸಿದ ಕಾರ್ಯವನ್ನೂ ಕೂಡ ಮಾಡದಿರುವನೋ ಆ ಭೃತ್ಯನು ಅಧಮನೆನಿಸುವನು. ಈ ಹನುಮಂತನಾದರೋ ಭೃತ್ಯೋತ್ತಮನೆನಿಸುವನು. ಈತನು ಸ್ವಾಮಿಯಾದ ಸುಗ್ರೀವನು ತನಗಾಜ್ಞಾಪಿಸಿದ ಸೀತಾನ್ವೇಷಣ ಕಾರ್ಯವನ್ನು ಮಾಡಿದುದು ಮಾತ್ರವಲ್ಲದೆ, ತನಗೆ ಹೇಳದಿದ್ದ ಲಂಕಾದಹನವೇ ಮೊದಲಾದ ಮಹತ್ಕಾರ್ಯಗಳನ್ನೂ ಮಾಡಿಕೊಂಡು ಬಂದಿರುವನು. ಹೀಗೆ ಈತನು ಈ ಮಹತ್ಕಾರ್ಯಗಳನ್ನು ಮಾಡಿ ಬಹಳವಾದ ಕೀರ್ತಿಯನ್ನೂ ಪಡೆದನು. ಇಷ್ಟೇ ಅಲ್ಲದೆ ಈತನು ತನ್ನ ಪ್ರಭುವಾದ ಸುಗ್ರೀವನಿಗೂ ಅಪರಿಮಿತವಾದ ಸಂತೋಷವನ್ನೂ ಉಂಟುಮಾಡಿದನು. ॥ ೭—೧೦ ॥ ಈಗ ಹನುಮಂತನು ಸೀತೆಯನ್ನು ಕಂಡುಬಂದುದರಿಂದ

¶ ಪಾ.—"ಭೃತ್ಯಸ್ತು ಯಃ ಪರಂ ಕಾರ್ಯಂ ನಕುರ್ಯಾನ್ನೃಪತೇಃ ಪ್ರಿಯಂ ।
ಭೃತ್ಯೋ ಭೃತ್ಯಸ್ಸಮರ್ಥೋಽಪಿ ತಮಾಹುರ್ಮಧ್ಯಮಂ ನರಂ" ॥

ಬಲಃ । ವೈದೇಹ್ಯಾ ದರ್ಶನೇನಾಽದ್ಯ § ಧರ್ಮತಃ ಪರಿರಕ್ಷಿತಾಃ ॥೧೧॥ ಇದಂತು ಮಮ ದೀನಸ್ಯ ಮನೋ ಭೂಯಃ ಪ್ರಕರ್ಷತಿ । ಯದಿಹಾಸ್ಯ ಪ್ರಿಯಾಖ್ಯಾತುರ್ನ ಕುರ್ಮಿ ಸದೃಶಂ ಪ್ರಿಯಂ ॥ ೧೨ ॥ § ಏಷ ಸರ್ವಸ್ವಭೂತಸ್ತು ಪರಿಷ್ವಂಗೋ ಹನೂಮತಃ । ಮಯಾ ಕಾಲಮಿಮಂ ಪ್ರಾಪ್ಯ ದತ್ತಸ್ತಸ್ಯ ಮಹಾತ್ಮನಃ" ॥೧೩॥ ಇತ್ಯುಕ್ತ್ವಾ ಪ್ರೀತಿ

ಯಾದ ಸೀತಾದೇವಿಯ, ದರ್ಶನೇನ - ನೋಡುವಿಕೆಯಿಂದ, ಅಹಂಚ - ನಾನೂ, ರಘುವಂಶಶ್ಚ - ರಘುಮಹಾರಾಯನ ವಂಶವೂ, ಮಹಾಬಲಃ - ಮಹಾ ಬಲಿಷ್ಠನಾದ, ಲಕ್ಷ್ಮಣಶ್ಚ - ಲಕ್ಷ್ಮಣನೂ, ಇಮೇ - ಈ ಎಲ್ಲರೂ, ಧರ್ಮತಃ - ಧರ್ಮದಿಂದ, ಪರಿರಕ್ಷಿತಾಃ - ರಕ್ಷಿಸಲ್ಪಟ್ಟೆವು. ॥೧೧॥ ದೀನಸ್ಯ - ದೈನ್ಯವನ್ನು ಹೊಂದಿದ, ಮಮ - ನನ್ನ, ಇದಂಮನಸ್ತು - ಈ ಮನಸ್ಸಾದರೆ, ಭೂಯಃ - ಮತ್ತೂ, ಪ್ರಕರ್ಷತಿ - ಸಂತಾಪಯುಕ್ತವನ್ನಾಗಿ ಮಾಡುತ್ತದೆ, ಯತ್ - ಯಾವ ಕಾರಣದಿಂದ, ಇಹ - ಈಗ, ಪ್ರಿಯಾಖ್ಯಾತುಃ - ಪ್ರಿಯೆಯಾದ ಸೀತೆಯ ಸಮಾಚಾರವನ್ನು ಹೇಳುತ್ತಿರುವ, ಅಸ್ಯ - ಈ ಹನುಮಂತನಿಗೆ, ಸದೃಶಂ - ತಕ್ಕುದಾದ, ಪ್ರಿಯಂ - ಇಷ್ಟವನ್ನು, ನಕುರ್ಮಿ - ಮಾಡದೇ ಹೋದೆನು, ಇದಂತು - ಇದಾದರೆ, ಮಮ - ನನ್ನ, ಮನಃ - ಮನವನ್ನು, ಪ್ರಕರ್ಷತಿ - ಸಂತಾಪಗೊಳಿಸುತ್ತದೆ. ॥ ೧೨ ॥ ಇಮಂಕಾಲಂ - ಈ ಸಮಯವನ್ನು, ಪ್ರಾಪ್ಯ - ಹೊಂದಿ, ಮಹಾತ್ಮನಃ - ಮಹಾ ಪ್ರಭಾವ ಶಾಲಿಯಾದ, (ಗೋ) - ಉದಾರವಾದ ಮನಸ್ಸುಳ್ಳ, ತಸ್ಯಹನೂಮತಃ - ಆ ಆಂಜನೇಯನಿಗೆ, ಮಯಾ - ನನ್ನಿಂದ, ಏಷಪರಿಷ್ವಂಗಃ - ಈ ದೇಹಾಲಿಂಗನವು, ಸರ್ವಸ್ವಭೂತಃ - ಸರ್ವಪ್ರದಾನರೂಪ ವಾದದ್ದು, ಅಸ್ತು - ಆಗಲಿ. ॥೧೩॥ ರಾಮಃ - ಶ್ರೀರಾಮನು, ಇತಿ - ಈ ರೀತಿ, ಉಕ್ತ್ವಾ - ಹೇಳಿ,

ನಾನೂ, ರಘುಕುಲದವರೂ, ಮಹಾ ಬಲನಾದ ಲಕ್ಷ್ಮಣಸ್ವಾಮಿಯೂ ಸ್ವಹತ್ಯಾದೋಷ ವನ್ನು ಹೊಂದುವ ಅಧರ್ಮಮಾರ್ಗದಿಂದ ರಕ್ಷಿತರಾದೆವು. ನನಗೆ ಅತ್ಯಂತ ಪ್ರಿಯವಾದ ಸಮಾಚಾರವನ್ನು ತಂದು ಹೇಳಿದ ಈ ಹನುಮಂತನಿಗೆ ಈಗ ನಾನು ಯೋಗ್ಯವಾದ ಸನ್ಮಾನ ವನ್ನು ಮಾಡದಿರುವುದು ದುಃಖಿತನಾದ ನನ್ನ ಮನಸ್ಸನ್ನು ಅಡಿಗಡಿಗೂ ಬಾಧಿಸು ತ್ತಿರುವುದು. ಸೀತೆಯನ್ನೂ, ನನ್ನನ್ನೂ ಸಂರಕ್ಷಿಸಿದ ಈ ಸಮಯದಲ್ಲಿ, ಮಹೋಪ ಕಾರಿಯೂ, ಮಹಾತ್ಮನೂ ಆದ ಈ ಹನುಮಂತನಿಗೆ ನಾನು ಏನು ಕೊಟ್ಟರೂ ಅದು ಕಡಿಮೆಯೇ ಆಗುವುದು. ನನ್ನ ಐಶ್ವರ್ಯವೆಲ್ಲವನ್ನೂ ಕೊಟ್ಟರೂ ತೀರದು. ಆದುದ ರಿಂದ ಈಗ ನಾನು ಕೊಡುವ ಆಲಿಂಗನವೇ ಈ ಹನುಮಂತನಿಗೆ ಸರ್ವಸ್ವವಾಗಲಿ" ಎಂದು ಹೇಳಿದನು. ಶ್ರೀರಾಮನಿಂತು ನುಡಿದು ಸಂತೋಷಾಧಿಕ್ಯದಿಂದ ಪುಳಕಾಂಕಿತಶರೀರ

§ "ಧರ್ಮತಃ ಪರಿರಕ್ಷಿತಾಃ" ಎಂಬ ಕಡೆ "ಹನುಮಂತನು ಸೀತಾ ವೃತ್ತಾಂತವನ್ನು ನಮಗೆ ತಿಳಿಸದಿದ್ದಲ್ಲಿ ನಾವೆಲ್ಲರೂ ಆತ್ಮಹತ್ಯೆಯನ್ನು ಮಾಡಿಕೊಂಡು ಅಧರ್ಮಿಗಳಾಗುತ್ತಿದ್ದೆವು. ಹನುಮಂತನು ಈಗ ಸೀತಾ ವೃತ್ತಾಂತವನ್ನರುಹಿ ನಮ್ಮನ್ನು ಧರ್ಮದಿಂದ ಸಂರಕ್ಷಿಸಿದನು. ಇವನಿಂದ ನಾವು ಅಧರ್ಮಿಗಳಾಗುತ್ತಿದ್ದುದು ತಪ್ಪಿತು" ಎಂಬ ಅಭಿಪ್ರಾಯವು ಗ್ರಾಹ್ಯವು.

§ ಈ ಶ್ಲೋಕಕ್ಕೆ ತನಿಶ್ಲೋಕಿಕಾರರ ವಿವರಣವು ಹೀಗಿರುವುದು. ನಿರತಿಶಯಾನಂದಕರವಾದ ಪ್ರಿಯೋದಂತ ವನ್ನು ತಿಳುಹಿಸಿ ಉಪಕರಿಸಿರುವ ಈ ಹನುಮಂತನಿಗೆ ಸದೃಶವಾದ ಯಾವ ಪ್ರಿಯವನ್ನೂ ಮಾಡದಿರುವೆನಲ್ಲಾ ಎಂಬುದು ನನ್ನನ್ನು ಬಹಳವಾಗಿ ಸಂತಾಪಗೊಳಿಸುತ್ತಿರುವುದು. ಈ ಸಂತಾಪವು ಈತನಿಗೆ ನಾನು ಸರ್ವಸ್ವದಾನ ಮಾಡಿದರೂ ಶಾಂತ ವಾಗುವುದಿಲ್ಲವು. ಆದರೂ ಈಗ ನಾನು ಕೊಡುವ ಆಲಿಂಗನವೇ ಆ ಸರ್ವಸ್ವದಾನದ ಪ್ರತಿನಿಧಿಯಾಗಲಿ. ಈಗ್ಗೆ ಈ

**ಹೃಷ್ಟಾಂಗೋ ರಾಮಸ್ತಂ ಪರಿಷಸ್ವಜೇ । ಹನೂಮಂತಂ ಮಹಾತ್ಮಾನಂ ಕೃತ §ಕಾರ್ಯಮುಪಾಗತಂ ||೧೪|| ಧ್ಯಾತ್ವಾ ಪುನರುವಾಚೇದಂ ವಚನಂ ರಘು‡ನಂದನಃ । ಹರೀಣಾಮೀಶ್ವರಸ್ಯೈವ $ ಸುಗ್ರೀವಸ್ಯೋಪಶ್ರುಣ್ವತಃ || ೧೫ || ಸರ್ವಥಾ ಸುಕೃತಂ ತಾವತ್ಸೀತಾಯಾಃ ಪರಿಮಾರ್ಗಣಂ । ಸಾಗರಂತು ಸಮಾಸಾದ್ಯ ಪುನರ್ನಷ್ಟಂ ಮನೋ ಮಮ || ೧೬ || ಕಥಂ ನಾಮ ಸಮುದ್ರಸ್ಯ ದುಷ್ಪಾರಸ್ಯ ಮಹಾಂಭಸಃ । ಹರಯೋ**

---

ಪ್ರೀತಿ....ಗಃ - ಸಂತೋಷದಿಂದ ರೋಮಾಂಚಯುಕ್ತವಾದ ಶರೀರವುಳ್ಳವನಾಗಿ, ಕೃತಕಾರ್ಯಂ - ಮಾಡಲ್ಪಟ್ಟ ಕಾರ್ಯವುಳ್ಳ, ಉಪಾಗತಂ - ಬಂದಿರುವ, ಮಹಾತ್ಮನಂ - ಮಹಾ ಧೈರ್ಯಸಂಪನ್ನನಾದ, ತಂಹನೂಮಂತಂ - ಆ ಆಂಜನೇಯನನ್ನು, ಪರಿಷಸ್ವಜೇ - ಆಲಿಂಗನ ಮಾಡಿಕೊಂಡನು. ||೧೪|| ರಘುನಂದನಃ - ಶ್ರೀರಾಮನು, ಧ್ಯಾತ್ವಾ - ಧ್ಯಾನಮಾಡಿ, ಹರೀಣಾಂ - ವಾನರರಿಗೆ, ಈಶ್ವರಸ್ಯ- ದೊರೆಯಾದ, ಸುಗ್ರೀವಸ್ಯ-ಸುಗ್ರೀವನು, ಉಪಶ್ರುಣ್ವತಏವಃ-ಕೇಳುತ್ತಿರುವಂತೆಯೇ, ಪುನಃ-ಮತ್ತೂ, ಇದಂವಚನಂ - ಈ ಮಾತನ್ನು, ಉವಾಚ - ಹೇಳಿದನು. ||೧೫|| ಸರ್ವಥಾ - ಸರ್ವಪ್ರಕಾರದಲ್ಲಿಯೂ, ಸೀತಾ....ತ್ - ಸೀತಾನ್ವೇಷಣವಾದರೆ, ಸುಕೃತಂ - ಚೆನ್ನಾಗಿ ಮಾಡಲ್ಪಟ್ಟಿತು, ಕಿಂತು - ಆದರೆ, ಸಾಗರಂ - ಕಡಲನ್ನು, ಸಮಾಸಾದ್ಯ - ಜ್ಞಾಪಕಕ್ಕೆ ತಂದುಕೊಂಡು, ಮನಃ - ಮನವು, ಪುನಃ - ಮತ್ತು, ನಷ್ಟಂ - ಕೆಟ್ಟುಹೋಗಿದೆ. || ೧೬ || ಹರಯಃ - ವಾನರರು, ಸಮಾಹಿತಾಃ - ಸಮಾಧಾನಚಿತ್ತರಾಗಿ, ಮಹಾಂಭಸಃ - ಬಹಳ ನೀರುಳ್ಳ, ದುಷ್ಪಾರಸ್ಯ - ಪಾರವಿಲ್ಲದ, ಸಮುದ್ರಸ್ಯ - ಕಡಲಿನ,

---

ನಾಗಿ ಮಹಾತ್ಮನೂ, ಕೃತಕಾರ್ಯನೂ ಆದ ಆ ಹನುಮಂತನನ್ನು ಆಲಿಂಗಿಸಿಕೊಂಡನು. || ೧೧–೧೪ || ಆಮೇಲೆ ಸ್ವಲ್ಪ ಹೊತ್ತು ಸುಮ್ಮನಿದ್ದು ಮರಳಿಯೂ, ಹನುಮಂತನನ್ನು ಕುರಿತು ವಾನರೇಶ್ವರನಾದ ಸುಗ್ರೀವನು ಕೇಳುತ್ತಿರಲು, "ಎಲೈ ಹನುಮಂತನೇ! ಸೀತಾನ್ವೇಷಣ ಕಾರ್ಯವು ಚೆನ್ನಾಗಿ ನೆರವೇರಿತು. ಆದರೂ ಅಪಾರವಾದ ಈ ಸಮುದ್ರವನ್ನು ಕುರಿತು ಯೋಚಿಸಿ ನನ್ನ ಮನಸ್ಸು ಪುನಃ ದೈನ್ಯವನ್ನು ಹೊಂದುತ್ತಿರುವುದು. ಈ ವಾನರರೆಲ್ಲರೂ, ದಾಟಲಶಕ್ಯವಾಗಿಯೂ, ಅಪಾರವಾದ ಜಲದಿಂದ ಕೂಡಿರುವುದೂ ಆದ ಈ ಮಹಾ

---

ಆಲಿಂಗನವೇ ನಾನು ಮಾಡುವ ಸರ್ವಸ್ವದಾನವು. "ಇಮಂ ಕಾಲಂ ಪ್ರಾಪ್ಯ" ಇದು ಪ್ರತ್ಯುಪಕಾರ ಮಾಡಲು ಯೋಗ್ಯವಾದ ಕಾಲವು. ಈ ಕಾಲದಲ್ಲಿ ನಾನು ಮಾಡುವ ಆಲಿಂಗನ ದಾನವೇ ಸರ್ವಸ್ವದಾನಕ್ಕೆ ಸದೃಶವಾದುವಾಗಲಿ. ಇದು ಸ್ವಾನುಭವಸಿದ್ಧವಾದುದು ; ಇದನ್ನು (ಆಲಿಂಗನ) ಬಿಟ್ಟು ಮತ್ತೇನನ್ನು ಕೊಟ್ಟರೂ ಇದನ್ನು ಕೊಟ್ಟಂತಾಗುವುದಿಲ್ಲ. ನ್ಯೂನತೆಯೇ ಉಂಟಾಗುವುದು. ಇದನ್ನು ಕೊಟ್ಟುದರಿಂದ ಎಲ್ಲವನ್ನೂ ಕೊಟ್ಟಂತಾಗುವುದು. ಎಂತೆಂದರೆ ಈ ವಿಗ್ರಹ (ದೇಹ)ವು ಎಲ್ಲಕ್ಕೂ ಆಶ್ರಯಭೂತವಾದುದು. "ಪರಿಷ್ವಂಗೋ ಹನುಮತಃ" ಅಮೃತಪಾನ ಮಾಡುವವನಿಗೆ ಒಂದು ಹಿಡಿ ಹುಲ್ಲನ್ನು ಕೊಡುವುದು ಯೋಗ್ಯವಲ್ಲವು. "ಸ್ನೇಹೋ ಮೇ ಪರಮೋ ರಾಜನ್" ಎಂದುಕೊಂಡು ವಿಗ್ರಹ (ದೇಹ)ದಲ್ಲಿ ಪ್ರೇಮವಿಟ್ಟುಕೊಂಡಿರುವವರಿಗೆ ಅದನ್ನೇ (ಆಲಿಂಗನವನ್ನೇ) ಕೊಡುವುದು ಯುಕ್ತವು. "ಇಮಂ ಕಾಲಂ ಪ್ರಾಪ್ಯ ಮಯಾ ದತ್ತಂ" ಇದಕ್ಕೆ ಮತ್ತೊಂದು ಭಾವಾರ್ಥ. ಈತನು ಈಗ ನನ್ನಿಂದ ಏನನ್ನೂ ಅಪೇಕ್ಷಿಸದಿರುವನು. ಈತನೇ ನಾನು ಸರ್ವಸ್ವದಾನ ಮಾಡುವುದಾವಾಗ ಎಂದು ಉತ್ಕಂಠಿತನಾಗಿ ಇದೀಗ ಬೇಡವೆನ್ನದ ಸಮಯವಾದುದರಿಂದ ಸರ್ವಸ್ವದಾನ ಪ್ರತಿನಿಧಿರೂಪವಾದ ಈ ಆಲಿಂಗನವನ್ನು ಕೊಡುತ್ತಿರುವೆನು. "ತಸ್ಯ ಮಹಾತ್ಮನಃ" ಮಹೋದಾರಿಯಾದ ಈ ಹನುಮಂತನು ಎರಡು ದೇಹಗಳಿಗೆ ಮಹೋಪಕಾರ ಮಾಡುತ್ತಿರುವನು. (ಪರಸ್ಪರ ವಿಯೋಗದುಃಖದಿಂದ ನರಳುತ್ತಿದ್ದ ನನಗೂ, ಸೀತೆಗೂ ಪ್ರಿಯೋದಂತವನ್ನು ಹೇಳಿ ಸಂರಕ್ಷಿಸಿರುವನು) ಇಂತಹನಿಗೆ ನನ್ನ ಒಂದು ದೇಹವನ್ನು ಕೊಟ್ಟರೂ ಅದು ಕಡಿಮೆಯೇ ಆಗುವುದು.

§ "ವಾಕ್ಯಂ" ತಿ. ಪಾ. ‡ "ನಂದನಃ" ತಿ. ಮ. ಪಾ. $ "ಅಪಿ" ಕ. ತಿ. ಪಾ.



**ಶ್ರೀರಾಮಕೃತ ಹನುಮತ್ ಸತ್ಕಾರ**

" ಇತ್ಯುಕ್ತ್ವಾ ಹೃಷ್ಟಸರ್ವಾಂಗೋ ರಾಮಸ್ತಂ ಪರಿಷಸ್ವಜೇ ॥ "

ಪುಟ ೬

ದಕ್ಷಿಣಂ ಪಾರಂ ಗಮಿಷ್ಯಂತಿ ‡ ಸಮಾಹಿತಾಃ || ೧೭ || ಯದ್ಯಪ್ಯೇಷತು ವೃತ್ತಾಂತೋ ವೈದೇಹ್ಯಾ ಗದಿತೋ ಮಮ | ಸಮುದ್ರಪಾರಗಮನೇ ಹರೀಣಾಂ ಕಿಮಿವೋತ್ತರಂ " || ೧೮ ||

ಇತ್ಯುಕ್ತ್ವಾ ಶೋಕಸಂಭ್ರಾಂತೋ ರಾಮಃ ಶತ್ರುನಿಬರ್ಹಣಃ |
ಹನೂಮಂತಂ ಮಹಾಬಾಹು ಸ್ತತೋ ಧ್ಯಾನಮುಪಾಗಮತ್ || ೧೯ ||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಪ್ರಥಮಸ್ಸರ್ಗಃ.



ದಕ್ಷಿಣಂಪಾರಂ - ದಕ್ಷಿಣತೀರವನ್ನು, ಕಥಂನಾಮಗಮಿಷ್ಯಂತಿ - ಹೇಗೆತಾನೇ ಹೋಗುವರು. ||೧೭|| ಯದ್ಯಪಿ - ಆದರೆ, ಏಷಃ - ಈ, ವೈದೇಹ್ಯಾಃ - ಸೀತಾದೇವಿಯ, ವೃತ್ತಾಂತಸ್ತು - ವಾರ್ತೆಯಾದರೆ, ಮಮ - ನನಗೆ, ಗದಿತಃ - ಹೇಳಲ್ಪಟ್ಟಿತು, ಹರೀಣಾಂ - ವಾನರರಿಗೆ, ಸಮು....ನೇ - ದಕ್ಷಿಣ ಸಮುದ್ರದ ದಡವನ್ನು ಕುರಿತು ಹೋಗುವದರಲ್ಲಿ, ಉತ್ತರಂ - ಉತ್ತರಕಾರ್ಯವು, ಕಿಮಿವ - ಏನು. ||೧೮|| ಶತ್ರುನಿಬರ್ಹಣಃ - ಶತ್ರುಸಂಹಾರಕನಾದ, ಮಹಾಬಾಹುಃ - ಮಹಾ ಭುಜಬಲಪರಾಕ್ರಮಶಾಲಿಯಾದ, ರಾಮಃ - ಶ್ರೀರಾಮನು, ಇತಿ - ಈ ಪರಿಯಾಗಿ, ಹನುಮಂತಂ - ಆಂಜನೇಯನನ್ನು ಕುರಿತು, ಉಕ್ತ್ವಾ - ಹೇಳಿ, ಶೋಕ....ಸ್ತಃ - ದುಃಖದಿಂದ ಕಲುಷಚಿತ್ತನಾಗಿ, ತತಃ - ಬಳಿಕ, ಧ್ಯಾನಂ - ಚಿಂತೆಯನ್ನು, ಉಪಾಗಮತ್ - ಹೊಂದಿದನು. || ೧೯ ||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಪ್ರಥಮಸ್ಸರ್ಗಃ.



ಸಮುದ್ರವನ್ನು ದಾಟಿ ದಕ್ಷಿಣ ತೀರವನ್ನು ಸೇರುವುದು ಹೇಗೆ? ಎಲೈ ಹನುಮಂತನೇ! ನೀನು ಸೀತೆಯ ಬಳಿಯಲ್ಲಿ, ಈ ವಾನರರೆಲ್ಲರೂ ಸಾಗರವನ್ನು ದಾಟಿಬರುವರೆಂದು ಹೇಳಿರುವೆ. ಈಗ ಇವರೆಲ್ಲರೂ ಸಮುದ್ರವನ್ನು ದಾಟುವ ಉಪಾಯವೇನೆಂಬುದನ್ನು ತಿಳಿಸು" ಎಂದು ಹೇಳಿದನು. ಶತ್ರುಮರ್ದನನಾದ ಶ್ರೀರಾಮನು ಈ ರೀತಿ ಹನುಮಂತನೊಡನೆ ಹೇಳಿ ಶೋಕಾಕ್ರಾಂತಚಿತ್ತನಾಗಿ ಚಿಂತಿಸುತ್ತಿದ್ದನು. || ೧೫–೧೯ ||

ಇಂತಿದು ಶ್ರೀರಾಮಕೃತ ಹನುಮತ್ಸತ್ಕಾರ ನಿರೂಪಣವೆಂಬ ಮೊದಲನೆಯ
ಸರ್ಗವು ಸಮಾಪ್ತವಾದುದು.



‡ "ಸಮಾಗತಾಃ" ಶಿ. ಪಾ.

# ಯುದ್ಧಕಾಂಡೇ ದ್ವಿತೀಯಸ್ಸರ್ಗಃ

‡ ತಂತು ಶೋಕಪರಿದ್ಯೂನಂ ರಾಮಂ ದಶರಥಾತ್ಮಜಂ । ಉವಾಚ ವಚನಂ ಶ್ರೀಮಾನ್ಸುಗ್ರೀವಶ್ಶೋಕನಾಶನಂ ॥೧॥ “ಕಿಂ § ತ್ವಂ ಸಂತಪ್ಯಸೇ ವೀರ! ಯಥಾನ್ಯಃ ಪ್ರಾಕೃತಸ್ತಥಾ । ಮೈವಂ ಭೂಸ್ತ್ಯಜ ಸಂತಾಪಂ ಕೃತಘ್ನ ಇವ ಸೌಹೃದಂ ॥ ೨ ॥ ಸಂತಾಪಸ್ಯಚ ತೇ ಸ್ಥಾನಂ ನಹಿ ಪಶ್ಯಾಮಿ ರಾಘವ! । ಪ್ರವೃತ್ತಾವುಪಲಬ್ಧಾಯಾಂ

---

ಶ್ರೀಮಾ೯ - ಸಂಪದ್ಯುಕ್ತನಾದ, ಸುಗ್ರೀವಃ - ಸುಗ್ರೀವನು, ಶೋಕ....ನಂ - ವ್ಯಸನದಿಂದ ಕ್ಷೀಣಚಿತ್ತನಾದ, ದಶರಥಾತ್ಮಜಂ - ರಾಜಪುತ್ರನಾದ, ರಾಮಂ - ಶ್ರೀರಾಮನನ್ನು ಕುರಿತು, ಶೋಕ ನಾಶನಂ - ದುಃಖವನ್ನು ಹೋಗಲಾಡಿಸುತ್ತಿರುವ, ವಚನಂ - ಮಾತನ್ನು, ಉವಾಚ - ಹೇಳಿದನು. ॥೧॥ ಹೇ ವೀರ - ಎಲೈ ಶೂರನೇ, ಅನ್ಯಃ - ಮತ್ತೊಬ್ಬ, ಪ್ರಾಕೃತಃ - ಕ್ಷುದ್ರ ಪುರುಷನು, ಯಥಾ - ಹೇಗೆಯೋ, ತಥಾ - ಹಾಗೆಯೇ, ತ್ವಂ - ನೀನು, ಕಿಂಸಂತಪ್ಯಸೇ - ಪರಿತಪಿಸುವೆಯೇಕೆ, ಏವಂ - ಹೀಗೆ, ಮಾಭೂಃ - ಆಗಬೇಡ, ಕೃತಘ್ನಃ - ಕೃತಘ್ನನು, ಸೌಹೃದಮಿವ - ವಿಶ್ವಾಸದಂತೆ, ಸಂತಾಪಂ - ದುಃಖವನ್ನು, ತ್ಯಜ - ಬಿಟ್ಟುಬಿಡು. ॥ ೨ ॥ ಹೇ ರಾಘವ - ಎಲೈ ಶ್ರೀರಾಮನೇ, ಪ್ರವೃತ್ತೌ - ಸೀತಾ ವೃತ್ತಾಂತವು, ಉಪಲಬ್ಧಾಯಾಂ - ತಿಳಿಯಲ್ಪಟ್ಟಿದ್ದರೂ, ರಿಪೋಃ - ಶತ್ರುವಾದ ರಾವಣನ, ನಿಲಯೇ - ಸ್ಥಾನವು, ಜ್ಞಾತೇ - ತಿಳಿಯಲ್ಪಟ್ಟಿದ್ದರೂ, ತೇ - ನಿನಗೆ, ಸಂತಾಪಸ್ಯ - ಮನೋವ್ಯಥೆಗೆ, ಸ್ಥಾನಂ - ಅವಕಾಶವನ್ನು, ನಪಶ್ಯಾಮಿ - ಕಾಣೆನಷ್ಟೆ. ॥ ೩ ॥ ಮತಿಮಾ೯ - ಬುದ್ಧಿ

---

ದಶರಥರಾಜಕುಮಾರನಾದ ಶ್ರೀರಾಮನೀರೀತಿ ದುಃಖಾಕ್ರಾಂತನಾಗಿ ಚಿಂತಿಸುತ್ತಿರಲು, ಶ್ರೀಮಂತನಾದ ಸುಗ್ರೀವನು ಆತನನ್ನು ನೋಡಿ ದುಃಖೋಪಶಮನಗಳಾದ ಮಾತುಗಳಿಂದ, “ಎಲೈ ಮಹಾ ಪರಾಕ್ರಮಶಾಲಿಯಾದ ಶ್ರೀರಾಮನೇ! ಪ್ರಾಕೃತನಂತೆ ನೀನೇಕೆ ದುಃಖಿಸುತ್ತಿರುವೆ? ವ್ಯಸನವನ್ನು ಬಿಡು. ಕೃತಘ್ನನಾದವನು ಮೈತ್ರಿಯನ್ನು ತೊರೆಯುವಂತೆ ನೀನು ಈ ವ್ಯಸನವನ್ನು ತೊರೆ. ರಾಮಾ! ನಿನ್ನ ಮಡದಿಯಾದ ಸೀತಾದೇವಿಯ ವೃತ್ತಾಂತವೂ, ಶತ್ರುವಿನ ವಾಸಸ್ಥಾನವೂ ತಿಳಿದಿರುವಾಗಲೂ ನಿನಗೆ ವ್ಯಸನ ಉಂಟಾಗಲು ಕಾರಣವೇನೆಂಬುದು ನನಗೆ ತಿಳಿಯಲಿಲ್ಲವು. ಓ ರಾಮಚಂದ್ರ! ನೀನು

---

‡ ಅವತಾರಿಕೆ—ಶೋಕಸಂಭ್ರಾಂತಮಾನಸನಾದ ಶ್ರೀರಾಮನನ್ನು ನೋಡಿ ಸುಗ್ರೀವನೂ ಸಮದುಃಖಿಯಾಗಿ, “ಆಪದ್ಯುನ್ಮಾರ್ಗಗಮನೇ ಕಾರ್ಯಕಾಲಾತ್ಯಯೇಷುಚು । ಅಪೃಷ್ಟೋಪಿ ಹಿತಾನ್ವೇಷೀ ಬ್ರೂಯಾತ್ಕಲ್ಯಾಣ ಭಾಷಿತಂ ॥ ಹಿತಕಾಂಕ್ಷಿಯಾದವನು ಆಪತ್ತಿನಲ್ಲಿಯೂ, ಅಪಮಾರ್ಗಕ್ಕೆ ಹೋಗುವ ಸಮಯದಲ್ಲಿಯೂ, ಕಾರ್ಯಕಾಲವು ಮೀರಿ ಹೋಗುವ ಸಮಯದಲ್ಲಿಯೂ ಕೇಳಿಸಿಕೊಳ್ಳದೆಯೇ ಮಂಗಳವಚನಗಳನ್ನು ಹೇಳಬೇಕು” ಎಂಬ ನೀತಿಶಾಸ್ತ್ರ ವಚನವನ್ನನುಸರಿಸಿ ದುಃಖನಿವಾರಕವಾದ ಮಾತುಗಳಿಂದ ಶ್ರೀರಾಮನನ್ನು ಸಮಾಧಾನಗೊಳಿಸುವನು. (ಗೋ)

ಶ್ರೀಮಾ೯—ಮಿತ್ರಗುಣಸಂಪನ್ನನೆಂದರ್ಥ “ ಶುಚಿತಾ ತ್ಯಾಗಿತಾ ಶೌರ್ಯಂ ಸಮಾನಸುಖದುಃಖಿತಾ । ಅನುರಾಗಶ್ಚ ದಾಕ್ಷಿಣ್ಯಂ ಸತ್ಯತಾಚ ಸುಹೃದ್ಗುಣಾಃ ॥ ” ಎಂದು ಕಾಮಂದಕೋಕ್ತಿ.

§ “ ತ್ವಯಾ ತಪ್ಯತೇ ” ತಿ. ರಾ. ಪಾ.

ಜ್ಞಾತೇಚ ನಿಲಯೇ ರಿಪೋಃ ॥ ೩ ॥ ಮತಿಮಾನ್ ಶಾಸ್ತ್ರವಿತ್ ಪ್ರಾಜ್ಞಃ ಪಂಡಿತಶ್ಚಾಪಿ ರಾಘವ! । ತ್ಯಜೇಮಾಂ ಪಾಪಿಕಾಂ ಬುದ್ಧಿಂ ಕೃತಾತ್ಮೇ ವಾಽರ್ಥದೂಷಣೀಂ ॥ ೪ ॥ ಸಮುದ್ರಂಲಂಘಯಿತ್ವಾತು ಮಹಾನಕ್ರಸಮಾಕುಲಂ। ಲಂಕಾಮಾರೋಹಯಿಷ್ಯಾಮೋ ಹನಿಷ್ಯಾಮಶ್ಚ ತೇ ರಿಪುಂ ॥೫॥ ನಿರುತ್ಸಾಹಸ್ಯ ದೀನಸ್ಯ ಶೋಕಪರ್ಯಾಕುಲಾತ್ಮನಃ। ಸರ್ವಾರ್ಥಾ ವ್ಯವಸೀದಂತಿ ವ್ಯಸನಂ ಚಾಧಿಗಚ್ಛತಿ ॥೬॥ ಇಮೇ ಶೂರಾಸ್ಸಮರ್ಥಾಶ್ಚ ಸರ್ವೇ ನೋ ಹರಿಯೂಥಪಾಃ । ತ್ವತ್ಪ್ರಿಯಾರ್ಥಂ ಕೃತೋತ್ಸಾಹಾಃ ಪ್ರವೇಷ್ಟುಮಪಿ ಪಾವಕಂ ॥೭॥ ಏಷಾಂ ಹರ್ಷೇಣ ಜಾನಾಮಿ ತರ್ಕಶ್ಚಾಸ್ಮಿನ್ ದೃಢೋ ಮಮ । ವಿಕ್ರ

ಶಾಲಿಯಾದ, ಶಾಸ್ತ್ರವಿತ್ - ಶಾಸ್ತ್ರಜ್ಞನಾದ, ಪ್ರಾಜ್ಞಃ - ಊಹಾಪೋಹಗಳಲ್ಲಿ ಕುಶಲನಾದ, ತ್ವಂ - ನೀನು, ಪಂಡಿತಶ್ಚ - ಅರ್ಥತತ್ವಜ್ಞನೂ, ಅಪಿ - ಆಗಿರುವೆ, ಕೃತಾತ್ಮಾ - ಆತ್ಮಜ್ಞಾನವುಳ್ಳವನು, ಅರ್ಥದೂಷಣೀಂ - ಮೋಕ್ಷರೂಪ ಪುರುಷಾರ್ಥವನ್ನು ಹೋಗಲಾಡಿಸುತ್ತಿರುವ, ಬುದ್ಧಿಮಿವ - ಬುದ್ಧಿಯನ್ನಂತೆ, (ಅರ್ಥದೂಷಣೀಂ - ಅಪ್ರಯೋಜನಕರವಾದ,) ಪಾಪಿಕಾಂ - ಉತ್ಸಾಹಭಂಗವೆಂಬ ಪಾಪಕಾರ್ಯವನ್ನು ಮಾಡುತ್ತಿರುವ, ಇಮಾಂಬುದ್ಧಿಂ - ಈ ಬುದ್ಧಿಯನ್ನು, ತ್ಯಜ - ಬಿಡು. ॥ ೪ ॥ ಮಹಾ....ಲಂ ದೊಡ್ಡ ಮೊಸಳೆಗಳಿಂದ ತುಂಬಿರುವ, ಸಮುದ್ರಂ - ಕಡಲನ್ನು, ಲಂಘಯಿತ್ವಾ - ದಾಟಿ, ಲಂಕಾಂ - ಲಂಕಾಪಟ್ಟಣವನ್ನು, ಆರೋಹಯಿಷ್ಯಾಮಃ - ಏರುವೆವು, ತೇ - ನಿನ್ನ, ರಿಪುಂ - ಶತ್ರುವನ್ನು, ಹನಿಷ್ಯಾಮಃ - ಸಂಹರಿಸುವೆವು. ॥ ೫ ॥ ನಿರುತ್ಸಾಹಸ್ಯ - ಉತ್ಸಾಹವಿಲ್ಲದ, ದೀನಸ್ಯ - ವಿವರ್ಣಮುಖನಾದ, ಶೋಕ....ನಃ - ವ್ಯಸನದಿಂದ ವ್ಯಾಕುಲವಾದ ಚಿತ್ತವುಳ್ಳವನಿಗೆ, ಸರ್ವಾರ್ಥಾಃ - ಸಮಸ್ತ ಪ್ರಯೋಜನಗಳೂ, ವ್ಯವಸೀದಂತಿ - ನಶಿಸಿಹೋಗುತ್ತವೆ, ಸಃ - ಆ ಪುರುಷನು, ವ್ಯಸನಂಚ - ಶೋಕವನ್ನೂ, ಅಧಿಗಚ್ಛತಿ-ಹೊಂದುತ್ತಾನೆ. ॥ ೬ ॥ ಸರ್ವೇ-ಸಮಸ್ತರಾದ, ಶೂರಾಃ-ಶೌರ್ಯವಂತರಾದ, ನಃ - ನಮ್ಮ, ಇಮೇಹರಿಯೂಥಪಾಃ - ಈ ವಾನರಯೂಥಪತಿಗಳು, ತ್ವತ್ಪ್ರಿಯಾರ್ಥಂ - ನಿನಗೆ ಹಿತವನ್ನುಂಟುಮಾಡುವುದಕ್ಕಾಗಿ, ಕೃತೋತ್ಸಾಹಾಃ - ಮಾಡಲ್ಪಟ್ಟ ಉತ್ಸಾಹವುಳ್ಳವರಾಗಿ, ಪಾವಕಂ- ಅಗ್ನಿಯನ್ನು, ಪ್ರವೇಷ್ಟುಮಪಿ - ಪ್ರವೇಶ ಮಾಡುವದಕ್ಕೂ ಕೂಡ, ಸಮರ್ಥಾಃ - ಶಕ್ತರಾಗಿದ್ದಾರೆ. ॥ ೭ ॥ ಇತಿ - ಹೀಗೆಂದು, ಏಷಾಂ - ಈ ವಾನರರ, ಹರ್ಷೇಣ - ಸಂತೋಷದಿಂದ, ಜಾನಾಮಿ -

ಮಹಾ ಬುದ್ಧಿಶಾಲಿಯು ; ರಾಜನೀತಿಶಾಸ್ತ್ರವನ್ನು ಚನ್ನಾಗಿ ಬಲ್ಲವನು ; ಪ್ರಾಜ್ಞನೂ, ಪಂಡಿತನೂ ಆಗಿರುವೆ. ಆದುದರಿಂದ ಪರಮಾತ್ಮಧ್ಯಾನನಿರತನಾದ ಯೋಗಿಯು ಮೋಕ್ಷಮಾರ್ಗ ನಿರೋಧಕವಾದ ಬುದ್ಧಿಯನ್ನು ತೊರೆದುಬಿಡುವಂತೆ, ನೀನೂ ಸಂತೋಷನಾಶಕವಾದ ಈ ಪಾಪಿಷ್ಠ ಬುದ್ಧಿಯನ್ನು ಬಿಟ್ಟುಬಿಡು. ಎಲೈ ಶ್ರೀರಾಮನೇ! ನಾವು ಮಹಾ ಮತ್ಸ್ಯಗಳಿಂದ ನಿಬಿಡೀಕೃತವಾಗಿರುವ ಸಮುದ್ರವನ್ನುದಾಟಿ, ಲಂಕಾನಗರವನ್ನುಪ್ರವೇಶಿಸಿ, ಕೋಟೆಕೊತ್ತಲಗಳನ್ನೇರಿ, ನಿನ್ನ ಶತ್ರುವಾದ ರಾವಣಾಸುರನನ್ನು ಸಂಹರಿಸುವೆವು. ನೀನು ದೈನ್ಯವನ್ನು ಹೊಂದಬೇಡ. ॥ ೧–೫ ॥ ಲೋಕದಲ್ಲಿ ಯಾವನು ಉತ್ಸಾಹವಿಲ್ಲದೆ ದೈನ್ಯವನ್ನು ಹೊಂದಿ ವ್ಯಾಕುಲಚಿತ್ತನಾಗುವನೋ ಅವನು ಸಕಲ ಕಾರ್ಯಗಳನ್ನೂ ಕೆಡಿಸಿಕೊಳ್ಳುವನು ; ಮಹಾ ಕಷ್ಟವನ್ನೂ ಹೊಂದುವನು. ಮಹಾ ಶೂರರೂ, ಸಮರ್ಥರೂ ಆದ ಈ ವಾನರೋತ್ತಮರೆಲ್ಲರೂ ನಿನಗೆ ಸಂತೋಷವನ್ನುಂಟುಮಾಡಲು ಸಿದ್ಧರಾಗಿರುವರು. ಈ ವಾನರವೀರರ ಸಂತೋಷಸಂಭ್ರಮಗಳನ್ನು ನೋಡಿದರೆ ಇವರು ಎಂತಹ ಅಸಾಧ್ಯ ಕಾರ್ಯವನ್ನಾ

**ಮೇಣ ಸಮಾನೇಷ್ಯೇ ಸೀತಾಂ ಹತ್ವಾ ಯಥಾ ರಿಪುಂ ||೮|| ರಾವಣಂ ಪಾಪಕರ್ಮಾಣಂ ತಥಾ ತ್ವಂ ಕರ್ತುಮರ್ಹಸಿ । ಸೇತು ರತ್ರ ಯಥಾ ಬಧ್ಯೇದ್ಯಥಾ ಪಶ್ಯೇಮ ತಾಂ ಪುರೀಂ ||೯|| ತಸ್ಯ ರಾಕ್ಷಸರಾಜಸ್ಯ ತಥಾ ತ್ವಂ ಕುರು ರಾಘವ! । ದೃಷ್ಟ್ವಾ ತಾಂ ತು ಪುರೀಂ ಲಂಕಾಂ ತ್ರಿಕೂಟಶಿಖರೇಸ್ಥಿತಾಂ ||೧೦|| ಹತಂಚ ರಾವಣಂ ಯುದ್ಧೇ ದರ್ಶನಾದುಪಧಾರಯ । ಅಬದ್ಧ್ವಾ ಸಾಗರೇ ಸೇತುಂ ಘೋರೇತು ವರುಣಾಲಯೇ ||೧೧|| ಲಂಕಾ ನಮರ್ದಿತುಂ ಶಕ್ಯಾ ಸೇಂದ್ರೈರಪಿ ಸುರಾಸುರೈಃ । ¶ ಸೇತುರ್ಬದ್ಧಃಸಮುದ್ರೇಚ**

ಎಣಿಸುತ್ತೇನೆ, ಮಮ - ನನಗೆ, ಅಸ್ಮಿನ್ - ಈ ವಾನರರ ಸಂತೋಷ ವಿಷಯದಲ್ಲಿ, ತರ್ಕಶ್ಚ - ಊಹೆಯು, ದೃಢಃ - ನಿಶ್ಚಯವಾಗಿದೆ, ವಿಕ್ರಮೇಣ - ಪರಾಕ್ರಮದಿಂದ, ರಿಪುಂ - ಶತ್ರುವಾದ ರಾವಣನನ್ನು, ಹತ್ವಾ - ಕೊಂದು, ಸೀತಾಂ - ಸೀತಾದೇವಿಯನ್ನು, ಯಥಾ - ಹೇಗೆ, ಸಮಾನೇಷ್ಯೇ - ಕರೆದುಕೊಂಡು ಬರುವೆನೋ, ತಥಾ - ಹಾಗೆಯೇ, ತ್ವಂ - ನೀನು, ಕರ್ತುಂ - ಮಾಡಲು, ಅರ್ಹಸಿ- ಯೋಗ್ಯನಾಗು. || ೮ || ಹೇ ರಾಘವ - ಎಲೈ ಶ್ರೀರಾಮನೇ, ಅತ್ರ - ಈ ಕಡಲಿನಲ್ಲಿ, ಸೇತುಃ - ಸೇತುವು, ಯಥಾಬಧ್ಯೇತ್ - ಹೇಗೆ ಕಟ್ಟಲಾದೀತೋ, ಯಥಾ - ಹೇಗೆ, ರಾಕ್ಷಸರಾಜಸ್ಯ - ರಾಕ್ಷಸಾಧಿಪತಿಯಾದ, ತಸ್ಯ - ಆ ರಾವಣನ, ತಾಂಪುರೀಂ - ಆ ಪಟ್ಟಣವನ್ನು, ಪಶ್ಯೇಮ - ನೋಡುವೆವೋ, ತಥಾ - ಹಾಗೆಯೇ, ತ್ವಂ - ನೀನು, ಕುರು - ಉತ್ಸಾಹವನ್ನು ಮಾಡು. || ೯ || ತ್ರಿಕೂಟಶಿಖರೇ - ತ್ರಿಕೂಟಪರ್ವತದ ಶಿಖರದಲ್ಲಿ, ಸ್ಥಿತಾ - ಇರುವ, ತಾಂಲಂಕಾಂಪುರೀಂತು - ಆ ಲಂಕಾಪಟ್ಟಣವನ್ನಾದರೆ, ದೃಷ್ಟ್ವಾ - ಕಂಡು, ಯುದ್ಧೇ - ಕಾಳಗದಲ್ಲಿ, ದರ್ಶನಾತ್ - ದರ್ಶನ ಮಾತ್ರದಿಂದಲೇ, ರಾವಣಂಚ - ರಾವಣನನ್ನು, ಹತಂ - ಹೊಡೆಯಲ್ಪಟ್ಟವನನ್ನಾಗಿ, ಉಪಧಾರಯ - ತಿಳಿದುಕೋ. || ೧೦ || ಘೋರೇ ಭಯಂಕರವಾದ, ವರುಣಾಲಯೇ-ವರುಣನಿಗೆ ಮನೆಯಾದ, ಸಾಗರೇ-ಕಡಲಿನಲ್ಲಿ, ಸೇತುಂ-ಸೇತುವೆಯನ್ನು, ಅಬಧ್ವಾ - ಕಟ್ಟದೆಯೇ, ಲಂಕಾ-ಲಂಕಾಪಟ್ಟಣವು, ಸೇಂದ್ರೈಃ-ಇಂದ್ರನಿಂದೊಡಗೂಡಿದ, ಸುರಾಸುರೈರಪಿ - ದೇವತೆಗಳಿಂದಲೂ, ರಾಕ್ಷಸರಿಂದಲೂ, ಮರ್ದಿತುಂ - ಹೊಡೆಯುವದಕ್ಕೆ, ನಶಕ್ಯಾ - ಸಾಧ್ಯವಲ್ಲ, ಸಮುದ್ರೇ - ಕಡಲಿನಲ್ಲಿ, ಲಂಕಾಸಮೀಪತಃ - ಲಂಕಾಪಟ್ಟಣದ ಸಮೀಪದಲ್ಲಿ, ಸೇತುಃ - ಸೇತುವು, ಯಾವತ್ - ಯಾವಾಗ, ಬದ್ಧಃ - ಕಟ್ಟಲ್ಪಟ್ಟಿತೋ, ತಾವತ್ -

ದರೂ ಸಾಧಿಸುವರೆಂಬುದರಲ್ಲಿ ಸಂದೇಹವಿರುವದಿಲ್ಲ. ಇದು ಯಥಾರ್ಥವು. ಮಹಾ ಪಾಪಿಷ್ಠನಾದ ರಾವಣಾಸುರನನ್ನು ಕೊಂದು, ಸೀತಾದೇವಿಯನ್ನು ಕರೆತರಲು, ನಾನು ಹೇಗೆ ಉತ್ಸಾಹದಿಂದಿರುವೆನೋ, ನೀನೂ ಹಾಗೆಯೇ ಉತ್ಸಾಹದಿಂದಿರಬೇಕು. ಎಲೈ ಶ್ರೀರಾಮ ಮೂರ್ತಿಯೇ! ಸಮುದ್ರದಲ್ಲಿ ಸೇತುವೆಯನ್ನು ಕಟ್ಟಿ ರಾಕ್ಷಸರಾಜನಾದ ರಾವಣಾಸುರನ ಲಂಕಾಪಟ್ಟಣವನ್ನು ನೋಡುವ ಉಪಾಯವನ್ನು ಆಲೋಚಿಸು. ತ್ರಿಕೂಟಾಚಲದಮೇಲೆ ನೆಲಸಿರುವ ಆ ಲಂಕೆಯನ್ನು ನೋಡಿದೊಡನೆಯೇ ಆ ರಾವಣನು ಮಡಿವನೆಂದರಿತುಕೊ. ||೮–೧೦|| ಮಹಾ ಭಯಂಕರವಾದುದೂ, ವರುಣನಿಗೆ ಆವಾಸಸ್ಥಾನವಾದುದೂ ಆದ ಸಾಗರದಲ್ಲಿ ಸೇತುವೆಯನ್ನು ಕಟ್ಟದೆ ದೇವೇಂದ್ರನೊಡಗೂಡಿದ ಸುರಾಸುರರಾದರೂ ಲಂಕಾಪಟ್ಟಣವನ್ನು ನಾಶಗೊಳಿಸಲಾರರು. ಸಮುದ್ರದಲ್ಲಿ ಸೇತುವೆಯನ್ನು ಕಟ್ಟಿದೊಡನೆಯೇ ವಾನರ

¶ " ಸೇತುಬಂಧಃ " ತಿ. ಪಾ.

ಯಾವಲ್ಲಂಕಾ ಸಮಾಪತಃ || ೧೨ || ಸರ್ವಂ ತೀರ್ಣಂಚ §ವ್ವೈ ಸೈನ್ಯಂ ಜಿತಮಿತ್ಯುಪಧಾರಯ | ಇಮೇಹಿ ಸಮರೇ ಶೂರಾ ಹರಯಃ ಕಾಮರೂಪಿಣಃ || ೧೩ || Ψ(ಶಕ್ತಾ ಲಂಕಾಂ ಸಮಾನೇತುಂ ಸಮುತ್ಪಾಟ್ಯ ಸರಾಕ್ಷಸಾಂ) | ತದಲಂ ವಿಕ್ಲಬಾಬುದ್ಧೀ ರಾಜನ್ಸರ್ವಾರ್ಥನಾಶಿನೀ | ಪುರುಷಸ್ಯಹಿ ಲೋಕೇಽಸ್ಮಿನ್ ಶೋಕಃ ಶೌರ್ಯಾಪಕರ್ಷಣಃ || ೧೪ || ಯತ್ತು ಕಾರ್ಯಂ ಮನುಷ್ಯೇಣ ಶೌಂಡೀರ್ಯಮವಲಂಬತಾ | * ಅಸ್ಮಿನ್ಕಾಲೇ ಮಹಾಪ್ರಾಜ್ಞ ! ಸತ್ವಮಾತಿಷ್ಠ ತೇಜಸಾ || ೧೫ || ಶೂರಾಣಾಂ ಹಿ ಮನುಷ್ಯಾಣಾಂ ತ್ವದ್ವಿಧಾನಾಂ ಮಹಾತ್ಮನಾಂ | ವಿನಷ್ಟೇವಾ ಪ್ರಣಷ್ಟೇವಾ ಶೋಕಸ್ಸರ್ವಾರ್ಥ

ಆಗಲೇ, ಸರ್ವಂ - ಸಮಸ್ತವಾದ, ಸೈನ್ಯಂ - ಸೇನೆಯು, ತೀರ್ಣಂ - ದಾಟಿತು, ಜಿತಮಿತಿ - ಜಯಿಸಲ್ಪಟ್ಟಿತು ಎಂದು, ಉಪಧಾರಯ - ತಿಳಿದುಕೋ. ||೧೧-೧೨|| ಇಮೇಹರಯಃ - ಈ ಕಪಿಗಳು, ಸಮರೇ - ಕಾಳಗದಲ್ಲಿ, ಶೂರಾಃ - ಶೂರರು, ಕಾಮರೂಪಿಣೋಹಿ - ಕಾಮರೂಪಿಗಳಷ್ಟೆ, ಸರಾಕ್ಷಸಾಂ - ರಾಕ್ಷಸರಿಂದೊಡಗೂಡಿದ, ಲಂಕಾಂ - ಲಂಕಾಪಟ್ಟಣವನ್ನು, ಸಮುತ್ಪಾಟ್ಯ - ಕಿತ್ತು, ಸಮಾನೇತುಂ - ತರುವದಕ್ಕೆ, ಶಕ್ತಾಃ - ಸಮರ್ಥರು. ||೧೩|| ಹೇ ರಾಜನ್ - ಎಲೈ ಅರಸನೇ, ತತ್ - ಆ ಕಾರಣದಿಂದ, ಅಲಂ - ಸಾಕು, ವಿಕ್ಲಬಾ - ಶೋಕದಿಂದ ಪರಾಧೀನವಾದ, ಬುದ್ಧಿಃ - ಬುದ್ಧಿಯು, ಸರ್ವಾ....ನೀ-ಸರ್ವಪ್ರಯೋಜನಗಳನ್ನೂ ನಾಶಗೊಳಿಸುತ್ತದೆ, (ಬುದ್ಧಿಃ-ಅಂತಹ ಬುದ್ಧಿಯು,) ಅಲಂ-ಆಗಬೇಡ, ಹಿ - ಯಾವ ಕಾರಣದಿಂದ, ಅಸ್ಮಿನ್ಲೋಕೇ - ಈ ಲೋಕದಲ್ಲಿ, ಪುರುಷಸ್ಯ - ಪುರುಷನಿಗೆ, ಶೋಕಃ-ವ್ಯಸನವು, ಶೌರ್ಯಾ....ಣಃ-ಪರಾಕ್ರಮವನ್ನು ಹೋಗಲಾಡಿಸುತ್ತದೆಯೋ.||೧೪|| ಹೇ ಮಹಾಪ್ರಾಜ್ಞ-ಎಲೈ ಮಹಾ ಪ್ರಜ್ಞಾವಂತನೇ, ಶೌಂಡೀರ್ಯಂ-ಧೈರ್ಯವನ್ನು, ಅವಲಂಬತಾ-ಆಶ್ರಯಿಸಿರುವ, ಮನುಷ್ಯೇಣ - ಮನುಷ್ಯನಿಂದ, ಯತ್ - ಯಾವ ಧೈರ್ಯವು, ಕಾರ್ಯಂ - ಮಾಡತಕ್ಕುದೋ, ಅಸ್ಮಿನ್ಕಾಲೇ - ಈ ಕಾಲದಲ್ಲಿ, ತೇಜಸಾ - ಸಾಮರ್ಥ್ಯದಿಂದ, ಸತ್ವಂ - ಧೈರ್ಯವನ್ನು, ಆತಿಷ್ಠ - ಆಶ್ರಯಿಸು. || ೧೫ || ಶೂರಾಣಾಂ - ಶೌರ್ಯವಂತರಾದ, ತ್ವದ್ವಿಧಾನಾಂ - ನಿನ್ನಂತಹರಾದ, ಮಹಾತ್ಮನಾಂ-ಮಹಾ ಮನಸ್ವಿಗಳಾದ, ಮನುಷ್ಯಾಣಾಂ-ಮನುಷ್ಯರಿಗೆ, ವಿನಷ್ಟೇವಾ-ಕಾಣದಿರುವ

ರೆಲ್ಲರೂ ಸಾಗರವನ್ನು ದಾಟಿ ರಾವಣಾಸುರನನ್ನು ಗೆದ್ದರೆಂದೇ ತಿಳಿದುಕೋ. ಯುದ್ಧದಲ್ಲಿ ಮಹಾ ಪರಾಕ್ರಮವಂತರಾಗಿಯೂ, ಕಾಮರೂಪಿಗಳಾಗಿಯೂ ಇರುವ ಈ ವಾನರರೆಲ್ಲರೂ ರಾಕ್ಷಸರೊಡಗೂಡಿದ ಆ ಲಂಕಾಪಟ್ಟಣವನ್ನು ಬುಡಸಹಿತ ಪೆಳಗಿಸಿ ಹೊತ್ತುತರಲೂ ಸಮರ್ಥರಾಗಿರುವರು. ಓ ರಾಘವನೇ! ಪ್ರಭುವೇ!! ಸಕಲ ಕಾರ್ಯಗಳನ್ನು ನಾಶಗೊಳಿಸುವ ಈ ವ್ಯಸನವನ್ನು ದೂರಮಾಡು. ಲೋಕದಲ್ಲಿ ವ್ಯಸನವೆಂಬುದು ಪುರುಷನ ಪರಾಕ್ರಮವನ್ನು ಹಾಳುಮಾಡುತ್ತದೆ. ಎಲೈ ಪ್ರಾಜ್ಞನೇ! ಶೌರ್ಯವನ್ನವಲಂಬಿಸಿದವನು ಯಾವುದನ್ನು ಬಿಡಬಾರದೋ ಅಂತಹಧೈರ್ಯ, ಸ್ಥೈರ್ಯ, ಪರಾಕ್ರಮಗಳನ್ನು ಅವಲಂಬಿಸು. ನಿನ್ನಂತಹ ಶೂರರೂ, ಮಹಾತ್ಮರೂ ಆದ ಮಾನವರು ಅದೃಷ್ಟವನ್ನು ಕುರಿತಾಗಲಿ, ನಷ್ಟವನ್ನು ಕುರಿತಾಗಲಿ, ವ್ಯಸನವನ್ನು ಹೊಂದರು. ಲೋಕದಲ್ಲಿ ಶೋಕವೆಂಬುದು ಎಲ್ಲ ಕಾರ್ಯ

§ "ಮೇ" ತಿ. ರಾ. ಪಾ. Ψ ಈ ಪಾದವು ಗೋ+ತಿ ಪಾಠಗಳಲ್ಲಿ ಅಧಿಕ.

* "ತದಲಂಕರಣಾಯೈವ ಕರ್ತುರ್ಭವತಿ ಸತ್ವರಮ್" ತಿ. ಪಾ.

ನಾಶನಃ ||೧೬|| ತ್ವಂತು ಬುದ್ಧಿಮತಾಂ ಶ್ರೇಷ್ಠ ಸರ್ವಶಾಸ್ತ್ರಾರ್ಥಕೋವಿದಃ । ಮದ್ವಿಧೈಸ್ಸಚಿವೈಸ್ಸಾರ್ಧಮರಿಂ ಜೇತುಮಿಹಾರ್ಹಸಿ || ೧೭ || ನಹಿ ಪಶ್ಯಾಮ್ಯಹಂ ಕಂಚಿತ್ತ್ರಿಷು ಲೋಕೇಷು ರಾಘವ! । ಗೃಹೀತಧನುಷೋ ಯಸ್ತೇ ತಿಷ್ಠೇದಭಿಮುಖೋರಣೇ ||೧೮|| ವಾನರೇಷು ಸಮಾಸಕ್ತಂ ನ ತೇ ಕಾರ್ಯಂ ವಿಪತ್ಸ್ಯತೇ । ಅಚಿರಾದ್ದ್ರಕ್ಷ್ಯಸೇ ಸೀತಾಂ ತೀರ್ತ್ವಾ ಸಾಗರಮಕ್ಷಯಂ || ೧೯ || ತದಲಂ ಶೋಕಮಾಶ್ರಿತ್ಯ ಕ್ರೋಧ

---

ಕಾರ್ಯದ ವಿಷಯದಲ್ಲಿಯೇ ಆಗಲಿ, ಪ್ರಣಷ್ಟೇವಾ - ನಾಶವನ್ನೈದಿದ ಕಾರ್ಯದಲ್ಲಿಯೇ ಆಗಲಿ, ಶೋಕಃ - ವ್ಯಸನವು, ಸರ್ವಾ....ನಃ - ಸರ್ವಪ್ರಯೋಜನಗಳನ್ನೂ ಹೋಗಲಾಡಿಸುತ್ತದೆ. || ೧೬ || ತ್ವಂತು - ನೀನಾದರೆ, ಬುದ್ಧಿಮತಾಂ - ಬುದ್ಧಿವಂತರಲ್ಲಿ, ಶ್ರೇಷ್ಠಃ - ಉತ್ತಮನು, ಸರ್ವ....ದಃ - ಸಮಸ್ತ ಶಾಸ್ತ್ರಗಳ ಅರ್ಥದಲ್ಲಿ ಕುಶಲನು, ಮದ್ವಿಧೈಃ - ನನ್ನಂತಹರಾದ, ಸಚಿವೈಸ್ಸಾರ್ಧಂ - ಮಂತ್ರಿಗಳೊಡಗೂಡಿ, ಅರಿಂ - ಶತ್ರುವನ್ನು, ಜೇತುಂ - ಜಯಿಸುವದಕ್ಕೋಸುಗ, ಇಹ - ಈಗ, ಅರ್ಹಸಿ - ಯೋಗ್ಯನಾಗು. || ೧೭ || ಹೇ ರಾಘವ - ಎಲೈ ಶ್ರೀರಾಮನೇ, ಯಃ - ಯಾವನು, ಗೃಹೀ....ಷಃ-ಗ್ರಹಿಸಲ್ಪಟ್ಟ ಧನುಸ್ಸುಳ್ಳ, ತೇ-ನಿನಗೆ, ರಣೇ-ಕಾಳಗದಲ್ಲಿ, ಅಭಿಮುಖಃ-ಎದುರಾಗಿ, ತಿಷ್ಠೇತ್ - ನಿಲ್ಲುವನೋ, ಅಹಂ - ನಾನು, ತ್ರಿಷುಲೋಕೇಷು - ಮೂರು ಲೋಕಗಳಲ್ಲಿಯೂ, ತಂ - ಅಂತಹ ಪುರುಷನನ್ನು, ಕಂಚಿತ್ - ಯಾವನನ್ನೂ, ನಪಶ್ಯಾಮಿಹಿ - ಕಾಣೆನಷ್ಟೆ. || ೧೮ || ವಾನರೇಷು - ಕಪಿಗಳಲ್ಲಿ, ಸಮಾಸಕ್ತಂ - ಸಂಬಂಧಿಸಿದ, ತೇ - ನಿನ್ನ, ಕಾರ್ಯಂ - ಕಾರ್ಯವು, ನವಿಪತ್ಸ್ಯತೇ - ಕೆಟ್ಟುಹೋಗುವದಿಲ್ಲ, ಅಚಿರಾತ್ - ಜಾಗ್ರತೆಯಾಗಿ, ಅಕ್ಷಯಂ - ನಾಶರಹಿತವಾದ, ಸಾಗರಂ - ಕಡಲನ್ನು, ತೀರ್ತ್ವಾ - ದಾಟಿ, ಸೀತಾಂ - ಸೀತಾದೇವಿಯನ್ನು, ದ್ರಕ್ಷ್ಯಸೇ - ನೋಡುವೆ. || ೧೯ || ಹೇ ಭೂಪತೇ - ಎಲೈ ರಾಜನೇ, ತತ್ - ಆ ಕಾರಣದಿಂದ, ಶೋಕಂ - ವ್ಯಸನವನ್ನು, ಆಶ್ರಿತ್ಯ - ಅವಲಂಬಿಸುವದು, ಅಲಂ - ಸಾಕು, ಕ್ರೋಧಃ - ಕೋಪವನ್ನು, ಆಲಂಬ - ಆಶ್ರಯಿಸು, ನಿಶ್ಚೇಷ್ಟಾಃ - ನಿರುದ್ಯೋಗಿಗಳಾದ, ಕ್ಷತ್ರಿಯಾಃ - ಕ್ಷತ್ರಿಯರು, ಮಂದಾಃ - ಮೂಢರು, ಸರ್ವೇ -

---

ಗಳನ್ನೂ ನಾಶಗೊಳಿಸುತ್ತದೆ. || ೧೧–೧೬ || ಎಲೈ ಶ್ರೀರಾಮಮೂರ್ತಿಯೇ! ನೀನು ಬುದ್ಧಿಶಾಲಿಗಳಲ್ಲಿ ಶ್ರೇಷ್ಠನಾದವನು; ಸಕಲ ಶಾಸ್ತ್ರಾರ್ಥಗಳನ್ನೂ ಬಲ್ಲವರಲ್ಲಿ ಅಗ್ರಣಿಯನಾದವನು. ಇಂತಹ ನಿನಗೆ ನನ್ನಂತಹ ಮಂತ್ರಿಗಳೂ ದೊರಕಿರುವರು. ಆದುದರಿಂದ ನೀನು ಶತ್ರುವನ್ನು ಜಯಿಸುವೆಯೆಂಬುದರಲ್ಲಿ ಸಂದೇಹವೇನಿರುವುದು? ಎಲೈ ರಾಘವನೇ! ಧನುಸ್ಸನ್ನು ಹಿಡಿದು ರಣಮುಖದಲ್ಲಿ ನಿಂತ ನಿನ್ನನ್ನು ಎದುರಿಸುವ ಯಾವ ಧೀರನನ್ನೂ ನಾನು ಮೂರು ಲೋಕಗಳಲ್ಲಿಯೂ ಕಾಣೆನು. ಮುಖ್ಯವಾಗಿ ನಿನ್ನ ಕಾರ್ಯಭಾರವೆಲ್ಲವೂ ಈ ವಾನರರಿಗೆ ಸಂಬಂಧಿಸಿರುವುದು. ಇವರೆಲ್ಲರೂ ನಿನ್ನ ಕಾರ್ಯವನ್ನು ಮಾಡುವುದರಲ್ಲಿ ಬದ್ಧಾದರರಾಗಿರುವರು, ಆದುದರಿಂದ ನಿನ್ನ ಕಾರ್ಯವು ಎಂದಿಗೂ ವಿಫಲವಾಗದು. ನೀನು ಶೀಘ್ರವಾಗಿಯೇ ಅಪಾರವಾದ ಸಾಗರವನ್ನು ದಾಟಿ, ನಿನ್ನ ಪ್ರಿಯೆಯಾದ ಸೀತಾದೇವಿಯನ್ನು ನೋಡಿಯೇ ನೋಡುವೆ. ಪ್ರಭುವೇ! ನೀನೀಗ ಈ ದುಃಖವನ್ನು ದೂರಮಾಡಬೇಕು; ಕ್ರೋಧವನ್ನವಲಂಬಿಸಬೇಕು. ಕ್ಷತ್ರಿಯರಾದವರು ಉದ್ಯೋಗಹೀನರಾಗಿ ಕೇವಲ ಸಾತ್ವಿಕರಾಗಿ ಕುಳಿತುಬಿಟ್ಟರೆ ಅವರು ಮೂಢರಾಗುತ್ತಾರೆ. ಅವರಿಗೆ ಯಾರೂ ಹೆದರುವುದಿಲ್ಲವು, ಉದ್ಯೋಗ

ಮಾಲಂಬ ಭೂಪತೇ! । ನಿಶ್ಚೇಷ್ಟಾಃ ಕ್ಷತ್ರಿಯಾ ಮಂದಾಸ್ಸರ್ವೇ ಚಂಡಸ್ಯ ಬಿಭ್ಯತಿ ॥ ೨೦ ॥ ಲಂಘನಾರ್ಥಂಚ ಘೋರಸ್ಯ ಸಮುದ್ರಸ್ಯ ನದೀಪತೇಃ । ಸಹಾಸ್ಮಾಭಿರಿಹೋಪೇತಸ್ಸೂಕ್ಷ್ಮಬುದ್ಧಿರ್ವಿಚಾರಯ ॥ ೨೧ ॥ † ಸರ್ವಂ ತೀರ್ಣಂ ಚ ಮೇ ಸೈನ್ಯಂ ಜಿತಮಿತ್ಯುಪಧಾರಯ । ಇಮೇಹಿ ಹರಯ ಶ್ಶೂರಾಃ ಸಮರೇ ಕಾಮರೂಪಿಣಃ ॥ ೨೨ ॥ ತಾನರೀನ್ವಿಧಮಿಷ್ಯಂತಿ ಶಿಲಾಪಾದಪವೃಷ್ಟಿಭಿಃ । ಕಥಂಚಿತ್ಸಂತರಿಷ್ಯಾಮ ಸ್ತೇ ವಯಂ ವರುಣಾಲಯಂ ॥ ೨೩ ॥ ಹತಮಿತ್ಯೇವ ತಂ ಮನ್ಯೇ ಯುದ್ಧೇ ಸಮಿತಿನಂದನ! ।

ಸಮಸ್ತರೂ, ಚಂಡಸ್ಯ - ಅತ್ಯಂತ ಕೋಪಿಷ್ಠನಾದ ಅರಸನಿಗೆ, ಬಿಭ್ಯತಿ - ಹೆದರುತ್ತಾರೆ. ॥ ೨೦ ॥ ಘೋರಸ್ಯ - ಭಯಂಕರನಾದ, ನದೀಪತೇಃ - ನದಿಗಳಿಗೆಲ್ಲಾ ಅಧಿಪತಿಯಾದ, ಸಮುದ್ರಸ್ಯ - ಕಡಲಿನ, ಲಂಘನಾರ್ಥಂ - ತರಣಕ್ಕೆ ಹೇತುಭೂತವಾದ ಉಪಾಯವನ್ನು, ಇಹ - ಈಗ, ಅಸ್ಮಾಭಿಸ್ಸಹ - ನಮ್ಮೊಡನೆ, ಉಪೇತಃ - ಕೂಡಿದವನಾಗಿ, ಸೂಕ್ಷ್ಮಬುದ್ಧಿಃ - ಸೂಕ್ಷ್ಮವಾದ ಬುದ್ಧಿಯುಳ್ಳ, ತ್ವಂ - ನೀನು, ವಿಚಾರಯ - ವಿಮರ್ಶೆ ಮಾಡು, ಮೇ - ನನ್ನ, ಸರ್ವಂ - ಸಮಸ್ತವಾದ, ಸೈನ್ಯಂ - ಸೈನ್ಯವು, ತೀರ್ಣಂ - ದಾಟಿತೆಂದೂ, ಜಿತಮಿತಿ - ಜಯಿಸಿತು ಎಂದೂ, ಉಪಧಾರಯ - ತಿಳಿದುಕೋ. ॥ ೨೧ ॥ ಇಮೇಹರಯಃ - ಈ ವಾನರರು, ಸಮರೇ - ಕಾಳೆಗದಲ್ಲಿ, ಶೂರಾಃ - ಪಂಡಿತರಾಗಿರುವವರು, ಕಾಮರೂಪಿಣಃ - ಬೇಕಾದ ರೂಪವನ್ನು ಧರಿಸುವವರು, ಶಿಲಾ...ಭಿಃ - ಪಾಷಾಣಗಳು, ಗಿಡಗಳು ಇವುಗಳ ಮಳೆಗಳಿಂದ, ತಾನ್ಅರೀನ್ - ಆ ಶತ್ರುಗಳನ್ನು, ವಿಧಮಿಷ್ಯಂತಿ - ಧ್ವಂಸಗೊಳಿಸುತ್ತಾರೆ. ॥ ೨೨ ॥ ತೇವಯಂ ಈ ನಾವುಗಳು, ಕಥಂಚಿತ್-ಬಹಳ ಪ್ರಯಾಸದಿಂದಲಾದರೂ, ವರುಣಾಲಯಂ-ಕಡಲನ್ನು, ಸಂತರಿಷ್ಯಾಮಃ - ದಾಟುವೆವು, ಹೇ ಸಮಿತಿನಂದನ - ಎಲೈ ಯುದ್ಧದಲ್ಲಿ ಉತ್ಸಾಹಗೊಳ್ಳುವವನೇ, ಯುದ್ಧೇ - ಕಾಳೆಗದಲ್ಲಿ, ತಂ - ಆ ರಾವಣನನ್ನು, ಹತಮಿತ್ಯೇವ - ಹತನನ್ನಾಗಿಯೇ, ಮನ್ಯೇ - ತಿಳಿದಿದ್ದೇನೆ. ॥ ೨೩ ॥ ಬಹುಧಾ - ಅನೇಕ ಪ್ರಕಾರವಾಗಿ, ಉಕ್ತ್ವಾ - ಹೇಳಿ, ಕಿಂ -

ಪರರಾಗಿ ಪ್ರಚಂಡಾಜ್ಞೆಯಿಂದ ಪ್ರಭುತ್ವ ಮಾಡುವ ಕ್ಷತ್ರಿಯರಿಗೆ ಎಲ್ಲರೂ ಹೆದರುತ್ತಾರೆಯಲ್ಲವೆ? ॥ ೧೭–೨೦ ॥ ಎಲೈ ರಘುಪತಿಯೇ! ಈಗ ನೀನು ನಮ್ಮೆಲ್ಲರೊಡನೆಯೂ ಮಹಾಭಯಂಕರವಾದ ಈ ಸಾಗರೋಲ್ಲಂಘನಕ್ಕೆ ತಕ್ಕ ಉಪಾಯವನ್ನೂ, ಸೂಕ್ಷ್ಮಬುದ್ಧಿಯನ್ನೂ, ಆಲೋಚಿಸುವನಾಗು. ನಮ್ಮ ಸೈನ್ಯವೆಲ್ಲವೂ ಸಮುದ್ರವನ್ನು ದಾಟಿದೊಡನೆಯೇ ಜಯಿಸಿತೆಂದೇ ತಿಳಿ. ಈ ವಾನರರೆಲ್ಲರೂ ಮಹಾ ಶೂರರು; ಯುದ್ಧದಲ್ಲಿ ಬೇಕಾದಷ್ಟು ಬಲಪರಾಕ್ರಮಗಳನ್ನು ಮೆರೆಯತಕ್ಕವರು; ಬೇಕುಬೇಕಾದ ರೂಪಾಂತರಗಳನ್ನು ಹೊಂದಬಲ್ಲವರು. ಇವರು ಕಲ್ಮರಗಳ ಮಳೆಗರೆದು ಶತ್ರುಗಳೆಲ್ಲರನ್ನೂ ನಿರ್ಮೂಲ ಮಾಡುವರು.. ಈಗ ನಾವು ಹೇಗಾದರೂ ಮಾಡಿ ಸಾಗರವನ್ನು ದಾಟುವ ಉಪಾಯವನ್ನು ಮಾಡೋಣ. ಎಲೈ ಯುದ್ಧಪ್ರಿಯನೇ! ನಾವೆಲ್ಲರೂ ಸಾಗರವನ್ನು ದಾಟಿದೊಡನೆಯೇ ಆ ರಾವಣಾಸುರನು ಮಡಿದಂತೆಯೇ ಸರಿ. ಎಲೈ ರಘುನಂದನನೇ! ನಾನು ಸುಮ್ಮನೆ ಬಹಳವಾಗಿ ಹೇಳಿ ಪ್ರಯೋಜನವೇನು? ಖಂಡಿತವಾಗಿಯೂ ನೀನು ಜಯಶೀಲನೇ ಆಗುವೆ. ಇದರಲ್ಲಿ ಸಂದೇ

† "ಲಂಘಿತೇ ತತ್ರ ತೈಃ ಸೈನ್ಯೈರ್ಜಿತಮಿತ್ಯೇವನಿಶ್ಚಿನು" ರಾ. ತಿ. ಪಾ.

ಕಿಮುಕ್ತ್ವಾ ಬಹುಧಾ ಚಾಪಿ ಸರ್ವಥಾ ವಿಜಯೀ ಭವಾನ್ ।
ನಿಮಿತ್ತಾನಿಚ ಪಶ್ಯಾಮಿ ಮನೋ ಮೇ ಸಂಪ್ರಹೃಷ್ಯತಿ " ॥ ೨೪ ॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ದ್ವಿತೀಯಸ್ಸರ್ಗಃ



ಏನು ಪ್ರಯೋಜನ, ಭವಾನ್ - ನೀನು, ಸರ್ವಥಾ - ಸರ್ವಪ್ರಕಾರದಲ್ಲಿಯೂ, ವಿಜಯೀ - ಜಯಶಾಲಿಯು, ನಿಮಿತ್ತಾನಿಚ - ಶುಭನಿಮಿತ್ತಗಳನ್ನೂ, ಪಶ್ಯಾಮಿ - ಕಾಣುತ್ತೇನೆ, ಮೇ - ನನ್ನ, ಮನಃ - ಮನವು, ಸಂಪ್ರಹೃಷ್ಯತಿ - ಸಂತೋಷಗೊಂಡಿರುವದು. ॥ ೨೪ ॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ದ್ವಿತೀಯಸ್ಸರ್ಗಃ.



ಹವೇ ಇಲ್ಲ. ಮೇಲಾಗಿ ನೀನು ವಿಜಯಿಯಾಗುವೆನೆಂಬುದಕ್ಕೆ ತಕ್ಕಂತೆ ಶುಭಶಕುನಗಳನ್ನೂ ಕಾಣುತ್ತಿರುವೆನು. ನನ್ನ ಮನಸ್ಸೂ ಸಹ ಸಂತೋಷದಿಂದ ಕೂಡಿದ ಕಾರ್ಯಸಿದ್ಧಿಯನ್ನೇ ಸೂಚಿಸುತ್ತಿರುವುದು " ಎಂದು ಹೇಳಿದನು. ॥೨೧-೩೧॥

ಇಂತಿದು ಸುಗ್ರೀವಕೃತ ಶ್ರೀರಾಮ ಪ್ರೋತ್ಸಾಹನ ವೃತ್ತಾಂತವೆಂಬ
ಎರಡನೆಯ ಸರ್ಗವು ಸಮಾಪ್ತವಾದುದು.



# ಯುದ್ಧಕಾಂಡೇ ತೃತೀಯಸ್ಸರ್ಗಃ

**ಸುಗ್ರೀವಸ್ಯ ವಚಶ್ಶ್ರುತ್ವಾ ಹೇತುಮತ್ಪರಮಾರ್ಥವಿತ್ । ಪ್ರತಿಜಗ್ರಾಹ ಕಾಕುತ್ಸ್ಥೋ ಹನುಮಂತಮಥಾಬ್ರವೀತ್ ॥ ೧ ॥ " ತಪಸಾ ಸೇತುಬಂಧೇನ ಸಾಗರೋಚ್ಛೋಷಣೇನ ವಾ । ಸರ್ವಥಾ ಸುಸಮರ್ಥೋಽಸ್ಮಿ ಸಾಗರಸ್ಯಾಽಸ್ಯ ಲಂಘನೇ ॥ ೨ ॥ ಕತಿದುರ್ಗಾಣಿ ದುರ್ಗಾಯಾ ಲಂಕಾಯಾ ಬ್ರೂಹಿ ತಾನಿ ಮೇ । ಜ್ಞಾತುಮಿಚ್ಛಾಮಿ ತತ್ಸರ್ವಂ ದರ್ಶನಾದಿವ ವಾನರ ! ॥ ೩ ॥ ಬಲಸ್ಯ ಪರಿಮಾಣಂಚ ದ್ವಾರದುರ್ಗಕ್ರಿಯಾಮಪಿ । ಗುಪ್ತಿಕರ್ಮಚ ಲಂಕಾಯಾ ರಕ್ಷಸಾಂ ಸದನಾನಿಚ ॥ ೪ ॥**

---

ಪರಮಾರ್ಥವಿತ್ - ತತ್ವಾರ್ಥವನ್ನರಿತಿರುವ, ಕಾಕುತ್ಸ್ಥಃ - ಶ್ರೀರಾಮನು, ಹೇತುಮತ್ - ಯುಕ್ತಿಯುಕ್ತವಾದ, ಸುಗ್ರೀವಸ್ಯ-ಸುಗ್ರೀವನ, ವಚಃ ಮಾತನ್ನು, ಶ್ರುತ್ವಾ-ಕೇಳಿ, ಪ್ರತಿಜಗ್ರಾಹ-ಗ್ರಹಿಸಿದನು, ಅಥ ಬಳಿಕ, ಹನುಮಂತಂ-ಆಂಜನೇಯನನ್ನು ಕುರಿತು, ಅಬ್ರವೀತ್-ನುಡಿದನು. ॥೧॥ ತಪಸಾ - ತಪಸ್ಸಿನಿಂದಲೇ ಆಗಲಿ, ಸೇತುಬಂಧೇನ - ಸೇತುಬಂಧನದಿಂದಲೇ ಆಗಲಿ, ಸಾಗ....ವಾ - ಸಮುದ್ರ ಶೋಷಣದಿಂದಲಾಗಲಿ, ಸರ್ವಥಾ - ಸರ್ವಪ್ರಕಾರದಲ್ಲಿಯೂ, ಅಸ್ಯಸಾಗರಸ್ಯ - ಈ ಕಡಲಿನ, ಲಂಘನೇ - ದಾಟುವದರಲ್ಲಿ, ಸುಸಮರ್ಥಃ - ಬಹಳ ಸಮರ್ಥನು, ಅಸ್ಮಿ - ಆಗಿದ್ದೇನೆ. ॥ ೨ ॥ ಹೇ ವಾನರ - ಎಲೈ ವಾನರನೇ, ದುರ್ಗಾಯಾಃ - ಹೊಂದಲಸಾಧ್ಯವಾದ, ಲಂಕಾಯಾಃ - ಲಂಕಾ ಪಟ್ಟಣಕ್ಕೆ, ದುರ್ಗಾಣಿ - ಕೊತ್ತಲಗಳು, ಕತಿ - ಎಷ್ಟು, ತಾನಿ - ಆ ದುರ್ಗಾಸ್ಥಾನಗಳನ್ನೂ, ಮೇ - ನನಗೆ, ತತ್ಸರ್ವಂ - ಆ ಸಮಸ್ತವನ್ನೂ, ದರ್ಶನಾದಿವ - ನೋಡಿದಂತೆ, ಬ್ರೂಹಿ - ಹೇಳು, ಜ್ಞಾತುಂ- ಸ್ಪಷ್ಟವಾಗಿ ತಿಳಿದುಕೊಳ್ಳುವುದಕ್ಕೆ, ಇಚ್ಛಾಮಿ - ಅಪೇಕ್ಷಿಸುತ್ತೇನೆ. ॥ ೩ ॥ ಬಲಸ್ಯ - ಸೈನ್ಯದ, ಪರಿಮಾಣಂಚ - ಸಂಖ್ಯೆಯನ್ನೂ, ದ್ವಾರ....ಪಿ - ದ್ವಾರಗಳಲ್ಲಿ ಹೋಗಲಸಾಧ್ಯವಾದ ಕರ್ಮಗಳನ್ನೂ, ಲಂಕಾಯಾಃ - ಲಂಕಾಪಟ್ಟಣದ, ಗುಪ್ತಿಕರ್ಮಚ - ರಕ್ಷಣಕಾರ್ಯವನ್ನೂ, ರಕ್ಷಸಾಂ - ರಕ್ಕಸರ, ಸದನಾನಿಚ - ಮನೆಗಳನ್ನೂ, ಯಥಾಸುಖಂ - ಸುಖವಾಗಿ, ಯಥಾವಚ್ಚ - ಯಥಾಸ್ಥಿತವಾಗಿ,

---

ಈ ಪ್ರಕಾರವಾಗಿ ಸುಗ್ರೀವನು ಹೇಳಿದ ಯುಕ್ತಿಯುಕ್ತಗಳಾದ ಮಾತುಗಳನ್ನು ಕೇಳಿ ಪರಮಾರ್ಥವೇತ್ತನಾದ ಶ್ರೀರಾಮಮೂರ್ತಿಯು ಹಾಗೆಯೇ ಆಗಲೆಂದು ನುಡಿದು, ಆಮೇಲೆ ಲಂಕಾ ವೃತ್ತಾಂತ ಕುಶಲನಾದ ಹನುಮಂತನನ್ನು ಕುರಿತು, " ಎಲೈ ಮಾರುತಿಯೇ ! ನಾನು ತಪಸ್ಸನ್ನು ಮಾಡಿಯೋ, ಸೇತುವೆಯನ್ನು ಕಟ್ಟಿಯೋ, ಸಾಗರವನ್ನು ಶೋಷಿಸಿಯೋ, ಹೇಗೋ ಈ ಮಹಾ ಸಾಗರವನ್ನು ದಾಟಲು ಸಮರ್ಥನಾಗಿಯೇ ಇರುವೆನು. ಆದರೆ ನಾನು ಹಾಗೆ ಮಾಡುವುದಕ್ಕೆ ಮೊದಲು ಲಂಕಾ ವೃತ್ತಾಂತವನ್ನು ಮತ್ತಷ್ಟು ವಿಶದವಾಗಿ ಕೇಳಬೇಕು. ದುರ್ಗಮವಾದ ಆ ಲಂಕಾಪಟ್ಟಣಕ್ಕೆ ದುರ್ಗಗಳೆಷ್ಟಿರುವುವು ? ಅಲ್ಲಿರುವ ಸೈನ್ಯದ ಪರಿಮಾಣವೆಷ್ಟು ? ದ್ವಾರದುರ್ಗರಚನೆಯಂತಿರುವುದು ? ಪ್ರಾಕಾರಗಳು, ಪರಿಘಗಳು ಇವುಗಳ ರಚನೆಯೂ, ರಾಕ್ಷಸಭವನಗಳ ರಚನಾರೀತಿಯೂ ಹೇಗಿರುವುದು ? ಈ ವಿಷಯಗಳೆಲ್ಲವನ್ನೂ ಕಂಡುದು ಕಂಡಂತೆ ಸ್ಪಷ್ಟವಾಗಿ ನನಗೆ ತಿಳಿಸುವವ

ಯಥಾ ಸುಖಂ ಯಥಾವಚ್ಚ ಲಂಕಾಯಾಮಸಿ ದೃಷ್ಟವಾನ್ । ಸರ್ವಮಾಚಕ್ಷ್ವ ತತ್ತ್ವೇನ ಸರ್ವಥಾ ಕುಶಲೋಽಹ್ಯಸಿ? ” ॥ ೫ ॥ ಶ್ರುತ್ವಾ ರಾಮಸ್ಯ ವಚನಂ ಹನೂಮಾನ್ಮಾರುತಾತ್ಮಜಃ । ವಾಕ್ಯಂ ವಾಕ್ಯವಿದಾಂ ಶ್ರೇಷ್ಠೋ ರಾಮಂ ಪುನರಥಾಬ್ರವೀತ್ ॥ ೬ ॥ “ ಶ್ರೂಯತಾಂ ಸರ್ವಮಾಖ್ಯಾಸ್ಯೇ ದುರ್ಗಕರ್ಮ ವಿಧಾನತಃ । ಗುಪ್ತಾ ಪುರೀ ಯಥಾ ಲಂಕಾ ರಕ್ಷಿತಾಚ ಯಥಾಬಲೈಃ ॥ ೭ ॥ ರಾಕ್ಷಸಾಶ್ಚ ಯಥಾಸ್ನಿಗ್ಧಾ ರಾವಣಸ್ಯಚ ತೇಜಸಾ । ಪರಾಂ ಸಮೃದ್ಧಿಂ ಲಂಕಾಯಾ ಸ್ಸಾಗರಸ್ಯಚ ಭೀಮತಾಂ ॥ ೮ ॥ ವಿಭಾ

---

ಲಂಕಾಯಾಂ - ಲಂಕಾಪಟ್ಟಣದಲ್ಲಿ, ದೃಷ್ಟವಾನ್ - ನೋಡಿದವನು, ಅಸಿ - ಆಗಿರುವೆ, ಸರ್ವಥಾ - ಸರ್ವಪ್ರಕಾರವಾಗಿಯೂ, ಕುಶಲಃ ಸಮರ್ಥನು, ಅಸ್ತಿಹಿ-ಆಗಿರುವೆಯಷ್ಟೆ, ಸರ್ವಂ-ಸಮಸ್ತವನ್ನೂ, ತತ್ತ್ವೇನ - ಯಥಾರ್ಥದಿಂದ, ಆಚಕ್ಷ್ವ - ಹೇಳು. ॥ ೪-೫ ॥ ವಾಕ್ಯವಿದಾಂ - ವಾಕ್ಯಾಜ್ಞರಲ್ಲಿ, ಶ್ರೇಷ್ಠಃ - ಉತ್ತಮನಾದ, ಮಾರುತಾತ್ಮಜಃ - ವಾಯುಪುತ್ರನಾದ, ಹನುಮಾನ್ - ಆಂಜನೇಯನು, ರಾಮಸ್ಯ - ಶ್ರೀರಾಮನ, ವಚನಂ - ಮಾತನ್ನು, ಶ್ರುತ್ವಾ - ಕೇಳಿ, ಅಥ - ಬಳಿಕ, ರಾಮಂ - ಶ್ರೀರಾಮನನ್ನು ಕುರಿತು, ವಾಕ್ಯಂ - ಮಾತನ್ನು, ಪುನಃ - ಮತ್ತು, ಅಬ್ರವೀತ್ - ನುಡಿದನು. ॥ ೬ ॥ ಲಂಕಾಪುರೀ - ಲಂಕಾಪಟ್ಟಣವು, ಯಥಾ - ಹೇಗೆ, ಗುಪ್ತಾ - ಸಂರಕ್ಷಣೆ ಮಾಡಲ್ಪಟ್ಟದೆಯೋ, ಬಲೈಃ - ಸೈನ್ಯಗಳಿಂದ, ಯಥಾ - ಹೇಗೆ, ರಕ್ಷಿತಾಚ - ಸಂರಕ್ಷಣೆ ಮಾಡಲ್ಪಟ್ಟದೆಯೋ, ರಾಕ್ಷಸಾಶ್ಚ-ರಕ್ಕಸರೂ, ತೇಜಸಾ - ಪರಾಕ್ರಮದಿಂದ, ರಾವಣಸ್ಯಚ - ರಾವಣನಿಗೆ, ಯಥಾ - ಹೇಗೆ, ಸ್ನಿಗ್ಧಾಃ - ಸ್ನೇಹಿತರಾಗಿದ್ದಾರೆಯೋ, ಲಂಕಾಯಾಃ - ಲಂಕಾಪಟ್ಟಣದ, ಪರಾಂ - ಉತ್ಕೃಷ್ಟವಾದ, ಸಮೃದ್ಧಿಂ- ಐಶ್ವರ್ಯವನ್ನೂ, ಸಮುದ್ರಸ್ಯ - ಕಡಲಿನ, ಭೀಮತಾಂ - ಭಯಂಕರತ್ವವನ್ನೂ, ದುರ್ಗ....ತಃ - ಕೊತ್ತಲಗಳ ನಿರ್ಮಾಣ ವಿಧಾನವನ್ನೂ, ತಥಾ - ಹಾಗೆಯೇ, ಬಲೌಘಸ್ಯ - ಸೈನ್ಯದ ಗುಂಪುಗಳ, ವಿಭಾಗಂಚ - ವಿಭಾಗವನ್ನೂ, ವಾಹನಸ್ಯ - ವಾಹನಗಳ, ನಿರ್ದೇಶಂ - ಸಂಖ್ಯೆಯನ್ನೂ, ಸರ್ವಂ - ಸಮಸ್ತವನ್ನೂ, ಆಖ್ಯಾಸ್ಯೇ-ಹೇಳುವೆನು, ಶ್ರೂಯತಾಂ-ಕೇಳಲ್ಪಡಲಿ. ॥೭-೮॥ ಏವಂ- ಈ ಪರಿಯಾಗಿ,

---

ನಾಗು. ನೀನು ಲಂಕಾಪಟ್ಟಣವನ್ನು ಸಾವಕಾಶವಾಗಿ, ಸೂಕ್ಷ್ಮವಾಗಿ ಕಂಡುಬಂದಿರುವವನು. ಆದುದರಿಂದ ನೀನು ಈ ವಿಷಯಗಳೆಲ್ಲವನ್ನೂ ವಿಶದವಾಗಿ ಹೇಳಲು ಕುಶಲನಾಗಿರುವೆ ” ಎಂದು ಹೇಳಿದನು. ॥ ೧-೫ ॥ ಶ್ರೀರಾಮಮೂರ್ತಿಯಿಂತು ನುಡಿಯಲು, ಮಾತನಾಡುವುದರಲ್ಲಿ ಮಹಾ ಚತುರನಾದ ಮಾರುತಿಯು ಆತನನ್ನು ಕುರಿತು, “ ಎಲೈ ಶ್ರೀರಾಮನೇ ! ಲಂಕಾಪಟ್ಟಣದ ದುರ್ಗರಚನಾವಿಧಾನವನ್ನೂ ಲಂಕಾನಗರವು ದುರ್ಗಕರ್ಮವಿಧಾನದಿಂದ ಸಂರಕ್ಷಿತವಾಗಿರುವ ರೀತಿಯನ್ನೂ, ಸೈನ್ಯಗಳು ಆ ಪಟ್ಟಣವನ್ನು ಕಾಪಾಡುತ್ತಿರುವ ಬಗೆಯನ್ನೂ, ಪ್ರಭುವಾದ ರಾವಣಾಸುರನಲ್ಲಿ ರಾಕ್ಷಸರೆಲ್ಲರಿಗೂ ನೆಲೆಯಾಗಿರುವ ಸ್ನೇಹಸ್ವರೂಪವನ್ನೂ, ಆ ರಾವಣನ ಪ್ರಭಾವದಿಂದ ಲಂಕಾಪಟ್ಟಣವು ಸರ್ವಸಮೃದ್ಧವಾಗಿರುವ ರೀತಿಯನ್ನೂ, ಸಮುದ್ರದ ಭೀಕರಸ್ವರೂಪವನ್ನೂ, ಸೈನ್ಯಸಮೂಹಗಳ ವಿಭಾಗಕ್ರಮವನ್ನೂ, ರಥ, ಗಜ, ತುರಗಾದಿ ವಾಹನಗಳ ವಿಭಜನಾರೀತಿಯನ್ನೂ ಸವಿಸ್ತರವಾಗಿ ಹೇಳುವೆನು ಕೇಳು. ರಾಮಾ ! ಲಂಕಾಪಟ್ಟಣವು ನಿತ್ಯಸಂತುಷ್ಟರಾದ ಜನಸಮುದಾಯದಿಂದ ತುಂಬಿತುಳುಕು

ಗಂಚ ಬಲೌಘಸ್ಯ ನಿರ್ದೇಶಂ ವಾಹನಸ್ಯಚ" । ಏವಮುಕ್ತ್ವಾ ಕಪಿಶ್ರೇಷ್ಠಃ ಕಥಯಾಮಾಸ † ತತ್ವತಃ ॥ ೯ ॥ "ಹೃಷ್ಟಪ್ರಮುದಿತಾ ಲಂಕಾ ಮತ್ತದ್ವಿಪಸಮಾಕುಲಾ । ಮಹತೀ ರಥಸಂಪೂರ್ಣಾ ರಕ್ಷೋಗಣ * ಸಮಾಕುಲಾ । ‡ ವಾಜಿಭಿಶ್ಚ ಸುಸಂಪೂರ್ಣಾ ಸಾಪುರೀ ದುರ್ಗಮಾ ಪರೈಃ ॥ ೧೦ ॥ ದೃಢಬದ್ಧಕವಾಟಾನಿ ಮಹಾಪರಿಘವಂತಿಚ । ದ್ವಾರಾಣಿ ವಿಪುಲಾನ್ಯಸ್ಯಾಶ್ಚತ್ವಾರಿ ಸುಮಹಾಂತಿಚ ॥೧೧॥ ತತ್ರೇಷೂಪಲಯಂತ್ರಾಣಿ ಬಲವಂತಿ ಮಹಾಂತಿಚ । ಆಗತಂ ¶ ಪರಸೈನ್ಯಂತು ತತ್ರ ತೈಃ ಪ್ರತಿಹನ್ಯತೇ ॥ ೧೨ ॥ ದ್ವಾರೇಷು ಸಂಸ್ಕೃತಾ ಭೀಮಾಃ ಕಾಲಾಯಸಮಯಾಃ ಶಿತಾಃ । ಶತಶೋ ರಚಿತಾ

---

ಉಕ್ತ್ವಾ - ಹೇಳಿ, ಕಪಿಶ್ರೇಷ್ಠಃ - ವಾನರೋತ್ತಮನಾದ ಆಂಜನೇಯನು, ತತ್ವತಃ - ಯಥಾರ್ಥವಾಗಿ, ಕಥಯಾಮಾಸ - ಹೇಳಿದನು. ॥ ೯ ॥ ಹೃಷ್ಟ....ತಾ - ಸಂತುಷ್ಟರಾದ ಜನರಿಂದ ಸಂತೋಷಗೊಂಡಿರುವ, ಲಂಕಾ - ಲಂಕಾಪಟ್ಟಣವು, ಮತ್ತ....ಲಾ - ಮದಿಸಿದ ಆನೆಗಳಿಂದ ತುಂಬಿ, ಮಹತೀ - ದೊಡ್ಡದಾಗಿದೆ, ರಥಸಂಪೂರ್ಣಾ - ರಥಗಳಿಂದ ತುಂಬಿದೆ, ರಕ್ಷೋ....ಲಾ - ರಾಕ್ಷಸರ ಗುಂಪುಗಳಿಂದ ತುಂಬಿದೆ, ಸಾಪುರೀ - ಆ ಪಟ್ಟಣವು, ವಾಜಿಭಿಶ್ಚ - ಕುದುರೆಗಳಿಂದಲೂ, ಸುಸಂಪೂರ್ಣಾ - ಚನ್ನಾಗಿ ತುಂಬಿದೆ, ಪರೈಃ - ಶತ್ರುಗಳಿಂದ, ದುರ್ಗಮಾ - ಪ್ರವೇಶಿಸಲಶಕ್ಯವಾಗಿದೆ, ಅಸ್ಯಾಃ - ಈ ಲಂಕಾಪಟ್ಟಣಕ್ಕೆ, ದೃಢ....ನಿ - ಬಲವಾಗಿ ಕೀಲಿಸಿದ ಬಾಗಿಲುಗಳುಳ್ಳ, ಮಹಾ....ಚ - ದೊಡ್ಡ ಲಾಳುಂಡಿಗೆಗಳುಳ್ಳ, ಚತ್ವಾರಿ - ನಾಲ್ಕಾದ, ದ್ವಾರಾಣಿ - ಬಾಗಿಲುಗಳು. ॥೧೦-೧೧॥ ತತ್ರ - ಆ ಲಂಕಾಪಟ್ಟಣದಲ್ಲಿ, ಇಷೂ....ಣಿ - ಬಾಣಗಳು ಬಿಡತಕ್ಕ ಶಿಲಾಯಂತ್ರಗಳೂ, ಬಲವಂತಿ - ಬಲವತ್ತರವಾಗಿವೆ, ಮಹಾಂತಿಚ - ದೊಡ್ಡವಾಗಿವೆ, ತೈಃ - ಆ ಯಂತ್ರಗಳಿಂದ, ಆಗತಂ - ಬರುತ್ತಿರುವ, ಪರಸೈನ್ಯಂ - ಶತ್ರುಸೈನ್ಯವು, ಪ್ರತಿಹನ್ಯತೇ - ಹೊಡೆಯಲ್ಪಡುತ್ತದೆ. ॥೧೨॥ ದ್ವಾರೇಷು - ಬಾಗಿಲುಗಳಲ್ಲಿ, ವೀರೈಃ - ಶೂರರಾದ, ರಕ್ಷಸಾಂ - ರಕ್ಕಸರ, ಗಣ್ಯೈಃ - ತಂಡಗಳಿಂದ, ರಚಿತಾಃ - ಮಾಡಲ್ಪಟ್ಟ, ಸಂಸ್ಕೃತಾಃ - ಸಂಸ್ಕಾರ ಮಾಡಲ್ಪಟ್ಟ, ಭೀಮಾಃ - ಭಯಂಕರಗಳಾದ, ಕಾಲಾ....ಯಾಃ - ಕಬ್ಬಿಣದ, ಶಿತಾಃ -

---

ತ್ತಿರುವುದು. ಮದಿಸಿದ ಗಜಶ್ರೇಷ್ಠಗಳಿಂದಲೂ, ದೊಡ್ಡ ದೊಡ್ಡ ರಥಗಳಿಂದಲೂ, ರಾಕ್ಷಸಸಮೂಹಗಳಿಂದಲೂ, ಉತ್ತಮಾಶ್ವಗಳಿಂದಲೂ, ತುಂಬಿತುಳುಕುತ್ತಿರುವುದು. ಮಾತ್ರವಲ್ಲದೆ, ಆ ಪಟ್ಟಣವು ಶತ್ರುಗಳಿಗೆ ಪ್ರವೇಶಿಸಲು ಎಷ್ಟುಮಾತ್ರವೂ ಅಸದಳವಾಗಿರುವುದು. ॥೬-೧೦॥ ಆ ಮಹಾ ಪಟ್ಟಣಕ್ಕೆ ನಾಲ್ಕು ದೊಡ್ಡ ಹೊರಬಾಗಿಲುಗಳಿರುವುವು. ಅವುಗಳಲ್ಲಿ ಪ್ರತಿಯೊಂದೂ ಬಲವಾದ ಸಾಮುಗ್ರಿಗಳಿಂದ ಮಾಡಿದುವೂ, ದೃಢವಾದ ಅಗಳೀಮರಗಳುಳ್ಳುವೂ ಆಗಿರುವುವು. ಆ ಬಾಗಿಲುಗಳಲ್ಲಿ, ವಿಶೇಷ ಬಲವುಳ್ಳುವಾಗಿ ದೊಡ್ಡದಾಗಿರುವ ಬಾಣಗಳನ್ನೂ, ಕಲ್ಲುಗಳನ್ನೂ ಎಸೆಯುವ ಯಂತ್ರಗಳಿರುವುವು. ಲಂಕಾನಗರವನ್ನು ಮುತ್ತುವುದಕ್ಕೆ ಬರುವ ಶತ್ರುಸೈನ್ಯಗಳೆಲ್ಲವೂ ಆ ಸ್ಥಳದಲ್ಲಿಯೇ ಬಾಣಯಂತ್ರಗಳಿಂದಲೂ, ಶಿಲಾಯಂತ್ರಗಳಿಂದಲೂ ಧ್ವಂಸವಾಗುವುವು. ಇಷ್ಟೆಯಲ್ಲದೆ ಆ ಬಾಗಿಲುಗಳಲ್ಲಿ ಮಹಾ ವೀರರಾದ ರಾಕ್ಷಸರ ಗುಂಪುಗಳಿಂದ ಸುಸಂಸ್ಕೃತವಾಗಿರಿಸಿರುವ ನೂರಾರು ಕಬ್ಬಿಣದ ಹಾರೆ

---

† "ತತ್ವವಿತ್" ತಿ. ಪಾ. * "ನಿಷೇವಿತಾ" ತಿ. ಪಾ. ‡ ಈ ಪಾದವು ತಿ. ರಾ. ಮ. ಪಾಠಗಳಲ್ಲಿಲ್ಲ.

¶ "ಪ್ರತಿಸೈನ್ಯಂ ತೈಸ್ತತ್ರಪ್ರತಿನಿವಾರ್ಯತೇ" ಮ. ತಿ. ಧಾ. ಷಾ.

3

ವೀರೈಃ ಶತಘ್ನ್ಯೋ ರಕ್ಷಸಾಂಗಣೈಃ ॥೧೩॥ ಸೌವರ್ಣಶ್ಚ ಮಹಾಂಸ್ತಸ್ಯಾಃ ಪ್ರಾಕಾರೋ ದುಷ್ಪ್ರಧರ್ಷಣಃ । ಮಣಿವಿದ್ರುಮವೈಡೂರ್ಯ ಮುಕ್ತಾವಿರಚಿತಾಂತರಃ ॥ ೧೪ ॥ ಸರ್ವತಶ್ಚ ಮಹಾಭೀಮಾಃ ಶೀತತೋಯವಹಾ ಶ್ಶುಭಾಃ । ಅಗಾಧಾ ಗ್ರಾಹವತ್ಯಶ್ಚ ಪರಿಘಾ ಮೀನಸೇವಿತಾಃ ॥ ೧೫ ॥ ದ್ವಾರೇಷು ತಾಸಾಂ ಚತ್ವಾರಸ್ಸಂಕ್ರಮಾಃ ಪರಮಾಯತಾಃ। ಯಂತ್ರೈರುಪೇತಾ ಬಹುಭಿರ್ಮಹದ್ಭಿರ್ಗೃಹಪಙ್ಕ್ತಿಭಿಃ ॥೧೬॥ ತ್ರಾಯಂತೇ ಸಂಕ್ರಮಾಸ್ತತ್ರ ಪರಸೈನ್ಯಾಗಮೇ ಸತಿ । ಯಂತ್ರೈಸ್ತೈರವಕೀರ್ಯಂತೇ ಪರಿಘಾಸು

ತೀಕ್ಷ್ಣಗಳಾದ, ಶತಶಃ - ನೂರಾರು, ಶತಘ್ನ್ಯಃ - ಶತಘ್ನಿಗಳು, ಸಂತಿ - ಇರುವುವು. ॥೧೩॥ ತಸ್ಯಾಃ- ಆ ಲಂಕಾಪಟ್ಟಣಕ್ಕೆ, ಮಣಿ....ರಃ - ರತ್ನಗಳು, ಹವಳಗಳು, ವೈಡೂರ್ಯಮಣಿಗಳು, ಮುತ್ತುಗಳು ಇವುಗಳಿಂದ ಮಾಡಲ್ಪಟ್ಟ ಮಧ್ಯಪ್ರದೇಶಗಳುಳ್ಳ, ಸೌವರ್ಣಶ್ಚ - ಸುವರ್ಣವಿಕಾರವಾದ, ಮಹಾನ್ - ದೊಡ್ಡದಾದ, ಪ್ರಾಕಾರಃ - ಕೋಟೆಯ ಗೋಡೆಯು, ದುಷ್ಪ್ರಧರ್ಷಣಃ - ತಿರಸ್ಕರಿಸಲಸಾಧ್ಯವಾಗಿದೆ. ॥೧೪॥ ಸರ್ವತಃ - ಎಲ್ಲೆಡೆಯಲ್ಲಿಯೂ, ಮಹಾಭೀಮಾಃ - ಬಹಳ ಭಯಂಕರಗಳಾದ, ಶೀತ....ಹಾಃ - ತಣ್ಣಗಿರುವ ಉದಕವನ್ನು ವಹಿಸುತ್ತಿರುವ, ಶುಭಾಃ-ಶುಭಕರಗಳಾದ, ಅಗಾಧಾಃ-ಆಳವಾಗಿರುವ, ಗ್ರಾಹವತ್ಯಃ-ನೆಗಳೆಗಳುಳ್ಳ, ಮೀನಸೇವಿತಾಃ-ಮತ್ಸ್ಯಗಳಿಂದ ಸೇವಿಸಲ್ಪಟ್ಟ, ಪರಿಘಾಃ-ಅಗಳ್ತೆಗಳು, ಸಂತಿ - ಇರುವುವು. ॥೧೫॥ ದ್ವಾರೇಷು - ಬಾಗಿಲುಗಳಲ್ಲಿ, ತಾಸಾಂ - ಆ ಅಗಳ್ತೆಗಳ ಸಂಬಂಧಗಳಾದ, ಚತ್ವಾರಃ - ನಾಲ್ಕಾದ, ಪರಮಾಯತಾಃ - ಬಹಳ ವಿಸ್ತಾರವಾದ, ಸಂಕ್ರಮಾಃ - ಹಲಿಗೆಗಳಿಂದ ನಿರ್ಮಿಸಿದ ಸಂಚಾರ ಮಾರ್ಗಗಳೂ, ಬಹುಭಿಃ - ಅನೇಕಗಳಾದ, ಯಂತ್ರೈಃ - ಯಂತ್ರಗಳಿಂದಲೂ, ಮಹದ್ಭಿಃ - ದೊಡ್ಡವುಗಳಾದ, ಪಙ್ಕ್ತಿಭಿಃ - ಪಙ್ಕ್ತಿಗಳಿಂದಲೂ, ಉಪೇತಾಃ - ಕೂಡಿವೆ, ತತ್ರ - ಆ ಲಂಕಾಪಟ್ಟಣದಲ್ಲಿ, ಪರ....ಸತಿ - ಶತ್ರುಸೈನ್ಯವು ಬಂದರೆ, ಸಂಕ್ರಮಾಃ - ಹಲಿಗೆಗಳಿಂದ ಮಾಡಲ್ಪಟ್ಟ ಮಾರ್ಗಗಳು, ತೈಃಯಂತ್ರೈಃ - ಆ ಯಂತ್ರಗಳಿಂದ, ತ್ರಾಯಂತೇ - ಸಂರಕ್ಷಿಸಲ್ಪಡುತ್ತದೆ, ಸಮಂತತಃ-ಎಲ್ಲೆಡೆಯಲ್ಲಿಯೂ, ಪರಿಘಾಸು-ಅಗಳ್ತೆಗಳಲ್ಲಿ, ಅವಕೀರ್ಯಂತೇ-ತುಂಬಿಸಲ್ಪಡುತ್ತದೆ. ॥ ೧೬-೧೭ ॥ ಏಕಃ - ಒಂದಾದ, ಸಂಕ್ರಮಸ್ತು - ಮಾರ್ಗವಾದರೆ, ಬಹುಭಿಃ - ಅನೇಕಗಳಾದ,

ಗಳಿರುವುವು. ಆ ಪಟ್ಟಣಕ್ಕೆ ಸ್ವರ್ಣಮಯವೂ, ಬಹು ದೊಡ್ಡದೂ, ಎದುರಿಸಲಸದಳವೂ, ವಜ್ರವಿದ್ರುಮವೈಡೂರ್ಯ ಮುಕ್ತಾಮಣಿಗಳಿಂದ ರಚಿತವಾಗಿರುವ ಮಧ್ಯಪ್ರದೇಶಗಳುಳ್ಳವೂ, ಬಹಳ ಉದ್ದವಾಗಿರುವುವೂ ಆದ ಪ್ರಾಕಾರವಿರುವುದು. ಆ ಪ್ರಾಕಾರದ ಸುತ್ತಲೂ ಮಹಾ ಭಯಂಕರವಾಗಿಯೂ, ತಣ್ಣನೆ ಕೊರೆಯುತ್ತಿರುವ ನೀರಿನಿಂದ ತುಂಬಿರುವುದಾಗಿಯೂ ಇರುವ ಬಹಳ ಆಳವುಳ್ಳದಾಗಿ ಮೊಸಳೆಗಳಿಂದಲೂ, ಮೀನುಗಳಿಂದಲೂ ನಿಬಿಡವಾಗಿರುವ ಸೊಗಸಾದ ಅಗಳ್ತೆಯಿರುವುದು. ॥ ೧೧–೧೫ ॥ ಆ ಪಟ್ಟಣದ ದ್ವಾರಪ್ರದೇಶಗಳಲ್ಲಿ ಆ ಅಗಳ್ತೆಗಳಿಗೆ ನಾಲ್ಕೂ ಕಡೆಗಳಲ್ಲಿಯೂ ಮರದ ಹಲಿಗೆಗಳಿಂದ ಮಾಡಿದ ಸಂಚಾರಮಾರ್ಗಗಳಿರುವುವು. ಅಲ್ಲಿ ಪ್ರಜೆಗಳು ನಿರಾತಂಕವಾಗಿ ಸಂಚರಿಸಲೋಸುಗ ಬಹು ವಿಶಾಲವಾದುವೂ, ದೊಡ್ಡವೂ ಆದ ಅನೇಕ ಯಂತ್ರಗಳಿರುವುವು. ಇದು ಮಾತ್ರವಲ್ಲದೆ ಅಲ್ಲಿ ದ್ವಾರಪ್ರದೇಶವನ್ನು ಸಂರಕ್ಷಿಸಲಿರುವ ರಾಕ್ಷಸರು ವಾಸಮಾಡಲು ಯಂತ್ರಗೃಹಗಳು ಅನೇಕವಾಗಿ ರಚಿತವಾಗಿರುವುವು. ಅಲ್ಲಿನ ಸಂಚಾರಮಾರ್ಗಗಳು, ಶತ್ರುಸೇನೆಗಳು ಬಂದೊಡ

ಸಮಂತತಃ ||೧೭|| ಏಕಸ್ತ್ವಕಂಪ್ಯೋ ಬಲವಾನ್ ಸಂಕ್ರಮಸ್ಸುಮಹಾದೃಢಃ | ಕಾಂಚನೈರ್ಬಹುಭಿಸ್ಸ್ತಂಭೈರ್ವೇದಿಕಾಭಿಶ್ಚ ಶೋಭಿತಃ ||೧೮|| ಸ್ವಯಂ ಪ್ರಕೃತಿಮಾಪನ್ನೋ ಯುಯುತ್ಸೂ ರಾಮ! ರಾವಣಃ | ಉತ್ಥಿತಶ್ಚಾಪ್ರಮತ್ತಶ್ಚ ಬಲಾನಾಮನುದರ್ಶನೇ ||೧೯|| ಲಂಕಾ ಪುನರ್ನಿರಾಲಂಬಾ ದೇವದುರ್ಗಾ ಭಯಾವಹಾ | ನಾದೇಯಂ ಪಾರ್ವತಂ ವಾನ್ಯಂ ಕೃತ್ರಿಮಂಚ ಚತುರ್ವಿಧಂ ||೨೦|| ಸ್ಥಿತಾ ಪಾರೇ ಸಮುದ್ರಸ್ಯ ದೂರಪಾರಸ್ಯ ರಾಘವ! | ನೌಪಥೋಽಪಿಚ ನಾಸ್ತ್ಯತ್ರ $ ನಿರಾದೇಶಶ್ಚ ಸರ್ವತಃ ||೨೧|| ಶೈಲಾಗ್ರೇ

ಕಾಂಚನೈಸ್ತ್ಂಭೈಃ-ಸುವರ್ಣವಿಕಾರವಾದ ಸ್ತಂಭಗಳಿಂದಲೂ, ವೇದಿಕಾಭಿಶ್ಚ-ಜಗುಲಿಗಳಿಂದಲೂ, ಶೋಭಿತಃ - ಅಲಂಕರಿಸಲ್ಪಟ್ಟಿದೆ, ಅಕಂಪ್ಯಃ - ಅಲ್ಲಾಡಿಸಲಸಾಧ್ಯವಾಗಿದೆ, ಬಲವಾನ್ - ಬಲವಾಗಿದೆ, ಸುಮಹಾದೃಢಃ - ಬಹಳ ಗಟ್ಟಿಯಾಗಿದೆ, ಹೇ ರಾಮ - ಎಲೈ ಶ್ರೀರಾಮನೇ, ರಾವಣಃ - ರಾವಣನು, ಸ್ವಯಂ - ತಾನೇ, ಯುಯುತ್ಸುಃ - ಯುದ್ಧೇಚ್ಛೆಯುಳ್ಳವನಾಗಿ, ಪ್ರಕೃತಿಂ - ಸ್ವಭಾವವನ್ನು, ಆಪನ್ನಃ - ಹೊಂದಿದವನು, ಬಲಾನಾಂ - ಸೈನ್ಯಗಳ, ಅನುದರ್ಶನೇ - ನೋಟದಲ್ಲಿ, ಉತ್ಥಿತಃ - ಜಾಗರೂಕನು, ಅಪ್ರಮತ್ತಃ - ಮೈಮರೆತವನಲ್ಲ. ||೧೮ ೧೯|| ಲಂಕಾಪುನಃ - ಲಂಕಾಪಟ್ಟಣವಾದರೆ, ನಿರಾಲಂಬಾ - ಆಸರೆಯಿಲ್ಲದಿರುವುದು, ದೇವದುರ್ಗಾ - ದೇವತೆಗಳಿಗೂ ಹೊಂದಲಸಾಧ್ಯವಾಗಿದೆ, ಭಯಾವಹಾ - ಭಯಂಕರವಾದುದಾಗಿದೆ. || ೨೦ || ನಾದೇಯಂ - ಜಲದುರ್ಗ, ಪಾರ್ವತಂ - ಸ್ಥಳ ದುರ್ಗ, ವಾನ್ಯಂ-ವನದುರ್ಗ, ಕೃತ್ರಿಮಂ ಕೃತಕದುರ್ಗವೂ ಎಂದು, ಚತುರ್ವಿಧಂ ಈ ನಾಲ್ಕೂ ಇರುವುವು, ದೂರಪಾರಸ್ಯ - ಅಪಾರವಾದ, ಸಮುದ್ರಸ್ಯ - ಕಡಲಿನ, ಪಾರೇ - ದಡದಲ್ಲಿ, ಸ್ಥಿತಾ - ಇರುತ್ತದೆ, ಹೇ ರಾಘವ - ಎಲೈ ಶ್ರೀರಾಮನೇ, ಅತ್ರ - ಈ ಸಮುದ್ರದಲ್ಲಿ, ನೌಪಥೋಽಪಿ - ಹಡಗಿನ ಸಂಚಾರ ಮಾರ್ಗವು, ನ - ಇಲ್ಲವು, ಸರ್ವತಃ - ಎಲ್ಲೆಡೆಯಲ್ಲಿಯೂ, ನಿರಾದೇಶಃ - ಸರ್ವ ದಿಕ್ಕುಗಳಲ್ಲಿಯೂ ವಾರ್ತಾಸಂಚಾರಗಳಿಂದ ರಹಿತವಾದದ್ದು. ||೨೧|| ಶೈಲಾಗ್ರೇ - ಬೆಟ್ಟದ ತುದಿಯಲ್ಲಿ,

ನೆಯೇ, ಅಲ್ಲಿರುವ ಯಂತ್ರಗಳ ಸಹಾಯದಿಂದ ತಡೆದು ಪಟ್ಟಣವನ್ನು ರಕ್ಷಿಸುತ್ತಿರುವುವು. ಆ ಸಂಚಾರಮಾರ್ಗದಲ್ಲಿರುವ ಮರದ ಹಲಿಗೆಗಳನ್ನು ಯಂತ್ರಗಳ ಸಹಾಯದಿಂದ ತೆಗೆದು ಬಿಟ್ಟೊಡನೆಯೇ ಆ ಅಗಳ್ತೆಯನ್ನು ದಾಟುವುದು ದುಸ್ಸಾಧ್ಯವಾಗುವುದು. ಆ ಸಂಚಾರ ಮಾರ್ಗಗಳಲ್ಲಿ ಒಂದು ಮಾತ್ರ ಬಹು ದೃಢವಾಗಿದ್ದು ಯಾರಿಂದಲೂ ಚಲಿಸಲಶಕ್ಯವಾಗಿರುವುದು. ಆ ಮಾರ್ಗವು ಅನೇಕ ಸ್ವರ್ಣಮಯ ಸ್ತಂಭಗಳಿಂದ ಪ್ರಕಾಶಿಸುತ್ತಿರುವುದು. ಎಲೈ ಶ್ರೀರಾಮನೇ! ಯುದ್ಧಾಪೇಕ್ಷೆಯುಳ್ಳ ಆ ರಾವಣಾಸುರನು ಸ್ಥಿರಮನಸ್ಕನಾಗಿ ಬಹು ಜಾಗರೂಕತೆಯಿಂದ ಯಾವ ಅಲಸತೆಯೂ ಇಲ್ಲದೆ, ತನಗೆ ಶತ್ರುಭಯವಿಲ್ಲದಿದ್ದರೂ, ಶತ್ರುಗಳೊಡನೆ ಯುದ್ಧಮಾಡುವವನಂತೆ ಮಹೋತ್ಸಾಹದಿಂದ ತಾನೇ ಪ್ರತಿದಿನವೂ ಸೈನ್ಯಗಳನ್ನು ವಿಚಾರಿಸಿಕೊಳ್ಳುತ್ತಿರುವನು. || ೧೬–೨೦ || ಆ ರಾವಣನು ವಾಸವಾಗಿರುವ ಲಂಕಾಪಟ್ಟಣವಾದರೋ, ತ್ರಿಕೂಟಾಚಲದ ಮೇಲಿರುವುದರಿಂದ ಹತ್ತಿಹೋಗಲು ಯಾವ ಆಧಾರವೂ ಇಲ್ಲದಾಗಿರುವುದು. ಆ ಪಟ್ಟಣವನ್ನು ಪ್ರವೇಶಿಸಲು ದೇವತೆಗಳಿಗೂ ಅಸಾಧ್ಯವಾಗಿರುವುದು. ಆ

$ "ನಿರುದ್ದೇಶಶ್ಚ" ಶಿ. ಪಾ.

ರಚಿತಾ ದುರ್ಗಾ ಸಾ ಪೂರ್ದೇವಪುರೋಪಮಾ । ವಾಜಿವಾರಣಸಂಪೂರ್ಣಾ ಲಂಕಾ ಪರಮದುರ್ಜಯಾ ॥ ೨೨ ॥ ಪರಿಘಾಶ್ಚ ಶತಘ್ನ್ಯಶ್ಚ ಯಂತ್ರಾಣಿ ವಿವಿಧಾನಿಚ । ಶೋಭಯಂತಿ ಪುರೀಂ ಲಂಕಾಂ ರಾವಣಸ್ಯ ದುರಾತ್ಮನಃ ॥ ೨೩ ॥ ಅಯುತಂ ರಕ್ಷಸಾಮತ್ರ ಪೂರ್ವದ್ವಾರಂ ಸಮಾಶ್ರಿತಂ । ಶೂಲಹಸ್ತಾ ದುರಾಧರ್ಷಾಸ್ಸರ್ವೇ ಖಡ್ಗಾಗ್ರಯೋಧಿನಃ ॥ ೨೪ ॥ ನಿಯುತಂ ರಕ್ಷಸಾಮತ್ರ ದಕ್ಷಿಣದ್ವಾರಮಾಶ್ರಿತಂ । ಚತುರಂಗೇಣ ಸೈನ್ಯೇನ ಯೋಧಾಸ್ತತ್ರಾಪ್ಯನುತ್ತಮಾಃ ॥೨೫॥ ಪ್ರಯುತಂ ರಕ್ಷಸಾಮತ್ರ

ರಚಿತಾ-ಮಾಡಲ್ಪಟ್ಟಿದೆ, ದುರ್ಗಾ-ಅಗಮ್ಯವಾಗಿರುವುದು, ಸಾಪೂಃ-ಆ ಪಟ್ಟಣವು, ದೇವ....ಮಾ-ಸ್ವರ್ಗಕ್ಕೆ ಸಮಾನವಾಗಿದೆ, ವಾಜಿ....ರ್ಣಾ - ಆನೆಗಳಿಂದಲೂ, ಕುದುರೆಗಳಿಂದಲೂ, ತುಂಬಿರುವ, ಲಂಕಾ - ಲಂಕಾಪಟ್ಟಣವು, ಪರ....ಯಾ - ಜಯಿಸಲು ಬಹಳ ಅಸಾಧ್ಯವಾಗಿದೆ. ॥೨೨॥ ಪರಿಘಾಶ್ಚ-ಅಗಳ್ತೆಗಳು, ಶತಘ್ನ್ಯಶ್ಚ - ಶತಘ್ನಿಗಳೂ, ವಿವಿಧಾನಿಚ - ನಾನಾಬಗೆಗಳಾದ, ಯಂತ್ರಾಣಿ - ಜಲಯಂತ್ರಗಳೂ, ದುರಾತ್ಮನಃ - ದುಷ್ಟಬುದ್ಧಿಯುಳ್ಳ, ರಾವಣಸ್ಯ - ರಾವಣನ, ಲಂಕಾಪುರೀಂ - ಲಂಕಾಪಟ್ಟಣವನ್ನು, ಶೋಭಯಂತಿ - ಪ್ರಕಾಶಗೊಳಿಸುತ್ತಿವೆ. ॥ ೨೩ ॥ ಅತ್ರ - ಈ ಲಂಕಾಪಟ್ಟಣದಲ್ಲಿ, ರಕ್ಷಸಾಂ - ರಕ್ಕಸರ, ಅಯುತಂ - ಹತ್ತುಸಾವಿರವು, ಪೂರ್ವದ್ವಾರಂ - ಪೂರ್ವದಿಕ್ಕಿನಲ್ಲಿರುವ ಬಾಗಿಲನ್ನು, ಸಮಾಶ್ರಿತಂ - ಆಶ್ರಯಿಸಿದೆ, ಶೂಲಹಸ್ತಾಃ - ತ್ರಿಶೂಲಾಯುಧಗಳನ್ನು ಧರಿಸಿರುವ, ಸರ್ವೇ-ಸಮಸ್ತರೂ, ದುರಾಧರ್ಷಾಃ - ತಿರಸ್ಕರಿಸಲಸಾಧ್ಯರು, ಖಡ್ಗಾ....ನಃ - ಕತ್ತಿಗಳಿಂದಲೇ ಯುದ್ಧಮಾಡತಕ್ಕವರು. ॥ ೨೪ ॥ ಅತ್ರ - ಈ ಪಟ್ಟಣದಲ್ಲಿ, ರಕ್ಷಸಾಂ - ರಕ್ಕಸರ, ನಿಯುತಂ - ಇಪ್ಪತ್ತು ಸಾವಿರವು, ದಕ್ಷಿಣದ್ವಾರಂ - ದಕ್ಷಿಣದಿಕ್ಕಿನ ಬಾಗಿಲನ್ನು, ಆಶ್ರಿತಂ - ಹೊಂದಿದೆ, ತತ್ರಾಪಿ - ಅಲ್ಲಿಯೂ ಕೂಡ, ಯೋಧಾಃ - ಭಟರು, ಚತುರಂಗೇಣ - ರಥ, ಆನೆ, ಕುದರೆ, ಆಳುಗಳೆಂಬ ಚತುರಂಗಗಳುಳ್ಳ, ಸೈನ್ಯೇನ - ದಂಡಿನಿಂದ, ಅನುತ್ತಮಾಃ - ಸರ್ವೋತ್ತಮರು. ॥೨೫॥ ಅತ್ರ - ಈ ಸೈನ್ಯ

ಪಟ್ಟಣವು ನೋಡುವವರಿಗೆಲ್ಲರಿಗೂ ಭೀಕರವಾಗಿರುವುದು. ಜಲ, ಗಿರಿ, ವನ, ದುರ್ಗಗಳೂ, ಕೃತಕದುರ್ಗಗಳೂ ಆ ಪಟ್ಟಣದಲ್ಲಿ ಅನೇಕವಾಗಿರುವುವು. ಓ ರಾಮಚಂದ್ರಾ! ಆ ಲಂಕಾನಗರವು ಅತಿ ವಿಶಾಲವಾದ ಮಹಾ ಸಾಗರದ ಆಚಿನ ದಡದಲ್ಲಿರುವುದು. ಆ ಸಮುದ್ರವನ್ನು ದಾಟಿಹೋಗಲುಯಾವ ಮಾರ್ಗವೂ ಇರುವುದಿಲ್ಲ. ಈ ದೇಶದ ಸಮಾಚಾರವು ಆ ದೇಶಕ್ಕೆ ತಿಳಿಯಲು ಯಾವ ದಾರಿಯೂ ಇರುವುದಿಲ್ಲವು. ದೇವಪುರಿಗೆ ಸಮಾನವಾದ ಆ ಲಂಕಾಪಟ್ಟಣವು ಪರ್ವತಶಿಖರದಮೇಲೆ ನಿರ್ಮಿತವಾಗಿರುವುದು. ಯಾರೊಬ್ಬರಿಗೂ ಜಯಿಸಲಶಕ್ಯವಾಗುವಂತೆ ಆ ಪಟ್ಟಣವು ನಿರ್ಮಿತವಾಗಿರುವುದು. ಅಲ್ಲಿ ಆನೆಗಳೂ, ಕುದುರೆಗಳೂ ಅಸಂಖ್ಯಾತವಾಗಿರುವುವು. ಗಿರಿ, ವನ, ಜಲ, ದುರ್ಗಗಳೂ ಇರುವುವು. ದುರಾತ್ಮನಾದ ರಾವಣಾಸುರನ ಆ ಲಂಕಾಪಟ್ಟಣವು ಅಗಳ್ತೆಗಳಿಂದಲೂ, ಶತಘ್ನಿಗಳಿಂದಲೂ, ವಿವಿಧ ಯಂತ್ರಗಳಿಂದಲೂ ಪ್ರಕಾಶಿಸುತ್ತಿರುವುದು. ಆ ಪಟ್ಟಣದ ಪೂರ್ವದ್ವಾರದಲ್ಲಿ ಹತ್ತುಸಾವಿರಮಂದಿ ರಾಕ್ಷಸರು ಹಗಲಿರಳೂ ಕಾವಲಿರುವರು. ಅವರೆಲ್ಲರೂ ಶೂಲಾಯುಧಪಾಣಿಗಳಾಗಿ ಯಾರಿಂದಲೂ ಜಯಿಸಲಸದಳರಾಗಿ ಖಡ್ಗಗಳಿಂದಲೇ ಯುದ್ಧ ಮಾಡುವವರಾಗಿರುವರು. ಆ ಪಟ್ಟಣದ ದಕ್ಷಿಣದ್ವಾರದಲ್ಲಿಯಾದರೋ, ರಥ, ಗಜ, ಪದಾತಿ, ಸೈನ್ಯಗಳೊಡಗೂಡಿದ ಲಕ್ಷಮಂದಿ ರಾಕ್ಷಸರು ಕಾವಲಿರುವರು. ಅವರೆಲ್ಲರೂ ಯುದ್ಧಕ್ರಿಯೆಯಲ್ಲಿ ಮಹಾ ಸಮರ್ಥರು. ಪಶ್ಚಿಮ

ಪಶ್ಚಿಮದ್ವಾರಮಾಶ್ರಿತಂ । ಚರ್ಮಖಡ್ಗಧರಾಃ ಸರ್ವೇ ತಥಾ ಸರ್ವಾಸ್ತ್ರಕೋವಿದಾಃ ॥ ೨೬ ॥ ನ್ಯರ್ಬುದಂ ರಕ್ಷಸಾಮತ್ರ ಉತ್ತರದ್ವಾರಮಾಶ್ರಿತಂ । ರಥಿನಶ್ಚಾಶ್ವವಾಹಾಶ್ಚ ಕುಲಪುತ್ರಾಸ್ಸುಪೂಜಿತಾಃ ॥ ೨೭ ॥ ಶತಶೋಽಥ ಸಹಸ್ರಾಣಿ ಮಧ್ಯಮಂ ಸ್ಕಂಧಮಾಶ್ರಿತಾಃ । ಯಾತುಧಾನಾ ದುರಾಧರ್ಷಾ ಸಾಗ್ರಕೋಟಿಶ್ಚ ರಕ್ಷಸಾಂ ॥ ೨೮ ॥ ತೇ ಮಯಾ ಸಂಕ್ರಮಾ ಭಗ್ನಾಃ ಪರಿಖಾಶ್ಚಾವಪೂರಿತಾಃ । ದಗ್ಧಾ ಚ ನಗರೀ ಲಂಕಾ ಪ್ರಾಕಾರಾಶ್ಚಾವಸಾದಿತಾಃ ॥ ೨೯ ॥ * ಬಲೈಕದೇಶಃ ಕ್ಷಪಿತೋ ರಾಕ್ಷಸಾನಾಂ ಮಹಾ

---

ಗಳಲ್ಲಿ, ರಕ್ಷಸಾಂ - ರಕ್ಕಸರ, ಪ್ರಯುತಂ - ಹತ್ತುಲಕ್ಷವು, ಪಶ್ಚಿಮದ್ವಾರಂ - ಪಡುವಲ ಬಾಗಿಲನ್ನು, ಆಶ್ರಿತಂ - ಹೊಂದಿದ್ದಾರೆ, ಸರ್ವೇ - ಸಮಸ್ತರೂ, ಚರ್ಮ....ರಾಃ - ಖೇಡ್ಯಗಳನ್ನೂ ಕತ್ತಿಗಳನ್ನೂ ಧರಿಸಿರುವರು, ತಥಾ - ಹಾಗೆಯೇ, ಸರ್ವಾ....ದಾಃ - ಸಮಸ್ತವಾದ ಅಸ್ತ್ರಶಸ್ತ್ರಗಳನ್ನು ಧರಿಸಿರುವರು. ॥೨೬॥ ಅತ್ರ - ಈ ಸೈನ್ಯದಲ್ಲಿ, ರಕ್ಷಸಾಂ-ರಕ್ಕಸರ, ಅರ್ಬುದಂ-ಅರ್ಬುದಸಂಖ್ಯೆಯು, ಉತ್ತರದ್ವಾರಂ-ಉತ್ತರದಿಕ್ಕಿನಲ್ಲಿರುವ ಬಾಗಿಲನ್ನು, ಆಶ್ರಿತಂ-ಆಶ್ರಯಿಸಿದೆ, ರಥಿನಶ್ಚ-ರಥಿಕರಾಗಿಯೂ, ಅಶ್ವವಾಹಾಶ್ಚ - ಕುದುರೆ ಸವಾರರಾಗಿಯೂ, ಕುಲಪುತ್ರಾಃ - ಒಳ್ಳೆಯ ಕುಲದಲ್ಲಿ ಪ್ರಸೂತರಾಗಿಯೂ, ಸಂಪೂಜಿತಾಃ - ರಾವಣಾಸುರನಿಂದ ಬಹುಮಾನಿಸಲ್ಪಟ್ಟವರಾಗಿಯೂ, ಶತಶಃ - ನೂರಾರು, ಸಹಸ್ರಾಣಿ - ಸಾವಿರಾರು ಸಂಖ್ಯೆಯುಳ್ಳ, ದುರಾಧರ್ಷಾಃ - ತಿರಸ್ಕರಿಸಲಸಾಧ್ಯರಾದ, ರಕ್ಷಸಾಂ - ರಕ್ಕಸರ, ಸಾಗ್ರಕೋಟಿಃ - ಸಂಪೂರ್ಣವಾದ ಒಂದು ಕೋಟಿಯು, ಮಧ್ಯಮಂಸ್ಕಂಧಂ - ಗ್ರಾಮಮಧ್ಯದಲ್ಲಿರುವ ಸೈನ್ಯನಿವೇಶನ ಸ್ಥಾನವನ್ನು, ಆಶ್ರಿತಾಃ - ಹೊಂದಿದೆ. ॥ ೨೭ ೨೮ ॥ ಮಯಾ - ನನ್ನಿಂದ, ತೇಸಂಕ್ರಮಾಃ - ಜಲಪೂರಿತ ಸ್ಥಳದಲ್ಲಿ ಹಲಿಗೆಗಳಿಂದ ಕಟ್ಟಲ್ಪಟ್ಟ ಮಾರ್ಗಗಳು, ಭಗ್ನಾಃ - ಮುರಿಯಲ್ಪಟ್ಟವು, ಪರಿಖಾಶ್ಚ - ಅಗಳ್ತೆಗಳೂ, ಅವಪೂರಿತಾಃ - ಮುಚ್ಚಲ್ಪಟ್ಟವು, ಲಂಕಾನಗರೀಚ - ಲಂಕಾಪಟ್ಟಣವೂ, ದಗ್ಧಾಃ - ಸುಡಲ್ಪಟ್ಟಿತು, ಪ್ರಾಕಾರಾಶ್ಚ - ಕೋಟೆಯ ಗೋಡೆಗಳೂ, ಅವಸಾದಿತಾಃ -

---

ದ್ವಾರದಲ್ಲಿ ಹತ್ತುಲಕ್ಷ ಸಂಖ್ಯೆಯುಳ್ಳ ರಾಕ್ಷಸರು ಕಾವಲಿದ್ದಾರೆ. ಅವರು ಚರ್ಮದಿಂದ ಮಾಡಿದ ಕವಚಗಳನ್ನು ತೊಟ್ಟು ಖಡ್ಗಗಳನ್ನು ಧರಿಸಿ ಯಾವಾಗಲೂ ಯುದ್ಧಸನ್ನದ್ಧರಾಗಿಯೇ ಇರುವರು. ಅವರಲ್ಲಿ ಪ್ರತಿಯೊಬ್ಬರೂ ಸಮಸ್ತಾಸ್ತ್ರಪ್ರಯೋಗಗಳನ್ನೂ ಚನ್ನಾಗಿ ಬಲ್ಲವರು. ಉತ್ತರದ್ವಾರದಲ್ಲಿ ಶತಕೋಟಿ ಸಂಖ್ಯೆಯುಳ್ಳ ರಾಕ್ಷಸರ ಪಡೆಯು ಕಾವಲಿರುವುದು. ಈ ರಾಕ್ಷಸರೆಲ್ಲರೂ ಮಹಾ ರಥಿಕರಾಗಿಯೂ, ಅಶ್ವವಾಹಕರಾಗಿಯೂ, ಸದ್ವಂಶ ಸಂಭೂತರಾಗಿಯೂ, ತಮ್ಮ ಒಡೆಯನಾದ ರಾವಣಾಸುರನಲ್ಲಿ ಪ್ರೀತಿಗೌರವಗಳುಳ್ಳವರಾಗಿಯೂ, ಅವನಿಂದ ಯಾವಾಗಲೂ ವಿಶೇಷ ಸನ್ಮಾನವನ್ನು ಪಡೆಯುತ್ತಿರುವವರಾಗಿಯೂ ಇರುವರು. ॥ ೨೧–೨೭ ॥ ಇನ್ನು ಆ ಲಂಕಾಪಟ್ಟಣದ ಮಧ್ಯಪ್ರದೇಶದಲ್ಲಿಯಾದರೋ ಅಜೇಯರಾದ ರಾಕ್ಷಸರು ನೂರುನೂರಾಗಿಯೂ, ಸಾವಿರಸಾವಿರವಾಗಿಯೂ, ಕೋಟಿಕೋಟಿಯಾಗಿಯೂ ಇರುವರು. ಎಲೈ ರಾಮಮೂರ್ತಿಯೇ! ನಾನು ಇಂತಹ ಲಂಕಾಪಟ್ಟಣದ ಅಗಳ್ತೆಗಳ ಮೇಲೆ ಸಂಚರಿಸಲು ರಚಿಸಿದ್ದ ಮಾರ್ಗಗಳೆಲ್ಲವನ್ನೂ ನಾಶಮಾಡಿ ಬಂದಿರುವೆನು.

---

* ಈ ಪಾದವು ಗೋ. ಪಾಠದಲ್ಲಿ ಅಧಿಕ.

**ತ್ಮನಾಂ ||೩೦|| ಯೇನ ಕೇನಚ ಮಾರ್ಗೇಣ ತರಾಮ ವರುಣಾಲಯಂ | ಹತೇತಿ ನಗರೀ ಲಂಕಾ ವಾನರೈರವಧಾರ್ಯತಾಂ ||೩೧|| ಅಂಗದೋ ದ್ವಿವಿದೋ ಮೈಂದೋ ಜಾಂಬವಾನ್ಪನಸೋ ನಳಃ | ನೀಲಸ್ಸೇನಾಪತಿಶ್ಚೈವ ಬಲಶೇಷೇಣ ಕಿಂ ತವ ||೩೨|| ಪ್ಲವಮಾನಾಹಿ ಗತ್ವಾ ತಾಂ ರಾವಣಸ್ಯ ಮಹಾಪುರೀಂ | ಸಪರ್ವತವನಾಂ ಭಿತ್ವಾ ಸಖಾತಾಂ ಸಪ್ರತೋರಣಾಂ | ಸಪ್ರಾಕಾರಾಂ ಸಭವನಾಮಾನಯಿಷ್ಯಂತಿ ರಾಘವ ! || ೩೩ ||**

ನಾಶಗೊಳಿಸಲ್ಪಟ್ಟವು, ಮಹಾತ್ಮನಾಂ-ಮಹಾ ಶರೀರಿಗಳಾದ, ರಾಕ್ಷಸಾನಾಂ-ರಕ್ಕಸರ, ಬಲೈಕದೇಶಃ-ಸೈನ್ಯದಲ್ಲಿ ಚಾತುರ್ಭಾಗವು, ಕ್ಷಪಿತಃ - ಮುರಿಯಲ್ಪಟ್ಟಿತು. || ೨೯-೩೦ || ಯೇನಕೇನಚಮಾರ್ಗೇಣ - ಯಾವದಾದರೂ ಒಂದು ಮಾರ್ಗದಿಂದ, ವರುಣಾಲಯಂ - ಕಡಲನ್ನು, ತರಾಮ - ದಾಟೋಣ, ಲಂಕಾನಗರೀ - ಲಂಕಾಪಟ್ಟಣವು, ವಾನರೈಃ - ಕಪಿಗಳಿಂದ, ಹತೇತಿ - ಹೊಡೆಯಲ್ಪಟ್ಟಿತೆಂದು, ಅವಧಾರ್ಯತಾಂ - ತಿಳಿಯಲ್ಪಡಲಿ. || ೩೧ || ಹೇ ರಾಘವ - ಎಲೈ ಶ್ರೀರಾಮನೇ, ಅಂಗದಃ - ಅಂಗದನು, ದ್ವಿವಿದಃ - ದ್ವಿವಿದನು, ಮೈಂದಃ - ಮೈಂದನು, ಜಾಂಬವಾನ್ - ಜಾಂಬವಂತನು, ಪನಸಃ - ಪನಸನು, ನಳಃ - ನಳನು, ಸೇನಾಪತಿಃ - ಸೈನ್ಯಾಧಿಪತಿಯಾದ, ನೀಲಃ - ನೀಲನು, ಏತೇ - ಈ ಕಪಿಗಳು, ಪ್ಲವಮಾನಾಃ - ತೇಲಿಕೊಂಡು, ಗತ್ವಾ - ಹೋಗಿ, ಸಪ....ನಾಂ - ಪರ್ವತದಿಂದಲೂ, ವನಗಳಿಂದಲೂ ಕೂಡಿದ, ಸಖಾತಾಂ - ಪರಿಘದಿಂದೊಡಗೂಡಿದ, ಸಪ್ರತೋರಣಾಂ - ಊರುಬಾಗಿಲುಗಳಿಂದೊಡಗೂಡಿದ, ಸಪ್ರಾಕಾರಾಂ - ಕೋಟೆಯ ಗೋಡೆಗಳಿಂದೊಡಗೂಡಿದ, ಸಭವನಾಂ - ಮನೆಗಳಿಂದೊಡಗೂಡಿದ, ರಾವಣಸ್ಯ - ರಾವಣನ, ತಾಂಮಹಾಪುರೀಂ - ಆ ಲಂಕಾಪಟ್ಟಣವನ್ನು, ಭಿತ್ವಾ - ಭೇದಿಸಿ, ಆನಯಿಷ್ಯಂತಿ - ತರುವರು, ಬಲಶೇಷೇಣ - ಮಿಕ್ಕ ಬಲದಿಂದ, ತವ - ನಿನಗೆ, ಕಿಂ - ಏನು ಪ್ರಯೋಜನವು. || ೩೨-೩೩ || ಏವಂ - ಈ ಪರಿಯಾಗಿ, ಬಲಾನಾಂ - ಸೈನ್ಯಗಳ, ಸರ್ವಸಂಗ್ರಹಂ - ಸಾರಭೂತವಾದ ಸೈನ್ಯವನ್ನು ಕುರಿತು, ಕ್ಷಿಪ್ರಂ - ಜಾಗ್ರತೆಯಾಗಿ,

ಆ ಪಟ್ಟಣವನ್ನೇ ಸುಟ್ಟುಬಂದಿರುವೆನು. ಪ್ರಾಕಾರಗಳನ್ನು ಒಡೆದಿಕ್ಕಿ ನುಚ್ಚುನುರಿ ಮಾಡಿರುವೆನು. ಇಷ್ಟುಮಾತ್ರವಲ್ಲದೆ ಆ ರಾವಣನ ಸೈನ್ಯದಲ್ಲಿ ಮುಖ್ಯಮುಖ್ಯರಾದ ರಾಕ್ಷಸವೀರರನ್ನೂ ಕೊಂದಿರುವೆನು. ಹೇಗಾದರೂ, ಯಾವ ಉಪಾಯದಿಂದಾದರೂ ಈ ಸಾಗರವನ್ನು ದಾಟೋಣ. ನಿಶ್ಚಯವಾಗಿಯೂ ಲಂಕಾನಗರವು ವಾನರರಿಂದ ನಾಶವಾಯಿತೆಂದೇ ತಿಳಿ. ಅಂಗದ, ದ್ವಿವಿದ, ಮೈಂದ, ಜಾಂಬವಂತ, ಪನಸ, ನಳ, ಸೇನಾನಾಯಕನಾದ ನೀಲ ಇವರೆಲ್ಲರೂ ಮಹಾ ವೀರರು. ಇವರೇ ಸಾಕು. ಮಿಕ್ಕ ಸೈನ್ಯಗಳಿಂದ ಪ್ರಯೋಜನವೇನು? ರಾಘವಾ! ವೀರರಾದ ಈ ವಾನರಯೂಥಪತಿಗಳು ಗಗನಮಾರ್ಗದಿಂದ ಆ ಲಂಕಾನಗರಕ್ಕೆ ಹೋಗಿ ಅದನ್ನು ಬುಡಸಹಿತ ಕಿತ್ತು ಇಲ್ಲಿಗೆ ತರಲು ಸಮರ್ಥರಾಗಿರುವರು. ಎಲೈ ರಾಮಚಂದ್ರನೇ! ವಾನರಸೈನ್ಯಕ್ಕೆಲ್ಲಾ ಸಾರಭೂತವಾಗಿರುವ ಈ ಅಂಗದಾದಿಗಳಿಗೆ

ಏವಮಾಜ್ಞಾಪಯ ಕ್ಷಿಪ್ರಂ ಬಲಾನಾಂ ಸರ್ವಸಂಗ್ರಹಂ ।
ಮುಹೂರ್ತೇನತು ಯುಕ್ತೇನ ಪ್ರಸ್ಥಾನಮಭಿರೋಚಯ " ॥ ೩೪ ॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ತೃತೀಯಸ್ಸರ್ಗಃ.



ಆಜ್ಞಾಪಯ - ಆಜ್ಞಾಪಿಸು, ಯುಕ್ತೇನ - ಪ್ರಯಾಣಕ್ಕೆ ಯೋಗ್ಯವಾದ, ಮುಹೂರ್ತೇನ - ಮುಹೂರ್ತದಲ್ಲಿ, ಪ್ರಸ್ಥಾನಂ - ಪ್ರಯಾಣವನ್ನು, ಅಭಿರೋಚಯ - ಸಮ್ಮತಿಸು. ॥ ೩೪ ॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ತೃತೀಯಸ್ಸರ್ಗಃ.



ಕೂಡಲೇ ಆಜ್ಞಾಪಿಸು. ಶುಭಮುಹೂರ್ತದಲ್ಲಿ ಜೈತ್ರಯಾತ್ರೆಗೆ ಹೊರಡಲು ಸಮ್ಮತಿಸುವವನಾಗು. ॥ ೨೮-೩೪ ॥

ಇಂತಿದು ಹನುಮತ್ಕೃತ ಲಂಕಾಪುರ ದುರ್ಗಕರ್ಮ ಬಲಪರಿಮಾಣಾದಿ
ವರ್ಣನವೆಂಬ ಮೂರನೆಯ ಸರ್ಗವು ಸಮಾಪ್ತವಾದುದು.



# ಯುದ್ಧಕಾಂಡೇ ಚತುರ್ಥಸ್ಸರ್ಗಃ

ಶ್ರುತ್ವಾ ಹನುಮತೋ ವಾಕ್ಯಂ ಯಥಾವದನುಪೂರ್ವಶಃ । ತತೋಽಬ್ರವೀನ್ಮಹಾತೇಜಾ ರಾಮಸ್ಸತ್ಯಪರಾಕ್ರಮಃ ॥೧॥ "ಯಾಂ ನಿವೇದಯಸೇ ಲಂಕಾಂ ಪುರೀಂ ಭೀಮಸ್ಯ ರಕ್ಷಸಃ । ಕ್ಷಿಪ್ರಮೇನಾಂ ಮಥಿಷ್ಯಾಮಿ ಸತ್ಯಮೇತದ್ಬ್ರವೀಮಿ ತೇ ॥ ೨ ॥ ‡ಅಸ್ಮಿನ್ಮುಹೂರ್ತೇ ಸುಗ್ರೀವ ! ಪ್ರಯಾಣಮಭಿರೋಚಯೇ । ಯುಕ್ತೋ ಮುಹೂ

ತತಃ - ಬಳಿಕ, ಹನುಮತಃ - ಆಂಜನೇಯನ, ವಾಕ್ಯಂ - ಮಾತನ್ನು, ಯಥಾವತ್ - ಯಥಾವತ್ತಾಗಿ, ಅನುಪೂರ್ವಶಃ - ಕ್ರಮವಾಗಿ, ಶ್ರುತ್ವಾ - ಕೇಳಿ, ಮಹಾತೇಜಾಃ - ಮಹಾ ಸಾಮರ್ಥ್ಯವಂತನಾದ, ಸತ್ಯ....ಮಃ - ಸಫಲವಾದ ಪರಾಕ್ರಮವುಳ್ಳ, ರಾಮಃ - ಶ್ರೀರಾಮನು, ಅಬ್ರವೀತ್ - ನುಡಿದನು. ॥ ೧ ॥ ಭೀಮಸ್ಯ - ಭಯಂಕರನಾದ ರಾವಣನ ಸಂಬಂಧವಾದುದನ್ನಾಗಿ, ಯಾಂಲಂಕಾಪುರೀಂ - ಯಾವ ಲಂಕಾಪಟ್ಟಣವನ್ನು, ನಿವೇದಯಸೇ - ತಿಳಿಸಿದೆಯೋ, ಏನಾಂ - ಈ ಲಂಕಾಪಟ್ಟಣವನ್ನು, ಕ್ಷಿಪ್ರಂ - ಜಾಗ್ರತೆಯಾಗಿ, ಮಥಿಷ್ಯಾಮಿ - ಮಥಿಸುವೆನು, ಏತತ್ - ಇದನ್ನು, ಸತ್ಯಂ - ಸತ್ಯವಾಗಿ, ತೇ - ನಿನಗೆ, ಬ್ರವೀಮಿ - ಹೇಳುವೆನು. ॥ ೨ ॥ ಹೇ ಸುಗ್ರೀವ - ಎಲೈ ಸುಗ್ರೀವನೇ, ಅಸ್ಮಿನ್ಮುಹೂರ್ತೇ - ಈ ಅಭಿಜಿನ್ಮುಹೂರ್ತದಲ್ಲಿ, ಪ್ರಯಾಣಂ - ಪ್ರಯಾಣವನ್ನು,

ಈ ರೀತಿ ಮಹಾ ತೇಜಸ್ವಿಯೂ, ಸತ್ಯಪರಾಕ್ರಮಿಯೂ ಆದ ಶ್ರೀರಾಮನು ಹನುಮಂತನು ಹೇಳಿದ ಮಾತುಗಳೆಲ್ಲವನ್ನೂ ಕ್ರಮವಾಗಿ ಕೇಳಿದ ಬಳಿಕ ಅವನನ್ನು ನೋಡಿ, "ಎಲೈ ಮಾರುತಿಯೇ ! ಭಯಂಕರನಾದ ಯಾವ ರಾವಣಾಸುರನ ಪಟ್ಟಣವಾದ ಲಂಕೆಯನ್ನು ಕುರಿತು ಇದುವರೆಗೂ ಹೇಳಿದೆಯೋ ಅದನ್ನು ಬಹು ಜಾಗ್ರತೆಯಾಗಿಯೇ ನಾಶ ಮಾಡುವೆನು. ಇದು ಸತ್ಯವೆಂದು ತಿಳಿ" ಎಂದು ಹೇಳಿ ಸುಗ್ರೀವನನ್ನು ಕುರಿತು, "ಎಲೈ ಸುಗ್ರೀವನೇ ! ಈಗಲೇ ಪ್ರಯಾಣವನ್ನು ಬೆಳಸಬೇಕು. ಈಗ ಸೂರ್ಯನು ಆಕಾಶಮಧ್ಯ

‡ ಇಲ್ಲಿ ಈ ವಿಷಯವು ಗ್ರಾಹ್ಯವು:—

ಇಲ್ಲಿನ ಮುಹೂರ್ತವು ಅಭಿಜಿನ್ಮುಹೂರ್ತ. ಈ ಮುಹೂರ್ತದಲ್ಲಿ ಜೈತ್ರಯಾತ್ರಾ ಪ್ರಯಾಣವು ವಿಜಯಪ್ರದವು. ವಿದ್ಯಾಮಾಧವೀಯದಲ್ಲಿ ಈ ವಿಷಯವನ್ನು ಕುರಿತು,

" ಆರ್ದ್ರೋರಗಮಿತ್ರಮಖಾ ವಸುಜಲ ವಿಶ್ವಾಭಿಜಿದ್ವಿರಿಂಚೇಂದ್ರಾಃ ।
ಐಂದ್ರಾಗ್ನಿ ಮೂಲವರುಣಾರ್ಯಮ ಭಗತಾರಾ ದಿವಾಮುಹೂರ್ತಾಸ್ಸ್ಯುಃ ॥ "

ಎಂದು ಹೇಳಿದೆ.

ಆದರೆ ಅಭಿಜಿನ್ಮುಹೂರ್ತವು ದಕ್ಷಿಣದಿಕ್ಕಿಗೆ ಪ್ರಯಾಣ ಮಾಡುವಾಗ ಶುಭಕರವಲ್ಲವೆಂದು,

" ಭುಕ್ತೌ ದಕ್ಷಿಣಯಾತ್ರಾಯಾಂ ಪ್ರತಿಷ್ಠಾಯಾಂ ದ್ವಿಜನ್ಮನಿ ।
ಆಧಾನೇಚ ಧ್ವಜಾರೋಹೇ ಮೃತ್ಯುದಸ್ಸ್ಯಾತ್ಸದಾಭಿಜಿತ್ ॥ "

ಎಂದು ಜ್ಯೋತಿಷ್ಯ ರತ್ನಾಕರದಲ್ಲಿ ಹೇಳಿದೆ. ಆದರೆ ಈ ದೋಷವು ಇಲ್ಲಿ ಕೂಡುವುದಿಲ್ಲ. ಲಂಕೆಯು ಕಿಷ್ಕಿಂಧೆಗೆ ದಕ್ಷಿಣ ಪೂರ್ವವಾಗಿರುವುದೇ ಇದಕ್ಕೆ ಕಾರಣ.

(ಗೋವಿಂದರಾಜರು)

ತೇ ವಿಜಯಃ ಪ್ರಾಪ್ತೋ ಮಧ್ಯಂ ದಿವಾಕರಃ ||೩|| ‡ ಅಸ್ಮಿನ್ಮುಹೂರ್ತೇ ವಿಜಯೇ ಪ್ರಾಪ್ತೇ ಮಧ್ಯಂ ದಿವಾಕರೇ । ಸೀತಾಂ ಹೃತ್ವಾತು ಮೇ ಜಾತು ಕ್ವಾಽಸೌ ಯಾಸ್ಯತಿ ಯಾಸ್ಯತಃ || ೪ || ಸೀತಾ ಶ್ರುತ್ವಾಭಿಯಾನಂ ಮೇ ಆಶಾಮೇಷ್ಯತಿ ಜೀವಿತೇ । ಜೀವಿತಾಂತೇ ಮೃತಂ ಸ್ಪೃಷ್ಟ್ವಾ ಪೀತ್ವಾ ವಿಷಮಿವಾತುರಃ || ೫ || † ಉತ್ತರಾ ಫಲ್ಗುನೀಹ್ಯದ್ಯ ಶ್ವಸ್ತು ಹಸ್ತೇನ ಯೋಕ್ಷ್ಯತೇ । ಅಭಿಪ್ರಯಾಮ ಸುಗ್ರೀವ! ಸರ್ವಾನೀಕ

ಅಭಿರೋಚಯೇ - ಒಪ್ಪಿರುವೆನು, ದಿವಾಕರಃ - ಸೂರ್ಯನು, ಮಧ್ಯಂ - ಅಂತರಿಕ್ಷ ಮಧ್ಯ ಪ್ರದೇಶವನ್ನು, ಪ್ರಾಪ್ತಃ - ಹೊಂದಿದ್ದಾನೆ, ಅಯಂಮುಹೂರ್ತಃ - ಈ ಮುಹೂರ್ತವು, ವಿಜಯಃ - ಜಯಸಾಧನವಾದುದು, ಯುಕ್ತಃ - ಯೋಗ್ಯವಾಗಿದೆ. || ೩ || ವಿಜಯೇ - ಜಯಪ್ರದವಾದ, ಸೋಽಸ್ಮಿನ್ಮುಹೂರ್ತೇ - ಈ ಮುಹೂರ್ತದಲ್ಲಿ, ದಿವಾಕರೇ - ಸೂರ್ಯನು, ಮಧ್ಯಂ - ಮಧ್ಯಭಾಗವನ್ನು, ಪ್ರಾಪ್ತೇ - ಹೊಂದಿದವನಾಗಲು, ಮೇ - ನಾನು, ಯಾಸ್ಯತಸ್ಸತಃ - ಹೋಗುತ್ತಿರಲು, ಅಸೌ - ಈ ರಾವಣನು, ಸೀತಾಂ - ಸೀತಾದೇವಿಯನ್ನು, ಹೃತ್ವಾ - ಅಪಹರಿಸಿಕೊಂಡು, ಜಾತು - ಎಂದಿಗೇ ಆಗಲಿ, ಕ್ವಯಾಸ್ಯತಿ - ಎಲ್ಲಿಗೆ ಹೋಗುವನು. || ೪ || ಸೀತಾ - ಸೀತಾದೇವಿಯು, ಮೇ - ನನ್ನ, ಅಭಿಯಾನಂ - ಪ್ರಯಾಣವನ್ನು, ಶ್ರುತ್ವಾ - ಕೇಳಿ, ವಿಷಂ - ವಿಷವನ್ನು, ಪೀತ್ವಾ - ಪಾನಮಾಡಿ, ಆತುರಃ - ಬಾಧಿತನಾದ ಪುರುಷನು, ಜೀವಿತಾಂತೇ - ಪ್ರಾಣಹೋಗುವ ಕಾಲದಲ್ಲಿ, ಅಮೃತಂ - ಅಮೃತವನ್ನು, ಸ್ಪೃಷ್ಟ್ವೇವ - ಸ್ಪರ್ಶಮಾಡಿದಂತೆ, ಜೀವಿತೇ - ಪ್ರಾಣದಲ್ಲಿ, ಆಶಾಂ - ಆಶೆಯನ್ನು, ಏಷ್ಯತಿ - ಹೊಂದುವಳು. || ೫ || ಹೇ ಸುಗ್ರೀವ - ಎಲೈ ಸುಗ್ರೀವನೇ, ಅದ್ಯ - ಈಗ, ಉತ್ತರಾಫಲ್ಗುನೀ - ಉತ್ತರಾಫಲ್ಗುನೀನಕ್ಷತ್ರವು, ಶ್ವಃ - ನಾಳೆ, ಹಸ್ತೇನ - ಹಸ್ತಾನಕ್ಷತ್ರದೊಡನೆ, ಚಂದ್ರಃ - ಚಂದ್ರನು, ಯೋಕ್ಷ್ಯತೇ - ಕೊಡುತ್ತಾನೆ, ಸರ್ವಾ....ತಾ - ಸಮಸ್ತ ಸೈನ್ಯದಿಂದ ಸುತ್ತುವರೆಯಲ್ಪಟ್ಟವರಾಗಿ, ಅಭಿಪ್ರಯಾಮ - ಹೊರಡೋಣ. || ೬ || ಧನ್ಯಾನಿ - ಮನಸ್ಸಿಗೆ ರಮ್ಯವಾಗಿರುವ,

ಪ್ರದೇಶವನ್ನು ಬೆಳಗುತ್ತಿರುವನು. ಆದುದರಿಂದ ಈ ಅಭಿಜಿನ್ಮುಹೂರ್ತವು ನಮಗೆ ಜಯವನ್ನುಂಟುಮಾಡುವುದು. ದಿನಕರನು ಗಗನಮಧ್ಯವನ್ನಲಂಕರಿಸಿರುವ ಈ ಶುಭಮುಹೂರ್ತದಲ್ಲಿ ನಾನು ಪ್ರಯಾಣ ಮಾಡಿದುದಾದರೆ ಸೀತೆಯನ್ನಪಹರಿಸಿಕೊಂಡು ಹೋದ ಆ ರಾವಣನು ಎಲ್ಲಿಗೆ ಹೋದರೂ ತಪ್ಪಿಸಿಕೊಳ್ಳಲಾರನು. ನನ್ನ ಪ್ರೇಯಸಿಯಾದ ಸೀತೆಯು ನನ್ನ ಪ್ರಯಾಣ ವಾರ್ತೆಯನ್ನು ಕೇಳಿ, " ವಿಷವನ್ನು ಕುಡಿದು ಸಂಕಟಪಡುತ್ತಿರುವವನು ಅಮೃತ ಸ್ಪರ್ಶನದಿಂದ ಪ್ರಾಣಧಾರಣ ಸಾಮರ್ಥ್ಯವನ್ನು ಹೊಂದಿದಂತೆ ಬದುಕುವಿಕೆಯಲ್ಲಿ ಆಶೆಯುಳ್ಳವಳಾಗುವಳು. ||೧–೫|| ಸುಗ್ರೀವಾ! ಈ ಹೊತ್ತು ಉತ್ತರಾ ಫಲ್ಗುನೀ ನಕ್ಷತ್ರವಲ್ಲವೇ ? ನಾಳಿನದಿನ ಚಂದ್ರನು ಹಸ್ತಾ ನಕ್ಷತ್ರದೊಡಗೂಡುವನು. ಆದುದರಿಂದ ಸಮಸ್ತ ಸೈನ್ಯಗಳೊಡನೆ ಇಂದೇ ಪ್ರಯಾಣ ಮಾಡೋಣ. ಇದೋ, ಶುಭ ನಿಮಿತ್ತಗಳುಂಟಾಗುತ್ತಿರು

‡ ಈ ಪಾದವು ಗೋ. ಪಾಠದಲ್ಲಿ ಅಧಿಕ.

† ಪುನರ್ವಸೂ ನಕ್ಷತ್ರದಲ್ಲಿ ಹುಟ್ಟಿದವನಿಗೆ ಹಸ್ತವು ವಧತಾರೆಯು. ಉತ್ತರಾ ನಕ್ಷತ್ರವು ಸೀತೆಯ ಜನ್ಮತಾರೆ. ಬಂಧನದಲ್ಲಿರುವವನನ್ನು ಬಿಡಿಸಲು ಅವನ ಜನ್ಮತಾರೆಯಲ್ಲಿ ಪ್ರಯಾಣ ಮಾಡುವುದೇ ಉತ್ತಮವೆಂದಿರುವುದರಿಂದ ಇಲ್ಲಿ ಶ್ರೀರಾಮನು ಹೀಗೆ ಹೇಳಿರುವುದಾಗಿ ತಿಳಿಯಬೇಕು. ಅಲ್ಲದೆ ಶ್ರೀರಾಮನಿಗೆ ಹಸ್ತವು ನಿಧನತಾರೆಯು. ಉತ್ತರೆಯು ಸಾಧನತಾರೆ. ಸಾಧನತಾರೆಯಲ್ಲಿ ಯುದ್ಧಯಾತ್ರೆಯು ಜಯಪ್ರದವಾಗುವುದೆಂದು ಇಲ್ಲಿನ ಅಭಿಪ್ರಾಯವು. (ತಿಲಕ)

ಸಮಾವೃತಾಃ ‖ ೭ ‖ ನಿಮಿತ್ತಾನಿಚ ಧನ್ಯಾನಿ ಯಾನಿ ಪ್ರಾದುರ್ಭವಂತಿಚ । ನಿಹತ್ಯ ರಾವಣಂ ಸೀತಾಮಾನಯಿಷ್ಯಾಮಿ ಜಾನಕೀಂ ‖೭‖ ‡ ಉಪರಿಷ್ಟಾದ್ಧಿ ನಯನಂ ಸ್ಫುರಮಾಣಮಿದಂ ಮಮ । ವಿಜಯಂ ಸಮನುಪ್ರಾಪ್ತಂ ಶಂಸತೀವ ಮನೋರಥಂ" ‖೮‖ ತತೋ ವಾನರರಾಜೇನ ಲಕ್ಷ್ಮಣೇನಚ ಪೂಜಿತಃ । ಉವಾಚ ರಾಮೋ ಧರ್ಮಾತ್ಮಾ ಪುನರಪ್ಯರ್ಥ ಕೋವಿದಃ ‖ ೯ ‖ "ಅಗ್ರೇಯಾತು ಬಲಸ್ಯಾಽಸ್ಯ ನೀಲೋ ಮಾರ್ಗ

ನಿಮಿತ್ತಾನಿ - ಶಕುನಗಳು ಯಾವುವೋ, ತಾನಿ - ಅಂತಹ ಶಕುನಗಳು, ಪ್ರಾದುರ್ಭವಂತಿ - ಉಂಟಾಗುತ್ತಿರುವುವು, ಅತಃ - ಈ ನಿಮಿತ್ತಗಳಿಂದ, ರಾವಣಂ - ರಾವಣನನ್ನು, ನಿಹತ್ಯ - ಸಂಹರಿಸಿ, ಜಾನಕೀಂ - ಜನಕರಾಜನ ಮಗಳಾದ, ಸೀತಾಂ - ಸೀತಾದೇವಿಯನ್ನು, ಆನಯಿಷ್ಯಾಮಿ - ತರುವೆನು. ‖ ೭ ‖ ಉಪರಿಷ್ಟಾತ್-ಮೇಲುಗಡೆ, ಸ್ಫುರಮಾಣಂ-ಚಲಿಸುತ್ತಿರುವ, ಮಮ-ನನ್ನ, ಇದಂನಯನಂ-ಈ ನೇತ್ರವು, ವಿಜಯಂ - ಜಯವನ್ನೂ, ಮನೋರಥಂ - ಇಷ್ಟಾರ್ಥವನ್ನೂ, ಸಮನುಪ್ರಾಪ್ತಂ - ಸಮೀಪಕ್ಕೆ ಬಂದುದನ್ನಾಗಿ, ಶಂಸತೀವ-ಹೇಳುತ್ತದೆಯೋ ಎಂಬಂತಿರುವುದು. ‖೮‖ ಅರ್ಥಕೋವಿದಃ-ನೀತಿಶಾಸ್ತ್ರಜ್ಞನಾದ, ಧರ್ಮಾತ್ಮಾ - ಧರ್ಮಿಷ್ಠನಾದ, ರಾಮಃ - ಶ್ರೀರಾಮನು, ತತಃ - ಬಳಿಕ, ವಾನರರಾಜೇನ-ಸುಗ್ರೀವನಿಂದಲೂ, ಲಕ್ಷ್ಮಣೇನಚ-ಲಕ್ಷ್ಮಣನಿಂದಲೂ, ಪೂಜಿತಃ - ಪೂಜಿಸಲ್ಪಟ್ಟವನಾಗಿ, ಪುನರಪಿ - ಮತ್ತೂ, ಉವಾಚ - ಹೇಳಿದನು. ‖ ೯ ‖ ಅಸ್ಯಬಲಸ್ಯ - ಈ ಸೈನ್ಯಕ್ಕೆ, ನೀಲಃ - ನೀಲನು, ತರಸ್ವಿನಾಂ - ವೇಗಶಾಲಿಗಳಾದ, ವಾನರಾಣಾಂ - ಕಪಿಗಳ, ಶತಸಹಸ್ರೇಣ - ಲಕ್ಷದಿಂದ,

ವುವು. ಆದುದರಿಂದ ನಾನು ಆ ರಾವಣನನ್ನು ಸಂಹರಿಸಿ ಜನಕರಾಜಕುಮಾರಿಯಾದ ಸೀತೆಯನ್ನು ಕರೆತರುವೆನೆಂಬುದರಲ್ಲಿ ಯಾವ ಸಂದೇಹವೂ ಇಲ್ಲವು. ಇದೋ, ನನ್ನ ಕಣ್ಣಿನ ಮೇಲ್ಭಾಗವು ಅದಿರುತ್ತಿರುವುದು. ಇದರಿಂದ ನನ್ನ ಮನೋರಥವೀಡೇರಿ, ಜಯವಾಗುವುದೆಂದು ಹೇಳುತ್ತಿರುವಂತಿದೆ" ಎಂದು ಹೇಳಿದನು. ಹೀಗೆ ಕಾರ್ಯನಿರ್ವಾಹಕ ಧುರಂಧರನೂ, ಧರ್ಮಸ್ವಭಾವವುಳ್ಳವನೂ ಆದ ಶ್ರೀರಾಮನು ತಾನು ನುಡಿದ ಮಾತುಗಳಿಗೆ ವಾನರೇಶ್ವರನಾದ ಸುಗ್ರೀವನಿಂದಲೂ, ಲಕ್ಷ್ಮಣಸ್ವಾಮಿಯಿಂದಲೂ ಸತ್ಕೃತನಾಗಿ ಮರಳಿಯೂ, "ನೀಲನು ಬಲಿಷ್ಠರಾದ ಲಕ್ಷಮಂದಿ ವಾನರಸೇನೆಯೊಡನೆ ಮಾರ್ಗಶೋಧನೆಗಾಗಿ ಮೊದಲೇ ಪ್ರಯಾಣ ಮಾಡಲಿ" ಎಂದು ಹೇಳಿ ಆ ನೀಲನನ್ನು ಕುರಿತು, "ಎಲೈ

‡ ಇಲ್ಲಿ ದಕ್ಷಿಣಾಕ್ಷಿಸ್ಪಂದನ ನಿಮಿತ್ತವು ಸೂಚಿತವಾಗಿರುವುದೆಂದು ಗ್ರಾಹ್ಯವು. ಜ್ಯೋತಿಶ್ಶಾಸ್ತ್ರದಲ್ಲಿ,

"ನೇತ್ರಸ್ಯಾಧಃ ಸ್ಫುರಣಮಸಕೃತ್ಸಂಗರೇ ಭಂಗಹೇತು ।
ನೇತ್ರೋಪಾಂತೇ ಹರತಿ ನಯನಂ ನೇತ್ರಮೂಲೇಚ ಮೃತ್ಯುಃ ‖
ನೇತ್ರಸ್ಯೋರ್ಧ್ವಂ ಹರತಿ ಸಕಲಂ ಮಾನಸಂ ದುಃಖಜಾತಂ ।
ವಾಮೇಚೈವಂ ಫಲಮವಿಕಲಂ ದಕ್ಷಿಣೇ ವೈಪರೀತ್ಯಂ ‖

ಕಣ್ಣಿನ ಕೆಳಭಾಗವು ಅಡಿಗಡಿಗೂ ಅದಿರಿದರೆ ಸಮರದಲ್ಲಿ ಅಪಜಯ, ತುದಿಗಳಲ್ಲಿ ಅದಿರಿದರೆ ನಯನನಾಶ, ಮೂಲಪ್ರದೇಶಗಳಲ್ಲಿ ಅದಿರಿದರೆ ಮೃತ್ಯು, ಮೇಲ್ಭಾಗದಲ್ಲಿ ಅದಿರಿದರೆ ಸರ್ವನಾಶ—ಹೀಗೆ ಎಡಗಣ್ಣು ಅದಿರುವುದರಿಂದ ಸಮಸ್ತ ದುಃಖಗಳೂ ತಪ್ಪದೆ ಉಂಟಾಗುತ್ತವೆ. ಬಲಗಣ್ಣು ಅದಿರಿದರೆ ಸಮಸ್ತವೂ ಸುಖಕರವಾಗುತ್ತದೆ" ಎಂದು ಹೇಳಿರುವುದರಿಂದ ಇಲ್ಲಿ ದಕ್ಷಿಣಾಕ್ಷಿಸ್ಪಂದನವೆಂದೇ ವ್ಯಾಖ್ಯಾನ ಮಾಡಬೇಕು. ಈ ನಿಮಿತ್ತವು ಗಂಡಸರಿಗೆ ಮಾತ್ರ ಅನ್ವಯಿಸುತ್ತದೆ. ಹೆಂಗುಸರಿಗೆ ವಾಮಾಕ್ಷಿಸ್ಪಂದನವು ಶುಭಕರವು. (ಗೋ)

ಮವೇಕ್ಷಿತುಂ । ವೃತಃ ಶತಸಹಸ್ರೇಣ ವಾನರಾಣಾಂ ತರಸ್ವಿನಾಂ ॥ ೧೦ ॥ ಫಲ ಮೂಲವತಾ ನೀಲ! ಶೀತಕಾನನವಾರಿಣಾ । ¶ ಪಥಾ ಮಧುಮತಾ ಚಾಶು ಸೇನಾಂ ಸೇನಾಪತೇ! ನಯ ॥ ೧೧ ॥ ದೂಷಯೇಯುರ್ದುರಾತ್ಮಾನಃ ಪಥಿ ಮೂಲಫಲೋದಕಂ । ರಾಕ್ಷಸಾಃ * ಪರಿರಕ್ಷೇಥಾಸ್ತೇಭ್ಯಸ್ತ್ವಂ ನಿತ್ಯಮುದ್ಯತಃ ॥ ೧೨ ॥ ನಿಮ್ನೇಷು ವನದುರ್ಗೇಷು ವನೇಷುಚ ವನೌಕಸಃ । ಅಭಿಪ್ಲುತ್ಯಾಭಿಪಶ್ಯೇಯುಃ ಪರೇಷಾಂ ನಿಹಿತಂ ಬಲಂ ॥ ೧೩ ॥ ಯಚ್ಚ ಫಲ್ಗು ಬಲಂ ಕಿಂಚಿತ್ತದತ್ರೈವೋಪಯುಜ್ಯತಾಂ । ಏತದ್ಧಿ ಕೃತ್ಯಂ ಘೋರಂ ನೋ ವಿಕ್ರಮೇಣ ಪ್ರಯುಧ್ಯತಾಂ ॥ ೧೪ ॥ ಸಾಗ

ವೃತಃ - ಸುತ್ತುವರೆಯಲ್ಪಟ್ಟವನಾಗಿ, ಮಾರ್ಗಂ - ಮುಂದೆ ನಡೆಯತಕ್ಕ ಮಾರ್ಗವನ್ನು, ಅವೇಕ್ಷಿತುಂ- ನೋಡುವದಕ್ಕಾಗಿ, ಅಗ್ರೇ - ಮುಂದುಗಡೆ, ಯಾತು - ಹೋಗಲಿ. ॥೧೦॥ ಹೇ ಸೇನಾಪತೇ - ಎಲೈ ಸೈನ್ಯಾಧಿಪತಿಯೇ, ಹೇ ನೀಲ - ಎಲೈ ನೀಲನೇ, ತ್ವಂ - ನೀನು, ಫಲ....ತಾ - ಫಲಗಳೂ, ಕಂದ ಮೂಲಗಳೂ ಉಳ್ಳ, ಸೀತ....ಣಾ - ತಣ್ಣಗಿರುವ ಅರಣ್ಯೋದಕವುಳ್ಳ, ಮಧುಮತಾ - ಜೇನುತುಪ್ಪ ಗಳುಳ್ಳ, ಪಥಾ - ಮಾರ್ಗದಿಂದ, ಸೇನಾಂ - ಸೈನ್ಯವನ್ನು, ನಯ - ತೆಗೆದುಕೊಂಡು ಹೋಗು. ॥೧೧॥ ದುರಾತ್ಮನಃ - ದುಷ್ಟಬುದ್ಧಿಯುಳ್ಳ, ರಾಕ್ಷಸಾಃ - ರಕ್ಕಸರು, ಪಥಿ - ಮಾರ್ಗದಲ್ಲಿ, ಮೂಲ....ಕಂ - ಕಂದಮೂಲಗಳನ್ನೂ, ಫಲಗಳನ್ನೂ, ಉದಕಗಳನ್ನೂ, ದೂಷಯೇಯುಃ - ಕೆಡಿಸುವರು, ತ್ವಂ-ನೀನು, ನಿತ್ಯಂ-ನಿರಂತರವೂ, ಉದ್ಯತಃ-ಜಾಗರೂಕನಾಗಿ, ತೇಭ್ಯಃ-ಆ ರಾಕ್ಷಸರ ದೆಶೆಯಿಂದ, ಪರಿರಕ್ಷೇಥಾಃ- ಸಂರಕ್ಷಿಸು. ॥ ೧೨ ॥ ವನೌಕಸಃ - ವಾನರರು, ನಿಮ್ನೇಷು - ಗರ್ತಪ್ರದೇಶಗಳಲ್ಲಿ, ವನದುರ್ಗೇಷು - ಜಲದುರ್ಗಮುಸ್ಥಾನಗಳಲ್ಲಿ, ವನೇಷು - ಅರಣ್ಯಗಳಲ್ಲಿ, ನಿಹಿತಂ - ಇರಿಸಲ್ಪಟ್ಟ, ಪರೇಷಾಂ - ಶತ್ರುಗಳ, ಬಲಂ - ಸೈನ್ಯವನ್ನು, ಅಭಿಪ್ಲುತ್ಯ - ಮೇಲಕ್ಕೆ ಹಾರಿ, ಅಭಿಪಶ್ಯೇಯುಃ - ನೋಡಲಿ: ॥೧೩॥ ಫಲ್ಗು- ಅಸಾರವಾದ, ಯತ್ಸೈನ್ಯಂ - ಯಾವ ಸೈನ್ಯವು, ಕಿಂಚಿತ್ - ಸ್ವಲ್ಪವಾಗಿ, ಅಸ್ತಿಯದಿ - ಇದ್ದುದ್ದಾದರೆ, ತತ್ - ಆ ಸೈನ್ಯವು, ಅತ್ರೈವ - ಈ ಕಿಷ್ಕಿಂಧೆಯಲ್ಲಿಯೇ, ಉಪಯುಜ್ಯತಾಂ - ಇರಿಸಲ್ಪಡಲಿ, ಘೋರಂ - ಭಯಂಕರವಾದ, ಏತದ್ಧಿಕೃತ್ಯಂ - ಈ ಯುದ್ಧಕಾರ್ಯವು, ವಿಕ್ರಮೇಣ - ಪರಾಕ್ರಮ ದಿಂದ, ಪ್ರಯುಧ್ಯತಾಂ - ಯುದ್ಧಮಾಡುವವರಿಗೆ, ಕೃತ್ಯಂ - ಕರ್ತವ್ಯವು. ॥೧೪॥ ಸಾಗರೌಘನಿಭಂ-

ನೀಲನೇ! ಕಂದಮೂಲಫಲಾದಿಗಳಿಂದ ತುಂಬಿ, ತಣ್ಣೆಳಲೂ, ಜಲವೂ ಉಳ್ಳ ಜೇನುಗಳಿರುವ ಮಾರ್ಗದಲ್ಲಿ ಸೇನೆಯನ್ನು ಜಾಗ್ರತೆಯಾಗಿ ಕರೆದುಕೊಂಡು ಹೋಗು. ॥ ೬—೧೧ ॥ ದುರಾತ್ಮರಾದ ರಾಕ್ಷಸರು ಕಾಡಿನಲ್ಲಿರುವ ಕಂದಮೂಲಫಲಾದಿಗಳನ್ನೂ, ಜಲವನ್ನೂ ಕೆಡಿಸುವರು. ಅವರು ಆ ರೀತಿ ಮಾಡದಂತೆ ನೀನು ಜಾಗ್ರತೆಯಾಗಿ ಕಾಪಾಡುತ್ತಿರಬೇಕು. ಇಷ್ಟೆಯಲ್ಲದೆ ಆ ರಾಕ್ಷಸರು ಹಳ್ಳಕೊಳ್ಳಗಳಲ್ಲಿಯೂ, ಜಲದುರ್ಗಗಳಲ್ಲಿಯೂ, ವನದುರ್ಗಗಳಲ್ಲಿಯೂ ಅವಿತುಕೊಂಡಿರುತ್ತಾರೆ. ಆದುದರಿಂದ ನಮ್ಮವರೆಲ್ಲರೂ ಮಧ್ಯೆ ಮಧ್ಯೆ ಮೇಲಕ್ಕೆ ಹಾರಿ ಮಾರ್ಗವನ್ನು ಚೆನ್ನಾಗಿ ನೋಡಿಕೊಳ್ಳುತ್ತಿರಬೇಕು. ಇದೂ ಅಲ್ಲದೆ ಅಲ್ಪ ಬಲವುಳ್ಳ ಸೈನ್ಯದಲ್ಲಿ ಸ್ವಲ್ಪ ಭಾಗವನ್ನಿಲ್ಲಿಯೇ ಇರಿಸಿ ಈ ಪ್ರದೇಶವನ್ನೂ ಕಾಪಾಡುವಂತೆ ಮಾಡಬೇಕು. ನಾವೀಗ ಕೈಕೊಂಡಿರುವ ಕಾರ್ಯವು ಮಹಾ ಪ್ರಯಾಸಕರವಾದುದಾಗಿರುವುದರಿಂದ

¶ "ತಥಾ" ರಾ. ಪಾ. * "ಪಥಿ" ತಿ. ಪಾ.

ರೌಘನಿಭಂ ಭೀಮಮುಗ್ರಾನೀಕಂ ಮಹಾಬಲಾಃ । ಕಪಿಸಿಂಹಾಃ ಪ್ರಕರ್ಷಂತು ಶತಶೋಽಥ ಸಹಸ್ರಶಃ ॥ ೧೫ ॥ ಗಜಶ್ಚ ಗಿರಿಸಂಕಾಶೋ ಗವಯಶ್ಚ ಮಹಾಬಲಃ । ಗವಾಕ್ಷಶ್ಚಾಗ್ರತೋ ಯಾಂತು ಗವಾಂ ದೃಪ್ತಾ ಇವರ್ಷಭಾಃ ॥ ೧೬ ॥ ಯಾತು ವಾನರವಾಹಿನ್ಯಾ ವಾನರಃ ಪ್ಲವತಾಂವರಃ । * ಪಾಲಯನ್ ದಕ್ಷಿಣಂ ಪಾರ್ಶ್ವಮೃಷಭೋ ವಾನರರ್ಷಭಃ ॥೧೭॥ ಗಂಧಹಸ್ತೀವ ದುರ್ಧರ್ಷಸ್ತರಸ್ವೀ ಗಂಧಮಾದನಃ । ಯಾತು ವಾನರವಾಹಿನ್ಯಾಸ್ಸವ್ಯಂ ಪಾರ್ಶ್ವಮಧಿಷ್ಠಿತಃ ॥೧೮॥ ಯಾಸ್ಯಾಮಿ ಬಲಮಧ್ಯೇಽಹಂ ಬಲೌಘಮಭಿಹರ್ಷಯನ್ । ಅಧಿರುಹ್ಯ ಹನೂಮಂತಮೈರಾವತಮಿವೇಶ್ವರಃ ॥ ೧೯ ॥

ಕಡಲಿನ ಪ್ರವಾಹಕ್ಕೆ ಸಮಾನವಾದ, ಭೀಮಂ - ಭಯಂಕರವಾದ, ಅಗ್ರಾನೀಕಂ - ಮುಂದುಗಡೆ ಹೋಗತಕ್ಕ ಸೈನ್ಯವನ್ನು, ಮಹಾಬಲಾಃ - ಬಹಳ ಬಲಿಷ್ಠರಾದ, ಶತಶಃ - ನೂರಾರು ಸಂಖ್ಯೆಯುಳ್ಳ, ಅಥ - ಬಳಿಕ, ಸಹಸ್ರಶಃ - ಸಾವಿರಸಂಖ್ಯೆಯುಳ್ಳ, ಕಪಿಸಿಂಹಾಃ - ವಾನರೋತ್ತಮರು, ಪ್ರಕರ್ಷಂತು- ತೆಗೆದುಕೊಂಡು ಹೋಗಲಿ. ॥ ೧೫ ॥ ಗಿರಿಸಂಕಾಶಃ - ಬೆಟ್ಟಕ್ಕೆ ಸಮಾನನಾದ, ಗಜಶ್ಚ - ಗಜನು, ಮಹಾಬಲಃ - ಮಹಾಬಲನಾದ, ಗವಯಶ್ಚ - ಗವಯನು, ಗವಾಕ್ಷಶ್ಚ - ಗವಾಕ್ಷನು ಈ ಮೂವರೂ, ಗವಾಂ - ಗೋವುಗಳಲ್ಲಿ, ದೃಪ್ತಾಃ - ಗರ್ವಿತಗಳಾದ, ಋಷಭಾ ಇವ - ಎತ್ತುಗಳಂತೆ, ಅಗ್ರತಃ - ಸೈನ್ಯಕ್ಕೆ ಮುಂದುಗಡೆ, ಯಾಂತು - ಹೋಗಲಿ. ॥೧೬॥ ಪ್ಲವತಾಂ - ಕಪಿಗಳಲ್ಲಿ, ವರಃ - ಶ್ರೇಷ್ಠನಾದ, ವಾನರಃ - ಕಪಿಯಾದ, ಋಷಭಃ - ಋಷಭನೆಂಬ, ವಾನರರ್ಷಭಃ - ವಾನರಶ್ರೇಷ್ಠನು, ವಾನ.... ನ್ಯಾಃ- ಕಪಿಸೈನ್ಯದ, ದಕ್ಷಿಣಂಪಾರ್ಶ್ವಂ - ಬಲಪಾರ್ಶ್ವವನ್ನು, ಪಾಲಯನ್ - ರಕ್ಷಿಸುವವನಾಗಿ, ಯಾತು - ಹೋಗಲಿ. ॥೧೭॥ ಗಂಧಹಸ್ತೀವ - ಮದವೇರಿದ ಆನೆಯಂತೆ, ದುರ್ಧರ್ಷಃ - ತಿರಸ್ಕರಿಸಲಸಾಧ್ಯನಾದ, ತರಸ್ವೀ - ಬಲವಂತನಾದ, ಗಂಧಮಾದನಃ - ಗಂಧಮಾದನನು, ವಾನ.... ನ್ಯಾಃ - ಕಪಿಸೈನ್ಯದ, ಸವ್ಯಂಪಾರ್ಶ್ವಂ - ಎಡಪಾರ್ಶ್ವದಲ್ಲಿ, ಅಧಿಷ್ಠಿತಃ - ಇರುವವನಾಗಿ, ಯಾತು - ಹೋಗಲಿ. ॥ ೧೮ ॥ ಅಹಂ - ನಾನು, ಐರಾವತಂ - ಐರಾವತವನ್ನು, ಈಶ್ವರ ಇವ - ದೇವೇಂದ್ರನಂತೆ, ಹನೂಮಂತಂ - ಆಂಜನೇಯನನ್ನು, ಅಧಿರುಹ್ಯ - ಏರಿ, ಬಲೌಘಂ - ಸೈನ್ಯದ ಗುಂಪನ್ನು, ಅಭಿಹರ್ಷಯನ್ -

ಎಲ್ಲರೂ ಜಾಗರೂಕರಾಗಿರಬೇಕು. ಎಲ್ಲರೂ ತಮ್ಮ ಅತುಲಪರಾಕ್ರಮವನ್ನು ಮೆರೆಯಿಸಬೇಕು. ಮಹಾ ಬಲಾಢ್ಯರಾದ ವಾನರರು ಸಾವಿರಾರು ಕೋಟಿಗಳಾಗಿ ಸೇರಿ ಮಹಾ ಸಾಗರದಂತೆ ಮಹಾ ಭಯಂಕರವಾದ ಸೈನ್ಯವನ್ನು ಮುಂಭಾಗದಲ್ಲಿ ನಡೆಯಿಸಿಕೊಂಡು ಹೋಗಬೇಕು. ಪರ್ವತೋಪಮನಾದ ಗಜನೂ, ಮಹಾ ಬಲಿಷ್ಠನಾದ ಗವಯನೂ, ಗವಾಕ್ಷನೂ, ಮಂದೆಯಲ್ಲಿ ಮದಿಸಿದ ಗೂಳಿಗಳಂತೆ ಸೇನೆಯ ಮುಂಭಾಗದಲ್ಲಿ ಹೋಗುತ್ತಿರಬೇಕು. ॥ ೧೧–೧೬ ॥ ವಾನರಶ್ರೇಷ್ಠನೂ, ಪ್ಲವಗೋತ್ತಮನೂ ಆದ ಋಷಭನು ವಾನರ ಸೈನ್ಯದ ಬಲಭಾಗವನ್ನು ರಕ್ಷಿಸುತ್ತ ನಡೆಯಬೇಕು. ಮಹಾ ಬಲಿಷ್ಠನೂ, ಮದ ಗಜದಂತೆ ಇತರರಿಂದ ದುರ್ಧರ್ಷನೂ ಆದ ಗಂಧಮಾದನನು ವಾನರ ಸೈನ್ಯದ ಎಡಭಾಗವನ್ನು ರಕ್ಷಿಸುತ್ತ ನಡೆಯಬೇಕು. ನಾನೂ ಸಹ, ಇಂದ್ರನು ಐರಾವತವನ್ನೇರಿ ಹೋಗುವಂತೆ ಈ ಹನುಮಂತನ ಹೆಗಲನ್ನೇರಿ ಕಪಿಸೇನೆಗಳಿಗೆ ಮಹೋತ್ಸಾಹವುಂಟಾಗುವಂತೆ

* "ಯತಶ್ಚ ಭಯಮಾಶಂಕಿ ತಾಂ ಪ್ರಾಚೀಂ ಪರಿಕಲ್ಪಯೇತ್" ಎಂದು ಕಾಮಂದಕೋಕ್ತಿಯು.

ಅಂಗದೇನೈಷ ಸಂಯಾತು ಲಕ್ಷ್ಮಣಶ್ಚಾಂತಕೋಪಮಃ। ಸಾರ್ವಭೌಮೇನ ಭೂತೇಶೋ ದ್ರವಿಣಾಧಿಪತಿರ್ಯಥಾ ॥೨೦॥ ಜಾಂಬವಾಂಶ್ಚ ಸುಷೇಣಶ್ಚ ವೇಗದರ್ಶೀಚ ವಾನರಃ। ಋಕ್ಷರಾಜೋ ಮಹಾಸತ್ವಃ ಕುಕ್ಷಿಂ ರಕ್ಷಂತು ತೇ ತ್ರಯಃ" ॥ ೨೧ ॥ ರಾಘವಸ್ಯ ವಚಃಶ್ರುತ್ವಾ ಸುಗ್ರೀವೋ ವಾಹಿನೀಪತಿಃ। ವ್ಯಾದಿದೇಶ ಮಹಾವೀರ್ಯಾನ್ ವಾನರಾನ್ವಾನರರ್ಷಭಃ ॥ ೨೨ ॥ ತೇ ವಾನರಗಣಾಸ್ಸರ್ವೇ ಸಮುತ್ಪತ್ಯ ಯುಯುತ್ಸವಃ। ಗುಹಾಭ್ಯಶ್ಶಿಖರೇಭ್ಯಶ್ಚ ಆಶು ಪುಪ್ಲುವಿರೇ ತದಾ ॥ ೨೩ ॥ ತತೋ ವಾನರರಾಜೇನ ಲಕ್ಷ್ಮಣೇನಚ ಪೂಜಿತಃ। ಜಗಾಮ ರಾಮೋ ಧರ್ಮಾತ್ಮಾ ಸಸೈನ್ಯೋ ದಕ್ಷಿಣಾಂ ದಿಶಂ

ಸಂತೋಷಗೊಳಿಸುತ್ತ, ಬಲಮಧ್ಯೇ - ಸೈನ್ಯದ ಮಧ್ಯದಲ್ಲಿ, ಯಾಸ್ಯಾಮಿ - ಹೋಗುವೆನು. ॥ ೧೯ ॥ ಅಂತಕೋಪಮಃ - ಯಮನಿಗೆ ಸಮಾನನಾದ, ಏಷಲಕ್ಷ್ಮಣಶ್ಚ - ಈ ಲಕ್ಷ್ಮಣನೂ, ಸಾರ್ವಭೌಮೇನ-ಸಾರ್ವಭೌಮವೆಂಬ ದಿಗ್ಗಜದಿಂದ, ಭೂತೇಶಃ - ಭೂತಾಧಿಪತಿಯಾದ, ದ್ರವಿ....ಥಾ - ಕುಬೇರನಂತೆ, ಅಂಗದೇನ - ಅಂಗದನಿಂದ, ಸಂಯಾತು - ಪ್ರಯಾಣಮಾಡಲಿ. ॥ ೨೦ ॥ ಋಕ್ಷರಾಜಃ - ಕರಡಿಗಳಿಗೆ ದೊರೆಯಾದ, ಮಹಾಸತ್ವಃ - ಮಹಾಬಲನಾದ, ಜಾಂಬವಾಂಶ್ಚ - ಜಾಂಬವತನೂ, ಸುಷೇಣಶ್ಚ - ಸುಷೇಣನೂ, ವೇಗದರ್ಶೀ - ವೇಗದರ್ಶೀ ಎಂಬ, ವಾನರಶ್ಚ - ಕಪಿಯೂ ಎಂಬ, ತೇತ್ರಯಃ - ಆ ಮೂರುಮಂದಿಯೂ, ಕುಕ್ಷಿಂ - ಮಧ್ಯಪ್ರದೇಶವನ್ನು, ರಕ್ಷಂತು - ಸಂರಕ್ಷಿಸಲಿ. ॥೨೧॥ ರಾಘವಸ್ಯ-ಶ್ರೀರಾಮನ, ವಚಃ-ಮಾತನ್ನು, ಶ್ರುತ್ವಾ-ಕೇಳಿ, ವಾನರರ್ಷಭಃ-ವಾನರಶ್ರೇಷ್ಠನಾದ, ವಾಹಿನೀಪತಿಃ-ಯೂಥಪತಿಯಾದ, ಸುಗ್ರೀವಃ - ಸುಗ್ರೀವನು, ಮಹಾವೀರ್ಯಾನ್ - ಬಹು ಪರಾಕ್ರಮಿಗಳಾದ, ವಾನರಾನ್ - ಕಪಿಗಳನ್ನು ಕುರಿತು, ವ್ಯಾದಿದೇಶ - ಆಜ್ಞಾಪಿಸಿದನು. ॥ ೨೨ ॥ ತದಾ - ಆಗ, ಸರ್ವೇ-ಸಮಸ್ತರಾದ, ತೇವಾನರಗಣಾಃ - ಆ ಕಪಿಸಮೂಹಗಳು, ಯುಯುತ್ಸವಃ - ಯುದ್ಧೇಚ್ಛೆಯುಳ್ಳವುಗಳಾಗಿ, ಸಮುತ್ಪತ್ಯ-ಹಾರಿ, ಆಶು-ಜಾಗ್ರತೆಯಾಗಿ, ಗುಹಾಭ್ಯಃ - ಗುಹೆಗಳಿಂದಲೂ, ಶಿಖರೇಭ್ಯಶ್ಚ-ಪರ್ವತಶಿಖರಗಳಿಂದಲೂ, ಪುಪ್ಲುವಿರೇ - ಹಾರುತ್ತಾ ಬಂದರು. ॥೨೩॥ ತತಃ-ಬಳಿಕ, ವಾನರರಾಜೇನ-ಸುಗ್ರೀವನಿಂದಲೂ, ಲಕ್ಷ್ಮಣೇನಚ - ಲಕ್ಷ್ಮಣನಿಂದಲೂ, ಪೂಜಿತಃ - ಪೂಜಿಸಲ್ಪಟ್ಟ, ಧರ್ಮಾತ್ಮಾ - ಧರ್ಮಿಷ್ಠನಾದ, ರಾಮಃ - ಶ್ರೀರಾಮನು, ಸಸೈನ್ಯಃ - ಸೇನೆಯಿಂದ ಕೂಡಿದವನಾಗಿ, ದಕ್ಷಿಣಾಂದಿಶಂ-

ಮುಂದೆ ನಡೆಯುವೆನು. ಮತ್ತು ಪರಾಕ್ರಮದಲ್ಲಿ ಯಮನಿಗೆ ಸಮಾನವಾದ ಈ ಲಕ್ಷ್ಮಣಸ್ವಾಮಿಯು ಅಂಗದನ ಹೆಗಲನ್ನೇರಿ ಸಾರ್ವಭೌಮವೆಂಬ ಗಜಶ್ರೇಷ್ಠವನ್ನೇರಿ ಹೋಗುವ ಯಕ್ಷೇಶ್ವರನಾದ ಕುಬೇರನಂತೆ ನಡೆಯಲಿ. ಋಕ್ಷಸೇನೆಗಳಿಗೆ ಒಡೆಯನೂ, ಮಹಾ ಬಲಪರಾಕ್ರಮಶಾಲಿಯೂ ಆದ ಈ ಜಾಂಬವಂತನೂ, ಸುಷೇಣನೂ, ವೇಗದರ್ಶಿಯಾದ ಈ ಮಹಾ ವಾನರನೂ ಸೈನ್ಯದ ಹಿಂಭಾಗವನ್ನು ರಕ್ಷಿಸುತ್ತಿರಲಿ" ಎಂದು ಹೇಳಿದನು. ॥೧೭—೨೧॥ ಶ್ರೀರಾಮಚಂದ್ರನಿಂತು ನುಡಿಯಲು ವಾನರೋತ್ತಮನೂ, ವಾನರೇಶ್ವರನೂ ಆದ ಸುಗ್ರೀವನು ಮಹಾ ಬಲಪರಾಕ್ರಮಶಾಲಿಗಳಾದ ವಾನರರೆಲ್ಲರನ್ನೂ ಪ್ರಯಾಣ ಮಾಡಿರೆಂದು ಆಜ್ಞಾಪಿಸಿದನು. ಆಗ ವಾನರರೆಲ್ಲರೂ ಮಹೋತ್ಸಾಹವುಳ್ಳವರಾಗಿ ಪರ್ವತಶಿಖರಗಳಿಂದಲೂ, ಗುಹೆಗಳಿಂದಲೂ ಹೊರಹೊರಟು ಹಾರಿಬಂದು ಕೋಲಾಹಲ ಮಾಡುತ್ತಿದ್ದರು. ಆ ಸಮಯದಲ್ಲಿ ಧರ್ಮಾತ್ಮನಾದ ಶ್ರೀರಾಮಚಂದ್ರನು ವಾನರೇಶ್ವರನಾದ ಸುಗ್ರೀವನಿಂದಲೂ, ಲಕ್ಷ್ಮಣನಿಂದಲೂ ಸತ್ಕೃತನಾಗಿ ವಾನರಸೇನೆಯೊಡಗೂಡಿ ದಕ್ಷಿಣದಿಕ್ಕನ್ನು ಕುರಿತು ಪ್ರಯಾಣ ಮಾಡಿ

|| ೨೪ || ಶತೈಃ ಶತಸಹಸ್ರೈಶ್ಚ ಕೋಟೀಭಿರಯುತೈರಪಿ । ವಾರಣಾಭೈಶ್ಚ ಹರಿಭಿರ್ಯಯೌ ಪರಿವೃತಸ್ತದಾ || ೨೫ || ತಂ ಯಾಂತಮನುಯಾತಿಸ್ಮ ಮಹತೀ ಹರಿವಾಹಿನೀ । ‡ ದೃಪ್ತಾಃ ಪ್ರಮುದಿತಾಸ್ಸರ್ವೇ ಸುಗ್ರೀವೇಣಾಭಿಪಾಲಿತಾ || ೨೬ || ಆಪ್ಲವಂತಃ ಪ್ಲವಂತಶ್ಚ ಗರ್ಜಂತಶ್ಚ ಪ್ಲವಂಗಮಾಃ । ಕ್ಷ್ವೇಳಂತೋ § ಧಾವಮಾನಾಸ್ತೇ ಜಗ್ಮುರ್ದ್ವ್ಯ ದಕ್ಷಿಣಾಂ ದಿಶಂ || ೨೭ || ಭಕ್ಷಯಂತಸ್ಸುಗಂಧೀನಿ ಮಧೂನಿ ಚ ಫಲಾನಿ ಚ । ಉದ್ವಹಂತೋ ಮಹಾವೃಕ್ಷಾನ್ಮಂಜರೀಪುಂಜಧಾರಿಣಃ || ೨೮ ||

---

ದಕ್ಷಿಣದಿಕ್ಕನ್ನು ಕುರಿತು, ಜಗಾಮ - ತೆರಳಿದನು. || ೨೪ || ಶತೈಃ - ನೂರಾದ, ಶತಸಹಸ್ರೈಃ - ಲಕ್ಷಗಳಾದ, ಕೋಟಿಭಿಃ - ಕೋಟಿಸಂಖ್ಯಾಕರಾದ, ಅಯುತೈರಪಿ - ಹತ್ತುಸಾವಿರ ಸಂಖ್ಯೆಯುಳ್ಳ, ವಾರಣಾಭೈಃ - ಆನೆಗಳಂತೆ ಹೊಳೆಯುತ್ತಿರುವ, ಹರಿಭಿಃ - ವಾನರರಿಂದ, ಪರಿವೃತಃ - ಸುತ್ತುವರೆಯಲ್ಪಟ್ಟವನಾಗಿ, ತದಾ-ಆಗ, ಯಯೌ-ಹೊರಟನು, ಮಹತೀ-ದೊಡ್ಡದಾದ, ಹರಿವಾಹಿನೀ-ವಾನರಸೈನ್ಯವು, ಯಾಂತಂ - ಪ್ರಯಾಣಮಾಡಿದ, ತಂ - ಆ ಶ್ರೀರಾಮನನ್ನು, ಅನುಯಾಂತಿಸ್ಮ - ಅನುಸರಿಸಿಹೋಯಿತಷ್ಟೆ. || ೨೫ || ದೃಪ್ತಾಃ - ಗರ್ವಿತರಾದ, ಪ್ರಮುದಿತಾಃ - ಸಂತೋಷಚಿತ್ತರಾದ, ಸುಗ್ರೀವೇಣ-ಸುಗ್ರೀವನಿಂದ, ಅಭಿಪಾಲಿತಾಃ-ರಕ್ಷಿಸಲ್ಪಟ್ಟ, ಸರ್ವೇ-ಸಮಸ್ತರಾದ, ತೇಪ್ಲವಂಗಮಾಃ-ಆ ಕಪಿಗಳು, ಆಪ್ಲವಂತಃ - ಎಲ್ಲೆಲ್ಲಿಯೂ ದೂರವಾಗಿ ಹಾರುವವರಾಗಿಯೂ, ಪ್ಲವಂತಶ್ಚ - ಲಂಘಿಸುವವರಾಗಿಯೂ, ಗರ್ಜಂತಶ್ಚ ಗರ್ಜಿಸುವವರಾಗಿಯೂ, ಕ್ಷ್ವೇಳಂತಶ್ಚ-ಸಿಂಹನಾದಗಳನ್ನು ಮಾಡುವವರಾಗಿಯೂ, ಧಾವಮಾನಾಃ - ಓಡಿಹೋಗುವವರಾಗಿಯೂ, ದಕ್ಷಿಣಾಂದಿಶಂಪ್ರೈ - ದಕ್ಷಿಣದಿಕ್ಕಿನಲ್ಲಿಯೇ, ಜಗ್ಮುಃ - ತೆರಳಿದರು, ಸುಗಂಧೀನಿ - ಸುವಾಸನೆಯುಳ್ಳ, ಮಧೂನಿಚ - ಜೇನುಗಳನ್ನೂ, ಫಲಾನಿಚ - ಹಣ್ಣುಗಳನ್ನೂ, ಭಕ್ಷಯಂತಃ - ತಿನ್ನುವವರಾಗಿ, ಮಂಜ....ಣಃ - ಹೂಗೊಂಚಲುಗಳ ತಂಡಗಳನ್ನು ಧರಿಸಿದ, ಮಹಾವೃಕ್ಷಾನ್ - ದೊಡ್ಡ ಗಿಡಗಳನ್ನು, ಉದ್ವಹಂತಃ - ವಹಿಸಿ, ಜಗ್ಮುಃ - ತೆರಳಿದರು ||೨೬-೨೮|| ಅಪರೇ - ಮತ್ತೆ ಕೆಲವರು, ಅಪರಾನ್ - ಮತ್ತೆ ಕೆಲವರನ್ನು, ಸಹಸಾ-ಜಾಗ್ರತೆ

---

ದನು. ಆಗ ಮದ್ದಾನೆಗಳಿಗೆ ಸಮಾನರಾಗಿರುವ ನೂರಾರಾಗಿಯೂ, ಸಾವಿರಾರುಗಳಾಗಿಯೂ, ಲಕ್ಷಲಕ್ಷಗಳಾಗಿಯೂ, ಕೋಟಿಕೋಟಿಗಳಾಗಿಯೂ ಪ್ರಯಾಣಮಾಡಿದ್ದ ಶ್ರೀರಾಮಮೂರ್ತಿಯನ್ನು ಸುತ್ತುವರೆದು ಹೊರಟರು. ||೨೨-೨೫|| ಹೀಗೆ ಶ್ರೀರಾಮಮೂರ್ತಿಯನ್ನು ಸುತ್ತುವರೆದು ಹೋಗುತ್ತಿದ್ದ, ಆ ವಾನರರೆಲ್ಲರೂ ಯುದ್ಧಕ್ಕಾಗಿ ಹೋಗುತ್ತಿದ್ದುದರಿಂದ ಬಹಳವಾಗಿ ಸಂತೋಷಪಡಿಸುತ್ತಿರುವರಾಗಿಯೂ, ಮಹಾ ಬಲಗರ್ವಿತರಾಗಿಯೂ, ಸುಗ್ರೀವನಿಂದ ಪರಿಪಾಲಿತರಾಗಿಯೂ ಆಗಿ ಹಾರುತ್ತಲೂ, ಕುಪ್ಪಳಿಸುತ್ತಲೂ, ಗಟ್ಟಿಯಾಗಿ ಕೂಗುತ್ತಲೂ, ಅಲ್ಲಿಂದಿಲ್ಲಿಗೆ ಓಡುತ್ತಲೂ, ಸಿಂಹನಾದಗಳನ್ನು ಮಾಡುತ್ತಲೂ, ಸುವಾಸನೆಯುಳ್ಳ ಮಧುವನ್ನು ಪಾನಮಾಡುತ್ತಲೂ, ಫಲವನ್ನು ಭಕ್ಷಿಸುತ್ತಲೂ, ಸುಗಂಧಬಂಧುರವಾಗಿ ಚೆನ್ನಾಗಿ ಅರಳಿರುವ ಹೂಗೊಂಚಲುಗಳಿಂದೊಪ್ಪುತ್ತಿರುವ ವೃಕ್ಷಗಳನ್ನು ಹಿಡಿದೆತ್ತಿ ಅಲುಗಾಡಿಸುತ್ತಲೂ, ಆ ರಾವಣನಿರುವ ದಕ್ಷಿಣದಿಕ್ಕನ್ನು ಕುರಿತು ಹೋಗುತ್ತಿದ್ದರು. ಹೀಗೆ ಮುಂಬರಿಯುತ್ತಿದ್ದ ಆ ವಾನರರಲ್ಲಿ ಮಹಾ ಬಲಗರ್ವಿತರಾದ ಕೆಲವರು ವಾನರವೀರರು ಕೆಲವರನ್ನು ಮೇಲಕ್ಕೆ

---

‡ "ಹೃಷ್ಟಾಃ" ತಿ. ಪಾ. § "ನಿನದಂತಶ್ಚ" ತಿ. ಪಾ.

ಅನ್ಯೋನ್ಯಂ ಸಹಸಾ ದೃಪ್ತಾ ನಿರ್ಹಂತಿ ಕ್ಷಿಪಂತಿಚ । * ಪತತಶ್ಚಾಕ್ಷಿಪಂತ್ಯನ್ಯೇಪಾತಯಂತ್ಯಪರೇಽಪರಾನ್ ॥ ೨೯ ॥ "ರಾವಣೋ ನೋ ನಿಹಂತವ್ಯಸ್ಸರ್ವೇಚ ರಜನೀಚರಾಃ" । ಇತಿ ಗರ್ಜಂತಿ ಹರಯೋ ರಾಘವಸ್ಯ ಸಮೀಪತಃ ॥ ೩೦ ॥ ಪುರಸ್ತಾದೃಷಭೋ ವೀರೋ ನೀಲಃ ಕುಮುದಏವಚ । ಪಂಥಾನಂ ಶೋಧಯಂತಿಸ್ಮ ವಾನರೈರ್ಬಹುಭಿಃಸಹ ॥ ೩೧ ॥ ಮಧ್ಯೇತು ರಾಜಾ ಸುಗ್ರೀವೋ ರಾಮೋ ಲಕ್ಷ್ಮಣಏವಚ । ಬಹುಭಿರ್ಬಲಿಭಿರ್ಭೀಮೈರ್ವೃತಾಶ್ಶತ್ರುನಿಬರ್ಹಣಾಃ ॥ ೩೨ ॥ ಹರಿಃ ಶತವಲಿರ್ವೀರಃ ಕೋಟೀಭಿರ್ದಶಭಿರ್ವೃತಃ । ಸರ್ವಾಮೇಕೋಹ್ಯವಷ್ಟಭ್ಯ ರರಕ್ಷ ಹರಿವಾಹಿನೀಂ॥೩೩॥

ಯಾಗಿ, ಅನ್ಯೋನ್ಯಂ - ಒಬ್ಬರಿಗೊಬ್ಬರು, ದೃಪ್ತಾಃ - ಗರ್ವಿತರಾಗಿ, ನಿರ್ಹಂತಿ - ಎತ್ತಿಕೊಂಡರು, ಕ್ಷಿಪಂತಿಚ - ಎಸೆದರು, ಪತತಶ್ಚ - ಬೀಳುವರನ್ನು, ಅನ್ಯೇ - ಇತರರು, ಆಕ್ಷಿಪಂತಿ - ಆಕ್ಷೇಪಿಸಿದರು, ಅಪರೇ - ಮತ್ತೆ ಕೆಲವರು, ಅಪರಾನ್ - ಇನ್ನು ಕೆಲವರನ್ನು, ಪಾತಯಂತಿ - ಕೆಳಕ್ಕೆ ಬೀಳಿಸುವರು. ॥ ೨೯ ॥ ರಾಘವಸ್ಯ-ಶ್ರೀರಾಮನ, ಸಮೀಪತಃ-ಸಮೀಪದಲ್ಲಿ, ರಾವಣಃ-ರಾವಣನು, ನಃ-ನಮ್ಮಿಂದ, ನಿಹಂತವ್ಯಃ - ಹೊಡೆಯಲ್ಪಡತಕ್ಕವನು, ಸರ್ವೇ-ಸಮಸ್ತರಾದ, ರಜನೀಚರಾಶ್ಚ - ರಾಕ್ಷಸರೂ, ನಿಹಂತವ್ಯಾಃ - ಹೊಡೆಯಲ್ಪಡತಕ್ಕವರು, ಇತಿ - ಇಂತೆಂದು, ಹರಯಃ - ಕಪಿಗಳು, ಗರ್ಜಂತಿ - ಕೂಗುತ್ತಿದ್ದರು. ॥ ೩೦ ॥ ಪುರಸ್ತಾತ್ - ಮುಂದುಗಡೆಯಲ್ಲಿ, ವೀರಃ - ಶೂರನಾದ, ಋಷಭಃ - ಋಷಭನೂ, ನೀಲಃ - ನೀಲನು, ಕುಮುದಏವಚ - ಕುಮುದನೂ ಸಹಾ, ಬಹುಭಿಃ - ಅನೇಕರಾದ, ವಾನರೈಸ್ಸಹ - ಕಪಿಗಳೊಡನೆ, ಪಂಥಾನಂ - ಮಾರ್ಗವನ್ನು, ಶೋಧಯಂತಿಸ್ಮ - ಸರಿಮಾಡಿದರು. ॥ ೩೧ ॥ ಮಧ್ಯೇತು - ಮಧ್ಯಪ್ರದೇಶದಲ್ಲಿಯಾದರೆ, ರಾಜಾ - ಒಡೆಯನಾದ, ಸುಗ್ರೀವಃ - ಸುಗ್ರೀವನೂ, ರಾಮಃ - ಶ್ರೀರಾಮನು, ಲಕ್ಷ್ಮಣಏವಚ - ಲಕ್ಷ್ಮಣನೂ, ಬಹುಭಿಃ - ಅನೇಕರಾದ, ಭೀಮೈಃ - ಭಯಂಕರರಾದ, ಬಲಿಭಿಃ - ಬಲಿಷ್ಠರಾದ ವಾನರರಿಂದ, ವೃತಾಃ - ಸುತ್ತುವರೆಯಲ್ಪಟ್ಟವರಾಗಿ, ಶತ್ರುನಿಬರ್ಹಣಾಃ - ಶತ್ರುಸಂಹಾರವನ್ನಿಚ್ಛಿಸಿ, ಜಗ್ಮುಃ - ತೆರಳಿದರು. ॥೩೨॥ ವೀರಃ - ಶೂರನಾದ, ಶತವಲಿಃ - ಶತವಲಿಯೆಂಬ, ಹರಿಃ - ವಾನರನು, ದಶಭಿಃಕೋಟಿಭಿಃ - ಹತ್ತುಕೋಟಿಗಳಿಂದ, ವೃತಃ - ಸುತ್ತುವರೆಯಲ್ಪಟ್ಟವನಾಗಿ, ಏಕಃ - ಒಬ್ಬನೇ, ಸರ್ವಾಂ - ಸಮಸ್ತವಾದ,

ಕೆಳಕ್ಕೆ ಕೆಡಹುತ್ತಿದ್ದರು. ಹೀಗೆ ವಾನರವೀರರಿಂದ ಕೆಡುಹಲಾದವರು ಅವರನ್ನು ಆಕ್ಷೇಪಿಸುತ್ತಿದ್ದರು. ಇನ್ನು ಕೆಲವರು ಮತ್ತೆ ಕೆಲವರನ್ನು ಎತ್ತಿಹಾಕುತ್ತಿದ್ದರು. ಆ ಸಮಯದಲ್ಲಿ ವಾನರವೀರರೆಲ್ಲರೂ ಮಹೋತ್ಸಾಹಭರಿತರಾಗಿ, "ನಾವು ರಾವಣನನ್ನು ಕೊಲ್ಲಬೇಕು. ರಾಕ್ಷಸರೆಲ್ಲರನ್ನೂ ಧ್ವಂಸಮಾಡಬೇಕು" ಎಂದು ಹೇಳುತ್ತ ಶ್ರೀರಾಮನ ಬಳಿಯಲ್ಲಿಯೇ ಸಿಂಹನಾದಗಳನ್ನು ಮಾಡುತ್ತಿದ್ದರು. ॥ ೨೬-೩೦ ॥ ಆಗ ಮಹಾ ಪರಾಕ್ರಮಿಯಾದ ಋಷಭನೂ, ನೀಲನೂ, ಕುಮುದನೂ, ಅನೇಕ ವಾನರರೊಡಗೂಡಿದವರಾಗಿ ಕಪಿಸೇನೆಗಳಿಗೆ ಮುಂದಾಗಿಯೇ ಹೊರಟು ಮಾರ್ಗವನ್ನು ಶೋಧಿಸುತ್ತಿದ್ದರು. ಶತ್ರುಸಂಹಾರಕರಾದ, ಸುಗ್ರೀವ,ರಾಮಲಕ್ಷ್ಮಣರೂ, ಮಹಾಪರಾಕ್ರಮಶಾಲಿಗಳಾದ ಅನೇಕಮಂದಿ ವಾನರವೀರರು ಸುತ್ತುವರೆದು ಬರುತ್ತಿರಲು ಮಧ್ಯದಲ್ಲಿ ಹೋಗುತ್ತಿದ್ದರು. ಆಗ ಮಹಾ ಬಲಾಢ್ಯನಾದ ಶತವಲಿಯೆಂಬ ಕಪಿಯೂಥಪತಿಯು ಹತ್ತುಕೋಟಿ ವಾನರವೀರರೊಡಗೂಡಿ ಒಬ್ಬಂಟಿಗ

* "ಪತಂತಶ್ಚೋತ್ಪತಂತ್ಯನ್ಯೇ" ತಿ. ರಾ. ಪಾ.

ಕೋಟೀಶತಪರೀವಾರಃ ಕೇಸರೀ ಪನಸೋ ಗಜಃ । ಅರ್ಕ† ಶ್ಚಾತಿಬಲಃ ಪಾರ್ಶ್ವಮೇಕಂ ತಸ್ಯಾಭಿರಕ್ಷತಿ ॥ ೩೪ ॥ ಸುಷೇಣೋ ಜಾಂಬವಾಂಶ್ಚೈವ ಋಕ್ಷೈಶ್ಚ ಬಹುಭಿರ್ವೃತೌ । ಸುಗ್ರೀವಂ ಪುರತಃ ಕೃತ್ವಾ ಜಘನಂ ಸಂರರಕ್ಷತುಃ ॥ ೩೫ ॥ ತೇಷಾಂ ಸೇನಾಪತಿರ್ವೀರೋ ನೀಲೋ ವಾನರಪುಂಗವಃ । * ಸಂಪತನ್ಪತತಾಂ ಶ್ರೇಷ್ಠಸ್ತದ್ಬಲಂ ಪರ್ಯ‡ ಪಾಲಯತ್ ॥ ೩೬ ॥ ದರೀಮುಖಃ ಪ್ರಜಂಘಶ್ಚ ರಂಭೋಽಥ ರಭಸಃ ಕಪಿಃ । ಸರ್ವತಶ್ಚ ಯಯುರ್ವೀರಾಸ್ತ್ವರಯಂತಃ ಪ್ಲವಂಗಮಾನ್ ॥ ೩೭ ॥ ಏವಂ ತೇ ಹರಿಶಾರ್ದೂಲಾ ಗಚ್ಛಂತೋ ಬಲದರ್ಪಿತಾಃ । ಅಪಶ್ಯಂಸ್ತೇ ಗಿರಿಶ್ರೇಷ್ಠಂ ಸಹ್ಯಂ ದ್ರುಮ

ಹರಿವಾಹಿನೀಂ - ಕಪಿಸೇನೆಯನ್ನು, ಅವಷ್ಟಭ್ಯ - ಅಧಿಕರಿಸಿ, ರರಕ್ಷ - ಸಂರಕ್ಷಿಸಿದನು. ॥ ೩೩ ॥ ಕೋಟೀ....ರಃ - ನೂರುಕೋಟಿ ಕಪಿಗಳೇ ಪರಿವಾರವಾಗಿ ಉಳ್ಳ, ಕೇಸರೀ - ಕೇಸರೀ ಎಂಬುವನು, ಪನಸಃ - ಪನಸನು, ಗಜಃ - ಗಜನು, ಅತಿಬಲಃ - ಬಹು ಬಲಶಾಲಿಯಾದ, ಅರ್ಕಶ್ಚ - ಅರ್ಕನು, ತಸ್ಯಾಃ - ಆ ಸೇನೆಯ, ಏಕಂಪಾರ್ಶ್ವಂ - ಒಂದು ಪಕ್ಕವನ್ನು, ಅಭಿರಕ್ಷತಿ - ಸಂರಕ್ಷಿಸಿದರು. ॥೩೪॥ ಸುಷೇಣಃ - ಸುಷೇಣನು, ಜಾಂಬವಾಂಶ್ಚೈವ - ಜಾಂಬವಂತನೂ ಸಹ, ಬಹುಭಿಃ - ಅನೇಕರಾದ, ಋಕ್ಷೈಶ್ಚ - ಕರಡಿಗಳಿಂದಲೂ, ವೃತೌ - ಸುತ್ತುವರೆಯಲ್ಪಟ್ಟವರಾಗಿ, ಸುಗ್ರೀವಂ - ಸುಗ್ರೀವನನ್ನು, ಪುರತಃಕೃತ್ವಾ - ಮುಂದುಮಾಡಿಕೊಂಡು, ಜಘನಂ - ಸೈನ್ಯದ ಜಘನಪ್ರದೇಶವನ್ನು, ಸಂರಕ್ಷತುಃ - ಪಾಲಿಸಿದರು. ॥ ೩೫ ॥ ಪತತಾಂ - ಲಂಘಿಸುವರಲ್ಲಿ, ಶ್ರೇಷ್ಠಃ - ಉತ್ತಮನಾದ, ತೇಷಾಂ - ಆ ವಾನರರಿಗೆ, ಸೇನಾಪತಿಃ - ಸೇನಾನಾಯಕನಾದ, ವೀರಃ - ಶೂರನಾದ, ನೀಲಃ - ನೀಲನೆಂಬ, ವಾನರಪುಂಗವಃ - ವಾನರೋತ್ತಮನು, ಸಂಪತನ್ - ಮುಂದುವರಿಯುವವನಾಗಿ, ತದ್ಬಲಂ - ಆ ಸೇನೆಯನ್ನು, ಪರ್ಯಪಾಲಯತ್ - ಸಂರಕ್ಷಿಸಿದನು. ॥ ೩೬ ॥ ದರೀಮುಖಃ - ದರೀಮುಖನು, ಪ್ರಜಂಘಶ್ಚ - ಪ್ರಜಂಘನು, ರಂಭಃ - ರಂಭನು, ಅಥ - ಬಳಿಕ, ರಭಸಃ - ರಭಸನೆಂಬ, ಕಪಿಃ - ವಾನರನೂ, ವೀರಾಃ - ಶೂರರಾದ, ಏತೇ - ಈ ನಾಲ್ಕು ಮಂದಿಯೂ, ಪ್ಲವಂಗಮಾನ್ - ವಾನರರನ್ನು, ತ್ವರಯಂತಃ - ತ್ವರೆಗೊಳಿಸುವವರಾಗಿ, ಸರ್ವತಃ - ನಾಲ್ಕು ಕಡೆಗಳಲ್ಲಿಯೂ, ಯಯುಃ - ಹೊರಟರು. ॥೩೭॥ ಏವಂ- ಈ ರೀತಿಯಾಗಿ, ಬಲದರ್ಪಿತಾಃ-ಬಲದಿಂದ ಕೊಬ್ಬಿದ, ತೇಹರಿಶಾರ್ದೂಲಾಃ - ಆ ವಾನರೋತ್ತಮರು, ಗಚ್ಛಂತಃ - ಹೋಗುತ್ತ, ದ್ರುಮ....ತಂ - ವೃಕ್ಷಗಳಿಂದಲೂ, ಲತೆಗಳಿಂದಲೂ

ನಾಗಿಯೇ ಆ ವಾನರಸೇನೆಯೆಲ್ಲವನ್ನೂ ರಕ್ಷಿಸುತ್ತ ಹೋಗುತ್ತಿದ್ದನು. ಅರ್ಕನೂ, ಪನಸನೂ, ಗಜನೂ, ಕೇಸರಿಯೂ ಈ ನಾಲ್ವರಲ್ಲಿ ಪ್ರತಿಯೊಬ್ಬನೂ ನೂರುಕೋಟಿಗಳ ಸಂಖ್ಯೆಯುಳ್ಳ ವಾನರಸೇನೆಯೊಡಗೂಡಿ ಮಹಾ ವಾನರಸೇನೆಯ ಒಂದು ಭಾಗವನ್ನು ರಕ್ಷಿಸುತ್ತ ಹೊರಟರು. ಸುಷೇಣನೂ ಜಾಂಬವಂತನೂ ಅನೇಕಮಂದಿ ಋಕ್ಷವೀರರೊಡಗೂಡಿ ಸುಗ್ರೀವನನ್ನು ಮುಂದಿಟ್ಟುಕೊಂಡು ಆ ಮಹಾ ಸೇನೆಯ ಜಘನಭಾಗವನ್ನು ರಕ್ಷಿಸುತ್ತ ಹೊರಟರು. ಮಹಾ ಶೂರನಾದ ದಧಿಮುಖನೂ, ಪ್ರಜಂಘ, ರಂಭ, ರಭಸ ಎಂಬ ಈ ನಾಲ್ವರು ಕಪಿವೀರರು ವಾನರಸೇನೆಯಲ್ಲೆಲ್ಲಾ ಸಂಚರಿಸುತ್ತ ಅವರೆಲ್ಲರನ್ನೂ ತ್ವರೆಗೊಳಿಸುತ್ತ ನಡೆಯುತ್ತಿದ್ದರು. ॥ ೩೧–೩೭ ॥ ಈ ಪ್ರಕಾರವಾಗಿ ಆ ವಾನರವೀರರೆಲ್ಲರೂ ಮಹಾ ಬಲಗರ್ವಿತರಾಗಿ ಮುಂದುವರೆಯುತ್ತ, ವೃಕ್ಷಗಳಿಂದಲೂ, ಗುಲ್ಮಗಳಿಂದಲೂ, ಲತೆಗಳಿಂದಲೂ

† "ಶ್ಚಬಹುಭಿಃ" ತಿ. ಗಾ, * "ಸಂಯತಶ್ಚರತಾಂ" ತಿ. ಪಾ, ‡ "ವಾರಯತ್" ರಾ. ಪಾ,

ಲತಾಯುತಂ । ಸರಾಂಸಿಚ ಸುಫುಲ್ಲಾನಿ ತಟಾಕಾನಿ ¶ ವನಾನಿಚ ॥ ೩೮ ॥ ರಾಮಸ್ಯ ಶಾಸನಂ ಜ್ಞಾತ್ವಾ ಭೀಮಕೋಪಸ್ಯ ಭೀತವತ್ । ವರ್ಜಯನ್ನಗರಾಭ್ಯಾಶಾಂಸ್ತಥಾ ಜನಪದಾನಪಿ ॥ ೩೯ ॥ ಸಾಗರೌಘನಿಭಂ ಭೀಮಂ ತದ್ವಾನರಬಲಂ ಮಹತ್ । ₹ ಉತ್ಸಸರ್ಪ ಮಹಾಘೋಷಂ ಭೀಮಘೋಷಇವಾರ್ಣವಃ ॥೪೦॥ ತಸ್ಯ ದಾಶರಥೇಃ ಪಾರ್ಶ್ವೇ ಶೂರಾಸ್ತೇ ಕಪಿಕುಂಜರಾಃ । ತೂರ್ಣಮಾಪುಪ್ಲುವುಸ್ಸರ್ವೇ ಸದಶ್ವಾಇವ ಚೋದಿತಾಃ ॥ ೪೧ ॥ § ಕಪಿಭ್ಯಾಮೂಹ್ಯಮಾನೌ ತೌ ಶುಶುಭಾತೇ ನರೋತ್ತಮೌ ।

ಕೂಡಿರುವ, ಸಹ್ಯಂ - ಸಹ್ಯವೆಂಬ, ಗಿರಿಶ್ರೇಷ್ಠಂ - ಪರ್ವತೋತ್ತಮವನ್ನು, ಸುಫುಲ್ಲಾನಿ - ವಿಕಸಿತವಾದ, ಸರಾಂಸಿಚ - ಸರೋವರಗಳನ್ನೂ, ತಟಾಕಾನಿ - ಕೆರೆಗಳನ್ನೂ, ವನಾನಿಚ - ವನಗಳನ್ನೂ, ಅಪಶ್ಯನ್ - ಕಂಡರು. ॥ ೩೮ ॥ ಭೀಮಕೋಪಸ್ಯ - ಭಯಂಕರ ಕೋಪವುಳ್ಳ, ರಾಮಸ್ಯ - ಶ್ರೀರಾಮನ, ಶಾಸನಂ - ಆಜ್ಞೆಯನ್ನು, ಜ್ಞಾತ್ವಾ - ತಿಳಿದು, ಭೀತವತ್ - ಭಯಗೊಂಡದ್ದಾಗಿ, ನಗರಾಭ್ಯಾಶಾನ್ - ಪಟ್ಟಣದ ಸಮೀಪಪ್ರದೇಶಗಳನ್ನೂ, ತಥಾ - ಹಾಗೆಯೇ, ಜನಪದಾನಪಿ - ದೇಶಗಳನ್ನೂ, ವರ್ಜಯನ್ - ಬಿಡುವದಾಗಿ, ಸಾಗ....ಭಂ - ಸಮುದ್ರಪ್ರವಾಹಕ್ಕೆ ಸಮಾನವಾದ, ಭೀಮಂ - ಭಯಂಕರವಾದ, ಮಹತ್ - ಬಹಳವಾದ, ತದ್ವಾನರಬಲಂ - ಆ ಕಪಿಸೈನ್ಯವು, ಭೀಮಘೋಷಃ - ಭಯಂಕರ ಶಬ್ದವುಳ್ಳ, ಅರ್ಣವಇವ - ಕಡಲಿನಂತೆ, ಮಹಾಘೋಷಂ - ಮಹಾ ಶಬ್ದವುಳ್ಳದಾಗಿ, ಉತ್ಸಸರ್ಪ - ಹೊರಟಿತು. ॥ ೩೯-೪೦ ॥ ತಸ್ಯದಾಶರಥೇಃ - ಆ ಶ್ರೀರಾಮನ, ಪಾರ್ಶ್ವೇ - ಪಾರ್ಶ್ವಭಾಗದಲ್ಲಿ, ಶೂರಾಃ-ವೀರರಾದ, ಸರ್ವೇ-ಸಮಸ್ತರಾದ, ತೇಕಪಿಕುಂಜರಾಃ - ಆ ವಾನರಶ್ರೇಷ್ಠರು, ಚೋದಿತಾಃ - ಪ್ರೇರೇಪಿಸಲ್ಪಟ್ಟ, ಸದಶ್ವಾಇವ - ಜಾತ್ಯಶ್ವಗಳಂತೆ, ತೂರ್ಣಂ - ಜಾಗ್ರತೆಯಾಗಿ, ಆಪುಪ್ಲುವುಃ - ಹಾರಿಬಂದರು. ॥ ೪೧ ॥ ಕಪಿಭ್ಯಾಂ - ಕಪಿಗಳಾದ ಆಂಜನೇಯಾಂಗದರೀರ್ವರಿಂದ, ಊಹ್ಯಮಾನೌ -

ಕೂಡಿ ಸೊಗಸುತ್ತಿರುವ, ಪರ್ವತಶ್ರೇಷ್ಠವಾದ ಸಹ್ಯಪರ್ವತ ಮಾರ್ಗದಲ್ಲಿ ಎರಡೂ ಕಡೆಗಳಲ್ಲಿ ಚೆನ್ನಾಗಿ ಹೂಮೊಳೆತಿರುವ ವೃಕ್ಷಗಳಿಂದಲೂ, ಕಮಲಪುಷ್ಪಗಳಿಂದಲೂ ವಿರಾಜಿಸುತ್ತಿರುವ ಸರೋವರಗಳನ್ನೂ, ತಟಾಕಗಳನ್ನೂ, ಚೆನ್ನಾಗಿ ಕುಸುಮಿಸಿರುವ ಉಪವನಗಳನ್ನೂನೋಡುತ್ತ ಮುಂದುಮುಂದಕ್ಕೆ ನಡೆದರು. ಸಮುದ್ರಜಲದಂತೆ ವಿಶಾಲವಾದುದೂ, ಮಹಾ ಭಯಂಕರವಾದುದೂ, ಬಹು ದೊಡ್ಡದೂ ಆದ ಆ ವಾನರಸೇನೆಯು ಅತ್ಯುಗ್ರಶಾಸನನಾದ ಶ್ರೀರಾಮಮೂರ್ತಿಯ ಭಯದಿಂದ ಪಟ್ಟಣಗಳ ಮೇಲಾಗಲಿ, ಊರುಗಳ ಮೇಲಾಗಲಿ ಬೀಳದೆ ಸಮುದ್ರಘೋಷದಂತೆ ಮಹಾ ನಾದವನ್ನುಮಾಡುತ್ತ ಹೋಗುತ್ತಿದ್ದಿತು. ॥೩೮-೪೦॥ ಆ ಸಮಯದಲ್ಲಿ ಮಹಾ ಶೂರರಾದ ಆ ವಾನರರೆಲ್ಲರೂ ಶ್ರೀರಾಮನಿಗೆ ಉತ್ಸಾಹವನ್ನುಂಟುಮಾಡುವದಕ್ಕೋಸುಗ ಆತನ ಪಾರ್ಶ್ವಗಳಲ್ಲಿ ತುರುಬಲ್ಪಡುವ ಜಾತ್ಯಶ್ವಗಳಂತೆ ಅತಿ ವೇಗವಾಗಿ ಹಾರಿಹೋಗುತ್ತಿದ್ದರು. ಆಗ ಪುರುಷೋತ್ತಮರಾದ ಶ್ರೀರಾಮಲಕ್ಷ್ಮಣರು ಹನುಮಂತನ ಮೇಲೆಯೂ,

¶ "ವರಾಣಿ" ರಾ. ಪಾ. ₹ "ನಿಸ್ಸಸರ್ಪಮಹಾಘೋರಂ" ತಿ. ಪಾ.

§ ಇಲ್ಲಿಯು ಉಪಮಾನ ಬಲದಿಂದ ಈ ಅರ್ಥವು ಗ್ರಾಹ್ಯವು. (ಶುಕ್ರ ಬೃಹಸ್ಪತಿಗಳಿಂದ ಸಂಸ್ಪೃಷ್ಟರಾದ ಚಂದ್ರಸೂರ್ಯರಂತೆ, ಹನುಮದಂಗದರ ಹೆಗಲುಗಳನ್ನೇರಿ ಕುಳಿತಿದ್ದ ರಾಮಲಕ್ಷ್ಮಣರು ಶೋಭಿಸುತ್ತಿದ್ದರು.) ಇದರಿಂದ ಚತುರ್ಗ್ರಹ ಸಂಯೋಗವು ಸೂಚಿತವಾಗಿ ಶತ್ರುಪಕ್ಷದಲ್ಲಿ ಬಹು ಜನ ನಾಶವಾಗುವುದೆಂದು ದ್ಯೋತಿತವಾಗುವುದು,

ಮಹದ್ಭ್ಯಾಮಿವ ಸಂಸ್ಪೃಷ್ಟೌ ಗ್ರಹಾಭ್ಯಾಂ ಚಂದ್ರಭಾಸ್ಕರೌ || ೪೨ || ತತೋ
ವಾನರರಾಜೇನ ಲಕ್ಷ್ಮಣೇನ* ಚ ಪೂಜಿತಃ | ಜಗಾಮ ರಾಮೋ ಧರ್ಮಾತ್ಮಾ ಸಸೈನ್ಯೋ
ದಕ್ಷಿಣಾಂ ದಿಶಂ || ೪೩ || ತಮಂಗದಗತೋ ರಾಮಂ ಲಕ್ಷ್ಮಣಶ್ಶುಭಯಾ ಗಿರಾ |
ಉವಾಚ ಪರಿಪೂರ್ಣಾರ್ಥಃ ಸ್ಮೃತಿಮಾನ್ಪ್ರತಿಭಾನವಾನ್ || ೪೪ || "ಹೃತಾ
ಮವಾಪ್ಯ ವೈದೇಹೀಂ ಕ್ಷಿಪ್ರಂ ಹತ್ವಾಚ ರಾವಣಂ | ಸಮೃದ್ಧಾರ್ಥಸ್ಸಮೃದ್ಧಾರ್ಥಾಮ
ಯೋಧ್ಯಾಂ ಪ್ರತಿಯಾಸ್ಯಸಿ || ೪೫ || ಮಹಾಂತಿಚ ನಿಮಿತ್ತಾನಿ ದಿವಿ ಭೂಮೌಚ

---

ಹೊರಲ್ಪಟ್ಟ, ತೌನರೋತ್ತಮೌ - ಆ ಪುರುಷಶ್ರೇಷ್ಠರು, ಗ್ರಹಾಭ್ಯಾಂ - ಶುಕ್ರಬೃಹಸ್ಪತಿಗಳಿಂದ, ಸಂಸ್ಪೃಷ್ಟೌ - ಕೂಡಿರುವ, ಚಂದ್ರ....ವ - ಚಂದ್ರಸೂರ್ಯರಂತೆ, ಶುಶುಭಾತೇ - ಹೊಳೆಯುತ್ತಿದ್ದರು. || ೪೨ || ತತಃ - ಬಳಿಕ, ವಾನರರಾಜೇನ - ಸುಗ್ರೀವನಿಂದಲೂ, ಲಕ್ಷ್ಮಣೇನ - ಲಕ್ಷ್ಮಣನಿಂದಲೂ, ಅಭಿಪೂಜಿತಃ - ಪೂಜಿಸಲ್ಪಟ್ಟ, ಧರ್ಮಾತ್ಮಾ - ಧರ್ಮಿಷ್ಠನಾದ, ರಾಮಃ - ಶ್ರೀರಾಮನು, ಸಸೈನ್ಯಸ್ಸ - ಸೇನೆಯಿಂದ ಯುಕ್ತನಾಗಿ, ದಕ್ಷಿಣಾಂದಿಶಂ - ದಕ್ಷಿಣದಿಕ್ಕಿನಲ್ಲಿ, ಜಗಾಮ - ತೆರಳಿದನು. || ೪೩ || ಅಂಗದಗತಃ - ಅಂಗದನನ್ನೇರಿದ, ಲಕ್ಷ್ಮಣಃ - ಲಕ್ಷ್ಮಣನು, ಪರಿ....ರ್ಥಃ - ಸಂಪೂರ್ಣವಾದ ಮನೋರಥವುಳ್ಳವನಾದಕಾರಣ, ಸ್ಮೃತಿಮಾನ್ - ಶಕುನಗಳ ಅರ್ಥಗಳನ್ನು ತಿಳಿವವನಾಗಿಯೂ, ಪ್ರತಿಭಾನವಾನ್ - ತಾತ್ಕಾಲಿಕ ಬುದ್ಧಿಸ್ಫುರಣೆಯುಳ್ಳವನಾದಕಾರಣ, ತಂರಾಮಂ - ಆ ಶ್ರೀರಾಮನನ್ನು ಕುರಿತು, ಶುಭಯಾ - ಶುಭಕರವಾದ, ಗಿರಾ - ಮಾತಿನಿಂದ, ಉವಾಚ - ಹೇಳಿದನು. || ೪೪ || ರಾವಣಂ - ರಾವಣಾಸುರನನ್ನು, ಕ್ಷಿಪ್ರಂ - ಜಾಗ್ರತೆಯಾಗಿ, ಹತ್ವಾ - ಕೊಂದು, ಹೃತಾಂ - ಅಪಹರಿಸಲ್ಪಟ್ಟ, ವೈದೇಹೀಂ - ಸೀತಾದೇವಿಯನ್ನು, ಅವಾಪ್ಯ - ಹೊಂದಿ, ಸಮೃದ್ಧಾರ್ಥಃ - ಸಂಪೂರ್ಣ ಮನೋರಥವುಳ್ಳವನಾಗಿ, ಸಮೃದ್ಧಾರ್ಥಾಂ - ಸಮಸ್ತ ವಸ್ತುಗಳಿಂದ ಸಂಪೂರ್ಣವಾದ, ಅಯೋಧ್ಯಾಂ - ಅಯೋಧ್ಯಾಪಟ್ಟಣವನ್ನು ಕುರಿತು, ಯಾಸ್ಯಸಿ - ಹೋಗುತ್ತೀಯೆ. || ೪೫ || ಹೇ ರಾಘವ - ಎಲೈ ಶ್ರೀರಾಮನೇ, ದಿವಿಭೂಮೌಚ - ಅಂತರಿಕ್ಷದಲ್ಲಿಯೂ, ಭೂಮಿಯಲ್ಲಿಯೂ, ತವ - ನಿನಗೆ, ಅರ್ಥಸಿದ್ಧಯೇ - ಕಾರ್ಯಸಿದ್ಧಿಗಾಗಿ, ಸರ್ವಾಣಿ - ಸಮಸ್ತಗಳಾದ, ಮಹಾಂತಿಚ

---

ಅಂಗದನ ಮೇಲೆಯೂ ಕುಳಿತವರಾಗಿ ಬೃಹಸ್ಪತಿ ಶುಕ್ರರೊಡಗೂಡಿದ ಚಂದ್ರಸೂರ್ಯರಂತೆ ಒಪ್ಪುತ್ತಿದ್ದರು. ಧರ್ಮಾತ್ಮನಾದ ಶ್ರೀರಾಮನು ವಾನರೇಶ್ವರನಾದ ಸುಗ್ರೀವನಿಂದಲೂ, ಲಕ್ಷ್ಮಣಸ್ವಾಮಿಯಿಂದಲೂ ಸತ್ಕೃತನೂ ಸೇನಾಸಮೇತನೂ ಆಗಿ ದಕ್ಷಿಣದಿಕ್ಕನ್ನು ಕುರಿತು ಪ್ರಯಾಣ ಮಾಡುತ್ತಿದ್ದನು. ಆಗ ಸ್ಮೃತಿಮಂತನೂ, ಮಹಾ ಪ್ರಾಜ್ಞನೂ, ಅಂಗದನ ಮೇಲೆ ಕುಳಿತಿರುವವನೂ ಆದ ಲಕ್ಷ್ಮಣಸ್ವಾಮಿಯು ಪರಿಪೂರ್ಣ ಮನೋರಥನಾದ ಶ್ರೀರಾಮಮೂರ್ತಿಯನ್ನು ನೋಡಿ ಶುಭವಾಕ್ಯಗಳಿಂದ, "ಅಣ್ಣಾ ರಾಮಚಂದ್ರ ! ನೀನು ಅತಿ ಶೀಘ್ರವಾಗಿಯೇ ಸೀತಾದೇವಿಯನ್ನಪಹರಿಸಿದ ದುರುಳ ರಾವಣನನ್ನು ಸಂಹರಿಸಿ ಸೀತಾದೇವಿಯನ್ನು ಕರೆದುಕೊಂಡು ಸರ್ವಸಮೃದ್ಧವಾದ ಅಯೋಧ್ಯಾಪಟ್ಟಣಕ್ಕೆ ಹೊರಡುವೆ. ||೪೧-೪೫|| ರಾಮಾ ! ಆಕಾಶದಲ್ಲಿಯೂ, ಭೂಮಿಯಲ್ಲಿಯೂ ಈಗ ನಾನು ಅಮೋಘವಾದ ಶುಭಸೂಚನೆಗಳನ್ನು ಕಾಣುತ್ತಿರುವೆನು. ಈ ಶುಭನಿಮಿತ್ತಗಳೆಲ್ಲವೂ ಕಾರ್ಯಸಿದ್ಧಿಯನ್ನು ಸೂಚಿಸು

---

* "ಸು" ಮು. ಪಾ.

ರಾಘವ! । ಶುಭಾನಿ ತವ ಪಶ್ಯಾಮಿ ಸರ್ವಾಣ್ಯೇವಾರ್ಥಸಿದ್ಧಯೇ ॥ ೪೬ ॥ ಅನು ವಾತಿ ಶುಭೋ ವಾಯುಸ್ಸೇನಾಂ ಮೃದುಹಿತಸ್ಸುಖಃ । ಪೂರ್ಣವಲ್ಗುಸ್ವರಾಶ್ಚೇಮೇ ಪ್ರವದಂತಿ ಮೃಗದ್ವಿಜಾಃ ॥೪೭॥ † ಪ್ರಸನ್ನಾಶ್ಚ ದಿಶಸ್ಸರ್ವಾ ವಿಮಲಶ್ಚ ದಿವಾಕರಃ । ಉಶನಾಶ್ಚ ಪ್ರಸನ್ನಾರ್ಚಿರನುತ್ವಾಂ ಭಾರ್ಗವೋಗತಃ ॥೪೮॥ ಬ್ರಹ್ಮರಾಶಿರ್ವಿಶುದ್ಧಶ್ಚ

ನಿಮಿತ್ತಾನಿ - ಬಹಳವಾದ ಶಕುನಗಳನ್ನು, ಶುಭಾನ್ಯೇವ - ಶುಭಕರಗಳನ್ನಾಗಿಯೇ, ಪಶ್ಯಾಮಿ - ಕಾಣುತ್ತೇನೆ. ॥ ೪೬ ॥ ಮೃದುಹಿತಃ - ಮೃದುವಾಗಿಯೂ, ಹಿತಕರವಾಗಿಯೂ, ಸುಖಃ - ಸುಖಕರವಾಗಿಯೂ, ಶುಭಃ - ಶುಭಕರವಾಗಿಯೂ ಇರುವ, ವಾಯುಃ - ವಾಯುವು, ಸೇನಾಂ - ಸೈನ್ಯವನ್ನು, ಅನುವಾತಿ - ಅನುಸರಿಸಿ ಬೀಸುತ್ತದೆ, ಪೂರ್ಣ....ರಾಃ - ಸಂಪೂರ್ಣವಾಗಿಯೂ, ವ್ಯಕ್ತವಾಗಿಯೂ ಇರುವ ಸ್ವರಗಳುಳ್ಳ, ಇಮೇಮೃಗದ್ವಿಜಾಶ್ಚ - ಈ ಮೃಗಗಳೂ, ಹಕ್ಕಿಗಳೂ, ಶುಭಾನಿ - ಶುಭಗಳನ್ನೇ, ಪ್ರವದಂತಿ - ಹೇಳುತ್ತವೆ. ॥ ೪೭ ॥ ಸರ್ವಾಃದಿಶಶ್ಚ - ಸಮಸ್ತ ದಿಕ್ಕುಗಳೂ, ಪ್ರಸನ್ನಾಃ - ನಿರ್ಮಲಗಳಾಗಿವೆ, ದಿವಾಕರಃ - ಸೂರ್ಯನು, ವಿಮಲಶ್ಚ - ನಿರ್ಮಲನಾಗಿದ್ದಾನೆ, ಭಾರ್ಗವಃ - ಭೃಗುವಂಶೋತ್ಪನ್ನನಾದ, ಬ್ರಹ್ಮರಾಶಿಃ - ವೇದಗಳಿಗೆ ರಾಶಿಭೂತನಾದ, ಉಶನಾಶ್ಚ - ಶುಕ್ರನು, ಪ್ರಸನ್ನಾರ್ಚಿಃ - ನಿರ್ಮಲವಾದ ತೇಜಸ್ಸುಳ್ಳವನಾಗಿ, ವಿಶುದ್ಧಃ - ಪರಿಶುದ್ಧನಾಗಿ, (ಪಾಪಗ್ರಹಯೋಗವಿಲ್ಲದವನಾಗಿ)

ತ್ತಿರುವುವು. ವಾಯುವು ಬಹು ಹಿತವಾಗಿಯೂ, ಮಂಗಳಕರವಾಗಿಯೂ, ಸುಖಕರವಾಗಿಯೂ, ಮೃದುವಾಗಿಯೂ, ಸೇನೆಗೆದುರಾಗದೆ ಬೀಸುತ್ತಿರುವುದು. ಮೃಗಗಳೂ, ಪಕ್ಷಿಗಳೂ, ಮೃದುಮಧುರ ಧ್ವನಿಯಿಂದ ಕೂಗುತ್ತಿರುವುವು. ಸೂರ್ಯನಾದರೂ ಬಹು ಶುಭ್ರವಾಗಿ ಪ್ರಕಾಶಿಸುತ್ತಿರುವನು. ವೇದವೇತ್ತನೂ, ಮಹಾ ಪರಿಶುದ್ಧನೂ, ಭೃಗುಕುಮಾರನೂ ಆದ ಶುಕ್ರನು ಸುಪ್ರಸನ್ನವಾದ ಕಾಂತಿಯಿಂದ ನಿನ್ನನ್ನೇ ಹಿಂಬಾಲಿಸಿ ಬೆಳಗು

† ಭೂಸಂಬಂಧವಾದ ಶುಭ ನಿಮಿತ್ತಗಳನ್ನು ಹೇಳಿ ಇದೀಗ ದಿವ್ಯ ನಿಮಿತ್ತಗಳನ್ನು ನಿರೂಪಿಸುವನು.

"ಭಾರ್ಗವೋ ತ್ವಾಮನುಗತಃ" ಎಂಬ ಕಡೆ ಶುಕ್ರನು ನಿನ್ನನ್ನು ಹಿಂಬಾಲಿಸಿರುವನು ಎಂದರ್ಥ. ಯಾತ್ರಾದಿಗಳಲ್ಲಿ ಶುಕ್ರನು ಮುಂದಿರುವುದು ನಿಷೇಧಕರವಾದುದು. ಜ್ಯೌತಿಷದಲ್ಲಿ, "ಪ್ರತಿಶುಕ್ರಂ ಪ್ರತಿಬುಧಂ ಪ್ರತಿಭೌಮಂ ಗತೋನೃಪಃ । ಅಪಿಶಕ್ರೇಣ ಸದೃಶೋ ಹತಸ್ಸೈನ್ಯೋ ಭವಿಷ್ಯತಿ ॥" ಎಂದಿದೆ. "ಉಶನಾಶ್ಚ ಪ್ರಸನ್ನಾರ್ಚಿರನುತ್ವಾಂ ಭಾರ್ಗವೋಗತಃ" ಎಂಬುದರಿಂದ, ಆದಿಕವಿಯು ಅವತಾರ ಕಾಲದಲ್ಲಿ ಜಾತಕಫಲ ಸೂಚಕವಾಗಿ ಶ್ರೀರಾಮನಿಗೆ ಅನುಕೂಲವಾದ ಗೋಚಾರಫಲವನ್ನೂ, ರಾಕ್ಷಸರಿಗೆ ವಿನಾಶಫಲವನ್ನೂ ತೋರುವನು. ಅದನ್ನು ಇಲ್ಲಿ ಸಂಕ್ಷೇಪವಾಗಿ ಕೊಡಲಾಗಿದೆ.

ಕಿಷ್ಕಿಂಧೆಗೆ ಆಗ್ನೇಯದಿಕ್ಕಿನಲ್ಲಿರುವ ಲಂಕೆಯನ್ನು ಕುರಿತು ಜೈತ್ರಯಾತ್ರಾರ್ಥವಾಗಿ ಪಯಣಿಸಿರುವ ಶ್ರೀರಾಮಮೂರ್ತಿಗೆ ಶುಕ್ರನು ಅನುಕೂಲನಾಗಿದ್ದನು. ಸೂರ್ಯಸ್ಥ ರಾಶಿಯುಳ್ಳ ಜಾತಕಕ್ಕೆ ಶುಕ್ರನು ಪುರೋರಾಶಿಸ್ಥನಾಗಿರುತ್ತಾನೆಯಷ್ಟೆ. ಆಗ ಸೂರ್ಯನು ಮೀನರಾಶಿಯಲ್ಲಿರುತ್ತಾನೆ. ಇಂದು ಉತ್ತರಾಫಲ್ಗುನೀ ನಕ್ಷತ್ರವೆಂದು ಪ್ರಯಾಣ ದಿನವನ್ನು ನಿರ್ದೇಶ ಮಾಡಿರುವುದರಿಂದ ಫಾಲ್ಗುನ ಪೌರ್ಣಮಾಸಿಯೇ ಶ್ರೀರಾಮಚಂದ್ರನ ಯುದ್ಧಪ್ರಯಾಣ ದಿನವೆಂದ ಹಾಗಾಯಿತು. ಆಗ ಶುಕ್ರನು ಮೇಷದಲ್ಲಿರುವನು. ಆದುದರಿಂದ ಕಟಕರಾಶಿಯವನಾದ ಶ್ರೀರಾಮನಿಗೆ ಮೇಷವು ದಶಮವಾಗಿ ಅನುಕೂಲವಾಗಿರುವುದು. ಹಿಂದೆ ಹೇಳಿದಂತೆ ಆಗ್ನೇಯದಿಕ್ಕಿನಲ್ಲಿರುವ ಲಂಕೆಗೆ ಪಯಣಿಸಿರುವ ಶ್ರೀರಾಮನಿಗೆ ಶುಕ್ರನು ಹಿಂಭಾಗದಲ್ಲಿದ್ದನೆಂದು ಹೇಳಿರುವುದರಿಂದ ಅವನೂ ಅನುಕೂಲನಾಗಿಯೇ ಇರುವನೆಂದ ಹಾಗಾಯಿತು. ಇಲ್ಲಿ ಶುಕ್ರನು ಅನುಕೂಲನಾಗಿದ್ದನೆಂದು ಹೇಳಿರುವುದು ಬೃಹಸ್ಪತಿಯೇ ಮೊದಲಾದ ಗ್ರಹಗಳೆಲ್ಲವೂ ಅನುಕೂಲಗಳಾಗಿಯೇ ಇದ್ದುವೆಂದು ಹೇಳುವುದಕ್ಕೆ ಉಪಲಕ್ಷಣ. ಅವತಾರ ಕಾಲದಲ್ಲಿ ಶುಕ್ರನು ಕರ್ಕಟಕದಲ್ಲಿದ್ದುದರಿಂದ ಯುದ್ಧಯಾತ್ರಾ ಕಾಲವು, ಶ್ರೀರಾಮನ ಮೂವತ್ತೆಂಟನೆಯ ವರ್ಷದಲ್ಲೆಂದು ಸಿದ್ಧಾಂತವಾಗುವುದು. ಹಾಗೂ ತ್ರಿರಾವೃತ್ತ್ಯಾ ಮೂವ

**ಶುದ್ಧಾಶ್ಚ ಪರಮರ್ಷಯಃ । ಅರ್ಚಿಷ್ಮಂತಃ ಪ್ರಕಾಶಂತೇ ಧ್ರುವಂ ಸರ್ವೇ ಪ್ರದಕ್ಷಿಣಂ ॥೪೯॥ ‡ ತ್ರಿಶಂಕುರ್ವಿಮಲೋ ಭಾತಿ ರಾಜರ್ಷಿಸ್ಸಪುರೋಹಿತಃ । ಪಿತಾಮಹ**

ತ್ವಾಂ - ನಿನ್ನನ್ನು, ಅನುಗತಃ - ಅನುಸರಿಸಿ ಬರುತ್ತಾನೆ, ಪರಮರ್ಷಯಃ - ಶ್ರೇಷ್ಠರಾದ ಸಪ್ತರ್ಷಿಗಳು, ಶುದ್ಧಾಶ್ಚ - ನಿರ್ಮಲರಾಗಿ, ಅರ್ಚಿಷ್ಮಂತಃ - ತೇಜೋವಂತರಾಗಿಯೂ, ಸರ್ವೇ - ಸಮಸ್ತರೂ, ಧ್ರುವಂ - ಧ್ರುವನಕ್ಷತ್ರಕ್ಕೆ, ಪ್ರದಕ್ಷಿಣಂ - ಪ್ರದಕ್ಷಿಣಾಕಾರವಾಗಿ, ಪ್ರಕಾಶಂತೇ - ಹೊಳೆಯು

ತ್ತಿರುವನು. ಇಷ್ಟೆಯಲ್ಲದೆ, ಪರಿಶುದ್ಧರೂ ಕಾಂತಿಮಂತರೂ ಆದ ಮಹರ್ಷಿಗಳು ಧ್ರುವನಿಗೆ ಪ್ರದಕ್ಷಿಣವಾಗಿ ಬೆಳಗುತ್ತಿರುವರು. ಅಣ್ಣಾ ರಾಮಮೂರ್ತಿಯೇ! ಮಹಾತ್ಮ್ಯವುಳ್ಳ

ತ್ತಾರು ವರ್ಷಗಳು ಕಳೆಯಲು ಶ್ರೀರಾಮನ ಮೂವತ್ತೆಂಟನೆಯ ವರ್ಷದಲ್ಲಿ ಅಂದರೆ ಯುದ್ಧಾರಂಭ ಕಾಲದಲ್ಲಿ ಗುರುವು ಸಿಂಹದಲ್ಲಿದ್ದನೆಂದು ಸಿದ್ಧವಾಗುವುದು. ಗುರು ದ್ವಿತೀಯತೆಯು ಶ್ರೀರಾಮನಿಗೆ ಅನುಕೂಲವಾದುದೇ ಸರಿ. ಅವತಾರ ಕಾಲದಲ್ಲಿ ಶನಿಗ್ರಹವು ತುಲಾವರ್ಗದಲ್ಲಿದ್ದು ಅನುಕೂಲನಾಗಿಯೇ ಇದ್ದನು. ದ್ವಿತೀಯಾವೃತ್ತಿಯಲ್ಲಿ ತುಲಾವೃಶ್ಚಿಕಗಳೆರಡರಲ್ಲಿಯೂ ಐದು ವರ್ಷಗಳು ಕಳೆದು ಎರಡೂವರೆ ವರ್ಷಗಳಾದಮೇಲೆ ಶನಿಯು ಧನೂರಾಶಿಯನ್ನು ದಾಟಿ ಆಗ ಮಕರಸ್ಥಿತಿಯೋಗ್ಯನಾಗಿದ್ದರೂ ಹಾಗೂ ಹೀಗೂ ಧನುರ್ವರ್ಗೋತ್ತಮಸ್ಥನಾಗಿಯೇ ಇದ್ದುದಾಗಿ ತಿಳಿಯಬೇಕು. ರಾಹುವಾದರೋ ಅವತಾರ ಕಾಲದಲ್ಲಿ ಸಿಂಹಸ್ಥನಾಗಿಯೇ ಇದ್ದನು. ಆಮೇಲೆ ಈ ಮೂವತ್ತೆಂಟನೆಯ ವರ್ಷದಲ್ಲಿ ಕರ್ಕಟಕ ಸ್ಥಿತಿಯೋಗ್ಯನಾದರೂ ಅತಿಚಾರಾದಿಗಳಿಂದ ಮಿಥುನಸ್ಥನಾಗಿರುವನು. ಆದುದರಿಂದ ಕೇತುವು ಧನುಸ್ಸಿನಲ್ಲಿರುವನು. ಜ್ಯೌತಿಷದಲ್ಲಿ, "ಮೂಲೋ ಮೂಲವತಾಸ್ಪೃಷ್ಟೋ ಧೂಪ್ಯತೇ ಧೂಮಕೇತುನಾ" ಎಂದು ಹೇಳಿದೆ. "ಧೂಮಾಕಾರಃ ಧೂಮಕೇತುಃ" ತಥಾಚ ಧನುಸ್ಸಿನಲ್ಲಿರುವ ಶನಿಕೇತುಗಳು ಶ್ರೀರಾಮನಿಗೆ ಆರನೆಯ ಕಡೆಯಲ್ಲಿದ್ದು ಅನುಕೂಲರಾಗಿಯೇ ಇರುವರು. ರಾಮರಾವಣ ಯುದ್ಧಪ್ರಸಂಗದಲ್ಲಿ ಅಂಗಾರಕಗ್ರಹವು, "ಆಕ್ರಮ್ಯಾಂಗಾರಕಸ್ತಸ್ಥೌ ವಿಶಾಖೇ ಅಪಿಚಾಂಬರೇ" ಎಂದು ಹೇಳಿರುವುದರಿಂದ ವಿಶಾಖೆಯ ಚತುರ್ಥಪಾದದಲ್ಲಿ ವೃಶ್ಚಿಕರಾಶಿಯಲ್ಲಿರುವುದು. ಶ್ರೀರಾಮನಿಗೆ ಐದನೆಯ ಕಡೆಯಲ್ಲಿ ಅಂಗಾರಕನಿರುವುದರ ಫಲವಿದು—ಬ್ರಹ್ಮಾಸ್ತ್ರಬಂಧ ರುಧಿರಮೋಹಾದಿ, ಬುಧನ ಯೋಗವು ಪ್ರತಿಮಾಸದಲ್ಲಿಯೂ ರೋಹಿಣೀಸ್ಥತ್ವಯೋಗವಾದರೂ, ರಾಮರಾವಣ ಯುದ್ಧಪ್ರಸಂಗದಲ್ಲಿ, "ಪ್ರಾಜಾಪತ್ಯಂಚ ನಕ್ಷತ್ರಂ ರೋಹಿಣೀಂ ಶಶಿನಃ ಪ್ರಿಯಾಂ । ಸಮಾಕ್ರಮ್ಯ ಬುಧಸ್ತಸ್ಥೌ ಪ್ರಜಾನಾಮ ಶುಭಾವಹಃ ॥" ಎಂದಿರುವುದರಿಂದ ಪ್ರಜೆಗಳಿಗೆ ಅವನು ಅತಿಚಾರ ವಶದಿಂದ ಅಶುಭ ಫಲಪ್ರದನಾಗಿದ್ದನು. ಆಗ ಬುಧನು ಶ್ರೀರಾಮನಿಗೆ ದಶಮಸ್ಥನಾಗಿದ್ದುದರಿಂದ ಅನುಕೂಲನೇ. ಚಂದ್ರನಾದರೋ ಉತ್ತರಾಫಲ್ಗುನಿಯಲ್ಲಿದ್ದುದಾಗಿ ಹೇಳಿರುವುದರಿಂದ ಕನ್ಯಾರಾಶಿಗತನಾಗಿರುವನು. ಆದುದರಿಂದ ತೃತೀಯ ಚಂದ್ರನು ಶ್ರೀರಾಮನಿಗೆ ಅನುಕೂಲನಾಗಿಯೇ ಇರುವನು. ನವಮಸ್ಥನಾದ ಸೂರ್ಯನೂ ಅನುಕೂಲನೇ. ರಾಹುವಾದರೋ ಮಿಥುನದಲ್ಲಿರುವುದರಿಂದ ದ್ವಾದಶಸ್ಥನಾಗುವನು. ಇದರಿಂದ ಸ್ವಲ್ಪ ಬಾಧಕನೇ. ಹೀಗೆ ಶ್ರೀರಾಮಮೂರ್ತಿಯ ದಂಡಯಾತ್ರಾಕಾಲದ ಗ್ರಹಗತಿಗಳ ರೀತಿಗಳು ಉಕ್ತವಾಗಿರುವುವು.

ಈ ಗ್ರಹಗತಿಗಳೆಲ್ಲವೂ ರಾಕ್ಷಸರಿಗೆ ವಿಪರೀತ ಫಲಗಳನ್ನುಂಟುಮಾಡುವವುಗಳೆಂದು ಸ್ಥೂಲವಾಗಿ ಪ್ರದರ್ಶಿಸುವೆವು. ರಾಕ್ಷಸರಿಗೆ ನಕ್ಷತ್ರ - ಮೂಲ ; ರಾಶಿ - ಧನುಸ್ಸು ; ತದಪೇಕ್ಷಯಾ ಪಂಚಮಸ್ಥನಾದ ಶುಕ್ರನು ಪ್ರತಿಕೂಲನು. ಜನ್ಮರಾಶಿಯಲ್ಲಿರುವ ಶನಿಕೇತುಗಳೂ ಪ್ರತಿಕೂಲರೇ. ರಾಹುವಾದರೋ ಸಪ್ತಮದಲ್ಲಿರುವನು. ಆದುದರಿಂದ ಸ್ವಲ್ಪ ಮಟ್ಟಿಗೆ ಅನುಕೂಲನೇ. ದ್ವಾದಶದಲ್ಲಿರುವ ಅಂಗಾರಕನಾದರೋ ಪ್ರತಿಕೂಲನೇ. ಗುರುವು ನವಮಸ್ಥನಾಗಿರುವುದರಿಂದ ಅನುಕೂಲನಾಗಿರುವನು. ಸೂರ್ಯನು ಚತುರ್ಥದಲ್ಲಿರುವುದರಿಂದಲೂ, ಬುಧನು ಪಂಚಮದಲ್ಲಿರುವುದರಿಂದಲೂ ಇಬ್ಬರೂ ಅನುಕೂಲರಾಗಿಲ್ಲ. ದಶಮಸ್ಥನಾದ ಚಂದ್ರನು ಸ್ವಲ್ಪ ಅನುಕೂಲನಾಗಿರುವನು. ಹೀಗೆ ಪ್ರಾಯೇಣ ಗ್ರಹಚಾರಫಲವು ರಾಕ್ಷಸರಿಗೆ ವಿಪರೀತವಾಗಿಯೇ ಇರುವುದು. (ಇಲ್ಲಿ "ಉಶನಾಃ ಪ್ರಸನ್ನಾರ್ಚಿಃ" ಎಂದು ಹೇಳಿರುವುದರಿಂದ ಆಗ ಶುಕ್ರ ಮೌಢ್ಯವಿರಲಿಲ್ಲವೆಂದು ಸಿದ್ಧವಾಗುವುದು.) (ಗೋ+ಕ)

‡ ಪೂಜ್ಯನಾದ ವಿಶ್ವಾಮಿತ್ರನು ಸೃಜಿಸಿದ ಸಪ್ತರ್ಷಿಮಂಡಲಮಧ್ಯಗತನಾಗಿ, ಪುರೋಹಿತನಾದ ವಸಿಷ್ಠನೊಡನೆ ಬೆಳಗುತ್ತಿರುವ ನಮ್ಮ ಪಿತಾಮಹಶ್ರೇಷ್ಠನಾದ ತ್ರಿಶಂಕುವೆಂದು ಇಲ್ಲಿಯ ಭಾವ.

"ಪಿತಾಮಹ ಪುರೋಽಸ್ಮಾಕಂ" ಎಂಬುದು ಪ್ರಾಚೀನವಾದ ಪಾಠವೆಂದು ಕೆಲವರು ಹೇಳುವರು.

ವರೋಽಸ್ಮಾಕಮಿಕ್ಷ್ವಾಕೂಣಾಂ ಮಹಾತ್ಮನಾಂ ‖ ೫೦ ‖ ವಿಮಲೇಚ ಪ್ರಕಾಶೇತೇ
ವಿಶಾಖೇ ನಿರುಪದ್ರವೇ । * ನಕ್ಷತ್ರವರಮಸ್ಮಾಕಮಿಕ್ಷ್ವಾಕೂಣಾಂ ಮಹಾತ್ಮನಾಂ‖೫೧‖
ನೈರ್ಋತಂ ನೈಋತಾನಾಂಚ ನಕ್ಷತ್ರಮಭಿಪೀಡ್ಯತೇ । ಮೂಲೋ ಮೂಲವತಾ
ಸ್ಪೃಷ್ಟೋ ಧೂಪ್ಯತೇ ಧೂಮಕೇತುನಾ ‖ ೫೨ ‖ ಸರ್ವಂಚೈತದ್ವಿನಾಶಾಯ ರಾಕ್ಷಸಾ
ನಾಮುಪಸ್ಥಿತಂ । ಕಾಲೇ ಕಾಲಗೃಹೀತಾನಾಂ ನಕ್ಷತ್ರಂ ಗ್ರಹಪೀಡಿತಂ ‖ ೫೩ ‖

---

ತ್ತಿದ್ದಾರೆ, ರಾಜರ್ಷಿಃ - ರಾಜರ್ಷಿಯಾದ, ಸಪುರೋಹಿತಃ - ಪುರೋಹಿತನಾದ ವಿಶ್ವಾಮಿತ್ರನಿಂದೊಡ ಗೂಡಿದ, ಮಹಾತ್ಮನಾಂ - ಮಹಾತ್ಮರಾದ, ಇಕ್ಷ್ವಾಕೂಣಾಂ - ಇಕ್ಷ್ವಾಕುವಂಶೋತ್ಪನ್ನರಾದ, ಅಸ್ಮಾಕಂ - ನಮಗೆ, ಪಿತಾಮಹವರಃ - ಪಿತಾಮಹರಲ್ಲಿ ಶ್ರೇಷ್ಠನಾದ, ತ್ರಿಶಂಕುಃ - ತ್ರಿಶಂಕು ಮಹಾ ರಾಯನು, ವಿಮಲಃ - ನಿರ್ಮಲನಾಗಿ, ಭಾತಿ - ಹೊಳೆಯುತ್ತಿದ್ದಾನೆ. ‖ ೪೮-೫೦ ‖ ಮಹಾತ್ಮನಾಂ - ಮಹಾತ್ಮರಾದ, ಇಕ್ಷ್ವಾಕೂಣಾಂ - ಇಕ್ಷ್ವಾಕುವಂಶೋತ್ಪನ್ನರಾದ, ಅಸ್ಮಾಕಂ - ನಮಗೆ, ನಕ್ಷತ್ರ ವರಂ - ಶ್ರೇಷ್ಠವಾದ ನಕ್ಷತ್ರವಾದ, ವಿಶಾಖೇ - ವಿಶಾಖಾನಕ್ಷತ್ರವು, ನಿರುಪದ್ರವೇ - ಕ್ರೂರಗ್ರಹ ದಿಂದ ಆಕ್ರಾಂತವಾಗಿ, ವಿಮಲೇ - ನಿರ್ಮಲವಾದದ್ದಾಗಿ, ಪ್ರಕಾಶೇತೇ - ಹೊಳೆಯುತ್ತಿದೆ. ‖ ೫೧ ‖ ನೈರ್ಋತಂ - ನಿರ್ಋತಿದೇವತಾಕವಾದ, ನೈಋತಾನಾಂ - ರಾಕ್ಷಸರ, ನಕ್ಷತ್ರಂ - ನಕ್ಷತ್ರರೂಪ ವಾದ, ಮೂಲಃ - ಮೂಲಾನಕ್ಷತ್ರವು, ಮೂಲವತಾ - ಸಮೀಪವರ್ತಿಯಾದ, ಧೂಮಕೇತುನಾ - ಧೂಮಕೇತುವಿನಿಂದ, ಸ್ಪೃಷ್ಟಃ - ಸ್ಪರ್ಶ ಮಾಡಲ್ಪಟ್ಟದಾಗಿ, ಅಭಿಪೀಡ್ಯತೇ - ಬಾಧಿಸಲ್ಪಟ್ಟದಾಗು ತ್ತಿದೆ, ಧೂಪ್ಯತೇಚ - ಸಂತಾಪಗೊಳಿಸಲ್ಪಡುತ್ತಿದೆ ‖ ೫೨ ‖ ರಾಕ್ಷಸಾನಾಂ - ರಕ್ಕಸರ, ವಿನಾ ಶಾಯ - ನಾಶಕ್ಕೋಸುಗ, ಏತತ್ಸರ್ವಂ - ಈ ಸಮಸ್ತ ನಿಮಿತ್ತಗಳ ಸಮುದಾಯವು, ಸಮುಪಸ್ಥಿತಂ - ಪ್ರಾಪ್ತವಾಯಿತು, ಕಾಲೇ - ಅಂತ್ಯಕಾಲದಲ್ಲಿ, ಕಾಲ....ನಾಂ - ಯಮನಿಂದ ಹಿಡಿಯಲ್ಪಟ್ಟವರಿಗೆ, ನಕ್ಷತ್ರಂ - ನಕ್ಷತ್ರವು, ಗ್ರಹಪೀಡಿತಂ - ಪಾಪಗ್ರಹಗಳಿಂದ ಬಾಧಿಸಲ್ಪಡುತ್ತದೆ. ‖ ೫೩ ‖ ಆಪಃ - ನದಿಗಳು, ಪ್ರಸನ್ನಾಃ - ನಿರ್ಮಲಗಳಾಗಿ, ಸುರಸಾಃ - ಶುಚಿಕರಗಳಾಗಿಯೂ ಇವೆ, ವನಾನಿ - ವನ

---

ಇಕ್ಷ್ವಾಕುವಂಶಜನಾಗಿಯೂ, ರಾಜರ್ಷಿಯಾಗಿಯೂ ಇರುವ ತ್ರಿಶಂಕುರಾಯನು ಪುರೋ ಹಿತನಾದ ವಸಿಷ್ಠನೊಡಗೂಡಿದವನಾಗಿ ಬಹು ನಿರ್ಮಲವಾಗಿ ಬೆಳಗುತ್ತಿರುವನು. ‖೪೬–೫೦‖ ಮಹಾ ಪೂಜ್ಯವಾದ ಇಕ್ಷ್ವಾಕುಗಳ ವಂಶದಲ್ಲಿ ಜನ್ಮಿಸಿದ ನಮ್ಮ ಕುಲ ನಕ್ಷತ್ರವಾದ ವಿಶಾ ಖೆಯೂ, ದುಷ್ಟಗ್ರಹಗಳಿಂದ ಯಾವುದೊಂದುಪದ್ರವವೂ ಇಲ್ಲದೆ ಬಹು ಸ್ವಚ್ಛವಾಗಿ ಪ್ರಕಾ ಶಿಸುತ್ತಿದೆ. ಇದೂ ಅಲ್ಲದೆ ನಿರ್ಋತಿದೇವತಾಕವಾಗಿ ರಾಕ್ಷಸರ ನಕ್ಷತ್ರವೆನಿಸಿದ ಮೂಲಾ ನಕ್ಷತ್ರವು ತನ್ನ ಸಮೀಪದಲ್ಲಿರುವ ಧೂಮಕೇತುವಿನಿಂದ ಸುಡಲ್ಪಟ್ಟು ಬಹಳವಾದ ಸಂತಾಪಕ್ಕೀಡಾಗಿರುವುದು. ಆದುದರಿಂದ ನಮಗೆ ಗೋಚರವಾಗಿರುವ ಈ ಶುಭನಿಮಿತ್ತ ಗಳೆಲ್ಲವೂ ರಾಕ್ಷಸರ ಸರ್ವನಾಶಕ್ಕೋಸುಗವೇ ಹೊರ್ತು ಮತ್ತೆ ಬೇರೆಯಲ್ಲವು. ಮೃತ್ಯು ಪೀಡಿತರಾದವರ ನಕ್ಷತ್ರವು ಅವರ ಅಂತ್ಯಕಾಲದಲ್ಲಿ ದುಷ್ಟಗ್ರಹಪೀಡಿತವಾಗಿಯೇ ಇರುತ್ತದೆ ಯಲ್ಲವೆ? ಓ ರಾಘವಾ! ಇಲ್ಲಿರುವ ಜಲಾಶಯಗಳೆಲ್ಲವೂ ಸ್ವಚ್ಛವಾಗಿರುವುವು ; ಒಳ್ಳೆಯ

---

* ಜ್ಯೋತಿಷ ದರ್ಪಣವಲ್ಲಿ ವಿಶಾಖಾ ನಕ್ಷತ್ರವು ಇಕ್ಷ್ವಾಕು ನಕ್ಷತ್ರವೆಂದು ಹೇಳಿದೆ.

ಪ್ರಸನ್ನಾಃ ಸುರಸಾಶ್ಚಾಪೋ ವನಾನಿ ಫಲವಂತಿಚ । ಪ್ರವಾಂತ್ಯಭ್ಯಧಿಕಂ ಗಂಧಾರ್
‡ ಯಥರ್ತುಕುಸುಮಾದ್ರುಮಾಃ ॥೫೪॥ ವ್ಯೂಢಾನಿ ಕಪಿಸೈನ್ಯಾನಿ ಪ್ರಕಾಶಂತೇಽಧಿಕಂ
ಪ್ರಭೋ! ದೇವಾನಾಮಿವ ಸೈನ್ಯಾನಿ ಸಂಗ್ರಾಮೇ § ತಾರಕಾಮಯೇ ॥ ೫೫ ॥ ಏವ
ಮಾರ್ಯ! ಸಮೀಕ್ಷ್ಯೈತಾನ್ ಪ್ರೀತೋ ಭವಿತುಮರ್ಹಸಿ" । ಇತಿ ಭ್ರಾತರಮಾಶ್ವಾಸ್ಯ
ಹೃಷ್ಟಃ ಸೌಮಿತ್ರಿರಬ್ರವೀತ್ ॥ ೫೬ ॥ ಅಥಾವೃತ್ಯ ಮಹೀಂಕೃತ್ಸ್ನಾಂ ಜಗಾಮ
ಮಹತೀಚಮೂಃ । ಋಕ್ಷವಾನರಶಾರ್ದೂಲೈರ್ನಖದಂಷ್ಟ್ರಾಯುಧೈರ್ವೃತಾ ॥೫೭॥

ಗಳು, ಫಲವಂತಿಚ - ಫಲಗಳುಳ್ಳವುಗಳಾಗಿವೆ, ದ್ರುಮಾಃ - ಗಿಡಗಳು, ಯಥರ್ತುಕುಸುಮಾಃ - ಋತುಗಳನ್ನು ಅನುಸರಿಸಿ ಹುವ್ವುಗಳುಳ್ಳವುಗಳಾಗಿ, ಅಭ್ಯಧಿಕಂ - ಹೆಚ್ಚಾಗಿ, ಗಂಧಾನ್ - ಸುವಾಸನೆಗಳನ್ನು, ಪ್ರವಾಂತಿ - ಬೀಸುತ್ತಿವೆ. ॥ ೫೪ ॥ ಹೇ ಪ್ರಭೋ - ಎಲೈ ಸ್ವಾಮಿಯೇ, ವ್ಯೂಢಾನಿ - ಗುಂಪುಸೇರಿರುವ, ಕಪಿಸೈನ್ಯಾನಿ - ವಾನರ ಸೈನ್ಯಗಳು, ಸಂಗ್ರಾಮೇ - ಕಾಳಗದಲ್ಲಿ, ತಾರಕಾಮಯೇ-ತಾರಕಾಸುರ ಸಂಹಾರ ಕಾಲದಲ್ಲಿ, ದೇವಾನಾಂ - ದೇವತೆಗಳ, ಸೈನ್ಯಾನೀವ - ಸೇನೆಗಳಂತೆ, ಅಧಿಕಂ - ಹೆಚ್ಚಾಗಿ, ಪ್ರಕಾಶಂತೇ-ಹೊಳೆಯುತ್ತಲಿವೆ. ॥ ೫೫ ॥ ಹೇ ಆರ್ಯ-ಎಲೈ ಪೂಜ್ಯನಾದ ಶ್ರೀರಾಮನೇ, ಏವಂ - ಈ ಪರಿಯಾಗಿ, ಏತಾನ್ - ಈ ಶಕುನಗಳನ್ನು, ಸಮೀಕ್ಷ್ಯ - ಕಂಡು, ಪ್ರೀತಃ - ಸಂತೋಷಗೊಂಡವನು, ಭವಿತುಂ - ಆಗಲು, ಅರ್ಹಸಿ-ಯೋಗ್ಯನಾಗು, ಇತಿ - ಇಂತೆಂದು, ಹೃಷ್ಟಃ - ಸಂತೋಷಗೊಂಡ, ಲಕ್ಷ್ಮಣಃ - ಲಕ್ಷ್ಮಣನು, ಭ್ರಾತರಂ - ಅಣ್ಣನನ್ನು, ಆಶ್ವಾಸ್ಯ - ಸಮಾಧಾನಗೊಳಿಸಿ, ಇತಿ - ಈ ರೀತಿ, ಅಬ್ರವೀತ್ - ನುಡಿದನು. ॥ ೫೬ ॥ ಅಥ - ಬಳಿಕ, ನಖ....ಧೈಃ - ಉಗುರುಗಳೂ, ಕೋರೆಹಲ್ಲುಗಳೇ ಆಯುಧವಾಗುಳ್ಳ, ಋಕ್ಷ....ಲೈಃ-ಕರಡಿಗಳಿಂದಲೂ, ಕೋತಿಗಳಿಂದಲೂ, ವೃತಾ - ಪರಿವೃತವಾದ, ಮಹತೀ - ಬಹಳವಾದ, ಚಮೂಃ - ಸೈನ್ಯವು, ಕೃತ್ಸ್ನಾಂ - ಸಮಸ್ತವಾದ, ಮಹೀಂ -

ರುಚಿಯುಳ್ಳವೂ ಆಗಿರುವುವು. ಅರಣ್ಯಗಳೂ ಪಕ್ವಫಲಗಳಿಂದೊಪ್ಪುತ್ತಿರುವುವು. ಸಮಸ್ತ ವೃಕ್ಷಗಳೂ ಆ ಆ ಋತುಗಳನ್ನನುಸರಿಸಿ ಚೆನ್ನಾಗಿ ಕುಸುಮಿಸಿ ಸುಗಂಧಬಂಧುರವಾಗಿ ವಿರಾಜಿಸುತ್ತಿವೆ. ಮೇಲಾಗಿ ವ್ಯೂಹವಾಗಿ ರಚಿಸಲ್ಪಟ್ಟಿರುವ ಈ ವಾನರಸೇನೆಯು, ತಾರಕಾಸುರನನ್ನು ಸಂಹರಿಸಲು ರಚಿಸಿದ ಯುದ್ಧದಲ್ಲಿ ದೇವಸೇನೆಯಂತೆ ಬಹಳವಾಗಿ ಶೋಭಿಸುತ್ತಿರುವುದು. ಓ ಪೂಜ್ಯನೇ! ನೀನು ಈ ಶುಭಸೂಚನೆಗಳೆಲ್ಲವನ್ನೂ ನೋಡಿ ಆನಂದಿಸು " ಎಂದು ಹೇಳಿದನು. ॥ ೫೧–೫೫ ॥ ಲಕ್ಷ್ಮಣನೀರೀತಿ ಪರಮ ಸಂತುಷ್ಟಾಂತರಂಗನಾಗಿ ನುಡಿದು ಅಣ್ಣನಾದ ಶ್ರೀರಾಮಮೂರ್ತಿಯನ್ನು ಸಮಾಧಾನಗೊಳಿಸಿದನು. ಆ ಸಮಯದಲ್ಲಿ ದಂತನಖಾಯುಧರಾದ ವಾನರರ ಮಹಾ ಸೇನೆಯು ಭೂಮಿಯೆಲ್ಲವನ್ನೂ ಆವರಿಸಿಕೊಂಡು

‡ ಅಕಾಲ ಕುಸುಮೋತ್ಪತ್ತಿಯಿಲ್ಲದೆ ಯಥರ್ತು ಕುಸುಮಗಳಿರುವುದರಿಂದ ಶುಭಾವಹವು. ವರಾಹಮಿಹಿರಾಚಾರ್ಯರು, " ಶೀತೋಷ್ಣಾನಾಂ ವಿಪರ್ಯಾಸಃ ಫಲಪುಷ್ಪಮಕಾಲಜಂ । ಅಶೋಷ್ಮಾಣಾಂ ವಿಶೋಷಶ್ಚ ಫಲಂ ಷಾಣ್ಮಾಸಿಕಂ ಭವೇತ್ " ॥ ಎಂದು ಹೇಳಿರುವರು.

§ ಇಲ್ಲಿ " ತಾರಕಾಮಯ " ಶಬ್ದಕ್ಕೆ, " ತಾರಕಾಸುರನ ವಧೆಯು ಎಲ್ಲಿಯೋ ಅಲ್ಲಿ—ಅಥವ ಬೃಹಸ್ಪತಿಯ ಪತ್ನಿಯಾದ ತಾರಾದೇವಿಯ ಮನೋವ್ಯಾಧಿ " ಮೊದಲಾದ ಅರ್ಥಗಳಾಗುತ್ತವೆ. ಆದರೆ ಇಲ್ಲಿ ಮಾತ್ರ ಸಂಗ್ರಾಮವೆಂದು ಅರ್ಥ ಮಾಡಬೇಕು. ವಿಷ್ಣುಪುರಾಣದಲ್ಲಿ, " ಏವಂ ಚತಯೋರತೀವೋಗ್ರಃ ಸಂಗ್ರಾಮಸ್ತಾರಕಾ ನಿಮಿತ್ತಸ್ತಾರಕಾಮಯೋ ನಾಮಾಭವತ್ " ಎಂದು ಸಂಗ್ರಾಮಾರ್ಥದಲ್ಲಿ ಪ್ರಯೋಗಿಸಿದೆ.

ಕರಾಗ್ರೈಶ್ಚರಣಾಗ್ರೈಶ್ಚ ವಾನರೈರುತ್ಥಿತಂ ರಜಃ । ಭೀಮಮಂತರ್ದಧೇ ಲೋಕಂ ನಿವಾರ್ಯ ಸವಿತುಃ ಪ್ರಭಾಂ ॥ ೫೮ ॥ ಸಪರ್ವತವನಾಕಾಶಾಂ ದಕ್ಷಿಣಾಂ ಹರಿವಾಹಿನೀ । ಛಾದಯಂತೀ ಯಯೌ ಭೀಮಾ ದ್ಯಾಮಿವಾಂಬುದಸಂತತಿಃ ॥ ೫೯ ॥ ಉತ್ತರಂತ್ಯಾಂ ಚ ಸೇನಾಯಾಂ ಸತತಂ ಬಹುಯೋಜನಂ । ನದೀಸ್ರೋತಾಂಸಿ ಸರ್ವಾಣಿ ಸಸ್ಯಂದುರ್ವಿಪರೀತವತ್ ॥ ೬೦ ॥ ಸರಾಂಸಿ ವಿಮಲಾಂಭಾಂಸಿ ದ್ರುಮಾಕೀರ್ಣಾಂಶ್ಚ ಪರ್ವತಾನ್ । ಸಮಾನ್ಭೂಮಿಪ್ರದೇಶಾಂಶ್ಚ ವನಾನಿ ಫಲವಂತಿಚ ॥೬೧॥ ಮಧ್ಯೇನಚ ಸಮಂತಾಚ್ಚ ತಿರ್ಯಕ್ಚಾಧಶ್ಚ ಸಾ ವಿಶತ್ । ಸಮಾವೃತ್ಯ ಮಹೀಂ

ಭೂಮಿಯನ್ನು, ಆವೃತ್ಯ-ಮುತ್ತಿ, ಜಗಾಮ - ತೆರಳಿತು. ॥೫೭॥ ವಾನರೈಃ-ವಾನರರಿಂದ, ಕರಾಗ್ರೈಃ-ಕೈಯುಗುರುಗಳಿಂದಲೂ, ಚರಣಾಗ್ರೈಶ್ಚ - ಪಾದಾಗ್ರಗಳಿಂದಲೂ, ಉತ್ಥಿತಂ - ಹುಟ್ಟಿರುವ, ಭೀಮಂ-ಭಯಂಕರವಾದ, ರಜಃ - ಕೆಂಧೂಳಿಯು, ಸವಿತುಃ - ಸೂರ್ಯನ, ಪ್ರಭಾಂ - ಪ್ರಕಾಶವನ್ನು, ನಿವಾರ್ಯ-ತಡೆಮಾಡಿ, ಲೋಕಂ-ಭೂಲೋಕವನ್ನು, ಅಂತರ್ದಧೇ-ಕಾಣಿಸದಂತೆ ಮಾಡಿತು. ॥ ೫೮ ॥ ಭೀಮಾ - ಭಯಂಕರವಾದ, ಹರಿವಾಹಿನೀ - ಆ ಕಪಿಸೈನ್ಯವು, ಅಂಬು....ತಿಃ - ಮೇಘಪಜ್ತಿಯು, ದ್ಯಾಮಿವ-ಅಂತರಿಕ್ಷವನ್ನಂತೆ, ಸಪ....ಶಾಂ-ಪರ್ವತಗಳಿಂದಲೂ, ಕಾಡುಗಳಿಂದಲೂ, ಆಕಾಶದಿಂದಲೂ ಕೂಡಿದ, ದಕ್ಷಿಣಾಂ - ದಕ್ಷಿಣದಿಕ್ಕನ್ನು, ಛಾದಯಂತೀ-ಮುಚ್ಚುತ್ತದೆಯೋ ಎಂಬಂತೆ, ಯಯೌ - ತೆರಳಿತು. ॥ ೫೯ ॥ ಸೇನಾಯಾಂ - ಸೈನ್ಯವು, ಸತತಂ - ನಿರಂತರವೂ, ಬಹುಯೋಜನಂ - ಅನೇಕ ಗಾವುದ, ಉತ್ತರಂತ್ಯಾಂ - ದಾಟಿಹೋಗುತ್ತಿರಲು, ಸರ್ವಾಣಿ - ಸಮಸ್ತಗಳಾದ, ನದೀಸ್ರೋತಾಂಸಿ - ನದೀಪ್ರವಾಹಗಳು, ವಿಪರೀತವತ್ - ವ್ಯತ್ಯಾಸವಾದಂತೆ, ಸಸ್ಯಂದುಃ - ಪ್ರವಹಿಸಿದವು. ॥ ೬೦ ॥ ಸಾ - ಆ ಕಪಿಸೈನ್ಯವು, ವಿಮಲಾಂಭಾಂಸಿ - ನಿರ್ಮಲವಾದ ಉದಕಗಳುಳ್ಳ, ಸರಾಂಸಿ - ಸರೋವರಗಳನ್ನು, ದ್ರುಮಾಕೀರ್ಣಾನ್ - ಗಿಡಗಳಿಂದ ತುಂಬಿರುವ, ಪರ್ವತಾಂಶ್ಚ - ಬೆಟ್ಟಗಳನ್ನು, ಸಮಾನ್ - ನಿಮ್ನೋನ್ನತಗಳಿಲ್ಲದಿರುವ, ಭೂಮಿ....ಶ್ಚ - ಭೂಪ್ರದೇಶಗಳನ್ನು, ಫಲವಂತಿ - ಹಣ್ಣುಗಳನ್ನು ಬಿಟ್ಟಿರುವ, ವನಾನಿಚ - ವನಗಳನ್ನು, ಮಧ್ಯೇನಚ - ಮಧ್ಯದಲ್ಲಿಯೂ, ಸಮಂತಾಚ್ಚ -

ಮುಂದುಮುಂದಕ್ಕೆ ಪಯಣಿಸುತ್ತಲೇ ಇದ್ದಿತು. ಆಗ ಆ ವಾನರರ ಪಾದಘಟ್ಟನದಿಂದಲೂ, ಭುಜಾಸ್ಫಾಲನದಿಂದಲೂ ಭೂಮಿಯಲ್ಲುಂಟಾದ ಧೂಳು ಸೂರ್ಯನ ಕಾಂತಿಯನ್ನು ಅಳಿಸಿ ಲೋಕದಲ್ಲೆಲ್ಲಾ ಬಹು ಭಯಂಕರವಾಗಿ ಹಬ್ಬಿತು. ಮಹಾ ಭೀಕರವಾಗಿದ್ದ ಆ ವಾನರ ಸೇನೆಯು, ಮೇಘಸಮೂಹವು ಅಂತರಿಕ್ಷವನ್ನು ಕವಿದಂತೆ, ಸಮಸ್ತ ಪರ್ವತಗಳೊಡನೆಯೂ, ವನಗಳೊಡನೆಯೂ ಕೂಡಿದ ದಕ್ಷಿಣದಿಗ್ಭಾಗದ ಭೂಮಿಯೆಲ್ಲವನ್ನೂ ಕವಿದು ಮುಂದುವರಿಯುತ್ತಿದ್ದಿತು. ಆ ವಾನರಸೇನೆಯು ಎಲ್ಲಿಯೂ ಅವಕಾಶವಿಲ್ಲದಿರುವಂತೆ ನಡೆಯುತ್ತಿರಲು, ಮಧ್ಯದಲ್ಲಿ ಸಿಕ್ಕಿದ ನದಿಗಳು ಅಡ್ಡಪಡಿಸಿದ ಜಲವುಳ್ಳವುಗಳಾಗಿ ಆ ಸೇನೆಯು ಮುಂದಕ್ಕೆ ಹೋದಬಳಿಕ ಮಹಾ ಪ್ರವಾಹಗಳು ಬಂದವುಗಳಂತೆ ಅನೇಕ ಹರಿದಾರಿಗಳ ದೂರ ರಭಸವಾಗಿ ಹರಿದವು. ॥ ೫೭–೬೦ ॥ ಆ ವಾನರಸೈನ್ಯಗಳು, ನಿರ್ಮಲವಾದ ಉದಕದಿಂದೊಪ್ಪುತ್ತಿರುವ ಸರೋವರಗಳಡ್ಡವಾದಾಗ ಅವುಗಳಲ್ಲಿಳಿದು ಹೋಗುತ್ತಲೂ, ವೃಕ್ಷನಿಬಿಡವಾದ ಪರ್ವತಗಳಡ್ಡವಾದಾಗ ಅವುಗಳೆಲ್ಲವನ್ನೂ ಮುರಿದು ಆ ಪರ್ವತವನ್ನು ದಾಟಿಹೋಗುತ್ತಲೂ, ಹಳ್ಳತಿಟ್ಟೆಗಳಿಲ್ಲದ ಸಮಭೂಮಿಯು ಸಿಕ್ಕಿದಾಗ ಎಲ್ಲರೂ ಗುಂಪುಗೂಡಿ ನಡೆಯು

**ಕೃತ್ಸ್ನಾಂ ಜಗಾಮ ಮಹತೀಚಮೂಃ ॥ ೬೨ ॥ ತೇಹೃಷ್ಟಮನಸಸ್ಸರ್ವೇ ಜಗ್ಮು ರ್ಮಾರುತರಂಹಸಃ । ಹರಯೋ ರಾಘವಸ್ಯಾರ್ಥೇ ಸಮಾರೋಪಿತವಿಕ್ರಮಾಃ ॥೬೩॥ ಹರ್ಷವೀರ್ಯಬಲೋದ್ರೇಕಾನ್ ದರ್ಶಯಂತಃ ಪರಸ್ಪರಂ । ಯೌವನೋತ್ಸುಕಜಾನ್ ದರ್ಪಾನ್ ವಿವಿಧಾಂಶ್ಚಕ್ರುರಧ್ವನಿ ॥ ೬೪ ॥ ತತ್ರ ಕೇಚಿದ್ದ್ರುತಂ ಜಗ್ಮುರುತ್ಪೇತುಶ್ಚ ತಥಾಪರೇ । ಕೇಚಿತ್ಕಿಲಕಿಲಾಂಚಕ್ರುರ್ವಾನರಾ ವನಗೋಚರಾಃ ॥೬೫॥ ಪ್ರಾಸ್ಫೋಟಯಂಶ್ಚ ಪುಚ್ಛಾನಿ ಸನ್ನಿಜಘ್ನುಃ ಪದಾನ್ಯಪಿ । ಭುಜಾನ್ವಿಕ್ಷಿಪ್ಯ ಶೈಲಾಂಶ್ಚ ದ್ರುಮಾ**

ಎಲ್ಲಾಕಡೆಯಲ್ಲಿಯೂ, ತಿರ್ಯಕ್ಚ - ಅಡ್ಡವಾಗಿಯೂ, ಅಧಶ್ಚ - ಕೆಳಗಡೆಯಲ್ಲಿಯೂ, ಆವಿಶತ್ - ಹೊಕ್ಕಿತು. ॥ ೬೧-೬೨ ॥ ಮಹತೀ - ದೊಡ್ಡದಾದ, ಚಮೂಃ - ಸೈನ್ಯವು, ಕೃತ್ಸ್ನಾಂ - ಸಮಸ್ತವಾದ, ಮಹೀಂ - ಭೂಮಿಯನ್ನು, ಸಮಾವೃತ್ಯ - ವ್ಯಾಪಿಸಿ, ಜಗಾಮ - ತೆರಳಿತು, ಮಾರು....ಸಃ - ಗಾಳಿಗೆ ಸಮಾನವಾದ ವೇಗವುಳ್ಳ, ಹೃಷ್ಟಮನಸಃ - ಸಂತೋಷಗೊಂಡ ಮನವುಳ್ಳ, ಸರ್ವೇ - ಸಮಸ್ತರಾದ, ತೇಹರಯಃ - ಆ ಕಪಿಗಳು, ರಾಘವಸ್ಯಾರ್ಥೇ - ಶ್ರೀರಾಮನ ನಿಮಿತ್ತವಾಗಿ, ಸಮಾ....ಸಃ - ಪ್ರವೃದ್ಧಮಾನವಾದ ಪರಾಕ್ರಮವುಳ್ಳವರಾಗಿ, ಹರ್ಷ.....ಕಾನ್ - ಸಂತೋಷದಿಂದಲೂ, ಸಾಮರ್ಥ್ಯದಿಂದಲೂ, ದೇಹಬಲದ ಅತಿಶಯಗಳನ್ನು, ಪರಸ್ಪರಂ - ಒಬ್ಬರಿಗೊಬ್ಬರು, ದರ್ಶಯಂತಃ - ತೋರಿಸುತ್ತ, ಅಧ್ವನಿ - ಮಾರ್ಗದಲ್ಲಿ, ವಿವಿಧಾನ್ - ನಾನಾಬಗೆಗಳಾದ, ಯೌವನೋತ್ಸುಕಜಾನ್ - ಯೌವನದಿಂದಲೂ ಉತ್ಸಾಹದಿಂದಲೂ ಹುಟ್ಟಿರುವ, ದರ್ಪಾನ್ - ಗರ್ವದಿಂದ ಹುಟ್ಟಿದ ವ್ಯಾಪಾರಗಳನ್ನು, ಚಕ್ರುಃ-ಮಾಡಿದರು. ॥ ೬೩-೬೪ ॥ ತತ್ರ - ಆ ಸೈನ್ಯದಲ್ಲಿ, ಕೇಚಿತ್ - ಕೆಲವರು, ದ್ರುತಂ - ಶೀಘ್ರವಾಗಿ, ಜಗ್ಮುಃ - ಹೊರಟರು, ಅಪರೇ - ಮತ್ತು ಕೆಲವರು, ತಥಾ - ಹಾಗೆಯೇ, ಉತ್ಪೇತುಃ - ಹಾರಿದರು, ಕೇಚಿತ್ - ಮತ್ತೆ ಕೆಲವರಾದ, ವನಗೋಚರಾಃ - ವನವಾಸಿಗಳಾದ, ವಾನರಾಃ - ಕಪಿಗಳು, ಕಿಲಕಿಲಾಂ - ಕಿಲಕಿಲ ಧ್ವನಿಯನ್ನು, ಚಕ್ರುಃ - ಮಾಡಿದರು. ॥ ೬೫ ॥ ಅನ್ಯೇ - ಮತ್ತೆ ಕೆಲವರು, ಪುಚ್ಛಾನಿ - ಬಾಲಗಳನ್ನು, ಪ್ರಾಸ್ಫೋಟಯನ್ - ನೆಲದಮೇಲೆ ಹೊಡೆದರು, ಪದಾನ್ಯಪಿ - ಕಾಲುಗಳನ್ನೂ, ಸನ್ನಿಜಘ್ನುಃ - ಹೊಡೆದರು, ಭುಜಾನ್ - ಭುಜಗಳನ್ನು, ವಿಕ್ಷಿಪ್ಯ - ಬೀಸಿ, ಶೈಲಾಂಶ್ಚ - ಬೆಟ್ಟಗಳನ್ನೂ, ದ್ರುಮಾಂಶ್ಚ-

ತ್ತಲೂ, ಚೆನ್ನಾಗಿ ಹಣ್ಣು ಬಿಟ್ಟಿರುವ ವೃಕ್ಷಗಳು ಅಡ್ಡವಾದಾಗ ಅವುಗಳ ನೆರಳಿನಲ್ಲಿ ನಡೆಯುತ್ತಲೂ ಮುಂದುಮುಂದಕ್ಕೆ ಹೋಗುತ್ತಿದ್ದರು. ಹೀಗೆ ಆ ಮಹಾ ವಾನರಸೇನೆಯು ಭೂಮಿಯೆಲ್ಲವನ್ನೂ ಒಂದೇ ಸಮನಾಗಿ ವ್ಯಾಪಿಸಿ ಹೋಗುತ್ತಿದ್ದಿತು. ವಾಯುಸಮಾನ ವೇಗವುಳ್ಳ ಆ ಸೇನೆಯಲ್ಲಿದ್ದ ವಾನರರೆಲ್ಲರೂ ಶ್ರೀರಾಮಕಾರ್ಯಾರ್ಥವಾಗಿ ಅಮಿತ ಪರಾಕ್ರಮವನ್ನವಲಂಬಿಸಿ ಬಹು ಶೀಘ್ರವಾಗಿ ಮುಂದುವರಿಯುತ್ತಿದ್ದರು. ॥ ೬೧–೬೩ ॥ ಈ ರೀತಿ ನಡೆಯುತ್ತಿದ್ದ ಆ ವಾನರರು ತಮಗಿರುವ ಬಲಪರಾಕ್ರಮ ಸಂತೋಷಾತಿಶಯಗಳನ್ನು ಒಬ್ಬರಿಗೊಬ್ಬರು ಪ್ರದರ್ಶಿಸಿಕೊಳ್ಳುತ್ತ, ಯೌವನಮದದಿಂದುಂಟಾದ ಗರ್ವದಿಂದ ವಿವಿಧ ಚೇಷ್ಟೆಗಳನ್ನು ಮಾಡುತ್ತಿದ್ದರು. ಅವರಲ್ಲಿ ಕೆಲವರು ಬೇಗಬೇಗನೆ ಹೋಗುತ್ತಿದ್ದರು. ಕೆಲವರು ಹಾರಿಹೋಗುತ್ತಿದ್ದರು. ಕೆಲವರು ಕಿಲಕಿಲನೆ ಧ್ವನಿಮಾಡುತ್ತ ಹೋಗುತ್ತಿದ್ದರು. ಕೆಲವರು ಬಲಗರ್ವಿತರಾಗಿ ತಮ್ಮ ಬಾಲಗಳನ್ನು ನೆಲದಮೇಲೆ ಅಪ್ಪಳಿಸಿ ಹೊಡೆಯುತ್ತ ಹೋಗುತ್ತಿದ್ದರು. ಕೆಲವರು ಪಾದಘಟ್ಟನದಿಂದ ನೆಲವನ್ನು ಕಂಪನಗೊಳಿಸುತ್ತ ಹೋಗುತ್ತಿದ್ದರು. ಕೆಲವರು ಕೈಗಳನ್ನತ್ತಿತ್ತ ಬೀಸುತ್ತ ದಾರಿಯಲ್ಲಿ ಸಿಕ್ಕಿದ ವೃಕ್ಷಗಳನ್ನು ಮುರಿ

ನನ್ಯೇ ಬಭಂಜಿರೇ ॥ ೬೬ ॥ ಆರೋಹಂತಶ್ಚ ಶೃಂಗಾಣಿ ಗಿರೀಣಾಂ ಗಿರಿಗೋಚರಾಃ । ಮಹಾನಾದಾನ್ವಿಮುಂಚಂತಿ ಕ್ಷ್ವೇಳಾಮನ್ಯೇ ಪ್ರಚಕ್ರಿರೇ ॥ ೬೭ ॥ ಊರುವೇಗೈಶ್ಚ ಮಮೃದುರ್ಲತಾಜಾಲಾನ್ಯನೇಕಶಃ । ಜೃಂಭಮಾಣಾಶ್ಚ ವಿಕ್ರಾಂತಾ ವಿಚಿಕ್ರೀಡುಃ ಶಿಲಾ ದ್ರುಮೈಃ ॥ ೬೮ ॥ ಶತೈಃ ಶತಸಹಸ್ರೈಶ್ಚ ಕೋಟೀಭಿಶ್ಚ ಸಹಸ್ರಶಃ । ವಾನರಾಣಾಂ ತು ಘೋರಾಣಾಂ ಶ್ರೀಮತ್ಪರಿವೃತಾ ಮಹೀ ॥ ೬೯ ॥ ಸಾಸ್ಮ ಯಾತಿ ದಿವಾ ರಾತ್ರಂ ಮಹತೀ ಹರಿವಾಹಿನೀ । ಹೃಷ್ಟಾ ಪ್ರಮುದಿತಾ ಸೇನಾ ಸುಗ್ರೀವೇಣಾಭಿ

---

ಗಿಡಗಳನ್ನೂ, ಬಭಂಜಿರೇ - ಮುರಿದರು. ॥ ೬೬ ॥ ಗಿರಿಗೋಚರಾಃ - ಬೆಟ್ಟಗಳಲ್ಲಿ ಸಂಚಾರಮಾಡುವ, ಅನ್ಯೇ - ಮತ್ತೆ ಕೆಲವರು, ಗಿರೀಣಾಂ - ಬೆಟ್ಟಗಳ, ಶೃಂಗಾಣಿ - ಶಿಖರಗಳನ್ನು, ಆರೋಹಂತಶ್ಚ - ಏರಿ, ಮಹಾನಾದಾನ್ - ದೊಡ್ಡ ಕೂಗುಗಳನ್ನು, ವಿಮುಂಚಂತಿ - ಬಿಟ್ಟರು, ಅನ್ಯೇ - ಮತ್ತು ಕೆಲವರು, ಕ್ಷ್ವೇಳಾಂ - ಸಿಂಹನಾದವನ್ನು, ಪ್ರಚಕ್ರಿರೇ - ಮಾಡಿದರು. ॥ ೬೭ ॥ ಊರುವೇಗೈಃ - ಊರುಗಳ ವೇಗಗಳಿಂದ, ಅನೇಕಶಃ-ಬಹಳವಾಗಿ, ಲತಾಜಾಲಾನಿ-ಬಳ್ಳಿಗಳ ತಂಡಗಳನ್ನು, ಮಮೃದುಃ-ಮರ್ದನಮಾಡಿದರು, ವಿಕ್ರಾಂತಾಃ - ಪರಾಕ್ರಮಶೀಲರಾದ ಕೆಲವರು, ಜೃಂಭಮಾಣಾಶ್ಚ - ಆಕಳಿಸುತ್ತ, ಶಿಲಾದ್ರುಮೈಃ - ಪಾಷಾಣಗಳಿಂದಲೂ, ಗಿಡಗಳಿಂದಲೂ, ವಿಚಿಕ್ರೀಡುಃ - ಕ್ರೀಡಿಸಿದರು. ॥ ೬೮ ॥ ಮಹೀ - ಭೂಮಿಯು, ಘೋರಾಣಾಂ - ಭಯಂಕರವಾದ, ವಾನರಾಣಾಂ - ಕಪಿಗಳ, ಶತೈಃ - ನೂರರಿಂದ, ಶತಸಹಸ್ರೈಶ್ಚ - ಲಕ್ಷಗಳಿಂದಲೂ, ಕೋಟೀಭಿಶ್ಚ - ಕೋಟಿಗಳಿಂದಲೂ, ಸಹಸ್ರಶಃ - ಸಾವಿರಗಳಿಂದಲೂ, ಶ್ರೀಮತ್ - ಸಂಪದ್ಯುಕ್ತವಾದಂತೆ, ಪರಿವೃತಾ - ಸುತ್ತುವರೆಯಲ್ಪಟ್ಟಿತು. ॥ ೬೯ ॥ ಮಹತೀ - ಬಹಳವಾದ, ಸಾಹ......ನೀ - ಆ ವಾನರ ಸೈನ್ಯವು, ಹೃಷ್ಟಾ - ಸಂತೋಷಗೊಂಡುದಾಗಿ, ಸೇನಾ - ಕಪಿಗಳ ಸೇನೆಯು, ಸುಗ್ರೀವೇಣ - ಸುಗ್ರೀವನಿಂದ, ಅಭಿರಕ್ಷಿತಾ - ಸಂರಕ್ಷಿಸಲ್ಪಟ್ಟುದಾಗಿಯೂ, ಪ್ರಮುದಿತಾ - ಅಂತಸ್ಸಂತೋಷವುಳ್ಳುದಾಗಿಯೂ, ದಿವಾರಾತ್ರಂ - ಹಗಲು ರಾತ್ರಿಯೂ, ಯಾತಿಸ್ಮ - ಹೊರಟಿತಷ್ಟೆ. ॥ ೭೦ ॥ ಸರ್ವೇವಾನರಾಃ - ಸಮಸ್ತ ಕಪಿಗಳೂ,

---

ದಿಕ್ಕುತ್ತ ಹೊರಪುತ್ತಿದ್ದರು. ಕೆಲವರು ಅಡ್ಡಗಿಸಿದ ಪರ್ವತಗಳನ್ನು ಪುಡಿಪುಡಿ ಮಾಡುತ್ತ ಹೋಗುತ್ತಿದ್ದರು. ಗಿರಿವಾಸಿಗಳಾದ ಕೆಲವರು ವಾನರರು ಗಿರಿಶಿಖರಗಳಿಗೇರಿ ಕೋಲಾಹಲ ಧ್ವನಿಯನ್ನು ಮಾಡುತ್ತಿದ್ದರು. ಇನ್ನು ಕೆಲವರು ಸಿಂಹನಾದವನ್ನು ಮಾಡುತ್ತಿದ್ದರು. ಕೆಲವರು ತಮ್ಮ ಊರುವೇಗದಿಂದಲೇ ದಾರಿಯಲ್ಲಿ ಅಡ್ಡವಾದ ಲತೆಗಳನ್ನೆಲ್ಲ ಮುರಿದಿಕ್ಕಿ ಮುಂಬರಿಯುತ್ತಿದ್ದರು. ಮತ್ತೆ ಕೆಲವರು ಮದೋನ್ಮತ್ತರಾದ ವಾನರವೀರರು ಪರಾಕ್ರಮದಿಂದ ವಿಜೃಂಭಿಸಿದವರಾಗಿ ಗುಂಡುಕಲ್ಲುಗಳಿಂದಲೂ, ಹೆಮ್ಮರಗಳಿಂದಲೂ ಚೆಲ್ಲಾಟವಾಡುತ್ತಿದ್ದರು. ಮಹಾ ಭಯಂಕರಾಕಾರರಾದ ಆ ವಾನರವೀರರ ಸಮೂಹಗಳು ನೂರುನೂರುಗಳಾಗಿಯೂ, ಸಾವಿರಸಾವಿರಗಳಾಗಿಯೂ, ಕೋಟಿಕೋಟಿಗಳಾಗಿಯೂ ಭೂಮಿಯೆಲ್ಲವನ್ನೂ ಆವರಿಸಿದ್ದರು. ಮಹತ್ತರವಾದ ಆ ವಾನರಸೇನೆಯು ಪ್ರಭುವಾದ ಶ್ರೀರಾಮನೊಡಗೂಡಿದುದಾಗಿಯೂ, ಪರಮ ಸಂತೋಷದಿಂದ ಪುಲಕಾಂಕಿತವಾದುದಾಗಿಯೂ, ವಾನರೇಶ್ವರನಾದ ಸುಗ್ರೀವನಿಂದ ಸುರಕ್ಷಿತವಾದುದಾಗಿಯೂ ಆಗಿ ಅಹೋರಾತ್ರಿಗಳೆನ್ನದೆ ಮುಂದುಮುಂದಕ್ಕೆ ನಡೆಯುತ್ತಿದ್ದಿತು. ॥ ೬೪–೭೦ ॥ ಆ ಸೇನೆಯಲ್ಲಿದ್ದ ವಾನರವೀರರೆಲ್ಲರೂ,

**ರಕ್ಷಿತಾ ॥ ೨೦ ॥ ವಾನರಾಸ್ತ್ವರಿತಂ ಯಾಂತಿ ಸರ್ವೇ ಯುದ್ಧಾಭಿನಂದಿನಃ । ಪ್ರಮೋಕ್ಷಯಿಷವಸ್ಸೀತಾಂ ಮುಹೂರ್ತಂ ಕ್ವಾಪಿ ನಾಸತ ॥ ೨೧ ॥ ತತಃ ಪಾದಪ ಸಂಬಾಧಂ ನಾನಾಮೃಗಸಮಾಯುತಂ । ಸಹ್ಯಪರ್ವತಮಾಸೇದುರ್ಮಲಯಂಚ ಮಹೀಧರಂ ॥ ೨೨ ॥ ಕಾನನಾನಿ ವಿಚಿತ್ರಾಣಿ ನದೀಪ್ರಸ್ರವಣಾನಿಚ । ಪಶ್ಯನ್ನತಿ ಯಯೌ ರಾಮಸ್ಸಹ್ಯಸ್ಯ ಮಲಯಸ್ಯಚ ॥ ೨೩ ॥ ವಕುಲಾಂಸ್ತಿಲಕಾಂಶ್ಚೂತಾನ ಶೋಕಾನ್ಸಿಂಧುವಾರಕಾನ್ । ಕರವೀರಾಂಶ್ಚ ತಿಮಿಶಾನ್ಭಂಜಂತಿ ಸ್ಮ ಪ್ಲವಂಗಮಾಃ ॥ ೨೪ ॥ ಅಂಕೋಲಾಂಶ್ಚ ಕರಂಜಾಂಶ್ಚ ಪ್ಲಕ್ಷನ್ಯಗ್ರೋಧತಿಂದುಕಾನ್ । ಜಂಬೂಕಾ**

---

ಯುದ್ಧಾ....ನಃ - ಜಗಳದಲ್ಲಿ ಉತ್ಸಾಹವುಳ್ಳವರಾಗಿ, ತ್ವರಿತಂ - ಜಾಗ್ರತೆಯಾಗಿ, ಯಾಂತಿ - ಹೊರಟರು, ಸೀತಾಂ - ಸೀತಾದೇವಿಯನ್ನು, ಪ್ರಮೋಕ್ಷಯಿಷವಃ - ಬಂಧನದಿಂದ ಬಿಡಿಸಲಿಚ್ಛೆಯುಳ್ಳವರಾಗಿ, ಮುಹೂರ್ತಂ - ಒಂದು ಮುಹೂರ್ತಕಾಲವಾದರೂ, ಕ್ವಾಪಿ - ಎಲ್ಲಿಯೂ, ನಾಸತ - ಕುಳಿತುಕೊಳ್ಳಲಿಲ್ಲವು. ॥ ೨೧ ॥ ತತಃ - ಬಳಿಕ, ಪಾದ.....ಧಂ - ಗಿಡಗಳಿಂದ ತುಂಬಿರುವ, ನಾನಾ....ತಂ - ಅನೇಕ ಮೃಗಗಳಿಂದ ಕೂಡಿರುವ, ಸಹ್ಯಪರ್ವತಂ - ಸಹ್ಯಪರ್ವತವನ್ನು, ಮಲಯಂ - ಮಲಯವೆಂಬ, ಮಹೀಧರಂಚ - ಬೆಟ್ಟವನ್ನೂ, ಆಸೇದುಃ - ಹೊಂದಿದರು. ॥ ೨೨ ॥ ಸಹ್ಯಸ್ಯ - ಸಹ್ಯಪರ್ವತದ, ಮಲಯಸ್ಯಚ - ಮಲಯಪರ್ವತದ, ವಿಚಿತ್ರಾಣಿ - ನಾನಾಬಗೆಗಳಾದ, ಕಾನನಾನಿ - ಅರಣ್ಯಗಳನ್ನೂ, ನದೀ....ಚ - ನದಿಗಳನ್ನೂ ಪ್ರವಾಹಗಳನ್ನೂ, ಪಶ್ಯನ್ - ನೋಡುತ್ತ, ಅತಿಯಯೌ - ಬಹಳದೂರ ಹೋದನು. ॥ ೨೩ ॥ ಪ್ಲವಂಗಮಾಃ - ವಾನರರು, ವಕುಳಾನ್ - ಹವಳಗಳ, ತಿಲಕಾನ್ - ಬಂಡಿಗುಲಗಂಜಿಗಿಡಗಳನ್ನೂ, ಚೂತಾನ್ - ಮಾವಿನಗಿಡಗಳನ್ನೂ, ಅಶೋಕಾನ್ - ಅಶೋಕಗಿಡಗಳನ್ನೂ, ಸಿಂಧುವಾರಕಾನ್ - ಲಕ್ಕೀಗಿಡಗಳನ್ನೂ, ಕರವೀರಾಂಶ್ಚ - ಕಣಿಗಲುಗಿಡಗಳನ್ನೂ, ತಿಮಿಶಾನ್ - ನೇಮಿಗಿಡಗಳನ್ನೂ, ಭಂಜಂತಿಸ್ಮ - ಮುರಿದುಹಾಕುತ್ತಿದ್ದರು. ॥ ೨೪ ॥ ಪ್ಲವಂಗಮಾಃ - ಕಪಿಗಳು, ಅಂಕೋಲಾನ್ - ಅಂಕೋಲೆಗಿಡಗಳನ್ನೂ, ಕರಂಜಾಂಶ್ಚ - ಹೊಂಗೇಮರಗಳನ್ನೂ, ಪ್ಲಕ್ಷ....ಕಾನ್ - ರಾಗೀಗಿಡಗಳನ್ನೂ ಆಲದಮರಗಳನ್ನೂ ತುಂಬೇಮರಗಳನ್ನೂ, ಜಂಬೂ....ಕಾನ್ - ನೇರಳೇಮರ

---

ಯುದ್ಧೋತ್ಸಾಹದಿಂದ ಬಹು ಶೀಘ್ರವಾಗಿ ಹೋಗುತ್ತಿದ್ದರು ; ಶ್ರೀರಾಮನ ಪ್ರಿಯೆಯಾದ ಸೀತಾದೇವಿಯನ್ನು ಬಂಧನದಿಂದ ಬಿಡಿಸಬೇಕೆಂಬ ಬಯಕೆಯಿಂದ ಒಂದು ಘಳಿಗೆಯಾದರೂ ಒಂದುಕಡೆಯೂ ನಿಲ್ಲದೆ ಮುಂದುವರಿಯುತ್ತಿದ್ದರು. ಹೀಗೆ ಹೋಗುತ್ತಿದ್ದ ಆ ವಾನರರು ನಾನಾವಿಧಗಳಾದ ವೃಕ್ಷಗಳಿಂದ ತುಂಬಿ ತುಳುಕುತ್ತಿದ್ದ ಸಹ್ಯಪರ್ವತವನ್ನೂ, ಮಲಯಾಚಲವನ್ನೂ ಸೇರಿದರು. ಆಗ ಶ್ರೀರಾಮನು ಆ ಪರ್ವತಗಳಲ್ಲಿರುವ ನಾನಾವಿಧಗಳಾದ ಪ್ರವಾಹಗಳನ್ನೂ, ಜರಿಗಳನ್ನೂ ನೋಡುತ್ತ ಹೋಗುತ್ತಿದ್ದನು. ಶ್ರೀರಾಮನೊಡನೆ ಮುಂದುಮುಂದಕ್ಕೆ ಹೋಗುತ್ತಿದ್ದ ಆ ಮಾರ್ಗದಲ್ಲಿ, ಒಕುಲ, ತಿಲಕ, ಮಾವು, ಪ್ರಸೇಕ, ಸಿಂಧುವಾರ, ತಿನಿಶ, ಕರವೀರ, ಅಂಕೋಲ, ಕರಜ, ಪ್ಲಕ್ಷ, ಬೂರಗ, ನೇರಳೆ, ನೆಲ್ಲಿ, ನೀಪ ಮೊದಲಾದ ವೃಕ್ಷಗಳು ಹೇರಳವಾಗಿದ್ದವು. ಇವುಗಳೆಲ್ಲವನ್ನೂ ನೋಡುತ್ತ ನಡೆಯುತ್ತಿದ್ದ ಆ ವಾನರರು, ಬಹು ರಮಣೀಯವಾದ ಶಿಲಾಪ್ರದೇಶಗಳಲ್ಲಿಯೂ, ವನಪ್ರದೇಶಗಳಲ್ಲಿಯೂ ಇರುವ ನಾನಾವಿಧಗಳಾದ ವೃಕ್ಷಗಳು ವಾಯುವೇಗದಿಂದ ಅಲುಗಾಡುತ್ತ ಹೂಮಳೆಯನ್ನು ಕರೆಯುತ್ತಿದ್ದ

ಮಲಕಾನ್ನೀಪಾ೯ ಭಂಜಂತಿಸ್ಮ ಪ್ಲವಂಗಮಾಃ ॥ ೭೫ ॥ ಪ್ರಸ್ತರೇಷುಚ ರಮ್ಯೇಷು ವಿವಿಧಾಃ ಕಾನನದ್ರುಮಾಃ । ವಾಯುವೇಗಪ್ರಚಲಿತಾಃ ಪುಷ್ಪೈರವಕಿರಂತಿ ತಾ೯ ॥ ೭೬ ॥ ಮಾರುತಸ್ಸುಖಸಂಸ್ಪರ್ಶೋ ವಾತಿ ಚಂದನಶೀತಲಃ । ಷಟ್ಪದೈರನುಕೂಜದ್ಭಿರ್ವನೇಷು ಮಧುಗಂಧಿಷು ॥ ೭೭ ॥ ಅಧಿಕಂ ಶೈಲರಾಜಸ್ತು ಧಾತುಭಿಸ್ಸುವಿಭೂಷಿತಃ । ಧಾತುಭ್ಯಃ ಪ್ರಸೃತೋ ರೇಣುರ್ವಾಯುವೇಗವಿಘಟ್ಟಿತಃ ॥ ೭೮ ॥ ಸುಮಹದ್ವಾನರಾನೀಕಂ ಛಾದಯಾಮಾಸ ಸರ್ವತಃ । ಗಿರಿಪ್ರಸ್ಥೇಷು ರಮ್ಯೇಷು ಸರ್ವತಸ್ಸಂಪ್ರಪುಷ್ಪಿತಾಃ ॥ ೭೯ ॥ ಕೇತಕ್ಯಸ್ಸಿಂಧುವಾರಾಶ್ಚ ವಾಸಂತ್ಯಶ್ಚ ಮನೋರಮಾಃ । ಮಾಧವ್ಯೋ ಗಂಧಪೂರ್ಣಾಶ್ಚ ಕುಂದಗುಲ್ಮಾಶ್ಚ ಪುಷ್ಪಿತಾಃ ॥ ೮೦ ॥

---

ಗಳನ್ನೂ ನೆಲ್ಲೀಮರಗಳನ್ನೂ, ನೀಪಾ೯ - ಬಿಳೇಮತ್ತೀಗಿಡಗಳನ್ನೂ, ಭಂಜಂತಿಸ್ಮ - ಮುರಿದರಷ್ಟೆ. ॥ ೭೫ ॥ ರಮ್ಯೇಷು - ಮನಸ್ಸಿಗಿಂಪಾಗಿರುವ, ಪ್ರಸ್ತರೇಷು - ಕಲ್ಲುಗಳಲ್ಲಿ, ವಿವಿಧಾಃ - ನಾನಾ ಬಗೆಗಳಾದ, ಕಾನನದ್ರುಮಾಃ - ಕಾಡುಗಳಲ್ಲಿರುವ ಅನೇಕ ಗಿಡಗಳು, ವಾಯು....ತಾಃ - ಗಾಳಿಯ ವೇಗದಿಂದ ಕಂಪಿಸಲ್ಪಟ್ಟವುಗಳಾಗಿ, ಪುಷ್ಪೈಃ - ಹುವ್ವಗಳಿಂದ, ತಾ೯ - ಆ ವಾನರರನ್ನು ಕುರಿತು, ಅವಕಿರಂತಿ-ಎರಚಿದವು. ॥ ೭೬ ॥ ಚಂದ....ಲಃ-ಶ್ರೀಗಂಧ ವೃಕ್ಷಗಳಿಂದ ತಣ್ಣಗಿರುವ, ಸುಖಸಂಸ್ಪರ್ಶಃ-ಸುಖಕರವಾದ ಸ್ಪರ್ಶವುಳ್ಳ, ಮಾರುತಃ - ಗಾಳಿಯು, ಮಧುಗಂಧಿಷು - ಮಕರಂದ ರಸವೂ ಸುವಾಸನೆಯೂ ಉಳ್ಳ, ವನೇಷು - ವನಗಳಲ್ಲಿ, ಅನುಕೂಜದ್ಭಿಃ - ಅನುಸರಿಸಿ ಧ್ವನಿಗೈಯುತ್ತಿರುವ, ಷಟ್ಪದೈಃ-ಭ್ರಮರಗಳಿಂದರಡಿ, ವಾತಿ-ಬೀಸುತ್ತಿತ್ತು. ॥ ೭೭ ॥ ಶೈಲರಾಜಸ್ತು - ಆ ಮಲಯಪರ್ವತವಾದರೆ, ಅಧಿಕಂ - ಹೆಚ್ಚಾಗಿ, ಧಾತುಭಿಃ - ಗೈರಿಕಾದಿ ಧಾತುಗಳಿಂದ, ಸುವಿಭೂಷಿತಃ - ಬಹಳ ಅಲಂಕರಿಸಲ್ಪಟ್ಟಿತು, ಧಾತುಭ್ಯಃ - ಗೈರಿಕಾದಿ ಧಾತುಗಳಿಂದ, ಪ್ರಸೃತಃ - ಪ್ರಸರಿಸುತ್ತಿರುವ, ವಾಯು....ತಃ - ಗಾಳಿಯ ವೇಗದಿಂದ ಹೊಡೆಯಲ್ಪಟ್ಟ, ರೇಣುಃ - ಧೂಳಿಯು, ಸರ್ವತಃ - ಎಲ್ಲೆಡೆಗಳಲ್ಲಿಯೂ, ಸುಮಹತಿ - ದೊಡ್ಡದಾದ, ವಾನರಾನೀಕಂ - ಕಪಿಸೈನ್ಯವನ್ನು, ಛಾದಯಾಮಾಸ - ಆಚ್ಛಾದನೆ ಮಾಡಿತು. ॥ ೭೮-೭೯ ॥ ರಮ್ಯೇಷು - ಮನೋಹರಗಳಾದ, ಗಿರಿಪ್ರಸ್ಥೇಷು - ಬೆಟ್ಟದ ಜರಿಗಳಲ್ಲಿ, ಸರ್ವತಃ - ಎಲ್ಲಾ ಕಡೆಗಳಲ್ಲಿಯೂ, ಸಂಪ್ರಪುಷ್ಪಿತಾಃ - ಹೂ ಬಿಟ್ಟಿರುವ, ಕೇತಕ್ಯಃ - ಕೇತಕೀಗಿಡಗಳು, ಸಿಂಧುವಾರಾಶ್ಚ - ಲಕ್ಕೀಗಿಡಗಳೂ, ಮನೋರಮಾಃ - ಮನೋಹರಗಳಾದ, ವಾಸಂತಶ್ಚ - ಬಂಡಿಗುಲ

---

ದನ್ನು ನೋಡಿದರು. ಆ ಮದಗರ್ವಿತರಾದ ವಾನರರಾದರೋ ಈ ವೃಕ್ಷಗಳೆಲ್ಲವನ್ನೂ ಮುರಿದಿಕ್ಕುತ್ತ ಮುಂಬರಿಯುತ್ತಿದ್ದರು. ಆ ವೃಕ್ಷಗಳೆಲ್ಲವೂ ಪುಷ್ಪವೃಷ್ಟಿಯಿಂದ ಆ ವಾನರರನ್ನು ಸೇವಿಸುತ್ತಿದ್ದುವು. ಸುಗಂಧಭರಿತವಾದ ಜೇನುಗಳು ತುಂಬಿರುವ ಆ ವನಪ್ರದೇಶಗಳಿಂದ ಹೊರಹೊರಟುದೂ, ಚಂದನದಂತೆ ಬಹು ಶೀತಳವಾಗಿರುವುದೂ, ಮೆಲ್ಲಮೆಲ್ಲನೆ ಬೀಸುತ್ತಿರುವುದೂ ಆದ ಮಾರುತವು ಮಧುಪಿಪಾಸೆಯಿಂದ ಅತ್ತಿತ್ತ ಹಾರಾಡುತ್ತಿದ್ದ ದುಂಬಿಗಳ ಝೇಂಕಾರನಾದದೊಡನೆ ಬೆರತು ಬೀಸುತ್ತಿದ್ದಿತು.॥೭೬–೭೭॥ ಪರ್ವತೋತ್ತಮವಾದ ಆ ಸಹ್ಯಪರ್ವತವು ವಿಶೇಷವಾಗಿ ಗೈರಿಕಾದಿ ಧಾತುಗಳಿಂದಲಂಕೃತವಾಗಿದ್ದಿತು. ಆ ವಾನರರು ಆ ಗೈರಿಕಾದಿ ಧಾತುಗಳನ್ನು ತುಳಿಯುತ್ತಿದ್ದುದರಿಂದೆದ್ದ ಪರಾಗವು ಗಾಳಿಯೊಡನೆ ಮೇಲಕ್ಕೆ ಹೊರಟು ಆ ವಾನರಸೇನೆಯೆಲ್ಲವನ್ನೂ ಕವಿದಿದ್ದಿತು. ಮನೋಹರವಾದ ಆ ಸಹ್ಯಾದ್ರಿಯ ತಪ್ಪಲಿನಲ್ಲಿದ್ದ ಜರಿಗಳಲ್ಲಿರುವವುಗಳಾಗಿಯೂ, ಚೆನ್ನಾಗಿ ಹೂವೊಳೆತಿರುವುವಾಗಿಯೂ ಆದ

ಚಿರಿಬಿಲ್ವಾ ಮಧೂಕಾಶ್ಚ ವಕುಳಾಃ ಪ್ರಿಯಕಾಸ್ತಥಾ । ಸ್ಫೂರ್ಜಕಾಸ್ತಿಲಕಾಶ್ಚೈವ ನಾಗವೃಕ್ಷಾಶ್ಚ ಪುಷ್ಪಿತಾಃ ॥ ೪೧ ॥ ಚೂತಾಃ ಪಾಟಲಯಶ್ಚೈವ ಕೋವಿದಾರಾಶ್ಚ ಪುಷ್ಪಿತಾಃ । ಮುಚುಳಿಂದಾರ್ಜುನಾಶ್ಚೈವ ಶಿಂಶುಪಾಃ ಕುಟಜಾಸ್ತಥಾ ॥ ೪೨ ॥ ಧವಾಶ್ಶಾಲ್ಮಲಯಶ್ಚೈವ ರಕ್ತಾಃ ಕುರವಕಾಸ್ತಥಾ । ಹಿಂತಾಲಾಸ್ತಿನಿಶಾಶ್ಚೈವ ಚೂರ್ಣಕಾ ದೀಪಕಾಸ್ತಥಾ ॥ ೪೩ ॥ ನೀಲಾಶೋಕಾಶ್ಚ ವರಣಾ ಅಂಕೋಲಾಃ ಪದ್ಮಕಾಸ್ತಥಾ । ಪ್ಲವಮಾನೈಃ ಪ್ಲವಂಗೈಸ್ತು ಸರ್ವೇ ಪರ್ಯಾಕುಲೀಕೃತಾ ॥೪೪॥ ವಾಪ್ಯಸ್ತಸ್ಮಿಗಿರೌ ಶೀತಾಃ ಪಲ್ವಲಾನಿ ತಥೈವಚ । ಚಕ್ರವಾಕಾನುಚರಿತಾಃ ಕಾರಂಡವನಿಷೇವಿತಾಃ ॥ ೪೫ ॥ ಪ್ಲವೈಃ ಕ್ರೌಂಚೈಶ್ಚ ಸಂಕೀರ್ಣಾ ವರಾಹಮೃಗಸೇವಿತಾಃ ।

---

ಗಂಜೀಗಿಡಗಳೂ, ಗಂಧಪೂರ್ಣಾಃ - ಗಂಧದಿಂದ ಪೂರ್ಣವಾದ, ಮಾಧವ್ಯಃ - ಗುಲಗಂಜೀಗಿಡಗಳಲ್ಲಿ ಭೇದವು, ಪುಷ್ಪಿತಾಃ - ಹೂ ಬಿಟ್ಟಿರುವ, ಕುಂದಗುಲ್ಮಾಶ್ಚ - ಗುಂಡುಮಲ್ಲಿಗೇಗಿಡಗಳ ತಂಡಗಳು, ಚಿರಿಬಿಲ್ವಾಃ - ಹೊಂಗೇಗಿಡಗಳು, ಮಧೂಕಾಶ್ಚ - ಇಪ್ಪೇಗಿಡಗಳೂ, ವಕುಳಾಃ - ಹವಳದಗಿಡಗಳೂ, ತಥಾ - ಹಾಗೆಯೇ, ಪ್ರಿಯಕಾಃ-ಕದಂಬಗಿಡಗಳೂ, ಸ್ಫೂರ್ಜಕಾಃ-ವೃಕ್ಷವಿಶೇಷಗಳೂ, ತಿಲಕಾಶ್ಚೈವ-ತಿಲಕವೃಕ್ಷಗಳೂ, ಪುಷ್ಪಿತಾಃ - ಹೂ ಬಿಟ್ಟಿರುವ, ನಾಗವೃಕ್ಷಾಶ್ಚ - ನಾಗಕೇಸರೀಗಿಡಗಳೂ, ಪಾಟಲಯಶ್ಚೈವ - ಪಾದ್ರೀಮರಗಳು, ಪುಷ್ಪಿತಾಃ - ಹೂ ಬಿಟ್ಟಿರುವ, ಕೋವಿದಾರಾಶ್ಚ - ಕಂಚವಾಳದಮರಗಳೂ, ಮುಚ....ವ - ಖರ್ಜೂರದಗಿಡಗಳೂ ಅರ್ಜುನವೃಕ್ಷಗಳೂ, ಶಿಂಶುಪಾಶ್ಚ - ಶಿಂಶುಪಾವೃಕ್ಷಗಳು, ತಥಾ - ಹಾಗೆಯೇ, ಕುಟಜಾಃ - ಬಿಳೀಗೋರಂಟೀಗಿಡಗಳು, ಧವಾಃ - ಕಗ್ಗಲೀಗಿಡಗಳೂ, ಶಾಲ್ಮಲಯಶ್ಚೈವ - ಬೂರಗದಮರಗಳೂ, ರಕ್ತಾಃ - ಕೆಂಪಾದ, ಕುರವಕಾಃ - ಗೋರಂಟೀಗಿಡಗಳು, ತಥಾ - ಹಾಗೆಯೇ, ಹಿಂತಾಳಾಃ - ಶ್ರೀತಾಳದಗಿಡಗಳು, ತಿಮಿಶಾಶ್ಚೈವ - ನೇಮಿಾಗಿಡಗಳೂ, ಚೂರ್ನಕಾಃ - ನೆಲ್ಲೀಗಿಡಗಳು, ತಥಾ - ಹಾಗೆಯೇ, ನೀಪಕಾಃ - ಈಚಲುಮರಗಳೂ, ನೀಲಾಶೋಕಾಃ - ಕಪ್ಪಾಗಿರುವ ಹೂಗಳುಳ್ಳ ಚಿನ್ನದೆಲೇಗಿಡಗಳು, ವರಣಾಃ - ಬಸಲೇಗಿಡಗಳೂ, ಅಂಕೋಲಾಃ - ಅಂಕೋಲೇಗಿಡಗಳೂ, ತಥಾ - ಹಾಗೆಯೇ, ಪದ್ಮಕಾಃ - ಬೆಟ್ಟದಾವರೆಗಿಡಗಳೂ, ಸರ್ವೇ - ಸಮಸ್ತವಾದ ಈ ಗಿಡಗಳು, ಪ್ಲವಮಾನೈಃ - ಹಾರುತ್ತಿರುವ, ಪ್ಲವಂಗೈಸ್ತು - ವಾನರರಿಂದಲಾದರೆ, ಪರ್ಯಾಕುಲೀಕೃತಾಃ - ಕಂಪಾಯಮಾನಗಳಾಗಿ ಮಾಡಲ್ಪಟ್ಟವು. ॥ ೪೧-೪೪ ॥ ತಸ್ಮಿಂಗಿರೌ - ಆ ಬೆಟ್ಟದಲ್ಲಿ, ಶೀತಾಃ - ತಣ್ಣಗಿರುವ, ವಾಪ್ಯಶ್ಚ-ಸರೋವರಗಳೂ, ತಥೈವ - ಹಾಗೆಯೇ, ಪಲ್ವಲಾನಿ-ಕೊಳಗಳೂ, ಚಕ್ರ....ತಾಃ-ಚಕ್ರವಾಕಪಕ್ಷಿಗಳಿಂದ ಸಂಚರಿಸಲ್ಪಟ್ಟ, ಕಾರಂ....ತಾಃ - ನೀರುಕೋಳಿಗಳಿಂದ ಸೇವಿಸಲ್ಪಟ್ಟ, ಪ್ಲವೈಃ-ನೀರುಕಾಗೆಗಳಿಂದಲೂ, ಕ್ರೌಂಚೈಃ - ಕ್ರೌಂಚಪಕ್ಷಿಗಳಿಂದಲೂ, ಸಂಕೀರ್ಣಾಃ - ತುಂಬಿರುವ,

---

ತಾಳೆ, ಇಪ್ಪೆ, ವಾಸಂತಿ, ಮಾಧವಿ, ಕುಂದಗುಲ್ಮ, ಚಿರಿಬಿಲ್ವ, ಮಧೂಕ, ಬಕುಲ, ಪ್ರಿಯಕ, ತಿಲಕ, ನಾಗ, ಮಾವು, ರಜಕ, ಕೋವಿದಾರ, ಮುಚುಲಿಂದ, ಅರ್ಜುನ, ಶಿಂಶುಪಾ, ಕುಟಜ, ಹಿಂತಾಲ, ತಿನಿಶ, ಚೂರ್ಣಕ, ನೀಪ, ನೀಲಾಶೋಕ, ವರಣ, ಅಂಕೋಲ, ಪದ್ಮಕ ಇವೇ ಮೊದಲಾದ ವೃಕ್ಷಲತಾಗುಲ್ಮಗಳೆಲ್ಲವೂ ಆ ವಾನರಲಂಘನಾದಿಗಳಿಂದ ಬಹಳವಾಗಿ ಅಲುಗಿ ಹೋದವು. ॥೭೮-೪೪॥ ಆ ಸಹ್ಯಾದ್ರಿಯಲ್ಲಿ ತಣ್ಣನೆಯ ನೀರಿನಿಂದೊಪ್ಪುತ್ತಿರುವುವಾಗಿಯೂ, ಚಕ್ರವಾಕ ಸಂಚಾರವುಳ್ಳುವಾಗಿಯೂ, ನೀರುಕೋಳಿ, ನೀರುಕಾಗೆ, ಕ್ರೌಂಚವೇ ಮೊದಲಾದ ಪಕ್ಷಿಗಳಿಗೆ ಆಸರೆಯಾಗಿರುವುವಾಗಿಯೂ, ಕಾಡುಹಂದಿಗಳಿಗೂ, ದುಷ್ಟಮೃಗಗಳಿಗೂ ನಿವಾಸ

ಋಕ್ಷೈಸ್ತರಕ್ಷುಭಿಸ್ಸಿಂಹೈಶ್ಶಾರ್ದೂಲೈಶ್ಚ ಭಯಾವಹೈಃ ॥ ೮೬ ॥ ವ್ಯಾಳೈಶ್ಚ ಬಹುಭಿ
ರ್ಭೀಮೈಸ್ಸೇವ್ಯಮಾನಾಸ್ಸಮಂತತಃ । ಪದ್ಮೈಸ್ಸೌಗಂಧಿಕೈಃ ಫುಲ್ಲೈಃ ಕುಮುದೈ
ಶ್ಚೋತ್ಪಲೈಸ್ತಥಾ ॥ ೮೭ ॥ ವಾರಿಜೈರ್ವಿವಿಧೈಃ ಪುಷ್ಪೈ ರಮ್ಯಾಸ್ತತ್ರ ಜಲಾಶಯಾಃ ।
ತಸ್ಯ ಸಾನುಷು ಕೂಜಂತಿ ನಾನಾದ್ವಿಜಗಣಾಸ್ತಥಾ ॥ ೮೮ ॥ ಸ್ನಾತ್ವಾ ಪೀತ್ವೋದಕಾ
ನ್ಯತ್ರ ಜಲೇ ಕ್ರೀಡಂತಿ ವಾನರಾಃ । ಅನ್ಯೋನ್ಯಂ ಪ್ಲಾವಯಂತಿಸ್ಮ ಶೈಲಮಾರುಹ್ಯ
ವಾನರಾಃ ॥ ೮೯ ॥ ಫಲಾನ್ಯಮೃತಗಂಧೀನಿ ಮೂಲಾನಿ ಕುಸುಮಾನಿಚ । ಬುಭುಜು
ರ್ವಾನರಾಸ್ತತ್ರ ಪಾದಪಾನಾಂ ಮದೋತ್ಕಟಾಃ ॥ ೯೦ ॥ ದ್ರೋಣಮಾತ್ರಪ್ರಮಾ

ವರಾ....ತಾಃ - ಕಾಡುಹಂದಿಗಳಿಂದಲೂ ಚಿಗರೆಗಳಿಂದಲೂ ಸೇವಿಸಲ್ಪಟ್ಟ, ಋಕ್ಷೈಸ್ತು - ಕರಡಿಗಳಿಂದಲೂ, ತರಕ್ಷುಭಿಃ-ಚಿರತೆಗಳಿಂದಲೂ, ಸಿಂಹೈಃ-ಸಿಂಹಗಳಿಂದಲೂ, ಭಯಾವಹೈಃ-ಭಯಂಕರಗಳಾದ, ಶಾರ್ದೂಲೈಃ - ದೊಡ್ಡ ಹುಲಿಗಳಿಂದಲೂ, ಭೀಮೈಃ - ಭಯಂಕರಗಳಾದ, ಬಹುಭಿಃ - ಅನೇಕಗಳಾದ, ವ್ಯಾಳೈಃ - ಸರ್ಪಗಳಿಂದಲೂ, ಸಮಂತತಃ - ಎಲ್ಲಾಕಡೆಯಲ್ಲಿಯೂ, ಸೇವ್ಯಮಾನಾಃ - ಸೇವಿಸಲ್ಪಟ್ಟ, ಪದ್ಮೈಃ - ಕಮಲಗಳಿಂದಲೂ, ಸೌಗಂಧಿಕೈಃ - ಸೌಗಂಧಿಕಾ ಪುಷ್ಪಗಳಿಂದಲೂ, ತಥಾ - ಹಾಗೆಯೇ, ಫುಲ್ಲೈಃ - ಅರಳಿದ, ಕುಮುದೈಃ - ಬಿಳಿನೈದಲೇ ಹೂಗಳಿಂದಲೂ, ಉತ್ಪಲೈಶ್ಚ - ನೀಲೋತ್ಪಲಗಳಿಂದಲೂ, ವಾರಿಜೈಃ - ನೀರಿನಲ್ಲಿ ಹುಟ್ಟಿದ, ವಿವಿಧೈಃ - ನಾನಾಬಗೆಗಳಾದ, ಪುಷ್ಪೈಃ - ಹೂಗಳಿಂದ, ತತ್ರ - ಆ ವನದಲ್ಲಿ, ಜಲಾಶಯಾಃ - ಸರೋವರಗಳು, ರಮ್ಯಾಃ - ಮನೋಹರಗಳಾಗಿ, ಸಂತಿ - ಇದ್ದುವು, ತತ್ರ - ಆ ಮಲಯಪರ್ವತದ, ಸಾನುಷು - ಜರಿಗಳಲ್ಲಿ, ನಾನಾ....ಣಾಃ - ಅನೇಕ ಬಗೆಯ ಪಕ್ಷಿತಂಡಗಳು, ಕೂಜಂತಿ - ಕೂಗುತ್ತಿದ್ದುವು. ॥ ೮೮ ॥ ಅತ್ರಜಲೇ - ಆ ನೀರಿನಲ್ಲಿ, ವಾನರಾಃ - ಕಪಿಗಳು, ಸ್ನಾತ್ವಾ - ಸ್ನಾನಮಾಡಿ, ಉದಕಾನಿ - ನೀರನ್ನು, ಪೀತ್ವಾ - ಕುಡಿದು, ಕ್ರೀಡಂತಿ - ವಿಹರಿಸುತ್ತಿದ್ದರು, ವಾನರಾಃ - ಕಪಿಗಳು, ಶೈಲಂ - ಬೆಟ್ಟವನ್ನು, ಆರುಹ್ಯ - ಏರಿ, ಅನ್ಯೋನ್ಯಂ - ಒಬ್ಬರನೊಬ್ಬರು, ಪ್ಲಾವಯಂತಿಸ್ಮ - ಮುಳುಗಿದರಷ್ಟೆ. ॥ ೮೯ ॥ ಮದೋತ್ಕಟಾಃ - ಮದವೇರಿದ, ವಾನರಾಃ - ಕಪಿಗಳು, ತತ್ರ - ಆ ಬೆಟ್ಟದಲ್ಲಿ, ಪಾದಪಾನಾಂ - ಗಿಡಗಳ, ಅಮೃ....ನಿ - ಅಮೃತದಂತೆ ಸುವಾಸನೆಯುಳ್ಳ, ಮೂಲಾನಿ - ಕಂದಮೂಲಗಳನ್ನೂ, ಕುಸುಮಾನಿಚ - ಹೂಗಳನ್ನೂ, ಬುಭುಜುಃ - ತಿಂದರು. ॥ ೯೦ ॥ ಮಧುಪಿಂಗಳಾಃ-ಜೇನುಗಳಂತೆ ಪಿಂಗಳವರ್ಣವುಳ್ಳ, ತೇವಾನರಾಃ - ಆ ಕಪಿಗಳು, ಲಂಬಮಾನಾನಿ - ಜೋಲಾಡುತ್ತಿರುವ, ದ್ರೋಣ ...ನಿ - ಒಂದು ಕೊಳಗ ಪ್ರಮಾಣ

ಸ್ಥಾನವಾಗಿರುವುವಾಗಿಯೂ ಇರುವ ಕೊಳಗಳು ಶೋಭಿಸುತ್ತಿದ್ದುವು. ಕರಡಿ, ತೋಳ, ಸಿಂಹ, ಶಾರ್ದೂಲ, ಮಹಾ ಸರ್ಪಗಳು ಇವೇ ಮೊದಲಾದವುಗಳಿಂದ ಆ ಕೊಳಗಳು ಸೇವಿಸಲ್ಪಡುತ್ತಿದ್ದುವು. ಸೊಗಸಾಗಿ ಅರಳಿರುವ ಕಮಲಗಳಿಂದಲೂ, ಸುಗಂಧಭರಿತವಾದ ಕುವಲಯಗಳಿಂದಲೂ, ಇತರ ಜಲಪುಷ್ಪಗಳಿಂದಲೂ ಆ ಜಲಾಶಯಗಳು ಶೋಭಿಸುತ್ತಿದ್ದುವು. ಆ ಸಹ್ಯಾದ್ರಿಯ ತಪ್ಪಲುಗಳಲ್ಲಿ ವಿವಿಧ ಮೃಗಪಕ್ಷಿಗಳು ಬಹು ಮನೋಹರವಾಗಿ ಕೂಗಿಡುತ್ತಿದ್ದುವು. ಆ ವಾನರರಾದರೋ ಆ ಕೊಳಗಳಲ್ಲಿ ಮಿಂದು ಜಲಪಾನಮಾಡಿ, ಬಗಬಗೆಯಾಗಿ ಆಟವಾಡಿದರು. ಅವರು ಬೆಟ್ಟವನ್ನೇರಿ ಒಬ್ಬರನ್ನೊಬ್ಬರು ಆ ಕೊಳಗಳಲ್ಲಿ ಕೆಡವುತ್ತಿದ್ದರು. ಅಮೃತೋಪಮವಾದ ವಿವಿಧ ಫಲಗಳನ್ನು ಭುಜಿಸಿ, ಕಂದಮೂಲಗಳನ್ನೂ, ಕುಸುಮಗಳನ್ನೂ ಭುಜಿಸಿದರು. ॥೮೫-೯೦॥ ಹೀಗೆ ಮದವೇರಿದ ಆ ವಾನರರು ಅಲ್ಲಿರುವ ವೃಕ್ಷಗಳನ್ನು ಮುರಿದಿಕ್ಕುತ್ತ ಅವುಗಳ

ಣಾನಿ ಲಂಬಮಾನಾನಿ ವಾನರಾಃ । ಯಯುಃ ಪಿಬಂತೋ ಹೃಷ್ಟಾಸ್ತೇ ಮಧೂನಿ ಮಧುಪಿಂಗಳಾಃ ॥ ೯೧ ॥ ಪಾದಪಾನವಭಂಜಂತೋ ವಿಕರ್ಷಂತಸ್ತಥಾ ಲತಾಃ । ವಿಧಮಂತೋ ಗಿರಿವರಾನ್ ಪ್ರಯಯುಃ ಪ್ಲವಗರ್ಷಭಾಃ ॥ ೯೨ ॥ ವೃಕ್ಷೇಭ್ಯೋಽನ್ಯೇತು ಕಪಯೋ ನರ್ದಂತೋ ಮಧುದರ್ಪಿತಾಃ । ಅನ್ಯೇ ವೃಕ್ಷಾನ್ಪ್ರಪದ್ಯಂತೇ ಪ್ರಪತಂತ್ಯಪಿ ಚಾಪರೇ ॥ ೯೩ ॥ ಬಭೂವ ವಸುಧಾ ತೈಸ್ತು ಸಂಪೂರ್ಣಾ ಹರಿಯೂಥಪೈಃ । ಯಥಾ ಕಲಮಕೇದಾರೈಃ ಪಕ್ವೈರಿವ ವಸುಂಧರಾ ॥ ೯೪ ॥ ಮಹೇಂದ್ರಮಥ ಸಂಪ್ರಾಪ್ಯ ರಾಮೋ ರಾಜೀವಲೋಚನಃ । ಅಧ್ಯಾರೋಹನ್ಮಹಾಬಾಹುಃ ಶಿಖರಂ ದ್ರುಮಭೂಷಿತಂ ॥ ೯೫ ॥ ತತಃ ಶಿಖರಮಾರುಹ್ಯ ರಾಮೋ ದಶರಥಾತ್ಮಜಃ ।

---

ವುಳ್ಳ, ಮಧೂನಿ - ಜೇನುಗಳನ್ನು, ಪಿಬಂತಃ - ಕುಡಿಯುತ್ತ, ಹೃಷ್ಟಾಃ - ಸಂತೋಷಗೊಂಡವರಾಗಿ, ಯಯುಃ - ತೆರಳಿದರು. ॥ ೯೧ ॥ ಪ್ಲವಗರ್ಷಭಾಃ - ವಾನರಶ್ರೇಷ್ಠರು, ಪಾದಪಾನ್ - ಗಿಡಗಳನ್ನು, ಅವಭಂಜಂತಃ - ಮುರಿಯುತ್ತ, ತಥಾ - ಹಾಗೆಯೇ, ಲತಾಃ - ಬಳ್ಳಿಗಳನ್ನು, ವಿಕರ್ಷಂತಃ - ಸೆಳೆಯುತ್ತ, ಗಿರಿವರಾನ್ - ಶ್ರೇಷ್ಠವಾದ ಬೆಟ್ಟಗಳನ್ನು, ವಿಧಮಂತಃ - ಪುಡಿಮಾಡುತ್ತ, ಪ್ರಯಯುಃ - ತೆರಳಿದರು. ॥ ೯೨ ॥ ಅನ್ಯೇಕಪಯಸ್ತು - ಮತ್ತೆ ಕೆಲವರು ವಾನರರು, ವೃಕ್ಷೇಭ್ಯಃ - ಗಿಡಗಳ ಪೆಸೆಯಿಂದ, ನರ್ದಂತಃ - ಕುಣಿಯುತ್ತಿರುವವರಾಗಿ, ಮಧುದರ್ಪಿತಾಃ - ಮದ್ಯಪಾನದಿಂದ ಗರ್ವಿತರಾಗಿ, ಯಯುಃ - ಹೊರಟರು, ಅಪರೇ - ಮತ್ತೆ ಕೆಲವರು, ವೃಕ್ಷಾನ್ - ಗಿಡಗಳನ್ನು, ಪ್ರಪದ್ಯಂತೇ - ಏರಿದರು, ಅನ್ಯೇ - ಕೆಲವರು, ಪ್ರಪತಂತಿ - ಕೆಳಕ್ಕೆ ಧುಮುಕಿದರು. ॥ ೯೩ ॥ ವಸುಧಾ - ಭೂಮಿಯು, ತೈರ್ಹರಿಯೂಥಪೈಃ - ಆ ವಾನರ ಯೂಥಪತಿಗಳಿಂದ, ಪಕ್ವೈಃ - ಹಣ್ಣಾಗಿರುವ, ಕಲಮಕೇದಾರೈಃ - ನೆಲ್ಲುಪೈರುಗಳಿಂದ, ವಸುಂಧರಾಯಥಾ - ಭೂಮಿಯಂತೆ, ಸಂಪೂರ್ಣಾ - ತುಂಬಿಸಲ್ಪಟ್ಟದು, ಬಭೂವ - ಆಯಿತು. ॥ ೯೪ ॥ ಅಥ - ಬಳಿಕ, ರಾಜೀವಲೋಚನಃ - ಕಮಲಾಕ್ಷನಾದ, ಮಹಾಬಾಹುಃ - ಮಹಾಭುಜನಾದ, ರಾಮಃ - ಶ್ರೀರಾಮನು, ಮಹೇಂದ್ರಂ - ಮಹೇಂದ್ರಪರ್ವತವನ್ನು, ಸಂಪ್ರಾಪ್ಯ - ಹೊಂದಿ, ದ್ರುಮಭೂಷಿತಂ - ಗಿಡಗಳಿಂದಲಂಕೃತವಾದ, ಶಿಖರಂ - ತುದಿಯನ್ನು, ಅಧ್ಯಾರೋಹತ್ - ಏರಿದನು. ॥ ೯೫ ॥ ತತಃ - ಬಳಿಕ, ದಶರಥಾತ್ಮಜಃ - ದಶರಥಪುತ್ರನಾದ,

---

ಲ್ಲಿದ್ದ ಕೊಳಗದಷ್ಟು ಜೇನುತುಂಬಿದ ಗೂಡುಗಳನ್ನು ಕಿತ್ತು ಕುಡಿದರು. ಹೀಗೆ ಅವರೆಲ್ಲರೂ ಸುಖವಾಗಿ ಜೇನುಗಳನ್ನು ಬೇಕಾದಂತೆ ಕುಡಿದು ಮುಂದೆ ನಡೆಯುವಾಗ ಆ ಗಿಡಗಳನ್ನು ಅತ್ತಿತ್ತ ಕಿತ್ತೊಗೆಯುತ್ತಲೂ, ಲತೆಗಳನ್ನು ಕಿತ್ತು ಬಿಸುಡುತ್ತಲೂ, ಬೆಟ್ಟಗುಟ್ಟಗಳನ್ನು ಪುಡಿಪುಡಿಮಾಡುತ್ತಲೂ ಹೊರಟರು. ಮತ್ತೇರಿದ ಕೆಲವರು ವಾನರರು ಗರ್ಜಿಸುತ್ತ ಮರದಿಂದ ಮರಕ್ಕೆ ಹಾರುತ್ತ ಹೊರಟರು. ಕೆಲವರು ಮರಗಳನ್ನೇರುತ್ತಿದ್ದರು. ಕೆಲವರು ಮರಗಳ ಮೇಲಿಂದ ಕೆಳಕ್ಕೆ ಧುಮುಕುತ್ತಿದ್ದರು. ಹೀಗೆ ಬಹು ಸಂತೋಷದಿಂದಲೂ, ಉತ್ಸಾಹದಿಂದಲೂ ಮುಂದುವರಿಯುತ್ತಿದ್ದ ಆ ವಾನರರು ಭೂಮಿಯೆಲ್ಲವನ್ನೂ ಆವರಿಸಿದವರಾಗಿ ಹೊರಟರು. ಹೀಗೆ ಆ ವಾನರರಿಂದ ನಿಬಿಡವಾದ ಭೂಮಿಯು ತೆನೆದುಂಬಿದ ಭತ್ತದ ಪೈರುಗಳುಳ್ಳಂತೆ ಶೋಭಿಸುತ್ತಿದ್ದಿತು. ॥೯೧–೯೪॥ ಆಗ ಮಹಾ ಬಾಹುವೂ, ಪದ್ಮಪತ್ರಾಯತೇಕ್ಷಣನೂ ಆದ ಶ್ರೀರಾಮಮೂರ್ತಿಯು ಮಹೇಂದ್ರಪರ್ವತವನ್ನು ಸೇರಿದವನಾಗಿ, ಅನೇಕ ವೃಕ್ಷಗಳಿಂದಲಂಕೃತವಾಗಿದ್ದ ಆ ಪರ್ವತದ ಶಿಖರವನ್ನೇರಿ ಮೊಸಳೆಗಳಿಂದಲೂ, ಮೀನುಗಳಿಂದಲೂ ಸಂಕುಲ

ಕೂರ್ಮಮೀನಸಮಾಕೀರ್ಣಮಪಶ್ಯತ್ಸಲಿಲಾಕರಂ ||೯೬|| ತೇ ಸಹ್ಯಂ ಸಮತಿಕ್ರಮ್ಯ ಮಲಯಂಚ ಮಹಾಗಿರಿಂ | ಆಸೇದುರಾನುಪೂರ್ವ್ಯೇಣ ಸಮುದ್ರಂ ಭೀಮನಿಃಸ್ವನಂ ||೯೭|| ಅವರುಹ್ಯ ಜಗಾಮಾಶು ವೇಲಾವನಮನುತ್ತಮಂ | ರಾಮೋ ರಮಯತಾಂ ಶ್ರೇಷ್ಠಸ್ಸಸುಗ್ರೀವಸ್ಸಲಕ್ಷ್ಮಣಃ ||೯೮|| ಅಥ ಧೌತೋಪಲತಲಾಂ ತೋಯೌಘೈಸ್ಸಹಸೋತ್ಥಿತೈಃ | ವೇಲಾಮಾಸಾದ್ಯ ವಿಪುಲಾಂ ರಾಮೋ ವಚನಮಬ್ರವೀತ್ ||೯೯|| ಏತೇ ವಯಮನುಪ್ರಾಪ್ತಾ ಸ್ಸುಗ್ರೀವ ವರುಣಾಲಯಂ | ಇಹೇದಾನೀಂ ವಿಚಿಂತಾ ಸಾ ಯಾ ನಃ ಪೂರ್ವಂ ಸಮುತ್ಥಿತಾ ||೧೦೦|| ಅತಃ ಪರಮತೀರೋಽಯಂ ಸಾಗರ

ರಾಮಃ - ಶ್ರೀರಾಮನು, ಶಿಖರಂ - ಶಿಖರವನ್ನು, ಆರುಹ್ಯ-ಏರಿ, ಕೂರ್ಮ....ರ್ಣಂ-ಆಮೆಗಳಿಂದಲೂ ಮೀನುಗಳಿಂದಲೂ ತುಂಬಿದ, ಸಲಿಲಾಕರಂ - ಸಮುದ್ರವನ್ನು, ಅಪಶ್ಯತ್ - ಕಂಡನು. ||೯೬|| ತೇ - ಅವರುಗಳು, ಸಹ್ಯಂ - ಸಹ್ಯಪರ್ವತವನ್ನು, ಮಹಾಗಿರಿಂ - ದೊಡ್ಡ ಪರ್ವತವಾದ, ಮಲಯಂಚ - ಮಲಯಪರ್ವತವನ್ನೂ ಸಹ, ಸಮತಿಕ್ರಮ್ಯ - ದಾಟಿ, ಆನುಪೂರ್ವೇಣ - ಕ್ರಮದಿಂದ, ಭೀಮನಿಸ್ಸ್ವನಂ - ಭಯಂಕರವಾದ ಘೋಷವುಳ್ಳ, ಸಮುದ್ರಂ - ಸಮುದ್ರವನ್ನು, ಆಸೇದುಃ - ಹೊಂದಿದರು. ||೯೭|| ರಮಯತಾಂ - ಸಂತೋಷಗೊಳಿಸುವವರಲ್ಲಿ, ಶ್ರೇಷ್ಠಃ - ಉತ್ತಮನಾದ, ರಾಮಃ-ಶ್ರೀರಾಮನು, ಸಸುಗ್ರೀವಃ-ಸುಗ್ರೀವನಿಂದಲೂ, ಸಲಕ್ಷ್ಮಣಃ-ಲಕ್ಷ್ಮಣನಿಂದಲೂ ಕೂಡಿದವನಾಗಿ, ಅವರುಹ್ಯ-ಪರ್ವತದಿಂದಿಳಿದು, ಆಶು-ಬೇಗನೆ, ಅನುತ್ತಮಂ-ಸರ್ವೋತ್ತಮವಾದ, ವೇಲಾವನಂ-ತೀರದಲ್ಲಿರುವ ವನವನ್ನು ಕುರಿತು, ಜಗಾಮ - ತೆರಳಿದನು. ||೯೮|| ಅಥ - ಬಳಿಕ, ರಾಮಃ - ಶ್ರೀರಾಮನು, ಸಹಸಾ - ಜಾಗ್ರತೆಯಾಗಿ, ಉತ್ಥಿತೈಃ - ಹುಟ್ಟಿದ, ತೋಯೌಘೈಃ - ನೀರಿನ ಪ್ರವಾಹಗಳಿಂದ, ಧೌತೋ....ಲಾಂ - ತೊಳೆಯಿಸಲ್ಪಟ್ಟ ಕಲ್ಲುಭೂಮಿಯುಳ್ಳ, ವಿಪುಲಾಂ - ವಿಸ್ತಾರವಾದ, ವೇಲಾಂ - ತೀರವನ್ನು, ಆಸಾದ್ಯ - ಹೊಂದಿ, ವಚನಂ - ಮಾತನ್ನು, ಅಬ್ರವೀತ್ - ನುಡಿದನು. ||೯೯|| ಹೇ ಸುಗ್ರೀವ - ಎಲೈ ಸುಗ್ರೀವನೇ, ಏತೇವಯಂ - ಆ ಈ ನಾವುಗಳು, ವರುಣಾಲಯಂ - ಸಮುದ್ರವನ್ನು ಕುರಿತು, ಅನುಪ್ರಾಪ್ತಾಃ - ಬಂದೆವು, ಇಹ - ಇಲ್ಲಿ, (ನಃ - ನಮಗೆ,) ಯಾ - ಯಾವ ಚಿಂತೆಯು, ಪೂರ್ವಂ - ಮೊದಲೇ, ಸಮುತ್ಥಿತಾ - ಹುಟ್ಟಿದ್ದಿತೋ, ಸಾವಿಚಿಂತಾ - ಆ ವಿಶೇಷಾಲೋಚನೆಯು, ಕರ್ತವ್ಯಾ - ಮಾಡತಕ್ಕದ್ದು, ಅತಃಪರಂ - ಇನ್ನುಮೇಲೆ, ಅಯಂ - ಈ, ಸರಿತಾಂ

ವಾದ ದಕ್ಷಿಣಸಾಗರವನ್ನು ನೋಡಿದನು. ಆ ವಾನರಸೈನ್ಯಗಳು ಆಗ ಆ ಸಹ್ಯಪರ್ವತವನ್ನೂ, ಮಲಯಪರ್ವತವನ್ನೂ ದಾಟಿ, ಕ್ರಮಕ್ರಮವಾಗಿ ಭಯಂಕರವಾದ ಧ್ವನಿಯಿಂದ ಮೊರೆಯುತ್ತಿದ್ದ ಸಾಗರತಟವನ್ನು ಸೇರಿದರು. ಆ ಸಮಯದಲ್ಲಿ ನೋಡುವವರಿಗೆ ಮಹದಾನಂದವನ್ನುಂಟುಮಾಡುವವನೂ, ಪುರುಷೋತ್ತಮನೂ ಆದ ಶ್ರೀರಾಮನು ಲಕ್ಷ್ಮಣ ಸುಗ್ರೀವರೊಡನೆ ಆ ಮಹೇಂದ್ರಪರ್ವತ ಶಿಖರದಿಂದಿಳಿದು ಆ ದಕ್ಷಿಣ ಸಮುದ್ರವನ್ನು ನೋಡಲು ಬಹು ಜಾಗ್ರತೆಯಾಗಿ, ಮಹಾ ಸಂತೋಷದಿಂದ ಅದರ ತೀರವನಕ್ಕೆ ಬಂದನು. ||೯೫-೯೮|| ಆಗಲಾತನು ಬಹು ರಭಸದಿಂದ ಕೂಡಿದ ತರಂಗಮಾಲೆಗಳಿಂದ ಅಲ್ಲಿರುವ ಬಂಡೆಗಳನ್ನು ಒಡಿಯುತ್ತಿದ್ದ ಆ ಮಹಾ ಸಮುದ್ರವನ್ನು ಕಂಡನು. ಆಗ ಶ್ರೀರಾಮನು ತನ್ನ ಪಕ್ಕದಲ್ಲಿರುವ ಸುಗ್ರೀವರಾಜನನ್ನು ಕುರಿತು, "ಅಯ್ಯಾ ಸುಗ್ರೀವನೇ! ಈಗ ನಾವು ಈ ದಕ್ಷಿಣ ಸಮುದ್ರವನ್ನು ಸೇರಿದೆವು. ಇದುವರೆಗೆ ನಾವು ಮಾಡಿದ ಮಂತ್ರಾಲೋಚನೆಯನ್ನು ಕುರಿತು ಮತ್ತೆ

ಸ್ಸರಿತಾಂಪತಿಃ । ನಚಾಯಮನುಪಾಯೇನ ಶಕ್ಯಸ್ತರಿತುಮರ್ಣವಃ ॥ ೧೦೧ ॥ ತದಿ ಹೈವ ನಿವೇಶೋಸ್ತು ಮಂತ್ರಃ ಪ್ರಸ್ತೂಯತಾಮಿತಿ । ಯಥೇದಂ ವಾನರಬಲಂ ಪರಂ ಪಾರಮವಾಪ್ನುಯಾತ್ ” ॥೧೦೨॥ ಇತೀವ ಸಮಹಾಬಾಹು ಸ್ಸೀತಾಹರಣಕರ್ಶಿತಃ। ರಾಮಸ್ಸಾಗರಮಾಸಾದ್ಯ ವಾಸಮಾಜ್ಞಾಪಯತ್ತದಾ ॥ ೧೦೩ ॥ “ ಸರ್ವಾಸ್ಸೇನಾನಿ ವೇಶ್ಯಂತಾಂ ವೇಲಾಯಾಂ ಹರಿಪುಂಗವ! । ಸಂಪ್ರಾಪ್ತೋ ಮಂತ್ರಕಾಲೋ ನಸ್ಸಾ ಗರಸ್ಯಾಽಸ್ಯ ಲಂಘನೇ ॥ ೧೦೪ ॥ ಸ್ವಾಂ ಸ್ವಾಂ ಸೇನಾಂ ಸಮುತ್ಸೃಜ್ಯ ಮಾಚ ಕಶ್ಚಿ ತ್ಕುತೋಽಪ್ಯಜೇತ್ । ಗಚ್ಛಂತು ವಾನರಾಃ ಶೂರಾ ಜ್ಞೇಯಂ ಛನ್ನಂ ಬಲಂಚ ನಃ ”

ಪತಿಃ - ನದೀಪತಿಯಾದ, ಸಾಗರಃ - ಸಮುದ್ರನು, ಅತೀರಃ - ಪಾರವಿಲ್ಲದವನು, ಅಯಮರ್ಣವಃ - ಈ ಸಮುದ್ರವು, ಅನುಪಾಯೇನ - ಉಪಾಯವಿಲ್ಲದೆ, ತರಿತುಂ - ದಾಟಲು, ನಶಕ್ಯಃ - ಅಸಾಧ್ಯವು. ॥ ೧೦೦-೧೦೧ ॥ ತತಃ - ಆ ಕಾರಣದಿಂದ, ಇಹೈವ - ಇಲ್ಲಿಯೇ, ನಿವೇಶಃ - ಇಳಿಯೋಣವು, ಅಸ್ತು - ಆಗಲಿ, ಯಥಾ - ಹೇಗೆ, ಇದಂವಾನರಬಲಂ - ಈ ಕಪಿಸೇನೆಯು, ಪರಂಪಾರಂ - ಎರಡನೇ ದಡ ವನ್ನು, ಅವಾಪ್ನುಯಾತ್ - ಹೊಂದುವುದೋ, ತಥಾ - ಹಾಗೆ, ಮಂತ್ರಂ - ಆಲೋಚನೆಯು, ಪ್ರಸ್ತೂಯತಾಂ - ಪ್ರಸ್ತಾಪಿಸಲ್ಪಡಲಿ. ॥ ೧೦೨ ॥ ಇತೀವ - ಈ ಪರಿಯಾಗಿಯೇ, ಮಹಾಬಾಹುಃ - ಮಹಾ ಪರಾಕ್ರಮಶಾಲಿಯಾದ, ಸೀತಾ....ತಃ - ಸೀತಾಪಹಾರದಿಂದ ಕೃಶನಾದ, ಸಃರಾಮಃ - ಆ ಶ್ರೀರಾಮನು, ಸಾಗರಂ - ಸಮುದ್ರವನ್ನು, ಆಸಾದ್ಯ - ಹೊಂದಿ, ತದಾ - ಆಗ, ವಾಸಂ - ಇಳಿಯುವಿಕೆ ಯನ್ನು, ಆಜ್ಞಾಪಯತ್ - ಆಜ್ಞಾಪಿಸಿದನು. ॥ ೧೦೩ ॥ ಹೇ ಹರಿಪುಂಗವ - ಎಲೈ ವಾನರಶ್ರೇಷ್ಠನೇ, ಸರ್ವಾಃ - ಸಮಸ್ತವಾದ, ಸೇನಾಃ - ಸೈನ್ಯಗಳು, ವೇಲಾಯಾಂ - ತೀರದಲ್ಲಿ, ನಿವೇಶ್ಯಂತಾಂ - ಇಳಿ ಸಲ್ಪಡಲಿ, ಅಸ್ಯಸಾಗರಸ್ಯ - ಈ ಸಮುದ್ರದ, ಲಂಘನೇ - ದಾಟುವ ವಿಷಯದಲ್ಲಿ, ನಃ - ನಮಗೆ, ಮಂತ್ರಕಾಲಃ - ಆಲೋಚನೆಯ ಕಾಲವು, ಸಂಪ್ರಾಪ್ತಃ - ಬಂದಿರುವುದು. ॥ ೧೦೪ ॥ ಶೂರಾಃ - ವೀರರಾದ, ವಾನರಾಃ - ಕಪಿಗಳು, ಗಚ್ಛಂತು - (ಸೇನೆಯನ್ನಿಳಿಸುವದಕ್ಕೆ) ಹೋಗುವವರಾಗಲಿ, ಸ್ವಾಂಸ್ವಾಂ - ತಮ್ಮ ತಮ್ಮ, ಸೇನಾಂ - ಸೈನ್ಯವನ್ನು, ಸಮುತ್ಸೃಜ್ಯ - ಬಿಟ್ಟು, ಕಶ್ಚಿತ್ - ಯಾವನೂ, ಕುತೋಽಪಿ - ಎಲ್ಲಿಯೂ, ಮಾವ್ರಜೇತ್ - ಹೋಗಕೂಡದು, (ಏಕಂದರೆ) ನಃ - ನಮಗೆ, ಭಯಂ -

ಆಲೋಚಿಸಬೇಕು. ಇಲ್ಲಿ ನದಿಗಳಿಗೆಲ್ಲ ಒಡೆಯನಾದ ಈ ಸಮುದ್ರವೇ ಕಾಣುತ್ತಿರುವು ದಾಗಲಿ ಆಚಿನ ದಡವಿನ್ನೂ ಕಾಣಿಸಿಲ್ಲ. ಯಾವುದಾದರೂ ಒಂದು ಉಪಾಯವಿಲ್ಲದೆ ಈ ಸಮುದ್ರವನ್ನು ದಾಟುವುದು ಶಕ್ಯವಲ್ಲವು. ಆದುದರಿಂದ ನಾವಿಲ್ಲಿಯೇ ತಂಗಿ ಈ ವಾನರ ಸೇನೆಗಳೆಲ್ಲವೂ ಈ ಸಮುದ್ರವನ್ನು ದಾಟಿ ಆಚಿನ ದಡವನ್ನು ಸೇರುವ ಉಪಾಯವಾವುದೆಂಬು ದನ್ನು ಆಲೋಚಿಸಬೇಕು ” ಎಂದು ಹೇಳಿ ಸೀತಾಪಹರಣದಿಂದ ಬಹಳ ದುಃಖಿತನಾಗಿ ಆ ಸಾಗರತೀರದಲ್ಲಿ ವಾನರಸೇನೆಗಳೆಲ್ಲವನ್ನು ಕ್ರಮವಾಗಿ ನಿಲ್ಲಿಸುವುದನ್ನು ಕುರಿತು ಸುಗ್ರೀವ ನೊಡನೆ, “ಸುಗ್ರೀವಾ! ನಮ್ಮ ಸೈನ್ಯಗಳೆಲ್ಲವನ್ನೂ ಸಮುದ್ರತೀರದಲ್ಲಿ ನಿಲ್ಲಿಸಲು ಆಜ್ಞಾ ಪಿಸು. ಸಮುದ್ರತರಣೋಪಾಯವನ್ನಾಲೋಚಿಸಲು ನಮಗೀಗ ಅವಕಾಶವೊದಗಿರುವುದು. ॥೯೯-೧೦೪॥ ಇಲ್ಲಿ ಯಾರೇ ಆಗಲಿ ತಮ್ಮತಮ್ಮ ಸೇನೆಗಳನ್ನು ಬಿಟ್ಟು ಹೋಗಕೂಡದು. ಮಹಾ ಪರಾಕ್ರಮಶಾಲಿಗಳಾದ ವಾನರರೆಲ್ಲರೂ ಸೇನೆಯ ಹೊರಗಡೆ ಜಾಗರೂಕರಾಗಿ ಸಂಚರಿಸುತ್ತಿರಬೇಕು. ನಮಗೆ ಶತ್ರುಗಳಾದ ರಾಕ್ಷಸರು ಅಲ್ಲಲ್ಲಿ ಅವಿತುಕೊಂಡಿದ್ದಾರು.

|| ೧೦೫ || ರಾಮಸ್ಯ ವಚನಂ ಶ್ರುತ್ವಾ ಸುಗ್ರೀವಸ್ಸಹಲಕ್ಷ್ಮಣಃ । ಸೇನಾಂ ನ್ಯವೇಶಯತ್ತೀರೇ ಸಾಗರಸ್ಯ ದ್ರುಮಾಯುತೇ || ೧೦೬ || ವಿರರಾಜ ಸಮೀಪಸ್ಥಂ ಸಾಗರಸ್ಯ ಚ ತದ್ಬಲಂ । ಮಧುಪಾಂಡುಜಲಃ ಶ್ರೀಮಾನ್ ದ್ವಿತೀಯಇವ ಸಾಗರಃ || ೧೦೭ || ವೇಲಾವನಮುಪಾಗಮ್ಯ ತತಸ್ತೇ ಹರಿಪುಂಗವಾಃ । ವಿನಿವಿಷ್ಟಾಃ ಪರಂಪಾರಂ ಕಾಂಕ್ಷಮಾಣಾ ಮಹೋದಧೇಃ || ೧೦೮ || ತೇಷಾಂ ನಿವಿಶಮಾನಾನಾಂ ಸೈನ್ಯಸನ್ನಾಹನಿಸ್ಸ್ವನಃ । ಅಂತರ್ಧಾಯ ಮಹಾನಾದಮರ್ಣವಸ್ಯ ಪ್ರಶುಶ್ರುವೇ || ೧೦೯ || ಸಾ ವಾನರಾಣಾಂ ಧ್ವಜನೀ ಸುಗ್ರೀವೇಣಾಭಿಪಾಲಿತಾ । ತ್ರಿಧಾ ನಿವಿಷ್ಟಾ ಮಹತೀ ರಾಮ

---

ಭಯಜನಕವಾದದ್ದು, ಬಲಂಚ - ಬಲವೂ ಕೂಡ, ಜ್ಞೇಯಂ - ತಿಳಿಯತಕ್ಕುದು, ರಾಮಸ್ಯ - ಶ್ರೀರಾಮನ, ವಚನಂ - ಮಾತನ್ನು, ಶ್ರುತ್ವಾ - ಕೇಳಿ, ಸುಗ್ರೀವಃ - ಸುಗ್ರೀವನು, ಸಹಲಕ್ಷ್ಮಣಃ - ಲಕ್ಷ್ಮಣನಿಂದ ಕೂಡಿದವನಾಗಿ, ದ್ರುಮಾಯುತೇ - ವೃಕ್ಷಗಳಿಂದ ಕೂಡಿದ, ಸಾಗರಸ್ಯ - ಸಮುದ್ರದ, ತೀರೇ - ದಡದಲ್ಲಿ, ಸೇನಾಂ - ಸೈನ್ಯವನ್ನು, ನ್ಯವೇಶಯತ್ - ಇಳಿಸಿದನು. || ೧೦೫-೧೦೬ || ಸಾಗರಸ್ಯ - ಸಮುದ್ರದ, ಸಮೀಪಸ್ಥಂ - ಹತ್ತಿರದಲ್ಲಿರುವ, ತದ್ಬಲಂ - ಆ ಕಪಿಸೈನ್ಯವು, ಮಧು....ಲಃ - ಮಧುವಿನಂತೆ ಪಿಂಗಳವರ್ಣವಾದ ಜಲವುಳ್ಳ, ಶ್ರೀಮಾನ್ - ಸಂಪದ್ಯುಕ್ತವಾದ, ದ್ವಿತೀಯಃ - ಎರಡನೆಯದಾದ, ಸಾಗರಇವ - ಸಮುದ್ರದಂತೆ, ವಿರರಾಜ - ಹೊಳೆಯುತ್ತಿತ್ತು, ತತಃ - ಬಳಿಕ, ತೇಹರಿಪುಂಗವಾಃ - ಆ ವಾನರಶ್ರೇಷ್ಠರು, ವೇಲಾವನಂ - ತೀರದಲ್ಲಿರುವ ವನವನ್ನು, ಉಪಾಗಮ್ಯ - ಹೊಂದಿ, ಮಹೋದಧೇಃ-ಸಮುದ್ರದ, ಪರಂಪಾರಂ-ಆಚಿನ ದಡವನ್ನು, ಕಾಂಕ್ಷಮಾಣಾಃ-ಅಪೇಕ್ಷಿಸುವವರಾಗಿ, ವಿನಿವಿಷ್ಟಾಃ - ನಿಂತರು. || ೧೦೭-೧೦೮ || ನಿವಿಶಮಾನಾನಾಂ - ಇಳಿಸಲ್ಪಡುತ್ತಲಿರುವ, ತೇಷಾಂ - ಆ ವಾನರರ, ಸೈನ್ಯ....ನಃ - ಸೇನೆಯ ಸಂಚಾರ ಘೋಷವು, ಅರ್ಣವಸ್ಯ - ಸಮುದ್ರದ, ಮಹಾನಾದಂ - ಧ್ವನಿಯನ್ನು, ಅಂತರ್ಧಾಯ - ತಿರೋಧಾನಮಾಡಿ, ಪ್ರಶುಶ್ರುವೇ - ಕೇಳಿಸಿತು. || ೧೦೯ || ಸುಗ್ರೀವೇಣ - ಸುಗ್ರೀವನಿಂದ, ಅಭಿಪಾಲಿತಾ - ಪಾಲಿಸಲ್ಪಟ್ಟ, ವಾನರಾಣಾಂ - ಕಪಿಗಳ, ಮಹತೀ - ದೊಡ್ಡದಾದ, ಸಾಧ್ವಜನೀ - ಆ ಸೈನ್ಯವು, ರಾಮಸ್ಯ - ಶ್ರೀರಾಮನ, ಅರ್ಥಪರಾ - ಕಾರ್ಯದಲ್ಲಿ ಆಸಕ್ತವಾಗಿ, ತ್ರಿಧಾ - ಮೂರು ಪ್ರಕಾರವಾಗಿ, ನಿವಿಷ್ಟಾ - ಇಳಿಸಲ್ಪಟ್ಟುದು, ಅಭವತ್- ಆಯಿತು, (ಅಂದರೆ-ಕಪಿಗಳು ಕರಡಿಗಳು ಸಿಂಗಳೀಕಗಳು ಎಂದು ಈ ಮೂರು ವಿಧವಾದವುಗಳು.)

---

ಆದುದರಿಂದ ನಮ್ಮ ವಾನರವೀರರು ಅವರನ್ನು ಬಹು ಚತುರತೆಯಿಂದ ಕಂಡುಕೊಳ್ಳಬೇಕು" ಎಂದು ಹೇಳಿದನು. ಶ್ರೀರಾಮನಿಂತು ನುಡಿಯಲು, ಲಕ್ಷ್ಮಣಸ್ವಾಮಿಯೊಡಗೂಡಿದ ಸುಗ್ರೀವನು ಆ ವಾನರ ಸೇನೆಯನ್ನು ಯಥಾಕ್ರಮವಾಗಿ ಆ ಸಾಗರ ತಟದಲ್ಲಿ ನಿಲ್ಲಿಸಿದನು. ನಾನಾ ವಿಧಗಳಾದ ವೃಕ್ಷಗಳಿಂದೊಪ್ಪಿರುವ ಆ ಸಮುದ್ರತೀರದಲ್ಲಿಳಿದಿದ್ದ ಪಿಂಗಳ ವರ್ಣರಾದ ವಾನರರ ಆ ಮಹಾ ಸೇನೆಯು ಎರಡನೆಯ ಮಹಾ ಸಮುದ್ರವೋ ಎಂಬಂತೆ ಶೋಭಿಸುತ್ತಿದ್ದಿತು. ||೧೦೫–೧೦೭|| ಆಗ ವಾನರೋತ್ತಮರು ಆ ಸಮುದ್ರತೀರದಲ್ಲಿಳಿದು ಆಚಿನ ದಡವನ್ನು ಸೇರಲು ಪ್ರಯತ್ನವುಳ್ಳವರಾದರು. ಆ ವಾನರಸೇನೆಗಳು ಅಲ್ಲಿ ಸೇರಿದಾಗ ಉಂಟಾದ ಧ್ವನಿಯು ಸಮುದ್ರಧ್ವನಿಯನ್ನು ಮೀರಿಸಿ ಶೋಭಿಸುತ್ತಿದ್ದಿತು. ಸುಗ್ರೀವನಿಂದ ಪರಿಪಾಲಿತವಾದ ಆ ಮಹಾವಾನರ ಸೇನೆಯು, ಋಕ್ಷ, ಗೋಲಾಂಗೂಲ, ವಾನರರೂಪಗಳಿಂದ ಮೂರು ಬಗೆಗಳಾಗಿ ಆ ಸಮುದ್ರತೀರದಲ್ಲಿ ಕೂಡಿದ್ದಿತು. ಆ ಮಹಾ ವಾನರಸೇನೆಯೆಲ್ಲವೂ ಶ್ರೀರಾಮ

ಸ್ವಾರ್ಥಪರಾಭವತ್ ॥೧೧೦॥ ಸಾ ಮಹಾರ್ಣವಮಾಸಾದ್ಯ ಹೃಷ್ಟಾ ವಾನರವಾಹಿನೀ । ವಾಯುವೇಗಸಮಾಧೂತಂ ಪಶ್ಯಮಾನಾ ಮಹಾರ್ಣವಂ ॥ ೧೧೧ ॥ ದೂರಪಾರಮ ಸಂಬಾಧಂ ರಕ್ಷೋಗಣನಿಷೇವಿತಂ । ಪಶ್ಯಂತೋ ವರುಣಾವಾಸಂ ನಿಷೇದುರ್ಹರಿ ಯೂಥಪಾಃ । ಚಂಡನಕ್ರಗ್ರಹಂ ಘೋರಂ ಕ್ಷಪಾದೌ ದಿವಸಕ್ಷಯೇ ॥ ೧೧೨ ॥ ಹಸಂತಮಿವ ಫೇನೌಘೈರ್ನೃತ್ಯಂತಮಿವ ಚೋರ್ಮಿಭಿಃ । ಚಂದ್ರೋದಯಸಮು ದ್ಧೂತಂ ಪ್ರತಿಚಂದ್ರಸಮಾಕುಲಂ ॥ ೧೧೩ ॥ ( ಪಿನಷ್ಟೀವತರಂಗಾಗ್ರೈರರ್ಣವಃ ಫೇನಚಂದನಂ । ತದಾದಾಯ ಕರೈರಿಂದುರ್ಲಿಂಪತೀವ ದಿಗಂಗನಾಃ ) ॥ ೧೧೪ ॥ ಚಂಡಾನಿಲಮಹಾಗ್ರಾಹೈಃ ಕೀರ್ಣಂ ತಿಮಿತಿಮಿಂಗಿಲೈಃ । ದೀಪ್ತೈರ್ಭೋಗೈರಿ

॥ ೧೧೦ ॥ ಸಾವಾನರವಾಹಿನೀ-ಆ ಕಪಿಸೈನ್ಯವು, ಮಹಾರ್ಣವಂ-ಮಹಾ ಸಮುದ್ರವನ್ನು, ಆಸಾದ್ಯ-ಹೊಂದಿ, ವಾಯು....ತಂ - ವಾಯುವೇಗದಿಂದ ಹೊಡೆಯಲ್ಪಟ್ಟ, ಮಹಾರ್ಣವಂ - ಮಹಾ ಸಮುದ್ರವನ್ನು, ಪಶ್ಯಮಾನಾ - ನೋಡುವುದಾಗಿ, ಹೃಷ್ಟಾ - ಸಂತೋಷಗೊಂಡದ್ದು, ಅಭವತ್ - ಆಯಿತು. ॥ ೧೧೧ ॥ ಹರಿಯೂಥಪಾಃ - ವಾನರಯೂಥಪತಿಗಳು, ದೂರಪಾರಂ - ಬಹು ದೂರವಾದ ತೀರವುಳ್ಳ, ಅಸಂಬಾಧಂ - ಕ್ಷೋಭಿಸಲಸಾಧ್ಯವಾದ, ರಕ್ಷೋಗಣನಿಷೇವಿತಂ - ರಾಕ್ಷಸತಂಡಗಳಿಂದ ಸೇವಿಸಲ್ಪಟ್ಟ, ವರುಣಾವಾಸಂ - ವರುಣನಿಗೆ ಆವಾಸಭೂತವಾದ, ಚಂಡನಕ್ರಗ್ರಹಂ - ಕ್ರೂರವಾದ ಮೊಸಳೆಗಳಿಂದ ಗ್ರಹಣವುಳ್ಳ, ದಿವಸಕ್ಷಯೇ - ಸಂಧ್ಯಾಕಾಲದಲ್ಲಿ, ಕ್ಷಪಾದೌ - ಮೊದಲನೆಯ ಯಾಮದಲ್ಲಿ, ಘೋರಂ - ಭಯಂಕರವಾದ, ಫೇನೌಘೈಃ - ನೊರೆಗಳ ತಂಡಗಳಿಂದ, ಹಸಂತಮಿವ - ನಗುವನೋ ಎಂಬಂತಿರುವ, ಊರ್ಮಿಭಿಃ-ತೆರೆಗಳಿಂದ, ನೃತ್ಯಂ....ತಂ - ನರ್ತಿಸುವಂತಿರುವ, ಚಂದ್ರೋ....ತಂ - ಚಂದ್ರೋದಯದಿಂದ ವೃದ್ಧಿಯಾದ, ಪ್ರತಿ....ಲಂ - ಚಂದ್ರನ ಪ್ರತಿಬಿಂಬಗಳಿಂದ ವ್ಯಾಪ್ತವಾದ, ಚಂಡಾ....ಹೈಃ - ಚಂಡಮಾರುತಕ್ಕೆ ಸಮಾನವಾದ ದೊಡ್ಡ ನೆಗಳುಗಳಿಂದಲೂ, ತಿಮಿತಿಮಿಂಗಿಲೈಃ - ನೂರುಗಾವುದವುಳ್ಳ ತಿಮಿಯೆಂಬ ಮೀನುಗಳಿಂದಲೂ, ತಿಮಿಂಗಿಲೈಃ - ಅದನ್ನು ನುಂಗುವ ತಿಮಿಂಗಿಲಗಳೆಂಬ ಮೀನುಗಳಿಂದಲೂ, ಕೀರ್ಣಂ - ತುಂಬಿರುವ, ದೀಪ್ತೈಃ - ಹೊಳೆಯುತ್ತಿರುವ, ಭೋಗೈರಿವ

ಕಾರ್ಯದಲ್ಲಿಯೇ ಆಸಕ್ತವಾಗಿದ್ದಿತು. ವಾಯುವೇಗದಿಂದ ಸಂಕ್ಷುಬ್ಧವಾಗಿ ನೊರೆಯುತ್ತಿದ್ದ ಆ ಸಾಗರವನ್ನು ನೋಡಿ ಆ ವಾನರಸೇನೆಯೆಲ್ಲವೂ ಬಹಳವಾಗಿ ಸಂತೋಷಗೊಂಡಿತು. ಆ ಸೇನೆಯಲ್ಲಿದ್ದ ವಾನರಯೂಥಪತಿಗಳು ಮಹಾದ್ಭುತವಾದ ಆ ಸಮುದ್ರವನ್ನು ನೋಡುತ್ತ ಕುಳಿತರು. ಭಯಂಕರವಾದ ಆ ಸಾಗರವಾದರೋ ಬಹುದೂರ ನೋಡಿದರೂ ದಡವೇ ಕಾಣಿಸದುದಾಗಿಯೂ, ರಾಕ್ಷಸರಿಂದ ಸೇವಿತವಾದುದಾಗಿಯೂ, ವರುಣಾಲಯವಾಗಿಯೂ, ಬಹು ಭಯಂಕರವಾದ ಮೊಸಳೆಗಳಿಂದ ಕೂಡಿದುದಾಗಿಯೂ, ರಾತ್ರಿಯಲ್ಲಿ, ನೊರೆಯಿಂದ ನಕ್ಕು ತರಂಗಗಳಿಂದ ನರ್ತಿಸುತ್ತಿರುವುದಾಗಿಯೂ ಇದ್ದಿತು. ಚಂದ್ರೋದಯ ಕಾಲದಲ್ಲಿ ಬಹಳವಾಗಿ ಉಬ್ಬಿ, ಚಂದ್ರನ ಅನೇಕ ಪ್ರತಿಬಿಂಬಗಳಿಂದ ಪ್ರಕಾಶಿಸುತ್ತಿದ್ದಿತು. ಇಷ್ಟೆಯಲ್ಲದೆ ಆ ಮಹಾ ಸಾಗರವು ತರಂಗಗಳೆಂಬ ತನ್ನ ಕೈಗಳಿಂದ ನೊರೆಯೆಂಬ ಚಂದನವನ್ನು ತೇಯುತ್ತಿರುವಂತೆ ಶೋಭಿಸುತ್ತಿದ್ದಿತು. ಆಗ ಚಂದ್ರನು ಆ ಚಂದನವನ್ನು ತನ್ನ ಕಿರಣಗಳೆಂಬ ಕೈಗಳಿಂದ ದಿಗಂಗನೆಯರಿಗೆ ಲೇಪಿಸುತ್ತಿರುವಂತೆ ತೋರುತ್ತಿದ್ದನು. ॥೧೧೮–೧೧೪॥ ಮಹಾ ಭಯಂಕರವಾದ ಪ್ರಳಯಮಾರುತದಂತೆ ಮಹಾ ವೇಗವುಳ್ಳ

ನಾಕೀರ್ಣಂ ಭುಜಂಗೈರ್ವರುಣಾಲಯಂ || ೧೧೫ || ಅವಗಾಢಂ ಮಹಾಸತ್ತ್ವೈರ್ನಾನಾಶೈಲಸಮಾಕುಲಂ | ಸುದುರ್ಗಂ ದುರ್ಗಮಾರ್ಗಂ ತಮಗಾಧಮಸುರಾಲಯಂ || ೧೧೬ || ಮಕರೈರ್ನಾಗಭೋಗೈಶ್ಚ ವಿಗಾಢಾ ವಾತಲೋಳಿತಾಃ | ಉತ್ಪೇತುಶ್ಚ ನಿಪೇತುಶ್ಚ ಪ್ರವೃದ್ಧಾ ಜಲರಾಶಯಃ || ೧೧೭ || ಅಗ್ನಿಚೂರ್ಣಮಿವಾವಿದ್ಧಂ ಭಾಸ್ವರಾಂಬುಮಹೋರಗಂ | ಸುರಾರಿವಿಷಯಂ ಘೋರಂ ಪಾತಾಳವಿಷಮಂ ಸದಾ ||೧೧೮|| ಸಾಗರಂ ಚಾಂಬರಪ್ರಖ್ಯಮಂಬರಂ ಸಾಗರೋಪಮಂ | ಸಾಗರಂ ಚಾಂಬರಂಚೇತಿ

---

ಸ್ಥಿತೈಃ - ಸರ್ಪಶರೀರಗಳಂತೆ ಹೊಳೆಯುವ, ಭುಜಂಗೈಃ - ಸರ್ಪಗಳಿಂದ, ಆಕೀರ್ಣಂ - ತುಂಬಿರುವ, ಮಹಾಸತ್ತ್ವೈಃ - ದೊಡ್ಡ ಜಂತುಗಳಿಂದ, ಅವಗಾಢಂ - ಪ್ರವೇಶಮಾಡಲ್ಪಟ್ಟ, ನಾನಾ....ಲಂ - ಅನೇಕ ಪರ್ವತಗಳಿಂದ ವ್ಯಾಪ್ತವಾದ, ಸುದುರ್ಗಂ - ಪ್ರವೇಶಿಸಲಸಾಧ್ಯವಾದ, ದುರ್ಗಮಾರ್ಗಂ - ಸಂಚಾರ ಮಾಡಲಶಕ್ಯವಾದ ಮಾರ್ಗವುಳ್ಳ, ಅಗಾಧಂ - ಆಳವಾದ, ಅಸುರಾಲಯಂ - ರಾಕ್ಷಸರಿಗೆ ಸ್ಥಾನವಾದ, ತಂವರುಣಾಲಯಂ - ಆ ಸಮುದ್ರವನ್ನು, ಪಶ್ಯಂತಃ - ನೋಡುವವರಾಗಿ, ನ್ಯಷೇದುಃ - ಕುಳಿತರು. || ೧೧೬ || ಮಕರೈಃ - ಚೋರಮಿಾನುಗಳಿಂದಲೂ, ನಾಗಭೋಗೈಶ್ಚ - ನೀರಾನೆಗಳ ಶರೀರಗಳಿಂದಲೂ, (ಅಥವಾ - ಸರ್ಪಶರೀರಗಳಿಂದಲೂ) ವಿಗಾಢಾಃ - ಹೊಗಲ್ಪಟ್ಟ, ವಾತಲೋಳಿತಾಃ - ಗಾಳಿಯಿಂದ ಕಂಪಿಸಲ್ಪಟ್ಟ, ಪ್ರವೃದ್ಧಾಃ - ವೃದ್ಧಿಹೊಂದಿದ, ಜಲರಾಶಯಃ - ಉದಕದ ರಾಶಿಗಳು, ಉತ್ಪೇತುಃ - ಹಾರಿದವು, ನಿಪೇತುಶ್ಚ - ಕೆಳಗೆ ಬಿದ್ದವು. || ೧೧೭ || ಆವಿದ್ಧಂ - ಹೊಡೆಯಲ್ಪಟ್ಟ, ಅಗ್ನಿಚೂರ್ಣಮಿವ - ಬೆಂಕಿಯ ಪುಡಿಯಂತಿರುವ, ಭಾಸ್ವರಾಂಬು - ಹೊಳೆವ ಉದಕವುಳ್ಳ, ಮಹೋರಗಂ - ದೊಡ್ಡ ಸರ್ಪಗಳುಳ್ಳ, ಸುರಾರಿವಿಷಯಂ - ರಾಕ್ಷಸರಿಗೆ ಆವಾಸಸ್ಥಾನವಾದ, ಪಾತಾಳವಿಷಮಂ - ಪಾತಾಳದಂತೆ ಗಂಭೀರವಾದ, ಸದಾ - ನಿರಂತರವೂ, ಘೋರಂ - ಭಯಂಕರವಾದ, ಸಾಗರಂ - ಸಮುದ್ರವು, ಅಂಬರಪ್ರಖ್ಯಂ - ಅಂತರಿಕ್ಷದಂತೆ ಹೊಳೆಯುತ್ತಿತ್ತು, ಅಂಬರಂಚ - ಅಂತರಿಕ್ಷವೂ ಕೂಡ, ಸಾಗರೋಪಮಂ - ಸಮುದ್ರಕ್ಕೆ ಸಮಾನವಾದದ್ದು, ಸಾಗರಂಚ - ಸಮುದ್ರವು, ಅಂಬರಂಚೇತಿ - ಅಂತ

---

ಮೊಸಳೆಗಳಿಂದ ನಿಬಿಡವಾದುದಾಗಿಯೂ, ತಿಮಿಂಗಿಲಗಳಿಂದ ಕೂಡಿದುದಾಗಿಯೂ, ಮಣಿಗಳಿಂದೊಪ್ಪುತ್ತಿರುವ ಹೆಡೆಗಳಿಂದ ಶೋಭಿಸುತ್ತಿರುವ ಮಹಾ ಸರ್ಪಗಳಿಂದ ತುಂಬಿರುವುದಾಗಿಯೂ, ದುಷ್ಟಸತ್ವಸಂಕುಲವಾದುದಾಗಿ ದುಷ್ಪ್ರವೇಶ್ಯವಾಗಿಯೂ ಇರುವ ಆ ಮಹಾ ಸಾಗರವು ಬಹು ಭಯಂಕರವಾಗಿದ್ದಿತು. ಇಷ್ಟೆಯಲ್ಲದೆ ಆ ಸಾಗರವು, ನಾನಾವಿಧಗಳಾದ ಪರ್ವತಗಳಿಂದ ನಿಬಿಡವಾಗಿ, ಯಾರಿಂದಲೂ ದಾಟಲಶಕ್ಯವಾಗಿ ಮಾರ್ಗವೇ ಇಲ್ಲದುದಾಗಿಯೂ, ಬಹಳ ಆಳವಾದುದಾಗಿಯೂ, ಆಗಿ ಅಸುರಾವಾಸವೆನಿಸಿ ಬಹು ಭೀಕರವಾಗಿದ್ದಿತು. ಇಂತಿರುವ ಆ ಸಾಗರವನ್ನು ನೋಡಿ ಅಲ್ಲಿದ್ದ ವಾನರರೆಲ್ಲರೂ ಚಿಂತಾಪರರಾದರು. ಆಗ ದೊಡ್ಡದೊಡ್ಡ ಅಲೆಗಳಿಂದಲೂ, ಮೊಸಳೆಗಳಿಂದಲೂ, ಮಹಾ ಸರ್ಪಗಳಿಂದಲೂ ತುಂಬಿತುಳುಕುತ್ತಿದ್ದ ಆ ಮಹಾ ಸಮುದ್ರವು ಗಾಳಿಯಿಂದ ಕ್ಷುಬ್ಧವಾಗಿ ಬಹಳ ಎತ್ತರಕ್ಕೆ ಉಬ್ಬಿ ಹಾರುತ್ತಿದ್ದಿತು. ಆಗ ಬಹಳವಾಗಿ ಪ್ರಕಾಶಿಸುತ್ತಿರುವ ಜಲಬಿಂದುಗಳುಳ್ಳುದಾಗಿ ಅಗ್ನಿಕಣಗಳಿಂದ ಕೂಡಿದಂತೆ ಕಾಣುತ್ತಿರುವುದಾಗಿಯೂ, ಮಹಾ ಭಯಂಕರವಾದ ಕ್ರೂರ ಸರ್ಪಗಳಿಂದೊಪ್ಪಿ ಅಸುರರಿಗೆ ಮಾತ್ರ ನಿವಾಸಯೋಗ್ಯವಾಗಿಯೂ, ಬಹು ಭಯಂಕರವಾಗಿಯೂ, ಪಾತಾಳದಂತಿರುವುದಾಗಿಯೂ ಇದ್ದ ಆ ಸಮುದ್ರವು ಆಕಾಶಕ್ಕೆ ಸಮಾನ

ನಿರ್ವಿಶೇಷಮದೃಶ್ಯತ ॥ ೧೧೯ ॥ ಸಂಪೃಕ್ತಂ ನಭಸಾಪ್ಯಂಭಸ್ಸಂಪೃಕ್ತಂಚ ನಭೋಽಂಭಸಾ । ತಾದೃಗ್ರೂಪೇಸ್ಮ ದೃಶ್ಯೇತೇ ತಾರಾರತ್ನಸಮಾಕುಲೇ ॥೧೨೦॥ ಸಮುತ್ಪತಿತ ಮೇಘಸ್ಯ ವೀಚಿಮಾಲಾಕುಲಸ್ಯಚ । ವಿಶೇಷೋ ನದ್ವಯೋರಾಸೀತ್ಸಾಗರಸ್ಯಾಂಬರಸ್ಯಚ ॥೧೨೧॥ ಅನ್ಯೋನ್ಯಮಾಹತಾಸ್ಸಕ್ತಾಸ್ಸಸ್ವನುರ್ಭೀಮನಿಸ್ಸ್ವನಾಃ । ಊರ್ಮಯಸ್ಸಿಂಧುರಾಜಸ್ಯ ಮಹಾಭೇರ್ಯಇವಾಹವೇ ॥ ೧೨೨ ॥ ರತ್ನೌಘಜಲಸನ್ನಾದಂ ವಿಷಕ್ತಮಿವ ವಾಯುನಾ । ಉತ್ಪತಂತಮಿವ ಕ್ರುದ್ಧಂ ಯಾದೋಗಣಸಮಾಕುಲಂ ॥ ೧೨೩ ॥ ದದೃಶುಸ್ತೇ ಮಹೋತ್ಸಾಹಾ ವಾತಾಹತಜಲಾಶಯಂ । ಅನಿಲೋದ್ಧೂತಮಾಕಾಶೇ ಪ್ರವಲ್ಗಂತಮಿವೋರ್ಮಿಭಿಃ ॥ ೧೨೪ ॥

---

ರಿಕ್ಷವು ಎಂಬ ಎರಡು, ನಿರ್ವಿಶೇಷಂ - ಭೇದವಿಲ್ಲದಂತೆ, ಅದೃಶ್ಯತ - ಕಾಣುತ್ತಿದ್ದಿತು. ॥ ೧೧೮-೧೧೯ ॥ ನಭಸಾ - ಅಂತರಿಕ್ಷದಿಂದ, ಅಂಭೋಽಪಿ - ಉದಕವೂ ಕೂಡ, ಸಂಪೃಕ್ತಂ - ಕೂಡಿದೆ, ಅಂಭಸಾ - ಉದಕದಿಂದ, ನಭೋಽಪಿ - ಅಂತರಿಕ್ಷವೂ ಕೂಡ, ಸಂಪೃಕ್ತಂ - ಸೇರಿದೆ, ತಾದೃಗ್ರೂಪೇ - ಅಂಥಾ ರೂಪವುಳ್ಳ, ತಾರಾ....ಲೇ - ರತ್ನಗಳೆಂಬ ನಕ್ಷತ್ರಗಳಿಂದಲೂ, ನಕ್ಷತ್ರಗಳೆಂಬ ರತ್ನಗಳಿಂದಲೂ ವ್ಯಾಪ್ತವಾದ, (ಸಾಗರಾಂಬರೇ - ಸಮುದ್ರಾಂತರಿಕ್ಷಗಳು) ದೃಶ್ಯೇತೇ - ಕಾಣುತ್ತಿದ್ದವು, ಸಮು....ಸ್ಯ - ಮೇಲಕ್ಕೆ ಹಾರಿದ ಮೇಘಗಳುಳ್ಳ, ವೀಚಿ....ಚ - ತೆರೆಗಳ ಪಙ್ಕ್ತಿಯಿಂದ ವ್ಯಾಪ್ತವಾದ, ಸಾಗರಸ್ಯ - ಸಮುದ್ರಕ್ಕೂ, ಅಂಬರಸ್ಯಚ - ಅಂತರಿಕ್ಷಕ್ಕೂ, ದ್ವಯೋಃ - ಎರಡಕ್ಕೂ, ವಿಶೇಷಃ - ವಿಶೇಷವು, ನಾಸೀತ್ - ಇಲ್ಲದೇಹೋಯಿತು. ॥ ೧೨೦ ೧೨೧ ॥ ಅನ್ಯೋನ್ಯಂ - ಪರಸ್ಪರವಾಗಿ, ಆಹತಾಃ - ಹೊಡೆಯಲ್ಪಟ್ಟ, ಸಕ್ತಾಃ - ಸಂಬಂಧಿಸಿದ, ಭೀಮನಿಸ್ಸ್ವನಾಃ - ಭಯಂಕರವಾದ ಧ್ವನಿಗಳುಳ್ಳ, ಸಿಂಧುರಾಜಸ್ಯ - ಸಮುದ್ರದ, ಊರ್ಮಯಃ - ತರಂಗಗಳು, ಆಹವೇ - ಕಾಳಗದಲ್ಲಿ, ಮಹಾಭೇರ್ಯ ಇವ - ದೊಡ್ಡ ದೊಡ್ಡ ಭೇರಿಗಳಂತೆ, ಸಸ್ವನುಃ - ಧ್ವನಿಗೊಂಡವು. ॥ ೧೨೨ ॥ ರತ್ನೌ....ದಂ - ರತ್ನಗಳ ರಾಶಿಗಳು, ಜಲವು ಇವುಗಳ ಧ್ವನಿಗಳುಳ್ಳ, ವಾಯುನಾ - ಗಾಳಿಯಿಂದ, ವಿಷಕ್ತಮಿವ - ಸಂಬಂಧಿಸಿದಂತಿರುವ, ಕೃದ್ಧಂ - ಕುಪಿತನಾಗಿ, ಉತ್ಪತಂತಮಿವ - ಹಾರುವಂತಿರುವ, ಆಕಾಶೇ - ಅಂತರಿಕ್ಷದಲ್ಲಿ, ಅನಿಲೋದ್ಧೂತಂ - ವಾಯುವಿನಿಂದ ಹೊಡೆಯಲ್ಪಟ್ಟ, ಊರ್ಮಿಭಿಃ - ತೆರೆಗಳಿಂದ, ಪ್ರವಲ್ಗಂತಮಿವ - ಕುಣಿಯುವಂತಿರುವ, ಯಾದೋ....ಲಂ - ಜಲಜಂತುಗಳ ಸಮೂಹಗಳಿಂದ ವ್ಯಾಪ್ತವಾದ, ವಾತಾ....ಯಂ - ಚಂಡಮಾರುತದಿಂದ ಹೊಡೆಯಲ್ಪಟ್ಟ ಸಮುದ್ರವನ್ನು, ತೇ - ಆ ವಾನರರು, ಮಹೋತ್ಸಾಹಾಃ - ಮಹೋತ್ಸಾಹವುಳ್ಳವರಾಗಿ, ದದೃಶುಃ - ಕಂಡರು. ॥ ೧೨೩-೧೨೪ ॥

---

ವಾಗಿದ್ದುದರಿಂದ, ಅದಕ್ಕೂ, ಆಕಾಶಕ್ಕೂ ಯಾವ ಭೇದವೂ ಇಲ್ಲದಂತೆ ತೋರುತ್ತಿದ್ದಿತು. ॥ ೧೧೩-೧೧೯ ॥ ಇಷ್ಟೆಯಲ್ಲದೆ ಆ ರೀತಿ ಸಮುದ್ರೋದಕವು ಉಬ್ಬಿಯುಬ್ಬಿ ಆಕಾಶವನ್ನು ಮುಟ್ಟುತ್ತಿದ್ದಿತು ; ಆಕಾಶವೂ ಸಮುದ್ರೋದಕದೊಡನೆ ಸೇರಿದ್ದಿತು. ಆದುದರಿಂದ ತಾರಾಗಣವಿರಾಜಿತವಾದ ಆಕಾಶಕ್ಕೂ, ತರಂಗಪಙ್ಕ್ತಿಯಿಂದ ತುಂಬಿದ್ದ ಸಮುದ್ರಕ್ಕೂ ಸ್ವಲ್ಪವೂ ಭೇದವು ಕಂಡುಬರಲಿಲ್ಲವು. ಆಗ ಸಮುದ್ರದ ತರಂಗಗಳು ಒಂದರೊಡನೊಂದು ಸೇರುವುದರಿಂದ ಯುದ್ಧದಲ್ಲಿಯ ದೊಡ್ಡ ಭೇರಿಗಳಂತೆ ಮಹಾ ಭಯಂಕರ ಧ್ವನಿಯಾಗುತ್ತಿದ್ದಿತು. ರತ್ನಸಮೂಹಗಳಿಂದಲೂ, ಜಲರಾಶಿಯಿಂದಲೂ ಕೂಡಿದುದಾಗಿ ವಾಯುವೇಗಪ್ರಚಲಿತವಾಗಿ ಮಹಾ ಕೋಪಾಟೋಪದಿಂದಿರುವಂತೆಯೂ, ಜಲಜಂತುಗಳ ಗುಂಪುಗಳಿಂದ ತುಂಬಿದು

ತತೋ ವಿಸ್ಮಯ ಮಾಪನ್ನಾ ದದೃಶುರ್ಹರಯಸ್ತದಾ ।
ಭ್ರಾಂತೋರ್ಮಿಜಲಸನ್ನಾದಂ ಪ್ರಲೋಲಮಿವ ಸಾಗರಂ ॥ ೧೨೫ ॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಚತುರ್ಥಸ್ಸರ್ಗಃ.



ತತಃ - ಬಳಿಕ, ಹರಯಃ - ಕಪಿಗಳು, ತದಾ - ಆ ಕಾಲದಲ್ಲಿ, ಭ್ರಾಂತೋ....ದಂ - ಹೊರಳುವ ತೆರೆಗಳ ಉದಕಘೋಷವುಳ್ಳದ್ದಾದಕಾರಣ, ಪ್ರಲೋಲಮಿವ - ತಿರುಗುತ್ತಿದೆಯೆಂಬಂತಿರುವ, ಸಾಗರಂ - ಸಮುದ್ರವನ್ನು, ದದೃಶುಃ-ಕಂಡರು, ವಿಸ್ಮಯಂ-ಆಶ್ಚರ್ಯವನ್ನು, ಆಪನ್ನಾಃ-ಹೊಂದಿದರು. ॥ ೧೨೫ ॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಚತುರ್ಥಸ್ಸರ್ಗಃ.



ದಾಗಿಯೂ, ಗಾಳಿಯಿಂದ ಹಾರಿಸಲಾದ ತರಂಗಧ್ವನಿಗಳಿಂದ ಸಂಭಾಷಿಸುತ್ತಿರುವಂತೆಯೂ, ವಾಯುವೇಗದಿಂದ ಉಲ್ಲಕಲ್ಲೋಲವಾಗಿ ಮೊರೆಯುತ್ತಿರುವುದಾಗಿಯೂ ಇರುವ ಆ ಮಹಾ ಸಾಗರವನ್ನು ನೋಡಿ ಆ ವಾನರರೆಲ್ಲರೂ ಮಹಾಶ್ಚರ್ಯಭರಿತರಾದರು. ॥ ೧೧೯–೧೨೫ ॥

ಇಂತಿದು ಶ್ರೀರಾಮಕೃತ ಯುದ್ಧಯಾತ್ರಾಪ್ರಯಾಣ ಸಮುದ್ರತೀರಗಮನ
ವಾನರಸೇನಾನಿವೇಶನಾದಿ ವೃತ್ತಾಂತನಿರೂಪಣವೆಂಬ ನಾಲ್ಕನೆಯ
ಸರ್ಗವು ಸಮಾಪ್ತವಾದುದು.



# ಯುದ್ಧಕಾಂಡೇ ಪಂಚಮಸ್ಸರ್ಗಃ

ಸಾತು ನೀಲೇನ ವಿಧಿವತ್ಸ್ವಾರಕ್ಷಾ ಸುಸಮಾಹಿತಾ । ಸಾಗರಸ್ಯೋತ್ತರೇ ತೀರೇ ಸಾಧು ಸೇನಾ ನಿವೇಶಿತಾ ॥ ೧ ॥ ಮೈಂದಶ್ಚ ದ್ವಿವಿದಶ್ಚೋಭೌ ತತ್ರ ವಾನರ ಪುಂಗವೌ । ವಿಚೇರತುಶ್ಚ ತಾಂ ಸೇನಾಂ ರಕ್ಷಾರ್ಥಂ ಸರ್ವತೋದಿಶಂ ॥೨॥ ನಿವಿಷ್ಟಾಯಾಂತು ಸೇನಾಯಾಂ ತೀರೇ ನದನದೀಪತೇಃ । ಪಾರ್ಶ್ವಸ್ಥಂ ಲಕ್ಷ್ಮಣಂ ದೃಷ್ಟ್ವಾ ರಾಮೋ ವಚನಮಬ್ರವೀತ್ ॥೩॥ "ಶೋಕಶ್ಚ ಕಿಲ ಕಾಲೇನ ಗಚ್ಛತಾ ಹ್ಯಪಗಚ್ಛತಿ । ಮಮ ಚಾಪಶ್ಯತಃ ಕಾಂತಾಮಹನ್ಯಹನಿ ವರ್ಧತೇ ॥ ೪ ॥ ನಮೇ ದುಃಖಂ ಪ್ರಿಯಾ

---

ನೀಲೇನ - ನೀಲನಿಂದ, ವಿಧಿವತ್ - ಚನ್ನಾಗಿ, ಸ್ವಾರಕ್ಷಾ - ಶುಭಕರನಾದ ರಕ್ಷಕನುಳ್ಳ, ಸುಸಮಾಹಿತಾ-ಸಮಾಧಾನಗೊಳಿಸಲ್ಪಟ್ಟ, ಸಾಸೇನಾತು-ಆ ಸೈನ್ಯವಾದರೆ, ಸಾಗರಸ್ಯ-ಸಮುದ್ರದ, ಉತ್ತರೇತೀರೇ - ಉತ್ತರತೀರದಲ್ಲಿ, ಸಾಧು - ಚನ್ನಾಗಿ, ನಿವೇಶಿತಾ - ಇರಿಸಲ್ಪಟ್ಟಿತು. ॥ ೧ ॥ ತತ್ರ - ಅಲ್ಲಿ, ಮೈಂದಶ್ಚ - ಮೈಂದನು, ದ್ವಿವಿದಶ್ಚ - ದ್ವಿವಿದನು ಎಂಬ, ಉಭೌ - ಇಬ್ಬರಾದ, ವಾನರ ಪುಂಗವೌ - ವಾನರೋತ್ತಮರು, ತಾಂಸೇನಾಂ - ಆ ಸೇನೆಯನ್ನು, ಸರ್ವತೋದಿಶಂ - ಸಮಸ್ತ ದಿಕ್ಕುಗಳಲ್ಲಿಯೂ, ರಕ್ಷಾರ್ಥಂ - ಸಂರಕ್ಷಣಾರ್ಥವಾಗಿ, ವಿಚೇರತುಃ - ಸಂಚರಿಸಿದರು. ॥ ೨ ॥ ಸೇನಾಯಾಂತು - ಸೈನ್ಯವಾದರೆ, ನದನದೀಪತೇಃ - ನದಗಳಿಗೂ ನದಿಗಳಿಗೂ ಅಧಿಪತಿಯಾದ ಸಮುದ್ರನ, ತೀರೇ - ದಡದಲ್ಲಿ, ನಿವಿಷ್ಟಾಯಾಂ - ಇಳಿಸಲ್ಪಟ್ಟದಾಗಲು, ರಾಮಃ - ಶ್ರೀರಾಮನು, ಪಾರ್ಶ್ವಸ್ಥಂ - ಪಕ್ಕದಲ್ಲಿರುವ, ಲಕ್ಷ್ಮಣಂ- ಲಕ್ಷ್ಮಣನನ್ನು, ದೃಷ್ಟ್ವಾ - ನೋಡಿ, ವಚನಂ - ಮಾತನ್ನು, ಅಬ್ರವೀತ್- ನುಡಿದನು. ॥ ೩ ॥ ಶೋಕಶ್ಚ - ಇಷ್ಟವಸ್ತು ವಿಯೋಗಜನ್ಯವಾದ ದುಃಖವು, ಗಚ್ಛತಾ - ಹೋಗುತ್ತಿರುವ, ಕಾಲೇನ-ಸಮಯದಿಂದ, ಅಪಗಚ್ಛತಿ-ಹೋಗುತ್ತದೆ, ಕಾಂತಾಂ-ಪ್ರಿಯಳನ್ನು, ಅಪಶ್ಯತಃ- ಕಾಣದಿರುವ, ಮಮ - ನನಗೆ, ಶೋಕಶ್ಚ - ಶೋಕವಾದರೆ, ಅಹನ್ಯಹನಿ - ದಿನದಿನದಲ್ಲಿಯೂ, ವರ್ಧತೇಹಿ - ವೃದ್ಧಿಹೊಂದುವರಷ್ಟೆ. ॥ ೪ ॥ ಪ್ರಿಯಾ - ಪ್ರಾಣಕಾಂತೆಯು, ದೂರೇ - ದೂರದಲ್ಲಿರುವ

---

ಸೇನಾನಾಯಕನಾದ ನೀಲನು ಸಮರ್ಥರಾದ ರಕ್ಷಕರನ್ನೇರ್ಪಡಿಸಿ ಸಮುದ್ರದ ಆ ಉತ್ತರತೀರದಲ್ಲಿ ಶಾಸ್ತ್ರೋಕ್ತವಾಗಿ ಆ ವಾನರಸೇನೆಯೆಲ್ಲವನ್ನೂ ನಿಲ್ಲಿಸಿದನು, ಆಗ ವಾನರೋತ್ತಮರಾದ ಮೈಂದ ದ್ವಿವಿದರು ಆ ವಾನರಸೇನೆಯೆಲ್ಲವನ್ನೂ ರಕ್ಷಿಸುತ್ತ ನಾಲ್ಕುಕಡೆಗಳಲ್ಲಿಯೂ ತಿರುಗುತ್ತಲಿದ್ದರು. ಹೀಗೆ ಸೇನೆಯೆಲ್ಲವೂ ಸಮುದ್ರತೀರದಲ್ಲಿ ನಿಂತಬಳಿಕ ಶ್ರೀರಾಮಮೂರ್ತಿಯು ತನ್ನ ಬಳಿಯಲ್ಲಿದ್ದ ಲಕ್ಷ್ಮಣಸ್ವಾಮಿಯನ್ನು ನೋಡಿ, "ಲಕ್ಷ್ಮಣಾ! ವ್ಯಸನವೆಂಬುದು ಕಾಲವು ಕಳೆದಂತೆಲ್ಲಾ ಕ್ಷೀಣಿಸುತ್ತ ಬರುತ್ತದೆಯಲ್ಲವೆ! ಆದರೆ ನನಗೆ ಮಾತ್ರ, ನನ್ನ ಪ್ರಿಯತಮೆಯಾದ ಸೀತೆಯನ್ನಗಲಿದುದರಿಂದುಂಟಾದ ವ್ಯಸನವು ದಿನಕಳೆದಂತೆಲ್ಲಾ ವೃದ್ಧಿಯಾಗುತ್ತಲೇ ಇರುವುದು. ನನ್ನ ಪ್ರಿಯೆಯು ದೂರದೇಶದಲ್ಲಿರುವಳೆಂದು ನನಗೆಷ್ಟು ಮಾತ್ರವೂ ವ್ಯಸನವಿಲ್ಲ; ಅವಳನ್ನು ರಾಕ್ಷಸರಪಹರಿಸಿದರೆಂಬುದರಿಂದಲೂ ನನಗೆ ದುಃಖವುಂಟಾಗುವದಿಲ್ಲವು. ಏಕೆಂದರೆ ನಾನು ಪುನಃ ಆಕೆಯನ್ನು ಹೊಂದಬಲ್ಲೆನು. ಆದರೂ

ದೂರೇ ನಮೇ ದುಃಖಂ ಹೃತೇತಿವಾ । ಏತದೇವಾನುಶೋಚಾಮಿ ವಯೋಽಸ್ಯಾಹ್ಯತಿ ವರ್ತತೇ ॥ ೫ ॥ ವಾಹಿ ವಾತ ಯತಃ ಕಾಂತಾತಾಂ ಸ್ಪೃಷ್ಟ್ವಾ ಮಾಮಪಿ ಸ್ಪೃಶ ತ್ವಯಿ ಮೇ ಗಾತ್ರಸಂಸ್ಪರ್ಶಶ್ಚಂದ್ರೇ ದೃಷ್ಟಿಸಮಾಗಮಃ ॥ ೬ ॥ ತನ್ಮೇ ದಹತಿ ಗಾತ್ರಾಣಿ ವಿಷಂ ಪೀತಮಿವಾಶಯೇ । ಹಾನಾಥೇತಿ ಪ್ರಿಯಾ ಸಾ ಮೇ ಹ್ರಿಯಮಾಣಾ ಯದಬ್ರವೀತ್ ॥೭॥ ತದ್ವಿಯೋಗೇಂಧನವತಾ ತಚ್ಚಿಂತಾ* ವಿಪುಲಾರ್ಚಿಷಾ ।

ಳೆಂದು, ಮೇ - ನನಗೆ, ದುಃಖಂ - ವ್ಯಸನವು, ನಾಸ್ತಿ - ಇಲ್ಲವು, ಹತೇತಿ - ಅಪಹರಿಸಲ್ಪಟ್ಟಳೆಂದು, ಮೇ - ನನಗೆ, ದುಃಖಂ - ದುಃಖವು, ನಾಸ್ತಿ - ಇಲ್ಲವು, ಅಸ್ಯಾಃ - ಈ ಸೀತಾದೇವಿಗೆ, ವಯಃ - ವಯಸ್ಸು, ಅತಿವರ್ತತೀತಿಯತ್ - ಮೀರುವದೆಂಬುದಾವದೋ, ಏತದೇವ - ಇದನ್ನೇ ಕುರಿತು, ಅನುಶೋಚಾಮಿಹಿ - ದುಃಖಿಸುತ್ತೇನಷ್ಟೆ. ॥ ೫ ॥ ಹೇ ವಾತ - ಎಲೈ ವಾಯುವೇ, ಕಾಂತಾ - ಸೀತಾ ದೇವಿಯು, ಯತಃ - ಎಲ್ಲಿರುವಳೋ, (ಆ ಪ್ರದೇಶದಲ್ಲಿ ಅಥವಾ ಅಲ್ಲಿ) ವಾಹಿ - ಬೀಸು, ತಾಂ - ಆಕೆಯನ್ನು, ಸ್ಪೃಷ್ಟ್ವಾ - ಸ್ಪರ್ಶಿಸಿ, ಮಾಮಪಿ - ನನ್ನನ್ನೂ ಕೂಡ, ಸ್ಪೃಶ - ಸ್ಪರ್ಶಿಸು, ಚಂದ್ರೇ - ಚಂದ್ರನಲ್ಲಿ, ದೃಷ್ಟಿ....ಮಃ - ದೃಷ್ಟಿಯು ಬರುವಿಕೆಯು, ಯಥಾ - ಹೇಗೋ, ತಥಾ - ಹಾಗೆ, ಮೇ - ನನಗೆ, ಗಾತ್ರಸಂಸ್ಪರ್ಶಃ - ಆಕೆಯ ಶರೀರಸಂಸ್ಪರ್ಶವು, ತ್ವಯಿ - ನಿನ್ನಧೀನವಾದದ್ದು. ॥ ೬ ॥ ಸಾಪ್ರಿಯಾ - ಆ ಸೀತಾದೇವಿಯು, ಹ್ರಿಯಮಾಣಾ - ಅಪಹರಿಸಲ್ಪಡುವವಳಾಗಿ, ಹಾ ನಾಥ - ಎಲೈ ಸ್ವಾಮಿಯೇ, ಇತಿ - ಇಂತೆಂದು, ಯದಬ್ರವೀತ್ - ಯಾವ ಮಾತನ್ನು ಹೇಳಿದಳೋ, ತತ್ - ಅದು, ಪೀತಂ - ಪಾನಮಾಡಲ್ಪಟ್ಟ, ವಿಷಮಿವ - ವಿಷವಂತೆ, ಮೇ - ನನ್ನ, ಗಾತ್ರಾಣಿ - ಅವಯವಗಳನ್ನು, ದಹತಿ - ದಹಿಸುವದು, ಆಶಯೇ - ಮನದಲ್ಲಿ, ಸ್ಥಿತಂ - ನಿಂತಿದೆ. ॥ ೭ ॥ ತದ್ವಿ....ತಾ - ಆ ಸೀತಾ ದೇವಿಯ ವಿಯೋಗವೆಂಬ ಇಂಧನಗಳುಳ್ಳ, ತಚ್ಚಿ....ಷಾ - ಆಕೆಯ ಚಿಂತೆಯೆಂಬ ವಿಶೇಷವಾದ

ಈಗ ಆ ದೇವಿಯ ಯೌವನವು ನಿಷ್ಪ್ರಯೋಜಕವಾಗಿ ಕಳೆದು ಹೋಗುತ್ತಿರುವುದಲ್ಲಾ ಎಂಬ ಚಿಂತೆಯೇ ನನ್ನನ್ನು ಪೀಡಿಸುತ್ತಿರುವುದು'' ಎಂದು ಹೇಳಿ ತನ್ನಲ್ಲಿ ತಾನು ಹೀಗೆಂದು ಚಿಂತಿಸತೊಡಗಿದನು. ॥೧–೫॥ "ಎಲೈ ವಾಯುವೇ! ನೀನು ನನ್ನ ಪ್ರಿಯೆಯಿರುವ ಪ್ರದೇಶಗಳಲ್ಲಿ ಸಂಚರಿಸಿ ಅಲ್ಲಿ ಆಕೆಯನ್ನು ಸ್ಪರ್ಶಿಸಿ ಆ ಬಳಿಕ ಇಲ್ಲಿಗೆ ಹಿಂತಿರುಗಿ ಬಂದು ನನ್ನನ್ನು ಸ್ಪರ್ಶಿಸು. ನಮ್ಮಿಬ್ಬರಿಗೂ ದೇಹಸ್ಪರ್ಶವು ಈಗ ಈ ರೀತಿಯಾಗಿ ನಿನ್ನಿಂದಾಗ ಬೇಕಲ್ಲದೆ ಮತ್ತೊಂದು ವಿಧವಾಗಿ ಆಗಲು ಶಕ್ಯವಿಲ್ಲವು. ನಮ್ಮಿಬ್ಬರಿಗೂ ಅನ್ಯೋನ್ಯ ಮುಖಾವಲೋಕನವು ಮಾತ್ರ ನನ್ನ ಮನದನ್ನೆಯ ಮುಖಕ್ಕೆ ಸಮಾನವಾಗಿರುವ ಈ ಚಂದ್ರ ಮನಿಂದುಂಟಾಗಬೇಕಾಗಿರುವುದು. ಸಮಸ್ತ ಸುಖಗಳನ್ನೂ ತೊರೆದು ನನ್ನ ಹಿಂದೆ ಅರಣ್ಯ ಕ್ಕೈತಂದ ನನ್ನ ಪ್ರಿಯೆಯು ರಾವಣನಿಂದಪಹೃತಳಾದ ಸಮಯದಲ್ಲಿ "ಹಾ ನಾಥ!'' ಎಂದು ನನ್ನನ್ನು ಕುರಿತು ಕೂಗಿಕೊಂಡ ಮಾತು ಈಗ ನನ್ನ ಮನಸ್ಸಿನಲ್ಲಿ ನಿಂತು, ವಿಷವನ್ನು ಕುಡಿ ದವನಿಗೆ ಆ ವಿಷವು ಅವನ ಸಮಸ್ತಾವಯವಗಳನ್ನೂ ಸುಡುವಂತೆ ಸುಡುತ್ತಿದೆ. ಅಯ್ಯೋ! ಪ್ರಿಯಾವಿರಹವೆಂಬ ಕಾಷ್ಠಗಳುಳ್ಳುದೂ, ಆ ಮನೋಹರೆಯನ್ನು ಕುರಿತ ಚಿಂತೆಯೆಂಬ

* "ವಿಮಲಾರ್ಚಿಷಾ" ತಿ. ಪಾ.

**ರಾತ್ರಿಂ ದಿವಂ ಶರೀರಂಮೇ ದಹ್ಯತೇ ಮದನಾಗ್ನಿನಾ ॥ ೮ ॥ † ಅವಗಾಹ್ಯಾರ್ಣವಂ ಸ್ವಪ್ಸ್ಯೇ ಸೌಮಿತ್ರೇ ಭವತಾ ವಿನಾ । ¶ ಕಥಂ ಚಿತ್ಪ್ರಜ್ವಲನ್ಕಾಮ ‡ ಸ್ನ ಮಾ ಸುಪ್ತಂ ಜಲೇ ದಹೇತ್ ॥ ೯ ॥ ಬಹ್ವೇತತ್ಕಾಮಯಾನಸ್ಯ ಶಕ್ಯಮೇತೇನ ಜೀವಿತುಂ । ಯದಹಂ ಸಾಚ ವಾಮೋರೂರೇಕಾಂ ಧರಣಿಮಾಶ್ರಿತೌ ॥ ೧೦ ॥ ಕೇದಾರಸ್ಯೇವ ಕೇದಾರಸ್ಸೋದಕಸ್ಯ ನಿರೂದಕಃ । ಉಪಸ್ನೇಹೇನ ಜೀವಾಮಿ ಜೀವಂತೀಂ ಯಚ್ಛ್ರು**

ಜ್ವಾಲೆಗಳುಳ್ಳ, ಮದನಾಗ್ನಿನಾ - ಮನ್ಮಥನೆಂಬ ಅಗ್ನಿಯಿಂದ, ಮೇ - ನನ್ನ, ಶರೀರಂ - ದೇಹವು, ರಾತ್ರಿಂ - ರಾತ್ರಿಯಲ್ಲಿಯೂ, ದಿವಂ - ಹಗಲಿನಲ್ಲಿಯೂ, ದಹ್ಯತೇ - ಸುಡಲ್ಪಡುವುದು. ॥ ೮ ॥ ಹೇ ಸೌಮಿತ್ರೇ - ಎಲೈ ಲಕ್ಷ್ಮಣನೇ, ಭವತಾವಿನಾ - ನಿನ್ನ ಹೊರ್ತು, ಅರ್ಣವಂ - ಸಮುದ್ರವನ್ನು, ಅವಗಾಹ್ಯ - ಪ್ರವೇಶಿಸಿ, ಸ್ವಪ್ಸ್ಯೇ - ಮಲಗುವೆನು, ಪ್ರಜ್ವಲನ್ - ಪ್ರಜ್ವಲಿಸುತ್ತಿರುವ, ಕಾಮಃ - ಮನ್ಮಥನು, ಜಲೇ - ಉದಕದಲ್ಲಿ, ಸುಪ್ತಂ - ಮಲಗಿದವನನ್ನು, ಕಥಂಚಿತ್ - ಅತಿಪ್ರಯಾಸದಿಂದ. ದಹೇತ್ - ದಹಿಸಿಯಾನು. ॥ ೯ ॥ ಸಾವಾಮೋರೂಃ - ಆ ಸೀತಾದೇವಿಯೂ, ಅಹಂಚ - ನಾನೂ, ಏಕಾಂ - ಒಂದಾದ, ಧರಣಿಂ - ಭೂಮಿಯನ್ನು, ಆಶ್ರಿತಾವಿತಿಯತ್ - ಆಶ್ರಯಿಸಿರುವೆವೆಂಬ, ಏತತ್- ಈ ವಿಷಯವು, ಬಹು - ವಿಶೇಷವಾಗಿ ಜೀವನಸಾಧಕವಾದದ್ದು, ಏತತ್ - ಇದನ್ನು, ಕಾಮಯಾನಸ್ಯ- ಕಾಮುಕನಾದ ನನಗೆ, ಏತೇನ - ಇದರಿಂದ, ಜೀವಿತುಂ - ಬದುಕುವುದಕ್ಕೆ, ಶಕ್ಯಂ - ಆಗುವುದು. ॥ ೧೦ ॥ ಜೀವಂತೀಂ - ಬದುಕಿರುವ, ತಾಂ - ಆ ಸೀತಾದೇವಿಯನ್ನು, ಶ್ರುಣೋಮೀತಿಯತ್ - ಕೇಳುವೆನೆಂಬದಾವದೋ, ತೇನ-ಅದರಿಂದ, ನಿರೂದಕಃ-ಉದಕವಿಲ್ಲದಿರುವ, ಕೇದಾರಃ-ಗದ್ದೆಯು, ಸೋದಕಸ್ಯ - ಉದಕದಿಂದ ಯುಕ್ತವಾದ, ಕೇದಾರಸ್ಯ - ಗದ್ದೆಯ, ಉಪಸ್ನೇಹೇನೇವ - ಉಪ

ಜ್ವಾಲೆಗಳುಳ್ಳುದೂ ಆದ ಮದನಾಗ್ನಿಯು ಹಗಲಿರುಳೂ ನನ್ನ ದೇಹವನ್ನು ಸುಡುತ್ತಿರುವುದು." ಶ್ರೀರಾಮನೀರೀತಿ ಬಹಳವಾಗಿ ಚಿಂತಿಸಿ ಸೌಮಿತ್ರಿಯನ್ನು ಕುರಿತು, "ಎಲೈ ಸೌಮಿತ್ರಿಯೇ! ನಾನು ನಿನ್ನನ್ನು ಬಿಟ್ಟು ಸಮುದ್ರ ಜಲದಲ್ಲಿಯಾದರೂ ಮಲಗಿಯೇನು. ನಾನು ಹಾಗೆ ನೀರಿನಲ್ಲಿ ಪವಳಿಸಿದರೆ, ಈಗ ನನ್ನನ್ನು ಬಹಳವಾಗಿ ಸುಡುತ್ತಿರುವ ಈ ಮದನಾಗ್ನಿಯು ಹೇಗಾದರೂ ಸ್ವಲ್ಪಮಟ್ಟಿಗೆ ಕಡಿಮೆಯಾದೀತೋ ಏನೋ? ಲಕ್ಷ್ಮಣಾ! ನಾನೂ, ಸೀತೆಯೂ ನಾವೀರ್ವರೂ ಇನ್ನೂ ಬದುಕಿರುವುದರಿಂದಲೇ ಈ ವಿರಹಬಾಧೆಯನ್ನು ಸಹಿಸಿರುವೆವು. ಇದೂ ಅಲ್ಲದೆ ನಾನು, ಸೀತೆಯು ಬದುಕಿರುವಳೆಂಬ ವಿಷಯವನ್ನು ಕೇಳಿದುದರಿಂದಲೇ, ಪುಷ್ಕಳವಾದ ನೀರುಳ್ಳ ಗದ್ದೆಯ ಸಮೀಪದಲ್ಲಿರುವ ನೀರಿಲ್ಲದ ಗದ್ದೆಯು ಆ ನೀರನ್ನು ಸ್ವಲ್ಪಮಟ್ಟಿಗಾದರೂ ಹೀರಿ ಬದುಕಿರುವಂತೆ ಬದುಕಿರುವೆನು. ॥೬-೧೦॥ ತಮ್ಮಾ ಲಕ್ಷ್ಮಣಾ! ನಾನು ಶತ್ರುಗಳನ್ನು ಜಯಿಸಿ ಸುಶ್ರೋಣಿಯೂ, ಕಮಲಾಕ್ಷಿಯೂ ಆದ ನನ್ನ ಸೀತೆಯನ್ನು ಹೊಂದಿದವನಾಗಿ ಸರ್ವಸಂಪತ್ಸಮೃದ್ಧವಾದ ಸಂಪದವನ್ನು ಹೊಂದಿದಂತೆ ಭಾವಿಸು

† ಇಲ್ಲಿ ಶ್ರೀರಾಮನು ವಿಷ್ಣುವಿನ ಅವತಾರವಾದುದರಿಂದ ಈ ಮಾತನ್ನಾಡಿರುವುದಾಗಿ ತಿಳಿಯಬೇಕು. ವಿಷ್ಣುವು ಶೇಷಶಾಯಿಯಾಗಿ ಸಾಗರದಲ್ಲಿ ಪವಳಿಸಿರುವನೆಂದು ಪ್ರಸಿದ್ಧಿ. ಲಕ್ಷ್ಮಣನನ್ನು ಬಿಟ್ಟು ಸಮುದ್ರದಲ್ಲಿ ಪವಳಿಸುವೆನೆಂದು ಶ್ರೀರಾಮನು ಹೇಳಿರುವುದರಿಂದ ಲಕ್ಷ್ಮಣನು ಶೇಷನೆಂದೇ ಈ ವಾಕ್ಯದಿಂದ ಗೊತ್ತಾಗುತ್ತದೆ. (ಗೋ)

¶ "ಏವಂ" ತಿ. ಪಾ. ‡ "ನ" ಗೋ. ಪಾ.

ಣೋಽಮಿ ತಾಂ || ೧೧ || ಕದಾನು ಖಲು ಸುಶ್ರೋಣೀಂ ಶತಪತ್ರಾಯತೇಕ್ಷಣಾಂ! | ವಿಜಿತ್ಯ ಶತ್ರೂನ್ ದ್ರಕ್ಷ್ಯಾಮಿ ಸೀತಾಂ ಸ್ಫೀತಾಮಿವ ಶ್ರಿಯಂ! || ೧೨ || ‡ ಕದಾನು ಚಾರುಬಿಂಬೋಷ್ಠಂ ತಸ್ಯಾಃ ಪದ್ಮಮಿವಾನನಂ | ಈಷದುನ್ನಮ್ಯ ಪಾಸ್ಯಾಮಿ ರಸಾಯನಮಿವಾತುರಃ! || ೧೩ || § ತಸ್ಯಾಸ್ತು ಸಂಹತೌ ಪೀನೌ ಸ್ತನೌ ತಾಳಫಲೋಪಮೌ | ಕದಾನು ಖಲು ಸೋತ್ಕಂಪೌ $ ಶ್ಲಿಷ್ಯಂತ್ಯಾ ಮಾಂ ಭಜಿಷ್ಯತಃ! || ೧೪ || ಸಾ ನೂನಮಸಿತಾಪಾಂಗೀ ರಕ್ಷೋಮಧ್ಯಗತಾ ಸತೀ | ಮನ್ನಾಥಾ ನಾಥಹೀನೇವ ತ್ರಾತಾರಂ ನಾಧಿಗಚ್ಛತಿ || ೧೫ || ಕಥಂ ಜನಕರಾಜಸ್ಯ ದುಹಿತಾ ಸಾ ಮಮ ಪ್ರಿಯಾ | ರಾಕ್ಷಸೀ

ಕ್ಲೇಶದಿಂದ ಹೇಗೋ ಹಾಗೆ, ಜೀವಾಮಿ - ಬದುಕುತ್ತೇನೆ. ||೧೧|| ಶತ್ರೂನ್ - ಶತ್ರುಗಳನ್ನು, ವಿಜಿತ್ಯ - ಜಯಿಸಿ, ಶತ....ಣಾಂ - ತಾವರೆಗೆ ಸಮಾನವಾದ ನೇತ್ರಗಳುಳ್ಳ, ಸುಶ್ರೋಣೀಂ - ಸಮೀಚೀನವಾದ ಶ್ರೋಣೀಪ್ರದೇಶವುಳ್ಳ, ಸೀತಾಂ - ಸೀತಾದೇವಿಯನ್ನು, ಸ್ಫೀತಾಂ - ಸಮೃದ್ಧವಾದ, ಶ್ರಿಯಮಿವ - ರಾಜ್ಯಲಕ್ಷ್ಮಿಯನ್ನಂತೆ, ಕದಾನುಖಲು - ಯಾವಾಗಲಾದರೆ, ದ್ರಕ್ಷ್ಯಾಮಿ - ನೋಡುವೆನೋ. || ೧೨ || ಚಾರುಬಿಂಬೋಷ್ಠಂ - ಮನೋಹರವಾದ ಓಷ್ಠಪ್ರದೇಶವುಳ್ಳ, ಪದ್ಮಮಿವಸ್ಥಿತಂ - ಕಮಲದಂತಿರುವ, ತಸ್ಯಾಃ - ಆ ಸೀತಾದೇವಿಯ, ಆನನಂ - ಮುಖವನ್ನು, ಆತುರಃ - ರೋಗಿಯು, ರಸಾಯನಮಿವ - ರೋಗಪರಿಹಾರಕವಾದ ಔಷಧವಿಶೇಷವನ್ನಂತೆ, ಕಿಂಚಿದುನ್ನಮ್ಯ - ಕೊಂಚ ಎತ್ತಿ, ಕದಾನುಖಲು - ಯಾವಾಗಲಾದರೆ, ಪಾಸ್ಯಾಮಿ - ಪಾನಮಾಡುವೆನೋ. || ೧೩ || ಸಂಹತೌ - ಸೇರಿರುವ, ಪೀನೌ - ಬಲಿತಿರುವ, ತಾಳ....ಮೌ - ತಾಳೆಯಹಣ್ಣುಗಳ ಸಾಮ್ಯವುಳ್ಳ, ಶ್ಲಿಷ್ಯಂತ್ಯಾಃ - ಸೇರಿದ, ತಸ್ಯಾಃ - ಆ ಸೀತಾದೇವಿಯ, ಸ್ತನೌತು - ಕುಚಗಳಾದರೆ, ಸೋತ್ಕಂಪೌ - ಕಂಪದಿಂದ ಕೂಡಿದುವಾಗಿ, ಕದಾನು ಖಲು - ಯಾವಾಗಲಾದರೆ, ಮಾಂ - ನನ್ನನ್ನು, ಭಜಿಷ್ಯತಃ - ಹೊಂದುವವೋ. || ೧೪ || ಅಸಿತಾಪಾಂಗೀ - ಕಪ್ಪಾದ ನೇತ್ರಾಂತಗಳುಳ್ಳ, ಮನ್ನಾಥಾ - ನಾನೇ ನಾಥನಾಗುಳ್ಳ, ಸತೀ - ಪತಿವ್ರತೆಯಾದ, ಸಾ - ಆ ಸೀತಾದೇವಿಯು, ರಕ್ಷೋ....ತಾ - ರಾಕ್ಷಸರ ಮಧ್ಯವನ್ನು ಹೊಂದಿದವಳಾಗಿ, ನಾಥಹೀನೇವ - ನಾಥರಹಿತಳಂತೆ, ತ್ರಾತಾರಂ - ರಕ್ಷಕನನ್ನು, ನಾಧಿಗಚ್ಛತಿ - ಹೊಂದುವುದಿಲ್ಲ, ನೂನಂ - ನಿಶ್ಚಯವು. || ೧೫ || ಜನಕರಾಜಸ್ಯ - ಜನಕರಾಜನ, ದುಹಿತಾ - ಮಗಳಾದ, ಮಮ -

ವೆನೋ? ಬಹು ಸುಂದರವೂ ಬಿಂಬಫಲಸದೃಶವೂ ಆದ ಆ ನನ್ನ ಪ್ರಿಯೆಯ ಅಧರದೊಡಗೂಡಿದ ಮುಖಕಮಲವನ್ನು ಸ್ವಲ್ಪ ಮೇಲಕ್ಕೆತ್ತಿ, "ರೋಗಿಯಾದವನು ದಿವ್ಯೌಷಧ ಪಾನಮಾಡಿದಂತೆ" ಆಕೆಯ ಅಧರಾಮೃತವನ್ನು ಪಾನಮಾಡುವುದಾವಾಗಲೋ? ಅಕಟಾ! ಸೀತೆಯು ನನ್ನನ್ನು ಬಿಗಿದಪ್ಪುವುದಾವಾಗಲೋ? ಆಹಾ! ಆಕೆಯು ಹಾಗೆ ನನ್ನನ್ನಪ್ಪಿದಾಗ ಚೆನ್ನಾಗಿ ಬಲಿತು ಸಂಯುತವಾಗಿ ತಾಳಫಲಗಳಂತಿರುವ ಸ್ತನಗಳು ಕಂಪಿಸುತ್ತ ನನ್ನ ದೇಹವನ್ನು ಸೋಕುವುದಾವಾಗಲೋ! ಮನೋಹರ ನೇತ್ರಗಳುಳ್ಳ ಆ ಸೀತೆಯು ರಾಕ್ಷಸರ ಕೈಗೆ ಸಿಕ್ಕಿಬಿದ್ದು, ನಾಥನಾದ ನಾನಿದ್ದರೂ ಅನಾಥೆಯಂತೆ ಬಹಳವಾಗಿ ಪರಿತಪಿಸುತ್ತಿರುವಳಲ್ಲವೆ! ಅಯ್ಯೋ! ಆ ದೇವಿಯು ಜನಕರಾಜಕುಮಾರಿಯಾಗಿ, ನನಗೆ ಪ್ರಿಯೆಯಾಗಿ, ದಶರಥ

‡ "ಕದಾನುಚಾರುದಂತೋಷ್ಠಂ" ತಿ. ಪಾ. § "ತೌ ತಸ್ಯಾಃ ಸಹಿತೌ ಪೀನೌ" ರಾ. ತಿ. ಪಾ.

$ "ಹಸಂತ್ಯಾ" ಕ. ತಿ. ಪಾ.

ಮಧ್ಯಗಾ ಶೇತೇ ಸ್ನುಷಾ ದಶರಥಸ್ಯಚ! ॥ ೧೬ ॥ ಕದಾ ವಿಕ್ಷೋಭ್ಯ ರಕ್ಷಾಂಸಿ ಸಾ ವಿಧೂಯೋತ್ಪತಿಷ್ಯತಿ । ವಿಧೂಯ ಜಲದಾನ್ನೀಲಾನ್ಶಶಿರೇಖಾ ಶರತ್ಸ್ವಿವ! ॥ ೧೭ ॥ ಸ್ವಭಾವತನುಕಾ ನೂನಂ ಶೋಕೇನಾಽನಶನೇನಚ । ಭೂಯಸ್ತನುತರಾ ಸೀತಾ ದೇಶಕಾಲವಿಪರ್ಯಯಾತ್! ॥ ೧೮ ॥ ಕದಾನು ರಾಕ್ಷಸೇಂದ್ರಸ್ಯ ನಿಧಾಯೋರಸಿ ಸಾಯಕಾನ್ § । ಸೀತಾಂ ಪ್ರತ್ಯಾಹರಿಷ್ಯಾಮಿ ಶೋಕಮುತ್ಸೃಜ್ಯ ಮಾನಸಂ ॥ ೧೯ ॥ ಕದಾನು ಖಲು * ಮಾಂ ಸಾಧ್ವೀ ಸೀತಾ ಸುರಸುತೋಪಮಾ । ಸೋತ್ಕಂಠಾ ಕಂಠ

ನನ್ನ, ಪ್ರಿಯಾ - ಹೆಂಡತಿಯಾದ, ದಶರಥಸ್ಯಚ - ದಶರಥಮಹಾರಾಯನಿಗೂ, ಸ್ನುಷಾ - ಸೊಸೆಯಾದ, ಸಾ-ಆ ಸೀತಾದೇವಿಯು, ರಾಕ್ಷಸೀಮಧ್ಯಗಾ-ರಾಕ್ಷಸರ ಮಧ್ಯವನ್ನು ಹೊಂದಿ, ಕಥಂಶೇತೇ-ಹೇಗೆ ಮಲಗುವಳು. ॥ ೧೬ ॥ ಶರತ್ಸು - ಶರತ್ಕಾಲಗಳಲ್ಲಿ, ಶಶಿರೇಖಾ - ಚಂದ್ರರೇಖೆಯು, ನೀಲಾನ್ - ಕಪ್ಪಾಗಿರುವ, ಜಲದಾನ್ - ಮೇಘಗಳನ್ನು, ವಿಧೂಯೇವ - ಕೊಡಹಿಬರುವಂತೆ, ರಕ್ಷಾಂಸಿ - ರಾಕ್ಷಸರನ್ನು, ವಿಕ್ಷೋಭ್ಯ - ಕ್ಷೋಭೆಗೊಳಿಸಿ, ಕದಾ - ಯಾವಾಗ, ವಿಧೂಯ - ಕೊಡವಿಕೊಂಡು, ಉತ್ಪತಿಷ್ಯತಿ - ಹಾರಿಬರುವಳು, ಸ್ವಭಾ....ಕಾ - ಪ್ರಕೃತಿಯಿಂದಲೇ ಕೃಶವಾದ ಶರೀರವುಳ್ಳ, ಸೀತಾ - ಸೀತಾದೇವಿಯು, ದೇಶ....ತ್ - ದೇಶಕಾಲಗಳ ವ್ಯತ್ಯಾಸದ ದೆಸೆಯಿಂದ, ಶೋಕೇನ - ವ್ಯಸನದಿಂದಲೂ, ಅನಶನೇನಚ - ಆಹಾರಾಭಾವದಿಂದಲೂ, ಭೂಯಃ - ಮತ್ತೂ, ತನುತರಾ - ಬಹುವಾಗಿ ಕೃಶಳಾಗಿರುವವಳು, ನೂನಂ - ನಿಶ್ಚಯವು. ॥ ೧೭-೧೮ ॥ ರಾಕ್ಷಸೇಂದ್ರಸ್ಯ - ರಾವಣನ, ಉರಸಿ - ವಕ್ಷಸ್ಥಳದಲ್ಲಿ, ಸಾಯಕಾನ್ - ಬಾಣಗಳನ್ನು, ನಿಧಾಯ - ಇರಿಸಿ, ಕದಾನು - ಯಾವಾಗ, ಮಾನಸಂ - ಮನಸ್ಸಿನಿಂದ, ಶೋಕಂ - ವ್ಯಸನವನ್ನು, ಉತ್ಸೃಜ್ಯ - ಬಿಟ್ಟು, ಸೀತಾಂ - ಸೀತಾದೇವಿಯನ್ನು, ಪ್ರತ್ಯಾ....ಮಿ - ಪುನಃ ತರುವೆನೋ. ॥ ೧೯ ॥ ಸುರ....ಮಾ - ದೇವಕನ್ಯಕೆಗೆ ಸಮಾನಳಾದ, ಸಾಧ್ವೀ - ಪತಿವ್ರತೆಯಾದ, ಸೀತಾ - ಸೀತಾದೇವಿಯು, ಸೋತ್ಕಂಠಾ - ಉತ್ಕಂಠೆಯುಳ್ಳವಳಾಗಿ, ಮಾಂ - ನನ್ನನ್ನು,

ರಾಯನಿಗೆ ಸೊಸೆಯಾಗಿದ್ದರೂ, ರಾಕ್ಷಸಸ್ತ್ರೀಯರ ನಡುವೆ ಸಿಕ್ಕಿ ವರ್ಣಿಸಲಸದಳವಾದ ದುರವಸ್ಥೆಗೆ ತುತ್ತಾಗಿರುವಳಲ್ಲವೆ! ಇಷ್ಟನ್ನೆಲ್ಲ ತಂದಿಟ್ಟ ಕಾಲದ ಪ್ರಭಾವವಿನ್ನೆಷ್ಟಿರಬಹುದು!! ॥ ೧೧-೧೬ ॥ ಅಕಟಕಟಾ! ಶರತ್ಕಾಲದಲ್ಲಿ ಕರಿಮೋಡಗಳನ್ನು ದಿಕ್ಕುಪಾಲಾಗಿ ಚದುರಿಸಿ ಹೊರಗೆ ಬಂದ ಚಂದ್ರಬಿಂಬದಂತೆ ನನ್ನ ಪ್ರಿಯವಲ್ಲಭೆಯಾದ ಸೀತಾದೇವಿಯು ದುರುಳ ರಕ್ಕಸರಿಂದ ತಪ್ಪಿಸಿಕೊಂಡು ನನ್ನ ಬಳಿಗೆ ಬರುವುದಾವಾಗಲೋ!! ಸ್ವಭಾವದಿಂದಲೇ ಕೃಶಾಂಗಿಯಾದ ಆ ಸೀತಾದೇವಿಯು ಇದೀಗ ದೇಶಕಾಲವೈಪರೀತ್ಯಗಳ ದೆಸೆಯಿಂದುಂಟಾದ ವ್ಯಸನದಿಂದಲೂ, ಆಹಾರವಿಲ್ಲದಿರುವುದರಿಂದಲೂ ಇನ್ನೂ ಕೃಶಿಸಿಹೋಗಿರಬಹುದು. ಲಕ್ಷ್ಮಣಾ! ರಾಕ್ಷಸೇಶ್ವರನಾದ ಆ ದುರುಳ ರಾವಣನ ವಕ್ಷಸ್ಥಳದಲ್ಲಿ ನನ್ನ ಕೂರಲಗುಗಳುಳ್ಳ ಬಾಣಗಳನ್ನು ನಾಟಿಸಿ ಪುನಃ ಸೀತೆಯನ್ನು ಹೊಂದಿ ಮನಸ್ಸಿನ ವ್ಯಥೆಯನ್ನಾವಾಗ ಹೋಗಲಾಡಿಸಿಕೊಳ್ಳುವೆನೋ! ಯಾವಾಗ ಸುಖವನ್ನು ಹೊಂದುವೆನೋ! ಲಕ್ಷ್ಮಣಾ! ಬಹು ಪವಿತ್ರಳೂ, ಪತಿವ್ರತೆಯೂ, ದೇವಕನ್ಯಕೆಗೆ ಸಮಾನಳಾದವಳೂ ಆದ ಸೀತೆಯು ಪರಮ ಸಂತೋಷಸಮನ್ವಿತೆಯಾಗಿ ನನ್ನ ಕಂಠವನ್ನಾಲಂಗಿಸಿ ಆನಂದಬಾಷ್ಪಗಳನ್ನು ಯಾವಾಗ

§ "ಶೋಕಂ" ತಿ. ಪಾ. * "ಮೇ" ತಿ. ಪಾ.

ಮಾಲಂಬ್ಯ ಮೋಕ್ಷ್ಯತ್ಯಾನಂದಜಂ * ಪಯಃ! ||೨೦|| ಕದಾ ಶೋಕಮಿಮಂ ಘೋರಂ ಮೈಥಿಲೀ ವಿಪ್ರಯೋಗಜಂ । ಸಹಸಾ ವಿಪ್ರಮೋಕ್ಷ್ಯಾಮಿ ವಾಸಃ ಶುಕ್ಲೇತರಂ ಯಥಾ! " || ೨೧ || ಏವಂ ವಿಲಪತಸ್ತಸ್ಯ ತತ್ರ ರಾಮಸ್ಯ ಧೀಮತಃ । ದಿನಕ್ಷಯಾನ್ಮಂದುರುಚಿರ್ಭಾಸ್ಕರೋಽಸ್ತಮುಪಾಗಮತ್ || ೨೨ ||

ಆಶ್ವಾಸಿತೋ ಲಕ್ಷ್ಮಣೇನ ರಾಮಸ್ಸಂಧ್ಯಾಮುಪಾಸತ ।
ಸ್ಮರ್ನ್ ಕಮಲಪತ್ರಾಕ್ಷೀಂ ಸೀತಾಂ ಶೋಕಾಕುಲೀಕೃತಃ || ೨೩ ||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಪಂಚಮಸ್ಸರ್ಗಃ.

---

ಕಂಠಂ - ಕೊರಳನ್ನು, ಆಲಿಂಗ್ಯ - ಅಪ್ಪಿಕೊಂಡು, ಆನ....ಯಃ - ಆನಂದಬಾಷ್ಪಗಳನ್ನು, ಕದಾನುಖಲು - ಯಾವಾಗಲಾದರೆ, ಮೋಕ್ಷ್ಯತಿ - ಬಿಡುವಳು. ||೨೦|| ಮೈಥಿ....ಜಂ - ಸೀತಾವಿಯೋಗದಿಂದುಂಟಾದ, ಘೋರಂ - ಭಯಂಕರವಾದ, ಇಮಂಶೋಕಂ - ಈ ವ್ಯಸನವನ್ನು, ಕದಾ - ಯಾವಾಗ, ಶುಕ್ಲೇತರಂ - ಮಲಿನವಾದ, ವಾಸೋಯಥಾ - ವಸ್ತ್ರವನ್ನಂತೆ, ಸಹಸಾ - ಬೇಗನೆ, ವಿಪ್ರಮೋಕ್ಷ್ಯಾಮಿ - ಬಿಡುವೆನು. || ೨೧ || ತತ್ರ - ಆ ಸಮುದ್ರತೀರದಲ್ಲಿ, ಧೀಮತಃ - ಬುದ್ಧಿವಂತನಾದ, ತಸ್ಯರಾಮಸ್ಯ - ಆ ಶ್ರೀರಾಮನು, ಏವಂ - ಈ ಪ್ರಕಾರವಾಗಿ, ವಿಲ....ತಃ - ಪ್ರಲಪಿಸುತ್ತಿರಲು, ದಿನಕ್ಷಯಾತ್ - ಸಾಯಂಕಾಲದ ದೆಸೆಯಿಂದ, ಭಾಸ್ಕರಃ - ಸೂರ್ಯನು, ಮಂದರುಚಿಃ - ಕಳೆಗುಂದಿದವನಾಗಿ, ಅಸ್ತಂ-ಅಸ್ತಮಯವನ್ನು, ಉಪಾಗಮತ್-ಐದಿದನು. ||೨೨|| ಕಮ....ಕ್ಷೀಂ-ತಾವರೆಯೆಸಳಿನಂತಿರುವ ನೇತ್ರಗಳುಳ್ಳ, ಸೀತಾಂ - ಸೀತಾದೇವಿಯನ್ನು, ಸ್ಮರ್ನ್ - ಸ್ಮರಿಸುತ್ತ, ಶೋಕಾ....ತಃ - ಶೋಕದಿಂದ ವ್ಯಾಕುಲನಾಗಿ ಮಾಡಲ್ಪಟ್ಟ, ರಾಮಃ - ಶ್ರೀರಾಮನು, ಲಕ್ಷ್ಮಣೇನ - ಲಕ್ಷ್ಮಣನಿಂದ, ಆಶ್ವಾಸಿತಃ - ಸಮಾಧಾನಗೊಳಿಸಲ್ಪಟ್ಟವನಾಗಿ, ಸಂಧ್ಯಾಂ - ಸಾಯಂಸಂಧ್ಯೆಯನ್ನು, ಉಪಾಸತ - ಉಪಾಸನೆ ಮಾಡಿದನು. || ೨೩ ||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಪಂಚಮಸ್ಸರ್ಗಃ.

---

ಸುರಿಸುವಳೋ! ||೧೭–೨೦|| ತಮ್ಮಾ! ಸೀತಾವಿಯೋಗದಿಂದುಂಟಾದ ಈ ಘೋರ ದುಃಖವನ್ನು ಹಳೆಯ ಬಟ್ಟೆಯನ್ನಂತೆ ನಾನು ಯಾವಾಗ ತೊರೆಯುವೆನೋ!" ಈ ರೀತಿ ಶ್ರೀರಾಮನು ತಮ್ಮನಾದ ಲಕ್ಷ್ಮಣನೊಡನೆ ಹೇಳಿ ವಿಲಪಿಸುತ್ತಿರುವಂತೆಯೇ ದಿನಕರನು ಅಸ್ತಂಗತನಾದನು. ಆಗ ಲಕ್ಷ್ಮಣಸ್ವಾಮಿಯು ಅಣ್ಣನನ್ನು ಸಮಾಧಾನಗೊಳಿಸಿದನು. ಆಗ ಶ್ರೀರಾಮನು ಸಾಯಂಸಂಧ್ಯೆಯನ್ನಾಚರಿಸಿ ತನ್ನ ಪ್ರಿಯಯಾದ ಸೀತಾದೇವಿಯನ್ನು ಸ್ಮರಿಸಿ ಪುನಃ ಚಿಂತಾವ್ಯಾಕುಲನಾದನು. || ೨೧–೨೩ ||

ಇಂತಿದು ಸೀತಾಸ್ಮರಣಪೂರ್ವಕ ಶ್ರೀರಾಮವಿಲಾಪವೆಂಬ ಐದನೆಯ ಸರ್ಗವು
ಸಮಾಪ್ತವಾದುದು.

---

* "ಜಲಂ" ರಾ. ಪಾ.

# ಯುದ್ಧಕಾಂಡೇ ಷಷ್ಠಸ್ಸರ್ಗಃ

ಲಂಕಾಯಾಂತು ಕೃತಂ ಕರ್ಮ ಘೋರಂ ದೃಷ್ಟ್ವಾ ಭಯಾವಹಂ । ರಾಕ್ಷಸೇಂದ್ರೋ ಹನುಮತಾ ಶಕ್ರೇಣೇವ ಮಹಾತ್ಮನಾ । ಅಬ್ರವೀದ್ರಾಕ್ಷಸಾನ್ಸರ್ವಾನ್ ಹ್ರಿಯಾ ಕಿಂಚಿದವಾಙ್ಮುಖಃ ॥ ೧ ॥ "ಧರ್ಷಿತಾಚ ಪ್ರವಿಷ್ಟಾಚ ಲಂಕಾ ದುಷ್ಪ್ರಸಹಾ ಪುರೀ । ತೇನ ವಾನರಮಾತ್ರೇಣ ದೃಷ್ಟಾ ಸೀತಾಚ ಜಾನಕೀ ॥೨॥ ಪ್ರಾಸಾದೋ ಧರ್ಷಿತಶ್ಚೈತ್ಯಃ ಪ್ರವರಾ ರಾಕ್ಷಸಾ ಹತಾಃ । ಆವಿಲಾಚ ಪುರೀ ಲಂಕಾ ಸರ್ವಾ ಹನುಮತಾ ಕೃತಾ ॥ ೩ ॥ ಕಿಂ ಕರಿಷ್ಯಾಮಿ ಭದ್ರಂ ವಃ ಕಿಂ * ವಾ ಯುಕ್ತಮನಂತರಂ ।

ಲಂಕಾಯಾಂತು - ಇತ್ತ ಲಂಕಾಪಟ್ಟಣದಲ್ಲಾದರೆ, ರಾಕ್ಷಸೇಂದ್ರಃ - ರಾಕ್ಷಸಾಧಿಪತಿಯಾದ ರಾವಣನು, ಮಹಾತ್ಮನಾ - ಮಹಾನುಭಾವನಾದ, ಹನುಮತಾ - ಆಂಜನೇಯನಿಂದ, ಶಕ್ರೇಣ - ದೇವೇಂದ್ರನಿಂದ, ಕೃತಮಿವ - ಮಾಡಲ್ಪಟ್ಟಂತೆ (ಕೃತಂ) ಮಾಡಲ್ಪಟ್ಟ, ಘೋರಂ - ನೋಡಲಸಾಧ್ಯವಾದ, ಕರ್ಮ - ವ್ಯಾಪಾರವನ್ನು, ದೃಷ್ಟ್ವಾ - ಕಂಡು, ಹ್ರಿಯಾ - ನಾಚಿಕೆಯಿಂದ, ಕಿಂಚಿತ್ - ಕೊಂಚವಾಗಿ, ಅವಾಙ್ಮುಖಃ - ತಲೆಬೊಗ್ಗಿಸಿದವನಾಗಿ, ಸರ್ವಾನ್ - ಸಮಸ್ತರಾದ, ಅಸುರಾನ್ - ರಾಕ್ಷಸರನ್ನು ಕುರಿತು, ಅಬ್ರವೀತ್ - ನುಡಿದನು. ॥ ೧ ॥ ವಾನರಮಾತ್ರೇಣ - ನಿರಾಯುಧನಾದ ಒಬ್ಬ ವಾನರನಾದ, ತೇನ - ಆ ಆಂಜನೇಯನಿಂದ, ದುಷ್ಪ್ರಸಹಾ - ಪ್ರವೇಶಿಸಲಸಾಧ್ಯವಾದ, ಲಂಕಾಪುರೀ - ಲಂಕಾಪಟ್ಟಣವು, ಧರ್ಷಿತಾ - ತಿರಸ್ಕರಿಸಲ್ಪಟ್ಟಿತು, ಪ್ರವಿಷ್ಟಾಚ - ಹೊಗಲ್ಪಟ್ಟಿತು, ಜಾನಕೀ - ಜನಕರಾಯನ ಮಗಳಾದ, ಸೀತಾ-ಸೀತಾದೇವಿಯು, ದೃಷ್ಟಾ-ನೋಡಲ್ಪಟ್ಟಳು. ॥ ೨ ॥ ಹನುಮತಾ-ಆಂಜನೇಯನಿಂದ, ಚೈತ್ಯಃಪ್ರಾಸಾದಃ - ಪಟ್ಟಣಕ್ಕೆ ಪ್ರಧಾನವಾದ ಉಪ್ಪರಿಗೆಯು, ಧರ್ಷಿತಃ - ತಿರಸ್ಕರಿಸಲ್ಪಟ್ಟಿತು, ಪ್ರವರಾಃ - ಮುಖ್ಯರಾದ, ರಾಕ್ಷಸಾಃ-ರಕ್ಕಸರು, ಹತಾಃ - ಹೊಡೆಯಲ್ಪಟ್ಟರು, ಸರ್ವಾ - ಸಮಸ್ತವಾದ, ಲಂಕಾಪುರೀ - ಲಂಕಾಪಟ್ಟಣವು, ಆವಿಲಾಚ - ದಹನದಿಂದ ವ್ಯಾಕುಲವಾದದ್ದಾಗಿ, ಕೃತಾ - ಮಾಡಲ್ಪಟ್ಟಿತು. ॥ ೩ ॥ ಅನಂತರಂ - ಇಷ್ಟೆಲ್ಲಾ ಆದಮೇಲೆ ಈಗ, ಕಿಂವಾ -

(ಇತ್ತ ಶ್ರೀರಾಮಮೂರ್ತಿಯು ಸುಗ್ರೀವರಾಜನೊಡನೆಯೂ, ಅಪಾರವಾದ ಕಪಿಸೇನೆಯೊಡನೆಯೂ, ಯುದ್ಧಕ್ಕಾಗಿ ಹೊರಟವನಾಗಿ ದಕ್ಷಿಣ ಸಮುದ್ರತೀರದಲ್ಲಿ ತಂಗಿರಲು,) ಅತ್ತ ರಾಕ್ಷಸೇಶ್ವರನಾದ ರಾವಣನು, ದೇವೇಂದ್ರನಿಗೆ ಸಮಾನನಾದ ಹನುಮಂತನು ತನ್ನ ರಾಜ್ಯದಲ್ಲೆಸಗಿದ ಮಹಾ ಘೋರವೂ, ಭಯಂಕರವೂ ಆದ ಕಾರ್ಯಗಳನ್ನು ನೋಡಿ ಚಿಂತಿಸಿ, ಸಭೆಯಲ್ಲಿ ಸೇರಿದ್ದ ರಾಕ್ಷಸರೆಲ್ಲರನ್ನೂ ಕುರಿತು ಸ್ವಲ್ಪ ನಾಚಿಕೆಯಿಂದ ತಲೆತಗ್ಗಿಸಿದವನಾಗಿ, "ಎಲೈ ರಾಕ್ಷಸರಿರಾ! ವಾನರಮಾತ್ರನಾದ ಆ ಹನುಮಂತನು, ಶತ್ರುಗಳಿಂದ ಎದುರಿಸಲಸಾಧ್ಯವಾದ ನಮ್ಮ ಲಂಕಾನಗರವನ್ನು ಪ್ರವೇಶಿಸಿ ಸೀತೆಯನ್ನು ನೋಡಿ ಹೋದನು. ಇಷ್ಟುಮಾತ್ರವಲ್ಲದೆ ನಮ್ಮ ರಾಜಧಾನಿಗೆ ಭೂಷಣಪ್ರಾಯವಾದ ಚೈತ್ಯಪ್ರಾಸಾದವನ್ನೂ ಹಾಳುಮಾಡಿದನು. ರಾಕ್ಷಸೋತ್ತಮರೆಲ್ಲರನ್ನೂ ಕೊಂದು ಲಂಕಾನಗರವೆಲ್ಲವನ್ನೂ

* "ವ್ಯೋ" ಪ್ರ. ಪಾ.

ಉಚ್ಯತಾಂ ನಸ್ಸಮರ್ಥಂಚ ಯತ್ಕೃತಂ ಸುಕೃತಂ ಭವೇತ್ ॥ ೪ ॥, ಮಂತ್ರಮೂಲಂಹಿ ವಿಜಯಂ ‡ ಪ್ರಾಹುರಾರ್ಯಾ ಮನಸ್ವಿನಃ । ತಸ್ಮಾದ್ವೈ ರೋಚಯೇ ಮಂತ್ರಂ ರಾಮಂ ಪ್ರತಿ ಮಹಾಬಲಾಃ ! ॥ ೫ ॥ ತ್ರಿವಿಧಾಃ ಪುರುಷಾ ಲೋಕೇ ಉತ್ತಮಾಧಮ ಮಧ್ಯಮಾಃ । ತೇಷಾಂತು ಸಮವೇತಾನಾಂ ಗುಣದೋಷೌ ವದಾಮ್ಯಹಂ ॥ ೬ ॥ † ಮಂತ್ರಿಭಿರ್ಹಿತಸಂಯುಕ್ತೈಸ್ಸಮರ್ಥೈರ್ಮಂತ್ರನಿರ್ಣಯೇ। ಮಿತ್ರೈರ್ವಾಪಿ ಸಮಾ

---

ಯಾವದಾದರೆ, ಯುಕ್ತಂ - ಅರ್ಹವೋ, ಯತ್ - ಯಾವದು, ನಃ - ನಮಗೆ, ಸಮರ್ಥಂ - ಹಿತವೋ, ಯತ್ - ಯಾವದು, ಕೃತಂ - ಮಾಡಲ್ಪಟ್ಟದ್ದು, ಸುಕೃತಂ - ಚನ್ನಾದುದು, ಭವೇತ್ - ಆಗುವದೋ, ( ತಾದೃಶಂ - ಅಂಥಾದ್ದು ), ಕಿಂ - ಯಾವದು, ಉಚ್ಯತಾಂ - ಹೇಳಲ್ಪಡಲಿ, ವಃ - ನಿಮಗೆ, ಭದ್ರಂ - ಶುಭವಾಗಲಿ, ಮನಸ್ವಿನಃ - ಒಳ್ಳೆಯ ಮನವುಳ್ಳ, ಆರ್ಯಾಃ - ದೊಡ್ಡವರು ವಿಜಯಂ - ಜಯವನ್ನು, ಮಂತ್ರಮೂಲಂ - ಆಲೋಚನೆಯೇ ಪ್ರಧಾನವಾಗುಳ್ಳದ್ದನ್ನಾಗಿ, ಪ್ರಾಹುರ್ಹಿ - ಹೇಳುವರಷ್ಟೆ, ತಸ್ಮಾತ್ - ಆ ಕಾರಣದಿಂದ, ಮಹಾಬಲಾಃ - ಎಲೈ ಮಹಾ ಬಲರೇ, ರಾಮಂಪ್ರತಿ - ಶ್ರೀರಾಮನನ್ನು ಕುರಿತು, ಮಂತ್ರಂವಾ - ಆಲೋಚನೆಯನ್ನಾದರೆ, ರೋಚಯೇ - ಇಚ್ಛಿಸುತ್ತೇನೆ. ॥ ೪-೫ ॥ ಲೋಕೇ - ಲೋಕದಲ್ಲಿ, ಉತ್ತ....ಮಾಃ - ಉತ್ತಮರು, ಮಧ್ಯಮರು, ಅಧಮರು ಎಂದು, ಪುರುಷಾಃ - ಮನುಷ್ಯರು, ತ್ರಿವಿಧಾಃ - ಮೂರು ಬಗೆಗಳಾಗಿರುವರು, ಸಮವೇತಾನಾಂ - ಸಂಕೀರ್ಣಸ್ವರೂಪವಾಗಿರುವ, ತೇಷಾಂ - ಅವರ, ಗುಣದೋಷೌತು - ಉತ್ತಮ ಲಕ್ಷಣವಾದ ಗುಣವನ್ನೂ, ಅಧಮ ಲಕ್ಷಣವಾದ ದೋಷವನ್ನೂ, ಮಧ್ಯಮ ಲಕ್ಷಣವಾದ ಮಿಶ್ರವನ್ನೂ ಸಹ, ಅಹಂ - ನಾನು, ವದಾಮಿ - ಹೇಳುತ್ತೇನೆ. ॥ ೬ ॥ ಯಃ - ಯಾವ ಪುರುಷನು, ಮಂತ್ರನಿರ್ಣಯೇ-ಆಲೋಚನೆಯನ್ನು ನಿರ್ಣಯಿಸುವದರಲ್ಲಿ, ಶಕ್ತೈಃ-ಸಮರ್ಥರಾದ, ಹಿತಸಂಯುಕ್ತೈಃ-ಹಿತೈಷಿಗಳಾದ, ಮಂತ್ರಿಭಿರ್ವಾ - ಮಂತ್ರಿಗಳಿಂದಾಗಲಿ, ಸಮಾನಾರ್ಥೈಃ - ಸಮಾನವಾದ ಸುಖ ದುಃಖಗಳುಳ್ಳ, ಮಿತ್ರೈರ್ವಾಪಿ - ಸ್ನೇಹಿತರಿಂದಾಗಲಿ, ಹಿತೈಃ - ಇಷ್ಟರಾದ, ಬಾಂಧವೈರ್ವಾಪಿ -

---

ಭಯಭ್ರಾಂತರನ್ನಾಗಿ ಮಾಡಿದನು. ಅಯ್ಯಾ ರಾಕ್ಷಸರಿರಾ! ಈಗ ನಾವು ಮಾಡಬೇಕಾದ ಕರ್ತವ್ಯವೇನು ? ಯಾವ ಕಾರ್ಯವನ್ನು ಮಾಡಿದರೆ ನಮಗೆ ಒಳ್ಳೆಯದಾಗುವುದೋ ಅದನ್ನು ನೀವು ಚೆನ್ನಾಗಿ ಯೋಚಿಸಿರಿ. ಅಂತಹ ಕಾರ್ಯವನ್ನು ನಾನು ಮಾಡಲು ಸಿದ್ಧನಾಗಿರುವೆನು. ನಿಮಗೆ ಶುಭವಾಗಲಿ. ಎಲೈ ಪರಾಕ್ರಮಿಗಳಿರಾ ! ಮಹಾ ಬುದ್ಧಿಶಾಲಿಗಳಾದ ಹಿರಿಯರು ಮಂತ್ರಾಲೋಚನೆಯಿಂದಲೇ ಜಯವು ಲಭಿಸುವುದೆಂದು ಹೇಳುವರಲ್ಲವೆ ? ಆದುದರಿಂದ ಈಗ ರಾಮನ ವಿಷಯವನ್ನು ಕುರಿತು ಆಲೋಚಿಸಬೇಕೆಂದು ನನಗೆ ತೋರುತ್ತದೆ. ಎಲೈ ರಾಕ್ಷಸೋತ್ತಮರೇ! ಲೋಕದಲ್ಲಿ ಜನರು ಉತ್ತಮ ಮಧ್ಯಮಾಧಮ ಭೇದಗಳಿಂದ ಮೂರು ಬಗೆಯಾಗಿರುವರು. ಅವರಲ್ಲಿ ಪ್ರತಿಯೊಬ್ಬರ ಗುಣದೋಷಗಳನ್ನೂ ನಾನು ಹೇಳುವೆನು; ಕೇಳಿರಿ. ॥೧-೬॥ ಯಾವನು ಮಹಾ ಸಮರ್ಥರೂ, ತನ್ನ ಮೇಲನ್ನು ಕೋರುವವರೂ ಆದ ಮಂತ್ರಿಗಳೊಡನೆಯಾಗಲಿ, ಸುಖದುಃಖಗಳಲ್ಲಿ ತನ್ನೊಡನೆ ಸಮಾನರಾಗಿರುವ ಸ್ನೇಹಿತರೊಡನೆಯಾಗಲಿ, ತನ್ನ ಅಭ್ಯುದಯವನ್ನು ಕೋರುವ ಬಂಧುಗಳೊಡನೆ

---

‡ "ಪ್ರವದಂತಿ" ತಿ. ಪಾ. † "ಮಂತ್ರಸ್ತ್ರಿಭಿರ್ಹಿ" ರಾ. ತಿ. ಪಾ.

ನಾರ್ಥೈರ್ಬಾಂಧವೈರಪಿ ವಾ ಹಿತೈಃ ||೭|| ಸಹಿತೋ ಮಂತ್ರಯಿತ್ವಾ ಯಃ ಕರ್ಮಾರಂಭಾನ್ ಪ್ರವರ್ತಯೇತ್ | ದೈವೇಚ ಕುರುತೇ ಯತ್ನಂ ತಮಾಹುಃ ಪುರುಷೋತ್ತಮಂ ||೮|| ಏಕೋಽರ್ಥಂ ವಿಮೃಶೇದೇಕೋ ಧರ್ಮೇ ಪ್ರಕುರುತೇ ಮನಃ | ಏಕಃ ಕಾರ್ಯಾಣಿ ಕುರುತೇ ತಮಾಹುರ್ಮಧ್ಯಮಂ ನರಂ || ೯ || ಗುಣದೋಷಾವನಿಶ್ಚಿತ್ಯ ತ್ಯಕ್ತ್ವಾ ಧರ್ಮವ್ಯಪಾಶ್ರಯಂ | ಕರಿಷ್ಯಾಮೀತಿ ಯಃ ಕಾರ್ಯಮುಪೇಕ್ಷೇತ್ಸ ನರಾಧಮಃ || ೧೦ || ಯಥೇಮೇ ಪುರುಷಾನಿತ್ಯಮುತ್ತಮಾಧಮಮಧ್ಯಮಾಃ | ಏವಂ

---

ಬಂಧುಜನಗಳಿಂದಾಗಲಿ, ಸಹಿತಃ - ಕೂಡಿ, ಮಂತ್ರಯಿತ್ವಾ - ಆಲೋಚಿಸಿ, ಕರ್ಮಾರಂಭಾನ್ - ಆರಂಭಿಸತಕ್ಕ ಕೆಲಸಗಳನ್ನು, ಪ್ರವರ್ತಯೇತ್ - ಪ್ರವರ್ತಿಸುವನೋ, ದೈವೇಚ - ದೇವತಾಶ್ರಯದಲ್ಲಿಯೂ ಕೂಡ, ಯತ್ನಂ - ಪ್ರಯತ್ನವನ್ನು, ಕುರುತೇ - ಮಾಡುವನೋ, ತಂ - ಅವನನ್ನು, ಪುರುಷೋತ್ತಮಂ - ಪುರುಷರಲ್ಲಿ ಉತ್ತಮನೆಂದು, ಆಹುಃ - ಹೇಳುತ್ತಾರೆ. ||೭-೮|| ಯಃ - ಯಾವ ಪುರುಷನು, ಏಕಃ - ಒಬ್ಬನೇ, ಅರ್ಥಂ - ಪ್ರಯೋಜನವನ್ನು ಕುರಿತು, ವಿಮರ್ಶೇತ್ - ವಿಮರ್ಶಿಸುವನೋ, ಏಕಃ - ಒಬ್ಬನೇ, ಧರ್ಮೇ - ಪೂರ್ವೋಕ್ತವಾದ ದೈವಸಮಾಶ್ರಯಣವೆಂಬ ಧರ್ಮದಲ್ಲಿ, ಮನಃ - ಮನಃಪೂರ್ವಕವಾಗಿ (ಯತ್ನವನ್ನು), ಪ್ರಕುರುತೇ - ಮಾಡುವನೋ, ಏಕಃ - ಒಬ್ಬನೇ, ಕಾರ್ಯಾಣಿ - ಕೆಲಸಗಳನ್ನು, ಕುರುತೇ - ಮಾಡುವನೋ, ತಂ - ಅವನನ್ನು, ಮಧ್ಯಮಂನರಂ - ಮಧ್ಯಮಪುರುಷನೆಂದು, ಆಹುಃ - ಹೇಳುವರು. ||೯|| ಯಃ - ಯಾವ ಪುರುಷನು, ಗುಣದೋಷೌ - ಹಿತಾಹಿತಗಳನ್ನು, ಅನಿಶ್ಚಿತ್ಯ - ಚಿಂತಿಸದೆ, ಧರ್ಮ....ಯಂ - ದೇವತಾಶ್ರಯವನ್ನು, ತ್ಯಕ್ತ್ವಾ - ಬಿಟ್ಟು, ಕರಿಷ್ಯಾಮೀತಿ - ಮಾಡುವೆನೆಂದು ಪ್ರಾರಂಭಿಸಿ, ಕಾರ್ಯಂ - ಕೃತ್ಯವನ್ನು, ಉಪೇಕ್ಷೇತ್ - ಪೂರ್ತಿ ಮಾಡದಿರುವನೋ, ಸಃ - ಅವನು, ನರಾಧಮಃ - ಪುರುಷಾಧಮನು. || ೧೦ || ನಿತ್ಯಂ - ಯಾವಾಗಲೂ, ಇಮೇ - ಈ, ಉತ್ತ....ಮಾಃ - ಉತ್ತಮನು, ಅಧಮನು, ಮಧ್ಯಮನು ಎಂಬ, ಪುರುಷಾಃ - ಮನುಷ್ಯರು, ಯಥಾ - ಹೇಗೋ, ಏವಂ - ಹೀಗೆಯೇ, ಉತ್ತ....ಮಾಃ - ಉತ್ತಮ, ಅಧಮ, ಮಧ್ಯಮ ಎಂಬ, ಮಂತ್ರಾಃ - ಆಲೋಚನೆಗಳು, ವಿಜ್ಞೇಯಾಹಿ - ತಿಳಿಯತಕ್ಕವುಗಳಷ್ಟೆ. ||೧೧|| ಶಾಸ್ತ್ರದೃಷ್ಟೇನ-ತಾವು ನೋಡಿದ ಶಾಸ್ತ್ರದಿಂದ, ಚಕ್ಷುಷಾ-ಆ ಶಾಸ್ತ್ರರೂಪವಾದ ನೇತ್ರದಿಂದ, (ಯುಕ್ತರಾದ) ಮಂತ್ರಿಣಃ - ಮಂತ್ರಿಗಳು, ಐಕಮತ್ಯಂ - ಏಕೀಭಾವವನ್ನು, ಉಪಾಗಮ್ಯ - ಹೊಂದಿ, ಯತ್ರ - ಯಾವ ಮಂತ್ರದಲ್ಲಿ, ನಿರತಾಃ - ಆಸಕ್ತಿಯುಳ್ಳವರಾಗಿರುವರೋ, ತಂಮಂತ್ರಂ -

---

ಯಾಗಲೀ ಚನ್ನಾಗಿ ಆಲೋಚಿಸಿ ತನ್ನ ಶಕ್ತ್ಯನುಸಾರವಾದ ಕಾರ್ಯಗಳನ್ನು ಮಾಡುತ್ತ, ಸಾಧ್ಯಾಸಾಧ್ಯಗಳನ್ನು ದೈವಕ್ಕೆ ಬಿಟ್ಟಿರುವನೋ ಅವನು ಉತ್ತಮ ಪುರುಷನೆನಿಸುವನು. ಯಾವನು ಸ್ವಬುದ್ಧಿಯಿಂದಲೇ ಚೆನ್ನಾಗಿ ಆಲೋಚಿಸಿ ಧರ್ಮಬುದ್ಧಿಯುಳ್ಳವನಾಗಿ ಕಾರ್ಯಗಳನ್ನು ಮಾಡಿ, ಆಗುಹೋಗುಗಳಿಗೆ ದೈವವನ್ನು ನಂಬಿರುತ್ತಾನೆಯೋ ಅವನು ಮಧ್ಯಮನೆನಿಸುವನು. ಯಾವನಾದರೆ ಚೆನ್ನಾಗಿ ಆಲೋಚಿಸದೆಯೂ, ಗುಣದೋಷಗಳನ್ನು ನಿಶ್ಚಯಿಸದೆಯೂ, ದೈವವನ್ನು ನಂಬದೆಯೂ, ಅಹಂಕಾರದಿಂದ ಬೇಗ ಕಾರ್ಯವನ್ನು ಮೊದಲುಮಾಡಿ ಅದನ್ನು ಉಪೇಕ್ಷಿಸುವನೋ ಅವನು ಅಧಮನೆನಿಸುವನು. ||೭-೧೦|| ಲೋಕದಲ್ಲಿ ಉತ್ತಮ ಮಧ್ಯಮಾಧಮ ಭೇದಗಳಿಂದ ಪುರುಷರು ಹೇಗೆ ಮೂರು ಬಗೆಯೋ ಹಾಗೆಯೇ ಮಂತ್ರಗಳೂ ಮೂರು ಬಗೆಯಾಗಿರುವವು. ಅದನ್ನೂ ಹೇಳುವೆನು ಕೇಳಿರಿ. ಆಲೋಚಿಸುವುದರಲ್ಲಿ ಮಂತ್ರಿ

§ ಮಂತ್ರಾಹಿ ವಿಜ್ಞೇಯಾ ಉತ್ತಮಾಧಮಮಧ್ಯಮಾಃ ॥ ೧೧ ॥ ಐಕಮತ್ಯಮುಪಾಗಮ್ಯ ಶಾಸ್ತ್ರದೃಷ್ಟೇನ ಚಕ್ಷುಷಾ । ಮಂತ್ರಿಣೋ ಯತ್ರ ನಿರತಾಸ್ತಮಾಹುರ್ಮಂತ್ರಮುತ್ತಮಂ ॥ ೧೨ ॥ ¶ ಬಹ್ವ್ಯೋಽಪಿ ಮತಯೋ ಭೂತ್ವಾ ಮಂತ್ರಿಣಾಮರ್ಥ $ ನಿರ್ಣಯೇ । ಪುನರ್ಯತ್ರೈಕತಾಂ * ಪ್ರಾಪ್ತಾಃ ಸಮಂತ್ರೋ ಮಧ್ಯಮಃ ಸ್ಮೃತಃ ॥ ೧೩ ॥ ಅನ್ಯೋನ್ಯಂ ಮತಿಮಾಸ್ಥಾಯ ಯತ್ರ ಸಂಪ್ರತಿ ಭಾಷ್ಯತೇ । ನಚೈಕಮತ್ಯೇ ಶ್ರೇಯೋಽಸ್ತಿ ಮಂತ್ರಃ ಸೋಽಧಮಉಚ್ಯತೇ ॥ ೧೪ ॥ ತಸ್ಮಾತ್ಸುಮಂತ್ರಿತಂ ಸಾಧು ಭವಂತೋ ಮತಿಮತ್ತಮಾಃ । ಕಾರ್ಯಂ ಸಂಪ್ರತಿಪದ್ಯಂತಾಮೇತತ್ಕೃತ್ಯಂ ಮತಂ ಮಮ ॥ ೧೫ ॥ ವಾನರಾಣಾಂಹಿ ವೀರಾಣಾಂ ಸಹಸ್ರೈಃ ಪರಿವಾರಿತಃ । ರಾಮೋ

ಆ ಆಲೋಚನೆಯನ್ನು, ಉತ್ತಮಂ ಉತ್ತಮವಾದುದನ್ನಾಗಿ, ಆಹುಃ-ಹೇಳುವರು. ॥೧೨॥ ಯತ್ರ - ಯಾವ ಆಲೋಚನೆಯಲ್ಲಿ, ಮಂತ್ರಿಣಾಂ-ಮಂತ್ರಿಗಳ, ಮತಯಃ-ಬುದ್ಧಿಗಳು, ಬಹ್ವ್ಯಃಮತಯಃ-ಅನೇಕ ಮಾರ್ಗಗಳುಳ್ಳವುಗಳು, ಭೂತ್ವಾಪಿ-ಆಗಿಯೂ, ಪುನಶ್ಚ-ಮತ್ತೂ, ಅರ್ಥನಿರ್ಣಯೇ-ನಿರ್ಣಯರೂಪವಾದ ಫಲದಲ್ಲಿ, ಏಕತಾಂ - ಅವಿರೋಧವನ್ನು, ಪ್ರಾಪ್ತಾಃ - ಹೊಂದಿರುವುವೋ, ಸಮಂತ್ರಃ - ಆ ಆಲೋಚನೆಯು, ಮಧ್ಯಮಃ - ಮಧ್ಯಮವಾದದ್ದೆಂದು, ಸ್ಮೃತಃ - ಹೇಳಲ್ಪಡುವುದು. ॥ ೧೩ ॥ ಯತ್ರ - ಯಾವ ಮಂತ್ರಾಲೋಚನೆಯಲ್ಲಿ, ಅನ್ಯೋನ್ಯಂ - ಒಬ್ಬರಿಗೊಬ್ಬರು, ಮತಿಂ - ಪ್ರತ್ಯೇಕ ಬುದ್ಧಿಯನ್ನು, ಆಸ್ಥಾಯ - ಹೊಂದಿ, ಸಂಪ್ರ....ತೇ - ಹೇಳಲ್ಪಡುತ್ತದೆಯೋ, ಐಕಮತ್ಯೇ - ಎಲ್ಲರೂ ಸೇರುವ ವಿಷಯದಲ್ಲಿ, ಶ್ರೇಯಃ - ಲಾಭವು, ನಾಸ್ತಿ - ಇಲ್ಲವೋ, ಸಮಂತ್ರಃ - ಆ ಮಂತ್ರವು, ಅಧಮ ಇತಿ - ಅಧಮವೆಂದು, ಉಚ್ಯತೇ - ಹೇಳಲ್ಪಡುತ್ತದೆ. ॥ ೧೪ ॥ ತಸ್ಮಾತ್ - ಆ ಕಾರಣದಿಂದ, ಮತಿಮತ್ತಮಾಃ - ಬುದ್ಧಿವಂತರಲ್ಲಿ ಶ್ರೇಷ್ಠರಾದ, ಭವಂತಃ - ನೀವು, ಸುಮಂತ್ರಿತಂ - ಚನ್ನಾಗಿ ಆಲೋಚಿಸಿದ್ದಂತೆ, ಸಾಧು - ಚನ್ನಾಗಿ, ಕಾರ್ಯಂ - ಮಾಡತಕ್ಕದ್ದನ್ನು, ಸಂಪ್ರತಿಪದ್ಯಂತಾಂ - ಹೊಂದಿರಿ, ಏತತ್ಕೃತ್ಯಂ - ಇದೇ ಕಾರ್ಯವು, ಮಮ - ನನಗೆ, ಮತಂ - ಸಮ್ಮತವು. ॥ ೧೫ ॥ ವೀರಾಣಾಂ - ಶೂರರಾದ, ವಾನರಾಣಾಂ - ಕಪಿಗಳ, ಸಹಸ್ರೈಃ - ಸಾವಿರಾರುಗಳಿಂದ, ಪರಿವಾರಿತಃ-

ಗಳೆಲ್ಲರೂ ಐಕಮತ್ಯದಿಂದ ರಾಜನೀತಿ ಶಾಸ್ತ್ರವನ್ನು ಅನುಸರಿಸಿ ಅಮಿತ ಶ್ರದ್ಧೆಯಿಂದ ಆಲೋಚಿಸುವ ಮಂತ್ರಾಲೋಚನೆಯು ಉತ್ತಮವೆನಿಸುವುದು. ಮಂತ್ರಿಗಳು ಪರಸ್ಪರ ಭಿನ್ನಾಭಿಪ್ರಾಯಗಳುಳ್ಳವರಾಗಿದ್ದು ಕಡೆಗೆ ಒಂದೇ ಅಭಿಪ್ರಾಯವುಳ್ಳವರಾಗಿ ಮಾಡುವ ಮಂತ್ರಾಲೋಚನೆಯು ಮಧ್ಯಮವೆನಿಸುವುದು. ಮಂತ್ರಿಗಳೆಲ್ಲರೂ ಭಿನ್ನಾಭಿಪ್ರಾಯಗಳುಳ್ಳವರಾಗಿದ್ದು ತಮ್ಮ ತಮ್ಮ ಅಭಿಪ್ರಾಯಗಳನ್ನು ಬಿಟ್ಟುಕೊಡದೆ ಶುಷ್ಕವಾದಗಳನ್ನು ಮಾಡುತ್ತ ಕಡೆಗೂ ಒಂದು ಅಭಿಪ್ರಾಯಕ್ಕೆ ಬರದೆ ಮಾಡುವ ಮಂತ್ರಾಲೋಚನೆಯು ಅಧಮವೆನಿಸುವುದು. ಎಲೈ ಬುದ್ಧಿಶಾಲಿಗಳಿರಾ! ನೀವೆಲ್ಲರೂ ಚೆನ್ನಾಗಿ ಆಲೋಚಿಸಿ ಪ್ರಸ್ತುತದಲ್ಲಿ ಮಾಡಬೇಕಾದ ಕಾರ್ಯವನ್ನು ಆಲೋಚಿಸಿರಿ. ಚೆನ್ನಾಗಿ ಆಲೋಚಿಸಲ್ಪಟ್ಟ ಮಂತ್ರಾಲೋಚನೆಯೇ ಕಾರ್ಯಕಾರಿಯಾಗುವುದು. ಇದೇ ನನಗೆ ಪರಮ ಸಮ್ಮತವಾದುದು. ॥೧೧–೧೫॥

§ "ಮಂತ್ರೋಽಪಿ" ತಿ. ಪಾ. ¶ "ಬಹ್ವೀರಪಿ ಮತೀರ್ಗತ್ವಾ" ತಿ. ಪಾ.

$ "ನಿರ್ಣಯಃ" ತಿ. ಪಾ. * "ಪ್ರಾಪ್ನುಃ" ತಿ. ಪಾ.

(ಅ) ಭ್ಯೇತಿ ಪುರೀಂ ಲಂಕಾಮಸ್ಮಾಕಮುಪರೋಧಕಃ ‖ ೧೬ ‖ ತರಿಷ್ಯತಿಚ ಸುವ್ಯಕ್ತಂ ರಾಘವಸ್ಸಾಗರಂ ಸುಖಂ । ತರಸಾ ಯುಕ್ತರೂಪೇಣ ಸಾನುಜಸ್ಸಬಲಾನುಗಃ ‖೧೭‖

ಸಮುದ್ರಮುಚ್ಛೋಷಯತಿ ವೀರ್ಯೇಣಾನ್ಯತ್ಕರೋತಿವಾ ।
§ ಅಸ್ಮಿನ್ನೇವಂಗತೇ ಕಾರ್ಯೇ ವಿರುದ್ಧೇ ವಾನರೈಸ್ಸಹ ।
ಹಿತಂ ಪುರೇಚ ಸೈನ್ಯೇಚ ಸರ್ವಂ ಸಮ್ಮಂತ್ರ್ಯತಾಂ ಮಮ ” ‖ ೧೮ ‖

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಷಷ್ಠಸ್ಸರ್ಗಃ



ಸುತ್ತುವರೆಯಲ್ಪಟ್ಟ, ರಾಮಃ - ಶ್ರೀರಾಮನು, ಅಸ್ಮಾಕಂ - ನಮ್ಮ ಸಂಬಂಧವಾದ, ಲಂಕಾಂಪುರೀಂ- ಲಂಕಾಪಟ್ಟಣವನ್ನು, ಉಪರೋಧಕಃ - ತಡೆಮಾಡುವವನಾಗಿ, ಅಭ್ಯೇತಿ - ಬರುತ್ತಾನೆ. ‖ ೧೬ ‖ ರಾಘವಃ - ಶ್ರೀರಾಮನು, ಸಾನುಜಃ - ತಮ್ಮನಿಂದೊಡಗೂಡಿ, ಸಬಲಾನುಗಃ - ಸೈನ್ಯದಿಂದಲೂ, ಸೇವಕರಿಂದಲೂ ಕೂಡಿದವನಾಗಿ, ಯುಕ್ತರೂಪೇಣ - ಬಹಳ ಉಚಿತವಾದ, ತರಸಾ - ಬಲದಿಂದ, ಸಾಗರಂ - ಕಡಲನ್ನು, ಸುಖಂ - ಸುಖವಾಗಿ, ತರಿಷ್ಯತಿ - ದಾಟುವನು, ಸುವ್ಯಕ್ತಂ - ಸ್ಪಷ್ಟವು. ‖೧೭‖ ವೀರ್ಯೇಣ - ಪರಾಕ್ರಮದಿಂದ, ಸಮುದ್ರಂ - ಕಡಲನ್ನು, ಉಚ್ಛೋಷಯತಿವಾ - ಶೋಷಣ ವನ್ನು ಮಾಡುತ್ತಾನೆಯೋ, ಅನ್ಯತ್ - ಮತ್ತೊಂದು ಕಾರ್ಯವನ್ನು, ಕರೋತಿವಾ - ಮಾಡುವನೋ ಏನೋ. ‖೧೮‖ ಅಸ್ಮಿನ್ - ಈ ಲಂಕಾನಿರೋಧರೂಪವಾದ, ಕಾರ್ಯೇ - ಕಾರ್ಯವು, ಏವಂ - ಈ ಪರಿ ಯಾಗಿ, ಗತೇ - ನಡೆದಿರಲು, ವಾನರೈಸ್ಸಹ - ಕಪಿಗಳೊಡನೆ, ವಿರುದ್ಧೇ - ವಿರೋಧವಾಗಲು, ಮಮ- ನನ್ನ, ಪುರೇ - ಪಟ್ಟಣದಲ್ಲಿಯೂ, ಸೈನ್ಯೇಚ - ದಂಡಿನಲ್ಲಿಯೂ, ಯತ್ - ಯಾವದು, ಹಿತಂ - ಹಿತವೋ, ತತ್ಸರ್ವಂ - ಆ ಸಮಸ್ತವೂ, ಸಮ್ಮಂತ್ರ್ಯತಾಂ - ಆಲೋಚಿಸಲ್ಪಡಲಿ. ‖ ೧೯ ‖

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಷಷ್ಠಸ್ಸರ್ಗಃ.



ಎಲೈ ರಾಕ್ಷಸರೇ! ಈಗ ರಾಮನು ಮಹಾ ಪರಾಕ್ರಮಶಾಲಿಗಳಾದ ವಾನರವೀರರನೇಕ ರೊಡಗೂಡಿ ನಮ್ಮನ್ನೆದುರಿಸಲು ಲಂಕಾನಗರಕ್ಕೆ ಬರುವನು. ಲಕ್ಷ್ಮಣಸಮೇತನಾದ ರಾಮನು ವಾನರಸೇನೆಯೊಡನೆ ಸ್ವಸಾಮರ್ಥ್ಯದಿಂದಲೇ ಸಾಗರವನ್ನು ಸುಖವಾಗಿ ದಾಟ ಬಲ್ಲನು. ಒಂದುವೇಳೆ ರಾಮನು ತನ್ನ ಪರಾಕ್ರಮದಿಂದ ಸಾಗರವನ್ನು ಶೋಷಿಸಬಹುದು. ಅಂತೂ ಇಂತೂ ಅವನು ಹೇಗಾದರೂ ಲಂಕೆಯನ್ನು ಪ್ರವೇಶಿಸಿಯೇ ಬಿಡುವನು. ಹಾಗೆ ಅವನು ವಾನರಸೇನೆಯೊಡನೆ ನಮ್ಮ ನಗರವನ್ನು ಪ್ರವೇಶಿಸದೊಡನೆಯೇ ನಮಗೂ, ಅವರಿಗೂ ಬದ್ಧವೈರವಾಗುವುದು. ಆಗ ನಮ್ಮ ನಗರವನ್ನೂ, ಸೇನೆಯನ್ನೂ ಚೆನ್ನಾಗಿ ಕಾಪಾಡಿ ಕೊಳ್ಳುವ ಉಪಾಯವನ್ನು ಚೆನ್ನಾಗಿ ಆಲೋಚಿಸಿರಿ. ‖ ೧೬—೧೮ ‖

ಇಂತಿದು ರಾವಣಕೃತ ಮಂತ್ರಾಲೋಚನಾ ವೃತ್ತಾಂತವೆಂಬ ಆರನೆಯ ಸರ್ಗವು ಸಮಾಪ್ತವಾದುದು.



§ “ ತಸ್ಮಿನ್ನೇವಂ ವಿಧೇ ” ತಿ. ಪಾ.

# ಯುದ್ಧಕಾಂಡೇ ಸಪ್ತಮಸ್ಸರ್ಗಃ

ಇತ್ಯುಕ್ತಾ ರಾಕ್ಷಸೇಂದ್ರೇಣ ರಾಕ್ಷಸಾಸ್ತೇ ಮಹಾಬಲಾಃ । ಊಚುಃ ಪ್ರಾಂಜಲಯಸ್ಸರ್ವೇ ರಾವಣಂ ರಾಕ್ಷಸೇಶ್ವರಂ ||೧|| ದ್ವಿಷತ್ಪಕ್ಷಮವಿಜ್ಞಾಯ ನೀತಿಬಾಹ್ಯಾಸ್ತ್ವಬುದ್ಧಯಃ । "ರಾಜನ್ ಪರಿಘಶಕ್ತ್ಯೃಷ್ಟಿಶೂಲಪಟ್ಟಿಶಸಂಕುಲಂ ||೨|| ಸುಮಹನ್ನೋ ಬಲಂ ಕಸ್ಮಾದ್ವಿಷಾದಂ ಭಜತೇ ಭವಾನ್ । ತ್ವಯಾ ಭೋಗವತೀಂ ಗತ್ವಾ ನಿರ್ಜಿತಾಃ ಪನ್ನಗಾ ಯುಧಿ ||೩|| ಕೈಲಾಸಶಿಖರಾವಾಸೀ ಯಕ್ಷೈರ್ಬಹುಭಿರಾವೃತಃ । ಸುಮಹತ್ಕದನಂ ಕೃತ್ವಾ ವಶ್ಯಸ್ತೇ ಧನದಃ ಕೃತಃ ||೪|| ಸ ಮಹೇಶ್ವರಸಖ್ಯೇನ ಶ್ಲಾಘ್ಯ

---

ರಾಕ್ಷಸೇಂದ್ರೇಣ - ರಾವಣಾಸುರನಿಂದ, ಇತಿ - ಈ ಪರಿಯಾಗಿ, ಉಕ್ತಾಃ - ಹೇಳಲ್ಪಟ್ಟ ಮಹಾಬಲಾಃ - ಮಹಾ ಬಲಿಷ್ಠರಾದ, ಅಬುದ್ಧಯಃ - ಬುದ್ಧಿಹೀನರಾದ, ನೀತಿಬಾಹ್ಯಾಃ - ನೀತಿಯ ವಿಷಯದಲ್ಲಿ ಬಾಹ್ಯರಾದ, ತೇರಾಕ್ಷಸಾಃ - ಆ ರಾಕ್ಷಸರು, ಸರ್ವೇ - ಸಮಸ್ತರೂ, ಪ್ರಾಂಜಲಯಃ- ಅಂಜಲಿಬದ್ಧರಾಗಿ, ರಾವಣಂ - ರಾವಣನನ್ನು ಕುರಿತು, ಊಚುಃ - ಹೇಳಿದರು. ||೧|| ಹೇ ರಾಜನ್ - ಎಲೈ ರಾಜನೇ, ನಃ - ನಮ್ಮ, ಬಲಂ - ಸೈನ್ಯವು, ಪರಿ....ಲಂ - ಗದಾಯುಧಗಳಿಂದಲೂ, ಶಕ್ತ್ಯಾಯುಧಗಳಿಂದಲೂ, ದಂಡಾಯುಧಗಳಿಂದಲೂ, ಈಟೀಕೋಲುಗಳಿಂದಲೂ, ಕತ್ತಿಗಳಿಂದಲೂ ತುಂಬಿದುದಾದಕಾರಣ, ಸುಮಹತ್ - ಬಹಳ ದೊಡ್ಡದಾದದ್ದು, ಭವಾನ್ - ನೀನು, ಕಸ್ಮಾತ್ - ಏತಕ್ಕೋಸ್ಕರ, ವಿಷಾದಂ - ವ್ಯಸನವನ್ನು, ಭಜತೇ - ಹೊಂದುತ್ತೀಯೆ. || ೨ || ತ್ವಯಾ - ನಿನ್ನಿಂದ, ಭೋಗವತೀಂ - ಭೋಗವತೀಪಟ್ಟಣವನ್ನು ಕುರಿತು, ಗತ್ವಾ - ಹೋಗಿ, ಪನ್ನಗಃ - ಸರ್ಪಗಳು, ಯುಧಿ - ಕಾಳೆಗದಲ್ಲಿ, ನಿರ್ಜಿತಾಃ - ಜಯಿಸಲ್ಪಟ್ಟರು, ಕೈಲಾ....ಸೀ - ಕೈಲಾಸಶಿಖರದಲ್ಲಿ ವಾಸಮಾಡುತ್ತಿರುವ, ಧನದಃ - ಕುಬೇರನು, ಬಹುಭಿಃ - ಬಹಳ ಮಂದಿಯಾದ, ಯಕ್ಷೈಃ - ಯಕ್ಷರಿಂದ, ಆವೃತಃ - ಸುತ್ತುವರೆದವನಾಗಿ, ಸುಮಹತ್ - ಬಹಳವಾದ, ಕದನಂ - ಕಲಹವನ್ನು, ಕೃತ್ವಾ - ಮಾಡಿ, ತೇ - ನಿನಗೆ, ವಶ್ಯಃ - ಸ್ವಾಧೀನನಾಗಿ, ಕೃತಃ - ಮಾಡಲ್ಪಟ್ಟನು. ||೩-೪|| ಹೇ ವಿಭೋ - ಎಲೈ ಸ್ವಾಮಿಯೇ, ಮಹೇಶ್ವರಸಖ್ಯೇನ - ಪರಮೇಶ್ವರನ ಮೈತ್ರಿಯಿಂದ, ಶ್ಲಾಘ್ಯ

---

ರಾವಣಾಸುರನೀರೀತಿ ನುಡಿಯಲು, ನೀತಿಬಾಹಿರರೂ, ವಿವೇಕಶೂನ್ಯರೂ, ಆದರೂ ಮಹಾ ಬಲಿಷ್ಠರೂ ಆದ ರಾಕ್ಷಸರೆಲ್ಲರೂ ಶತ್ರುಪಕ್ಷದ ಬಲಾಬಲಗಳನ್ನು ವಿಚಾರ ಮಾಡದೆ ತಮ್ಮ ಪ್ರಭುವಾದ ಆ ರಾವಣೇಶ್ವರನನ್ನು ಕುರಿತು ಬದ್ಧಾಂಜಲಿಪುಟರಾಗಿ, "ರಾಕ್ಷಸೇಶ್ವರಾ! ಗದೆ, ಈಟಿ, ಭಲ್ಲೆಯು, ಖಡ್ಗ, ಶೂಲ, ಅಡ್ಡಗತ್ತಿಗಳೇ ಮೊದಲಾದ ವಿವಿಧಾಯುಧಗಳಿಂದೊಪ್ಪುತ್ತಿರುವ ಮಹಾ ಸೇನೆಯು ನಮ್ಮಲ್ಲಿರುವಾಗ ನೀನೇಕೆ ಚಿಂತಿಸಬೇಕು? ಮಹಾ ಪ್ರಭು! ನೀನೇನು ಸಾಮಾನ್ಯನೇ, ನಿನ್ನ ಪರಾಕ್ರಮವೇನು ಸಾಮಾನ್ಯವೇ? ಅತುಲಪರಾಕ್ರಮಿಯಾದ ನೀನು ದುಷ್ಪ್ರವೇಶ್ಯವಾದ ಭೋಗವತೀಪಟ್ಟಣಕ್ಕೆ ಹೋಗಿ ಕಾಳೆಗವಾಡಿ ಅಸಂಖ್ಯಾತ ಮಂದಿ ಯಕ್ಷವೀರರೊಡಗೂಡಿದ ಕುಬೇರನನ್ನು ಜಯಿಸಿದೆ, ಪನ್ನಗರನ್ನು ಸೋಲಿಸಿದೆ. ಕೈಲಾಸಶಿಖರವಾಸಿಯಾದ ಆ ಕುಬೇರನು ನಿನ್ನ ವಶವರ್ತಿಯನ್ನಾಗಿ ಮಾಡಿ

ಮಾನಸ್ತ್ವಯಾ ವಿಭೋ! । ನಿರ್ಜಿತಸ್ಸಮರೇ ರೋಷಾಲ್ಲೋಕಪಾಲೋ ಮಹಾಬಲಃ ॥ ೫ ॥ ವಿನಿಹತ್ಯ ಚ ಯಕ್ಷೌಘಾನ್ವಿಕ್ಷೋಭ್ಯ ಚ ವಿಗೃಹ್ಯ ಚ । ತ್ವಯಾ ಕೈಲಾಸಶಿಖರಾದ್ವಿಮಾನಮಿದಮಾಹೃತಂ ॥ ೬ ॥ ¶ ಮಯೇನ ದಾನವೇಂದ್ರೇಣ ತ್ವದ್ಭಯಾತ್ಸಖ್ಯಮಿಚ್ಛತಾ । ದುಹಿತಾ ತವ ಭಾರ್ಯಾರ್ಥೇ ದತ್ತಾ ರಾಕ್ಷಸಪುಂಗವ! ॥ ೭ ॥ ದಾನವೇಂದ್ರೋ ಮಧುರ್ನಾಮ ವೀರ್ಯೋತ್ಸಿಕ್ತೋ ದುರಾಸದಃ । ವಿಗೃಹ್ಯ ವಶಮಾನೀತಃ ಕುಂಭೀನಸ್ಯಾಸ್ಸುಖಾವಹಃ ॥ ೮ ॥ ನಿರ್ಜಿತಾಸ್ತೇ ಮಹಾಬಾಹೋ! ನಾಗಾ

ಮಾನಃ - ಶ್ಲಾಘಿಸಲ್ಪಟ್ಟ, ಲೋಕಪಾಲಃ - ಲೋಕಪಾಲಕನಾದ, ಮಹಾಬಲಃ - ಬಹಳ ಬಲಿಷ್ಠನಾದ, ಸಃ - ಆ ಕುಬೇರನು, ತ್ವಯಾ - ನಿನ್ನಿಂದ, ಸಮರೇ - ಕಾಳಗದಲ್ಲಿ, ರೋಷಾತ್ - ಕೋಪಾವೇಶದಿಂದಲೇ, ನಿರ್ಜಿತಃ - ಜಯಿಸಲ್ಪಟ್ಟನು. ॥೫॥ ಯಕ್ಷೌಘಾನ್ - ಯಕ್ಷರ ಗುಂಪುಗಳನ್ನು, ವಿನಿಹತ್ಯ-ಹೊಡೆದು, ವಿಕ್ಷೋಭ್ಯ - ಕ್ಷೋಭೆಗೊಳಿಸಿ, ವಿಗೃಹ್ಯ ಚ - ಕಾಳಗವಮಾಡಿ, ತ್ವಯಾ - ನಿನ್ನಿಂದ, ಕೈಲಾ....ತ್ - ಕೈಲಾಸಪರ್ವತ ಶಿಖರದಿಂದ, ಇದಂವಿಮಾನಂ - ಈ ವಿಮಾನವು, ಆಹೃತಂ - ತರಲ್ಪಟ್ಟಿತು. ॥೬॥ ಹೇ ರಾಕ್ಷಸಪುಂಗವ - ಎಲೈ ರಾಕ್ಷಸೋತ್ತಮನೇ, ತ್ವದ್ಭಯಾತ್ - ನಿನ್ನ ಭೀತಿಯಿಂದ, ಸಖ್ಯಂ - ಮೈತ್ರಿಯನ್ನು, ಇಚ್ಛತಾ - ಅಪೇಕ್ಷಿಸುತ್ತಿರುವ, ದಾನವೇಂದ್ರೇಣ - ರಾಕ್ಷಸಶ್ರೇಷ್ಠನಾದ, ಮಯೇನ-ಮಯಾಸುರನಿಂದ, ದುಹಿತಾ-ತನ್ನ ಮಗಳು, ತವ ನಿನಗೆ, ಭಾರ್ಯಾರ್ಥೇ-ಹೆಂಡತಿಯ ನಿಮಿತ್ತವಾಗಿ, ದತ್ತಾ - ಕೊಡಲ್ಪಟ್ಟಳು. ॥ ೭ ॥ ಕುಂಭೀನಸ್ಯಾಃ - ಕುಂಭೀನಸಿ ಎಂಬ ನಿನ್ನ ತಂಗಿಗೆ, ಸುಖಾವಹಃ - ಗಂಡನಾದ, ವೀರ್ಯೋತ್ಸಿಕ್ತಃ - ಪರಾಕ್ರಮದಿಂದ ಮತ್ತನಾದ, ದುರಾಸದಃ - ಹೊಂದಲಸಾಧ್ಯನಾದ, ಮಧುರ್ನಾಮ - ಮಧುವೆಂಬ, ದಾನವೇಂದ್ರಃ - ರಾಕ್ಷಸೋತ್ತಮನು, ವಿಗೃಹ್ಯ - ಕಲಹಮಾಡಿ, ವಶಂ - ಸ್ವಾಧೀನತೆಯನ್ನು, ಆನೀತಃ - ಹೊಂದಿಸಲ್ಪಟ್ಟನು. ॥ ೮ ॥ ಹೇ ಮಹಾಬಾಹೋ - ಎಲೈ ಮಹಾ ಭುಜಶಾಲಿಯೇ, ರಸಾತಲಂ - ಪಾತಾಳಲೋಕವನ್ನು ಕುರಿತು, ಗತ್ವಾ - ಹೋಗಿ, ವಾಸುಕಿಃ - ವಾಸುಕಿಯು, ತಕ್ಷಕಃ - ತಕ್ಷಕನು, ಶಂಖಃ -

ಕೊಂಡ ಮಹಾ ಶೂರನಲ್ಲವೆ ನೀನು! ಇಷ್ಟೆಯಲ್ಲದೆ ನೀನು ಅನೇಕ ಮಂದಿ ಯಕ್ಷಶೂರರನ್ನು ಕೊಂದು ಭೋಗವತೀಪಟ್ಟಣವನ್ನೇ ಬಹಳವಾಗಿ ಕ್ಷೋಭೆಗೊಳಿಸಿ ಅಲ್ಲಿರುವವರನ್ನೆಲ್ಲಾ ಬಂದಿಗಳನ್ನಾಗಿ ಮಾಡಿ ಕೈಲಾಸಪರ್ವತ ಶಿಖರದಲ್ಲಿದ್ದ ಈ ಪುಷ್ಪಕ ವಿಮಾನವನ್ನು ತಂದಿರುವೆ? ಎಲೈ ರಾಕ್ಷಸೋತ್ತಮನೇ! ದಾನವೇಶ್ವರನಾದ ಮಯನು ನಿನ್ನ ಭಯದಿಂದ ನಿನ್ನೊಡನೆ ಸ್ನೇಹ ಮಾಡಬಯಸಿ ತನ್ನ ಮಗಳಾದ ಮಂಡೋದರಿಯನ್ನು ನಿನಗೆ ಕೊಟ್ಟು ಮದುವೆ ಮಾಡಲಿಲ್ಲವೆ? ಮಹಾ ಬಲಗರ್ವಿತನಾಗಿ ಯಾರೊಬ್ಬರಿಗೂ ಅಜೇಯನೂ, ಕುಂಭೀನಸೆಗೆ ಪ್ರಿಯನೂ ಆದ ಮಧುದಾನವನು ಯುದ್ಧದಲ್ಲಿ ಸೋತು ನಿನಗೆ ವಶನಾಗಲಿಲ್ಲವೆ? ॥ ೧-೮ ॥ ಎಲೈ ಮಹಾ ಬಾಹುವೇ! ನೀನು ರಸಾತಲಕ್ಕೆ ಹೋಗಿ ವಾಸುಕಿ, ತಕ್ಷಕ, ಶಂಖ, ಜಟಿ ಎಂಬ ಪನ್ನಗರಾಜರನ್ನು ಜಯಿಸಿ ಅವರನ್ನು ನಿನ್ನ ಅಧೀನರನ್ನಾಗಿ ಮಾಡಿ

¶ ಮಯಾಸುರನು, ರಾವಣಾಸುರನ ಕುಲಶೀಲ ವಯೋರೂಪಗಳನ್ನು ನೋಡಿ ತಾನಾಗಿಯೇ ತನ್ನ ಮಗಳಾದ ಮಂಡೋದರಿಯನ್ನು ಅವನಿಗೆ ಕೊಟ್ಟು ಮದುವೆ ಮಾಡಿದನೆಂದು ಉತ್ತರಕಾಂಡದಲ್ಲಿ ಹೇಳಿದ್ದರೂ ಇಲ್ಲಿ ಹೀಗೆ ಹೇಳಿರುವುದು ರಾವಣನ ಪರಾಕ್ರಮವನ್ನು ಪ್ರಶಂಸೆ ಮಾಡುವುದಕ್ಕೆಂದು ತಿಳಿಯಬೇಕು. (ಗೋ)

ಗತ್ವಾ ರಸಾತಲಂ । ವಾಸುಕಿಸ್ತಕ್ಷಕಶ್ಶಂಖೋ ಜಟೀಚ ವಶಮಾಹೃತಾಃ ॥ ೯ ॥ ಅಕ್ಷಯಾ ಬಲವಂತಶ್ಚ ಶೂರಾ ಲಬ್ಧವರಾಃ ಪುನಃ । ತ್ವಯಾ ಸಂವತ್ಸರಂ ಯುದ್ಧ್ವಾ ಸಮರೇ ದಾನವಾ ವಿಭೋ! ॥೧೦॥ ಸ್ವಬಲಂ ಸಮುಪಾಶ್ರಿತ್ಯ ನೀತಾ ವಶಮರಿಂದಮ! । ಮಾಯಾಶ್ಚಾಧಿಗತಾಸ್ತತ್ರ ಬಹವೋ ರಾಕ್ಷಸಾಧಿಪ! । $ (ನಿರ್ಜಿತಾಸ್ಸಮರೇ ರೋಷಾಲ್ಲೋಕಪಾಲಾ ಮಹಾಬಲಾಃ । ದೇವಲೋಕಮಿತೋ ಗತ್ವಾ ಶಕ್ರಶ್ಚಾಪಿ ವಿನಿರ್ಜಿತಃ) ॥ ೧೧ ॥ ಶೂರಾಶ್ಚ ಬಲವಂತಶ್ಚ ವರುಣಸ್ಯ ಸುತಾ ರಣೇ । ನಿರ್ಜಿತಾಸ್ತೇ ಮಹಾಬಾಹೋ ಚತುರ್ವಿಧಬಲಾನುಗಾಃ ॥ ೧೨ ॥ § ಮೃತ್ಯುದಂಡಮಹಾಗ್ರಾಹಂ ಶಾಲ್ಮಲಿ

ಶಂಖನು, ಜಟೀಚ - ಜಟೀ ಎಂಬುವನು, ಏತೇನಾಗಾಃ - ಈ ಸರ್ಪಗಳು, ನಿರ್ಜಿತಾಃ - ಪರಾಜಿತರಾಗಿ, ತೇ - ನಿನ್ನ, ವಶಂ - ಸ್ವಾಧೀನತೆಯನ್ನು, ಆಹೃತಾಃ - ಹೊಂದಲ್ಪಟ್ಟರು. ॥೯॥ ಹೇ ವಿಭೋ-ಎಲೈ ಸ್ವಾಮಿಯೇ, ಅಕ್ಷಯಾಃ - ನಾಶರಹಿತರಾದ, ಬಲವಂತಃ - ಸಾಮರ್ಥ್ಯವಂತರಾದ, ಶೂರಾಃ - ಶೂರರಾದ, ಲಬ್ಧವರಾಃ - ಹೊಂದಲ್ಪಟ್ಟ ಬ್ರಹ್ಮವರವುಳ್ಳ, ದಾನವಾಃ - ಕಾಲಕೇಯರೆಂಬ ರಕ್ಕಸರು, ಸಮರೇ - ಕಾಳಗದಲ್ಲಿ, ತ್ವಯಾಪುನಃ - ನಿನ್ನಿಂದಲಾದರೆ, ಸಂವತ್ಸರಂ - ಒಂದುವರುಷ, ಯುಧ್ವಾ - ಕಾಳಗಮಾಡಿ, ಹೇ ಅರಿಂದಮ - ಎಲೈ ಶತ್ರುಸಂಹಾರಕನೇ, ಸ್ವಬಲಂ - ತಮ್ಮ ಸಾಮರ್ಥ್ಯವನ್ನು, ಸಮುಪಾಶ್ರಿತ್ಯ - ಹೊಂದಿ, ವಶಂ - ಸ್ವಾಧೀನತೆಯನ್ನು, ನೀತಾಃ - ಹೊಂದಿಸಲ್ಪಟ್ಟರು. ॥ ೧೦ ॥ ಹೇ ರಾಕ್ಷಸಾಧಿಪ - ಎಲೈ ರಾಕ್ಷಸರಾಜನೇ, ತತ್ರ - ಆ ಪಾತಾಳಲೋಕದಲ್ಲಿ, ತ್ವಯಾ - ನಿನ್ನಿಂದ, ಬಹವಃ - ಅನೇಕಗಳಾದ, ಮಾಯಾಃ - ಮಾಯೆಗಳು, ಅಧಿಗತಾಃ - ಹೊಂದಲ್ಪಟ್ಟವು. ॥ ೧೧ ॥ ಹೇ ಮಹಾಬಾಹೋ - ಎಲೈ ಮಹಾಭುಜಶಾಲಿಯೇ, ಶೂರಾಶ್ಚ - ಶೂರರಾದ, ಚತು....ಗಾಃ - ರಥ, ಗಜ, ತುರಗ, ಪದಾತಿಗಳೆಂಬ ನಾಲ್ಕು ಬಲಗಳೇ ಹಿಂಭಾಗದಲ್ಲಿ ಉಳ್ಳ, ಬಲವಂತಃ - ಸ್ವತಃ ಸಾಮರ್ಥ್ಯವಂತರಾದ, ವರುಣಸ್ಯ - ವರುಣನ, ಸುತಾಃ - ಕುವರರು, ತೇ - ನಿನ್ನಿಂದ, ರಣೇ - ಕಾಳಗದಲ್ಲಿ, ನಿರ್ಜಿತಾಃ - ಜಯಿಸಲ್ಪಟ್ಟರು. ॥ ೧೨ ॥ ಹೇ ರಾಜನ್ - ಎಲೈ ಅರಸೇ, ಮೃತ್ಯು....ಹಂ - ಯಮದಂಡವೆಂಬ ದೊಡ್ಡಮುಸಳೆಗಳುಳ್ಳ, ಶಾಲ್ಮ....ತಂ-ಬೂರುಗದ ಮರಗಳ ಆಕಾರಗಳುಳ್ಳ ಆಯುಧ

ಕೊಳ್ಳಲಿಲ್ಲವೆ? ವಿನಾಶವೇ ಇಲ್ಲದವರೂ, ಮಹಾ ಬಲಪರಾಕ್ರಮಶಾಲಿಗಳಾದವರೂ, ಯುದ್ಧವೀರರೂ, ಬ್ರಹ್ಮನನ್ನು ಕುರಿತು ತೀವ್ರ ತಪವನ್ನಾಚರಿಸಿ ವರದಾನವನ್ನು ಪಡೆದವರೂ ಆದ ಕಾಲಕೇಯರೆಂಬ ರಾಕ್ಷಸರು ನಿನ್ನೊಡನೆ ಒಂದು ವರ್ಷಕಾಲ ಸಂತತವಾಗಿ ಯುದ್ಧಮಾಡಿ ಕಡೆಗೆ ನಿಶ್ಶಕ್ತರಾಗಿ ನಿನಗೆ ವಶರಾದರಲ್ಲವೆ? ಎಲೈ ಶತ್ರುಂಜಯನೇ, ರಾವಣನೇ, ಪ್ರಭುವೇ! ನೀನು ಆ ಕಾಲಕೇಯನೊಡನೆ ಸಖ್ಯವನ್ನು ಮಾಡಿಕೊಂಡು ಅವರಿಂದ ನಾನಾವಿಧವಾದ ಮಾಯೆಗಳನ್ನು ಅಭ್ಯಾಸಮಾಡಿರುವೆಯಲ್ಲವೆ? ಅತುಲ ಶಕ್ತಿಸಂಪನ್ನರೂ, ಯುದ್ಧದುರ್ಮದರೂ,ಚತುರಂಗಬಲಸಮನ್ವಿತರೂ ಆದ ಆ ವರುಣಪುತ್ರರು ನಿನ್ನೊಡನೆ ಯುದ್ಧಮಾಡಿ ಸೋತುಹೋದರು. ರಾಕ್ಷಸೇಶ್ವರಾ! ನೀನು ಯಮದಂಡವೆಂಬ ಮಹಾ ಮತ್ಸ್ಯವುಳ್ಳದಾಗಿಯೂ, ಶಾಲ್ಮಲ್ಯಾಯುಧಗಳೆಂಬ ವೃಕ್ಷಗಳಿಂದಲಂಕೃತವಾದುದಾಗಿಯೂ, ಕಾಲಪಾಶ

$ ಈ ಶ್ಲೋಕವು ಅಧಿಕಪಾಠಕ್ಕೆ ಸೇರಿದ್ದು, "ನೀನು ದೇವಲೋಕಕ್ಕೆ ಹೋಗಿ ರೋಷದಿಂದ ಅಲ್ಲಿರುವ ಲೋಕಪಾಲಕರನ್ನೂ, ದೇವೇಂದ್ರನನ್ನೂ ಜಯಿಸಿದೆ" ಎಂದು ಇದರ ತಾತ್ಪರ್ಯ.

§ "ಶಾಲ್ಮಲಿದ್ರುಮ" ವೆಂದರೆ ಯಮಲೋಕದಲ್ಲಿರುವ ಯಾತನಾವೃಕ್ಷಗಳೆಂದು ತಿಲಕಕಾರರು ಬರೆದಿರುವರು ವೃಕ್ಷಾಕಾರವಾದ ಆಯುಧವಿಶೇಷಗಳೆಂದು ಗೋವಿಂದರಾಜರು ಹೇಳುವರು.

ದ್ರುಮಮಂಡಿತಂ । ಕಾಲಪಾಶಮಹಾವೀಚಿಂ ಯಮಕಿಂಕರಪನ್ನಗಂ ॥ ೧೩ ॥ ಅವಗಾಹ್ಯ ತ್ವಯಾ ರಾಜನ್! ಯಮಸ್ಯ ಬಲಸಾಗರಂ । ಜಯಶ್ಚ ವಿಪುಲಃ ಪ್ರಾಪ್ತೋ ಮೃತ್ಯುಶ್ಚ ಪ್ರತಿಷೇಧಿತಃ । ಸುಯುದ್ಧೇನಚ ತೇ ಸರ್ವೇ ಲೋಕಾಸ್ತತ್ರ ವಿಲೋಳಿತಾಃ ॥ ೧೪ ॥ ಕ್ಷತ್ರಿಯೈರ್ಬಹುಭಿರ್ವೀರ್ಯೈಃ ಶಕ್ರತುಲ್ಯಪರಾಕ್ರಮೈಃ । ಆಸೀದ್ವಸುಮತೀ ಪೂರ್ಣಾ ಮಹದ್ಭಿರಿವ ಪಾದಪೈಃ ॥ ೧೫ ॥ ತೇಷಾಂ ವೀರ್ಯಗುಣೋತ್ಸಾಹೈರ್ನಸಮೋ ರಾಘವೋ ರಣೇ । ಪ್ರಸಹ್ಯ ತೇ ತ್ವಯಾ ರಾಜನ್! ಹತಾಃ ಪರಮದುರ್ಜಯಾಃ ॥ ೧೬ ॥ ತಿಷ್ಠ ವಾ ಕಿಂ ಮಹಾರಾಜ! ಶ್ರಮೇಣ ತವ ವಾನರಾನ್ ।

ಗಳೆಂಬ ವೃಕ್ಷಗಳಿಂದ ಅಲಂಕರಿಸಲ್ಪಟ್ಟ, ಕಾಲ....ಚಿಂ - ಕಾಲಪಾಶವೆಂಬ ದೊಡ್ಡ ತೆರೆಗಳುಳ್ಳ, ಯಮ....ಗಂ - ಯಮದೂತರೆಂಬ ಸರ್ಪಗಳುಳ್ಳ, ಯಮಸ್ಯ - ಯಮನ, ಬಲಸಾಗರಂ - ಸೈನ್ಯವೆಂಬ ಸಮುದ್ರವನ್ನು, ಅವಗಾಹ್ಯ - ಹೊಕ್ಕು, ತ್ವಯಾ - ನಿನ್ನಿಂದ, ವಿಪುಲಃ - ವಿಸ್ತಾರವಾದ, ಜಯಶ್ಚ-ಜಯವೂ, ಪ್ರಾಪ್ತಃ - ಹೊಂದಲ್ಪಟ್ಟಿತು, ಮೃತ್ಯುಶ್ಚ - ಯಮನೂ ಕೂಡ, ಪ್ರತಿಷೇಧಿತಃ - ನಿಗ್ರಹಿಸಲ್ಪಟ್ಟನು. ॥ ೧೩ ೧೪ ॥ ತೇ - ನಿನ್ನ, ಸುಯುದ್ಧೇನ - ಮಹಾ ಯುದ್ಧದಿಂದ, ಸರ್ವಲೋಕಾಃ - ಸಮಸ್ತ ಲೋಕಗಳೂ, (ಅಂದರೆ-ಜನರು), ತತ್ರ - ಆ ಲೋಕಗಳಲ್ಲಿ, ವಿಲೋಳಿತಾಃ - ಓಡಿಸಲ್ಪಟ್ಟರು, ಶಕ್ರ....ಮೈಃ - ದೇವೇಂದ್ರನಿಗೆ ಸಮಾನವಾದ ಪರಾಕ್ರಮವುಳ್ಳ, ವೀರ್ಯೈಃ - ಸಾಮರ್ಥ್ಯವಂತರಾದ, ಬಹುಭಿಃ - ಅನೇಕರಾದ, ಕ್ಷತ್ರಿಯೈಃ - ರಾಜರಿಂದ, ವಸುಮತೀ - ಭೂಮಿಯು, ಮಹದ್ಭಿಃ - ದೊಡ್ಡದಾದ ಪಾದಪೈರಿವ - ಗಿಡಗಳಂತೆ, ಪೂರ್ಣಾ - ತುಂಬಿದುದು, ಆಸೀತ್ - ಆಯಿತು. ॥ ೧೫ ॥ ರಾಮಃ - ಶ್ರೀರಾಮನು, ವೀರ್ಯ....ಹೈಃ - ಸಾಮರ್ಥ್ಯದಿಂದಲೂ, ಶೌರ್ಯದಿಂದಲೂ, ಉತ್ಸಾಹಗಳಿಂದಲೂ, ತೇಷಾಂ - ಆ ರಾಜರಿಗೆ, ನಸಮಃ - ಸಮನಲ್ಲ, ಹೇ ರಾಜನ್-ಎಲೈ ಅರಸೇ, ಪರ....ಯಾಃ - ಬಹುತರವಾಗಿ ಜಯಿಸಲಸಾಧ್ಯರಾದ, ತೇ - ಅಂತಹ ಅರಸರು, ತ್ವಯಾ - ನಿನ್ನಿಂದ, ಪ್ರಸಹ - ವಿಕ್ರಮಿಸಿ, ಹತಾಃ - ಹೊಡೆಯಲ್ಪಟ್ಟರು. ॥೧೬॥ ಹೇ ಮಹಾರಾಜ-ಎಲೈ ಅರಸೇ, ತವ - ನಿನಗೆ, ಶ್ರಮೇಣಕಿಂವಾ - ಆಯಾಸದಿಂದೇನು ಪ್ರಯೋಜನವು, ತಿಷ್ಠ - ಸುಖವಾಗಿರು, ಮಹಾಬಾಹುಃ - ಮಹಾ ಬಲಪರಾಕ್ರಮವುಳ್ಳ, ಅಯಮಿಂದ್ರಜಿತ್ - ಈ ಇಂದ್ರಜಿತುವು,

ವೆಂಬ ದೊಡ್ಡ ಅಲೆಗಳುಳ್ಳುದಾಗಿಯೂ, ಯಮಕಿಂಕರರೆಂಬ ಮಹಾ ಸರ್ಪಗಳುಳ್ಳುದಾಗಿಯೂ ಇರುವ ಯಮಧರ್ಮರಾಯನ ಅಪಾರಸೇನೆಯೆಂಬ ಮಹಾರಸಾಗರವನ್ನು ಶೋಷಿಸಿ ರಣರಂಗದಲ್ಲಿ ಯಮನನ್ನು ಕಾಂದಶೀಕನನ್ನಾಗಿ ಮಾಡಿ ವಿಜಯಿಯಾದವನಲ್ಲವೆ? ಇದೂ ಅಲ್ಲದೆ ನೀನು ಯಮನೊಡನೆ ಮಾಡಿದ ಘೋರ ಯುದ್ಧವನ್ನು ನೋಡಿ ಚತುರ್ದಶಭುವನಗಳೂ ಗಡಗಡನೆ ನಡುಗಿಹೋದುವು. ॥ ೯—೧೫ ॥ ದೇವೇಂದ್ರನಿಗೆ ಸಮಾನವಾದ ಪರಾಕ್ರಮವುಳ್ಳವರಾಗಿಯೂ, ಯುದ್ಧವೀರರಾಗಿಯೂ ಇರುವ ಅನೇಕ ಮಂದಿ ಕ್ಷತ್ರಿಯರು ನಿನ್ನೊಡನೆ ಯುದ್ಧಮಾಡಿ ಮಹಾ ವೃಕ್ಷಗಳಂತೆ ಭೂಮಿಗೆ ಬಿದ್ದರು. ರಾಕ್ಷಸೇಂದ್ರಾ! ರಾಮನು ಪರಾಕ್ರಮದಿಂದಲೂ, ಗುಣಗಳಿಂದಲೂ, ಯುದ್ಧೋತ್ಸಾಹದಿಂದಲೂ ಆ ಕ್ಷತ್ರಿಯವೀರರಿಗೆ ಎಷ್ಟುಮಾತ್ರಕ್ಕೂ ಸರಿತೂಗಲಾರನು. ಅಂತಹ ಅಜೇಯರಾದ ರಾಜಾಧಿರಾಜರನ್ನು ನೀನು ಜಯಿಸಿರುವೆ. ಎಂದಮೇಲೆ ಈ ರಾಮನು ನಿನಗೆ ಎಷ್ಟುಮಾತ್ರದವನು? ಮಹಾರಾಜಾ! ನೀನು ಸ್ವಸ್ಥನಾಗಿರು, ಏನೊಂದು ಶ್ರಮವೂ ನಿನಗಿಲ್ಲದಿರಲಿ. ಮಹಾ ಬಲನಾದ ಈ ಇಂದ್ರ

ಅಯಮೇಕೋ ಮಹಾಬಾಹುರಿಂದ್ರಜಿತ್ ಕ್ಷಪಯಿಷ್ಯತಿ ॥ ೧೭ ॥ ಅನೇನಹಿ ಮಹಾರಾಜ! ಮಾಹೇಶ್ವರಮನುತ್ತಮಂ । ಇಷ್ಟ್ವಾ ಯಜ್ಞಂ ವರೋ ಲಬ್ಧೋ ಲೋಕೇ ಪರಮದುರ್ಲಭಃ ॥ ೧೮ ॥ ಶಕ್ತಿತೋಮರಮೀನಂಚ ವಿನಿಕೀರ್ಣಾಂತ್ರಶೈವಲಂ । ಗಜಕಚ್ಛಪಸಂಬಾಧಮಶ್ವಮಂಡೂಕಸಂಕುಲಂ ॥ ೧೯ ॥ ರುದ್ರಾದಿತ್ಯಮಹಾಗ್ರಾಹಂ ಮರುದ್ವಸುಮಹೋರಗಂ । ರಥಾಶ್ವಗಜತೋಯೌಘಂ ಪದಾತಿಪುಳಿನಂ ಮಹತ್ ॥ ೨೦ ॥ ಅನೇನಹಿ ಸಮಾಸಾದ್ಯ ದೇವಾನಾಂ ಬಲಸಾಗರಂ । ಗೃಹೀತೋ ದೈವತಪತಿರ್ಲಂಕಾಂಚಾಪಿ ಪ್ರವೇಶಿತಃ ॥ ೨೧ ॥ ಪಿತಾಮಹನಿಯೋಗಾಚ್ಚ ಮುಕ್ತಶ್ಶಂಬರ

---

ಏಕಃ - ಒಬ್ಬನೇ, ವಾನರಾ್ - ಕಪಿಗಳನ್ನು, ಕ್ಷಪಯಿಷ್ಯತಿ - ನಾಶಗೊಳಿಸುತ್ತಾನೆ. ॥ ೧೭ ॥ ಹೇ ಮಹಾರಾಜ-ಎಲೈ ಮಹಾ ಪ್ರಭುವೇ, ಅನೇನ-ಈ ಇಂದ್ರಜಿತ್ತುವಿನಿಂದ, ಮಾಹೇಶ್ವರಂ-ಮಹೇಶ್ವರಪ್ರೀತಿಕರವಾದ, ಅನುತ್ತಮಂ - ಸರ್ವೋತ್ತಮವಾದ, ಯಜ್ಞಂ - ಯಾಗವನ್ನು, ಇಷ್ಟ್ವಾ - ಮಾಡಿ, ಲೋಕೇ - ಲೋಕದಲ್ಲಿ, ಪರಮದುರ್ಲಭಃ - ಬಹಳ ಅಸಾಧ್ಯವಾದ, ವರಃ - ವರವು, ಲಬ್ಧಃ - ಹೊಂದಲ್ಪಟ್ಟಿತು. ॥ ೧೮ ॥ ಶಕ್ತಿ....ಚ - ಶಕ್ತ್ಯಾಯುಧವೂ, ತೋಮರಾಯುಧವೂ, ಮತ್ಸ್ಯಗಳಾಗುಳ್ಳ, ವಿನಿ....ಲಂ - ವ್ಯಾಪಿಸಲ್ಪಟ್ಟ ಕರುಳುಗಳೇ ಪಾಚಿಯಾಗುಳ್ಳ, ಗಜ....ಧಂ - ಗಜಗಳೆಂಬ ಆಮೆಗಳಿಂದ ತುಂಬಿರುವ, ಅಶ್ವ....ಲಂ - ಕುದುರೆಗಳೆಂಬ ಕಪ್ಪೆಗಳಿಂದ ವ್ಯಾಪ್ತವಾದ, ರುದ್ರಾ....ಹಂ - ಏಕಾದಶರುದ್ರರು, ದ್ವಾದಶಾದಿತ್ಯರು ಎಂಬ ದೊಡ್ಡ ನೆಗಳುಗಳುಳ್ಳ, ಮರು....ಗಂ - ಸಪ್ತಮರುತ್ತುಗಳೂ, ಅಷ್ಟವಸುಗಳೂ ಎಂಬ ದೊಡ್ಡ ಸರ್ಪಗಳುಳ್ಳ, ರಥಾ....ಘಂ - ರಥಗಳೂ, ಕುದುರೆಗಳೂ, ಗಜಗಳೂ ಎಂಬ ನೀರಿನ ಪ್ರವಾಹಗಳುಳ್ಳ, ಪದಾತಿಪುಳಿನಂ - ಕಾಲುಬಲವೆಂಬ ಮರಳುದಿಣ್ಣೆಗಳುಳ್ಳ, ಮಹತೀ - ದೊಡ್ಡದಾದ, ದೇವಾನಾಂ - ದೇವತೆಗಳ, ಬಲಸಾಗರಂ - ಬಲವೆಂಬ ಕಡಲನ್ನು, ಸಮಾಸಾದ್ಯ - ಹೊಂದಿ, ಅನೇನ - ಈ ಇಂದ್ರಜಿತ್ತುವಿನಿಂದ, ದೈವತಪತಿಃ - ದೇವೇಂದ್ರನು, ಗೃಹೀತಃ - ಗ್ರಹಿಸಲ್ಪಟ್ಟನು, ಲಂಕಾಂಚಾಪಿ - ಲಂಕಾಪಟ್ಟಣವೂ, ಪ್ರವೇಶಿತಶ್ಚ - ಪ್ರವೇಶಮಾಡಿಸಲ್ಪಟ್ಟನು. ॥೧೯-೨೧॥ ಹೇ ರಾಜ್ - ಎಲೈ ಅರಸೇ, ಶಂಬ....ಹಾ - ಶಂಬರಾಸುರನನ್ನೂ, ವೃತ್ರಾ

---

ಜಿತ್ತುವೊಬ್ಬನೇ ಆ ವಾನರರೆಲ್ಲರನ್ನೂ ನಾಶಮಾಡಬಲ್ಲ ಅದಟುಳ್ಳವನು. ರಾಕ್ಷಸೇಶ್ವರಾ! ನಿನ್ನ ಮಗನಾದ ಈ ಇಂದ್ರಜಿತ್ತುವೇನು ಸಾಮಾನ್ಯನೇ! ಪರಮೇಶ್ವರನನ್ನು ಕುರಿತು ಮಹಾ ಯಾಗವೊಂದನ್ನು ಮಾಡಿ ಲೋಕದಲ್ಲಿ ಯಾರೊಬ್ಬರಿಗೂ ಅಸಾಧ್ಯವಾದ ವರಗಳನ್ನು ಹೊಂದಿರುವನು. ಈತನು ಶಕ್ತಿತೋಮರುದ್ವ್ಯಾಯುಧಗಳೇ ಮತ್ಸ್ಯಗಳಾಗುಳ್ಳದೂ, ಹೊರಚೆಲ್ಲಿದ ಕರುಳುಗಳೇ ಪಾಚಿಯಾಗುಳ್ಳದೂ, ಆನೆಗಳೆಂಬ ಕೂರ್ಮಗಳಿಂದ ತುಂಬಿರುವುದೂ, ಕುದುರೆಗಳೆಂಬ ಮಂಡೂಕಗಳಿಂದ ನಿಬಿಡವಾಗಿರುವುದೂ, ಏಕಾದಶರುದ್ರರು, ದ್ವಾದಶಾದಿತ್ಯರು ಎಂಬ ದೊಡ್ಡದೊಡ್ಡ ಮೊಸಳೆಗಳುಳ್ಳದೂ, ಸಪ್ತಮರುತ್ತುಗಳು, ಅಷ್ಟವಸುಗಳು ಎಂಬ ಮಹಾ ಸರ್ಪಗಳುಳ್ಳದೂ, ರಥಗಜತುರಗ ಸಮೂಹಗಳೇ ಜಲಸಮೂಹವಾಗುಳ್ಳದೂ, ಕಾಲ್ಬಲವೆಂಬ ಮರಳುದಿಣ್ಣೆಗಳುಳ್ಳದೂ ಆಗಿ ಮಹಾ ಸಮುದ್ರದಂತಿರುವ ದೇವಸೇನೆಯನ್ನು ಪ್ರವೇಶಿಸಿ ಅದನ್ನೆಲ್ಲವನ್ನೂ ತಾರುಮಾರುಮಾಡಿ, ದೇವೇಂದ್ರನನ್ನು ಹಿಡಿದು ನಮ್ಮ ಲಂಕಾನಗರಕ್ಕೆ ಎಳೆದು ತಂದ ಮಹಾ ಶೂರನಲ್ಲವೆ. ॥೧೫-೨೧॥ ಮಹಾ ಪ್ರಭುವೆ?

ವೃತ್ರಹಾ | ಗತಸ್ತ್ರಿವಿಷ್ಟಪಂ ರಾಜನ್ಸರ್ವದೇವನಮಸ್ಕೃತಃ || ೨೨ || ತಮೇವ ತ್ವಂ ಮಹಾರಾಜ ! ವಿಸೃಜೇಂದ್ರಜಿತಂ ಸುತಂ | ಯಾವದ್ವಾನರಸೇನಾಂ ತಾಂ ಸ ರಾಮಾಂ ನಯತಿ ಕ್ಷಯಂ || ೨೩ ||

ರಾಜನ್ನಾಪದಯುಕ್ತೇಯಮಾಗತಾ ಪ್ರಾಕೃತಾಜ್ಜನಾತ್ |
ಹೃದಿ ನೈವ ತ್ವಯಾ ಕಾರ್ಯಾತ್ವಂ ವಧಿಷ್ಯಸಿ ರಾಘವಂ" || ೨೪ ||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಸಪ್ತಮಸ್ಸರ್ಗಃ.



ಸುರನನ್ನೂ ಸಂಹರಿಸಿರುವ, ಸರ್ವ....ತಃ - ಸಮಸ್ತ ದೇವತೆಗಳಿಂದ ನಮಿಸಲ್ಪಟ್ಟ ದೇವೇಂದ್ರನು, ಪಿತಾಶ್ಚ - ಬ್ರಹ್ಮನ ಆಜ್ಞೆಯಿಂದ, ಮುಕ್ತಃ - ಬಿಡಲ್ಪಟ್ಟವನಾಗಿ, ತ್ರಿವಿಷ್ಟಪಂ - ಸ್ವರ್ಗಲೋಕವನ್ನು ಕುರಿತು, ಗತಃ - ಹೋದನು. || ೨೨ || ಹೇ ಮಹಾರಾಜ - ಎಲೈ ಮಹಾಸ್ವಾಮಿಯೇ, ಸರಾಮಾಂ - ಶ್ರೀರಾಮನಿಂದೊಡಗೂಡಿದ, ತಾಂವಾನರಸೇನಾಂ - ಆ ಕಪಿಸೈನ್ಯವನ್ನು, ಕ್ಷಯಂ - ನಾಶವನ್ನು, ಯಾವನ್ನಯತಿ - ಹೊಂದಿಸುವವರೆಗೂ, ತ್ವಂ - ನೀನು, ತಮೇವೇಂದ್ರಜಿತಂ - ಆ ಇಂದ್ರಜಿತ್ತು ವೆಂಬ, ಸುತಂ - ಕುವರನನ್ನೇ, ವಿಸೃಜ - ಕಳುಹು. || ೨೩ || ಹೇ ರಾಜನ್ - ಎಲೈ ಅರಸೇ, ಪ್ರಾಕೃತಾತ್‌ಜನಾತ್-ಪಾಮರಜನದ ದೆಸೆಯಿಂದ, ಆಗತಾ-ಬಂದಿರುವ, ಆಪತ್-ಆಪತ್ತು, ಅಯುಕ್ತಾ-ಯೋಗ್ಯವಾದದ್ದಲ್ಲ, ತ್ವಯಾ - ನಿನ್ನಿಂದ, ಹೃದಿ - ಮನಸ್ಸಿನಲ್ಲಿ, ನಕಾರ್ಯಾ - ಮಾಡತಕ್ಕದ್ದಲ್ಲ, ತ್ವಂ - ನೀನು, ರಾಘವಂ - ಶ್ರೀರಾಮನನ್ನು, ವಧಿಷ್ಯಸಿ - ಸಂಹಾರ ಮಾಡುವೆ. || ೨೪ ||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಸಪ್ತಮಸ್ಸರ್ಗಃ.



ಬ್ರಹ್ಮದೇವನೇ ಸಾಕ್ಷಾತ್ತಾಗಿ ಇಲ್ಲಿಗೈತಂದು ನಿನಗೆ ಹೇಳಿಕೊಂಡಮೇಲೆ ಆ ದೇವೇಂದ್ರನನ್ನು ನೀನು ಬಿಟ್ಟುಕೊಟ್ಟೆಯಲ್ಲವೆ? ಆಮೇಲೆ ಶಂಬರಾಸುರ, ವೃತ್ರಾಸುರರನ್ನು ಸಂಹಾರ ಮಾಡಿದ ಶೂರನಾದ ಆ ದೇವೇಂದ್ರನು ಸಮಸ್ತ ದೇವತೆಗಳೊಡನೆ ಸ್ವರ್ಗಕ್ಕೆ ಹೋದನಲ್ಲವೆ? ಆದುದರಿಂದ ಅಂತಹ ಪರಾಕ್ರಮಶಾಲಿಯಾದ ನಿನ್ನ ಮಗನಾದ ಇಂದ್ರಜಿತ್ತುವನ್ನು ಕಳುಹಿಸು. ನಿಮಿಷಮಾತ್ರದಲ್ಲಿಯೇ ಆತನು ರಾಮನನ್ನು ಸಮಸ್ತ ವಾನರಸೇನೆಯೊಡನೆ ಕೊಂದು ಬರುವನು. ಮಹಾ ಪ್ರಭುವೆ! ನೀಚನಾದ ಆ ಹನುಮಂತನಿಂದಾದ ಆಪತ್ತನ್ನು ಕುರಿತು ಮನಸ್ಸಿನಲ್ಲಿ ನೀನೆಷ್ಟುಮಾತ್ರವೂ ಚಿಂತಿಸಕೂಡದು. ನೀನು ಆ ರಾಮನನ್ನು ಸುಲಭವಾಗಿ ಸಂಹರಿಸಬಲ್ಲೆ" || ೨೨-೨೪ ||

ಇಂತಿದು ರಾಕ್ಷಸಕೃತ ರಾವಣಪ್ರಭಾವ ಪ್ರಶಂಸನ ವೃತ್ತಾಂತವೆಂಬ ಏಳನೆಯ ಸರ್ಗವು ಸಮಾಪ್ತವಾದುದು.



# ಯುದ್ಧಕಾಂಡೇ ಅಷ್ಟಮಸ್ಸರ್ಗಃ

ತತೋ ನೀಲಾಂಬುದನಿಭಃ ಪ್ರಹಸ್ತೋ ನಾಮ ರಾಕ್ಷಸಃ । ಅಬ್ರವೀತ್ಪ್ರಾಂಜಲಿರ್ವಾಕ್ಯಂ ಶೂರಸ್ಸೇನಾಪತಿಸ್ತದಾ ॥ ೧ ॥ "ದೇವದಾನವಗಂಧರ್ವಾಃ ಪಿಶಾಚಪತಗೋರಗಾಃ । ನತ್ವಾಂ ಧರ್ಷಯಿತುಂ ಶಕ್ತಾಃ ಕಿಂಪುನರ್ವಾನರಾ ರಣೇ ॥ ೨ ॥ ಸರ್ವೇ ಪ್ರಮತ್ತಾ ವಿಶ್ವಸ್ತಾ ವಂಚಿತಾಸ್ಸ್ಮ ಹನೂಮತಾ । ನಹಿ ಮೇ ಜೀವತೋ ಗಚ್ಛೇಜ್ಜೀವನ್ಸ ವನಗೋಚರಃ ॥ ೩ ॥ ಸರ್ವಾಂ ಸಾಗರಪರ್ಯಂತಾಂ ಸಶೈಲವನ

---

ತತಃ - ಬಳಿಕ, ನೀಲಾಂ....ಭಃ - ನೀಲಮೇಘಕ್ಕೆ ಸದೃಶನಾದ, ಶೂರಃ - ಶೌರ್ಯವಂತನಾದ, ಸೇನಾಪತಿಃ - ಸೈನ್ಯಾಧಿಪತಿಯಾದ, ಪ್ರಹಸ್ತೋನಾಮ - ಪ್ರಹಸ್ತನೆಂದು ಪ್ರಖ್ಯಾತನಾದ, ರಾಕ್ಷಸಃ-ರಕ್ಕಸನು, ತದಾ-ಆ ಕಾಲದಲ್ಲಿ, ಪ್ರಾಂಜಲಿಃ-ಅಂಜಲಿಬದ್ಧನಾಗಿ, ವಾಕ್ಯಂ-ಮಾತನ್ನು, ಅಬ್ರವೀತ್ - ನುಡಿದನು. ॥ ೧ ॥ ದೇವ....ರ್ವಾಃ - ದೇವತೆಗಳೂ, ದಾನವರೂ, ಗಂಧರ್ವರೂ, ಪಿಶಾ....ಗಾಃ - ಪಿಶಾಚಗಳೂ, ಪಕ್ಷಿಗಳೂ, ಸರ್ಪಗಳೂ, ರಣೇ - ಕಾಳಗದಲ್ಲಿ, ತ್ವಾಂ - ನಿನ್ನನ್ನು, ಧರ್ಷಯಿತುಂ - ತಿರಸ್ಕರಿಸುವದಕ್ಕೆ, ನಶಕ್ತಾಃ - ಸಮರ್ಥರಲ್ಲವು, ವಾನರಾಃಪುನಃ - ಕಪಿಗಳಾದರೆ, ಕಿಂ - ಏನು ಹೇಳತಕ್ಕದ್ದು. ॥ ೨ ॥ ಸರ್ವೇ - ಸಮಸ್ತರೂ, ಪ್ರಮತ್ತಾಃ - ವಿಷಯಭೋಗಾಸಕ್ತರಾಗಿಯೂ, ವಿಶ್ವಸ್ತಾಃ - ನಮ್ಮನ್ನು ಯಾರು ಹೊಡೆದಾರೆಂಬ ನಂಬಿಕೆಯುಳ್ಳವರಾಗಿ, ಹನೂಮತಾ - ಆಂಜನೇಯನಿಂದ, ವಂಚಿತಾಃ - ವಂಚಿಸಲ್ಪಟ್ಟವರು, ಸ್ಮ - ಆದೆವಷ್ಟೆ, ಸಃವನಗೋಚರಃ - ಆ ವಾನರನು, ಜೀವತಃ - ಬದುಕಿರುವ, ಮೇ - ನನ್ನ ದೆಸೆಯಿಂದ, ಜೀವನ್ - ಬದುಕಿ, ನಗಚ್ಛೇದ್ಧಿ - ಹೋಗಲಾರನಷ್ಟೆ. ॥೩॥ ಭವಾನ್ - ನೀನು, ಮಾಂ - ನನ್ನನ್ನು ಕುರಿತು, ಆಜ್ಞಾಪಯತು - ಆಜ್ಞಾಪಿಸು, ಸಶೈ....ನಾಂ ಬೆಟ್ಟಗಳೂ, ಕಾಡುಗಳೂ, ವನಗಳೂ ಎಂಬಿವುಗಳಿಂದ ಕೂಡಿದ, ಸಾಗ....ತಾಂ-

---

ಆಮೇಲೆ ಮಹಾ ಶೂರನೂ, ನೀಲಮೇಘದಂತಹ ಮೈಬಣ್ಣವುಳ್ಳವನೂ, ಸೇನಾನಾಯಕನೂ ಆದ ಪ್ರಹಸ್ತನು ರಾವಣಾಸುರನನ್ನು ನೋಡಿ ಕೈಗಳನ್ನು ಜೋಡಿಸಿಕೊಂಡು, "ಓ ರಾಕ್ಷಸರಾಜಾ! ದೇವತೆಗಳಾಗಲಿ, ದಾನವರಾಗಲಿ, ಗಂಧರ್ವರಾಗಲಿ, ಪಿಶಾಚಗಳಾಗಲಿ, ಪಕ್ಷಿಪನ್ನಗರೇ ಆಗಲಿ ರಣರಂಗದಲ್ಲಿ ಯಾರೂ ನಿನ್ನನ್ನು ಎದುರಿಸಲಾರರು. ಎಂದಮೇಲೆ ಸಾಮಾನ್ಯರಾದ ಈ ವಾನರರು ನಿನ್ನನ್ನೆದುರಿಸಬಲ್ಲರೇ! ಎಂದಿಗೂ ಇಲ್ಲವು. ನಮ್ಮನ್ನು ಯಾರು ತಾನೆ ಎದುರಿಸಿಯಾರೆಂದು ಮತ್ತರಾಗಿ ಮೈಮರೆತಿದ್ದುದರಿಂದ ಆ ಹನುಮಂತನು ನಮ್ಮನ್ನು ಮೋಸಮಾಡಿ ಇಂತಹ ಮಹಾ ಕಾರ್ಯವನ್ನು ಮಾಡಿದನಾಗಲಿ, ನಾವು ಎಚ್ಚರದಿಂದಿದ್ದಲ್ಲಿ ಅವನು ಏನೇ ಮಾಡಿದ್ದರೂ ಪ್ರಾಣಗಳಿಂದ ಬೇರೇ ಇಲ್ಲಿಂದ ತಪ್ಪಿಸಿಕೊಂಡು ಹೋಗುತ್ತಿರಲಿಲ್ಲ. ಎಲೈ ಮಹಾ ರಾಜನೇ! ಈಗ ನೀನು ನನಗೆ ಅಪ್ಪಣೆಕೊಡು; ಚತುಸ್ಸಮುದ್ರಮುದ್ರಿತವಾದ ಈ ಭೂಮಂಡಲದಲ್ಲಿರುವ ಪರ್ವತಗಳಲ್ಲಿಯೂ, ಅಡವಿಗಳಲ್ಲಿಯೂ, ಮಹಾರಣ್ಯಗಳಲ್ಲಿಯೂ ಇರುವ ವಾನರರೆಲ್ಲರನ್ನೂ ಕೊಂದು ಭೂಲೋಕ

**ಕಾನನಾಂ । ಕರೋಮ್ಯವಾನರಾಂ ಭೂಮಿಮಾಜ್ಞಾಪಯತು ಮಾಂ ಭವಾನ್ ॥ ೪ ॥ ರಕ್ಷಾಂಚೈವ ವಿಧಾಸ್ಯಾಮಿ ವಾನರಾದ್ರಜನೀಚರ! । ನಾಗಮಿಷ್ಯತಿ ತೇ ದುಃಖಂ ಕಿಂಚಿದಾತ್ಮಾಪರಾಧಜಂ" ॥ ೫ ॥ ಅಬ್ರವೀತ್ತು ಸುಸಂಕ್ರುದ್ಧೋ ದುರ್ಮುಖೋ ನಾಮ ರಾಕ್ಷಸಃ । ಇದಂ ನಕ್ಷಮಣೀಯಂ ಹಿ ಸರ್ವೇಷಾಂ ನಃ ಪ್ರಧರ್ಷಣಂ ॥ ೬ ॥ ಅಯಂ ಪರಿಭವೋ ಭೂಯಃ ಪುರಸ್ಯಾಂತಃಪುರಸ್ಯಚ । ಶ್ರೀಮತೋ ರಾಕ್ಷಸೇಂದ್ರಸ್ಯ ವಾನರೇಣ ಪ್ರಧರ್ಷಣಂ ॥ ೭ ॥ ಅಸ್ಮಿನ್ಮುಹೂರ್ತೇ ಹತ್ವೈಕೋ ನಿವರ್ತಿಷ್ಯಾಮಿ ವಾನರಾನ್ । ಪ್ರವಿಷ್ಟಾನ್ ಸಾಗರಂ ಭೀಮಮಂಬರಂ ವಾ ರಸಾತಲಂ" ॥ ೮ ॥**

---

ಸಮುದ್ರವೇ ಅವಧಿಯಾಗುಳ್ಳ, ಸರ್ವಾಂ - ಸಮಸ್ತವಾದ, ಭೂಮಿಂ - ನೆಲವನ್ನು, ಅವಾನರಾಂ - ವಾನರರಿಲ್ಲದಂತೆ, ಕರೋಮಿ - ಮಾಡುವೆನು. ॥೪॥ ಹೇ ರಜನೀಚರ - ಎಲೈ ರಕ್ಕಸನೇ, ವಾನರಾತ್- ಕಪಿಗಳಿಂದ, ರಕ್ಷಾಂಚೈವ - ಸಂರಕ್ಷಣೆಯನ್ನೂ ಕೂಡ, ವಿಧಾಸ್ಯಾಮಿ - ಮಾಡುವೆನು, ತೇ - ನಿನಗೆ, ಆತ್ಮಾ....ಜಂ - ನಿನ್ನಪರಾಧದಿಂದ ಹುಟ್ಟಿರುವ, ದುಃಖಂ - ದುಃಖವು, ಕಿಂಚಿತ್ - ಸ್ವಲ್ಪವಾದರೂ, ನಾಗಮಿಷ್ಯತಿ - ಬರಲಾರದು. ॥ ೫ ॥ ಸುಸಂಕ್ರುದ್ಧಃ - ಕೋಪಿಷ್ಠನಾದ, ದುರ್ಮುಖೋನಾಮ - ದುರ್ಮುಖನೆಂದು ಪ್ರಖ್ಯಾತನಾದ, ರಾಕ್ಷಸಃ - ರಕ್ಕಸನು, ಅಬ್ರವೀತ್ - ನುಡಿದನು, ಹಿ - ಯಾವ ಕಾರಣದಿಂದ, ಸರ್ವೇಷಾಂ - ಸಮಸ್ತರಾದ, ನಃ - ನಮ್ಮ, ಪ್ರಧರ್ಷಣಂ - ತಿರಸ್ಕಾರವೆಂಬ, ಇದಂ- ಈ ಕಾರ್ಯವು, ಭೂಯಃ - ಮತ್ತೂ, ಪುರಸ್ಯ - ಪಟ್ಟಣದ, ಅಂತಪುರಸ್ಯಚ - ಅಂತಃಪುರದ, ಶ್ರೀಮತಃ - ಸಂಪದ್ಯುಕ್ತನಾದ, ರಾಕ್ಷಸೇಂದ್ರಸ್ಯ - ರಾಕ್ಷಸೇಂದ್ರನಾದ ನಿನಗೆ, (ಅಯಂಪರಿಭವಃ - ಈ ತಿರಸ್ಕಾರವೋ), ವಾನರೇಣ - ಕಪಿಯಿಂದ, ಪ್ರಧರ್ಷಣಂ - ತಿರಸ್ಕಾರವೂ, ನಕ್ಷಮಣೀಯಂ - ಕ್ಷಮಿಸತಕ್ಕದ್ದಲ್ಲವೋ. ॥ ೬-೭ ॥ ತಸ್ಮಾತ್ - ಆ ಕಾರಣದಿಂದ, ಅಸ್ಮಿನ್ಮುಹೂರ್ತೇ- ಈ ಮುಹೂರ್ತ ದಲ್ಲಿಯೇ, ಏಕಃ - ನಾನೊಬ್ಬನೇ, ಭೀಮಂ - ಭಯಂಕರವಾದ, ಸಾಗರಂ - ಕಡಲನ್ನಾಗಲಿ, ಅಂಬರಂವಾ-ಅಂತರಿಕ್ಷವನ್ನಾಗಲೀ, ರಸಾತಲಂವಾ-ಪಾತಾಳವನ್ನಾಗಲಿ, ಪ್ರವಿಷ್ಟಾನ್-ಹೊಕ್ಕಿರುವ, ವಾನರಾನ್ - ಕಪಿಗಳನ್ನು, ಹತ್ವಾ - ಕೊಂದು, ನಿವರ್ತಿಷ್ಯಾಮಿ - ಹಿಂತಿರುಗುವೆನು, ಇತಿ - ಇಂತೆಂದು,

---

ದಲ್ಲಿ ಎಲ್ಲಿಯೂ ವಾನರರೇ ಇಲ್ಲದಂತೆ ಮಾಡಿ ಬರುವೆನು. ಎಲೈ ರಾತ್ರಿಂಚರನೇ! ನಾನು, ನಾನೊಬ್ಬನೇ ಲಂಕಾನಗರವನ್ನು ರಕ್ಷಿಸುವೆನು. ನೀನು ಮಾಡಿದ ಸೀತಾಪಹರಣ ರೂಪ ವಾದ ಅಪರಾಧಕ್ಕೆ ಆ ವಾನರರೆಂದಿಗೂ ಪ್ರತಿಕ್ರಿಯೆ ಮಾಡಲಾರರು. ನಿನಗೆ ಆ ವಾನರರು ದುಃಖವನ್ನುಂಟುಮಾಡುವುದೆಂದರೇನು? ಅದು ಖಂಡಿತವಾಗಿಯೂ ಅಸಾಧ್ಯವೇ ಸರಿ" ಎಂದು ಹೇಳಿದನು. ॥ ೧-೫ ॥ ಆಮೇಲೆ ದುರ್ಮುಖನೆಂಬ ರಾಕ್ಷಸನು ಮಹಾ ಕೋಪೋ ದ್ದೀಪಿತನಾಗಿ ರಾವಣನನ್ನು ನೋಡಿ, "ಎಲೈ ರಾಕ್ಷಸೇಶ್ವರನೇ! ನಮಗುಂಟಾಗಿರುವ ಈ ಅವಮಾನವು ಅಕ್ಷಮ್ಯವಾದುದು. ಕಪಿಯಾದ ಆ ಹನುಮಂತನು ಇಲ್ಲಿಗೆ ಬಂದು ಲಂಕಾ ನಗರವನ್ನೂ, ಅಂತಃಪುರವನ್ನೂ ಹಾಳುಮಾಡಿ, ಶ್ರೀಮಂತನೂ, ರಾಕ್ಷಸ ಪ್ರಭುವೂ ಆದ ನಿನಗೆ ಮಾಡಿದ ಅವಮಾನವು ಎಷ್ಟುಮಾತ್ರಕ್ಕೂ ಕ್ಷಮಿಸಲು ಯೋಗ್ಯವಾದುದಲ್ಲವು. ಆದುದ ರಿಂದ ನಾನೊಬ್ಬನೇ ಈ ಕ್ಷಣ ಇಲ್ಲಿಂದ ಹೊರಟು ವಾನರರೆಲ್ಲರನ್ನೂ ಸಂಹರಿಸಿ ಬರುವೆನು. ಅವರು ಭಯಂಕರವಾದ ಸಮುದ್ರದಲ್ಲಿಯೇ ಅಡಗಿರಲಿ, ಆಕಾಶಕ್ಕೆ ಹಾರಿ ಕುಳಿತಿರಲಿ, ಪಾತಾಳವನ್ನೇ ಸೇರಿರಲಿ, ಏನೇ ಆಗಲಿ ಅವರೆಲ್ಲರನ್ನೂ ಸಂಹರಿಸಿಯೇ ಬರುವೆನು" ಎಂದು

ತತೋಽಬ್ರವೀತ್ಸುಸಂಕ್ರುದ್ಧೋ ವಜ್ರದಂಷ್ಟ್ರೋ ಮಹಾಬಲಃ । ಪ್ರಗೃಹ್ಯ ಪರಿಘಂ ಘೋರಂ ಮಾಂಸಶೋಣಿತರೂಷಿತಂ ॥ ೯ ॥ “ ಕಿಂ ವೋ ಹನುಮತಾ ಕಾರ್ಯಂ ಕೃಪಣೇನ ತಪಸ್ವಿನಾ । ರಾಮೇ ತಿಷ್ಠತಿ ದುರ್ಧರ್ಷೇ ಸಸುಗ್ರೀವೇ ಸಲಕ್ಷ್ಮಣೇ ॥೧೦॥ ‡ ಅದ್ಯ ರಾಮಂ ಸಸುಗ್ರೀವಂ ಪರಿಘೇಣ ಸಲಕ್ಷ್ಮಣಂ । ಆಗಮಿಷ್ಯಾಮಿ ಹತ್ವೈಕೋ ವಿಕ್ಷೋಭ್ಯ ಹರಿವಾಹಿನೀಂ ॥ ೧೧ ॥ ಇದಂ ಮಮಾಪರಂ ವಾಕ್ಯಂ ಶೃಣು ರಾಜನ್ಯದೀಚ್ಛಸಿ । ಉಪಾಯಕುಶಲೋಹ್ಯೇವ ಜಯೇಚ್ಛತ್ರೂನತಂದ್ರಿತಃ ॥ ೧೨ ॥ ಕಾಮರೂಪ

---

ಅಬ್ರವೀತ್-ನುಡಿದನು. ॥೮॥ ತತಃ - ಬಳಿಕ, ಮಹಾಬಲಃ - ಮಹಾ ಬಲನಾದ, ವಜ್ರಧಂಷ್ಟ್ರಃ - ವಜ್ರದಂಷ್ಟ್ರನೆಂಬ ರಕ್ಕಸನು, ಸುಸಂಕೃದ್ಧಃ - ಬಹಳವಾಗಿ ಕೋಪಗೊಂಡು, ಘೋರಂ - ಭಯಂಕರವಾದ, ಮಾಂಸ....ಣಂ - ಮಾಂಸದಿಂದಲೂ, ರಕ್ತದಿಂದಲೂ ವ್ಯಾಪ್ತವಾದ, ಪರಿಘಂ - ಕಬ್ಬಿಣದ ಗದೆಯನ್ನು, ಪ್ರಗೃಹ್ಯ - ಹಿಡಿದು, ಅಬ್ರವೀತ್ - ನುಡಿದನು. ॥೯॥ ದುರ್ಧರ್ಷೇ - ತಿರಸ್ಕರಿಸಲಸಾಧ್ಯನಾದ, ಸಸುಗ್ರೀವೇ - ಸುಗ್ರೀವನಿಂದೊಡಗೂಡಿದ, ಸಲಕ್ಷ್ಮಣೇ - ಲಕ್ಷ್ಮಣನಿಂದೊಡಗೂಡಿದ, ರಾಮೇ - ಶ್ರೀರಾಮನು, ತಿಷ್ಠತಿ - ಇರಲು, ವಃ - ನಿಮಗೆ, ಕೃಪಣೇನ - ದೀನನಾದ, ತಪಸ್ವಿನಾ-ದುಃಖಿಸತಕ್ಕವನಾದ, ಹನುಮತಾ ಆಂಜನೇಯನಿಂದ, ಕಿಂಕಾರ್ಯಂ - ಏನು ಪ್ರಯೋಜನವು. ॥೧೦॥ ಅದ್ಯ - ಈಗ, ಸಸುಗ್ರೀವಂ - ಸುಗ್ರೀವಸಹಿತನಾದ, ಸಲಕ್ಷ್ಮಣಂ - ಲಕ್ಷ್ಮಣನಿಂದೊಡಗೂಡಿದ, ರಾಮಂ - ಶ್ರೀರಾಮನನ್ನು, ಪರಿಘೇಣ - ಪರಿಘಾಯುಧದಿಂದ, ಹತ್ವಾ - ಕೊಂದು, ಏಕಃ - ಒಬ್ಬನೇ, ಹರಿವಾಹಿನೀಂ - ಕಪಿಸೈನ್ಯವನ್ನು, ವಿಕ್ಷೋಭ್ಯ - ಕ್ಷೋಭೆಗೊಳಿಸಿ, ಆಗಮಿಷ್ಯಾಮಿ - ಬರುವೆನು. ॥೧೧॥ ಹೇ ರಾಜನ್ - ಎಲೈ ರಾಜನೇ ! ಇಚ್ಛಸಿಯದಿ - ಅಪೇಕ್ಷಿಸುವೆಯಾದರೆ, ಮಮ - ನನ್ನ, ಅಪರಂ - ಮತ್ತೊಂದಾದ, ಇದಂವಾಕ್ಯಂ ಈ ಮಾತನ್ನು, ಶೃಣು - ಕೇಳು, ಉಪಾ....ವ - ಉಪಾಯದಲ್ಲಿ ಚಾತುರ್ಯವುಳ್ಳ ಪುರುಷನೇ, ಅತಂದ್ರಿತಃ - ಜಾಗರೂಕನಾಗಿ, ಶತ್ರೂನ್ - ಶತ್ರುಗಳನ್ನು, ಜಯೇತ್ - ಜಯಿಸುವನಷ್ಟೆ. ॥೧೨॥ ಹೇ ರಾಕ್ಷಸಾಧಿಪ - ಎಲೈ ಅರಸೇ, ಕಾಮ....ರಾಃ - ಬೇಕಾದ

---

ಹೇಳಿದನು. ॥ ೭–೮ ॥ ಆ ಬಳಿಕ ಕೋಪೋದ್ವೇಗದಿಂದ ಮೈಮರೆತು ಮಾಂಸಶೋಣಿತರೂಷಿತವಾದ ಪರಿಘಾಯುಧವನ್ನು ತಿರುಗಿಸುತ್ತ ಎದ್ದು ವಜ್ರದಂಷ್ಟ್ರನು, “ ಮಹಾಪ್ರಭು ! ಲಕ್ಷ್ಮಣ ಸುಗ್ರೀವಸಮೇತನಾಗಿ ಮಹಾ ದುರ್ಧರ್ಷನಾದ ರಾಮನಿರುವಾಗ ಬಹಳ ಕುತ್ಸಿತನೂ, ಅಪರಾಧ ಮಾಡಿದ ಹೆಂಗುಸಿಗೆ ಸಮಾನನಾದವನೂ ಆದ ಆ ಹನುಮಂತನಿಂದ ನಮಗಾಗಬೇಕಾದುದೇನು ? ಅವನನ್ನು ಕೊಂದುದರಿಂದ ಏನು ತಾನೆ ಆಗುವುದು ? ಆದ ಕಾರಣ ಈಗ ನಾನೊಬ್ಬನೇ ಇಲ್ಲಿಂದ ಹೊರಟು ಆ ರಾಮಲಕ್ಷ್ಮಣ ಸುಗ್ರೀವರನ್ನು ಇದೋ ಈ ಪರಿಘದಿಂದ ಕೊಂದು, ಆ ವಾನರಸೇನೆಯೆಲ್ಲವನ್ನೂ ನಾಶಮಾಡಿ ಬರುವೆನು. ಎಲೈ ರಾಕ್ಷಸೇಶ್ವರನೇ ! ನಾನು ಇನ್ನೊಂದು ವಿಶೇಷವನ್ನು ಹೇಳುವೆನು ಕೇಳು. ಅದು ನಿನಗೆ ಹಿತವಾದುದು. ಶತ್ರುಗಳಾದವರನ್ನು ಉಪಾಯದಿಂದ ಚತುರನಾಗಿರುವವನೇ ಸಂಹರಿಸಲು ಶಕ್ತನಾದಾನು. ॥೯–೧೨॥ ಆದುದರಿಂದ ಕಾಮರೂಪರೂ, ಮಹಾ ಬಲಪರಾಕ್ರಮಶಾಲಿಗಳೂ,

---

‡ ರಾಮಲಕ್ಷ್ಮಣರನ್ನು ಬಿಟ್ಟು ಸುಗ್ರೀವನನ್ನು ಕೊಂದು ಬರುವೆನೆಂಬುದು ವಾಸ್ತವಾರ್ಥವೆಂದು ಮಹೇಶ್ವರತೀರ್ಥರ ಅಭಿಪ್ರಾಯ.

ಧರಾಶ್ಶೂರಾಃ ಸುಭೀಮಾ ಭೀಮದರ್ಶನಾಃ। ರಾಕ್ಷಸಾ ವಾ ಸಹಸ್ರಾಣಿ ರಾಕ್ಷಸಾಧಿಪ! ನಿಶ್ಚಿತಾಃ ॥ ೧೩ ॥ ಕಾಕುತ್ಸ್ಥಮುಪಸಂಗಮ್ಯ ಬಿಭ್ರತೋ ಮಾನುಷಂ ವಪುಃ । ಸರ್ವೇಹ್ಯಸಂಭ್ರಮಾ ಭೂತ್ವಾ ಬ್ರುವಂತು ರಘುಸತ್ತಮಂ । ಪ್ರೇಷಿತಾ ಭರತೇನಸ್ಮ ಭ್ರಾತ್ರಾ ತವ ಯವೀಯಸಾ । (ತದಾಗಮನಮುದ್ದಿಶ್ಯ ಕೃತ್ಯಮಾತ್ಯಯಿಕಂ ತ್ವಿತಿ) । ಸಹಸೇನಾಂ ಸಮುತ್ಥಾಪ್ಯ ಕ್ಷಿಪ್ರಮೇವೋಪಯಾಸ್ಯತಿ ॥ ೧೪-೧೫ ॥ ತತೋ ವಯಮಿತಸ್ತೂರ್ಣಂ ಶೂಲಶಕ್ತಿಗದಾಧರಾಃ । ಚಾಪಬಾಣಾಸಿಹಸ್ತಾಶ್ಚ ತ್ವರಿತಾಸ್ತತ್ರ ಯಾಮಹೇ ॥ ೧೬ ॥ ಆಕಾಶೇ ಗಣಶಸ್ಸ್ಥಿತ್ವಾ ಹತ್ವಾ ತಾಂ ಹರಿವಾಹಿನೀಂ । ಅಶ್ಮಶಸ್ತ್ರಮಹಾವೃಷ್ಟ್ಯಾ ಪ್ರಾಪಯಾಮ ಯಮಕ್ಷಯಂ ॥ ೧೭ ॥ ಏವಂ ಚೇದುಪಸರ್ಪೇತಾಮನಯಂ ರಾಮಲಕ್ಷ್ಮಣೌ । ಅವಶ್ಯಮುಪನೀತೇನ ಜಹತಾಮೇವ

ರೂಪವನ್ನು ಧರಿಸಿರುವ, ಶೂರಾಃ - ಶೌರ್ಯವಂತರಾದ, ಸುಭೀಮಾಃ - ಬಹಳ ಭಯಂಕರರಾದ, ಭೀಮದರ್ಶನಾಃ - ಭಯಂಕರವಾದ ನೋಟವುಳ್ಳ, ನಿಶ್ಚಿತಾಃ - ನಂಬಿಕೆಯುಳ್ಳ, ಸಹಸ್ರಾಣಿ - ಸಾವಿರಸಂಖ್ಯೆಯುಳ್ಳ, ರಾಕ್ಷಸಾವಾ - ರಕ್ಕಸರಾದರೂ, ಮಾನುಷಂ - ಮನುಷ್ಯಸಂಬಂಧವಾದ, ವಪುಃ - ಶರೀರವನ್ನು, ಬಿಭ್ರತಃ - ಧರಿಸುವವರಾಗಿ, ಕಾಕುತ್ಸ್ಥಂ - ಕಕುತ್ಸ್ಥವಂಶೋತ್ಪನ್ನನಾದ ಶ್ರೀರಾಮನನ್ನು ಕುರಿತು, ಉಪಸಂಗಮ್ಯ - ಹೋಗಿ, ಸರ್ವೇ - ಸಮಸ್ತರೂ, ಅಸಂಭ್ರಮಾಃ - ತ್ವರೆಯಿಲ್ಲದವರು, ಭೂತ್ವಾ - ಆಗಿ, ರಘುಸತ್ತಮಂ - ಶ್ರೀರಾಮನನ್ನು ಕುರಿತು, ಬ್ರುವಂತುಹಿ - ಹೇಳಲಿ, ತವ - ನಿನ್ನ, ಯವೀಯಸಾಭ್ರಾತ್ರಾ - ಚಿಕ್ಕ ತಮ್ಮನಾದ, ಭರತೇನ - ಭರತನಿಂದ, ಪ್ರೇಷಿತಾಃ - ಕಳುಹಿಸಲ್ಪಟ್ಟವರು, ಸ್ಮ - ಆಗಿದ್ದೇವೆ. ॥ ೧೩-೧೪ ॥ ಸಃ - ಆ ಭರತನು, ಸೇನಾಂ - ಸೈನ್ಯವನ್ನು, ಸಮುತ್ಥಾಪ್ಯ - ತೆಗೆದುಕೊಂಡು, ಕ್ಷಿಪ್ರಮೇವ - ಜಾಗ್ರತೆಯಾಗಿಯೇ, ಉಪಯಾಸ್ಯತಿ - ಬರುವನು, ಇತಿಬ್ರೂಯುಃ - ಎಂದು ಹೇಳಲಿ. ॥ ೧೫ ॥ ತತಃ - ಬಳಿಕ, ವಯಂ - ನಾವು, ಶೂಲ....ರಾಃ - ತ್ರಿಶೂಲಗಳನ್ನೂ, ಶಕ್ತ್ಯಾಯುಧಗಳನ್ನೂ, ಗದಾಯುಧಗಳನ್ನೂ ಧರಿಸಿ, ಚಾಪ....ಶ್ಚ - ಧನುಸ್ಸು, ಬಾಣಗಳು, ಕತ್ತಿ ಈ ಆಯುಧಗಳನ್ನು ಹಿಡಿದು, ತ್ವರಿತಾಃ - ಜಾಗರೂಕರಾಗಿ, ತೂರ್ಣಂ - ಜಾಗರೂಕರಾಗಿ, ತತ್ರ - ಅಲ್ಲಿ, ಯಾಮಹೇ - ಹೋಗೋಣ. ॥ ೧೬ ॥ ಆಕಾಶೇ - ಆಕಾಶದಲ್ಲಿ, ಗಣಶಃ - ಗುಂಪಾಗಿ, ಸ್ಥಿತ್ವಾ - ನಿಂತು, ತಾಂಹರಿವಾಹಿನೀಂ - ಆ ಕಪಿಸೈನ್ಯವನ್ನು, ಅಶ್ಮ.....ಷ್ಟ್ಯಾ - ಪಾಷಾಣಗಳ, ಶಸ್ತ್ರಗಳ ಮಹಾ ವರ್ಷದಿಂದ, ಹತ್ವಾ - ಕೊಂದು, ಯಮಕ್ಷಯಂ - ಯಮನ ಮನೆಯನ್ನು ಕುರಿತು, ಪ್ರಾಪಯಾಮ-ಹೊಂದಿಸೋಣ. ॥೧೭॥ ಏವಂ-ಈ ಪ್ರಕಾರವಾಗಿ, ರಾಮಲಕ್ಷ್ಮಣೌ - ರಾಮಲಕ್ಷ್ಮಣರು, ಅನಯಂ - ನಮ್ಮಿಂದ ಮಾಡಲ್ಪಟ್ಟ ವಂಚನೆಯ ತಿಳುವಳಿಕೆಯಿಲ್ಲದ್ದರಿಂದ ನಂಬಿಕೆ

ಭಯಂಕರಾಕಾರರೂ ಆದ ರಾಕ್ಷಸರು ಮನುಷ್ಯಶರೀರಗಳನ್ನು ಧರಿಸಿ ಸಾವಿರಾರುಗಳಾಗಿ ಆ ರಾಮನ ಬಳಿಗೈದಿ ಆತನೊಡನೆ, "ಎಲೈ ರಾಮನೇ! ನಿನ್ನ ತಮ್ಮನಾದ ಭರತನು ನಮ್ಮನ್ನು ನಿನ್ನ ಬಳಿಗೆ ಕಳುಹಿಸಿದನು. ಆತನೂ ಸೇನೆಗಳೊಡನೆ ಹಿಂದೆಯೇ ಬರುತ್ತಿರುವನು" ಎಂದು ಹೇಳಲಿ. ಅಷ್ಟರಲ್ಲಿಯೇ ನಾವು ಬಹು ಶೀಘ್ರವಾದ ಶೂಲಶಕ್ತಿ ಗದೆಗಳನ್ನೂ, ಧನುರ್ಬಾಣಗಳನ್ನೂ ಧರಿಸಿ ಇಲ್ಲಿಂದ ಹೋಗಿ ಅಂತರಿಕ್ಷದಲ್ಲಿಯೇ ಗುಂಪುಗುಂಪಾಗಿ ಸೇರಿ ಆ ವಾನರ ಸೇನೆಯಮೇಲೆ ಶಿಲಾವೃಷ್ಟಿಯನ್ನೂ, ಶಸ್ತ್ರವೃಷ್ಟಿಯನ್ನೂ ಸುರಿಸಿ ಅವರೆಲ್ಲರನ್ನೂ ಯಮಲೋಕಕ್ಕೆ ಕಳುಹಿಸಿಬಿಡುವೆವು. ಆಗ ರಾಮಲಕ್ಷ್ಮಣರು ಸಂಕಟಕ್ಕೆ ಸಿಕ್ಕಿ ಪ್ರಾಣ

ಜೀವಿತಂ ||೧೮|| ಕೌಂಭಕರ್ಣಿಸ್ತತೋ ವೀರೋ ನಿಕುಂಭೋನಾಮ ವೀರ್ಯವಾನ್ | ಅಬ್ರವೀತ್ಪರಮಕ್ರುದ್ಧೋ ರಾವಣಂ ಲೋಕರಾವಣಂ || ೧೯ || "ಸರ್ವೇ ಭವಂತಸ್ತಿಷ್ಠಂತು ಮಹಾರಾಜೇನ ಸಂಗತಾಃ | ಅಹಮೇಕೋ ಹನಿಷ್ಯಾಮಿ ರಾಘವಂ ಸಹಲಕ್ಷ್ಮಣಂ || ೨೦ || ಸುಗ್ರೀವಂಚ ಹನೂಮಂತಂ ಸರ್ವಾನೇವಚ ವಾನರಾನ್ | ತತೋ ವಜ್ರಹನುರ್ನಾಮ ರಾಕ್ಷಸಃ ಪರ್ವತೋಪಮಃ || ೨೧ || ಕ್ರುದ್ಧಃ ಪರಿಲಿಹನ್ವಕ್ತ್ರಂ ಜಿಹ್ವಯಾ ವಾಕ್ಯಮಬ್ರವೀತ್ | "ಸ್ವೈರಂ ಕುರ್ವಂತು ಕಾರ್ಯಾಣಿ ಭವಂತೋ

---

ಯನ್ನು, ಉಪಸರ್ಪೇತ್ರಾಂಚೇತ್ - ಹೊಂದಿದವರೇ ಆದರೆ, ಅವಶ್ಯಂ - ನಿಶ್ಚಯವಾಗಿ, ಅಪನಿತೇನ-ವಂಚನೆಯಿಂದಲೇ, ಜೀವಿತಂ - ಪ್ರಾಣವನ್ನು, ಜಹತಾಮೇವ - ಬಿಟ್ಟುಬಿಡುವರಷ್ಟೆ. ||೧೮|| ತತಃ - ಬಳಿಕ, ವೀರಃ - ಶೂರನಾದ, ಕೌಂಭಕರ್ಣಿಃ - ಕುಂಭಕರ್ಣನ ಮಗನಾದ, ನಿಕುಂಭೋನಾಮ - ನಿಕುಂಭನೆಂದು ಪ್ರಸಿದ್ಧನಾದ, ವೀರ್ಯವಾನ್ - ಸಾಮರ್ಥ್ಯವಂತನಾದ ರಕ್ಕಸನು, ಪರಮಕ್ರುದ್ಧಃ - ಬಹಳವಾಗಿ ಕೋಪಗೊಂಡು, ಲೋಕರಾವಣಂ-ಲೋಕಕಂಟಕನಾದ, ರಾವಣಂ-ರಾವಣನನ್ನು ಕುರಿತು, ಅಬ್ರವೀತ್ - ನುಡಿದನು. ||೧೯|| ಸರ್ವೇ - ಸಮಸ್ತರಾದ, ಭವಂತಃ - ನೀವೆಲ್ಲರೂ, ಮಹಾರಾಜೇನ-ರಾಕ್ಷಸರಾಜನಿಂದ, ಸಂಗತಾಃ - ಸೇರಿದವರಾಗಿ, ತಿಷ್ಠಂತು - ಇರಿ, ಅಹಮೇಕಃ - ನಾನೊಬ್ಬನೇ, ಸಹಲಕ್ಷ್ಮಣಂ - ಲಕ್ಷ್ಮಣನಿಂದೊಡಗೂಡಿದ, ರಾಘವಂ - ಶ್ರೀರಾಮನನ್ನೂ, ಸುಗ್ರೀವಂಚ - ಸುಗ್ರೀವನನ್ನೂ, ಹನೂಮಂತಂಚ - ಹನುಮಂತನನ್ನೂ, ಸರ್ವಾನೇವ - ಸಮಸ್ತರಾದ, ವಾನರಾನ್ - ಕಪಿಗಳನ್ನೂ, ಹನಿಷ್ಯಾಮಿ - ಹೊಡೆಯುವೆನು. || ೨೦ || ತತಃ - ಬಳಿಕ, ಪರ್ವತೋಪಮಃ - ಬೆಟ್ಟಕ್ಕೆ ಸಮನಾದ, ವಜ್ರಹನುರ್ನಾಮ - ವಜ್ರಹನುವೆಂದು ಪ್ರಖ್ಯಾತನಾದ, ರಾಕ್ಷಸಃ - ರಕ್ಕಸನು, ಕ್ರುದ್ಧಃ - ಕುಪಿತನಾಗಿ, ಜಿಹ್ವಯಾ - ನಾಲಿಗೆಯಿಂದ, ವಕ್ತ್ರಂ - ಮುಖವನ್ನು, ಪರಿಲಿಹನ್ - ಸವರಿಕೊಳ್ಳುತ್ತ, ವಾಕ್ಯಂ - ಮಾತನ್ನು, ಅಬ್ರವೀತ್ - ನುಡಿದನು, ಭವಂತಃ - ನೀವು, ವಿಗತಜ್ವರಾಃ - ಸಂತಾಪವಿಲ್ಲದವರಾಗಿ, ಸ್ವೈರಂ - ಸ್ವೇಚ್ಛೆಯಾಗಿ, ಕಾರ್ಯಾಣಿ - ಕಾರ್ಯಗಳನ್ನು, ಕುರ್ವಂತು - ಮಾಡಿರಿ, ಅಹಮೇಕಃ - ನಾನೊಬ್ಬನೇ, ಸರ್ವಾನ್ - ಸಮಸ್ತರಾದ, ತಾನ್‌ಹರಿಯೂಥಪಾನ್ - ಆ ವಾನರಯೂಥಪತಿಗಳನ್ನು, ಭಕ್ಷಯಿಷ್ಯಾಮಿ - ತಿನ್ನುವೆನು, ಸ್ವಸ್ಥಾಃ - ಸಮಾಧಾನಚಿತ್ತರಾಗಿ, ನಿಶ್ಚಿಂತಾಃ - ಚಿಂತೆಯಿಲ್ಲದವರಾಗಿ, ಮಧುವಾರುಣೀಂ - ಮಧುರೂಪವಾದ ಮದ್ಯವನ್ನು, ಪಿಬಂತಃ - ಕುಡಿಯುತ್ತ, ಕ್ರೀಡಂತು - ವಿಹರಿಸಿರಿ, ಅಹಮೇಕಃ - ನಾನೊಬ್ಬನೇ, ಸಹಲಕ್ಷ್ಮಣಂ - ಲಕ್ಷ್ಮಣನಿಂದೊಡ

---

ಗಳನ್ನು ತೊರೆಯುವರು" ಎಂದು ಹೇಳಿದನು. || ೧೩–೧೮ || ಆಗ ಮಹಾ ಬಲಪರಾಕ್ರಮಶಾಲಿಯೂ, ಯುದ್ಧವೀರನೂ, ಕುಂಭಕರ್ಣನ ಮಗನೂ ಆದ ನಿಕುಂಭನು ಮಹಾ ಕುಪಿತನಾಗಿ, "ಎಲೈ ತಾತನೇ! ಇವರೆಲ್ಲರೂ ನಿನ್ನೊಡನೆ ಇಲ್ಲಿಯೇ ಇರಲಿ. ನಾನೊಬ್ಬನೇ ಇಲ್ಲಿಂದ ಹೋಗಿ ರಾಮಲಕ್ಷ್ಮಣ ಸುಗ್ರೀವರನ್ನೂ, ಆಂಜನೇಯನನ್ನೂ ಉಳಿದ ಸಮಸ್ತ ವಾನರರನ್ನೂ ಕೊಂದು ಬರುವೆನು" ಎಂದು ಹೇಳಿದನು. ಆಮೇಲೆ ಪರ್ವತೋಪಮನಾದ ವಜ್ರಹನುವೆಂಬ ರಾಕ್ಷಸನು ಕೋಪಗೊಂಡು ನಾಲಿಗೆಯಿಂದ ತುಟಿಗಳನ್ನು ಸವರಿಕೊಳ್ಳುತ್ತಾ, "ನೀವು ನಿರ್ಭಯವಾಗಿ ನಿಮ್ಮ ನಿಮ್ಮ ಕಾರ್ಯಗಳನ್ನು ಮಾಡಿಕೊಳ್ಳುತ್ತಿರಿ. ನಾನೊಬ್ಬನೇ ಅಲ್ಲಿಗೆ ಹೋಗಿ ವಾನರರೆಲ್ಲರನ್ನೂ ಭಕ್ಷಿಸಿ ಬರುವೆನು. ನೀವೆಲ್ಲರೂ ಯಾವ ಯೋಚನೆಯೂ ಇಲ್ಲದೆ ಇಲ್ಲಿಯೇ ಇದ್ದುಕೊಂಡು ಸುಖವಾಗಿ ಮದ್ಯವನ್ನು ಕುಡಿಯಿರಿ;

ವಿಗತಜ್ವರಾಃ || ೨೨ || ಏಕೋಽಹಂ ಭಕ್ಷಯಿಷ್ಯಾಮಿ ತಾನ್ ಸರ್ವಾನ್ ಹರಿಯೂಥಪಾನ್ । ಸ್ವಸ್ಥಾಃ ಕ್ರೀಡಂತು ನಿಶ್ಚಿಂತಾಃ ಪಿಬಂತೋ ಮಧು ವಾರುಣೀಂ || ೨೩ ||

ಅಹಮೇಕೋ ವಧಿಷ್ಯಾಮಿ ಸುಗ್ರೀವಂ ಸಹಲಕ್ಷ್ಮಣಂ ।
ಅಂಗದಂಚ ಹನೂಮಂತಂ ರಾಮಂಚ ರಣಕುಂಜರಂ '' || ೨೪ ||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಅಷ್ಟಮಸ್ಸರ್ಗಃ.



ಗೂಡಿದ, ಸುಗ್ರೀವಂ - ಸುಗ್ರೀವನನ್ನೂ, ಅಂಗದಂಚ - ಅಂಗದನನ್ನೂ, ಹನುಮಂತಂಚ - ಹನುಮಂತನನ್ನೂ, ರಣಕುಂಜರಂ - ರಣರಂಗದಲ್ಲಿ ಮತ್ತೇಭಕ್ಕೆ ಸಮಾನನಾದ, ರಾಮಂಚ - ಶ್ರೀರಾಮನನ್ನೂ, ವಧಿಷ್ಯಾಮಿ - ಸಂಹರಿಸುವೆನು. || ೨೧-೨೪ ||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಅಷ್ಟಮಸ್ಸರ್ಗಃ.



ಕ್ರೀಡಿಸಿರಿ. ನಾನೊಬ್ಬನೇ ಲಕ್ಷ್ಮಣ, ಸುಗ್ರೀವ, ಅಂಗದ, ಹನುಮಂತನೇ ಮೊದಲಾದವರನ್ನೂ, ರಣಪಂಡಿತನಾದ ಆ ರಾಮನನ್ನೂ ಕೊಂದು ಬರುವೆನು '' ಎಂದು ಹೇಳಿದನು. || ೧೯–೨೪ ||

ಇಂತಿದು ಪ್ರಹಸ್ತಾದಿ ರಾಕ್ಷಸಕಥಿತ ಮಂತ್ರಾಲೋಚನ ವೃತ್ತಾಂತವೆಂಬ
ಎಂಟನೆಯ ಸರ್ಗವು ಸಮಾಪ್ತವಾದುದು.



# ಯುದ್ಧಕಾಂಡೇ ನವಮಸ್ಸರ್ಗಃ

‡ ತತೋ ನಿಕುಂಭೋ ರಭಸಸ್ಸೂರ್ಯಶತ್ರುರ್ಮಹಾಬಲಃ । ಸುಪ್ತಘ್ನೋ ಯಜ್ಞಹಾ ರಕ್ಷೋ ಮಹಾಪಾರ್ಶ್ವೋ ಮಹೋದರಃ ॥೧॥ ಅಗ್ನಿಕೇತುಶ್ಚ ದುರ್ಧರ್ಷೋ ರಶ್ಮಿಕೇತುಶ್ಚ ರಾಕ್ಷಸಃ । ಇಂದ್ರಜಿಚ್ಚ ಮಹಾತೇಜಾ ಬಲವಾನ್ ರಾವಣಾತ್ಮಜಃ ॥೨॥ ಪ್ರಹಸ್ತೋಽಥ ವಿರೂಪಾಕ್ಷೋ ವಜ್ರದಂಷ್ಟ್ರೋ ಮಹಾಬಲಃ । ಧೂಮ್ರಾಕ್ಷಶ್ಚಾತಿಕಾಯಶ್ಚ ದುರ್ಮುಖಶ್ಚೈವ ರಾಕ್ಷಸಃ ॥ ೩ ॥ ಪರಿಘಾನ್ ಪಟ್ಟಿಶಾನ್ ಪ್ರಾಸಾನ್ ಶಕ್ತಿಶೂಲಪರಶ್ವಧಾನ್ । ಚಾಪಾನಿಚ ಸಬಾಣಾನಿ ಖಡ್ಗಾಂಶ್ಚ ವಿಪುಲಾನ್ ಶಿತಾನ್ ॥ ೪ ॥ ಪ್ರಗೃಹ್ಯ ಪರಮಕ್ರುದ್ಧಾಃ ಸಮುತ್ಪತ್ಯಚ ರಾಕ್ಷಸಾಃ । ಅಬ್ರುವನ್

---

ತತಃ - ಅನಂತರದಲ್ಲಿ, ನಿಕುಂಭಃ - ನಿಕುಂಭನು, ರಭಸಃ - ರಭಸನು, ಮಹಾಬಲಃ - ಬಹು ಬಲಾಢ್ಯನಾದ, ಸೂರ್ಯಶತ್ರುಃ - ಸೂರ್ಯಶತ್ರುವು, ಸುಪ್ತಘ್ನಃ - ಸುಪ್ತಘ್ನನು, ಯಜ್ಞಹಾ - ಯಜ್ಞಹನು, ರಕ್ಷಃ - ರಾಕ್ಷಸನಾದ, ಮಹಾಪಾರ್ಶ್ವಃ - ಮಹಾಪಾರ್ಶ್ವನು, ಮಹೋದರಃ - ಮಹೋದರನು, ದುರ್ಧರ್ಷಃ - ತಿರಸ್ಕರಿಸಲಸಾಧ್ಯನಾದ, ಅಗ್ನಿಕೇತುಃ - ಅಗ್ನಿಕೇತುವು, ರಾಕ್ಷಸಃ - ರಾಕ್ಷಸನಾದ, ರಶ್ಮಿಕೇತುಶ್ಚ - ರಶ್ಮಿಕೇತುವೂ, ಬಲವಾನ್ - ಬಲಿಷ್ಠನಾದ, ರಾವಣಾತ್ಮಜಃ - ರಾವಣನ ಮಗನಾದ, ಮಹಾತೇಜಾಃ - ಬಹು ತೇಜೋವಂತನಾದ, ಇಂದ್ರಜಿಚ್ಚ-ಇಂದ್ರಜಿತ್ತುವೂ, ಪ್ರಹಸ್ತಃ-ಪ್ರಹಸ್ತನು, ಅಥ - ಬಳಿಕ, ವಿರೂಪಾಕ್ಷಃ - ವಿರೂಪಾಕ್ಷನೂ, ಮಹಾಬಲಃ - ಬಹು ಬಲಿಷ್ಠನಾದ, ವಜ್ರದಂಷ್ಟ್ರಃ - ವಜ್ರದಂಷ್ಟ್ರನೂ, ದೂಮ್ರಾಕ್ಷಶ್ಚ - ಧೂಮ್ರಾಕ್ಷನೂ, ಅತಿಕಾಯಶ್ಚ - ಅತಿಕಾಯನೂ, ರಾಕ್ಷಸಃ - ರಾಕ್ಷಸನಾದ, ದುರ್ಮುಖಶ್ಚ - ದುರ್ಮುಖನೂ, ಪರಿಘಾನ್ - ಪರಿಘಾಯುಧಗಳನ್ನೂ, ಪಟ್ಟಿಶಾನ್ - ದೊಡ್ಡ ಕತ್ತಿಗಳನ್ನೂ, ಪ್ರಾಸಾನ್ - ಚಿಕ್ಕ ಕತ್ತಿಗಳನ್ನೂ, ಶಕ್ತಿ....ಧಾನ್ - ಶಕ್ತಿ, ಶೂಲ, ಪರಶುಗಳೆಂಬ ಆಯುಧಗಳನ್ನೂ, ಸಬಾಣಾನಿ - ಬಾಣಗಳಿಂದೊಡಗೂಡಿದ, ಚಾಪಾನಿಚ - ಬಿಲ್ಲುಗಳನ್ನೂ, ವಿಪುಲಾನ್ - ವಿಸ್ತಾರವಾದ, ಶಿತಾನ್ - ಹದವಾಗಿರುವ, ಖಡ್ಗಾಂಶ್ಚ - ಕತ್ತಿಗಳನ್ನೂ, ಪ್ರಗೃಹ್ಯ - ಹಿಡಿದು, ಪರಮಕ್ರುದ್ಧಾಃ - ಬಹು ಕೋಪನರಾಗಿ, ಸರ್ವೇರಾಕ್ಷಸಾಃ-ಸಮಸ್ತರಾಕ್ಷಸರೂ, ಸಮುತ್ಪತ್ಯ - ಹಾರಿ, ತೇಜಸಾ - ತೇಜಸ್ಸಿನಿಂದ, ಪ್ರದೀಪ್ತಾ ಇವ - ಪ್ರಜ್ವಲಿಸುವಂತಿರುವವರಾಗಿ,

---

ಆಮೇಲೆ ನಿಕುಂಭ, ರಭಸ, ಮಹಾ ಬಲಾಢ್ಯನಾದ ಸೂರ್ಯಶತ್ರು, ಸುಪ್ತಘ್ನ, ಯಜ್ಞಹ, ಮಹಾಪಾರ್ಶ್ವ, ಮಹೋದರ, ಅಜೇಯನಾದ ಅಗ್ನಿಕೇತು, ರಶ್ಮಿಕೇತು, ಮಹಾ ಪರಾಕ್ರಮಶಾಲಿಯೂ, ರಾವಣಾಸುರನ ಮಗನೂ ಆದ ಇಂದ್ರಜಿತ್ತು, ಪ್ರಹಸ್ತ, ವಿರೂಪಾಕ್ಷ, ಯೂಪಾಕ್ಷ, ಭುಜಬಲನಾದ ವಜ್ರದಂಷ್ಟ್ರ, ಧೂಮ್ರಾಕ್ಷ, ಅತಿಕಾಯ, ದುರ್ಮುಖ ಇವರೇ ಮೊದಲಾದ ಅನೇಕ ರಾಕ್ಷಸವೀರರು ಪರಿಘ, ತೋಮರ, ಬಾಣಸಮೇತವಾದ ಧನುಸ್ಸು, ಶೂಲ, ಖಡ್ಗಾದ್ಯಾಯುಧಗಳನ್ನು ಧರಿಸಿ ಮಹಾ ಕೋಪಾಟೋಪದಿಂದ

---

‡ ಕತಕ ವ್ಯಾಖ್ಯಾನದ ಪ್ರಕಾರ ಇಲ್ಲಿ ಸರ್ಗ ವಿಚ್ಛೇದವಿಲ್ಲವು.

ರಾವಣಂ ಸರ್ವೇ ಪ್ರದೀಪ್ತಾ ಇವ ತೇಜಸಾ ॥ ೫ ॥ " ಅದ್ಯ ರಾಮಂ ವಧಿಷ್ಯಾಮ ಸ್ಸುಗ್ರೀವಂ ಸಹಲಕ್ಷ್ಮಣಂ । ಕೃಪಣಂಚ ಹನೂಮಂತಂ ಲಂಕಾ ಯೇನ ಪ್ರಧರ್ಷಿತಾ ॥ ೬ ॥ ತಾನ್ ಗೃಹೀತಾಯುಧಾನ್ ಸರ್ವಾನ್ವಾರಯಿತ್ವಾ ವಿಭೀಷಣಃ । ಅಬ್ರವೀತ್ಪ್ರಾಂಜಲಿರ್ವಾಕ್ಯಂ ಪುನಃ ಪ್ರತ್ಯುಪವೇಶ್ಯ ತಾನ್ ॥ ೭ ॥ $ " ಅಪ್ಯುಪಾಯೈಸ್ತ್ರಿಭಿಸ್ತಾತ ! ಯೋಽರ್ಥಃ ಪ್ರಾಪ್ತುಂ ನಶಕ್ಯತೇ । ತಸ್ಯ ವಿಕ್ರಮಕಾಲಾಂಸ್ತಾನ್ಯುಕ್ತಾನಾಹುರ್ಮನೀ

---

ರಾವಣಂ - ರಾವಣನನ್ನು ಕುರಿತು, ಅಬ್ರುವನ್ - ನುಡಿದರು, ಅದ್ಯ - ಈಗ, ಸಲಕ್ಷ್ಮಣಂ - ಲಕ್ಷ್ಮಣನಿಂದೊಡಗೂಡಿದ, ರಾಮಂ - ಶ್ರೀರಾಮನನ್ನೂ, ಸುಗ್ರೀವಂಚ - ಸುಗ್ರೀವನನ್ನೂ, ವಧಿಷ್ಯಾಮಃ - ಸಂಹಾರ ಮಾಡುವೆವು, ಲಂಕಾ - ಲಂಕಾಪಟ್ಟಣವು, ಯೇನ - ಯಾವನಿಂದ, ಪ್ರಧರ್ಷಿತಾ - ತಿರಸ್ಕರಿಸಲ್ಪಟ್ಟಿತೋ, ಕೃಪಣಂ - ದೀನನಾದ, ತಂಹನೂಮಂತಂಚ - ಆ ಹನುಮಂತನನ್ನೂ, ವಧಿಷ್ಯಾಮಃ - ಸಂಹಾರ ಮಾಡುವೆವು. ॥ ೧-೬ ॥ ವಿಭೀಷಣಃ - ವಿಭೀಷಣನು, ಗೃಹೀತಾಯುಧಾನ್-ಗ್ರಹಿಸಲ್ಪಟ್ಟ ಆಯುಧಗಳುಳ್ಳ, ಸರ್ವಾನ್-ಸಮಸ್ತರಾದ, ತಾನ್-ಅವರನ್ನು, ವಾರಯಿತ್ವಾ-ನಿವಾರಿಸಿ, ತಾನ್ - ಅವರುಗಳನ್ನು, ಪುನಃ - ಮತ್ತೂ, ಪ್ರತ್ಯುಪವೇಶ್ಯ - ಕೂಡಿಸಿ, ಪ್ರಾಂಜಲಿಃ - ಅಂಜಲಿಬದ್ಧನಾಗಿ, ವಾಕ್ಯಂ - ಮಾತನ್ನು, ಅಬ್ರವೀತ್ - ನುಡಿದನು. ॥ ೭ ॥ ಹೇ ತಾತ - ಎಲೈ ತಂದೆಯೇ, ಯೋಽರ್ಥಃ - ಯಾವ ಪ್ರಯೋಜನವು, ತ್ರಿಭಿಃ - ಮೂರಾದ, ಉಪಾಯೈಃ - ಸಾಮ, ದಾನ, ಭೇದ ಎಂಬ ಮೂರು ಉಪಾಯಗಳಿಂದಲೂ, ಪ್ರಾಪ್ತುಂ-ಹೊಂದುವದಕ್ಕೆ, ನಶಕ್ಯತೇ - ಸಾಧ್ಯವಲ್ಲವೋ, ತಸ್ಯ - ಅಂತಹ ಪ್ರಯೋಜನಕ್ಕೆ, ಯುಕ್ತಾನ್ - ಶಾಸ್ತ್ರದಲ್ಲಿ ಯುಕ್ತವಾದ, ತಾನ್‌ವಿಕ್ರಮಕಾಲಾನ್ - ಆ ಪರಾಕ್ರಮ ಕಾಲಗಳನ್ನು, ಮನೀಷಿಣಃ - ಪಂಡಿತರು, ಆಹುಃ - ಹೇಳುತ್ತಾರೆ. ॥ ೮ ॥

---

ದಿಗ್ಗನೆದ್ದು ಮಹಾ ತೇಜಸ್ಸಿನಿಂದ ಬೆಳಗುತ್ತಿದ್ದ ರಾವಣಾಸುರನನ್ನು ನೋಡಿ, "ಎಲೈ ರಾಕ್ಷಸೇಶ್ವರನೇ ! ನಾವೀಗಲೇ ಇಲ್ಲಿಂದ ಹೊರಟು ರಾಮಲಕ್ಷ್ಮಣರೊಡಗೂಡಿದ ಆ ಸುಗ್ರೀವನನ್ನೂ, ಲಂಕಾನಗರವನ್ನು ಸುಟ್ಟು ಹಾಳುಮಾಡಿಹೋದ ಆ ಹನುಮಂತನನ್ನೂ ಸಂಹರಿಸಿ ಬರುವೆವು" ಎಂದು ಹೇಳಿದರು. ॥ ೧-೬ ॥ ಆ ಸಮಯದಲ್ಲಿ ರಾವಣಾನುಜನಾದ ವಿಭೀಷಣನು ಆಯುಧಪಾಣಿಗಳಾಗಿ ಪ್ರಯಾಣಕ್ಕೆ ಸಿದ್ಧರಾಗಿದ್ದ ಆ ರಾಕ್ಷಸರೆಲ್ಲರನ್ನೂ ನಿವಾರಿಸಿ ಅವರೆಲ್ಲರನ್ನೂ ಅಲ್ಲಲ್ಲಿಯೇ ಕುಳ್ಳಿರಿಸಿ ತಾನು ಬದ್ಧಾಂಜಲಿಪುಟನಾಗಿ ಬಹು ನಮ್ರತೆಯಿಂದ ತಲೆಬೊಗ್ಗಿಸಿದವನಾಗಿ ಅಣ್ಣನನ್ನು ಕುರಿತಂತೆಯೂ, ಇಂದ್ರಜಿತ್ತುವನ್ನೂ, ಮಂತ್ರಿಗಳನ್ನೂ ಕುರಿತಂತೆಯೂ ಈ ರೀತಿ ಹೇಳಿದನು. "ಎಲೈ ತಾತ ! ಸಾಮದಾನಭೇದಗಳೆಂಬ ಮೂರು ಉಪಾಯಗಳಿಂದ ಸಾಧ್ಯವಾಗದ ಕಾರ್ಯಕ್ಕಾಗಿ ದಂಡವನ್ನೂ ಪ್ರಯೋಗಿಸಬೇಕೆಂದು ಪಂಡಿತರಾದ ಹಿರಿಯರು ನುಡಿಯುವರು. ಅಲ್ಲದೆ ಪ್ರಮತ್ತರಾಗಿರುವವರಲ್ಲಿಯೂ, ಶತ್ರು

---

$ ಇಲ್ಲಿ ಪ್ರಹಸ್ತಾದಿ ಮಂತ್ರಿಗಳನ್ನು ಕುಳ್ಳಿರಿಸಿ ಉಪದೇಶವನ್ನು ಪಕ್ರಮಿಸಿದನೆಂದುದರಿಂದ, ವಿಭೀಷಣನು ರಾವಣನಯನ್ನೋ, ರಾವಣನನ್ನೋ ಕುರಿತು ಹೇಳಿರಬೇಕೆಂದು ಊಹಿಸಲಾಗುವುದು. ನಡುನಡುವೆ ಸಚಿವರನ್ನೂ ಕುರಿತು ಹೇಳಿದ ಮಾತುಗಳೂ ಉಂಟು. (ಗೋ+ಮ)

ಯುಕ್ತವಾದ ವಿಕ್ರಮಕಾಲಗಳನ್ನೂ, ಆ ಆ ಕಾಲಗಳಲ್ಲಿ ಅನುಸರಿಸಬೇಕಾದ ಉಪಾಯಗಳನ್ನೂ ಕಾಮಂದಕನು ತನ್ನ ನೀತಿಶಾಸ್ತ್ರದಲ್ಲಿ ಹೇಳಿರುವನು.

ಷಿಣಃ ॥ ೮ ॥ ¶ ಪ್ರಮತ್ತೇಷ್ವಭಿಯುಕ್ತೇಷು ದೈವೇನ ಪ್ರಹೃತೇಷುಚ । ವಿಕ್ರಮಾಸ್ತಾತ! ಸಿದ್ಧ್ಯಂತಿ ಪರೀಕ್ಷ್ಯ ವಿಧಿನಾ ಕೃತಾಃ ॥ ೯ ॥ ಅಪ್ರಮತ್ತಂ ಕಥಂ ತಂತು ವಿಜಿಗೀಷುಂ ಬಲೇ ಸ್ಥಿತಂ । ಜಿತರೋಷಂ ದುರಾಧರ್ಷಂ ಪ್ರಧರ್ಷಯಿತುಮಿಚ್ಛಥ ॥ ೧೦ ॥ ಸಮುದ್ರಂ ಲಂಘಯಿತ್ವಾತು ಘೋರಂ ನದನದೀಪತಿಂ । ಕೃತಂ ಹನುಮತಾ

---

ಹೇ ತಾತ-ಎಲೈ ತಂದೆಯೇ, ಪ್ರಮತ್ತೇಷು-ಅವ್ಯವಸ್ಥಿತವಾದ ಮನಸ್ಸುಳ್ಳವರಲ್ಲಿಯೂ, ಅಭಿಯುಕ್ತೇಷು-ಜ್ಞಾನಿಗಳಲ್ಲಿಯೂ, ದೈವೇನ-ದೈವದಿಂದ, ಪ್ರಹೃತೇಷುಚ-ಹೊಡೆಯಲ್ಪಟ್ಟವರಲ್ಲಿಯೂ, ವಿಕ್ರಮಾಃ-ಪರಾಕ್ರಮಗಳು, ವಿಧಿನಾ - ವಿಧಾನದಿಂದ, ಪರೀಕ್ಷ್ಯ - ವಿಚಾರಿಸಿ, ಕೃತಾಃ - ಮಾಡಲ್ಪಟ್ಟವುಗಳಾಗಿ, ಸಿಧ್ಯಂತಿ - ಸಫಲವಾಗುತ್ತವೆ. ॥೯॥ ಅಪ್ರಮತ್ತಂ - ಜಾಗರೂಕನಾದ, ವಿಜಿಗೀಷುಂ - ಜಯಿಸಲಿಚ್ಛೆಯುಳ್ಳ, ಬಲೇ - ಸೈನ್ಯದಲ್ಲಿ, ಸ್ಥಿತಂ - ಇರುವ, ಜಿತರೋಷಂ - ಜಯಿಸಲ್ಪಟ್ಟ ರೋಷವುಳ್ಳ, ದುರಾಧರ್ಷಂ - ತಿರಸ್ಕರಿಸಲಸಾಧ್ಯನಾದ, ತಂತು - ಆ ಶ್ರೀರಾಮನನ್ನಾದರೆ, ಪ್ರಧರ್ಷಯಿತುಂ - ತಿರಸ್ಕಾರ ಮಾಡಲು, ಕಥಂ - ಹೇಗೆ, ಇಚ್ಛಥ - ಅಪೇಕ್ಷಿಸುವಿರಿ. ॥ ೧೦ ॥ ಘೋರಂ - ಭಯಂಕರವಾದ, ನದನದೀಪತಿಂ - ನದಗಳಿಗೂ ನದಿಗಳಿಗೂ ಪತಿಯಾದ, ಸಮುದ್ರಂ - ಸಮುದ್ರವನ್ನು,

---

ಗಳಿಗೆ ಒಳಗಾಗಿರುವವರಲ್ಲಿಯೂ, ದೈವೋಪಹತರಾದವರಲ್ಲಿಯೂ ದಂಡೋಪಾಯವನ್ನು ಪ್ರಯೋಗಿಸಿದರೆ ಅದು ಸಿದ್ಧಿಸುತ್ತದೆ. ಎಲೈ ರಾಕ್ಷಸರಿರಾ! ಶ್ರೀರಾಮನು ಮೇಲೆ ಹೇಳಿದಂಥವನಲ್ಲವು. ಆತನು ಮಹಾ ಬಲಾಢ್ಯನು; ರೋಷವನ್ನೇ ಗೆದ್ದಿರುವವನು; ಯಾರಿಂದಲೂ ಎದುರಿಸಲಸಾಧ್ಯನಾದವನು, ಅಂತಹನನ್ನು ನೀವು ತಿರಸ್ಕರಿಸುವುದು ಹೇಗೆ? ಇದಲ್ಲದೆ, ಹನುಮಂತನು ಮಹಾ ಭಯಂಕರವಾದ ಸಮುದ್ರವನ್ನು ದಾಟಿ ಯಾರಿಂದಲೂ

---

"ಸಾಮಾದೀನಾಮುಪಾಯಾನಾಂ ತ್ರಯಾಣಾಂ ವಿಫಲೇನ ಯೇ ।
ವಿನಯೇನ್ನಯಸಂಪನ್ನೋ ದಂಡಂ ದಂಡ್ಯೇಷು ದಂಡಭೃತ್ ॥"

ಎಂಬ ಕಾಮಂದಕೋಕ್ತಿಯಂತೆ ಇದು ದಂಡಕಾಲವಲ್ಲವಾಗಿರುವುದು.

¶ "ಯಾರೊಡನೆ ಯುದ್ಧಮಾಡಬೇಕು, ಯಾರೊಡನೆ ಸಂಧಿಮಾಡಿಕೊಳ್ಳಬೇಕು" ಎಂಬ ವಿಷಯದಲ್ಲಿ ಕಾಮಂದಕನು ಹೀಗೆ ಹೇಳಿರುವನು.

ಬಾಲೋ ವೃದ್ಧೋ ದೀರ್ಘರೋಗೀ ತಥಾಜ್ಞಾತಿ ಬಹಿಷ್ಕೃತಃ ।
ಭೀರುಕೋ ಭೀರುಕಜನೋ ಲುಬ್ಧೋ ಲುಬ್ಧಜನಸ್ತಥಾ ॥
ವಿರಕ್ತಪ್ರಕೃತಿಶ್ಚೈವ ವಿಷಯೇಷ್ವತಿ ಸಕ್ತಿಮಾನ್ ।
ಅನೇಕಚಿತ್ತಮಂತ್ರಶ್ಚ ದೇವಬ್ರಾಹ್ಮಣ ನಿಂದಕಃ ॥
ದೈವೋಪಹತಕಶ್ಚೈವ ದೈವಚಿಂತಕ ಏವಚ ।
ದುರ್ಭಿಕ್ಷವ್ಯಸನೋಪೇತೋ ಬಲವ್ಯಸನ ಸಂಯುತಃ ॥
ಅದೇಶಸ್ಥೋ ಬಹುರಿಪುರ್ಯುಕ್ತೋ ಕಾಲೇನಯಶ್ಚ ಸಃ ।
ಸತ್ಯಧರ್ಮವ್ಯಪೇತಶ್ಚ ವಿಂಶತಿಃ ಪುರುಷಾಅಮೀ ॥
ಏತೈಸ್ಸಂಧಿಂ ನಕುರ್ವೀತ ವಿಗೃಹ್ಣೀಯಾತ್ತು ಕೇವಲಂ ॥

"ರಾಮನು ಈ ಇಪ್ಪತ್ತು ಬಗೆಯವರಲ್ಲಿ ಸೇರಿದವನಲ್ಲವಾದುದರಿಂದ ಅವನೊಡನೆ ಸಂಧಿಮಾಡಿಕೊಳ್ಳುವುದು ಉಚಿತವೇ ಹೊರತು ಯುದ್ಧಮಾಡುವುದು ಯುಕ್ತವಲ್ಲ" ಎಂದು ಇಲ್ಲಿ ವಿಭೀಷಣನ ವಾಕ್ಯಾಭಿಪ್ರಾಯವು.

ಕರ್ಮ ದುಷ್ಕರಂ ತರ್ಕಯೇತವಾ ‖ ೧೧ ‖ ಬಲಾನ್ಯಪರಿಮೇಯಾನಿ ವೀರ್ಯಾಣಿಚ
ನಿಶಾಚರಾಃ ! । ಪರೇಷಾಂ ಸಹಸಾವಜ್ಞಾ ನಕರ್ತವ್ಯಾ ಕಥಂಚನ ‖ ೧೨ ‖ ಕಿಂಚ
ರಾಕ್ಷಸರಾಜಸ್ಯ ರಾಮೇಣಾಽಪ್ರಕೃತಂ ಪುರಾ । ಆಜಹಾರ ಜನಸ್ಥಾನಾದ್ಯಸ್ಯ
ಭಾರ್ಯಾಂ ಯಶಸ್ವಿನಃ ‖ ೧೩ ‖ ಖರೋ ಯದ್ಯತಿವೃತ್ತಸ್ತು ರಾಮೇಣ ನಿಹತೋ
ರಣೇ । ಅವಶ್ಯಂ ಪ್ರಾಣಿನಾಂ ಪ್ರಾಣಾ ರಕ್ಷಿತವ್ಯಾ ಯಥಾಬಲಂ ‖ ೧೪ ‖ ಅಯಶಸ್ಯ
ಮನಾಯುಷ್ಯಂ ಪರದಾರಾಭಿಮರ್ಶನಂ । ಅರ್ಥಕ್ಷಯಕರಂ ಘೋರಂ ಪಾಪಸ್ಯಚ

ಲಂಘಯಿತ್ವಾ - ದಾಟಿ, ಹನುಮತಾತು - ಆಂಜನೇಯನಿಂದಲಾದರೆ, ಕೃತಂ - ಮಾಡಲ್ಪಟ್ಟ, ಕರ್ಮ - ವ್ಯಾಪಾರವನ್ನು, ದುಷ್ಕರಂ - ಅಸಾಧ್ಯವನ್ನಾಗಿ, ತರ್ಕಯೇತವಾ - ಯಾರಾದರೂ ಊಹಿಸ ತಕ್ಕದ್ದೇ. ‖ ೧೧ ‖ ಹೇ ನಿಶಾಚರಾಃ - ಎಲೈ ರಾಕ್ಷಸರಿರಾ, ಪರೇಷಾಂ - ಶತ್ರುಗಳ, ಬಲಾನಿ - ಸೈನ್ಯಗಳು, ವೀರ್ಯಾಣಿಚ - ಸಾಮರ್ಥ್ಯಗಳೂ, ಅಪರಿಮೇಯಾನಿ - ಅಪರಿಮಿತವಾಗಿವೆ, ಸಹಸಾ - ಜಾಗ್ರತೆಯಾಗಿ, ಅವಜ್ಞಾ-ಅವಮಾನವು, ಕಥಂಚನ-ಹೇಗಾದರೂ, ನಕರ್ತವ್ಯಾ-ಮಾಡತಕ್ಕುದಲ್ಲ. ‖೧೨‖ ಪುರಾ - ಪೂರ್ವದಲ್ಲಿ, ರಾಕ್ಷ....ಸ್ಯ - ರಾವಣನಿಗೆ, ರಾಮೇಣ - ಶ್ರೀರಾಮನಿಂದ, ಕಿಮಪಕೃತಂ- ಯಾವ ಅಪಕಾರವು ಮಾಡಲ್ಪಟ್ಟಿತು, ಯಶಸ್ವಿನಃ - ಕೀರ್ತಿವಂತನಾದ, ಯಸ್ಯ - ಯಾವ ಶ್ರೀರಾಮನ, ಭಾರ್ಯಾ - ಹೆಂಡತಿಯನ್ನು, ಜನಸ್ಥಾನಾತ್ - ಜನಸ್ಥಾನದಿಂದ, ಆಜಹಾರ - ಅಪಹಾರ ಮಾಡಿ ದನೋ. ‖೧೩‖ ಖರಃ - ಖರನು, ಅತಿವೃತ್ತಃ - ದುರ್ವೃತ್ತನಾದಕಾರಣ, ರಾಮೇಣ - ಶ್ರೀರಾಮನಿಂದ, ರಣೇ - ಕಾಳಿಗದಲ್ಲಿ, ನಿಹತೋಯದಿ - ಹೊಡೆಯಲ್ಪಟ್ಟವನಾದರೆ, ಪ್ರಾಣಿನಾಂ - ಜೀವಿಗಳಿಗೆ, ಪ್ರಾಣಾಃ - ಪ್ರಾಣಗಳು, ಯಥಾಬಲಂ - ಶಕ್ತ್ಯನುಸಾರವಾಗಿ, ಅವಶ್ಯಂ - ಮುಖ್ಯವಾಗಿ, ರಕ್ಷಿತವ್ಯಾಃ- ಸಂರಕ್ಷಿಸಿಕೊಳ್ಳತಕ್ಕವುಗಳಷ್ಟೆ. ‖ ೧೪ ‖ ಪರ....ನಂ - ಪರಸ್ತ್ರೀಗಮನವು, ಅಯಶಸ್ಯಂ - ಅಪಕೀರ್ತಿ ಕರವು, ಅನಾಯುಷ್ಯಂ - ಆಯುಷ್ಕರವಾದದ್ದಲ್ಲ, ಅರ್ಥಕ್ಷಯಕರಂ - ದ್ರವ್ಯನಾಶಕರವಾದ್ದು, ಘೋರಂ - ಭಯಂಕರವಾದದ್ದು, ಪಾಪಸ್ಯಚ - ಪಾಪಕ್ಕೆ, ಪುನರ್ಭವಂ - ಶರೀರಾಂತರವು, ವೈದೇಹೀ- ಸೀತಾದೇವಿಯು, ಏತತ್ - ಇದಕ್ಕೆ, ನಿಮಿತ್ತಂ - ಕಾರಣವು, ನಃ - ನಮಗೆ, ಮಹದ್ಭಯಂ -

ಮಾಡಲಸದಳವಾದ ಲಂಕಾಧರ್ಷಣ ಕಾರ್ಯವನ್ನೂ ಮಾಡಿದನು. ಇಂತಹ ಕಾರ್ಯವನ್ನು ಮತ್ತೊಬ್ಬನಾವನಾದರೂ ಮಾಡಿಯಾನೆಂದು ನಂಬುವುದಕ್ಕಾಗುತ್ತದೆಯೆ ? ‖೭–೧೧‖ ಎಲೈ ರಾಕ್ಷಸರಿರಾ ! ಶತ್ರುಗಳ ಬಲಪರಾಕ್ರಮಗಳು ಅಪರಿಮೇಯವಾಗಿರುವುವು. ಇಂತಿರುವಾಗ ನೀವು ದುಡುಕಬಾರದು. ಹಾಗೆ ಮಾಡುವುದು ಉಚಿತವಲ್ಲ. ಇದೂ ಅಲ್ಲದೆ, ರಾವಣಾ ಸುರನು ಮಹಾ ಪರಾಕ್ರಮಶಾಲಿಯಾದ ಶ್ರೀರಾಮನ ಮಡದಿಯನ್ನು ಜನಸ್ಥಾನದಿಂದ ಅಪ ಹರಿಸಿಕೊಂಡು ಬಂದಿರುವನು. ನೀವೊಂದುವೇಳೆ ಆ ರಾಮನು ಖರದೂಷಣಾದಿಗಳನ್ನು ಸಂಹರಿಸಿದುದರಿಂದ ರಾವಣನಿಗೆ ಆತನು ಅಪರಾಧವನ್ನು ಮಾಡಿರುವನೆಂದು ಹೇಳಬಹುದು. ರಾಮನು ಅವನನ್ನು ನಿರ್ನಿಮಿತ್ತವಾಗಿ ಸಂಹರಿಸಲಿಲ್ಲ. ಆತನಮೇಲೆ ದುರ್ಮಾರ್ಗನಾದ ಆ ಖರನು ಯುದ್ಧಕ್ಕಾಗಿ ಹೋಗಲು ಆತನು ತನ್ನನ್ನು ರಕ್ಷಿಸಿಕೊಳ್ಳುವುದಕ್ಕಾಗಿ ಅವನನ್ನು ಸಂಹರಿಸಿದನಾಗಲಿ ಮತ್ತೆ ಬೇರೆಯಲ್ಲವು. ಯಾರೇ ಆಗಲಿ ತಮ್ಮ ಶಕ್ತ್ಯನುಸಾರವಾಗಿ ಪ್ರಾಣಗಳನ್ನು ರಕ್ಷಿಸಿಕೊಳ್ಳುವುದು ಲೋಕದಲ್ಲಿ ಸಹಜವಾಗಿಯೇ ಇದೆಯಲ್ಲವೆ? ಆದುದರಿಂದ ಆ ರಾಮನಲ್ಲಿ ಏನುತಾನೆ ದೋಷವಿರುವುದು? ಅಣ್ಣಾ ರಾವಣನೇ! ಪರಸತಿಯರ ಸ್ಪರ್ಶದಿಂದ

ಪುನರ್ಭವಂ ॥ ೧೫ ॥ ಏತನ್ನಿಮಿತ್ತಂ ವೈದೇಹೀ ಭಯಂ ನಸ್ಸುಮಹದ್ಭವೇತ್ । ಆಹೃತಾ ಸಾ ಪರಿತ್ಯಾಜ್ಯಾ ಕಲಹಾರ್ಥೇ ಕೃತೇನ ಕಿಂ? ॥ ೧೬ ॥ ನನಃ ಕ್ಷಮಂ ವೀರ್ಯವತಾ ತೇನ ಧರ್ಮಾನುವರ್ತಿನಾ । ವೈರಂ ನಿರರ್ಥಕಂ ಕರ್ತುಂ ದೀಯತಾ ಮಸ್ಯ ಮೈಥಿಲೀ ॥ ೧೭ ॥ ಯಾವನ್ನ ಸಗಜಾಂ ಸಾಶ್ವಾಂ ಬಹುರತ್ನಸಮಾಕುಲಾಂ । ಪುರೀಂ ದಾರಯತೇ ಬಾಣೈರ್ದೀಯತಾಮಸ್ಯ ಮೈಥಿಲೀ ॥೧೮॥ ಯಾವತ್ಸುಘೋರಾ ಮಹತೀ ದುರ್ಧರ್ಷಾ ಹರಿವಾಹಿನೀ । ನಾವಸ್ಕಂದತಿ ನೋ ಲಂಕಾಂ ತಾವತ್ಸೀತಾ

---

ಮಹಾ ಭೀತಿಯು, ಭವೇತ್ - ಆಗುವದು. ॥೧೫॥ ಆಹೃತಾ - ತರಲ್ಪಟ್ಟ, ಸಾ - ಆ ಸೀತಾದೇವಿಯು, ಪರಿತ್ಯಾಜ್ಯಾ - ಬಿಡಲ್ಪಡತಕ್ಕವಳು, ಕಲಹಾರ್ಥೇ - ವ್ಯಾಜ್ಯಕ್ಕೋಸ್ಕರ, ಕೃತೇನ - ಮಾಡಲ್ಪಟ್ಟ, ಕರ್ಮಣಾ-ಕರ್ಮದಿಂದ, ಕಿಂ-ಏನು ಪ್ರಯೋಜನವು ? ॥ ೧೬ ॥ ನಃ-ನಮಗೆ, ಧರ್ಮಾನುವರ್ತಿನಾ - ಕ್ಷಾತ್ರಧರ್ಮವನ್ನನುಸರಿಸುವ, ವೀರ್ಯವತಾ - ಸಾಮರ್ಥ್ಯವಂತನಾದ, ತೇನ - ಆ ಶ್ರೀರಾಮ ನೊಡನೆ, ನಿರರ್ಥಕಂ - ನಿಷ್ಪ್ರಯೋಜನವಾಗಿ, ವೈರಂ - ದ್ವೇಷವನ್ನು, ಕರ್ತುಂ - ಮಾಡುವುದಕ್ಕೆ, ನಕ್ಷಮಂ - ಯೋಗ್ಯವಲ್ಲವು, ಅಸ್ಯ - ಈ ರಾಮನಿಗೆ, ಮೈಥಿಲೀ - ಸೀತಾದೇವಿಯು, ದೀಯತಾಂ - ಕೊಡಲ್ಪಡಲಿ. ॥ ೧೭ ॥ ರಾಮಃ - ಶ್ರೀರಾಮನು, ಬಹು ...ಲಾಂ - ಅನೇಕ ರತ್ನಗಳಿಂದ ತುಂಬಿ ರುವ, ಸಗಜಾಂ - ಆನೆಗಳಿಂದ ಕೂಡಿದ, ಸಾಶ್ವಾಂ - ಕುದುರೆಗಳು ಕಟ್ಟಿದ, ಪುರೀಂ - ಪಟ್ಟಣವನ್ನು, ಯಾವನ್ನದಾರಯತೇ - ಎಷ್ಟರಲ್ಲಿ ಸೀಳದಿರುವನೋ, ತಾವತ್ - ಅಷ್ಟರೊಳಗಾಗಿ, ಅಸ್ಯ - ಈ ಶ್ರೀರಾಮನಿಗೆ, ಮೈಥಿಲೀ - ಸೀತಾದೇವಿಯು, ದೀಯತಾಂ - ಕೊಡಲ್ಪಡಲಿ. ॥ ೧೮ ॥ ಸುಘೋರಾ - ಬಹು ಭಯಂಕರವಾದ, ದುರ್ಧರ್ಷಾ-ತಿರಸ್ಕರಿಸಲಸಾಧ್ಯವಾದ, ಮಹತೀ-ಬಹಳವಾದ, ಹರಿವಾಹಿನೀ- ವಾನರಸೈನ್ಯವು, ನಃ - ನಮ್ಮ, ಲಂಕಾಂ - ಲಂಕಾಪಟ್ಟಣವನ್ನು, ಯಾವತ್ - ಎಷ್ಟರೊಳಗಾಗಿ, ನಾವಸ್ಕಂದತಿ-ತಡೆಮಾಡದಿರುವದೋ, ತಾವತ್-ಅಷ್ಟರಲ್ಲಿ, ಸೀತಾ-ಸೀತಾದೇವಿಯು, ಪ್ರದೀಯತಾಂ-

---

ಲೋಕದಲ್ಲಿ ಅಪಕೀರ್ತಿಯುಂಟಾಗುವುದು ; ಆಯುಸ್ಸು ಕ್ಷೀಣಿಸುವುದು ; ಐಶ್ವರ್ಯವು ನಾಶ ವಾಗುವುದು ; ಅನೇಕ ಘೋರಗಳು ಸಂಭವಿಸುವುವು. ಮೇಲಾಗಿ ಪಾತಕವುಂಟಾಗು ವುದು. ಈ ಕಾರಣದಿಂದ ನಮ್ಮೆಲ್ಲರಿಗೂ ಸೀತಾದೇವಿಯ ದೆಸೆಯಿಂದ ಮಹಾ ಭಯವೇ ಒದಗಿ ಬಂದಿರುವುದು. ಆದುದರಿಂದ ಆ ಸೀತೆಯನ್ನು ಪುನಃ ರಾಮನಿಗೆ ಒಪ್ಪಿಸಿಬಿಡಬೇಕು. ಕಲಹವನ್ನುಂಟುಮಾಡುವ ಈ ಕಾರ್ಯದಿಂದ ನಮಗೇನು ಪ್ರಯೋಜನ? ॥ ೧೨-೧೬ ॥ ಮಹಾ ಪರಾಕ್ರಮಶಾಲಿಯೂ, ಧರ್ಮವನ್ನು ತಪ್ಪದೆ ಅನುಸರಿಸುತ್ತಿರುವನೂ ಆದ ರಾಮ ನೊಡನೆ ನಿರರ್ಥಕವಾಗಿ ನಮಗೆ ವೈರವೇಕೆ? ಹಾಗೆ ವೈರವನ್ನು ಕಟ್ಟಿಕೊಳ್ಳುವುದು ಉಚಿತ ವಲ್ಲವು. ಆದುದರಿಂದ ಸೀತೆಯನ್ನು ಆತನಿಗೆ ಒಪ್ಪಿಸಿಬಿಡಬೇಕು. ಆ ರಾಮನು ಗಜಗಳಿಂ ದಲೂ, ಕುದುರೆಗಳಿಂದಲೂ ಒಪ್ಪಿ ಸರ್ವರತ್ನಸಮೃದ್ಧವಾದ ಈ ಲಂಕಾನಗರವನ್ನು ಪ್ರವೇ ಶಿಸಿ ತನ್ನ ಬಾಣಪರಂಪರೆಯಿಂದ ನಾಶಮಾಡುವ ಮೊದಲೇ ಸೀತಾದೇವಿಯನ್ನು ಆತನಿಗೆ ಸಮರ್ಪಿಸುವುದು ಯುಕ್ತವು. ನನ್ನ ಮಾತನ್ನು ಕೇಳು ; ಮಹಾ ಭಯಂಕರವೂ, ಬಹು ದೊಡ್ಡದೂ, ಎದುರಿಸಲಸದಳವೂ ಆದ ಆ ವಾನರಸೇನೆಯು ನಮ್ಮ ಲಂಕಾನಗರವನ್ನು ಮುತ್ತುವುದಕ್ಕೆ ಮೊದಲೇ ಸೀತೆಯನ್ನು ಶ್ರೀರಾಮನಿಗೆ ಒಪ್ಪಿಸು. ನೀನು ಶ್ರೀರಾಮನ

ಪ್ರದೀಯತಾಂ ॥ ೧೯ ॥ ವಿನಶ್ಯೇದ್ಧಿ ಪುರೀ ಲಂಕಾ ಶೂರಾಸ್ಸರ್ವೇಚ ರಾಕ್ಷಸಾಃ । ರಾಮಸ್ಯ ದಯಿತಾ ಪತ್ನೀ ಸ್ವಯಂ ನ ಯದಿ ದೀಯತೇ ॥ ೨೦ ॥ ಪ್ರಸಾದಯೇ ತ್ವಾಂ ಬಂಧುತ್ವಾತ್ಕುರುಷ್ವ ವಚನಂ ಮಮ । ಹಿತಂ ಪಥ್ಯಮಹಂ ಬ್ರೂಮಿ ದೀಯತಾ ಮಸ್ಯ ಮೈಥಿಲೀ ॥ ೨೧ ॥ ಪುರಾ ಶರತ್ಸೂರ್ಯಮರೀಚಿಸನ್ನಿಭಾನ್ನವಾಗ್ರಪುಂಖಾ ಸುದೃಢಾನ್ನೃಪಾತ್ಮಜಃ । ಸೃಜತ್ಯಮೋಘಾ ಸಶಿಖಾ ವಧಾಯ ತೇ ಪ್ರದೀಯತಾಂ ದಾಶರಥಾಯ ಮೈಥಿಲೀ ॥ ೨೨ ॥ ತ್ಯಜಸ್ವ ಕೋಪಂ ಸುಖಧರ್ಮನಾಶನಂ ಭಜಸ್ವ

ಕೊಡಲ್ಪಡಲಿ. ||೧೯|| ರಾಮಸ್ಯ - ಶ್ರೀರಾಮನ, ದಯಿತಾ - ಪ್ರೀತಿಪಾತ್ರಳಾದ, ಪತ್ನೀ - ಹೆಂಡತಿಯು, ಸ್ವಯಂ - ತಾನು, ನದೀಯತೇಯದಿ - ಕೊಡಲ್ಪಡದಿದ್ದರೆ, ಲಂಕಾಪುರೀ - ಲಂಕಾಪಟ್ಟಣವು, ವಿನಶ್ಯೇದ್ಧಿ - ನಷ್ಟವಾಗುವದಷ್ಟೆ, ಸರ್ವೇ - ಸಮಸ್ತರಾದ, ಶೂರಾಃ - ಶೂರರಾದ, ರಾಕ್ಷಸಾಃ - ರಕ್ಕಸರು, ವಿನಶ್ಯೇಯುರ್ಹಿ - ನಾಶವಾಗುವರಷ್ಟೆ. ||೨೦|| ತ್ವಾಂ - ನಿನ್ನನ್ನು ಕುರಿತು, ಬಂಧುತ್ವಾತ್- ಬಾಂಧವ್ಯದ ದೆಸೆಯಿಂದ, ಪ್ರಸಾದಯೇ - ಬೇಡಿಕೊಳ್ಳುತ್ತೇನೆ, ಮಮ - ನನ್ನ, ವಚನಂ - ಮಾತನ್ನು, ಕುರುಷ್ವ - ಮಾಡು, ಅಹಂ - ನಾನು, ಹಿತಂ - ಮುಂದೆ ಶ್ರೇಯಸ್ಕರವಾಗಿಯೂ, ಪಥ್ಯಂ - ತತ್ಕಾಲದಲ್ಲಿ ಇಷ್ಟವಾಗಿಯೂ ಇರುವ ಮಾತನ್ನು, ಬ್ರೂಮಿ-ಹೇಳುತ್ತೇನೆ, ಅಸ್ಯ - ಈ ಶ್ರೀರಾಮನಿಗೆ, ಮೈಥಿಲೀ - ಸೀತಾದೇವಿಯು, ದೀಯತಾಂ - ಕೊಡಲ್ಪಡಲಿ. ||೨೧|| ನೃಪಾತ್ಮಜಃ - ರಾಜಪುತ್ರನಾದ ಶ್ರೀರಾಮನು, ಶರ....ಭಾ - ಶರತ್ಕಾಲದಲ್ಲಿನ ಸೂರ್ಯಕಿರಣಗಳಿಗೆ ಸಮಾನವಾದ, ನವಾಗ್ರಪುಂಖಾ- ನೂತನವಾದ ಮುಂದಣ ಕೊಂಕಿಗಳುಳ್ಳ, ಸುದೃಢಾ - ಬಹು ಗಟ್ಟಿಯಾಗಿರುವ, ಅಮೋಘಾ - ವ್ಯರ್ಥವಾಗದಿರುವ, ವಿಶಿಖಾ-ಬಾಣಗಳನ್ನು, ಪುರಾಸೃಜತಿ-ಎಷ್ಟರೊಳಗಾಗಿ ಬಿಡುವನೋ, ತಾವತ್- ಅಷ್ಟರೊಳಗಾಗಿ, ದಾಶರಥಾಯ - ಶ್ರೀರಾಮನಿಗೆ, ಮೈಥಿಲೀ - ಸೀತಾದೇವಿಯು, ಪ್ರದೀಯತಾಂ - ಕೊಡಲ್ಪಡಲಿ. || ೨೨ || ಸುಖ....ನಂ - ಸುಖವನ್ನೂ, ಧರ್ಮವನ್ನೂ ನಾಶಗೊಳಿಸುವ, ಕೋಪಂ - ಕೋಪವನ್ನು, ತ್ಯಜಸ್ವ - ಬಿಡು, ರತಿ....ನಂ - ಸುಖವನ್ನೂ, ಕೀರ್ತಿಯನ್ನೂ ವೃದ್ಧಿಗೊಳಿಸುವ, ಧರ್ಮಂ - ಧರ್ಮವನ್ನು, ಭಜಸ್ವ - ಹೊಂದು, ಪ್ರಸೀದ - ಪ್ರಸನ್ನನಾಗು, ಸಪು....ವಾಃ - ಮಕ್ಕಳಿಂದಲೂ, ಬಂಧುಗಳಿಂದಲೂ ಕೂಡಿದವರಾಗಿ, ಜೀವೇಮ - ಬದುಕೋಣ, ದಾಶರಥಾಯ -

ಪ್ರಿಯ ಭಾರ್ಯೆಯಾದ ಸೀತಾದೇವಿಯನ್ನು ಆತನಿಗೆ ಒಪ್ಪಿಸದಿದ್ದರೆ ಈ ಲಂಕಾನಗರವು ಖಂಡಿತವಾಗಿಯೂ ನಾಶವಾಗುವುದು. ಶೂರರಾದ ರಾಕ್ಷಸರೆಲ್ಲರೂ ನಾಶವಾಗುವರು. ಅಣ್ಣಾ ! ನೀನು ನನಗೆ ಪ್ರಿಯಬಂಧುವಾದುದರಿಂದ ಇದೋ ನಾನು ನಿನ್ನನ್ನು ಸೆರಗೊಡ್ಡಿ ಬೇಡಿಕೊಳ್ಳುತ್ತಿರುವೆನು. ||೧೭–೨೧|| ನನ್ನ ಮಾತುಗಳನ್ನಾಲಿಸಿ ಅದರಂತೆ ಮಾಡುವವನಾಗು. ಅದರಿಂದ ನಿನಗೆ ಸುಖವುಂಟು. ನಾನು ಯಥಾರ್ಥವಾದ ಮಾತನ್ನು ಹೇಳಿರುವೆನು. ಅಣ್ಣಾ ! ಸೀತೆಯನ್ನು ರಾಮನಿಗೆ ಕೊಟ್ಟುಬಿಡು. ನೀನು ಹಾಗೆ ಕೊಡದಿದ್ದರೆ ರಾಜಕುಮಾರನಾದ ಆ ರಾಮನು ನಿನ್ನನ್ನು ಕೊಲ್ಲುವುದಕ್ಕಾಗಿ ಶರತ್ಕಾಲದಲ್ಲಿ ಸೂರ್ಯನ ಕಿರಣಗಳಿಗೆ ಸಮಾನಗಳಾದುವೂ, ಬಹು ದೃಢವಾದುವೂ, ಅಮೋಘವಾದುವೂ ಆದ ಬಾಣಗಳನ್ನು ಪ್ರಯೋಗಿಸುವನು. ಆದುದರಿಂದ ನೀನು ಸೀತೆಯನ್ನು ಆತನಿಗೆ ಸಮರ್ಪಿಸುವುದು ಯೋಗ್ಯವು. ಎಲೈ ರಾವಣೇಶ್ವರನೇ! ಸುಖವನ್ನೂ, ಧರ್ಮವನ್ನೂ ಹಾಳುಮಾಡುವ ಈ ಕೋಪವನ್ನು ಬಿಟ್ಟುಬಿಡು. ಸಂತೋಷವನ್ನೂ, ಕೀರ್ತಿಯನ್ನೂ ವೃದ್ಧಿಗೊಳಿಸುವ ಧರ್ಮವನ್ನವಲಂಬಿಸು।।

ಧರ್ಮ್ಯಂ ರತಿಕೀರ್ತಿವರ್ಧನಂ । ಪ್ರಸೀದ ಜೀವೇಮ ಸಪುತ್ರಬಾಂಧವಾಃ ಪ್ರದೀಯತಾಂ ದಾಶರಥಾಯ ಮೈಥಿಲೀ" ॥ ೨೩ ॥

ವಿಭೀಷಣವಚಶ್ಶ್ರುತ್ವಾ ರಾವಣೋ ರಾಕ್ಷಸೇಶ್ವರಃ ।
ವಿಸರ್ಜಯಿತ್ವಾ ತಾನ್ ಸರ್ವಾನ್ ಪ್ರವಿವೇಶ ಸ್ವಕಂ ಗೃಹಂ ॥ ೨೪ ॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ನವಮಸ್ಸರ್ಗಃ



ದಶರಥಪುತ್ರನಿಗೆ, ಮೈಥಿಲೀ - ಸೀತಾದೇವಿಯು, ಪ್ರದೀಯತಾಂ - ಕೊಡಲ್ಪಡಲಿ. ॥ ೨೩ ॥ ರಾಕ್ಷಸೇಶ್ವರಃ - ರಾಕ್ಷಸಾಧಿಪತಿಯಾದ, ರಾವಣಃ - ರಾವಣನು, ವಿಭೀಷಣವಚಃ - ವಿಭೀಷಣನ ಮಾತನ್ನು, ಶ್ರುತ್ವಾ - ಕೇಳಿ, ತಾನ್‌ಸರ್ವಾನ್ - ಆ ಸಭಿಕರೆಲ್ಲರನ್ನೂ, ವಿಸರ್ಜಯಿತ್ವಾ-ಕಳುಹಿಸಿಕೊಟ್ಟು, ಸ್ವಕಂ - ತನ್ನ, ಗೃಹಂ - ಮನೆಯನ್ನು, ಪ್ರವಿವೇಶ - ಹೊಕ್ಕನು. ॥ ೨೪ ॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ನವಮಸ್ಸರ್ಗಃ.



ಎಂದು ಹೇಳಿದನು. ಆಗ ರಾಕ್ಷಸೇಶ್ವರನಾದ ರಾವಣನು ವಿಭೀಷಣನಾಡಿದ ಮಾತುಗಳನ್ನು ಕೇಳಿ ಆ ಸಭೆಯಲ್ಲಿದ್ದ ರಾಕ್ಷಸರೆಲ್ಲರಿಗೂ ಹೋಗಲು ಅಪ್ಪಣೆಯಿತ್ತು ತಾನೂ ತನ್ನ ಅಂತಃಪುರಕ್ಕೆ ಹೋದನು. ॥ ೨೨-೨೩ ॥

ಇಂತಿದು ವಿಭೀಷಣಕೃತ ಹಿತೋಪದೇಶವೆಂಬ ಒಂಬತ್ತನೆಯ ಸರ್ಗವು
ಸಮಾಪ್ತವಾದುದು.



# ಯುದ್ಧಕಾಂಡೇ ದಶಮಸ್ಸರ್ಗಃ

ತತಃ ಪ್ರತ್ಯುಷಸಿ ಪ್ರಾಪ್ತೇ ಪ್ರಾಪ್ತಧರ್ಮಾರ್ಥನಿಶ್ಚಯಃ । ರಾಕ್ಷಸಾಧಿಪತೇರ್ವೇಶ್ಮ ಭೀಮಕರ್ಮಾ ವಿಭೀಷಣಃ ॥ ೧ ॥ ಶೈಲಾಗ್ರಚಯಸಂಕಾಶಂ ಶೈಲಶೃಂಗಮಿವೋನ್ನತಂ । ಸುವಿಭಕ್ತಮಹಾಕಕ್ಷ್ಯಂ ಮಹಾಜನಪರಿಗ್ರಹಂ ॥ ೨ ॥ ಮತಿಮದ್ಭಿರ್ಮಹಾಮಾತ್ರೈರನುರಕ್ತೈರಧಿಷ್ಠಿತಂ । ರಾಕ್ಷಸೈಶ್ಚಾಪ್ತಪರ್ಯಾಪ್ತೈಸ್ಸರ್ವತಃ ಪರಿರಕ್ಷಿತಂ ॥ ೩ ॥ ಮತ್ತಮಾತಂಗನಿಶ್ವಾಸೈರ್ವ್ಯಾಕುಲೀಕೃತಮಾರುತಂ । ಶಂಖಘೋಷಮಹಾಘೋಷಂ ತೂರ್ಯನಾದಾನುನಾದಿತಂ ॥ ೪ ॥ ಪ್ರಮದಾಜನಸಂಬಾಧಂ

---

ತತಃ - ಬಳಿಕ, ಪ್ರತ್ಯುಷಸಿ - ಪ್ರಾತಃಕಾಲವು, ಪ್ರಾಪ್ತೇ - ಪ್ರಾಪ್ತವಾಗಲು, ಪ್ರಾಪ್ತ....ಯಃ- ಹೊಂದಲ್ಪಟ್ಟ (ಸೀತಾಪ್ರದಾನರೂಪವಾದ) ಧರ್ಮದಲ್ಲಿಯೂ, ಅರ್ಥದಲ್ಲಿಯೂ ನಿಶ್ಚಯವುಳ್ಳ, ಭೀಮಕರ್ಮಾ - ಭಯಂಕರ ವ್ಯಾಪಾರವುಳ್ಳ, ವಿಭೀಷಣಃ - ವಿಭೀಷಣನು, ಶೈಲಾ....ಶಂ - ಗಿರಿಶಿಖರಗಳ ಸಮೂಹಕ್ಕೆ ಸಮಾನವಾದ, ಶೈಲಶೃಂಗಮಿವ - ಬೆಟ್ಟದ ಶಿಖರದಂತೆ, ಉನ್ನತಂ - ಅತ್ಯುನ್ನತವಾದ, ಸುವಿ....ಕ್ಷ್ಯಂ - ವಿಭಜಿಸಲ್ಪಟ್ಟ ದೊಡ್ಡ ತೊಟ್ಟಿಗಳುಳ್ಳ, ಮಹಾ....ಹಂ - ವಿದ್ವಜ್ಜನರಿಂದ ಪರಿಗ್ರಹಿಸಲ್ಪಟ್ಟ, ಮತಿಮದ್ಭಿಃ - ಬುದ್ಧಿವಂತರಾದ, ಅನುರಕ್ತೈಃ - ರಾಜನಲ್ಲಿ ಅನುರಕ್ತರಾದ, ಮಹಾಮಾತ್ರೈಃ- ಪ್ರಧಾನಿಗಳಿಂದಲೂ, ಆಪ್ತಪರ್ಯಾಪ್ತೈಃ - ಕಾರ್ಯಸಮರ್ಥರಾದ, ರಾಕ್ಷಸೈಃ - ರಕ್ಕಸರಿಂದಲೂ, ಸರ್ವತಃ - ಸರ್ವಪ್ರದೇಶಗಳಲ್ಲಿಯೂ, ಪರಿರಕ್ಷಿತಂ - ಸಂರಕ್ಷಿಸಲ್ಪಟ್ಟ, ಮತ್ತ....ಸೈಃ - ಮದದಿಂದ ಆನೆಗಳ ನಿಟ್ಟುಸಿರುಗಳಿಂದ, ವ್ಯಾಕು....ತಂ-ವ್ಯಾಕುಲವಾಗಿ ಮಾಡಲ್ಪಟ್ಟ ಗಾಳಿಯುಳ್ಳ, ಶಂಖ....ಷಂ - ಶಂಖಧ್ವನಿಗಳಿಂದ ದೊಡ್ಡದಾದ ಘೋಷವುಳ್ಳ, ತೂರ್ಯ....ತಂ - ತಪಟೆ ಮುಂತಾದ ಧ್ವನಿಗಳಿಂದ ಧ್ವನಿಗೊಳಿಸಲ್ಪಟ್ಟ, ಪ್ರಮ....ಧಂ - ಸ್ತ್ರೀಜನದಿಂದ ಸಮ್ಮರ್ದವಾದ, ಪ್ರಜ್ವ....ರ್ಥಂ - ಮಾತನಾಡುತ್ತಿರುವ ರಾಜಬೀದಿಗಳುಳ್ಳ, ತಪ್ತ....ಹಂ - ಪುಟಪಾಕಶೋಧಿತವಾದ ಚಿನ್ನದ ಲೋವೆಯ ಕೆಳಗಣ ಭೂಮಿಗಳುಳ್ಳ, ಭೂಷ....ತಂ - ಉತ್ತಮವಾದ ಒಡವೆಗಳಿಂದಲಂಕೃತವಾದ, ಗಂಧರ್ವಾಣಾಂ -

---

ಆಮೇಲೆ ಮಾರನೆಯ ದಿನ ಪ್ರಾತಃಕಾಲದಲ್ಲಿ ಮಹಾ ಶೌರ್ಯವಂತನೂ, ಮಹಾ ತೇಜಸ್ವಿಯೂ ಆದ ವಿಭೀಷಣನು ಅಣ್ಣನಾದ ರಾವಣಾಸುರನಿಗೆ ನೀತಿಹೇಳುವುದೆಂಬ ಭಯಂಕರ ಕಾರ್ಯವನ್ನು ಕೈಕೊಂಡು, ಪರ್ವತಶಿಖರಗಳಿಗೆ ಸಮಾನವಾಗಿ, ಪರ್ವತಶಿಖರದಂತೆ ಅತ್ಯುನ್ನತವಾಗಿರುವುದೂ, ಚೆನ್ನಾಗಿ ವಿಭಜಿಸಲ್ಪಟ್ಟ ಒಳತೊಟ್ಟಿಗಳಿಂದ ಕೂಡಿರುವುದೂ, ವಿದ್ವಜ್ಜನರಿಂದ ತುಂಬಿರುವುದೂ, ಮಹಾ ಮೇಧಾವಿಗಳಾಗಿ ಪ್ರಭುವಿನಲ್ಲಿ ನಿರತಿಶಯವಾದ ಭಕ್ತಿಪ್ರೇಮಗಳುಳ್ಳ ಮಹಾಮಾತ್ಯರಿಂದ ತುಂಬಿರುವುದೂ, ಸ್ವಾಮಿ ಕಾರ್ಯದಲ್ಲಿ ಬಹಳ ಶ್ರದ್ಧೆಯುಳ್ಳ ಮಂತ್ರಿಶ್ರೇಷ್ಠರಿಂದ ನಿಬಿಡವಾಗಿರುವುದೂ, ಸುರಕ್ಷಿತವಾಗಿರುವುದೂ, ಮದ್ದಾನೆಗಳ ನಿಟ್ಟುಸಿರುಗಳಂತೆ ಧ್ವನಿಯುಳ್ಳ ಮಂದಮಾರುತದಿಂದ ಧ್ವನಿಗೊಂಡಿರುವುದೂ, ಶಂಖಧ್ವನಿಯಿಂದಲೂ, ವಿವಿಧ ವಾದ್ಯಧ್ವನಿಗಳಿಂದಲೂ ಬಹಳವಾಗಿ ತುಂಭಿರುವುದೂ, ಸ್ತ್ರೀಜನಸಮ್ಮರ್ದವಾಗಿರುವುದೂ, ಅವರ ಕಲಕಲ

ಪ್ರಜಲ್ಪಿತಮಹಾಪಥಂ । ತಪ್ತಕಾಂಚನನಿರ್ಯೂಹಂ ಭೂಷಣೋತ್ತಮಭೂಷಿತಂ ॥ ೫ ॥ ಗಂಧರ್ವಾಣಾಮಿವಾವಾಸಮಾಲಯಂ ಮರುತಾಮಿವ । ರತ್ನಸಂಚಯಸಂಬಾಧಂ ಭವನಂ ಭೋಗಿನಾಮಿವ ॥ ೬ ॥ ತಂ ಮಹಾಭ್ರಮಿವಾದಿತ್ಯಸ್ತೇಜೋವಿಸ್ತೃತರಶ್ಮಿವಾನ್ । ಅಗ್ರಜಸ್ಯಾಲಯಂ ವೀರಃ ಪ್ರವಿವೇಶ ಮಹಾದ್ಯುತಿಃ ॥ ೭ ॥ ಪುಣ್ಯಾನ್ ಪುಣ್ಯಾಹಘೋಷಾಂಶ್ಚ ವೇದವಿದ್ಭಿರುದಾಹೃತಾನ್ । ಶುಶ್ರಾವ ಸುಮಹಾತೇಜಾ ಭ್ರಾತುರ್ವಿಜಯಸಂಶ್ರಿತಾನ್ ॥ ೮ ॥ ಪೂಜಿತಾನ್ ದಧಿಪಾತ್ರೈಶ್ಚ ಸರ್ಪಿರ್ಭಿಸ್ಸುಮನೋಕ್ಷತೈಃ । ಮಂತ್ರವೇದವಿದೋ ವಿಪ್ರಾನ್ ದದರ್ಶ ಸುಮಹಾಬಲಃ ॥ ೯ ॥

---

ಗಂಧರ್ವರ, ಆವಾಸಮಿವ - ಸ್ಥಾನದಂತಿರುವ, ಮರುತಾಂ - ದೇವತೆಗಳ, ಆಲಯಮಿವ - ಮನೆಯಂತಿರುವ, ರತ್ನ....ಧಂ - ರತ್ನರಾಶಿಗಳಿಂದ ತುಂಬಿರುವ, ಭೋಗಿನಾಂ - ಸರ್ಪಗಳ, ಪಟ್ಟಣಮಿವ - ಭೋಗವತೀ ಪಟ್ಟಣದಂತಿರುವ, ಅಗ್ರಜಸ್ಯ - ಅಣ್ಣನಾದ ರಾವಣನ, ತಂಆಲಯಂ - ಆ ಮನೆಯನ್ನು ಕುರಿತು, ಮಹಾದ್ಯುತಿಃ - ಬಹಳ ತೇಜಸ್ವಿಯಾದ, ವೀರಃ - ಶೂರನಾದ ವಿಭೀಷಣನು, ತೇಜೋ....ವಾನ್ - ತೇಜಸ್ಸಿನಿಂದ ಹರಡಿದ ಕಿರಣಗಳುಳ್ಳ, ಆದಿತ್ಯಃ - ಸೂರ್ಯನು, ಮಹಾಭ್ರಮಿವ - ಅಂತರಿಕ್ಷವನ್ನಂತೆ, ಪ್ರವಿವೇಶ - ಹೊಕ್ಕನು. ॥ ೧-೭ ॥ ಸುಮಹಾತೇಜಾಃ - ಬಹಳ ತೇಜೋವಂತನಾದ ವಿಭೀಷಣನು, ಪುಣ್ಯಾನ್ - ಪುಣ್ಯಕರವಾದ, ವೇದವಿದ್ಭಿಃ - ವೇದಜ್ಞರಿಂದ, ಉದಾಹೃತಾನ್-ಹೇಳಲ್ಪಟ್ಟ, ಭ್ರಾತುಃ - ಅಣ್ಣನ, ವಿಜ....ತಾನ್ - ವಿಜಯವೇ ಫಲವಾಗುಳ್ಳ, ಪುಣ್ಯಾ....ಶ್ಚ-ಪುಣ್ಯಾಹ ಮಂತ್ರಗಳ ಧ್ವನಿಗಳನ್ನು, ಶುಶ್ರಾವ-ಕೇಳಿದನು. ॥ ೮ ॥ ಸುಮಹಾಬಲಃ-ಬಹಳ ಬಲಿಷ್ಠನಾದ, ಸಃ-ಆ ವಿಭೀಷಣನು, ದಧಿಪಾತ್ರೈಶ್ಚ-ಮೊಸರಿನ ಪಾತ್ರೆಗಳಿಂದಲೂ, ಸರ್ಪಿಭಿಃ-ಮಧುವಿನಿಂದಲೂ, ಸುಮನೋಕ್ಷತೈಃ-ಹುವ್ವುಗಳಿಂದಲೂ, ಅಕ್ಷತೆಗಳಿಂದಲೂ, ಪೂಜಿತಾನ್-ಪೂಜಿಸಲ್ಪಟ್ಟ, ಮಂತ್ರ....ದಃ-ಕರ್ಮೋಪಯುಕ್ತವಾದ ಮಂತ್ರಗಳನ್ನು ಇತರ ವೇದಗಳನ್ನೂ ತಿಳಿದಿರುವ, ವಿಪ್ರಾನ್-ಬ್ರಾಹ್ಮಣರನ್ನು, ದದರ್ಶ-ಕಂಡನು. ॥ ೯ ॥ ರಕ್ಷೋಭಿಃ - ರಕ್ಕಸರಿಂದ, ಪೂಜ್ಯಮಾನಃ - ಪೂಜಿಸಲ್ಪಟ್ಟ, ಮಹಾಬಾಹುಃ -

---

ಧ್ವನಿಯೊಡಗೂಡಿದ ರಾಜಮಾರ್ಗಗಳುಳ್ಳುದೂ, ಪುಟವಿಕ್ಕಿದ ಚಿನ್ನದಿಂದ ಮಾಡಿದ ಮದ್ದಾನೆಗಳಿಂದ ಅಲಂಕೃತವಾಗಿರುವುದೂ, ಶ್ರೇಷ್ಠವಾದ ಆಭರಣಗಳಿಂದ ಶೃಂಗರಿಸಲ್ಪಟ್ಟಿರುವುದೂ, ಗಂಧರ್ವಪಟ್ಟಣವನ್ನು ಹೋಲುತ್ತಿರುವುದೂ, ಸಮಸ್ತ ಸಂಪತ್ಸಮೃದ್ಧಿಯಿಂದ ತುಂಬಿ ಅಮರಾವತಿಯಂತಿರುವುದೂ, ಶ್ರೇಷ್ಠವಾದ ರತ್ನಗಳಿಂದ ತುಂಬಿ ನಾಗಲೋಕದಂತಿರುವುದೂ ಆದ ತನ್ನ ಅಣ್ಣನಾದ ರಾವಣನ ಅರಮನೆಯನ್ನು, ದಿನಮಣಿಯು ಆಗಸವನ್ನು ಹೊಗುವಂತೆ ತನ್ನ ತೇಜಸ್ಸಿನಿಂದ ಬೆಳಗುತ್ತ ಹೊಕ್ಕನು. ॥ ೧–೭ ॥ ಮಹಾತೇಜಸ್ವಿಯಾದ ಆ ವಿಭೀಷಣನಿಂತು ರಾವಣನರಮನೆಯನ್ನು ಪ್ರವೇಶಿಸಿ ಮುಂದುವರಿಯುತ್ತ, ತನ್ನ ಅಗ್ರಜನಿಗೋಸುಗ ಜಯವನ್ನು ಕೋರಿ ವೇದವಿದರಾದ ಬ್ರಾಹ್ಮಣರು ನುಡಿಯುತ್ತಿದ್ದ ಪುಣ್ಯಾಹ ಮಂತ್ರಗಳ ಧ್ವನಿಯನ್ನು ಕೇಳಿದನು. ಮೊಸರು ಕಡಿಯುವ ಪಾತ್ರೆಗಳಿಂದಲೂ, ತುಪ್ಪದ ಪಾತ್ರೆಗಳಿಂದಲೂ, ಪುಷ್ಪಗಳಿಂದಲೂ, ಅಕ್ಷತೆಗಳಿಂದಲೂ ಪೂಜಿಸಲ್ಪಟ್ಟವರೂ, ಮಂತ್ರವೇತ್ತರೂ, ವೇದವಿದರೂ ಆದ ಬ್ರಾಹ್ಮಣರನ್ನು ಮಹಾತ್ಮನಾದ ಆ ವಿಭೀಷಣನು ತನ್ನ ಅಗ್ರಜನ ಮನೆಯಲ್ಲಿ ಕಂಡನು. ಆಗ ಮಹಾ ಬಾಹುವಾದ

ಸಪೂಜ್ಯಮಾನೋ ರಕ್ಷೋಭಿರ್ದೀಪ್ಯಮಾನಸ್ಸ್ವತೇಜಸಾ । ಆಸನಸ್ಥಂ ಮಹಾಬಾಹುರ್ವವಂದೇ ಧನದಾನುಜಂ ॥ ೧೦ ॥ ಸರಾಜದೃಷ್ಟಿಸಂಪನ್ನಮಾಸನಂ ಹೇಮಭೂಷಿತಂ । ಜಗಾಮ ಸಮುದಾಚಾರಂ ಪ್ರಯುಜ್ಯಾಚಾರಕೋವಿದಃ ॥ ೧೧ ॥ ಸ ರಾವಣಂ ಮಹಾತ್ಮಾನಂ ವಿಜನೇ ಮಂತ್ರಿಸನ್ನಿಧೌ । ಉವಾಚ ಹಿತಮತ್ಯರ್ಥಂ ವಚನಂ ಹೇತುನಿಶ್ಚಿತಂ ॥೧೨॥ ಪ್ರಸಾದ್ಯ ಭ್ರಾತರಂ ಜ್ಯೇಷ್ಠಂ ಸಾಂತ್ವೇನೋಪಸ್ಥಿತಕ್ರಮಃ । ದೇಶಕಾಲಾರ್ಥಸಂವಾದೀ ದೃಷ್ಟಲೋಕಪರಾವರಃ ॥ ೧೩ ॥ " ಯದಾಪ್ರಭೃತಿ ವೈದೇಹೀ

---

ಮಹಾ ಬಾಹುವಾದ, ಸ್ವತೇಜಸಾ - ತನ್ನ ತೇಜಸ್ಸಿನಿಂದಲೇ, ದೀಪ್ಯಮಾನಂ - ಹೊಳೆಯುತ್ತಿರುವ, ಸಃ - ಆ ವಿಭೀಷಣನು, ಆಸನಸ್ಥಂ - ಸಿಂಹಾಸನಾರೂಢನಾದ, ಧನಧಾನುಜಂ - ಕುಬೇರನಿಗೆ ತಮ್ಮನಾದ ರಾವಣನನ್ನು ಕುರಿತು, ವವಂದೇ - ನಮಸ್ಕರಿಸಿದನು. ॥೧೦॥ ಆಚಾ....ದಃ - ಸದಾಚಾರದಲ್ಲಿ, ಅಭಿಜ್ಞನಾದ, ಸಃ - ಆ ವಿಭೀಷಣನು, ರಾಜ....ನ್ನಂ - ರಾಜದೃಷ್ಟಿಯಿಂದ ಸೂಚಿಸಲ್ಪಟ್ಟ, ಹೇಮಭೂಷಿತಂ - ಚಿನ್ನದ ಕಟ್ಟುಗಳಿಂದ ಅಲಂಕೃತವಾದ, ಆಸನಂ - ಪೀಠವನ್ನು, ಸಮುದಾಚರಂ - ಜಯಶಬ್ದ ಪ್ರಯೋಗವನ್ನು, ಪ್ರಯುಜ್ಯ - ಪ್ರಯೋಗಿಸಿ, ಜಗಾಮ - ಹೊಂದಿದನು. ॥ ೧೧ ॥ ಸಃ - ಆ ವಿಭೀಷಣನು, ವಿಜನೇ - ಜನರಹಿತವಾದ ಕಾಲದಲ್ಲಿ, ಮಂತ್ರಿಸನ್ನಿಧೌ - ಮಂತ್ರಿಗಳ ಸಮ್ಮುಖದಲ್ಲಿ, ಮಹಾತ್ಮಾನಾಂ - ಮಹಾ ಪ್ರಭಾವವಂತನಾದ, ರಾವಣಂ - ರಾವಣನನ್ನು ಕುರಿತು, ಅತ್ಯರ್ಥಂ - ಬಹಳವಾಗಿ, ಹಿತಂ - ಶ್ರೇಯಸ್ಕರವಾದ, ಹೇತುನಿಶ್ಚಿತಂ - ಕಾರಣಗಳಿಂದ ನಿಶ್ಚಯಿಸಿದ, ವಚನಂ - ಮಾತನ್ನು, ಉವಾಚ - ಹೇಳಿದನು. ॥ ೧೨ ॥ ಉಪ....ಮಃ - ಅನುಸರಿಸಿದ ಕ್ರಮವುಳ್ಳವನಾಗಿ, ದೇಶ....ದೀ - ದೇಶದಿಂದಲೂ, ಕಾಲದಿಂದಲೂ ಸಂಪಾದಿಸತಕ್ಕ ಪ್ರಯೋಜನಗಳನ್ನು ತಿಳಿದವನಾಗಿ, ದೃಷ್ಟ....ರಃ - ತಿಳಿಯಲ್ಪಟ್ಟ ಲೋಕದ ಉತ್ಕರ್ಷಾಪಕರ್ಷಗಳುಳ್ಳವನಾಗಿ, ಸಾಂತ್ವೇನ - ಸಮಾಧಾನ ವಚನದಿಂದ, ಜ್ಯೇಷ್ಠಂಭ್ರಾತರಂ - ಜ್ಯೇಷ್ಠ ಭ್ರಾತೃವಾದ ಆ ರಾವಣನನ್ನು, ಪ್ರಸಾದ್ಯ - ಪ್ರಸನ್ನನಾಗಿ ಮಾಡಿಕೊಂಡು, ಉವಾಚ - ಹೇಳಿದನು. ॥ ೧೩ ॥ ಯದಾಪ್ರಭೃತಿ - ಯಾವಕಾಲ ಮೊದಲ್ಗೊಂಡು, ವೈದೇಹೀ - ಸೀತಾದೇವಿಯು, ತವ - ನಿನ್ನ, ಇಮಾಂಪುರೀಂ - ಈ ರಾಜಧಾನಿಯನ್ನು ಕುರಿತು,

---

ವಿಭೀಷಣನು ರಾಕ್ಷಸರಿಂದ ಪೂಜಿತನಾಗಿ ಒಳಗೆ ಹೋಗಿ ತನ್ನ ತೇಜಸ್ಸಿನಿಂದ ಬಹಳವಾಗಿ ಪ್ರಕಾಶಿಸುತ್ತ ಸಿಂಹಾಸನದ ಮೇಲೆ ಕುಳಿತಿರುವ, ಕುಬೇರಾನುಜನಾದ ರಾವಣನನ್ನು ನೋಡಿ ಸಾಷ್ಟಾಂಗಪ್ರಣಾಮವನ್ನು ಮಾಡಿದನು. ॥ ೮–೧೦ ॥ ಆಚಾರಸಂಪ್ರದಾಯಗಳನ್ನು ಚೆನ್ನಾಗಿ ತಿಳಿದಿರುವ ಆ ವಿಭೀಷಣನು ರಾಜಸತ್ಕಾರಗಳನ್ನು ಮಾಡಿ ನಿಂತೊಡನೆಯೇ ರಾಕ್ಷಸಪ್ರಭುವಾದ ಆ ರಾವಣನು ನೇತ್ರಸಂಜ್ಞೆಯಿಂದಲೇ ಸ್ವರ್ಣಾಸನವೊಂದನ್ನು ತೋರಿ ಕುಳಿತುಕೊಳ್ಳಲಪ್ಪಣೆಯಿತ್ತನು. ಆಗ ವಿಭೀಷಣನು ಅದರಲ್ಲಿ ಕುಳಿತುಕೊಂಡನು. ಕೂಡಲೇ ಮಂತ್ರಿಗಳ ಹೊರತು ಮಿಕ್ಕವರೆಲ್ಲರೂ ಹೊರಟುಹೋದರು. ಆಗ ವಿಭೀಷಣನು ಮಂತ್ರಿಗಳ ನಡುವೆ ಮಹಾ ಪರಾಕ್ರಮಶಾಲಿಯಾದ ರಾವಣನನ್ನು ಪ್ರಸನ್ನನನ್ನಾಗಿ ಮಾಡಿಕೊಂಡು, ಬಹು ಹಿತವಾದುದೂ, ಅನೇಕ ಹೇತುಗಳಿಂದ ನಿಶ್ಚಯಿಸಲ್ಪಟ್ಟುದೂ, ಯುಕ್ತಿಯುಕ್ತವಾದುದೂ ಆದ ಮಾತುಗಳನ್ನು, ದೇಶಕಾಲಗಳನ್ನು ತಿಳಿದು ಯಾವ ಕಾರ್ಯವನ್ನು ಮಾಡಬೇಕೆಂಬ ವಿಷವನ್ನು ಕುರಿತ ಆ ಮಾತುಗಳನ್ನು ಕ್ರಮಕ್ರಮವಾಗಿ ಸಾಂತ್ವನದಿಂದ ಆತನಿಗೆ ಹೇಳುವನು. ॥ ೧೧–೧೩ ॥ " ಅಣ್ಣಾ, ರಾವಣನೇ !

ಸಂಪ್ರಾಪ್ತೇಮಾಂ ಪುರೀಂ ತವ । ತದಾಪ್ರಭೃತಿ ದೃಶ್ಯಂತೇ ನಿಮಿತ್ತಾನ್ಯಶುಭಾನಿ ನಃ ||೧೪|| ಸುಸ್ಫುಲಿಂಗಸ್ಸಧೂಮಾರ್ಚಿಸ್ಸಧೂಮಕಲುಷೋದಯಃ । ಮಂತ್ರಸಂಧುಕ್ಷಿತೋಽಪ್ಯಗ್ನಿರ್ನಸಮ್ಯಗಭಿವರ್ಧತೇ ||೧೫|| ಅಗ್ನಿಷ್ಟೇಷ್ವಗ್ನಿಶಾಲಾಸು ತಥಾ ಬ್ರಹ್ಮಸ್ಥಲೀಷು ಚ । ಸರೀಸೃಪಾಣಿ ದೃಶ್ಯಂತೇ ಹವ್ಯೇಷು ಚ ಪಿಪೀಲಿಕಾಃ ||೧೬|| ಗವಾಂ ಪಯಾಂಸಿ ಸ್ಕನ್ನಾನಿ ವಿಮದಾ ವೀರಕುಂಜರಾಃ । ದೀನಮಶ್ವಾಃ ಪ್ರಹೇಷಂತೇ ನಚ ಗ್ರಾಸಾಭಿನಂದಿನಃ ||೧೭|| ಖರೋಷ್ಟ್ರಾಶ್ವತರಾ ರಾಜನ್! ಭಿನ್ನರೋಮಾಃ ಸ್ರವಂತಿ ನಃ । ನಸ್ವಭಾವೇಽವತಿಷ್ಠಂತೇ ವಿಧಾನೈರಪಿ ಚಿಂತಿತಾಃ ||೧೮|| ವಾಯಸಾಸ್ಸಂಘಶಃ

---

ಸಂಪ್ರಾಪ್ತಾ - ಬಂದಳೋ, ತದಾಪ್ರಭೃತಿ - ಅದು ಮೊದಲ್ಗೊಂಡು, ನಃ - ನಮಗೆ, ಅಶುಭಾನಿ - ಅಮಂಗಳಕರವಾದ, ನಿಮಿತ್ತಾನಿ - ಶಕುನಗಳೇ, ದೃಶ್ಯಂತೇ - ಕಾಣುತ್ತಿವೆ. ||೧೪|| ಸಸ್ಫುಲಿಂಗಃ- ಬೆಂಕಿಯ ಕಿಡಿಗಳೊಡಗೂಡಿದ, ಸಧೂಮಾರ್ಚಿಃ-ಹೊಗೆಯಿಂದಲೂ, ಅಗ್ನಿಜ್ವಾಲೆಗಳಿಂದಲೂ ಕೂಡಿದ, ಸಧೂ....ಯಃ - ಧೂಮದಿಂದ ಮಲಿನವಾದ ಹುಟ್ಟುಳ್ಳುದಾದ, ಅಗ್ನಿಃ - ಅಗ್ನಿಯು, ಮಂತ್ರ....ಪಿ - ಮಂತ್ರವತ್ತಾದ ಹವಿರ್ಭಾಗಗಳಿಂದ ಹೊಂದಿಸಿದುದಾದರೂ, ಸಮ್ಯಕ್ - ಚನ್ನಾಗಿ, ನಾಭಿವರ್ಧತೇ - ವೃದ್ಧಿಹೊಂದುವುದಿಲ್ಲವು. ||೧೫|| ಅಗ್ನಿಷ್ಟೇಷು - ಅಡಿಗೆಯ ಮನೆಗಳಲ್ಲಿಯೂ, ಅಗ್ನಿಶಾಲಾಸು - ಅಗ್ನಿಹೋತ್ರ ಗೃಹಗಳಲ್ಲಿಯೂ, ತಥಾ-ಹಾಗೆಯೇ, ಬ್ರಹ್ಮಸ್ಥಲೀಷುಚ-ವೇದಘೋಷ ಸ್ಥಳಗಳಲ್ಲಿಯೂ, ಸರೀಸೃಪಾಣಿ - ಸರ್ಪಗಳು, ದೃಶ್ಯಂತೇ - ಕಾಣುತ್ತವೆ. ||೧೬|| ಗವಾಂ - ಗೋವುಗಳ, ಪಯಾಂಸಿ - ಸ್ತನ್ಯಗಳು, ಸ್ಕನ್ನಾಗಿ - ಬತ್ತಿಹೋಗಿವೆ, ವೀರಕುಂಜರಾಃ - ಮದವೇರಿದ ಆನೆಗಳು, ವಿಮದಾಃ - ಮದರಹಿತವಾಗಿವೆ, ಅಶ್ವಾಃ - ಕುದುರೆಗಳು, ದೀನಂ - ದೀನವಾಗಿ, ಪ್ರಹೇಷಂತೇ - ಕೂಗುತ್ತವೆ, ಗ್ರಾಸಾ....ಶ್ಚ - ಹುಲ್ಲು ಮೊದಲಾದವುಗಳಿಂದ ಸಂತೋಷಗೊಂಡವು, ನಭವಂತಿ - ಆಗುವದಿಲ್ಲ. ||೧೭|| ಹೇ ರಾಜನ್ - ಎಲೈ ರಾಜನೇ, ನಃ - ನಮ್ಮ, ಖರೋ....ರಾಃ - ಕತ್ತೆಗಳೂ, ಒಂಟೆಗಳೂ, ಭಿನ್ನರೋಮಾಃ - ಊರ್ಧ್ವರೋಮಗಳುಳ್ಳವುಗಳಾಗಿ, ಸ್ರವಂತಿ - ಕಂಬನಿಗಳನ್ನು ಬಿಡುತ್ತವೆ, ವಿಧಾನೈರಪಿ - ಔಷದೋಪಚಾರಗಳಿಂದಲೂ, ಚಿಂತಿತಾಃ - ಚಿಕಿತ್ಸೆ ಮಾಡಲ್ಪಟ್ಟವುಗಳಾದರೂ, ಸ್ವಭಾವೇ - ಪೂರ್ವಸ್ಥಿತಿಯನ್ನು, ನಾವತಿಷ್ಠಂತಿ - ಹೊಂದುವುದಿಲ್ಲವು. ||೧೮|| ಕ್ರೂರಾಃ - ಕ್ರೂರಗಳಾದ, ವಾಯಸಾಃ-ಕಾಗೆಗಳು, ಸಂಘಶಃ-ಗುಂಪುಗುಂಪಾಗಿ, ಸಮಂತತಃ-ಎಲ್ಲಾ ಕಡೆಗಳಲ್ಲಿಯೂ,

---

ಸೀತೆಯನ್ನು ನಮ್ಮ ಪಟ್ಟಣಕ್ಕೆ ಕೊಂಡು ಬಂದಂದಿನಿಂದ ಮೊದಲುಗೊಂಡು ಅಮಂಗಳಕರವಾದ ಅನೇಕ ನಿಮಿತ್ತಗಳು ಕಾಣುತ್ತಿವೆ. ಅಗ್ನಿಯು ಸಮಂತ್ರಕವಾಗಿ ಪ್ರಜ್ವಲಗೊಳಿಸಿದರೂ ಚೆನ್ನಾಗಿ ಜ್ವಲಿಸದೆ ದಟ್ಟವಾದ ಹೊಗೆಯೊಡಗೂಡಿ ಕಿಡಿಹಾರುತ್ತ ವೃದ್ಧಿಯಾಗುವುದೇ ಇಲ್ಲವು. ಅಗ್ನಿಹೋತ್ರಗೃಹಗಳಲ್ಲಿಯೂ, ಅಗ್ನಿಕುಂಡಗಳಲ್ಲಿಯೂ, ವೇದಾಧ್ಯಯನ ಸ್ಥಳಗಳಲ್ಲಿಯೂ ಸರ್ಪಗಳು ಕಾಣಿಸಿಕೊಳ್ಳುತ್ತಿರುವುವು. ಹವಿಸ್ಸಿಗೆ ಇರುವೆಗಳು ಮುತ್ತುತ್ತಿರುವುವು. ಗೋವುಗಳ ಕೆಚ್ಚಲುಗಳಲ್ಲಿ ಕ್ಷೀರವು ಬತ್ತುತ್ತಿರುವುದು. ಮದ್ದಾನೆಗಳಿಗೆ ಮದವುಡುಗುತ್ತಿರುವುದು. ಜಾತ್ಯಶ್ವಗಳು ಬಹಳ ದೈನ್ಯದಿಂದ ಕೂಗುತ್ತಿರುವುವು. ಸಮಸ್ತ ಜಂತುಗಳೂ ಆಹಾರವನ್ನು ತೊರೆದಿರುವುವು. ಎಲೈ ರಾವಣೇಶ್ವರನೇ! ಕತ್ತೆಗಳೂ, ಹೇಸರಕತ್ತೆಗಳೂ, ಒಂಟೆಗಳೂ ರೋಮಗಳುದಿರಿ ಕಣ್ಣೀರಿಡುತ್ತಿರುವುವು. ಬಗೆಬಗೆಯ ಚಿಕಿತ್ಸೆಗಳನ್ನು ಮಾಡಿದರೂ ಅವು ಆರೋಗ್ಯವನ್ನು ಹೊಂದದಿರುವುವು. ಕಾಗೆಗಳು ಸುತ್ತ

ಕ್ರೂರಾ ವ್ಯಾಹರಂತಿ ಸಮಂತತಃ । ಸಮವೇತಾಶ್ಚ ದೃಶ್ಯಂತೇ ವಿಮಾನಾಗ್ರೇಷು ಸಂಘಶಃ ||೧೯|| ಗೃಧ್ರಾಶ್ಚ ಪರಿಲೀಯಂತೇ ಪುರೀಮುಪರಿಪಿಂಡಿತಾಃ । ಉಪಪನ್ನಾಶ್ಚ ಸಂಧ್ಯೇ ದ್ವೇ ವ್ಯಾಹರಂತ್ಯಶಿವಂ ಶಿವಾಃ || ೨೦ || ಕ್ರವ್ಯಾದಾನಾಂ ಮೃಗಾಣಾಂಚ ಪುರದ್ವಾರೇಷು ಸಂಘಶಃ । ಶ್ರೂಯಂತೇ ವಿಪುಲಾ ಘೋಷಾಃ ಸವಿಸ್ಫೂರ್ಜಥುನಿಸ್ವನಾಃ || ೨೧ || ತದೇವಂ ಪ್ರಸ್ತುತೇ ಕಾರ್ಯೇಽಪ್ರಾಯಶ್ಚಿತ್ತಮಿದಂ ಕ್ಷಮಂ । ರೋಚತೇ ಯದಿ ವೈದೇಹೀ ರಾಘವಾಯ ಪ್ರದೀಯತಾಂ || ೨೨ || ಇದಂಚ ಯದಿ ವಾ ಮೋಹಾಲ್ಲೋಭಾದ್ವಾ ವ್ಯಾಹೃತಂ ಮಯಾ । ತತ್ರಾಪಿಚ ಮಹಾರಾಜ ನದೋಷಂ

ವ್ಯಾಹರಂತಿ - ಕೂಗುತ್ತವೆ, ವಿಮಾನಾಗ್ರೇಷು - ರಾಜಗೃಹಗಳ ತುದಿಗಳಲ್ಲಿ, ಸಂಘಶಃ - ಗುಂಪಾಗಿ, ಸಮವೇತಾಶ್ಚ - ಗುಂಪುಸೇರಿ, ದೃಶ್ಯಂತೇ - ಕಾಣುತ್ತವೆ. || ೧೯ || ಗೃಧ್ರಾಶ್ಚ - ಹದ್ದುಗಳೂ, ಪುರೀಮುಪರಿ - ಪಟ್ಟಣದ ಮೇಲ್ಭಾಗದಲ್ಲಿ, ಪಿಂಡಿತಾಃ - ಗುಂಪುಗಳಾಗಿ, ಪರಿಲೀಯಂತೆ - ಔತು ಕೊಳ್ಳುತ್ತವೆ, ಸಂಧ್ಯೇದ್ವೇ - ಸಾಯಂಕಾಲ ಪ್ರಾತಃಕಾಲಗಳಲ್ಲಿ, ಉಪಪನ್ನಾಃ - ಪಟ್ಟಣಕ್ಕೆ ಸಮೀಪ ವರ್ತಿಗಳಾದ, ಶಿವಾಃ - ನರಿಗಳು, ಅಶಿವಂ - ಅಮಂಗಳಕರವಾಗಿ, ವ್ಯಾಹರಂತಿ - ಅರಚಿಕೊಳ್ಳುತ್ತಿವೆ. || ೨೦ || ಪುರದ್ವಾರೇಷು - ಊರುಬಾಗಿಲುಗಳಲ್ಲಿ, ಸಂಘಶಃ - ಗುಂಪುಗುಂಪಾಗಿ, ಕ್ರವ್ಯಾದಾನಾಂ - ಮಾಂಸವನ್ನು ತಿನ್ನುತ್ತಿರುವ, ಮೃಗಾಣಾಂ - ಮೃಗಗಳ, ಸವಿ....ನಾಃ - ಸಿಡಿಲಿನ ಧ್ವನಿಗಳಿಂದೊಡಗೂಡಿದ, ವಿಪುಲಾಃ - ಬಹಳವಾದ, ಘೋಷಾಃ - ಶಬ್ದಗಳು, ಶ್ರೂಯಂತೇ - ಕೇಳುತ್ತವೆ, ತತ್ - ಆ ಕಾರಣದ ದೆಸೆಯಿಂದ, ಏವಂ - ಈ ಪರಿಯಾಗಿ, ಕಾರ್ಯೇ - ಕಾರ್ಯವು, ಪ್ರಸ್ತುತೇ - ಪ್ರಸಕ್ತವಾಗಿರಲು, ಇದಂಪ್ರಾಯಶ್ಚಿತ್ತಂ - ಈ ಸೀತಾಪ್ರದಾನ ಪ್ರಾಯಶ್ಚಿತ್ತವು, ಕ್ಷಮಂ - ಯೋಗ್ಯವು, ರೋಚತೇಯದಿ - ಸಮ್ಮತವಾದರೆ, ವೈದೇಹೀ - ಸೀತಾದೇವಿಯು, ರಾಘವಾಯ - ಶ್ರೀರಾಮನಿಗೆ, ಪ್ರದೀಯತಾಂ - ಕೊಡಲ್ಪಡಲಿ. || ೨೧-೨೨ || ಹೇ ಮಹಾರಾಜ - ಎಲೈ ಮಹಾರಾಜನೇ, ಇದಂಚ - ಈ ಮಾತು, ಮೋಹಾದ್ವಾ - ಭ್ರಾಂತಿಯಿಂದಲೋ, ಲೋಭಾದ್ವಾ - ಬದುಕುವಿಕೆಯಲ್ಲಿ ಆಸಕ್ತಿಯಿಂದಲೋ, ಮಯಾ - ನನ್ನಿಂದ, ವ್ಯಾಹೃತಂಯದಿ - ಹೇಳಲ್ಪಟ್ಟದ್ದಾದರೆ, ತತ್ರಾಪಿ - ಹಾಗಾದರೂ, ದೋಷಂ - ದೋಷವನ್ನು, ಕರ್ತುಂ - ಆರೋಪಿಸುವದಕ್ಕೆ, ನಾರ್ಹಸಿ - ಯೋಗ್ಯನಾಗಬೇಡ.

ಮುತ್ತಲೂ ಗುಂಪುಗೂಡಿ ಅರಚುತ್ತಿರುವುವು. ಇಷ್ಟೆಯಲ್ಲದೆ ಆ ಕಾಗೆಗಳು ನಮ್ಮ ಪಟ್ಟಣದ ಗೋಪುರಗಳ ಮೇಲೆಲ್ಲಾ ಗುಂಪುಗೂಡಿ ಕುಳಿತಿರುವುವು. ಮಹಾರಾಜಾ! ಹದ್ದುಗಳೂ ಸಹ ಗುಂಪುಗೂಡಿ ನಮ್ಮ ಪಟ್ಟಣದ ಮೇಲೆ ಹಾರಾಡುತ್ತ ನಿಂತಿರುವುವು. ಪ್ರಾತಸ್ಸಂಧ್ಯಾ ಕಾಲಗಳಲ್ಲಿ ನರಿಗಳು ನಮ್ಮ ಪಟ್ಟಣದ ಸಮೀಪಕ್ಕೆ ಬಂದು ಬಹು ಅಮಂಗಳಕರವಾಗಿ ಅರಚಿಕೊಳ್ಳುತ್ತಿರುವುವು. || ೧೮-೨೦ || ಇಷ್ಟೆಯಲ್ಲದೆ ಮಾಂಸಾಶನಗಳಾದ ಶ್ವಾಪದಗಳು ಗುಂಪುಗುಂಪಾಗಿ ಸೇರಿ ಸಿಡಿಲಿಗೆ ಸಮಾನವಾಗಿ ಮಹಾ ಭಯಂಕರವಾದ ಧ್ವನಿಯಿಂದ ನಮ್ಮ ಪಟ್ಟಣದ ಬಾಗಿಲುಗಳಲ್ಲಿ ಕೂಗುತ್ತಿರುವುವು. ಅಣ್ಣಾ! ಹೀಗೆ ಸಮಸ್ತವೂ ವಿಪರೀತವಾಗಿ ನಡೆಯುತ್ತಿರುವುದು. ಇದಕ್ಕೆ ಪ್ರಾಯಶ್ಚಿತ್ತವಾಗಿ ಶ್ರೀರಾಮನಿಗೆ ಸೀತಾದೇವಿಯನ್ನು ಒಪ್ಪಿಸುವುದೇ ಯುಕ್ತವಾಗಿರುವುದು. ಎಲೈ ಮಹಾರಾಜನೇ! ನಾನು ಅಜ್ಞಾನದಿಂದಲೋ, ಲೋಭದಿಂದಲೋ ಈ ಮಾತನ್ನು ಹೇಳಿರುವೆನು. ಆದುದರಿಂದ ಇದರಲ್ಲಿ ದೋಷವನ್ನೆಣಿಸಬೇಡ. ಈ ದುಶ್ಶಕುನ ದೋಷಗಳು ಸಮಸ್ತ ರಾಕ್ಷಸರಿಗೂ, ರಾಕ್ಷಸ

ಕರ್ತುಮರ್ಹಸಿ ‖ ೨೩ ‖ ಅಯಂಚ ದೋಷಃ ಸರ್ವಸ್ಯ ಜನಸ್ಯಾಽಸ್ಯೋಪಲಕ್ಷ್ಯತೇ। ರಕ್ಷಸಾಂ ರಾಕ್ಷಸೀನಾಂಚ ಪುರಸ್ಯಾಂತಃಪುರಸ್ಯ ಚ ‖೨೪‖ ಶ್ರಾವಣೇಚಾಸ್ಯ ಮಂತ್ರಸ್ಯ ನಿವೃತ್ತಾಃ ಸರ್ವಮಂತ್ರಿಣಃ । ಅವಶ್ಯಂಚ ಮಯಾ ವಾಚ್ಯಂ ಯದ್ದೃಷ್ಟಮಪಿ ವಾ ಶ್ರುತಂ । ಸಂಪ್ರಧಾರ್ಯ ಯಥಾನ್ಯಾಯಂ ತದ್ಭವಾನ್ ಕರ್ತುಮರ್ಹತಿ" ‖೨೫‖ ಇತಿ ಸ್ಮ ಮಂತ್ರಿಣಾಂ ಮಧ್ಯೇ ಭ್ರಾತಾ ಭ್ರಾತರಮೂಚಿವಾನ್ । ರಾವಣಂ ರಾಕ್ಷಸ ಶ್ರೇಷ್ಠಂ ಪಥ್ಯಮೇತದ್ವಿಭೀಷಣಃ ‖೨೬‖ ಹಿತಂ ಮಹಾರ್ಥಂ ಮೃದುಹೇತುಸಂಹಿತಂ ವ್ಯತೀತಕಾಲಾಯತಿಸಂಪ್ರತಿಕ್ಷಮಂ । ನಿಶಮ್ಯ ತದ್ವಾಕ್ಯಮುಪಸ್ಥಿತಜ್ವರಃ ಪ್ರಸಂಗ

‖ ೨೩ ‖ ಅಯಂಚದೋಷಃ - ಈ ಅಪಶಕುನಗಳಿಂದ ಹುಟ್ಟಿದ ದೋಷವು, ಸರ್ವಸ್ಯ - ಸಮಸ್ತವಾದ, ಅಸ್ಯಜನಸ್ಯ - ಈ ಜನಕ್ಕೆ, ಉಪಲಕ್ಷ್ಯತೇ - ಕಾಣಲ್ಪಡುತ್ತದೆ, ರಕ್ಷಸಾಂ - ರಕ್ಕಸರಿಗೆ, ರಾಕ್ಷಸೀನಾಂಚ - ರಾಕ್ಷಸರ ಹೆಂಗುಸರಿಗೂ, ಪುರಸ್ಯ - ಪಟ್ಟಣದ ಜನರಿಗೂ, ಅಂತಃಪುರಸ್ಯಚ - ಅಂತಃ ಪುರದಲ್ಲಿರುವ ಜನರಿಗೂ, ಉಪಲಕ್ಷ್ಯತೇ - ಕಾಣಲ್ಪಡುತ್ತದೆ. ‖ ೨೪ ‖ ಅಸ್ಯಮಂತ್ರಸ್ಯ - ಈ ಆಲೋಚನೆಯ, ಶ್ರಾವಣೇಚ - ಶ್ರವಣಮಾಡಿಸುವಿಕೆಯ ವಿಷಯದಲ್ಲಿಯೂ ಕೂಡ, ಸರ್ವಮಂತ್ರಿಣಃ - ಸಮಸ್ತ ಮಂತ್ರಿಗಳೂ, ನಿವೃತ್ತಾಃ - ಹಿಂತೆಗೆಯುತ್ತಾರೆ, ಮಯಾ - ನನ್ನಿಂದ, ಅವಶ್ಯಂ - ಅವಶ್ಯಕವಾಗಿ, ಯದ್ದೃಷ್ಟಂ - ಯಾವುದು ಕಾಣಲ್ಪಟ್ಟಿದೆಯೋ, ಯದ್ವಾಪಿಶ್ರುತಂ - ಯಾವುದು ಕೇಳಲ್ಪಟ್ಟಿದೆಯೋ, ತತ್ - ಅದು, ವಾಚ್ಯಂ - ಹೇಳತಕ್ಕುದು, ಭವಾನ್ - ನೀನು, ತತ್ - ಅದನ್ನು, ಯಥಾನ್ಯಾಯಂ - ನ್ಯಾಯಾನುಸಾರವಾಗಿ, ಸಂಪ್ರಧಾರ್ಯ - ತಿಳಿದು, ಕರ್ತುಂ - ಮಾಡಲು, ಅರ್ಹತಿ - ಯೋಗ್ಯನಾಗು. ‖ ೨೫ ‖ ಇತಿ - ಈ ಪರಿಯಾಗಿ, ಮಂತ್ರಿಣಾಂ - ಮಂತ್ರಿಗಳ, ಮಧ್ಯೇ - ನಡುವೆ, ಭ್ರಾತಾ - ತಮ್ಮನಾದ, ವಿಭೀಷಣಃ - ವಿಭೀಷಣನು, ಭ್ರಾತರಂ - ಅಣ್ಣನಾದ, ರಾಕ್ಷಸಶ್ರೇಷ್ಠಂ - ರಾಕ್ಷಸೋತ್ತಮನಾದ, ರಾವಣಂ - ರಾವಣನನ್ನು ಕುರಿತು, ಪಥ್ಯಂ - ಹಿತಕರವಾದ, ಏತತ್ - ಈ ಮಾತನ್ನು, ಊಚಿವಾನ್ - ಹೇಳಿದನು. ‖ ೨೬ ‖ ಮಹಾರ್ಥಂ - ಮಹಾ ಪ್ರಯೋಜನವುಳ್ಳ, ಮೃದು - ಸಮಾಧಾನದಿಂದ ಕೂಡಿರುವ, ಹೇತುಸಂಹಿತಂ - ಯುಕ್ತಿಗಳಿಂದ ಕೂಡಿರುವ, ವ್ಯತೀ....ಮಂ - ಭೂತ ಭವಿಷ್ಯತ್ ವರ್ತಮಾನ ಕಾಲಗಳಲ್ಲಿ ಯೋಗ್ಯವಾಗಿರುವ, ಹಿತಂ - ಹಿತಕರವಾದ, ತದ್ವಾಕ್ಯಂ - ಆ

ಸ್ತ್ರೀಯರಿಗೂ, ಅಂತಃಪುರಸ್ತ್ರೀಯರಿಗೂ, ನಮ್ಮ ಪಟ್ಟಣದಲ್ಲಿರುವ ಸಮಸ್ತ ಪ್ರಜೆಗಳಿಗೂ ದೃಗ್ಗೋಚರವಾಗುತ್ತಿರುವುವು. ಮಂತ್ರಿಗಳೆಲ್ಲರೂ ನಿನಗೆ ಭಯಪಟ್ಟು ಈ ವಿಷಯವನ್ನು ನಿನ್ನೊಡನೆ ಹೇಳದಿರುವರು. ನಾನು ನಿನಗೆ ಒಡಹುಟ್ಟಿದನಾದುದರಿಂದ ಕಂಡುದು, ಕೇಳಿದುದು ಎಲ್ಲವನ್ನೂ ನಿನಗೆ ಅತ್ಯವಶ್ಯಕವಾಗಿ ಹೇಳಬೇಕು. ಇಲ್ಲದಿದ್ದರೆ ಅಪಚಾರವಾಗುವುದು. ಆದುದರಿಂದಲೇ ಈ ವಿಷಯವನ್ನು ನಾನು ನಿನಗೆ ತಿಳಿಸಿರುವೆನು. ‖ ೨೧—೨೫ ‖ ಇನ್ನು ನೀನು ರಾಜನೀತಿಶಾಸ್ತ್ರದಂತೆ ಈ ವಿಷಯವನ್ನು ಚೆನ್ನಾಗಿ ಆಲೋಚಿಸಿ ಯುಕ್ತಿಯುಕ್ತವಾಗಿ ನಿಶ್ಚಯಿಸಿ ನಿನ್ನಿಷ್ಟದಂತೆಸಗುವವನಾಗು" ಈ ರೀತಿ ಅಣ್ಣನೂ ರಾಕ್ಷಸೋತ್ತಮನೂ ಆದ ರಾವಣಾಸುರನಿಗೆ ಮಂತ್ರಿಗಳ ಸಮ್ಮುಖದಲ್ಲಿಯೇ ಆ ವಿಭೀಷಣನು ಹಿತೋಪದೇಶ ಮಾಡಿದನು. ಬಹು ಹಿತಕರವೂ, ಅಧಿಕಾರ್ಥಗರ್ಭಿತವೂ, ಬಹು ಮೃದುವೂ, ಯುಕ್ತಿಯುಕ್ತವೂ, ಭೂತಭವಿಷ್ಯದ್ವರ್ತಮಾನಗಳಲ್ಲಿ ಶ್ರೇಯಸ್ಸನ್ನುಂಟುಮಾಡುವುದೂ ಆದ ಆ ವಿಭೀಷಣನ ಮಾತುಗಳನ್ನು ಕೇಳಿ ರಾಕ್ಷಸಪ್ರಭುವಾದ ರಾವಣಾಸುರನು ಮಹಾ

ವಾನುತ್ತರಮೇತದಬ್ರವೀತ್ ॥ ೨೭ ॥ "ಭಯಂ ನಪಶ್ಯಾಮಿ ಕುತಶ್ಚಿದಪ್ಯಹಂ ನ ರಾಘವಃ ಪ್ರಾಪ್ಸ್ಯತಿ ಜಾತು ಮೈಥಿಲೀಂ । ಸುರೈಃ ಸಹೇಂದ್ರೈರಪಿ ಸಂಗತಃ ಕಥಂ ಮಮಾಗ್ರತಸ್ಸ್ಥಾಸ್ಯತಿ ಲಕ್ಷ್ಮಣಾಗ್ರಜಃ ॥ ೨೮ ॥

ಇತೀದಮುಕ್ತ್ವಾ ಸುರಸೈನ್ಯನಾಶನೋ
ಮಹಾಬಲಸ್ಸಂಯತಿ ಚಂಡವಿಕ್ರಮಃ ।
ದಶಾನನೋ ಭ್ರಾತರಮಾಪ್ತವಾದಿನಂ
ವಿಸರ್ಜಯಾಮಾಸ ತದಾ ವಿಭೀಷಣಂ ॥ ೨೯ ॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ದಶಮಸ್ಸರ್ಗಃ

---

ಮಾತನ್ನು, ನಿಶಮ್ಯ - ಕೇಳಿ, ಪ್ರಸಂಗವಾನ್ - ಹಟವುಳ್ಳವನಾದಕಾರಣ, ಉಪಸ್ಥಿತಜ್ವರಃ - ಪ್ರಾಪ್ತವಾದ ಕೋಪವುಳ್ಳವನಾಗಿ, ಏತದುತ್ತರಂ - ಈ ಮುಂದೆ ಹೇಳತಕ್ಕ ಉತ್ತರವನ್ನು, ಅಬ್ರವೀತ್ - ಹೇಳಿದನು. ॥ ೨೭ ॥ ಅಹಂ - ನಾನು, ಕುತಶ್ಚಿದಪಿ - ಯಾವನ ಬಳಿಯಿಂದಲೂ, ಭಯಂ - ಭೀತಿಯನ್ನು, ನಪಶ್ಯಾಮಿ - ಕಾಣೆನು, ರಾಘವಃ - ರಾಮನು, ಜಾತು - ಹೇಗಾದರೂ, ಮೈಥಿಲೀಂ - ಸೀತಾದೇವಿಯನ್ನು, ನಪ್ರಾಪ್ಸ್ಯತಿ - ಹೊಂದಲಾರನು, ಸಹೇಂದ್ರೈಃ - ಇಂದ್ರನಿಂದೊಡಗೂಡಿದ, ಸುರೈಶ್ಚಾಪಿ - ದೇವತೆಗಳೊಡನೆ, ಸಂಗತೋಪಿ - ಸೇರಿದವನಾದರೂ, ಲಕ್ಷ್ಮಣಾಗ್ರಜಃ - ರಾಮನು, ಮಮ - ನನ್ನ, ಅಗ್ರತಃ - ಮುಂದುಗಡೆ, ಕಥನ್ನುಸ್ಥಾಸ್ಯತಿ - ಹೇಗೆ ನಿಲ್ಲುವನು. ॥ ೨೮ ॥ ಸುರಸೈನ್ಯನಾಶನಃ - ದೇವ ಸೈನ್ಯವನ್ನು ನಾಶಗೊಳಿಸುವ, ಮಹಾಬಲಃ - ಬಹಳ ಬಲಿಷ್ಠನಾದ, ಸಂಯತಿ - ಕಾಳಗದಲ್ಲಿ, ಚಂಡವಿಕ್ರಮಃ - ಕ್ರೂರ ಪರಾಕ್ರಮಿಯಾದ, ದಶಾನನಃ - ರಾವಣನು, ಆಪ್ತವಾದಿನಂ - ಹಿತವನ್ನು ಹೇಳುತ್ತಿರುವ, ಭ್ರಾತರಂ - ತಮ್ಮನಾದ, ವಿಭೀಷಣಂ - ವಿಭೀಷಣನನ್ನು ಕುರಿತು, ಇತಿ - ಈ ಪರಿಯಾಗಿ, ಇದಂ - ಈ ಮಾತನ್ನು, ಉಕ್ತ್ವಾ - ಹೇಳಿ, ತದಾ - ಆಗಲೇ, ವಿಸರ್ಜಯಾಮಾಸ - ಕಳುಹಿಸಿಬಿಟ್ಟನು. ॥ ೨೯ ॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ದಶಮಸ್ಸರ್ಗಃ.

---

ಕೋಪೋದ್ದೀಪಿತನಾಗಿ ತನ್ನಮುಷ್ಕರವನ್ನು ಬಿಡದೆ ಆ ವಿಭೀಷಣನನ್ನು ಕುರಿತು, "ಅಯ್ಯಾ! ನನಗೆ ಯಾವುದರಿಂದಲೂ ಭಯವಿಲ್ಲವು. ನಾನು ರಾಮನಿಗೆ ಏನೇ ಆಗಲಿ ಸೀತೆಯನ್ನೊಪ್ಪಿಸುವುದಿಲ್ಲವು. ದೇವತೆಗಳೊಡಗೂಡಿ ದೇವೇಂದ್ರನೇ ರಾಮನಿಗೆ ಸಹಾಯವಾದರೂ ಅವನೆಂದಿಗೂ ಕಾಳಗದಲ್ಲಿ ನನಗೆ ಎದುರು ನಿಲ್ಲಲಾರನು" ಎಂದು ಹೇಳಿದನು. ಹೀಗೆ ದೇವಸೈನ್ಯವನ್ನು ನಾಶಗೊಳಿಸಬಲ್ಲ ಅತುಳ ಬಲಪರಾಕ್ರಮಶಾಲಿಯೂ, ಯುದ್ಧವೀರನೂ ಆದ ರಾವಣಾಸುರನು ತನಗೆ ಹಿತವಾದುದನ್ನೇ ನುಡಿಯುತ್ತಿದ್ದ ವಿಭೀಷಣನಿಗೆ ಹೋಗಲು ಅಪ್ಪಣೆಯಿತ್ತು ಕಳುಹಿಸಿಕೊಟ್ಟನು. ॥ ೨೬-೨೯ ॥

ಇಂತಿದು ವಿಭೀಷಣಕೃತ ಹಿತೋಪದೇಶ ವೃತ್ತಾಂತವೆಂಬ ಹತ್ತನೆಯ
ಸರ್ಗವು ಸಮಾಪ್ತವಾದುದು.



# ಯುದ್ಧಕಾಂಡೇ ಏಕಾದಶಸ್ಸರ್ಗಃ

ಸ ಬಭೂವ ಕೃಶೋ ರಾಜಾ ಮೈಥಿಲೀಕಾಮಮೋಹಿತಃ । ಅಸಮ್ಮಾನಾಚ್ಚ ಸುಹೃದಾಂ ಪಾಪಃ ಪಾಪೇನ ಕರ್ಮಣಾ ॥ ೧ ॥ ¶ ಅತೀತಸಮಯೇ ಕಾಲೇ ತಸ್ಮಿನ್ವೈ ಯುಧಿ ರಾವಣಃ । ಅಮಾತ್ಯೈಶ್ಚ ಸುಹೃದ್ಭಿಶ್ಚ ಮಂತ್ರಕಾಲಮಮನ್ಯತ ॥ ೨ ॥ ಸಹೇಮಜಾಲವಿತತಂ ಮಣಿವಿದ್ರುಮಭೂಷಿತಂ । ಉಪಗಮ್ಯ ವಿನೀತಾಶ್ವಮಾರುರೋಹ ಮಹಾರಥಃ ॥ ೩ ॥ ತಮಾಸ್ಥಾಯ ರಥಶ್ರೇಷ್ಠಂ ಮಹಾಮೇಘಸಮಸ್ವನಂ । ಪ್ರಯಯೌ ರಾಕ್ಷಸಶ್ರೇಷ್ಠೋ ದಶಗ್ರೀವಸ್ಸಭಾಂ ಪ್ರತಿ ॥ ೪ ॥ ಅಸಿಚರ್ಮಧರಾ

ಪಾಪಃ - ಪಾಪಿಷ್ಠನಾದ, ಸಃರಾಜಾ - ಆ ರಾವಣಾಸುರನು, ಮೈಥಿ....ತಃ - ಸೀತಾದೇವಿಯ ವಿಷಯದಲ್ಲಿ ಕಾಮದಿಂದ ಮೋಹಿತನಾಗಿ, ಸುಹೃದಾಂ - ಸ್ನೇಹಿತರಾದ ಪ್ರಹಸ್ತಾದಿಗಳ, ಅಸಮ್ಮಾನಾಚ್ಚ - ಅನಾದರಣೆಯಿಂದಲೂ, ಪಾಪೇನಕರ್ಮಣಾ - ಸೀತಾಹರಣರೂಪವಾದ ಪಾಪಕೃತ್ಯದಿಂದಲೂ, ಕೃಶಃ - ಕೃಶೀಭೂತನು, ಬಭೂವ - ಆದನು. ॥೧॥ ರಾವಣಃ - ರಾವಣನು, ತಸ್ಮಿಂಕಾಲೇ- ಆ ಮಂತ್ರಕಾಲವು, ಅತೀತಸಮಯೇ - ಕಳೆದದ್ದಾಗಲೂ, ಯುಧಿ - ಯುದ್ಧವು, ಪ್ರಾಪ್ತೇ - ಸಂಪ್ರಾಪ್ತವಾಗಲೂ, ಅಮಾತ್ಯೈಶ್ಚ - ಮಂತ್ರಿಗಳೊಡಗೂಡಿ, ಸುಹೃದ್ಭಿಶ್ಚ - ಸ್ನೇಹಿತರೊಡಗೂಡಿ, ಮಂತ್ರಕಾಲಂ - ಆಲೋಚನೆಗೆ ಕಾಲವನ್ನು, ಅಮನ್ಯತ - ತಿಳಿದುಕೊಂಡನು. ॥ ೨ ॥ ಮಹಾರಥಃ - ಮಹಾ ರಥಿಕನಾದ, ಸಃ - ಆ ರಾವಣನು, ಹೇಮ....ತಂ - ಚಿನ್ನದ ಗವಾಕ್ಷಿಗಳಿಂದ ವಿಸ್ತರಿಸಲ್ಪಟ್ಟ, ಮಣಿ....ತಂ - ರತ್ನಗಳಿಂದಲೂ, ಹವಳಗಳಿಂದಲೂ ಅಲಂಕರಿಸಲ್ಪಟ್ಟ, ವಿನೀತಾಶ್ವಂ - ಶಿಕ್ಷಿತವಾದ ಕುದುರೆಗಳುಳ್ಳ, ರಥಂ - ತೇರನ್ನು, ಉಪಗಮ್ಯ - ಹೊಂದಿ, ಆರುರೋಹ - ಏರಿದನು. ॥ ೩ ॥ ರಾಕ್ಷಸಶ್ರೇಷ್ಠಃ - ರಾಕ್ಷಸೋತ್ತಮನಾದ, ದಶಗ್ರೀವಃ - ರಾವಣನು, ಮಹಾ....ನಂ - ದೊಡ್ಡ ಮೇಘಕ್ಕೆ ಸಮಾನವಾದ ಧ್ವನಿಯುಳ್ಳ, ತಂರಥಶ್ರೇಷ್ಠಂ - ಆ ಉತ್ತಮ ರಥವನ್ನು, ಆಸ್ಥಾಯ -

ಸೀತೆಯಲ್ಲಿ ಅಪಾರವಾದ ಮೋಹವುಳ್ಳವನೂ, ಪಾಪಿಷ್ಠನೂ ಆದ ರಾಕ್ಷಸೇಶ್ವರನು ಬಹು ಪಾಪಿಷ್ಠವಾದ ಕಾರ್ಯವನ್ನು ಮಾಡಿದುದರಿಂದಲೂ, ಸ್ನೇಹಿತರ ಅನಾದರಣೆಯಿಂದಲೂ ಬಹಳವಾಗಿ ಕೃಶಿಸಿಹೋದನು. ಇಂತಹ ಆ ರಾವಣನು ಅಂತಹ ವಿಷಮ ಸನ್ನಿವೇಶದಲ್ಲಿ ರಾಮನೊಡನೆ ಯುದ್ಧ ಮಾಡಲೋಸುಗ ತನ್ನ ಮಂತ್ರಿಗಳೊಡನೆ ಆಲೋಚಿಸಬೇಕೆಂದು ಬಯಸಿದನು. ಆಗ ಮಹಾ ರಥನಾದ ರಾವಣನು ಬಂಗಾರದ ಜಾಲಂದ್ರಗಳಿಂದೊಪ್ಪಿ, ರತ್ನಗಳಿಂದಲೂ, ಹವಳಗಳಿಂದಲೂ ಅಲಂಕೃತವಾಗಿ ಜಾತ್ಯಶ್ವಗಳು ಕಟ್ಟಿದ ರಥವು ಸಿದ್ಧವಾಗಲು ಅದನ್ನು ಹತ್ತಿ ಮುಗಿಲಿಗೆ ಸಮಾನವಾದ ಧ್ವನಿ

¶ "ಅತೀತಸಮಯೇ ಕಾಲೇ" ಇಲ್ಲಿ, "ಆಯುಸ್ಸು ಕ್ಷೀಣವಾಗಿರುವ ಆ ಕಾಲದಲ್ಲಿ ರಾವಣನು, ಮಂತ್ರಿಗಳಿಂದಲೂ, ಸ್ನೇಹಿತರಿಂದಲೂ ಒಡಗೂಡಿದ ತನಗೆ ಮೃತ್ಯುವು ಸಂಪ್ರಾಪ್ತವಾದುದಾಗಿ ತಿಳಿದನು" ಎಂಬುದು ಮುನಿಹೃದಯವೆಂದು ಗೋವಿಂದರಾಜರು ಬರೆಯುತ್ತಾರೆ.

ಯೋಧಾಸ್ಸರ್ವಾಯುಧಧರಾಸ್ತಥಾ । ರಾಕ್ಷಸಾ ರಾಕ್ಷಸೇಂದ್ರಸ್ಯ ಪುರತಃ ಸಂಪ್ರತಸ್ಥಿರೇ ॥ ೫ ॥ ನಾನಾವಿಕೃತವೇಷಾಶ್ಚ ನಾನಾಭೂಷಣಭೂಷಿತಾಃ । ಪಾರ್ಶ್ವತಃ ಪೃಷ್ಠತಶ್ಚೈನಂ ಪರಿವಾರ್ಯಯಯುಸ್ತತಃ ॥ ೬ ॥ ರಥೈಶ್ಚಾತಿರಥಾಃ ಶೀಘ್ರಂ ಮತ್ತೈಶ್ಚ ವರವಾರಣೈಃ । ಅನೂತ್ಪೇತುರ್ದಶಗ್ರೀವಮಾಕ್ರೀಡದ್ಭಿಶ್ಚ ವಾಜಿಭಿಃ ॥ ೭ ॥ ಗದಾಪರಿಘಹಸ್ತಾಶ್ಚ ಶಕ್ತಿತೋಮರಪಾಣಯಃ । ಪರಶ್ವಥಧರಾಶ್ಚಾನ್ಯೇ ತಥಾನ್ಯೇ ಶೂಲಪಾಣಯಃ ॥ ೮ ॥ ತತಸ್ತೂರ್ಯಸಹಸ್ರಾಣಾಂ ಸಂಜಜ್ಞೇ ನಿಸ್ವನೋ ಮಹಾನ್ ।

ಏರಿ, ಸಭಾಂಪ್ರತಿ - ಆಸ್ಥಾನವನ್ನು ಕುರಿತು, ಪ್ರಯಯೌ - ಹೊರಟನು. ||೪|| ಅಸಿ....ರಾಃ - ಖಡ್ಗಗಳನ್ನೂ, ಖೇಡ್ಯಗಳನ್ನೂ ಧರಿಸಿದ, ಯೋಧಾಃ - ಭಟರು, ತಥಾ - ಹಾಗೆಯೇ, ಸರ್ವಾ....ರಾಃ - ಸಮಸ್ತವಾದ ಆಯುಧಗಳನ್ನೂ ಧರಿಸಿದ, ರಾಕ್ಷಸಾಃ - ಅಸುರರು, ರಾಕ್ಷಸೇಂದ್ರಸ್ಯ - ರಾಕ್ಷಸಾಧಿಪತಿಯ, ಪುರತಃ - ಮುಂದುಗಡೆಯಲ್ಲಿ, ಸಂಪ್ರತಸ್ಥಿರೇ - ತೆರಳಿದರು. ||೫|| ತತಃ - ಆ ರಾವಣನ ಮನೆಯಿಂದ, ನಾನಾ.. ಷಾಃ - ನಾನಾವಿಧವಾದ ವಿಕಾರವೇಷಗಳುಳ್ಳ, ನಾನಾ ...ತಾಃ - ಅನೇಕ ಬಗೆಯ ಒಡವೆಗಳಿಂದಲಂಕೃತರಾದ (ರಾಕ್ಷಸರು), ಪಾರ್ಶ್ವತಃ - ಪಕ್ಕಗಳಲ್ಲಿಯೂ, ಪೃಷ್ಠತಃ - ಹಿಂದುಗಡೆಯಲ್ಲಿಯೂ, ಏನಂ - ಈ ರಾವಣನನ್ನು, ಪರಿವಾರ್ಯ - ಸುತ್ತುವರೆದು, ಯಯುಃ - ತೆರಳಿದರು. ||೬|| ಅತಿರಥಾಃ - ಅತಿರಥರು, ರಥೈಶ್ಚ - ರಥಗಳಿಂದಲೂ, ಮತ್ತೈಃ - ಮದಿಸಿದ, ವರವಾರಣೈಶ್ಚ - ಉತ್ತಮ ಗಜಗಳಿಂದಲೂ, ಆಕ್ರೀಡದ್ಭಿಃ - ಧಾರಾಮಂಡಲಗಮನಾದಿಗಳನ್ನು ಮಾಡುವ, ವಾಜಿಭಿಶ್ಚ - ಕುದುರೆಗಳಿಂದಲೂ, ದಶಗ್ರೀವಂ - ರಾವಣನನ್ನು ಕುರಿತು, ಶೀಘ್ರಂ - ಜಾಗ್ರತೆಯಾಗಿ, ಅನೂತ್ಪೇತುಃ - ಅನುಸರಿಸಿ ಹೊರಟರು. ||೭|| ಗದಾಶ್ಚ - ಗದಾಯುಧಗಳೂ, ಪರಿಘಾಯುಧಗಳೂ ಹಸ್ತಗಳಲ್ಲಿ ಉಳ್ಳವರೂ, ಶಕ್ತಿ....ಯಃ - ಶಕ್ತ್ಯಾಯುಧಗಳನ್ನು, ತೋಮರರಾಯುಧಗಳೂ ಕೈಗಳಲ್ಲುಳ್ಳವರೂ, ಪರಶ್ವಥಧರಾಃ - ಕೊಡಲಿಗಳನ್ನು ಧರಿಸಿದ, ಅನ್ಯೇಚ - ಮತ್ತೆ ಕೆಲವರೂ, ತಥಾ - ಹಾಗೆಯೇ, ಶೂಲಪಾಣಯಃ - ಶೂಲಗಳನ್ನು ಧರಿಸಿರುವ, ಅನ್ಯೇ - ಇನ್ನು ಕೆಲವರೂ, ಅನೂತ್ಪೇತುಃ - ಅನುಸರಿಸಿದರು. ||೮|| ತತಃ - ಬಳಿಕ, ರಾವಣೇ - ರಾವಣನು, ಸಭಾಂ-

ಮಾಡುತ್ತ ಆ ರಥವು ಮುಂದುವರಿಯಲು ತನ್ನ ಸಭಾಭವನಕ್ಕೆ ಹೋದನು. ಆ ಸಮಯದಲ್ಲಿ ಖಡ್ಗಖೇಡ್ಯಗಳನ್ನು ಧರಿಸಿರುವ ರಾಕ್ಷಸಯೋಧರು ಕೆಲವರೂ, ಸಮಸ್ತಾಯುಧಗಳನ್ನು ಧರಿಸಿದ ಇನ್ನು ಕೆಲವರು ಯೋಧರೂ ಆ ರಾವಣನ ಮುಂದೆ ಹೊರಟರು. ||೧-೫|| ಕೆಲವರು ನಾನಾವಿಧಗಳಾದ ವಿಕಾರ ವೇಷಗಳನ್ನು ಧರಿಸಿ, ಹಲವು ಬಗೆಯ ಆಭರಣಗಳನ್ನು ತೊಟ್ಟು ಆ ರಾವಣನ ಉಭಯಪಾರ್ಶ್ವಗಳಲ್ಲಿಯೂ ಹಿಂದುಗಡೆಯೂ ಹೊರಟರು. ಅಷ್ಟರಲ್ಲಿ ಅತಿರಥರಾದ ಕೆಲವರು ರಾಕ್ಷಸರು ರಥಗಳಲ್ಲಿಯೂ, ಕೆಲವರು ಮದ್ದಾನೆಗಳ ಮೇಲೆಯೂ, ಕೆಲವರು ಚಾಕಚಕ್ಯವುಳ್ಳ ಕುದುರೆಗಳ ಮೇಲೆಯೂ ಕುಳಿತವರಾಗಿ ತಮ್ಮ ಪ್ರಭುವಾದ ಆ ರಾವಣನನ್ನು ಹಿಂಬಾಲಿಸಿದರು. ಇನ್ನು ಕೆಲವರು ರಾಕ್ಷಸವೀರರು ಗದೆಗಳನ್ನೂ, ಪರಿಘಗಳನ್ನೂ ಧರಿಸಿಯೂ, ಕೆಲವರು ಶಕ್ತಿತೋಮರಗಳನ್ನು ಧರಿಸಿಯೂ, ಕೆಲವರು ಗಂಡುಗೊಡಲಿಗಳನ್ನು ಧರಿಸಿಯೂ, ಕೆಲವರು ಶೂಲಗಳನ್ನು ಧರಿಸಿಯೂ ಆ ರಾವಣನ ಹಿಂದೆ ಹೋದರು. ಈ ರೀತಿ ಆ ರಾವಣಾಸುರನು ಸಭಾ

ತುಮುಲಃ ಶಂಖಶಬ್ದಶ್ಚ ಸಭಾಂ ಗಚ್ಛತಿ ರಾವಣೇ ॥ ೯ ॥ ಸನೇಮಿಘೋಷೇಣ ಮಹಾನ್ ಸಹಸಾಽಭಿವಿನಾದಯನ್ । ರಾಜಮಾರ್ಗಂ ಶ್ರಿಯಾ ಜುಷ್ಟಂ ಪ್ರತಿಪೇದೇ ಮಹಾರಥಃ ॥೧೦॥ ವಿಮಲಂ ಚಾತಪತ್ರಾಣಾಂ ಪ್ರಗೃಹೀತಮಶೋಭತ । ಪಾಂಡರಂ ರಾಕ್ಷಸೇಂದ್ರಸ್ಯ ಪೂರ್ಣಸ್ತಾರಾಧಿಪೋ ಯಥಾ ॥ ೧೧ ॥ ಹೇಮಮಂಜರಿಗರ್ಭೇ ಚ ಶುದ್ಧಸ್ಫಟಿಕವಿಗ್ರಹೇ । ಚಾಮರವ್ಯಜನೇ ಚಾಸ್ಯ ರೇಜತುಸ್ಸವ್ಯದಕ್ಷಿಣೇ ॥ ೧೨ ॥ ತೇ ಕೃತಾಂಜಲಯಸ್ಸರ್ವೇ ರಥಸ್ಥಂ ಪೃಥಿವೀಸ್ಥಿತಾಃ । ರಾಕ್ಷಸಾ ರಾಕ್ಷಸಶ್ರೇಷ್ಠಂ ಶಿರೋಭಿಸ್ತಂ ವವಂದಿರೇ ॥೧೩॥ ರಾಕ್ಷಸೈಸ್ಸ್ತೂಯಮಾನಸ್ಸನ್ ಜಯಾಶೀರ್ಭಿರರಿಂದಮಃ ।

---

ಸಭೆಯನ್ನು ಕುರಿತು, ಗಚ್ಛ - ಹೋಗುತ್ತಿರಲು, ತೂರ್ಯ....ಣಾಂ - ತಪಟೆಯೇ ಮುಂತಾದ ಅನೇಕ ವಾದ್ಯಗಳ, ಮಹಾನ್ - ಮಹತ್ತರವಾದ, ನಿಸ್ವನಃ - ಧ್ವನಿಯು, ತುಮುಲಃ - ಸಂಕುಲವಾದ, ಶಂಖಶಬ್ದಶ್ಚ - ಶಂಖಗಳ ಘೋಷವೂ, ಸಂಜಜ್ಞೇ - ಹುಟ್ಟಿತು. ॥ ೯ ॥ ಮಹಾನ್ - ಮಹಾ ಪ್ರಭಾವ ಶಾಲಿಯಾದ, ಸಮಹಾರಥಃ - ಅತಿರಥನಾದ ಆ ರಾವಣನು, ನೇಮಿಘೋಷೇಣ - ರಥಚಕ್ರಗಳ ಘೋಷದಿಂದ, ಸಹಸಾ - ಜಾಗ್ರತೆಯಾಗಿ, ಅಭಿವಿನಾದಯನ್ - ಧ್ವನಿಗೊಳಿಸುವವನಾಗಿ, ಶ್ರಿಯಾ - ತೇಜಸ್ಸಿನಿಂದ, ಜುಷ್ಟಂ - ವ್ಯಾಪ್ತವಾದ, ರಾಜಮಾರ್ಗಂ - ರಾಜಬೀದಿಯನ್ನು, ಪ್ರತಿಪೇದೇ - ಹೊಂದಿದನು. ॥ ೧೦ ॥ ರಾಕ್ಷಸೇಂದ್ರಸ್ಯ - ರಾಕ್ಷಸನಾಥನಾದ ರಾವಣನಿಗೆ, ಪ್ರಗೃಹೀತಂ - ಹಿಡಿಯಲ್ಪಟ್ಟ, ಪಾಂಡುರಂ - ಬೆಳ್ಳಗಿರುವ, ವಿಮಲಂ - ನಿರ್ಮಲವಾದ, ಆತಪತ್ರಾಣಾಂ - ಶ್ವೇತಚ್ಛತ್ರವು, ಪೂರ್ಣಾಃ - ಸಂಪೂರ್ಣನಾದ, ತಾರಾಧಿಪೋಯಥಾ - ಚಂದ್ರನಂತೆ, ಅಶೋಭತ - ಹೊಳೆಯುತ್ತಿತ್ತು. ॥ ೧೧ ॥ ಹೇಮಮಂಜರಿಗರ್ಭೇಚ - ಭಂಗಾರವಿಕಾರವಾದ ಲತೆಗಳೇ ಗರ್ಭವಾಗುಳ್ಳ, ಶುದ್ಧಸ್ಫಟಿಕವಿಗ್ರಹೇ - ನಿರ್ಮಲವಾದ ಸ್ಫಟಿಕದ ಆಕಾರದಂತೆ ಆಕಾರವುಳ್ಳ, ಚಾಮರವ್ಯಜನೇ - ಚೌರಿಗಳ ರೂಪವಾದ ವ್ಯಜನಗಳು, ಸವ್ಯದಕ್ಷಿಣೇ - ಎಡಬಲಭಾಗಗಳಲ್ಲಿ, ರೇಜತುಃ - ಹೊಳೆಯುತ್ತಿದ್ದವು. ॥ ೧೨ ॥ ಪೃಥಿವೀಸ್ಥಿತಾಃ - ನೆಲದಲ್ಲಿರುವ, ಸರ್ವೇ - ಸಮಸ್ತರಾದ, ತೇ - ಆ ರಾಕ್ಷಸರು, ಕೃತಾಂಜಲಯಃ - ಅಂಜಲಿಬದ್ಧರಾಗಿ, ರಥಸ್ಥಂ - ರಥದಲ್ಲಿರುವ, ತಂರಾಕ್ಷಸಶ್ರೇಷ್ಠಂ - ಆ ರಾಕ್ಷಸಶ್ರೇಷ್ಠನನ್ನು ಕುರಿತು, ಶಿರೋಭಿಃ - ಶಿರಸ್ಸುಗಳಿಂದ, ವವಂದಿರೇ - ವಂದಿಸಿದರು. ॥ ೧೩ ॥ ಮಹಾತೇಜಾಃ - ಮಹಾ ಪರಾಕ್ರಮಿಯಾದ, ಅರಿಂದಮಃ - ಶತ್ರುಸಂಹಾರಕನಾದ ರಾವಣನು, ರಾಕ್ಷಸೈಃ - ಅಸುರರಿಂದ,

---

ಮಂದಿರವನ್ನು ಕುರಿತು ಹೋಗುತ್ತಿರಲು, ಅನೇಕ ವಾದ್ಯಧ್ವನಿಗಳೂ, ಶಂಖಧ್ವನಿಯೂ ತುಮುಲವಾಗಿ ಒಪ್ಪುತ್ತಿದ್ದಿತು. ಆಗ ಬಹು ಸೊಗಸಾದ ಆ ರಥದ ಚಕ್ರಧ್ವನಿಯು ದಶದಿಶೆಗಳನ್ನೂ ತುಂಬಿರಲು ಮಹಾ ಕಾಂತಿಯಿಂದ ರಾಜಮಾರ್ಗದಲ್ಲಿ ಮುಂದುವರಿಯುತ್ತಿದ್ದಿತು. ॥ ೬–೧೦ ॥ ಆ ಸಮಯದಲ್ಲಿ ಆ ರಾವಣೇಶ್ವರನಿಗೆ ಹಿಡಿದಿದ್ದ ಶ್ವೇತಚ್ಛತ್ರವು ಶರತ್ಕಾಲದ ಹುಣ್ಣಿಮೆಯ ಚಂದ್ರನನ್ನು ಹೋಲುತ್ತಿದ್ದಿತು. ಚಿನ್ನದ ಹೂಗೊಂಚಲುಗಳು ನಡುನಡುವೆ ವಿರಾಜಿಸುತ್ತ, ಸ್ವಚ್ಛವಾದ ಸ್ಫಟಿಕಮಣಿಗಳ ವರ್ಣವುಳ್ಳ ಚಾಮರಗಳು ಆ ರಾಕ್ಷಸರಾಜನ ಉಭಯಪಾರ್ಶ್ವದಲ್ಲಿಯೂ ಕಂಗೊಳಿಸುತ್ತಿದ್ದುವು. ಆಗ ಅಲ್ಲಿದ್ದ ರಾಕ್ಷಸರೆಲ್ಲರೂ ನೆಲದಮೇಲೆಯೇ ನಿಂತು ಕೃತಾಂಜಲಿಗಳಾಗಿ ರಥದ ಮೇಲಿರುವ ರಾವಣಾಸುರನಿಗೆ ನಮಸ್ಕಾರ ಮಾಡಿದರು. ಆ ಸಮಯದಲ್ಲಿ ಶತ್ರುಸಂಹಾರಕನೂ, ಮಹಾ ಪರಾಕ್ರಮಶಾಲಿಯಾದವನೂ ಆದ ರಾವಣಾಸುರನು ರಾಕ್ಷಸರ ಜಯಜಯಕಾರಗಳಿಂದಲೂ, ಆಶೀರ್ವಚನ

ಆಸಸಾದ ಮಹಾತೇಜಾಸ್ಸಭಾಂ ಸುವಿಹಿತಾಂ ಶುಭಾಂ ॥ ೧೪ ॥ ಸುವರ್ಣರಜತಸ್ಥೂಣಾಂ ವಿಶುದ್ಧಸ್ಫಟಿಕಾಂತರಾಂ । ವಿರಾಜಮಾನೋ ವಪುಷಾ ರುಕ್ಮಪಟ್ಟೋತ್ತರಚ್ಛದಾಂ ॥ ೧೫ ॥ ತಾಂ ಪಿಶಾಚಶತೈಃ ಷಡ್ಭಿರಭಿಗುಪ್ತಾಂ ಸದಾ ಶುಭಾಂ । ಪ್ರವಿವೇಶ ಮಹಾತೇಜಾಸ್ಸುಕೃತಾಂ ವಿಶ್ವಕರ್ಮಣಾ ॥ ೧೬ ॥ ತಸ್ಯಾಂತು ವೈಡೂರ್ಯಮಯಂ ಪ್ರಿಯಕಾಜಿನಸಂವೃತಂ । ಮಹತ್ಸೋಪಾಶ್ರಯಂ ಭೇಜೇ ರಾವಣಃ ಪರಮಾಸನಂ ॥ ೧೭ ॥ ತತಃ ಶಶಾಸೇಶ್ವರವದ್ದೂತಾನ್ ಲಘುಪರಾಕ್ರಮಾನ್ । "ಸಮಾನಯತ

ಜಯಕರವಾದ ಆಶೀರ್ವಚನಗಳಿಂದ, ಸ್ತೂಯಮಾನಂ - ಸ್ತುತಿಸಲ್ಪಟ್ಟವನಾಗಿ, ಸುವಿಹಿತಾಂ - ಚನ್ನಾಗಿ ನಿರ್ಮಿಸಲ್ಪಟ್ಟ, ಶುಭಾಂ - ಶುಭಕರವಾದ, ಸಭಾಂ - ಸಭೆಯನ್ನು ಕುರಿತು, ಆಸಸಾದ - ಬಂದನು. ॥ ೧೪ ॥ ವಪುಷಾ - ಶರೀರದಿಂದ, ವಿರಾಜಮಾನಃ - ಬೆಳಗುವ, ಮಹಾತೇಜಾಃ - ಬಹುತೇಜೋವಂತನಾದ ರಾವಣನು, ಸುವ....ಣಾಂ - ಸುವರ್ಣರಜತಗಳ ವಿಕಾರವಾದ ತೊಲೆಗಳುಳ್ಳ, ವಿಶು...ರಾಂ - ನಿರ್ಮಲವಾದ ಸ್ಫಟಿಕಮಣಿಗಳಿಂದ ನಿರ್ಮಿಸಿದ ಮಧ್ಯಪ್ರದೇಶವುಳ್ಳ, ರುಕ್ಮ....ದಾಂ- ಸುವರ್ಣವಿಕಾರವಾಗಿ ರೇಷ್ಮೆಯ ತೆರೆಗಳುಳ್ಳ, ಷಡ್ಭಿ.....ತೈಃ-ಆರುನೂರು ಪಿಶಾಚಗಳಿಂದ, ಅಭಿಗುಪ್ತಾಂ- ಸಂರಕ್ಷಿಸಲ್ಪಟ್ಟ, ಸದಾ - ಯಾವಾಗಲೂ, ಶುಭಾಂ - ಶುಭಕರವಾದ, ವಿಶ್ವಕರ್ಮಣಾ - ವಿಶ್ವಕರ್ಮನಿಂದ, ಸುಕೃತಾಂ - ಚನ್ನಾಗಿ ನಿರ್ಮಿಸಿದ, ತಾಂ - ಆ ಸಭೆಯನ್ನು, ಪ್ರವಿವೇಶ - ಹೊಕ್ಕನು. ॥೧೫-೧೬॥ ತಸ್ಯಾಂತು - ಆ ಸಭೆಯಲ್ಲಿ, ರಾವಣಃ - ರಾವಣನು, ವೈಡೂರ್ಯಮಯಂ - ವೈಡೂರ್ಯಮಣಿಗಳಿಂದ ತುಂಬಿದ, ಪ್ರಿಯ....ತಂ - ಪ್ರಿಯಕವೆಂಬ ಮೃಗಚರ್ಮದಿಂದ ಮುಚ್ಚಿದ, ಮಹತ್ - ದೊಡ್ಡದಾದ, ಸೋಪಾಶ್ರಯಂ - ತೊಡೆದಿಂಬುಗಳಿಂದ ಕೂಡಿದ, ಪರಮಾಸನಂ - ಉತ್ತಮವಾದ ಆಸನವನ್ನು, ಭೇಜೇ - ಹೊಂದಿದನು. ॥ ೧೭ ॥ ತತಃ - ಬಳಿಕ, ಲಘು....ಮಾನ್ - ಲಾಘವದಿಂದ ಕೂಡಿದ ಸಂಚಾರಕ್ರಮವುಳ್ಳ, ದೂತಾನ್ - ದೂತರನ್ನು ಕುರಿತು, ನಃ - ನಮಗೆ, ಮಹತ್ - ಬಹಳವಾಗಿ, ಇಹ - ಈ ಸಭೆಯಲ್ಲಿ, ಸಮರ್ಥ್ಯಂ - ಸಾಧಿಸತಕ್ಕ, ಮಹತ್ಕೃತ್ಯಂ - ದೊಡ್ಡ ಕಾರ್ಯವು, ಜಾತಂ - ಪ್ರಸಕ್ತವಾಗಿ, ಅಸ್ತಿ - ಇರುವುದು, ಇಹ - ಈಗಲೇ, ಕ್ಷಿಪ್ರಂ - ಜಾಗ್ರತೆಯಾಗಿ, ಮೇ -

ಗಳಿಂದಲೂ, ಹೊಗಳಿಸಿಕೊಳ್ಳುತ್ತ ಸುಂದರವಾಗಿ ನಿರ್ಮಿತವಾದ ಸಭಾಸ್ಥಳವನ್ನು ಸೇರಿದನು. ಆಮೇಲೆ ಅವನು ತನ್ನ ದೇಹಕಾಂತಿಯಿಂದ ಬೆಳಗುತ್ತ, ಸುವರ್ಣದಿಂದಲೂ, ರಜತದಿಂದಲೂ ಮಾಡಿದ ಸ್ತಂಭಗಳಿಂದಲಂಕೃತವಾಗಿ, ನಿರ್ಮಲವಾದ ಸ್ಫಟಿಕಮಣಿಗಳಿಂದ ರಚಿತವಾದ ಮಧ್ಯರಂಗವುಳ್ಳುದಾಗಿಯೂ, ಜರತಾರಿಯ ಬಟ್ಟೆಯೇ ರತ್ನಕಂಬಳಿಯಾಗಿರುವುದೂ, ವಿಶ್ವಕರ್ಮನಿಂದ ಬಹು ರಮಣೀಯವಾಗಿ ರಚಿತವಾಗಿರುವುದೂ, ಆರುನೂರು ಪಿಶಾಚಗಳೇ ಕಾವಲಾಗಿರುವುದೂ, ಬಹು ರಮಣೀಯವಾಗಿರುವುದೂ ಆದ ಆ ಸಭೆಯನ್ನು ಪ್ರವೇಶಿಸಿ, ವೈಡೂರ್ಯಮಣಿಗಳಿಂದ ಸೊಗಸುಗೊಂಡು, ಪ್ರಿಯಕ ಮೃಗಚರ್ಮದ ಹೊದಿಕೆಯುಳ್ಳುದಾಗಿ ಮೃದುವಾದ ಮೆತ್ತೆಗಳಿಂದೊಪ್ಪುತ್ತಿರುವ ಬಹು ಉನ್ನತವೂ, ಶ್ರೇಷ್ಠವೂ ಆದ ಸಿಂಹಾಸನದಮೇಲೆ ಕುಳಿತನು. ॥ ೧೧–೧೭ ॥ ಹೀಗೆ ಆ ರಾಕ್ಷಸೇಶ್ವರನು ಸಿಂಹಾಸನಾರೂಢನಾಗುತ್ತಲೇ ದೇವೇಂದ್ರನಂತೊಪ್ಪುತ್ತ ಶೀಘ್ರಗಾಮಿಗಳಾದ ದೂತರನ್ನು ನೋಡಿ, "ಎಲೈ ದೂತರಿರಾ! ನಮಗೀಗ ಮಹಾ ಕಾರ್ಯವೇ ಒದಗಿ

ಮೇ ಕ್ಷಿಪ್ರಮಿಹೈತಾನ್ ರಾಕ್ಷಸಾನಿತಿ" ||೧೮|| ಕೃತ್ಯಮಸ್ತಿ ಮಹಜ್ಜಾತಂ ಸಾಮರ್ಥ್ಯ ಮಿಹ ನೋ ಮಹತ್ । ರಾಕ್ಷಸಾಸ್ತದ್ವಚಃ ಶ್ರುತ್ವಾ ಲಂಕಾಯಾಂ ಪರಿಚಕ್ರಮುಃ ||೧೯|| ಅನುಗೇಹಮವಸ್ಥಾಯ ವಿಹಾರಶಯನೇಷು ಚ । ಉದ್ಯಾನೇಷು ಚ ರಕ್ಷಾಂಸಿ ಚೋದಯಂತೋ ಹ್ಯಭೀತವತ್ ||೨೦|| ತೇ ರಥಾನ್ ರುಚಿರಾನೇಕೇ ದೃಪ್ತಾನೇಕೇ ಪೃಥಗ್ಘಯಾನ್ । ನಾಗಾನನ್ಯೇಽಧಿರುರುಹುರ್ಜಗ್ಮುಶ್ಚೈಕೇ ಪದಾತಯಃ ||೨೧|| ಸಾ ಪುರೀ ಪರಮಾಕೀರ್ಣಾ ರಥಕುಂಜರವಾಜಿಭಿಃ । ಸಂಪತದ್ಭಿರ್ವಿರುರುಚೇ ಗರುತ್ಮದ್ಭಿರಿವಾಂಬರಂ ||೨೨|| ತೇ ವಾಹನಾನ್ಯವಸ್ಥಾಪ್ಯ ಯಾನಾನಿ ವಿವಿಧಾನಿ ಚ । ಸಭಾಂ

---

ನನ್ನ, ಏತಾನ್‌ರಾಕ್ಷಸಾನ್ - ಈ ಊರಲ್ಲಿರುವ ರಾಕ್ಷಸರನ್ನು, ಸಮಾನಯತ - ಕರೆದುಕೊಂಡು ಬನ್ನಿರಿ, ಇತಿ - ಇಂತೆಂದು, ಈಶ್ವರವತ್ - ರಾಜಾರ್ಹವಾಗಿ, ಶಶಾಸ - ಆಜ್ಞಾಪಿಸಿದನು. ||೧೮|| ರಾಕ್ಷಸಾಃ - ರಾಕ್ಷಸರು, ತದ್ವಚಃ - ಆ ಮಾತನ್ನು, ಶ್ರುತ್ವಾ - ಕೇಳಿ, ಲಂಕಾಯಾಂ - ಲಂಕಾಪಟ್ಟಣದಲ್ಲಿ, ಅನುಗೇಹಂ - ಮನೆಮನೆಗೂ, ಅಸ್ಥಾಯ - ಹೋಗಿ, ವಿಹಾ....ಚ - ವಿಹಾರ ಸ್ಥಾನಗಳಲ್ಲಿಯೂ, ಉದ್ಯಾನೇಷು ಚ - ತೋಟಗಳಲ್ಲಿಯೂ, ರಕ್ಷಾಂಸಿ - ರಾಕ್ಷಸರನ್ನು, ಅಭೀತವತ್ - ಭಯವಿಲ್ಲದಂತೆ, ಚೋದಯಂತಃ ಪ್ರೇರಿಸುವವರಾಗಿ, ಪರಿಚಕ್ರಮುಃ-ತಿರುಗಿದರು. ||೧೯|| ತೇ - ಆ ರಾಕ್ಷಸರು, ಏಕೇ - ಕೆಲವರು, ರುಚಿರಾನ್ - ಮನೋಹರವಾದ, ರಥಾನ್ - ತೇರುಗಳನ್ನೂ, ಏಕೇ - ಕೆಲವರು, ದೃಪ್ತಾನ್ - ಕೊಬ್ಬಿದ, ಹಯಾನ್ - ಕುದುರೆಗಳನ್ನೂ, ಪೃಥಕ್ - ಪ್ರತ್ಯೇಕ ಪ್ರತ್ಯೇಕವಾಗಿ, ಅನ್ಯೇ - ಮತ್ತೆ ಕೆಲವರು, ನಾಗಾನ್ - ಆನೆಗಳನ್ನು, ಅಧಿರುರುಹುಃ - ಏರಿದರು, ಏಕೇ - ಕೆಲವರು, ಪದಾತಯಶ್ಚ - ಪಾದಚಾರಿಗಳಾಗಿ, ಜಗ್ಮುಃ - ಹೊರಟರು. ||೨೧|| ಸಾಪುರೀ - ಆ ಲಂಕಾಪಟ್ಟಣವು, ಸಂಪತದ್ಭಿಃ - ಬರುತ್ತಿರುವ, ರಥ....ಭಿಃ - ತೇರುಗಳಿಂದಲೂ, ಆನೆಗಳಿಂದಲೂ, ಕುದುರೆಗಳಿಂದಲೂ, ಗರುತ್ಮದ್ಭಿಃ - ಗರುಡಪಪಕ್ಷಿಗಳಿಂದ, ಅಂಬರಮಿವ - ಅಂತರಿಕ್ಷದಂತೆ, ವಿರುರುಚೇ - ಶೋಭಿಸುತ್ತಿದ್ದಿತು. ||೨೨|| ತೇ - ಅವರು, ವಾಹನಾನಿ - ವಾಹನಗಳನ್ನೂ, ವಿವಿಧಾನಿ - ನಾನಾಬಗೆಗಳಾದ, ಯಾನಾನಿ - ಕುದುರೆ ಮುಂತಾದವುಗಳನ್ನು, ಅವಸ್ಥಾಪ್ಯ - ನಿಲ್ಲಿಸಿ, ಪದ್ಭಿಃ - ಕಾಲುಗಳಿಂದ,

---

ಬಂದಿರುವುದು. ಅದನ್ನು ಬಹು ಜಾಗ್ರತೆಯಾಗಿ ನೆರವೇರಿಸಿಕೊಳ್ಳಬೇಕಾಗಿರುವುದು. ಆದುದರಿಂದ ನೀವೀಗಲೇ ಇಲ್ಲಿಂದ ಹೊರಟು ರಾಕ್ಷಸರೆಲ್ಲರನ್ನೂ ಬಹು ಜಾಗ್ರತೆಯಾಗಿ ಕರೆದು ತನ್ನಿರಿ" ಎಂದು ಅವರಿಗೆ ಆಜ್ಞಾಪಿಸಿದನು. ಆಗ ಆ ದೂತರು ತಮ್ಮ ಒಡೆಯನ ಮಾತುಗಳನ್ನು ಕೇಳಿ ಏನೊಂದೂ ಹೆದರಿಕೆಯಿಲ್ಲದೆ ಪ್ರತಿಯೊಂದು ರಾಕ್ಷಸರ ಮನೆಯನ್ನು ಪ್ರವೇಶಿಸಿ, ಕ್ರೀಡಾಶಯ್ಯೆಗಳಲ್ಲಿಯೂ, ಉದ್ಯಾನವನಗಳಲ್ಲಿಯೂ ಇರುವ ರಾಕ್ಷಸವೀರರೆಲ್ಲರಿಗೂ ರಾವಣಾಸುರನ ಅಪ್ಪಣೆಯನ್ನು ತಿಳಿಸುತ್ತ ತಿರುಗಿದರು. ಆಗ ಅವರೆಲ್ಲರೂ ತಮ್ಮ ಒಡೆಯನ ಆಜ್ಞಾವಿಧಾನವನ್ನು ಕೇಳಿ ಕೂಡಲೇ ಕೆಲವರು ಸೊಗಸಾದ ಕುದುರೆಗಳನ್ನೇರಿಯೂ, ಕೆಲವರು ಮದ್ದಾನೆಗಳನ್ನೇರಿಯೂ, ಕೆಲವರು ಕಾಲ್ನಡಿಗೆಯಿಂದಲೂ ಬಹು ಜಾಗ್ರತೆಯಾಗಿ ಹೊರಟುಬಂದರು. ಬಹು ಶ್ರೇಷ್ಠವಾದ ಆ ಲಂಕಾನಗರವು ಹಾಗೆ ಹೋಗುತ್ತಿದ್ದ ಗಜ ತುರಗ ಪದಾತಿ ಸಮೂಹಗಳಿಂದ ತುಂಬಿದುದಾಗಿ ಪಕ್ಷಿಸಂಘಗಳಿಂದ ತುಂಬಿದ ಆಕಾಶದಂತೆ ತೋರುತ್ತಿದ್ದಿತು. ಆಗಲಾ ರಾಕ್ಷಸರೆಲ್ಲರೂ ನಾನಾವಿಧಗಳಾದ ವಾಹನಗಳನ್ನು ದ್ವಾರದೇಶ

ಪದ್ಭಿಃ ಪ್ರವಿವಿಶುಸ್ಸಿಂಹಾ ಗಿರಿಗುಹಾಮಿವ ॥ ೨೩ ॥ ರಾಜ್ಞಃ ಪಾದೌ ಗೃಹೀತ್ವಾತು ರಾಜ್ಞಾ ತೇ ಪ್ರತಿಪೂಜಿತಾಃ । ಪೀಠೇಷ್ವನ್ಯೇ ಬ್ರುಸೀಷ್ವನ್ಯೇ ಭೂಮೌ ಕೇಚಿದುಪಾವಿಶ‌ನ್ ॥ ೨೪ ॥ ತೇ ಸಮೇತ್ಯ ಸಭಾಯಾಂ ವೈ ರಾಕ್ಷಸಾ ರಾಜಶಾಸನಾತ್ । ಯಥಾರ್ಹಮುಭಿತಸ್ಥುಸ್ತೇ ರಾವಣಂ ರಾಕ್ಷಸಾಧಿಪಂ ॥ ೨೫ ॥ ಮಂತ್ರಿಣಶ್ಚ ಯಥಾಮುಖ್ಯಾ ನಿಶ್ಚಯಾರ್ಥೇಷು ಪಂಡಿತಾಃ । ಅಮಾತ್ಯಾಶ್ಚ ಗುಣೋಪೇತಾಸ್ಸರ್ವಜ್ಞಾ ಬುದ್ಧಿದರ್ಶನಾಃ । ಸಮೇಯುಸ್ತತ್ರ ಶತಶಃ ಶೂರಾಶ್ಚ ಬಹವಸ್ತದಾ ॥ ೨೬ ॥ ಸಭಾಯಾಂ ಹೇಮವರ್ಣಾಯಾಂ ಸರ್ವಾರ್ಥಸ್ಯ ಸುಖಾಯ ವೈ । ರಮ್ಯಾಯಾಂ

ಸಿಂಹಾಃ - ಸಿಂಹಗಳು, ಗಿರಿಗುಹಾಮಿವ - ಪರ್ವತದ ಗುಹೆಯನ್ನಂತೆ, ಸಭಾಂ - ಸಭೆಯನ್ನು, ಪ್ರವಿವಿಶುಃ - ಹೊಕ್ಕರು. ॥ ೨೩ ॥ ತೇ - ಆ ರಾಕ್ಷಸರು, ರಾಜ್ಞಃ - ಅರಸಿನ, ಪಾದೌತು - ಪಾದಗಳನ್ನು, ಗೃಹೀತ್ವಾ - ಹಿಡಿದು, ರಾಜ್ಞಾ - ಅರಸಿನಿಂದ, ಪ್ರತಿ....ತಃ - ಸತ್ಕೃತರಾಗಿ, ಅನ್ಯೇ - ಕೆಲವರು, ಪೀಠೇಷು - ಪೀಠಗಳಲ್ಲಿಯೂ, ಅನ್ಯೇ - ಮತ್ತೆ ಕೆಲವರು, ಬ್ರುಸೀಷು - ದರ್ಭಾಸನಗಳಲ್ಲಿಯೂ, ಕೇಚಿತ್ - ಕೆಲವರು, ಭೂಮೌ - ನೆಲದಲ್ಲಿಯೂ, ಉಪಾವಿಶನ್ - ಕುಳಿತರು. ॥ ೨೪ ॥ ತೇರಾಕ್ಷಸಾಃ - ಆ ರಾಕ್ಷಸರು, ರಾಜ....ತ್ - ರಾಜಾಜ್ಞೆಯಿಂದ, ಸಮೇತ್ಯ - ಸೇರಿ, ಸಭಾಯಾಂ - ಸಭೆಯಲ್ಲಿ, ಯಥಾರ್ಹಂ - ಯಥಾಯೋಗ್ಯವಾಗಿ, ರಾಕ್ಷಸಾಧಿಪ - ರಾಕ್ಷಸಾಧಿಪತಿಯಾದ, ರಾವಣಂ- ರಾವಣನಿಗೆ, ಅಭಿತಸ್ಥುಃ - ಎದುರಾಗಿ ಕುಳಿತರು. ॥ ೨೫ ॥ ಯಥಾಮುಖ್ಯಾಃ - ಮುಖಂಡರನ್ನನುಸರಿಸಿದ, ನಿಶ್ಚಯಾರ್ಥೇಷು - ಅರ್ಥನಿಶ್ಚಯಗಳಲ್ಲಿ, ಪಂಡಿತಾಃ - ಪಂಡಿತರಾದ, ಗುಣೋಪೇತಾಃ - ವಿನಯಾದಿ ಗುಣಗಳಿಂದ ಕೂಡಿದ, ಸರ್ವಜ್ಞಾಃ - ಸರ್ವಜ್ಞರಾದ, ಬುದ್ಧಿದರ್ಶನಾಃ - ಬುದ್ಧಿಯೇ ನೇತ್ರವಾಗಿ ಉಳ್ಳ, ಮಂತ್ರಿಣಶ್ಚ - ಮುಖ್ಯಮಂತ್ರಿಗಳೂ, ಅಮಾತ್ಯಾಶ್ಚ - ಉಪಮಂತ್ರಿಗಳು, ಶತಶಃ - ನೂರುಮಂದಿಯು, ತತ್ರ - ಆ ಸಭೆಯಲ್ಲಿ, ಸಮೇಯುಃ - ಬಂದರು. ॥ ೨೬ ॥ ತದಾ - ಆ ಕಾಲದಲ್ಲಿ, ಬಹವಃ - ಅನೇಕರಾದ, ಶೂರಾಶ್ಚ - ಶೂರರೂ, ಹೇಮವರ್ಣಾಯಾಂ - ಭಂಗಾರದ ಬಣ್ಣವುಳ್ಳ, ರಮ್ಯಾಯಾಂ - ಮನೋಹರವಾದ, ತತ್ರಸಭಾಯಾಂ - ಆ ಸಭೆಯಲ್ಲಿ, ಸರ್ವಾರ್ಥಸ್ಯ -

ದಲ್ಲಿಯೇ ಬಿಟ್ಟು ಸಿಂಹಗಳು ಗಿರಿಗಹ್ವರಗಳನ್ನು ಪ್ರವೇಶಿಸುವಂತೆ ಆ ರಾವಣಾಸುರನ ಸಭಾಭವನವನ್ನು ಪ್ರವೇಶಿಸಿದರು. ॥ ೧೭–೨೩ ॥ ಈ ರೀತಿ ಪ್ರವೇಶಿಸಿದ ಆ ರಾಕ್ಷಸರೆಲ್ಲರೂ ತಮ್ಮ ಒಡೆಯನಾದ ರಾವಣನ ಪಾದಗಳಿಗೆ ಮಣಿದು ಅವನಿಂದ ಸನ್ಮಾನಿತರಾಗಿ ಕೆಲವರು ಪೀಠಗಳಮೇಲೆಯೂ, ಕೆಲವರು ದರ್ಭಾಸನಗಳಮೇಲೆಯೂ, ಕೆಲವರು ನೆಲದಮೇಲೆಯೂ, ಕುಳಿತುಕೊಂಡರು. ಹೀಗೆ ಆ ರಾಕ್ಷಸರೆಲ್ಲರೂ ರಾಜಶಾಸನದಿಂದ ಆ ಸಭೆಗೈತಂದು ತಮ್ಮ ತಮ್ಮ ಸ್ಥಾನಮಾನಗಳಿಗನುಗುಣವಾಗಿ ಆ ರಾವಣನನ್ನು ಸೇವಿಸಿ ಕುಳಿತರು. ಆ ಸಮಯದಲ್ಲಿ ಕಾರ್ಯನಿಶ್ಚಪಟುಗಳಾದ ಮುಖ್ಯಾಮಾತ್ಯರೂ, ಸದ್ಗುಣಸಂಪನ್ನರೂ, ಸರ್ವಜ್ಞರೂ, ತಮ್ಮ ಬುದ್ಧಿಬಲದಿಂದಲೇ ಸಮಸ್ತವನ್ನೂ ತಿಳಿಯುವವರೂ ಆದ ಪ್ರಧಾನಿಗಳೂ ಗುಂಪುಗುಂಪಾಗಿ ಸಭೆಯನ್ನು ಪ್ರವೇಶಿಸಿ ಯಥಾಕ್ರಮವಾಗಿ ಆಸನಗಳನ್ನಲಂಕರಿಸಿದರು. ॥೨೪—೨೬॥ ಆಗ ಶೂರರಾದ ರಾಕ್ಷಸರನೇಕರು ಸಮಸ್ತ ಕಾರ್ಯಗಳನ್ನೂ ಚೆನ್ನಾಗಿ ಆಲೋಚಿಸುವುದಕ್ಕಾಗಿ ರಾಕ್ಷಸೇಶ್ವರನಾದ ಆ ರಾವಣಾಸುರನ ಕಾಂಚನವರ್ಣವಿರಾಜಿತವಾದ ಆ ಸಭೆಯಲ್ಲಿ

ರಾಕ್ಷಸೇಂದ್ರಸ್ಯ ಸಮೇಯುಸ್ತತ್ರ ಸಂಘಶಃ || ೨೭ || ತತೋ ಮಹಾತ್ಮಾ ವಿಪುಲಂ ಸುಯುಗ್ಮಂ ವರಂ ರಥಂ ಹೇಮವಿಚಿತ್ರಿತಾಂಗಂ | ಶುಭಂ ಸಮಾಸ್ಥಾಯ ಯಯೌ ಯಶಸ್ವೀ ವಿಭೀಷಣಸ್ಸಂಸದಮಗ್ರಜಸ್ಯ || ೨೮ || ಸಪೂರ್ವಜಾಯಾಽವರಜ ಶ್ಯಶಂಸ ನಾಮಾಥ ಪಶ್ಚಾಚ್ಚರಣೌ ವವಂದೇ | ಶುಕಃ ಪ್ರಹಸ್ತಶ್ಚ ತಥೈವ ತೇಭ್ಯೋ ದದೌ ಯಥಾರ್ಹಂ ಪೃಥಗಾಸನಾನಿ || ೨೯ || ಸುವರ್ಣನಾನಾಮಣಿಭೂಷಣಾನಾಂ ಸುವಾಸಸಾಂ ಸಂಸದಿ ರಾಕ್ಷಸಾನಾಂ | ತೇಷಾಂ ಪರಾರ್ಧ್ಯಾಗರುಚಂದನಾನಾಂ ಸ್ರಜಶ್ಚ

---

ಸಮಸ್ತ ಕಾರ್ಯಗಳ, ಸುಖಾಯುಮೈ - ಸೌಕರ್ಯಕ್ಕಾಗಿಯೇ, ಸಂಘಶಃ - ಗುಂಪಾಗಿ, ಸಮೇಯುಃ - ಬಂದರು. || ೨೭ || ತತಃ - ಬಳಿಕ, ಮಹಾತ್ಮಾ - ಮಹಾ ಮನಸ್ವಿಯಾದ, ಯಶಸ್ವೀ - ಕೀರ್ತಿವಂತನಾದ, ವಿಭೀಷಣಃ - ವಿಭೀಷಣನು, ಹೇಮ....ಗಂ - ಭಂಗಾರದ ಕಟ್ಟುಗಳಿಂದಲಂಕೃತವಾದ ಅವಯವಗಳುಳ್ಳ, ಸುಯುಗ್ಮಂ - ಜಾತ್ಯಶ್ವಗಳು ಕಟ್ಟಿರುವ, ವರಂ - ಶ್ರೇಷ್ಠವಾದ, ಶುಭಂ - ಮಂಗಳಕರವಾದ, ರಥಂ - ತೇರಿನಲ್ಲಿ, ಸಮಾಸ್ಥಾಯ - ಕುಳಿತು, ಅಗ್ರಜಸ್ಯ - ಅಣ್ಣನಾದ ರಾವಣನ, ಸಂಸದಂ - ಸಭೆಯನ್ನು ಕುರಿತು, ಯಯೌ - ತೆರಳಿದನು. || ೨೮ || ಅವರಜಃ - ತಮ್ಮನಾದ, ಸಃ - ಆ ವಿಭೀಷಣನು, ಪೂರ್ವಜಾಯ - ಅಗ್ರಜನಾದ ರಾವಣನಿಗೆ, ನಾಮ - ನಾಮಧೇಯವನ್ನು, ಶಶಂಸ- ಹೇಳಿ, ಅಥ - ಬಳಿಕ, ಪಶ್ಚಾತ್ - ಕಡೆಯಲ್ಲಿ, ಚರಣೌ - ಪಾದಗಳನ್ನು, ವವಂದೇ - ನಮಸ್ಕರಿಸಿದನು, ಶುಕಃ - ಶುಕನು, ಪ್ರಹಸ್ತಶ್ಚ - ಪ್ರಹಸ್ತನು, ತಥೈವ - ಹಾಗೆಯೇ, ವವಂದಾತೇ - ನಮಸ್ಕರಿಸಿದರು, ತೇಭ್ಯಃ - ಅವರು ಮೂವರಿಗೂ, ಯಥಾರ್ಹಂ - ಯಥಾಯೋಗ್ಯವಾಗಿ, ಪೃಥಕ್ - ಪ್ರತ್ಯೇಕವಾಗಿ, ಆಸನಾನಿ - ಪೀಠಗಳನ್ನು, ದದೌ - ಕೊಟ್ಟನು. || ೨೯ || ಸುವ......ನಾಂ - ಚಿನ್ನ ರತ್ನಗಳ ಅನೇಕ ಆಭರಣಗಳುಳ್ಳ, ಸುವಾಸಸಾಂ - ಒಳ್ಳೆಯ ವಸ್ತ್ರಗಳನ್ನುಟ್ಟಿರುವ, ತೇಷಾಂರಾಕ್ಷಸಾನಾಂ - ಆ ರಕ್ಕಸರ, ಪರಾ....ನಾಂ - ಉತ್ತಮವಾದ ಕೃಷ್ಣಾಗರು ಶ್ರೀಗಂಧಗಳುಳ್ಳ, ಸ್ರಜಃ - ಹೂಸರಗಳ, ಗಂಧಾಶ್ಚ - ಸುವಾಸನೆಗಳೂ, ಸಂಸದಿ - ಸಭೆಯಲ್ಲಿ, ಸಮಂತಾತ್ - ಎಲ್ಲೆಡೆಯಲ್ಲಿಯೂ,

---

ಗುಂಪುಗುಂಪಾಗಿ ಸೇರಿದರು. ಆ ಸಮಯದಲ್ಲಿ ಮಹಾತ್ಮನೂ, ಮಹಾ ಕೀರ್ತಿವಂತನೂ ಆದ ವಿಭೀಷಣನು ವಿಶಾಲವಾದುದೂ, ಬಹು ಶ್ರೇಷ್ಠವಾದುದೂ, ಸುವರ್ಣದಿಂದ ಬಹು ವಿಚಿತ್ರವಾಗಿ ನಿರ್ಮಿತವಾದ ವಿಭಾಗಗಳುಳ್ಳುದೂ, ಜಾತ್ಯಶ್ವಗಳು ಕಟ್ಟಿ ಸುಂದರವಾದುದೂ ಆದ ಒಂದು ದಿವ್ಯ ರಥವನ್ನೇರಿ ತನ್ನ ಅಗ್ರಜನಾದ ರಾವಣಾಸುರನ ಆಲೋಚನಾ ಸಭೆಗೈತಂದನು. ಆ ವಿಭೀಷಣನು ಸಭಾಮಂದಿರವನ್ನು ಹೊಕ್ಕು ರಾವಣಾಸುರನ ಮುಂದೆ ನಿಂತು ಪ್ರವರಪೂರ್ವಕವಾಗಿ ಆತನ ಪಾದಗಳಿಗೆ ಮಣಿದನು. ಅಂತೆಯೇ ಶುಕನೂ, ಪ್ರಹಸ್ತನೂ ರಾವಣನಿಗೆ ಮಣಿದರು. ಆಗ ರಾವಣನು ಅವರು ಮೂವರಿಗೂ ಬೇರೆಬೇರೆಯಾಗಿ ಅವರವರಿಗೆ ಯೋಗ್ಯವಾದ ಪೀಠಗಳನ್ನು ಸೂಚಿಸಿದನು. ಆಗಲಾ ಸಭೆಯಲ್ಲಿದ್ದ ರಾಕ್ಷಸರು ಸುವರ್ಣರಚಿತವಾಗಿ ಸಮಸ್ತ ಮಣಿಗಳ ಕೆತ್ತನೆಯುಳ್ಳ ಆಭರಣಗಳನ್ನೂ, ದಿವ್ಯಾಂಬರಗಳನ್ನೂ, ಪುಷ್ಪಮಾಲಿಕೆಗಳನ್ನೂ ಧರಿಸಿ, ಅತ್ಯುತ್ತಮವಾದ ಅಗರು ಗಂಧವನ್ನು ಪೂಸಿಕೊಂಡೊಪ್ಪುತ್ತಿದ್ದರು. ಅವರು ಧರಿಸಿದ್ದ ಹೂಮಾಲೆಗಳ ಮತ್ತು ಲೇಪಿಸಿಕೊಂಡಿದ್ದ ಅಗರುಗಂಧದ ಸುವಾಸನೆಯು ಆ ಸಭಾಭವನದ ಎಲ್ಲೆಡೆಗಳಲ್ಲಿಯೂ ತುಂಬಿ

ಗಂಧಾಶ್ಚ ವವುಸ್ಸಮಂತಾತ್ ||೩೦|| ನಚುಕ್ರುಶುರ್ನಾನೃತಮಾಹ ಕಶ್ಚಿತ್ಸಭಾಸದೋ ನೈವ ಜಜಲ್ಪುರುಚ್ಚೈಃ । ಸಂಸಿದ್ಧಾರ್ಥಾಃ ಸರ್ವಏವೋಗ್ರವೀರ್ಯಾ ಭರ್ತುಸ್ಸರ್ವೇ ದದೃಶುಶ್ಚಾನನಂ ತೇ || ೩೧ ||

ಸರಾವಣಃ ಶಸ್ತ್ರಭೃತಾಂ ಮನಸ್ವಿನಾಂ
ಮಹಾಬಲಾನಾಂ ಸಮಿತೌ ಮನಸ್ವೀ ।
ತಸ್ಯಾಂ ಸಭಾಯಾಂ ಪ್ರಭಯಾ ಚಕಾಶೇ
ಮಧ್ಯೇ ವಸೂನಾಮಿವ ವಜ್ರಹಸ್ತಃ || ೩೨ ||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಏಕಾದಶಸ್ಸರ್ಗಃ.

---

ವವುಃ - ಬೀಸಿದವು. || ೩೦ || ಸಭಾಸದಃ - ಸಭೆಯಲ್ಲಿ ಸೇರಿದ ಜನರು, ನಚುಕ್ರುಶುಃ - ಘೋಷವನ್ನು ಮಾಡಲಿಲ್ಲ, ಉಚ್ಚೈಃ - ಘಟ್ಟಿಯಾಗಿ, ನೈವಜಜಲ್ಪುಃ - ಮಾತನಾಡಲೇ ಇಲ್ಲವು, ಕಶ್ಚಿತ್ - ಒಬ್ಬನಾದರೂ, ಅನೃತಂ - ಸುಳ್ಳು ಮಾತನ್ನು, ನಾಹ - ಹೇಳಲಿಲ್ಲ, ಸರ್ವಏವ - ಸಮಸ್ತರೂ, ಸಂಸಿದ್ಧಾರ್ಥಾಃ - ಪೂರ್ಣ ಮನೋರಥವುಳ್ಳವರು, ಸರ್ವೇ - ಸಮಸ್ತರಾದ, ತೇ - ಆ ರಕ್ಕಸರು, ಉಗ್ರವೀರ್ಯಾಃ - ಭಯಂಕರ ಪರಾಕ್ರಮವುಳ್ಳವರು, ಭರ್ತುಃ - ಒಡೆಯನಾದ ರಾವಣನ, ಆನನಂ - ಮುಖವನ್ನು, ದದೃಶುಶ್ಚ-ನೋಡುತ್ತಿದ್ದರು. ||೩೧|| ಮನಸ್ವೀ - ಮಹಾ ಮನಸ್ವಿಯಾದ, ಸರಾವಣಃ- ಆ ರಾವಣನು, ಶಸ್ತ್ರಭೃತಾಂ - ಶಸ್ತ್ರಧಾರಿಗಳಾದ, ಮನಸ್ವಿನಾಂ - ಧೈರ್ಯಶಾಲಿಗಳಾದ, ಮಹಾಬಲಾನಾಂ - ಬಹಳ ಸಾಮರ್ಥ್ಯವಂತರಾದ ರಕ್ಕಸರ, ಸಭಾಯಾಂ - ಪ್ರಕಾಶಮಾನವಾದ, ತಸ್ಯಾಂ ಸಮಿತೌ - ಆ ಸಭೆಯಲ್ಲಿ, ಪ್ರಭಯಾ - ಕಾಂತಿಯಿಂದ, ವಸೂನಾಂ - ಅಷ್ಟವಸುಗಳ, ಮಧ್ಯೇ - ನಡುವೆ, ವಜ್ರಹಸ್ತಇವ - ದೇವೇಂದ್ರನಂತೆ, ಚಕಾಶೇ - ಶೋಭಿಸುತ್ತಿದ್ದನು. || ೩೨ ||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಏಕಾದಶಸ್ಸರ್ಗಃ.

---

ಹೋಗಿದ್ದಿತು. ಆ ಸಭೆಯಲ್ಲಿ ಯಾರೂ ಯಾವ ವಿಧವಾದ ಸದ್ದನ್ನೂ ಮಾಡದೆ ನಿಶ್ಶಬ್ದವಾಗಿ ಕುಳಿತಿದ್ದರು. ಅವರಲ್ಲಿ ಯಾರೂ ಅನೃತವನ್ನಾಡುವವರಲ್ಲ. ಯಾರೊಬ್ಬರೂ ಗಟ್ಟಿಯಾಗಿ ಮಾತನಾಡದವರು. ಅಲ್ಲಿದ್ದವರೆಲ್ಲರೂ, ನೆರವೇರಿದ ಪ್ರಯೋಜನವುಳ್ಳವರೂ, ಮಹಾ ಶೌರ್ಯವಂತರೂ ಆಗಿದ್ದರು. ಅವರೆಲ್ಲರೂ ಉತ್ಸುಕರಾಗಿ ತಮ್ಮೊಡೆಯನಾದ ರಾವಣಾಸುರನ ಆಜ್ಞೆಯೇನೆಂಬುದನ್ನೇ ನಿರೀಕ್ಷಿಸುತ್ತ ಆತನ ಮುಖವನ್ನೇ ನೋಡುತ್ತಿದ್ದರು. ಆಗ ಮಹಾ ಧೀರನಾದ ರಾವಣಾಸುರನು ಆ ಸಭೆಯಲ್ಲಿ ಆಯುಧಗಳನ್ನು ಧರಿಸಿರುವವರೂ, ಒಳ್ಳೆಯ ಮನಸ್ಸುಳ್ಳವರೂ, ಮಹಾ ಬಲಪರಾಕ್ರಮಶಾಲಿಗಳಾದವರೂ ಆದ ಆ ರಾಕ್ಷಸ ಸಮೂಹದಲ್ಲಿ, ಅಷ್ಟವಸುಗಳ ಮಧ್ಯದಲ್ಲಿರುವ ದೇವೇಂದ್ರನಂತೆ ತನ್ನ ದಿವ್ಯ ತೇಜಸ್ಸಿನಿಂದ ವಿರಾಜಿಸುತ್ತಿದ್ದನು. || ೨೭–೩೨ ||

ಇಂತಿದು ರಾವಣಕೃತ ಆಲೋಚನಾ ಸಂಸದ್ವಿತರಣವೆಂಬ ಹನ್ನೊಂದನೆಯ ಸರ್ಗವು ಸಮಾಪ್ತವಾದುದು.



# ಯುದ್ಧಕಾಂಡೇ ದ್ವಾದಶಸ್ಸರ್ಗಃ

ಸ ತಾಂ ಪರಿಷದಂ ಕೃತ್ಸ್ನಾಂ ಸಮೀಕ್ಷ್ಯ ಸಮಿತಿಂಜಯಃ । ಪ್ರಚೋದಯಾಮಾಸ ತದಾ ಪ್ರಹಸ್ತಂ ವಾಹಿನೀಪತಿಂ ॥ ೧ ॥ "ಸೇನಾಪತೇ! ಯಥಾ ತೇ ಸ್ಯುಃ ಕೃತವಿದ್ಯಾಶ್ಚತುರ್ವಿಧಾಃ । ಯೋಧಾನಧಿಕರಕ್ಷಾಯಾಂ ತಥಾ ವ್ಯಾದೇಷ್ಟುಮರ್ಹಸಿ" ॥ ೨ ॥ ಸ ಪ್ರಹಸ್ತಃ ಪ್ರಣೀತಾತ್ಮಾ ಚಿಕೀರ್ಷನ್ ರಾಜಶಾಸನಂ । ವಿನಿಕ್ಷಿಪದ್ಬಲಂ ಸರ್ವಂ ಬಹಿರಂತಶ್ಚ ಮಂದಿರೇ ॥ ೩ ॥ ತತೋ ವಿನಿಕ್ಷಿಪ್ಯ ಬಲಂ ಪೃಥಙ್ನಗರಗುಪ್ತಯೇ । ಪ್ರಹಸ್ತಃ ಪ್ರಮುಖೇ ರಾಜ್ಞೋ ನಿಷಸಾದ ಜಗಾದಚ ॥ ೪ ॥

---

ತದಾ - ಆಗ, ಸಮಿತಿಂಜಯಃ - ಸಭೆಯಲ್ಲಿ ಜಯಶೀಲನಾದ, ಸಃ - ಆ ರಾವಣನು, ಕೃತ್ಸ್ನಾಂ ಸಮಸ್ತವಾದ, ತಾಂಪರಿಷದಂ-ಆ ಸಭೆಯನ್ನು, ಸಮೀಕ್ಷ್ಯ-ಕಂಡು, ವಾಹಿನೀಪತಿಂ-ಸೇನಾಪತಿಯಾದ, ಪ್ರಹಸ್ತಂ - ಪ್ರಹಸ್ತನನ್ನು ಕುರಿತು, ಪ್ರಚೋದಯಾಮಾಸ - ಆಜ್ಞಾಪಿಸಿದನು. ||೧|| ಹೇ ಸೇನಾಪತೇ - ಎಲೈ ಸೈನ್ಯಾಧಿಪತಿಯೇ, ಯೇ - ಯಾರು, ಕೃತವಿದ್ಯಾಃ - ಅಭ್ಯಾಸ ಮಾಡಲ್ಪಟ್ಟ ಸಮಸ್ತ ವಿದ್ಯೆಯುಳ್ಳವರೋ, ಚತುರ್ವಿಧಾಃ-ರಥಿಕರು, ಅಶ್ವಸಾದಿಗಳೂ, ಆನೆಯವರು, ಪದಾತಿಗಳು ಎಂಬ ನಾಲ್ಕು ವಿಧಗಳುಳ್ಳ, ಯೋಧಾಃ - ಭಟರು, ಯೇ - ಯಾರೋ, ತೇ - ಅವರು, ಅಧಿ....ಯಾಂ - ಹೆಚ್ಚಾಗಿ ಗ್ರಾಮಸಂರಕ್ಷಣ ವಿಷಯದಲ್ಲಿ, ಯಥಾ - ಹೇಗೆ, ಸ್ಯುಃ - ಇರುವರೋ, ತಥಾ-ಹಾಗೆಯೇ, ಯೋಧಾನ್ - ಭಟರನ್ನು, ವ್ಯಾದೇಷ್ಟುಂ - ಆಜ್ಞಾಪಿಸಲು, ಅರ್ಹಸಿ - ಯೋಗ್ಯನಾಗು. ||೨|| ಸಪ್ರಹಸ್ತಃ- ಆ ಪ್ರಹಸ್ತನು, ಪ್ರಣೀತಾತ್ಮಾ - ವಿನಯಸಂಪನ್ನವಾದ ಮನವುಳ್ಳವನಾಗಿ, ರಾಜಶಾಸನಂ - ರಾಜಾಜ್ಞೆಯನ್ನು, ಚಿಕೀರ್ಷನ್ - ಮಾಡಲಿಚ್ಛೆಯುಳ್ಳವನಾಗಿ, ಮಂದಿರೇ - ಅರಮನೆಯಲ್ಲಿ, ಅಂತಃ - ಒಳಗೂ, ಬಹಿಶ್ಚ - ಹೊರಗೂ, ಸರ್ವಂ - ಸಮಸ್ತವಾದ, ಬಲಂ - ಸೈನ್ಯವನ್ನು, ವಿನಿಕ್ಷಿಪತ್-ಇರಿಸಿದನು. ||೩|| ತತಃ - ಬಳಿಕ, ಪ್ರಹಸ್ತಃ - ಪ್ರಹಸ್ತನು, ನಗರರಕ್ಷಯೇ - ಗ್ರಾಮಸಂರಕ್ಷಣಾರ್ಥವಾಗಿ, ಪೃಥಕ್ - ಪ್ರತ್ಯೇಕವಾಗಿ, ಬಲಂ - ಸೈನ್ಯವನ್ನು, ವಿನಿಕ್ಷಿಪ್ಯ - ಇರಿಸಿ, ರಾಜ್ಞಃ - ಅರಸಾದ ರಾವಣನ, ಪ್ರಮುಖೇ - ಸಮಕ್ಷದಲ್ಲಿ, ನಿಷಸಾದ - ಕುಳಿತುಕೊಂಡನು, ಜಗಾದಚ - ಹೇಳಲೂ ಹೇಳಿದನು. || ೪ || ಬಲವತಃ - ಬಲವಂತನಾದ, ತವ - ನಿನ್ನ ಸಂಬಂಧವಾದ, ಬಲಂ - ಸೈನ್ಯವು,

---

ಆ ಸಮಯದಲ್ಲಿ ರಣವಿಜಯಿಯಾದ ರಾವಣಾಸುರನು ಆ ಸಭೆಯೆಲ್ಲವನ್ನೂ ನೋಡಿ ಸೇನಾನಾಯಕನಾದ ಪ್ರಹಸ್ತನನ್ನು ನೋಡಿ, "ಎಲೈ ಸೇನಾಪತಿಯಾದ ಪ್ರಹಸ್ತನೇ! ಅಸ್ತ್ರವಿದ್ಯೆಯಲ್ಲಿ ವಿದ್ವಾಂಸರಾದ ಗಜ ತುರಗ ರಥಪದಾತಿಗಳೆಂಬ ಚತುರ್ವಿಧ ಯೋಧರು ಪಟ್ಟಣವನ್ನೆಲ್ಲ ಬಹು ಜಾಗರೂಕರಾಗಿ ರಕ್ಷಿಸಬೇಕೆಂದು ಆಜ್ಞಾಪಿಸು" ಎಂದು ಅಪ್ಪಣೆ ಮಾಡಿದನು. ಆ ಕೂಡಲೇ ವಿನಯಸಂಪನ್ನನಾದ ಪ್ರಹಸ್ತನು ರಾಜಾಜ್ಞೆಯಂತೆ ನಡೆಯುವವನಾಗಿ ಸೇನೆಯೆಲ್ಲವನ್ನೂ ಆ ಸಭಾಭವನದ ಒಳಗೂ ಹೊರಗೂ ನಿಲ್ಲಿಸಿದನು; ಪುರರಕ್ಷಣೆಗೋಸುಗ ಕೆಲವು ಸೇನೆಯನ್ನು ಪ್ರತ್ಯೇಕವಾಗಿ ನಿಲ್ಲಿಸಿ ರಾವಣಾಸುರನ ಬಳಿಗೈತಂದು, "ಎಲೈ ಮಹಾರಾಜನೇ! ಮಹಾ ಬಲಶಾಲಿಯಾದ ನಿನ್ನ ಸೇನೆಯೆಲ್ಲವೂ ಹೊರಗೆ ಕಾವಲಿರುವುದು. ಇನ್ನು

"ನಿಹಿತಂ ಬಹಿರಂತಶ್ಚ ಬಲಂ ಬಲವತಸ್ತವ । ಕುರುಷ್ವಾಽವಿಮನಾಃ ಕ್ಷಿಪ್ರಂ ಯದಭಿಪ್ರೇತಮಸ್ತು ತೇ" ॥ ೫ ॥ ಪ್ರಹಸ್ತಸ್ಯ ವಚಃ ಶ್ರುತ್ವಾ ರಾಜಾ ರಾಜ್ಯಹಿತೇರತಃ । ಸುಖೇಪ್ಸುಃ ಸುಹೃದಾಂ ಮಧ್ಯೇ ವ್ಯಾಜಹಾರ ಸ ರಾವಣಃ ॥ ೬ ॥ "ಪ್ರಿಯಾಪ್ರಿಯೇ ¶ ಸುಖಂ ದುಃಖಂ ಲಾಭಾಲಾಭೌ ಹಿತಾಹಿತೇ । ಧರ್ಮಕಾಮಾರ್ಥಕೃಚ್ಛ್ರೇಷು ಯೂಯಮರ್ಹಥ ವೇದಿತುಂ ॥ ೭ ॥ ಸರ್ವಕೃತ್ಯಾನಿ ಯುಷ್ಮಾಭಿಸ್ಸಮಾರಬ್ಧಾನಿ ಸರ್ವಥಾ । ಮಂತ್ರಕರ್ಮನಿಯುಕ್ತಾನಿ ನ ಜಾತು ವಿಫಲಾನಿ ಮೇ ॥ ೮ ॥ ಸಸೋಮಗ್ರಹನಕ್ಷತ್ರೈರ್ಮರುದ್ಭಿರಿವ ವಾಸವಃ । ಭವದ್ಭಿರಹಮತ್ಯರ್ಥಂ ವೃತಃ ಶ್ರಿಯ

ಅಂತಃ - ಒಳಗೂ, ಬಹಿಃ - ಹೊರಗೂ, ನಿಹಿತಂ - ಇರಿಸಲ್ಪಟ್ಟಿತು, ಅವಿಮನಾಃ - ವೈಮನಸ್ಯವಿಲ್ಲದವನಾಗಿ, ತೇ - ನಿನಗೆ, ಯತ್ ಅಭಿಪ್ರೇತಂ - ಯಾವದು ಇಷ್ಟವೋ, ತತ್ - ಅದನ್ನು, ಕ್ಷಿಪ್ರಂ - ಜಾಗ್ರತೆಯಾಗಿ, ಕುರುಷ್ವ - ಮಾಡು, ಅಸ್ತು - ಆಗಲಿ. ॥ ೫ ॥ ಪ್ರಹಸ್ತಸ್ಯ - ಪ್ರಹಸ್ತನ, ವಚಃ - ಮಾತನ್ನು, ಶ್ರುತ್ವಾ - ಕೇಳಿ, ರಾಜ್ಯಹಿತೇ - ರಾಜ್ಯದ ಹಿತದಲ್ಲಿ, ರತಃ - ಆಸಕ್ತನಾದ, ರಾಜಾ - ಪ್ರಭುವಾದ, ಸರಾವಣಃ-ಆ ರಾವಣನು, ಸುಖೇಪ್ಸುಃ-ಕ್ಷೇಮವನ್ನು ಕೋರುವವನಾಗಿ, ಸುಹೃದಾಂ-ಸ್ನೇಹಿತರ, ಮಧ್ಯೇ - ನಡುವೆ, ವ್ಯಾಜಹಾರ - ಹೇಳಿದನು. ॥ ೬ ॥ ಧರ್ಮ....ಷು - ಧರ್ಮ ಕಾಮ ಅರ್ಥ ಎಂಬ ಪುರುಷಾರ್ಥಗಳಲ್ಲಿ ಸಂದೇಹ ಬಂದಾಗಲೂ, ಪ್ರಿಯಾಪ್ರಿಯೇ - ಸುಖದುಃಖ ಸಾಧಕಗಳಾದ ವಸ್ತುಗಳನ್ನು, ಸುಖಂದುಃಖಂ - ಸುಖವನ್ನೂ ಶೋಕವನ್ನೂ, ಲಾಭಾಲಾಭೌ - ಇಷ್ಟಪ್ರಾಪ್ತಿ ಇಷ್ಟನಾಶ, ಹಿತಾಹಿತೇ - ಪರಿಣಾಮದಲ್ಲಿ ಒಳ್ಳೇ ಫಲವನ್ನು ಕೊಡತಕ್ಕದನ್ನೂ ಅದಲ್ಲವಾದ್ದನ್ನೂ ಇವುಗಳನ್ನೆಲ್ಲಾ, ಯೂಯಂ - ನೀವು, ವೇದಿತುಂ - ತಿಳಿಯಲು, ಅರ್ಹಥ - ಯೋಗ್ಯರಾಗಿರುವಿರಿ. ॥ ೭ ॥ ಯುಷ್ಮಾಭಿಃ - ನಿಮ್ಮಿಂದ, ಮೇ - ನನ್ನ, ಸರ್ವಕೃತ್ಯಾನಿ - ಸಮಸ್ತ ಕಾರ್ಯಗಳೂ, ಸರ್ವಥಾ-ಎಲ್ಲ ರೀತಿಗಳಲ್ಲಿಯೂ, ಸಮಾರಬ್ಧಾನಿ-ಆರಂಭಿಸಲ್ಪಟ್ಟವುಗಳಾಗಿವೆ, ಮಂತ್ರ....ನಿ-ಆಲೋಚನೆಯಲ್ಲಿ ನಿಯೋಜಿಸಿದ ಕಾರ್ಯಗಳು, ಜಾತು - ಯಾವಾಗಲೂ, ನವಿಫಲಾನಿ - ವ್ಯರ್ಥವಾಗುವುದಿಲ್ಲವು. ॥೮॥ ಸಸೋ....ತ್ರೈಃ - ಚಂದ್ರನೂ, ಇತರ ಗ್ರಹಗಳೂ ನಕ್ಷತ್ರಗಳಿಂದೊಡಗೂಡಿದ,

ನೀನು ಮಾಡಬಯಿಸಿರುವ ಕಾರ್ಯವನ್ನು ನಿರಾತಂಕವಾಗಿ ಜಾಗ್ರತೆಯಾಗಿ ಮಾಡಬಹುದು" ಎಂದು ಅರಿಕೆಮಾಡಿದನು. ॥ ೧-೫ ॥ ಪ್ರಹಸ್ತನ ಮಾತುಗಳನ್ನು ಕೇಳಿ, ರಾಜ್ಯದ ಶ್ರೇಯಸ್ಸನ್ನೇ ಕೋರುತ್ತಿರುವ ಆ ರಾವಣಾಸುರನು ಸ್ನೇಹಿತರ ಮಧ್ಯೆ ಹೀಗೆ ನುಡಿದನು. "ಎಲೈ ರಾಕ್ಷಸರೇ! ಧರ್ಮಕಾಮಾರ್ಥಗಳಲ್ಲಿ ಸಂಕಟವೊದಗಿದಾಗ, ಪ್ರಿಯಾಪ್ರಿಯಗಳು, ಸುಖದುಃಖಗಳು, ಲಾಭಾಲಾಭಗಳು, ಒಳ್ಳೆಯದು, ಕೆಟ್ಟದು ಇವೆಲ್ಲವನ್ನೂ ಸರಿಯಾಗಿ ತಿಳಿದುಕೊಳ್ಳಲು ನೀವೆಲ್ಲರೂ ಸಮರ್ಥರಾಗಿಯೇ ಇರುವಿರಿ. ನಾನು ಈಗ ಹೇಳುವ ವಿಷಯದಲ್ಲಿ ನೀವು ಎಲ್ಲ ರೀತಿಗಳಿಂದಲೂ ಚೆನ್ನಾಗಿ ಆಲೋಚಿಸಿ, ಯಾವ ರೀತಿ ಮಾಡಿದರೆ ಉಚಿತವಾಗುವುದೆಂಬುದನ್ನು ನಿರ್ಧರಿಸಿರಿ. ಇದುವರೆಗೆ ನಾನು ಆರಂಭಿಸಿದ ಯಾವದೊಂದು ಕಾರ್ಯವೂ ಯಾವಾಗಲೂ ವಿಫಲವಾಗಲಿಲ್ಲವು. ಮಹೇಂದ್ರನು ಚಂದ್ರಾದಿ ಗ್ರಹಗಳೊಡನೆಯೂ, ದೇವತೆಗಳೊಡನೆಯೂ ಕೂಡಿದವನಾಗಿ ಜಯಲಕ್ಷ್ಮಿಯನ್ನು ಪಡೆದಂತೆ

¶ "ಸುಖೇ ದುಃಖೇ" ತಿ. ಪಾ.

ಮವಾಪ್ನುಯಾಂ ॥ ೯ ॥ ಅಹಂತು ಖಲು ಸರ್ವಾನ್ವಃ ಸಮರ್ಥಯಿತುಮುದ್ಯತಃ । ಕುಂಭಕರ್ಣಸ್ಯ ತು ಸ್ವಪ್ನಾನ್ನೇಮಮರ್ಥಮಚೋದಯಂ ॥೧೦॥ ಅಯಂಹಿ ಸುಪ್ತಃ ಷಣ್ಮಾಸಾನ್ ಕುಂಭಕರ್ಣೋ ಮಹಾಬಲಃ । ಸರ್ವಶಸ್ತ್ರಭೃತಾಂ ಮುಖ್ಯಃ ಸಇದಾನೀಂ ಸಮುತ್ಥಿತಃ ॥ ೧೧ ॥ ಅಯಂಚ ದಂಡಕಾರಣ್ಯಾದ್ರಾಮಸ್ಯ ಮಹಿಷೀ ಪ್ರಿಯಾ । ರಕ್ಷೋಭಿ ಶ್ಚರಿತಾದ್ದೇಶಾದಾನೀತಾ ಜನಕಾತ್ಮಜಾ ॥ ೧೨ ॥ ಸಾ ಮೇ ನಶಯ್ಯಾ ಮಾರೋಢುಮಿಚ್ಛತ್ಯಲಸಗಾಮಿನೀ । ತ್ರಿಷು * ಲೋಕೇಷು ಚಾನ್ಯಾ ಮೇ ನಸೀತಾ

ಮರುದ್ಭಿಃ - ದೇವತೆಗಳಿಂದ, ವಾಸವಇವ - ದೇವೇಂದ್ರನಂತೆ, ಅಹಂ - ನಾನು, ಭವದ್ಭಿಃ - ನಿಮ್ಮಿಂದ, ವೃತಃ-ಪರಿವೃತನಾಗಿ, ಅತ್ಯರ್ಥಂ-ಬಹಳವಾಗಿ, ಶ್ರಿಯಂ-ಸಂಪತ್ತನ್ನು, ಅಪ್ನುಯಾಂ-ಹೊಂದುವೆನು. ॥೯॥ ಅಹಂತು - ನಾನಾದರೆ, ಸರ್ವಾನ್ - ಸಮಸ್ತರಾದ, ವಃ - ನಿಮ್ಮನ್ನು ಕುರಿತು, ಸಮರ್ಥಯಿತುಂ - ತಿಳಿಸುವದಕ್ಕಾಗಿ, ಉದ್ಯತಃಖಲು - ಉದ್ಯುಕ್ತನಾಗಿದ್ದೇನಷ್ಟೆ, ಕಿಂತು - ಮತ್ತೇನಂದರೆ, ಇಮಮರ್ಥಂ - ಈ ಅರ್ಥವನ್ನು, ಕುಂಭಕರ್ಣಸ್ಯ - ಕುಂಭಕರ್ಣನಿಗೆ, ಸ್ವಪ್ನಾತ್ - ನಿದ್ದೆಯ ದೆಸೆಯಿಂದ, ನಚೋದಯಂ - ಹೇಳವೇಹೋದೆ. ॥ ೧೦ ॥ ಸರ್ವ....ತಾಂ - ಅಸ್ತ್ರಧಾರಿಗಳಲ್ಲೆಲ್ಲಾ, ಮುಖ್ಯಃ - ಅಗ್ರೇಸರನಾದ, ಅಯಂ - ಈ, ಮಹಾಬಲಃ - ಬಹಳ ಬಲವಂತನಾದ, ಕುಂಭಕರ್ಣಃ - ಕುಂಭಕರ್ಣನು, ಷಣ್ಮಾಸಾನ್ - ಆರುತಿಂಗಳಲ್ಲಿ, ಸುಪ್ತೋಹಿ - ಮಲಗಿದ್ದನಷ್ಟೆ, ಸಃ - ಆ ಕುಂಭಕರ್ಣನು, ಇದಾನೀಂ-ಈಗ, ಸಮುತ್ಥಿತಃ-ಎದ್ದಿರುವನು. ॥೧೧॥ ರಾಮಸ್ಯ-ಶ್ರೀರಾಮನಿಗೆ, ಮಹಿಷೀ-ಪಟ್ಟದರಾಣಿಯಾದ, ಪ್ರಿಯಾ-ಇಷ್ಟಳಾದ, ಇಯಂಜನಕಾತ್ಮಜಾ - ಈ ಸೀತಾದೇವಿಯು, ದಂಡಕಾರಣ್ಯಾತ್ - ದಂಡಕಾರಣ್ಯದಿಂದ, ರಕ್ಷೋಭಿಃ - ರಕ್ಕಸರಿಂದ, ಚರಿತಾತ್ - ಸಂಚರಿಸಲ್ಪಟ್ಟ, ದೇಶಾತ್ - ಜನಸ್ಥಾನದಿಂದ, ಆನೀತಾ - ತರಲ್ಪಟ್ಟಳು. ॥ ೧೨ ॥ ಅಲಸಗಾಮಿನೀ - ಮಂದಗಾಮಿನಿಯಾದ, ಸಾ - ಆ ಸೀತಾದೇವಿಯು, ಮೇ - ನನ್ನ, ಶಯ್ಯಾಂಆರೋಢುಂ - ಹಾಸಿಗೆಯನ್ನು ಹತ್ತಲು, ನೇಚ್ಛತಿ - ಬಯಸುವದಿಲ್ಲ, ಅನ್ಯಾ - ಮತ್ತೊಬ್ಬ ಸ್ತ್ರೀಯು, ತ್ರಿಷುಲೋಕೇಷು - ಮೂರುಲೋಕಗಳಲ್ಲಿಯೂ, ಸೀತಾಸದೃಶೀ - ಸೀತಾದೇವಿಗೆ ಸಮಾನಳಾಗಿ, ಮೇ - ನನಗೆ, ಮತಾ - ಇಷ್ಟಳಾದವಳು,

ನಾನು ನಿಮ್ಮೊಡಗೂಡಿ ಇದುವರೆಗೂ ಜಯಲಕ್ಷ್ಮಿಯನ್ನು ಪಡೆದಿರುವೆನು. ಈಗ ನಾನು ಏತಕ್ಕೋಸ್ಕರ ನಿಮ್ಮೆಲ್ಲರನ್ನೂ ಇಲ್ಲಿಗೆ ಕರೆಯಿಸಿರುವೆನೋ ಆ ವಿಷಯವನ್ನು ಆಗಲೇ ನಿಮಗೆ ತಿಳಿಸಿರುವೆನು. ಆದರೆ ನನ್ನ ತಮ್ಮನಾದ ಕುಂಭಕರ್ಣನು ಈಗ ಆರುತಿಂಗಳುಗಳಿಂದಲೂ ನಿದ್ರಿಸುತ್ತಿದ್ದನಾದುದರಿಂದ ಆತನಿಗೆ ಈ ಸಮಾಚಾರವನ್ನು ತಿಳಿಸಲಾಗಲಿಲ್ಲವು. ಈಗ ಆತನೂ ಸಭೆಗೆ ಬಂದಿರುವನು. ಈತನು ಸರ್ವ ಶಸ್ತ್ರವಿದ್ಯಾಪರಿಣತನು. (ಆದುದರಿಂದ ನಿಮ್ಮೆಲ್ಲರಿಗೂ ಚೆನ್ನಾಗಿ ತಿಳಿಯುವಂತೆ ಪ್ರಸಕ್ತ ವಿಷಯವನ್ನು ಇನ್ನೊಮ್ಮೆ ಹೇಳುವೆನು, ಕೇಳಿರಿ.) ॥ ೬–೧೧ ॥ ಜನಕರಾಜ ಪುತ್ರಿಯೂ, ರಾಮನ ಭಾರ್ಯೆಯೂ ಆದ ಸೀತೆಯನ್ನು ರಾಕ್ಷಸರು ಸಂಚರಿಸುವ ದಂಡಕಾರಣ್ಯದಿಂದ ತಂದಿರುವೆನು. ಮಂದಗಾಮಿನಿಯಾದ ಆ ಸೀತೆಯು ನನ್ನ ಹಾಸಿಗೆಯನ್ನೇರಲು ಎಷ್ಟುಮಾತ್ರವೂ ಸಮ್ಮತಿಸದೆ ಹೋಗಿರುವಳು. ಆಕೆಯು ಬಹಳ ಸುಂದರಿ; ಮೂರುಲೋಕಗಳಲ್ಲಿಯೂ ಆಕೆಗೆ ಸಮಾನಳಾದ ಬೇರೊಬ್ಬ

* "ಮತಾತ್" ಗೋ. ಪಾ.

ಸದೃಶೀ ಮತಾ ॥ ೧೩ ॥ ತನುಮಧ್ಯಾ ಪೃಥುಶ್ರೋಣೀ * ಶಾರದೇಂದುನಿಭಾನನಾ । ಹೇಮಬಿಂಬನಿಭಾ ಸೌಮ್ಯಾ ಮಾಯೇವ ಮಯನಿರ್ಮಿತಾ ॥ ೧೪ ॥ ಸುಲೋಹಿತ ತಲೌ ಶ್ಲಕ್ಷ್ಣೌ ಚರಣೌ ಸುಪ್ರತಿಷ್ಠಿತೌ । ದೃಷ್ಟ್ವಾ ತಾಮ್ರನಖೌ ತಸ್ಯಾ ದೀಪ್ಯತೇ ಮೇ ಶರೀರಜಃ ॥೧೫॥ ಹುತಾಗ್ನೇರರ್ಚಿಸಂಕಾಶಾಮೇನಾಂ ಸೌರೀಮಿವ ಪ್ರಭಾಂ । ಉನ್ನಸಂ ವದನಂ ವಲ್ಗು ವಿಪುಲಂ ಚಾರುಲೋಚನಂ । ಪಶ್ಯಂ § ಸ್ತದಾ ವಶಸ್ತಸ್ಯಾಃ ಕಾಮಸ್ಯ ವಶಮೇಯಿವಾನ್ ॥ ೧೬ ॥ ಕ್ರೋಧಹರ್ಷಸಮಾನೇನ ದುರ್ವರ್ಣಕರಣೇ

---

ನ - ಇಲ್ಲವು. ॥ ೧೩ ॥ ತನುಮಧ್ಯಾ - ಸೂಕ್ಷ್ಮವಾದ ಮಧ್ಯಪ್ರದೇಶವುಳ್ಳವಳು, ಪೃಥುಶ್ರೋಣೀ - ವಿಸ್ತಾರವಾದ ಶ್ರೋಣೀಪ್ರದೇಶವುಳ್ಳವಳು, ಶಾರ....ನಾ - ಶರತ್ಕಾಲದಲ್ಲಿ ಹುಟ್ಟಿದ ಚಂದ್ರನಿಗೆ ಸದೃಶ ವಾದ ಮುಖವುಳ್ಳವಳು, ಹೇಮಬಿಂಬನಿಭಾ - ಸುವರ್ಣಪ್ರತಿಮೆಗೆ ಸಮಾನವಾದ ಕಾಂತಿಯುಳ್ಳವಳು, ಸೌಮ್ಯಾ-ಪ್ರಸನ್ನಳು, ಮಯನಿರ್ಮಿತಾ-ಮಯನಿಂದ ನಿರ್ಮಿಸಲ್ಪಟ್ಟ, ಮಾಯೇವಸ್ಥಿತಾ-ಮಾಯೆ ಯಂತಿರುವಳು. ॥ ೧೪ ॥ ಸುಲೋ....ಲೌ - ಸಮೀಚೀನವಾಗಿ ಕೆಂಪಾಗಿರುವ ಅಂಗಾಲುಗಳುಳ್ಳ, ಶ್ಲಕ್ಷ್ಣೌ - ಮೃದುಗಳಾದ, ತಾಮ್ರನಖೌ - ಕೆಂಪಾಗಿರುವ ಉಗುರುಗಳುಳ್ಳ, ಸುಪ್ರತಿಷ್ಠಿತೌ - ಚನ್ನಾಗಿ ನಿರ್ಮಿಸಲ್ಪಟ್ಟ, ತಸ್ಯಾಃ - ಆ ಸೀತಾದೇವಿಯ, ಚರಣೌ - ಕಾಲುಗಳನ್ನು, ದೃಷ್ಟ್ವಾ - ನೋಡಿ, ಹುತಾಗ್ನೇಃ - ಪ್ರಜ್ವಲಿಸುತ್ತಿರುವ ಅಗ್ನಿಯ, ಅರ್ಚಿಸಂಕಾಶಾಂ - ಜ್ವಾಲೆಗೆ ಸಮಾನ ವಾಗಿರುವ, ಸೌರೀಂ - ಸೂರ್ಯನ ಸಂಬಂಧವಾಗಿರುವ, ಪ್ರಭಾಮಿವ - ಕಾಂತಿಯಂತಿರುವ, ಏನಾಂ- ಈ ಸೀತಾದೇವಿಯನ್ನು, ದೃಷ್ಟ್ವಾ - ನೋಡಿ, ಸ್ಥಿತಸ್ಯ - ಇರುವ, ಮೇ - ನನಗೆ, ಶರೀರಜಃ - ಶರೀರದಲ್ಲಿ ಹುಟ್ಟಿದ ಕಾಮನು, ದೀಪ್ಯತೇ - ಸುಡುತ್ತಾನೆ. ॥ ೧೫ ॥ ತದಾ - ಆವಾಗ, ವಿಪುಲಂ - ವಿಸ್ತಾರವಾದ, ಚಾರುಲೋಚನಂ - ಮನೋಹರವಾದ ನೇತ್ರಗಳುಳ್ಳ, ಉನ್ನಸಂ - ಉನ್ನತವಾದ ಮೂಗುಳ್ಳ, ವಲ್ಗು - ಮನೋಹರವಾದ, ತಸ್ಯಾಃ - ಆ ಸೀತಾದೇವಿಯ, ವದನಂ - ಮುಖವನ್ನು, ಪಶ್ಯನ್ - ನೋಡುತ್ತ, ಕಾಮಸ್ಯ - ಕಾಮನಿಗೆ, ವಶಂ - ಆಧೀನತೆಯನ್ನು, ಯಯೌ - ಹೊಂದಿದ್ದೇನೆ. ॥ ೧೬ ॥ ಕ್ರೋಧ....ನ - ಕೋಪಕಾಲದಲ್ಲಿಯೂ, ಹರ್ಷಕಾಲದಲ್ಲಿಯೂ ಒಂದೇ ರೀತಿಯಾಗಿರುವ, ದುರ್ವ....ಚ - ವೈವರ್ಣ್ಯವನ್ನುಂಟುಮಾಡುತ್ತಿರುವ, ಶೋಕ....ನ - ಮನೋವ್ಯಥೆಯಲ್ಲಿಯೂ,

---

ಸ್ತ್ರೀಯಿಲ್ಲವು. ಸಣ್ಣ ನಡುವು, ವಿಶಾಲವಾದ ಶ್ರೋಣೀಪ್ರದೇಶಗಳು, ಶರದೃತುವಿನಲ್ಲಿನ ಪೂರ್ಣಚಂದ್ರನಿಗೆ ಸಮಾನವಾದ ಮುಖ ಇವುಗಳಿಂದೊಪ್ಪಿ ಸುವರ್ಣ ಪ್ರತಿಮೆಗೆ ಸಮಾನ ವಾದ ಸೌಂದರ್ಯವುಳ್ಳ ಆ ಸೀತೆಯು ಮಾಯಾಸುರನಿಂದ ನಿರ್ಮಿತವಾದ ಮಾಯೆಯಂ ತಿರುವಳು. ಬಹು ಕೆಂಪಗೂ, ಬಹು ಕೋಮಲವಾಗಿಯೂ, ಸಮವಾಗಿಯೂ, ಕೆಂಪು ಗುರುಗಳಿಂದ ಕೂಡಿದುವಾಗಿಯೂ ಆದ ಆ ಸೀತೆಯ ಪಾದಗಳನ್ನು ನೋಡಿ ನನಗೆ ಮದನ ಬಾಧೆಯು ಮೇಲೆ ಮೇಲೆ ಹೆಚ್ಚುತ್ತಿರುವುದು. ॥ ೧೨–೧೫ ॥ ಇಷ್ಟೆಯಲ್ಲದೆ ಹುತಾಗ್ನಿ ಜ್ವಾಲೆಯಂತೆ ಪ್ರಕಾಶಿಸುತ್ತ, ಸೂರ್ಯಪ್ರಭೆಯಂತಿರುವ ಆ ಸೀತೆಯನ್ನು ನೋಡಿ ನನ್ನ ದೇಹವು ಮದನಾಗ್ನಿಯಿಂದ ಸುಡುತ್ತಿರುವುದು. ಉನ್ನತವಾದ ಮೂಗುಳ್ಳವಳೂ, ಸೊಗ ಸಾದ ಕಣ್ಣುಗಳುಳ್ಳವಳೂ, ವಿಶಾಲವಾದ ಸೌಂದರ್ಯವುಳ್ಳವಳೂ ಆದ ಸೀತಾದೇವಿಯ

---

* " ಶರದಿಂದುನಿಭಾನನಾ " ತಿ. ಪಾ. § ತದವಶಸ್ತಸ್ಯಾಃ " ತಿ. ಪಾ.

ನಚ । ಶೋಕಸಂತಾಪನಿತ್ಯೇನ ಕಾಮೇನ ಕಲುಷೀಕೃತಃ ॥ ೧೭ ॥ ಸಾತು ಸಂವತ್ಸರಂ ಕಾಲಂ ಮಾಮಯಾಚತ ಭಾಮಿನೀ । ಪ್ರತೀಕ್ಷಮಾಣಾ ಭರ್ತಾರಂ ರಾಮಮಾಯತ ಲೋಚನಾ ॥ ೧೮ ॥ ತನ್ಮಯಾ ಚಾರುನೇತ್ರಾಯಾಃ ಪ್ರತಿಜ್ಞಾತಂ ವಚ ಶ್ಶುಭಂ । ಶ್ರಾಂತೋಽಹಂ ಸತತಂ ಕಾಮಾದ್ಯಾತೋ ಹಯಇವಾಽಧ್ವನಿ ॥೧೯॥ ¶ ಕಥಂ ಸಾಗರ ಮಕ್ಷೋಭ್ಯಮುತ್ತರಂತಿ ವನೌಕಸಃ । ಬಹುಸತ್ತ್ವ ‡ ಸಮಾಕೀರ್ಣಂ ತೌವಾ ದಶರಥಾ

---

ಶರೀರದ ಬಾಧೆಯಲ್ಲಿಯೂ ಅಪಾಯರಹಿತನಾದ, ಕಾಮೇನ - ಮನ್ಮಥನಿಂದ, ಕಲುಷೀಕೃತಃ - ವ್ಯಾಕುಲಚಿತ್ತನಾಗಿ ಮಾಡಲ್ಪಟ್ಟಿದ್ದೇನೆ. ॥೧೭॥ ಆಯತಲೋಚನಾ - ವಿಸ್ತಾರವಾದ ನೇತ್ರಗಳುಳ್ಳ, ಸಾಭಾಮಿನೀ - ಆ ಸೀತಾದೇವಿಯು, ಭರ್ತಾರಂ - ಗಂಡನಾದ, ರಾಮಂ - ಶ್ರೀರಾಮನನ್ನು, ಪ್ರತೀಕ್ಷಮಾಣಾ - ಎದುರುನೋಡುತ್ತ, ಮಾಂ - ನನ್ನನ್ನು ಕುರಿತು, ಸಂವತ್ಸರಂಕಾಲಂ - ಒಂದು ವರುಷಕಾಲವು (ಸಮಯವನ್ನು), ಅಯಾಚತ - ಪ್ರಾರ್ಥಿಸಿದಳು. ॥ ೧೮ ॥ ಮಯಾ - ನನ್ನಿಂದ, ಚಾರುನೇತ್ರಾಯಾಃ - ಮನೋಹರವಾದ ನೇತ್ರಗಳುಳ್ಳ ಸೀತಾದೇವಿಯು, ಶುಭಂ - ಶುಭಕರವಾದ, ತದ್ವಚಃ - ಆ ಮಾತನ್ನು, ಪ್ರತಿಜ್ಞಾತಂ - ಹಾಗೇ ಆಗಲೆಂದು ಅಂಗೀಕರಿಸಲ್ಪಟ್ಟಿತು, ಅಹಂ - ನಾನು, ಕಾಮಾತ್-ಕಾಮದದಿಂದ, ಅಧ್ವನಿ - ಮಾರ್ಗದಲ್ಲಿ, ಯಾತಃ-ಹೋಗುತ್ತಿರುವ, ಹಯಇವ - ಕುದುರೆ ಯಂತೆ, ಸತತಂ - ನಿರಂತರವೂ, ಶ್ರಾಂತಃ - ಬಳಲಿದವನಾಗಿದ್ದೇನೆ. ॥೧೯॥ ವನೌಕಸಃ - ಕಪಿಗಳು, ಬಹು....ರ್ಣಂ - ಅನೇಕ ಪ್ರಾಣಿಗಳಿಂದ ತುಂಬಿರುವ, ಅಕ್ಷೋಭ್ಯಂ - ಕ್ಷೋಭಿಸಲಸಾಧ್ಯವಾದ, ಸಾಗರಂ - ಕಡಲನ್ನು, ಕಥಂ - ಹೇಗೆ, ಉತ್ತರಂತಿ - ದಾಂಟುವರು, ದಶರಥಾತ್ಮಜೌ - ದಶರಥ ರಾಯನ ಕುವರರಾದ, ತೌ - ಆ ರಾಮಲಕ್ಷ್ಮಣರಾದರೂ, ಕಥಂ - ಹೇಗೆ, ಉತ್ತರತಃ - ದಾಟುವರು.

---

ಮುಖವನ್ನು ನೋಡಿ ಹಾಗೆಯೇ ವಿವಶನಾಗಿ ಮನ್ಮಥನಿಗೆ ಅಧೀನನಾಗಿ ಹೋಗಿರುವೆನು. ಕೋಪ ಬಂದಾಗಲೂ, ಸಂತೋಷವಾದಾಗಲೂ, ವ್ಯಸನವು ಬಂದಾಗಲೂ, ಸಂತಾಪವನ್ನು ಹೊಂದಿದಾಗಲೂ ಬಿಡದೆ ಬಾಧಿಸುತ್ತ ದೇಹವನ್ನು ಶೋಷಿಸುತ್ತಿರುವ ಆ ಮನ್ಮಥನು ನನ್ನನ್ನು ಬಹು ವ್ಯಾಕುಲನನ್ನಾಗಿ ಮಾಡುತ್ತಿರುವನು. ವಿಶಾಲನೇತ್ರೆಯಾದ ಆ ಸೀತೆಯಾದರೋ ತನ್ನ ಭರ್ತನಾದ ರಾಮನನ್ನೇ ಎದುರುನೋಡುತ್ತ ಒಂದು ವರುಷಕಾಲ ಅವಧಿಯನ್ನು ಕೊಡಬೇಕೆಂದು ನನ್ನನ್ನು ಕೇಳಿದಳು. ಆಗ ನಾನು ಆ ಸುಂದರಾಂಗಿಯು ಕೇಳಿದ ಅವಧಿ ಗೊಪ್ಪಿದೆನು. ಆದರೂ ಈಗ ನಾನು ದಾರಿ ನಡೆದ ಕುದುರೆಯಂತೆ ಮದನತಾಪದಿಂದ ಬೆಂಡಾಗಿಹೋಗಿರುವೆನು. ಅಕ್ಷೋಭ್ಯವೂ, ಬಹು ಸತ್ವಸಮಾಕೀರ್ಣವೂ ಆದ ಸಾಗರವನ್ನು ವಾನರರು ಹೇಗೆತಾನೇ ದಾಟಿಯಾರು? ಅಲ್ಲದೆ ದಶರಥರಾಯನ ಮಕ್ಕಳಾದ ಆ ರಾಮ ಲಕ್ಷ್ಮಣರಾದರೂ ದಾಟಿಯಾರೇ? ಹಾಗೊಂದುವೇಳೆ ಅವರು ದಾಟಬಂದರೋ! ಗತಿ

---

‡ "ಯಷಾ" ತಿ. ಮ. ಪಾ.

¶ "ಇಯಂಚ ದಂಡಕಾರಣ್ಯಾತ್" ಎಂಬ ಶ್ಲೋಕದಿಂದ "ಶ್ರಾಂತೋಹಂ ಸತತಂ ಕಾಮಾತ್" ಎಂಬ ಶ್ಲೋಕದವರೆಗೂ ಮಹೇಶ್ವರ ತೀರ್ಥರು ಈ ರೀತಿ ವಾಸ್ತವಾರ್ಥವನ್ನು ಬರೆದಿರುತ್ತಾರೆ:—ಪೂಜಿಸುವುದಕ್ಕೋಸುಗ ಕರೆದು ತಂದ ನನ್ನ ಇಷ್ಟದೇವತೆಯಾದ ಸೀತಾದೇವಿಯು ಭೂಶಾಯಿನಿಯಾಗಿ ದುಃಖದಿಂದ ಪರಿತಪಿಸುತ್ತಿರುವುದನ್ನು ನೋಡಿ ನಾನು ಬಹಳವಾಗಿ ಕುಗ್ಗಿಹೋಗಿರುವೆನು. ನನ್ನ ದುಃಖವು ಅಪರಿಮಿತವಾಗಿರುವುದು. ನಾನು ಭಕ್ತಿ

ತ್ಮಜೌ ||೨೦|| ಅಥವಾ ಕಪಿನೈಕೇನ ಕೃತಂ ನಃ ಕದನಂ ಮಹತ್ | ದುರ್ಜ್ಞೇಯಾಃ ಕಾರ್ಯಗತಯೋ ಬ್ರೂತ ಯಸ್ಯ ಯಥಾಮತಿ || ೨೧ || ಮಾನುಷಾ * ನ್ಮೇ ಭಯಂ ನಾಸ್ತಿ ತಥಾಪಿ ತು ವಿಮೃಶ್ಯತಾಂ | ತದಾ ದೇವಾಸುರೇ ಯುದ್ಧೇ ಯುಷ್ಮಾಭಿಃ ಸಹಿತೋಽಜಯಂ|ತೇ ಮೇ ಭವಂತಶ್ಚ ತಥಾ ಸುಗ್ರೀವಪ್ರಮುಖಾನ್ ಹರೀನ್ ||೨೨-೨೩||

||೨೦ || ಅಥವಾ, ಏಕೇನ - ಒಬ್ಬನೇ ಆದ, ಕಪಿನಾ - ಕಪಿಯಿಂದ, ಮಹತ್ - ಬಹಳವಾದ ಕದನಂ - ಕಲಹವು, ನಃ - ನಮಗೆ, ಕೃತಂ - ಮಾಡಲ್ಪಟ್ಟಿತು, ಕಾರ್ಯಗತಯಃ - ಕಾರ್ಯಪರಿಣಾಮಗಳು, ದುರ್ಜ್ಞೇಯಾಃ ತಿಳಿಯಲಸಾಧ್ಯಗಳಾಗಿವೆ, ಯಸ್ಯ - ಯಾವ ಪುರುಷನಿಗೆ, ಯಥಾಮತಿ- ಹೇಗೆ ಬುದ್ಧಿಯೋ, ತಥಾ - ಹಾಗೆ, ಬ್ರೂತ - ಹೇಳಿರಿ. || ೨೧ || ಮೇ - ನನಗೆ, ಯದ್ಯಪಿ - ಹೇಗಾದರೂ, ಮಾನುಷಾತ್ - ಮನುಷ್ಯನ ದೆಸೆಯಿಂದ, ಭಯಂ - ಭಯವು, ನಾಸ್ತಿ - ಇಲ್ಲವು, ತಥಾಪಿ - ಹಾಗಾದರೂ, ವಿಮೃಶ್ಯತಾಂ - ಆಲೋಚಿಸಲ್ಪಡಲಿ, ತದಾ - ಆ ಕಾಲದಲ್ಲಿ, ದೇವಾಸುರಯುದ್ಧೇ - ದೇವರಾಕ್ಷಸ ಸಂಬಂಧವಾದ ಯುದ್ಧದಲ್ಲಿ, ಯುಷ್ಮಾಭಿಸ್ಸಹಿತ -ನಿಮ್ಮೊಡನೆ ಕೂಡಿದವನಾಗಿ, ಜಯಂ- ಜಯವನ್ನು, ಪ್ರಾಪ್ತವಾನ್ - ಹೊಂದಿದವನು, ಅಸ್ಮಿ - ಆಗಿದ್ದೇನೆ, ತೇಭವಂತಃ - ಈ ನೀವು, ಮೇ- ನನಗೆ, ತಥಾ - ಹಾಗೆಯೇ ಈಗಲೂ ಸಹಾಯಕರಾಗಿದ್ದೀರಿ. ||೨೨|| ನೃಪಾತ್ಮಜೌ - ರಾಜಪುತ್ರರಾದ ರಾಮಲಕ್ಷ್ಮಣರು, ಸೀತಾಯಾಃ - ಸೀತಾದೇವಿಯ, ಪದವೀಂ - ಮಾರ್ಗವನ್ನು, ಪ್ರಾಪ್ತೌ - ತಿಳಿದವರಾಗಿ, ಸುಗ್ರೀವಪ್ರಮುಖಾನ್ - ಸುಗ್ರೀವನೇ ಮೊದಲಾದ, ಹರೀನ್ - ವಾನರರನ್ನು, ಪುರಸ್ಕೃತ್ಯ -

ಯೇನು ? ಒಬ್ಬ ವಾನರನೇ ಇಷ್ಟೊಂದು ಮಹತ್ಕಾರ್ಯವನ್ನು ಮಾಡಿ ಹೋದನು. ಕಾರ್ಯಗತಿಗಳು ತಿಳಿಯಲಸದಳಗಳಾಗಿರುವುವು. ಆದುದರಿಂದ ಈಗ ಈ ವಿಷಯದಲ್ಲಿ ಅವರವರಿಗೆ ತೋರಿದ ಮಂತ್ರಾಲೋಚನೆಯನ್ನು ಸ್ಪಷ್ಟವಾಗಿ ತಿಳಿಸಿರಿ. || ೧೬-೨೧ || ಹಿಂದೆ ನಿಮ್ಮ ಸಹಾಯದಿಂದ ದೇವಾಸುರರೊಡನೆ ಯುದ್ಧವನ್ನು ಮಾಡಿ ವಿಜಯಿಯಾದೆನು. ಆಗ ನನಗೆ ಸಹಾಯಕರಾಗಿದ್ದ ನೀವೆಲ್ಲರೂ ಈಗಲೂ ನೆರವಾಗುವಿರೆಂದು ನಾನು ನಂಬುವೆನು. ಈ ವಿಷಯದಲ್ಲಿ ಸಂದೇಹವಿಲ್ಲವು. ಮಾನವನಿಂದ ನನಗೆ ಯಾವ ಭಯವೂ ಇಲ್ಲವಾದರೂ ಈಗ ಚೆನ್ನಾಗಿ ಆಲೋಚಿಸಬೇಕು. ಈಗ ರಾಜಪುತ್ರರಾದ ರಾಮಲಕ್ಷ್ಮಣರು ಸುಗ್ರೀವಾದಿ

* "ನೋ" ತಿ. ರಾ. ಪಾ.

ಯಿಂದ ಆಕೆಯ ಭೋಗಕ್ಕಾಗಿ ಅರ್ಪಿಸಿದ ಶಯ್ಯೆಯನ್ನು ಬಯಸುವುದಿಲ್ಲವು. ತ್ರಿಲೋಕ ಮೋಹಿನಿಯಾದ ಆ ಜಗಜ್ಜನನಿಯು ಈ ರೀತಿ ದುಃಖವನ್ನೆಂದಿಗೂ ಅನುಭವಿಸಲು ಯೋಗ್ಯಳಾದವಳಲ್ಲವು. ಇಂತಹ ನನ್ನ ಇಷ್ಟದೇವತೆಯು ಈ ರೀತಿ ದುಃಖಿಸುತ್ತಿರುವುದು ನನ್ನನ್ನು ಪೀಡಿಸುತ್ತಿರುವುದಲ್ಲದೆ ಸಮಸ್ತ ಪಾಪಗಳನ್ನೂ ಪರಿಹರಿಸುವ ಆ ದೇವಿಯ ಚರಣಗಳನ್ನೂ ನೋಡಿ ಜ್ವಾಲಾಸಮಾನಳಾದ ಆಕೆಯು ದುಃಖಿಸುತ್ತಿರುವುದನ್ನು ನೋಡಿಯಂತೂ ಆ ದೇವಿಯ ನಿಮಿತ್ತದಿಂದ ಹುಟ್ಟಿದ ಅಗ್ನಿಯು ನನ್ನನ್ನು ಸುಡುತ್ತಿರುವುದು. "ಇಷ್ಟೆಲ್ಲಾ ಏಕೆ ದುಃಖಿಸುತ್ತೀಯೆ. ಸ್ವಸ್ಥಳಾಗಿ ನಿನ್ನ ಹೆಂಡತಿಯರಲ್ಲಿ ಭೋಗಿಸಬಾರದೆ ?" ಎಂದರೆ ಅಂತಹ ಅನುಪಮ ಸೌಂದರ್ಯವತಿಯಾದ ನನ್ನ ಇಷ್ಟದೇವತೆಯು ಈ ರೀತಿ ಪರಿತಪಿಸುತ್ತಿರಲು ಪರಮ ಭಕ್ತನಾದ ನಾನು ಭೋಗಭಾಗ್ಯಗಳನ್ನು ಅನುಭವಿಸುವುದೆಂತು. "ಇದೆಲ್ಲಾ ಹಾಗಿರಲಿ ; ಆ ಜಗದಂಬೆಯೇ ನಿನ್ನ ಮನೆಯಲ್ಲಿರುವಾಗ ನೀನು ಈ ರೀತಿ ಚಿಂತಿಸುವೆಯೇಕೆ ?" ಎಂದರೆ ಆಕೆಯು ನನ್ನ ಮನೆಯಲ್ಲಿರುವ ಕಾಲವೂ ಮುಗಿಯುತ್ತ ಬಂದಿರುವುದು. ಆದರೂ ಇನ್ನೂ ನನ್ನಲ್ಲಿ ಪ್ರಸನ್ನಳಾಗಲಿಲ್ಲವು. ಇದರಿಂದ ನನಗೆ ಮನೋವ್ಯಥೆಯಾಗಿರುವುದು.

ಪರೇ ಪಾರೇ ಸಮುದ್ರಸ್ಯ ಪುರಸ್ಕೃತ್ಯ ನೃಪಾತ್ಮಜೌ । ಸೀತಾಯಾಃ ಪದವೀಂ ¶ ಪ್ರಾಪ್ತೌ ಸಂಪ್ರಾಪ್ತೌ ವರುಣಾಲಯಂ ॥ ೨೪ ॥ ‡ ಅದೇಯಾಚ ಯಥಾ ಸೀತಾ ವಧ್ಯೌ ದಶರಥಾತ್ಮಜೌ । ಭವದ್ಭಿರ್ಮಂತ್ರ್ಯತಾಂ ಮಂತ್ರಸ್ಸುನೀತಂ ಚಾಭಿಧೀಯತಾಂ ॥೨೫॥ ನಹಿ ಶಕ್ತಿಂ ಪ್ರಪಶ್ಯಾಮಿ ಜಗತ್ಯನ್ಯಸ್ಯ ಕಸ್ಯಚಿತ್ । ಸಾಗರಂ ವಾನರೈಸ್ತೀರ್ತ್ವಾ ನಿಶ್ಚಯೇನ ಜಯೋ ಮಮ" ॥೨೬॥ $ ತಸ್ಯ ಕಾಮಪರೀತಸ್ಯ ನಿಶಮ್ಯ ಪರಿದೇವಿತಂ । ಕುಂಭಕರ್ಣಃ ಪ್ರಚುಕ್ರೋಧ ವಚನಂ ಚೇದಮಬ್ರವೀತ್ ॥ ೨೭ ॥ "ಯದಾತು

---

ಮುಂದುಮಾಡಿಕೊಂಡು, ಸಮುದ್ರಸ್ಯ - ಕಡಲಿನ, ಪರೇಪಾರೇ - ಉತ್ತರ ತೀರದಲ್ಲಿ, ವರುಣಾಲಯಂ- ಕಡಲನ್ನು ಕುರಿತು, ಸಂಪ್ರಾಪ್ತೌ - ಬಂದಿದ್ದಾರೆ. ॥ ೨೩-೨೪ ॥ ಸೀತಾ - ಸೀತಾದೇವಿಯು, ಯಥಾ - ಹೇಗೆ, ಅದೇಯಾಚ - ಕೊಡದೇ ಇರತಕ್ಕವಳೋ, ದಶರಥಾತ್ಮಜೌ - ದಶರಥರಾಯನ ಮಕ್ಕಳು, ಯಥಾ - ಹೇಗೆ, ವಧ್ಯೌ - ವಧಿಸತಕ್ಕವರೋ, ತಥಾ - ಹಾಗೆಯೇ, ಭವದ್ಭಿಃ - ನಿಮ್ಮಿಂದ, ಮಂತ್ರಃ- ಆಲೋಚನೆಯು, ಮಂತ್ರ್ಯತಾಂ - ಆಲೋಚಿಸಲ್ಪಡಲಿ, ಸುನೀತಂ - ನಿಶ್ಚಿತವಾಗಿ, ಅಭಿಧೀಯತಾಂ- ಹೇಳಲ್ಪಡಲಿ ॥ ೨೫ ॥ ವಾನರೈಸ್ಸಹ - ಕಪಿಗಳೊಡನೆ, ಸಾಗರಂ - ಕಡಲನ್ನು, ತೀರ್ತ್ವಾ - ದಾಟಿ, (ಆಗಂತುಂ - ಬರುವುದಕ್ಕೆ), ಜಗತಿ - ಲೋಕದಲ್ಲಿ, ಅನ್ಯಸ್ಯ - ಶತ್ರುವಾದ ರಾಮನಿಗೆ, ಶಕ್ತಿಂ - ಸಾಮರ್ಥ್ಯವನ್ನು, ನಪ್ರಪಶ್ಯಾಮಿ - ಕಾಣೆನಷ್ಟೆ, (ಅತಃ - ಆದುದರಿಂದ), ನಿಶ್ಚಯೇನ - ಖಂಡಿತವಾಗಿಯೂ, ಮಮ - ನನಗೆ, ಜಯಃ - ಜಯವು. ॥ ೨೬ ॥ ಕಾಮಪರೀತಸ್ಯ - ಕಾಮಾಸಕ್ತನಾದ, ತಸ್ಯ - ಆ ರಾವಣನ, ಪರಿದೇವಿತಂ - ವಿಲಾಪವನ್ನು, (ಗೋ) ಅಸಮಂಜಸವಾದ ಮಾತನ್ನು, ನಿಶಮ್ಯ - ಕೇಳಿ, ಕುಂಭಕರ್ಣಃ - ಕುಂಭಕರ್ಣನು, ಪ್ರಚುಕ್ರೋಧ - ಕೋಪಗೊಂಡನು. ॥ ೨೭ ॥

---

ವಾನರರೊಡನೆ ಸೀತೆಯಿರುವ ಸ್ಥಳವನ್ನು ತಿಳಿದುಕೊಂಡು ಅತ್ತ ಸಮುದ್ರದ ಉತ್ತರತೀರದಲ್ಲಿ ತಂಗಿರುವರು. ಈ ಸಂದರ್ಭದಲ್ಲಿ ಸೀತೆಯನ್ನವನಿಗೆ ಕೊಡಬೇಕೇ ಅಥವಾ ದಶರಥಪುತ್ರರಾದ ಅವರನ್ನು ನಾವು ಸಂಹರಿಸಬಲ್ಲೆವೋ ಎಂಬ ವಿಷಯದಲ್ಲಿ ನೀವೆಲ್ಲರೂ ಚೆನ್ನಾಗಿ ಆಲೋಚಿಸಿ ಯಾವುದು ಕರ್ತವ್ಯವೆಂಬ ವಿಷಯವನ್ನು ನನಗೆ ತಿಳಿಸಿರಿ. ಆದರೂ ವಾನರರ ಸಹಾಯದಿಂದ ಸಾಗರವನ್ನು ದಾಟಿ ಇಲ್ಲಿಗೆ ಬರಲು ಯಾರಿಂದಲೂ ಶಕ್ಯವಿಲ್ಲವು. ಆದುದರಿಂದ ದೃಢವಾಗಿಯೂ ನನಗೆ ಜಯವು ಲಭಿಸುವುದು." ॥ ೨೨-೨೬ ॥ ಹೀಗೆ ಮನ್ಮಥಾವೇಶವಿವಶನಾಗಿ ಆ ರಾವಣಾಸುರನ ಅಸಂಬದ್ಧ ಪ್ರಲಾಪವನ್ನು ಕೇಳಿ ಅಲ್ಲಿಯೇ ಕುಳಿತಿದ್ದ ಕುಂಭಕರ್ಣನು ಮಹಾ ಕೋಪೋದ್ದೀಪಿತನಾಗಿ ಅವನನ್ನು ಕುರಿತು, "ಎಲೈ ರಾವಣನೇ!

---

¶ "ಪ್ರಾಪ್ಯ" ತಿ. ಪಾ.

‡ ಇಲ್ಲಿನ ವಾಸ್ತವಾರ್ಥ:—"ವಾನರರಾರಿಗೂ ಸಾಗರವನ್ನು ದಾಟಿ ಇಲ್ಲಿಗೆ ಬರಲು ಶಕ್ಯವಿಲ್ಲ. ಆದರೆ ಶ್ರೀರಾಮನಿಗೆ ಮಾತ್ರ ವಾನರರೊಡನೆ ಸಾಗರವನ್ನು ದಾಟಿ ಇಲ್ಲಿ ಬರಲು ಶಕ್ತಿಯುಂಟು. ಅಂತಹ ಪರಾಕ್ರಮಿಯೊಡನೆ ಯುದ್ಧವು ಘಟಿಸಿದರೆ ನನಗೆ ಎಂದಿಗೂ ಜಯವಾಗುವುದಿಲ್ಲವು.

$ ಎಲೈ ರಾವಣನೇ! "ಏಕೋರ್ಥಂ ವಿಮೃಶನ್ನೇಕೋ ಧರ್ಮೋ ಪ್ರಕುರುತೇ ಮನಃ । ಏಕಃಕಾರ್ಯಾಣಿ ಕುರುತೇ ತಮಾಹುರ್ಮಧ್ಯಮಂ ನರಂ" ಎಂಬಂತೆ ನೀನು ಮಧ್ಯಮಪುರುಷನಂತೆ ನಡೆದುಬಿಟ್ಟೆ. ನೀನು ಹಾಗೆ ಮಾಡದಿದ್ದಿದ್ದರೆ ಈ ರೀತಿ ಪರಿತಪಿಸುತ್ತಿರಲಿಲ್ಲವು.

**ರಾಮಸ್ಯ ಸಲಕ್ಷ್ಮಣಸ್ಯ ಪ್ರಹಸ್ಯ ಸೀತಾ ಖಲು ಸಾ ಇಹಾಹೃತಾ । ಸಕೃತ್ಸಮೀಕ್ಷ್ಯೈವ ಸುನಿಶ್ಚಿತಂ ತದಾ ಭಜೇತ ಚಿತ್ತಂ ಯಮುನೇವ ಯಾಮುನಂ ॥ ೨೮ ॥ ಸರ್ವಮೇತ ನ್ಮಹಾರಾಜ! ಕೃತಮಪ್ರತಿಮಂ ತವ । ವಿಧೀಯೇತ ಸಹಾಸ್ಮಾಭಿರಾದಾವೇವಾಽಸ್ಯ ಕರ್ಮಣಃ ॥ ೨೯ ॥ ನ್ಯಾಯೇನ ರಾಜಕಾರ್ಯಾಣಿ ಯಃ ಕರೋತಿ ದಶಾನನ! । ನಸ ಸಂತಪ್ಯತೇ ಪಶ್ಚಾನ್ನಿಶ್ಚಿತಾರ್ಥಮತಿರ್ನೃಪಃ ॥ ೩೦ ॥ ಅನುಪಾಯೇನ ಕರ್ಮಾಣಿ ವಿಪರೀತಾನಿ ಯಾನಿಚ । ಕ್ರಿಯಮಾಣಾನಿ ದುಷ್ಯಂತಿ ಹವೀಂಷ್ಯಪ್ರಯತೇಷ್ವಿವ ॥೩೧॥**

ಯದಾ - ಯಾವ ಕಾಲದಲ್ಲಿ, ಸಲಕ್ಷ್ಮಣಸ್ಯ - ಲಕ್ಷ್ಮಣನಿಂದೊಡಗೂಡಿದ, ರಾಮಸ್ಯ - ಶ್ರೀರಾಮನ ಸಂಬಂಧವಾದ, ಸಾಸೀತಾ - ಆ ಸೀತಾದೇವಿಯು, ಪ್ರಗೃಹ್ಯ - ಬಲಾತ್ಕರಿಸಿ, ಸಕೃತ್ - ಒಂದಾವರ್ತಿ, ಸಮೀಕ್ಷ್ಯೈವ - ಆಲೋಚನೆ ಮಾಡಿಯೇ, ಇಹ - ಇಲ್ಲಿಗೆ, ಆಹೃತಾ - ತರಲ್ಪಟ್ಟಳು, ತದೈವ - ಆ ಕಾಲದಲ್ಲಿಯೇ, ಚಿತ್ತಂ - ಮನವು, ಯಮುನಾ - ಯಮುನಾನದಿಯು, *ಯಾಮುನಂ - ಯಾಮುನಪರ್ವತವನ್ನಂತೆ, ಸುನಿಶ್ಚಿತಂ - ನಿಶ್ಚಯವನ್ನು, ಭಜೇತಖಲು - ಹೊಂದುವುದಷ್ಟೆ. ॥೨೮॥ ಹೇ ಮಹಾರಾಜ - ಎಲೈ ಮಹಾಪ್ರಭುವೇ, ಅಸ್ಯಕರ್ಮಣಃ - ಈ ಸೀತಾಪಹಾರರೂಪವಾದ ಕೃತ್ಯಕ್ಕಿಂತಲೂ, ಆದಾವೇವ - ಮೊದಲೇ, ಅಸ್ಮಾಭಿಸ್ಸಹ - ನಮ್ಮೊಡನೆ, ಕೃತಂ - ಮಾಡಿದ, ಏತತ್ಸರ್ವಂ- ಈ ಆಲೋಚನೆಯೆಲ್ಲವೂ, ವಿಧೀಯೇತಯದಿ - ಮಾಡಲ್ಪಟ್ಟಿದೇ ಆದರೆ, ತದಾ - ಆ ಕಾಲದಲ್ಲಿ, ತವ - ನಿನ್ನ, ಕೃತ್ಯಂ - ಕಾರ್ಯವು, ಅಪ್ರತಿಮಂ - ಸರ್ವೋತ್ತಮವಾದದ್ದು, ಸ್ಯಾತ್ - ಆಗುವದು. ॥ ೨೯ ॥ ಹೇ ದಶಾನನ - ಎಲೈ ಹತ್ತುಮುಖಗಳುಳ್ಳ ರಾವಣನೇ, ನ್ಯಾಯೇನ - ವಿಚಾರಣೆಯಿಂದ, ಯಃ - ಯಾವನು, ರಾಜಕಾರ್ಯಾಣಿ - ರಾಜಕಾರ್ಯಗಳನ್ನು, ಕರೋತಿ - ಮಾಡುತ್ತಾನೆಯೋ, ಸಃನೃಪಃ - ಆ ರಾಜನು, ನಿಶ್ಚಿ....ತಿಃ - ನಿಶ್ಚಿತವಾದ ಪ್ರಯೋಜನವುಳ್ಳ ಬುದ್ಧಿಯುಳ್ಳವನಾಗಿ, ಪಶ್ಚಾತ್ - ಬಳಿಕ, ನಸಂತಪ್ಯತೇ - ಸಂಕಟಪಡುವುದಿಲ್ಲವು. ॥೩೦॥ ಅನುಪಾಯೇನ - ವಿಪರೀತೋಪಾಯದಿಂದ, ಕ್ರಿಯಮಾಣಾನಿ - ಮಾಡಲ್ಪಟ್ಟ, ಯಾನಿಕರ್ಮಾಣಿ - ಯಾವ ಕರ್ಮಗಳುಂಟೋ, ತಾನಿ - ಆ ಕೆಲಸಗಳು, ಅಪ್ರಯತೇಷು - ಅಪಾತ್ರಗಳಲ್ಲಿ, ಹವೀಂಷೀವ - ಹವಿರ್ಭಾಗಗಳಂತೆ, ವಿಪರೀತಾನಿ - ವ್ಯತ್ಯಸ್ತಗಳಾಗಿ, ದುಷ್ಯಂತಿ - ಕೆಟ್ಟುಹೋಗುತ್ತದೆ. ॥ ೩೧ ॥ ಯಃ - ಯಾವನು,

ಲಕ್ಷ್ಮಣಸಮೇತನಾದ ಶ್ರೀರಾಮನ ಮಡದಿಯಾದ ಸೀತೆಯನ್ನು ಇಲ್ಲಿಗೆ ಕರೆತರುವುದಕ್ಕೆ ಮುಂಚೆಯೇ ಚೆನ್ನಾಗಿ ಆಲೋಚಿಸಿದ್ದರೆ, ಯಮುನಾನದಿಯು ಯಾಮುನಪರ್ವತವನ್ನು ಕೊರೆಯುವ ಹಾಗೆ ನಿನ್ನ ಮನಸ್ಸನ್ನು ಕೊರೆಯುತ್ತಿರಲಿಲ್ಲವು. ಮಹಾರಾಜಾ! ನೀನೀಗ ನಮ್ಮೊಡನೆ ಆಲೋಚಿಸಿದಂತೆ ಆ ಸೀತೆಯನ್ನು ತರುವುದಕ್ಕೆ ಮುಂಚೆಯೂ ಚೆನ್ನಾಗಿ ಆಲೋಚಿಸಿದ್ದೆಯಾದರೆ ಬಹಳ ಚೆನ್ನಾಗಿದ್ದಿತು. ಪ್ರಭುವೇ! ಯಾರೇ ಆಗಲಿ, ಕಾರ್ಯಗಳನ್ನು ಮಾಡುವುದಕ್ಕೆ ಮೊದಲೇ ಚೆನ್ನಾಗಿ ಆಲೋಚಿಸಿ, ನ್ಯಾಯಬುದ್ಧಿಯಿಂದ ರಾಜಕಾರ್ಯಗಳನ್ನು ಮಾಡುವನೋ ಅಂತಹನು ನಿನ್ನಂತೆ ಆಮೇಲೆ ಪರಿತಾಪವನ್ನು ಹೊಂದಲಾರನು. ಒಳ್ಳೆಯ ಕೆಲಸವಾದರೂ ಚೆನ್ನಾಗಿ ಆಲೋಚಿಸಿ ಉಪಾಯದಿಂದ ಮಾಡದಿದ್ದರೆ ಅಪಾತ್ರನಿಗಿಟ್ಟ ಅನ್ನದಂತೆ ಬಹು ದೋಷಯುಕ್ತವಾಗಿ ಕೆಟ್ಟುಹೋಗುವುದು. ॥ ೨೭–೩೧ ॥ ಇದೂ ಅಲ್ಲದೆ

* ಯಮುನಾನದಿಯು ಭೂಮಿಯಮೇಲೆ ಹರಿಯುವುದಕ್ಕೆ ಮೊದಲೇ ತಾನು ಹರಿಯುವ ಪ್ರದೇಶದಲ್ಲಿರುವ ಹ್ರದ (ಹಳ್ಳ) ಗಳೆಲ್ಲವನ್ನೂ ತುಂಬಿ ಮುಂಬರಿಯುವುದು ಪ್ರಸಿದ್ಧವಾಗಿದೆ. (ತಿಲಕ)

ಯಃ ಪಶ್ಚಾತ್ಪೂರ್ವಕಾರ್ಯಾಣಿ ಕರ್ಮಾಣ್ಯಭಿಚಿಕೀರ್ಷತಿ । ಪೂರ್ವಂ ಚಾಪರ
ಕಾರ್ಯಾಣಿ ನಸ ವೇದ ನಯಾನಯೌ ‖ ೩೨ ‖ ಚಪಲಸ್ಯತು ಕೃತ್ಯೇಷು ಪ್ರಸಮೀ
ಕ್ಷ್ಯಾಧಿಕಂ ಬಲಂ । ಕ್ಷಿಪ್ರಮನ್ಯೇ ಪ್ರಪದ್ಯಂತೇ ಕ್ರೌಂಚಸ್ಯ ಖಮಿವ ದ್ವಿಜಾಃ ‖೩೩‖
ತ್ವಯೇದಂ ಮಹದಾರಬ್ಧಂ ಕಾರ್ಯಮಪ್ರತಿಚಿಂತಿತಂ । ದಿಷ್ಟ್ಯಾ ತ್ವಾಂ ನಾವಧೀ
ದ್ರಾಮೋ ವಿಷಮಿಶ್ರಮಿವಾಮಿಷಂ ‖ ೩೪ ‖ ತಸ್ಮಾತ್ತ್ವಯಾ ಸಮಾರಬ್ಧಂ ಕರ್ಮ
ಹ್ಯಪ್ರತಿಮಂ ಪರೈಃ । ಅಹಂ ಸಮೀಕರಿಷ್ಯಾಮಿ ಹತ್ವಾ ಶತ್ರೂಂಸ್ತವಾನಘ ! ‖೩೫‖

ಪೂರ್ವಕಾರ್ಯಾಣಿ - ಮೊದಲು ಮಾಡತಕ್ಕ, ಕರ್ಮಾಣಿ - ಕೆಲಸಗಳನ್ನು, ಪಶ್ಚಾತ್ - ಆಮೇಲೆ, ಅಭಿಚಿಕೀರ್ಷತಿ - ಮಾಡಲಿಚ್ಛಿಸುವನೋ, ಅಪರಕಾರ್ಯಾಣಿ - ಆಮೇಲೆ ಮಾಡಬೇಕಾದ ಕಾರ್ಯಗಳನ್ನು, ಪೂರ್ವಂ - ಮೊದಲು, ಕರೋತಿ - ಮಾಡುತ್ತಾನೋ, ಸಃ - ಆ ಪುರುಷನು, ನಯಾನಯೌ- ನೀತಿ ದುರ್ನೀತಿಗಳನ್ನು, ನವೇದ - ತಿಳಿದವನಲ್ಲವು. ‖೩೨‖ ಕೃತ್ಯೇಷು - ಕಾರ್ಯಗಳಲ್ಲಿ, ಚಪಲಸ್ಯ - ಚಪಲಚಿತ್ತನಾದ ಪುರುಷನ, ಅಧಿಕಂ - ಹೆಚ್ಚಾದ, ಬಲಂ - ಬಲವನ್ನು, ಪ್ರಸಮೀಕ್ಷ್ಯ - ನೋಡಿ, ಅನ್ಯೇ - ಶತ್ರುಗಳು, ದ್ವಿಜಾಃ - ಪಕ್ಷಿಗಳು, ಕ್ರೌಂಚಸ್ಯ - ಕ್ರೌಂಚಪರ್ವತದ, ಖಮಿವ - ರಂಧ್ರವನ್ನಂತೆ, ಖಂ - ರಂಧ್ರವನ್ನು, ಕ್ಷಿಪ್ರಂ - ಜಾಗ್ರತೆಯಾಗಿ, ಪ್ರಪದ್ಯಂತೇ - ಹೊಂದುತ್ತಾರೆ. ‖೩೩‖ ತ್ವಯಾ-ನಿನ್ನಿಂದ, ಅಪ್ರತಿಚಿಂತಿತಂ-ಅವಿಚಾರಿತವಾಗಿ, ಮಹತ್-ದೊಡ್ಡದಾದ, ಇದಂಕಾರ್ಯಂ- ಈ ಸೀತಾಪಹರಣರೂಪ ಕಾರ್ಯವು, ಆರಬ್ಧಂ - ಪ್ರಾರಂಭಿಸಲ್ಪಟ್ಟಿತು, ರಾಮಃ - ಶ್ರೀರಾಮನು, ವಿಷಮಿಶ್ರಂ - ವಿಷದಿಂದ ಕೂಡಿದ, ಆಮಿಷಮಿವ - ಮಾಂಸದಂತೆ, ದಿಷ್ಟ್ಯಾ - ಅದೃಷ್ಟವಶದಿಂದ, ತ್ವಾಂ - ನಿನ್ನನ್ನು, ನಾವಧೀತ್ - ಹೊಡೆಯದೇ ಹೋದನು, ಹೇ ಅನಘ - ಎಲೈ ನಿರ್ದೋಷನೇ, ತಸ್ಮಾತ್ - ಆ ಕಾರಣದಿಂದ, ತ್ವಯಾ - ನಿನ್ನಿಂದ, ಸಮಾರಬ್ಧಂ - ಆರಂಭಿಸಲ್ಪಟ್ಟ, ಅಪ್ರತಿಮಂ- ಸಮಾನವಿಲ್ಲದಿರುವ, ಪರೈಃ - ಇತರರಿಂದ, ದುಷ್ಕರಂ - ಮಾಡಲಸಾಧ್ಯವಾದ, ಕರ್ಮ - ಕೆಲಸವನ್ನು, ಅಹಂ - ನಾನು, ತವ - ನಿನ್ನ, ಶತ್ರೂನ್ - ಶತ್ರುಗಳನ್ನು, ಹತ್ವಾ - ಕೊಂದು, ಸಮೀಕರಿಷ್ಯಾಮಿ - ಸರಿಮಾಡುತ್ತೇನೆ. ‖ ೩೪ ೩೫ ‖ ಹೇ ವಿಶಾಂಪತೇ - ಎಲೈ ಅರಸೇ, ತವ - ನಿನ್ನ, ಶತ್ರೂನ್ - ಶತ್ರು

ಯಾರು ಮೊದಲು ಮಾಡಬೇಕಾದ ಕೆಲಸವನ್ನು ನಿಧಾನಮಾಡಿ, ಆಮೇಲೆ ಮಾಡಬೇಕಾದ ಕೆಲಸವನ್ನು ಮೊದಲು ಮಾಡುವನೋ, ಅವನು ಯುಕ್ತಾಯುಕ್ತಗಳನ್ನು ತಿಳಿದವನಲ್ಲವೆಂದೇ ಹೇಳಬೇಕು. ಅಲ್ಲದೆ ಚೆನ್ನಾಗಿ ಆಲೋಚಿಸದೆ ಚಪಲಚಿತ್ತನಾಗಿ ಕಾರ್ಯಗಳನ್ನು ಮಾಡುವಾತನಿಗೆ ಅಪಾರ ಸೇನೆಯಿದ್ದರೂ, ರಂಧ್ರಾನ್ವೇಷಿಗಳಾದ ಹಗೆಯರು, ಹಂಸಪಕ್ಷಿಗಳು ಕ್ರೌಂಚಪರ್ವತದ ರಂಧ್ರಮಾರ್ಗಗಳನ್ನು ಹೊಕ್ಕು ಹೋಗುವಂತೆ, ಅವನನ್ನು ಸೋಲಿಸಿ ವ್ಯಥೆಪಡಿಸುವರು. (ಅಂತೂ ಇಂತೂ ನೀನು ಅಕಾರ್ಯವನ್ನು ಮಾಡಿಬಿಟ್ಟೆ, ಆದದ್ದು ಆಗಿಹೋಯಿತು) ಈಗ ನೀನು ಚಿಂತಿಸಬೇಡ. ನೀನು ಸ್ವಲವೂ ಆಲೋಚಿಸದೆ ಬಹು ಅಪಾಯಕರವಾದ ಕೆಲಸವನ್ನು ಮಾಡಿಬಿಟ್ಟಿರುವೆ. ನಿನ್ನ ಭಾಗ್ಯವಶದಿಂದ, “ವಿಷ ಬೆರತ ಮಾಂಸದಂತೆ” ಆ ರಾಮನು ನಿನ್ನನ್ನು ಕೊಲ್ಲದಿರುವನು. ಎಲೈ ನಿರ್ದೋಷಿಯೇ, ರಾವಣನೇ! ನೀನು ಮೊದಲು ಮಾಡಿದ ಅಸಮಾನವಾದ ಈ ಕಾರ್ಯವನ್ನು ನನ್ನ ಹೊರತು ಯಾರೂ ಚೆನ್ನಾಗಿ ಸಮರ್ಥಿಸಲಾರರು. ಆದುದರಿಂದ ನಾನು ನಿನ್ನ ಶತ್ರುಗಳನ್ನು ಸಂಹರಿಸಿ ನಿನ್ನ ಕಾರ್ಯವನ್ನು ಆಗುಮಾಡುವೆನು. ‖೩೨–೩೫‖ ರಾಕ್ಷಸೇಶ್ವರಾ! ನಿನ್ನ ಶತ್ರುವಾದವನು ದೇವೇಂದ್ರ

ಅಹಮುತ್ಸಾದಯಿಷ್ಯಾಮಿ ಶತ್ರೂಂಸ್ತವ ವಿಶಾಂಪತೇ! । ಯದಿ ಶಕ್ರವಿವಸ್ವಂತೌ ಯದಿ ಪಾವಕಮಾರುತೌ । ತಾವಹಂ ಯೋಧಯಿಷ್ಯಾಮಿ ಕುಬೇರವರುಣಾವಪಿ ॥ ೩೬ ॥ ಗಿರಿಮಾತ್ರಶರೀರಸ್ಯ ಮಹಾಪರಿಘಯೋಧಿನಃ । ನರ್ದತಸ್ತೀಕ್ಷ್ಣದಂಷ್ಟ್ರಸ್ಯ ಬಿಭೀಯಾದ್ವೈ ಪುರಂದರಃ ॥ ೩೭ ॥ ¶ ಪುನರ್ಮಾಂ ಸ ದ್ವಿತೀಯೇನ ಶರೇಣ ನಿಹನಿಷ್ಯತಿ । ತತೋಽಹಂ ತಸ್ಯ ಪಾಸ್ಯಾಮಿ ರುಧಿರಂ ಕಾಮಮಾಶ್ವಸ ॥ ೩೮ ॥ ವಧೇನ ವೈ ದಾಶ

ಗಳನ್ನು, ಅಹಂ - ನಾನು, ಉತ್ಸಾದಯಿಷ್ಯಾಮಿ - ಮೂಲೋತ್ಪಾಟನ ಮಾಡುವೆನು, ತೌ - ಆ ರಾಮ ಲಕ್ಷ್ಮಣರು, ಶಕ್ರವಿವಸ್ವಂತೌ - ಇಂದ್ರ, ಸೂರ್ಯರು, ಸ್ಯಾತಾಂಯದಿ - ಆದರೂ ಸರಿಯೆ, ಪಾವ....ತಾ - ಅಗ್ನಿ ವಾಯುಗಳಾದರೂ ಸರಿಯೆ, ಕುಬೇ .. ವಿ - ಕುಬೇರ ವರುಣರಾದರೂ ಸರಿಯೇ, ತಾವಹಂ - ಅಂಥವರನ್ನು ಕುರಿತು, ಅಹಂ - ನಾನು, ಯೋಧಯಿಷ್ಯಾಮಿ - ಯುದ್ಧ ಮಾಡುವೆನು. ॥೩೬॥ ಗಿರಿ....ಸ್ಯ - ಬೆಟ್ಟದಂತೆ ಶರೀರವುಳ್ಳ, ಮಹಾ....ನಃ - ದೊಡ್ಡ ಪರಿಘದಿಂದ ಯುದ್ಧಮಾಡುವ, ನರ್ದತಃ - ಕೋಲಾಹಲ ಧ್ವನಿಯನ್ನು ಮಾಡುತ್ತಿರುವ, ತೀಕ್ಷ್ಣದಂಷ್ಟ್ರಸ್ಯ - ತೀಕ್ಷ್ಣವಾದ ಕೋರೆ ಹಲ್ಲುಗಳುಳ್ಳ ನನ್ನ ದೆಸೆಯಿಂದ, ಪುರಂದರಃ - ದೇವೇಂದ್ರನೂ ಕೂಡ, ಬಿಭಿಯಾತ್ - ಭಯ ಗೊಳ್ಳುವನಷ್ಟೆ. ॥೩೭॥ ಸಃ - ಆ ಶ್ರೀರಾಮನು, ಮಾಂ - ನನ್ನನ್ನು, ಪುನಃ - ತಿರುಗಿ, ದ್ವಿತೀಯೇನ ಶರೇಣ - ಎರಡನೆಯ ಬಾಣದಿಂದ, ನಿಹನಿಷ್ಯತಿ - ಎಷ್ಟರೊಳಗಾಗಿ ಹೊಡೆಯುವನೋ, ತತಃ - ಅಷ್ಟ ರೊಳಗೇನೆ, ಅಹಂ - ನಾನು, ತಸ್ಯ - ಆ ಶ್ರೀರಾಮನ, ರುಧಿರಂ - ರಕ್ತವನ್ನು, ಕಾಮಂ - ಯಥೇಚ್ಛ ವಾಗಿ, ಪಾಸ್ಯಾಮಿ - ಪಾನಮಾಡುವೆನು. ॥೩೮॥ ದಾಶರಥೇಃ - ಶ್ರೀರಾಮನ, ವಧೇನ - ಸಂಹಾರದಿಂದ, ತವ - ನಿನಗೆ, ಸುಖಾವಹಂ - ಸುಖಕರವಾದ, ಜಯಂ - ಜಯವನ್ನು, ಆಹರ್ತುಂ - ಸಂಪಾದಿಸು

ನಾದರೂ, ಸೂರ್ಯನಾದರೂ, ಅಗ್ನಿಹೋತ್ರನಾದರೂ, ವಾಯುದೇವನಾದರೂ, ಕುಬೇರ ನಾದರೂ, ವರುಣನಾದರೂ ಅವನೊಡನೆ ಯುದ್ಧಮಾಡಿ ಅವನನ್ನು ಸಂಹರಿಸುವೆನು. ನೀನು ಚಿಂತಿಸಬೇಡ. ಅಣ್ಣಾ! ನಾನು ಪರ್ವತದಂತಹ ದೇಹದಿಂದಲೂ, ಬಹು ಮೊನಚಾದ ಕೋರೆದಾಡೆಗಳಿಂದಲೂ, ದೊಡ್ಡದಾದ ಪರಿಘಾಯುಧದಿಂದಲೂ ಕೂಡಿದವನಾಗಿ ಭಯಂಕರ ಸಿಂಹನಾದವನ್ನು ಮಾಡುತ್ತ ರಣರಂಗಕ್ಕೆ ಹೋದೊಡನೆಯೇ ದೇವೇಂದ್ರನಾದರೂ ಹೆದರಿ ಓಡಿಹೋಗುವನು. ಇಷ್ಟೆಯಲ್ಲದೆ ಆ ರಾಮನು ಒಂದು ಬಾಣವನ್ನು ನನ್ನ ಮೇಲೆಸೆದು ಎರಡನೆಯ ಬಾಣವನ್ನು ಪ್ರಯೋಗಿಸುವುದರೊಳಗಾಗಿ ಅವನನ್ನು ಕೊಂದು ಅವನ ರಕ್ತವನ್ನು ಕುಡಿದುಬಿಡುವೆನು. ನೀನು ಸಮಾಧಾನವಾಗಿರು. ನಾನು ನಿನ್ನ ವಿಜಯಕ್ಕಾಗಿ ಯತ್ನಿಸು ವೆನು. ಆ ರಾಮಲಕ್ಷ್ಮಣರನ್ನು ಸಂಹರಿಸಿ, ವಾನರಯೂಥಪತಿಗಳೆಲ್ಲರನ್ನೂ ನುಂಗಿಬಿಡುವೆನು.

¶ ಇಲ್ಲಿ, "ಶ್ರೀರಾಮನು ನನ್ನನ್ನು ತನ್ನ ಎರಡನೆಯ ಬಾಣದಿಂದಲೇ ಕೊಂದುಬಿಡುವನು. ಇದರಲ್ಲಿ ಸಂಶಯ ವಿಲ್ಲವು. ಆಗ ನಾನು ನನ್ನ ರಕ್ತವನ್ನು ನಾನೇ ಕುಡಿಯುವೆನು. ಅದನ್ನು ನೋಡಿ ನೀನು ದುಃಖಿಸುವೆ" ಎಂಬ ಅಶ್ಲೀ ಲಾರ್ಥವೂ ಧ್ವನಿತವಾಗುತ್ತದೆ. (ಗೋ)

"ಶ್ರೀರಾಮನು ನನ್ನನ್ನು ಎರಡನೆಯ ಬಾಣದಿಂದ ಕೊಲ್ಲುವುದೇನೋ ಖಂಡಿತವೇ. ಆದರೆ ನಾನು ಅಷ್ಟರಲ್ಲಿ ಕೆಲವು ಮಂದಿ ವಾನರರನ್ನು ಕೊಂದು ಅವರ ರಕ್ತವನ್ನಾದರೂ ಕುಡಿದುಬಿಡುವೆನು. ನೀನು ಸಮಾಧಾನ ಹೊಂದು" (ಮಹೇಶ್ವರ ತೀರ್ಥರು)

ರಥೇಸ್ಸ್ವಖಾದೇಹಂ ಜಯಂ ತವಾಹರ್ತುಮಹಂ ಯತಿಷ್ಯೇ । ಹತ್ವಾಚ ರಾಮಂ ಸಹ ಲಕ್ಷ್ಮಣೇನ ಖಾದಾಮಿ ಸರ್ವಾನ್ ಹರಿಯೂಥಮುಖ್ಯಾನ್ ॥ ೩೯ ॥

ರಮಸ್ವ ಕಾಮಂ ಪಿಬ ಚಾಗ್ರ್ಯವಾರುಣೀಂ
ಕುರುಷ್ವ ಕಾರ್ಯಾಣಿ ಹಿತಾನಿ ವಿಜ್ವರಃ ।
ಮಯಾತು ರಾಮೇ ಗಮಿತೇ ಯಮಕ್ಷಯಂ
ಚಿರಾಯ ಸೀತಾ ವಶಗಾ ಭವಿಷ್ಯತಿ ॥ ೪೦ ॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ದ್ವಾದಶಸ್ಸರ್ಗಃ



ವುದಕ್ಕೆ, ಅಹಂ - ನಾನು, ಯತಿಷ್ಯೇ - ಯತ್ನಮಾಡುವೆನು, ಲಕ್ಷ್ಮಣೇನಸಹ - ಲಕ್ಷ್ಮಣನೊಡಗೂಡಿದ, ರಾಮಂಚ-ಶ್ರೀರಾಮನನ್ನೂ, ಹತ್ವಾ-ಕೊಂದು, ಸರ್ವಾನ್-ಸಮಸ್ತರಾದ, ಹರಿ....ಖ್ಯಾನ್-ವಾನರಯೂಥಪತಿಗಳನ್ನೂ, ಖಾದಾಮಿ - ತಿಂದುಬಿಡುತ್ತೇನೆ. ॥೩೯॥ ಮಯಾ - ನನ್ನಿಂದ, ರಾಮೇ-ಶ್ರೀರಾಮನು, ಯಮಕ್ಷಯಂ - ಯಮನ ಮನೆಯನ್ನು, ಗಮಿತೇ - ಹೊಂದಿಸಲ್ಪಡಲು, ಸೀತಾ - ಸೀತಾದೇವಿಯು, ಚಿರಾಯ - ಸಾವಕಾಶವಾಗಿ, ವಶಗಾ - (ನಿನ್ನ) ಸ್ವಾಧೀನಳು, ಭವಿಷ್ಯತಿ - ಆಗುವಳು, ತ್ವಂ - ನೀನು, ವಿಜ್ವರಃ - ತಾಪರಹಿತನಾಗಿ, ರಮಸ್ವ - ವಿಹಾರ ಮಾಡು, ಕಾಮಂ - ಯಥೇಷ್ಟವಾಗಿ, ಅಗ್ರ್ಯವಾರುಣೀಂ - ಶ್ರೇಷ್ಠವಾದ ಮದ್ಯವನ್ನು, ಪಿಬ - ಪಾನಮಾಡು, ಹಿತಾನಿ - ಇಷ್ಟವಾದ ಕಾರ್ಯಗಳನ್ನು, ಕುರುಷ್ವ - ಮಾಡು. ॥ ೪೦ ॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ದ್ವಾದಶಸ್ಸರ್ಗಃ.



ಈಗ ನೀನು ಇಷ್ಟಾನುಸಾರ ಕ್ರೀಡಿಸು ; ಶ್ರೇಷ್ಠವಾದ ಮದ್ಯವನ್ನು ಯಥೇಚ್ಛವಾಗಿ ಪಾನಮಾಡು. ಪರಿತಾಪವನ್ನು ತೊರೆದು ನಿನಗಿಷ್ಟವಾದ ಕಾರ್ಯಗಳನ್ನೇ ಮಾಡಿಕೊಳ್ಳುತ್ತಿರುವವನಾಗು. ನಾನು ರಾಮನನ್ನು ಕೊಲ್ಲುವೆನು. ಆಮೇಲೆ ಆ ಸೀತೆಯು ಚಿರಕಾಲ ನಿನಗೆ ಸ್ವಾಧೀನಳಾಗಿರುತ್ತಾಳೆ.¶" ॥ ೩೬–೪೦ ॥

ಇಂತಿದು ಕುಂಭಕರ್ಣಕಥಿತ ಮಂತ್ರಾಲೋಚನಾ ವೃತ್ತಾಂತವೆಂಬ
ಹನ್ನೆರಡನೆಯ ಸರ್ಗವು ಸಮಾಪ್ತವಾದುದು.



¶ " ಎಲೈ ರಾವಣನೇ! ನಾನು ಯಮಸದನವನ್ನು ಸೇರಲು ಸೀತಾಮಾತೆಯು ವಿಷ್ಣುರೂಪನಾದ ಶ್ರೀರಾಮನ ಬಳಿ ಸಾರುವಳು " ಎಂಬುದು ಇಲ್ಲಿನ ರಹಸ್ಯಾರ್ಥವು. (ಗೋ+ಮ)

# ಯುದ್ಧಕಾಂಡೇ ತ್ರಯೋದಶಸ್ಸರ್ಗಃ

**ರಾವಣಂ ಕ್ರುದ್ಧಮಾಜ್ಞಾಯ ಮಹಾಪಾರ್ಶ್ವೋ ಮಹಾಬಲಃ । ಮುಹೂರ್ತಮನುಸಂಚಿಂತ್ಯ ಪ್ರಾಂಜಲಿರ್ವಾಕ್ಯಮಬ್ರವೀತ್ ॥೧॥ "ಯಃ ಖಲ್ವಪಿ ವನಂ ಪ್ರಾಪ್ಯ ಮೃಗವ್ಯಾಳ ❋ ಸಮಾಕುಲಂ । ನಪಿಬೇನ್ಮಧು ಸಂಪ್ರಾಪ್ತಂ ಸನರೋ ಬಾಲಿಶೋ ಭವೇತ್ ॥೨॥ ¶ ಈಶ್ವರಸ್ಯೇಶ್ವರಃ ಕೋಽಸ್ತಿ ತವ ಶತ್ರುನಿಬರ್ಹಣ ! । ರಮಸ್ವ ಸಹ**

ಮಹಾಬಲಃ - ಬಹಳ ಬಲಿಷ್ಠನಾದ, ಮಹಾಪಾರ್ಶ್ವಃ - ಮಹಾ ಪಾರ್ಶ್ವನು, ರಾವಣಂ - ರಾವಣಾಸುರನನ್ನು, ಕ್ರುದ್ಧಂ - ಕೋಪಗೊಂಡವನಾಗಿ, ಆಜ್ಞಾಯ - ತಿಳಿದು, ಮುಹೂರ್ತಂ - ಒಂದು ಮುಹೂರ್ತಕಾಲ, ಅನುಸಂಚಿಂತ್ಯ-ಆಲೋಚಿಸಿ, ಪ್ರಾಂಜಲಿಃ-ಅಂಜಲಿಬದ್ಧನಾಗಿ, ವಾಕ್ಯಂ-ಮಾತನ್ನು, ಅಬ್ರವೀತ್ - ನುಡಿದನು. ॥ ೧ ॥ ಯಃ - ಯಾವ ಪುರುಷನು, ಮೃಗ ...ಲಂ - ಮೃಗಗಳಿಂದಲೂ, ಸರ್ಪಗಳಿಂದಲೂ ತುಂಬಿರುವ, ವನಂ - ವನವನ್ನು, ಪ್ರಾಪ್ಯ - ಹೊಂದಿ, ಸಂಪ್ರಾಪ್ತಂ-ದೊರಕಿರುವ, ಮಧು - ಜೇನನ್ನು, ನಪಿಬೇತ್ - ಪಾನಮಾಡದಿರುವನೋ, ಸನರಃ - ಆ ಮನುಷ್ಯನು, ಬಾಲಿಶಃ-ಮೂರ್ಖನು, ಭವೇತ್-ಆಗುವನು. ॥ ೨ ॥ ಹೇ ಶತ್ರು.....ಣ-ಶತ್ರುಸಂಹಾರಕನೇ, ಈಶ್ವರಸ್ಯ - ಜಗತ್ತಿಗೆ ಸ್ವಾಮಿಯಾದ, ತವ - ನಿನಗೆ, ಈಶ್ವರಃ - ನಿಯಾಮಕನು, ಕಃ - ಯಾವನು, ಅಸ್ತಿ - ಇದ್ದಾನೆ, ಶತ್ರೂನ್ - ಶತ್ರುಗಳನ್ನು, ಮೂರ್ಧಸು - ಶಿರಸ್ಸುಗಳಲ್ಲಿ, ಆಕ್ರಮ್ಯ - ಆಕ್ರಮಿಸಿ,

ಆಮೇಲೆ ಮಹಾ ಬಲಶಾಲಿಯಾದ ಮಹಾಪಾರ್ಶ್ವನು ತನ್ನ ಪ್ರಭುವಾದ ರಾವಣಾಸುರನು ಬಹಳವಾಗಿ ಕೋಪಗೊಂಡಿರುವನೆಂದು ತಿಳಿದು ಆತನನ್ನು ಪ್ರಸನ್ನನನ್ನಾಗಿ ಮಾಡಿಕೊಳ್ಳುವದಕ್ಕಾಗಿ ಸ್ವಲ್ಪಹೊತ್ತು ಆಲೋಚಿಸಿ, ಆಮೇಲೆ ಕೈಗಳನ್ನು ಜೋಡಿಸಿಕೊಂಡು ನಮ್ರತೆಯಿಂದ ಅವನನ್ನು ಕುರಿತು, "ಪ್ರಭುವೇ ! ಯಾವನೇ ಆಗಲಿ ಮಧುಪಾನ ಮಾಡಲೋಸುಗ, ದುಷ್ಟ ಮೃಗಗಳಿಂದಲೂ, ಕ್ರೂರ ಸರ್ಪಗಳಿಂದಲೂ ತುಂಬಿರುವ ಅಡವಿಗೆ ಹೋಗಿ ಬಹು ಪ್ರಯಾಸಪಟ್ಟು ಮಧುವನ್ನೂ ಸಂಪಾದಿಸಿ ಅದನ್ನು ಪಾನಮಾಡುವುದಿಲ್ಲವೋ ಅಂತಹನು ಕೇವಲ ಮೂಢನೇ ಸರಿ. ಎಲೈ ಶತ್ರುಂಜಯನೇ ! ರಾವಣೇಶ್ವರನೇ ! ಪ್ರಭುವಾಗಿರುವ ನಿನಗೆ ಪ್ರಭುವಾದವನಾರು ? ನೀನು ಶತ್ರುಗಳನ್ನು ಶಿರಸ್ಸಿನಮೇಲೆ ಮೆಟ್ಟಿ ಸೀತೆ

❋ "ನಿಷೇವಿತಂ" ತಿ. ಪಾ.

¶ "ಅಯ್ಯಾ ರಾವಣನೇ ! ಸರ್ವನಿಯಂತೃವೂ, ಲೋಕೇಶ್ವರನೂ ಆದ ಶ್ರೀರಾಮಮೂರ್ತಿಗೆ ಈಶ್ವರನಾವನೂ ಇರುವುದಿಲ್ಲವು. ಎಂದಮೇಲೆ ಆತನನ್ನಾರು ತಾನೆ ನಿಗ್ರಹಿಸುವುದಕ್ಕೆ ಸಮರ್ಥರಾದಾರು ? ಆದುದರಿಂದ ನಿನಗೆ ಆತನೊಡನೆ ಶತ್ರುತ್ವವು ಬೇಡ. ಮೊದಲು ಆತನಲ್ಲಿಗೆ ಹೋಗಿ ನಿನ್ನ ಹತ್ತೂ ತಲೆಗಳನ್ನು ಬಾಗಿಸಿ ಆತನಿಗೆ ನಮಸ್ಕರಿಸು. ವೈದೇಹಿಗೂ ನಮಸ್ಕರಿಸು. ಶ್ರೀರಾಮನು ತನ್ನ ಮಡದಿಯಾದ ಸೀತಾದೇವಿಯಲ್ಲಿ ರಮಿಸುವಂತೆ ನೀನೂ ನಿನ್ನ ಮಡದಿಯರಲ್ಲಿ ಯಥೇಚ್ಛವಾಗಿ ರಮಿಸುವವನಾಗು" ಎಂದು ಇಲ್ಲಿನ ರಹಸ್ಯಾರ್ಥವು. (ಗೋ+ಮ)

ವೈದೇಹ್ಯಾ ಶತ್ರೂನಾಕ್ರಮ್ಯ ಮೂರ್ಧಸು ||೩|| ‡ ಬಲಾತ್ಕುಕ್ಕುಟವೃತ್ತೇನ § ವರ್ತಸ್ವ ಸುಮಹಾಬಲ ! | ಆಕ್ರಮ್ಯಾಕ್ರಮ್ಯ ಸೀತಾಂ ವೈ ತಥಾಭುಙ್‌ಕ್ಷ್ವ ರಮಸ್ವಚ || ೪ || ಲಬ್ಧಕಾಮಸ್ಯ ತೇ ಪಶ್ಚಾದಾಗಮಿಷ್ಯತಿ § ಯದ್ಭಯಂ | ಪ್ರಾಪ್ತಮಪ್ರಾಪ್ತಕಾಲಂ ವಾ ಸರ್ವಂ ಪ್ರತಿ ‡ ಸಹಿಷ್ಯಸಿ || ೫ || ಕುಂಭಕರ್ಣಸ್ಸಹಾಸ್ಮಾಭಿರಿಂದ್ರಜಿಚ್ಚ ಮಹಾಬಲಃ | ಪ್ರತಿಷೇಧಯಿತುಂ ಶಕ್ತೌ ಸವಜ್ರಮಪಿ ವಜ್ರಿಣಂ || ೬ || ಉಪಪ್ರದಾನಂ ಸಾಂತ್ವಂವಾ ಭೇದಂವಾ ಕುಶಲೈಃ ಕೃತಂ | ಸಮತಿಕ್ರಮ್ಯ ದಂಡೇನ ಸಿದ್ಧಿಮರ್ಥೇಷು

---

ವೈದೇಹ್ಯಾಸಹ - ಸೀತಾದೇವಿಯೊಡನೆ, ರಮಸ್ವ - ವಿಹರಿಸು. || ೩ || ಹೇ ಸುಮಹಾಬಲ - ಎಲೈ ಮಹಾಬಲನೇ, ಬಲಾತ್ - ಬಲಾತ್ಕಾರದಿಂದ, ಕುಕ್ಕುಟವೃತ್ತೇನ - ಹುಂಜದ ನಡತೆಯಿಂದ, ವರ್ತಸ್ವ - ಇರು, ಸೀತಾಂ - ಸೀತಾದೇವಿಯನ್ನು, ಆಕ್ರಮ್ಯಾಕ್ರಮ್ಯ - ಸೆಳೆದು ಸೆಳೆದು, ತಥಾ - ಹಾಗೆಯೇ, ಭುಙ್‌ಕ್ಷ್ವ - ಅನುಭವಿಸು, ರಮಸ್ವ - ರಮಿಸು. || ೪ || ಲಬ್ಧಕಾಮಸ್ಯ - ಹೊಂದಿದ ಕೋರಿಕೆಯುಳ್ಳ, ತೇ-ನಿನಗೆ, ಪಶ್ಚಾತ್-ಆಮೇಲೆ, ಯದ್ಭಯಂ-ಯಾವ ಭಯವು, ಆಗಮಿಷ್ಯತಿ-ಬರುವದೋ, ಪ್ರಾಪ್ತಂ - ಕಾಲತಃಪ್ರಾಪ್ತವಾದ, ಅಪ್ರಾಪ್ತಕಾಲಂ - ಆಗಾಮಿಯಾದ, ಸರ್ವಂ - ಸಮಸ್ತವನ್ನೂ, ಪ್ರತಿಸಹಿಷ್ಯಸಿ - ಸಹಿಸುತ್ತೀಯೆ. || ೫ || ಕುಂಭಕರ್ಣಃ - ಕುಂಭಕರ್ಣನೂ, ಮಹಾಬಲಃ - ಬಹಳ ಬಲಿಷ್ಠನಾದ, ಇಂದ್ರಜಿಚ್ಚ - ಇಂದ್ರಜಿತ್ತುವೂ, ಅಸ್ಮಾಭಿಸ್ಸಹ - ನಮ್ಮೊಡಗೂಡಿ, ಸವಜ್ರಂ - ವಜ್ರಾಯುಧದಿಂದೊಡಗೂಡಿದ, ವಜ್ರಿಣಮಪಿ - ದೇವೇಂದ್ರನನ್ನೂ, ಪ್ರತಿಷೇಧಯಿತುಂ- ತಿರಸ್ಕರಿಸಲು, ಶಕ್ತೌ - ಸಮರ್ಥರು. || ೬ || ಅಕುಶಲೈಃ - ಯುದ್ಧದಲ್ಲಿ ಬುದ್ಧಿವಂತರಲ್ಲದುದರಿಂದ, ಕೃತಂ-ಮಾಡಲ್ಪಟ್ಟ, ಉಪಪ್ರದಾನಂ-ಸೀತಾದೇವಿಯ ಸಮರ್ಪಣರೂಪಕಾರ್ಯವನ್ನಾಗಲಿ, ಸಾಂತ್ವಂವಾ- ಸಮಾಧಾನವನ್ನೇ ಆಗಲಿ, ಭೇದಂವಾ - ಭೇದೋಪಾಯವನ್ನೇ ಆಗಲಿ, ಸಮತಿಕ್ರಮ್ಯ - ಬಿಟ್ಟು, ದಂಡೇನ - ದಂಡೋಪಾಯದಿಂದ, ಅರ್ಥೇಷು - ಪ್ರಯೋಜನಗಳಲ್ಲಿ, ಸಿದ್ಧಿಂ - ಫಲನಿಶ್ಚಯವನ್ನು,

---

ಯೊಡನೆ ಕ್ರೀಡಿಸುತ್ತಿರು. ಎಲೈ ಪರಾಕ್ರಮಶಾಲಿಯೇ! ಆ ಸೀತೆಯು ಒಪ್ಪದಿದ್ದರೆ ಕುಕ್ಕುಟ ವೃತ್ತಿಯನ್ನವಲಂಬಿಸಿ ಬಲಾತ್ಕಾರದಿಂದ ಅವಳನ್ನಾಕ್ರಮಿಸಿ ಚೆನ್ನಾಗಿ ಅನುಭವಿಸು. ಸಂತೋಷಪಡು. ಹೀಗೆ ನಿನ್ನ ಕೋರಿಕೆಯು ನೆರವೇರಿದಮೇಲೆ ನಿನಗಾವುದಾದರೂ ಭಯವು ಸಂಭವಿಸಿದರೂ, ಸಂಭವಿಸದಿದ್ದರೂ ಸರಿಯೇ ನಾವೆಲ್ಲರೂ ಇರುವಾಗ ನಿನಗೆತ್ತಣ ಭಯವು. ಕುಂಭಕರ್ಣನೂ, ಮಹಾ ಬಲಶಾಲಿಯಾದ ಇಂದ್ರಜಿತ್ತುವೂ ನಮ್ಮೊಡಗೂಡಿದವರಾಗಿ ವಜ್ರಧರನಾದ ದೇವೇಂದ್ರನನ್ನಾದರೂ ಸಂಹರಿಸಬಲ್ಲರು. || ೧ ೬ || ಎಲೈ ಮಹಾರಾಜನೇ ! ರಾಕ್ಷಸೇಶ್ವರನೇ !! ಯುದ್ಧಮಾಡಲು ಶಕ್ತಿಯಿಲ್ಲದವರಿಂದ ಏರ್ಪಟ್ಟಿರುವ ಸಾಮ ದಾನ ಭೇದೋ

---

‡ ಹುಂಜವು ಕೋಪಗೊಂಡಿರುವ ಹೆಣ್ಣುಕೋಳಿಯನ್ನು ವಂಚನೆಯಿಂದ ಬಳಿ ಸಾರಿ ಭೋಗಿಸುತ್ತದೆ. ಈ ಎಂದು ಕುಕ್ಕುಟ ವೃತ್ತಿಯು ಬಹಳ ಸುಖಾವಹವು, "ಕ್ರುದ್ಧಾಮಾಕ್ರಮ್ಯ ಭೋಗಸ್ತು ಕೌಕ್ಕುಟಸ್ಸೋಪಿ ಸೌಖ್ಯದಃ" ವಾತ್ಸ್ಯಾಯನನು ಹೇಳಿರುವನು. ಇಲ್ಲಿ ಮುನಿಹೃದಯವು ಬೇರೆ:— ಎಲೈ ರಾವಣನೇ ! ನೀನು ಸೀತೆಯನ್ನು ಬಿಡು ಇತರ ಸ್ತ್ರೀಯರಲ್ಲಿ ಕುಕ್ಕುಟವೃತ್ತಿಯನ್ನವಲಂಬಿಸಿ ಬೇಕಾದ ಹಾಗೆ ಭೋಗಪಡು. ಇದರಿಂದ ನಿನಗೆ ಸುಖಸಂತೋಷಗಳುಂಟು. ಸೀತಾದೇವಿಯನ್ನು ಮಾತ್ರ ಚಾರಿತ್ರ ಶಂಕೆಯಿಂದ ಸಂರಕ್ಷಿಸು. (ಭುಙ್‌ಕ್ಷ್ವ—ಭುಜಪರಿಪಾಲನಾಭ್ಯವಹಾರಯೋಃ) ಎಂಬ ಧಾತುವಿನಿಂದ ಈ ಅರ್ಥವು ಹೇಳಿದೆ. (ಗೋ)

§ "ಪ್ರವರ್ತಸ್ವ ಮಹಾಬಲ" ತಿ. ಪಾ. § "ಕಿಂ ಭಯಂ" ತಿ. ರಾ. ಪಾ. ‡ "ವಿಧಾಸ್ಯಸೇ" ಕ. ಪಾ.

ರೋಚಯ ॥ ೭ ॥ ಇಹಪ್ರಾಪ್ತಾನ್ವಯಂ ಸರ್ವಾನ್ಶತ್ರೂಂಸ್ತವ ಮಹಾಬಲ ! । ವಶೇ ಶಸ್ತ್ರಪ್ರತಾಪೇನ ಕರಿಷ್ಯಾಮೋ ನಸಂಶಯಃ" ॥ ೮ ॥ ಏವಮುಕ್ತಸ್ತದಾ ರಾಜಾ ಮಹಾಪಾರ್ಶ್ವೇನ ರಾವಣಃ । ತಸ್ಯ ಸಂಪೂಜಯನ್ವಾಕ್ಯಮಿದಂ ವಚನಮಬ್ರವೀತ್ ॥ ೯ ॥ "ಮಹಾಪಾರ್ಶ್ವ ! ನಿಬೋಧ ತ್ವಂ ರಹಸ್ಯಂ ಕಿಂಚಿದಾತ್ಮನಃ । ಚಿರವೃತ್ತಂ ತದಾಖ್ಯಾಸ್ಯೇ ಯದವಾಪ್ತಂ ಮಯಾ ಪುರಾ ॥ ೧೦ ॥ ¶ ಪಿತಾಮಹಸ್ಯ ಭವನಂ ಗಚ್ಛಂತೀಂಪುಂಜಿಕಸ್ಥಲಾಂ।ಚಂಚೂರ್ಯಮಾಣಾಮದ್ರಾಕ್ಷಮಾಕಾಶೇಽಗ್ನಿಶಿಖಾಮಿವ ॥ ೧೧ ॥ ಸಾ ಪ್ರಸಹ್ಯ ಮಯಾ ಭುಕ್ತಾ ಕೃತಾ ವಿವಸನಾ ತತಃ । ಸ್ವಯಂಭೂಭವನಂ

ರೋಚಯ – ಸಮ್ಮತಿಸು. ॥ ೭ ॥ ಹೇ ಮಹಾಬಲ – ಎಲೈ ಮಹಾಬಲನೇ, ವಯಂ – ನಾವು, ಇಹ – ಈಗ, ಪ್ರಾಪ್ತಾನ್-ಬಂದಿರುವ, ತವ-ನಿನ್ನ, ಸರ್ವಾನ್ಶತ್ರೂನ್-ಸಮಸ್ತ ಶತ್ರುಗಳನ್ನೂ, ಶಸ್ತ್ರಪ್ರತಾಪೇನ-ಶಸ್ತ್ರಪ್ರಯೋಗದಿಂದ, ವಶೇ – ಸ್ವಾಧೀನದಲ್ಲಿ, ಕರಿಷ್ಯಾಮಃ – ಮಾಡುವೆವು, ನಸಂಶಯಃ – ಸಂಶಯ ವಿಲ್ಲವು. ॥ ೮ ॥ ಏವಂ – ಹೀಗೆ, ಮಹಾಪಾರ್ಶ್ವೇನ – ಮಹಾಪಾರ್ಶ್ವನಿಂದ, ಉಕ್ತಃ – ಹೇಳಲ್ಪಟ್ಟ, ರಾಜಾ – ಅರಸಾದ, ರಾವಣಃ – ರಾವಣನು, ತದಾ – ಆಗ, ತಸ್ಯ – ಆ ಮಹಾಪಾರ್ಶ್ವನ, ವಾಕ್ಯಂ – ಮಾತನ್ನು, ಸಂಪೂಜಯನ್ – ಶ್ಲಾಘಿಸಿ, ಇದಂವಚನಂ – ಈ ಮಾತನ್ನು, ಅಬ್ರವೀತ್ – ನುಡಿದನು. ॥ ೯ ॥ ಹೇ ಮಹಾಪಾರ್ಶ್ವ-ಎಲೈ ಮಹಾಪಾರ್ಶ್ವನೇ, ತ್ವಂ-ನೀನು, ಆತ್ಮನಃ-ನನ್ನ, ಕಿಂಚಿದ್ರಹಸ್ಯಂ-ಸ್ವಲ್ಪ ರಹಸ್ಯವನ್ನು, ನಿಬೋಧ – ತಿಳಿದುಕೋ, ಮಯಾ – ನನ್ನಿಂದ, ಪುರಾ – ಪೂರ್ವದಲ್ಲಿ, ಯತ್-ಯಾವುದು, ಅವಾಪ್ತಂ – ಹೊಂದಲ್ಪಟ್ಟಿತೋ, ಚಿರವೃತ್ತಂ – ಬಹು ಪೂರ್ವದಲ್ಲಿ ನಡದಿರುವ, ತತ್ – ಅದನ್ನು, ಆಖ್ಯಾಸ್ಯೇ – ಹೇಳುವೆನು. ॥ ೧೦ ॥ ಪಿತಾಮಹಸ್ಯ – ಬ್ರಹ್ಮನ, ಭವನಂ – ಮನೆಯನ್ನು ಕುರಿತು, ಗಚ್ಛಂತೀಂ – ಹೋಗುತ್ತಿರುವ, ಆಕಾಶೇ – ಅಂತರಿಕ್ಷದಲ್ಲಿ, ಅಗ್ನಿಶಿಖಾಮಿವ – ಅಗ್ನಿ ಜ್ವಾಲೆಯಂತಿರುವ, ಚಂಚೂರ್ಯಮಾಣಾಂ – ಅಲ್ಲಲ್ಲಿ ಅವಿತು ಹೋಗುತ್ತಿರುವ, ಪುಂಜಿಕಸ್ಥಲೀಂ – ಪುಂಜಿಕಸ್ಥಲಾ ಎಂಬ ಅಪ್ಸರಸೆಯನ್ನು, ಅದ್ರಾಕ್ಷಂ – ಕಂಡೆನು. ॥೧೧॥ ಸಾ – ಆ ಪುಂಜಕಸ್ಥಲೆಯು, ಪ್ರಗೃಹ್ಯ – ಬಲಾತ್ಕರಿಸಿ, ಮಯಾ – ನನ್ನಿಂದ, ಲೋಳತಾ – ಸ್ಥಲದಿಂದ ಎತ್ತಿಹಾಕಲ್ಪಟ್ಟ, ನಳಿನೀ

ಪಾಯಗಳನ್ನು ಬಿಟ್ಟು ದಂಡೋಪಾಯದಿಂದಲೇ ನೀನು ಕಾರ್ಯವನ್ನು ಸಾಧಿಸು. ಎಲೈ ರಾಕ್ಷಸೇಶ್ವರನೇ ! ನಿನ್ನ ಶತ್ರುಗಳಿಲ್ಲಿಗೆ ಬಂದೊಡನೆಯೇ ಅವರೆಲ್ಲರನ್ನೂ ಶಸ್ತ್ರಪ್ರಯೋಗದಿಂದ ನಿನ್ನ ವಶವರ್ತಿಗಳನ್ನಾಗಿ ನಾವು ಮಾಡುತ್ತೇವೆ. ಇದರಲ್ಲಿ ಎಷ್ಟುಮಾತ್ರವೂ ಸಂಶಯ ವಿಲ್ಲವು" ಎಂದು ಹೇಳಿದನು. ಆಗ ರಾವಣಾಸುರನು ಅವನ ಮಾತುಗಳಿಗೆ ಸಂತೋಷ ಪಟ್ಟು ಅವನನ್ನು ಸನ್ಮಾನಿಸಿ ಪುನಃ ಅವನನ್ನು ಕುರಿತು, ಎಲೈ ಮಹಾಪಾರ್ಶ್ವನೇ ! ನನ್ನ ದೊಂದು ರಹಸ್ಯವಿರುವದು. ನೀನದನ್ನು ತಿಳಿಯಬೇಕು. ಬಹು ಕಾಲಕ್ಕೆ ಹಿಂದೆ ಒಂದು ಸಂಗತಿಯು ನಡೆಯಿತು. ಅದನ್ನೀಗ ತಿಳಿಸುವೆನು ಕೇಳು. ಒಂದು ದಿವಸ ನನ್ನ ಭಯ ದಿಂದ ಅಲ್ಲಲ್ಲಿ ಅವಿತು ಅವಿತು ಬ್ರಹ್ಮನ ಮನೆಗೆ ಹೋಗುತ್ತಿದ್ದ ಅಗ್ನಿಜ್ವಾಲೆಯಂತೆ ಬೆಳಗು ತ್ತಿದ್ದ ಪುಂಜಿಕಸ್ಥಲೆಯೆಂಬ ಅಪ್ಸರೆಯನ್ನು ನಾನು ಕಂಡೆನು. ಆಗ ನಾನು ಆಕೆಯನ್ನು ಬಲಾತ್ಕಾರವಾಗಿ ಹಿಡಿದು ದಿಗಂಬರಳನ್ನಾಗಿಸಿ ಭೋಗಿಸಿದೆನು. ಆಮೇಲೆ ಆ ಪುಂಜಿಕ

¶ "ಅಗ್ನಿಶಿಖಾಮಿವ" ಎಂಬ ಪುಂಜಿಕಸ್ಥಲೆಯ ವಿಶೇಷಣದಿಂದ, "ಅಂಗಾರಸದೃಶೀನಾರೀ ಘೃತಕುಂಭಸಮಃ ಪುಮಾನ್" ಎಂಬ ವಾಕ್ಯವು ಸ್ಮರಿತವಾಗುವುದು.

ಪ್ರಾಪ್ತಾ ಲೋಳಿತಾ ನಳಿನೀ ಯಥಾ ॥ ೧೨ ॥ * ತಸ್ಯ ತಚ್ಚ ತದಾ ಮನ್ಯೇ ಜ್ಞಾತಮಾಸೀನ್ಮಹಾತ್ಮನಃ । ಅಥ ಸಂಕುಪಿತೋ ದೇವೋ ಮಾಮಿದಂ ವಾಕ್ಯಮಬ್ರವೀತ್ ॥ ೧೩ ॥ "ಅದ್ಯಪ್ರಭೃತಿ ಯಾಮನ್ಯಾಂ ಬಲಾನ್ನಾರೀಂ ಗಮಿಷ್ಯಸಿ । ತದಾ ತೇ ಶತಧಾ ಮೂರ್ಧಾ ಫಲಿಷ್ಯತಿ ನಸಂಶಯಃ" ॥೧೪॥ ¶ ಇತ್ಯಹಂ ತಸ್ಯ ಶಾಪಸ್ಯ ಭೀತಃ ಪ್ರಸಭಮೇವ ತಾಂ । ನಾರೋಪಯೇ ಬಲಾತ್ಸೀತಾಂ ವೈದೇಹೀಂ ಶಯನೇ ಶುಭೇ

ಯಥಾ - ತಾವರೆಯ ಬಳ್ಳಿಯಂತೆ, ಭುಕ್ತಾ - ಅನುಭವಿಸಲ್ಪಟ್ಟವಳಾಗಿ, ವಿವಸನಾ - ವಸ್ತ್ರಹೀನಳಾಗಿ, ಕೃತಾ - ಮಾಡಲ್ಪಟ್ಟಳು, ತತಃ - ಬಳಿಕ, ಸ್ವಯಂಭುಭವನಂ - ಬ್ರಹ್ಮನ ಮನೆಯನ್ನು ಕುರಿತು, ಪ್ರಾಪ್ತಾ - ಹೋದಳು. ॥೧೨॥ ತದಾ - ಆ ಕಾಲದಲ್ಲಿ, ಮಹಾತ್ಮನಃ - ಸರ್ವಜ್ಞನಾದ, ತಸ್ಯ - ಆ ಬ್ರಹ್ಮನಿಗೆ, ತಚ್ಚ - ಆ ನಾನು ಮಾಡಿದ ದುಷ್ಕಾರ್ಯವು, ಜ್ಞಾತಂ - ತಿಳಿಯಲ್ಪಟ್ಟಿದು, ಆಸೀತ್ - ಆಯಿತು, ಇತಿ - ಇಂತೆಂದು, ಮನ್ಯೇ - ತಿಳಿದಿದ್ದೇನೆ, ಅಥ - ಬಳಿಕ ಸಂಕುಪಿತಃ - ಬಹಳ ಕೋಪಗೊಂಡವನಾದ, ದೇವಃ - ಬ್ರಹ್ಮನು, ಮಾಂ - ನನ್ನನ್ನು ಕುರಿತು, ಇದಂವಾಕ್ಯಂ - ಈ ಮಾತನ್ನು, ಅಬ್ರವೀತ್ - ನುಡಿದನು. ॥ ೧೩ ॥ ಅದ್ಯಪ್ರಭೃತಿ - ಇದು ಮೊದಲ್ಗೊಂಡು, ಅನ್ಯಾಂ - ಮತ್ತೊಬ್ಬ, ಯಾಂನಾರೀಂ - ಯಾವ ಸ್ತ್ರೀಯನ್ನು, ಬಲಾತ್ - ಬಲಾತ್ಕಾರದಿಂದ, ಗಮಿಷ್ಯಸಿ - ಗಮನ ಮಾಡುತ್ತೀಯೋ, ತದಾ - ತತ್‌ಕ್ಷಣದಲ್ಲಿ, ತೇ - ನಿನ್ನ, ಮೂರ್ಧಾ - ಶಿರಸ್ಸು, ಶತಧಾ - ನೂರುಬಗೆಯಾಗಿ, ಫಲಿಷ್ಯತಿ - ಒಡೆದುಹೋಗುವುದು, ನಸಂಶಯಃ - ಸಂಶಯವಿಲ್ಲವು, ಇತಿ - ಎಂದು ಹೇಳಿದನು. ॥ ೧೪ ॥ ಅಹಂ - ನಾನು, ತಸ್ಯ - ಆ ಬ್ರಹ್ಮನ, ಶಾಪಸ್ಯ - ಶಾಪಕ್ಕೆ, ಭೀತಃ - ಭಯಗೊಂಡವನಾಗಿ, ಪ್ರಸಭಂ - ಬಲಾತ್ಕರಿಸಿ, ಬಲಾತ್ - ಬಲವಂತದಿಂದ, ವೈದೇಹೀಂ - ಜನಕರಾಜನ ಮಗಳಾದ, ಸೀತಾಂ - ಸೀತಾದೇವಿಯನ್ನು, ಶುಭೇ - ಶುಭಕರವಾದ, ಶಯನೇ - ಹಾಸಿಗೆಯಲ್ಲಿ, ನಾರೋಪಯೆ - ಯೇರಿಸಲಾರೆನು. ॥ ೧೫ ॥ ಮೇ - ನನ್ನ, ವೇಗಃ - ವೇಗವು, ಸಾಗರಸ್ಯ - ಕಡಲಿನ, ವೇಗಇವ -

ಸ್ಥಲೆಯು ಕಮಲದ ಬಳ್ಳಿಯಂತೆ ಬಹು ದೈನ್ಯದಿಂದ ಹಾಗೆಯೇ ಬ್ರಹ್ಮದೇವನ ಬಳಿಗೈದಿದಳು. ॥೭--೧೨॥ ಈ ವೃತ್ತಾಂತವು ಬ್ರಹ್ಮದೇವನಿಗೆ ತಿಳಿಯಿತೆಂದು ನನಗೆ ತೋರುತ್ತದೆ. ಆತನು ಮಹಾ ಕೋಪೋದ್ದೀಪಿತನಾಗಿ, "ಎಲೈ ರಾವಣನೇ ! ಇದು ಮೊದಲ್ಗೊಂಡು ನೀನೀರೀತಿ ಬಲಾತ್ಕಾರದಿಂದ ಪರಸ್ತ್ರೀಯನ್ನು ಅನುಭವಿಸಿದುದಾದರೆ ಆಗಲೇ ನಿನ್ನ ತಲೆಯು ನೂರು ಹೋಳುಗಳಾಗಿ ಒಡೆದುಹೋಗುವುದು. ಇದರಲ್ಲಿ ಸಂಶಯವಿಲ್ಲವು" ಎಂದು ನನ್ನನ್ನು ಶಪಿಸಿದನು. ಆದುದರಿಂದ ನಾನು ಆ ಶಾಪಕ್ಕೆ ಭಯಪಟ್ಟು ಸೀತೆಯನ್ನು ಬಲಾತ್ಕರಿಸಿ ನನ್ನ ಹಾಸಿಗೆಯನ್ನೇರಿಸಲಾರದವನಾಗಿದ್ದೇನೆ. ಎಲೈ ಮಹಾ ಪಾರ್ಶ್ವನೇ ! ಸಮುದ್ರ

* "ತಸ್ಯ ತಚ್ಚ ತಥಾ" ತಿ. ರಾ. ಪಾ.

¶ ಇಲ್ಲಿ ಸೀತಾದೇವಿಗೆ, "ವೈದೇಹೀ" ಎಂದು ವಿಶೇಷಣವಿರುವುದರಿಂದ, "ಸೀತೆಯು ಮಹಾಕುಲಪ್ರಸೂತೆಯು. ಆಕೆಯನ್ನು ನಾನು ಬಲಾತ್ಕರಿಸಿದುದಾದರೆ ಶಪಿಸಿಯಾಳು ಎಂಬ ಭಯವು ನನಗುಂಟು" ಎಂದು ರಾವಣವಾಕ್ಯಾಭಿಪ್ರಾಯವಾಗಿ ಗ್ರಾಹ್ಯವು. ಹಿಂದೆ ರಾವಣನು ನಳಕೂಬರನ ಮನೆಗೆ ಹೋಗುತ್ತಿದ್ದ ರಂಭೆಯನ್ನು ತಡೆದಾಗ ನಳಕೂಬರನೂ ಅವನನ್ನು ಹೀಗೆಯೇ ಶಪಿಸಿದ್ದನು. ಆ ನಳಕೂಬರನು ಪ್ರಾಕೃತದೇವತೆಯಾದುದರಿಂದಲೂ, ತನಗೆ ವಾವೆಯಲ್ಲಿ ಮಗನಾದುದರಿಂದಲೂ ಅವನ ಶಾಪವನ್ನು ಗಮನಿಸದೆ ಅನುಲ್ಲಂಘನೀಯವಾದ ಪಿತಾಮಹ (ಬ್ರಹ್ಮ)ನ ಶಾಪವನ್ನೇ ಇಲ್ಲಿ ಹೇಳಿರುವುದಾಗಿ ತಿಳಿಯಬೇಕು.

|| ೧೫ || ಸಾಗರಸ್ಯೇವ ಮೇ ವೇಗೋ ಮಾರುತಸ್ಯೇವ ಮೇ ಗತಿಃ । ನೈತದ್ದಾಶರಥಿರ್ವೇದ ಹ್ಯಾಸಾದಯತಿ ತೇನ ಮಾಂ ||೧೬|| ¶ ಯಸ್ತು ಸಿಂಹಮಿವಾಸೀನಂ ಸುಪ್ತಂ ಗಿರಿಗುಹಾಶಯೇ । ಕ್ರುದ್ಧಂ ಮೃತ್ಯುಮಿವಾಸೀನಂ ‡ ಪ್ರಬೋಧಯಿತುಮಿಚ್ಛತಿ||೧೭|| ನಮತ್ತೋ § ನಿಶಿತಾನ್ ಬಾಣಾನ್ ದ್ವಿಜಿಹ್ವಾನಿವ ಪನ್ನಗಾನ್ । ರಾಮಃ ಪಶ್ಯತಿ ಸಂಗ್ರಾಮೇ ತೇನ ಮಾಮಭಿಗಚ್ಛತಿ ||೧೮|| ಕ್ಷಿಪ್ರಂ ವಜ್ರೋಪಮೈರ್ಬಾಣೈಃ ಶತಧಾ ಕಾರ್ಮುಕಚ್ಯುತೈಃ । ರಾಮಮಾದೀಪಯಿಷ್ಯಾಮಿ ಉಲ್ಕಾಭಿರಿವ ಕುಂಜರಂ || ೧೯ ||

ವೇಗದಂತೆ, ಮೇ - ನನ್ನ, ಗತಿಃ - ಗಮನವು, ಮಾರುತಸ್ಯೇವ - ವಾಯುವಿನ ಗಮನದಂತೆ, ಏತತ್- ಇದನ್ನು, ದಾಶರಥಿಃ - ರಾಮನು, ನವೇದ - ತಿಳಿಯಲಾರನು, ತೇನ - ಆದ್ದರಿಂದ, ಮಾಂ - ನನ್ನನ್ನು ಕುರಿತು, ಆಸಾದಯತಿ - ಸೈನ್ಯವನ್ನು ತೆಗೆದುಕೊಂಡು ಬಂದಿದ್ದಾನೆ. || ೧೬ || ಯಸ್ತು - ಯಾವ ರಾಮನು, ಗಿರಿಗುಹಾಶಯೇ - ಬೆಟ್ಟದ ಗುಹಾಗರ್ಭದಲ್ಲಿ, ಸುಪ್ತಂ - ಮಲಗಿರುವ, ಸಿಂಹಮಿವ - ಸಿಂಹದಂತೆ, ಕ್ರುದ್ಧಂ - ಕೋಪಿಷ್ಠನಾಗಿ, ಆಸೀನಂ - ಕುಳಿತಿರುವ, ಮೃತ್ಯುಮಿವಸ್ಥಿತಂ-ಯಮನಂತಿರುವ, ಮಾಂ - ನನ್ನನ್ನು, ಪ್ರಬೋಧಯಿತುಂ - ಎಬ್ಬಿಸಲು, ಇಚ್ಛತಿ - ಅಪೇಕ್ಷಿಸುತ್ತಾನೆಯೋ, ಸಃರಾಮಃ- ಆ ರಾಮನು, ಮತ್ತಃ - ನನ್ನಿಂದ, ಸಂಗ್ರಾಮೇ - ಕಾಳೆಗದಲ್ಲಿ, ನಿಶಿತಾನ್ - ತೀಕ್ಷ್ಣಗಳಾದ, ದ್ವಿಜಿಹ್ವಾನ್ - ಎರಡು ನಾಲಿಗೆಗಳುಳ್ಳ, ಪನ್ನಗಾನಿವ - ಸರ್ಪದಂತೆ ಇರುವ, ಬಾಣಾನ್ - ಬಾಣಗಳನ್ನು, ನಪಶ್ಯತಿ - ಕಾಣನು, ತೇನ - ಆ ಕಾಣದಿರುವುದರಿಂದ, ಮಾಂ - ನನ್ನನ್ನು ಕುರಿತು, ಅಭಿಗಚ್ಛತಿ - ಬರುತ್ತಾನೆ. ||೧೭-೧೮ || ಶತಧಾ - ನೂರಾರು ಬಗೆಯಾಗಿ, ಕಾರ್ಮುಕಚ್ಯುತೈಃ - ಬಿಲ್ಲಿನಿಂದ ಜಾರುತ್ತಿರುವ, ವಜ್ರೋಪಮೈಃ - ಸಿಡಿಲಿಗೆ ಸಮಾನಗಳಾದ, ಬಾಣೈಃ - ಬಾಣಗಳಿಂದ, ರಾಮಂ - ರಾಮನನ್ನು, ಉಲ್ಕಾಭಿಃ - ಕೊಳ್ಳಿಗಳಿಂದ, ಕುಂಜರಮಿವ - ಆನೆಯನ್ನಂತೆ, ಕ್ಷಿಪ್ರಂ - ಜಾಗ್ರತೆಯಾಗಿ, ಆದೀಪಯಿಷ್ಯಾಮಿ - ಸುಡುವೆನು. ||೧೯|| ಮಹತಾ - ದೊಡ್ಡದಾದ, ಬಲೇನ - ಸೈನ್ಯದಿಂದ, ವೃತಃ - ಸುತ್ತುವರೆಯಲ್ಪಟ್ಟವನಾಗಿ, ಅಸ್ಯ - ಈ ಶ್ರೀರಾಮನ, ತದ್ಬಲಂ - ಆ ವಾನರಸೈನ್ಯವನ್ನು, ಕಾಲೇ -

ದಂತಹ ವೇಗವೂ, ವಾಯುವಿಗಿರುವ ಗಮನಶಕ್ತಿಯೂ ನನಗಿರುವುದೆಂಬ ವಿಷಯವನ್ನು ಆ ರಾಮನು ತಿಳಿಯನು. ಆದುದರಿಂದಲೇ ಅವನು ನನ್ನಮೇಲೆ ಯುದ್ಧಕ್ಕೆ ಬರುತ್ತಿರುವನು. || ೧೫–೧೬ || ಆ ರಾಮನು ಪರ್ವತಗುಹೆಯಲ್ಲಿ ನಿದ್ರಿಸುತ್ತಿರುವ ಸಿಂಹದಂತೆಯೂ, ಸುಖಸುಪ್ತವಾದ ಮೃತ್ಯುವಿನಂತೆಯೂ, ಕುಪಿತನಾಗಿಯೂ ಇರುವ ನನ್ನನ್ನು ಎದುರಿಸಲು ಬಯಸುತ್ತಿರುವನು. ಅದೂ ಅಲ್ಲದೆ ಆ ರಾಮನು ಇದುವರೆಗೆ ಎಂದೂ ನನ್ನೊಡನೆ ಯುದ್ಧಮಾಡಿ, ಬಹು ತೀಕ್ಷ್ಣಗಳಾಗಿ, ಎರಡು ನಾಲಿಗೆಗಳ ಕ್ರೂರ ಸರ್ಪಗಳಂತಹ ನನ್ನ ಬಾಣಗಳ ಹೊಡೆತಗಳನ್ನು ಕಂಡಿಲ್ಲ. ಆದುದರಿಂದಲೇ ನನ್ನಮೇಲೆ ಯುದ್ಧಕ್ಕೆ ಬರುತ್ತಿರುವನು. ಅಯ್ಯಾ ಮಹಾಪಾರ್ಶ್ವನೇ! ಇನ್ನು ಸ್ವಲ್ಪ ಕಾಲದಲ್ಲಿಯೇ ಆನೆಯಮೇಲೆ ಕೊಳ್ಳಿಗಳನ್ನು ಹಾಕುವಂತೆ, ವಜ್ರಸಮಾನಗಳಾದ ನನ್ನ ಬಾಣಗಳನ್ನು ಗುಂಪುಗುಂಪುಗಳಾಗಿ ಆ ರಾಮನ ಮೇಲೆಸೆಯುವೆನು. ಅಲ್ಲದೆ, ಉದಯಕಾಲದಲ್ಲಿ ಸೂರ್ಯನುದಯಿಸಿ ನಕ್ಷತ್ರಗಳ ಕಾಂತಿಯನ್ನು ಹೋಗಲಾಡಿಸುವಂತೆ ನಾನು ದೊಡ್ಡ ಸೇನೆಯೊಡನೆ ಆ ರಾಮನನ್ನೂ, ಅವನ ಸೇನೆ

¶ "ಕೋಹಿ" ತಿ. ಪಾ. ‡ "ಸಂ" ಮ. ಪಾ. § "ನಿರ್ಗತಾನ್" ರಾ. ತಿ. ಪಾ.

ತಚ್ಚಾಸ್ಯ ಬಲಮಾದಾಸ್ಯೇ ಬಲೇನ ಮಹತಾವೃತಃ । ಉದಯನ್ ಸವಿತಾ ಕಾಲೇ ನಕ್ಷತ್ರಾಣಾಮಿವ ಪ್ರಭಾಂ ॥ ೨೦ ॥

ನವಾಸವೇನಾಪಿ ಸಹಸ್ರಚಕ್ಷುಷಾ
ಯಥಾಽಸ್ಮಿ ಶಕ್ಯೋ ವರುಣೇನವಾ ಪುನಃ ।
ಮಯಾತ್ವಿಯಂ ಬಾಹುಬಲೇನ ನಿರ್ಜಿತಾ
ಪುರೀ ಪುರಾ ವೈಶ್ರವಣೇನ ಪಾಲಿತಾ ॥ ೨೦ ॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ತ್ರಯೋದಶಸ್ಸರ್ಗಃ.



ಪ್ರಾತಃಕಾಲದಲ್ಲಿ, ಉದಯನ್ - ಹುಟ್ಟುತ್ತಿರುವ, ಸವಿತಾಃ - ಸೂರ್ಯನು, ನಕ್ಷತ್ರಾಣಾಂ - ನಕ್ಷತ್ರಗಳ, ಪ್ರಭಾಮಿವ - ಕಾಂತಿಯನ್ನಂತೆ, ಆದಾಸ್ಯೇ - ಖಂಡಿಸುತ್ತೇನೆ. ||೨೦|| ಸಹ....ಷಾ - ಸಾವಿರ ಕಣ್ಣು ಗಳುಳ್ಳ, ವಾಸವೇನಾಪಿ - ದೇವೇಂದ್ರನಿಂದಲೂ, ಯಥಾ - ಹೇಗೆ, ಯುಧಾ - ಕಾಳೆಗದಿಂದ, ಶಕ್ಯಃ- ಸಾಧ್ಯನು, ನಾಸ್ಮಿ - ಅಲ್ಲವೋ, ತಥಾ - ಹಾಗೆಯೇ, ಪುನಃ - ಮತ್ತು, ವರುಣೇನವಾ - ವರುಣ ನಿಂದಲೂ ಕೂಡ, ಶಕ್ಯಃ - ಸಾಧ್ಯನು, ನಾಸ್ಮಿ - ಆಗಲಿಲ್ಲ, (ಅಂತಹ) ಮಯಾತು - ನನ್ನಿಂದಲಾದರೆ, ಪುರಾ - ಮೊದಲು, ವೈಶ್ರವಣೇನ - ಕುಬೇರನಿಂದ, ಪಾಲಿತಾ - ರಕ್ಷಿಸಲ್ಪಟ್ಟ, ಇಯಂಪುರೀ - ಈ ಲಂಕಾನಗರವು, ಬಾಹುಬಲೇನ - ಭುಜಬಲದಿಂದ, ನಿರ್ಜಿತಾ - ಜಯಿಸಲ್ಪಟ್ಟಿತು. || ೨೧ ||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ತ್ರಯೋದಶಸ್ಸರ್ಗಃ.



ಯನ್ನೂ ತುಂಡರಿಸುವೆನು. ಇದೂ ಅಲ್ಲದೆ ಸಹಸ್ರ ನೇತ್ರನಾದ ದೇವೇಂದ್ರನಾಗಲಿ, ವರುಣ ನಾಗಲೀ ಯುದ್ಧದಲ್ಲಿ ನನಗೆದುರಾಗಲಾರರು. ಅಲ್ಲದೆ ಕುಬೇರನನ್ನು ಕೂಡ ನನ್ನ ಭುಜಬಲ ಪರಾಕ್ರಮಗಳಿಂದ ಜಯಿಸಿ ಅವನಿಂದ ರಕ್ಷಿತವಾದ ಈ ಲಂಕಾನಗರವನ್ನು ನಾನು ಹೊಂದಿದೆ ನಲ್ಲವೇ ! || ೧೭–೨೧ ||

ಇಂತಿದು ರಾವಣಕೃತ ಆತ್ಮಶ್ಲಾಘನ ವೃತ್ತಾಂತವೆಂಬ ಹದಿಮೂರನೆಯ ಸರ್ಗವು ಸಮಾಪ್ತವಾದುದು.



# ಯುದ್ಧಕಾಂಡೇ ಚತುರ್ದಶಸ್ಸರ್ಗಃ

---

ನಿಶಾಚರೇಂದ್ರಸ್ಯ ನಿಶಮ್ಯ ವಾಕ್ಯಂ ಸಕುಂಭಕರ್ಣಸ್ಯ ಚ ಗರ್ಜಿತಾನಿ । ವಿಭೀಷಣೋ ರಾಕ್ಷಸರಾಜಮುಖ್ಯಮುವಾಚ ವಾಕ್ಯಂ ಹಿತಮರ್ಥಯುಕ್ತಂ ॥ ೧ ॥
"ವೃತೋಹಿ ಬಾಹ್ವಂತರಭೋಗರಾಶಿಶ್ಚಿಂತಾವಿಷಃ ಸುಸ್ಮಿತತೀಕ್ಷ್ಣದಂಷ್ಟ್ರಃ । ಪಂಚಾಂಗುಳೀ ಪಂಚಶಿರೋತಿಕಾಯಃ ಸೀತಾ ಮಹಾಹಿಸ್ತವ ಕೇನ ರಾಜನ್! ॥ ೨ ॥
ಯಾವನ್ನಲಂಕಾಂ ಸಮಭಿದ್ರವಂತಿ ವಲೀಮುಖಾಃ ಪರ್ವತಕೂಟಮಾತ್ರಾಃ । ದಂಷ್ಟ್ರಾಯುಧಾಶ್ಚೈವ ನಖಾಯುಧಾಶ್ಚ ಪ್ರದೀಯತಾಂ ದಾಶರಥಾಯ ಮೈಥಿಲೀ ॥ ೩ ॥

---

ನಿಶಾಚರೇಂದ್ರಸ್ಯ - ರಾವಣಾಸುರನ, ವಾಕ್ಯಂ - ಮಾತನ್ನೂ, ಕುಂಭಕರ್ಣಸ್ಯ - ಕುಂಭಕರ್ಣನ, ಗರ್ಜಿತಾನಿಚ - ಕೂಗುಗಳನ್ನೂ, ನಿಶಮ್ಯ - ಕೇಳಿ, ಸವಿಭೀಷಣಃ - ಆ ವಿಭೀಷಣನು, ರಾಕ್ಷ....ಖ್ಯಂ - ರಾಕ್ಷಸಾಧಿಪತಿಗಳಲ್ಲಿ ಶ್ರೇಷ್ಠನಾದ ರಾವಣನನ್ನು ಕುರಿತು, ಅರ್ಥಯುಕ್ತಂ - ಕರ್ತವ್ಯಾರ್ಥಬೋಧನೆಯಿಂದ ಕೂಡಿರುವ, ಹಿತಂ - ಮುಂದೆ ಶ್ರೇಯಸ್ಕರವಾದ, ವಾಕ್ಯಂ - ಮಾತನ್ನು, ಉವಾಚ - ಹೇಳಿದನು. ॥ ೧ ॥ ಹೇ ರಾಜನ್ - ಎಲೈ ಅರಸನೇ, ಬಾಹ್ವಂ....ಶಿಃ - ತೋಳುಗಳ ಮಧ್ಯದಲ್ಲಿಯೇ ಸರ್ಪಶರೀರದ ವಿಶಾಲತೆಯುಳ್ಳ, ಚಿಂತಾವಿಷಃ - ಚಿಂತೆಯೆಂಬ ವಿಷವುಳ್ಳ, ಸುಸ್ಮಿ....ಷ್ಟ್ರಃ - ಮಂದಸ್ಮಿತವೆಂಬ ಹದವಾದ ಕೋರೆಹಲ್ಲುಗಳುಳ್ಳ, ಪಂಚಾ....ಯಃ - ಐದು ಬೆರಳುಗಳೆಂಬ ಶಿರಸ್ಸುಗಳುಳ್ಳ ಬಹಳವಾದ ಶರೀರವುಳ್ಳ, ಸೀತಾಮಹಾಹಿಃ - ಸೀತೆಯೆಂಬ ಮಹಾ ಸರ್ಪವು, ತವ - ನಿನ್ನಿಂದ, ಕೇನ - ಏತಕ್ಕೋಸ್ಕರವಾಗಿ, ವೃತಃಹಿ - ಹಿಡಿದುಕೊಳ್ಳಲ್ಪಟ್ಟಿತೋ. ॥ ೨ ॥ ಪರ್ವ....ತ್ರಾಃ - ಬೆಟ್ಟದ ಶಿಖರದಂತೆ ಉನ್ನತವಾದ ಪ್ರಮಾಣಗಳುಳ್ಳ, ದಂಷ್ಟ್ರಾಯುಧಾಶ್ಚ - ಕೋರೆಹಲ್ಲುಗಳೇ ಆಯುಧಗಳಾಗುಳ್ಳ, ನಖಾಯುಧಾಶ್ಚ - ಉಗುರುಗಳೇ ಆಯುಧಗಳಾಗುಳ್ಳ, ವಲೀಮುಖಾಃ - ಕಪಿಗಳು, ಯಾವತ್ - ಎಷ್ಟರೊಳಗೆ, ಲಂಕಾಂ - ಲಂಕಾಪಟ್ಟಣವನ್ನು ಕುರಿತು, ನಸಮಭಿದ್ರವಂತಿ - ಅಟ್ಟಿಬರದೇ ಇರುವರೋ, ತಾವತ್ - ಅಷ್ಟರೊಳಗೆ, ಮೈಥಿಲೀ - ಸೀತಾದೇವಿಯು, ದಾಶರಥಾಯ - ಶ್ರೀರಾಮನಿಗೆ, ಪ್ರದೀಯತಾಂ - ಕೊಡಲ್ಪಡಲಿ. ॥೩॥ ವಜ್ರೋಪಮಾಃ - ವಜ್ರಾಯುಧಕ್ಕೆ ಸಮಾನಗಳಾದ, ವಾಯು....ಗಾಃ - ವಾಯುವಿಗೆ ಸಮಾನವಾದ ವೇಗವುಳ್ಳ, ರಾಮೇರಿತಾಃ - ಶ್ರೀರಾಮನಿಂದ

---

ಆಗ ವಿಭೀಷಣನು ರಾಕ್ಷಸೇಶ್ವರನಾದ ರಾವಣಾಸುರನಾಡಿದ ಮಾತುಗಳನ್ನೂ, ಕುಂಭಕರ್ಣನ ಗರ್ಜನೆಗಳನ್ನೂ ಕೇಳಿ, ರಾಕ್ಷಸಪ್ರಭುವಾದ ರಾವಣನನ್ನು ಕುರಿತು, ಬಹು ಶ್ರೇಯಸ್ಕರವಾದುವೂ, ಅರ್ಥಯುಕ್ತವೂ ಆದ ಮಾತುಗಳನ್ನಾಡುವನು. " ಓ ರಾಕ್ಷಸೇಶ್ವರಾ! ವಕ್ಷಸ್ಥಳವೆಂಬ ಹಾವಿನ ಹೆಡೆಯ ವೈಶಾಲ್ಯವುಳ್ಳುದಾಗಿ, ಚಿಂತೆಯೆಂಬ ಮಹಾ ವಿಷವುಳ್ಳುದಾಗಿ, ನಸುನಗೆಯೆಂಬ ಕೋರೆಹಲ್ಲುಗಳೂ, ಪಂಚಾಗುಳಿಗಳೆಂಬ ಪಂಚ ಫಣಗಳೂ ಉಳ್ಳ ಮಹಾ ಕಾಯದಿಂದೊಪ್ಪುತ್ತಿರುವ ಸೀತೆಯೆಂಬ ಮಹಾ ಸರ್ಪವನ್ನು ನೀನೇಕೆ ಬಯಸುವೆ? ದಂತನಖಾಯುಧರೂ, ಗಿರಿಶಿಖರಾಕಾರರೂ ಆದ ವಾನರರು ಲಂಕಾನಗರವನ್ನು ಪ್ರವೇಶಿಸುವುದಕ್ಕೆ ಮೊದಲೇ ಶ್ರೀರಾಮಪತ್ನಿಯಾದ ಸೀತಾದೇವಿಯನ್ನು ಶ್ರೀರಾಮಚಂದ್ರನಿಗೊಪ್ಪಿಸಿಬಿಡು. ವಜ್ರಾಯುಧಕ್ಕೆ ಸಮಾನಗಳಾದವೂ, ವಾಯುವೇಗದಂತಹ ವೇಗವುಳ್ಳುವೂ, ರಾಮನಿಂದ

ಯಾವನ್ನಗೃಹ್ಣಂತಿ ಶಿರಾಂಸಿ ಬಾಣಾ ರಾಮೇರಿತಾ ರಾಕ್ಷಸಪುಂಗವಾನಾಂ । ವಜ್ರೋಪಮಾ ವಾಯುಸಮಾನವೇಗಾಃ ಪ್ರದೀಯತಾಂ ದಾಶರಥಾಯ ಮೈಥಿಲೀ ॥ ೪ ॥ ಭಿತ್ವಾ ನತಾವತ್ಪ್ರವಿಶಂತಿ ಕಾಯಂ ಪ್ರಾಣಾಂತಿಕಾಸ್ತೇಽಶನಿತುಲ್ಯವೇಗಾಃ । ಶಿತಾಃ ಶರಾ ರಾಘವವಿಪ್ರಮುಕ್ತಾಃ ಪ್ರಹಸ್ತ! ತೇನೈವ ವಿಕತ್ಥಸೇ ತ್ವಂ ॥ ೫ ॥ ನಕುಂಭಕರ್ಣೇಂದ್ರಜಿತೌ ನರಾಜಾ ತಥಾ ಮಹಾಪಾರ್ಶ್ವಮಹೋದರೌ ವಾ । ನಿಕುಂಭಕುಂಭೌಚ ತಥಾತಿಕಾಯಃ ಸ್ಥಾತುಂ ನಶಕ್ತಾ ಯುಧಿ ರಾಘವಸ್ಯ ॥ ೬ ॥ ಜೀವಂಸ್ತು ರಾಮಸ್ಯ ನಮೋಕ್ಷ್ಯಸೇ ತ್ವಂ ಗುಪ್ತಃ ಸವಿತ್ರಾಽಪ್ಯಥವಾ ಮರುದ್ಭಿಃ । ನವಾಸವಸ್ಯಾಂಕಗತೋ ನಮೃತ್ಯೋ ರ್ನಭೋ ನಪಾತಾಳಮನುಪ್ರವಿಷ್ಟಃ" ॥ ೭ ॥ ನಿಶಮ್ಯ

ಬಿಡಲ್ಪಟ್ಟ, ಬಾಣಾಃ - ಬಾಣಗಳು, ರಾಕ್ಷಸಪುಂಗವಾನಾಂ - ರಾಕ್ಷಸಶ್ರೇಷ್ಠರ, ಶಿರಾಂಸಿ - ಮಂಡೆಗಳನ್ನು, ಯಾವತ್ - ಎಷ್ಟರೊಳಗೆ, ನಗೃಹ್ಣಂತಿ - ಗ್ರಹಿಸುವದಿಲ್ಲವೋ, ತಾವತ್ - ಅಷ್ಟರೊಳಗಾಗಿ, ಮೈಥಿಲೀ - ಸೀತಾದೇವಿಯು, ದಾಶರಥಾಯ - ಶ್ರೀರಾಮನಿಗೆ, ಪ್ರದೀಯತಾಂ - ಕೊಡಲ್ಪಡಲಿ. ॥೪॥ ಹೇ ಪ್ರಹಸ್ತ - ಎಲೈ ಪ್ರಹಸ್ತನೇ, ರಾಘ....ಕ್ತಾಃ - ಶ್ರೀರಾಮನಿಂದ ಬಿಡಲ್ಪಟ್ಟ, ಪ್ರಾಣಾಂತಿಕಾಃ - ಪ್ರಾಣಾಂತಕರಗಳಾದ, ಅಶ....ಗಾಃ - ಸಿಡಿಲಿಗೆ ಸಮಾನವಾದ ವೇಗವುಳ್ಳ, ಶಿತಾಃ - ತೀಕ್ಷ್ಣಗಳಾದ, ಶರಾಃ - ಬಾಣಗಳು, ತೇ - ನಿನ್ನ, ಕಾಯಂತಾವತ್ - ಶರೀರವನ್ನಾದರೆ, ಭಿತ್ವಾ - ಭೇದಿಸಿ, ನಪ್ರವಿಂಶತಿ - ಪ್ರವೇಶಿಸಲಿಲ್ಲ. ತೇನೈವ - ಅದರಿಂದಲೇ, ತ್ವಂ - ನೀನು, ವಿಕತ್ಥಸೇ - ಆತ್ಮಶ್ಲಾಘನೆಯ ಮಾತುಗಳನ್ನು ಹೇಳಿಕೊಳ್ಳುತ್ತಿರುವೆ. ॥೫॥ ಕುಂಭಕರ್ಣೇಂದ್ರಜಿತೌ - ಕುಂಭಕರ್ಣನು ಮತ್ತು ಇಂದ್ರಜಿತ್ತು ಇವರೀರ್ವರೂ, ಯುಧಿ - ಕಾಳೆಗದಲ್ಲಿ, ರಾಘವಸ್ಯ - ಶ್ರೀರಾಮನ, ಪುರತಃ - ಮುಂದುಗಡೆ, ಸ್ಥಾತುಂ - ನಿಲ್ಲುವದಕ್ಕೆ, ನಶಕ್ತೌ - ಸಮರ್ಥರಲ್ಲವು. ತಥಾ - ಹಾಗೆಯೇ, ರಾಜಾ - ರಾವಣನು, ನ - ಸಮರ್ಥನಲ್ಲವು, ಮಹಾ....ವಾ - ಮಹಾಪಾರ್ಶ್ವ ಮಹೋದರರಾದರೂ, ನಿಕುಂಭಕುಂಭೌಚ - ನಿಕುಂಭ, ಕುಂಭರೂ, ಅತಿಕಾಯಶ್ಚ - ಅತಿಕಾಯನೂ, ನಶಕ್ತಾಃ - ಸಮರ್ಥರಲ್ಲವು. ॥೬॥ ತ್ವಂ - ನೀನು, ಸವಿತ್ರಾಪಿ-ಸೂರ್ಯನಿಂದಲಾದರೂ, ಅಥವಾ, ಮರುದ್ಭಿಃ-ದೇವರ್ಕಳಿಂದಲಾದರೂ, ಗುಪ್ತಃ-ಸಂರಕ್ಷಿಸಲ್ಪಟ್ಟವನಾದರೂ, ರಾಮಸ್ಯ - ಶ್ರೀರಾಮನ ದೆಸೆಯಿಂದ, ಜೀವಂಸ್ತು - ಬದುಕಿದವನಾಗಿ, ನಮೋಕ್ಷಸೇ - ಬಿಡಲ್ಪಡಲಾರೆ, ವಾಸವಸ್ಯ - ದೇವೇಂದ್ರನ, ಅಂಕಗತಃ - ತೊಡೆಯನ್ನು ಹೊಂದಿದವನಾದರೂ, ನಮೋಕ್ಷಸೇ - ಬಿಡಲ್ಪಡಲಾರೆ, ಮೃತ್ಯೋಃ - ಯಮಧರ್ಮರಾಯನ, ಅಂಕಗತೋಪಿ -

ಪ್ರಯೋಗಿಸಲ್ಪಡುವುವೂ ಆದ ಕೂರಂಬುಗಳು ರಾಕ್ಷಸೋತ್ತಮರ ತಲೆಗಳನ್ನು ತರಿಯುವುದಕ್ಕೆ ಮೊದಲೇ ಸೀತಾದೇವಿಯನ್ನು ಶ್ರೀರಾಮನಿಗೆ ಒಪ್ಪಿಸಿಬಿಡು. ಎಲೈ ಪ್ರಹಸ್ತನೇ! ಪ್ರಾಣಾಂತಕವಾಗಿ ಸಿಡಿಲಿಗೆ ಸಮಾನವಾದ ವೇಗವುಳ್ಳ ಆ ರಾಘವನ ಬಾಣಗಳು ನಿನ್ನ ದೇಹವನ್ನು ಹೊಕ್ಕು ಭೇದಿಸಿಲ್ಲ. ಆದುದರಿಂದಲೇ ನೀನೀರೀತಿ ಆತ್ಮಶ್ಲಾಘನೆ ಮಾಡಿಕೊಳ್ಳುತ್ತಿರುವೆ! ॥ ೧-೫ ॥ ಅಯ್ಯಾ! ಕೇಳು, ಕುಂಭಕರ್ಣನಾಗಲಿ, ಇಂದ್ರಜಿತ್ತುವಾಗಲಿ, ರಾಕ್ಷಸೇಶ್ವರನಾದ ರಾವಣನಾಗಲಿ, ಮಹಾಪಾರ್ಶ್ವ, ಮಹೋದರ, ಕುಂಭ, ನಿಕುಂಭ, ಅತಿಕಾಯ, ಮಹಾಕಾಯರಾಗಲಿ, ಯಾರೇ ಆಗಲಿ ಯುದ್ಧದಲ್ಲಿ ಶ್ರೀರಾಮನಿಗೆದುರು ನಿಲ್ಲಲು ಶಕ್ತಿಯುಳ್ಳವರಲ್ಲವು. ಎಲೈ ಪ್ರಹಸ್ತನೇ! ನೀನು ಪ್ರಾಣಗಳೊಡನೆ ಸೂರ್ಯನ ಸಹಾಯವನ್ನು ಪಡೆದಾಗಲಿ, ದೇವತೆಗಳ ಸಹಾಯ ಪಡೆದಾಗಲಿ, ಇಲ್ಲವೇ ದೇವೇಂದ್ರನ ಸಹಾಯವನ್ನೇ ಪಡೆದಾಗಲಿ, ಸಾಕ್ಷಾನ್ಮೃತ್ಯುದೇವತೆಯ ಸಹಾಯವನ್ನೇ ಪಡೆದಾಗಲಿ ಅಂತರಿಕ್ಷಕ್ಕೆ

ವಾಕ್ಯಂತು ವಿಭೀಷಣಸ್ಯ ತತಃ ಪ್ರಹಸ್ತೋ ವಚನಂ ಬಭಾಷೇ | " ನನೋ ಭಯಂ ವಿದ್ಮ ನದೈವತೇಭ್ಯೋ ನದಾನವೇಭ್ಯೋ ಹ್ಯಥವಾ ಕುತಶ್ಚಿತ್ ||೮|| ನಯಕ್ಷಗಂಧರ್ವ ಮಹೋರಗೇಭ್ಯೋ ಭಯಂ ನಸಂಖ್ಯೇ ಪತ ¶ ಗೋತ್ತಮೇಭ್ಯಃ | ಳ ಕಥನ್ನು ರಾಮಾದ್ಭವಿತಾ ಭಯಂ ನೋ ನರೇಂದ್ರಪುತ್ರಾತ್ಸಮರೇ ಕದಾಚಿತ್ " ||೯|| ಪ್ರಹಸ್ತವಾಕ್ಯಂ ತ್ವಹಿತಂ ನಿಶಮ್ಯ ವಿಭೀಷಣೋ ರಾಜಹಿತಾನುಕಾಂಕ್ಷೀ | ತತೋ ಮಹಾತ್ಮಾ ವಚನಂ ಬಭಾಷೇ ಧರ್ಮಾರ್ಥಕಾಮೇಷು ನಿವಿಷ್ಟಬುದ್ಧಿಃ ||೧೦|| ಪ್ರಹಸ್ತ

ತೊಡೆಯನ್ನು ಹೊಂದಿದವನಾದರೂ, ನ - ಬಿಡಲ್ಪಡಲಾರೆ, ನಭಃ - ಅಂತರಿಕ್ಷವನ್ನು, ಪಾತಾಲಂವಾ-ಪಾತಾಳಲೋಕವನ್ನಾದರೂ, ಅನುಪ್ರವಿಷ್ಟಃ - ಪ್ರವೇಶ ಮಾಡಿದವನಾದರೂ, ನ - ಬಿಡಲ್ಪಡಲಾರೆ. || ೭ || ತತಃ - ಬಳಿಕ, ವಿಭೀಷಣಸ್ಯ - ವಿಭೀಷಣನ, ವಾಕ್ಯಂ - ಮಾತನ್ನು, ನಿಶಮ್ಯ - ಕೇಳಿ, ಪ್ರಹಸ್ತಃ - ಪ್ರಹಸ್ತನು, ವಚನಂ - ಮಾತನ್ನು, ಬಭಾಷೇ - ನುಡಿದನು, ನಃ - ನಮಗೆ, ದೈವತೇಭ್ಯಃ-ದೇವತೆಗಳ ದೆಶೆಯಿಂದ, ಭಯಂ - ಭೀತಿಯನ್ನು, ನವಿದ್ಮ - ತಿಳಿಯಲಾರೆವು, ದಾನವೇಭ್ಯಃ - ದಾನವರಿಂದಲೂ, ನವಿದ್ಮ - ತಿಳಿಯಲಾರೆವು, ಅಥವಾ ಕುತಶ್ಚಿತ್ - ಯಾರಿಂದಲೂ, ನ - ತಿಳಿಯಲಾರೆವು, ಯಕ್ಷ....ಭ್ಯಃ - ಯಕ್ಷ, ಗಂಧರ್ವ, ಸರ್ಪಗಳಿಂದಲೂ, ಸಂಖ್ಯೇ - ಕಾಳಗದಲ್ಲಿ, ಭಯಂ - ಭೀತಿಯನ್ನು, ನ - ತಿಳಿಯಲಾರೆವು, ಪತ....ಶ್ಚ - ಉತ್ತಮವಾದ ಪಕ್ಷಿಗಳ ದೆಸೆಯಿಂದಲೂ, ಭಯಂ-ಭಯವು, ನ - ಇಲ್ಲವು, ನರೇಂದ್ರಪುತ್ರಾತ್ - ಮನುಷ್ಯರಾಜನಿಗೆ ಮಗನಾದ, ರಾಮಾತ್ - ರಾಮನ ದೆಸೆಯಿಂದ, ನಃ - ನಮಗೆ, ಭಯಂ - ಭೀತಿಯು, ಕದಾಚಿತ್ - ಯಾವಾಗಲೂ, ಕಥನ್ನುಭವಿತಾ - ಹೇಗೆತಾನೆ ಉಂಟಾಗುವದು. || ೮-೯ || ರಾಜ....ಕ್ಷೀ - ರಾವಣನಿಗೆ ಹಿತವನ್ನೇ ಕೋರುತ್ತಿರುವ, ವಿಭೀಷಣಃ - ವಿಭೀಷಣನು, ಅಹಿತಂ - ಅನಿಷ್ಟಾಪಾದಕವಾದ, ಪ್ರಹಸ್ತವಾಕ್ಯಂ - ಪ್ರಹಸ್ತನ ಮಾತನ್ನು, ನಿಶಮ್ಯ - ಕೇಳಿ, ತತಃ - ಬಳಿಕ, ಮಹಾತ್ಮಾ - ದೊಡ್ಡ ಮನಸ್ಸುಳ್ಳವನಾದಕಾರಣ, ಸ್ವಾಮಿನಃ - ಅರಸಿಗೆ, ಧರ್ಮಾ....ಷು - ಧರ್ಮದಲ್ಲಿಯೂ, ಅರ್ಥದಲ್ಲಿಯೂ, ಕಾಮದಲ್ಲಿಯೂ, ನಿವಿಷ್ಟ ಬುದ್ಧಿಃ - ಇರಿಸಲ್ಪಟ್ಟ ಬುದ್ಧಿಯುಳ್ಳವನಾಗಿ, ವಚನಂ - ಮಾತನ್ನು, ಬಭಾಷೇ - ಹೇಳಿದನು. ||೧೦|| ಹೇ ಪ್ರಹಸ್ತ - ಎಲೈ ಪ್ರಹಸ್ತನೇ, ರಾಜಾಚ - ಅರಸೂ, ಮಹೋದರಶ್ಚ - ಮಹೋದರನೂ, ತ್ವಂ-ನೀನೂ, ಕುಂಭಕರ್ಣಶ್ಚ - ಕುಂಭಕರ್ಣನೂ, ಯಥಾ - ಹೇಗೆ, ಅರ್ಥಜಾತಂ - ಕಾರ್ಯಗಳ

ಹಾರಿದರೂ, ಪಾತಾಳವನ್ನು ಸೇರಿದರೂ, ಆ ರಾಮನು ನಿನ್ನನ್ನು ಬಿಡನು." ವಿಭೀಷಣ ನಿಂತೆನಲು ಆ ಪ್ರಹಸ್ತನು ಅವನನ್ನು ಕುರಿತು, " ವಿಭೀಷಣಾ ! ದೇವದಾನವರಿಂದಲಾಗಲಿ, ಯಾರಿಂದಲೇ ಆಗಲಿ, ನನಗೆ ಸ್ವಲ್ಪಮಾತ್ರವೂ ಭಯವಿರುವದಿಲ್ಲವು. ಯಕ್ಷ ಗಂಧರ್ವ ಪನ್ನಗರಿಂದಲೂ ರಣರಂಗದಲ್ಲಿ ನನಗೆ ಭಯವೆಂಬುದಿಲ್ಲವು. ಎಂದಮೇಲೆ ಕೇವಲ ಮಾನ ವನೂ, ರಾಜಪುತ್ರನೂ ಆದ ಆ ರಾಮನಿಂದ ನನಗೆ ಭಯವೆಂದರೇನು ? " ಎಂದು ಹೇಳಿದನು. ಆಗ ಪೂಜ್ಯವಾದ ಸ್ವಭಾವವುಳ್ಳವನೂ, ಪ್ರಭುವಾದ ರಾವಣಾಸುರನಿಗೆ ಮೇಲನ್ನು ಕೋರು ವವನೂ ಆದ ವಿಭೀಷಣನು ಆ ಪ್ರಹಸ್ತನ ಮಾತುಗಳನ್ನು ಕೇಳಿ ಧರ್ಮಾರ್ಥಕಾಮುಗಳನ್ನು ಚೆನ್ನಾಗಿ ಆಲೋಚಿಸಿ ಮರಳಿಯೂ ಆ ಪ್ರಹಸ್ತನನ್ನು ಕುರಿತು ಹೇಳುವನು. || ೭-೧೦ || " ಅಯ್ಯಾ ಪ್ರಹಸ್ತನೇ ! ರಾಕ್ಷಸೇಶ್ವರನಾದ ರಾವಣನೂ, ಮಹೋದರನೂ, ನೀನೂ, ಕುಂಭ

¶ " ಉರಗೇಭ್ಯಃ " ತಿ. ಪಾ. ಳ ಈ ಪಾದವು ರಾ. ಪಾಠದಲ್ಲಿ ಅಧಿಕ.

ರಾಜಾಚ ಮಹೋದರಶ್ಚ ತ್ವಂ ಕುಂಭಕರ್ಣಶ್ಚ ಯಥಾರ್ಥಜಾತಂ । ಬ್ರವೀಥ ರಾಮಂ ಪ್ರತಿ ತನ್ನ ಶಕ್ಯಂ ಯಥಾಗತಿಸ್ಸ್ವರ್ಗಮಧರ್ಮಬುದ್ಧೇಃ ॥೧೧॥ ¶ ವಧಸ್ತು ರಾಮಸ್ಯ ಮಯಾತ್ವಯಾವಾ ಪ್ರಹಸ್ತ! ಸರ್ವೈರಪಿ ರಾಕ್ಷಸೈರ್ವಾ । ಕಥಂ ಭವೇದರ್ಥವಿಶಾರದಸ್ಯ ಮಹಾರ್ಣವಂ ತರ್ತುಮಿವಾಪ್ಲವಸ್ಯ ॥೧೨॥ ☨ ಧರ್ಮಪ್ರಧಾನಸ್ಯ ಮಹಾರಥಸ್ಯ ಇಕ್ಷ್ವಾಕುವಂಶಪ್ರಭವಸ್ಯ ರಾಜ್ಞಃ । ಪ್ರಹಸ್ತ! ದೇವಾಶ್ಚ ತಥಾವಿಧಸ್ಯ ಕೃತ್ಯೇಷು

---

ಗುಂಪನ್ನು, ಬ್ರವೀಥ - ಹೇಳುತ್ತೀರೋ, ತಥಾ - ಹಾಗೆಯೇ, ತತ್ - ಆ ಕಾರ್ಯವು, ರಾಮಂಪ್ರತಿ-ಶ್ರೀರಾಮನನ್ನು ಕುರಿತು, ಕರ್ತುಂ - ಮಾಡುವದಕ್ಕೆ, ಅಧರ್ಮಬುದ್ಧೇಃ - ಪಾಪದಲ್ಲಿಯೇ ಬುದ್ಧಿಯುಳ್ಳವನಿಗೆ, ಸ್ವರ್ಗಂ - ಸ್ವರ್ಗವನ್ನು ಕುರಿತು, ಗತಿರ್ಯಥಾ - ಗಮನದಂತೆ, ನಶಕ್ಯಂ-ಸಾಧ್ಯವಲ್ಲವು. ॥ ೧೧ ॥ ಹೇ ಪ್ರಹಸ್ತ - ಎಲೈ ಪ್ರಹಸ್ತನೇ, ಮಯಾವಾ - ನನ್ನಿಂದಲೇ ಆಗಲಿ, ತ್ವಯಾವಾ - ನಿನ್ನಿಂದಲೇ ಆಗಲಿ, ಸರ್ವೈಃ - ಸಮಸ್ತರಾದ, ರಾಕ್ಷಸೈರಪಿವಾ - ರಕ್ಕಸರಿಂದಲೇ ಆಗಲಿ, ಅಪ್ಲವಸ್ಯ - ನಾವೆಯಿಲ್ಲದವನಿಗೆ, ಮಹಾರ್ಣವಂ - ದೊಡ್ಡ ಕಡಲನ್ನು, ತರ್ತುಂ - ದಾಟುವದಕ್ಕೆ, ಶಕ್ತಿರಿವ - ಸಾಮರ್ಥ್ಯವಂತೆ, ಅರ್ಥ....ಸ್ಯ - ಕಾರ್ಯದಲ್ಲಿ ದಕ್ಷನಾದ, ರಾಮಸ್ಯ - ಶ್ರೀರಾಮನ, ವಧಸ್ತು - ಸಂಹಾರವಾದರೇ, ಕಥಂಭವೇತ್ - ಹೇಗೆತಾನೆ ಆಗುವದು. ॥೧೨॥ ಹೇ ಪ್ರಹಸ್ತ - ಎಲೈ ಪ್ರಹಸ್ತನೇ-ಧರ್ಮಪ್ರಧಾನಸ್ಯ - ಧರ್ಮವೇ ಮುಖ್ಯವಾಗುಳ್ಳ, ಮಹಾರಥಸ್ಯ - ಯುದ್ಧದಲ್ಲಿ ತನ್ನನ್ನೂ, ಸಾರಥಿಯನ್ನೂ, ಕುದುರೆಗಳನ್ನೂ ಸಂರಕ್ಷಣೆ ಮಾಡಿಕೊಂಡು ಯುದ್ಧ ಮಾಡತಕ್ಕ ಸಾಮರ್ಥ್ಯವುಳ್ಳ, ಇಕ್ಷ್ವ....ಸ್ಯ - ಇಕ್ಷ್ವಕುಕುಲದಲ್ಲಿ ಹುಟ್ಟಿದ್ದ, ತಥಾವಿಧಸ್ಯ - ಅಂಥವನಾದ, ಶಕ್ತಸ್ಯ - ಸಮರ್ಥ

---

ಕರ್ಣನೂ ಯೋಚಿಸುತ್ತಿರುವ ಈ ಕಾರ್ಯವು ಅಧರ್ಮದಲ್ಲಿ ಹಿತವುಳ್ಳಾತನಿಗೆ ಸ್ವರ್ಗಮನವು ಸಿದ್ಧಿಸದಂತೆ, ಶ್ರೀರಾಮನ ವಿಷಯದಲ್ಲಿ ಯಾವ ವಿಧದಲ್ಲಿಯೂ ಪ್ರಯೋಜನಕ್ಕೆ ಬರುವುದಿಲ್ಲವು. ಪ್ರಹಸ್ತಾ! ತೆಪ್ಪವು ಕೂಡ ಇಲ್ಲದವನು ಸಮುದ್ರವನ್ನು ದಾಟಲಶಕ್ಯವಾಗುವಂತೆ, ನಿನಗಾಗಲಿ, ನನಗಾಗಲಿ, ಸಮಸ್ತ ರಾಕ್ಷಸರಿಗೇ ಆಗಲಿ, ಕರ್ತವ್ಯ ಕಾರ್ಯವನ್ನು ಚೆನ್ನಾಗಿ ಅರಿತಿರುವ ಶ್ರೀರಾಮನನ್ನು ಮಥಿಸುವುದಕ್ಕೆ ಎಷ್ಟುಮಾತ್ರವೂ ಶಕ್ಯವಲ್ಲವು. ಧರ್ಮಾತ್ಮನೂ, ಮಹಾರಥನೂ, ಇಕ್ಷ್ವಾಕುವಂಶೋದ್ಭವನೂ, ಮಹಾ ಸಮರ್ಥನೂ, ಪ್ರಜಾರಂಜಕನೂ ಆದ ಶ್ರೀರಾಮನ ಯುದ್ಧಕಾರ್ಯಕ್ಕೆ ದೇವತೆಗಳೂ ದಿಗ್ಭ್ರಾಂತರಾಗಿ ಹೋಗುವರು. ಬಹು ತೀಕ್ಷ್ಣಗಳಾಗಿಯೂ, ಕೊಂಕಾಗಿ, ರೆಕ್ಕೆಗಳಿಂದ ಕೂಡಿ, ಮಹಾ ವೇಗವುಳ್ಳವುಗಳಾಗಿಯೂ,

---

¶ ಈ ಶ್ಲೋಕದ ವಿಶೇಷಾರ್ಥ:—"ಧರ್ಮಪ್ರಧಾನಸ್ಯ" ಅಪ್ಯಹಂಜೀವಿತಂಜಹ್ಯಾಂ ಎಂಬಂತೆ ಧರ್ಮವನ್ನು ಬಿಟ್ಟು ಉಳಿದ ಪುರುಷಾರ್ಥಗಳಲ್ಲಿ ನಿರುತ್ಸುಕನಾಗಿರುವ, "ಮಹಾರಥಸ್ಯ" "ಆತ್ಮಾನಂ ಸಾರಥಿಂಚಾಶ್ವಾನ್ ರಕ್ಷನ್ ಯುಧ್ಯೇತಯೋ ನರಃ । ಸ ಮಹಾರಥಸಂಜ್ಞಸ್ಯಾದಿತ್ಯಾಹುರ್ನೀತಿ ಕೋವಿದಾಃ—ಯಾವನು ತನ್ನನ್ನೂ, ತನ್ನ ಸಾರಥಿಯನ್ನೂ, ರಥಾಶ್ವಗಳನ್ನೂ ಕಾಪಾಡಿಕೊಂಡು ಯುದ್ಧಮಾಡುವನೋ ಅವನು ಮಹಾರಥನು" ಇಂತಹ ಮಹಾರಥನಾದ, "ಇಕ್ಷ್ವಾಕುವಂಶಪ್ರಭವಸ್ಯ—ಜನ್ಮಸಿದ್ಧವಾದ ಪರಾಕ್ರಮವುಳ್ಳ ರಾಜ್ಞಃ—ಸಮಸ್ತ ಪ್ರಜೆಗಳನ್ನೂ ರಂಜಿಸುವ ಸ್ವಭಾವವುಳ್ಳ, ತಥಾವಿಧಸ್ಯ—ವಿರಾಧ ಕಬಂಧ ವಾಲಿ ಮೊದಲಾದವರನ್ನೊಕ್ಕಲಿಕ್ಕಿದುದರಿಂದ ಈಗಾಗಲೇ ಎಲ್ಲರಿಗೂ ತಿಳಿದಿರುವ ಪರಾಕ್ರಮವೈಭವವುಳ್ಳ, ಶಕ್ತಸ್ಯ - ಕಾರ್ಯದಕ್ಷನಾದ ಆ ರಾಮನ ವಿಷಯದಲ್ಲಿ ದೇವತೆಗಳೂ ಕಿಂಕರ್ತವ್ಯತಾಮೂಢರಾಗುತ್ತಾರೆ. ಎಂದಮೇಲೆ ನಿನ್ನಂತಹನ ಪಾಡೇನು ?

☨ "ರಾಜವ್ಯಸನಾಭಿ ಭೂತಃ" ಇಲ್ಲಿ "ವಾಗ್ದಂಡಯೋಸ್ತುಪೌರುಷ್ಯಮರ್ಥದೂಷಣ ಮೇವಚ । ಪಾನಂ ಸ್ತ್ರೀಮೃಗಯಾದ್ಯೂತಂ ವ್ಯಸನಂ ಸಪ್ತಧಾ ಪ್ರಭೋಃ" ಎಂದು ಕಾಮಂದಕನು ಹೇಳಿರುವಂತೆ, ಮಾತನಾಡುವುದರಲ್ಲಿಯೂ,

ಶಕ್ತಸ್ಯ ಭವಂತಿ ಮೂಢಾಃ || ೧೩ || ತೀಕ್ಷ್ಣಾ ನತಾಮುತ್ತವಕಂಕಪತ್ರಾ ದುರಾಸದಾ ರಾಘವವಿಪ್ರಮುಕ್ತಾಃ | ಭಿತ್ವಾ ಶರೀರಂ ಪ್ರವಿಶಂತಿ ಬಾಣಾಃ ಪ್ರಹಸ್ತ! ತೇ ನೈವ ವಿಕತ್ಥಸೇ ತ್ವಂ || ೧೪ || ನರಾವಣೋ ನಾತಿಬಲಸ್ತ್ರಿಶೀರ್ಷೋ ನಕುಂಭಕರ್ಣೋಽಸ್ಯ ಸುತೋ ನಿಕುಂಭಃ | ನಚೇಂದ್ರಜಿದ್ದಾಶರಥಿಂ ಪ್ರಸೋಢುಂ ತ್ವಂ ವಾ ರಣೇ ಶಕ್ರಸಮಂ ಸಮರ್ಥಾಃ || ೧೫ || ದೇವಾಂತಕೋವಾಪಿ ನರಾಂತಕೋವಾ ತಥಾತಿಕಾಯೋಽತಿರಥೋ ಮಹಾತ್ಮಾ | ಅಕಂಪನಶ್ಚಾದ್ರಿಸಮಾನಸಾರಃ ಸ್ಥಾತುಂ ನಶಕ್ತಾ ಯುಧಿ ರಾಘ

---

ನಾದ, ರಾಜ್ಞಃ - ಅರಸಾದ ಶ್ರೀರಾಮನ, ಕೃತ್ಯೇಷು - ಕಾರ್ಯಗಳಲ್ಲಿ, ದೇವಾಶ್ಚ - ದೇವರ್ಕಳೂ, ಮೂಢಾಃ - ಮೋಹಿತರು, ಭವಂತಿ - ಆಗುತ್ತಾರೆ. || ೧೩ || ಹೇ ಪ್ರಹಸ್ತ - ಎಲೈ ಪ್ರಹಸ್ತನೇ, ರಾಘ....ಕ್ತಾಃ - ಶ್ರೀರಾಮನಿಂದ ಬಿಡಲ್ಪಟ್ಟ, ತೀಕ್ಷ್ಣಾಃ - ಹದವಾದ ತುದಿಗಳುಳ್ಳ, ನತಾಃ - ಋಜುಗಳಾದ, ಕಂಕಪತ್ರಾಃ - ರೆಕ್ಕೆಗಳುಳ್ಳ, ದುರಾಸದಾಃ - ಹೊಂದಲಸಾಧ್ಯಗಳಾದ, ಬಾಣಾಃ - ಬಾಣಗಳು, ತವ - ನಿನ್ನ, ಶರೀರಂ ದೇಹವನ್ನು, ಯತ್ - ಯಾವ ಕಾರಣದ ದೆಸೆಯಿಂದ, ಭಿತ್ವಾ - ಭೇದಿಸಿ, ನಪ್ರತಿಶಂತಿ - ಪ್ರವೇಶಿಸಲಿಲ್ಲವೋ, ತೇನೈವ - ಆ ಕಾರಣದಿಂದಲೇ, ತ್ವಂ - ನೀನು, ವಿಕತ್ಥಸೇ - ಆತ್ಮಶ್ಲಾಘನೆಯನ್ನು ಮಾಡಿಕೊಳ್ಳುತ್ತಿರುವೆ. || ೧೪ || ರಾವಣಃ - ರಾವಣನು, ರಣೇ - ಕಾಳಗದಲ್ಲಿ, ಶಕ್ರಸಮಂ-ದೇವೇಂದ್ರನಿಗೆ ಸಮಾನನಾದ, ದಾಶರಥಿಂ-ಶ್ರೀರಾಮನನ್ನು, ಪ್ರಸೋಢುಂ-ಸಹಿಸುವದಕ್ಕೆ, ನಸಮರ್ಥಃ - ಸಮರ್ಥನಲ್ಲವು, ಅತಿಬಲಃ - ಬಹಳ ಬಲಶಾಲಿಯಾದ, ತ್ರಿಶೀರ್ಷಃ - ತ್ರಿಶಿರಸನು, ನ - ಅಲ್ಲವು, ಕುಂಭಕರ್ಣಃ - ಕುಂಭಕರ್ಣನು, ನ - ಅಲ್ಲವು, ಅಸ್ಯ - ಈ ಕುಂಭಕರ್ಣನ, ಸುತಃ - ಮಗನಾದ, ನಿಕುಂಭಃ - ನಿಕುಂಭನು, ನ - ಅಲ್ಲವು, ಇಂದ್ರಜಿತ್ - ಇಂದ್ರಜಿತ್ತುವು, ನ - ಅಲ್ಲವು, ತ್ವಂವಾ - ನೀನಾದರೂ, ನ - ಅಲ್ಲವು, ಇಮೇ - ಇವರೆಲ್ಲರೂ, ಸಮರ್ಥಾಃ-ಶಕ್ತರು, ನಭವಂತಿ - ಆಗಲಾರರು. || ೧೫ || ದೇವಾಂತಕೋವಾಪಿ - ದೇವಾಂತಕನಾದರೂ, ನರಾಂತಕೋವಾ - ನರಾಂತಕನೇ ಆದರೂ, ತಥಾ - ಹಾಗೆಯೇ, ಮಹಾತ್ಮಾ - ಮಹಾತ್ಮನಾದ, ಅತಿರಥಃ - ಅತಿರಥಿಕನಾದ, ಅತಿಕಾಯೋಪಿ - ದೊಡ್ಡ ಶರೀರವುಳ್ಳ ಅತಿಕಾಯನೂ, ಅದ್ರಿಸಮಾನಸಾರಃ - ಬೆಟ್ಟಕ್ಕೆ ಸಮವಾದ ಬಲವುಳ್ಳ, ಅಕಂಪನಶ್ಚ ಅಕಂಪನನೂ, ಇಮೇ - ಇವರುಗಳು, ರಾಘವಸ್ಯ - ಶ್ರೀರಾಮನ, ಯುಧಿ - ಕಾಳಗದಲ್ಲಿ, ಸ್ಥಾತುಂ - ನಿಲ್ಲುವದಕ್ಕೆ, ನಶಕ್ತಾಃ - ಸಮರ್ಥರಲ್ಲವು. || ೧೬ ||

---

ಎದುರಿಸಲಸದಳವಾಗಿಯೂ ಇರುವ ಆ ರಾಮಮುಕ್ತಗಳಾದ ಬಾಣಗಳು ನಿನ್ನ ದೇಹವನ್ನು ಹೊಕ್ಕಿರುವುದಿಲ್ಲವು. ಆದುದರಿಂದಲೇ ಈ ರೀತಿ ಆತ್ಮಶ್ಲಾಘನೆ ಮಾಡಿಕೊಳ್ಳುತ್ತಿರುವೆ. ಎಲೈ ಪ್ರಹಸ್ತನೇ! ಮಹಾ ಬಲನಾದ ರಾವಣಾಸುರನಾಗಲಿ, ಬಲಿಷ್ಠನಾದ ತ್ರಿಶೀರ್ಷನಾಗಲಿ, ಕುಂಭಕರ್ಣನಾಗಲಿ, ಇವನ ಮಗನಾದ ಕುಂಭನಾಗಲಿ, ರಾವಣಿಯಾದ ಇಂದ್ರಜಿತ್ತುವಾಗಲಿ, ನೀನೇ ಆಗಲಿ ಯುದ್ಧದಲ್ಲಿ ನಿಂತು ದೇವೇಂದ್ರನಿಗೆ ಸಮಾನನಾದ ಶ್ರೀರಾಮನನ್ನೆದುರಿಸಲು ಸಮರ್ಥರಲ್ಲವು. || ೧೧–೧೫ || ಇಷ್ಟೆಯಲ್ಲದೆ ದೇವಾಂತಕನಾಗಲಿ, ನರಾಂತಕನಾಗಲಿ, ಅತಿರಥನಾದ ಅತಿಕಾಯನಾಗಲಿ, ಪರ್ವತಸಮಾನವಾದ ಬಲವುಳ್ಳ ಅಕಂಪನನಾಗಲಿ ಯುದ್ಧದಲ್ಲಿ ಶ್ರೀರಾಮನಿಗೆ ಎದುರು ನಿಲ್ಲಲು ಸಮರ್ಥರಾಗಲಾರರು.

---

ದಂಡಿಸುವುದರಲ್ಲಿಯೂ ಕಾಠಿನ್ಯವಿರುವಿಕೆ, ಅರ್ಥದೂಷಣ, ಕುಡಿತ, ಹೆಂಗುಸು, ಬೇಟೆ, ಜೂಜು ಇವು ಸಪ್ತವ್ಯಸನಗಳೆಂದು ಹೇಳಲ್ಪಡುತ್ತವೆ.

ವಸ್ಯ ॥ ೧೬ ॥ ಅಯಂಹಿ ರಾಜಾ ವ್ಯಸನಾಭಿಭೂತೋ ಮಿತ್ರೈರಮಿತ್ರಪ್ರತಿಮೈರ್ಭವದ್ಭಿಃ । ಅನ್ವಾಸ್ಯತೇ ರಾಕ್ಷಸನಾಶನಾರ್ಥೇ ತೀಕ್ಷ್ಣಃ ಪ್ರಕೃತ್ಯಾಹ್ಯಸಮೀಕ್ಷ್ಯಕಾರೀ ॥ ೧೭ ॥ ಅನಂತಭೋಗೇನ ಸಹಸ್ರಮೂರ್ಧ್ನಾ ನಾಗೇನ ಭೀಮೇನ ಮಹಾಬಲೇನ । ಬಲಾತ್ಪರಿಕ್ಷಿಪ್ತಮಿಮಂ ಭವಂತೋ ರಾಜಾನಮುತ್‌ಕ್ಷಿಪ್ಯ ವಿಮೋಚಯಂತು ॥ ೧೮ ॥ ಯಾವನ್ನ ಕೇಶಗ್ರಹಣಂ ಸುಹೃದ್ಭಿಸ್ಸಮೇತ್ಯ ಸರ್ವೈಃ ಪರಿಪೂರ್ಣಕಾಮೈಃ । ನಿಗೃಹ್ಯ ರಾಜಾ ಪರಿರಕ್ಷಿತವ್ಯೋ ಭೂತೈರ್ಯಥಾಭೀಮಬಲೈರ್ಗೃಹೀತಃ ॥ ೧೯ ॥ ¶ ಸಂಹಾ

ಅಯಂರಾಜಾ- ಈ ಅರಸಾದ ರಾವಣನು, ವ್ಯಸ....ತಃ- ಸಪ್ತವ್ಯಸನಗಳಿಂದ ತಿರಸ್ಕೃತನು, ಪ್ರಕೃತ್ಯಾ- ಸ್ವಭಾವದಿಂದಲೇ, ತೀಕ್ಷ್ಣಃ - ಕ್ರೂರನು, ಅಸಮೀಕ್ಷ್ಯಕಾರೀ - ಯುಕ್ತಾಯುಕ್ತ ವಿಮರ್ಶೆ ಮಾಡದೆ ಕೆಲಸ ಮಾಡುವುದರಿಂದ, ಅಮಿ....ಮೈಃ - ಶತ್ರುಗಳಿಗೆ ಸಮಾನರಾದ, ಮಿತ್ರೈಃ - ಬರಿಮಾತಿನಿಂದ ಮಾತ್ರ ಮಿತ್ರರಾದ, ಭವದ್ಭಿಃ - ನಿಮ್ಮಿಂದ, ಅನ್ವಾಸ್ಯತೇ - ಅನುಸರಿಸಲ್ಪಡುತ್ತಾನೆ. ||೧೭|| ಅನಂತಭೋಗೇನ - ಅಪಾರವಾದ ಶರೀರವುಳ್ಳ, ಸಹ....ರ್ಧ್ನಾ - ಸಾವಿರ ಹೆಡೆಗಳುಳ್ಳ, ಭೀಮೇನ - ಭಯಂಕರನಾದ, ಮಹಾಬಲೇನ - ಬಹಳ ಬಲವಂತನಾದ, ನಾಗೇನ - ಆದಿಶೇಷನೆಂಬ ಸರ್ಪದಿಂದ, ಬಲಾತ್ - ಬಲಾತ್ಕಾರದಿಂದ, ಪರಿಕ್ಷಿಪ್ತಂ - ಸುತ್ತಲ್ಪಟ್ಟ, ಇಮಂ - ಈ, ರಾಜಾನಂ - ಅರಸನನ್ನು, ಭವಂತಃ - ನೀವು, ಉತ್‌ಕ್ಷಿಪ್ಯ - ಎತ್ತಿ, ವಿಮೋಚಯಂತು - ಬಿಡಿಸಿರಿ. ||೧೮|| ಪರಿಪೂರ್ಣಕಾಮಃ- ರಾಜನ ದೆಸೆಯಿಂದ ಸಂಪೂರ್ಣವಾದ ಇಷ್ಟಗಳುಳ್ಳ, ಸರ್ವೈಃ - ಸಮಸ್ತರಾದ, ಸುಹೃದ್ಭಿಃ - ಸ್ನೇಹಿತರಿಂದ, ಸಮೇತ್ಯ - ಗುಂಪುಸೇರಿ, ರಾಜಾ - ಅರಸು, ನಿಗೃಹ್ಯ - ನಿಗ್ರಹಿಸಿ, ಭೀಮಬಲೈಃ - ಭಯಂಕರವಾದ ಶಕ್ತಿಯುಳ್ಳ, ಭೂತೈಃ - ಪಿಶಾಚಗಳಿಂದ, ಗೃಹೀತಃ - ಗ್ರಹಿಸಲ್ಪಟ್ಟ ಪುರುಷನಂತೆ, ಯಾ....ಣಂ - ಜುಂಡಿಕೆಯನ್ನು ಹಿಡಿದಾದರೂ, ನಿಗೃಹ್ಯ - ನಿಗ್ರಹಿಸಿ, ಪರಿರಕ್ಷಿತವ್ಯಃ - ಸಂರಕ್ಷಣೆ ಮಾಡಲ್ಪಡತಕ್ಕವನು. ||೧೯|| ಸಂಹಾರಿಣಾ - ವಿನಾಶಕರನಾದ, ರಾಘವಸಾಗರೇಣ - ಲಕ್ಷ್ಮಣನೆಂಬ ಕಡಲಿನಿಂದ, ಪ್ರಚ್ಛಾದ್ಯಮಾನಃ - ಆಚ್ಛಾದನ ಮಾಡಲ್ಪಟ್ಟ, ಕಾಕು....ಖೇ - ಶ್ರೀರಾಮನೆಂಬ ಬಡ

ಎಲೈ ಪ್ರಹಸ್ತನೇ ! ಕೇಳು, ಆಲೋಚಿಸದೆ ಕೆಲಸಗಳನ್ನು ಮಾಡುವವನೂ ಸ್ವಭಾವದಿಂದಲೇ ಅತಿ ಕ್ರೂರನೂ, ಸಪ್ತವ್ಯಸನಗಳಲ್ಲಿ ಸಿಲುಕಿದವನೂ ಆದ ಈ ರಾವಣನು ರಾಕ್ಷಸವಿನಾಶಕರವಾದ ಕಾರ್ಯವನ್ನಾರಂಭಿಸಿರುವನು. ಹೀಗಿರುವಾಗ, ಮಿತ್ರರೂಪದಿಂದಿರುವ ಶತ್ರುಗಳಾದ ನೀವೆಲ್ಲರೂ ಆತನ ಪಾಪಕಾರ್ಯದಲ್ಲಿ ಸಹಾಯಕರಾಗಿರುವಿರಿ. ತುದಿಯಿಲ್ಲದಿರುವ ದೇಹವುಳ್ಳುದೂ, ಸಾವಿರ ತಲೆಗಳುಳ್ಳುದೂ, ಮಹಾ ಭಯಂಕರವಾದುದೂ, ಮಹಾ ಬಲಿಷ್ಠವಾದುದೂ ಆದ ಶ್ರೀರಾಮವೈರವೆಂಬ ಮಹಾ ಸರ್ಪವು ಮಹಾ ಪರಾಕ್ರಮಶಾಲಿಯಾದ ರಾವಣಾಸುರನ ದೇಹವನ್ನು ಸುತ್ತಿಕೊಂಡಿರುವುದು. ನೀವೆಲ್ಲರೂ ಈತನನ್ನು ಇಂತಹ ವಿಪತ್ತಿನಿಂದ ಉದ್ಧಾರಮಾಡಿರಿ. ರಾಜನಾದವನು ಒಂದುವೇಳೆ ದುರ್ಮಾರ್ಗಕ್ಕೆ ಬಿದ್ದರೂ, ಆ ರಾಜನಿಂದ ಸಮಸ್ತ ಸುಖಗಳನ್ನು ಹೊಂದಿ ನೆರವೇರಿದ ಸಮಸ್ತ ಕೋರಿಕೆಗಳೂ ಉಳ್ಳ ಸ್ನೇಹಿತರೆಲ್ಲರೂ ಒಟ್ಟುಗೂಡಿ, ಮಹಾ ಭಯಂಕರ ಭೂತಗಳಿಂದ ಸುತ್ತುವರಿದ ಮಾನವನನ್ನು ಹೇಗೋ ಹಾಗೆ, ಆ ರಾಜನನ್ನು ಜುಟ್ಟು ಹಿಡಿದೆಳೆದಾದರೂ ರಕ್ಷಿಸಬೇಕು. ಅಯ್ಯಾ ಪ್ರಹಸ್ತನೇ ! ವಿಶೇಷ ಜಲದಿಂದೊಪ್ಪುತ್ತಿರುವ ಲಕ್ಷ್ಮಣನೆಂಬ ಮಹಾ ಸಮುದ್ರದಲ್ಲಿ

¶ "ಸುವಾರಿಣಾಂ" ಶಿ. ಪಾ.

ರಿಣಾ ರಾಘವಸಾಗರೇಣ ಪ್ರಚ್ಛಾದ್ಯಮಾನಸ್ತರಸಾ ಭವದ್ಭಿಃ । ಯುಕ್ತಸ್ತ್ವಯಂ ತಾರಯಿತುಂ ಸಮೇತ್ಯ ಕಾಕುತ್ಸ್ಥಪಾತಾಳಮುಖೇ ಪತನ್ ಸಃ ॥೨೦॥ ಇದಂ ಪುರಸ್ಯಾಽಸ್ಯ ಸರಾಕ್ಷಸಸ್ಯ ರಾಜ್ಞಶ್ಚ ಪಥ್ಯಂ ಸಸುಹೃಜ್ಜನಸ್ಯ । ಸಮ್ಯಗ್ಘಿ ವಾಕ್ಯಂ ಸ್ವಮತಂ ಬ್ರವೀಮಿ ನರೇಂದ್ರಪುತ್ರಾಯ ದದಾಮ ಪತ್ನೀಂ ॥ ೨೧ ॥

ಪರಸ್ಯ ವೀರ್ಯಂ ಸ್ವಬಲಂಚ ಬುದ್ಧ್ವಾ
ಸ್ಥಾನಂ ಕ್ಷಯಂಚೈವ ತಥೈವ ವೃದ್ಧಿಂ ।
ತಥಾ ಸ್ವಪಕ್ಷೇಽಪ್ಯನುಮೃಶ್ಯ ಬುದ್ಧ್ಯಾ
ವದೇತ್ ಕ್ಷಮಂ ಸ್ವಾಮಿಹಿತಂ ಚ ಮಂತ್ರೀ" ॥ ೨೨ ॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಚತುರ್ದಶಸ್ಸರ್ಗಃ

---

ಬಾಗ್ನಿಯ ಮುಖದಲ್ಲಿ, ಪತನ್-ಬೀಳುತ್ತಿರುವ, ಸೋಽಯಂ - ಆ ಈ ರಾವಣನು, ಭವದ್ಭಿಃ - ನಿಮ್ಮಿಂದ, ಸಮೇತ್ಯ - ಗುಂಪುಸೇರಿ, ತರಸಾ - ಬಲಾತ್ಕಾರದಿಂದ, ತಾರಯಿತುಂ - ಉದ್ಧಾರ ಮಾಡುವದಕ್ಕೆ, ಶಕ್ಯಃ - ಯೋಗ್ಯನು. ॥ ೨೦ ॥ ಸರಾಕ್ಷಸಸ್ಯ - ರಕ್ಕಸರಿಂದೊಡಗೂಡಿದ, ಇದಂ ಪುರಸ್ಯ - ಈ ಪಟ್ಟಣಕ್ಕೂ, ಸಸು....ಸ್ಯ - ಸ್ನೇಹಿತರಿಂದೊಡಗೂಡಿದ, ರಾಜ್ಞಃ - ಅರಸಿಗೂ, ಸಮ್ಯಕ್ - ಚನ್ನಾಗಿ, ಪಥ್ಯಂ - ಹಿತಕರವಾದ, ಸುಮತಂ - ನಿನಗೆ ಇಷ್ಟವಾದ, ವಾಕ್ಯಂ - ಮಾತನ್ನು, ಬ್ರವೀಮಿ - ಹೇಳುವೆನು, ನರೇಂದ್ರಪುತ್ರಾಯ - ಶ್ರೀರಾಮನಿಗೆ, ಪತ್ನೀಂ - ಹೆಂಡತಿಯಾದ ಸೀತಾದೇವಿಯನ್ನು, ದದಾಮ - ಕೊಟ್ಟುಬಿಡೋಣ. ॥೨೧॥ ಮಂತ್ರೀ - ಮಂತ್ರಿಯು, ಪರಸ್ಯ - ಶತ್ರುವಿನ, ವೀರ್ಯಂ - ಬಲವನ್ನು, ಸ್ವಬಲಂಚ - ಐಶ್ವರ್ಯ ಸಾಮ್ಯವನ್ನೂ ಬಲಸಾಮ್ಯವನ್ನೂ, ಕ್ಷಯಂಚ - ತನ್ನ ಬಲಕ್ಷಯವನ್ನೂ ಹಾಗೆಯೇ, ವೃದ್ಧಿಂಚ - ತನ್ನ ಬಲವೃದ್ಧಿಯನ್ನೂ, ತಥಾ - ಹಾಗೆಯೇ, ಸ್ವಪಕ್ಷೇಪಿ- ತನ್ನ ಪಕ್ಷದಲ್ಲಿಯೂ, ಪರಪಕ್ಷದಲ್ಲಿಯೂ, ಬುದ್ಧ್ಯಾ - ಬುದ್ಧಿಯಿಂದ, ಅನುಮೃಶ್ಯ - ವಿಮರ್ಶೆಮಾಡಿ, ಕ್ಷಮಂ - ಯುಕ್ತವನ್ನೂ, ಸ್ವಾಮಿಹಿತಂಚ - ರಾಜನಿಗೆ ಶ್ರೇಯಸ್ಕರವಾದ ಮಾತನ್ನು, ವದೇತ್ - ಹೇಳತಕ್ಕದ್ದು. ॥ ೨೨ ॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಚತುರ್ದಶಸ್ಸರ್ಗಃ.

---

ಬಿದ್ದಿರುವವನೂ, ಶ್ರೀರಾಮನೆಂಬ ಪಾತಾಳದಲ್ಲಿ ಬೀಳಲು ನಿಶ್ಚಯಿಸಿರುವವನೂ ಆದ ಈ ರಾವಣಾಸುರನನ್ನು ನೀವೆಲ್ಲರೂ ಒಟ್ಟುಗೂಡಿ ಬಹು ಜಾಗ್ರತೆಯಾಗಿ ಕಡೆಹಾಯಿಸಬೇಕು. ॥ ೧೬–೧೯ ॥ ನಾನು ಈಗ ಹೇಳಿದಂತೆ ಮಾಡಿದರೆ ಈ ಲಂಕಾನಗರಕ್ಕೂ ಸಮಸ್ತ ಬಂಧುಮಿತ್ರರೊಡಗೂಡಿದ ನಮ್ಮ ಪ್ರಭುವಿಗೂ ಶ್ರೇಯಸ್ಸನ್ನುಂಟಾಗುವುದು. ನನಗೆ ತೋರಿದ ಮಾತನ್ನು ಹೇಳುವೆನು; ಕೇಳಿರಿ, ರಾಜಪುತ್ರನಾದ ಶ್ರೀರಾಮನಿಗೆ ಆತನ ಭಾರ್ಯೆಯಾದ ಸೀತಾದೇವಿಯನ್ನೊಪ್ಪಿಸಿಬಿಡೋಣ. ಇನ್ನೊಂದು ವಿಶೇಷವೇನೆಂದರೆ, ಮಂತ್ರಿಯಾದವನು ಶತ್ರುವಿನ ಬಲವನ್ನೂ, ತಮ್ಮ ಬಲವನ್ನೂ ಚೆನ್ನಾಗಿ ಅರಿತುಕೊಂಡು ಶತ್ರುವಿನ ಮತ್ತು ತನ್ನ ವೃದ್ಧಿಕ್ಷಯಗಳನ್ನು ತಿಳಿದು ಸೂಕ್ತವಾದ ಮಾರ್ಗದಿಂದ ಪ್ರಭುವಾದವನನ್ನು ಶ್ರೇಯೋಮಾರ್ಗಕ್ಕೊಯ್ಯುವ ರೀತಿ ಕಾರ್ಯಗಳನ್ನು ಮಾಡಬೇಕು." ॥ ೧೭–೨೨ ॥

ಇಂತಿದು ವಿಭೀಷಣಕೃತ ಹಿತೋಪದೇಶವೆಂಬ ಹದಿನಾಲ್ಕನೆಯ ಸರ್ಗವು ಸಮಾಪ್ತವಾದುದು.

# ಯುದ್ಧಕಾಂಡೇ ಪಂಚದಶಸ್ಸರ್ಗಃ

ಬೃಹಸ್ಪತೇಸ್ತುಲ್ಯಮತೇರ್ವಚಸ್ತನ್ನಿಶಮ್ಯ ಯತ್ನೇನ ವಿಭೀಷಣಸ್ಯ । ತತೋ ಮಹಾತ್ಮಾ ವಚನಂ ಬಭಾಷೇ ತತ್ರೇಂದ್ರಜಿನ್ನೈರ್ಋತಯೋಧಮುಖ್ಯಃ ॥ ೧ ॥ “ಕಿನ್ನಾಮ ತೇ ತಾತ! ಕನಿಷ್ಠವಾಕ್ಯಮನರ್ಥಕಂ ಚೈವ ಸುಭೀತವಚ್ಚ । ಅಸ್ಮಿನ್ ಕುಲೇ ಯೋಽಪಿ ಭವೇನ್ನಜಾತಸ್ಸೋಽಪೀದೃಶಂ ನೈವ ವದೇನ್ನಕುರ್ಯಾತ್ ॥ ೨ ॥ ಸತ್ತ್ವೇನ ವೀರ್ಯೇಣ ಪರಾಕ್ರಮೇಣ ಶೌರ್ಯೇಣ ಧೈರ್ಯೇಣ ಚ ತೇಜಸಾ ಚ । ಏಕಃ ಕುಲೇಽಸ್ಮಿನ್ ಪುರುಷೋ ವಿಮುಕ್ತೋ ವಿಭೀಷಣಸ್ತಾತ! ಕನಿಷ್ಠ ಏಷಃ ॥ ೩ ॥ ಕಿನ್ನಾಮ

---

ಬೃಹಸ್ಪತೇಃ - ಬೃಹಸ್ಪತಿಗೆ, ತುಲ್ಯಮತೇಃ - ಸಮಾನವಾದ ಬುದ್ಧಿಯುಳ್ಳ, ವಿಭೀಷಣಸ್ಯ - ವಿಭೀಷಣನ, ತದ್ವಚಃ - ಆ ಮಾತನ್ನು, ಯತ್ನೇನ - ಪ್ರಯತ್ನದಿಂದ, ನಿಶಮ್ಯ - ಕೇಳಿ, ತತಃ - ಬಳಿಕ, ತತ್ರ - ಆ ರಾಕ್ಷಸರ ಸಭೆಯಲ್ಲಿ, ಮಹಾತ್ಮಾ - ಮಹಾ ಪ್ರಭಾವವಂತನಾದ, ನೈಋ....ಖ್ಯಃ - ರಾಕ್ಷಸಸೈನಿಕರಲ್ಲಿ ಮುಖ್ಯನಾದ, ಇಂದ್ರಜಿತ್ - ಇಂದ್ರಜಿತ್ತುವು, ವಚನಂ - ಮಾತನ್ನು, ಬಭಾಷೇ - ನುಡಿದನು. ॥೧॥ ಹೇ ತಾತ - ಎಲೈ ತಂದೆಯೇ, ತೇ ಕನಿಷ್ಠವಾಕ್ಯಂ - ನಿನಗೆ ತಮ್ಮನಾದ ವಿಭೀಷಣನ ಮಾತು, ಅನರ್ಥಕಂ - ಅರ್ಥವಿಲ್ಲದುದು, ಸುಭೀತವಚ್ಚ - ಬಹಳ ಭಯದಿಂದ ಆಡಿದ್ದು, ಕಿನ್ನಾಮ - ನಿಂದನೀಯವು, ಅಸ್ಮಿನ್ ಕುಲೇ - ಈ ಪೌಲಸ್ತ್ಯವಂಶದಲ್ಲಿ, ಯಃ - ಯಾವವನು, ಜಾತಃ - ಹುಟ್ಟಿದವನು, ನಭವೇತ್ - ಆಗಲಾರನೋ, ಸೋಽಪಿ - ಅಂಥವನೂ, ಈದೃಶಂ - ಇಂತಹ ಮಾತನ್ನು, ನವದೇತ್ - ಹೇಳಲಾರನು, ನಕುರ್ಯಾತ್ - ಮಾಡಲಾರನು. ॥ ೨ ॥ ಹೇ ತಾತ - ಎಲೈ ತಂದೆಯೇ, ಅಸ್ಮಿನ್ ಕುಲೇ - ಈ ಕುಲದಲ್ಲಿ, ಕನಿಷ್ಠಃ - ಕನಿಷ್ಠನಾದ, ಏಷಃವಿಭೀಷಣಃ - ಈ ವಿಭೀಷಣನು, ಏಕಃ ಪುರುಷಃ - ಒಬ್ಬ ಪುರುಷನು ಮಾತ್ರವೇ, ಸತ್ತ್ವೇನ - ಬಲದಿಂದಲೂ, ವೀರ್ಯೇಣ - ಸಾಮರ್ಥ್ಯದಿಂದಲೂ, ಪರಾಕ್ರಮೇಣ-ಪರಾಕ್ರಮದಿಂದಲೂ, ಶೌರ್ಯೇಣ-ಶೌರ್ಯದಿಂದಲೂ, ಧೈರ್ಯೇಣ - ಧೈರ್ಯದಿಂದಲೂ, ತೇಜಸಾಚ - ಅಂತಸ್ಸಾರದಿಂದಲೂ, ವಿಮುಕ್ತಃ - ಬಿಡಲ್ಪಟ್ಟನು. ॥ ೩ ॥ ಹೇ ಭೀರು - ಎಲೈ ಭಯಶೀಲನೇ, ಹೇ ರಾಕ್ಷಸ - ಎಲೈ ರಾಕ್ಷಸನೇ, ಅಸ್ಮಾಕಂ - ನಮಗೆ,

---

ಆ ಸಮಯದಲ್ಲಿ ರಾಕ್ಷಸವೀರರಲ್ಲಿ ಉತ್ತಮನೂ, ಮಹಾ ಬಲಪರಾಕ್ರಮಶಾಲಿಯೂ ಆದ ಇಂದ್ರಜಿತ್ತು, ಬುದ್ಧಿಯಲ್ಲಿ ಬೃಹಸ್ಪತಿಗೆ ಸಮಾನನಾದ ವಿಭೀಷಣನು ಹೇಳಿದ ಮಾತುಗಳನ್ನು ಗಮನವಿಟ್ಟು ಕೇಳಿದ ಬಳಿಕ ತನ್ನ ತಂದೆಯನ್ನು ಕುರಿತು, “ತಾತ! ವಿಭೀಷಣನು ಬಹಳವಾಗಿ ಭಯಗೊಂಡು ಕೆಲಸಕ್ಕೆ ಬಾರದ ಮಾತುಗಳನ್ನೇ ಆಡಿಬಿಟ್ಟನು. ಇದೇತರ ಮಾತು? ಬಿಡು ಬಿಡು. ಈ ವಂಶದಲ್ಲಿ ಹುಟ್ಟಿದವನೂ ಇಂತಹ ಮಾತನ್ನಾಡನು. ಎಂದ ಬಳಿಕ ಇಂತಹರು ಆಡಬಹುದೇ? ಆಡಬಾರದು. ತಂದೆಯೇ! ಈ ವಂಶದಲ್ಲಿ ಹುಟ್ಟಿದ ನಮ್ಮ ಚಿಕ್ಕ ತಂದೆಯಾದ ವಿಭೀಷಣನೊಬ್ಬನು ಮಾತ್ರ ಬಲ, ಪ್ರಭಾವ, ಶೌರ್ಯ, ಧೈರ್ಯ, ಸ್ಥೈರ್ಯ, ತೇಜಸ್ಸು ಇವ್ಯಾವುದೂ ಇಲ್ಲದವನು. ಇವನು ಯಾರೂ ಮಾಡಬಾರದ ನೀಚಕಾರ್ಯವನ್ನು ಮಾಡಿಬಿಟ್ಟನು. ಎಲೈ ಅಂಜುಕುಳಿಯಾದ ವಿಭೀಷಣನೇ!

ತೌ ¶ ರಾಕ್ಷಸರಾಜ! ಪುತ್ರಾವಸ್ಮಾಕಮೇಕೇನಹಿ ರಾಕ್ಷಸೇನ । ಸುಪ್ರಾಕೃತೇನಾಪಿ ‡ ರಣೇ ನಿಹಂತುಂ ಶಕ್ಯೌ ಕುತೋ ಭೀಷಯಸೇಸ್ಮ ಭೀರೋ! ॥ ೪ ॥ ತ್ರಿಲೋಕನಾಥೋ ನನು ದೇವರಾಜಃ § ಶಕ್ರೋ ಮಯಾ ಭೂಮಿತಲೇ ನಿವಿಷ್ಟಃ । ಭಯಾರ್ದಿತಾಶ್ಚಾಪಿ ದಿಶಃ ಪ್ರಪನ್ನಾಸ್ಸರ್ವೇ ತಥಾ ದೇವಗಣಾಸ್ಸಮಗ್ರಾಃ ॥ ೫ ॥ ಐರಾವತೋ ವಿಸ್ವರಮುನ್ನದನ್ ಸ ನಿಪಾತಿತೋ ಭೂಮಿತಲೇ ಮಯಾತು । ವಿಕೃಷ್ಯ ದಂತೌ ತು ಮಯಾ ಪ್ರಸಹ್ಯ ವಿತ್ರಾಸಿತಾ ದೇವಗಣಾಸ್ಸಮಗ್ರಾಃ ॥ ೬ ॥ ಸೋಽಹಂ ಸುರಾಣಾಮಪಿ ದರ್ಪಹಂತಾ ದೈತ್ಯೋತ್ತಮಾನಾಮಪಿ ಶೋಕದಾತಾ । ಕಥಂ ನರೇಂದ್ರಾತ್ಮ

ರಾಜಪುತ್ರೌ - ರಾಜಪುತ್ರರಾದ, ತೌ - ಆ ರಾಮಲಕ್ಷ್ಮಣರು, ಕಿಂನಾಮ - ಎಷ್ಟುಮಾತ್ರದವರು, ಅಸ್ಮಾಕಂ - ನಮಗೆ, ಏಕೇನ - ಒಬ್ಬನಾದ, ಸುಪ್ರಾಕೃತೇನಾಪಿ - ಏನೂ ಅರಿಯದ ಪಾಮರನಾದ, ರಾಕ್ಷಸೇನ - ರಕ್ಕಸನಿಂದ, ರಣೇ - ಕಾಳೆಗದಲ್ಲಿ, ನಿಹಂತುಂ - ಕೊಲ್ಲಲು, ಶಕ್ಯೌಹಿ - ಸಾಧ್ಯರಷ್ಟೆ, ಕುತಃ - ಏತಕ್ಕೋಸ್ಕರ, ಭೀಷಯಸೇಸ್ಮ - ಹೆದರಿಸುತ್ತೀಯೆ. ॥ ೪ ॥ ತ್ರಿಲೋಕನಾಥಃ - ಲೋಕತ್ರಯಕ್ಕೂ ಒಡೆಯನಾದ, ದೇವರಾಜಃ - ದೇವತೆಗಳಿಗೆಲ್ಲಾ ದೊರೆಯಾದ, ಶಕ್ರಃ - ದೇವೇಂದ್ರನು, ಮಯಾ - ನನ್ನಿಂದ, ಭೂಮಿತಲೇ - ನೆಲದಲ್ಲಿ, ನಿವಿಷ್ಟಃ - ಕೆಡಹಲ್ಪಟ್ಟನು, ಸಐರಾವತಃ - ಆ ಐರಾವತವು, ವಿಸ್ವರಂ - ವಿಕಾರ ಸ್ವರವುಳ್ಳುದಾಗಿ, ಉನ್ನದನ್ - ಕೂಗುವದಾಗಿ, ಮಯಾತು - ನನ್ನಿಂದಲಾದರೆ, ಭೂಮಿತಲೇ - ಭೂಪ್ರದೇಶದಲ್ಲಿ, ನಿಪಾತಿತಃ - ಬೀಳಿಸಲ್ಪಟ್ಟಿತು, ದಂತೌತು - ಅದರ ದಂತಗಳನ್ನಾದರೆ, ವಿಕೃಷ್ಯ - ಸೆಳೆದು, ಪ್ರಸಹ್ಯ - ಬಲಾತ್ಕರಿಸಿ, ಸಮಗ್ರಾಃ - ಸಮಸ್ತರಾದ, ದೇವಗಣಾಃ - ದೇವತಾ ಸಮೂಹಗಳು, ಮಯಾ - ನನ್ನಿಂದ, ವಿತ್ರಾಸಿತಾಃ - ಹೆದರಿಸಲ್ಪಟ್ಟವು, ಸಮಗ್ರಾಃ - ಸಮಸ್ತರಾದ, ಸರ್ವೇ - ಎಲ್ಲ, ದೇವಗಣಾಶ್ಚಾಪಿ - ದೇವತಂಡಗಳೂ, ಭಯಾರ್ದಿತಾಃ- ಭೀತಿಗೊಂಡವಾಗಿ, ತಥಾ - ಹಾಗೆಯೇ, ದಿಶಃ - ದಿಕ್ಕುಗಳನ್ನು, ಪ್ರಪನ್ನಾಃ - ಹೊಂದಿದರಲ್ಲವೆ. ॥೫॥ ಸುವೀರ್ಯಃ - ಒಳ್ಳೆಯ ಪರಾಕ್ರಮವುಳ್ಳ, ಅಹಂ - ನಾನು, ಸುರಾಣಾಮಪಿ - ದೇವತೆಗಳಿಗೂ ಕೂಡ, ದರ್ಪಹಂತಾ - ಗರ್ವನಾಶಕನು, ದೈತ್ಯೋ....ಪಿ - ಉತ್ತಮ ರಾಕ್ಷಸರಿಗೂ, ಶೋಕದಾತಾ - ದುಃಖವನ್ನುಂಟುಮಾಡುವವನು, ನರೇಂದ್ರಾತ್ಮಜಯೋಃ - ರಾಜನ ಕುವರರಾದ,

ನಮ್ಮನ್ನೇಕೆ ನಿರರ್ಥಕವಾಗಿ ಭಯಪಡಿಸುವೆ? ನಮ್ಮಲ್ಲಿರುವ ಅಲ್ಪ ಪರಾಕ್ರಮಿಯಾದ ರಾಕ್ಷಸನೂ ಕೂಡ ರಾಜಪುತ್ರರಾದ ರಾಮಲಕ್ಷ್ಮಣರನ್ನು ಯುದ್ಧದಲ್ಲಿ ನಿರಾಯಾಸವಾಗಿ ಕೊಲ್ಲಬಲ್ಲನು. ಓ ವಿಭೀಷಣನೇ! ನಾನು ಮೂರು ಲೋಕಗಳಿಗೂ, ಪ್ರಭುವಾದ ದೇವರಾಜನನ್ನು ಬಂಧಿಸಿ ಭೂಮಿಯಮೇಲೆ ಕೆಡುಹಲಿಲ್ಲವೆ? ಆ ಸಮಯದಲ್ಲಿ ಸಮಸ್ತ ದೇವತೆಗಳೂ ನನಗೆ ಹೆದರಿ ದಿಕ್ಕುಪಾಲಾಗಿ ಓಡಿಹೋದರಲ್ಲವೆ? ನಾನು ಮಹಾ ಧ್ವನಿಯುಂಟಾಗುವಂತೆ ದೊಡ್ಡ ಸಿಂಹನಾದವನ್ನು ಮಾಡಿ, ಐರಾವತವನ್ನು ಹಿಡಿದು ನೆಲಕ್ಕೆ ಕೆಡುಹಿ ಅದರ ದಂತಗಳನ್ನು ಕಿತ್ತು ದೇವತೆಗಳೆಲ್ಲರಿಗೂ ಭಯವನ್ನುಂಟುಮಾಡಿದೆನಲ್ಲವೆ? ಹೀಗೆ ನಾನು ದೇವತೆಗಳಿಗಿದ್ದ ಗರ್ವವನ್ನು ನಿರ್ಮೂಲಗೊಳಿಸಿದೆನು. ನನ್ನ ಭಯದಿಂದ ಅಸುರೋತ್ತಮರೂ ಸಹ ಭಯದಿಂದ ತತ್ತಳಿಸಿ ಹೋಗುವರು. ಅಂತಹ ಮಹಾ ಪರಾಕ್ರಮಶಾಲಿಯಾದ

¶ "ಮಾನುಷರಾಜಪುತ್ರೌ" ತಿ. ರಾ. ಪಾ. ‡ "ನಿಹಂತುಮೇತೌ" ತಿ. ಪಾ. § "ಶಕ್ರೋ" ತಿ. ರಾ. ಪಾ.

**ಜಯೋರ್ನಶಕ್ತೋ ಮನುಷ್ಯಯೋಃ ಪ್ರಾಕೃತಯೋಸ್ಸುವೀರಃ ” ‖ ೭ ‖ ಅಥೇಂದ್ರಕಲ್ಪಸ್ಯ ದುರಾಸದಸ್ಯ ಮಹೌಜಸಸ್ತದ್ವಚನಂ ನಿಶಮ್ಯ । ತತೋ ಮಹಾರ್ಥಂ ವಚನಂ ಬಭಾಷೇ ವಿಭೀಷಣಃ ಶಸ್ತ್ರಭೃತಾಂ ವರಿಷ್ಠಃ ‖ ೮ ‖ “ ನ ತಾತ! ಮಂತ್ರೇ ತವನಿಶ್ಚಯೋಽಸ್ತಿ ಬಾಲಸ್ತ್ವಮದ್ಯಾಪ್ಯವಿಪಕ್ವಬುದ್ಧಿಃ । ತಸ್ಮಾತ್ತ್ವಯಾ ಹ್ಯಾತ್ಮವಿನಾಶನಾಯ ವಚೋಽರ್ಥಹೀನಂ ಬಹುವಿಪ್ರಲಪ್ತಂ ‖ ೯ ‖ ಪುತ್ರಪ್ರವಾದೇನ ತು ರಾವಣಸ್ಯ ತ್ವಮಿಂದ್ರಜಿನ್ಮಿತ್ರಮುಖೋಸಿ ಶತ್ರುಃ । ಯಸ್ಯೇದೃಶಂ ರಾಘವತೋ ವಿನಾಶಂ ನಿಶಮ್ಯ ಮೋಹಾದನುಮನ್ಯಸೇ ತ್ವಂ ‖ ೧೦ ‖ ತ್ವಮೇವ ವಧ್ಯಶ್ಚ ಸುದುರ್ಮತಿಶ್ಚ**

---

ಪ್ರಾಕೃತಯೋಃ - ಪಾಮರರಾದ, ಮನುಷ್ಯಯೋಃ - ಮನುಷ್ಯರೀರ್ವರ, ರಣೇ - ಕಾಳೆಗದಲ್ಲಿ, ಕಥಂ ನಶಕ್ತಃ - ಹೇಗೆ ಸಮರ್ಥನಲ್ಲವು, ಕುತೋಭೀಷಯಸೇ - ಏಕೆ ಹೆದರಿಸುತ್ತೀಯೆ. ‖ ೬-೭ ‖ ಅಥ - ಬಳಿಕ, ಶಸ್ತ್ರಭೃತಾಂ - ಶಸ್ತ್ರಧಾರಿಗಳಲ್ಲಿ, ವರಿಷ್ಠಃ - ಶ್ರೇಷ್ಠನಾದ, ವಿಭೀಷಣಃ - ವಿಭೀಷಣನು, ಇಂದ್ರಕಲ್ಪಸ್ಯ - ದೇವೇಂದ್ರನಿಗೆ ಸದೃಶನಾದ, ದುರಾಸದಸ್ಯ - ಹೊಂದಲಸಾಧ್ಯನಾದ, ಮಹೌಜಸಃ - ಮಹಾ ತೇಜೋವಂತನಾದ ಆ ಇಂದ್ರಜಿತ್ತುವಿನ, ತದ್ವಚನಂ - ಮಾತನ್ನು, ನಿಶಮ್ಯ - ಕೇಳಿ, ಮಹಾರ್ಥಂ - ಗಂಭೀರವಾದ ಅರ್ಥವುಳ್ಳ, ವಚನಂ - ಮಾತನ್ನು, ಬಭಾಷೇ - ಹೇಳಿದನು. ‖೮‖ ಹೇ ತಾತ - ಎಲೈ ಅಪ್ಪನೇ, ತವ - ನಿನಗೆ, ಮಂತ್ರೇ - ಆಲೋಚನೆಯಲ್ಲಿ, ನಿಶ್ಚಯಃ - ನಿಶ್ಚಿತಬುದ್ಧಿಯು, ನಾಸ್ತಿ - ಇಲ್ಲವು, ತ್ವಂ - ನೀನು, ಅದ್ಯಾಪಿ - ಈಗಲೂ ಕೂಡ, ಅವಿಪಕ್ವಬುದ್ಧಿಃ - ಪಕ್ವವಲ್ಲದಿರುವ ಬುದ್ಧಿಯುಳ್ಳ, ಬಾಲಃ - ಹುಡುಗನು, ಅಸಿ - ಆಗಿರುವೆ, ತಸ್ಮಾತ್ - ಆ ಬಾಲ್ಯದಿಂದ, ತ್ವಯಾ - ನಿನ್ನಿಂದಲೂ, ಆತ್ಮ....ಯ - ನಿನ್ನ ನಾಶಕ್ಕಾಗಿ, ಅರ್ಥಹೀನಂ - ಪ್ರಯೋಜನವಿಲ್ಲದ, ವಚಃ-ಮಾತು, ಬಹು-ಬಹಳವಾಗಿ, ವಿಪ್ರಲಪ್ತಂ-ಕೂಗಲ್ಪಟ್ಟಿತು. ‖ ೯ ‖ ಹೇ ಇಂದ್ರಜಿತ್-ಎಲೈ ಇಂದ್ರಜಿತ್ತುವೇ, ತ್ವಂ - ನೀನು, ಪುತ್ರಪ್ರವಾದೇನ - ಪುತ್ರನೆಂಬ ಬಾಹ್ಯಪ್ರಖ್ಯಾತಿಯಿಂದ, ರಾವಣಸ್ಯ - ರಾವಣನಿಗೆ, ಮಿತ್ರಮುಖಃ - ಮಿತ್ರನಂತೆ ತೋರುತ್ತಿರುವ, ಶತ್ರುಃ - ಶತ್ರುವು, ಅಸಿ - ಆಗಿದ್ದೀಯೆ, ತ್ವಂ - ನೀನು, ಯಸ್ಯ - ಯಾವ ರಾವಣನಿಗೆ, ರಾಘವತಃ - ಶ್ರೀರಾಮನಿಂದ, ಈದೃಶಂ-ಇಂಥಹುದಾದ, ವಿನಾಶಂ - ನಾಶವನ್ನು, ನಿಶಮ್ಯ - ಕೇಳಿಯೂ, ಮೋಹಾತ್ - ಅಜ್ಞಾನದಿಂದ, ಅನು

---

ನಾನು, ಕೇವಲ ಮನುಷ್ಯರೂ, ಪರಮ ದುರ್ಬಲರೂ, ನೀಚರೂ, ರಾಜಪುತ್ರರೂ ಆದ ಆ ರಾಮಲಕ್ಷ್ಮಣರನ್ನು ಗೆಲ್ಲಲು ಹೇಗೆತಾನೇ ಸಮರ್ಥನಲ್ಲವು? ” ಎಂದು ಹೇಳಿದನು. ‖೧–೭‖ ಆಗ ಶಸ್ತ್ರಧಾರಿಗಳಲ್ಲಿ ಉತ್ತಮನೆನಿಸಿದ ವಿಭೀಷಣನು ದೇವೇಂದ್ರನಿಗೆ ಸಮಾನನಾಗಿಯೂ, ಪರಮ ದುರ್ಜಯನಾಗಿಯೂ, ಮಹಾ ಪರಾಕ್ರಮಶಾಲಿಯೂಗಿಯೂ ಇರುವ ಆ ಇಂದ್ರಜಿತ್ತುವನ್ನು ಕುರಿತು ಮಹಾರ್ಥಗರ್ಭಿತವಾದ ಮಾತುಗಳನ್ನೀರೀತಿ ನುಡಿದನು ; “ ವತ್ಸ ! ಇಂದ್ರಜಿತ್ತುವೇ ! ನಿನಗೆ ಇನ್ನೂ ಮಂತ್ರಾಲೋಚನೆಗಳನ್ನು ನಿರ್ಣಯಿಸುವ ಶಕ್ತಿಯಿಲ್ಲವು. ನೀನು ಇನ್ನೂ ಕೇವಲ ಬಾಲಕನು. ಇನ್ನೂ ನಿನ್ನ ಬುದ್ಧಿಯು ಪರಿಪಕ್ವವಾಗಿಲ್ಲವು. ಆದುದರಿಂದಲೇ ನಿನ್ನ ವಿನಾಶಕ್ಕೋಸ್ಕರವೇ ವಿವೇಕಶೂನ್ಯವಾದ ಮಾತುಗಳನ್ನಾಡುತ್ತಿರುವೆ. ಅಯ್ಯಾ ! ರಾವಣಾಸುರನಿಗೆ ಶ್ರೀರಾಮನಿಂದ ಕೇಡುಂಟಾಗುವುದನ್ನು ಚೆನ್ನಾಗಿ ಅರಿತೂ ಕೂಡ, ತಿಳಿವಳಿಕೆಯಿಲ್ಲದಿರುವುದರಿಂದ ಆತನೊಡನೆ ಯುದ್ಧಕ್ಕೆ ಸಮ್ಮತಿಸುತ್ತಿರುವೆ. ಆದುದರಿಂದ ನೀನು ರಾವಣಾಸುರನಿಗೆ ಪುತ್ರನಾದರೂ, ಮಿತ್ರನಂತೆ ತೋರುವ ಶತ್ರುವೇ ಆಗಿರುವೆ.

ಸಚಾಪಿ ವಧ್ಯೋ ಯ ಇಹಾನಯತ್ತ್ವಾಂ । ಬಾಲಂ ದೃಢಂ ಸಾಹಸಿಕಂ ಚ ಯೋದ್ಯ ಪ್ರಾವೇಶಯನ್ಮಂತ್ರಕೃತಾಂ ಸಮೀಪಂ ॥ ೧೧ ॥ ‡ ಮೂಢಃ ಪ್ರಗಲ್ಭೋ ವಿನಯೋಪಪನ್ನಸ್ತೀಕ್ಷ್ಣಸ್ವಭಾವೋಽಲ್ಪಮತಿರ್ದುರಾತ್ಮಾ । ಮೂರ್ಖಸ್ತ್ವಮತ್ಯಂತಸುದುರ್ಮತಿಶ್ಚ ತ್ವಮಿಂದ್ರಜಿದ್ಬಾಲತಯಾ ಬ್ರವೀಷಿ ॥ ೧೨ ॥ ಕೋ ಬ್ರಹ್ಮದಂಡಪ್ರತಿಮಪ್ರಕಾಶಾನರ್ಚಿಷ್ಮತಃ ಕಾಲನಿಕಾಶರೂಪಾನ್ । ಸಹೇತ ಬಾಣಾನ್ ಯಮದಂಡಕಲ್ಪಾನ್ ಸಮಕ್ಷಮುಕ್ತಾನ್ಯುಧಿ ರಾಘವೇಣ ॥ ೧೩ ॥

ಮನ್ಯಸೇ - ಒಪ್ಪುತ್ತೀಯೋ. ॥ ೧೦ ॥ ಸುದುರ್ಮತಿಃ - ದುರ್ಬುದ್ಧಿಯುಳ್ಳ, ತ್ವಮೇವ - ನೀನೇ ವಧ್ಯಶ್ಚ - ವಧಾರ್ಹನು, ಯಃ - ಯಾವ ಪುರುಷನು, ಇಹ - ಇಲ್ಲಿ, ಬಾಲಂ - ಹುಡುಗನಾದ, ದೃಢಂ - ದೃಢಚಿತ್ತನಾದ, ಸಾಹಸಿಕಂ - ಸಾಹಸವಂತನಾದ, ತ್ವಾಂ - ನಿನ್ನನ್ನು, ಆನಯತ್ - ಕರೆತಂದನೋ, ಯಃ - ಯಾವ ಪುರುಷನು, ಅದ್ಯ - ಈಗ, ಮಂತ್ರಕೃತಾಂ - ಆಲೋಚನೆಯನ್ನು ಮಾಡುತ್ತಿರುವವರ, ಸಮೀಪಂ - ಸಾಮೀಪ್ಯವನ್ನು ಕುರಿತು, ಪ್ರಾವೇಶಯತ್ - ಪ್ರವೇಶ ಮಾಡಿಸಿದನೋ, ಸಚಾಪಿ - ಅವನೂ ಕೂಡ, ವಧ್ಯಃ - ವಧಾರ್ಹನು. ॥ ೧೧ ॥ ಹೇ ಇಂದ್ರಜಿತ್ - ಎಲೈ ಇಂದ್ರಜಿತ್ತುವೆ, ಮೂಢಃ - ಏನೂ ತಿಳಿಯದ, ಪ್ರಗಲ್ಭಃ - ನಾನೇ ಪಂಡಿತನೆಂದು ತಿಳಿದಿರುವ, ಅವಿ....ನ್ನಃ - ಗರ್ವದಿಂದ ಕೂಡಿರುವ, ತೀಕ್ಷ್ಣಸ್ವಭಾವಃ - ಕ್ರೂರ ಸ್ವಭಾವವುಳ್ಳ, ಅಲ್ಪಮತಿಃ - ಸ್ವಲ್ಪ ಬುದ್ಧಿಯುಳ್ಳ, ದುರಾತ್ಮಾ - ದುಷ್ಟಸ್ವಭಾವನಾದ, ತ್ವಂ - ನೀನು, ಮೂರ್ಖಃ - ಅವಿವೇಕಿಯು, ಅತ್ಯ....ಶ್ಚ - ದುರ್ಬುದ್ಧಿಯು, ತ್ವಂ - ನೀನು, ಬಾಲತಯಾ - ಬಾಲ್ಯದಿಂದ, ಬ್ರವೀಷಿ - ಮಾತನಾಡುವೆ. ॥೧೨॥ ರಾಘವೇಣ - ಶ್ರೀರಾಮನಿಂದ, ಯುಧಿ - ಕಾಳಗದಲ್ಲಿ, ಸಮಕ್ಷಂ - ಪ್ರತ್ಯಕ್ಷವಾಗಿ, ಮುಕ್ತಾನ್ - ಬಿಡಲ್ಪಟ್ಟ, ಬ್ರಹ್ಮ....ಶಾನ್ - ಪ್ರಳಯಕಾಲದಲ್ಲಿ ಹುಟ್ಟತಕ್ಕ ಧೂಮಕೇತುವಿಗೆ ಸದೃಶವಾದ ಕಾಂತಿಯುಳ್ಳ (ಗೋ) ಬ್ರಾಹ್ಮಣ ಶಾಪಕ್ಕೆ ಸಮಾನವಾದ ಪ್ರಭಾವವುಳ್ಳ, ಅರ್ಚಿಷ್ಮತಃ-ಜ್ವಾಲೆಗಳುಳ್ಳ, ಕಾಲ....ಪಾನ್ - ಯಮನಿಗೆ ಸಮಾನವಾದ ಆಕಾರವುಳ್ಳ, ಯಮದಂಡಕಲ್ಪಾನ್ - ಯಮದಂಡಕ್ಕೆ ಸಮಾನವಾದ, ಬಾಣಾನ್ - ಬಾಣಗಳನ್ನು, ಕಃ - ಯಾವ ಪುರುಷನುತಾನೆ, ಸಹೇತ - ಸಹಿಸಿಯಾನು.

ನೀನು ವಧಾರ್ಹನು. ಮಹಾ ದುರ್ಬುದ್ಧಿಯುಳ್ಳವನು. ಅಲ್ಲದೆ ನೀನು ಕೇವಲ ಬಾಲಕನೂ ಆಗಿರುವೆ. ಮಹಾ ಬಲಾಢ್ಯನಾದುದರಿಂದ ಎಂತಹ ಕಾರ್ಯಕ್ಕಾದರೂ ಸಾಹಸಪಡುತ್ತೀಯೆ. ಆದುದರಿಂದ ನಿನ್ನನ್ನು ಇಂತಹ ಆಲೋಚನಾಸಭೆಗೆ ಕರೆತಂದವನನ್ನೂ ವಧಿಸತಕ್ಕದು. ಎಲೈ ಇಂದ್ರಜಿತ್ತುವೇ! ನೀನು ಕೇವಲ ಮೂಢನು ; ಮಹಾ ಗರ್ವಿಷ್ಠನು ; ಕ್ಷಾಂತಿಯಿಲ್ಲದವನು ; ಮಹಾ ಕ್ರೂರಬುದ್ಧಿಯು ; ನೀಚನು ; ದುರ್ಬುದ್ಧಿಯು ; ಮೂರ್ಖನು ; ದುರ್ಮಾರ್ಗನು ; ತಿಳಿವಳಿಕೆಯಿಲ್ಲದವನೂ ಆಗಿರುವ ನೀನು ಹಸುಮಗುವಾದುದರಿಂದಲೇ ಮೇಲುಕೀಳುಗಳನ್ನರಿಯದೆ ಮಾತನಾಡುತ್ತಿರುವೆ. ಬ್ರಹ್ಮಾಂಡದಂತಹ ಕಾಂತಿಯಿಂದ ಹೊಳೆಯುತ್ತಿರುವುವೂ, ಮಹಾ ಜ್ವಾಲೆಗಳಿಂದೊಪ್ಪುತ್ತಿರುವುವೂ, ಕಾಲದಂಡಕ್ಕೆ ಸಮಾನವಾದುವೂ, ಮೃತ್ಯುರೂಪವುಳ್ಳವೂ ಆದ ಶ್ರೀರಾಮನು ಪ್ರಯೋಗಿಸುವ ಬಾಣಗಳನ್ನು ರಣರಂಗದಲ್ಲಿ ಅದಾವನು ತಾನೆ ಸಹಿಸಿಯಾನು ?" ವಿಭೀಷಣನಿಂತು ನುಡಿದ ಬಳಿಕ ಅಣ್ಣ

‡ "ಮೂಢೋಽಪ್ರಗಲ್ಭಃ" ತಿ. ರಾ. ಗೋ.



**ವಿಭೀಷಣ ಹಿತೋಪದೇಶ**

ಧನಾನಿ ರತ್ನಾನಿ ವಿಭೂಷಣಾನಿ ವಾಸಾಂಸಿ ದಿವ್ಯಾನಿ ಮಣೀಂಶ್ಚ ಚಿತ್ರಾನ್ ।
ಸೀತಾಂಚ ರಾಮಾಯ ನಿವೇದ್ಯ ದೇವೀಂ ವಸೇಮ ರಾಜನ್ನಿಹ ವೀತಶೋಕಾಃ ॥

ಪುಟ ೧೨೬

ಧನಾನಿ ರತ್ನಾನಿ ವಿಭೂಷಣಾನಿ
ವಾಸಾಂಸಿ ದಿವ್ಯಾನಿ ಮಣೀಂಶ್ಚ ಚಿತ್ರಾನ್ ।
ಸೀತಾಂಚ ರಾಮಾಯ ನಿವೇದ್ಯ ದೇವೀಂ
ವಸೇಮ ರಾಜನ್ನಿಹ ವೀತಶೋಕಾಃ ॥ ೧೪ ॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಪಂಚದಶಸ್ಸರ್ಗಃ.



॥ ೧೩ ॥ ಹೇ ರಾಜನ್ - ಎಲೈ ಅರಸೇ, ಇಹ - ಈಗ, ಧನಾನಿ - ದ್ರವ್ಯಗಳನ್ನೂ, ರತ್ನಾನಿ - ರತ್ನಗಳನ್ನೂ, ವಿಭೂಷಣಾನಿ - ಒಡವೆಗಳನ್ನೂ, ದಿವ್ಯಾನಿ - ಮನೋಜ್ಞಗಳಾದ, ವಾಸಾಂಸಿ - ವಸ್ತ್ರಗಳನ್ನೂ, ಚಿತ್ರಾನ್ - ಆಶ್ಚರ್ಯಕರಗಳಾದ, ಮಣೀಂಶ್ಚ - ವಜ್ರವೇ ಮೊದಲಾದ ಮಣಿಗಳನ್ನೂ, ರತ್ನಾನಿ - ಶ್ರೇಷ್ಠವಾದ ವಸ್ತುಗಳನ್ನೂ, ಸೀತಾಂದೇವೀಂಚ - ಸೀತಾದೇವಿಯನ್ನೂ, ರಾಮಾಯ - ಶ್ರೀರಾಮನಿಗೋಸುಗ, ನಿವೇದ್ಯ - ಸಮರ್ಪಿಸಿ, ವೀತಶೋಕಾಃ - ಕಳೆದ ವ್ಯಸನವುಳ್ಳವರಾಗಿ, ವಸೇಮ - ಇರೋಣ. ॥ ೧೪ ॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಪಂಚದಶಸ್ಸರ್ಗಃ.



ನಾದ ರಾವಣನನ್ನು ಕುರಿತು, "ಅಣ್ಣಾ! ರಾಕ್ಷಸೇಶ್ವರಾ!! ರಾವಣಾ!!! ಧನಸಂಚಯಗಳು, ಅಮೂಲ್ಯ ಪದಾರ್ಥಗಳು, ಶ್ರೇಷ್ಠವಾದ ಆಭರಣಗಳು, ವಸ್ತ್ರಗಳು, ವಿವಿಧ ರತ್ನಗಳು ಇವುಗಳೊಡನೆ ಸೀತೆಯನ್ನು ಶ್ರೀರಾಮಚಂದ್ರನಿಗೆ ಅರ್ಪಿಸಿ ವ್ಯಸನರಹಿತರಾಗಿ ಸುಖದಿಂದಿರೋಣ. ಇದಕ್ಕೆ ಸಮ್ಮತಿಸು" ಎಂದು ಹೇಳಿದನು. ॥ ೮–೧೪ ॥

ಇಂತಿದು ವಿಭೀಷಣಕೃತ ಇಂದ್ರಜಿನ್ನಿಂದಾಪೂರ್ವಕ ರಾವಣ ಹಿತೋಪದೇಶ
ವೆಂಬ ಹದಿನೈದನೆಯ ಸರ್ಗವು ಸಮಾಪ್ತವಾದುದು.



# ಯುದ್ಧಕಾಂಡೇ ಷೋಡಶಸ್ಸರ್ಗಃ

¶ ಸುನಿವಿಷ್ಟಂ ಹಿತಂ ವಾಕ್ಯಮುಕ್ತವಂತಂ ವಿಭೀಷಣಂ । ಅಬ್ರವೀತ್ಪರುಷಂ ವಾಕ್ಯಂ ರಾವಣಃ ಕಾಲಚೋದಿತಃ ॥ ೧ ॥ " ವಸೇತ್ಸಹ ಸಪತ್ನೇನ ಕ್ರುದ್ಧೇನಾಶೀವಿಷೇಣವಾ । ನತು ಮಿತ್ರಪ್ರವಾದೇನ ಸಂವಸೇಚ್ಛತ್ರುಸೇವಿನಾ ॥ ೨ ॥ ಜಾನಾಮಿ

---

ರಾವಣಃ - ರಾವಣನು, ಕಾಲಚೋದಿತಃ - ಕಾಲಪುರುಷನಿಂದ ಪ್ರೇರಿತನಾದಕಾರಣ, ಸುನಿವಿಷ್ಟಂ - ಚೆನ್ನಾಗಿ ಮನಸ್ಸಿಗೆ ಅಂಟುವ ರೀತಿಯಲ್ಲಿ, ಹಿತಂ - ಶ್ರೇಯಸ್ಕರವಾದ, ವಾಕ್ಯಂ-ಮಾತನ್ನು, ಉಕ್ತವಂತಂ - ಹೇಳುತ್ತಿರುವ, ವಿಭೀಷಣಂ - ವಿಭೀಷಣನನ್ನು ಕುರಿತು, ಪರುಷಂ - ಕ್ರೂರವಾದ, ವಾಕ್ಯಂ - ಮಾತನ್ನು, ಅಬ್ರವೀತ್ - ನುಡಿದನು. ॥ ೧ ॥ ಸಪತ್ನೇನಸಹ - ಶತ್ರುವಿನೊಡಗೂಡಿ, ಕ್ರುದ್ಧೇನ - ಕೋಪಾಕ್ರಾಂತವಾದ, ಆಶೀವಿಷೇಣವಾ - ಸರ್ಪದೊಡನೆ ಎಲ್ಲಿಯಾದರೂ, ವಸೇತ್ - ಇರಬಹುದು, ಕಿಂತು - ಆದರೆ, ಮಿತ್ರ....ನ - ಮಿತ್ರನೆಂದು ಪ್ರಖ್ಯಾತನಾದ, ಶತ್ರುಸೇವಿನಾ - ಶತ್ರುಪಕ್ಷಪಾತಿಯಾದವನೊಡಗೂಡಿ, ನಸಂವಸೇತ್ - ಇರಬಾರದು. ॥ ೨ ॥ ಹೇ ರಾಕ್ಷಸ - ಎಲೈ

---

ಈ ಪ್ರಕಾರವಾಗಿ ಮನಸ್ಸಿನಲ್ಲಿ ಚೆನ್ನಾಗಿ ನಾಟುವಂತೆ ಹಿತವಾಕ್ಯಗಳನ್ನು ಹೇಳಿದ ಆ ವಿಭೀಷಣನನ್ನು ನೋಡಿ ಮೃತ್ಯುವಿನಿಂದ ಪ್ರೇರಿತನಾದ ಆ ರಾವಣನು ಅವನನ್ನು ಕುರಿತು ಬಹು ಕಠಿನವಾದ ಮಾತುಗಳಿಂದ ಹೀಗೆಂದನು:—" ಎಲಾ ! ವಿಭೀಷಣನೇ ! ಕೇವಲ ಶತ್ರುವಿನೊಡನೆಯಾಗಲಿ, ಬಹುವಾಗಿ ಕೆರಳಿದ ವಿಷಸರ್ಪದೊಡನೆಯಾಗಲಿ ವಾಸ ಮಾಡಬಹುದು. ಮಿತ್ರನಂತೆ ನಟಿಸುತ್ತ, ಶತ್ರುಪಕ್ಷವನ್ನವಲಂಬಿಸಿರುವವನೊಡನೆ

---

¶ ಇಲ್ಲಿನ ಸ್ವಾರಸಿಕಾರ್ಥ:—ಸುನಿವಿಷ್ಟಂ - (ಆ ವಿಭೀಷಣನ ಮಾತುಗಳು) (ಸ್ವ) ಅರ್ಥಾನುಸಂಧಾನವಿಲ್ಲದಿದ್ದರೂ ಕೇಳಿದ ಮಾತ್ರದಿಂದಲೇ ಪ್ರೀತಿಯನ್ನುಂಟುಮಾಡುವವುಗಳು, (ಸ್ವಾರ್ಥಸಾಧನೆಗೆ ಅನನುಕೂಲವಾಗಿದ್ದರೂ, ಅಪರಿತ್ಯಾಜ್ಯವಾದವುಗಳು, ಮನಸ್ಸಿಗೆ ಹಿಡಿಯದಿದ್ದರೆ ಅವನ್ನು ಬಿಟ್ಟುಬಿಡಬಹುದಾಗಿದ್ದಿತು. ಆದರೆ ಅವು ಹಾಗಿರಲಿಲ್ಲ. ಮನಸ್ಸಿಗೆ ಚೆನ್ನಾಗಿ ಹಿಡಿಸುವಂಥವುಗಳೇ ಆಗಿದ್ದುವು.) ಹಿತಂ-ಕೇಳುವುದಕ್ಕೆ ಮಾತ್ರ ಹಿತವೆಂದಲ್ಲ; ಅತಿ ದುರ್ದಶೆಯನ್ನೂ ಪರಿಹರಿಸುವ ಉಪಾಯವನ್ನೊಳಗೊಂಡಿದ್ದುದರಿಂದ ಪಥ್ಯವಾಗಿಯೂ ಇದ್ದುವು. ಕೇಳುವುದಕ್ಕೆ ಅವು ಕಠಿನಗಳಾಗಿದ್ದರೂ, ಪಥ್ಯವಾಗಿರುವುದನ್ನು ಪರ್ಯಾಲೋಚಿಸಿದರೆ ಅಪರಿತ್ಯಾಜ್ಯವಾಗಿದ್ದುವು. ಉಕ್ತವಂತಂ-"ನಾಽಸಂವತ್ಸರವಾಸಿನೇ ಪ್ರಬ್ರೂಯಾತ್" ಗುರುಕುಲದಲ್ಲಿದ್ದು ಪಾದಾಕ್ರಾಂತನಾದವನಿಗೆ ಮಾತ್ರ ಹೇಳಬಹುದಾದ ಆ ಮಾತುಗಳನ್ನು ಅವನು (ಅಣ್ಣನಿಗೆ ಬಂದೊದಗಿರುವ ದುರವಸ್ಥೆಯನ್ನು ನೋಡಿ) ಹೇಳಿದನು. ವಿಭೀಷಣಂ-(ಇತರರಿಂದಲಾದರೂ ಹೇಳಲ್ಪಟ್ಟಿದ್ದರೆ ಅಸಡ್ಡೆ ಮಾಡಬಹುದಾಗಿದ್ದಿತು. ಆದರೆ ಸಾಕ್ಷಾತ್ ತಮ್ಮನಿಂದ ಹೇಳಲ್ಪಟ್ಟುದಾದುದರಿಂದ ಅಪರಿತ್ಯಾಜ್ಯವಾದವುಗಳು.) ಹೀಗೆ ಹಿತವಾಕ್ಯಗಳನ್ನು ನುಡಿದ ಆ ವಿಭೀಷಣನನ್ನು, ಪರುಷಂ ವಾಕ್ಯಮಬ್ರವೀತ್ (ಆತನ ಹಿತೋಪದೇಶದ ನುಡಿಗಳನ್ನು ಕೇಳಿದಮೇಲೆ "ನನ್ನ ಸಂದೇಹಗಳು ಕಳೆದುವು; ನೀನು ನನಗೆ ಮಹೋಪಕಾರವನ್ನು ಮಾಡಿದೆ" ಎಂದು ಅವನನ್ನು ಹೊಗಳಬೇಕಾಗಿದ್ದಿತು. ಅಥವಾ ಹೊಗಳದಿದ್ದರೂ ತನ್ನ ಪಾಪಕ್ಕೆ ಪಶ್ಚಾತ್ತಾಪಪಡಬೇಕಾಗಿದ್ದಿತು. ಇದನ್ನು ಬಿಟ್ಟು ಶತ್ರುವಾದವನನ್ನುಕುರಿತು ಹೇಳುವಂತೆ ಕಠಿನವಾದ ಮಾತುಗಳನ್ನೇ ಆಡಿಬಿಟ್ಟನು.) ಇದಕ್ಕೆ ಕಾರಣವೇನೆಂದರೆ:— ರಾವಣಃ-ಪರಹಿಂಸೆಯಿಂದ ಜಗತ್ತಿಗೇ ತಿಳಿದವನು. ತಪ್ಪುದಾರಿಯಲ್ಲಿ ಹೆಜ್ಜೆಯಿಟ್ಟು ಈಗ ತಾನೇ ಕೂಗುತ್ತಿರುವವನು. ಇಂತಹ ರಾವಣನು ಕಾಲಚೋದಿತಃ-ತಮ್ಮನು, " ರಾಮನನ್ನು ಶರಣು ಹೋಗು " ಎಂದು ಹೇಳಿದರೂ, ಕಾಲವು, "ಹಾಗೆ ಮಾಡಕೂಡದು" ಎಂದು ಹೇಳಿ ಅವನನ್ನು ವಿಪರೀತ ಕಾರ್ಯದಲ್ಲಿಯೇ ಪ್ರೇರೇಪಿಸಿತು; ಆದುದರಿಂದ ಅಂಥವನು ತನ್ನ ಸ್ವಭಾವಕ್ಕನುಗುಣವಾಗಿ ಕಾಲವನ್ನೇ ಅನುಸರಿಸಿದನು. (ತನಿಶ್ಲೋಕೀ)

**ಶೀಲಂ ಜ್ಞಾತೀನಾಂ ಸರ್ವಲೋಕೇಷು ರಾಕ್ಷಸ ! । ಹೃಷ್ಯಂತಿ ವ್ಯಸನೇಷ್ವೇತೇ ಜ್ಞಾತೀನಾಂ ಜ್ಞಾತಯಸ್ಸದಾ ॥ ೩ ॥ ಪ್ರಧಾನಂ ¶ ಸಾಹಸಂ ವೈದ್ಯಂ ಧರ್ಮಶೀಲಂಚ ರಾಕ್ಷಸ ! । ಜ್ಞಾತಯೋ ಹ್ಯವಮನ್ಯಂತೇ ಶೂರಂ ಪರಿಭವಂತಿ ಚ ॥ ೪ ॥ ನಿತ್ಯ ಮನ್ಯೋನ್ಯಸಂಹೃಷ್ಟಾ ವ್ಯಸನೇಷ್ವಾತತಾಯಿನಃ । ಪ್ರಚ್ಛನ್ನಹೃದಯಾ ಘೋರಾ ಜ್ಞಾತಯಸ್ತು ಭಯಾವಹಾಃ ॥ ೫ ॥ ಶ್ರೂಯಂತೇ ಹಸ್ತಿಭಿರ್ಗೀತಾಃ ಶ್ಲೋಕಾಃ ಪದ್ಮವನೇ ‡ ಕ್ವಚಿತ್ । ಪಾಶಹಸ್ತಾನ್ನರಾನ್ ದೃಷ್ಟ್ವಾ ಶೃಣು ತಾನ್ಗದತೋ ಮಮ**

ರಕ್ಕಸನೇ, ಸರ್ವಲೋಕೇಷು - ಸಮಸ್ತ ಲೋಕಗಳಲ್ಲಿಯೂ, ಜ್ಞಾತೀನಾಂ - ಜ್ಞಾತಿಗಳ, ಶೀಲಂ - ಸ್ವಭಾವವನ್ನು, ಜಾನಾಮಿ - ತಿಳಿದಿದ್ದೇನೆ, ಏತೇ - ಈ, ಜ್ಞಾತಯಃ - ಜ್ಞಾತಿಗಳು, ಜ್ಞಾತೀನಾಂ - ಜ್ಞಾತಿಗಳ, ವ್ಯಸನೇಷು - ದುಃಖಕಾಲದಲ್ಲಿ, ಸದಾ - ಯಾವಾಗಲೂ, ಹೃಷ್ಯಂತಿ - ಸಂತೋಷಪಡುತ್ತಾರೆ. ॥ ೩ ॥ ಹೇ ರಾಕ್ಷಸ - ಎಲೈ ರಕ್ಕಸನೇ, ಪ್ರಧಾನಂ - ಸ್ವಜಾತಿಯಲ್ಲಿ ಶ್ರೇಷ್ಠನಾದ, ಸಾಹಸಂ - ಸಾಹಸಿಯಾದ, ವೈದ್ಯಂ - ವಿದ್ವಾಂಸನಾದ, ಧರ್ಮಶೀಲಂಚ - ಧರ್ಮದಲ್ಲಿಯೇ ಮನವುಳ್ಳ, ಶೂರಂಚ - ಶೌರ್ಯವಂತನನ್ನು, ಜ್ಞಾತಯಃ - ಜ್ಞಾತಿಗಳು, ಅವಮನ್ಯಂತೇ - ಅವಮಾನ ಮಾಡುತ್ತಾರೆ, ಪರಿಭವಂತ್ರಿಚ - ತಿರಸ್ಕಾರವನ್ನೂ ಮಾಡುತ್ತಾರೆ. ॥೪॥ ನಿತ್ಯಂ - ನಿರಂತರವೂ, ಅನ್ಯೋ.... ಷ್ಟಾಃ - ಪರಸ್ಪರವಾಗಿ ಹೊರಗೆ ಸ್ನೇಹಿತರಂತೆ ನಟಿಸುತ್ತ, ಘೋರಾಃ - ಕ್ರೂರವಾಗಿ, ವ್ಯಸನೇಷು - ವ್ಯಸನಕಾಲಗಳಲ್ಲಿ, ಆತತಾಯಿನಃ - ದ್ರೋಹಿಗಳಾಗಿರುವ, ಪ್ರಚ್ಛ....ಯಾಃ - ಗೂಢಾಭಿಪ್ರಾಯವುಳ್ಳ, ಜ್ಞಾತಯಸ್ತು - ಜ್ಞಾತಿಗಳಾದರೆ, ಭಯಾವಹಾಃ - ಭಯವನ್ನುಂಟುಮಾಡುವರು. ॥ ೫ ॥ ಕ್ವಚಿತ್ - ಒಂದು ಸ್ಥಳದಲ್ಲಿ, ಪದ್ಮವನೇ-ಕಮಲವನದಲ್ಲಿ, ಹಸ್ತಿಭಿಃ-ಆನೆಗಳಿಂದ ಕೂಡಿದ, ಪಾಶಹಸ್ತಾನ್-ಹಗ್ಗಗಳೇ ಹಸ್ತದಲ್ಲುಳ್ಳ, ನರಾನ್ - ಮನುಷ್ಯರನ್ನು, ದೃಷ್ಟ್ವಾ - ಕಂಡು, ಶ್ಲೋಕಾಃ - ಶ್ಲೋಕಗಳು, ಗೀತಾಃ - ಹೇಳಲ್ಪಟ್ಟವುಗಳಾಗಿ, ಶ್ರೂಯಂತೇ-ಕೇಳಲ್ಪಡುತ್ತವೆ, ವದತಃ-ಹೇಳುತ್ತಿರುವ, ಮಮ-ನನ್ನ ದೆಸೆ

ಎಷ್ಟುಮಾತ್ರಕ್ಕೂ ಸಹವಾಸ ಮಾಡಬಾರದು. ಎಲವೋ ರಾಕ್ಷಸನೇ ! ಎಲ್ಲ ಲೋಕಗಳಲ್ಲಿಯೂ ದಾಯಾದಿಗಳ ಯೋಗ್ಯತೆಯು ಕಂಡುದೇ ಆಗಿದೆ. ಅದು ಎಲ್ಲರಿಗೂ ತಿಳಿದ ವಿಷಯವೇ ! ಈ ದಾಯಾದಿಗಳು ಯಾವಾಗಲೂ ತಮ್ಮ ಜ್ಞಾತಿಗಳಿಗೆ ಯಾವುದಾದರೂ ಒಂದು ಸಂಕಟವು ಬಂದೀತೇ ಎಂದು ಕಾದಿರುತ್ತಾರೆ. ಆ ಸಮಯವು ಬಂದಿತೆಂದರೆ ಸಂತೋಷದಿಂದ ಹಿಗ್ಗಿಹೋಗುತ್ತಾರೆ. ಎಲಾ ವಿಭೀಷಣಾ ! ದಾಯಾದಿಗಳು ತಮ್ಮಲ್ಲಿ ಧನಾಢ್ಯನೂ, ಶ್ರೇಷ್ಠನೂ, ಕಾರ್ಯಸಾಧಕನೂ, ಸಾಹಸಿಕನೂ, ಪಂಡಿತನೂ, ಧಾರ್ಮಿಕನೂ, ಶೂರನೂ ಆದವನನ್ನು ಅವಮಾನಿಸುತ್ತಾರೆ. ಇಷ್ಟೇ ಅಲ್ಲದೆ ತಿರಸ್ಕಾರವನ್ನೂ ಮಾಡುತ್ತಾರೆ. ಗೂಢಾಭಿಪ್ರಾಯವುಳ್ಳವರಾಗಿ, ಒಳಗೊಂದುರೀತಿ, ಹೊರಗೊಂದುರೀತಿ ನಡೆಯುತ್ತ ಯಾವಾಗ ಸಮಯವು ದೊರಕುವುದೋ ಎಂದು ಕಾದಿರುತ್ತಾರೆ. ಆಪತ್ಕಾಲದಲ್ಲಿ ದ್ರೋಹವನ್ನೇ ಮಾಡುತ್ತಾರೆ. ಅವರು ಮಹಾ ಭಯಂಕರರು. ಅವರಿಂದ ಎಲ್ಲ ಕಾಲಗಳಲ್ಲಿಯೂ ಭಯವಿದ್ದೇ ಇರುವುದು. ॥೧–೫॥ ಎಲವೋ ರಾಕ್ಷಸನೇ ! ಇದಕ್ಕೆ ನಿದರ್ಶನವಾಗಿ ಪದ್ಮವನದಲ್ಲಿನ ಆನೆಗಳು ತಮ್ಮನ್ನು ಹಿಡಿಯಲೋಸುಗ ಪಾಶಗಳನ್ನು ಕೈಯಲ್ಲಿ ಹಿಡಿದು ಬಂದ ಮಾನವರನ್ನು ಕಂಡು

¶ " ಸಾಧಕಂ " ಪಿ. ಪಾ. ‡ " ಪುರಾ " ಪಿ. ಪಾ.

|| ೬ || ನಾಗ್ನಿರ್ನಾನ್ಯಾನಿ ಶಸ್ತ್ರಾಣಿ ನ ನಃ ಪಾಶಾ ಭಯಾವಹಾಃ | ಘೋರಾಃ ಸ್ವಾರ್ಥಪ್ರಯುಕ್ತಾಸ್ತು ಜ್ಞಾತಯೋ ನೋ ಭಯಾವಹಾಃ || ೭ || ಉಪಾಯಮೇತೇ ವಕ್ಷ್ಯಂತಿ ಗ್ರಹಣೇ ನಾತ್ರ ಸಂಶಯಃ | ಕೃತ್ಸ್ನಾದ್ಭಯಾತ್ ಜ್ಞಾತಿಭಯಂ ಸುಕಷ್ಟಂ ವಿದಿತಂ ಚ ನಃ || ೮ || ವಿದ್ಯತೇ ಗೋಷು ಸಂಪನ್ನಂ ವಿದ್ಯತೇ ಬ್ರಾಹ್ಮಣೇ ದಮಃ | ವಿದ್ಯತೇ ಸ್ತ್ರೀಷು ಚಾಪಲ್ಯಂ ವಿದ್ಯತೇ ಜ್ಞಾತಿತೋ ಭಯಂ || ೯ || ತತೋ ನೇಷ್ಟಮಿದಂ ಸೌಮ್ಯ! ಯದಹಂ ಲೋಕಸತ್ಕೃತಃ | ಐಶ್ವರ್ಯೇಣಾಭಿಜಾತಶ್ಚ ಜ್ಞಾತೀನಾಂ

---

ಯಿಂದ, ತಾಃ - ಆ ಶ್ಲೋಕಗಳನ್ನು, ಶೃಣು - ಕೇಳು. || ೬ || ನಃ - ನಮಗೆ, ಅಗ್ನಿಃ - ಅಗ್ನಿಯು, ನಭಯಾವಹಃ - ಭಯವನ್ನು ಮಾಡಲಾರದು, ಅನ್ಯಾನಿ - ಲೋಕವಿಲಕ್ಷಣಗಳಾದ, ಶಸ್ತ್ರಾಣಿ - ಶಸ್ತ್ರಗಳು, ನಭಯಾವಹಾನಿ - ಭಯಂಕರಗಳಾಗಲಾರವು, ಪಾಶಾಃ - ಹಗ್ಗಗಳು, ಭಯಾವಹಾಃ - ಭಯಂಕರಗಳು, ನ - ಅಲ್ಲವು, ಕಿಂತು - ಆದರೆ, ಘೋರಾಃ - ದಯಾಶೂನ್ಯರಾದ, ಸ್ವಾರ್ಥಪ್ರಯುಕ್ತಾಃ - ಸ್ವಪ್ರಯೋಜನದಲ್ಲೇ ಆಸಕ್ತರಾದ, ಜ್ಞಾತಯಃ - ಜ್ಞಾತಿಗಳು, ನಃ - ನಮಗೆ, ಭಯಾವಹಾಃ-ಭಯವನ್ನುಂಟುಮಾಡುವರು. ||೭|| ಏತೇ-ಈ ಜ್ಞಾತಿಗಳು, ಗ್ರಹಣೇ-ನಮ್ಮನ್ನು ಹಿಡಿಯುವ ವಿಷಯದಲ್ಲಿ, ಉಪಾಯಂ - ಉಪಾಯವನ್ನು, ವಕ್ಷ್ಯಂತಿ - ಹೇಳುತ್ತಾರೆ, ಕೃತ್ಸ್ನಾತ್ - ಸಮಸ್ತವಾದ, ಭಯಾತ್ - ಭಯಕ್ಕಿಂತಲೂ, ಜ್ಞಾತಿಭಯಂ - ಜ್ಞಾತಿಗಳ ಭಯವು, ಸುಕಷ್ಟಮಿತಿ - ಬಹಳ ಕಷ್ಟವಾಗಿರುವುದೆಂಬ, ವಚಃ - ಮಾತು, ವಿದಿತಂ - ತಿಳಿಯಲ್ಪಟ್ಟಿತು. || ೮ || ಗೋಷು - ಗೋವುಗಳಲ್ಲಿ, ಸಂಪನ್ನಂ - ಕ್ಷೀರಾದಿ ಸಂಪತ್ತಿಯು, ವಿದ್ಯತೇ - ಇರುತ್ತದೆ, ದಮಃ - ಇಂದ್ರಿಯನಿಗ್ರಹವು, ಬ್ರಾಹ್ಮಣೇ - ಬ್ರಾಹ್ಮಣನಲ್ಲಿ, ವಿದ್ಯತೇ - ಇರುತ್ತದೆ, ಸ್ತ್ರೀಷು - ಹೆಂಗಳಲ್ಲಿ, ಚಾಪಲ್ಯಂ - ಚಂಚಲಚಿತ್ತತೆಯು, ವಿದ್ಯತೇ-ಇರುತ್ತದೆ, ಜ್ಞಾತಿನಃ-ಜ್ಞಾತಿಗಳ ದೆಸೆಯಿಂದ, ಭಯಂ-ಭಯವು ವಿದ್ಯತೇ - ಇರುತ್ತದೆಯಷ್ಟೆ, ತತಃ - ಆ ಕಾರಣದಿಂದ, ಹೇ ಸೌಮ್ಯ - ಎಲೈ ಸೌಮ್ಯನೇ, ಅಹಂ - ನಾನು, ಲೋಕನಮಸ್ಕೃತಃ - ಸಮಸ್ತ ಜನರಿಂದಲೂ ಪೂಜಿಸಲ್ಪಟ್ಟಿದ್ದೇನೆ, ಐಶ್ವರ್ಯೇಣ - ಸಂಪದದಿಂದ, ಅಭಿಜಾತಶ್ಚ - ಕೂಡಿದವನು, ಜ್ಞಾತೀನಾಂ - ಜ್ಞಾತಿಗಳ, ಮೂರ್ಧ್ನಿ - ಮುಂಡೆಯಲ್ಲಿ, ಅವಸ್ಥಿತಇತಿಯತ್ - ಇದ್ದೇನೆ ಎಂಬದಾವದುಂಟೋ, ತತಃ - ಆ ಕಾರಣದ ದೆಸೆಯಿಂದ, ಇದಂ -

---

ಕೆಲವು ಶ್ಲೋಕಗಳನ್ನು ಹೇಳಿವೆ. ಅವುಗಳನ್ನು ಈಗ ಹೇಳುವೆನು ; ಕೇಳು:—" ನಮಗೆ ಬೆಂಕಿಯಿಂದ ಭಯವಿರುವುದಿಲ್ಲವು. ಇತರ ಆಯುಧಗಳಿಂದಲೂ ನಮಗೆ ಭಯವಿರುವುದಿಲ್ಲವು. ಈ ಪಾಶಗಳು ನಮಗೆ ಹೆದರಿಕೆಯನ್ನುಂಟುಮಾಡುವುದಿಲ್ಲವು. ಆದರೂ ಈ ಮಾನವರು ತಮ್ಮ ಕಾರ್ಯಕ್ಕಾಗಿ ಉಪಯೋಗಿಸಿಕೊಳ್ಳಲು ಇಟ್ಟುಕೊಂಡಿರುವ ನಮ್ಮ ಜಾತಿಯವುಗಳೇ ಆದ ಆನೆಗಳಿಂದ ನಮಗೆ ವಿಶೇಷವಾದ ಭಯವಿರುವುದು. ನಮ್ಮನ್ನು ಹಿಡಿಯಲು ಅವುಗಳೇ ಉಪಾಯಗಳನ್ನು ಹೇಳಿಕೊಡುತ್ತವೆ. ಇದಕ್ಕೆಷ್ಟುಮಾತ್ರವೂ ಸಂದೇಹವಿಲ್ಲವು. ಎಲ್ಲ ವಿಧವಾದ ಕಷ್ಟಗಳಿಗಿಂತಲೂ ದಾಯಾದಿಗಳಿಂದುಂಟಾಗುವ ಭಯವು ಕಷ್ಟತರವಾಗುವುದು. ಗೋವುಗಳಲ್ಲಿ ಕ್ಷೀರಾದಿ ಸಂಪದವಿರುತ್ತದೆ ; ಬ್ರಾಹ್ಮಣರಲ್ಲಿ ಇಂದ್ರಿಯನಿಗ್ರಹ ಸಾಮರ್ಥ್ಯವಿರುತ್ತದೆ; ಹೆಂಗುಸರಲ್ಲಿ ಚಿತ್ತಚಾಂಚಲ್ಯವಿರುತ್ತದೆ ; ಜ್ಞಾತಿಗಳಲ್ಲಿ ಭಯವಿರುತ್ತದೆ,—(ಅವರಿಂದ ಭಯವಿದ್ದೇ ಇರುತ್ತದೆ.) ಎಲಾ ವಿಭೀಷಣಾ ! ಅಂತೆಯೇ ನೀನು ನನಗೆ ಜ್ಞಾತಿಯಾಗಿರುವುದರಿಂದ, ನಾನು ಸಮಸ್ತ ಲೋಕದವರಿಂದಲೂ ಪೂಜಿತನಾಗಿ, ಮಹದೈಶ್ವರ್ಯ

ಮೂರ್ಧ್ನ್ಯವಸ್ಥಿತಃ ॥ ೧೦ ॥ ಯಥಾಪುಷ್ಕರಪರ್ಣೇಷು ಪತಿತಾಸ್ತೋಯಬಿಂದವಃ । ನಶ್ಲೇಷಮುಪಗಚ್ಛಂತಿ ತಥಾ ನಾರ್ಯೇಷು ಸಂಗತಂ ॥ ೧೧ ॥ $ ಯಥಾ ಮಧುಕರ ಸ್ತರ್ಷಾದ್ರಸಂ ವಿಂದನ್ನವಿದ್ಯತೇ । ತಥಾ ತ್ವಮಪಿ ತತ್ರೈವ ತಥಾ ನಾರ್ಯೇಷು ಸೌಹೃದಂ ॥ ೧೨ ॥ ಯಥಾ ಪೂರ್ವಂ ಗಜಸ್ಸ್ನಾತ್ವಾ ಗೃಹ್ಯ ಹಸ್ತೇನ ವೈ ರಜಃ । ದೂಷಯತ್ಯಾತ್ಮನೋ ದೇಹಂ ತಥಾ ನಾರ್ಯೇಷು ಸೌಹೃದಂ ॥ ೧೩ ॥ ಯಥಾ ಶರದಿ ಮೇಘಾನಾಂ ಸಿಂಚತಾಮಪಿ ಗರ್ಜತಾಂ । ನಭವತ್ಯಂಬುಸಂಕ್ಲೇದಸ್ತಥಾ

ಇದು, ತವ - ನಿನಗೆ, ಇಷ್ಟಂ - ಇಷ್ಟವಾದದ್ದು, ನ - ಅಲ್ಲವು. ॥ ೯-೧೦ ॥ ಯಥಾ - ಹೇಗೆ, ಪುಷ್ಕರಪರ್ಣೇಷು - ಕಮಲದ ರೇಕುಗಳಲ್ಲಿ, ಪತಿತಾಃ - ಬಿದ್ದಿರುವ, ತೋಯಬಿಂದವಃ - ಜಲ ಬಿಂದುಗಳು, ಶ್ಲೇಷಂ-ಸಂಬಂಧವನ್ನು, ನೋಪಗಚ್ಛಂತಿ-ಹೊಂದುವದಿಲ್ಲವೋ, ತಥಾ-ಹಾಗೆಯೇ, ಅನಾರ್ಯೇಷು-ದುಷ್ಟರ ವಿಷಯವಾಗಿ, ಸಂಗತಂ-ಸಂಬಂಧವು, ಶ್ಲೇಷಂ-ಸ್ನೇಹಾನುಬಂಧವನ್ನು, ನೋಪಗಚ್ಛತಿ - ಹೊಂದಲಾರದು. ॥ ೧೧ ॥ ಯಥಾ - ಹೇಗೆ, ಮಧುಕರಃ - ಜೇನು ಹುಳುಗಳು, ತರ್ಷಾತ್ - ಬಾಯಾರಿಕೆಯಿಂದ, ರಸಂ - ರಸವನ್ನು, ವಿಂದನ್ - ಹೊಂದುತ್ತ, ನವಿದ್ಯತಿ - ಇರುವ ದಿಲ್ಲವೋ, ತಥಾ - ಹಾಗೆ, ತ್ವಮಪಿ - ನೀನೂ, ತತ್ರೈವ - ಅಲ್ಲಿಯೇ, ಅನಾರ್ಯೇಷು - ದುಷ್ಟರಲ್ಲಿ, ಸೌಹೃದಂ - ಸ್ನೇಹವು, ತಥಾ - ಹಾಗೆಯೇ. ॥೧೨॥ ಯಥಾ - ಹೇಗೆ, ಪೂರ್ವಂ - ಮೊದಲು, ಗಜಃ-ಆನೆಯು, ಸ್ನಾತ್ವಾ - ಜಳಕಮಾಡಿ, ಹಸ್ತೇನ - ಸೊಂಡಿಲಿನಿಂದ, ರಜಃ - ಧೂಳನ್ನು, ಗೃಹ್ಯ - ತೆಗೆದುಕೊಂಡು, ಆತ್ಮನಃ - ತನ್ನ, ದೇಹಂ - ಶರೀರವನ್ನು, ದೂಷಯತಿ - ದೋಷಗ್ರಸ್ತವಾಗಿ ಮಾಡುತ್ತದೆಯೋ, ಅನಾರ್ಯೇಷು - ದುಷ್ಟರಲ್ಲಿ, ಸೌಹೃದಂ - ಸ್ನೇಹವೂ, ತಥಾ - ಅದರಂತೆಯೇ. ॥ ೧೩ ॥ ಯಥಾ - ಹೇಗೆ, ಶರದಿ - ಶರತ್ಕಾಲದಲ್ಲಿ, ಮೇಘಾನಾಂ - ಮೇಘಗಳು, ಸಿಂಚತಾಮಪಿ - ಜಲಸೇಚನವನ್ನು ಮಾಡುತ್ತಿದ್ದರೂ, ಗರ್ಜತಾಮಪಿ - ಕೂಗುತ್ತಿದ್ದರೂ, ಅಂಬುಸಂಕ್ಲೇದಃ - ಉದಕ ದಿಂದ ತೊಯಿಸೋಣವು, ನಭವತಿ - ಆಗುವದಿಲ್ಲವೋ, ಅನಾರ್ಯೇಷು - ದುಷ್ಟರಲ್ಲಿ, ಸೌಹೃದಮಪಿ-

ವನ್ನು ಹೊಂದಿ, ಜ್ಞಾತಿಗಳೆಲ್ಲರಲ್ಲಿಯೂ ಶ್ರೇಷ್ಠನಾಗಿರುವುದು ನಿನಗೆಷ್ಟುಮಾತ್ರವೂ ಸಹ್ಯ ವಾಗಿರುವುದಿಲ್ಲವು. ಕಮಲದೆಲೆಯಮೇಲೆ ಬಿದ್ದ ನೀರ್ಪನಿಗಳು ಒಂದರೊಡನೊಂದು ಸೇರ ದಿರುವಂತೆ ದುರ್ಮಾರ್ಗರಾದವರೊಡನೆ ಎಷ್ಟುಕಾಲ ಸಹವಾಸ ಮಾಡಿದರೂ ಅವ ರಲ್ಲಿ ಸ್ನೇಹವುಂಟಾಗದು. ಆರಡಿಗಳು ಅತ್ಯಾಶೆಯಿಂದ ಹೂಗಳಲ್ಲಿರುವ ಜೇನನ್ನು ಕುಡಿದು ಆಮೇಲೆ ಆ ಹೂವಿನಲ್ಲಿ ಒಂದು ನಿಮಿಷಮಾತ್ರವೂ ಕುಳ್ಳಿರುವುದಿಲ್ಲವಷ್ಟೆ. ಹಾಗೆಯೇ ನೀನೂ ಸಹ ನನ್ನಿಂದ ಸಮಸ್ತ ಸುಖಗಳನ್ನೂ ಅನುಭವಿಸಿ ಇದೀಗ ನನ್ನನ್ನು ತೊರೆದುಹೋಗಲು ಬಯಸಿರುವೆ. ದುಷ್ಟಸಹವಾಸದ ಫಲವೇ ಇಷ್ಟು! ಆನೆಯು ಮೊದಲು ಚೆನ್ನಾಗಿ ಸ್ನಾನ ಮಾಡಿ, ಆಮೇಲೆ ತನ್ನ ಸೊಂಡಿಲಿಂದ ಧೂಳನ್ನು ತೆಗೆದು, ತನ್ನ ಮೈಮೇಲೆರಚಿಕೊಂಡು ಕೊಳೆ ಮಾಡಿಕೊಳ್ಳುವಹಾಗೆ ದುರ್ಮಾರ್ಗರು ಮೊದಲು ಸ್ನೇಹವನ್ನು ಮಾಡಿ ಆಮೇಲೆ ಅದಕ್ಕೆ ವಿಘಾತವನ್ನು ತಂದುಕೊಳ್ಳುವರು. ॥ ೯-೧೩ ॥ ಶರದೃತುವಿನಲ್ಲಿ ಮೇಘಗಳು ಮೇಲೇರಿ ಬಂದು ಬಹಳ ಆರ್ಭಟವಾಗಿ ಗರ್ಜಿಸುತ್ತಿದ್ದರೂ, ಭೂಮಿಯಮೇಲೆ ಸ್ವಲ್ಪವಾದರೂ ತೇವವು

$ ಈ ಶ್ಲೋಕವು ಗೋ. ಪಾಠದಲ್ಲಿ ಅಧಿಕ.

**ನಾರ್ಯೇಷು ಸೌಹೃದಂ || ೧೪ || § ಅನ್ಯಸ್ತ್ವೇವಂ ವಿಧಂ ಬ್ರೂಯಾದ್ವಾಕ್ಯಮೇತನ್ನಿಶಾಚರ ! | ಅಸ್ಮಿನ್ಮುಹೂರ್ತೇನಭವೇ ತ್ತ್ವಾಂತು ಧಿಕ್ಕುಲಪಾಂಸನಂ ! " || ೧೫ || ಇತ್ಯುಕ್ತಃ ಪರುಷಂ ವಾಕ್ಯಂ ನ್ಯಾಯವಾದೀ ವಿಭೀಷಣಃ | ಉತ್ಪಪಾತ ಗದಾಪಾಣಿಶ್ಚತುರ್ಭಿಸ್ಸಹರಾಕ್ಷಸೈಃ || ೧೬ || ಅಬ್ರವೀಚ್ಚ ತದಾ ವಾಕ್ಯಂ ಜಾತಕ್ರೋಧೋ ವಿಭೀಷಣಃ | ಅಂತರಿಕ್ಷಗತಃ ಶ್ರೀಮಾನ್ ಭ್ರಾತರಂ ರಾಕ್ಷಸಾಧಿಪಂ | " ಸತ್ವಂ † ಭ್ರಾತಾಸಿ ಮೇ ರಾಜನ್ ! ಬ್ರೂಹಿ ಮಾಂ ಯದ್ಯದಿಚ್ಛಸಿ ||೧೭|| ಜ್ಯೇಷ್ಠೋ ಮಾನ್ಯಃ ಪಿತೃಸಮೋ ಸಚ ಧರ್ಮಪಥೇ ಸ್ಥಿತಃ | ಇದಂ ತು ಪರುಷಂ ವಾಕ್ಯಂ ನಕ್ಷಮಾಮ್ಯ**

ಸ್ನೇಹವೂ ಕೂಡ, ತಥಾ - ಹಾಗೆಯೇ. || ೧೪ || ಹೇ ನಿಶಾಚರ - ಎಲೈ ರಕ್ಕಸನೇ, ಅನ್ಯಸ್ತು - ಮತ್ತೊಬ್ಬನೇ ಆದರೆ, ಏವಂವಿಧಂ - ಇಂಥಾ, ಏತದ್ವಾಕ್ಯಂ - ಈ ಮಾತನ್ನು, ಬ್ರೂಯಾತ್ - ಹೇಳುವನೇ ಆದರೆ, ಅಸ್ಮಿನ್ಮುಹೂರ್ತೇ - ಈ ಮುಹೂರ್ತದಲ್ಲಿ, ನಭವೇತ್ - ಇರಲಾರನು, ಕುಲಪಾಂಸನಂ - ಕುಲನಾಶಕನಾದ, ತ್ವಾಂತು - ನಿನ್ನನ್ನಾದರೆ, ಧಿಕ್ - ನಿಂದಿಸು. ||೧೫|| ನ್ಯಾಯವಾದೀ - ನ್ಯಾಯ ವಚನಗಳುಳ್ಳ, ವಿಭೀಷಣಃ - ವಿಭೀಷಣನು, ಇತಿ - ಈ ಪರಿಯಾಗಿ, ಪರುಷಂ - ಕ್ರೂರವಾದ, ವಾಕ್ಯಂ - ಮಾತನ್ನು, ಉಕ್ತಃ - ಹೇಳಲ್ಪಟ್ಟವನಾಗಿ, ಗದಾಪಾಣಿಃ - ಗದಾಯುಧವೇ ಹಸ್ತದಲ್ಲುಳ್ಳವನಾಗಿ ಚತುರ್ಭಿಃ - ನಾಲ್ವರಾದ, ರಾಕ್ಷಸೈಸ್ಸಹ - ರಾಕ್ಷಸರೊಡನೆ, ಉತ್ಪಪಾತ - ಮೇಲಕ್ಕೆ ಹಾರಿದನು. || ೧೬ || ತದಾ - ಆ ಕಾಲದಲ್ಲಿ, ಜಾತಕ್ರೋಧಃ - ಹುಟ್ಟಿದ ಕೋಪವುಳ್ಳ, ಶ್ರೀಮಾನ್ - ಸಂಪದ್ಯುಕ್ತನಾದ, ವಿಭೀಷಣಃ - ವಿಭೀಷಣನು, ಅಂತರಿಕ್ಷಗತಃ - ಅಂತರಿಕ್ಷವನ್ನು ಹೊಂದಿದವನಾಗಿ, ರಾಕ್ಷಸಾಧಿಪಂ - ರಾಕ್ಷಸಾಧಿಪತಿಯಾದ, ಭ್ರಾತರಂ - ಅಣ್ಣನಾದ ರಾವಣನನ್ನು ಕುರಿತು, ವಾಕ್ಯಂ - ಮಾತನ್ನು, ಅಬ್ರವೀತ್ - ನುಡಿದನು. || ೧೭ || ಹೇ ರಾಜನ್ - ಎಲೈ ಅರಸೇ, ಮೇ-ಎನಗೆ, ತ್ವಂ-ನೀನು, ಭ್ರಾತಾ-ಹಿರಿಯಣ್ಣನು, ಅಸಿ-ಆಗಿರುವೆ, ಮಾಂ-ನನ್ನನ್ನು ಕುರಿತು,

ಹೇಗುಂಟಾಗುವುದಿಲ್ಲವೋ, ಹಾಗೆಯೇ ದುಷ್ಟರ ಸಹವಾಸವೂ ನಿರರ್ಥಕವಾಗುವುದು. ಎಲವೋ ರಾಕ್ಷಸನೇ! ಬೇರೊಬ್ಬನಾವನಾದರೂ ಈ ರೀತಿ ಹೇಳಿದ್ದರೆ ಅವನನ್ನು ಈವರೆಗೆ ಯಾವಾಗಲೋ ಸಂಹರಿಸಿಬಿಡುತ್ತಿದ್ದೆನು. ನೀನು ನನ್ನ ಸಹೋದರನು ; ಇದರಿಂದ ನಿನ್ನನ್ನು ಮನ್ನಿಸಿರುವೆನು. ಎಲಾ ಕುಲಗೇಡಿಯೇ! ಹಾಳಾಗಿ ಹೋಗು ; ನನ್ನೆದುರಿಗೆ ನಿಲ್ಲಬೇಡ ; ತೊಲಗು." || ೧೪–೧೫ || ಈ ಪ್ರಕಾರವಾಗಿ ಆ ರಾವಣಾಸುರನು ಬಹು ಕಠಿನವಾಗಿ ನುಡಿಯಲು, ಆ ಕೂಡಲೇ ನ್ಯಾಯವಾದಿಯಾದ ವಿಭೀಷಣನು ಗದೆಯನ್ನು ಕೈಯಲ್ಲಿ ಹಿಡಿದು ತನ್ನ ಮಂತ್ರಿಗಳಾದ ನಾಲ್ವರು ರಾಕ್ಷಸರೊಡನೆ ಆಕಾಶಕ್ಕೆ ಹಾರಿ ನಿಂತನು. ಮಹಾ ಕಾಂತಿಮಂತನಾದ ಆತನು ಆ ಸಮಯದಲ್ಲಿ ಮಹಾ ಕೋಪೋದ್ದೀಪಿತನಾಗಿ ತಾನಿದ್ದ ಸ್ಥಳದಿಂದಲೇ ತನ್ನ ಅಣ್ಣನಾದ ರಾವಣಾಸುರನನ್ನು ಕುರಿತು, "ರಾಕ್ಷಸರಾಜಾ! ನೀನು ನನಗೆ ಅಣ್ಣನಾದುದರಿಂದ ನನ್ನ ವಿಷಯದಲ್ಲಿ ನೀನು ಏನೇನು ಹೇಳಬಯಸುವೆಯೋ ಅದೆಲ್ಲವನ್ನೂ ಹೇಳು. ಅಯ್ಯಾ! ನೀನು ನನ್ನ ಅಗ್ರಜನು ; ಪೂಜನೀಯನು ; ತಂದೆಗೆ ಸಮಾನನಾದವನು. ಆದರೂ ಧರ್ಮಮಾರ್ಗವನ್ನು ಮೀರಿ ನಡೆಯುತ್ತಿರುವೆ. ಹೀಗಿದ್ದರೂ

§ "ರೋ" ತಿ. ಪ. † "ಭ್ರಾಂತೋಸಿ" ತಿ. ಪಾ.

* ನೃತಂ ತವ ‖ ೧೮ ‖ ಸುನೀತಂ ಹಿತಕಾಮೇನ ವಾಕ್ಯಮುಕ್ತಂ ದಶಾನನ! । ನಗೃಹ್ಣಂತ್ಯಕೃತಾತ್ಮಾನಃ ಕಾಲಸ್ಯ ವಶಮಾಗತಾಃ ‖ ೧೯ ‖ ಸುಲಭಾಃ ಪುರುಷಾ ರಾಜನ್ಸತತಂ ಪ್ರಿಯವಾದಿನಃ । ಅಪ್ರಿಯಸ್ಯತು ಪಥ್ಯಸ್ಯ ವಕ್ತಾ ಶ್ರೋತಾಚ ದುರ್ಲಭಃ ‖ ೨೦ ‖ ಬದ್ಧಂ ಕಾಲಸ್ಯ ಪಾಶೇನ ಸರ್ವಭೂತಾಪಹಾರಿಣಾ । ನ ನಶ್ಯಂತಮುಪೇಕ್ಷೇಯಂ ಪ್ರದೀಪ್ತಂ ಶರಣಂ ಯಥಾ ‖ ೨೧ ‖ ದೀಪ್ತಪಾವಕಸಂಕಾಶೈಃ ಶಿತೈಃ

---

ಯದ್ಯದಿಚ್ಛಸಿ - ಯಾವ ಯಾವದನ್ನು ಬಯಸುತ್ತೀಯೋ, ತತ್ತತ್ - ಅದನ್ನೆಲ್ಲಾ, ಬ್ರೂಹಿ - ಹೇಳು, ಜ್ಯೇಷ್ಠಃ - ದೊಡ್ಡಣ್ಣನು, ಪಿತೃಸಮಃ - ತಂದೆಗೆ ಸಮಾನನಾದ ಕಾರಣ, ಮಾನ್ಯಃ - ಪೂಜ್ಯನು, ಧರ್ಮಪಥೇ - ಧರ್ಮಮಾರ್ಗದಲ್ಲಿ, ನಸ್ಥಿತಃ - ಇರದೇಹೋದರೆ, ತವ - ನಿನ್ನ, ಅನೃತಂ - ಅಸತ್ಯವಾದ, ಪರುಷಂ - ಕ್ರೂರವಾದ, ಇದಂವಾಕ್ಯಂತು - ಈ ಮಾತನ್ನಾದರೆ, ನಕ್ಷಮಾಮಿ - ಸಹಿಸಲಾರೆನು. ‖ ೧೮ ‖ ಹೇ ದಶಾನನ - ಎಲೈ ದಶಮುಖನೇ, ಹಿತಕಾಮೇನ - ಹಿತಕಾಮಿಯಾದವನಿಂದ, ಸುನೀತಂ - ನ್ಯಾಯಶಿಕ್ಷಿತವಾಗಿ, ಉಕ್ತಂ - ಹೇಳಲ್ಪಟ್ಟ, ವಾಕ್ಯಂ - ಮಾತು, ಅಕೃತಾತ್ಮನಃ - ಆತ್ಮಜ್ಞಾನ ವಿಹೀನರು, ಕಾಲಸ್ಯ - ಯಮನ, ವಶಂ - ಸ್ವಾಧೀನತೆಯನ್ನು, ಆಗತಾಃ - ಹೊಂದ್ಯಿ ನಗೃಹ್ಣಂತಿ - ಪರಿಗ್ರಹಿಸುವದಿಲ್ಲವು. ‖ ೧೯ ‖ ಹೇ ರಾಜನ್ - ಎಲೈ ಅರಸೇ, ಸತತಂ - ನಿರಂತರವೂ, ಪ್ರಿಯವಾದಿನಃ - ತತ್ಕಾಲದಲ್ಲಿ ಇಷ್ಟವಾಗಿ ಮಾತನಾಡುತ್ತಿರುವ, ಪುರುಷಾಃ - ಪುರುಷರು, ಸುಲಭಾಃ- ಸುಲಭರು, ಅಪ್ರಿಯಸ್ಯ - ತತ್ಕ್ಷಣಕ್ಕೆ ಇಷ್ಟವಾಗಿ ತೋರದಿರುವ, ಪಥಸ್ಯ - ಪರಿಣಾಮದಲ್ಲಿ ಹಿತಕರವಾದ ಮಾತನ್ನು, ವಕ್ತಾ - ಹೇಳುವವನೂ, ಶ್ರೋತಾಚ - ಕೇಳುವವನೂ, ದುರ್ಲಭಃ - ದುರ್ಲಭನು. ‖೨೦‖ ಸರ್ವ....ಣಾ - ಸರ್ವಪ್ರಾಣಿಗಳನ್ನೂ ಅಪಹರಿಸುತ್ತಿರುವ, ಕಾಲಸ್ಯ - ಯಮನ, ಪಾಶೇನ - ಹಗ್ಗದಿಂದ, ಬದ್ಧಂ - ಕಟ್ಟಲ್ಪಟ್ಟು, ನಶ್ಯಂತಂ - ನಶಿಸಿಹೋಗುತ್ತಿರುವ ನಿನ್ನನ್ನು, ಪ್ರದೀಪ್ತಂ - ಸುಡುತ್ತಿರುವ, ಶರಣಂಯಥಾ - ಮನ್ನಣೆಯನ್ನಂತೆ, ನೋಪೇಕ್ಷೇಯಂ - ಉಪೇಕ್ಷೆಮಾಡಲಾರೆ. ‖ ೨೧ ‖ ಅಹಂ-ನಾನು, ರಾಮೇಣ-ಶ್ರೀರಾಮನಿಂದ, ತ್ವಾಂ-ನಿನ್ನನ್ನು, ದೀಪ....ಶೈಃ-

---

ಯುಕ್ತಾಯುಕ್ತ ವಿಚಾರಮಾಡದೆ ನೀನು ನನ್ನ ವಿಷಯದಲ್ಲಿ ಅನೃತವಾಗಿ ಆಡಿದ ಕಠಿನ ವಾಕ್ಯಗಳನ್ನು ಮಾತ್ರ ನಾನು ಸಹಿಸಲಾರೆನು. ಎಲೈ ರಾವಣೇಶ್ವರನೇ! ನಾನು ನಿನ್ನ ಹಿತವನ್ನೇ ಬಯಸಿ ಚೆನ್ನಾಗಿ ಆಲೋಚನೆ ಮಾಡಿ ನಿಶ್ಚಯಿಸಿದ ಮಾತುಗಳನ್ನೇ ಆಡಿದೆನು. ಹಾಗೆ ಹೇಳಿದರೂ, ಬುದ್ಧಿಹೀನರೂ, ಕಾಲಚೋದಿತರೂ ಆದವರು ಹಿತವಾಕ್ಯಗಳನ್ನು ಕೇಳದಿರುವಂತೆ ನೀನೂ ಕೇಳಲಿಲ್ಲ. ಅಯ್ಯಾ ರಾಕ್ಷಸಪ್ರಭುವೇ! ಲೋಕದಲ್ಲಿ ಪ್ರಿಯ ವಚನಗಳನ್ನಾಡುವವರು ಸುಲಭವಾಗಿ ದೊರಕುವರು. ಅಪ್ರಿಯವಾದರೂ ಶ್ರೇಯಸ್ಕರವಾದ ಹಿತವಾಕ್ಯಗಳನ್ನು ಹೇಳುವವರೂ, ಕೇಳುವವರೂ ಇಬ್ಬರೂ ದೊರಕುವುದು ತೀರ ವಿರಳ. ‖ ೧೬--೨೦ ‖ ಅಲ್ಲದೆ ಸಮಸ್ತ ಪ್ರಾಣಿಗಳನ್ನೂ ಸಂಹರಿಸುವ ಕಾಲಮೃತ್ಯುವು ಬಲವಾಗಿ ಹಿಡಿದಿರುವುದರಿಂದ ನಾಶವಾಗುತ್ತಿರುವ ನಿನ್ನನ್ನು ನೋಡಿ, ಬೆಂಕಿತಗುಲಿ ಉರಿಯುತ್ತಿರುವ ಮನೆಯನ್ನು ನೋಡಿ ಸುಮ್ಮನಿರಲಾರದವನಂತೆ ಇಷ್ಟುದೂರ ಹೇಳಿದೆನು. ಪ್ರಜ್ವಲಿಸುತ್ತಿರುವ ಕೆಂಡಕ್ಕೆ ಸಮಾನಗಳಾದುವೂ, ಬಹು ತೀಕ್ಷ್ಣಗಳಾದುವೂ, ಸ್ವರ್ಣಾ

---

* "ಅಗ್ರಜಸ್ಯತೇ" ತಿ. ರಾ. ಪಾ.

**ಕಾಂಚನಭೂಷಣೈಃ । ನತ್ವಾಮಿಚ್ಛಾಮ್ಯಹಂ ದ್ರಷ್ಟುಂ ರಾಮೇಣ ನಿಹತಂ ಶರೈಃ ॥೨೨॥ ಶೂರಾಶ್ಚ ಬಲವಂತಶ್ಚ ಕೃತಾಸ್ತ್ರಾಶ್ಚ ¶ ರಣಾಜಿರೇ । ಕಾಲಾಭಿಪನ್ನಾಸ್ಸೀದಂತಿ ಯಥಾ ವಾಲುಕಸೇತವಃ ॥ ೨೩ ॥ ತನ್ಮರ್ಷಯತು ಯಚ್ಚೋಕ್ತಂ ಗುರುತ್ವಾದ್ಧಿತಮಿಚ್ಛತಾ । ಆತ್ಮಾನಂ ಸರ್ವಥಾ ರಕ್ಷ ಪುರೀಂ ಚೇಮಾಂ ಸರಾಕ್ಷಸಾಂ ॥೨೪॥ ಸ್ವಸ್ತಿ ತೇಽಸ್ತು ಗಮಿಷ್ಯಾಮಿ ಸುಖೀಭವ ಮಯಾ ವಿನಾ । (ನೂನಂ ನತೇ ರಾವಣ! ಕಶ್ಚಿದಸ್ತಿ ರಕ್ಷೋನಿಕಾಯೇಷು ಸುಹೃತ್ಸಖಾ ವಾ । ಹಿತೋಪದೇಶಸ್ಯ ಸಮಂತ್ರವಕ್ತಾ ಯೋ ವಾರಯೇತ್ತ್ವಾಂ ಸ್ವಯಮೇವ ಪಾಪಾತ್) ॥ ೨೫ ॥**

ಪ್ರಜ್ವಲಿಸುತ್ತಿರುವ ಅಗ್ನಿಗೆ ಸಮಾನವಾದ, ಶಿತೈಃ - ತೀಕ್ಷ್ಣಗಳಾದ, ಕಾಂಚ....ಣೈಃ - ಭಂಗಾರದ ರೇಕುಗಳೇ ಅಲಂಕಾರವಾಗುಳ್ಳ, ಶರೈಃ - ಬಾಣಗಳಿಂದ, ನಿಹತಂ - ಹತನನ್ನಾಗಿ, ದ್ರಷ್ಟುಂ - ನೋಡಲು, ನೇಚ್ಛಾಮಿ - ಅಪೇಕ್ಷಿಸಲಾರೆನು. ॥ ೨೨ ॥ ಶೂರಾಶ್ಚ - ಶೂರರೂ, ಬಲವಂತಶ್ಚ - ಬಲವಂತರೂ, ಕೃತಾಸ್ತ್ರಾಶ್ಚ - ಅಸ್ತ್ರವಿದ್ಯಾಭ್ಯಾಸ ಮಾಡಿದವರೂ, ರಣಾಜಿರೇ - ರಣರಂಗದಲ್ಲಿ, ಕಾಲಾಭಿಪನ್ನಾಃ - ಮೃತ್ಯುವಿನಿಂದ ಗೃಹೀತರಾಗಿ, ವಾಲು....ಥಾ - ಮರಳಿನ ಸೇತುವೆಗಳಂತೆ, ಸೀದಂತಿ - ನಶಿಸಿಹೋಗುತ್ತಾರೆ. ॥ ೨೩ ॥ ಹಿತಮಿಚ್ಛತಾ - ಹಿತವನ್ನು ಕೋರುತ್ತಿರುವ, ಮಯಾ - ನನ್ನಿಂದ, ಗುರುತ್ವಾತ್ - ಅಣ್ಣನೆಂಬ ಗೌರವದಿಂದ, ಯತ್ - ಯಾವ ಮಾತು, ಉಕ್ತಂ - ಹೇಳಲ್ಪಟ್ಟಿತೋ, ತತ್ - ಅದನ್ನು, ಮರ್ಷಯತು - ಸಹಿಸಿಕೋ, ಆತ್ಮಾನಂ - ತನ್ನನ್ನು, ಸರ್ವಥಾ - ಸರ್ವಪ್ರಕಾರದಲ್ಲಿಯೂ, ರಕ್ಷ - ಸಂರಕ್ಷಣೆ ಮಾಡಿಕೋ, ಸರಾಕ್ಷಸಾಂ - ರಾಕ್ಷಸರಿಂದೊಡಗೂಡಿ, ಇಮಾಂಪುರೀಂಚ - ಈ ಲಂಕಾಪಟ್ಟಣವನ್ನು, ರಕ್ಷ - ಪಾಲಿಸು. ॥ ೨೪ ॥ ತೇ - ನಿನಗೆ, ಸ್ವಸ್ತಿ - ಸುಖವು, ಅಸ್ತು - ಆಗಲಿ, ಗಮಿಷ್ಯಾಮಿ - ಹೋಗುವೆನು, ಮಯಾವಿನಾ - ನನ್ನನ್ನು ಬಿಟ್ಟು, ಸುಖೀ - ಸುಖವಂತನಾಗಿ, ಭವ - ಇರು. ॥೨೫॥ ಹೇ ನಿಶಾಚರ - ಎಲೈ ರಾಕ್ಷಸನೇ, ಹಿತೈಷಿಣಾ - ಹಿತವನ್ನು ಕೋರುತ್ತಿರುವ, ಮಯಾ - ನನ್ನಿಂದ, ನಿವಾರ್ಯಮಾಣಸ್ಯ - ತಡೆಯಲ್ಪಟ್ಟ, ತೇ - ನಿನಗೆ, ವಚನಂ - ನನ್ನ ಮಾತು, ನರೋಚತೇ - ರುಚಿಸದೇಹೋಯಿತು, ಪರೀತಕಾಲಾಃ - ಮೃತ್ಯುವಿ

ಲಂಕೃತವಾದುವೂ ಆದ ಬಾಣಗಳಿಂದ ಶ್ರೀರಾಮನು ನಿನ್ನನ್ನು ಹೊಡೆಯುತ್ತಿರಲು ನೋಡಿಕೊಂಡಿರಲು ನನಗೆ ಎಷ್ಟುಮಾತ್ರವೂ ಮನಸ್ಸಿರುವುದಿಲ್ಲವು. ಇಷ್ಟೆಯಲ್ಲದೆ ರಣರಂಗದಲ್ಲಿ ಮಹಾಬಲಪರಾಕ್ರಮಶಾಲಿಗಳೂ, ಶಸ್ತ್ರಾಸ್ತ್ರವೇತ್ತರೂ ಆದ ರಾಕ್ಷಸವೀರರು ಕಾಲಮೃತ್ಯುವಿನಿಂದ ಹತರಾಗಿ, ಮರಳಿನಿಂದ ಕಟ್ಟಿದ ಕಟ್ಟೆಯಂತೆ ಉರುಳಿಬೀಳುವರು. ಇದನ್ನು ನೋಡಿ ನಾನು ಸಹಿಸಲಾರೆ. ನೀನು ನನಗೆ ದೊಡ್ಡವನಾದುದರಿಂದ ನಾನು ನಿನ್ನ ಶ್ರೇಯಸ್ಸನ್ನು ಕೋರಿ ನನಗೆ ತೋಚಿದ ಮಾತುಗಳನ್ನು ಹೇಳಿದೆನು. ಈ ವಿಷಯದಲ್ಲಿ ನೀನು ನನ್ನನ್ನು ಕ್ಷಮಿಸಬೇಕು. ಅಣ್ಣಾ! ಎಲ್ಲ ವಿಧಗಳಿಂದಲೂ ಪ್ರಯತ್ನಮಾಡಿ ನಿನ್ನನ್ನೂ, ಈ ಲಂಕಾನಗರವನ್ನೂ, ಇಲ್ಲಿರುವ ಸಮಸ್ತ ರಾಕ್ಷಸರನ್ನೂ ಕಾಪಾಡಿಕೋ. ನಿನಗೆ ಮಂಗಳವಾಗಲಿ. ಇದೋ ನಾನು ಹೋಗಿಬರುವೆನು. ಇನ್ನು ನೀನು ಸುಖವಾಗಿರಬಹುದು. ಎಲೈ ರಾಕ್ಷಸನೇ! ನಾನು ನಿನ್ನ ಮೇಲನ್ನು ಕೋರಿ ಎಷ್ಟು ಹೇಳಿದರೂ ನನ್ನ ಮಾತುಗಳು

¶ "ನರಾರಣೇ" ತಿ. ಪಾ.

ನಿವಾರ್ಯಮಾಣಸ್ಯ ಮಯಾ ಹಿತೈಷಿಣಾ
ನರೋಚತೇ ತೇ ವಚನಂ ನಿಶಾಚರ! ।
ಪರೀತಕಾಲಾಹಿ ಗತಾಯುಷೋ ನರಾ
ಹಿತಂ ನಗೃಹ್ಣಂತಿ ಸುಹೃದ್ಭಿರೀರಿತಂ" ॥ ೨೬ ॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಷೋಡಶಸ್ಸರ್ಗಃ



ನಿಂದ ವ್ಯಾಪ್ತರಾದ, ಗತಾಯುಷಃ ಕಳೆದುಹೋದ ಆಯುಸ್ಸುಳ್ಳ, ನರಾಃ-ಮನುಷ್ಯರು, ಸುಹೃದ್ಭಿಃ-ಸ್ನೇಹಿತರಿಂದ, ಈರಿತಂ-ಹೇಳಲ್ಪಟ್ಟ, ಹಿತಂ-ಹಿತವನ್ನು, ನಗೃಹ್ಣಂತಿಹಿ-ಗ್ರಹಿಸುವದಿಲ್ಲವಷ್ಟೆ. ॥ ೨೬ ॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಷೋಡಶಸ್ಸರ್ಗಃ.



ನಿನಗೆ ರುಚಿಸದಾಗಿವೆ. ಇನ್ನೇನುತಾನೇ ಮಾಡಲಾದೀತು. ಗತಾಯುಗಳಾದವರು ಮೃತರಿಗೆ ಸಮಾನರೇ. ಅಂತಹರು ಮಿತ್ರರು ಹಿತವನ್ನು ಹೇಳಿದರೂ ಅದನ್ನು ಎಷ್ಟುಮಾತ್ರವೂ ಕೇಳರು." ॥ ೨೧-೨೬ ॥

ಇಂತಿದು ರಾವಣಕೃತ ವಿಭೀಷಣ ತಿರಸ್ಕಾರ, ವಿಭೀಷಣಕೃತ ಲಂಕಾತ್ಯಾಗ
ಎಂಬ ಹದಿನಾರನೆಯ ಸರ್ಗವು ಸಮಾಪ್ತವಾದುದು.



# ಯುದ್ಧಕಾಂಡೇ ಸಪ್ತದಶಸ್ಸರ್ಗಃ

**¶ ಇತ್ಯುಕ್ತ್ವಾ ಪರುಷಂ ವಾಕ್ಯಂ ರಾವಣಂ ರಾವಣಾನುಜಃ ।**
**ಆಜಗಾಮ ಮುಹೂರ್ತೇನ ಯತ್ರ ರಾಮಸ್ಸಲಕ್ಷ್ಮಣಃ ॥ ೧ ॥**

ರಾವಣಾನುಜಃ - ವಿಭೀಷಣನು, ರಾವಣಂ - ರಾವಣನನ್ನು ಕುರಿತು, ಇತಿ - ಈ ರೀತಿ, ಪರುಷಂ - ಕ್ರೂರವಾದ, ವಾಕ್ಯಂ - ಮಾತನ್ನು, ಉಕ್ತ್ವಾ - ಹೇಳಿ, ಯತ್ರ - ಯಾವ ಸ್ಥಳದಲ್ಲಿ, ಸಲಕ್ಷ್ಮಣಃ - ಲಕ್ಷ್ಮಣನಿಂದೊಡಗೂಡಿದ, ರಾಮಃ - ಶ್ರೀರಾಮನು, ಅಸ್ತಿ - ಇರುವನೋ, ತತ್ರ - ಅಲ್ಲಿಗೆ, ಮುಹೂರ್ತೇನ - ಮುಹೂರ್ತಕಾಲದಿಂದಲೇ, ಆಜಗಾಮ - ಬಂದನು. ॥ ೧ ॥

ರಾವಣಾನುಜನಾದ ಆ ವಿಭೀಷಣನು ಹೀಗೆ ರಾವಣನೊಡನೆ ಕಠಿನವಾಗಿ ಮಾತನಾಡಿ ಒಂದುಮುಹೂರ್ತಕಾಲದೊಳಗಾಗಿಯೇ ಲಕ್ಷ್ಮಣಸಮೇತನಾದ ಶ್ರೀರಾಮನಿರುವ ಪ್ರದೇಶಕ್ಕೆ ಬಂದುಬಿಟ್ಟನು. ಹಾಗೆ ಗಗನಮಾರ್ಗದಲ್ಲಿರುವವನೂ, ಮೇರುಪರ್ವತ ಶಿಖರಕ್ಕೆ

¶ ಈ ಸರ್ಗದ ಅವತಾರಿಕೆ:— ಹಿಂದಿನ ಎಂಟು ಸರ್ಗಗಳಿಂದಲೂ ಆದಿಕವಿಯು, "ಆನುಕೂಲ್ಯಸ್ಯ ಸಂಕಲ್ಪಃ ಪ್ರಾತಿಕೂಲ್ಯಸ್ಯ ವರ್ಜನಂ । ರಕ್ಷಿಷ್ಯತೀತಿ ವಿಶ್ವಾಸೋ ಗೋಪ್ತೃತ್ವವರಣಂ ತಥಾ । ಆತ್ಮನಿಕ್ಷೇಪಕಾರ್ಪಣ್ಯೇ ಷಡ್ವಿಧಾ ಶರಣಾಗತಿಃ" ಎಂಬಂತೆ ಶರಣಾಗತಿಯ ಅಂಗಗಳಲ್ಲಿ, ಅದನ್ನು ಪಡೆಯಬಯಸಿದ ವಿಭೀಷಣನಿಗೆ ಆನುಕೂಲ್ಯಸಂಕಲ್ಪ, ಪ್ರಾತಿಕೂಲ್ಯವರ್ಜನ, ಪುನಃಪುನಃ ಉಪದೇಶ ಮಾಡುವುದರಿಂದ ಅದರಲ್ಲಿ ಆತನಿಗಿದ್ದ ವಿಶ್ವಾಸ ಇವು ಮೂರೂ ಅಂಗಗಳನ್ನು ಪ್ರಕಟಗೊಳಿಸಿ, ಇದೀಗ ಕಾರ್ಪಣ್ಯಪ್ರದರ್ಶನಪೂರ್ವಕವಾಗಿ ಶರಣಾಗತಿಯ ಸ್ವರೂಪವನ್ನು ತೋರುವನು. ಇದೇ ಉದ್ದೇಶದಿಂದಲೇ, "ಇತ್ಯುಕ್ತ್ವಾ" ಎಂದು ಗ್ರಂಥವನ್ನಾರಂಭಿಸುವನು.

ಈ ಶ್ಲೋಕದ ವಿಶೇಷಾರ್ಥ:—"ಇತ್ಯುಕ್ತ್ವಾ" ಅಣ್ಣನಾದ ರಾವಣನು ತನ್ನನ್ನು ತಿರಸ್ಕರಿಸಲು, "ಇವನಿರುವ ದೇಶವನ್ನೇ ನಾನು ತೊರೆದುಬಿಡಬೇಕು ; ಶ್ರೀರಾಮನು ಪರಮ ಧಾರ್ಮಿಕನು. ಆತನನ್ನು ನಾನು ಆಶ್ರಯಿಸಬೇಕು" ಎಂಬ ಧಾರ್ಮಿಕಬುದ್ಧಿಯನ್ನವಲಂಬಿಸಿದ ವಿಭೀಷಣನನ್ನು ಆದಿಕವಿಯು ಇದರಿಂದ ಸ್ತುತಿಸುವನು. "ಇತ್ಯುಕ್ತ್ವಾ" "ಪ್ರದೀಯತಾಂ ದಾಶರಥಾಯ ಮೈಥಿಲೀ" ಎಂಬುದರಿಂದ ಇತಿಕರ್ತವ್ಯತೆಯ ಸೌಕರ್ಯವನ್ನೂ, "ಯಾವನ್ನ ಗೃಹ್ಣಂತಿ ಶಿರಾಂಸಿ ಬಾಣಾಃ" ಎಂಬುದರಿಂದ ಮಾಡದಿದ್ದರೆ ಉಂಟಾಗುವ ಪ್ರತ್ಯವಾಯವನ್ನೂ ಹೇಳಿ, "ಪರುಷಂ" ವನಿತೆಯೊಡನಿರುವವನಿಗೆ ಮಲಯಮಾರುತವು ಸುಖಕರವಾಗಿದ್ದರೂ, ಆವಳನ್ನು ಬಿಟ್ಟಿರುವವನಿಗೆ ಅದು ದುಃಖಕರವಾಗುವಂತೆ ವಿಭೀಷಣನ ಹಿತಬೋಧೆಯು ಆಶ್ರಯದೋಷದಿಂದ ಪರುಷವಾಯಿತು. "ವಾಕ್ಯಂ" ಹಿತಪರಿಪೂರ್ಣವಾಗಿ ಹೇಳಿ—"ತಮ್ಮನಾದವನು, ಹಿತಜ್ಞನಾದರೂ ವಿಪನ್ಮುಖದಲ್ಲಿರುವ ಅಣ್ಣನನ್ನು ತೊರೆದನು" ಎಂಬ ಅಪಯಶಸ್ಸು ಬಾರದಿರಲು ಎದುವರೆಗೆ ಸಾಧ್ಯವೋ ಅದುವರೆಗೂ ಹೇಳಿ, (ಆ ಮಾತು ಪರುಷವಾಗಿರುವುದಕ್ಕೆ ಕಾರಣವನ್ನು ಹೇಳುವನು) "ರಾವಣಂ" "ಪ್ರಬಲರಾರು, ದುರ್ಬಲರಾರು ?" ಎಂದು ವಿಚಾರಿಸದೆಯೇ ಎಲ್ಲರನ್ನೂ ಪೀಡಿಸುವವನು (ಶತ್ರುಬಲವನ್ನು ವರ್ಣಿಸಿದುದರಿಂದ ಆ ರಾವಣನು ಕೆರಳುವುದು ಸ್ವಭಾವವಷ್ಟೆ?) "ರಾವಣಾನುಜಃ" "ಇಂಥ ರಾವಣನಿಗೆ ತಮ್ಮನಾಗಿದ್ದರೂ ಸತ್ವಾತಿಶಯದಿಂದ ಆ ವಿಭೀಷಣನು ಅಣ್ಣನಿಗೆ ಹಿತೋಪದೇಶವನ್ನು ಮಾಡಿದನಲ್ಲವೆ ?" ಎಂದು ಮುನಿಯು ಅವನನ್ನು ಸ್ತುತಿಸುವನು. (ಕಿರಿಯುವನಾದ ಆ ವಿಭೀಷಣನು ಹಿರಿಯುವನಾದ ರಾವಣನಿಗೆ ಹಿತೋಪದೇಶ ಮಾಡಿದುದು ಅಪರಾಧವಲ್ಲವೆ ಎಂಬ ಸಂಶಯವು ಬರಬಹುದು. ಅದು ಹಾಗಲ್ಲ. ಹಿತಕಥನದಲ್ಲಿ ಹಿರಿಕಿರಿಯ ಭಾವಗಳು ಅಪ್ರಯೋಜಕಗಳೇ ! ಇದುದರಿಂದಲೇ ಮನುವು, "ಪಿತ್ರೂನಧ್ಯಾಪಯಾಮಾಸ ಶಿಶುರಾಂಗಿರಸಃ ಕವಿಃ । ಪುತ್ರಕಾಇತಿಹೋವಾಚ ಜ್ಞಾನೇನ ಪರಿಗೃಹ್ಯತಾನ್ ॥ ಅಜ್ಞಂಹಿ ಬಾಲಮಿತ್ಯಾಹುಃ ಪಿತೇತ್ಯೇವಚ ಮಂತ್ರದಂ ॥ ಶುಕ್ರಾಚಾರ್ಯನು ಪಿತೃಗಳಿಗೆ ಅಧ್ಯಯನ

ಮಾಡಿಸಿದನು. ಆಗ ಆತನು ಅವರನ್ನು ಜ್ಞಾನಮಾರ್ಗದಲ್ಲಿ ಶಿಷ್ಯರನ್ನಾಗಿ ಪರಿಗ್ರಹಿಸಿ "ಮಕ್ಕಳಿರಾ!" ಎಂದು ಸಂಬೋಧಿಸಿದನು. ತಿಳಿವಿಲ್ಲದವರನ್ನು ಬಾಲರೆಂದೂ, ಉಪದೇಷ್ಟೃವನ್ನು ತಂದೆಯೆಂದೂ ಹೇಳುತ್ತಾರೆ. ಒಟ್ಟಿನಮೇಲೆ ಹಿತೋಪದೇಷ್ಟೃವಿನಲ್ಲಿ ಹಿರಿಕಿರಿಯ ಭಾವನೆಗಳು ಮಾಡಬಾರದು ಎಂದು ಈ ಶ್ಲೋಕಗಳ ತಾತ್ಪರ್ಯ" ಎಂದು ಹೇಳಿರುವನು.) "ಆಜಗಾಮ" ಕವಿಯು ಇಲ್ಲಿ "ಜಗಾಮ" ಎಂದು ಹೇಳಬಹುದಿತ್ತು. "ಆಜಗಾಮ" ಎಂದು ಹೇಳಿರುವನು; ಇದರ ಸ್ವಾರಸ್ಯವೇನೆಂದರೆ:— ಆ ವಿಭೀಷಣನು ದುರ್ಮಾರ್ಗಗಾಮಿಯಾದ ರಾವಣನ ಸಭೆಗೂ ತನಗೂ ಸಂಬಂಧವು ಸರಿಹೋಗದ್ದರಿಂದ ಶ್ರೀರಾಮಗೋಷ್ಠಿಯು ತನ್ನ ಸ್ವಂತ ಗೃಹದಂತೆ ಭಾವಿಸಿ ಬಂದುಬಿಟ್ಟನು ಎಂದು. "ಮುಹೂರ್ತೇನ" ಒಂದು ಮುಹೂರ್ತದಲ್ಲಿಯೇ ಬಂದುಬಿಟ್ಟನು; ಏಕೆ?—"ವರಂ ಹುತವಹಜ್ವಾಲಾಪಂಜರಾಂತ ರ್ವ್ಯವಸ್ಥಿತಿಃ । ನಶೌರಿಚಿಂತಾವಿಮುಖಜನಸಂವಾಸ ವೈಶಸಂ ॥ ಅಗ್ನಿಜ್ವಾಲೆಯ ಪಂಜರದಲ್ಲಿರುವುದಾದರೂ ಮೇಲು. ವಿಷ್ಣುವಿನಲ್ಲಿ ಭಕ್ತಿಯಿಲ್ಲದಿರುವವರ ಸಹವಾಸ ಮಾಡಬಾರದು" ಎಂಬಂತೆ ವಿಷ್ಣ್ವವತಾರ ರೂಪೀ ಶ್ರೀರಾಮನ ದ್ವೇಷಿಯಾದ ಆ ರಾವಣನ ಸಭೆಯಲ್ಲಿ ಕಾಲಿಡಲು ಬೆಂಕಿಯ ಕೆಂಡಗಳು ಸುರಿದ ದಾರಿಯಲ್ಲಿ ಕಾಲಿಡಲು ಹೆದರುವಂತೆ ಹೆದರಿ, ಒಂದು ಮುಹೂರ್ತಕಾಲದೊಳಗಾಗಿಯೇ ಬಂದುಬಿಟ್ಟನು.

"ಯತ್ರ ರಾಮಃ" ರಾಮನನ್ನು ಕಾಣಬೇಕೆಂದಪೇಕ್ಷಿಸಿ ಆತನಿರುವ ಪ್ರದೇಶವೇ ಪ್ರಾಪ್ಯೈಕದೇಶವೆಂದು ಆತನಿರುವೆಡೆಗೆ ಬಂದನೆಂದು ಇದರಿಂದ ಸೂಚಿತವಾಗುವುದು. "ಸುಭಗಶ್ಚಿತ್ರಕೂಟೋಽಸೌ ಗಿರಿರಾಜೋಪಮೋಗಿರಿಃ । ಯಸ್ಮಿನ್ ವಸತಿ ಕಾಕುತ್ಸ್ಥಃ ಕುಬೇರಇವ ನಂದನೇ ॥" ಎಂಬಂತೆ ಆ ರಘುರಾಮನಿರುವ ಆ ಪ್ರದೇಶವು ಬಹು ರಮಣೀಯವಾದುದು. ಪರಮ ಪ್ರಾಪ್ಯವಾದುದು. "ಸಲಕ್ಷ್ಮಣಂ" ರಾಮನಿಗೆ ಲಕ್ಷ್ಮಣನು ವ್ಯಾವರ್ತಕನಾದುದರಿಂದ ಹೀಗೆ ಹೇಳಿದೆ. ಅಥವಾ, ಪುರುಷಕಾರದ್ಯೋತನಾರ್ಥವಾಗಿ ಈ ವಿಶೇಷಣವು ನಿವೇಶಿತವಾಗಿರುವುದು. ಈ ಶ್ಲೋಕದಿಂದ ಭಗವದ್ಧ್ಯಾನ ವಿಮುಖರಾದವರಿರುವ ದೇಶವನ್ನು ತೊರೆಯಬೇಕೆಂಬ ತತ್ತ್ವವೂ, ಭಗವಂತನಿರುವ ದೇಶದ ಪ್ರಾಪ್ಯತ್ವವೂ ಹೇಳಿದಂತಾಯಿತು. ಅಥವಾ, "ಸಾಕಾಶೀತಿ ನಚಕಾಶೀತಿ" ಎಂಬಂತೆ, ಭಗವತ್ಸಾನ್ನಿಧ್ಯವಿದ್ದರೂ, ಭಾಗವತರಿಲ್ಲದಿದ್ದರೆ ಅದನ್ನು ತ್ಯಜಿಸಬೇಕೆಂದಿರುವುದರಿಂದ ಪರಮ ಭಾಗವತೋತ್ತಮನಾದ ಲಕ್ಷ್ಮಣಸ್ವಾಮಿಯು ಅಲ್ಲಿದ್ದನೆಂಬುದನ್ನು ಹೇಳಲು, "ಸಲಕ್ಷ್ಮಣಃ" ಎಂದು ಹೇಳಿದೆ.

ಇಲ್ಲಿ ಕೆಲವರು ಹೀಗೆ ಪೂರ್ವಪಕ್ಷವನ್ನು ಹೇಳಿ ಆಪೇಕ್ಷಿಸುತ್ತಾರೆ:—"ಬ್ರಹ್ಮನ ಮತ್ತು ವಿಶ್ರವಸ್ಸಿನ ವರಪ್ರದಾನದಿಂದ ಅರಿತುಕೊಂಡ ಸಕಲ ಧರ್ಮಸಮುದಾಯವುಳ್ಳವನಾಗಿ, "ವಿಭೀಷಣಸ್ತು ಧರ್ಮಾತ್ಮಾ ನತುರಾಕ್ಷಸಚೇಷ್ಟಿತಃ" ಎಂದು ಅಲ್ಲಲ್ಲಿ ಪರಮ ಧಾರ್ಮಿಕನೆಂದು ಹೊಗಳಲ್ಪಟ್ಟಿರುವ ಆ ವಿಭೀಷಣನು, "ಜ್ಯೇಷ್ಠೋಭ್ರಾತಾ ಪಿತೃಸಮಃ" ಎಂಬ ವಾಕ್ಯಾನುಸಾರವಾಗಿ, ಅಣ್ಣನಾದ ರಾವಣನಲ್ಲಿ-ಎಳೆತನದಿಂದಲೂ ತನಗೆ ಪರಿಪೋಷಕನಾಗಿದ್ದ ರಾವಣನಲ್ಲಿ-ಅನುರಕ್ತನಾಗಿ ಅವನನ್ನು ಅನುಸರಿಸದೆ, ಅವನು ಶತ್ರುಗಳ ಭಯದಿಂದ ಮಂತ್ರಾಲೋಚನೆಯಲ್ಲಿರುವಾಗ ಕೇವಲ ಕ್ಷುದ್ರಬುದ್ಧಿಯವನಂತೆ ತೊರೆದು ಬಂದದ್ದು ನ್ಯಾಯವೆ? ಧರ್ಮಸಮ್ಮತವೆ? ತೊರೆದರೂ ಚಿಂತೆಯಿಲ್ಲ; ತೊರೆಯಲಿ. ಆದರೆ ಅವನನ್ನು ಪ್ರಹರಿಸುವವನ ಬಳಿಗೇ ಹೋಗುವುದು ನ್ಯಾಯವಲ್ಲ. ಹೋಗಲಿ; ಆದರೂ ಅವನಿರುವ ಪ್ರದೇಶವನ್ನು ಅಪೇಕ್ಷಿಸುವುದು ಯುಕ್ತವಲ್ಲ. ಅಪೇಕ್ಷಿಸಲಿ; ಅವನೊಡನೆ ತನ್ನ ಅಣ್ಣನ ವಧೆಗೆ ಉಪಾಯವನ್ನು ಯೋಚಿಸುವುದು ಸರ್ವಥಾ ಉಚಿತವಲ್ಲ."

ಈ ಪೂರ್ವ ಪಕ್ಷಕ್ಕೆ ಕೆಲವರು, "ರಾವಣನು ಅಕ್ಷಮ್ಯವಾದ ಅಪರಾಧವನ್ನು ಮಾಡಿರುವನಾದುದರಿಂದ, "ಗುರೋರಪ್ಯವಲಿಪ್ತಸ್ಯ ಕಾರ್ಯಾಕಾರ್ಯ ಮಜಾನತಃ । ಉತ್ಪಥಂ ಪ್ರತಿಪನ್ನಸ್ಯ ಪರಿತ್ಯಾಗೋ ವಿಧೀಯತೇ ॥ ಎಂಬ ಧರ್ಮಶಾಸ್ತ್ರ ವಚನದ ಸ್ಮರಣೆಯಿಂದ ವಿಭೀಷಣನು, ರಾವಣನು ಅವನಿಗೆ ಗುರುವಾದರೂ ಉತ್ಪಥಗಾಮಿಯಾದುದರಿಂದ ಅವನನ್ನು ತೊರೆದನು. ಇದರಲ್ಲಿ ಅವನಿಗೆ ಧರ್ಮಲೋಪವಿಲ್ಲವು" ಎಂದು ಸಮಾಧಾನ ಹೇಳುವರು.

ತ್ರಯಂತಾಚಾರ್ಯರು, (ವೇದಾಂತಾಚಾರ್ಯರಿಗೆ ಈ ಹೆಸರುಂಟು) ಈ ಪೂರ್ವಪಕ್ಷಕ್ಕೆ ಬೇರೊಂದು ರೀತಿಯಲ್ಲಿ ಸಮಾಧಾನ ಹೇಳುವರು. ವಿಭೀಷಣನು ಬ್ರಹ್ಮನ ವರಪ್ರಭಾವದಿಂದುಂಟಾದ ಜ್ಞಾನೋದಯದಿಂದ, ಶ್ರೀರಾಮಮೂರ್ತಿಯನ್ನು, ಸರ್ವ ವೇದಾಂತವೇದ್ಯನನ್ನಾಗಿಯೂ, ಸರ್ವ ಲೋಕೇಶ್ವರನನ್ನಾಗಿಯೂ, ಸರ್ವ ಲೋಕಶರಣ್ಯನನ್ನಾಗಿಯೂ, ಮುಕ್ತರಾದವರಿಂದ ಪರಮ ಪ್ರಾಪ್ಯನಾದ ನಾರಾಯಣಾಖ್ಯ ಪರಬ್ರಹ್ಮಮೂರ್ತಿಯನ್ನಾಗಿಯೂ, ಸರ್ವ ಲೋಕಗಳನ್ನೂ ಶಿಕ್ಷಿಸಲೋಸುಗ ಅವತರಿಸಿರುವವನನ್ನಾಗಿಯೂ ಏನೊಂದೂ ಸಂಶಯವಿಲ್ಲದೆ ಅರಿತುಕೊಂಡನು.—ಮಂಡೋದರಿಯೇ ಮೊದಲಾದವರು ಅರಿತುಕೊಂಡಿದ್ದಹಾಗೆ. ಇದರಿಂದ ತತ್ತ್ವಜ್ಞಾನ ಸಂಪನ್ನನಾದ ಆ ವಿಭೀಷಣನು ಸಾಮಾನ್ಯ ಧರ್ಮದ (ಜ್ಯೇಷ್ಠೋಭ್ರಾತಾ ಪಿತೃಸಮಃ) ಪ್ರಾಬಲ್ಯ ದೌರ್ಬಲ್ಯಗಳನ್ನು ಚೆನ್ನಾಗಿ ಯೋಚಿಸಿ ಅದನ್ನು ತ್ಯಜಿಸಿ (ಶ್ರೀರಾಮ ಶರಣಾಗತಿಯೆಂಬ) ವಿಶೇಷಧರ್ಮವನ್ನು ಪರಿಗ್ರಹಿಸಿದುದಾಗಿ ತಿಳಿಯಬರುತ್ತದೆ. ಜ್ಯೇಷ್ಠಭ್ರಾತೃನು ವರ್ತನವು ಧರ್ಮಾರ್ಥ

ಕಾಮಗಳಿಗೆ ಸಾಧಕವಾದುದು. ಇದು ಕಡೆಗೆ ಪರಮಾತ್ಮಾರಾಧನದಲ್ಲಿ ಪರಿಣಾಮವಾಗುತ್ತದೆ. ಪರಮಾತ್ಮೋಪಾಸನೆಯು ಮೋಕ್ಷದಲ್ಲಿ ಪರ್ಯವಸಾನವಾಗುವುದು. ಹೀಗೆ ಬಳಸಿನಿಂದ ಕಡೆಗೆ ಮೋಕ್ಷವು ದೊರಕುವುದಾದುದರಿಂದ ಇದು ಸಾಮಾನ್ಯ ಧರ್ಮವೆಂದು ಪರಿಗಣಿಸಲ್ಪಡುತ್ತದೆ. ಶ್ರೀರಾಮಾನುವರ್ತನವಾದರೆ ಸಾಕ್ಷಾತ್ತಾಗಿ ಪರಮಾತ್ಮಸಮಾರಾಧನವೇ ಆದುದರಿಂದಲೂ, ಈ ಪರಮಾತ್ಮ ಸಮಾರಾಧನವು ಯಜ್ಞಾದಿ ಸತ್ಕರ್ಮಗಳಿಂದ ಮಾತ್ರವೇ ಸಾಧಿಸತಕ್ಕುದಾದುದರಿಂದಲೂ ವಿಶೇಷ ಧರ್ಮವಾಗಿ ಪರಿಗಣಿಸಲ್ಪಡುತ್ತದೆ! ಆದುದರಿಂದ ವಿಶೇಷಜ್ಞನಾದ ವಿಭೀಷಣನು ಈ ವಿಶೇಷ ಧರ್ಮವನ್ನೇ ಆಚರಿಸಿದನು. ಇಲ್ಲಿ ಒಂದು ಸಂದೇಹ ಬರಬಹುದು:—ಮೇಲೆ ನಿರೂಪಿಸಿದ ವಿಶೇಷ ಸಾಮಾನ್ಯಧರ್ಮಗಳಿಗೆ ಪರಸ್ಪರವಾಗಿ ವಿರೋಧವಿಲ್ಲದಿರುವಾಗ ಎರಡನ್ನೂ ಅನುವರ್ತಿಸಬೇಕಾದ್ದು ಧರ್ಮವಲ್ಲವೆ ? ಕರ್ತವ್ಯವಲ್ಲವೆ ? ವಿರೋಧವೇನಾದರೂ ಇದ್ದರೆ ಸಾಮಾನ್ಯ ಧರ್ಮವನ್ನು ತ್ಯಾಗಮಾಡಿ ವಿಶೇಷ ಧರ್ಮವನ್ನು ಅನುಸರಿಸುವುದು ನ್ಯಾಯವು. ಎಂದರೆ— ಆದುದರಿಂದಲೇ ಧರ್ಮಜ್ಞನಾದ ವಿಭೀಷಣನು, ರಾವಣನ ಆಶ್ರಯವನ್ನು ಬಿಡದೆಯೇ ರಾಮಾನುವರ್ತನವೂ ಸಾಧ್ಯವಾದೀತೇನೋ ಎಂಬ ಆಕಾಂಕ್ಷೆಯಿಂದ ಇದುವರೆಗೂ ರಾವಣನಿಗೆ ಪುನಃ ಪುನಃ ಹಿತೋಪದೇಶವನ್ನು ಮಾಡಿದನು. ರಾವಣನು ಆಸುರಪ್ರಕೃತಿಯುವನಾದುದರಿಂದ ಅವನಲ್ಲಿ ನೆಲೆಗೊಂಡಿದ್ದ ರಾಮವೈರವನ್ನು ತೊಡೆದುಹಾಕಲು ಸಾಧ್ಯವಿಲ್ಲವೆಂದು ಆ ವಿಭೀಷಣನಿಗೆ ಮನದಟ್ಟಾಯಿತು. "ಇನ್ನುಮೇಲೆ ಇವನನ್ನನುಸರಿಸಿದರೆ ಆತ್ಮವಿಘಾತಕವಾದ ಶ್ರೀರಾಮವೈರವು ನನ್ನ ಮನಸ್ಸಿನಲ್ಲಿಯೂ ಮೊಳೆತೀತು" ಎಂದು ಭಯಗೊಂಡು "ವರಂಹುತವಹಜ್ವಾಲಾ" ಎಂದು ಮೇಲೆಯೇ ಹೇಳಿದಂತೆ ಅತ್ಯಂತ ದುಸ್ಸಹವಾದ ಆ ಸಹವಾಸವನ್ನು ತೊರೆದು ವಿಶೇಷ ಧರ್ಮವಾದ ಶ್ರೀರಾಮಾನುವರ್ತನವನ್ನೇ ಅಂಗೀಕರಿಸಿಬಿಟ್ಟನು. ಆದುದರಿಂದ ಇದೇ ಪರಮ ಧರ್ಮವೆಂದು ಅವನು ತಿಳಿದುದಾಗಿ ಗ್ರಾಹ್ಯವು. ಇದರಿಂದ ವಿಭೀಷಣನಲ್ಲಿ ಆರೋಪಿಸಬಹುದಾಗಿದ್ದ ಕೃತಘ್ನತಾ ಶಂಕೆಯು ದೂರವಾಯಿತು. ಇನ್ನು ಇವನು ರಾಜ್ಯಾಭಿಲಾಷೆಯಿಂದ ರಾಮನನ್ನು ಶರಣು ಹೋಗಲಿಲ್ಲವೇ ಎಂಬ ಪ್ರಶ್ನೆ ? ಆ ಅಭಿಲಾಷೆಯು ಎಂದಿಗೂ ಅವನಲ್ಲಿ ಮೂಡಲೇ ಇಲ್ಲವು. ಅಂತಹ ಅಭಿಲಾಷೆಯು ಅವನಲ್ಲಿದ್ದುದಾಗಿ ಎಲ್ಲಿಯೂ ಸೂಚಿತವಾಗಿರುವುದಿಲ್ಲ. ಶರಣಾಗತಿ ಸಮಯದಲ್ಲಿ ವಿಭೀಷಣನೇ, "ತ್ಯಕ್ತ್ವಾ ಪುತ್ರಾಂಶ್ಚ ದಾರಾಂಶ್ಚ ರಾಘವಂ ಶರಣಾಗತಃ ಎಂಬುದಾಗಿ ಶರಣಾಗತಿಯೊಂದಲ್ಲದೆ, ಉಳಿದ ಯಾವೊಂದರಲ್ಲಿಯೂ ನನಗೆ ವೈರಾಗ್ಯವೇ ಇರುವುದು" ಎಂದು ಕಂಠೋಕ್ತವಾಗಿ ಹೇಳಿರುವನು ; ಮುಂದೆ ಶ್ರೀರಾಮನಿಗೆ ಅರಿಕೆ ಮಾಡುವಾಗಲೂ, "ಪರಿತ್ಯಕ್ತಾ ಮಯಾಲಂಕಾ ಮಿತ್ರಾಣಿಚ ಧನಾನಿಚ । ಭವದ್ಗತಂಚ ಮೇ ರಾಜ್ಯಂ ಜೀವಿತಂಚ ಸುಖಾನಿಚ ॥ ಸರ್ವವಿಧ ಪುರುಷಾರ್ಥಗಳಿಗೂ ನಿನ್ನನ್ನೇ ಶರಣೆಂದು ಬಳಿ ಸಾರಿರುವೆನು" ಎಂದು ಹೇಳಿರುವನು. ಹಾಗಾದರೆ ಶ್ರೀರಾಮನು, "ಅಹಂ ಹತ್ವಾ ದಶಗ್ರೀವಂ ಸಪ್ರಹಸ್ತಂ ಸಬಾಂಧವಂ । ರಾಜಾನಂ ತ್ವಾಂ ಕರಿಷ್ಯಾಮಿ ಸತ್ಯಮೇತತ್ ಬ್ರವೀಮಿ ತೇ ॥" ಎಂದು ಹೇಳಿರುವನಲ್ಲವೆ ? ಎಂದರೆ, ಹಾಗೆ ಹೇಳಿರುವುದು ಆತನಿಗೆ ಶರಣಾಗತರಲ್ಲಿರುವ ಅಪಾರ ಪ್ರೀತಿಸಾಗರ ಪ್ರವಾಹವನ್ನೇ ಪ್ರಕಟಗೊಳಿಸುವುದಾಗಲಿ ಮತ್ತೆ ಬೇರೆಯಿಲ್ಲ. ವಿಭೀಷಣನು ರಾಜ್ಯವನ್ನು ಬಯಸದಿದ್ದರೂ ಆತನು ಹಾಗೆ ಹೇಳಿರುವನು. "ಆಯುರಾರೋಗ್ಯಮರ್ಥಾಂಶ್ಚ ಭೋಗಾಂಶ್ಚೈವಾನುಷಂಗಿಕಾನ್ । ದದಾತಿ ಧ್ಯಾಯತಾಂ ನಿತ್ಯಮಪವರ್ಗಪ್ರದೋ ಹರಿಃ" ಎಂದು ಹೇಳಿದೆಯಷ್ಟೆ. ಭಗವದ್ಭಕ್ತರಾದವರಿಗೆ ಯಾವುದಕ್ಕೆ ತಾನೇ ಏನು ಕಡಿಮೆ. ಹನುಮಂತನು, "ರಾಜ್ಯಂ ಪ್ರಾರ್ಥಯಮಾನಸ್ತು ಬುದ್ಧಿಪೂರ್ವಮಿಹಾಗತಃ" ಎಂದೂ, ಶ್ರೀರಾಮನು, "ರಾಜ್ಯಕಾಂಕ್ಷೀ ವಿಭೀಷಣಃ" ಎಂದೂ ಹೇಳಿರುವರಲ್ಲವೆ? ಎಂದರೆ: ಹಾಗೆ ಅವರಿಬ್ಬರೂ ಹೇಳಿದುದು ಶ್ರೀರಾಮನಲ್ಲಿ ಅತಿಶಯವಾದ ಭಕ್ತಿಯಿದ್ದುದರಿಂದ ವಿಭೀಷಣನ ವಿಷಯದಲ್ಲಿ ಕೇವಲ ಭಿನ್ನಾಭಿಪ್ರಾಯವುಳ್ಳ ಸುಗ್ರೀವನ ವ್ಯಾಮೋಹವನ್ನು ದೂರಮಾಡಲೋಸುಗ ರಾಜನೀತಿಶಾಸ್ತ್ರವನ್ನನುಸರಿಸಿ ರಾಜವೃತ್ತಾಂತವನ್ನು ನಿರೂಪಿಸುವುದಕ್ಕಾಗಿಯೇ ಹೊರತು ಮತ್ತೆ ಬೇರೆಯಲ್ಲವು. ಮೇಲಾಗಿ, ರಾಮ, ಹನುಮಂತ, ವಿಭೀಷಣ ಇವರು ಮೂವರ ವಾಕ್ಯಗಳಿಗೂ ವಿರೋಧವಿರುವಾಗ, "ಅಂತರಂಗ ಬಹಿರಂಗಯೋರಂತರಂಗಂ ಬಲೀಯಃ" ಎಂಬ ನ್ಯಾಯದಂತೆ ವಿಭೀಷಣನ ಮಾತಿಗೇ ಪ್ರಾಮುಖ್ಯತೆಯು ಬರುತ್ತದೆ. ವಿಭೀಷಣನು ಕೇವಲ ಶರಣಾಗತಿಯನ್ನೇ ಅಪೇಕ್ಷಿಸಿರುವುದರಿಂದ ಅದೇ ಅವನ ಆಶಯವೆಂದೂ ಸಿದ್ಧವಾಗುವುದು. ಆದುದರಿಂದಲೇ "ರಾಜಾನಂ ತ್ವಾಂ ಕರಿಷ್ಯಾಮಿ" ಎಂದು ಶ್ರೀರಾಮನೆಂದರೂ ವಿಭೀಷಣನು, "ನನಗೆ ನಿನ್ನ ಪರಿಚಣವೊಂದೇ ಸಾಕು" ಎಂದು ಹೇಳುವನು. "ರಾಕ್ಷಸಾನಾಂ ವಧೇ ಸಾಹ್ಯಂ ಲಂಕಾಯಾಶ್ಚ ಪ್ರಧರ್ಷಣೇ । ಕರಿಷ್ಯಾಮಿ ಯಥಾಪ್ರಾಣಂ ಪ್ರವೇಕ್ಷ್ಯಾಮಿಚ ವಾಹಿನೀಂ" ಎಂದು ಹೇಳಿರುವನು. ಇದೂ ಅಲ್ಲದೆ ವಿಭೀಷಣನಿಗೆ ಇಷ್ಟವಿಲ್ಲದಿದ್ದರೂ ಶ್ರೀರಾಮನು ಅವನಿಗೆ ಲಂಕಾರಾಜ್ಯವನ್ನು ಕಟ್ಟಿದುದಾಗಿ ಉತ್ತರಕಾಂಡದಲ್ಲಿ ಹೇಳಿದೆ. "ಯಾವತ್ ಪ್ರಜಾಧರಿಷ್ಯಂತಿ ತಾವತ್ತ್ವಂ ವೈ ವಿಭೀಷಣ ! । ರಾಕ್ಷಸೇಂದ್ರ ! ಮಹಾವೀರ್ಯ ! ಲಂಕಾಸ್ಥಸ್ತ್ವಂ ಧರಿಷ್ಯಸಿ ॥ ಶಾಸಿತಸ್ತ್ವಂ ಸಖಿತ್ವೇನ ಕಾರ್ಯಂ ತೇ ಮಮಶಾಸನಂ । ಪ್ರಜಾಸ್ಸಂರಕ್ಷ ಧರ್ಮೇಣ ನೋತ್ತರಂ ವಕ್ತುಮರ್ಹಸಿ" ಎಂದು ಶ್ರೀರಾಮನು ವಿಭೀಷಣನಿಗೆ ಹೇಳಿರುವನು. ವಿಭೀಷಣನಿಗೆ ತನ್ನ ಆಶ್ರಯವೊಂದು ಹೊರತು ಬೇರಾವ ಪ್ರಯೋಜನವೂ ಬೇಕಿರಲಿಲ್ಲವು. ಆದುದರಿಂದಲೇ ಶ್ರೀರಾಮನು ತನ್ನ ಕುಲಧನವಾದ ಶ್ರೀರಂಗನಾಥ ವಿಗ್ರಹವನ್ನಾತನಿಗೆ ಕೊಟ್ಟಿದ್ದು. ಧರ್ಮಸಂಸ್ಥಾಪನೆಗೋಸುಗವೇ ಅವತರಿಸಿರುವ ಶ್ರೀರಾಮನ ಅಪ್ಪಣೆ

ಯಂತೆ ವಿಭೀಷಣನೂ ಸಹ ಕಳೆದುಳಿದ ರಾಕ್ಷಸಜಾತಿಯು ಸನ್ಮಾರ್ಗದಲ್ಲಿ ಪ್ರವರ್ತಿಸುವಂತೆ ಮಾಡಲೋಸುಗ ರಾಜ್ಯವನ್ನಂಗೀಕರಿಸುವನು. ಹೀಗೆ ಮಾಡಿದುದೂ ಶ್ರೀರಾಮನ ಆಜ್ಞೆಯಿಂದಲೇ ಆದುದರಿಂದ, ಇದು ಕೈಂಕರ್ಯಕೋಟಿಯಲ್ಲಿಯೇ ಸೇರಿದುದಾಯಿತು.

ವಿಭೀಷಣನು ಹೇಗೆ ಭಗವತ್ಕೈಂಕರ್ಯ ಧರ್ಮವನ್ನು ಚೆನ್ನಾಗಿ ಅರಿತುಕೊಂಡಿದ್ದನೋ ಹಾಗೆಯೇ ಲಕ್ಷ್ಮಣನೂ ಅರಿತಿದ್ದನು. ಅವನು, "ಅಹಂ ತಾವನ್ಮಹಾರಾಜೇ ಪಿತೃತ್ವಂನೋಪಲಕ್ಷಯೇ । ಭ್ರಾತಾಭರ್ತಾಚ ಬಂಧುಶ್ಚ ಪಿತಾಚ ಮಮರಾಘವಃ ॥" ಎಂದು ಹೇಳಿ, ಸೋಪಾಧಿಕಪಿತೃವಾದ ದಶರಥನನ್ನು ತೊರೆದು, ನಿರುಪಾಧಿಕವಾಗಿ ಸಕಲ ವಿಧದಲ್ಲಿಯೂ ಬಂಧುವಾದ ಶ್ರೀರಾಮನನ್ನೇ ಶರಣುಹೊಕ್ಕು, "ಅಗ್ರತಸ್ತೇ ಗಮಿಷ್ಯಾಮಿ ಪಂಥಾನಮನುಕುತೋಭಯಂ ಅಹಂ ಸರ್ವಂ ಕರಿಷ್ಯಾಮಿ ಜಾಗ್ರತಸ್ಸ್ವಪತಶ್ಚತೇ" ಎಂದು ಹೇಳಿ ರಾಮಪರಿಚರಣಫಲವೊಂದನ್ನೇ ಪ್ರಾರ್ಥಿಸಿರುವನು. "ಸಭ್ರಾತುಶ್ಚರಣೌ ಗಾಢಂ ನಿಪೀಡ್ಯ ರಘುನಂದನಃ" ಎಂಬುದಾಗಿ ಕವಿಯು, ಅವನು ಶರಣುಹೊಕ್ಕುದನ್ನೂ ಹೇಳಿರುವನು.

ಹೀಗೆಯೇ ವಿಭೀಷಣನೂ ಕೂಡ ಸೋಪಾಧಿಕ ಬಂಧುವೂ ತನ್ನ ಸಾಕ್ಷಾತ್ ಅಣ್ಣನೂ ಆದ ರಾವಣನನ್ನು ತೊರೆದು ಕೈಂಕರ್ಯಾಪೇಕ್ಷೆಯಿಂದಲೇ ಸರ್ವ ವಿಧಗಳಲ್ಲಿಯೂ ಸಹಜ ಬಂಧುವಾದ ಶ್ರೀರಾಮನನ್ನು ಶರಣುಹೊಂದಿದನು" ಎಂಬುದಾಗಿಯೇ ಗ್ರಾಹ್ಯವು. ಆದುದರಿಂದಲೇ, ರಾಮಪ್ರಾಪ್ತ್ಯಪೇಕ್ಷೆಯಿಂದ ರಾವಣನನ್ನು ತ್ಯಜಿಸಿದ ವೇಳೆಯಲ್ಲಿ ಆದಿಕವಿಯು ಅವನನ್ನು "ಅಂತರಿಕ್ಷಗತಶ್ಶ್ರೀಮಾನ್" ಎಂದು ಹೊಗಳಿರುವನು; ಹಿಂದೆ ಲಕ್ಷ್ಮಣನನ್ನು, "ಸತು ನಾಗವರಶ್ರೀಮಾನ್---ಲಕ್ಷ್ಮಣೋಲಕ್ಷ್ಮಿವರ್ಧನಃ" ಎಂದು ಸ್ತುತಿಸಿರುವಂತೆ. ಆದುದರಿಂದ ವಿಭೀಷಣನ ವಿಷಯದಲ್ಲಿ ಅಧರ್ಮಶಂಕೆಯು ಕೂಡುವುದಿಲ್ಲವೆಂದು ಸಿದ್ಧವಾಯಿತು. ಆದರೂ ಇನ್ನೊಂದು ಸಂಶಯವು ಬರುತ್ತದೆ; ಏನೆಂದರೆ:--- ಮುಂದೆ ನಾಗಪಾಶ ಬಂಧನ ಸಮಯದಲ್ಲಿ "ಯಯೋರ್ವೀರ್ಯಮುಪಾಶ್ರಿತ್ಯ ಪ್ರತಿಷ್ಠಾಕಾಂಕ್ಷಿತಾ ಮಯಾ । ತಾವುಭೌ ಮಮನಾಶಾಯ ಪ್ರಸುಪ್ತೌ ಪುರುಷರ್ಷಭೌ ॥ ಜೀವನ್ನಪಿ ವಿಪನ್ನೋಸ್ಮಿ ನಷ್ಟರಾಜ್ಯಮನೋರಥಃ । ಪ್ರಾಪ್ತಪ್ರತಿಜ್ಞಶ್ಚ ರಿಪುಸ್ಸಕಾಮೋ ರಾವಣಃ ಕೃತಃ ॥" ಎಂದು ವಿಭೀಷಣನು ತನ್ನ ರಾಜ್ಯನಾಶದಿಂದುಂಟಾದ ನಿರ್ವೇದವನ್ನು ಸೂಚಿಸಿರುವನಲ್ಲವೆ? ಎಂದು ಈ ಸಂಶಯಕ್ಕೆ ಆಧಾರವಿಲ್ಲ. ಇಲ್ಲಿಯೂ ವಿಭೀಷಣನು ಹೇಳಿರುವ ಪ್ರತಿಷ್ಠಾಶಬ್ದವು ರಾಮಕೈಂಕರ್ಯಪರವಾದುದೇ "ನಷ್ಟರಾಜ್ಯಮನೋರಥಃ" ಎಂಬ ಕಡೆಯಲ್ಲಿಯೂ, "ಭವದ್ಗತಂ ಮೇ ರಾಜ್ಯಂ" ಎಂಬುದಾಗಿ ಹೇಳಿದ ಕೈಂಕರ್ಯ ಸಾಮ್ರಾಜ್ಯಪರವಾದುದೇ. ಆದರೂ, "ರಾಜ್ಯಂ ಪ್ರಾಪ್ಸ್ಯಸಿ ಧರ್ಮಜ್ಞ! ಲಂಕಾಯಾಂ ನಾತ್ರ ಸಂಶಯಃ ಎಂದು ಸುಗ್ರೀವನು ವಿಭೀಷಣನಿಗೆ ಹೇಳಿರುವನಲ್ಲವೆ?" ಎಂದರೆ ಅವನು ವಿಭೀಷಣನ ಅಂತರಂಗವನ್ನರಿಯದೆ ಆಡಿದ ಮಾತದು ಎಂದು ತಜ್ಞರು ಹೇಳುವರು. ಆದುದರಿಂದಲೇ ಮುಂದೆ ೮೫ನೇ ಸರ್ಗದಲ್ಲಿ ವಿಭೀಷಣನು, "ಯದಾಜ್ಞಪ್ತಂ ಮಹಾಬಾಹೋ! ತ್ವಯಾಗುಲ್ಮನಿವೇಶನಂ । ತತ್ತಥಾನುಷ್ಠಿತಂ ವೀರ! ತ್ವದ್ವಾಕ್ಯ ಸಮನಂತರಂ" ಎಂದು ಹೇಳಿರುವನು. (ತನಿಶ್ಲೋಕಿ)

ಈ ಶ್ಲೋಕಕ್ಕೆ ಮಹೇಶ್ವರತೀರ್ಥರ ವ್ಯಾಖ್ಯಾನ:---

ಜ್ಯೇಷ್ಠಭ್ರಾತಾ ಪಿತಾಚೈವ ಯಶ್ಚವಿದ್ಯಾಂ ಪ್ರಯಚ್ಛತಿ ।
ತ್ರಯಸ್ತೇ ಪಿತರೋಜ್ಞೇಯಾ ಧರ್ಮಶ್ಚೇದತ್ರ ಕಾರಣಂ ॥

ಎಂಬಂತೆ, ತನ್ನ ತಂದೆಗೆ ಸಮಾನನಾದ ರಾವಣನನ್ನು ತೊರೆದು ಬಂದುದು ವಿಭೀಷಣನಿಗೆ ನ್ಯಾಯವೆ? ಎಂದರೆ, ನ್ಯಾಯವೇ; ಏಕೆಂದರೆ, "ಗುರೋರಪ್ಯವ ಲಿಪ್ತಸ್ಯ (ತನಿಶ್ಲೋಕಿಯಲ್ಲಿ ಈ ಶ್ಲೋಕವು ಪೂರ್ತಿಯಾಗಿದೆ)" ಎಂಬಂತೆ, ಉನ್ಮಾರ್ಗಗಾಮಿಯಾದ ಅವನನ್ನು ತೊರೆದನು. ಅಲ್ಲದೆ ರಾವಣನು ಕೇವಲ ಸೋಪಾಧಿಕ ಗುರುವು. ಶ್ರೀರಾಮನಾದರೋ ಸಕಲ ಪ್ರಪಂಚಕ್ಕೂ ನಿರುಪಾಧಿಕ ಗುರುವು ಮಾತ್ರವಲ್ಲದೆ, ಸಕಲ ಕಲುಷಹರಣ ಪ್ರವೀಣನೂ ಆಗಿರುವನು. ಆದುದರಿಂದ ವಿಭೀಷಣನು ಶ್ರೀರಾಮನಲ್ಲಿ ಶರಣಾಗತಿಗಾಗಿ ಹೊರಟುಬಂದುದರಲ್ಲಿ ಯಾವ ದೋಷವೂ ಇರುವುದಿಲ್ಲವು.

* ತಂ ಮೇರುಶಿಖರಾಕಾರಂ ದೀಪ್ತಾಮಿವ ಶತಹ್ರದಾಂ । ಗಗನಸ್ಥಂ ಮಹೀಸ್ಥಾಸ್ತೇ ದದೃಶುರ್ವಾನರಾಧಿಪಾಃ ॥ ೨ ॥ † (ಸಹಿ ಮೇಘಾಚಲಪ್ರಖ್ಯೋ ಮಹೇಂದ್ರಸಮವಿಕ್ರಮಃ । ಸರ್ವಾಯುಧಧರೋ ವೀರೋ ದಿವ್ಯಾಭರಣಭೂಷಿತಃ । ಯೇಚಾಪ್ಯನುಚರಾಸ್ತಸ್ಯ ಚತ್ವಾರೋ ಭೀಮವಿಕ್ರಮಾಃ । ತೇಪಿ ಸರ್ವಾಯುಧೋಪೇತಾ ಭೂಷಣೈಶ್ಚಾಪಿ ಭೂಷಿತಾಃ) । ತಮಾತ್ಮಪಂಚಮಂ ದೃಷ್ಟ್ವಾ ಸುಗ್ರೀವೋ ವಾನರಾಧಿಪಃ । ವಾನರೈಸ್ಸಹದುರ್ಧರ್ಷಶ್ಚಿಂತಯಾಮಾಸ ಬುದ್ಧಿಮಾನ್ ॥ ೩ ॥ ಚಿಂತಯಿತ್ವಾ ಮುಹೂರ್ತಂತು ವಾನರಾಂಸ್ತಾನುವಾಚಹ ।

ಮೇರು....ರಂ-ಮೇರುಪರ್ವತದ ಶಿಖರದಂತೆ ಆಕಾರವುಳ್ಳ, ದೀಪ್ತಾಂ-ಹೊಳೆಯುತ್ತಿರುವ, ಶತ....ತಂ-ಮಿಂಚಿನಂತಿರುವ, ಗಗನಸ್ಥಂ-ಅಂತರಿಕ್ಷದಲ್ಲಿರುವ, ತಂ ಆ ವಿಭೀಷಣನನ್ನು, ಮಹೀಸ್ಥಾಃ-ಭೂಮಿಯ ಮೇಲೆ ನಿಂತಿರುವ, ತೇವಾನರಾಧಿಪಾಃ - ಆ ವಾನರಪತಿಗಳು, ದದೃಶುಃ - ಕಂಡರು. ॥ ೨ ॥ ಆತ್ಮ - ತಾನೇ, ಪಂಚಮಂ - ಐದನೆಯವನಾಗುಳ್ಳ ಆ ವಿಭೀಷಣನನ್ನು, ದೃಷ್ಟ್ವಾ - ಕಂಡು, ಬುದ್ಧಿಮಾನ್-ಬುದ್ಧಿಶಾಲಿಯಾದ, ವಾನರಾಧಿಪಃ-ಕಪಿನಾಯಕನಾದ, ದುರ್ಧರ್ಷಃ-ತಿರಸ್ಕರಿಸಲಸಾಧ್ಯನಾದ, ಸುಗ್ರೀವಃ - ಸುಗ್ರೀವನು, ವಾನರೈಸ್ಸಹ - ಕಪಿಗಳೊಡನೆ, ಚಿಂತಯಾಮಾಸ - ಆಲೋಚಿಸಿದನು. ॥ ೩ ॥ ಮುಹೂರ್ತಂ - ಎರಡು ಘಳಿಗೆಕಾಲ, ಚಿಂತಯಿತ್ವಾ - ಆಲೋಚಿಸಿ, ಹನುಮತ್ಪ್ರಮುಖಾನ್ -

ಸಮಾನವಾದ ಆಕಾರವುಳ್ಳವನೂ, ಬಹಳವಾಗಿ ಹೊಳೆಯುವ ಮಿಂಚಿನ ಬಳ್ಳಿಯನ್ನು ಹೋಲುವವನೂ ಆದ ಆ ವಿಭೀಷಣನನ್ನು ಭೂಮಿಯಮೇಲಿದ್ದ ವಾನರರೆಲ್ಲರೂ ನೋಡಿದರು. ಅನಲ, ಶರಭ, ಸಂಪಾತಿ, ಪ್ರಘಸರೆಂಬ ನಾಲ್ವರು ರಾಕ್ಷಸರೊಡಗೂಡಿ ಬರುತ್ತಿದ್ದ ಆ ವಿಭೀಷಣನನ್ನು ನೋಡಿ ಮಹಾ ಬುದ್ಧಿವಂತನೂ, ಅಜೇಯನೂ, ವಾನರೇಶ್ವರನೂ ಆದ ಸುಗ್ರೀವನು ಒಂದು ಮುಹೂರ್ತಕಾಲ ಚೆನ್ನಾಗಿ ಆಲೋಚಿಸಿ ಆಮೇಲೆ ಆಂಜನೇಯನೇ ಮೊದಲಾದ

* ಇಲ್ಲಿನ ವಿಶೇಷಾರ್ಥ :-- ರಾವಣನ ಬಳಿಯಿಂದ ಮೇಲಕ್ಕೆ ಹಾರಿದಾಗಲೇ ವಿಭೀಷಣನನ್ನು ಅಲ್ಲಿದ್ದ ವಾನರಯೂಥಪತಿಗಳು ಕಂಡರು— ಭೂಮಿಯಲ್ಲಿ ಎಲ್ಲೆಡೆಯಲ್ಲಿಯೂ ಕಾಪಲಿದ್ದ ಅವರು ವಿಭೀಷಣನು ಗಗನದಲ್ಲಿದ್ದರೂ ಅವನನ್ನು ಕಂಡರು ಎಂದಿರುವುದು ಅವರ ಜಾಗರೂಕತೆಯನ್ನು ತಿಳಿಸುವುದಕ್ಕಾಗಿಯೆಂದು ತಿಳಿಯಬೇಕು. ಅಥವಾ "ಮಹೀಸ್ಥಾಃ" ಎಂಬ ಪದಕ್ಕೆ "ಅಲ್ಲಲ್ಲಿರುವ ವೃಕ್ಷಗಳ ಮೇಲಿದ್ದವರು" ಎಂದು ಅರ್ಥ ಮಾಡಬಹುದು. ಕಂಡೊಡನೆಯೇ ಶ್ರೀರಾಮನ ಬಳಿಗೈದಿ ಸುತ್ತುವರೆದು ನಿಂತರು. "ವಾನರಯೂಥಪಾಃ" ಎಂದು ಕವಿಯು, ವಾನರರನ್ನು ಹೊಗಳಿರುವನು. "ಎಲ್ಲರೂ ಏಕಕಾಲದಲ್ಲಿಯೇ ನೋಡಿದರು" ಎಂದು ಭಾವ. ಇದರಿಂದ ವಿಭೀಷಣನು ಪ್ರತಿಕೂಲ ಸಮೂಹವನ್ನು ಬಿಟ್ಟು ಬಂದುದು ಮಾತ್ರವಲ್ಲದೆ, ಅನುಕೂಲ ಜನರ ಕಟಾಕ್ಷಕ್ಕೆ ಪಾತ್ರನಾದುದೂ ಸೂಚಿತವಾಗುವುದು. "ಅಜಗಾಮ ಮುಹೂರ್ತೇನ" ದಳ್ಳುರಿಯಿಂದ ತಪ್ಪಿಸಿಕೊಂಡು, ಶೀತಳಹ್ರದದಲ್ಲಿ ಬೀಳಲು ಬರುತ್ತಿರುವವನಂತೆ ಆ ವಿಭೀಷಣನು ತೋರುತ್ತಿದ್ದನು. "ಮೇರುಶಿಖರಾಕಾರಂ" ಔನ್ನತ್ಯ, ಪೀವರತ್ವ, ರತ್ನಬಾಹುಳ್ಯಗಳನ್ನೊಳಗೊಂಡಿದ್ದುದರಿಂದ ವಿಭೀಷಣನಿಗೆ ಈ ಉಪಮಾನವು ಕೊಟ್ಟಿದೆ. ಪ್ರತಿಪಕ್ಷ ತ್ಯಾಗಲಾಭದಿಂದ ಸ್ಥೈರ್ಯವನ್ನು ಹೊಂದಿ ಹೊಳೆಯುತ್ತಿದ್ದನೆಂದು ಭಾವವು. ಇದರಿಂದ ಶ್ರೀರಾಮನಿಗೊಂದು ಶೃಂಗಲಾಭವೂ, ರಾವಣನಿಗೊಂದು ಶೃಂಗಭಂಗವೂ ಸೂಚಿತವಾಗುವುದು. "ದೀಪ್ತಾಮಿವ ಶತಹ್ರದಾಂ" ತೇಜಸ್ಸಿನಿಂದ ಕೂಡಿ ಗಗನದಲ್ಲಿದ್ದುದರಿಂದ ಈ ದೃಷ್ಟಾಂತವು ಕೊಟ್ಟಿದೆ. ಇದರಿಂದ ಶ್ರೀರಾಮಭಕ್ತರಾದ ಇವರು ನನ್ನನ್ನು ಪ್ರವೇಶಗೊಳಿಸರು ಎಂದು ಕಂಪವೂ, ಹಾಗೆ ಅವರು ನನ್ನನ್ನು ಪ್ರವೇಶಗೊಳಿಸದಿದ್ದರೆ ನನ್ನ ಜೀವನವು ವ್ಯರ್ಥವಾಗುವುದೆಂಬ ಚಿಂತೆಯೂ ದ್ಯೋತಿತವಾಗುವುದು. (ತನಿ)

† ಈ ಎರಡು ಶ್ಲೋಕಗಳೂ ಗೋ. ಪಾಠದಲ್ಲಿ ಅಧಿಕ. ರಾ. ಪಾಠದಲ್ಲಿ ೩, ೪ನೇ ಶ್ಲೋಕಗಳು ವ್ಯತ್ಯಸ್ತಗಳಾಗಿರುವುವು.

ಹನುಮತ್ಪ್ರಮುಖಾನ್ ಸರ್ವಾನಿದಂ ವಚನಮುತ್ತಮಂ ॥ ೪ ॥ ‡ "ಏಷ ಸರ್ವಾಯುಧೋಪೇತಶ್ಚತುರ್ಭಿಸ್ಸಹರಾಕ್ಷಸೈಃ । ರಾಕ್ಷಸೋಽಭ್ಯೇತಿ ಪಶ್ಯಧ್ವಮಸ್ಮಾನ್ ಹಂತುಂ ನಸಂಶಯಃ" ॥೫॥ † ಸುಗ್ರೀವಸ್ಯ ವಚಃ ಶ್ರುತ್ವಾ ಸರ್ವೇ ತೇ ವಾನರೋತ್ತಮಾಃ । ಸಾಲಾನುದ್ಯಮ್ಯ ಶೈಲಾಂಶ್ಚ ಇದಂ ವಚನಮಬ್ರುವನ್ ॥ ೬ ॥ "ಶೀಘ್ರಂ

ಹನುಮಂತನೇ ಮೊದಲಾದ, ಸರ್ವಾನ್ - ಸಮಸ್ತರಾದ, ತಾನ್ವಾನರಾನ್ - ಆ ಕಪಿಗಳನ್ನು ಕುರಿತು, ಉತ್ತಮಂ - ಉತ್ಕೃಷ್ಟವಾದ, ಇದಂವಚನಂ - ಈ ಮಾತನ್ನು, ಉವಾಚಹ - ಹೇಳಿದನಷ್ಟೆ. ॥ ೪ ॥ ಸರ್ವಾ....ತಃ - ಸಮಸ್ತವಾದ ಆಯುಧಗಳಿಂದ ಕೂಡಿದ, ಏಷಃರಾಕ್ಷಸಃ - ಈ ರಾಕ್ಷಸನು, ಚತುರ್ಭಿಃ - ನಾಲ್ವರಾದ, ರಾಕ್ಷಸೈಸ್ಸಹ - ರಾಕ್ಷಸರೊಡನೆ, ಅಸ್ಮಾನ್ - ನಮ್ಮನ್ನು, ಹಂತುಂ - ಹೊಡೆಯಲು, ಅಭ್ಯೇತಿ - ಬರುತ್ತಾನೆ, ನಸಂಶಯಃ - ಸಂಶಯವಿಲ್ಲ, ಪಶ್ಯಧ್ವಂ - ನೋಡಿರಿ. ॥೫॥ ಸುಗ್ರೀವಸ್ಯ - ಸುಗ್ರೀವನ, ವಚಃ - ಮಾತನ್ನು, ಶ್ರುತ್ವಾ - ಕೇಳಿ, ಸರ್ವೇ - ಸಮಸ್ತರಾದ, ತೇವಾನರೋತ್ತಮಾಃ - ಆ ಕಪಿಗಳು, ಸಾಲಾನ್ - ಸಾಲವೃಕ್ಷಗಳನ್ನೂ, ಶೈಲಾಂಶ್ಚ - ಬೆಟ್ಟಗಳನ್ನೂ, ಉದ್ಯಮ್ಯ - ಎತ್ತಿಕೊಂಡು, ಇದಂ - ಈ ಮಾತನ್ನು, ಅಬ್ರುವನ್ - ನುಡಿದರು, ಹೇ ರಾಜನ್ - ಎಲೈ

ವಾನರವೀರರನ್ನು ಕುರಿತು ಅವರೊಡನೆ, "ಅಯ್ಯಾ ವಾನರೋತ್ತಮರೇ! ಈ ರಾಕ್ಷಸನು ಸಮಸ್ತಾಯುಧಗಳನ್ನೂ ಧರಿಸಿ ನಾಲ್ವರು ರಾಕ್ಷಸರೊಡಗೂಡಿ ನಮ್ಮನ್ನು ಕೊಲ್ಲಲು ಬಂದಿರುವನು. ನೋಡಿರಿ." ಎಂದನು. ಆಮಾತುಗಳನ್ನು ಕೇಳಿದೊಡನೆಯೇ ಆ ವಾನರರೆಲ್ಲರೂ ವೃಕ್ಷಗಳನ್ನೂ, ಪರ್ವತಗಳನ್ನೂ ಕೈಯಲ್ಲಿ ಹಿಡಿದುಕೊಂಡು ಆ ಸುಗ್ರೀವನನ್ನು ಕುರಿತು, "ಎಲೈ

‡ ಇಲ್ಲಿನ ವಿಶೇಷಾರ್ಥ:—ಏಷಃ-ಇತರರಿಗೆ ಬಾಧೆಯನ್ನುಂಟುಮಾಡುವ ಏಕಾಂತ ಕ್ರೌರ್ಯವುಳ್ಳವನು, ಸರ್ವಾಯುಧೋಪೇತಃ-ತನ್ನ ಮನಸ್ಸಿನಲ್ಲಿರುವ ಕ್ರೌರ್ಯಕ್ಕೆ ಅನುಕೂಲವಾದ ಹಿಂಸಾಪರಿಕರಗಳಿಂದ ಸಂಪೂರ್ಣನಾದವನು, (ವಿಭೀಷಣನು ಗದೆಯೊಂದನ್ನೇ ಧರಿಸಿದ್ದರೂ ಇಲ್ಲಿ ಸುಗ್ರೀವನು ಅವನು ಸರ್ವಾಯುಧೋಪೇತನಾಗಿದ್ದನೆಂದು ಹೇಳಿರುವುದು ಅವನಿಗೆ ಶ್ರೀರಾಮನ ವಿಷಯದಲ್ಲಿದ್ದ ಪ್ರೇಮಾಂಧತೆಯಿಂದಲೇ ಎಂದು ತಿಳಿಯಬೇಕು. ಅಥವಾ ವಿಭೀಷಣನು ಗದೆಯೊಂದನ್ನೇ ಹಿಡಿದಿದ್ದರೂ, ಅದನ್ನು ಹಿಡಿದಿರುವ ಚಾತುರ್ಯವನ್ನು ನೋಡಿ ಎಲ್ಲ ಆಯುಧಗಳನ್ನೂ ಹಿಡಿಯಬಲ್ಲ ಸಾಮರ್ಥ್ಯವು ಇವನಿಗುಂಟೆಂದು ಸುಗ್ರೀವನಿಗೆ ತೋರಿತು. ಅಥವಾ, ಸ್ವಾಮಿಪೀಡನದಲ್ಲಿ ಬ್ರಹ್ಮಾಸ್ತ್ರಸದೃಶ ರಣಾಗತಿಯು ಇವನ ಕೈಯಲ್ಲಿದೆ ಎಂಬ ಅರ್ಥವೂ ಸೂಚಿತವಾಗುವುದು. ಕೆಲವರು " ಉತ್ಪಪಾತ ಗದಾಪಾಣಿಃ " ಎಂಬ ಕಡೆಯಲ್ಲಿ ಸರ್ವಾಯುಧೋಪಲಕ್ಷಣವೇ ಹೇಳಿದಂತಾಯಿತೆಂದು ಹೇಳುವರು) ರಾಕ್ಷಸಃ-ಸರ್ಪಜಾತಿಯಂತೆ ಇವನಲ್ಲಿ ಕ್ರೌರ್ಯಾತಿಶಯವಿರುವುದೆಂದು ಹೇಳಲು ಈ ವಿಶೇಷಣ. ಸಹಜವಾಗಿಯೇ ಕ್ರೂರನು ಎಂದು ಅರ್ಥ. ಪಶ್ಯತ-ನೋಡಿರಿ. ಅಸ್ಮಾನ್ ಹಂತುಂ-ನಮ್ಮಲ್ಲಿ ಯಾರಾದರೊಬ್ಬನನ್ನು ಕೊಂದರೆ ಉಳಿದವರು ಜೀವಿಸುವರು. ನಮಗೆಲ್ಲಾ ಮೂಲಭೂತನಾದ ಶ್ರೀರಾಮನನ್ನೇ ಕೊಂದುಬಿಟ್ಟರೆ ಸರ್ವನಾಶವೇ ಆಗಿಹೋಗುವುದು ಎಂಬುದನ್ನು ಸೂಚಿಸಲು ಇಲ್ಲಿ ಬಹುವಚನವು ಪ್ರಯುಕ್ತವಾಗಿದೆ. (ತನಿಶ್ಲೋಕಿ)

† ಈ ಎರಡು ಶ್ಲೋಕಗಳಲ್ಲಿನ ವಿಶೇಷಾರ್ಥ:—ಸುಗ್ರೀವಸ್ಯ-ಸಾಹಸ ಕೃತ್ಯಗಳನ್ನು ನಿರ್ವಹಿಸುವ ಸುಗ್ರೀವನ, ವಚಃಶ್ರುತ್ವಾ-ಅನುಮತಿಯನ್ನು ಪಡೆದು, ಸಾಲಾನುದ್ಯಮ್ಯ ಶೈಲಾಂಶ್ಚ-ಇದು ಬಂಡೆ, ಇದು ಮರ ಎಂಬ ತಾರತಮ್ಯವೇ ಇಲ್ಲದೆ ಜಾಗ್ರತೆಯಾಗಿ ಕೈಗೆ ಸಿಕ್ಕಿದ್ದನ್ನು ತೆಗೆದುಕೊಂಡು, ಅಥವಾ ಆದರಾತಿಶಯದಿಂದ ಎರಡನ್ನೂ ಕೈಗೆ ತೆಗೆದುಕೊಂಡರು ಎಂದೂ ಸೂಚಿತವಾಗುವುದು, (ಶ್ರೀರಾಮ ಕೈಂಕರ್ಯವೇ ವೃತ್ತಿಯಾಗುಳ್ಳ ಲಕ್ಷ್ಮಣನು ಅಭಿಷೇಕ ಸಮಯದಲ್ಲಿ ಛತ್ರಚಾಮರಗಳೆರಡನ್ನೂ ಹಿಡಿದಂತೆ) ಆ ವಾನರರು, ರಾಕ್ಷಸ (ವಿಭೀಷಣ) ಹನನವೇ ರಾಮಕೈಂಕರ್ಯವೆಂದು ತಿಳಿದರು. ಇದಂವಚನಂ-ತನ್ನ ಶೇಷತ್ವ ಸಿದ್ಧಿಗಾಗಿ ಸುಗ್ರೀವನ ಅನುಮತಿಯನ್ನೂ ಅಪೇಕ್ಷಿಸದೆಯೇ ಆ ರಾಕ್ಷಸನ ವಧೆ

**ವ್ಯಾದಿಶ ನೋ ರಾಜನ್ವಧಾಯೈಷಾಂ ದುರಾತ್ಮನಾಂ । ನಿಪತಂತು ಹತಾಶ್ಚೈತೇ ಧರಣ್ಯಾಮಲ್ಪತೇಜಸಃ ॥ ೭ ॥ ¶ ತೇಷಾಂ ಸಂಭಾಷಮಾಣಾನಾಮನ್ಯೋನ್ಯಂ ಸ ವಿಭೀಷಣಃ । ಉತ್ತರಂ ತೀರಮಾಸಾದ್ಯ ಖಸ್ಥ ಏವ ವ್ಯತಿಷ್ಠತ ॥೮॥ ‡ ಉವಾಚ ಚ ಮಹಾಪ್ರಾಜ್ಞಃ ಸ್ವರೇಣ ಮಹತಾ ಮಹಾನ್ । ಸುಗ್ರೀವಂ ತಾಂಶ್ಚ ಸಂಪ್ರೇಕ್ಷ್ಯ ಸರ್ವಾನ್ವಾನರಯೂ**

ಅರಸೇ, ನಃ - ನಮ್ಮನ್ನು, ಏಷಾಂ - ಈ, ದುರಾತ್ಮನಾಂ - ಈ ದುಷ್ಟರಾದ ರಕ್ಕಸರ, ವಧಾಯ - ಸಂಹಾರಕ್ಕಾಗಿ, ಶೀಘ್ರಂ-ಜಾಗ್ರತೆಯಾಗಿ, ವ್ಯಾದಿಶ-ಆಜ್ಞಾಪಿಸು, ಅಲ್ಪತೇಜಃ-ಸ್ವಲ್ಪತೇಜಸುಳ್ಳ, ಏತೇ - ಈ ಐದುಮಂದಿ ರಕ್ಕಸರು, ಹತಾಃ - ಹೊಡೆಯಲ್ಪಟ್ಟವರಾಗಿ, ಧರಣ್ಯಾಂ - ಭೂಮಿಯಲ್ಲಿ, ನಿಪತಂತು - ಬೀಳಲಿ, ಇತಿ ಇಂತೆಂದು, ಅಬ್ರುವನ್ - ಹೇಳಿದರು. ॥ ೬-೭ ॥ ಸಃ ವಿಭೀಷಣಃ - ಆ ವಿಭೀಷಣನು, ತೇಷಾಂ - ಈ ವಾನರರು, ಅನ್ಯೋನ್ಯಂ ಪರಸ್ಪರವಾಗಿ, ಸಂಭಾ....ನಾ - ಮಾತನಾಡುತ್ತಿರಲು, ಉತ್ತರತೀರಂ - ಕಡಲಿನ ಉತ್ತರ ದಡವನ್ನು, ಆಸಾದ್ಯ - ಹೊಂದಿ, ಖಸ್ಥ ಏವ - ಅಂತರಿಕ್ಷದಲ್ಲೇ ಇದ್ದವನಾಗಿ, ವ್ಯತಿಷ್ಠತ - ನಿಂತನು. ॥೮॥ ಮಹಾಪ್ರಾಜ್ಞಃ - ಬಹಳ ಪ್ರಜ್ಞಾವಂತನಾದ, ಮಹಾನ್ - ಮಹಾತ್ಮನಾದ ವಿಭೀಷಣನು, ಸುಗ್ರೀವಂ - ಸುಗ್ರೀವನನ್ನು, ಸರ್ವಾನ್ - ಸಮಸ್ತ

ವಾನರೇಶ್ವರನೇ! ಈ ದುರಾತ್ಮರನ್ನು ಕೊಲ್ಲಲು ನಮಗೀಗಲೇ ಅಪ್ಪಣೆಯನ್ನು ಕೊಡು. ಇವರು ಬಹಳ ಸ್ವಲ್ಪ ವೀರ್ಯವುಳ್ಳವರು. ಇವರೆಲ್ಲರನ್ನೂ ಕೊಂದು ನೆಲಕ್ಕೆ ಕೆಡಹುವೆವು" ಎಂದು ಹೇಳಿದರು. ॥ ೧–೭ ॥ ಆ ವಾನರರು ಹೀಗೆ ಹೇಳುತ್ತಿರುವಂತೆಯೇ ವಿಭೀಷಣನು ಸಮುದ್ರದ ಉತ್ತರತೀರವನ್ನು ಸೇರಿ ಕೆಳಕ್ಕಿಳಿಯದೆ ಆಕಾಶದಲ್ಲಿಯೇ ನಿಂತಿದ್ದನು. ಮಹಾಪ್ರಾಜ್ಞನೂ, ಪೂಜ್ಯನೂ ಆದ ಆತನು ಸುಗ್ರೀವನೇ ಮೊದಲಾದ ವಾನರೋತ್ತಮರನ್ನು

ಯಲ್ಲಿ ನಿಶ್ಚಯವನ್ನು ಪ್ರತಿಪಾದಿಸುವ ಮತವನ್ನೇ ಹೇಳಿದರು. ಗುಣಪ್ರಧಾನಭಾವವನ್ನಾಗಲಿ, ಔಚಿತ್ಯವನ್ನಾಗಲಿ ಗಮನಿಸದೆಯೇ ಎಲ್ಲರೂ ಹೇಳಿದರು ಎಂದು ಸ್ವಾರಸಿಕಾರ್ಥವು. ಅಸ್ವತಂತ್ರರಾಗಿರುವವರಿಗೆ ಆಜ್ಞಾಪಿಸಲು ತಡಮಾಡಿದರೆ, ಸ್ವತಂತ್ರವಾಗಿ ಪ್ರಹರಿಸಲೂ ಆಗುವುದಿಲ್ಲ. ಪಾರತಂತ್ರ್ಯಹಾನಿಯೂ ಆದೀತು. ಹಾಗಾಗದಂತೆ ಜಾಗ್ರತೆಯಾಗಿ ಆಜ್ಞಾಪಿಸು. ನಃ-ವಧೋದ್ಯುಕ್ತರಾಗಿರುವ ನಮ್ಮನ್ನು (ನೀವು ವಧೋದ್ಯುಕ್ತರೇ ಆಗಿರುವಿರೆಂದಮೇಲೆ ನನ್ನ ಅನುಮತಿಯನ್ನು ಕಟ್ಟಿಕೊಂಡೇನು. ಎಂದರೆ) ರಾಜನ್-ನೀನು ನಮ್ಮೆಲ್ಲರಿಗೂ ದೊರೆ. ನಿನ್ನ ಆಜ್ಞೆಯನ್ನೇ ಅನುಸರಿಸುವುದು ನಮ್ಮ ಕರ್ತವ್ಯವು ಎಂದು ಭಾವವು. ವಧಾಯ-ಇವರು ಇಲ್ಲಿದ್ದು ಏನಾದರೂ ಅನರ್ಥಮಾಡಿಯಾರು, ಆದುದರಿಂದ ವಧೆಗೇ ಅಪ್ಪಣೆಕೊಡು ಎಂದು ಭಾವವು. ಏಷಾಂ ದುರಾತ್ಮನಾಂ-ಇವರ ಆಕಾರವನ್ನು ನೋಡಿದರೇನೇ ಇವರಲ್ಲಿ ದೌರಾತ್ಮ್ಯವು ಕಾಣುತ್ತದೆಯಲ್ಲವೆ ನಿಪತಂತು-ಹತಾಃ-ಪುನಃ ಆಕಾಶಕ್ಕೆ ಹಾರದಿರುವಂತೆ ಭೂಮಿಯಲ್ಲಿಯೇ ಹೊಡೆದು ಕೆಡಹುವೆವು ಎಂದು ಭಾವ. "ಯುದ್ಧದಲ್ಲಿ ಜಯಾಪಜಯುಗಳು ಪಾಕ್ಷಿಕವಲ್ಲವೆ" ಎಂದರೆ, ಅಲ್ಪತೇಜಸಃ-ಇವರು ಕೇವಲ ದುರ್ಬಲರು; ನಮ್ಮ ಬಲವೆಲ್ಲಿ? ಇವರೆಲ್ಲಿ? ಇವರು ನಮ್ಮ ಬಲಕ್ಕೆ ಗಜಕಬಳದಂತೆ ಎಂದು ಭಾವವು.

¶ ಇಲ್ಲಿ, "ತೇಷಾಂ" ಎಂಬ ಷಷ್ಠಿಯು ಅನಾದರದಲ್ಲಿ ಉಪಯೋಗಿಸಿದೆ. "ಈ ವಾನರರು ಏನಾದರೂ ಹೇಳಿಕೊಳ್ಳಲಿ ; ಪರಮ ಕಾರುಣಿಕನಾದ ಶ್ರೀರಾಮನು ನನ್ನನ್ನು ಅವಶ್ಯವಾಗಿಯೂ ರಕ್ಷಿಸುತ್ತಾನೆ" ಎಂಬ ದೃಢವಿಶ್ವಾಸದಿಂದ ಆ ವಿಭೀಷಣನು ಅನ್ಯೋನ್ಯವಾಗಿ ಮಾತನಾಡಿಕೊಳ್ಳುತ್ತಿದ್ದ ಆ ವಾನರರ ಮಾತುಗಳನ್ನು ಲೆಕ್ಕಿಸದೆ, ತನ್ನನ್ನು ಹೊಡೆಯಲು ಉದ್ಯುಕ್ತರಾಗಿದ್ದರೂ ಅವರಿಗೆದುರಾಗಿಯೇ ಬಂದನು. ಬಂದುದೂ ಅಲ್ಲದೆ ನಿಶ್ಶಂಕೆಯಿಂದ ಎಲ್ಲರಿಗೂ ತನ್ನನ್ನು ಪ್ರಕಟಗೊಳಿಸಿಕೊಂಡು ಆಕಾಶದಲ್ಲಿಯೇ ನಿಂತನು. "ಖಸ್ಥಃ ವ್ಯತಿಷ್ಠತ" ಎಂಬುದಾಗಿ ಎರಡು ಬಾರಿ ಹೇಳಿರುವುದು ಅವನು ನಿರ್ಭಯದಿಂದ, ಕದಲದಿದ್ದನೆಂಬುದನ್ನು ಸೂಚಿಸುವುದಕ್ಕಾಗಿಯೆಂದು ಗ್ರಹಿಸಬೇಕು. (ತನಿಶ್ಲೋಕಿ)

‡ ಇಲ್ಲಿ, ವಿಭೀಷಣನು, ಶ್ರೀರಾಮನು ಪುರುಷಕಾರಲೇಶವನ್ನೂ ಅಪೇಕ್ಷಿಸದೆ, ಎಲ್ಲಾ ಪ್ರತಿಬಂಧಿಗಳನ್ನೂ ನಿವಾರಿಸಿ ನನ್ನನ್ನು ಕಾಪಾಡುತ್ತಾನೆಂಬ ದೊಡ್ಡ ವಿಶ್ವಾಸವುಳ್ಳವನಾಗಿದ್ದರೂ ಮೊದಲು ಆತನಲ್ಲಿಗೆ ಶರಣು ಹೋಗಲಿ

ಧರ್ಷಾ ॥೯॥ ¶ ರಾವಣೋ ನಾಮ ದುರ್ವೃತ್ತೋ ರಾಕ್ಷಸೋ ರಾಕ್ಷಸೇಶ್ವರಃ । ತಸ್ಯಾಹಮನುಜೋ ಭ್ರಾತಾ ವಿಭೀಷಣ ಇತಿ ಶ್ರುತಃ ॥೧೦॥ ♈ ತೇನ ಸೀತಾ ಜನಸ್ಥಾನಾ

---

ರಾದ, ತಾನ್ಪ್ರಾ....ಶ್ಚ - ಆ ವಾನರಯೂಥಪತಿಗಳನ್ನೂ, ಸಂಪ್ರೇಕ್ಷ್ಯ - ಕಂಡು, ಮಹತಾ - ದೊಡ್ಡದಾದ, ಸ್ವರೇಣ - ಸ್ವರದಿಂದ, ಉವಾಚ - ಹೇಳಿದನು. ॥೯॥ ರಾವಣೋನಾಮ - ರಾವಣನೆಂದು ಪ್ರಸಿದ್ಧನಾದ, ದುರ್ವೃತ್ತಃ - ಕಾರ್ಯಾಕಾರ್ಯವಿವೇಕವಿಲ್ಲದ, ರಾಕ್ಷಸಃ - ರಕ್ಕಸನಾದ, ರಾಕ್ಷಸೇಶ್ವರಃ - ರಕ್ಕಸರೊಡೆಯನು, ಅಸ್ತಿ - ಇದ್ದಾನೆ, ತಸ್ಯ - ಆತನಿಗೆ, ಅಹಂ - ನಾನು, ಅನುಜೋಭ್ರಾತಾ - ಕನಿಷ್ಠ ಭ್ರಾತೃವಾದವನು, ವಿಭೀಷಣ ಇತಿ - ವಿಭೀಷಣನೆಂದು, ಶ್ರುತಃ - ಹೇಳ

---

ನೋಡಿ ಅಲ್ಲಿರುವವರೆಲ್ಲರೂ ಚೆನ್ನಾಗಿ ಕೇಳುವಂತೆ ಅವರನ್ನು ಕುರಿತು, "ಅಯ್ಯಾ ವಾನರೋತ್ತಮರಿರಾ! ಬಹಳ ದುರಾಚಾರಿಯಾದ ರಾವಣನೆಂಬ ರಾಕ್ಷಸರಾಜನೊಬ್ಬನಿರುವನು. ನಾನು ಅವನಿಗೆ ತಮ್ಮನು, ನನ್ನ ಹೆಸರು ವಿಭೀಷಣನು. ಇದು ಹಾಗಿರಲಿ; ಆ ದುರುಳ

---

ಲ್ಲವು. ಮೊದಲೂ, ತಾನು ದೂರದಲ್ಲಿ ನಿಂತು ತನಗೆ ಪ್ರತಿಕೂಲರಾಗಿ ನಿಂತಿರುವ ಸುಗ್ರೀವ ಪ್ರಮುಖರನ್ನೇ ಪುರುಷಕಾರಭೂತರನ್ನಾಗಿ ತಿಳಿದು ಅವರನ್ನೇ ಕುರಿತು ಹೇಳುವನು. "ಉವಾಚಹ" ಎಂಬ ಕಡೆ ಚಕಾರದಿಂದ ತಾನು ಬಂದಿರುವುದೇ ರಾಮನು ತನ್ನನ್ನು ಸ್ವೀಕರಿಸುವುದಕ್ಕೆ ಸಾಕಾಗಿದ್ದಿತು. ಇದರಮೇಲೇ ಹೇಳಿಯೂ ಹೇಳಿದನು ಎಂದುದರಿಂದ, "ಪದ್ಭ್ಯಾಮಭಿಗಮಾಚ್ಚ" ಎಂಬುದಾಗಿ ಗುಹನು ತನ್ನನ್ನು ನೋಡಲು ನಡೆದುಬಂದುದೇ ಭಾರವೆಂದೆಣಿಸಿದ ಶ್ರೀರಾಮನಿಗೆ ಹೇಳಿಯೂ ಹೇಳಿದನು ಎಂದರೆ ಹುಣ್ಣಿನಮೇಲೆ ಉಪ್ಪಿಟ್ಟಂತಾಯಿತು. "ಮಹಾಪ್ರಾಜ್ಞಃ" ಅಂತರಂಗ ಪುರುಷಕಾರದಿಂದಲೇ ಕೃಪಾಳುವಾದರೂ, "ರಾಜಾಶರಣಮುಪಗಂತವ್ಯಃ" ಎಂಬ ಪರಿಜ್ಞಾನವೂ ವಾನರರಿಗೆ ನನ್ನ ವಿಷಯದಲ್ಲಿರುವ ಪ್ರತಿಕೂಲ ಸಂರಂಭವೂ ನನ್ನಲ್ಲಿರುವ ದ್ವೇಷದಿಂದಲ್ಲವು. ಅದು ಶ್ರೀರಾಮನಲ್ಲಿ ಅವರಿಗಿರುವ ಭಕ್ತಿಪ್ರಕರ್ಷದಿಂದಲೇ ಉಂಟಾಗಿರುವುದು. ಆದುದರಿಂದ ಇವರಲ್ಲಿ ಯಾವ ದೋಷವೂ ಇರುವುದಿಲ್ಲವು. ಹೀಗೆ ತಿಳಿದ ಆ ವಿಭೀಷಣನು ರಾಮಕಿಂಕರರಾದ ಇವರು ನನ್ನನ್ನು ಅಂಗೀಕರಿಸದಿದ್ದರೆ ರಾಮನು ನನ್ನನ್ನು ಅಂಗೀಕರಿಸಿದರೂ ಆಗುವುದೇನು? ಆದುದರಿಂದ ರಾಮಾಂಗೀಕಾರವೂ ಇವರ ಅಂಗೀಕಾರದಲ್ಲಿಯೇ ಅಡಗಿದೆ. "ಸ್ವರೇಣಮಹತಾ" ಪುರುಷಕಾರಭೂತರಾದ ಎಲ್ಲರಿಗೂ ಕೇಳಿಸುವುದು ಮಾತ್ರವಲ್ಲದೆ, ಸರ್ವಲೋಕ ಶರಣ್ಯನಾದ ಶ್ರೀರಾಮನಿಗೂ ಕೇಳಿಸುವಂತೆ ತನ್ನ ಆರ್ತಿಯು ವ್ಯಕ್ತವಾಗುವಂತೆ ನುಡಿದನೆಂದು ಸೂಚಿಸಲು ಈ ಪದಗಳು ಪ್ರಯುಕ್ತವಾಗಿವೆ. ಶ್ರೀರಾಮನ ವಿಷಯದಲ್ಲಿ ಈ ವಿಧವಾದ ಆರ್ತರವೋಚ್ಚಾರಣವೂ ಭಾಗ್ಯಾಧಿಕನಾದವನಿಗೇ ದೊರಕುವುದೆಂಬುದನ್ನೂ ಸೂಚಿಸಲು, "ಮಹಾನ್" ಎಂಬ ಪದವು. ಈ ವಿಷಯವು, "ಆಕಿಂಚನ್ಯೈಕಶರಣಾಃ ಕೇಚಿದ್ಭಾಗ್ಯಾಧಿಕಾಃ ಪುನಃ । ಮಾಮೇವಶರಣಂ ಪ್ರಾಪ್ಯ ಮಾಮೇವಾಂತೇ ಸಮಶ್ನುತೇ ॥" ಎಂಬ ಲಕ್ಷ್ಮೀತಂತ್ರದ ಶ್ಲೋಕದಿಂದ ವ್ಯಕ್ತವಾಗುವುದು. (ತನಿಶ್ಲೋಕಿ)

¶ ಇಲ್ಲಿನ ವಿಶೇಷಾರ್ಥವು:—ಧರ್ಮಾತ್ಮನಾದ ವಿಭೀಷಣನು ಮೊದಲು ತನ್ನ ದೋಷಗಳನ್ನೇ ಈ ಶ್ಲೋಕದಿಂದ ಹೇಳಿಕೊಳ್ಳುತ್ತಾನೆ. ರಾವಣಃ-"ರಾವಯತೀತಿ ರಾವಣಃ" ಎಂಬ ವ್ಯುತ್ಪತ್ತಿಯಿಂದ ಆ ಹೆಸರೇ ಕ್ರೂರವಾದುದು, ಇದರ ಮೇಲೆ ಅವನ ವ್ಯಾಪಾರವೂ ಕ್ರೂರವಾದುದುದೇ ಎಂದು ಹೇಳುವುದಕ್ಕಾಗಿ "ದುರ್ವೃತ್ತಃ" ಎಂಬ ಪದವು ಪ್ರಯುಕ್ತವಾಗಿರುವುದು. ಜಾತಿಯೂ ಕೂಡ ಅಂಥದೇ ಎಂದು ತಿಳುಹುವುದಕ್ಕೋಸ್ಕರ "ರಾಕ್ಷಸಃ" ಎನ್ನುತ್ತಾನೆ. ಅವನು ಕ್ರೂರನೆಂಬುದು ಮಾತ್ರವೇ ಅಲ್ಲವು, ಕ್ರೂರರಾದ ಪರಿಜನರಿಂದಲೂ ಕೂಡಿರುವನು. (ರಾವಣನೀರೀತಿಯಾಗಿರಲು ನೀನು ಬಂದುದೇಕೆ ಎಂದರೆ) ತಸ್ಯಾಹಮನುಜೋಭ್ರಾತಾ-ಅವನಿಗೆ ನಾನು ಅಗ್ರಜನಾಗಿದ್ದರೆ ಕುಬೇರನಂತೆ ದೋಷನಿರ್ಲಿಪ್ತನಾಗಿರುತ್ತಿದ್ದೆನು. ಆದರೆ ದುರದೃಷ್ಟವಶದಿಂದ ನಾನು ಅವನಿಗೆ ತಮ್ಮನಾಗಿಬಿಟ್ಟಿರುವೆನು. ಇದರಿಂದ ಅವನು ಬುದ್ಧಿಪೂರ್ವಕವಾಗಿ ಮಾಡಿರುವ ದೋಷಗಳೆಲ್ಲವೂ ಅವನಪ್ಪಣೆಯಂತೆ ನಾನು ಮಾಡಿದವುಗಳೇ ಆಗಿಹೋಗಿರುವುವು. ಎಂದು ಭಾವವು. (ತನಿಶ್ಲೋಕಿ)

♈ ಇಲ್ಲಿ ವಿಭೀಷಣ ವಾಕ್ಯಾಭಿಪ್ರಾಯವು ಹೀಗೆ:—ಹಿಂದೆ ಹೇಳಿದ ರಾವಣನ ದೋಷಗಳೆಲ್ಲವೂ ಪ್ರಾಯಶ್ಚಿತ್ತಾದಿಗಳಿಂದ, ಕಳೆದುಕೊಳ್ಳಬಹುದು. ಆದರೆ ಅಕ್ಷಮ್ಯವಾದ ಭಾಗವತಾಪಚಾರವೂ ಅವನಲ್ಲಿರುವುದು. ಸಮಸ್ತ ದೋಷಗಳಿಗೂ ಭಾಗಿಯಾಗಿರುವ ಆ ರಾವಣನನ್ನು, "ಅನನ್ಯಾ ರಾಘವೇಣಾಹಂ" "ಜಲಾನ್ಮತ್ಸ್ಯಾವಿವೋದ್ಧೃತೌ" ಎಂಬಂತೆ

**ಹೃತಾ ಹತ್ವಾ ಜಟಾಯುಷಂ । ರುದ್ಧಾ ಚ ವಿವಶಾ ದೀನಾ ರಾಕ್ಷಸೀಭಿಃ ಸುರಕ್ಷಿತಾ ॥ ೧೧ ॥ ತಮಹಂ ಹೇತುಭಿರ್ವಾಕ್ಯೈರ್ವಿವಿಧೈಶ್ಚ ನ್ಯದರ್ಶಯಂ । 'ಸಾಧು ನಿರ್ಯಾತ್ಯತಾಂ ಸೀತಾ ರಾಮಾಯೆ'ತಿ ಪುನಃಪುನಃ ॥ ೧೨ ॥ ಸಚ ನಪ್ರತಿಜಗ್ರಾಹ ರಾವಣಃ ಕಾಲಚೋದಿತಃ । ಉಚ್ಯಮಾನಂ ಹಿತಂ ವಾಕ್ಯಂ ವಿಪರೀತ ಇವೌಷಧಂ ॥ ೧೩ ॥**

ಲ್ಪಟ್ಟವನು. ॥ ೧೦ ॥ ತೇನ - ಆ ರಾವಣನಿಂದ, ಜಟಾಯುಷಂ - ಜಟಾಯುವಿನನ್ನು, ಹತ್ವಾ - ಕೊಂದು, ಸೀತಾ - ಸೀತಾದೇವಿಯು, ಜನಸ್ಥಾನಾತ್ - ದಂಡಕಾರಣ್ಯದಿಂದ, ಹೃತಾ - ಅಪಹರಿಸಲ್ಪಟ್ಟಳು, ವಿವಶಾ - ಪರಾಧೀನಳಾಗಿ, ರುದ್ಧಾ - ನಿರೋಧಿಸಲ್ಪಟ್ಟವಳಾಗಿ, ದೀನಾ - ದೈನ್ಯಳಾಗಿ, ರಾಕ್ಷಸೀಭಿಃ - ರಕ್ಕಸರ ಹೆಂಗಳಿಂದ, ಸುರಕ್ಷಿತಾ - ಸಂರಕ್ಷಿಸಲ್ಪಡುತ್ತಿದ್ದಾಳೆ. ॥ ೧೧ ॥ ತಂ - ಆ ರಾವಣನನ್ನು, ಅಹಂ - ನಾನು, ಹೇತುಭಿಃ - ಯುಕ್ತಿಯುಕ್ತವಾದ, ವಿವಿಧೈಃ - ನಾನಾಬಗೆಗಳಾದ, ವಾಕ್ಯೈಃ - ಮಾತುಗಳಿಂದ, ಸೀತಾ - ಸೀತಾದೇವಿಯು, ರಾಮಾಯ - ಶ್ರೀರಾಮನಿಗೋಸ್ಕರ, ನಿರ್ಯಾತ್ಯತಾಂ - ಸಮರ್ಪಿಸಲ್ಪಡಲಿ, ಇತಿ - ಇಂತೆಂದು, ಪುನಃಪುನಃ - ಬಾರಿಬಾರಿಗೂ, ಸಾಧು - ಚನ್ನಾಗಿ, ನ್ಯದರ್ಶಯಂ - ಬೋಧಿಸಿದನು. ॥ ೧೨ ॥ ಸಃರಾವಣಃ - ಆ ರಾವಣನು, ಕಾಲಚೋದಿತಃ - ಮೃತ್ಯುವಿನಿಂದ ಪ್ರೇರಿತನಾದಕಾರಣ, ಉಚ್ಯಮಾನಂ - ಹೇಳಲ್ಪಟ್ಟ, ಹಿತಂವಾಕ್ಯಂ - ಹಿತವಾದ ಮಾತನ್ನು, ವಿಪರೀತಃ - ಮರಣಾವಸ್ಥೆಯಲ್ಲಿರುವವನು, ಔಷಧಮಿವ - ಔಷಧವನ್ನಂತೆ, ನಪ್ರತಿಜಗ್ರಾಮ - ಗ್ರಹಿಸದೇಹೋದನು, ॥ ೧೩ ॥ ಸೋಽಹಂ - ಆ ಈ ನಾನು, ತೇನ - ಆ ರಾವಣನಿಂದ, ಪರುಷಿತಃ - ಕ್ರೂರವಾಗಿ ನುಡಿಯಲ್ಪಟ್ಟವನಾಗಿ, ದಾಸವತ್ - ಚಾಕರನಂತೆ, ಅವಮಾನಿತಃ -

ರಾವಣನು ಜಟಾಯುವನ್ನು ಕೊಂದು ಜನಸ್ಥಾನದಿಂದ ಶ್ರೀರಾಮಪತ್ನಿಯಾದ ಸೀತಾದೇವಿಯನ್ನು ಕದ್ದುತಂದಿರುವನು. ಆ ದೇವಿಯು ಬಹಳವಾದ ದುಃಖದಿಂದ ಪರವಶಳಾಗಿರುವಳು. ಆಕೆಯು ರಾಕ್ಷಸಿಯರ ಕಾವಲಿನಲ್ಲಿರುವಳು. ನಾನು ಆ ರಾವಣನಿಗೆ ಆಕೆಯನ್ನು ಶ್ರೀರಾಮನಿಗೆ ಒಪ್ಪಿಸಿಬಿಡಬೇಕೆಂದು ಯುಕ್ತಿಯುಕ್ತವಾಗಿ ಹೇಳಿದೆನು. ಹಾಗೆ ಕೊಡದಿದ್ದರೆ ಅದರಿಂದಾಗುವ ವಿಪತ್ತುಗಳನ್ನೂ ಸಕಾರಣವಾಗಿ ಅವನಿಗೆ ತಿಳಿಯಹೇಳಿದೆನು. ಹೀಗೆ ವಿಧವಿಧವಾಗಿ ಅನೇಕಸಲ ಬೋಧಿಸಿದರೂ, ಮೃತ್ಯುವು ಸಮೀಪಿಸಿ ಬಂದಿರುವವನು ವೈದ್ಯನಿತ್ತ ಔಷಧವನ್ನು ಗ್ರಹಿಸದಂತೆ ಕಾಲಚೋದಿತನಾದ ಆ ರಾವಣನು ಅದನ್ನು ಗ್ರಹಿಸದವನಾದನು. ॥೮-೧೨॥ ನನ್ನ ಹಿತವಚನಗಳನ್ನು ಅವನು ಕೇಳದಿದ್ದುದು ಮಾತ್ರವಲ್ಲದೆ ನನ್ನನ್ನು ಬಹಳ ಕಠಿನವಾಗಿ ಗದರಿಸಿ ಮಾತನಾಡಿ ಸೇವಕನನ್ನಂತೆ ದೂಷಿಸಿ ಅವಮಾನಿಸಿದನು. ಆದುದರಿಂದ ನಾನು ಪುತ್ರ ಮಿತ್ರ ಕಳತ್ರಾದಿಗಳನ್ನು ತೊರೆದು ಶ್ರೀರಾಮನನ್ನು ಶರಣುಹೊಂದಲು ಬಂದಿರು

ರಾಮವಿಶ್ಲೇಷಾನರ್ಹಳಾದ ಸೀತೆಯನ್ನು (ಅತ್ಯಂತ ಸುಕುಮಾರಿಯಾದವಳನ್ನ) ಅಪಹರಿಸಿದುದೂ, ಜಟಾಯುವನ್ನು ವಧಿಸಿದುದೂ ಭಾಗವತಾಪಚಾರಗಳೆಂದು ತಿಳಿಯಬೇಕು. ಇಲ್ಲಿ ಶರಣಾಗತಿಯಲ್ಲಿನ ಕಾರ್ಪಣ್ಯರೂಪಾಂಗವು ಪ್ರತಿಪಾದಿತವಾಗಿರುವುದು

ಕಾರ್ಪಣ್ಯವೆಂದರೆ,—ಗರ್ವಹಾನಿಯು.

ಉಪಾಯೇನ್ಯೈವ ಸಿಧ್ಯಂತಿ ಹ್ಯಪಾಯಾವಿವಿಧಾಸ್ತಥಾ ।
ಇತಿ ಯಾ ಗರ್ವಹಾನಿಸ್ತದ್ದೈನ್ಯಂ ಕಾರ್ಪಣ್ಯಮುಚ್ಯತೇ ॥



—: ವಿಭೀಷಣಾಗಮನ :—

" ನಿವೇದಯತ ಮಾಂ ಕ್ಷಿಪ್ರ ರಾಘವಾಯ ಮಹಾತ್ಮನೇ "

ಪುಟ ೧೪೫

**ಸೋಽಹಂ ಪರುಷಿತಸ್ತೇನ ದಾಸವಚ್ಚಾವಮಾನಿತಃ । ¶ ತ್ಯಕ್ತ್ವಾ ಪುತ್ರಾಂಶ್ಚ ದಾರಾಂಶ್ಚ ರಾಘವಂ ಶರಣಂಗತಃ ॥೧೪॥ ‡ ಸರ್ವಲೋಕಶರಣ್ಯಾಯ ರಾಘವಾಯ ಮಹಾತ್ಮನೇ । ನಿವೇದಯತ ಮಾಂ ಕ್ಷಿಪ್ರಂ ವಿಭೀಷಣಮುಪಸ್ಥಿತಂ" ॥೧೫॥**

ತಿರಸ್ಕರಿಸಲ್ಪಟ್ಟನು, ಪುತ್ರಾಂಶ್ಚ - ಮಕ್ಕಳನ್ನು, ದಾರಾಂಶ್ಚ - ಹೆಂಡತಿಯನ್ನೂ, ತ್ಯಕ್ತ್ವಾ - ಬಿಟ್ಟು, ರಾಘವಂ - ಶ್ರೀರಾಮನನ್ನು, ಶರಣಂ - ರಕ್ಷಕನನ್ನಾಗಿ, ಗತಃ - ಹೊಂದಿದೆನು. ॥೧೪॥ ಸರ್ವ....ಯ- ಎಲ್ಲ ಜನರಿಗೂ ರಕ್ಷಕನಾದ, ಮಹಾತ್ಮನೇ - ಮಹಾನುಭಾವನಾದ, ರಾಘವಾಯ - ಶ್ರೀರಾಮನಿಗೆ, ಉಪಸ್ಥಿತಂ - ಬಳಿಗೈದಿರುವ, ವಿಭೀಷಣಂ - ವಿಭೀಷಣನೆಂಬ, ಮಾಂ - ನನ್ನನ್ನು, ಕ್ಷಿಪ್ರಂ - ಜಾಗ್ರತೆಯಾಗಿ, ನಿವೇದಯತ - ತಿಳಿಸಿರಿ. ॥೧೫॥ ಲಘುವಿಕ್ರಮಃ - ಶೀಘ್ರಗಾಮಿಯಾದ, ಸುಗ್ರೀವಃ -

ವೆನು. ಆದುದರಿಂದ ಸಮಸ್ತ ಲೋಕಗಳಿಗೂ ಶರಣ್ಯನಾಗಿರುವ ಶ್ರೀರಾಮಮೂರ್ತಿಗೆ ವಿಭೀಷಣನಾದ ನಾನು ಬಂದಿರುವ ವಿಷಯವನ್ನು ಜಾಗ್ರತೆಯಾಗಿ ತಿಳಿಸಿರಿ" ಎಂದು ಹೇಳಿದನು. ॥೧೩-೧೫॥ ಈ ಮಾತುಗಳನ್ನು ಕೇಳಿದೊಡನೆಯೇ ಮಹಾ ಪರಾಕ್ರಮಶಾಲಿಯಾದ ಸುಗ್ರೀ

¶ ಇಲ್ಲಿ ರಾವಣನಿಂದ ಅವಮಾನಿತನಾದ ವಿಭೀಷಣನಿಗೆ ಪರಮೇಶ್ವರನ ನಿರ್ವ್ಯಾಜಕರುಣಾಪ್ರಾಪ್ತಿಯೊಂದೆ ಪ್ರಯೋಜನವೆಂದೂ, ಇತರ ಪ್ರಯೋಜನಗಳಲ್ಲಿ ಅವನಿಗೆ ಕೇವಲ ವಿಮುಖತೆಯೇ ಇದ್ದಿತೆಂದೂ ಗ್ರಾಹ್ಯವು. ಈ ಉದ್ದೇಶವನ್ನು ಮನಸ್ಸಿನಲ್ಲಿಟ್ಟುಕೊಂಡೇ ವಿಭೀಷಣನು ಪರಮ ಪುರುಷಾರ್ಥಭೂತನಾದ ಶ್ರೀರಾಮನ ಪ್ರಾಪ್ತಿಗಾಗಿ ಆತನಲ್ಲಿಗೇ ಶರಣಾಗತನಾಗಿ ಬಂದಿರುವುದಾಗಿ ಹೇಳುವನು. ಹೆಂಡಿರು ಮಕ್ಕಳನ್ನು ತೊರೆದುಬಂದಿರುವುದಾಗಿ ವಿಭೀಷಣನು ಹೇಳಿರುವುದರಲ್ಲಿ ರಾಜ್ಯಾದಿಗಳನ್ನೂ ತೊರೆದುಬಂದಿರುವುದಾಗಿ ಹೇಳಿದುದೂ ಅಡಗಿದೆ. ಇದು ಮುಂದೆ ಆತನೇ ಹೇಳುವ "ಪರಿತ್ಯಕ್ತಾ ಮಯಾಲಂಕಾ ಮಿತ್ರಾಣಿಚ ಧನಾನಿಚ" ಎಂಬ ಮಾತಿಗೆ ಉಪಲಕ್ಷಣವಾಗಿರುವುದು. (ತನಿ)

‡ ಈ ಶ್ಲೋಕಕ್ಕೆ ಮಹೇಶ್ವರತೀರ್ಥರ ವ್ಯಾಖ್ಯಾನ:—ಸರ್ವಲೋಕ ಶರಣ್ಯಾಯ - ಅಧಿಕಾರಿ ಭೇದವನ್ನೆಣಿಸದೆ ಸುರ ನರ ವಾನರ ತಿರ್ಯಕ್ಕುಗಳವರೆಗಣ ಸಮಸ್ತರಿಗೂ ಸಮಾಶ್ರಯಣೀಯನಾದ ರಾಘವನಿಗೆ (ರಾಘವಾಯ) ಪೃಥ್ವಿಯಲ್ಲಿ ಮಾಂಧಾತೃವಿನ ಮಕ್ಕಳಾದ ಇತರ ನರಪತಿಗಳಿದ್ದೇ ಇರುವರು. ಆದರೆ ಈತನು, "ಕಿಂತ್ವರ್ಥಿನಾಮರ್ಥಿತ ದಾನದೀಕ್ಷಾಕೃತ ವ್ರತಶ್ಲಾಘ್ಯಮಿದಂ ಕುಲಂ ತತ್" ಇತ್ಯಾದಿ ವಚನಗಳಿಂದ ಸುಪ್ರಸಿದ್ಧವಾದ ವೈಭವವುಳ್ಳ ರಘುವಂಶದಲ್ಲಿ ಜನಿಸಿದವನು. (ಇದರಿಂದ ಅರ್ಥಿಗಳಾದವರಿಗೆ ಪ್ರಾರ್ಥನಾವೈಫಲ್ಯವು ಈ ಕುಲದವರಿಂದಿಲ್ಲವೆಂಬ ಅಭಿಪ್ರಾಯವು ದ್ಯೋತಿತವಾಗುವುದು.) ಮಹಾತ್ಮನೇ-ಪರಮಾತ್ಮನಾದ ಶ್ರೀರಾಮನಿಗೆ, ಮಾಂ-ಶ್ರೀರಾಮನೇ ಸರ್ವವಿಧದಲ್ಲಿಯೂ ಬಂಧುವೆಂದು ತಿಳಿದಿರುವ ನನ್ನನ್ನು, ಕ್ಷಿಪ್ರಂ - ಜಾಗ್ರತೆಯಾಗಿ, (ಇದರಿಂದ ಶೀತಲ ಸಲಿಲಸಮೃದ್ಧವಾದ ಪದ್ಮಾಕರ(ಕೊಳ)ವನ್ನು ನೋಡಿದವನಿಗೆ ವಿಲಂಬವು ಕೇವಲ ಅಸಹನೀಯವಾಗುವಂತೆ, ಸರ್ವಲೋಕಶರಣ್ಯನೂ, ಪರಮಾತ್ಮನೂ ಆದ ಶ್ರೀರಾಮನಲ್ಲಿ ಶರಣೆಂದು ಬಂದಿರುವ ತಾನೂ ವಿಲಂಬವನ್ನು ಸಹಿಸಲಾರನೆಂದು ಹೇಳಿದಂತಾಯಿತು.) ನಿವೇದಯತ - ವಿಜ್ಞಾಪಿಸಿರಿ, (ವಾಚಾಧರ್ಮಮವಾಪ್ನುಹಿ - "ಒಂದು ಮಾತನ್ನಾದರೂ ಹೇಳಿ ಧರ್ಮವನ್ನು ಕಟ್ಟಿಕೊಳ್ಳಿರಿ" ಎಂಬ ನ್ಯಾಯದಂತೆ ಈಗ ನೀವು ನನ್ನ ವಿಚಾರವನ್ನು ಶ್ರೀರಾಮನಿಗೆ ಅರಿಕೆ ಮಾಡುವುದರಿಂದ ನಿಮಗೆ ಮಹದುಪಕಾರವೇ ಆಗುತ್ತದೆ.) ಈ ಶ್ಲೋಕದಲ್ಲಿ, ಅಪ್ರಾರ್ಥಿತೋ ನಗೋಪಾಯೇದಿತಿ ತತ್ಪ್ರಾರ್ಥನಾಮತಿಃ । ಗೋಪಾಯಿತಾ ಭವತ್ಯೇವಂ ಗೋಪ್ತೃತ್ವವರಣಂ ಸ್ಮೃತಃ" ಎಂಬ ಗೋಪ್ತೃತ್ವವರಣವೂ, "ಸರ್ವಲೋಕಶರಣ್ಯಾಯ" ಎಂಬುದರಿಂದಲೂ, "ಉಪಸ್ಥಿತಂ ಮಾಂ" ಎಂಬುದರಿಂದಲೂ, "ರಕ್ಷಿಷ್ಯತ್ಯನುಕೂಲಾನ್ನ ಇತ್ಯೇವಂ ಸುದೃಢಾಮತಿಃ । ಸವಿಶ್ವಾಸೋ ಭವೇಚ್ಚಾತ್ರ ಸರ್ವದುಷ್ಕೃತಿನಾಶನಃ ॥" ಎಂಬಂತೆ, ಕಾಪಾಡುತ್ತಾನೆಂಬ ವಿಶ್ವಾಸವೂ ಪ್ರದರ್ಶಿತವಾಯಿತು.

ಇಲ್ಲಿ "ಇಕ್ಷ್ವಾಕುವಂಶದ ದೊರೆಯಾದ ಶ್ರೀರಾಮಭದ್ರನಿಗೆ, ಸರ್ವಲೋಕಶರಣ್ಯತ್ವವೂ, ಪರತ್ವವೂ ಇರುವುದೆಂದು ಕೇವಲ ರಾಕ್ಷಸಜಾತೀಯನಾದ ವಿಭೀಷಣನಿಗೆ ತಿಳಿದುದು ಹೇಗೆ" ಎಂಬ ಸಂಶಯವು ಬರುತ್ತದೆ. ಹಿಂದೆ ವಿಭೀಷಣನು ಬ್ರಹ್ಮನನ್ನು, "ಪರಮಾಪದ್ಗತಸ್ಯಾಪಿ ಧರ್ಮೇ ಮಮ ಮತಿರ್ಭವೇತ್ । ಯಾ ಯಾ ಮೇ ಜಾಯತೇ ಬುದ್ಧಿ

† ಏತತ್ತು ವಚನಂ ಶ್ರುತ್ವಾ ಸುಗ್ರೀವೋ ಲಘುವಿಕ್ರಮಃ। ಲಕ್ಷ್ಮಣಸ್ಯಾಗ್ರತೋ ರಾಮಂ

ಸುಗ್ರೀವನು, ಏತದ್ವಚನಂತು - ಈ ಮಾತನ್ನು, ಶ್ರುತ್ವಾ - ಕೇಳಿ, ಲಕ್ಷ್ಮಣಸ್ಯ - ಲಕ್ಷ್ಮಣನ, ಅಗ್ರತಃ - ಮುಂಗಡೆಯಲ್ಲಿ, ರಾಮಂ - ಶ್ರೀರಾಮನನ್ನು ಕುರಿತು, ಸಂರಬ್ಧಂ - ತ್ವರಿತವಾಗಿ ಉಚ್ಚರಿಸ

ವನು ಬಹು ಜಾಗ್ರತೆಯಾಗಿ ಶ್ರೀರಾಮನ ಬಳಿಗೈದಿ ಲಕ್ಷ್ಮಣಸ್ವಾಮಿಯ ಸಮ್ಮುಖದಲ್ಲಿಯೇ ಆತನನ್ನು ಕುರಿತು, "ಶ್ರೀರಾಮಾ! ರಾವಣಾಸುರನಿಗೆ ತಮ್ಮನಾದ ಈ ವಿಭೀಷಣನು ನಾಲ್ಕು

ರ್ಯೇಷು ಯೇಷ್ವಾಶ್ರಯೇಷುಚ । ಸಾ ಸಾ ಭವತುಧರ್ಮಿಷ್ಠಾ ತಂತಂ ಧರ್ಮಂಚ ಪಾಲಯೇತ್ ॥" ಎಂದು ಪ್ರಾರ್ಥಿಸಿದುದರ ಮೇಲೆ ಆತನು, "ಧರ್ಮಿಷ್ಠಸ್ತ್ವಂ ತಥಾ ವತ್ಸ! ತಥಾಚೈತದ್ಭವಿಷ್ಯತಿ" ಎಂದು ವರವನ್ನು ಕರುಣಿಸಿರುವನು. ಈ ವರಪ್ರಭಾವದಿಂದ ಅವನು ಶ್ರೀರಾಮಮೂರ್ತಿಯನ್ನು ಯಾಥಾರ್ಥ್ಯದಿಂದರಿತು ಆತನಲ್ಲಿ ಪರತ್ವವೂ, ಸರ್ವಲೋಕಶರಣ್ಯತ್ವವೂ ಇರುವುದೆಂದು ಹೇಳಿರುವುದು ಸಮಂಜಸವಾಗಿಯೇ ಇರುವುದು.

ಈ ಶ್ಲೋಕಕ್ಕೆ ಗೋವಿಂದರಾಜರೂ, ತನಿಶ್ಲೋಕಿಕಾರರೂ ವಿಶೇಷಾರ್ಥವನ್ನು ಹೀಗೆ ಹೇಳುವರು:--

ವಿಭೀಷಣನು ಶರಣ್ಯನಾದ ಶ್ರೀರಾಮನಿಗೆ ವಿಜ್ಞಾಪಿಸಬೇಕಾದ ಮಾತುಗಳ (ವಿಷಯುವ)ನ್ನು ಹೇಳಿ, ಅವುಗಳನ್ನು ವಿಜ್ಞಾಪಿಸಲು ಪುರುಷಾಕಾರಭೂತರಾದ ವಾನರರನ್ನು ಪ್ರಾರ್ಥಿಸುತ್ತಾನೆ.

ಸರ್ವಲೋಕಶರಣ್ಯಾಯ – ಕುಲ, ವಿದ್ಯೆ, ನಡೆವಳಿ ಇವೇ ಮೊದಲಾದವುಗಳನ್ನು ನೋಡದೆಯೇ (ಆಲೋಚಿಸದೆಯೇ) ಎಲ್ಲರಿಗೂ ಶರಣ್ಯನಾಗಿರುವ, (ಇದರಿಂದ, "ಸಂಚಿತ ವಿವಿಧಪರಾಧಗಳುಳ್ಳ ರಾವಣನಿಗೂ, ಪುರುಷಾಕಾರಭೂತರಾದ ನಿಮಗೂ, ನನಗೂ, ಆತನ ಶರಣ್ಯತ್ವದಲ್ಲಿ ಭಾಗವಿರುವುದು. ರಾವಣನು ರುಚ್ಯಭಾವದಿಂದ ಅದನ್ನು ಕಳೆದುಕೊಂಡನು. ಆದರೆ ಆಭಿಮುಖ್ಯದಿಂದ ಬಂದಿರುವ ನನಗೆ ಆ ಭಾಗವನ್ನು ತಪ್ಪಿಸಲು ಯಾರಿಂದಲೂ ಆಗುವುದಿಲ್ಲವು ಎಂಬ ಅಭಿಪ್ರಾಯವು ಗ್ರಾಹ್ಯವು.) ಇಲ್ಲಿ ಶರಣ್ಯಾಂಗಭೂತವಾದ ಸುಲಭತ್ವ ಮತ್ತು ಪರತ್ವಗಳೆಂಬ ಗುಣದ್ವಯವನ್ನು ಪ್ರಾಧಾನ್ಯದಿಂದ ಪ್ರದರ್ಶಿಸುವನು; ರಾಘವಾಯ-ಮಹಾತ್ಮನೇ ಎಂಬೆರಡು ಪದಗಳಿಂದ. ಸುಲಭತ್ವದಲ್ಲಿಯೂ ಕೂಡ, ಉತ್ಕರ್ಷವಿದ್ದರೂ ಅಸುಲಭನಾದ ಮೇರುಪ್ರಭೃತಿಗಳು ಅನುಪಾದೇಯಗಳಾದುದರಿಂದ ಸುಲಭತ್ವ ಪರತ್ವಗಳೆರಡೂ ಅಪೇಕ್ಷ್ಯಗಳೇ! ಶ್ರೀರಾಮನು "ಯತ್ತದನಿರ್ದೇಶ್ಯಂ" ಇತ್ಯಾದಿ ವೇದಾಂತಗೋಚರನಾದ ಪರಬ್ರಹ್ಮನ, ಸಕಲ ಮನುಜತಿರ್ಯಕ್ಕುಗಳ ನಯನ ಸಾಕ್ಷಾತ್ಕಾರಯೋಗ್ಯನಾದ ಮನುಜಾವತಾರನಾಗಿರುವುದರಿಂದ ಅವನಿಗಿಂತಲೂ ಸುಲಭಪ್ರಾಪ್ಯನಾಗಿರುವುದಾವುದಿರುವುದು?" ಎಂದು ಭಾವವು. (ಮಹಾತ್ಮನೇ) ಹೀಗೆ ಅವತಾರಿಯಾಗಿದ್ದರೂ ಬಿಡದಿರುವ ಸಹಜಸ್ವಭಾವವುಳ್ಳವನಾಗಿ, ಅಖಿಲಹೇಯ ಪ್ರತ್ಯನೀಕತ್ವವಿದ್ದು, ಜ್ಞಾನಶಕ್ತ್ಯಾದಿ ಮೊದಲಾದ ಕಲ್ಯಾಣಗುಣೈಕತಾನತೆಯುಳ್ಳ ಶ್ರೀ ರಾಘವಸ್ವಾಮಿಗೆ ಅರಿಕೆ ಮಾಡಿರಿ ಎಂದು ಭಾವವು. (ಇಲ್ಲಿ ಪ್ರತ್ಯಕ್ಷವಾಗಿ ತನ್ನ ಬರುವಿಕೆಯನ್ನು ಅರಿಕೆಮಾಡುವುದರಲ್ಲಿ ಪ್ರಯೋಜನವಿಲ್ಲದಿರುವುದರಿಂದ, ಸ್ವಾಪರಾಧಿಪರಿಪೂರ್ತಿ, ಇಹಪರ ಫಲಭೋಗವಿರಾಗ, ಶರಣಾಗತಿಗೆ ಲಕ್ಷಣವಾದ ನಿರಪಾಯೋಪಾಯಪರಿಗ್ರಹ, ಶ್ರೀರಾಮಕೈಂಕರ್ಯಾಭಿಲಾಷೆ, ತತ್ಪರಿಚಾರಕಾಂತರ್ಭಾವ, ಇವೆಲ್ಲ ಪ್ರಯೋಜನಗಳನ್ನೂ ಅರಿಕೆ ಮಾಡಿರಿ ಎಂದು ಕೇಳಿಕೊಳ್ಳುವನು.) (ಕ್ಷಿಪ್ರಂ) ಶರಣ್ಯನಾಗಿರುವುದರಿಂದ ತಾನಾಗಿಯೇ ಪರಿಗ್ರಹಿಸುವನು. ಆದುದರಿಂದ ಹಾಗೆ ಮಾಡುವುದಕ್ಕೆ ಮೊದಲೇ ನೀವು ವಿಜ್ಞಾಪಿಸುವುದರಿಂದ ನೀವು ಸುಹೃತ್ಕಾರ್ಯವನ್ನು ನೆರವೇರಿಸಿದಂತಾಗುವುದೆಂದು ಭಾವವು. (ವಿಭೀಷಣಂ) ರಾವಣನಂತೆ ನಾನು ಪ್ರತಿಕೂಲನಲ್ಲವು. ಆದರೆ, "ವಿಭೀಷಣಸ್ತು ಧರ್ಮಾತ್ಮಾ" ಎಂಬಂತೆ ಅನುಕೂಲನೇ. "ಉಪಸ್ಥಿತಂ" ಅತಿ ಹೀನನಾಗಿದ್ದರೂ ಬಳಿಸಾರುವುದೇ ರಾಮಾಂಗೀಕಾರಕ್ಕೆ ಬೀಜವೆಂದು ಭಾವವು.

† ಇಲ್ಲಿ, "ಸುಗ್ರೀವನು ರಾಮನಲ್ಲಿ ತನಗಿರುವ ಪ್ರೇಮಾತಿಶಯದಿಂದ ಹುಟ್ಟಿದ ವ್ಯಾಮೋಹವುಳ್ಳವನಾಗಿ, (ಸ್ನೇಹದಿಂದ) "ಅತಿಸ್ನೇಹಃ ಪಾಪಶಂಕೀ" ಎಂಬ ನ್ಯಾಯದಂತೆ ಶ್ರೀರಾಮಮೂರ್ತಿಗೆ ಸರ್ವಶಕ್ತಿ ಮಹತ್ತ್ವವಿರುವುದೆಂದು ಅರಿತಿದ್ದರೂ ಕೂಡ ಅದನ್ನು ಮರೆತು, "ಶರಣಾಗತವತ್ಸಲನಾದ ಶ್ರೀರಾಮಮೂರ್ತಿಯು ಶರಣಾಗತಿ ಶಬ್ದವನ್ನು ಕೇಳಿದೊಡನೆಯೇ ಗೂಢಹೃದಯನಾದ ಈ ವಿಭೀಷಣನನ್ನು ಪರಿಗ್ರಹಿಸಿಬಿಡುವನು. ಆಮೇಲೆ ಕ್ರೂರಹೃದಯನಾದ ಇವನು ಶ್ರೀರಾಮಮೂರ್ತಿಯಲ್ಲಿ ಪಾಪವನ್ನೇ ಮಾಡಿಬಿಡುವನು" ಎಂದು ಅಸ್ಥಾನದಲ್ಲಿ ಹುಟ್ಟಿದ ಭಯಶಂಕೆಗಳಿಂದ ವ್ಯಾಕುಲಚಿತ್ತನಾಗಿ ಬಹು ಬೇಗನೆ ಶ್ರೀರಾಮನ ಬಳಿಗೈದಿ ತನ್ನ ಹೃದಯದಂತೆಯೇ ಹೃದಯವುಳ್ಳ ಲಕ್ಷ್ಮಣಸ್ವಾಮಿಯನ್ನೂ ತನ್ನ ಸಹಾಯಕ್ಕೆ ಕರೆದುಕೊಂಡು ವಿಭೀಷಣನು ನಿಗ್ರಾಹ್ಯನೆಂದು ಅರಿಕೆ ಮಾಡುವನು" ಎಂದು ಇಲ್ಲಿನ ಭಾವ. (ಗೋ+ತನಿ)

ಸಂರಬ್ಧಮಿದಮಬ್ರವೀತ್ ॥ ೧೬ ॥ "ರಾವಣಸ್ಯಾನುಜೋ ಭ್ರಾತಾ ವಿಭೀಷಣಇತಿ ಶ್ರುತಃ । ಚತುರ್ಭಿಃ ಸಹರಕ್ಷೋಭಿರ್ಭವಂತಂ ಶರಣಂಗತಃ ॥೧೭॥ ಮಂತ್ರೇ ವ್ಯೂಹೇ ನಯೇ ಚಾರೇ ಯುಕ್ತೋ ಭವಿತುಮರ್ಹಸಿ । ವಾನರಾಣಾಂಚ ಭದ್ರಂ ತೇ ಪರೇಷಾಂಚ ಪರಂತಪ! ॥ ೧೮ ॥ ಅಂತರ್ಧಾನಗತಾಹ್ಯೇತೇ ರಾಕ್ಷಸಾಃ ಕಾಮರೂಪಿಣಃ । ಶೂರಾಶ್ಚ ನಿಕೃತಿಜ್ಞಾಶ್ಚ ತೇಷು ಜಾತು ನವಿಶ್ವಸೇತ್ ॥೧೯॥ ಪ್ರಣಿಧೀ ರಾಕ್ಷಸೇಂದ್ರಸ್ಯ ರಾವಣಸ್ಯ ಭವೇದಯಂ । ಅನುಪ್ರವಿಶ್ಯ ಸೋಽಸ್ಮಾಸು ಭೇದಂ ಕುರ್ಯಾನ್ನಸಂಶಯಃ ॥ ೨೦ ॥ ಅಥವಾ ಸ್ವಯಮೇವೈಷ ಛಿದ್ರಮಾಸಾದ್ಯ ಬುದ್ಧಿಮಾನ್ । ಅನುಪ್ರವಿಶ್ಯ

ಲ್ಪಟ್ಟ ಅಕ್ಷರಗಳುಳ್ಳಂತೆ, ಇದಂ - ಈ ಮಾತನ್ನು, ಅಬ್ರವೀತ್ - ನುಡಿದನು. ॥ ೧೬ ॥ ರಾವಣಸ್ಯ - ರಾವಣನ, ಅನುಜೋಭ್ರಾತಾ - ತಮ್ಮನಾದ, ವಿಭೀಷಣಇತಿ - ವಿಭೀಷಣನೆಂದು, ಶ್ರುತಃ - ಹೇಳಲ್ಪಟ್ಟವನು, ಚತುರ್ಭಿಃ - ನಾಲ್ವರಾದ, ರಕ್ಷೋಭಿಸ್ಸಹ - ರಾಕ್ಷಸರೊಡನೆ, ಭವಂತಂ - ನಿನ್ನನ್ನು, ಶರಣಂ-ರಕ್ಷಕನನ್ನಾಗಿ, ಗತಃ-ಹೊಂದಿದ್ದಾನೆ. ॥ ೧೭ ॥ ಹೇ ಪರಂತಪ-ಎಲೈ ಶತ್ರುಸಂಹಾರಕನೇ, ವಾನರಾಣಾಂ - ಕಪಿಗಳ, ಪರೇಷಾಂಚ - ಶತ್ರುಗಳಾದ ರಾಕ್ಷಸರ, ಮಂತ್ರೇಚ - ಕಾರ್ಯಾಕಾರ್ಯಗಳ ವಿಷಯದಲ್ಲಿಯೂ, ವ್ಯೂಹೇಚ - ಸೇನೆಯನ್ನು ಇರಿಸುವ ವಿಷಯದಲ್ಲಿಯೂ, ನಯೇ - ವಿಚಾರಿಸಿ, ನಿಶ್ಚಯಿಸಿದ ಉಪಾಯಗಳನ್ನು ಆಯಾ ವಿಷಯಗಳಲ್ಲಿ ಪ್ರಯೋಗಿಸುವ ವಿಷಯದಲ್ಲಿಯೂ, ಚಾರೇ - ಗೂಢವಾಗಿ ಕಳುಹಿಸುವ ವಿಷಯದಲ್ಲಿಯೂ, ಯುಕ್ತಃ ಸಾವಧಾನಚಿತ್ತನು, ಭವಿತುಂ ಆಗುವದಕ್ಕೆ, ಅರ್ಹಸಿ - ಅರ್ಹನಾಗಿರುವೆ, ತೇ - ನಿನಗೆ, ಭದ್ರಂ - ಶುಭವು, ಭವಿಷ್ಯತಿ - ಆಗುವುದು. ॥ ೧೮ ॥ ಏತೇರಾಕ್ಷಸಾಃ - ಈ ರಾಕ್ಷಸರು, ಅಂತರ್ಧಾನಗತಾಃ - ಅದೃಶ್ಯಸಂಚಾರಸ್ವಭಾವವುಳ್ಳವರು, ಕಾಮರೂಪಿಣಃ - ಸ್ವೇಚ್ಛಾರೂಪವುಳ್ಳವರು, ಶೂರಾಶ್ಚ - ವೀರರಾದವರು, ನಿಕೃತಿಜ್ಞಾಶ್ಚ - ಗೂಢವಾಗಿ ಅಪಕಾರವನ್ನು ಮಾಡಬಲ್ಲವರು, (ಆದಕಾರಣ) ತೇಷು-ಅವರಲ್ಲಿ, ಜಾತು-ಯಾವಾಗಲೂ, ನವಿಶ್ವಸೇತ್-ವಿಶ್ವಾಸ ಮಾಡಬಾರದು. ॥ ೧೯ ॥ ಅಯಂ - ಇವನು, ರಾಕ್ಷಸೇಂದ್ರಸ್ಯ - ರಾಕ್ಷಸಾಧಿಪತಿಯಾದ, ರಾವಣಸ್ಯ - ರಾವಣನ, ಪ್ರಣಿಧಿಃ - ಚಾರನು, ಭವೇತ್ - ಆಗಿರಬಹುದು, ಸಃ - ಅವನು, ಅಸ್ಮಾಸು-ನಮ್ಮಲ್ಲಿ, ಅನುಪ್ರವಿಶ್ಯ - ಪ್ರವೇಶಿಸಿ, ಭೇದಂ - ಮಿತ್ರಭೇದವನ್ನು, ಕುರ್ಯಾತ್ - ಮಾಡಿಯಾನು, ನಸಂಶಯಃ - ಸಂದೇಹವಿಲ್ಲವು. ॥೨೦॥ ಅಥವಾ - ಹಾಗಲ್ಲದಿದ್ದರೆ, ಬುದ್ಧಿಮಾನ್ - ಮತಿವಂತನಾದ, ಏಷಃ - ಇವನಾದರೆ, ಸ್ವಯಮೇವ - ತಾನೇ, ಛಿದ್ರಂ - ರಂಧ್ರವನ್ನು, ಆಸಾದ್ಯ - ಹೊಂದಿ

ಮಂದಿ ರಾಕ್ಷಸರೊಡನೆ ನಿನ್ನನ್ನು ಶರಣು ಹೊಗಬಯಸಿ ಬಂದಿರುವನು. ಎಲೈ ಶತ್ರುಂಜಯನೇ, ರಾಮಚಂದ್ರನೇ! ವಾನರರಿಗೆ ಮೇಲುಂಟಾಗುವುದಕ್ಕೂ, ಶತ್ರುಗಳಿಗೆ ಕೇಡುಂಟಾಗುವುದಕ್ಕೂ, ಕಾರ್ಯಾಕಾರ್ಯಗಳನ್ನು ಚೆನ್ನಾಗಿ ವಿಮರ್ಶಿಸುವುದಕ್ಕೂ, ಸೇನೆಯನ್ನು ಸರಿಯಾಗಿ ಸಜ್ಜುಗೊಳಿಸುವುದಕ್ಕೂ, ಚಾರರನ್ನು ಕಳುಹಿಸುವುದಕ್ಕೂ ನೀನು ಬಹು ಎಚ್ಚರವುಳ್ಳವನಾಗು. ನಿನಗೆ ಮಂಗಳವಾಗಲಿ. ಈ ರಾಕ್ಷಸರು ಕಾಮರೂಪರು ; ಕಣ್ಣಿಗೆ ಕಾಣಿಸದೆಯೇ ಅಡಗಿಕೊಂಡು ಯುದ್ಧಮಾಡುವವರು. ಇವರು ಯುದ್ಧವೀರರು; ಬಹಳ ಕಪಟಿಗಳು; ಇವರನ್ನು ಎಂದಿಗೂ ನೆಚ್ಚಬಾರದು. ಒಂದುವೇಳೆ ಈ ವಿಭೀಷಣನು ರಾವಣನು ಕಳುಹಿಸಲು ಗೂಢಚಾರನಾಗಿ ಬಂದಿರುವನೋ ಏನೋ! ಇವನು ನಮ್ಮೊಳಗೆ ಸೇರಿ ನಮ್ಮಲ್ಲಿಯೇ ಮಿತ್ರಭೇದವನ್ನು ಮಾಡಿಯಾನು. ॥ ೧೬—೨೦ ॥ ಹಾಗಿಲ್ಲದಿದ್ದರೆ ಬಹಳ ಬುದ್ಧಿಶಾಲಿಯಾದ

ವಿಶ್ವಸ್ತೇ ಕದಾಚಿತ್ಪ್ರಹರೇದಪಿ ॥ ೨೧ ॥ ಮಿತ್ರಾಟವೀಬಲಂ ಚೈವ ಮೌಲಂ ಭೃತ್ಯಬಲಂ ತಥಾ । ಸರ್ವಮೇತದ್ಬಲಂ ಗ್ರಾಹ್ಯಂ ವರ್ಜಯಿತ್ವಾ ದ್ವಿಷದ್ಬಲಂ ॥ ೨೨ ॥ ಪ್ರಕೃತ್ಯಾ ರಾಕ್ಷಸೇಂದ್ರಸ್ಯ ಭ್ರಾತಾ ಮಿತ್ರಸ್ಯ ತೇ ಪ್ರಭೋ । ಆಗತಶ್ಚ ರಿಪೋಃ ಪಕ್ಷಾತ್ಕಥಮಸ್ಮಿನ್ ಹಿ ವಿಶ್ವಸೇತ್? ॥೨೩॥ ರಾವಣೇನ ಪ್ರಣಿಹಿತಂ ತಮವೇಹಿ ವಿಭೀಷಣಂ। ತಸ್ಯಾಹಂ ನಿಗ್ರಹಂ ಮನ್ಯೇ ಕ್ಷಮಂ ಕ್ಷಮವತಾಂವರ! ॥೨೪॥ ರಾಕ್ಷಸೋ ಜಿಹ್ಮಯಾ ಬುದ್ಧ್ಯಾ ಸಂದಿಷ್ಟೋಽಯಮುಪಾಗತಃ । ಪ್ರಹರ್ತುಂ ಮಾಯಯಾ ಛನ್ನೋ ವಿಶ್ವಸ್ತೇ ತ್ವಯಿ ರಾಘವ! ॥ ೨೫ ॥ ಪ್ರವಿಷ್ಟಃಶತ್ರುಸೈನ್ಯಂ ಹಿ ಪ್ರಾಜ್ಞಃ ಶತ್ರುರತ

---

ಅನುಪ್ರವಿಶ್ಯ - ಅನುಸರಿಸಿ ಹೊಕ್ಕು, ವಿಶ್ವಸ್ತೇ - ನಂಬಿರುವ ನಮ್ಮಲ್ಲಿ, ಕದಾಚಿತ್ - ಒಂದಾನೊಂದು ಕಾಲದಲ್ಲಿ, ಪ್ರಹರೇದಪಿ - ಹೊಡೆಯುವನೋ ಏನೋ. ॥ ೨೧ ॥ ದ್ವಿಷದ್ಬಲಂ - ಶತ್ರುಬಲವನ್ನು, ವರ್ಜಯಿತ್ವಾ - ಬಿಟ್ಟು, ಮಿತ್ರ....ವ - ಸ್ನೇಹಿತರೂಪವಾದ ಕಾಡುಜನಗಳ ಬಲವೂ, ಮೌಲಂ - ಪರಂಪರಪ್ರಾಪ್ತವಾದ ಬಲವೂ, ತಥಾ - ಹಾಗೆಯೇ, ಭೃತ್ಯಬಲಂ - ಹೊಸದಾಗಿ ಸಂಬಳಗಳನ್ನು ಕೆಟ್ಟುಕೊಂಡ ಬಲವೂ, (ಎಂಬ) ಸರ್ವಂ - ಸಮಸ್ತವಾದ, ಏತದ್ಬಲಂ - ಈ ಬಲವು, ಗ್ರಾಹ್ಯಂ - ಸ್ವೀಕಾರಮಾಡತಕ್ಕದು. ॥ ೨೨ ॥ ಹೇ ಪ್ರಭೋ - ಎಲೈ ಸ್ವಾಮಿಯೇ, ಪ್ರಕೃತ್ಯಾ - ಜ್ಞಾತಿಸ್ವಭಾವದಿಂದ, ತೇ - ನಿನಗೆ, ಅಮಿತ್ರಸ್ಯ - ಶತ್ರುವಾದ, ರಾಕ್ಷಸೇಂದ್ರಸ್ಯ - ರಾವಣನಿಗೆ, ಭ್ರಾತಾ - ತಮ್ಮನು, ರಿಪೋಃ - ವೈರಿಯ, ಪಕ್ಷಾತ್ - ಕಡೆಯಿಂದ, ಆಗತಶ್ಚ - ಬಂದಿದ್ದಾನೆ, ಅಸ್ಮಿನ್ - ಇವನಲ್ಲ, ಕಥಂ- ಹೇಗೆ, ವಿಶ್ವಸೇತ್ - ನಂಬುಗೆಯಿಡಬೇಕು. ॥ ೨೩ ॥ ಕ್ಷಮವತಾಂ - ಕ್ಷಮೆಯುಳ್ಳವರಲ್ಲಿ, ವರ - ಉತ್ತಮನೇ, ತಂವಿಭೀಷಣಂ - ಆ ವಿಭೀಷಣನನ್ನು, ರಾವಣೇನ - ರಾವಣನಿಂದ, ಪ್ರಣಿಹಿತಂ - ಕಳುಹಿಸಲ್ಪಟ್ಟವನನ್ನಾಗಿ, ಅವೇಹಿ - ತಿಳಿದುಕೋ, ತಸ್ಯ - ಅವನ, ನಿಗ್ರಹಂ - ನಿಗ್ರಹವನ್ನು, ಕ್ಷಮಂ - ಯೋಗ್ಯವನ್ನಾಗಿ, ಮನ್ಯೇ - ತಿಳಿದಿದ್ದೇನೆ. ॥ ೨೪ ॥ ಹೇ ರಾಘವ - ಎಲೈ ಶ್ರೀರಾಮನೇ, ರಾಕ್ಷಸಃ - ರಕ್ಕಸನಾದ, ಅಯಂ - ಇವನು, ಜಿಹ್ಮಯಾಬುಧ್ಯಾ - ಕಪಟಬುದ್ಧಿಯಿಂದ, ಸಂದಿಷ್ಟಃ - ಆಜ್ಞಾಪಿಸಲ್ಪಟ್ಟವನಾಗಿ, ತ್ವಯಿ - ನೀನು, ವಿಶ್ವಸ್ತೇ - ನಂಬಿಕೆಯುಳ್ಳವನಾಗಲೂ, ಮಾಯಯಾ - ಕಪಟದಿಂದ, ಛನ್ನಃ - ಗೂಢನಾಗಿ, ಪ್ರಹರ್ತುಂ - ಹೊಡೆಯುವದಕ್ಕೆ, ಉಪಾಗತಃ - ಬಂದಿರುತ್ತಾನೆ.

---

ಈ ವಿಭೀಷಣನು ನಮ್ಮೆಲ್ಲರಿಗೂ ಚೆನ್ನಾಗಿ ನಂಬುಗೆಯನ್ನು ಹುಟ್ಟಿಸಿ ನಮ್ಮಲ್ಲಿಯೇ ಸೇರಿ, ಸಮಯವನ್ನು ಕಾದಿದ್ದು, ನಮ್ಮನ್ನೇ ಪ್ರಹರಿಸುವನೋ ಏನೋ! ಆದುದರಿಂದ ಶತ್ರುಪಕ್ಷದವರನ್ನು ಎಂದಿಗೂ ಗ್ರಹಿಸಬಾರದು. ಮಿತ್ರಸೇನೆಗಳನ್ನೂ, ಮೂಲಬಲವನ್ನೂ, ಭೃತ್ಯಸೇನೆಗಳನ್ನೂ ಗ್ರಹಿಸಬೇಕು. ಪ್ರಭುವೇ, ಶ್ರೀರಾಮಮೂರ್ತಿಯೇ! ಈತನು ನಿನಗೆ ಶತ್ರುವೂ, ರಾಕ್ಷಸೇಶ್ವರನೂ ಆದ ರಾವಣನ ತಮ್ಮನು. ಶತ್ರುಪಕ್ಷದಿಂದ ಬಂದವನು. ಇವನನ್ನು ನಂಬುವುದು ಹೇಗೆ? ಉಚಿತ ಕಾರ್ಯಗಳನ್ನು ಮಾಡುವವರಲ್ಲಿ ಉತ್ತಮನಾದ ಎಲೈ ಶ್ರೀರಾಮನೇ! ಈ ವಿಭೀಷಣನು ರಾವಣಾಸುರನು ಕಳುಹಿದ ಗೂಢಚಾರನಿರಬಹುದು. ಆದುದರಿಂದ ಇವನನ್ನು ಪರಿಗ್ರಹಿಸಕೂಡದೆಂದು ನನ್ನ ಅಭಿಪ್ರಾಯವು. ಶ್ರೀರಾಮಾ! ಈ ರಾಕ್ಷಸನನ್ನು ದುರುಳನಾದ ರಾವಣಾಸುರನು ಕುಟಿಲೋಪಾಯಗಳಿಂದ ಕಳುಹಿಸಿರುವನು. ನೀನು ಇವನನ್ನು ಚೆನ್ನಾಗಿ ನೆಚ್ಚಿದಮೇಲೆ ಇವನು ಪ್ರಚ್ಛನ್ನನಾಗಿ ನಮ್ಮೆಲ್ಲರನ್ನೂ ಪ್ರಹರಿಸಲು ಬಂದಿದ್ದಾನೆ. ಮಹಾ ಪ್ರಾಜ್ಞನಾದ ಶತ್ರುವು ಯಾರಿಗೂ ತಿಳಿಯದಂತೆ ಎದುರುಸೇನೆಯನ್ನು

ರ್ಕಿತಃ । ನಿಹನ್ಯಾದಂತರಂ ಲಬ್ಧ್ವಾ ಉಲೂಕ ಇವ ವಾಯಸಾನ್ ॥ ೨೬ ॥ ವಧ್ಯತಾ ಮೇಷ ದಂಡೇನ ತೀವ್ರೇಣ ಸಚಿವೈಸ್ಸಹ । ರಾವಣಸ್ಯ ನೃಶಂಸಸ್ಯ ಭ್ರಾತಾ ಹ್ಯೇಷ ವಿಭೀಷಣಃ ” ॥ ೨೭ ॥ ಏವಮುಕ್ತ್ವಾ ತು ತಂ ರಾಮಂ ಸಂರಬ್ಧೋ ವಾಹಿನೀಪತಿಃ । ವಾಕ್ಯಜ್ಞೋ ವಾಕ್ಯಕುಶಲಂ ತತೋ ಮೌನಮುಪಾಗಮತ್ ॥ ೨೮ ॥ ಸುಗ್ರೀವಸ್ಯ ತು ತದ್ವಾಕ್ಯಂ ಶ್ರುತ್ವಾ ರಾಮೋ ಮಹಾಯಶಾಃ । ಸಮೀಪಸ್ಥಾನುವಾಚೇದಂ ಹನುಮತ್ಪ್ರಮುಖಾನ್ ಹರೀನ್ ॥ ೨೯ ॥ ಯದುಕ್ತಂ ಕಪಿರಾಜೇನ ರಾವಣಾವರಜಂ ಪ್ರತಿ । ವಾಕ್ಯಂ ಹೇತುಮದರ್ಥ್ಯಂಚ ಭವದ್ಭಿರಪಿ ತಚ್ಛ್ರುತಂ ॥ ೩೦ ॥ ಸುಹೃದಾ ಹ್ಯರ್ಥ

---

॥೨೫॥ ಪ್ರಾಜ್ಞಃ - ಬುದ್ಧಿವಂತನಾದಕಾರಣ, ಅತರ್ಕಿತಃ - ಅವಿಚಾರಿತನಾಗಿ, ಶತ್ರುಸೈನ್ಯಂ - ಶತ್ರುಗಳ ಸೈನ್ಯವನ್ನು, ಪ್ರವಿಷ್ಟಸ್ಸನ್ - ಪ್ರವೇಶಮಾಡಿ, ಅಂತರಂ - ಅವಕಾಶವನ್ನು, ಲಬ್ಧ್ವಾ - ಹೊಂದಿ, ಉಲೂಕಃ - ದಿವಾಭೀತಿಯುಳ್ಳ ಗೂಬೆಯು, ವಾಯಸಾನಿವ - ಕಾಗೆಗಳನ್ನಂತೆ, ನಿಹನ್ಯಾತ್ - ಹೊಡೆವನು. ॥೨೬॥ ಹಿ - ಯಾವ ಕಾರಣದಿಂದ, ಏಷಃ - ಈ, ವಿಭೀಷಣಃ - ವಿಭೀಷಣನು, ನೃಶಂಸಸ್ಯ - ಘಾತುಕನಾದ, ರಾವಣಸ್ಯ - ರಾವಣನಿಗೆ, ಭ್ರಾತಾ - ತಮ್ಮನೋ, ತತ್ - ಆ ಕಾರಣದಿಂದ, ಏಷಃ - ಈ ವಿಭೀಷಣನು, ಸಚಿವೈಸ್ಸಹ - ಮಂತ್ರಿಗಳೊಡಗೂಡಿ, ತೀವ್ರೇಣದಂಡೇಣ - ಕ್ರೂರವಾದ ಶಿಕ್ಷೆಯಿಂದ, ವಧ್ಯತಾಂ - ಸಂಹರಿಸಲ್ಪಡಲಿ, ॥ ೨೭ ॥ ಏವಂ - ಈ ಪರಿಯಾಗಿ, ಸಂರಬ್ಧಃ - ಕೋಪಿಷ್ಠನಾದ, ವಾಹಿನೀಪತಿಃ - ಸೈನ್ಯಾಧಿಪತಿಯಾದ, ವಾಕ್ಯಜ್ಞಃ - ವಾಕ್ಯಾರ್ಥಜ್ಞನಾದ ಸುಗ್ರೀವನು, ವಾಕ್ಯಕುಶಲಂ - ವಾಕ್ಯಾರ್ಥದಲ್ಲಿ ಸಮರ್ಥನಾದ, ತಂರಾಮಂ - ಆ ಶ್ರೀರಾಮನನ್ನು ಕುರಿತು, ಉಕ್ತ್ವಾ - ಹೇಳಿ, ತತಃ - ಬಳಿಕ, ಮೌನಂ - ಮೌನವನ್ನು, ಆಗಮತ್ - ಹೊಂದಿದನು. ॥ ೨೮ ॥ ಸುಗ್ರೀವಸ್ಯ - ಸುಗ್ರೀವನ, ತದ್ವಾಕ್ಯಂತು - ಆ ಮಾತನ್ನಾದರೆ, ಶ್ರುತ್ವಾ - ಕೇಳಿ, ಮಹಾಯಶಾಃ - ಬಹಳ ಕೀರ್ತಿವಂತನಾದ, ರಾಮಃ - ಶ್ರೀರಾಮನೂ, ಸಮೀಪಸ್ಥಾನ್ - ಸಮೀಪದಲ್ಲಿ ನಿಂತಿರುವ, ಹನು....ಖಾನ್-ಹನುಮಂತನೇ ಮೊದಲಾದ, ಹರೀನ್-ವಾನರರನ್ನು ಕುರಿತು, ಇದಂ-ಈ ಮಾತನ್ನು, ಉವಾಚ - ಹೇಳಿದನು. ॥ ೨೯ ॥ ಕಪಿರಾಜೇನ - ವಾನರಾಧಿಪತಿಯಾದ ಸುಗ್ರೀವನಿಂದ, ರಾವ....ತಿ - ರಾವಣನ ತಮ್ಮನಾದ ವಿಭೀಷಣನನ್ನುದ್ದೇಶಿಸಿ, ಯತ್ - ಯಾವ, ಹೇತುಮತ್ - ಯುಕ್ತಿಯುಕ್ತವಾದ, ಅರ್ಥ್ಯಂಚ - ಪ್ರಯೋಜನವನ್ನು ಕುರಿತು, ವಾಕ್ಯಂ - ಮಾತು, ಉಕ್ತಂ - ಹೇಳಲ್ಪಟ್ಟಿತೋ, ತತ್ - ಆ ಮಾತು, ಭವದ್ಭಿರಪಿ - ನಿಮ್ಮಿಂದಲೂ, ಶ್ರುತಂಹಿ - ಕೇಳಲ್ಪಟ್ಟಿತಷ್ಟೆ. ॥೩೦॥ ಸುಹೃದಾ -

---

ಪ್ರವೇಶಿಸಿ ಛಿದ್ರವು ಕಾಣುವವರೆಗೂ ಕಾದಿದ್ದು, ಒಂದು ಗೂಬೆಯು ಅನೇಕ ಕಾಗೆಗಳನ್ನು ಕೊಲ್ಲುವಂತೆ ಅವರನ್ನು ಕೊಂದು ಜಯಶಾಲಿಯಾಗುವನು. ಈ ವಿಭೀಷಣನು ಮಹಾ ಕ್ರೂರನಾದ ರಾವಣನ ತಮ್ಮನಲ್ಲವೇ? ಆದುದರಿಂದ ಇವನನ್ನು ಇವನ ಮಂತ್ರಿಗಳನ್ನೂ ಏನೊಂದೂ ದಯಾದಾಕ್ಷಿಣ್ಯಗಳಿಲ್ಲದೆ ಕೊಲ್ಲಬೇಕು ” ಎಂದು ಹೇಳಿದನು. ॥ ೨೧—೨೭ ॥ ಮಹಾ ಬುದ್ಧಿಶಾಲಿಯಾದ ಸುಗ್ರೀವನೀರೀತಿ ನುಡಿದು ಸುಮ್ಮನಾದನು. ಆಗ ಮಹಾ ಕೀರ್ತಿವಂತನಾದ ಶ್ರೀರಾಮನು ಆತನ ಮಾತುಗಳನ್ನು ಕೇಳಿ ತನ್ನ ಬಳಿಯಲ್ಲಿದ್ದ ಆಂಜನೇಯನೇ ಮೊದಲಾದ ವಾನರರನ್ನು ಕುರಿತು, “ಎಲೈ ವಾನರಶ್ರೇಷ್ಠರಿರಾ! ನಿಮ್ಮ ಪ್ರಭುವಾದ ಈ ಸುಗ್ರೀವನು, ರಾವಣಾಸುರನ ತಮ್ಮನಾದ ವಿಭೀಷಣನನ್ನು ಕುರಿತು ಯುಕ್ತಿಯುಕ್ತವೂ, ಅರ್ಥಸಹಿತವೂ ಆದ ಮಾತುಗಳಾಡಿದುದನ್ನು ನೀವೆಲ್ಲರೂ ಕೇಳಿರುವಿರಿ.

ಕೃಚ್ಛ್ರೇಷು ಯುಕ್ತಂ ಬುದ್ಧಿಮತಾ ಸತಾ । ಸಮರ್ಥೇನಾಪಿ ಸಂದೇಷ್ಟುಂ ಶಾಶ್ವತೀಂ ಭೂತಿಮಿಚ್ಛತಾ" ||೩೦|| ಇತ್ಯೇವಂ ಪರಿಪೃಷ್ಟಾಸ್ತೇ ಸ್ವಂ ಸ್ವಂ ಮತಮತಂದ್ರಿತಾಃ । ಸೋಪಚಾರಂ ತದಾ ರಾಮಮೂಚುರ್ಹಿತಚಿಕೀರ್ಷವಃ ||೩೨|| ¶ "ಅಜ್ಞಾತಂ ನಾಸ್ತಿ ತೇ ಕಿಂಚಿತ್ತ್ರಿಷು ಲೋಕೇಷು ರಾಘವ! । ಆತ್ಮಾನಂ ಸೂಚಯನ್ ಜಾನನ್ ಪೃಚ್ಛಸ್ಯಸ್ಮಾನ್ ಸುಹೃತ್ತಯಾ ||೩೩|| ತ್ವಂಹಿ ಸತ್ಯವ್ರತ ಶ್ಶೂರೋ ಧಾರ್ಮಿಕೋ ದೃಢ

ಸ್ನೇಹಿತನಾದ, ಬುದ್ಧಿಮತಾ - ಬುದ್ಧಿಶಾಲಿಯಾದ, ಸಮರ್ಥೇನ - ಕಾರ್ಯದಕ್ಷನಾದ, ಶಾಶ್ವತೀಂ - ಸ್ಥಿರವಾದ, ಭೂತಿಂ - ಐಶ್ವರ್ಯವನ್ನು, ಇಚ್ಛತಾ - ಬಯಸುವ, ಸತಾ - ಸತ್ಪುರುಷನಿಂದ, ಅರ್ಥಕೃಚ್ಛ್ರೇಷು - ಕಾರ್ಯಸಂಕಟಗಳಲ್ಲಿ, ಸಂದೇಷ್ಟುಂ - ಹೇಳುವದು, ಯುಕ್ತಂಹಿ - ಯೋಗ್ಯವಾಗಿರುವದಷ್ಟೆ. ||೩೧|| ಇತ್ಯೇವಂ - ಈ ಪರಿಯಾಗಿ, ಪರಿಪೃಷ್ಟಾಃ - ಪ್ರಶ್ನೆಗೈಯಲ್ಪಟ್ಟ, ಹಿತ....ವಃ - ಹಿತವನ್ನೇ ಮಾಡಲಪೇಕ್ಷಿಸುತ್ತಿರುವ, ತೇ - ಆ ಕಪಿಗಳು, ತದಾ - ಆ ಕಾಲದಲ್ಲಿ, ಅತಂದ್ರಿತಾಃ - ಜಾಗರೂಕರಾಗಿ, ಸೋಪಚಾರಂ - ಉಪಚಾರೋಕ್ತಿಯೊಡನೆ, ರಾಮಂ - ಶ್ರೀರಾಮನನ್ನು ಕುರಿತು, ಸ್ವಂಸ್ವಂಮತಂ - ತಂತಮ್ಮ ಅಭಿಪ್ರಾಯವನ್ನು, ಊಚುಃ - ಹೇಳಿದರು. ||೩೨|| ಹೇ ರಾಘವ - ಎಲೈ ಶ್ರೀರಾಮನೇ, ತ್ರಿಷುಲೋಕೇಷು - ಮೂರುಲೋಕಗಳಲ್ಲಿಯೂ, ತೇ - ನಿನಗೆ, ಅಜ್ಞಾತಂ - ತಿಳಿಯಲ್ಪಡದಿರುವ, ಕಿಂಚಿತ್ - ಯಾವುದೂ, ನಾಸ್ತಿ - ಇಲ್ಲವು, ಆತ್ಮಾನಂ - ನಿನ್ನನ್ನು, ಸುಹೃತ್ತಯಾ - ಮೈತ್ರಿಯಿಂದ, ಸೂಚಯನ್ - ಸೂಚನೆಮಾಡಿ, ಜಾನನ್ನಪಿ - ತಿಳಿದವನಾದರೂ, ಅಸ್ಮಾನ್ - ನಮ್ಮನ್ನು, ಪೃಚ್ಛಸಿ - ಕೇಳುತ್ತಿರುವೆ. ||೩೩|| ತ್ವಂ - ನೀನು, ಸತ್ಯವ್ರತಃ - ಶರಣಾಗತರಕ್ಷಣವೆಂಬ ಸಫಲವಾದ ವ್ರತವುಳ್ಳವನು, ಶೂರಃ - ಶೌರ್ಯವಂತನು, ಧಾರ್ಮಿಕಃ -

ಕಾರ್ಯಸಂಕಟವೊದಗಿದಾಗ ಮಹಾ ಬುದ್ಧಿಶಾಲಿಯೂ, ಸತ್ಪುರುಷನೂ, ಮಹಾ ಸಮರ್ಥನೂ, ಮಿತ್ರನಿಗೆ ಶಾಶ್ವತೈಶ್ವರ್ಯವನ್ನು ಕೋರುವವನೂ ಆದ ಮತ್ತೊಬ್ಬ ಸ್ನೇಹಿತನು ಕೂಡ ಅವನಿಗೆ ಹಿತೋಪದೇಶ ಮಾಡುವುದು ಉಚಿತವೇ ಆಗಿರುವುದು. ಆದುದರಿಂದ ನೀವೀಗ ನಿಮನಿಮಗೆ ತೋರಿದ ವಿಷಯವನ್ನು ಹೇಳಿರಿ" ಎಂದು ಹೇಳಿದನು. ಶ್ರೀರಾಮನಿಂತು ಹೇಳಿದ ತರುವಾಯ ಆ ವಾನರರೆಲ್ಲರೂ ಆತನಿಗೆ ಹಿತವನ್ನು ಕೋರಿ ಆತನನ್ನುಪಚರಿಸಿ ಜಾಗ್ರತೆಯಾಗಿ ತಮ್ಮತಮ್ಮ ಅಭಿಪ್ರಾಯಗಳನ್ನೀರೀತಿ ಹೇಳಲುಪಕ್ರಮಿಸಿ. ||೨೮-೩೨|| "ಶ್ರೀರಾಮಾ! ಮೂರುಲೋಕಗಳಲ್ಲಿಯೂ ನಿನಗೆ ತಿಳಿಯದ ವಿಷಯವೊಂದಿರುವುದಿಲ್ಲವು. ಆದರೂ ನಮ್ಮಲ್ಲಿ ನಿನಗಿರುವ ಸ್ನೇಹಧರ್ಮವನ್ನು ಪ್ರಕಟಗೊಳಿಸುವವನಾಗಿ ನಮ್ಮನ್ನು ಗೌರವಿಸಲು ಈ ವಿಷಯದಲ್ಲಿ ನಮ್ಮ ಸಲಹೆಯನ್ನು ಕೇಳುತ್ತಿರುವೆ. ನೀನು ಸತ್ಯವನ್ನೇ ವ್ರತವಾಗಿ ಉಳ್ಳವನು; ಮಹಾ ಶೂರನು; ಪರಮ ಧಾರ್ಮಿಕನು; ದೃಢವಾದ ಶೌರ್ಯಸಂಪದ

¶ "ಎಲೈ ಶ್ರೀರಾಮನೇ! "ರಾಮನು ವಾನರರಿಗೆ ಪರಮ ಸ್ನೇಹಿತನೆ"ಂಬ ಕೀರ್ತಿಯನ್ನು ಲೋಕದಲ್ಲಿ ಸ್ಥಾಪಿಸುವುದಕ್ಕಾಗಿಯೇ ನೀನು ನಮ್ಮನ್ನು ಪ್ರಶ್ನಿಸುತ್ತಿರುವೆ. ("ಪೂಜಯನ್" ಎಂಬ ಪಾಠವಿರುವುದು.) ನಮ್ಮಲ್ಲಿ ಪ್ರತಿಯೊಬ್ಬರನ್ನೂ ಪ್ರತ್ಯೇಕವಾಗಿ ಗೌರವಿಸಲು ನಮ್ಮನ್ನು ಪ್ರಶ್ನಿಸುತ್ತಿರುವೆ. ಅಥವಾ ರಾಜನೀತಿಗನುಗುಣವಾಗಿ ನೀನು ನಮ್ಮಲ್ಲಿ ಮಂತ್ರಾಲೋಚನೆಯನ್ನು ಮಾಡುತ್ತಿರುವೆ. ಇದೆಲ್ಲವೂ ನಿನ್ನಲ್ಲಿರುವ ಸುಹೃತ್ಪಾರತಂತ್ರ್ಯವನ್ನು ಪ್ರಕಟಗೊಳಿಸುವುದು" ಎಂಬುದು ಇಲ್ಲಿನ ಭಾವವು.

ವಿಕ್ರಮಃ । ಪರೀಕ್ಷ್ಯಕಾರೀ ಸ್ಮೃತಿಮಾನ್ನಿಸೃಷ್ಟಾತ್ಮಾ ಸುಹೃತ್ಸು ಚ ॥ ೩೪ ॥ ತಸ್ಮಾದೇಕೈಕಶಸ್ತಾವತ್ ಬ್ರುವಂತು ಸಚಿವಾಸ್ತವ । ಹೇತುತೋ ಮತಿಸಂಪನ್ನಾಃ ಸಮರ್ಥಾಶ್ಚ ಪುನಃಪುನಃ" ॥ ೩೫ ॥ ಇತ್ಯುಕ್ತೇ ರಾಘವಾಯಾಥ ಮತಿಮಾನಂಗದೋಽಗ್ರತಃ । ವಿಭೀಷಣಪರೀಕ್ಷಾರ್ಥಮುವಾಚ ವಚನಂ ಹರಿಃ ॥೩೬॥ "ಶತ್ರೋಃ ಸಕಾಶಾತ್ಸಂಪ್ರಾಪ್ತಃ ಸರ್ವಥಾ ಶಂಕ್ಯಏವಹಿ । ವಿಶ್ವಾಸಯೋಗ್ಯಃ ಸಹಸಾ ನಕರ್ತವ್ಯೋ ವಿಭೀಷಣಃ ॥ ೩೭ ॥ ಛಾದಯಿತ್ವಾಽತ್ಮಭಾವಂಹಿ ಚರಂತಿ ಶಠಬುದ್ಧಯಃ । ಪ್ರಹ

---

ಧರ್ಮಚಿತ್ತನು, ದೃಢವಿಕ್ರಮಃ - ದೃಢವಾದ ಪರಾಕ್ರಮವುಳ್ಳವನು, ಪರೀಕ್ಷ್ಯಕಾರೀ - ವಿಮರ್ಶೆಯಿಂದ ಕಾರ್ಯಗಳನ್ನು ಮಾಡುವವನು, ಸ್ಮೃತಿರ್ಮಾ - ಪೂರ್ವಾಪರ ಪ್ರಜ್ಞೆಯುಳ್ಳವನು, ಸುಹೃತ್ಸುಚ - ಸ್ನೇಹಿತರಲ್ಲಿಯೂ, ನಿಸೃಷ್ಟಾತ್ಮಾಹಿ - ನಿಶ್ಚಯವಾಗಿ ಇರಿಸಲ್ಪಟ್ಟ ಅಂತಃಕರಣವುಳ್ಳವನಷ್ಟೆ. ॥ ೩೪ ॥ ತಸ್ಮಾತ್ - ಆ ಕಾರಣದಿಂದ, ತವ - ನಿನ್ನ, ಸಚಿವಾಃ - ಮಂತ್ರಿಗಳು, ಹೇತುತಃ - ಯುಕ್ತಿಗಳಿಂದ, ಮತಿಸಂಪನ್ನಾಃ - ಬುದ್ಧಿಶಾಲಿಗಳಾಗಿ, ಸಮರ್ಥಾಶ್ಚ - ಕಾರ್ಯಸಮರ್ಥರಾದಕಾರಣ, ಪುನಃಪುನಃ - ಬಾರಿಬಾರಿಗೂ, ಏಕೈಕಶಸ್ತಾವತ್ - ಪ್ರತ್ಯೇಕಪ್ರತ್ಯೇಕವಾಗಿ, ಬ್ರುವಂತು - ಹೇಳಲಿ. ॥ ೩೫ ॥ ಇತಿ - ಈ ಪರಿಯಾಗಿ, ಉಕ್ತೇಸತಿ - ಹೇಳಲ್ಪಡಲು, ಅಥ - ಬಳಿಕ, ಮತಿಮಾ - ಬುದ್ಧಿವಂತನಾದ, ಅಂಗದಃ - ಅಂಗದನೆಂಬ, ಹರಿಃ - ವಾನರನು, ರಾಘವಾಯ - ಶ್ರೀರಾಮನಿಗೆ, ಅಗ್ರತಃ - ಮೊದಲು, ವಿಭೀ ... ರ್ಥಂ - ವಿಭೀಷಣನ ಪರೀಕ್ಷೆಗೋಸುಗ, ವಚನಂ - ಮಾತನ್ನು, ಉವಾಚ - ಹೇಳಿದನು. ॥೩೬॥ ಶತ್ರೋಃ - ಶತ್ರುವಿನ, ಸಕಾಶಾತ್ - ಬಳಿಯಿಂದ, ಸಂಪ್ರಾಪ್ತಃ - ಬಂದವನಾದಕಾರಣ, ವಿಭೀಷಣಃ - ವಿಭೀಷಣನು, ಸರ್ವಥಾ - ಸರ್ವಪ್ರಕಾರವಲ್ಲಿಯೂ, ಶಂಕ್ಯಏವ - ಊಹಿಸತಕ್ಕವನಷ್ಟೇ, ಸಹಸಾ - ಜಾಗ್ರತೆಯಾಗಿ, ವಿಶ್ವಾಸಯೋಗ್ಯಃ - ವಿಶ್ವಾಸಕ್ಕೆ ಪಾತ್ರನನ್ನಾಗಿ, ನಕರ್ತವ್ಯಃ - ಮಾಡಿಕೊಳ್ಳತಕ್ಕವನಲ್ಲ. ॥ ೩೭ ॥ ಹಿ - ಯಾವ ಕಾರಣದಿಂದ, ಶಠಬುದ್ಧಯಃ - ಕುಟಿಲ ಬುದ್ಧಿಯುಳ್ಳವರು, ಆತ್ಮಭಾವಂ - ತಮ್ಮ ಅಭಿಪ್ರಾಯವನ್ನು, ಛಾದಯಿತ್ವಾ - ಮನದಲ್ಲಿ ಅಡಗಿಸಿಕೊಂಡು, ಚರಂತಿ - ಸಂಚಾರ ಮಾಡುತ್ತಾರೆಯೋ, ತತಃ - ಬಳಿಕ, ರಂಧ್ರೇಷು - ಅವಕಾಶ ದೊರೆಗಲು, ಪ್ರಹರಂತಿ - ಹೊಡೆಯುತ್ತಾರೆಯೋ, ಸಃ - ಅದು, ಸುಮಹರ್ - ಬಹಳ ದೊಡ್ಡದಾದ,

---

ವುಳ್ಳವನು ; ಎಂತಹ ಅಸಾಧ್ಯ ಕಾರ್ಯವನ್ನಾದರೂ ಅದನ್ನು ನಿರಾಯಾಸವಾಗಿ ಮಾಡುವವನು ; ನಿರತಿಶಯವಾದ ಜ್ಞಾಪಕಶಕ್ತಿಯುಳ್ಳವನು. ನೀನು ಮಿತ್ರಜನರಲ್ಲಿ ಸಂಪೂರ್ಣ ಪ್ರೇಮವುಳ್ಳವನು. ಆದುದರಿಂದ ಬುದ್ಧಿಶಾಲಿಗಳೂ, ಮಹಾ ಸಮರ್ಥರೂ ಆದ ನಿನ್ನ ಮಂತ್ರಿಗಳು ಕ್ರಮವಾಗಿ ತಮ್ಮತಮ್ಮ ಅಭಿಪ್ರಾಯಗಳನ್ನು ನಿನಗೆ ಹೇಳಬೇಕು" ಎಂದು ಆತನನ್ನು ಶ್ಲಾಘಿಸಿ ತಮ್ಮ ಅಭಿಪ್ರಾಯಗಳನ್ನು ಹೇಳಲುಪಕ್ರಮಿಸಿದರು. ॥೩೩–೩೫॥ ಆಗ ಯುವರಾಜನೂ, ಮಹಾ ಬುದ್ಧಿಶಾಲಿಯೂ ಆದ ಅಂಗದಕುಮಾರನು ವಿಭೀಷಣನನ್ನು ಪರಿಕ್ಷಿಸಬಯಸಿ ಶ್ರೀರಾಮನನ್ನು ಕುರಿತು, "ಎಲೈ ರಾಮರಾಜನೇ ! ಈ ವಿಭೀಷಣನು ಶತ್ರುವಾದ ರಾವಣನ ಕಡೆಯಿಂದ ಇಲ್ಲಿಗೆ ಬಂದಿದ್ದಾನೆ. ಆದುದರಿಂದ ಇವನ ವಿಷಯದಲ್ಲಿ ಅವಶ್ಯವಾಗಿ ಯೋಚನೆ ಮಾಡಬೇಕು. ಏನೊಂದೂ ಯೋಚನೆ ಮಾಡದೆ ಇವನನ್ನು ನಮ್ಮ ವಿಶ್ವಾಸಕ್ಕೆ ಯೋಗ್ಯನನ್ನಾಗಿಸಿಕೊಳ್ಳಬಾರದು. ಶಠಬುದ್ಧಿಗಳಾದವರು ತಮ್ಮ ಸಹಜಸ್ವಭಾವವನ್ನು ಮರೆಸಿಕೊಂಡು ತಿರುಗುತ್ತಿರುತ್ತಾರೆ. ಯಾವುದಾದರೂ ಸಂಧಿ ದೊರೆತಾಗ ಪ್ರಹರಿಸುತ್ತಾರೆ.

ರಂತಿ ಚ ರಂಧ್ರೇಷು ಸೋಽನರ್ಥಃ ಸುಮಹಾನ್ಭವೇತ್ ॥ ೩೮ ॥ ಅರ್ಥಾನರ್ಥೌ ವಿನಿಶ್ಚಿತ್ಯ ವ್ಯವಸಾಯಂ ಭಜೇತ ಹ । ಗುಣತಸ್ಸಂಗ್ರಹಂ ಕುರ್ಯಾದ್ದೋಷತಸ್ತು ವಿವರ್ಜಯೇತ್ ॥೩೯॥ ಯದಿ ದೋಷೋ ಮಹಾಂಸ್ತಸ್ಮಿಂಸ್ತ್ಯಜ್ಯತಾಮವಿಶಂಕಿತಂ । ಗುಣಾನ್ವಾಪಿ ಬಹೂನ್ ಜ್ಞಾತ್ವಾ ಸಂಗ್ರಹಃ ಕ್ರಿಯತಾಂ ನೃಪ!" ॥೪೦॥ ಶರಭಸ್ತ್ವಥ ನಿಶ್ಚಿತ್ಯ ಸಾರ್ಥ್ಯಂ ವಚನಮಬ್ರವೀತ್ । "ಕ್ಷಿಪ್ರಮಸ್ಮಿನ್ನರವ್ಯಾಘ್ರ! ಚಾರಃ ಪ್ರತಿವಿಧೀಯತಾಂ ॥ ೪೧ ॥ ಪ್ರಣಿಧಾಯ ಹಿ ಚಾರೇಣ ಯಥಾವತ್ಸೂಕ್ಷ್ಮಬುದ್ಧಿನಾ । ಪರೀಕ್ಷ್ಯ ಚ ತತಃ ಕಾರ್ಯೋ ಯಥಾನ್ಯಾಯಂ ಪರಿಗ್ರಹಃ" ॥ ೪೨ ॥ ಜಾಂಬವಾಂಸ್ತ್ವಥ

ಅನರ್ಥಃ - ಅನರ್ಥಕ್ಕೆ ಕಾರಣವು, ಭವೇತ್ - ಆಗುವದು. ॥ ೩೮ ॥ ಅರ್ಥಾನರ್ಥೌ - ಗುಣದೋಷಗಳನ್ನು, ವಿನಿಶ್ಚಿತ್ಯ - ನಿಶ್ಚಯಿಸಿ, ವ್ಯವಸಾಯಂ - ಉದ್ಯೋಗವನ್ನು, ಭಜೇತಹ - ಹೊಂದತಕ್ಕದು, ಗುಣತಃ - ಗುಣದಿಂದ, ಸಂಗ್ರಹಂ - ಪರಿಗ್ರಹವನ್ನು, ಕುರ್ಯಾತ್ - ಮಾಡಬಹುದು, ದೋಷತಸ್ತು-ದೋಷದಿಂದ, ವಿವರ್ಜಯೇತ್ - ಬಿಡಬೇಕು. ॥ ೩೯ ॥ ಹೇ ನೃಪ - ಎಲೈ ಅರಸೇ, ತಸ್ಮಿನ್ - ಆ ವಿಭೀಷಣನಲ್ಲಿ, ಮಹಾನ್ - ದೊಡ್ಡದಾದ, ದೋಷಃ - ದೋಷವು, ಸ್ಯಾತ್‌ಯದಿ - ಇದ್ದುದೇ ಆದರೆ, ಅವಿಶಂಕಿತಂ - ನಿಸ್ಸಂಶಯವಾಗಿ, ತ್ಯಜ್ಯತಾಂ - ಬಿಡಲ್ಪಡಲಿ, ಬಹೂನ್ - ಬಹಳವಾದ, ಗುಣಾನ್ವಾಪಿ-ಗುಣಗಳನ್ನಾದರೂ, ಜ್ಞಾತ್ವಾ - ತಿಳಿದು, ಸಂಗ್ರಹಃ - ಸ್ವೀಕಾರವು, ಕ್ರಿಯತಾಂ - ಮಾಡಲ್ಪಡಲಿ. ॥ ೪೦ ॥ ಅಥ - ಬಳಿಕ, ಶರಭಸ್ತು - ಶರಭನಾದರೆ, ಸಾರ್ಥ್ಯಂ - ಸಾಧನೀಯವಾದ ಅರ್ಥವುಳ್ಳ, ವಚನಂ - ಮಾತನ್ನು, ಅಬ್ರವೀತ್ - ನುಡಿದನು, ಹೇ ನರವ್ಯಾಘ್ರ - ಎಲೈ ಪುರುಷಶ್ರೇಷ್ಠನೇ, ಅಸ್ಮಿನ್ - ಈ ವಿಭೀಷಣನ ವಿಷಯವಾಗಿ, ಚಾರಃ - ಗೂಢಚಾರನು, ಕ್ಷಿಪ್ರಂ - ಜಾಗ್ರತೆಯಾಗಿ, ಪ್ರಣಿಧೀಯತಾಂ - ಆಜ್ಞಾಪಿಸಲ್ಪಡಲಿ. ॥ ೪೧ ॥ ಪ್ರಣಿಧಾಯ - ಚಾರನನ್ನಿಟ್ಟು, ಸೂಕ್ಷ್ಮಬುದ್ಧಿನಾ - ಸೂಕ್ಷ್ಮಬುದ್ಧಿಯುಳ್ಳ, ಚಾರೇಣ - ಚಾರನಿಂದ, ಯಥಾವತ್ - ಯಥಾಶಾಸ್ತ್ರವಾಗಿ, ಪರೀಕ್ಷ್ಯ - ಪರೀಕ್ಷೆಮಾಡಿ, ಯಥಾನ್ಯಾಯಂ - ನ್ಯಾಯಾನುಸಾರವಾಗಿ, ಪರಿಗ್ರಹಃ - ಗ್ರಹಿಸೋಣವು, ಕಾರ್ಯಃ - ಮಾಡತಕ್ಕದು ಎಂದು ಹೇಳಿದನು. ॥ ೪೨ ॥ ಅಥ - ಬಳಿಕ, ವಿಚಕ್ಷಣಃ - ವಿವೇಕಶಾಲಿಯಾದ, ಜಾಂಬವಾಂಸ್ತು - ಜಾಂಬವಂತನಾದರೆ, ಶಾಸ್ತ್ರಬುದ್ಧ್ಯಾ - ಶಾಸ್ತ್ರಜ್ಞಾನದಿಂದ, ಸಂಪ್ರೇಕ್ಷ್ಯ - ಕಂಡು,

ಇದರಿಂದ ಮಹಾನರ್ಥವೇ ಆಗುತ್ತದೆ. ಯಾವುದೊಂದು ಕಾರ್ಯದಲ್ಲಿಯೂ ಮೊದಲು ಅರ್ಥಾನರ್ಥಗಳನ್ನು ನಿಶ್ಚಯಿಸಿಕೊಂಡು ಆಮೇಲೆ ವ್ಯವಸಾಯ ಮಾಡಬೇಕು. ಗುಣವೇನಾದರೂ ಇದ್ದರೆ ಅದನ್ನು ಮಾಡಬೇಕು. ದೋಷವು ಕಂಡುಬಂದರೆ ತೊರೆಯಬೇಕು. ಪ್ರಕೃತದಲ್ಲಿ ಈ ವಿಭೀಷಣನಲ್ಲಿ ದೋಷವೇ ಅಧಿಕವಾಗಿದ್ದರೆ ಏನೊಂದು ಸಂಶಯವೂ ಇಲ್ಲದೆ ಬಿಟ್ಟುಬಿಡುವುದು ಒಳ್ಳೆಯದು. ಒಂದುವೇಳೆ ದೋಷವು ಸ್ವಲ್ಪಮಾತ್ರವಿದ್ದು, ಗುಣಗಳೇ ಬಹಳವಾಗಿದ್ದರೆ ನಮ್ಮ ಪಕ್ಷಕ್ಕೆ ಸೇರಿಸಿಕೊಳ್ಳಬಹುದು" ಎಂದನು. ॥೩೬-೪೦॥ ಆಮೇಲೆ ಶರಭನು ತಾನಾಡುವ ಮಾತನ್ನು ನಿಶ್ಚಯಿಸಿಕೊಂಡು ಅರ್ಥಯುಕ್ತವಾದ ಮಾತನ್ನು ಹೇಳುವವನಾಗಿ, "ಎಲೈ ಪುರುಷೋತ್ತಮನೇ! ಈ ವಿಭೀಷಣನಲ್ಲಿಗೆ ಶೀಘ್ರವಾಗಿ ಒಬ್ಬ ಗೂಢಚಾರನನ್ನು ಕಳುಹಿಸು. ಅವನು ಇವನ ಗುಟ್ಟುಗಳನ್ನೆಲ್ಲ ತಿಳಿದು ಮರಳಲಿ. ಆಮೇಲೆ ಬುದ್ಧಿಶಾಲಿಯಾದ ಅವನಿಂದ ಎಲ್ಲ ವಿಚಾರಗಳನ್ನೂ ಯಥಾವತ್ತಾಗಿ ತಿಳಿದು ಆ ಬಳಿಕ ಈ ವಿಭೀಷಣನನ್ನು ಪರಿಗ್ರಹಿಸುವ ಕಾರ್ಯವನ್ನು ಮಾಡಬಹುದು" ಎಂದು ಹೇಳಿದನು. ಬಳಿಕ ಮಹಾ ವಿಚಕ್ಷಣನಾದ

ಸಂಪ್ರೇಕ್ಷ್ಯ ಶಾಸ್ತ್ರಬುದ್ಧ್ಯಾ ವಿಚಕ್ಷಣಃ । ವಾಕ್ಯಂ ವಿಜ್ಞಾಪಯಾಮಾಸ ಗುಣವ ದ್ದೋಷವರ್ಜಿತಂ ॥೪೩॥ "ಬದ್ಧವೈರಾಚ್ಚ ಪಾಪಾಚ್ಚ ರಾಕ್ಷಸೇಂದ್ರಾದ್ವಿಭೀಷಣಃ । ಅದೇಶಕಾಲೇ ಸಂಪ್ರಾಪ್ತಃ ಸರ್ವಥಾ ಶಂಕ್ಯತಾಮಯಂ" ॥೪೪॥ ತತೋ ಮೈಂದಸ್ತು ಸಂಪ್ರೇಕ್ಷ್ಯ ನಯಾಪನಯಕೋವಿದಃ । ವಾಕ್ಯಂ ವಚನಸಂಪನ್ನೋ ಬಭಾಷೇ ಹೇತು ಮತ್ತರಂ ॥ ೪೫ ॥ "ವಚನಂ ನಾಮ ತಸ್ಯೈಷ ರಾವಣಸ್ಯ ವಿಭೀಷಣಃ । ಪೃಚ್ಛ್ಯತಾಂ ಮಧುರೇಣಾಽಯಂ ಶನೈರ್ನರವರೇಶ್ವರ! ॥ ೪೬ ॥ ಭಾವಮಸ್ಯತು ವಿಜ್ಞಾಯ ತತ

---

ಗುಣವತ್ - ಯುಕ್ತಿಯುಕ್ತವಾದ, ದೋಷವರ್ಜಿತಂ - ದೋಷವಿಲ್ಲದಿರುವ, ವಾಕ್ಯಂ - ಮಾತನ್ನು, ವಿಜ್ಞಾಪಯಾಮಾಸ-ವಿಜ್ಞಾಪನೆ ಮಾಡಿದನು. ॥೪೩॥ ಅಯಂ-ಈ ವಿಭೀಷಣನು, ಬದ್ಧವೈರಾತ್ - ದೃಢವಾದ ದ್ವೇಷವುಳ್ಳ, ಪಾಪಾಚ್ಚ - ಪಾಪಕರ್ಮವೂ ಉಳ್ಳ, ರಾಕ್ಷಸೇಂದ್ರಾತ್-ರಾವಣಾಸುರನ ದೆಸೆ ಯಿಂದ, ಅದೇಶಕಾಲೇ-ಶತ್ರುಪ್ರದೇಶದಲ್ಲಿಯೂ, (ಮ) ಅಕಾಲವಾದ ರಾತ್ರಿಯಲ್ಲಿಯೂ, (ಗೋ) ಪ್ರಭು ವನ್ನು ಪರಿತ್ಯಾಗ ಮಾಡುವದಕ್ಕೆ ಅನರ್ಹವಾದ ಈ ಕಾಲದಲ್ಲಿ, ಸಂಪ್ರಾಪ್ತಃ - ಬಂದನು, ಸರ್ವಥಾ- ಸರ್ವಪ್ರಕಾರದಲ್ಲಿಯೂ, ಶಂಕ್ಯತಾಂ - ಊಹಿಸಲ್ಪಡಲಿ. ॥ ೪೪ ॥ ತತಃ - ಬಳಿಕ, ನಯಾ....ದಃ - ನೀತಿಯನ್ನೂ, ಅನೀತಿಯನ್ನು ತಿಳಿದಿರುವ, ವಚ....ನ್ನಃ - ವಾಚಾಳಿಯಾದ, ಮೈಂದಸ್ತು - ಮೈಂದ ನಾದರೆ, ಸಂಪ್ರೇಕ್ಷ್ಯ - ಕಂಡು, ಹೇತುಮತ್ತರಂ - ಅತಿಶಯವಾದ ಯುಕ್ತಿಗಳಿಂದ, ವಾಕ್ಯಂ - ಮಾತನ್ನು, ಬಭಾಷೇ - ಹೇಳಿದನು, ಹೇನರವರೇಶ್ವರ - ಎಲೈ ಉತ್ತಮಪುರುಷರಿಗೆ ಒಡೆಯನಾದವನೇ, ಏಷವಿಭೀಷಣಃ - ಈ ವಿಭೀಷಣನು, ಮಧುರೇಣ - ಮನೋಹರವಾದ ವಾಕ್ಕಿನಿಂದ, ತಸ್ಯರಾವಣಸ್ಯ- ಆ ರಾವಣನ ಸಂಬಂಧವಾದ, ವಚನಂ - ಮಾತನ್ನು, ಶನೈಃ - ಮೆಲ್ಲಗೆ, ಪೃಚ್ಛ್ಯತಾಂ - ಕೇಳಲ್ಪಡಲಿ. ॥೪೫॥ ಹೇ ನರರ್ಷಭ - ಎಲೈ ಪುರುಷಶ್ರೇಷ್ಠನೇ, ಅಸ್ಯ - ಈ ವಿಭೀಷಣನ, ತತ್ವಂ - ಯಥಾರ್ಥಾಭಿ ಪ್ರಾಯವನ್ನು, ವಿಜ್ಞಾಯ - ತಿಳಿದು, ತತಃ - ಬಳಿಕ, ದುಷ್ಟೋಯದಿ - ದುಷ್ಟನೇ ಆದರೆ, ಅಥವಾ ನದುಷ್ಟಃ - ದುಷ್ಟನಲ್ಲದಿದ್ದರೆ, (ಅದಕ್ಕೆ ಅನುರೂಪವಾಗಿ) ಬುದ್ಧಿಪೂರ್ವಂ - ಪರೀಕ್ಷಾಪೂರ್ವಕ ವಾಗಿ, (ಯತ್ಕರ್ತವ್ಯಂ - ಯಾವದನ್ನು ಮಾಡಬೇಕೋ), ತತ್ - ಅದನ್ನು, ಕರಿಸ್ಯಸಿ - ಮಾಡುವೆ.

---

ಜಾಂಬವಂತನು ಶಾಸ್ತ್ರಬುದ್ಧಿಯಿಂದ ಮಹಾ ಗುಣಸಂಪನ್ನವಾಗಿಯೂ, ದೋಷರಹಿತ ವಾಗಿಯೂ ಇರುವ ಮಾತನ್ನು ಅರಿಕೆ ಮಾಡುವನು; "ರಾಮಚಂದ್ರ! ನಮಗೂ ರಾವಣ ನಿಗೂ ಬದ್ಧವೈರವಿರುವುದು. ಮೇಲಾಗಿ ಆ ರಾವಣನು ಮಹಾ ಪಾಪಿಯು. ಇದೂ ಅಲ್ಲದೆ ಅವನಿಗೂ ನಮಗೂ ಇದೀಗ ಯುದ್ಧವು ಒದಗಿರುವುದು. ಇಂಥ ಕಾಲವಲ್ಲದ ಕಾಲದಲ್ಲಿ ಈ ವಿಭೀಷಣನು ಇಲ್ಲಿಗೆ ಶರಣೆಂದು ಬಂದಿರುವನು. ಆದುದರಿಂದ ಇವನ ವಿಷಯದಲ್ಲಿ ಅವಶ್ಯ ವಾಗಿ ಶಂಕಿಸಬೇಕು." ಆಮೇಲೆ ನ್ಯಾಯಾನ್ಯಾಯಗಳನ್ನು ವಿಮರ್ಶಿಸುವುದರಲ್ಲಿ ಮಹಾ ಕುಶಲನಾದ ಮೈಂದನು ಚನ್ನಾಗಿ ಯೋಚಿಸಿ, ಯುಕ್ತಿಯುಕ್ತವಾದ ಮಾತನ್ನು ಬಹು ವಿಚಕ್ಷಣೆ ಯಿಂದ ಈ ರೀತಿ ಹೇಳುವನು. ॥೪೧-೪೫॥ "ಎಲೈ ನರವರೇಶ್ವರನೇ! ಶ್ರೀರಾಮಚಂದ್ರನೇ!! ರಾವಣಾನುಜನಾದ ಈ ವಿಭೀಷಣನನ್ನು ನಯವಾಗಿ ಮಧುರವಾಗಿ ಮಾತನಾಡಿಸಿ ನೋಡು. ಇವನ ಅಭಿಪ್ರಾಯವನ್ನು ಯಥಾರ್ಥವಾಗಿ ತಿಳಿದುಕೋ. ಬುದ್ಧಿಪೂರ್ವಕವಾಗಿ ಇವನು ದುಷ್ಟನೋ, ಸಾಧುವೋ ಎಂಬುದನ್ನು ಚೆನ್ನಾಗಿ ವಿಚಾರಮಾಡಿ ಆಮೇಲೆ ನಿನಗೆ ತೋರಿದಂತೆ ಮಾಡುವವನಾಗು." ಆ ಬಳಿಕ ವ್ಯಾಕ್ಯಜ್ಞನಾಗಿಯೂ, ಸಂಸ್ಕಾರಸಂಪನ್ನನಾಗಿಯೂ,

ಸ್ತತ್ತ್ವಂ ಕರಿಷ್ಯಸಿ । ಯದಿ ದುಷ್ಟೋಽ ಸದುಷ್ಟೋವಾ ಬುದ್ಧಿಪೂರ್ವಂ ನರರ್ಷಭ ! ”
॥ ೪೭ ॥ ಅಥಸಂಸ್ಕಾರಸಂಪನ್ನೋ ಹನುಮಾನ್ ಸಚಿವೋತ್ತಮಃ । ಉವಾಚ ವಚನಂ
ಶ್ಲಕ್ಷ್ಣಮರ್ಥವನ್ಮಧುರಂ ಲಘು ॥ ೪೮ ॥ “ ನಭವಂತಂ ಮತಿಃಶ್ರೇಷ್ಠಂ ಸಮರ್ಥಂ
ವದತಾಂವರಂ । ಅತಿಶಾಯಯಿತುಂ ಶಕ್ತೋ ಬೃಹಸ್ಪತಿರಪಿ ಬ್ರುವನ್ ॥ ೪೯ ॥
ನವಾದಾನ್ನಾಪಿ ಸಂಘರ್ಷಾನ್ನಾಧಿಕ್ಯಾನ್ನಚ ಕಾಮತಃ । ವಕ್ಷ್ಯಾಮಿ ವಚನಂ ರಾಜನ್!
ಯಥಾರ್ಥಂ ರಾಮಗೌರವಾತ್ ॥ ೫೦ ॥ ಅರ್ಥಾನರ್ಥನಿಮಿತ್ತಂಹಿ ಯದುಕ್ತಂ
ಸಚಿವೈಸ್ತವ । ತತ್ರ ದೋಷಂ ಪ್ರಪಶ್ಯಾಮಿ ಕ್ರಿಯಾ ನಹ್ಯುಪಪದ್ಯತೇ ॥ ೫೧ ॥

॥೪೭॥ ಅಥ-ಬಳಿಕ, ಸಂಸ್ಕಾ....ನ್ನಃ-ಶಾಸ್ತ್ರಾಭ್ಯಾಸಜನಿತ ಸಂಸ್ಕಾರಸಂಪನ್ನನಾದ, ಸಚಿವೋತ್ತಮಃ-ಮಂತ್ರಿಗಳಲ್ಲಿ ಉತ್ತಮನಾದ, ಹನುಮಾನ್ - ಆಂಜನೇಯನು, ಅರ್ಥವತ್ - ಅರ್ಥಯುಕ್ತವಾದ, ಮಧುರಂ-ಮನಸ್ಸಿಗಿಂಪಾಗಿರುವ, ಲಘುಶಬ್ದತಃ ವಿಸ್ತಾರವಲ್ಲದ ಮಾತುಗಳಿಲ್ಲದ, ವಚನಂ-ಮಾತನ್ನು, ಉವಾಚ - ಹೇಳಿದನು. ॥೪೭-೪೮॥ ಬ್ರುವನ್ - ಮಾತನಾಡುತ್ತಿರುವ, ಬೃಹಸ್ಪತಿರಪಿ - ಬೃಹಸ್ಪತಿಯೂ, ಮತಿಶ್ರೇಷ್ಠಂ - ಬುದ್ಧಿಯಲ್ಲಿ ಉತ್ತಮನಾದ, ವದತಾಂವರಂ - ಮಾತನಾಡುವವರಲ್ಲಿ ಶ್ರೇಷ್ಠನಾದ, ಭವಂತಂ - ನಿನ್ನನ್ನು, ಅತಿಶಾಯಯಿತುಂ - ಮೀರಿಸಲು, ನಶಕ್ತಃ - ಸಮರ್ಥನಲ್ಲವು. ॥೪೯॥ ಹೇ ರಾಜನ್ - ಎಲೈ ರಾಜನೇ, ಹೇ ರಾಮ - ಎಲೈ ಶ್ರೀರಾಮನೇ, ವಾದಾತ್ - ತರ್ಕಕೌಶಲದಿಂದ, ನವಕ್ಷ್ಯಾಮಿ - ಹೇಳಲಾರೆ, ಸಂಘರ್ಷಾತ್ - ಮಂತ್ರಿಗಳಲ್ಲಿ ಸ್ಪರ್ಧೆಯಿಂದ, ನಾಪಿ ವಕ್ಷ್ಯಾಮಿ - ಹೇಳುವುದಿಲ್ಲವು, ಆಧಿಕ್ಯಾತ್ - ನಾನು ದೊಡ್ಡವನೆಂಬ ಅಭಿಮಾನದಿಂದ, ನ - ಹೇಳಲಾರೆ, ಕಾಮತಃ - ಸ್ವೇಚ್ಛೆಯಿಂದ, ನವಕ್ಷ್ಯಾಮಿ - ಹೇಳಲಾರೆ, ಕಿಂತು - ಆದರೆ, ಗೌರವಾತ್ - ನೀನು ನಮ್ಮಲ್ಲಿ ಮಾಡಿದ ಬಹುಮಾನದಿಂದ, ಯಥಾರ್ಥಂ - ಸತ್ಯವಾದ, ವಚನಂ - ಮಾತನ್ನು, ವಕ್ಷ್ಯಾಮಿ - ಹೇಳುವೆನು. ॥ ೫೦ ॥ ತವ - ನಿನ್ನ, ಸಚಿವೈಃ - ಮಂತ್ರಿಗಳಿಂದ, ಅರ್ಥಾ....ತಂ - ಗುಣದೋಷಗಳೇ ನಿಮಿತ್ತವಾದ, ಯತ್ - ಯಾವ ಮಾತು, ಉಕ್ತಂ - ಹೇಳಲ್ಪಟ್ಟಿತೋ, ತತ್ರ - ಆ ಅರ್ಥದಲ್ಲಿ, ದೋಷಂ - ದೋಷವನ್ನು, ಪ್ರಪಶ್ಯಾಮಿ - ಕಾಣುತ್ತೇನೆ, ಕ್ರಿಯಾ - ಪೂರ್ವಕವಾಗಿ ಪರಿಕ್ಷಾರೂಪವಾದ ಕ್ರಿಯೆಯು, ನೋಪಪದ್ಯತೇಹಿ - ಪೂರ್ಣವಾಗುವುದಿಲ್ಲವಷ್ಟೆ. ॥ ೫೧ ॥ ನಿಯೋಗಾತ್‌ಋತೇ - ಒಂದು ಕೆಲಸವಲ್ಲಿ ನಿಯಮವನ್ನು ಬಿಟ್ಟು, ಸಾಮರ್ಥ್ಯಂ -

ಸಚಿವೋತ್ತಮನಾಗಿಯೂ ಇರುವ ಹನುಮಂತನು ಅರ್ಥಯುಕ್ತವಾದ, ಮಧುರವಾದ ಮಾತುಗಳನ್ನು ನಮ್ರತೆಯಿಂದ ಬಹು ಜಾಗ್ರತೆಯಾಗಿ ಹೀಗೆ ಅರಿಕೆ ಮಾಡುವನು. “ಎಲೈ ಶ್ರೀರಾಮಮೂರ್ತಿಯೇ! ಬುದ್ಧಿಯಲ್ಲಿ ಶ್ರೇಷ್ಠನೂ, ಕಾರ್ಯದಲ್ಲಿ ಸಮರ್ಥನೂ, ಮಾತುಗಾರರಲ್ಲಿ ಉತ್ತಮನೂ ಆದ ನಿನ್ನನ್ನು ಮೀರಿಸಲು ಬ್ರುಹಸ್ಪತಿಯೂ ಸಮರ್ಥನಲ್ಲವು. ಹೀಗಿರುವಾಗ ನನ್ನಂತಹರು ಮಾತನಾಡುವುದಂದರೇನು? ಸಲಹೆ ಹೇಳುವುದೆಂದರೇನು? ಶಕ್ಯವಿಲ್ಲವು. ಆದರೂ ಅರಿಕೆ ಮಾಡುವೆನು. ಈಗ ನಾನು ಕೇವಲ ವಾದಾರ್ಥವಾಗಿಯಲ್ಲ. ಮಂತ್ರಿಗಳ ಮೇಲಣ ಸಂಘರ್ಷದಿಂದಲ್ಲ ; ನಾನೇ ಶ್ರೇಷ್ಠನೆಂಬ ಬುದ್ಧಿಯಿಂದಲ್ಲ ; ದೊರೆಯೇ ! ನಾನು ಈಗ ಕಾರ್ಯಗೌರವದ ಸಲುವಾಗಿ ನನಗೆ ತೋಚಿದ ಒಂದೆರಡು ಮಾತುಗಳನ್ನು ಹೇಳುವೆನು. ॥೪೬–೫೦॥ ಈವರೆಗೂ ನಿನ್ನ ಮಂತ್ರಿಗಳು ಅರ್ಥಾನರ್ಥಗಳ ಸಲುವಾಗಿ ಹೇಳಿದ ಮಾತುಗಳಲ್ಲಿ ನಾನು ದೋಷವನ್ನೆಣಿಸುವುದಿಲ್ಲವು. ಅವುಗಳಲ್ಲಿ ಯಾವ ದೋಷವೂ ಇರುವುದಿಲ್ಲವು. ಪ್ರಭುವೇ!

ಋತೇ ನಿಯೋಗಾತ್ಸಾಮರ್ಥ್ಯಮವಬೋದ್ಧುಂ ನಶಕ್ಯತೇ । ಸಹಸಾ ವಿನಿಯೋಗೋಹಿ ದೋಷವಾನ್ಪ್ರತಿಭಾತಿ ಮಾ ॥ ೫೨ ॥ ಚಾರಪ್ರಣಿಹಿತಂ ಯುಕ್ತಂ ಯದುಕ್ತಂ ಸಚಿವೈಸ್ತವ । ಅರ್ಥಸ್ಯಾಽಸಂಭವಾತ್ತತ್ರ ಕಾರಣಂ ನೋಪಪದ್ಯತೇ ॥೫೩॥ ಅದೇಶಕಾಲೇ ಸಂಪ್ರಾಪ್ತಇತ್ಯಯಂ ಯದ್ವಿಭೀಷಣಃ । ವಿವಕ್ಷಾ ತತ್ರ ಮೇಽಸ್ತೀಯಂ ತಾಂ ನಿಬೋಧ ಯಥಾಮತಿ ॥ ೫೪ ॥ ಸ ಏಷ ದೇಶಃ ಕಾಲಶ್ಚ ಭವತೀತಿ ಯಥಾ ತಥಾ । ಪುರುಷಾತ್ಪುರುಷಂ ಪ್ರಾಪ್ಯ ತಥಾ ದೋಷಗುಣಾವಪಿ ॥೫೫॥ ದೌರಾತ್ಮ್ಯಂ ರಾವಣೇ

---

ಕಾರ್ಯಸಾಮರ್ಥ್ಯವನ್ನು, ಅವಬೋದ್ಧುಂ - ತಿಳಿಯುವುದಕ್ಕೆ, ಸಹಸಾ - ಜಾಗ್ರತೆಯಾಗಿ, ವಿನಿಯೋಗಃ - ವಿನಿಯೋಗವು, ಮಾ - ನನಗೆ, ದೋಷವಾ - ದೋಷಯುಕ್ತವಾಗಿ, ಪ್ರತಿಭಾತಿಹಿ - ತೋರುತ್ತದೆಯಷ್ಟೆ. ॥ ೫೨ ॥ ಚಾರಪ್ರಣಿಹಿತಂ-ಚಾರರನ್ನು ಕಳುಹಿಸಿಕೊಡುವಿಕೆಯು, ಯುಕ್ತಮಿತಿ-ಯುಕ್ತವೆಂದು, ಯತ್ - ಯಾವ ಮಾತು, ತವ - ನಿನ್ನ, ಸಚಿವೈಃ - ಮಂತ್ರಿಗಳಿಂದ, ಉಕ್ತಂ - ಹೇಳಲ್ಪಟ್ಟಿತೋ, ತತ್ರ - ಆ ಪಕ್ಷದಲ್ಲಿ, ಅರ್ಥಸ್ಯ - ಕಾರ್ಯದ, ಕಾರಣಂ - ಉಪಾಯವು, ನೋಪಪದ್ಯತೇ - ಯುಕ್ತವಲ್ಲ. ॥ ೫೩ ॥ ಅಯಂವಿಭೀಷಣಃ - ಈ ವಿಭೀಷಣನು, ಅದೇಶಕಾಲೇ - ಶತ್ರು ಪ್ರದೇಶದಲ್ಲಿಯೂ, ತನ್ನ ಪ್ರಭುವನ್ನು ಬಿಡಲನರ್ಹವಾದ ಕಾಲದಲ್ಲಿಯೂ, ಸಂಪ್ರಾಪ್ತೇತಿಯತ್ - ಬಂದಿದ್ದಾನೆ ಎಂಬದು ಯಾವದುಂಟೋ, ತತ್ರ - ಆ ಪಕ್ಷದಲ್ಲಿ, ಮೇ - ನನಗೆ, ಸಏಷಃ - ಅನೇ ಇದು, ದೇಶಃ - ದೇಶವು, ಕಾಲಶ್ಚ - ಕಾಲವು, ಯಥಾತಥಾ - ಯಥಾರ್ಥದಿಂದ, ಭವತಿ - ಆಗುತ್ತದೆ, ಇತಿ - ಇಂತೆಂದು, ಮೇ - ನನಗೆ, ಇಯಂವಿವಕ್ಷಾ - ಹೇಳಬೇಕೆಂಬ ಬುದ್ಧಿಯು, ಯಥಾಮತಿ - ನನ್ನಬುದ್ಧ್ಯನುಸಾರವಾಗಿ, ಅಸ್ತಿ - ಇದೆ, ತಾಂ - ಅದನ್ನು, ನಿಬೋಧ - ತಿಳಿದುಕೋ. ॥ ೫೪ ॥ ಪುರುಷಾತ್ - ಅಧಮಪುರುಷನಿಗಿಂತಲೂ, ಪುರುಷಂ - ಉತ್ತಮ ಪುರುಷನಾದ ನಿನ್ನನ್ನು, ಪ್ರಾಪ್ಯ - ಮನದಲ್ಲಿ ವಿಮರ್ಶೆಮಾಡಿ, ತಥಾ - ಹಾಗೆಯೇ, ದೋಷಗುಣಾವಪಿ - ನಿಮ್ಮಿಬ್ಬರಲ್ಲಿ ರಾವಣನಲ್ಲಿ ದೋಷವನ್ನೂ, ನಿನ್ನಲ್ಲಿ ಗುಣವನ್ನೂ, ಪ್ರಾಪ್ಯ - ತಿಳಿದು, ರಾವಣೇ - ರಾವಣನಲ್ಲಿ, ದೌರಾತ್ಮ್ಯಂ - ದುಷ್ಟಸ್ವಭಾವವನ್ನು, ತಥಾ - ಹಾಗೆಯೇ, ತ್ವಯಿ - ನಿನ್ನಲ್ಲಿ, ವಿಕ್ರಮಂಚ -

---

ರಾಜಕಾರ್ಯಗಳಲ್ಲಿ ನಿಯೋಗವಿಲ್ಲದಿದ್ದರೆ ಸಾಮರ್ಥವನ್ನು ತಿಳಿಯಲು ಶಕ್ಯವಾಗುವುದಿಲ್ಲವು. ಏನೊಂದೂ ವಿಚಾರ ಮಾಡದೆ ಇದ್ದಕ್ಕಿದ್ದಂತೆಯೇ ಹೂಡುವ ವಿನಿಯೋಗವು ದೋಷವಾಗಿಯೇ ಪರಿಣಮಿಸುವುದೆಂದು ನನಗೆ ತೋರುತ್ತದೆ. ಶರಭನು ಈ ವಿಭೀಷಣನಲ್ಲಿಗೆ ಗೂಢಚಾರನನ್ನು ಕಳುಹಿಸಬೇಕೆಂದು ಹೇಳಿದುದು ಯುಕ್ತವಾಗಿದ್ದರೂ, ಹಾಗೆ ಮಾಡುವುದರಿಂದ ಈಗ ಏನೂ ಪ್ರಯೋಜನವಿರುವುದಿಲ್ಲವಾದುದರಿಂದ ಅದು ಅಯುಕ್ತವೇ ಸರಿ. ವ್ಯಕ್ತಿಯು ಎದುರಿಗಿಲ್ಲದಿದ್ದರೆ ಚಾರಪ್ರೇಷಣವು ಸರಿಯೇ ಹೊರ್ತು, ಅವನು ಎದುರಿಗೇ ಇರುವಾಗ ಅದು ಸರಿಯೆನಿಸುವುದಿಲ್ಲವು. ಮಹಾ ಮೇಧಾವಿಯಾದ ಜಾಂಬವಂತನು, ಈ ವಿಭೀಷಣನು ಅದೇಶಕಾಲದಲ್ಲಿ ಬಂದಿರುವುದರಿಂದ ಶಂಕನೀಯನೆಂದು ಹೇಳಿದನಷ್ಟೆ. ಈ ವಿಚಾರದಲ್ಲಿ ನನಗೊಂದು ವಿವಕ್ಷೆಯಿರುವುದು. ಅದನ್ನು ಅರಿಕೆ ಮಾಡುವೆನು; ಲಾಲಿಸಬೇಕು. ಆಮೇಲೆ ನಿನ್ನಿಷ್ಟದಂತೆ ಮಾಡಬಹುದು. ವಿಭೀಷಣನು ನಿನ್ನಲ್ಲಿರುವ ಗುಣವನ್ನೂ, ತನ್ನ ಅಣ್ಣನಲ್ಲಿರುವ ದೋಷವನ್ನು ಕಂಡು ಈಗ ಇಲ್ಲಿ ಗೆಬಂದಿರುವನು. ಅವನು ಹೀಗೆ ಬರಬೇಕಾದುದಕ್ಕೆ ಇದೇ ದೇಶಕಾಲಗಳು. ಇವನು ತನ್ನ ಅಣ್ಣನಲ್ಲಿರುವ ದೌರಾತ್ಮ್ಯವನ್ನೂ,

ದೃಷ್ಟ್ವಾ ವಿಕ್ರಮಂ ಚ ತಥಾ ತ್ವಯಿ । ಯುಕ್ತಮಾಗಮನಂ ತಸ್ಯ ಸದೃಶಂ ತಸ್ಯ ಬುದ್ಧಿತಃ ॥ ೫೬ ॥ ಅಜ್ಞಾತರೂಪೈಃ ಪುರುಷೈಃ ಸ ರಾಜನ್! ಪೃಚ್ಛ್ಯತಾಮಿತಿ । ಯದುಕ್ತಮತ್ರ ಮೇ ಪ್ರೇಕ್ಷಾ ಕಾಚಿದಸ್ತಿ ಸಮೀಕ್ಷಿತಾ ॥ ೫೭ ॥ ಪೃಚ್ಛ್ಯಮಾನೋ ವಿಶಂಕೇತ ಸಹಸಾ ಬುದ್ಧಿಮಾನ್ವಚಃ । ತತ್ರ ಮಿತ್ರಂ ಪ್ರದುಷ್ಯೇತ ಮಿಥ್ಯಾ ಪೃಷ್ಟಂ ಸುಖಾಗತಂ ॥೫೮॥ ಅಶಕ್ಯಃ ಸಹಸಾ ರಾಜನ್ ಭಾವೋ ವೇತ್ತುಂ ಪರಸ್ಯ ವೈ । ಅಂತಃ ಸ್ವಭಾವೈರ್ಗೀತೈಸ್ತೈರ್ನೈಪುಣ್ಯಂ ಪಶ್ಯತಾ ಭೃಶಂ ॥೫೯॥ ನತ್ವಸ್ಯ ಬ್ರುವತೋ ಜಾತು

ಪರಾಕ್ರಮವನ್ನು, ದೃಷ್ಟ್ವಾ - ಕಂಡು, ಆಗಮನಂ - ಬರೋಣವು, ತಸ್ಯ - ಆ ವಿಭೀಷಣನ, ಬುದ್ಧಿತಃ - ಬುದ್ಧಿಗೆ, ಸದೃಶಂ - ಯೋಗ್ಯವಾದದ್ದು, (ಮತ್ತು) ಯುಕ್ತಂ - ಯುಕ್ತವು. ॥ ೫೫-೫೬ ॥ ಹೇ ರಾಜನ್ - ಎಲೈ ಅರಸೇ, ಅಜ್ಞಾತರೂಪೈಃ - ಗೂಢರೂಪವಾದ, ಪುರುಷೈಃ - ಮನುಷ್ಯರಿಂದ, ಸಃ - ಆ ವಿಭೀಷಣನು, ಪೃಚ್ಛ್ಯತಾಮಿತಿ - ಕೇಳಲ್ಪಡಲೆಂದು, ಯದುಕ್ತಂ - ಯಾವ ಮಾತು ಮೈಂದನಿಂದ ಹೇಳಲ್ಪಟ್ಟಿತೋ, ಅತ್ರ - ಈ ಮತದಲ್ಲಿ, ಮೇ - ನನಗೆ, ಕಾಚಿತ್ - ಒಂದು ಸಮೀಕ್ಷಿತಾ - ಯುಕ್ತಿಯು, ಅಸ್ತಿ - ಇರುವುದು. ॥ ೫೭ ॥ ಬುದ್ಧಿಮಾನ್ - ಮತಿವಂತನಾದವನು, ಪೃಚ್ಛ್ಯಮಾನಃ - ಕೇಳಲ್ಪಟ್ಟವನಾಗಿ, ಸಾಹಸಾ - ಜಾಗ್ರತೆಯಾಗಿ, ವಿಶಂಕೇತ - ಸಂದೇಹಿಸುವನು, ತತ್ರ - ಆ ಪ್ರಶ್ನೆಯಲ್ಲಿ, ಸುಖಾಗತಂ - ತನ್ನಲ್ಲಿ ದೋಷವಿಲ್ಲದ್ದರಿಂದ, ವಿಶ್ವಾಸದಿಂದ ಪ್ರಾಪ್ತನಾದ, ಮಿತ್ರಂ - ಸ್ನೇಹಿತನನ್ನು, ಮಿಥ್ಯಾಪೃಷ್ಟಂ - ಮೋಸದಿಂದ ಕೇಳಲ್ಪಟ್ಟವನನ್ನಾಗಿ, ಪ್ರದುಷ್ಯೇತ - ದೂಷಿಸಲ್ಪಡುವನು. ॥ ೫೮ ॥ ಹೇ ರಾಜನ್ - ಎಲೈ ಅರಸೇ, ಭೃಶಂ - ವಿಶೇಷವಾಗಿ, ನೈಪುಣ್ಯಂ-ನಿಪುಣತ್ವವನ್ನು, ಪಶ್ಯತಾ - ನೋಡುತ್ತಿರುವ ಪುರುಷನಿಂದ, ಅಂತಸ್ಸ್ವಭಾವೈಃ - ಹೊರಗೆ ನೋಡುವದಕ್ಕೆ ಪ್ರಸನ್ನನಾದ ಅರ್ಥವುಳ್ಳದಾದರೂ ಗೂಢಾಭಿಪ್ರಾಯವಾದ, ತೈರ್ಗೀತೈಃ - ಆ ಮಾತುಗಳಿಂದ, ಪರಸ್ಯ - ಇತರನ, ಭಾವಃ - ಅಭಿಪ್ರಾಯವು, ಸಹಸಾ - ಜಾಗ್ರತೆಯಾಗಿ, ವೇತ್ತುಂ - ತಿಳಿದುಕೊಳ್ಳಲು, ಅಶಕ್ಯೋವೈ - ಅಸಾಧ್ಯವಷ್ಟೆ. ॥ ೫೯ ॥ ಕಿಂತು - ಆದರೆ, ಬ್ರುವತಃ - ವಿಶೇಷ

ನಿನ್ನಲ್ಲಿರುವ ಪರಾಕ್ರಮವನ್ನೂ ಬುದ್ಧಿಪೂರ್ವಕವಾಗಿಯೇ ವಿಚಾರಮಾಡಿ ನೋಡಿ ನಿನ್ನಲ್ಲಿ ಶರಣೆಂದು ಬಂದಿರುವುದು ಬಹಳ ಯುಕ್ತವಾಗಿಯೇ ಇರುವುದು. ಇದು ಅವನ ಧರ್ಮಬುದ್ಧಿಗೆ ತಕ್ಕುದೇ ಆಗಿರುವುದು. ಶ್ರೀರಾಮಾ! ಕಪಿಶ್ರೇಷ್ಠನಾದ ಮೈಂದನು ಅಜ್ಞಾತರೂಪರಾದವರನ್ನು, "ಎಲ್ಲಿಂದ ಬಂದೆ? ಏತಕ್ಕೆ ಬಂದೆ? ನೀನು ಯಾರು?" ಎಂಬುದಾಗಿ ಗೂಢಚಾರರಿಂದ ಕೇಳಿಸಬೇಕು ಎಂದ ಮಾತು ಸಮಂಜಸವಾಗಿಯೇ ಇರುವುದು. ॥ ೫೧-೫೫ ॥ ಆದರೆ ಈ ವಿಷಯದಲ್ಲಿ ನಾನು ಕಂಡ ಒಂದು ವಿಷಯವಿರುವುದು. ಅದನ್ನು ಕೇಳಬೇಕು. ಬುದ್ಧಿಶಾಲಿಯಾಗಿರುವವನು ಈ ರೀತಿ ಕೇಳಿದಲ್ಲಿ ಸಂಶಯಪಡಬಹುದು. ಅದರಲ್ಲೂ ಇವನು ನಮ್ಮಲ್ಲಿಗೆ ಮಿತ್ರನಾಗಿ ನಮ್ಮ ಹಿತಕ್ಕಾಗಿ ಬಂದಿದ್ದರೆ ಇಂತಹ ಮಾತುಗಳನ್ನು ಕೇಳುವುದು ಕೇವಲ ದೋಷಯುಕ್ತವಾಗುವುದು. ದೊರೆಯೇ! ಲೋಕದಲ್ಲಿ ಇತರರ ಭಾವವನ್ನು ಸ್ವರಭೇದದಿಂದಲ್ಲದೆ ಮತ್ತಾವ ವಿಧದಿಂದಲೂ ತಿಳಿಯಲಾಗುವುದಿಲ್ಲವು. ಅದಲ್ಲಿರಯೂ ನಿಪುಣರಾದವರು ಸೂಕ್ಷ್ಮವಾಗಿ ನೋಡುವುದರಿಂದ ಮಾತ್ರವೇ ಆಭಾವವು ತಿಳಿಯುವುದು. ಈ ವಿಭೀಷಣನು ಮಾತನಾಡುವಾಗ ಇವನ ಮುಖದಲ್ಲಿ ಯಾವ ವಿಧವಾದ ವಿಕಾರವೂ ಇರಲಿಲ್ಲವು. ಅದರಲ್ಲಿ ಯಾವ ದುರಭಿಪ್ರಾಯವೂ ಕಾಣ

ಲಕ್ಷ್ಯತೇ ದುಷ್ಟಭಾವತಾ । ಪ್ರಸನ್ನಂ ವದನಂಚಾಪಿ ತಸ್ಮಾನ್ಮೇ ನಾಸ್ತಿ ಸಂಶಯಃ ||೬೦|| ಅಶಂಕಿತಮತಿಸ್ಸ್ವಸ್ಥೋ ನಶಠಃ ಪರಿಸರ್ಪತಿ । ನಚಾಽಸ್ಯ ದುಷ್ಟಾ ವಾಕ್ಚಾಪಿ ತಸ್ಮಾನ್ನಾಸ್ತೀಹ ಸಂಶಯಃ || ೬೧ || ಆಕಾರಶ್ಛಾದ್ಯಮಾನೋಽಪಿ ನಶಕ್ಯೋ ವಿನಿಗೂಹಿತುಂ । ಬಲಾದ್ಧಿ ವಿವೃಣೋತ್ಯೇವ ಭಾವಮಂತರ್ಗತಂ ನೃಣಾಂ || ೬೨ || ದೇಶಕಾಲೋಪಪನ್ನಂಚ ಕಾರ್ಯಂ ಕಾರ್ಯವಿದಾಂವರ! । ಸಫಲಂ ಕುರುತೇ ಕ್ಷಿಪ್ರಂ ಪ್ರಯೋಗೇಣಾಭಿಸಂಹಿತಂ || ೬೩ || ಉದ್ಯೋಗಂ ತವ ಸಂಪ್ರೇಕ್ಷ್ಯ ಮಿಥ್ಯಾವೃತ್ತಂ

---

ವಾಗಿ ಹೇಳುವೆ, ಅಸ್ಯ - ಇವನಿಗೆ, ದುಷ್ಟಭಾವತಾ - ದುಷ್ಟಾಭಿಪ್ರಾಯವಿರುವಿಕೆಯು, ಜಾತು - ಯಾವಾಗಲೂ, ನಲಕ್ಷ್ಯತೇ - ಕಂಡುಬರುವದಿಲ್ಲ, (ಅಸ್ಯ - ಇವನ), ವದನಂಚಾಪಿ - ಮುಖವೂ ಕೂಡ, ಪ್ರಸನ್ನಂ - ಸೌಮ್ಯವಾಗಿದೆ, ತಸ್ಮಾತ್ - ಆ ಕಾರಣದಿಂದ, ಮೇ - ನನಗೆ, ಸಂಶಯಃ - ಸಂದೇಹವು, ನಾಸ್ತಿ - ಇಲ್ಲವು. ||೬೦|| ಕಿಂಚ - ಮತ್ತೂ, ಅಶಂಕಿತಮತಿಃ - ಶಂಕಿಸದಿರುವ ಬುದ್ಧಿಯುಳ್ಳವನಾಗಿ, ಸ್ವಸ್ಥಃ - ಸ್ವಸ್ಥಚಿತ್ತನಾಗಿ, ಪರಿಸರ್ಪತಿ - ಬರುತ್ತಿದ್ದಾನೆ. (ಅತಃ - ಆದ್ದರಿಂದ), ಶಠಃ - ಶಠನು, ನ - ಅಲ್ಲವು, ಅಸ್ಯ - ಇವನ, ವಾಕ್ಚಾಪಿ - ವಾಕ್ಯೂ ಕೂಡ, ನದುಷ್ಟಾ - ದುಷ್ಟವಾದದ್ದಲ್ಲ, ತಸ್ಮಾತ್ - ಆದ್ದರಿಂದ, ಇಹ - ಈ ವಿಭೀಷಣನನ್ನು ಸೇರಿಸಿಕೊಳ್ಳುವ ವಿಷಯದಲ್ಲಿ (ನನಗೆ), ನಸಂಶಯಃ - ಸಂದೇಹವಿಲ್ಲವು. || ೬೧ || ಆಕಾರಃ - ಮುಖವಿಕಾರವು, ಛಾದ್ಯಮಾನೋಽಪಿ - ಮರೆಸಿಕೊಂಡರೂ, ವಿನಿಗೂಹಿತುಂ - ಅಡಗಿಸಿಕೊಳ್ಳುವದಕ್ಕೆ, ನಶಕ್ಯಃ - ಆಗತಕ್ಕುದಲ್ಲ, ಹಿ - ಯಾವ ಕಾರಣದಿಂದ, (ಸಃ - ಆ ಕಾರಣವು), ನೃಣಾಂ - ಮನುಷ್ಯರ, ಅಂತರ್ಗತಂ - ಮನಸ್ಸಿನಲ್ಲಿರುವ, ಭಾವಂ - ಅಭಿಪ್ರಾಯವನ್ನು, ಬಲಾತ್ - ಬಲಾತ್ಕಾರದಿಂದ, ವಿವೃಣೋತ್ಯೇವ - ಸ್ಪಷ್ಟವನ್ನೇ ಮಾಡುವದು. || ೬೨ || ಕಿಂಚ - ಇಷ್ಟುಮಾತ್ರವಲ್ಲದೆ, ಕಾರ್ಯವಿದಾಂ - ಕಾರ್ಯವನ್ನು ತಿಳಿದವರಲ್ಲಿ, ವರ - ಉತ್ತಮನೇ, ದೇಶಕಾಲೋಪಪನ್ನಂ - ದೇಶದಿಂದಲೂ, ಕಾಲದಿಂದಲೂ, ಯುಕ್ತವಾದ, ಪ್ರಯೋಗೇಣ - ಚನ್ನಾಗಿ ಮಾಡಿದ ಅನುಷ್ಠಾನದಿಂದ, ಅಭಿಸಂಹಿತಂ - ಸಂಪಾದಿಸಲ್ಪಟ್ಟ, ಕಾರ್ಯಂ - ಕೆಲಸವು, ಸಫಲಂ - ತನಗೆ ಉಚಿತವಾದ ಫಲವನ್ನು, ಕುರುತೇ - ಉಂಟುಮಾಡುತ್ತದೆ. || ೬೩ || ತವ - ನಿನ್ನ, ಉದ್ಯೋಗಂ - ಉದ್ಯಮವನ್ನು, ಮಿಥ್ಯಾವೃತ್ತಂ - ಸುಳ್ಳು ನಡತೆಯುಳ್ಳ, ರಾವಣಂಚ - ರಾವಣನನ್ನೂ, ಸಂಪ್ರೇಕ್ಷ್ಯ - ಕಂಡು, ವಾಲಿನಃ - ವಾಲಿಯ, ವಧಂಚ - ಸಂಹಾರ

---

ಲಿಲ್ಲವು. ಮೇಲಾಗಿ ಇವನ ಮುಖವು ಪ್ರಸನ್ನವಾಗಿಯೇ ಇರುವುದು. ಆದುದರಿಂದ ಇವನ ವಿಷಯದಲ್ಲಿ ನನಗೆ ಯಾವ ಬಗೆಯ ಸಂಶಯವೂ ಇರುವುದಿಲ್ಲವು. || ೫೭. ೬೦ || ನನಗೆ ಇವನಲ್ಲಿ ಸಂಶಯವು ಬಾರದಿರುವುದಕ್ಕೆ ಮತ್ತೊಂದು ಕಾರಣವೂ ಇರುವುದು. ಗೂಢಾಭಿಪ್ರಾಯವುಳ್ಳವನು ಯಾವ ಶಂಕೆಯೂ ಇಲ್ಲದೆ ಸ್ವಸ್ಥಚಿತ್ತನಾಗಿ ಬಳಿಸಾರುವುದಿಲ್ಲವು. ಇವನಾಡಿದ ಮಾತುಗಳಲ್ಲಿ ದುಷ್ಟತೆಯಿರುವುದಿಲ್ಲವು. ಇವನು ಮುಖವಿಕಾರವನ್ನು ಮುಚ್ಚಿಕೊಂಡು ಬಂದಿರುವುದಾಗಿ ಮತ್ತೆ ಕೆಲವರು ನುಡಿದರಷ್ಟೆ. ಯಾರಿಂದಲೂ ಹಾಗೆ ಮಾಡಲು ಸಾಧ್ಯವಾಗುವುದಿಲ್ಲವು. ಮಾನವರ ಅಂತರಂಗದಲ್ಲಿರುವ ಭಾವವನ್ನು ಆ ವಿಕಾರವೂ ಬಲಾತ್ಕಾರದಿಂದ ವ್ಯಕ್ತಗೊಳಿಸುತ್ತದೆಯೆಂಬುದರಲ್ಲಿ ಸಂಶಯವಿಲ್ಲವು. ಎಲೈ ಕಾರ್ಯದ ಮರ್ಮವನ್ನರಿತವನೇ ! ದೇಶಕಾಲೋಪಪನ್ನವಾದ ಕಾರ್ಯವು ಪ್ರಯೋಗದೊಡಗೂಡಿದರೆ ಬಹು ಬೇಗನೆಯೇ ಸಫಲವಾಗುವುದು. ಎಲೈ ಪ್ರಭುವೇ ! ಈ ವಿಭೀಷಣನು, ನೀನು

ಚ ರಾವಣಂ । ವಾಲಿನಶ್ಚ ವಧಂ ಶ್ರುತ್ವಾ ಸುಗ್ರೀವಂಚಾಭಿಷೇಚಿತಂ ॥ ೬೪ ॥ ರಾಜ್ಯಂ ಪ್ರಾರ್ಥಯಮಾನಶ್ಚ ಬುದ್ಧಿಪೂರ್ವಮಿಹಾಗತಃ । ಏತಾವತ್ತು ಪುರಸ್ಕೃತ್ಯ ಯುಜ್ಯತೇ ತತ್ರ ಸಂಗ್ರಹಃ ॥ ೬೫ ॥ ಯಥಾಶಕ್ತಿ ಮಯೋಕ್ತಂತು ರಾಕ್ಷಸಸ್ಯಾರ್ಜವಂ ಪ್ರತಿ । ತ್ವಂ ಪ್ರಮಾಣಂತು ಶೇಷಸ್ಯ ಶ್ರುತ್ವಾ ಬುದ್ಧಿಮತಾಂವರ !'' ॥ ೬೬ ॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಸಪ್ತದಶಸ್ಸರ್ಗಃ



ವನ್ನೂ, ಅಭಿಷೇಚಿತಂ - ಪಟ್ಟಾಭಿಷಿಕ್ತನಾದ, ಸುಗ್ರೀವಂಚ - ಸುಗ್ರೀವನನ್ನೂ, ಶ್ರುತ್ವಾ - ಕೇಳಿ, ರಾಜ್ಯಂ - ರಾಜ್ಯವನ್ನು, ಪಾರ್ಥಯಮಾನಶ್ಚ - ಪ್ರಾರ್ಥಿಸುವವನಾಗಿ, ಬುದ್ಧಿಪೂರ್ವಂ - ಮನಃಪೂರ್ವಕವಾಗಿಯೇ, ಇಹ - ಇಲ್ಲಿಗೆ, ಆಗತಃ - ಬಂದನು. ॥ ೬೪ ॥ ಬುದ್ಧಿಮತಾಂ - ಬುದ್ಧಿವಂತರಲ್ಲಿ, ವರ - ಉತ್ತಮನೇ, ಏತಾವತ್ - ಇಷ್ಟುಮಾತ್ರವನ್ನು, ಪುರಸ್ಕೃತ್ಯ - ಮುಂದುಮಾಡಿಕೊಂಡು, ತತ್ರ - ಆ ವಿಭೀಷಣನ ವಿಷಯದಲ್ಲಿ, ಸಂಗ್ರಹಃ - ಸಂಗ್ರಹವು, ಯುಜ್ಯತೇ - ಯುಕ್ತವಾಗುತ್ತದೆ, ಕಿಂತು - ಆದರೆ, ರಾಕ್ಷಸಸ್ಯ - ವಿಭೀಷಣನ, ಆರ್ಜವಂಪ್ರತಿ - ಋಜುತ್ವವನ್ನು ಕುರಿತು, ಯಥಾಶಕ್ತಿ - ಶಕ್ತಿಯಿದ್ದಮಟ್ಟಿಗೆ, ಮಯಾ - ನನ್ನಿಂದ, ಉಕ್ತಂ - ಹೇಳಲ್ಪಟ್ಟಿತು, ಶ್ರುತ್ವಾ - ಕೇಳಿ, ಶೇಷಸ್ಯತು - ಮಿಕ್ಕಿದ್ದಕ್ಕಾದರೆ, ತ್ವಂ - ನೀನು, ಪ್ರಮಾಣಂ - ಪ್ರಮಾಣವು. ॥ ೬೫-೬೬ ॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಸಪ್ತದಶಸ್ಸರ್ಗಃ.



ಯುದ್ಧೋದ್ಯೋಗದಲ್ಲಿ ತೊಡಗಿರುವುದನ್ನೂ, ತನ್ನ ಅಣ್ಣನಾದ ರಾವಣನು ದುರ್ವೃತ್ತನಾದುದನ್ನೂ, ಮಹಾ ಪರಾಕ್ರಮಿಯಾದ ವಾಲಿಯು ನಿನ್ನಿಂದ ಹತನಾದುದನ್ನೂ, ಸುಗ್ರೀವನು ವಾನರರಾಜ್ಯದಲ್ಲಿ ಅಭಿಷಿಕ್ತನಾದುದನ್ನೂ ನೋಡಿ, ತಾನೂ ರಾಜ್ಯವನ್ನು ಕೋರಿ ಬುದ್ಧಿಪೂರ್ವಕವಾಗಿಯೇ ಇಲ್ಲಿಗೆ ಬಂದಿರುವನು. ಇಷ್ಟುಮಾತ್ರ ಮನಸ್ಸಿಗೆ ತಂದುಕೊಂಡು ಇವನನ್ನು ಸೇರಿಸಿಕೊಳ್ಳುವುದು ನನಗೆ ಯುಕ್ತವಾಗಿ ತೋರುವುದು. ಎಲೈ ಬುದ್ಧಿವಂತರಲ್ಲಿ ಶ್ರೇಷ್ಠನಾದ ಶ್ರೀರಾಮಮೂರ್ತಿಯೇ! ಈ ವಿಭೀಷಣನ ಆರ್ಜವವನ್ನು ಕುರಿತು ನನ್ನ ಶಕ್ತ್ಯನುಸಾರವಾಗಿ ಹೇಳಿರುವೆನು. ಇದರಮೇಲೆ ಇವನನ್ನುಸೇರಿಸಿಕೊಳ್ಳುವುದಕ್ಕೂ, ಬಿಡುವುದಕ್ಕೂ ನೀನೇ ಪ್ರಮಾಣವು'' ಎಂದು ಹೇಳಿದನು. ॥ ೬೧-೬೬ ॥

ಇಂತಿದು ವಿಭೀಷಣಾಗಮನ-ಶ್ರೀರಾಮಕೃತ ಮಂತ್ರಾಲೋಚನಾ ವೃತ್ತಾಂತ-
ಎಂಬ ಹದಿನೇಳನೆಯ ಸರ್ಗವು ಸಮಾಪ್ತವಾದುದು.



# ಯುದ್ಧಕಾಂಡೇ ಅಷ್ಟಾದಶಸ್ಸರ್ಗಃ

¶ ಅಥ ರಾಮಃ ಪ್ರಸನ್ನಾತ್ಮಾ ಶ್ರುತ್ವಾ ವಾಯುಸುತಸ್ಯ ಹ। । ಪ್ರತ್ಯಭಾಷತ ದುರ್ಧರ್ಷಃ ಶ್ರುತವಾನಾತ್ಮನಿಸ್ಥಿತಂ ॥೧॥ ☸ "ಮಮಾಪಿತು ವಿವಕ್ಷಾಸ್ತಿ ಕಾಚಿತ್ಪ್ರತಿ ವಿಭೀಷಣಂ । ಶ್ರೋತುಮಿಚ್ಛಾಮಿ ತತ್ಸರ್ವಂ ಭವದ್ಭಿಃ ಶ್ರೇಯಸಿ ಸ್ಥಿತೈಃ ॥ ೨ ॥

ಅಥ - ಅನಂತರದಲ್ಲಿ, ರಾಮಃ - ಶ್ರೀರಾಮನು, ವಾಯುಸುತಸ್ಯ - ವಾಯುಪುತ್ರನಾದ ಆಂಜನೇಯನ, (ವಾಕ್ಯಂ - ಮಾತನ್ನು), ಶ್ರುತ್ವಾ - ಕೇಳಿ. ಶ್ರುತವಾನ್ - (ಗೋ + ಮ) ವಸಿಷ್ಠಾದಿಗಳಿಂದ ಕಪೋತ ಮಂಡೂಕಾದಿ ಉಪಾಖ್ಯಾನಗಳನ್ನು ಕೇಳಿದವನಾದಕಾರಣ, ದುರ್ಧರ್ಷಃ - ಪೂರ್ವಪಕ್ಷಗಳಿಂದ ಚಲಿಸಲಸಾಧ್ಯನಾಗಿ, ಪ್ರಸನ್ನಾತ್ಮಾ - ನಿರ್ಮಲಚಿತ್ತನಾಗಿ, ಆತ್ಮನಿಸ್ಥಿತಂ - ಮನಸ್ಸಿನಲ್ಲಿರುವ ಮಾತನ್ನು, (ತಿ) - ತನ್ನ ಮತವನ್ನು, ಪ್ರತ್ಯಭಾಷತ - ಹೇಳಿದನು. ॥ ೧ ॥ ಮಮಾಪಿ - ನನಗೂ ಕೂಡ, ವಿಭೀಷಣಂಪ್ರತಿ - ವಿಭೀಷಣನನ್ನು ಕುರಿತು, ಕಾಚಿತ್ - ನಿಮ್ಮ ಪಕ್ಷಗಳ ಸಂಗಡ ಎಣಿಸಬಾರದ, ವಿವಕ್ಷಾ-ಹೇಳಲಿಚ್ಛೆಯೂ, ಅಸ್ತಿ-ಇದೆ, ತತ್ಸರ್ವಂ-ಅದನ್ನೆಲ್ಲಾ, ಶ್ರೇಯಸಿಸ್ಥಿತೈಃ-ನನ್ನ ಶ್ರೇಯಸ್ಸಿನಲ್ಲಿಯೇ ಆಸಕ್ತರಾದ, ಭವದ್ಭಿಃ - ನಿಮ್ಮಿಂದ, ಶ್ರೋತುಂ - ಕೇಳುವದಕ್ಕಾಗಿ, ಇಚ್ಛಾಮಿ-ಅಪೇಕ್ಷಿಸುತ್ತೇನೆ. ॥ ೨ ॥ ಮಿತ್ರಭಾವೇನ-ಮೈತ್ರಿಯಿಂದ, ಸಂಪ್ರಾಪ್ತಂ-ಬಂದವನನ್ನು, ಕಥಂಚನ - ಏನೇ ಆದರೂ, ನತ್ಯಜೇಯಂ - ಬಿಡಲಾರೆನು, ತಸ್ಯ - ಆವನಿಗೆ, ದೋಷೋಯದ್ಯಪಿ -

ಆಮೇಲೆ ಮಹಾ ಪಂಡಿತನೂ, ದುರ್ಧರ್ಷನೂ ಆದ ಶ್ರೀರಾಮಮೂರ್ತಿಯು ಆಂಜನೇಯನು ಹೇಳಿದ ಮಾತುಗಳನ್ನು ಕೇಳಿ, ಪ್ರಸನ್ನಮನಸ್ಕನಾಗಿ, ತನ್ನ ಮನಸ್ಸಿನಲ್ಲಿದ್ದ ಅಭಿಪ್ರಾಯವನ್ನು ಈ ರೀತಿ ಹೇಳುವನು:—" ಎಲೈ ವಾನರರೇ ! ನನಗೂ ವಿಭೀಷಣನ ವಿಷಯದಲ್ಲಿ ಕೆಲವು ಮಾತುಗಳನ್ನು ಹೇಳಬೇಕೆಂಬ ಅಪೇಕ್ಷೆಯಿರುವುದು. ಅವೆಲ್ಲವನ್ನೂ, ನನ್ನ ಶ್ರೇಯಸ್ಸನ್ನೇ ಕೋರುವ ನೀವೆಲ್ಲರೂ ಕೇಳಬೇಕೆಂದು ಕೋರುತ್ತೇನೆ. ಆದುದರಿಂದ ನಾನೀಗ ಹೇಳುವುದೆಲ್ಲವನ್ನೂ ಚೆನ್ನಾಗಿ ಕೇಳಿ ವಿಚಾರ ಮಾಡಬೇಕು. ವಿಭೀಷಣನಲ್ಲಿ ಎಷ್ಟೇ ದೋಷಗಳಿದ್ದರೂ ಶರಣಾಗತನಾಗಿ ಬಂದಿರುವುದರಿಂದ ಅವನನ್ನು ನಾನೆಂದಿಗೂ ಪರಿಗ್ರಹಿ

¶ ಹೀಗೆ ಸುಗ್ರೀವಾದಿಗಳು ತಂತಮ್ಮ ಅಭಿಪ್ರಾಯಗಳನ್ನು ಪ್ರತಿಪಾದಿಸಿದ ತರುವಾಯ ಶ್ರೀರಾಮನು ತನ್ನ ಅಭಿಮತವನ್ನು ಹೇಳಲುಪಕ್ರಮಿಸುವನು.

ಪ್ರಸನ್ನಾತ್ಮಾ - ಪ್ರಸನ್ನಚಿತ್ತನಾದ (ಎಂದರೆ, ಸುಗ್ರೀವಾದಿಗಳ ಮಾತುಗಳಿಂದ ಮನಸ್ಸು ಕಲುಷಿತವಾದರೂ, ಹನುಮದ್ವಾಕ್ಯದಿಂದ ಪ್ರಸನ್ನಚಿತ್ತನಾದ) ಎಂದು ಅರ್ಥ.

☸ ಇಲ್ಲಿ, ರಾಮನು ಎಲ್ಲರ ಅಭಿಪ್ರಾಯಕ್ಕೂ ವಿರೋಧವಾಗಿ ತಾನು ಆಕ್ಷೇಪಣೆ ಮಾಡಿದರೆ ಎಲ್ಲರೂ ವ್ಯಾಕುಲಚಿತ್ತರಾದಾರೆಂದು ಶಂಕಿಸಿ ಅವರೆಲ್ಲರನ್ನು ಶ್ಲಾಘಿಸುವನು.

‡ ಮಿತ್ರಭಾವೇನ ಸಂಪ್ರಾಪ್ತಂ ನತ್ಯಜೇಯಂ ಕಥಂಚನ ।
ದೋಷೋ ಯದ್ಯಪಿ ತಸ್ಯಸ್ಯಾತ್ಸತಾಮೇತದಗರ್ಹಿತಂ ॥ ೩ ॥

ದೋಷವಿದ್ದರೂ, ಸ್ಯಾತ್ - ಇರಲಿ, ಏತತ್ - ಈ ಶರಣಾಗತರಾದ ದುಷ್ಟಜನರ ಪರಿಗ್ರಹಣವೂ, ಸತಾಂ - ಸಾಮಾನ್ಯವಿಶೇಷ ಶಾಸ್ತ್ರಗಳನ್ನರಿತವರಿಗೆ, ಅಗರ್ಹಿತಂ - ಶ್ಲಾಘ್ಯವಾದದ್ದು. ॥ ೩ ॥ ಅಥ - ಬಳಿಕ, ಹರಿಪುಂಗವಃ - ವಾನರಶ್ರೇಷ್ಠನಾದ, ಸುಗ್ರೀವಃ - ಸುಗ್ರೀವನು, ತದ್ವಾಂಕ್ಯಂತು - ಆ ಮಾತ

ಸದೆ ಇರುವುದಿಲ್ಲವು. ಹೀಗೆ ಶರಣಾಗತನೆಂಥವನೇ ಆಗಲಿ, ಅವನನ್ನು ಸಂರಕ್ಷಿಸುವುದು ಹಿರಿಯರಿಗೆ–ಸತ್ಪುರುಷರಿಗೆ–ಬಹಳ ಪೂಜ್ಯವಾದುದು ; ಗರ್ಹ್ಯವಾದುದಲ್ಲವು. ॥ ೧–೩ ॥

‡ ಇಲ್ಲಿನ ವಿಶೇಷಾರ್ಥವು:—ಹೀಗೆ ಶ್ರೀರಾಮಮೂರ್ತಿಯು ಮಂತ್ರಿಗಳನ್ನು ಸುಮುಖರನ್ನಾಗಿ ಮಾಡಿಕೊಂಡು ಸ್ವಸ್ವಭಾವವನ್ನು ಪ್ರಕಟಗೊಳಿಸುವ ವ್ಯಾಜದಿಂದ, ಸ್ವಮತವನ್ನು ಸಕಾರಣವಾಗಿ, "ಮಿತ್ರಭಾವೇನ" ಎಂಬ ಶ್ಲೋಕದಿಂದ ತೋರಿಸುವನು.

ಸುಗ್ರೀವಾದಿಗಳ ಅಭಿಪ್ರಾಯಗಳಲ್ಲಿ, "ವಿಭೀಷಣನು ದೋಷಯುಕ್ತನಾದುದರಿಂದ ಅಪರಿಗ್ರಾಹ್ಯನು" ಎಂಬ ಹೇತುಸಾಧ್ಯಗಳೆರಡೂ ದುಷ್ಟಗಳೇ! ಹನುಮಂತನ ಅಭಿಪ್ರಾಯವು ಸಮೀಚೀನವಾದುದಾದರೂ, "ಇವನು ನಿರ್ದುಷ್ಟನೇ" ಎಂದು ಅವನು ಹೇಳಿರುವ ಕಾರಣವೂ ಅಸಮೀಚೀನವಾದುದೇ. ಆದರೆ ವಿಭೀಷಣನು, "ಶರಣಾಗತೋಽಹಂ" ಎಂದು ಹೇಳಿರುವುದೇ ಅವನ ಪರಿಗ್ರಹದಲ್ಲಿ ಮುಖ್ಯ ಹೇತುವೆಂಬ ಅಭಿಪ್ರಾಯದಿಂದಲೇ, "ಮಿತ್ರಭಾವೇನ ಸಂಪ್ರಾಪ್ತಂ" ಎಂಬ ಹೇತುವನ್ನು ನಿರ್ದೇಶಿಸುವನು. ಮಿತ್ರಭಾವೇನ - ವಾಸ್ತವವಾಗಿ ಮಿತ್ರನಲ್ಲದಿದ್ದರೂ, ಮಿತ್ರತ್ವಾಭಿನಯಮಾತ್ರದಿಂದ ಎಂದು ಅರ್ಥ. ಮಿತ್ರಭಾವವೆಂದರೆ ಶರಣಾಗತತ್ವವೆಂದು ಅರ್ಥ ಮಾಡಬೇಕು. ವಿಭೀಷಣನು, "ರಾಘವಂ ಶರಣಂ ಗತಃ" "ಶರಣ್ಯಂ ಶರಣಂ ಗತಃ" ಎಂದು ಹಿಂದೆಯೂ, ಮುಂದೂ ಹೇಳಿರುವುದರಿಂದ ಹೀಗೆ ಅರ್ಥ ಮಾಡುವುದೇ ಇಲ್ಲಿ ಸರಿ. ಮಿಕ್ಕ ಸ್ಥಳಗಳಲ್ಲಿಯೂ, "ವಿದಿತಸ್ಸಹಿಧರ್ಮಜ್ಞ ಶ್ಶರಣಾಗತವತ್ಸಲಃ" ಎಂದು "ಶರಣಾಗತಿ" ಶಬ್ದದಿಂದಲೇ ತನ್ನ ಮಾತನ್ನು ಉಪಕ್ರಮಿಸಿ, "ತೇನ ಮೈತ್ರೀಭವತು ತೇ" ಎಂದು ಮೈತ್ರೀ ಶಬ್ದದಿಂದ ಮುಗಿಸಿರುವುದರಿಂದ ಈ ಅರ್ಥವು ಸರಿಯಾಗಿ ಕೂಡುತ್ತದೆ. ಅಥವಾ, ಶ್ರೀರಾಮನು ತನ್ನಲ್ಲಿ ಶರಣಾಗತರಾಗಿ ಬಂದವನಲ್ಲಿ ತನಗಿರುವ ಗೌರವದಿಂದ ಮಿತ್ರ ಶಬ್ದವನ್ನು ಪ್ರಯೋಗಿಸಿರುವನೆಂದೂ ಹೇಳಬಹುದು. "ನತ್ಯಜೇಯಂ" ಬಿಡಲು ಶಕ್ತನಾಗಲಾರೆನು. "ನಾನು ಸರ್ವಶಕ್ತನಾಗಿದ್ದರೂ, ಶರಣಾಗತ ಶಬ್ದಶ್ರವಣಮಾತ್ರದಿಂದ ಇವನನ್ನು ತ್ಯಜಿಸಲು ನನಗೆ ಶಕ್ತಿಸಂಭಾವನೆಯೇ ಇರುವುದಿಲ್ಲವು" ಎಂದು ತಾತ್ಪರ್ಯವು. ಕಥಂಚನ - ಕಂಡದ್ದೂ, ಕಾಣದ್ದೂ ಆದ ನೂರಾರು ಅನರ್ಥಗಳೇ ಇವನಲ್ಲಿದ್ದರೂ, ಇವನನ್ನು ಪರಿಗ್ರಹಿಸುವುದರಲ್ಲಿ ಮಿತ್ರರೆಲ್ಲರೂ ಸಮ್ಮತಿಸದಿದ್ದರೂ, ನನ್ನ ಪ್ರಾಣಪರಿತ್ಯಾಗವೇ ಘಟಿಸಿಬಿಟ್ಟರೂ, ಹೇಗೇ ಆದರೂ, ಏನೇ ಆದರೂ ನಾನು ಇವನನ್ನು ಬಿಡಲಾರೆನು. "ದೋಷೋ ಯದ್ಯಪಿತಸ್ಯ ಸ್ಯಾತ್" ಸುಗ್ರೀವಾದಿಗಳು ಹೇಳಿದ ದೋಷಗಳು ಇವನಲ್ಲಿರುವುದಿಲ್ಲ. ಅಥವಾ, ಅವರು ಹೇಳಿದುದಕ್ಕಿಂತಲೂ ಹೆಚ್ಚಾದ ದೋಷಗಳೇ ಇವನಲ್ಲಿರಲಿ. ಹಾಗಾದರೂ ನಾನು ಅಶಕ್ಯವಾದುದನ್ನು (ಶರಣಾಗತ ಸಂರಕ್ಷಣೆಯನ್ನು ಬಿಟ್ಟು, ಪರಿತ್ಯಾಗವನ್ನು) ಹೇಗೆತಾನೇ ಮಾಡಲಿ ಎಂದರ್ಥವು. "ಸ್ಯಾಚ್ಛಬ್ದ" ಸ್ವಾರಸ್ಯವು:—"ದುಷ್ಟನಾದರೂ ಶರಣಾಗತ ಶಬ್ದಪ್ರಯೋಗ ಮಾಡಿದವನನ್ನು ನಾನು ಪರಿಗ್ರಹಿಸಿದೆನೆಂದು ನನಗೆ ಬಹಳವಾದ ಕೀರ್ತಿಯೇ ಬರುವುದು" ಎಂದರೆ, "ದುಷ್ಟನಲ್ಲದವನನ್ನು ಪರಿಗ್ರಹಿಸುವುದರಿಂದ ಅಷ್ಟೇನೂ ಗುಣವಿಲ್ಲ. ದುಷ್ಟನಾದವನನ್ನು ಪರಿಗ್ರಹಿಸುವುದರಿಂದ ನನ್ನಲ್ಲಿರುವ ಶರಣಾಗತರಕ್ಷಣ ಧರ್ಮವು ಉತ್ತೇಜಿತವಾಗುವುದು" ಎಂದು ಭಾವವು. "ಕರುಣೆಯಿಂದ ದುಷ್ಟನನ್ನು ಪರಿಗ್ರಹಿಸಿದರೆ, ಶಿಷ್ಟರಿಗೆ ತಿರಸ್ಕಾರವಾಗುವುದಿಲ್ಲವೇ ?" ಎಂದರೆ, "ಸತಾಮೇತದಗರ್ಹಿತಂ" ಶಿಷ್ಟರಾದವರಿಗೆ, ದುಷ್ಟರಾದರೂ ಶರಣಾಗತರಾದವರನ್ನು ಸಂರಕ್ಷಿಸುವುದೆಂಬುದು ಅಗರ್ಹಿತವಾದುದು ; ಅಲ್ಲದೆ ಪರಮಪೂಜ್ಯವಾದದ್ದು. "ಅದಕ್ಕೆ ಆಧಾರವೇನು" ಎಂದರೆ ಅದು ಕಪೋತೋಪಾಖ್ಯಾನದಿಂದ ವಿಶದವಾಗುತ್ತದೆ. ಏವಂಚ ಶಾಸ್ತ್ರಗಳಲ್ಲಿ ದೋಷಯುಕ್ತರನ್ನು ಬಿಡಬೇಕೆಂದಿರುವುದು ಶರಣಾಗತರನ್ನು ಬಿಟ್ಟು ಉಳಿದವರಲ್ಲಿ ಮಾತ್ರವೆಂದು ತಿಳಿಯಬೇಕು. ಆದುದರಿಂದಲೇ "ತಸ್ಮಾದಪಿವಧ್ಯಂ ಪ್ರಪನ್ನಂ ಪ್ರತಿಪ್ರಯಚ್ಛಂತೀತಿ" ಎಂದು, "ದೋಷಾಧಿಕ್ಯವಿದ್ದು ವಧಾರ್ಹನಾಗಿದ್ದರೂ ಶರಣಾಗತನಾಗಿ ಬಂದರೆ ರಕ್ಷಿಸಬೇಕೆ"ಂಬುದಾಗಿ ಶ್ರುತಿಯುಸುರಿದೆ.

ಆಚಾರ್ಯರ ಯೋಜನೆ :—ಮಿತ್ರಭಾವೇನ, (ಸ್ನೇಹಿನೋಭಾವಃ ಮಿತ್ರತ್ವಂ ತೇನ) ಆಶಾಲೇಶಮಾತ್ರದಿಂದ ನಮ್ಮಲ್ಲಿ ಅದ್ವೇಷವಾಗಲಿ, ಅಭಿಮುಖ್ಯಮಾತ್ರವಾಗಲಿ ಇರುವುದೇ ನಮ್ಮ ಪರಿಗ್ರಹಕ್ಕೆ ಕಾರಣವೇ ಹೊರ್ತು, ಪೂರ್ಣ ಭಕ್ತಿಯಲ್ಲವು ಎಂದರ್ಥ. (ತ್ವಾಮಾಮನಂತಿ ಕವಯಃ ಕರುಣಾಮೃತಾಬ್ಧೇ! ಜ್ಞಾನಕ್ರಿಯಾಭಜನಲಭ್ಯಮ ಲಭ್ಯಮನ್ಯೈಃ। ಏತೇಷುಕೇನ ವರದೋತ್ತರಕೋಸಲಸ್ಥಾಃ ಪೂರ್ವಂ ಸದೂರ್ವಮಭಜಂತಹಿ ಜಂತವಸ್ತ್ವಾಂ" ಎಂದಿದೆ) ಅಥವಾ (ಮಿತ್ರಭಾವನಯಾ) ಮಿತ್ರತ್ವದ್ಯೋತಕ ಚೇಷ್ಟೆಯಿಂದ ಎಂದರ್ಥ. (ಅದೂ ಕೂಡ–"ಶರಣವರಣ ವಾಗಿಯಂ ಯೋದಿತಾ ನ ಭವತಿ ಬತ ಸಾಪಿ ಧೀಪೂರ್ವಿಕಾ" ಎಂಬುದರಿಂದ ವ್ಯಕ್ತವಾಗಿದೆ) "ಶರಣಾಗತಭಾವೇನ" ಎಂದು ಹೇಳಬೇಕಾಗಿರುವಾಗ, "ಮಿತ್ರಭಾವೇನ" ಎಂದು ಹೇಳಿರುವುದು, ತನ್ನ ಆಶ್ರಯಣಕ್ಕಾಗಿ ಕೆಲವು ಹೆಜ್ಜೆಗಳನ್ನಿಟ್ಟವನಲ್ಲಿ ಕೂಡ ಸ್ವಸಮಾನನೆಂಬ ಭಾವವುಳ್ಳ ಭಗವಂತನ ಅಭಿಪ್ರಾಯದ್ಯೋತನಾರ್ಥವಾಗಿಯೇ ಎಂದು ತಿಳಿಯಬೇಕು. ಸೀತಾದೇವಿಯೂ ಸಹ ರಾವಣನಿಗೆ, "ತೇಸಮ್ಮೈತ್ರೀ ಭವತು ತೇ ಯದಿಜೀವಿತುಮಿಚ್ಛಸಿ" ಎಂದು ಮೈತ್ರೀ ಶಬ್ದವನ್ನೇ ಹೇಳಿರುವಳು. ಅಥವಾ, "ಮಿತ್ರಭಾವೇನ" ಮಿತ್ರತ್ವ ಕಾರಣದಿಂದ, "ಸುಹೃದಂ ಸರ್ವಭೂತಾನಾಂ" ಎಂದಹಾಗೆ ಸರ್ವಭೂತಗಳಿಗೂ ಮಿತ್ರನಾದ ನನ್ನ ಸೌಹಾರ್ದವನ್ನು ಪುರಸ್ಕರಿಸಿ ಎಂದರ್ಥವು. ಯದ್ವಾ, (ಮಿತ್ರಭಾವೇನ) ಆನುಕೂಲ್ಯಸಂಕಲ್ಪಾದಿಪೂರ್ವಕವಾಗಿ ಎಂದರ್ಥವು. ಯದ್ವಾ, "ಮಿತಾತ್ತ್ರಾಯತ ಇತಿಮಿತ್ರಂ" ಈಶ್ವರೋಪಕಾರವನ್ನು ಪರಿಚ್ಛೇದಿಸಿ ತತ್ಸದೃಶವಾದ ಉಪಕಾರವನ್ನು ಮಾಡಬೇಕೆಂಬ ಪ್ರವೃತ್ತಿ ಭಾವದಿಂದ ಎಂದರ್ಥ, ಅಥವಾ, "ವಿಶ್ವಸನೀಯಸ್ಥಳಂ ಮಿತ್ರಂ" ("ತನ್ಮಿತ್ರಂಯತ್ರ ವಿಶ್ವಾಸಃ" ಎಂದಿದೆ) ವಿಶ್ವಾಸಭಾವದಿಂದ ಎಂದರ್ಥವು, (ಸಂಪ್ರಾಪ್ತಂ) ಅವನಿಗಿರುವ ಆಶಾಲೇಶ ಮಾತ್ರದಿಂದಲೇ, "ಪ್ರೀರೇಷಾಹಿ ಮಮಾತುಲಾ" ಎಂಬಂತೆ ನಾನು ಅವನಿರುವ ಸ್ಥಳವನ್ನು ಕುರಿತು ಹೋಗಬೇಕಾಗಿದ್ದಿದ್ದರೂ ಅವನಾಗಿಯೇ ಇಲ್ಲಿಗೆ ಬಂದಿರುವಾಗ ಅವನನ್ನು ಹೇಗೆ ಬಿಟ್ಟು ಬಿಡುವುದು? "ಸಂ" ಸ್ವಾರಸ್ಯ–ಪಾದುಕೆಗಳನ್ನು ಬಾಗಿಲಲ್ಲಿ ಬಿಟ್ಟು ದೇವವಂದನವನ್ನು ಮಾಡಬೇಕೆಂಬ ನ್ಯಾಯದಿಂದ ಮನಸ್ಸನ್ನು ಬೇರೊಂದೆಡೆಗೆ ಹೋಗಗೊಡದೆ, "ಪರಿತ್ಯಕ್ತಾ ಮಯಾಲಂಕಾ ಮಿತ್ರಾಣಿಚ ಧನಾನಿಚ" ಎಂದು ವಿರೋಧಿ ನಿವೃತ್ತಿಪೂರ್ವಕವಾಗಿ ಬಂದಿರುವನನ್ನು ಎಂದು ಅರ್ಥವು. ಯದ್ವಾ, (ಸಂಪ್ರಾಪ್ತಂ) "ಮಾತಾ ಪಿತಾ ಭ್ರಾತಾ ನಿವಾಸಶ್ಶರಣಂ ಸುಹೃದ್ಗತಿರ್ನಾರಾಯಣಃ" ಎಂಬ ನ್ಯಾಯದಿಂದ, ನನ್ನಲ್ಲಿಯೇ ಸಕಲವಿಧ ಬಂಧುಭಾವವನ್ನೂ ಇಟ್ಟುಕೊಂಡು ಬಂದಿರುವ ಅಥವಾ ನನ್ನ ಅಂತರಂಗದ ಅನುಚರರನ್ನು ಪುರಸ್ಕರಿಸಿ ಬಂದಿರುವ, ಅಥವಾ, (ಸಂಪ್ರಾಪ್ತಂ) ಲಂಕೆಯಲ್ಲಿದ್ದುಕೊಂಡೇ, "ರಾಘವಂ ಶರಣಾಗತೋಽಸ್ಮಿ" ಎಂದು ಹೇಳಿದ್ದರೆ ಅತಂದ್ರಿತ ಚಮೂಪತಿ ನ್ಯಾಯದಂತೆ ನಾನೇ ಅಲ್ಲಿಗೆ ಹೋಗಬೇಕಾಗಿದ್ದರೂ ಅವನೇ ಇಲ್ಲಿಗೆ ಬಂದುದರಿಂದ ಕುಂಟನಮೇಲೆ ಗಂಗಾನಿಪತನದಂತೆ ನನಗೆ ಪ್ರಯೋಜನವನ್ನೇ ಮಾಡಿದಂತಾಯಿತು. (ಸಂಪ್ರಾಪ್ತಂ) ಪ್ರಾಪ್ತಿಯನ್ನೇ ನಾವು ಬಯಸುವುದು. ಸ್ತುತಿ,ಅರ್ಚನ,ಧ್ಯಾನ,ವಂದನಾದಿಗಳನ್ನಲ್ಲವು. "ಸಂ" ಎಂಬುದರಿಂದ ಮಾನಸ, ವಾಚಿಕ, ಕಾಯಿಕರೂಪವಾದ ಪೂರ್ಣಪ್ರಸದನವು ಹೇಳಿದಂತಾಯಿತು. (ನತ್ಯಜೇಯಂ) ತೊರೆಯಲು ಶಕ್ತನಾಗಲಾರೆನು, ನಾನು ಸರ್ವಶಕ್ತನಾದರೂ ಶರಣಾಗತಿಶಬ್ದವನ್ನು ಕೇಳಿಸಿದವನನ್ನು ತೊರೆಯಲು ನನ್ನಲ್ಲಿ ಶಕ್ತಿಸಂಭಾವನೆಯನ್ನೇ ಕಾಣೆನು. (ಸಂಪ್ರಾಪ್ತಂ ನತ್ಯಜೇಯಂ) "ಶರಣಾಗತ ಸಸ್ಯಮಾಲಿನೀಯಂ ವೃಷಶೈಲೇಶ ಕೃಷೀವಲಂ ಧಿನೋತಿ" ಎಂದು ಹೇಳಿದಹಾಗೆ ರಕ್ಷಾಪೇಕ್ಷೆಯನ್ನು ಪ್ರತೀಕ್ಷಿಸುತ್ತಿರುವ ನಾನು ಎಲ್ಲ ವಿಧದಲ್ಲಿಯೂ ಶರಣಾಗತನೆಂದು ಹೇಳಿಕೊಂಡು ಬಂದವನನ್ನು ಹೇಗೆ ತಾನೆ ತೊರೆದೇನು ? ತೊರೆಯುವುದಿಲ್ಲ. (ನತ್ಯಜೇಯಂ) ಅವನ ಸಂಬಂಧದಿಂದ ರಾವಣವಿಷಯಿಕಾರುಣ್ಯಾಪೇಕ್ಷಿಯಾದ ನಾನು ಅವನನ್ನು ಹೇಗೆ ತಾನೆ ತೊರೆದೇನು ? (ಅದರಿಂದಲೇ ಘಂಟಾಕರ್ಣನೆಂಬವನಲ್ಲಿನ ಪಕ್ಷಪಾತದಿಂದ ಅವನ ತಮ್ಮನಿಗೂ ಮೋಕ್ಷವನ್ನಿತ್ತನು. ಅದರಿಂದಲೇ ಮಾಲಾಕಾರನಲ್ಲಿನ ಪಕ್ಷಪಾತದಿಂದ, "ನಿಮ್ಮ ವಂಶದವರೆಲ್ಲಾ ದೀರ್ಘಾಯುಗಳಾಗಿ ಬಾಳಲಿ" ಎಂದು ವರವನ್ನಿತ್ತನು.) (ನತ್ಯಜೇಯಂ) ಶರಣಾಗತನಾಗಿ ಬಂದುದರಿಂದಲೇ ಶ್ಲಾಘ್ಯನಾಗಿರುವಾಗ ಅವನಲ್ಲಿ ತ್ಯಾಗಸಂಭಾವನೆಯು ಹೇಗೆ ತಾನೆ ಕೂಡುತ್ತದೆ ? ತ್ಯಾಗಸಂಭಾವನೆಯಿದ್ದರೆ ತಾನೆ ತ್ಯಾಗ ಸಾಧನೋದ್ಯೋಗವಾಗುವುದು. ಅದೇ ಇಲ್ಲದಿದ್ದಮೇಲೆ ? ಹೇಳತಕ್ಕುದೇನು ? ಅವನನ್ನು ತೊರೆಯುವುದರಲ್ಲಿ ನನಗೆ ಸತ್ತೆಯಿದ್ದರೆ ಸಾಧನೋದ್ಯೋಗ. ಅದೇ ಇಲ್ಲವೆಂದಮೇಲೆ ಉದ್ಯೋಗವೆಲ್ಲಿ ಬರಬೇಕು ? "ಅವನನ್ನು ಸ್ವೀಕರಿಸದೆ ನಿನ್ನ ಸತ್ತ್ವವು ಸಿದ್ಧಿಸುವುದಿಲ್ಲವಾದರೆ, ಅವನನ್ನು ಸ್ವೀಕರಿಸಿದರೆ ನಮ್ಮ ಸತ್ತ್ವವೂ ಸಿದ್ಧಿಸುವುದಿಲ್ಲ. ಒಟ್ಟಿನಮೇಲೆ ನೀನು ಅವನನ್ನು ಸ್ವೀಕರಿಸಿದರೆ ನಮ್ಮನ್ನು ತೊರೆದಂತಾಗುವುದು" ಎಂದರೆ, (ಕಥಂಚನ) "ಅಪ್ಯಹಂಜೀವಿತಂಜಹ್ಯಾಂ" ಎಂಬಂತೆ ಹೊಸದಾಗಿ ಕರುಹಾಕಿದ ವಾತ್ಸಲ್ಯಯುಕ್ತವಾದ ಗೋವು ಹಿಂದಿನ ಕರುವನ್ನು ತೊರೆಯುವಂತೆ, ಹೊಸದಾಗಿ ಶರಣಾಗತನಾಗಿರುವ ಈ ವಿಭೀಷಣನ ಮೇಲಣ ವಾತ್ಸಲ್ಯದಿಂದ ನಾನು ನಿಮ್ಮನ್ನು ತೊರೆಯಲೂ ಹಿಂಜರಿಯುವುದಿಲ್ಲ" ಎಂದು ಭಾವವು. (ಕಥಂಚನ) ಸರ್ವದೇಶ, ಸರ್ವಕಾಲ, ಸರ್ವಾವಸ್ಥೆಗಳಲ್ಲಿಯೂ, (ಕಥಂಚನ) ಶರಣಾಗತನಾದ ಇವನಲ್ಲಿ ಗುಣವಿಲ್ಲದಿದ್ದರೂ, ದೋಷಾಧಿಕ್ಯವಿದ್ದರೂ, ಅವನನ್ನು ಪರಿಗ್ರಹಿಸುವುದರಲ್ಲಿ ಎಲ್ಲರೂ ವಿರೋಧಿಗಳಾಗಿದ್ದರೂ, ಕಂಡುದೂ, ಕಾಣದುದೂ ಆದ ನೂರಾರು ಅಡಚಣೆಗಳಿದ್ದರೂ, ನನ್ನ ಪ್ರಾಣತ್ಯಾಗವೇ ಘಟಿಸುವ ಸಮಯ ಬಂದರೂ, ತೊರೆಯುವುದಿಲ್ಲವು.

¶ ಸುಗ್ರೀವಸ್ತ್ವಥ ತದ್ವಾಕ್ಯಮಾಭಾಷ್ಯಚ ವಿಮೃಶ್ಯಚ । ತತಃ ಶುಭತರಂ ವಾಕ್ಯಮುವಾಚ ಹರಿಪುಂಗವಃ ॥೪॥ ೫ " ಸುದುಷ್ಟೋವಾಽಪ್ಯದುಷ್ಟೋವಾ ಕಿಮೇಷ ರಜನೀಚರಃ? । ಈದೃಶಂ ವ್ಯಸನಂ ಪ್ರಾಪ್ತಂ ಭ್ರಾತರಂ ಯಃ ಪರಿತ್ಯಜೇತ್ ॥ ೫ ॥

ನ್ನಾದರೆ, ಆಭಾಷ್ಯ - ಅನುವಾದ ಮಾಡಿ, ವಿಮೃಶ್ಯಚ - ಚನ್ನಾಗಿ ಯೋಚಿಸಿ, ತತಃ - ಅನಂತರದಲ್ಲಿ, ಶುಭತರಂ - ಅತ್ಯಂತ ಶುಭಕರವಾದ, ವಾಕ್ಯಂ - ಮಾತನ್ನು, ಉವಾಚ - ಹೇಳಿದನು. ॥ ೪ ॥ ಏಷರಜನೀಚರಃ - ಈ ರಾಕ್ಷಸನು, ಸುದುಷ್ಟೋವಾ-ನೀವು ಪೂರ್ವದಲ್ಲಿ ಹೇಳಿದಂತೆ ದೋಷಯುಕ್ತನೇ ಆಗಿರಲಿ, ಅದುಷ್ಟೋವಾ - ದುಷ್ಟನಲ್ಲದೇನೇ ಇರಲಿ, ಕಿಂ - ಅದರಿಂದೇನು, ಯಃ - ಯಾವ ವಿಭೀಷಣನು, ಈದೃಶಂ - ಇಂಥಾ, ವ್ಯಸನಂ - ದುಃಖವನ್ನು, ಪ್ರಾಪ್ತಂ - ಹೊಂದಿರುವ, ಭ್ರಾತರಂ - ಅಣ್ಣನನ್ನು, ಪರಿತ್ಯಜೇತ್ - ಬಿಡುವನೋ, (ಅಥವಾ - ಬಿಟ್ಟುಬಂದನೋ), ಸಏಷಃ - ಆ ಈ ವಿಭೀಷಣನು, ಯಂ - ಯಾವ ಪುರುಷನನು ತಾನೆ, ನಪರಿತ್ಯಜೇತ್ - ಬಿಡಲಾರನು, ತಸ್ಯ - ಅವನಿಗೆ, ಕೋನಾಮ - ಯಾವ ಪುರುಷನುತಾನೆ, ಭವೇತ್ - ನೆರವಾದಾನು? ॥೫॥ ಕಾಕುತ್‌ಸ್ಥಃ - ಕಕುತ್‌ಸ್ಥವಂಶೋತ್ಪನ್ನನಾದ, ಸತ್ಯಪರಾಕ್ರಮಃ - ಸತ್ಯವಾದ ಪರಾಕ್ರಮವುಳ್ಳ ಶ್ರೀರಾಮನು, ವಾನರಾಧಿಪತೇಃ-

ಆಮೇಲೆ ವಾನರೇಶ್ವರನಾದ ಸುಗ್ರೀವನು ಶ್ರೀರಾಮನ ಮಾತುಗಳನ್ನು ಕೇಳಿ ವಿಮರ್ಶಿಸಿ ಆಮೇಲೆ ಆತನನ್ನು ಕುರಿತು, "ಎಲೈ ಶ್ರೀರಾಮನೇ ! ಈ ರಾಕ್ಷಸನು ಶಿಷ್ಟನೇ ಆಗಿರಲಿ, ದುಷ್ಟನೇ ಆಗಿರಲಿ, ಆ ವಿಷಯವೀಗ ಅನವಶ್ಯಕವೇ ಸರಿ. ಇವನು ಇಂತಹ ಕಷ್ಟಕ್ಕೆ ಸಿಕ್ಕಿರುವ ಅಣ್ಣನನ್ನೇ ತೊರೆದು ಬಂದನಲ್ಲವೆ ? ಎಂದಮೇಲೆ ಇವನು ಯಾರನ್ನುತಾನೇ ತೊರೆಯದಿದ್ದಾನು. ಆದುದರಿಂದ ಇವನನ್ನು ಪರಿಗ್ರಹಿಸಬಾರದು" ಎಂದು ಪರಮಮಂಗಳಕರವಾಗಿ ನುಡಿದನು. ಆಗ ಸತ್ಯಪರಾಕ್ರಮಿಯೂ, ಕಕುತ್ಸ್ಥವಂಶೋದ್ಭವನೂ ಆದ ಶ್ರೀರಾಮನು ಆ ವಾನರರಾಜನ

ಇದೂ ಅಲ್ಲದೆ, "ದೋಷೋಯದ್ಯಪಿ ತಸ್ಯಸ್ಯಾತ್" ನನ್ನ ಅಭಿಪ್ರಾಯದಲ್ಲಿ ಆ ವಿಭೀಷಣನಲ್ಲಿ ದೋಷವೇ ಇರುವುದಿಲ್ಲವು : ಅಸ್ಥಾನದಲ್ಲಿ ಭಯವನ್ನು ಶಂಕಿಸುವ ನಿನ್ನ ಅಭಿಪ್ರಾಯದಂತೆ ದೋಷವಿರುವುದಾದರೆ ಇರಲಿ : ದೋಷಭೋಗ್ಯತ್ವರೂಪ ವಾತ್ಸಲ್ಯೈಕಸ್ವಭಾವಿಯಾದ ನನಗೆ ಆಶ್ರಿತನ ದೋಷಗಳೂ ಉಪಾದೇಯಗಳೇ. ಇದರಿಂದ ನನ್ನ ಮಾತುಗಳನ್ನು ತೆಗೆದುಹಾಕಿದಂತಾಗುವುದಲ್ಲವೆ ? ಎಂದರೆ "ಸತಾಮೇತದಗರ್ಹಿತಂ" ಸತ್ಪುರುಷರಿಗೆ ಈ ಆಶ್ರಿತ ಸಂರಕ್ಷಣವು ನಿಂದಿತವಾದುದಲ್ಲ ; ಪರಮ ಪೂಜ್ಯವಾದುದು. (ಗೋ+ತ) (ಗ್ರಂಥವಿಸ್ತರ ಭಯದಿಂದ ಮುಖ್ಯಾಭಿಪ್ರಾಯವನ್ನು ಮಾತ್ರ ಕೊಡಲಾಗಿದೆ.)

¶ ಇಲ್ಲಿ, "ಸುಗ್ರೀವನು ಶ್ರೀರಾಮನ ಪ್ರಕೃತಿಯನ್ನು ನೋಡಿ "ಇದು (ಶ್ರೀರಾಮನು ಮಾಡುತ್ತಿರುವುದು) ಬಹಳ ಸಾಹಸದ ಕೆಲಸವು" ಎಂದು ಭೀತನಾಗಿ ಈ ಮಾತನ್ನು ಹೇಳುವನು. ಶುಭತರಂ—"ನೀತಿಶಾಸ್ತ್ರ ರಹಸ್ಯಮೂಲಕವಾಗಿರುವದರಿಂದಲೂ, ಸ್ವಾಮಿ ವಿಷಯದಲ್ಲಿ ಅತ್ಯಂತ ಪ್ರೇಮಾತಿಶಯವಿರುವುದರಿಂದಲೂ ಶುಭತರವಾದ" ಎಂದು ಅರ್ಥವು. ಇಲ್ಲಿ ಮೊದಲು "ಲಕ್ಷ್ಮಣಂ" ಎಂದು ಉಪಕ್ರಮಾಡಿ, ಉಪಸಂಹಾರದಲ್ಲಿಯೂ "ಸಹಲಕ್ಷ್ಮಣಃ" ಎಂದು ಹೇಳಿರುವುದರಿಂದ ಇಬ್ಬರೂ ಎಂದರೆ ಲಕ್ಷ್ಮಣ ಸುಗ್ರೀವರಿಬ್ಬರೂ ಈ ಮಾತುಗಳನ್ನಾಡಿರುವುದಾಗಿ ತಿಳಿಯಬೇಕು. (ಗೋ)

೫ ಇಲ್ಲಿ ಲಂಕಾದಹನ ಪುತ್ರವಧಾದಿಗಳು ಮೊದಲುಗೊಂಡು ಸಮುದ್ರತೀರ ನಿವೇಶಪರ್ಯಂತವಾದ ವ್ಯಸನಕ್ಕೆ ಸಿಕ್ಕಿರುವ ಅಣ್ಣನನ್ನು ಈ ವಿಭೀಷಣನು ತೊರೆದುಬಿಟ್ಟನು. ಇಂಥವನಿಗೆ ಯಾರು ತಾನೇ ನೆರವಾಗುತ್ತಾರೆ? ಯಾರೂ ಆಗುವುದಿಲ್ಲವು. ಅಥವಾ, ಇಂಥಾ ಸಾಕ್ಷಾಜ್ಜ್ಯೇಷ್ಠ ಭ್ರಾತೃವನ್ನೇ ಪರಿತ್ಯಜಿಸಿದ ಈ ವಿಭೀಷಣನು ವ್ಯಸನಕಾಲದಲ್ಲಿ ಯಾರನ್ನು ತಾನೇ ತೊರೆಯದಿದ್ದಾನು ? ಎಲ್ಲರನ್ನೂ ತೊರೆದುಬಿಡುವನು-ವ್ಯಸನಕಾಲಗಳಲ್ಲಿಯೇ-ಅಥವಾ ಇಂಥಾ ಕಷ್ಟಕಾಲದಲ್ಲಿಯೇ ಅಣ್ಣನನ್ನು ತೊರೆದ ಈ ವಿಭೀಷಣನನ್ನು ಯಾರು ತಾನೇ ಪರಿಗ್ರಹಿಸುವರು ?" ಎಂಬ ಅರ್ಥಗಳು ಗ್ರಾಹ್ಯಗಳು. (ಮ)

ಕೋನಾಮ ಸಭವೇತ್ತಸ್ಯ ಯಮೇಷ ನಪರಿತ್ಯಜೇತ್?" । ವಾನರಾಧಿಪತೇರ್ವಾಕ್ಯಂ ಶ್ರುತ್ವಾ ಸರ್ವಾನುದೀಕ್ಷ್ಯಚ ॥ ೬ ॥ ¶ ಈಷದುತ್ಸ್ಮಯಮಾನಸ್ತು ಲಕ್ಷ್ಮಣಂ ಪುಣ್ಯ ಲಕ್ಷಣಂ । ಇತಿಹೋವಾಚ ಕಾಕುತ್ಸ್ಥೋ ವಾಕ್ಯಂ ಸತ್ಯಪರಾಕ್ರಮಃ ॥ ೭ ॥ "ಅನಧೀತ್ಯಚ ಶಾಸ್ತ್ರಾಣಿ ವೃದ್ಧಾನನುಪಸೇವ್ಯಚ । ನಶಕ್ಯಮೀದೃಶಂ ವಕ್ತುಂ ಯದುವಾಚ ಹರೀಶ್ವರಃ ॥ ೮ ॥ ಅಸ್ತಿಸೂಕ್ಷ್ಮತರಂ ಕಿಂಚಿದ್ಯದತ್ರ ಪ್ರತಿಭಾತಿ ಮೇ । ಪ್ರತ್ಯಕ್ಷಂ ಲೌಕಿಕಂ ವಾಪಿ ವಿದ್ಯತೇ ಸರ್ವರಾಜಸು ॥ ೯ ॥ ಅಮಿತ್ರಾಸ್ತತ್ಕುಲೀನಾಶ್ಚ

---

ಕಪೀಶ್ವರನಾದ ಸುಗ್ರೀವನ, ವಾಕ್ಯಂ - ಮಾತನ್ನು, ಶ್ರುತ್ವಾ - ಕೇಳಿ, ಸರ್ವಾ - ಸಮಸ್ತರನ್ನೂ, ಉದೀಕ್ಷ್ಯ - ಕಂಡು, ಈಷತ್ - ಸ್ವಲ್ಪವಾಗಿ, ಉತ್ಸ್ಮಯಮಾನಸ್ತು - ನಸುನಗುತ್ತಾ, ಪುಣ್ಯ ಲಕ್ಷಣಂ - ಪುಣ್ಯಕರವಾದ ಗುಣಗಳುಳ್ಳ, ಲಕ್ಷ್ಮಣಂ - ಲಕ್ಷ್ಮಣನನ್ನು ಕುರಿತು, ಇತಿ - ಈ ಪ್ರಕಾರವಾಗಿ, ವಾಕ್ಯಂ - ಮಾತನ್ನು, ಉವಾಚಹ - ಹೇಳಿದನು. ॥೬-೭॥ ಹರೀಶ್ವರಃ - ವಾನರಾಧಿಪತಿಯಾದ ಸುಗ್ರೀವನು, ಯತ್ - ಯಾವ ವಾಕ್ಯವನ್ನು, ಉವಾಚ - ಹೇಳಿದನೋ, ಈದೃಶಂ - ಇಂತಹ ವಾಕ್ಯವನ್ನು, ವಕ್ತುಂ-ಹೇಳುವದಕ್ಕೆ, ಶಾಸ್ತ್ರಾಣಿ-ಶಾಸ್ತ್ರಗಳನ್ನು, ಅನಧೀತ್ಯ-ಅಧ್ಯಯನ ಮಾಡದೆಯೂ, ವೃದ್ಧಾಂಶ್ಚ - ಜ್ಞಾನವೃದ್ಧರನ್ನು, ಅನುಪಸೇವ್ಯಚ - ಸೇವಿಸದೆಯೂ, (ಹೇಳಲು) ನಶಕ್ಯಂ - ಆಗಲಾರದು, ಪ್ರತ್ಯಕ್ಷಂ - ಪರಿದೃಶ್ಯಮಾನವಾಗಿಯೂ, ಲೌಕಿಕಂವಾಪಿ - ಲೋಕವ್ಯವ ಹಾರಸಿದ್ಧವಾಗಿಯೂ, ಯತ್ - ಯಾವದು, ಸರ್ವರಾಜಸು - ಎಲ್ಲ ಅರಸರಲ್ಲಿಯೂ, ವಿದ್ಯತೇ - ಇರುವದೋ, ಮೇ-ನನಗೆ, ಪ್ರತಿಭಾತಿ-ತೋರುತ್ತಲೂ ಇರುವದೋ, ತತ್ಸೂಕ್ಷ್ಮತರಂ-ಅಂಥಾ ಅತಿ ಸೂಕ್ಷ್ಮವಾದ, ಕಿಂಚಿತ್-ಕೊಂಚ ವಿಷಯವು, ಅತ್ರ-ಈ ವಿಭೀಷಣನ ಆಗಮನರೂಪವಾದ ಕಾರ್ಯದಲ್ಲಿ, ಅಸ್ತಿ - ಇರುವುದು. ॥ ೮-೯ ॥ ತತ್ಕುಲೀನಾಶ್ಚ - ಜ್ಞಾತಿಗಳೂ, ಪ್ರಾತಿದೇಶ್ಯಾಶ್ಚ - ತನ್ನ ದೇಶದ

---

ಮಾತುಗಳನ್ನು ಕೇಳಿ ಅಲ್ಲಿದ್ದ ವಾನರರೆಲ್ಲರನ್ನೂ ನೋಡಿ ಆಮೇಲೆ ಲಕ್ಷ್ಮಣನನ್ನು ಕುರಿತು ನಸುನಗೆಯಿಂದ ನುಡಿಯುವನು. ॥೪-೬॥ "ಲಕ್ಷ್ಮಣಾ ! ವಾನರೇಶ್ವರನಾದ ಸುಗ್ರೀವನಾಡಿದ ಮಾತು, ಶಾಸ್ತ್ರಾಧ್ಯಯನವನ್ನು ಚೆನ್ನಾಗಿ ಮಾಡಿದವರಿಗೂ, ಹಿರಿಯರನ್ನು ಸೇವಿಸಿದವರಿಗೂ ಆಡಲು ಸಾಧ್ಯವೇ ಹೊರ್ತು ಇತರರಾರಿಗೂ ಸಾಧ್ಯವಲ್ಲವು. ಆದರೂ ಈ ವಿಷಯದಲ್ಲಿ ಪ್ರತ್ಯಕ್ಷ ವಾದುದೂ, ಲೋಕವ್ಯವಹಾರಸಿದ್ಧವಾದುದೂ, ಮಹಾ ಸೂಕ್ಷ್ಮವಾದುದೂ ಆದ ರಾಜ ಧರ್ಮವೊಂದಿರುವುದು. ಅದೀಗ ನನಗೆ ತೋರುತ್ತಿದೆ. ಹೇಳುವೆನು ಕೇಳಿರಿ; ಜ್ಞಾತಿ ಗಳೂ, ಅಕ್ಕಪಕ್ಕದ ರಾಜರೂ, ಸಂಕಟಗಳಿಗೆ ಸಿಕ್ಕಿದಾದ ಪ್ರಹರಿಸಲೆತ್ನಿಸುತ್ತಾರೆ. ಆದುದ ರಿಂದ ಅವರು ಶತ್ರುಗಳೆಂದೇ ಹೇಳಬೇಕು. ಆ ಕಾರಣದಿಂದ ವಿಭೀಷಣನು ರಾವಣಾಸುರನನ್ನು ತೊರೆದು ಇಲ್ಲಿಗೆ ಬಂದಿದ್ದಾನೆ. ಇದೂ ಅಲ್ಲದೆ ಯಾರೋ ಕೆಲವರು ಯೋಗ್ಯರಾದ ರಾಜರು ತಮಗೆ ಇಷ್ಟರಾದ ಜ್ಞಾತಿಗಳನ್ನು ಗೌರವಿಸುವರು. ಅಂತಹರೂ ಕೂಡ ಸಮರ್ಥನಾದ ಜ್ಞಾತಿಯ ವಿಷಯದಲ್ಲಿ ವಿಶೇಷವಾಗಿ ಸಂಶಯವನ್ನಿಟ್ಟುಕೊಂಡೇ ಇರುತ್ತಾರೆ. ಹೀಗಿರು

---

¶ "ಈಷದುತ್ಸ್ಮಯಮಾನಃ" ಇಲ್ಲಿ ಶ್ರೀರಾಮನು "ಶರಣಾಗತರನ್ನು ರಕ್ಷಿಸಲೇಬೇಕೆಂಬ ಧರ್ಮಸೂಕ್ಷ್ಮವನ್ನೂ, ನನ್ನ ಪರಮ ಶಕ್ತಿಯನ್ನೂ, ನನ್ನ ಶರಣಾಗತಪಾಲನ ವ್ರತವನ್ನೂ ಚೆನ್ನಾಗಿ ಅರಿತುಕೊಳ್ಳದೆ ಇವನು ಏನೇನೋ ಹೇಳು ತ್ತಿರುವನು" ಎಂದು ನಸುನಕ್ಕನೆಂಬುದಾಗಿ ಗ್ರಾಹ್ಯವು. (ಗೋ)

ಸ್ಯಾತಿದೇಶ್ಯಾಶ್ಚ ಕೀರ್ತಿತಾಃ । ವ್ಯಸನೇಷು ಪ್ರಹರ್ತಾರಸ್ತಸ್ಮಾದಯಮಿಹಾಗತಃ ॥೧೦॥ ಅಪಾಪಾಸ್ತತ್ಕುಲೀನಾಶ್ಚ ಮಾನಯಂತಿ ಸ್ವಕಾನ್ ಹಿತಾನ್ । ಏಷ ಪ್ರಾಯೋ ನರೇಂದ್ರಾಣಾಂ ಶಂಕನೀಯಸ್ತು ಶೋಭನಃ ॥೧೧॥ ಯಸ್ತು ದೋಷಸ್ತ್ವಯಾ ಪ್ರೋಕ್ತೋ ಹ್ಯಾದಾನೇಽರಿಬಲಸ್ಯಚ । ತತ್ರ ತೇ ಕೀರ್ತಯಿಷ್ಯಾಮಿ ಯಥಾಶಾಸ್ತ್ರಮಿದಂ ಶ್ರುಣು ॥ ೧೨ ॥ ನವಯಂ ತತ್ಕುಲೀನಾಶ್ಚ ರಾಜ್ಯಕಾಂಕ್ಷೀಚ ರಾಕ್ಷಸಃ । ಪಂಡಿತಾಹಿ ಭವಿಷ್ಯಂತಿ ತಸ್ಮಾದ್ಗ್ರಾಹ್ಯೋ ವಿಭೀಷಣಃ ॥ ೧೩ ॥ ಅವ್ಯಗ್ರಾಶ್ಚ ಪ್ರಹೃಷ್ಟಾಶ್ಚ ನಭವಿಷ್ಯಂತಿ ಸಂಗತಾಃ । ಪ್ರವಾದಶ್ಚ ಮಹಾನೇಷ ಸ್ತತೋಽಸ್ಯ ಭಯಮಾಗತಂ । ಇತಿ

---

ಸಮಿಪದಲ್ಲಿರುವ ರಾಜರುಗಳೂ ಸಹಾ, ವ್ಯಸನೇಷು - ವ್ಯಸನಕಾಲಗಳುಂಟಾಗಲು, ಪ್ರಹರ್ತಾರಃ - ಹೊಡೆಯುವವರಾಗಿ, ಅಮಿತ್ರಾಃ - ಶತ್ರುಗಳೆಂದು, ಕೀರ್ತಿತಾಃ - ಹೇಳಲ್ಪಡುತ್ತಾರೆ, ತಸ್ಮಾತ್ - ಆದ್ದರಿಂದ, ಅಯಂ - ಇವನು, ಆಗತಃ - ಬಂದಿದ್ದಾನೆ. ॥ ೧೦ ॥ ಅಪಾಪಾಃ - ಪಾಪವಿಲ್ಲದಿರುವ, ತತ್ಕುಲೀನಾಶ್ಚ - ಜ್ಞಾತಿಗಳೂ ಕೂಡ, ಸ್ವಕಾನ್‌ಹಿತಾನ್ - ತಮ್ಮ ಜ್ಞಾತಿಗಳನ್ನು, ಮಾನಯಂತಿ - ಬಹುಮತಿಸುವರು, ನರೇಂದ್ರಾಣಾಂ-ಅಂಥಾ ರಾಜರಿಗೂ ಕೂಡ, ಶೋಭನಃ ಪ್ರಜ್ಞಾಶೌರ್ಯಾದಿಗಳಿಂದೊಪ್ಪುವ, ಏಷಃತು - ಈ ಜ್ಞಾತಿಯಾದರೆ, ಪ್ರಾಯಃ - ಬಹುತರವಾಗಿ, ಶಂಕನೀಯಃ - ಯೋಚಿಸತಕ್ಕವನು. ॥ ೧೧ ॥ ಕಿಂಚ - ಇಷ್ಟುಮಾತ್ರವಲ್ಲ, ಅರಿಬಲಸ್ಯ - ವಿಭೀಷಣನ, ಆದಾನೆ - ಸ್ವೀಕರಿಸುವದರಲ್ಲಿ, ಯೋದೋಷಃ - ಯಾವ ದೋಷವು, ತ್ವಯಾ - ನಿನ್ನಿಂದ, ಪ್ರೋಕ್ತೋಹಿ - ಹೇಳಲ್ಪಟ್ಟಿತೋ, ತತ್ರ - ವಿಷಯದಲ್ಲಿ, ಯಥಾಶಾಸ್ತ್ರಂ - ನೀತಿಶಾಸ್ತ್ರವನ್ನು ಮೀರದೆ, ಇದಂ - ಈ ಉತ್ತರವನ್ನು, ತೇ - ನಿನಗೆ, ಕೀರ್ತಯಿಷ್ಯಾಮಿ - ಹೇಳುವೆನು, ಶ್ರುಣು - ಕೇಳು, ವಯಂ - ನಾವು, ತತ್ಕುಲೀನಾಶ್ಚ- ಅವನ ಜ್ಞಾತಿಗಳು, ನ - ಅಲ್ಲ, (ಸಮೀಪದಲ್ಲಿರುವವರೂ ಅಲ್ಲ), ರಾಕ್ಷಸಃ - ರಾಕ್ಷಸನು, ರಾಜ್ಯಕಾಂಕ್ಷೀಚ - ರಾಜ್ಯವನ್ನಪೇಕ್ಷಿಸುವವನು. ॥೧೨॥ (ರಾಕ್ಷಸಾಅಪಿ - ಅಸುರರೂ ಕೂಡ), ಪಂಡಿತಾಃ ಬಲ್ಲವರು, ಭವಿಷ್ಯಂತಿಹಿ - ಆಗುವರಷ್ಟೆ, ತಸ್ಮಾತ್ - ಆ ಕಾರಣದಿಂದ, ವಿಭೀಷಣಃ - ವಿಭೀಷಣನು, ಗ್ರಾಹ್ಯಃ - ಗ್ರಹಿಸತಕ್ಕವನೇ. ॥೧೩॥ ಅವ್ಯಗ್ರಾಃ - ವ್ಯಾಕುಲರಾಗಿಯೂ, ಪ್ರಹೃಷ್ಟಾಶ್ಚ - ಸಂತೋಷಚಿತ್ತರಾಗಿಯೂ, (ತೇ - ಆ ಜ್ಞಾತಿಗಳು), ಸಂಗತಾಃ - ಒಬ್ಬರಿಗೊಬ್ಬರು ಸೇರಿದವರು, ನಭವಿಷ್ಯಂತಿ-

---

ವಾಗ ಪರಮಪಾಪಿಯಾದ ರಾವಣಾಸುರನು ಜ್ಞಾತಿಗಳನ್ನು ನಂಬುತ್ತಾನೆಯೇ? ಆದುದರಿಂದ ಈ ವಿಭೀಷಣನಲ್ಲಿ ಅವನು ಸಂಶಯಪಡಲು ಅದನ್ನು ಸಹಿಸದೆ ಇವನಿಲ್ಲಿಗೈತಂದಿರುವನು. ॥೭-೧೦॥ ಸುಗ್ರೀವಾ! ಶತ್ರುವನ್ನು ಪರಿಗ್ರಹಿಸುವುದರಲ್ಲಿ ನೀನಾವ ದೋಷವನ್ನು ಹೇಳಿದೆಯೋ ಅದನ್ನು ಕುರಿತು ನೀತಿಶಾಸ್ತ್ರಾನುಸಾರವಾದ ಸಂಗತಿಯನ್ನು ಹೇಳುವೆನು ; ಕೇಳು. ನಾವು ರಾಕ್ಷಸಕುಲದವರಲ್ಲವು. ಆದುದರಿಂದ ನಾವು ಅವರ ರಾಜ್ಯವನ್ನಪೇಕ್ಷಿಸುವುದಿಲ್ಲವಷ್ಟೆ! ಈಗ ಈ ವಿಭೀಷಣನಾದರೋ ರಾಜ್ಯವನ್ನಪೇಕ್ಷಿಸಿ ನಮ್ಮ ಬಳಿಗೆ ಬಂದಿದ್ದಾನೆ. ಆದರೂ ನೀನು ರಾಕ್ಷಸರಿಗಿಷ್ಟು ಶಾಸ್ತ್ರಪರಿಜ್ಞಾನವೆಲ್ಲಿಯದೆಂದು ಕೇಳುವೆಯೇನೋ? ಈ ವಿಷಯದಲ್ಲಿ ಸಂದೇಹವೇ ಇರುವುದಿಲ್ಲವು. ರಾಕ್ಷಸರಲ್ಲಿಯೂ ಒಳ್ಳೆಯ ಪಂಡಿತರಿದ್ದಾರೆ. ವಿಭೀಷಣನು ಅಂತಹ ಪರಿಜ್ಞಾನದಿಂದಲೇ ಇಲ್ಲಿಗೆ ಬಂದಿರುವುದರಿಂದ ಅವನನ್ನು ಪರಿಗ್ರಹಿಸಬೇಕು. ಈ ವಿಷಯದಲ್ಲಿ ಸಂಶಯವಿಲ್ಲ. ಅಲ್ಲದೆ, ಲೋಕದಲ್ಲಿ ಜ್ಞಾತಿಗಳು ತಮಗೆ ಕಷ್ಟಬಂದಕಾಲದಲ್ಲಿಯೂ ಸಂತೋಷವಿದ್ದಕಾಲದಲ್ಲಿಯೂ ಒಬ್ಬರೊಡನೊಬ್ಬರು

**ಭೇದಂ ಗಮಿಷ್ಯಂತಿ ತಸ್ಮಾದ್ಗ್ರಾಹ್ಯೋ ವಿಭೀಷಣಃ ||೧೪|| ¶ ನ ಸರ್ವೇ ಭ್ರಾತರಸ್ತಾತ! ಭವಂತಿ ಭರತೋಪಮಾಃ । ಮದ್ವಿಧಾವಾ ಪಿತುಃ ಪುತ್ರಾಸ್ಸುಹೃದೋವಾ ಭವದ್ವಿಧಾಃ"**

ಆಗುವುದಿಲ್ಲ, ಭೇದಂ - ಭೇದವನ್ನು, ಗಮಿಷ್ಯಂತಿ - ಹೊಂದುವರು, ಇತಿ - ಇಂತೆಂದು, ಮಹಾ - ಮಹತ್ತರವಾದ, ಏಷಃಪ್ರವಾದಶ್ಚ - ಈ ಲೋಕಪ್ರಸಿದ್ಧಿಯು ಇರುವುದು, ತತಃ - ಆದರಿಂದ, ಅಸ್ಯ - ಇವನಿಗೆ, ಭಯಂ - ಭೀತಿಯು, ಆಗತಂ - ಬಂದಿದೆ, ತಸ್ಮಾತ್ - ಆದ್ದರಿಂದ, ವಿಭೀಷಣಃ - ವಿಭೀಷಣನು, ಗ್ರಾಹ್ಯಃ - ಗ್ರಹಿಸತಕ್ಕವನು. || ೧೪ || ಹೇ ತಾತ - ಎಲೈ ಅಪ್ಪನೇ, ಸರ್ವೇ - ಸಮಸ್ತರಾದ, ಭ್ರಾತರಃ - ಒಡಹುಟ್ಟಿದವರು, ಭರತೋಪಮಾಃ - ಭರತನಿಗೆ ಸಮಾನರಾದವರು, ನಭವಂತಿ-ಆಗಲಾರರು, ಪಿತುಃ-ತಂದೆಗೆ, ಪುತ್ರಾಃ-ಮಕ್ಕಳು, ಮದ್ವಿಧಾವಾ-ನನ್ನಂತಹರೇ ಆಗಲಿ, ನಭವಂತಿ - ಆಗಲಾರರು, ಭವದ್ವಿಧಾಃ - ನಿನ್ನಂಥಾ, ಸುಹೃದೋವಾ - ಸ್ನೇಹಿತರೇ ಆಗಲಿ,

ಕಲಿತಿರುವುದಿಲ್ಲವು. ಆದುದರಿಂದ ಯಾವಾಗಲೂ ಅವರು ಪರಸ್ಪರವಾಗಿ ವಿರೋಧಿಸುತ್ತಲೇ ಇರುತ್ತಾರೆ. ಆದುದರಿಂದಲೇ ಈ ವಿಭೀಷಣನು ತನ್ನ ಅಣ್ಣನಾದ ರಾವಣಾಸುರನಿಗೆ ಭಯ ಪಟ್ಟು ನಮ್ಮ ಬಳಿಗೆ ಬಂದಿರುವಂತಿದೆ. (ಅದಕ್ಕೆ ತಕ್ಕಹಾಗೆ ಇವನ ಕಂಠಧ್ವನಿಯು ಅದಕ್ಕೆ ದೃಷ್ಟಾಂತವಾಗಿದೆ.) ಜ್ಞಾತಿಗಳಾದವರು ಪರಸ್ಪರ ವಿರೋಧವುಳ್ಳವರೆಂಬುದು ಲೋಕ ಪ್ರಸಿದ್ಧವೇ ಅಲ್ಲವೆ? ಸುಗ್ರೀವಾ! ಈ ವಿಭೀಷಣನು ಭಯಪಟ್ಟು ನಮ್ಮ ಬಳಿಗೈದಿರುವುದ ರಿಂದ ಇವನನ್ನುಪರಿಗ್ರಹಿಸಬಹುದು. ಮಿತ್ರ, ಸುಗ್ರೀವಾ! ಲೋಕದಲ್ಲಿ ಒಡಹುಟ್ಟಿದವರೆಲ್ಲರೂ

¶ "ಜ್ಯೇಷ್ಠಭ್ರಾತೃವು ಕೇವಲ ದುಷ್ಟನಾದರೂ ಅವನನ್ನು ಅನುಸರಿಸುವುದೇ ಲೋಕಧರ್ಮವು" ಎಂದರೆ, ಅದು ಹೌದಾದರೂ ಲೋಕದಲ್ಲಿ ಎಲ್ಲೆಡೆಯಲ್ಲಿಯೂ ಎಲ್ಲರೂ ಹಾಗಿಲ್ಲ: ಎಂದು ಹೀಗೆ ಹೇಳುವನು. "ಮದ್ವಿಧಾವಾಪಿತುಃ ಪುತ್ರಾಃ" ನಾನು ನನ್ನ ತಂದೆಗೆ ಹೇಗೆ ಮಗನಾಗಿರುವೆನೋ ಹಾಗೆ ಲೋಕದಲ್ಲಿ ಎಲ್ಲರೂ ಇರುವುದಿಲ್ಲ. ಹೀಗೆ ಹೇಳಿದುದ ರಿಂದ ಶ್ರೀರಾಮನು ತನ್ನನ್ನು ತಾನೇ ಪ್ರಶಂಸೆಮಾಡಿಕೊಂಡಂತಾಗಲಿಲ್ಲವೆ? ಎಂದರೆ - ಹಾಗಲ್ಲ; "ಕೃಪಾವಾನವಿಕತ್ಥನಃ" ಎಂಬಂತೆ ಕೇವಲ ಧೀರೋದಾತ್ತನಾದ ದುಷ್ಯಂತನು, "ಸತಾಂಹಿಸಂದೇಹಪದೇಷುವಸ್ತುಷು ಪ್ರಮಾಣಮಂತಃಕರಣ ಪ್ರವೃತ್ತಯಃ" ಎಂದೂ, ಹನುಮಂತನು, "ಪನ್ನಗಾಶನಮಾಕಾಶೇ ಪತಂತಂ ಪಕ್ಷಿಸೇವಿತೇ । ವೈನತೇಯಮಹಂಶಕ್ತಃ ಪರಿಗಂತುಂ ಸಹಸ್ರಧಾ" ಎಂದೂ ಹೇಳಿಕೊಂಡಿರುವರು. ದಂಡಿಯು ಕಾವ್ಯಾದರ್ಶದಲ್ಲಿ, "ಸ್ವಗುಣಾವಿಷ್ಕ್ರಿಯಾ ದೋಷಾ ನಾತ್ರ ಭೂತಾರ್ಥಶಂಸಿನಃ । ಅಪಿತ್ವನಿಯಮೋ ದುಷ್ಟಸ್ತಥಾಪ್ಯನ್ಯೈರುದೀರಣಾತ್ ||" ಭೂತಾರ್ಥ ಕಥನದಲ್ಲಿ ದೋಷವಿಲ್ಲವೆಂಬುದಾಗಿ ಹೇಳಿರುವುದರಿಂದ ಇದು ದೋಷವಾಗಿ ಎಣಿಸಲ್ಪಡುವುದಿಲ್ಲವು. ಅಥವಾ ಮೊದಲೇ "ಭರ ತೋಪಮಾಃ" ಎಂಬುದರಿಂದ ಆ ದೋಷವನ್ನೂ ಪರಿಹರಿಸುತ್ತಾನೆ. ಕೈಕೇಯಿಯವರದಿಂದ ಪ್ರಾಪ್ತವಾಗಿ, ತಂದೆಯು ಕೊಟ್ಟುದೂ ಆದ ರಾಜ್ಯವನ್ನೂ ತೊರೆದು ವನಕ್ಕೆ ನನ್ನ ಬಳಿಗೆ ಬಂದು, "ನಿನ್ನದೇ ರಾಜ್ಯ. ನೀನೇ ತೆಗೆದುಕೋ, ನಾನು ನಿನ್ನ ದಾಸ್ಯವನ್ನು ಮಾಡುತ್ತೇನೆ" ಎಂದು ಹೇಳಿದ ಭರತನಂತೆ ಎಲ್ಲಾ ತಮ್ಮಂದಿರೂ ಇರುವುದಿಲ್ಲವು. (ಇಂತಹ ಪ್ರಸಕ್ತಿಯೇ ಇಲ್ಲದಿರುವುದರಿಂದ ಲಕ್ಷ್ಮಣನನ್ನು ಇಲ್ಲಿ ಉದಾಹರಿಸಿಲ್ಲವೆಂದು ಗ್ರಾಹ್ಯವು) ಇದಕ್ಕೆ ದೃಷ್ಟಾಂತವನ್ನು ಹೇಳುವನು - ನನ್ನ ವಿರಹಮಾತ್ರದಿಂದಲೇ ತಂದೆಯು ಲೋಕಾಂತರಗತನಾದನು. ಅಂತಹ ತಂದೆಗೆ ಸಮಾನನಾದ ತಂದೆಯನ್ನು ಪಡೆದ ವನು ನನ್ನೊಬ್ಬನನ್ನುಳಿದು ಲೋಕದಲ್ಲಿ ಮತ್ತಾರು ತಾನೆ ಇದ್ದಾರೆ? ಅಥವಾ :—ನನ್ನಂತಹ ಮಕ್ಕಳು ತಂದೆಗಿರುವು ದಿಲ್ಲ. ಅಂದರೆ ನಿರತಿಶಯ ಪಿತೃವಾತ್ಸಲ್ಯಭೂತನಾದ ನನಗೆ ಸಮಾನರಾದ ಮಕ್ಕಳು ಯಾರೂ ಇರುವುದಿಲ್ಲವೆಂದರ್ಥ. ನನ್ನಂತಹ ಪುತ್ರರಿದ್ದರೂ ಇರಬಹುದು. ಆದರೆ ಭರತನಿಗೆ ಸಮಾನರಾದ ತಮ್ಮಂದಿರಾಗಲಿ, ನಿನಗೆ ಸಮಾನರಾದ ಸ್ನೇಹಿತ ರಾಗಲಿ ಇರುವುದಿಲ್ಲವೆಂದರ್ಥ. (ಸುಹೃದೋವಾಭವದ್ವಿಧಾಃ) ವರ್ಷರಾತ್ರಿಗಳನ್ನು ಕಳೆದ ನಾನು ಬಹಳವಾಗಿ ಮುನಿ ದರೂ, ಲಕ್ಷ್ಮಣನು ಬಹಳ ಕಠಿನವಾಗಿ ಅಲ್ಲೆಗಳೆದರೂ ನಮ್ಮಲ್ಲಿ ಪ್ರೇಮಾತಿಶಯವನ್ನೇ ತೋರಿದ ನಿನಗೆ ಸಮಾನರಾದ ಮಿತ್ರರು ಯಾರು ತಾನೆ ಇದ್ದಾರೆ? (ಅಥವಾ) ಮದ್ವಿಧಾವಾಪಿತುಃ ಪುತ್ರಾನಭವಂತಿ - ನಿರತಿಶಯ ಪಿತೃವಾತ್ಸಲ್ಯಭೂತ ನಾದ ನನಗೆ ಸಮಾನರಾದ ಪುತ್ರರು ಲೋಕದಲ್ಲಿರುವುದಿಲ್ಲವೆಂದರ್ಥ. (ತಣಿಶ್ಲೋಕಿ)

|| ೧೫ || ¶ ಏವಮುಕ್ತಸ್ತು ರಾಮೇಣ ಸುಗ್ರೀವಃ ಸಹಲಕ್ಷ್ಮಣಃ । ಉತ್ಥಾಯೇದಂ ಮಹಾಪ್ರಾಜ್ಞಃ ಪ್ರಣತೋ ವಾಕ್ಯಮಬ್ರವೀತ್ || ೧೬ || “ರಾವಣೇನ ಪ್ರಣಿಹಿತಂ ತಮವೇಹಿ ವಿಭೀಷಣಂ । ತಸ್ಯಾಽಹಂ ನಿಗ್ರಹಂ ಮನ್ಯೇ ಕ್ಷಮಂ ಕ್ಷಮವತಾಂವರ! ||೧೭|| ರಾಕ್ಷಸೋಃ ಜಿಹ್ಮಯಾ ಬುದ್ಧ್ಯಾ ಸಂದಿಷ್ಟೋಽಯಮಿಹಾಗತಃ । ಪ್ರಹರ್ತುಂ ತ್ವಯಿ ವಿಶ್ವಸ್ತೇ ಪ್ರಚ್ಛನ್ನೋ ಮಯಿ ವಾಽನಘ! ||೧೮|| ☙ ಲಕ್ಷ್ಮಣೇವಾ ಮಹಾ

ನಭವಂತಿ - ಆಗಲಾರರು ||೧೫|| ಏವಂ - ಈ ಪ್ರಕಾರವಾಗಿ, ರಾಮೇಣ - ಶ್ರೀರಾಮನಿಂದ, ಉಕ್ತಃ- ಹೇಳಲ್ಪಟ್ಟ, ಮಹಾಪ್ರಾಜ್ಞಃ - ಬಹಳ ತಿಳಿವಳಿಕೆಯುಳ್ಳ, ಸುಗ್ರೀವಃ - ಸುಗ್ರೀವನು, ಸಹಲಕ್ಷ್ಮಣಃ - ಲಕ್ಷ್ಮಣನೊಡಗೂಡಿ, ಉತ್ಥಾಯ - ಮೇಲಕ್ಕೆದ್ದು, ಪ್ರಣತಃ - ವಿಧೇಯನಾಗಿ, ಇದಂವಾಕ್ಯಂ - ಈ ಮಾತನ್ನು, ಅಬ್ರವೀತ್ - ನುಡಿದನು. || ೧೬ || ಕ್ಷಮವತಾಂ - ಸೈರಣೆಯುಳ್ಳವರಲ್ಲಿ, ವರ - ಉತ್ತಮನೇ, ತಂವಿಭೀಷಣಂ - ಆ ವಿಭೀಷಣನನ್ನು, ರಾವಣೇನ - ರಾವಣನಿಂದ, ಪ್ರಣಿಹಿತಂ - ಕಳುಹಿಸಲ್ಪಟ್ಟವನನ್ನಾಗಿ, ಅವೇಹಿ - ತಿಳಿದುಕೋ, ತಸ್ಯ - ಅವನ, ನಿಗ್ರಹಂ - ವಧೆಯನ್ನು, ಕ್ಷಮಂ - ಯೋಗ್ಯವನ್ನಾಗಿ, ಮನ್ಯೇ - ಎಣಿಸುತ್ತೇನೆ. || ೧೭ || ಹೇ ರಾಘವ - ಎಲೈ ಶ್ರೀರಾಮನೇ, ನೃಶಂಸಸ್ಯ - ಘಾತುಕನಾದ, ರಾವಣಸ್ಯ - ರಾವಣನ, ಭ್ರಾತಾ - ತಮ್ಮನಾದ, ರಾಕ್ಷಸಃ - ಅಸುರನಾದ, ಏಷವಿಭೀಷಣಃ - ಈ ವಿಭೀಷಣನು, ಜಿಹ್ಮಯಾ - ಕುಟಿಲವಾದ, ಬುದ್ಧ್ಯಾ - ಮತಿಯಿಂದ, ಸಂದಿಷ್ಟಃ - ಆಜ್ಞಾಪಿಸಲ್ಪಟ್ಟವನಾಗಿ, ವಿಶ್ವಸ್ತೇ - ನಂಬುಗೆಯುಳ್ಳ, ತ್ವಯಿ - ನಿನ್ನ ವಿಷಯದಲ್ಲಾಗಲಿ, ಮಯಿವಾ - ನನ್ನ ವಿಷಯದಲ್ಲೇ ಆಗಲಿ, ಲಕ್ಷ್ಮಣೇವಾ -

ಭರತನಂತಿರುವುದಿಲ್ಲ. ತಂದೆಗೆ ಮಕ್ಕಳಾದವರು ನನ್ನಂತೆಯೂ ಇರುವುದಿಲ್ಲವು. ಸ್ನೇಹಿತರೂ ಕೂಡ ನಿನ್ನಂತಿರುವುದಿಲ್ಲವು. ಆದುದರಿಂದ ಲೋಕದಲ್ಲಿರುವವರೆಲ್ಲರೂ ಪರಮ ಧರ್ಮಾತ್ಮರಾಗಿಯೇ ಇರುತ್ತಾರೆಂದು ಎಣಿಸದಿರು.” ||೧೧–೧೬|| ಶ್ರೀರಾಮಮೂರ್ತಿಯು ಈ ರೀತಿ ನುಡಿಯಲು ಅದನ್ನು ಕೇಳಿ ಮಹಾ ಪಂಡಿತನಾದ ಸುಗ್ರೀವನು ಆತನಿಗೆ ನಮಸ್ಕರಿಸಿ, “ಎಲೈ ದಮನಶೀಲರಲ್ಲಿ ಶ್ರೇಷ್ಠನಾದ ಶ್ರೀರಾಮನೇ! ರಾವಣಾಸುರನು ಈ ವಿಭೀಷಣನನ್ನು ರಹಸ್ಯವಾಗಿ ರಹಸ್ಯಭೇದನಕ್ಕಾಗಿಯೇ ಕಳುಹಿಸಿರುವನು. ಅದಕ್ಕಾಗಿಯೇ ಇವನಿಲ್ಲಿಗೆ ಬಂದಿರುವುದು. ನಿರ್ದುಷ್ಟನೇ, ಆಜಾನುಬಾಹುವೇ, ಶ್ರೀರಾಮಾ! ಈ ರಾಕ್ಷಸನು, ಕುಟಿಲೋಪಾಯಗಳಿಂದ ರಾವಣಾಸುರನು ಕಳುಹಿಸಲು ಇಲ್ಲಿಗೈತಂದಿರುವನು. ಇವನು ಪ್ರಚ್ಛನ್ನನಾಗಿದ್ದುಕೊಂಡು,

¶ “ಏವಮುಕ್ತಸ್ತು” ಎಂಬ ಶ್ಲೋಕದಿಂದ “ಏಷವಿಭೀಷಣಃ” ಎಂಬ ಶ್ಲೋಕಾಂತದವರೆಗಣ ಗ್ರಂಥಕ್ಕೆ ಅವತಾರಿಕೆ:—ಸುಗ್ರೀವನು ನೀತಿಮೂಲಕವಾಗಿ ವಿಭೀಷಣನ ತ್ಯಾಗವನ್ನು ಸಮರ್ಥಿಸಲು ಶಕ್ತನಾಗದೆ, “ಇವನನ್ನು ಪರಿಗ್ರಹಿಸಿದಲ್ಲಿ ಅವ್ಯಕ್ತಭಾವವುಳ್ಳ ಇವನು ಶ್ರೀರಾಮಮೂರ್ತಿಗೆಯಾವ ಅನರ್ಥವನ್ನುಂಟುಮಾಡುವನೋ” ಎಂದು ಯೋಚಿಸಿ ಪ್ರೇಮವಶದಿಂದ ವ್ಯಾಕುಲನಾಗಿ, ವಿಭೀಷಣಶರಣಾಗತಿಯೊಂದಕ್ಕಿಂತಲೂ, ತನ್ನ ಮತ್ತು ಲಕ್ಷ್ಮಣನ ಶರಣಾಗತಿಗಳೆರಡೂ ಪ್ರಬಲಗಳೆಂದರಿತು ಶರಣಾಗತಿಪೂರ್ವಕವಾಗಿಯೇ ವಿಭೀಷಣನ ನಿಗ್ರಹ ವಿಷಯದಲ್ಲಿ ಶ್ರೀರಾಮನನ್ನು ಪ್ರಾರ್ಥಿಸುತ್ತಾನೆ.(ಗೋ)

☙ ಇಲ್ಲಿ ತನಗೂ ಲಕ್ಷ್ಮಣನಿಗೂ ಅನರ್ಥವುಂಟಾಗಬಹುದೆಂದು ಸುಗ್ರೀವನು ಹೇಳಿರುವುದು, ಶ್ರೀರಾಮನಿಗೆ ಸ್ವವ್ಯಸನಕ್ಕಿಂತಲೂ, ಸ್ವಾಶ್ರಿತರಿಗೆ ಸಂಭವಿಸುವ ವ್ಯಸನಗಳೇ ಅತ್ಯಂತ ದುಃಖಾವಹವಾದುದರಿಂದ ಅದನ್ನೇ (ಆಶ್ರಿತರ ವ್ಯಸನಗಳನ್ನೇ) ಹೇಳಿ, ವಿಭೀಷಣನನ್ನು ಪರಿಗ್ರಹಿಸುವುದು ಅಸಮಂಜಸವೆಂದು ಪ್ರತಿಪಾದಿಸುವುದಕ್ಕಾಗಿ ಎಂದು ತಿಳಿಯಬೇಕು. (ಗೋ)

ಬಾಹೋ! ಸವಧ್ಯಃ ಸಚಿವೈಸ್ಸಹ। ರಾವಣಸ್ಯ ನೃಶಂಸಸ್ಯ ಭ್ರಾತಾ ಹ್ಯೇಷ ವಿಭೀಷಣಃ"
॥ ೧೯ ॥ ಏವಮುಕ್ತ್ವಾ ರಘುಶ್ರೇಷ್ಠಂ ಸುಗ್ರೀವೋ ವಾಹಿನೀಪತಿಃ । ವಾಕ್ಯಜ್ಞೋ
ವಾಕ್ಯಕುಶಲಂ ತತೋ ಮೌನಮುಪಾಗಮತ್ ॥ ೨೦ ॥ ಸುಗ್ರೀವಸ್ಯತು ತದ್ವಾಕ್ಯಂ
ರಾಮಃ ಶ್ರುತ್ವಾ ವಿಮೃಶ್ಯಚ । ತತಶ್ಶುಭತರಂ ವಾಕ್ಯಮುವಾಚ ಹರಿಪುಂಗವಂ ॥೨೧॥
"ಸುದುಷ್ಟೋವಾಪ್ಯದುಷ್ಟೋವಾ ಕಿಮೇಷ ರಜನೀಚರಃ? । ಸೂಕ್ಷ್ಮಮಪ್ಯಹಿತಂ
ಕರ್ತುಂ ಮಮಾಽಶಕ್ತಃ ಕಥಂಚನ ॥ ೨೨ ॥ ¶ ಪಿಶಾಚಾನ್ ದಾನವಾನ್ ಯಕ್ಷಾನ್

---

ಲಕ್ಷ್ಮಣನ ವಿಷಯದಲ್ಲಿಯಾಗಲಿ, ಪ್ರಹರ್ತುಂ - ಹೊಡೆಯುವದಕ್ಕಾಗಿ, ಪ್ರಚ್ಛನ್ನಃ - ಗೂಢಚಾರಿಯಾಗಿ, ಇಹ - ಇಲ್ಲಿಗೆ, ಆಗತಃ - ಬಂದಿದ್ದಾನೆ, ಹೇ ಮಹಾಬಾಹೋ - ಎಲೈ ಮಹಾ ಭುಜನೇ, ಸಚಿವೈಸ್ಸಹ - ಮಂತ್ರಿಗಳೊಡನೆ, ಸಃ - ಅವನು, ವಧ್ಯಃ - ವಧಾರ್ಹನು. ॥ ೧೮-೧೯ ॥ ವಾಹಿನೀಪತಿಃ - ವಾನರಯೂಥಪತಿಯಾದ, ವಾಕ್ಯಜ್ಞಃ - ವಾಕ್ಯಾರ್ಥವನ್ನರಿತಿರುವ, ಸುಗ್ರೀವಃ - ಸುಗ್ರೀವನು, ವಾಕ್ಯಕುಶಲಂ - ಮಾತುಗಳಲ್ಲಿ ಚತುರನಾದ, ರಘುಶ್ರೇಷ್ಠಂ - ಶ್ರೀರಾಮನನ್ನು ಕುರಿತು, ಏವಂ - ಈ ಪರಿಯಾಗಿ, ಉಕ್ತ್ವಾ - ಹೇಳಿ, ತತಃ - ಬಳಿಕ, ಮೌನಂ - ಮೌನವನ್ನು, ಉಪಾಗಮತ್ - ಹೊಂದಿದನು. ॥೨೦॥ ತತಃ - ಬಳಿಕ, ರಾಮಃ - ಶ್ರೀರಾಮನು, ಸುಗ್ರೀವಸ್ಯ - ಸುಗ್ರೀವನ, ತದ್ವಾಕ್ಯಂತು - ಆ ಮಾತನ್ನಾದರೆ, ಶ್ರುತ್ವಾ - ಕೇಳಿ, ವಿಮೃಶ್ಯಚ - ಚನ್ನಾಗಿ ಯೋಚನೆಯನ್ನೂ ಮಾಡಿ, ಹರಿಪುಂಗವಂ - ಸುಗ್ರೀವನನ್ನು ಕುರಿತು, ಶುಭತರಂ - ಅತ್ಯಂತ ಶುಭಕರವಾದ, ವಾಕ್ಯಂ - ಮಾತನ್ನು, ಉವಾಚ - ಹೇಳಿದನು. ॥ ೨೧ ॥ ಏಷರಜನೀಚರಃ - ಈ ರಾಕ್ಷಸನು, ಸುದುಷ್ಟೋವಾ - ದುಷ್ಟನೇ ಆಗಲಿ, ಅದುಷ್ಟೋವಾ - ದುಷ್ಟನಾಗದಿರಲಿ, ಮಮ - ನನಗೆ, ಸೂಕ್ಷ್ಮಮಪಿ - ಸ್ವಲ್ಪವಾದರೂ, ಅಹಿತಂ - ಅಪಕಾರವನ್ನು, ಕಥಂಚನ - ಹೇಗಾದರೂ, ಕರ್ತುಂ - ಮಾಡುವುದಕ್ಕೆ, ಅಶಕ್ತಃ - ಸಾಮರ್ಥ್ಯವಿಲ್ಲದವನು. ॥೨೨॥ ಹೇ ಹರಿಗಣೇಶ್ವರ - ಎಲೈ ವಾನರಸಮೂಹಾಧಿಪತಿಯೇ, ಪಿಶಾಚಾನ್ - ಪಿಶಾಚರನ್ನೂ, ದಾನವಾನ್ - ದಾನವರನ್ನೂ, ಯಕ್ಷಾನ್ - ಯಕ್ಷರನ್ನೂ, ರಾಕ್ಷಸಾನ್ -

---

ನಮಗೆ ನಂಬುಗೆಯನ್ನು ಹುಟ್ಟಿಸಿ ನಿನ್ನನ್ನೂ, ನನ್ನನ್ನೂ, ಲಕ್ಷ್ಮಣನನ್ನೂ ಪ್ರಹರಿಸಲು ಬಯಸಿದ್ದಾನೆ. ನೀನು ಇವನನ್ನು ಸೇರಿಸಿಕೊಳ್ಳಕೂಡದು ಖಂಡಿತವಾಗಿಯೂ ಇವನನ್ನು ಮಂತ್ರಿವರ್ಗ ಸಮೇತವಾಗಿ ಇವನನ್ನು ಕೊಲ್ಲಬೇಕು, ಈ ವಿಭೀಷಣನು ಮಹಾ ಕಠಿನಾತ್ಮನಾದ ಆ ರಾವಣಾಸುರನ ತಮ್ಮನಲ್ಲವೆ? ಇವನನ್ನು ನಂಬುವದೆಂತು?" ಎಂದು ಹೇಳಿದನು. ವಾನರೇಶ್ವರನೂ, ಮಾತನಾಡುವುದರಲ್ಲಿ ಚತುರನೂ ಆದಸುಗ್ರೀವನು, ಮಾತುಗಳಲ್ಲಿ ಪಂಡಿತನೂ, ರಘುವಂಶಸಂಭವನೂ ಆದ ಶ್ರೀರಾಮನೊಡನೆ ಈ ರೀತಿ ನುಡಿದು ಸುಮ್ಮನಾದನು. ॥೧೭-೨೦॥ ಆಗ ಶ್ರೀರಾಮಚಂದ್ರನು ಸುಗ್ರೀವನ ಮಾತುಗಳನ್ನುಕೇಳಿ ಸ್ವಲ್ಪಹೊತ್ತು ಆಲೋಚಿಸಿ ಆಮೇಲೆ ಅವನನ್ನು ಕುರಿತು ಮಂಗಳಕರವಾಗಿ, "ಸುಗ್ರೀವಾ! ರಾಕ್ಷಸೋತ್ತಮನಾದ ಈ ವಿಭೀಷಣನು ಪರಮ ದುಷ್ಟನೇ ಆಗಿರಲಿ, ಅಥವಾ ಪರಮ ಯೋಗ್ಯನೇ ಆಗಿರಲಿ. ಇವನು ಯಾವ ವಿಧದಲ್ಲಿಯೂ ನನಗೆ ಕೆಡುಕನ್ನುಂಟುಮಾಡಲು ಶಕ್ತನಲ್ಲವು. ಅಯ್ಯಾ ವಾನರೇಶ್ವರನೇ! ನನಗೆ ಕೋಪವು ಬಂದು ನಾನು ಸಂಹರಿಸಬೇಕೆಂದು ಬಯಸಿದರೆ ಲಂಕಾನಗರ

---

¶ "ಈ ವಿಭೀಷಣನು ನನಗಾಗಲಿ, ನನ್ನನ್ನಾಶ್ರಯಿಸಿರುವ ನನ್ನ ಸಂಬಂಧಿಗಳಿಗಾಗಲಿ, ಅವರ ಸಂಬಂಧಿಗಳಿಗಾ

**ಪೃಥಿವ್ಯಾಂ ಚೈವ ರಾಕ್ಷಸಾನ್ | ಅಂಗುಳ್ಯಗ್ರೇಣ ತಾನ್ ಹನ್ಯಾಮಿಚ್ಛನ್ ಹರಿಗಣೇಶ್ವರ! || ೨೩ || ¶ ಶ್ರೂಯತೇ ಹಿ ಕಪೋತೇನ ಶತ್ರುಃ ಶರಣಮಾಗತಃ | ಅರ್ಚಿತಶ್ಚ ಯಥಾ**

ರಾಕ್ಷಸರನ್ನೂ, ಪೃಥಿವ್ಯಾಂ - ಭೂಮಿಯಲ್ಲಿರುವ, ತಾನ್ - ಅವರೆಲ್ಲರನ್ನೂ, ಅಂಗುಳ್ಯಗ್ರೇಣ - ಇತರಾಪೇಕ್ಷೆಯಿಲ್ಲದಿರುವ ಒಂದು ಬೆರಳಿನ ಕೊನೆಯಿಂದ, (ಅಂದರೆ - ನಖಾಗ್ರದಿಂದ), ಇಚ್ಛನ್ - ಇಚ್ಛಿಸಿದವನಾದರೆ, ಹನ್ಯಾಂ - ಕೊಲ್ಲುವೆನು. || ೨೩ || ಕಪೋತೇನ - ಕ್ಷುದ್ರಜಂತುವಾದ ಕಪೋತಪಕ್ಷಿಯಿಂದ, ಶತ್ರುಃ - ಭಾರ್ಯಾಪಹರಣಮಾಡಿದ್ದರಿಂದ ಹಗೆಯಾದ ಬೇಡನು, ಶರಣಂ - ತನಗೆ ನಿವಾಸ

ದಲ್ಲಿರುವ ಸಮಸ್ತ ರಾಕ್ಷಸರನ್ನೂ, ಪಿಶಾಚಗಳನ್ನೂ, ದಾನವರನ್ನೂ, ಯಕ್ಷರನ್ನೂ ಸಹ ನನ ಬೆರಳಿನ ತುದಿಯಿಂದಲೇ ಸಂಹರಿಸಬಲ್ಲೆನು. ಹಾಗೆ ಮಾಡುವುದಕ್ಕೆ ನಾನು ಸಮರ್ಥನೇ ಆಗಿರುವೆನು. ಆ ವಿಷಯವು ಹಾಗಿರಲಿ. ಒಂದು ಪಾರಿವಾಳವು ತನ್ನನ್ನು ಶರಣುಹೊಕ್ಕ ತನ್ನ

ಗಲಿ ಎಳ್ಳಷ್ಟೂ ಅಪಕಾರವನ್ನು ಮಾಡಲಾರನು ; ಹಾಗೆ ಮಾಡಲು ಅವನಿಗೆ ಸಾಮರ್ಥ್ಯವೂ ಇಲ್ಲ" ಅದು ಹೇಗೆ ? ಎಂದರೆ ಅದೇ ಅರ್ಥವನ್ನೇ ಸ್ವಶಕ್ತಿ ಪ್ರತಿಪಾದನಪೂರ್ವಕವಾಗಿ ಸಮರ್ಥಿಸುವನು.

(ಹರಿಗಣೇಶ್ವರ) ಎಲೈ ಕಪಿನಾಯಕನೇ ! ಸಮಸ್ತ ಸೇನೆಗಳೊಡನೆ ನೀನಿಲ್ಲಿಯೇ ಇರು. ಈ ರಾಕ್ಷಸರನ್ನು ಸಂಹರಿಸುವುದಕ್ಕೆ ನಾನೊಬ್ಬನೇ ಸಾಕು. (ಅಂಗುಳ್ಯಗ್ರೇಣ) ಶಸ್ತ್ರಾದಿಗಳ ಪ್ರಸಂಗವೇ ಇಲ್ಲದೆ, ಅಂಗುಳಿಯ ಮಧ್ಯಭಾಗದ ಸಹಾಯಾಪೇಕ್ಷೆಯೇ ಇಲ್ಲದೆ, ಅದರಲ್ಲಿಯೂ ಹಸ್ತಪಾದಾದಿಗಳ ವಿಶೇಷ ವಿವಕ್ಷೆಯೇ ಇಲ್ಲದ ಅಂಗುಳ್ಯಗ್ರಭಾಗ ಮಾತ್ರದಿಂದ, ಲಂಕಾನಿವಾಸಿಗಳನ್ನು ಮಾತ್ರವಲ್ಲ, ಸ್ಥಾನಾಂತರಗಳಲ್ಲಿರುವ, ಏಕ-ಭೂಮಂಡಲದಲ್ಲಿಯೇ ಇರುವ, ಏಕ ಜಾತಿಯವರನ್ನಲ್ಲ, ಪಿಶಾಚ, ದಾನವ, ಯಕ್ಷರೇ ಮೊದಲಾಗಿ ಸಮಸ್ತರನ್ನೂ ಕೊಲ್ಲಲು ನಾನು ಶಕ್ತನಾಗಿರುವೆನು. "ಲಂಕಾನಿವಾಸಿಗಳಾದ ರಾಕ್ಷಸರನ್ನು ಮಾತ್ರ ಏಕೆ ಕೊಲ್ಲುವುದಿಲ್ಲ?" ಎಂದರೆ (ಇಚ್ಛನ್) ಇಚ್ಛಾಭಾವದಿಂದ ವಧಾಭಾವವೆಂದು ಗ್ರಾಹ್ಯವು. (ತನಿಶ್ಲೋಕಿ)

¶ "ಹೀಗೆ ಇವನಿಂದ ಯಾವ ಅಪಕಾರಶಂಕೆಯೂ ಇರುವುದಿಲ್ಲವೆಂದು ಸಿದ್ಧವಾಯಿತು. ಅಥವಾ ಇವನು ಅಪಕಾರಿಯೇ ಆಗಿರಲಿ; ಇವನು ಮಾಡುವ ಅಪಕಾರದಿಂದ ನನ್ನ ಪ್ರಾಣಗಳು ಹೋದರೂ ಹೋಗಲಿ ; ಹಾಗಾದರೂ ಇವನು ನಿಗ್ರಾಹ್ಯನಲ್ಲವು, ಪರಿತ್ಯಾಜ್ಯನೂ ಅಲ್ಲವು. ಅವಶ್ಯವೂ ಸಂರಕ್ಷಣೀಯನೇ" ಎಂದು ತಿಳಿಸುವುದಕ್ಕಾಗಿ ಶ್ರೀರಾಮಮೂರ್ತಿಯು ಕಪೋತೋಪಾಖ್ಯಾನವನ್ನು ಬಿತ್ತರಿಸುವನು.

ಶ್ರೂಯತೇ (ಹಿ)— ಈ ಆಖ್ಯಾಯಿಕೆಯು ಸುಪ್ರಸಿದ್ಧವಾದುದು. (ಇದನ್ನು ಎಲ್ಲರೂ ಕೇಳಿಯೇ ಇರುವರಷ್ಟೆ) (ಕಪೋತಃ) ಧರ್ಮಾಧಿಕಾರವೇ ಇಲ್ಲದಿರುವ ತಿರ್ಯಜ್ಮಾತ್ರವಾದ ಕಪೋತದಿಂದ ಅನುಷ್ಠಿಸಲ್ಪಟ್ಟಿತೆಂದರೆ, ಧರ್ಮಾಧಿಕಾರವುಳ್ಳ ನಮ್ಮ ವಿಷಯದಲ್ಲಿ ಹೇಳತಕ್ಕುದೇನು ? ಎಂದರ್ಥವು. ಅಥವಾ-ಸಹಾಯಶೂನ್ಯವಾದ ಆ ಕಪೋತವು ಈ ಶರಣಾಗತರಕ್ಷಣವನ್ನು ಮಾಡಿತು. ಸಸಹಾಯರಾದ ನಮ್ಮ ವಿಷಯದಲ್ಲಿ ಹೇಳತಕ್ಕುದೇನು ? ಎಂದರ್ಥವು. (ಶತ್ರುಃ) ಆ ಕಪೋತಕ್ಕೆ ಬೇಡನವನು ಭಾರ್ಯೆಯನ್ನು ಅಪಹರಿಸಿದ ವೈರಿಯು, ವಿಭೀಷಣನಾದರೆ ನಮಗೆ ಹಾಗೆ ವೈರಿಯಲ್ಲವು, ಹಾಗಾದರೂ ಇವನನ್ನು ರಕ್ಷಿಸದಿದ್ದಮೇಲೆ ನಮ್ಮ ಪೌರುಷದಿಂದೇನು ಪ್ರಯೋಜನವು ? ಆ ಕಪೋತವು ಸ್ವಭಾರ್ಯಾಪಹರಣ ಮಾಡಿ ತನಗೆ ವೈರಿಯಾದ ಆ ವ್ಯಾಧನನ್ನೇ ರಕ್ಷಿಸಲಿಲ್ಲವೆ? (ಶರಣಮಾಗತಃ) ಆ ಕಪೋತವು ವಾಸವಾಗಿದ್ದ ಮರದ ಬಳಿಗೆ ಯದೃಚ್ಛೆಯಿಂದ ಬಂದನು, (ಸೋಂಜಲಿಂ ಶಿರಸಾ ಬಧ್ವಾ ವಾಕ್ಯಮಾಹ ವನಸ್ಪತಿಂ | "ಶರಣಂ ಹಿ ಗತೋಽಸ್ಮ್ಯದ್ಯ ದೇವತಾಮಿಹ ವಾಸಿನೀಂ||" ಎಂದು ತಾನು (ಕಪೋತವು) ವಾಸವಾಗಿದ್ದ ದ್ರುಮದೇವತೆಯನ್ನು ಕುರಿತು ಹೇಳಿದನು; ತನ್ನನ್ನು ಕುರಿತಲ್ಲ. ಈ ವಿಭೀಷಣನಾದರೋ "ರಾಘವಂ ಶರಣಾಗತಃ" ಎಂದು ಪ್ರತ್ಯಕ್ಷವಾಗಿ ನನ್ನನ್ನು ಕುರಿತೇ ಶರಣಾಗತನಾಗಿ ಬಂದಿರುವನು. (ಅಥವಾ - "ಶರಣಂ" ಎಂದರೆ ಮನೆ - "ಶಾಖಿನಃ ಪಕ್ಷಿಣಾಂ ಗೃಹಂ" ಎಂಬಂತೆ ದ್ರುಮರೂಪವಾದ ತನ್ನ ಮನೆಗೆ ಬಂದನು. ಮನೆಗೆ ಮಾತ್ರ ಬಂದನಲ್ಲದೆ ಶರಣೆಂದು ಬರಲಿಲ್ಲವು ಎಂದರ್ಥ) ಇಂಥವನನ್ನು ಆ ಕಪೋತವು ಸತ್ಕರಿಸಿತು ; ಅವನು ಬೇಡನಾದರೂ, ತನ್ನ ಶತ್ರುವಾದರೂ, ಸ್ವಭಾರ್ಯಾಪಹಾರಿಯಾದರೂ, ಕಷ್ಟಕ್ಕೆ ಸಿಕ್ಕಿದ್ದರೂ ಉಪೇಕ್ಷಿಸಿದರೆ ತನ್ನ ವಧೋಪಾಯವನ್ನೇ ಹುಡುಕುವವನಾದರೂ, ಕರ್ತವ್ಯಕಾಲವೊದಗಲು, ಅತಿಥಿಯಾದ ಅವನನ್ನು

ನ್ಯಾಯಂ ಸ್ವೈಶ್ಚ ಮಾಂಸೈರ್ನಿಮಂತ್ರಿತಃ ||೨೪|| ¶ ಸಹಿ ತಂ ಪ್ರತಿಜಗ್ರಾಹ ಭಾರ್ಯಾ ಹರ್ತಾರಮಾಗತಂ| ಕಪೋತೋ ವಾನರಶ್ರೇಷ್ಠ! ಕಿಂ ಪುನರ್ಮದ್ವಿಧೋಜನಃ? ||೨೫||

ಭೂತವಾದ ವೃಕ್ಷವನ್ನು ಕುರಿತು, ಆಗತಃ - ಬಂದವನಾಗಿ, ಯಥಾನ್ಯಾಯಂ - ಯಥಾಯೋಗ್ಯವಾಗಿ, ಅರ್ಚಿತಃ - ಪೂಜಿಸಲ್ಪಟ್ಟವನಾಗಿ, ಸ್ವೈಃ - ಸ್ವಕೀಯವಾದ, ಮಾಂಸೈಶ್ಚ - ಮಾಂಸಗಳಿಂದಲೂ, ನಿಮಂತ್ರಿತಃ - ಕರೆಯಲ್ಪಟ್ಟನೆಂದು, ಶ್ರೂಯತೇಹಿ - ಕೇಳಲ್ಪಟ್ಟದೆಯಷ್ಟೆ, ಹೇ ವಾನರಶ್ರೇಷ್ಠ - ಎಲೈ ವಾನರೋತ್ತಮನೇ, ಸಕಪೋತಃ-ಆ ಕಪೋತಪಕ್ಷಿಯು, ಭಾರ್ಯಾಹರ್ತಾರಂ-ತನ್ನ ಭಾರ್ಯೆಯನ್ನಪಹರಿಸಿದವನಾದರೂ, ಆಗತಂ - ಬಂದ, ತಂ - ಆ ವ್ಯಾಧನನ್ನು, ಪ್ರತಿಜಗ್ರಾಹಹಿ - ಎದುರ್ಗೊಂಡು ಸ್ವೀಕರಿಸಿದನಷ್ಟೆ, ಮದ್ವಿಧಃ - (ಮ) ಸಕಲ ಶಾಸ್ತ್ರಗಳಿಗೂ ಅಧಿಕಾರಿಯಾದ ನನ್ನಂಥಾವನು, ಕಿಂಪುನಃ - ಏನು ಹೇಳತಕ್ಕದ್ದು. || ೨೪-೨೫ || ಕಣ್ವಸ್ಯಋಷೇಃ - ಕಣ್ವಋಷಿಯ, ಪುತ್ರೇಣ - ಮಗ

ಶತ್ರುವೊಬ್ಬನನ್ನು ಯಥಾ ನ್ಯಾಯವಾಗಿ ಸತ್ಕರಿಸಿ ತನ್ನ ಮಾಂಸವನ್ನೇ ಅವನಿಗೆ ಆಹಾರವನ್ನಾಗಿ ಕೊಟ್ಟು ತಿನ್ನೆಂದು ಪ್ರಾರ್ಥಿಸಿತು. ಈ ಕತೆಯು ಲೋಕದಲ್ಲಿ ಪ್ರಸಿದ್ಧವಾಗಿರುದಲ್ಲವೆ ! ಅಯ್ಯಾ ಕಪಿಶ್ರೇಷ್ಠನೇ! ಆ ಕಪೋತವು ತನ್ನ ಭಾರ್ಯೆಯನ್ನು ಅಪಹರಿಸಿದ ಆ ಬೇಡನನು ತನ್ನೆಡೆಗೆ ಬರಲಾಗಿ ಅವನಿಗೆ ಶರಣ್ಯವಾಗಿ ಸಂರಕ್ಷಿಸಿತಂತೆ. ಹೀಗಿರುವಾಗ ಮಾನವನು ಶರಣು ಹೊಕ್ಕ ತನ್ನ ಶತ್ರುವನ್ನಾದರೂ ಕಾಪಾಡಬೇಕೆಂದು ಬೇರೆ ಹೇಳಬೇಕೇ? ||೨೧—೨೫|| ಪೂರ್ವ

ದೇವತೆಯೆಂದರಿತು ಶೀತನಿವಾರಣೆಗಾಗಿ ಬೆಂಕಿಯನ್ನು ತಂದುಕೊಟ್ಟು ಸತ್ಕರಿಸಿತು. ನಾವಾದರೋ, “ವಧ್ಯತಾಮೇಷ ತೀವ್ರೇಣ ದಂಡೇನ ಸಚಿವೈಸ್ಸಹ” ಎಂದು, ನಮ್ಮಲ್ಲಿ ಶರಣಾಗತನಾಗಿ ಬಂದಿರುವ ಈ ವಿಭೀಷಣನನ್ನು ಅನುಬಂಧಿಪರ್ಯಂತವಾಗಿ ಚೆನ್ನಾಗಿಯೇ ಅರ್ಚಿಸುತ್ತಿರುವೆವು ! (ಯಥಾನ್ಯಾಯಂ) ಮಿತ್ರನು ಬಂದ ಕಾಲದಲ್ಲಿ ಹೇಗೋ ಹಾಗೆ, ಅಂತರ್ವಿಷಾದ ಲೇಶವೂ ಇಲ್ಲದೆ ಕ್ಷುನ್ನಿವೃತ್ತಿಯಾಗುವವರೆಗೂ ಆದರಿಸಲ್ಪಟ್ಟನು. ಅಥವಾ ವಂಚನೆಯಿಲ್ಲದೆ, ಪ್ರಿಯವಚನಾದಿಗಳಿಂದ ಆದರಿಸಲ್ಪಟ್ಟನೆಂದರ್ಥವು. (ಸ್ವೈಶ್ಚಮಾಂಸೈರ್ನಿಮಂತ್ರಿತಃ) ಹೊರಗಣ ಪದಾರ್ಥಗಳನ್ನು ಕೊಟ್ಟು ಉಪಚರಿಸಿದುದು ಮಾತ್ರವಲ್ಲ. (ಅಜ್ಞರು ಶರೀರವೇ ಆತ್ಮವೆಂದು ತಿಳಿದಿರುವುದರಿಂದ) ಶರೀರವನ್ನೇ ಕೊಟ್ಟು ಉಪಚರಿಸಿತು (ಜ್ಞಾನಿಗಳೂ ಸಹ, “ಶರೀರಮಾದ್ಯಂಖಲು ಧರ್ಮಸಾಧನಂ” ಎಂದು ಹೇಳುವರಷ್ಟೆ) ಆದುದರಿಂದ ಆ ಕಪೋತವು - ಶರಭಂಗನಂತೆ ಇದೇ ಒಂದು ಮಹತ್ತಪವೆಂದರಿತು ತನ್ನ ಶರೀರವನ್ನೇ ಬೆಂಕಿಯಲ್ಲಿ ಕೆಡವಿಕೊಂಡಿತು. (ನಿಮಂತ್ರಿತಃ) ತನ್ನ ಶರೀರವನ್ನೇ ಭೋಜನಾರ್ಥವಾಗಿ ನಿಯೋಜಿಸಿತು. !ಹೀಗಿರುವಾಗ ನಮ್ಮಂಥವರು (ಜ್ಞಾನಿಗಳೂ, ಧರ್ಮಾಧಿಕಾರಿಗಳೂ ಆದವರು) ಶರಣಾಗತರನ್ನು ಸತ್ಕರಿಸಬೇಕೆಂದು ಬೇರೆ ಹೇಳಬೇಕೆ? ಎಂದರ್ಥವು. (ತನಿಶ್ಲೋಕಿ)

¶ ಹಿಂದಣ ಶ್ಲೋಕಾರ್ಥವನ್ನೇ ಈ ಶ್ಲೋಕದಲ್ಲಿ ದೃಢಪಡಿಸುವನು.

(ಸಕಪೋತಃ) ಆ ಕಪೋತವು ನಮ್ಮಂತೆ ಧರ್ಮಾನುಷ್ಠಾನ ಯೋಗ್ಯವಾದ ಜಾತಿಯಲ್ಲಿಯಾಗಲಿ, ಶರಣ್ಯರ ವಂಶದಲ್ಲಿಯಾಗಲಿ ಜನ್ಮವೆತ್ತಿದುದಲ್ಲ. ಹೀಗಾದರೂ, (ತಂ) ಜಾತಿಯಲ್ಲಿಯೂ, ಸ್ವಭಾವದಲ್ಲಿಯೂ ಕೇವಲ ನೀಚನಾದ - ಅಖಿಲ ಪಕ್ಷಿಜಾತಿಗಳಿಗೆ ಕೇವಲ ಶತ್ರುವಾದ - ತನ್ನ ಬಳಿಗೆ ಯದೃಚ್ಛೆಯಿಂದ ಬಂದು ಬಿದ್ದ - ಉಪಾಯಾಂತರ ಶೂನ್ಯನಾದ - ವಿಪರೀತಾನುಷ್ಠಾನೈಕ ನಿರತನಾದ - ಲವಲೇಶ ಕರುಣೆಯಿಂದಾಗಲಿ, ಅನುಕೂಲವಾದ ಪ್ರಸಂಗದಿಂದಾಗಲಿ ಕೂಡಿಲ್ಲದ - ಆ ಬೇಡರವನನ್ನು, (ಪ್ರತಿಜಗ್ರಾಹ) ಸ್ವಶರೀರತ್ಯಾಗದಿಂದ ಅಂಗೀಕರಿಸಿ ಪಾಲಿಸಿತಷ್ಟೆ. (ಹಿಂದಣ ಶ್ಲೋಕದಲ್ಲಿ ಶತ್ರುವೆಂದು ಸಾಮಾನ್ಯವಾಗಿ ಹೇಳಿದ ಅರ್ಥವನ್ನೇ ಇಲ್ಲಿ ಅವನ ವೃತ್ತಿಪ್ರದರ್ಶನದಿಂದ ವಿಶದಗೊಳಿಸುವನು ; “ಭಾರ್ಯಾಹರ್ತಾರಂ” ಎಂದು. (ಈ ವಿಭೀಷಣನು ನಮ್ಮಲ್ಲಿಗೆ ಶರಣಾಗತನಾಗಿ ಬಂದಂತೆ, ನನ್ನ ಭಾರ್ಯೆಯನ್ನಪಹರಿಸಿದ ರಾವಣನೂ ಬಂದರೆ ಅವನನ್ನೂ ಸಂರಕ್ಷಿಸಬೇಕೆಂದು ಇಲ್ಲಿನ ಭಾವವು) (ಆಗತಂ) ಆ ಬೇಡರವನು, ಕಪೋತವು ವಾಸವಾಗಿದ್ದ ಮರದ ಬಳಿಗೆ ಬಂದ ಮಾತ್ರದಿಂದಲೇ ಅದು ಅವನನ್ನು ಪರಿಗ್ರಹಿಸುವ ಉಪಾಯವನ್ನು ಮಾಡಿತು. ಆ ಬೇಡರವನು ತಾನು ನೆಲಸಿದ್ದ ಮರದ ಬಳಿಗೆ ಬಂದುದನ್ನು ಮಾತ್ರ ಆ ಕಪೋತವು ಕಂಡಿತಲ್ಲದೆ, ಅವನು, ಶರಣೆಂದುದನ್ನು ಕೇಳಲಿಲ್ಲವು,

೯ ಋಷೇಃ ಕಣ್ವಸ್ಯ ಪುತ್ರೇಣ ಕಂಡುನಾ ಪರಮರ್ಷಿಣಾ । ಶೃಣು ಗಾಥಾಂ ಪುರಾ

ನಾವ, ಕಂಡುನಾಪರಮರ್ಷಿಣಾ - ಕಂಡುವೆಂಬ ಮಹರ್ಷಿಯಿಂದ, ಪುರಾ - ಪೂರ್ವದಲ್ಲಿ, ಗೀತಾಂ - ಗಾನಮಾಡಲ್ಪಟ್ಟ, ಧರ್ಮಿಷ್ಠಾಂ-ಧರ್ಮಪರವಾದ, ಸತ್ಯವಾದಿನೀಂ-ಸಿದ್ಧಾಂತಾರ್ಥಪ್ರಪಾದಕವಾದ,

ದಲ್ಲಿ ಕಣ್ವಮುನಿ ಪುತ್ರನೂ, ಸತ್ಯವಚನನೂ, ಋಷಿಶ್ರೇಷ್ಠನೂ ಆದ ಕಂಡುವು ಪರಮ ಧರ್ಮ ಬೋಧಕವೂ, ಸತ್ಯಾರ್ಥಪ್ರತಿಪಾದಕವೂ ಆದ ಗಾಥೆಯನ್ನು ಹೇಳಿದನು. ಅದನ್ನು

ಇಲ್ಲಿ "ಸಹಿ" ಎಂಬುದರಿಂದಲೇ ಕಪೋತವೆಂದು ಅರ್ಥಸಿದ್ಧಿಯಾಗುವಾಗ, ಪುನಃ "ಕಪೋತಃ" ಎಂದು ಹೇಳಿರುವುದು, "ಶ್ಯೇನಕಪೋತೋಪಾಖ್ಯಾನ"ದಂತೆ ಈ ಕಪೋತವು ವೇಷವನ್ನು ಧರಿಸಿದ ದೇವತೆಯೂ ಅಲ್ಲ; ಮುನಿಯೂ ಅಲ್ಲ; ಕೇವಲ ಪ್ರಾಕೃತ ಕಪೋತವೇ, ಎಂಬ ವಿಷಯವನ್ನು ತಿಳಿಸುವುದಕ್ಕಾಗಿ ಎಂದು ತಿಳಿಯಬೇಕು. ಈ ಕಪೋತವು ಪ್ರಾಕ್ತನ ಕರ್ಮಪರಿಪಾಕದಿಂದ ಗಜೇಂದ್ರಾದಿಗಳಂತೆ ಈ ರೀತಿಯಾದ ಧರ್ಮವನ್ನು ಅನುಷ್ಠಿಸಿತು. (ಇಲ್ಲಿ "ಕಪೋತಃ" ಎಂದು ಹೇಳಿರುವುದರಿಂದ ತಿರ್ಯಕ್ತ್ವ, ಶಾಸ್ತ್ರಾನಧಿಕಾರತ್ವ, ಬುದ್ಧಿಮಾಂದ್ಯ ಇವು ಸೂಚಿತವಾಯಿತು) "ಹೇ ವಾನರಶ್ರೇಷ್ಠ" ಎಂಬ ಸಂಬೋಧನೆಯ ಸ್ವಾರಸ್ಯ,—ಮತ್ತೊಂದು ತಿರ್ಯಕ್ ಪ್ರಾಣಿಯು ಶತ್ರುವಾದ ಕಿರಾತನನ್ನು ಹೀಗೆಯೇ ಸಂರಕ್ಷಿಸಿತು; ಆ ಕಥೆಯನ್ನು ಹೇಳುವೆನು ಕೇಳು.

"ಹುಲಿಗೆ ಹೆದರಿ ತಾನು ವಾಸವಾಗಿದ್ದ ಮರವನ್ನೇರಿ ಮಲಗಿದ್ದ ಕಿರಾತನನ್ನು ಒಂದು ವಾನರವು ಕಾಪಾಡಿತು. ಮರದ ಬುಡದಲ್ಲಿದ್ದ ಹುಲಿಯು ಆ ವಾನರವು ಮಲಗಿ ನಿದ್ರಿಸುತ್ತಿರಲು ಎಚ್ಚರಗೊಂಡ ಕಿರಾತನನ್ನು ಕುರಿತು, "ಅಯ್ಯಾ ಕಿರಾತನೇ! ಇದೋ ನಾನು ನಿನ್ನನ್ನು ಕಾಪಾಡುವೆನೆಂದು ಮಾತುಕೊಡುತ್ತೇನೆ; ನೀನು ಈ ವಾನರವನ್ನು ಕೆಡವಿಬಿಡು" ಎಂದು ಹೇಳಿತು. ಆಗ ಕೇವಲ ಪಾಪೈಕನಿರತನಾದ ಆ ಕಿರಾತನು ತನ್ನನ್ನು ಕಾಪಾಡಿದ ಆ ವಾನರವನ್ನು ಕೆಡವಿಯೇ ಬಿಟ್ಟನು. ಆಮೇಲೆ ಹುಲಿಯು ಕೆಳಕ್ಕೆ ಬಿದ್ದ ವಾನರವನ್ನು ಹಿಡಿದುಕೊಂಡು, "ಎಲೈ ನಿನ್ನನ್ನು ನಾನು ಬಿಡುವೆನು; ನೀನು ನಿನಗೆ ದ್ರೋಹ ಮಾಡಿದ ಆ ಕಿರಾತನನ್ನು ಕೊಲ್ಲುವೆಯಾ?" ಎಂದು ಕೇಳಿತು. ಆಪತ್ತಿಗೆ ಗುರಿಯಾಗಿದ್ದ ಆ ವಾನರವು ಹಾಗೆಯೇ ಆಗಲೆಂದು ಒಪ್ಪಿ ಆ ಹುಲಿಯಿಂದ ತಪ್ಪಿಸಿಕೊಂಡು ಮರವನ್ನೇರಿ, ಆಶ್ರಿತನೆಂದೂ, ಶರಣಾಗತನೆಂದೂ ಆ ಕಿರಾತನನ್ನು ರಕ್ಷಿಸಿತು."

ಈ ಕಥೆಯನ್ನು ನೀನು ಕೇಳಿಬಲ್ಲೆಯಷ್ಟೆ. ನೀನು ವಾನರಾಧಿಪನಾಗಿದ್ದರೂ ಈ ಶರಣಾಗತ ರಕ್ಷಣವು ಸ್ವಜಾತಿ ಧರ್ಮವೆಂದರಿತು ಏಕೆ ಅವಲಂಬಿಸದಿರುವೆ? (ಕಿಂಪುನರ್ಮದ್ವಿಧೋಜನಃ?) ಕಪೋತೋಪಾಖ್ಯಾನವನ್ನು ಕೇಳಿ ಧರ್ಮ ಸೂಕ್ಷ್ಮವನ್ನರಿತಿರುವ ನನ್ನಂತಹರ ವಿಷಯದಲ್ಲಿ ಹೇಳತಕ್ಕುದೇನು ನಾವು ಶರಣಾಗತರನ್ನು ರಕ್ಷಿಸಲೇಬೇಕಲ್ಲವೆ? (ಮದ್ವಿಧಃ) ಶರಣಾಗತರನ್ನು ರಕ್ಷಿಸಲೋಸುಗವೇ ಧರ್ಮಚ್ಛತ್ರವನ್ನು ಎತ್ತಿಹಿಡಿದಿರುವವರ ವಂಶದಲ್ಲಿ ಜನಿಸಿರುವ - "ಷಷ್ಟಿರ್ವರ್ಷ ಸಹಸ್ರಾಣಿ ಲೋಕಸ್ಯಚರತಾಹಿತಂ । ಪಾಂಡುರಸ್ಯಾತಪತ್ರಸ್ಯ ಛಾಯಾಯಾಂ ಜರಿತಂ ಮಾಯಾ ॥" ಎಂಬಂತೆ ಲೋಕರಕ್ಷಣ ದೀಕ್ಷಿತನಾದ ದಶರಥನ ಮಗನಾಗಿರುವ - ವಸಿಷ್ಠವಿಶ್ವಾಮಿತ್ರಾದಿಗಳ ಶಿಷ್ಯನಾಗಿರುವ - ಮಹಾಯೋಗಿಯಾದ ಜನಕರಾಯನ ಸಂಬಂಧವನ್ನು ಮಾಡಿರುವ,-"ರಾಮೋವಿಗ್ರಹವಾನ್ ಧರ್ಮಃ" ಎಂದು ಪ್ರಸಿದ್ಧನಾಗಿರುವ- "ಮರ್ಯಾದಾನಾಂಚ ಲೋಕಸ್ಯ ಕರ್ತಾ ಕಾರಯಿತಾಚ ಸಃ" ಎಂಬಂತೆ ಸಮಸ್ತ ಜನಗಳೂ ಅನುಕರಿಸುವ ಧರ್ಮಾನುಷ್ಠಾನವುಳ್ಳ - ನಾನು ಈಗ ಶರಣಾಗತನಾಗಿ ಬಂದವನನ್ನು ಹಿಂಸಿಸಲಾರೆನು; ಹಾಗೆ ಮಾಡುವುದೂ ಇಲ್ಲವು. ನಾನೇ ಹಾಗೆ ಮಾಡಿದ ಪಕ್ಷದಲ್ಲಿ ಲೋಕವು ಏನಾದೀತು?" ಎಂದು ಅಭಿಪ್ರಾಯವು. (ತನಿಶ್ಲೋಕಿ)

೯ "ತಿರ್ಯಕ್ಕಾದ ಕಪೋತವು ಅನುಷ್ಠಿಸಿದ ಧರ್ಮವು ನಮಗೆ ಉಪಾದೇಯವಲ್ಲವು. "ಚೋದನಾಲಕ್ಷಣೋ ಧರ್ಮಃ" ಎಂದಿರುವುದರಿಂದಲೂ, ಈ ಕಪೋತೋಪಾಖ್ಯಾನದಿಂದ ಧರ್ಮಾನುಷ್ಠಾನದಲ್ಲಿ ಚೋದನೆಯುಂಟಾಗುವುದಿಲ್ಲವಾದುದರಿಂದಲೂ, ಈ ಕಪೋತಾನುಷ್ಠಿತ ಧರ್ಮವು ಅನುಪಾದೇಯವೇ" ಎಂದು ಶಂಕೆಯುದಿಸೀತೆಂದು ಯೋಚಿಸಿ ಶ್ರೀರಾಮಮೂರ್ತಿಯು ಕಂಡೂಪಾಖ್ಯಾನದಿಂದ ಸಲ್ಲಕ್ಷಣಲಕ್ಷಿತವಾದ ಧರ್ಮವನ್ನು ನಿದರ್ಶನಮಾಡುವನು.

"ಋಷೇಃ ಕಣ್ವಸ್ಯಪುತ್ರಸ್ಯ" ಎಂಬುದರಿಂದ ಮಹಾ ಕುಲಪ್ರಸೂತತ್ವವೂ, "ಪರಮರ್ಷಿಣಾ" ಎಂಬುದರಿಂದ ಯಥಾರ್ಥದರ್ಶಿತ್ವವೂ, "ಸತ್ಯವಾದಿನಾ" ಎಂಬುದರಿಂದ ಯಥಾರ್ಥದೃಷ್ಟವಾದಿತ್ವವೂ ಹೇಳಲ್ಪಡುವುದು. ಇದಿಷ್ಟನ್ನೂ ಹೇಳಿದುದರಿಂದ ಈ ವಚನದಲ್ಲಿ ಪರಮಾಪ್ತತ್ವವು (ಅರ್ಥಾತ್ - ವೇದವಚನಾದಿ ಸಿದ್ಧವು,) ಆಗಿರುವುದೆಂದರ್ಥವು.

**ಗೀತಾಂ ಧರ್ಮಿಷ್ಠಾಂ ಸತ್ಯವಾದಿನೀಂ || ೨೬ || \$ ಬದ್ಧಾಂಜಲಿಪುಟಂ ದೀನಂ ಯಾಚಂತಂ ಶರಣಾಗತಂ । ನಹನ್ಯಾದಾನೃಶಂಸಾರ್ಥಮಪಿ ಶತ್ರುಂ ಪರಂತಪ! ||೨೭||**

ಗಾಥಾಂ - ಕಥೆಯನ್ನು, ಶೃಣು - ಕೇಳು. || ೨೬ || ಹೇ ಪರಂತಪ - ಎಲೈ ಶತ್ರುಸಂಹಾರಕನೇ, ಆನೃಶಂಸ್ಯಾರ್ಥಂ - ಘಾತುಕತ್ವ ಸಿದ್ಧಿಯುಂಟಾಗುವದಕ್ಕಾಗಿ, ಬದ್ಧಾಂಜಲಿಪುಟಂ - ಅಂಜಲಿಬಂಧ ಮಾಡಿದ, ದೀನಂ - ದೀನನಾಗಿ, ಯಾಚಂತಂ - ಬೇಡಿಕೊಳ್ಳುತ್ತಿರುವ, ಶರಣಾಗತಂ - ನೀನೇಗತಿ ಯೆಂದು ಬಂದ, ಶತ್ರುಮಪಿ - ಶತ್ರುವನ್ನೂ, ನಹನ್ಯಾತ್ - ಹೊಡೆಯಬಾರದು, ಅರಿಃ - ಶತ್ರುವು,

ನಿನಗಾಗಿ ಈಗ ಹೇಳುವೆನು, ಕೇಳು. ಎಲೈ ಪರಂತಪನೇ ! ಮಹಾರಾಜನೇ !! ಕೈಜೋಡಿಸಿ ದವನೂ, ಮಹಾ ದೈನ್ಯವನ್ನು ಹೊಂದಿದವನೂ, ರಕ್ಷಿಸೆಂದು ಕೇಳಿಕೊಂಡವನೂ, ಶರಣಾ

"ಪುರಾಗೀತಾಂ" ಈ ವಚನವು ಕಂಡು ಮುನಿಕಲ್ಪಿತವೆಂದು ತಿಳಿಯಬಾರದು ; ಮುಕ್ಕೇ ಸಾಮಾನ್ಯಾಗಿಷ್ಟು ಹಿಂದಿದ್ದುದೇ ಈಗಲೂ ಹೇಳಲ್ಪಡುವುದರಿಂದ, ಕಂಡು ಮುನಿಯು ಇದಕ್ಕೆ ಕರ್ತೃವಾಗಿದ್ದರೂ ಸಾಮರ್ಥ್ಯನಿಯಂತೆ ಸಮಸ್ತ ಪಾಪವಿನಾಶಕವಾದುದರಿಂದ ಸರ್ವಜನಾದರಣೀಯವಾದುದು. "ಧರ್ಮಿಷ್ಠಾಂ" ವೇದೋಕ್ತಧರ್ಮೋಪಮೇಯವಾದ- ಸ್ಮೃತ್ಯುಕ್ತಪ್ರತಿಪಾದಕವಾದ (ಇದರಿಂದ, ಪರಮಪ್ರಯೋಜನವಾದುದೆಂದು ಹೇಳಿದಂತಾಯಿತು) 'ಸತ್ಯವಾದಿನೀಂ" ಎಂದು ಪಾಠಾಂತರ ಅಬಾಧಿತಾರ್ಥ ಪ್ರತಿಪಾದಿಸಿಯಾದ ಎಂದರ್ಥವು. "ಗಾಥಾಂ" ಅನೇಕಾರ್ಥೋಚಿತವೂ, ಸುಲಭವಾಗಿ ಅಭ್ಯಾಸಮಾಡಲು ಯೋಗ್ಯವೂ, ಸಂಕುಚಿತ ಶಬ್ದಯುಕ್ತವೂ ಆಗಿರುವ ಇದನ್ನು "ಶೃಣು" ಕೇಳು. ಇನ್ನು ಮೇಲೆ ಈ ಗಾಥೆಯನ್ನು ಕೇಳದಿದ್ದರೆ ನೀನು ಕಲುಷಾತ್ಮನಾಗುತ್ತೀಯೆ. ಆದುದರಿಂದ ಆಸಕ್ತಿಯಿಂದ ಕೇಳಿ ಧನ್ಯನಾಗು ಎಂದು ತಾತ್ಪರ್ಯ.

\$ ಕಂಡುಗಾಥೆಯು ಶ್ರೈಷ್ಠ್ಯವನ್ನು ಹಿಂದಣ ಶ್ಲೋಕದಿಂದ ಪ್ರತಿಪಾದಿಸಿ ಇದೀಗ ಆ ಗಾಥೆಯ ಪ್ರಥಮ ಶ್ಲೋಕದಿಂದ ಪ್ರಪತ್ತಿ ಸಿದ್ಧಿಯಾದರೂ, ಬೇರೊಂದು ಗತಿಯಿಲ್ಲದಿರುವುದರಿಂದ, ಆತ್ಮನಿಕ್ಷೇಪಾಭಿಪ್ರಾಯ ವ್ಯಂಜಕವಾದ ಶರಣಾಗತಿಶಕಲಕ್ಕೆ ಸಮಾನವಾದ ಅಂಜಲಿಬಂಧಾದಿ ಮಾತ್ರವಾದ ವಿಧಾನವೂ ಹಾನಿಯನ್ನುಂಟುಮಾಡಲಾರದು, ಹೀಗೆ ಮಾಡುವುದೂ ಅನುಗ್ರಹಾವಹವೆಂದು ಪ್ರತಿಪಾದಿಸುವನು.

ಬದ್ಧಾಂಜಲಿಪುಟಂ - ಅನುಕೂಲಬುದ್ಧಿ ವಾಗ್ವೃತ್ತಿಯಿಲ್ಲದಿದ್ದರೂ ಅಂಜಲಿಯೊಂದೇ ಸಾಕು ("ಅಂಜಲಿಃ ಪರಮಾಮುದ್ರಾಕ್ಷಿಪ್ರಂ ದೇವಪ್ರಸಾದಿನೀ" ಎಂಬಂತೆ, ಸ್ವತಂತ್ರನಾದವನಿಗೂ ಬಹು ಬೇಗನೆ ದಯೆಯನ್ನುಂಟುಮಾಡುವ ಮುದ್ರೆಯಿದು) ದೀನಂ - ಈ ಅಂಜಲಿಬಂಧವಿಲ್ಲದಿದ್ದರೂ ಕಾರ್ಪಣ್ಯದ್ಯೋತಕವಾದ ದೈನ್ಯಪ್ರಕಟನೆಯೇ ಸಾಕು ; ಯಾಚಂತಂ - ಅಂಜಲಿಬಂಧ, ದೈನ್ಯ ಇವಿಲ್ಲದಿದ್ದರೂ ಆ ಕಾರ್ಪಣ್ಯದ್ಯೋತನದಲ್ಲಿಯೂ ಅಪ್ಪದಯ ಪ್ರಾರ್ಥನೆಯೊಂದೇ ಸಾಕು, ಶರಣಾಗತಂ - ಅಂಜಲಿಬಂಧ, ದೈನ್ಯ, ಯಾಚನೆ ಇವು ಮೂರೂ ಇಲ್ಲದಿದ್ದರೂ ರಕ್ಷಕನಿರುವ ಸ್ಥಳವನ್ನು ಕುರಿತು ಬರುವುದೊಂದೇ ಸಾಕು, (ಹಿಂದೆ ಸ್ವರಕ್ಷಾಭರನಿಕ್ಷೇಪ ರೂಪವಾದ ಶರಣಾಗತಿಶಕಲಗಳನ್ನು ಹೇಳಿ ಈಗ, "ಶರಣಾಗತಂ" ಎಂಬುದರಿಂದ ಪೂರ್ಣಪ್ರಪತ್ತಿಯನ್ನು ಹೇಳಿದಂತಾಯಿತು) ಅಪಿಶತ್ರುಂ - ಸಾಕ್ಷಾತ್ ಶತ್ರುವನ್ನಾದರೂ, (ಇದು "ಶಾಸ್ತ್ರಕ್ಕೋಸ್ಕರವೇ, ಐಹಿಕದಲ್ಲಿ ಅಭ್ಯುದಯಕ್ಕೋಸ್ಕರವೇ, ಅಥವಾ, ಪರಲೋಕ ಪ್ರಯೋಜನಕ್ಕೋಸ್ಕರವೇ, ಪ್ರತ್ಯ ವಾಯ ಪರಿಹಾರಕ್ಕೋಸ್ಕರವೆ ?" ಎಂದರೆ, ಇವೆಲ್ಲಕ್ಕೂ ಆ ಮೇಲಣ ಪ್ರಯೋಜನವನ್ನು ಹೇಳುವನು) ಆ ನೃಶಂ ಸ್ಯಾರ್ಥಂ - ಅಘಾತುಕತ್ವಸಿದ್ಧಿ (ಅಹಿಂಸಾಧರ್ಮಸಿದ್ಧಿ) ಗೋಸ್ಕರವೆಂದರ್ಥ. "ಇವನು ಘಾತುಕ" ನೆಂದು ಲೋಕವು ನಿಂದಿಸದಿರಲೆಂದು (ಲೋಕಾಪವಾದ ಪರಿಹಾರಕ್ಕೋಸ್ಕರ.)

ಅಥವಾ, ಸಕಲ ಧರ್ಮಸಾರಭೂತವಾದ ದಯಾಗುಣವನ್ನು ಕಾಪಾಡಿಕೊಳ್ಳುವುದಕ್ಕಾಗಿಯೆಂದರ್ಥ. (ಇದೇ ಅರ್ಥವನ್ನೇ ಸೀತಾದೇವಿಯು, "ಆನೃಶಂಸ್ಯಂ ಪರೋಧರ್ಮಸ್ತ್ವತ್ತಏವ ಮಯಾಶ್ರುತಃ" ಎಂಬ ವಾಕ್ಯದಿಂದ ಪ್ರತಿ ಪಾದಿಸಿರುವಳು.) ಇಂಥವನನ್ನು, ನಹನ್ಯಾತ್ - ಕೊಲ್ಲಬಾರದು, ಇಲ್ಲಿ, "ಪರಂತಪ" ಎಂಬುವುದರಿಂದ ಕಂಡು ಮುನಿಯು ಈ ವಿಷಯವನ್ನು ಯಾವನೋ ಒಬ್ಬ ರಾಜನನ್ನು ಕುರಿತೇ ಉಪದೇಶಿಸಿರಬೇಕೆಂದು ತೋರುತ್ತದೆ. "ಎಲೈ ಪರಂತ ಪನೇ ! ಶರಣಾಗತರಲ್ಲಿ ಪೌರುಷವನ್ನು ಮೆರೆದೇನು ಪ್ರಯೋಜನ ? ಪ್ರತಿಸ್ಪರ್ಧಿಯಾದವನಲ್ಲಿ ಪೌರುಷಪ್ರದರ್ಶನವು ಯುಕ್ತವಾದುದು ಎಂದು ತಾತ್ಪರ್ಯವು. (ತನಿಶ್ಲೋಕಿ)

‡ ಆರ್ತೋವಾ ಯದಿವಾ ದೃಪ್ತಃ ಪರೇಷಾಂ ಶರಣಾಗತಃ । ಅರಿಃ ಪ್ರಾಣಾನ್ಪರಿತ್ಯಜ್ಯ ರಕ್ಷಿತವ್ಯಃ ಕೃತಾತ್ಮನಾ ॥೨೮॥ ¶ ಸಚೇದ್ಭಯಾದ್ವಾ ಮೋಹಾದ್ವಾ ಕಾಮಾದ್ವಾಪಿ ನರಕ್ಷತಿ।

ಆರ್ತೋವಾ - ದೀನನಾಗಲಿ, ಯದಿವಾ - ಹಾಗಲ್ಲದಿದ್ದರೆ, ದೃಪ್ತಃ - (ಗೋ + ಮ) ಶರಣಾಗತನಾಗಿ ಬರುವ ವೇಳೆಯಲ್ಲಿಯೂ ಗೂಢಾಭಿಪ್ರಾಯವುಳ್ಳವನಾದಕಾರಣ ಉಪಶಾಂತಿಯನ್ನು ಹೊಂದದಿರುವ ವೈರವುಳ್ಳವನಾಗಲಿ, ಪರೇಷಾಂ - ಶತ್ರುಗಳ ಮಧ್ಯದಲ್ಲಿ, ಶರಣಾಗತಃ - ನೀನೇ ರಕ್ಷಕನೆಂದು ಹೊಂದಿರೆ, ಕೃತಾತ್ಮನಾ - ದೃಢವಾದ ಮನಸ್ಸುಳ್ಳವನಿಂದ, ಪ್ರಾಣಾನ್ - ಪ್ರಾಣಗಳನ್ನಾದರೂ, ಪರಿತ್ಯಜ್ಯ - ಬಿಟ್ಟು, ರಕ್ಷಿತವ್ಯಃ - ಸಂರಕ್ಷಿಸತಕ್ಕವನು. || ೨೭-೨೮ || ಸಃ - ಅವನು, ಭಯಾದ್ವಾ - ಶತ್ರುಭೀತಿಯಿಂದಲಾಗಲಿ, ಮೋಹಾದ್ವಾ - ಶಾಸ್ತ್ರಾರ್ಥ ಪರಿಜ್ಞಾನವಿಲ್ಲದ್ದರದೆಸೆಯಿಂದಲಾಗಲಿ, ಕಾಮಾದ್ವಾ - ಶತ್ರುವಿನಿಂದ ಫಲಾಪೇಕ್ಷೆಯ ದೆಸೆಯಿಂದಲಾಗಲಿ, ಸ್ವಯಾ - ತನ್ನ, ಶಕ್ತ್ಯಾ - ಸಾಮರ್ಥ್ಯದಿಂದ, ಯಥಾಸತ್ವಂ - ಶಕ್ತಿಯಿದ್ದಮಟ್ಟಿಗೆ, (ಶರಣಾಗತಂ - ಶರಣು ಹೊಂದಿದವನನ್ನು),

ಗತನೂ ಆದವನು ಯಾವನೇ ಆಗಲಿ, ಅವನು ಶತ್ರುವೇ ಆಗಲಿ, ಧರ್ಮಕ್ಕಾಗಿಯೂ ಧರ್ಮ ರಕ್ಷಣೆಗಾಗಿಯೂ ಅವನನ್ನು ಕೊಲ್ಲಬಾರದು. ಪಂಡಿತನಾದವನು ತನ್ನ ಶತ್ರುಗಳಲ್ಲಿ ಪರಮ ದುಃಖಿತನಾದವನಾಗಲಿ, ಬಹಳ ಗರ್ವಿಸಿದವನಾಗಲಿ, ಯಾರೇ ಆಗಲಿ ಶರಣಾಗತ ನಾದರೆ, ತನ್ನ ಪ್ರಾಣಗಳನ್ನು ಕೊಟ್ಟಾದರೂ ಅವನನ್ನು ರಕ್ಷಿಸಬೇಕು. ಭಯದಿಂದಾಗಲಿ, ಅಜ್ಞಾನದಿಂದಾಗಲಿ, ಸ್ವೇಚ್ಛೆಯಿಂದಾಗಲಿ, ಶರಣಾಗತನಾದವನನ್ನು ಯಾವನು ತನ್ನ ಶಕ್ತ್ಯನುಸಾರವಾಗಿ ಕಾಪಾಡದಿರುವನೋ ಅವನು ಮಹಾ ಪಾಪಗಳನ್ನು ಹೊಂದುವನು. ಇದೂ ಅಲ್ಲದೆ ಲೋಕದಲ್ಲಿ, ಶರಣಾಗತನನ್ನು ಸಂರಕ್ಷಿಸದಿರುವವನು ಕೇವಲ ನಿಂದ್ಯನು.

‡ ಹಿಂದಿನ ಶ್ಲೋಕದಲ್ಲಿ "ನಹನ್ಯಾತ್" ಎಂಬುದರಿಂದ ಶರಣಾಗತಹಿಂಸೆಯನ್ನು ನಿಷೇಧಿಸಿ ಈ ಶ್ಲೋಕದಲ್ಲಿ ಇತರರು ಮಾಡುವ ಶರಣಾಗತಪೀಡೆಯನ್ನು ನಿಷೇಧಿಸುವುದು ಮಾತ್ರವಲ್ಲದೆ, ಶರಣಾಗತನಲ್ಲಿ ಆರ್ತತ್ವ, ದೃಪ್ತತ್ವ ವಿಭಾಗಗಳನ್ನು ಆಲೋಚಿಸದೆಯೇ, ತನ್ನ ಪ್ರಾಣಗಳನ್ನು ತೊರೆದಾದರೂ ಅವನನ್ನು ರಕ್ಷಿಸಬೇಕೆಂದು ಹೇಳುವನು.

ಈ ಶ್ಲೋಕಕ್ಕೆ ಮುಮುಕ್ಷುಪರವಾಗಿಯೂ, ಶರಣಾಗತನ ಪರವಾಗಿಯೂ ವಿಶೇಷಾರ್ಥವನ್ನು ಹೇಳಬಹುದು.

ಶರಣಾಗತಪರ :—ಆರ್ತಃ - ತನ್ನ ಅಭಿಮತವು ಈಡೇರುವ ವೇಳೆಯಲ್ಲಿ ಸ್ವಲ್ಪವಾದರೂ ವಿಳಂಬವನ್ನು ಸಹಿಸದ ಉದ್ವೇಗವುಳ್ಳವನು; ಅಥವಾ, ಶರಣಾಗಮನ ವೇಳೆಯಲ್ಲಿಯೂ ತನ್ನ ಅಪರಾಧಗಳ ನಿಮಿತ್ತವಾಗಿ ಭೀತನಾಗಿರುವವನು ಎಂದರ್ಥ. ದೃಪ್ತಃ - ವಿಳಂಬಾವಿಳಂಬಗಳನ್ನು ಗಮನಿಸದೆ ಫಲಸಿದ್ಧಿಯಲ್ಲಿ ಮಾತ್ರ ಮನಸ್ಸಿರುವನು, ಅಥವಾ, ಆ ಸಮಯದಲ್ಲಿ ವಿನಯ ಮತ್ತು ಸ್ವಾಪರಾಧಗಳ ಭಯಗಳಿಲ್ಲದಿರುವವನೆಂದರ್ಥವು.

ಮುಮುಕ್ಷುಪರ :—"ಆರ್ತಃ" ಜುಗುಪ್ಸಾನುಸಂಧಾನದಿಂದ ಕೂಡಲೇ ದೇಹಪರಿತ್ಯಾಗಕ್ಕೆ ಸಿದ್ಧವಾಗಿರುವವನು, "ದೃಪ್ತಃ" ಶರೀರಾವಸಾನದಲ್ಲಿ ಮೋಕ್ಷಾಪೇಕ್ಷೆಯುಳ್ಳವನು. ಅಥವಾ, ಅಕಿಂಚನ್ಯಾನನ್ಯ ಗತಿತ್ವಪುರಸ್ಸರವಾಗಿ ಪ್ರಪನ್ನನಾದವನು ಆರ್ತನು. ಸ್ವಾವಹೇಳನದಿಂದ, "ಶರಣಾಗತನಾಗಿರುವೆನು" ಎಂದು ಹೇಳುವವನು ದೃಪ್ತನು.

ಇಂಥವನು ಶತ್ರುವಾದರೂ ಇತರರ ಮಧ್ಯದಲ್ಲಿ (ಅಥವಾ ಇತರರಲ್ಲಿ) ಶರಣಾಗತನಾದರೂ ಅವನನ್ನು ಸ್ವಪ್ರಾಣ ಪರಿತ್ಯಾಗದಿಂದಾದರೂ ರಕ್ಷಿಸಬೇಕೆಂದು ಸಂಬಂಧವು. (ತನಿಶ್ಲೋಕಿ)

¶ ಈವರೆಗೂ ಶರಣಾಗತರಕ್ಷಣ ಧರ್ಮದಲ್ಲಿ ಚೋದನೆಯನ್ನು ಪ್ರತಿಪಾದಿಸಿ ಈ ಶ್ಲೋಕದಿಂದ, ಶರಣಾಗತರನ್ನು ರಕ್ಷಿಸದಿದ್ದರೆ ಆಗುವ ಪ್ರತ್ಯವಾಯವನ್ನು ಹೇಳುವನು. (ಗೋ)

ಸ್ವಯಾ ಶಕ್ತ್ಯಾ ಯಥಾ ಸತ್ವಂ ತತ್ಪಾಪಂ ಲೋಕಗರ್ಹಿತಂ ||೨೯|| §ವಿನಷ್ಟಃ ಪಶ್ಯತಸ್ತಸ್ಯಾಽರಕ್ಷಿಣಃ ಶರಣಾಗತಃ | ಆದಾಯ ಸುಕೃತಂ ತಸ್ಯ ಸರ್ವಂ ಗಚ್ಛೇದರಕ್ಷಿತಃ ||೩೦|| ¶ ಏವಂ ದೋಷೋ ಮಹಾನತ್ರ ಪ್ರಪನ್ನಾನಾಮರಕ್ಷಣೇ | ಅಸ್ವರ್ಗ್ಯಂ ಚಾಯಶಸ್ಯಂಚ ಬಲವೀರ್ಯವಿನಾಶನಂ || ೩೧ || ‡ ಕರಿಷ್ಯಾಮಿ ಯಥಾರ್ಥಂತು ಕಂಡೋರ್ವಚನಮುತ್ತಮಂ | ಧರ್ಮಿಷ್ಠಂಚ ಯಶಸ್ಯಂಚ ಸ್ವರ್ಗ್ಯಂ ಸ್ಯಾತ್ತು ಫಲೋದಯೇ

---

ನರಕ್ಷತಿ - ರಕ್ಷಿಸದಿದ್ದರೆ, ಪಾಪಂ - ಪಾಪಕ್ಕೆ ಹೇತುವಾದ, ತತ್ - ಆ ಶರಣಾಗತನನ್ನು ಸಂರಕ್ಷಿಸದಿರೋಣವು, ಲೋಕಗರ್ಹಿತಂ - ಲೋಕನಿಂದಿತವಾದದ್ದು. || ೨೯ || ಶರಣಾಗತಃ - ಶರಣು ಹೊಂದಿದರೂ, ಅರಕ್ಷಿತಃ-ರಕ್ಷಿಸಲ್ಪಡದಿರುವನಾದಕಾರಣ, ವಿನಷ್ಟಃ-ನಾಶವಾಗುವ ಪುರುಷನು, (ಆತ್ಮಾನಂ- ತನ್ನನ್ನು), ಅರಕ್ಷಿತಃ - ರಕ್ಷಿಸುವದಕ್ಕೆ ಶಕ್ತಿಯುಳ್ಳವನಾದರೂ ರಕ್ಷಿಸದಿರುವ, ತಸ್ಯ - ಆ ರಕ್ಷಕನಾದವನು, ಪಶ್ಯತಸ್ತತಃ - ನೋಡುತ್ತಿರುವಂತೆಯೇ, ತಸ್ಯ - ಆ ಪುರುಷನ, ಸರ್ವಂ - ಸಮಸ್ತವಾದ, ಸುಕೃತಂ - ಪುಣ್ಯವನ್ನು, ಆದಾಯ - ತೆಗದುಕೊಂಡು, ಗಚ್ಛೇತ್ - ಹೋದಾನು. || ೩೦ || ಪ್ರಪನ್ನಾನಾಂ - ಶರಣಾಗತರ, ಅತ್ರ ಅರಕ್ಷಣೇ - ಈ ಸಂರಕ್ಷಿಸದೇ ಇರುವಿಕೆಯಲ್ಲಿ, ಏವಂ - ಈ ಪ್ರಕಾರವಾಗಿ, ಮಹಾ - ಮಹತ್ತರವಾದ, ದೋಷಃ - ಪಾತಿತ್ಯವು (ಇರುವುದು), ಅರಕ್ಷಣಂ- ಸಂರಕ್ಷಿಸದಿರೋಣವು, ಅಸ್ವರ್ಗ್ಯಂ - ಸ್ವರ್ಗವಿರುದ್ಧವಾದದ್ದು, ಕಿಂಚ - ಇಷ್ಟುಮಾತ್ರವಲ್ಲದೆ, ಅಯಶಸ್ಯಂ - ಅಪಕೀರ್ತಿಕರವಾದದ್ದು, ಬಲ....ಚ - ದೇಹತ್ರಾಣೆಯನ್ನೂ ಸಾಮರ್ಥ್ಯವನ್ನು ಹೋಗಲಾಡಿಸುವುದು. ||೩೧|| ಕಿಂತು - ಆದರೆ, ಉತ್ತಮಂ - ಸರ್ವೋತ್ತಮವಾದ, ಕಂಡೋಃ - ಕಂಡು ಮುನಿಯ, ವಚನಂ - ಮಾತನ್ನು, ಯಥಾರ್ಥಂ - ಯಥಾರ್ಥವನ್ನಾಗಿ, ಕರಿಷ್ಯಾಮಿ - ಮಾಡುವೆನು, ಧರ್ಮಿಷ್ಠಂಚ-ಪಾಪನಿರ್ವರ್ತಕದಿಂದ ಕೂಡಿರುವದು, ಯಶಸ್ಯಂಚ-ಕೀರ್ತಿಯನ್ನುಂಟುಮಾಡುವದು, ಫಲೋದಯೇ - ಫಲಪ್ರದಾನಕಾಲವು ಪ್ರಾಪ್ತವಾಗಲು, ಸ್ವರ್ಗ್ಯಂಚ - ಸ್ವರ್ಗಸುಖವನ್ನುಂಟುಮಾಡು

---

ಅವನು ತನ್ನಲ್ಲಿಗೆ ಬಂದ ಶರಣಾಗತನು ನೋಡುತ್ತಿರುವಂತೆಯೇ ನಷ್ಟಕಾಮನಾಗಿ ಹೋಗುತ್ತಾನೆ. ಅವನಲ್ಲಿರುವ ಪುಣ್ಯವನ್ನೆಲ್ಲ ಅವನಲ್ಲಿಗೆ ಶರಣೆಂದು ಬಂದವನು ಹೊತುಕೊಂಡು ಹೋಗುತ್ತಾನೆ. ||೨೬-೩೦|| ಶರಣೆಂದವನನ್ನು ರಕ್ಷಿಸದಿರುವವನ ಪುಣ್ಯರಾಶಿಯೆಲ್ಲವೂ ನಶಿಸಿಹೋಗುವುದು- ಶರಣಾಗತರನ್ನು ರಕ್ಷಿಸದಿದ್ದರೆ ಇಂತಹ ಮಹಾ ಪಾತಕಗಳುಂಟಾಗುವುವು. ಅದರಿಂದ ನರಕಪ್ರಾಪ್ತಿಯೂ ಆಗುವುದು ; ಅಪಕೀರ್ತಿಯುಂಟಾಗುವುದು ; ಬಲಪರಾಕ್ರಮಗಳು ನಾಶವಾಗುವುವು. ಆದುದರಿಂದ ನಾನು ಸತ್ಯವಾದುದೂ, ಬಹು ಶ್ರೇಷ್ಠವಾದುದೂ ಆದ ಕಂಡುಮಹಾಮುನಿಯ ವಚನದಂತೆ ನಡೆಯುವೆನು. ಹಾಗೆ ಮಾಡುವುದರಿಂದ ಪರಮ ಧರ್ಮ, ಮಹಾ ಕೀರ್ತಿ, ಸ್ವರ್ಗಪ್ರಾಪ್ತಿ, ಮೊದಲಾದ ಉತ್ತಮ ಫಲಗಳುಂಟಾಗುವುವು.

---

§ ಈ ಶರಣಾಗತರಕ್ಷಣ ಧರ್ಮವನ್ನು ಪರಿಪಾಲಿಸದಿದ್ದರೆ ಐಹಿಕಾನರ್ಥವೊಂದು ಮಾತ್ರವಲ್ಲದೆ, ಪಾರತ್ರಿಕಾರ್ಥವೂ ನಾಶವಾಗುತ್ತದೆಯೆಂಬುದನ್ನು ಈ ಶ್ಲೋಕದಿಂದ ತಿಳಿಸುವನು. (ಗೋ)

¶ ಈ ಪ್ರಕಾರವಾಗಿ ಶರಣಾಗತರಕ್ಷಣದಲ್ಲಿ ಕಂಡು ಗಾಥೆಯನ್ನು ಪ್ರಮಾಣೀಕರಿಸಿಕೊಟ್ಟು, ಧರ್ಮಸಂಸ್ಥಾಪನ ಪ್ರವೃತ್ತನಾದ ನಾನು ಈ ಧರ್ಮವನ್ನು ಅವಶ್ಯವೂ ಪಾಲಿಸಬೇಕು" ಎಂದು ಹೇಳಿರುವನು.

‡ ಈ ಶರಣಾಗತರಕ್ಷಣವನ್ನು ಮಾಡದಿದ್ದರೆ ಪ್ರತ್ಯವಾಯುವೊಂದು ಮಾತ್ರವಲ್ಲದೆ, ಮಾಡಿದಲ್ಲಿ ದೃಷ್ಟಾದೃಷ್ಟವಾದ ಫಲಗಳು ಅನೇಕವಾಗಿರುವುವೆಂಬುದೇ ಕಂಡು ವಚನತಾತ್ಪರ್ಯವೆಂಬ ವಿಷಯವನ್ನು ಸ್ವಯಂ ರಾಮನೇ ಹೇಳುವನು - ಈ ಶ್ಲೋಕದಿಂದ. ಧರ್ಮಿಷ್ಠಂ - ಪಾಪನಿವರ್ತಕ ಧರ್ಮದಿಂದ ಕೂಡಿದುದು ಎಂದರ್ಥವು.

|| ೩೨ || ¶ ಸಕೃದೇವ ಪ್ರಪನ್ನಾಯ ತವಾಸ್ಮೀತಿಚ ಯಾಚತೇ | ಅಭಯಂ ಸರ್ವ ಭೂತೇಭ್ಯೋ ದದಾಮ್ಯೇತದ್ವ್ರತಂ ಮಮ ||೩೩|| ☸ ಆನಯೈನಂ ಹರಿಶ್ರೇಷ್ಠ! ದತ್ತ

ವುದು ಕೂಡ, ಸ್ಯಾತ್ - ಆಗುವದು. || ೩೨ || ಸಕೃದೇವ - ಒಂದಾವರ್ತಿ, ಪ್ರಪನ್ನಾಯ - ಪ್ರಪತ್ತಿ ಮಾರ್ಗವನ್ನೈದಿದವನಿಗೂ, ತವ - ನಿನ್ನ ಸಂಬಂಧಿಯಾದವನು, ಅಸ್ಮೀತಿ - ಆದನೆಂದು, ಯಾಚತೇ- ಪ್ರಾರ್ಥಿಸುವವನಿಗೂ, ಸರ್ವಭೂತೇಭ್ಯಃ-ಭಯಕಾರಣದಿಂದ ಶಂಕಿಸಲ್ಪಟ್ಟ ಸಮಸ್ತಪ್ರಾಣಿಗಳ ದೆಸೆ ಯಿಂದಲೂ, (ಗೋ) ಪ್ರಪನ್ನ ಸಂಬಧಿಗಳಾದ ಸರ್ವಪ್ರಾಣಿಗಳಿಗೂ, ಅಭಯಂ - ಭಯವಿಲ್ಲದಿರುಕೆ ಯನ್ನು, ದದಾಮಿ - ಕೊಡುತ್ತೀನೆ, ಮಮ - ನನಗೆ, ಏತದ್ವ್ರತಂ - ಇದೇ ವ್ರತವು. || ೩೩ ||

ಅಯ್ಯಾ ಸುಗ್ರೀವನೇ! ಒಂದೇ ಒಂದುಸಲ, "ನಾನು ಶರಣಾಗತನು; ನಿನ್ನವನು ನಾನು" ಎಂದು ಯಾಚಿಸಿದವನಿಗೆ, ಸಮಸ್ತ ಭೂತಗಳ ದೆಸೆಯಿಂದಲೂ ಅಭಯವೀಯುವೆನೆಂದು ವರವೀಯುವೆನು. ಇದೇ ನನ್ನ ವ್ರತವು. || ೩೧–೩೩ || ಅಯ್ಯಾ ವಾನರೋತ್ತಮನೇ;

¶ ಈ ಶ್ಲೋಕದ ವಿಶೇಷಾರ್ಥವು:—(ಅವತಾರಿಕೆ) ಶ್ರುತಿ ಸ್ಸ್ಮೃತಿ ಸ್ಸದಾಚಾರಃ ಸ್ವಸ್ಯಚ ಪ್ರಿಯಮಾತ್ಮನಃ | ಸಮ್ಯಕ್ಸಂಕಲ್ಪಜಃ ಕಾಮೋ ಧರ್ಮ ಮೂಲಮಿದಂ ಸ್ಮೃತಂ ||" ಎಂದು ಯಾಜ್ಞವಲ್ಕ್ಯರು ಹೇಳಿದ ಐದುಪ್ರಮಾಣಗಳಲ್ಲಿ "ಶ್ರೂಯತೇ" ಎಂಬುದರಿಂದ, "ತಸ್ಮಾದಪಿವಧ್ಯಂ ಪ್ರಪನ್ನಂ ಪ್ರತಿಪ್ರಯಚ್ಛಂತೀತಿ" ಎಂಬ ಶ್ರುತಿಪ್ರಮಾಣವನ್ನೂ, ಕಂಡು ಗಾಥೆಯಮೂಲಕ ಸ್ಮೃತಿಪ್ರಮಾಣವನ್ನೂ, ಕಪೋತೋಪಾಖ್ಯಾನದಿಂದ ಸದಾಚಾರ (ಶಿಷ್ಟಾಚಾರ) ಪ್ರಮಾಣವನ್ನೂ, ಪರಪಕ್ಷನಿರಸನಪೂರ್ವವಾಗಿ ಪ್ರಬಲ ಪ್ರಮಾಣೋಪಪಾದನದಿಂದ ತನಗೆ ಪ್ರಿಯವೆಂಬ ಪ್ರಮಾಣವನ್ನೂ (ಸ್ವಸ್ಯಚ ಪ್ರಿಯ ಮಾತ್ಮನಃ) ಹೀಗೆ ನಾಲ್ಕೂಪ್ರಮಾಣಗಳನ್ನು ಪ್ರತಿಪಾದಿಸಿ ಈ ಶ್ಲೋಕದಿಂದೀಗ, "ಸಮ್ಯಕ್ಸಂಲ್ಪಜಃ ಕಾಮಃ" ಎಂಬ ಐದನೆಯ ಪ್ರಮಾಣವನ್ನು ಪ್ರತಿಪಾದಿಸುವನು.

(ಸಕೃದೇವ) ಒಂದಾವೃತ್ತಿಯೇ ಎಂದರೆ ಭಕ್ತ್ಯಾದ್ಯುಪಾಯಗಳಲ್ಲಿ ಆವೃತ್ತಿ (ಎರಡುಮೂರೆಂಬುದು) ಯು ಶಸ್ತ್ರಾರ್ಥವಾಗುವುದಾಗಲಿ, ಪ್ರಪತ್ತಿಯಲ್ಲಿ ಅನಾವೃತ್ತಿಯೇ ಇರಬೇಕೆಂದು ಸಿದ್ಧಾಂತವು. ("ಸಕೃದೇವಹಿ ಶಾಸ್ತ್ರಾರ್ಥಃ ಕೃತೋಯಂತಾರಯೇನ್ನರಂ" ಎಂದಿದೆ) (ಪ್ರಪನ್ನಾಯ) "ಗತ್ಯರ್ಥಕಗಳಾದ ಧಾತುಗಳೆಲ್ಲವೂ ಜ್ಞಾನಾರ್ಥಕಗಳಾಗುತ್ತವೆ" ಎಂಬ ನ್ಯಾಯದಿಂದ ಇಲ್ಲಿ ಪ್ರಪತ್ತಿಯೆಂದರೆ ಮಾನಸಿಕ ಪ್ರಪತ್ತಿಯನ್ನು ಮಾಡಿದವನಿಗೆ ಎಂದರ್ಥವು. (ತವಾಸ್ಮೀತಿಚ) ಇಲ್ಲಿ ವಾಚಿಕಪ್ರಪತ್ತಿಯನ್ನು ಹೇಳಿದಂತಾಯಿತು. ಇವೆರಡರಲ್ಲಿ ಯಾವುದೊಂದಿದ್ದರೂ ಸರಿಯೆ, (ಅಥವಾ) "ಪ್ರಪನ್ನಾಯ" ಎಂಬುದರಿಂದ ಉಪಾಯವೂ, "ತವಾಸ್ಮೀತಿಚ ಯಾಚತೇ" ಎಂಬುದರಿಂದ ತಚ್ಛೇಷವೃತ್ತಿಲಕ್ಷಣವಾದ ಫಲವಿಶೇಷ ಪ್ರಾರ್ಥ ನೆಯೂ ಹೇಳಲ್ಪಡುವುದೆಂದು ಗ್ರಾಹ್ಯವು. ಇಂತಹನಿಗೆ, "ಸರ್ವಭೂತೇಭ್ಯಃ" ಸಮಸ್ತ ಭೂತ (ಪ್ರಾಣಿ)ಗಳ ದೆಸೆಯಿಂದಲೂ, (ಇಲ್ಲಿ ಚತುರ್ಥೀ ಪಂಚಮೀ ವಿಭಕ್ತಿಗಳೆರಡಕ್ಕೂ ಪ್ರಯೋಜನವುಂಟು, ಚತುರ್ಥ್ಯರ್ಥ-ಸರ್ವ ಭೂತಗಳಿಗೂ) "ಅಭಯಂ" ಭಯವಿಲ್ಲದಿರುವಿಕೆಯನ್ನು ಕೊಡುತ್ತೇನೆ. ಇಲ್ಲಿ ಅಭಯವೆಂದರೆ ಮೋಕ್ಷವೆಂದರ್ಥ—"ಅಥಸೋಽಭಯಂ ಗತೋಭವತಿ | ಆನಂದಂ ಬ್ರಹ್ಮಣೋವಿದ್ವಾನ್ | ನಬಿಭೇತಿಕುತಶ್ಚನೇತಿ" ಎಂಬ ಪ್ರಮಾಣದಿಂದ ಅಭಯವೆಂದರೆ ಮೋಕ್ಷವೆಂದೇ ಸಿದ್ಧವಾಗುವುದು. "ತವಾಸ್ಮೀತಿಚ ಯಾಚತೇ" ಇಲ್ಲಿ ಫಲವಿಶೇಷ ಪ್ರಾರ್ಥನೆಯಲ್ಲಿ ಮಾತ್ರ ಮೋಕ್ಷವೆಂದು ಸಿದ್ಧವಾಗು ವುದು. ಅನ್ಯತ್ರ ಇದು ಧರ್ಮಾರ್ಥಕಾಮಗಳು ಮೂರಕ್ಕೂ ಉಪಲಕ್ಷಕವಾಗುವುದು. ಶ್ರೀರಾಮಮೂರ್ತಿಯು ಸಕಲ ಪ್ರದನಾಗಿರುವುದರಿಂದ ಈ ಅರ್ಥವನ್ನು ಹೇಳಿದೆ. (ಏತದ್ವ್ರತಂ ಮಮ) ವ್ರತದಂತೆ ಇದನ್ನು ತಪ್ಪದೆ ತಾನು ಯಾವಾಗಲೂ ಆಚರಿಸುವುದಾಗಿ ಹೇಳುವನು. "ಸರ್ವಭೂತೇಭ್ಯಃ" ಎಂಬ ಕಡೆ ಚತುರ್ಥಿಗೆ ಪ್ರಪನ್ನರಾದವರಿಗೂ ಅವರ ಸಂಬಂಧಿಗಳಿಗೂ ಅಭಯವನ್ನು ಕೊಡುತ್ತೇನೆಂಬ ಅರ್ಥವೂ ಆಗುವುದು. "ಪಶುರ್ಮನುಷ್ಯಃ ಪಕ್ಷೀವಾಯೇಚ ವೈಷ್ಣವಸಂಶ್ರಯಾಃ | ತೇನೈವತೇ ಪ್ರಯಾಸ್ಯಂತಿ ತದ್ವಿಷ್ಣೋಃ ಪರಮಂ ಪದಂ ||" ಪ್ರಪನ್ನರನ್ನಾಶ್ರಯಿಸಿರುವ ಪಶುಪಕ್ಷಿ ಮೃಗ ಮನುಷ್ಯಾದಿಗಳೆಲ್ಲವೂ ಅವರೊಡನೆಯೇ ವಿಷ್ಣುಪದವನ್ನು ಹೊಂದುತ್ತವೆ" ಎಂದಿದೆ. (ಗೋ)

☸ ಶ್ರೀರಾಮನು ಈವರೆಗೂ ಶರಣಾಗತಸಂರಕ್ಷಣೆಯು ಅವಶ್ಯಕರ್ತವ್ಯವೆಂದು ವಾದಿಸಿ, ಇದೀಗ ತಾನೇ ಹೋಗಿ ವಿಭೀಷಣನನ್ನು ಕರೆದುತಂದುದಾದರೆ ಆಶ್ರಿತವಾತ್ಸಲ್ಯವನ್ನು ತೋರಿದಂತಾಗುವುದಿಲ್ಲವೆಂದು ಯೋಚಿಸಿ ಆ ವಿಭೀಷಣಾ

ಮಸ್ಯಾಽಭಯಂ ಮಯಾ । ವಿಭೀಷಣೋವಾ ಸುಗ್ರೀವ ಯದಿವಾ ರಾವಣಸ್ಸ್ವಯಂ" ॥ ೩೪ ॥ ರಾಮಸ್ಯತು ವಚಶ್ಶ್ರುತ್ವಾ ಸುಗ್ರೀವಃ ಪ್ಲವಗೇಶ್ವರಃ । ಪ್ರತ್ಯಭಾಷತ ಕಾಕುತ್ಸ್ಥಂ ಸೌಹಾರ್ದೇನಾಽಭಿಚೋದಿತಃ ॥ ೩೫ ॥ "ಕಿಮತ್ರ ಚಿತ್ರಂ ಧರ್ಮಜ್ಞ! ಲೋಕನಾಥ! ಸುಖಾವಹ! । ಯತ್ತ್ವಮಾರ್ಯಂ ಪ್ರಭಾಷೇಥಾಸ್ಸತ್ತ್ವವಾನ್ಸತ್ಪಥೇ

ಹೇ ಸುಗ್ರೀವ - ಎಲೈ ಸುಗ್ರೀವನೇ, ಸ್ವಯಂ - ತಾನು, ವಿಭೀಷಣೋವಾ - ವಿಭೀಷಣನಾದರೂ, ರಾವಣೋವಾ - ಅಂಥಾ ಅಪಕಾರಿಯಾದ ರಾವಣಾಸುರನೇ ಆದರೂ, ಅಸ್ಯ - ರಾಮನನ್ನು ಶರಣು ಹೊಂದಿದೇನೆಂಬ ಇವನಿಗೆ, ಮಯಾ-ಶರಣಾಗತರಕ್ಷಣವೆಂಬುದೇ ಮುಖ್ಯ ದೀಕ್ಷೆಯಾಗುಳ್ಳ ನನ್ನಿಂದ, ಅಭಯಂ - ಅಭಯವು, ದತ್ತಂ - ಕೊಡಲ್ಪಟ್ಟಿತು, ಹೇ ಹರಿಶ್ರೇಷ್ಠ - ಎಲೈ ವಾನರಶ್ರೇಷ್ಠನೇ, ಏನಂ - ಇವನನ್ನು, ಆನಯ - ಕರದುಕೊಂಡು ಬಾ, ॥ ೩೪ ॥ ಪ್ಲವಗೇಶ್ವರಃ - ವಾನರಾಧಿಪತಿಯಾದ, ಸುಗ್ರೀವಃ - ಸುಗ್ರೀವನು, ರಾಮಸ್ಯ - ಶ್ರೀರಾಮನ, ವಚಸ್ತು - ಮಾತನ್ನಾದರೆ, ಶ್ರುತ್ವಾ - ಕೇಳಿ, ಸೌಹಾರ್ದೇನ - ಸ್ನೇಹಭಾವದಿಂದ, ಅಭಿಚೋದಿತಃ - ಪ್ರೇರಿಸಲ್ಪಟ್ಟವನಾಗಿ, ಕಾಕುತ್ಸ್ಥಂ - ಶ್ರೀರಾಮನನ್ನು ಕುರಿತು, ಪ್ರತ್ಯಭಾಷತ - ಉತ್ತರವನ್ನು ಕೊಟ್ಟನು. ॥೩೫॥ ಹೇ ಧರ್ಮಜ್ಞ - ಎಲೈ ಧರ್ಮರಹಸ್ಯವನ್ನರಿತವನೇ, ಲೋಕನಾಥ - ಸರ್ವಜನರಿಗೂ ಸ್ವಾಮಿಯಾದವನೇ, ಸುಖಾವಹ - ಸಮಸ್ತರನ್ನು ಸಂತೋಷಗೊಳಿಸುವವನೇ, ತ್ವಂ - ನೀನು, ಸತ್ತ್ವವಾನ್ - ಸತ್ವಗುಣವುಳ್ಳವನು, ಸತ್ಪಥೇ - ಸನ್ಮಾರ್ಗದಲ್ಲಿ, ಸ್ಥಿತಃ - ಇರುವವನಾಗಿ, ಆರ್ಯಂ - ಶುಭಕರವಾಗಿ, ಪ್ರಭಾಷೇಥಾಇತಿ ಮಾತನಾಡುವದು ಯಾವುದೋ, ಅತ್ರ - ಈ ವಿಷಯದಲ್ಲಿ, ಕಿಂಚಿತ್ರಂ - ಏನಾಶ್ಚರ್ಯವು. ॥ ೩೬ ॥

ಸುಗ್ರೀವನೇ! ಇವನು ವಿಭೀಷಣನಾದರೂ, ವಿಭೀಷಣನ ವೇಷದಿಂದ ಬಂದ ರಾವಣಾಸುರನಾದರೂ ಇವನಿಗೆ ನಾನು ಅಭಯವನ್ನು ಕೊಟ್ಟಿರುವೆನು. ಇವನನ್ನೀಗಲೇ ಕರೆದುಕೊಂಡು ಬರುವವನಾಗು" ಎಂದು ಹೇಳಿದನು. ಹೀಗೆ ಪರಮ ಮಂಗಳಕರವಾಗಿ ನುಡಿದ ಶ್ರೀರಾಮನ ಮಾತುಗಳನ್ನು ಕೇಳಿದ ತರುವಾಯ ಸುಗ್ರೀವನು ಆತನ ಶರಣಾಗತ ವಾತ್ಸಲ್ಯವನ್ನು ನೋಡಿ ಪರಮಾಶ್ಚರ್ಯಭರಿತನಾಗಿ ಆತನನ್ನು ಕುರಿತು, "ಓ ಧರ್ಮಜ್ಞನೇ! ಸಮಸ್ತ ಲೋಕಗಳಿಗೂ ಪ್ರಭುವೇ! ಸಮಸ್ತ ಪ್ರಾಣಿಗಳಿಗೂ ಸುಖವನ್ನು ನೀಡುವವನೇ!! ಶ್ರೀರಾಮಚಂದ್ರನೇ!!! ದೃಢವಾದ ವ್ರತವುಳ್ಳವನೂ, ನ್ಯಾಯಮಾರ್ಗದಲ್ಲಿರುವವನೂ ಆದ ನೀನು ಬಹಳ ಶ್ರೇಷ್ಠವಾದ ಮಾತನ್ನಾಡಿದೆ. ಇದು ಪರಮಾಶ್ಚರ್ಯವಾಗಿರುವುದು.

ನಯನವನ್ನು ಸುಗ್ರೀವನಿಂದಲೇ ಮಾಡಿಸುವನಾಗಿ ಅವನನ್ನು ಕುರಿತು ಹೀಗೆ ಹೇಳುವನು. "ಎಲೈ ಕಪಿಶ್ರೇಷ್ಠನೇ, ಸುಗ್ರೀವನೇ! ಈ ವಿಭೀಷಣನು "ವಿಭೀಷಣಸ್ತು ಧರ್ಮಾತ್ಮಾ" ಎಂಬ ವಿಭೀಷಣನೇ ಆಗಲಿ, "ರಾವಣಸ್ಯ ನೃಶಂಸಸ್ಯ" ಎಂಬಂತೆ ವೇಷಧಾರಿಯಾದ ದುರುಳರಾವಣನೇ ಆಗಿರಲಿ, ಇವನನ್ನು ಕರೆದುಕೊಂಡು ಬಾ. ಇವನು ವಿಭೀಷಣನೇ ಆಗಿದ್ದರೆ ಇವನನ್ನು ಸಂರಕ್ಷಿಸುವುದರಿಂದ ಇವನೊಡನಿರುವ ನಾಲ್ವರು ಮಂತ್ರಿಗಳೂ ಕೂಡಿ ಐವರನ್ನು ಮಾತ್ರ ಸಂರಕ್ಷಿಸಿದಂತಾಗುವುದು. ಆದರೆ ಇವನು ರಾವಣನೇ ಆಗಿದ್ದರೆ ಇವನನ್ನು ಸಂರಕ್ಷಿಸುವುದರಿಂದ ಒಟ್ಟು ಲಂಕಾನಿವಾಸಿಗಳೆಲ್ಲರನ್ನೂ ಸಂರಕ್ಷಿಸಿದಂತಾಗುವುದು. ಮೇಲಾಗಿ ವಿಭೀಷಣನು ಧರ್ಮಾತ್ಮನು; ಇವನನ್ನು ಸಂರಕ್ಷಿಸುವುದರಿಂದ ಅಷ್ಟಾಗಿ ಪ್ರಯೋಜನವಿರದು, ಆದರೆ ಧೂರ್ತನಾದ ರಾವಣನನ್ನು ಸಂರಕ್ಷಿಸುವುದರಿಂದ ದೊಡ್ಡ ಲಾಭವೇ ಇರುತ್ತದೆ" ಎಂಬ ವಿಷಯವು ಗ್ರಾಹ್ಯವು. ಇದೂ ಅಲ್ಲದೆ ಈಗ ನೀನೊಪ್ಪದಿದ್ದರೆ ನಾನು ಇವನನ್ನು ಸ್ವೀಕರಿಸಲಾರೆನು. ಆದುದರಿಂದ ನೀನೇ ಇವನನ್ನು ಕರೆತರುವವನಾಗು. ಹೀಗೆ ಹೇಳಿದುದರಿಂದ ಶ್ರೀರಾಮನಿಗೆ ಆಶ್ರಿತ ಪಾರತಂತ್ರ್ಯವನ್ನು ಹೇಳಿದಂತಾಯಿತು. (ಕ+ಗೋ+ಮ)

ಸ್ಥಿತಃ || ೩೬ || ಮಮಚಾಪ್ಯಂತರಾತ್ಮಾಽಯಂ ಶುದ್ಧಂ ವೇತ್ತಿ ವಿಭೀಷಣಂ | ಅನುಮಾನಾಚ್ಚ ಭಾವಾಚ್ಚ ಸರ್ವತ ಸ್ಸುಪರೀಕ್ಷಿತಃ || ೩೭ || ತಸ್ಮಾತ್ ಕ್ಷಿಪ್ರಂ ಸಹಾಸ್ಮಾಭಿಸ್ತುಲ್ಯೋ ಭವತು ರಾಘವ! | ವಿಭೀಷಣೋ ಮಹಾಪ್ರಾಜ್ಞ ಸ್ಸಖಿತ್ವಂ ಚಾಭ್ಯುಪೈತು ನಃ" || ೩೮ ||

ತತಸ್ತು ಸುಗ್ರೀವ ವಚೋ ನಿಶಮ್ಯ
ತದ್ಧರೀಶ್ವರೇಣಾಭಿಹಿತಂ ನರೇಶ್ವರಃ |
ವಿಭೀಷಣೇನಾಶು ಜಗಾಮ ಸಂಗಮಂ
ಪತತ್ರಿರಾಜೇನ ಯಥಾ ಪುರಂದರಃ || ೩೯ ||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಅಷ್ಟಾದಶಸ್ಸರ್ಗಃ

---

ಮಮ - ನನ್ನ, ಅಯಂಅಂತರಾತ್ಮಾಪಿ - ಅಂತಃಕರಣವೂ ಕೂಡ, ವಿಭೀಷಣಂ - ವಿಭೀಷಣನನ್ನು, ಶುದ್ಧಂ-ಶುದ್ಧನನ್ನಾಗಿ, ವೇತ್ತಿ-ತಿಳಿದಿದೆ, ಕಿಂಚ-ಇಷ್ಟುಮಾತ್ರವಲ್ಲ, ಅನುಮಾನಾಚ್ಚ-ನಿನ್ನಿಂದ ಹೇಳಲ್ಪಟ್ಟ ಯುಕ್ತಿಸಮೂಹದ ದೆಸೆಯಿಂದಲೂ, ಭಾವಾಚ್ಚ - ಅಭಿಪ್ರಾಯಬೋಧಕವಾದ ಮುಖವಿಲಾಸಗಳಿಂದಲೂ, ಸರ್ವತಃ - ಹೊರಗೂ ಒಳಗೂ ಕೂಡ, ಸುಪರೀಕ್ಷಿತಃ - ಶುದ್ಧನೆಂದು ಪರೀಕ್ಷಿಸಲ್ಪಟ್ಟನು. ||೩೭|| ಹೇ ರಾಘವ - ಎಲೈ ಶ್ರೀರಾಮನೇ, ತಸ್ಮಾತ್ - ಆ ಕಾರಣದಿಂದ, ಮಹಾಪ್ರಾಜ್ಞಃ-ಬಹಳ ತಿಳಿವಳಿಕೆಯುಳ್ಳ, ವಿಭೀಷಣಃ - ವಿಭೀಷಣನು, ಕ್ಷಿಪ್ರಂ - ಜಾಗ್ರತೆಯಾಗಿ, ಅಸ್ಮಾಭಿಃ - ನಮ್ಮೊಡನೆ, ತುಲ್ಯಃ - ಸಮಾನನು, ಭವತು - ಆಗಲಿ, ನಃ - ನಮ್ಮ, ಸಖಿತ್ವಂಚ - ಸ್ನೇಹಭಾವವನ್ನೂ ಕೂಡ, ಅಭ್ಯುಪೈತು || ೩೮ || ನರೇಶ್ವರಃ - ನರಪತಿಯಾದ ಶ್ರೀರಾಮನು, ತತ್ಸುಗ್ರೀವವಚಃ - ಆ ಸುಗ್ರೀವನ ವಾಕ್ಯವನ್ನು, ನಿಶಮ್ಯ - ಕೇಳಿ, ತತಸ್ತು - ಬಳಿಕಾದರೆ, ಹರೀಶ್ವರೇಣ - ವಾನರಾಧಿಪತಿಯಾದ ಸುಗ್ರೀವನಿಂದ, ಅಭಿಹಿತಂ-ಹೇಳಲ್ಪಟ್ಟ, ವಿಭೀಷಣೇನ-ವಿಭೀಷಣನೊಡನೆ, ಸಂಗಮಂ - ಸೇರೋಣವನ್ನು, ಪತತ್ರಿರಾಜೇನ - ಗರುಡನೊಡನೆ, ಯಥಾ - ಹೇಗೆ, ಪುರಂದರಃ - ಇಂದ್ರನೋ, ತಥಾ - ಹಾಗೆ, ಆಶು - ಜಾಗ್ರತೆಯಾಗಿ, ಜಗಾಮ - ಹೊಂದಿದನು. || ೩೯ ||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಅಷ್ಟಾದಶಸ್ಸರ್ಗಃ.

---

ಎಲೈ ಸ್ವಾಮಿಯೇ! ಈಗ ನನ್ನ ಮನಸ್ಸಿಗೂ ಕೂಡ ವಿಭೀಷಣನು ಮಹಾ ಪರಿಶುದ್ಧನೆಂದು ತಿಳಿಯಿತು (ಗೋಚರವಾಯಿತು). ನೀನೂ, ಆಂಜನೇಯನೂ ಹೇಳಿದ ಯುಕ್ತಿಯುಕ್ತವಾದ ಮಾತುಗಳಿಂದಲೂ, ಈ ವಿಭೀಷಣನ ಆಕಾರವಿವೇಚನೆಯಿಂದಲೂ ಈ ವಿಷಯವನ್ನು ಚೆನ್ನಾಗಿ ತಿಳಿದುಕೊಂಡೆನು. ರಾಮಚಂದ್ರಾ! ಮಹಾ ಪಂಡಿತನಾದ ವಿಭೀಷಣನು ಜಾಗ್ರತೆಯಾಗಿ ನಮ್ಮಲ್ಲಿ ಒಬ್ಬನಾಗಿರಲಿ. ನಮ್ಮ ಸ್ನೇಹಿತನಾಗಿರಲಿ" ಎಂದು ಹೇಳಿದನು. ಆಗ ಮಾನವೇಶ್ವರನಾದ ಶ್ರೀರಾಮನು ಸುಗ್ರೀವನ ಮಾತುಗಳನ್ನು ಕೇಳಿ ಸುಗ್ರೀವನಿಂದ ಕರೆತರಲ್ಪಡುವ ವಿಭೀಷಣನೊಡನೆ, "ಗರುತ್ಮಂತನೊಡನೆ ಸೇರಿದ ದೇವೇಂದ್ರನಂತೆ" ಬಹು ಜಾಗ್ರತೆಯಾಗಿ ಸ್ನೇಹವನ್ನು ಮಾಡಿದನು. || ೩೬-೩೯ ||

ಇಂತಿದು ಶ್ರೀರಾಮಪ್ರೋಕ್ತ ಶರಣಾಗತರಕ್ಷಣಧರ್ಮವೆಂಬ ಹದಿನೆಂಟನೆಯ ಸರ್ಗವು ಸಮಾಪ್ತವಾದುದು.



# ಯುದ್ಧಕಾಂಡೇ ಏಕೋನವಿಂಶಸ್ಸರ್ಗಃ

¶ **ರಾಘವೇಣಾಭಯೇ ದತ್ತೇ ಸನ್ನತೋ ರಾವಣಾನುಜಃ । ವಿಭೀಷಣೋ ಮಹಾಪ್ರಾಜ್ಞೋ ಭೂಮಿಂ ಸಮವಲೋಕಯನ್ । ಖಾತ್ಪಪಾತಾವನಿಂ ಹೃಷ್ಟೋ**

ರಾಘವೇಣ - ಶ್ರೀರಾಮನಿಂದ, ಅಭಯೇ - ಅಭಯವು, ದತ್ತೇ - ಕೊಡಲ್ಪಟ್ಟದ್ದಾಗಲು, ಸನ್ನತಃ - ತಲೆಬೊಗ್ಗಿಸಿಕೊಂಡವನಾಗಿ, ರಾವಣಾನುಜಃ - ರಾವಣನ ತಮ್ಮನಾದ, ಮಹಾಪ್ರಾಜ್ಞಃ - ಬಹಳ ತಿಳಿವಳಿಕೆಯುಳ್ಳ, ವಿಭೀಷಣಃ - ವಿಭೀಷಣನು, ಭೂಮಿಂ - ಸುಗ್ರೀವಾದಿಗಳಿಂದ ತೋರಿಸಲ್ಪಟ್ಟ ಭೂಮಿಯನ್ನು, ಸಮವಲೋಕಯನ್ - ನೋಡುವವನಾಗಿ, ಭಕ್ತೈಃ - ಭಕ್ತರಾದ, ಅನುಚರೈಸ್ಸಹ - ಹಿಂದೆ ಬಂದವರೊಡನೆ, ಹೃಷ್ಟಃ - (ಗೋ) ಅಭಿಮತವಾದ ವಸ್ತುಲಾಭದಿಂದುಂಟಾದ ಪ್ರೀತಿ

ರಘುವಂಶೋದ್ಭವನಾದ ಶ್ರೀರಾಮನು ಅಭಯಪ್ರದಾನವನ್ನು ಮಾಡುತ್ತಲೇ ರಾವಣಾನುಜನೂ, ಮಹಾ ಪ್ರಜ್ಞಾವಂತನೂ ಆದ ವಿಭೀಷಣನು ತಲೆಬಾಗಿ ಭೂಮಿಯಕಡೆ ನೋಡುತ್ತ, ತನ್ನಲ್ಲಿ ನಿರತಿಶಯ ಭಕ್ತಿಯುಳ್ಳ ನಾಲ್ವರು ಅನುಚರರೊಡನೆ ಆಕಾಶದಿಂದ ಭೂಮಿಗೆ ಹಾರಿಬಂದು ಸಕಲ ಧರ್ಮಗಳನ್ನು ತಿಳಿದವನೂ, ಶರಣಾನ್ವೇಷಿಯೂ ಆದ ಆ ವಿಭೀಷಣನು ಆ ಕೂಡಲೇ ತನ್ನ ಅನುಚರರಾದ ನಾಲ್ವರು ರಾಕ್ಷಸರೊಡಗೂಡಿ ಶ್ರೀರಾಮನ

¶ ಅವತಾರಿಕೆ— ಈವರೆಗೂ ಶರಣ್ಯನಾದವ (ಶ್ರೀರಾಮ)ನು ಶರಣಾಗತ (ವಿಭೀಷಣ)ನೊಡನೆ ಸೇರಿದ ಬಗೆಯನ್ನು ನಿರೂಪಿಸಿ ಇದೀಗ, ಶರಣಾಗತ (ವಿಭೀಷಣ)ನಿಗೆ ದೊರಕಿದ ಶರಣ್ಯ (ಶ್ರೀರಾಮ) ಸೇವೆಯೆಂಬ ಫಲವನ್ನು (ಪುರುಷಾರ್ಥಲಾಭವನ್ನು) ಹೇಳುವನು.

ವಿಶೇಷಾರ್ಥ :—ಅಭಯೇ - ಸರ್ವ ಭೂತಾಭಯವು ದತ್ತೇ - ಕೊಡಲ್ಪಡಲು, ಸನ್ನತಃ - ("ಗುಹ್ಯೈರ್ದಾಸ್ಯಮುಪಾಗತಃ") ಎಂಬಂತೆ ಹಿಂದೆ ಕೇಳಿದುದಕ್ಕಿಂತ ಅಧಿಕವಾಗಿ, ಶ್ರೀರಾಮನ ಕಲ್ಯಾಣಗುಣಗಳ ಸಾಕ್ಷಾತ್ಕಾರದಿಂದ ಬಹಳ ನಮ್ರತೆಯಿಂದ ಬಾಗಿದ ಅವಯವಗಳುಳ್ಳವನಾದ, ಪ್ರಾಜ್ಞಃ (ಏನೊಂದೂ ಅಪಾಯವಿಲ್ಲದ ಉಪಾಯವನ್ನು ಪರಿಗ್ರಹಿಸಿದುದರಿಂದ ಪರಮ ಪುರುಷಾರ್ಥಲಾಭವಾಗಿ ಆದರಿಂದ ತಾನು ಮಾಡಿದ ವೇದಶಾಸ್ತ್ರಾಭ್ಯಾಸಾತಿಶಯದಿಂದುಂಟಾದ ಜ್ಞಾನವು ಈಗ ಸಫಲವಾಯಿತೆಂದು ಆತನು ತಿಳಿದನೆಂದು ಭಾವವು) ಮಹಾ ಪ್ರಾಜ್ಞನಾದ, ಭೂಮಿಂ ಸಮವಲೋಕಯನ್– ಶ್ರೀರಾಮನ ಸಮೀಪ ಭೂಮಿಯೆಲ್ಲವೂ ಆತನ ಅಂತರಂಗ ಸಚಿವರಿಂದ ಸಮ್ಮರ್ದವಾಗಿದ್ದರೂ, ತನ್ನನ್ನೂ ತಮ್ಮ ಗುಂಪಿನಲ್ಲಿ ಒಬ್ಬನನ್ನಾಗಿ ಮಾಡಿಕೊಂಡು ತನಗಾಗಿ ಕೊಡಲ್ಪಟ್ಟ ಭೂಪ್ರದೇಶವನ್ನು ಚೆನ್ನಾಗಿ ನೋಡುತ್ತ, ಖಾದವನಿಂ ಪಪಾತ– (ಇದರಿಂದ ದೂರದಿಂದಲೇ ಆ ವಿಭೀಷಣನು ಮಾಡಿದ ಪ್ರಾಥಮಿಕ ಪ್ರಣಾಮವನ್ನು ಹೇಳಿದಂತಾಯಿತು) ಪ್ರಣಾಮಾದಿಗಳನ್ನು ಮಾಡಲು ಯೋಗ್ಯವಲ್ಲದ ಆಕಾಶವನ್ನು ತೊರೆದು, ಪಾಣಿಪಾದ ಶಿರಃಪ್ರಭೃತಿಗಳಾದ ಅಷ್ಟಾಂಗಗಳಿಂದಲೂ ಭೂಮಿಯನ್ನು ಹೊಂದಿದನೆಂದರ್ಥವು. "ತಾನು ಅಪೇಕ್ಷಿಸಿದ ಅಭಯವನ್ನು ಮೊದಲೇ ಕೊಡಲಾಯಿತಷ್ಟೆ. ಈಗ ಪುನಃ ಪ್ರಣಾಮವೇಕೆ ?" ಎಂದರೆ, ಹೃಷ್ಟಃ – ಶ್ರೀರಾಮನ ಸ್ವರೂಪ ಮತ್ತು ಗುಣಗಳ ಅನುಭವದಿಂದುಂಟಾದ ಹರ್ಷವುಳ್ಳವನಾಗಿ ಮೈಮರೆತು (ಸ್ವಾಧೀನ ತಪ್ಪಿದ ಶರೀರವುಳ್ಳವನಾಗಿ) ಪ್ರಣಾಮಮಾಡಿದನೆಂದು ಭಾವವು. (ಮತ್ತಾವ ಪ್ರಯೋಜನವನ್ನುದ್ದೇಶಿಸಿಯೂ ಪ್ರಣಮಿಸಲಿಲ್ಲವೆಂದು ತಾತ್ಪರ್ಯವು) ಭಕ್ತೈರನುಚರೈಸಹ –"ರಾಘವಂ ಶರಣಾಗತಃ" "ನಿವೇದಯತ ಮಾಂ" ಎಂಬುದಾಗಿ ವಿಭೀಷಣನೊಬ್ಬನೇ ಈ ಉಪಾಯವನ್ನು ಅನುಷ್ಠಿಸಿರುವುದಾಗಿ ಹೇಳಿದ್ದರೂ ಇಲ್ಲಿ "ಭಕ್ತೈರನುಚರೈಸ್ಸಹ" ಎಂದು ಹೇಳಿರುವುದು, "ಪಶುರ್ಮನುಷ್ಯಃ........ತದ್ವಿಷ್ಣೋಃ ಪರಮಂ ಪದಂ" ಎಂಬಂತೆ ಶರಣಾಗತನನ್ನು ಅನುಸರಿಸಿರುವವರಿಗೂ ಶ್ರೀರಾಮ ಪರಿಚರಣದಲ್ಲಿ ಸಮಾನವಾದ ಅಧಿಕಾರವಿರುವುದೆಂಬ ವಿಷಯವನ್ನು ತಿಳಿಸುವುದಕ್ಕಾಗಿಯೆಂದು ತಿಳಿಯಬೇಕು. (ಗೋ)

ಭಕ್ತೈರನುಚರೈಸ್ಸಹ ॥ ೧ ॥ ¶ ಸತು ರಾಮಸ್ಯ ಧರ್ಮಾತ್ಮಾ ನಿಪಪಾತ ವಿಭೀಷಣಃ ।
ಪಾದಯೋಃ ಶರಣಾನ್ವೇಷೀ ಚತುರ್ಭಿಸ್ಸಹ ರಾಕ್ಷಸೈಃ ॥ ೨ ॥ ☸ ಅಬ್ರವೀಚ್ಚ ತದಾ
ರಾಮಂ ವಾಕ್ಯಂ ತತ್ರ ವಿಭೀಷಣಃ । ಧರ್ಮಯುಕ್ತಂಚ ಯುಕ್ತಂಚ ಸಾಂಪ್ರತಂ

ಯುಳ್ಳವನಾಗಿ, ಖಾತ್ - ಅಂತರಿಕ್ಷದ ದೆಸೆಯಿಂದ, ಅವನಿಂ - ಭೂಮಿಯಲ್ಲಿ, ಪಪಾತ - ಬಿದ್ದನು. ॥೧॥ ಧರ್ಮಾತ್ಮಾ - ಧರ್ಮಸ್ವಭಾವವುಳ್ಳ, ಸವಿಭೀಷಣಸ್ತು - ಆ ವಿಭೀಷಣನಾದರೆ, ಶರಣಾನ್ವೇಷೀ- ಶರಣವನ್ನು ಹುಡುಕುವವನಾಗಿ, ಚತುರ್ಭಿಃ-ನಾಲ್ವರಾದ, ರಾಕ್ಷಸೈಸ್ಸಹ-ರಾಕ್ಷಸರೊಡನೆ, ರಾಮಸ್ಯ- ಶ್ರೀರಾಮನ, ಪಾದಯೋಃ - ಪಾದಗಳಲ್ಲಿ, ನಿಪಪಾತ - ಬಿದ್ದನು. ॥ ೨ ॥ ತದಾ - ಆ ಕಾಲದಲ್ಲಿ, ತತ್ರ - ಆ ವಾನರರ ಗುಂಪಿನಲ್ಲಿ, ವಿಭೀಷಣಃ - ವಿಭೀಷಣನು, ಧರ್ಮಯುಕ್ತಂ - ಧರ್ಮದಿಂದ ಕೂಡಿರುವ, ಯುಕ್ತಂಚ - ಯುಕ್ತಿಯುಕ್ತವೂ ಆದ, ಸಾಂಪ್ರತಂ - ತಕ್ಷಣದಲ್ಲಿ, ಸಂಪ್ರಹರ್ಷಣಂ - ಸಂತೋಷಕರವಾದ, ವಾಕ್ಯಂಚ - ಮಾತನ್ನು, ರಾಮಂ - ಶ್ರೀರಾಮನನ್ನು ಕುರಿತು, ಅಬ್ರವೀತ್ -

ಚರಣದಲ್ಲಿ ಬಿದ್ದು ನಮಸ್ಕರಿಸಿದನು (ಸಾಷ್ಟಾಂಗಪ್ರಣಾಮವನ್ನು ಮಾಡಿದನು), ಆ ಬಳಿಕ ಆತನು ಧರ್ಮಯುಕ್ತವಾಗಿಯೂ, ಆ ಕಾಲಕ್ಕೆ ತಕ್ಕುದಾಗಿಯೂ, ಯುಕ್ತಿಯುಕ್ತವಾಗಿಯೂ ಕೇಳಿದೊಡನೆಯೇ ಮನೋಲ್ಲಾಸವನ್ನುಂಟುಮಾಡುವುದಾಗಿಯೂ ಇರುವ ಮಾತುಗಳಿಂದ ಶ್ರೀರಾಮನನ್ನು ಕುರಿತು, "ಓ ರಘುರಾಮನೇ! ನಾನು ರಾವಣಾಸುರನ ತಮ್ಮನು. ನಾನು

¶ ಹಿಂದಣ ಸರ್ಗದಲ್ಲಿ ಕೇವಲ ವಾಚಿಕ ಪ್ರಪತ್ತಿಯು ನಿರೂಪಿತವಾಯಿತು. ಇದೀಗ ಕಾಯಿಕ ಶರಣಾಗತಿಯನ್ನು ನಿರೂಪಿಸುವನು.

ವಿಶೇಷಾರ್ಥ:—ಸತು - ಸಂಶಯ ವಿಪರ್ಯಯ ನಿವೃತ್ತಿಯಿಂದ, ಆನುಕೂಲ್ಯ ನಿರ್ಣಯ ವಿಷಯವುಳ್ಳ, ಧರ್ಮಾತ್ಮಾ - ಸರ್ವಾವಸ್ಥೆಗಳಲ್ಲಿಯೂ ಅಗಲದ ಶರಣಾಗತ ಧರ್ಮನಿಷ್ಠೆಯುಳ್ಳ (ವಧ್ಯತಾಂ, ಶಂಕ್ಯತಾಂ, ನತ್ಯಜೇಯಂ ಆನಯೈನಂ, ಅಸ್ಮಾಭಿಸ್ತುಲ್ಯೋ ಭವತು ಎಂಬುದಾಗಿ ಹೇಳಿದ ಸರ್ವಾವಸ್ಥೆಗಳಲ್ಲಿಯೂ ಶರಣಾಗತ ಧರ್ಮನಿಷ್ಠೆಯನ್ನು ಬಿಡದವನು ಎಂದರ್ಥವು) ಹೀಗೆ ಹೇಳಿದುದರಿಂದ ವಿಭೀಷಣನಿಗೆ ಶರಣ್ಯನಾದ ಶ್ರೀರಾಮನಲ್ಲಿರುವ ಮಹಾ ವಿಶ್ವಾಸವನ್ನು ಹೇಳಿದಂತಾಯಿತು, ಶರಣಾನ್ವೇಷೀ - ಶರಣವರಣವನ್ನು ಮಾಡಿಕೊಂಡು, (ವಿಭೀಷಣನು) ರಾಮಸ್ಯ ಪಾದಯೋಃ - ಶ್ರೀರಾಮನು ತನ್ನಲ್ಲಿಟ್ಟಿರುವ ಪಕ್ಷಪಾತಾತಿಶಯವನ್ನು ತೋರಿಸುವ ಸುಂದರವಾದ ಆಕಾರವುಳ್ಳ ಆತನ ಪಾದಗಳಲ್ಲಿ (ಎಳೆ ಮಗುವಿಗೆ ಮಾತೃಸ್ತನಗಳಲ್ಲಿಯೇ ವಿಶೇಷಾಸಕ್ತಿಯಿರುವಂತೆ, ಶರಣಾಗತನಾದವನಿಗೆ ಶರಣ್ಯನ ಶ್ರೀ ಪಾದಗಳೇ ಕೇವಲ ಭೋಗ್ಯಭೂತಗಳಾದುದರಿಂದ ಆತನ ಪಾದಗಳಲ್ಲಿಯೇ) ಬಿದ್ದನು. ಇಲ್ಲಿ ಆನುಕೂಲ್ಯಸಂಕಲ್ಪ ಮತ್ತು ಪ್ರಾತಿಕೂಲ್ಯ ವರ್ಜನವು ಹೇಳಿದಂತಾಯಿತು. "ಧರ್ಮಾತ್ಮಾ" ಎಂಬುದರಿಂದ ಮಹಾ ವಿಶ್ವಾಸವೂ, "ಶರಣಾನ್ವೇಷೀ" ಎಂಬುದರಿಂದ ಗೋಪ್ತೃತ್ವ ವರಣವೂ, "ಪಪಾತ" ಎಂಬುದರಿಂದ ಆತ್ಮನಿಕ್ಷೇಪವೂ, ಹೀಗೆ ಈ ಶ್ಲೋಕದಿಂದ ಆ ವಿಭೀಷಣನು ಮಾಡಿದ ಸಾಂಗಶರಣಾಗತಿಯನ್ನು ಹೇಳಿದಂತಾಯಿತು. (ತನಿ)

☸ ಹಿಂದಣ ಶ್ಲೋಕದಲ್ಲಿ ಕಾಯಿಕ ಶರಣಾಗತಿಯನ್ನು ಹೇಳಿ ಈ ಶ್ಲೋಕದಿಂದ ವಾಚಿಕ ಶರಣಾಗತಿಯನ್ನು ಹೇಳುವನು.

ವಿಶೇಷಾರ್ಥ :—ತದಾ - ಪಾದಪತನ ಸಮಯದಲ್ಲಿ ತತ್ರ - ಸುಗ್ರೀವನೇ ಮೊದಲಾದವರೆಲ್ಲರೂ ಐಕಮತ್ಯದಿಂದಿರುವ ಸಭೆಯಲ್ಲಿ, ರಾಮಂ - ಹಿಂದೆ ಸುಗ್ರೀವನೇ ಮೊದಲಾದ ಪುರುಷಕಾರಭೂತರನ್ನು ಮಾತ್ರ ಕುರಿತು ಹೇಳಿದ್ದನು, ಈಗ ಶರಣ್ಯನಾದ ಶ್ರೀರಾಮನನ್ನೇ ಕುರಿತು, ಧರ್ಮಯುಕ್ತಂ - ಶರಣಾಗತಿಯ ಅಂಗಗಳಿಗೆ ಅನುಕೂಲವಾದ ಸಂಕಲ್ಪ ಧರ್ಮದಿಂದ ಕೂಡಿದ, ಯುಕ್ತಂ - ಸಮರ್ಥನೂ, ಪರಮ ಕಾರುಣಿಕನೂ ಆದ ಶ್ರೀರಾಮ ವಿಷಯವನ್ನು ಕುರಿತುದಾದುದರಿಂದ ಯೋಗ್ಯವಾದ, ಸಾಂಪ್ರತಂ ಸಂಪ್ರಹರ್ಷಣಂ - ಹಿಂದೆ ತಾನು, "ರಾಘವಂ ಶರಣಾಗತಃ" ಎಂದು ಹೇಳಿದಾಗ ಸುಗ್ರೀವಾದಿಗಳಿಗೆ ಶ್ರುತಿ ಕಠಿನವಾಯಿತು, ಈಗ ಮಾತನಾಡುವ ಮಾತುಗಳೆಲ್ಲವೂ ಎಲ್ಲರಿಗೂ ಸಂತೋಷಜನಕವಾಯಿತೆಂದು ಅರ್ಥವು. ಇಂತಹ ಮಾತನ್ನು (ಅಬ್ರವೀತ್) ಹೇಳಿದನು. (ಗೋ)



—: ವಿಭೀಷಣ ಶರಣಾಗತಿ :—

ಅನುಜೋ ರಾವಣಸ್ಯಾಹಂ ತೇನ ಚಾಸ್ಯವಮಾನಿತಃ ।
ಭವಂತಂ ಸರ್ವಭೂತಾನಾಂ ಶರಣ್ಯಂ ಶರಣಾಗತಃ ॥

ಪುಟ ೧೭೯

ಸಂಪ್ರಹರ್ಷಣಂ || ೩ || " ಅನುಜೋ ರಾವಣಸ್ಯಾಽಹಂ ತೇನ ಚಾಪ್ಯವಮಾನಿತಃ | ಭವಂತಂ ಸರ್ವಭೂತಾನಾಂ ಶರಣ್ಯಂ ಶರಣಾಗತಃ ||೪|| ಪರಿತ್ಯಕ್ತಾ ಮಯಾ ಲಂಕಾ ಮಿತ್ರಾಣಿಚ ಧನಾನಿಚ್ಚ | ಭವದ್ಗತಂ ಮೇ ರಾಜ್ಯಂಚ ಜೀವಿತಂಚ ಸುಖಾನಿಚ" ||೫|| ತಸ್ಯ ತದ್ವಚನಂ ಶ್ರುತ್ವಾ ರಾಮೋ ವಚನಮಬ್ರವೀತ್ | ವಚಸಾ ಸಾಂತ್ವಯಿತ್ವೈನಂ ಲೋಚನಾಭ್ಯಾಂ ಪಿಬನ್ನಿವ || ೬ || " ಆಖ್ಯಾಹಿ ಮಮ ತತ್ತ್ವೇನ ರಾಕ್ಷಸಾನಾಂ ಬಲಾಬಲಂ || ೭ || ಏವಮುಕ್ತಸ್ತದಾ ರಕ್ಷೋ ರಾಮೇಣಾಽಕ್ಲಿಷ್ಟಕರ್ಮಣಾ | ರಾವಣಸ್ಯ ಬಲಂ ಸರ್ವಮಾಖ್ಯಾತುಮುಪಚಕ್ರಮೇ || ೮ || " ಅವಧ್ಯಸ್ಸರ್ವಭೂತಾನಾಂ ಗಂಧ

---

ನುಡಿದನು. ||೩|| ಅಹಂ - ನಾನು, ರಾವಣಸ್ಯ - ರಾವಣಾಸುರನ, ಅನುಜಃ - ತಮ್ಮನು, ತೇನಚಾಪಿ- ಅವನಿಂದಲೂ ಕೂಡ, ಅವಮಾನಿತಃ - ಅಪಮಾನಗೊಳಿಸಲ್ಪಟ್ಟಿನು, ಸರ್ವಭೂತಾನಾಂ - ಸಮಸ್ತ ಪ್ರಾಣಿಗಳಿಗೂ, ಶರಣ್ಯಂ - ಸಂರಕ್ಷಕನಾದ, ಭವಂತಂ - ನಿನ್ನನ್ನು, ಶರಣಾಗತಃ - ಶರಣುಹೊಂದಿದ್ದೇನೆ. || ೪ || ಮಯಾ - ನನ್ನಿಂದ, ಲಂಕಾ - ಲಂಕಾಪಟ್ಟಣವು, ಪರಿತ್ಯಕ್ತಾ - ಬಿಡಲ್ಪಟ್ಟಿತು, ಮಿತ್ರಾಣಿಚ - ಸ್ನೇಹಿತರೂ, ಧನಾನಿಚ್ಚ - ದ್ರವ್ಯಗಳೂ, ಪರಿತ್ಯಕ್ತಾನಿ - ಬಿಡಲ್ಪಟ್ಟವು, ಮೇ - ನನ್ನ, ರಾಜ್ಯಂ - ರಾಜ್ಯವು, ಭವದ್ಗತಂ - ನಿನ್ನನ್ನು ಹೊಂದಿದೆ, ಜೀವಿತಂ - ಪ್ರಾಣವೂ ಕೂಡ, ಭವದ್ಗತಂ- ನಿನ್ನನ್ನು ಹೊಂದಿದೆ. || ೫ || ರಾಮಃ - ಶ್ರೀರಾಮನು, ತಸ್ಯ - ಆ ವಿಭೀಷಣನ, ತದ್ವಚನಂ - ಆ ಮಾತನ್ನು, ಶ್ರುತ್ವಾ - ಕೇಳಿ, ಏನಂ - ಆ ವಿಭೀಷಣನನ್ನು, ವಚಸಾ - ವಾಕ್ಯದಿಂದ, ಸಾಂತಯಿತ್ವಾ- ಸಮಾಧಾನಗೊಳಿಸಿ, ಲೋಚನಾಭ್ಯಾಂ - ನೇತ್ರಗಳಿಂದ, ಪಿಬನ್ನಿವ - ಪಾನಮಾಡುವನೆಂಬಂತೆ, ವಚನಂ - ಮಾತನ್ನು, ಅಬ್ರವೀತ್ - ನುಡಿದನು. || ೬ || ರಾಕ್ಷಸಾನಾಂ - ಅಸುರರ, ಬಲಾಬಲಂ - ಬಲದೌರ್ಬಲ್ಯಗಳನ್ನು, ಮಮ - ನನಗೆ, ತತ್ತ್ವೇನ - ಯಥಾರ್ಥವಾಗಿ, ಆಖ್ಯಾಹಿ - ಹೇಳು. || ೭ || ಅಕ್ಲಿ....ಣಾ - ಕ್ಲೇಶವಿಲ್ಲದೆ ಕಾರ್ಯವನ್ನು ಮಾಡುತ್ತಿರುವ, ರಾಮೇಣ - ಶ್ರೀರಾಮನಿಂದ, ಏವಮುಕ್ತಃ - ಈ ಪ್ರಕಾರವಾಗಿ ಹೇಳಲ್ಪಟ್ಟವನಾಗಿ, ತದಾ - ಆ ಕಾಲದಲ್ಲಿ, ರಾವಣಸ್ಯ - ರಾವಣಾಸುರನ, ಸರ್ವಂ - ಸಮಸ್ತವಾದ, ಬಲಂ - ಬಲವನ್ನು, ಆಖ್ಯಾತಂ - ಹೇಳುವದಕ್ಕೆ, ಉಪಚಕ್ರಮೇ - ಪ್ರಾರಂಭಿಸಿದನು. || ೮ || ಹೇ ರಾಜಪುತ್ರ - ಎಲೈ ಶ್ರೀರಾಮನೇ, ದಶಗ್ರೀವಃ - ರಾವಣಾಸುರನು, ಸ್ವಯಂಭುವಃ - ಬ್ರಹ್ಮನ, ವರದಾನಾತ್ - ವರದಾನದಿಂದ, ಗಂಧ....ಸಾಂ - ಗಂಧರ್ವರಿಗೂ,

---

ಅವನಿಂದಲೇ ಅವಮಾನಿತನಾಗಿರುವೆನು. ಆ ಅವಮಾನವನ್ನು ತಡೆಯಲಾರದೆ, ಎಲ್ಲ ಪ್ರಾಣಿಗಳಿಗೂ ಶರಣ್ಯನಾಗಿರುವ ನಿನ್ನಲ್ಲಿ ಶರಣಾಗತನಾಗಿ ಬಂದಿರುವೆನು. ಎಲೈ ಶ್ರೀರಾಮಮೂರ್ತಿಯೇ! ನಾನು ಲಂಕಾನಗರವನ್ನೂ ಅಲ್ಲಿರುವ ನನ್ನ ಮಿತ್ರರನ್ನೂ, ಐಶ್ವರ್ಯವನ್ನೂ ತೊರೆದು ಬೆಟ್ಟಿರುವೆನು. ಪ್ರಕೃತದಲ್ಲಿ ನನ್ನ ರಾಜ್ಯವೂ, ಬಾಳ್ವದುಕೂ, ಸುಖಸಂತೋಷಗಳೂ ನಿನ್ನನ್ನೇ ಸೇರಿವೆ" ಎಂದು ಹೇಳಿದನು. || ೧-೫ || ವಿಭೀಷಣನಾಡಿದ ಈ ಮಾತುಗಳನ್ನು ಕೇಳಿ ಶ್ರೀರಾಮನು ಅವನನ್ನು ಸಮಾಧಾನಗೊಳಿಸಿ ದಯಾಪೂರಿತ ದೃಷ್ಟಿಯಿಂದ ಅವನನ್ನು ಪಾನಮಾಡುವವನಂತೆ ನೋಡುತ್ತ ಅವನನ್ನು ಕುರಿತು, "ಎಲ್ಲವೂ ಹಾಗಿರಲಿ, ಪ್ರಕೃತದಲ್ಲಿ ರಾಕ್ಷಸರ ಬಲಾಬಲಗಳನ್ನು ಯಥಾರ್ಥವಾಗಿ ನನಗೆ ತಿಳಿಯಹೇಳು" ಎಂದನು. ಆಗ ವಿಭೀಷಣನು ರಾವಣಾಸುರನ ಬಲಪರಾಕ್ರಮಗಳೆಲ್ಲವನ್ನು ಹೇಳಲುಪಕ್ರಮಿಸಿ, "ಎಲೈ ರಾಜಪುತ್ರನೇ! ಬ್ರಹ್ಮನ ವರಬಲದಿಂದ ರಾವಣನು ಎಲ್ಲ ಭೂತಗಳಿಂದ ಮಾತ್ರವಲ್ಲದೆ, ಗಂಧರ್ವಾ

ರ್ವಾಸುರರಕ್ಷಸಾಂ । ರಾಜಪುತ್ರ ! ದಶಗ್ರೀವೋ ವರದಾನಾತ್ಸ್ವಯಂಭುವಃ ॥ ೯ ॥ ರಾವಣಾನಂತರೋ ಭ್ರಾತಾ ಮಮಜ್ಯೇಷ್ಠಶ್ಚ ವೀರ್ಯವಾನ್ । ಕುಂಭಕರ್ಣೋ ಮಹಾತೇಜಾಃ ಶಕ್ರಪ್ರತಿಬಲೋ ಯುಧಿ ॥೧೦॥ ರಾಮ! ಸೇನಾಪತಿಸ್ತಸ್ಯ ಪ್ರಹಸ್ತೋ ಯದಿವಾ ಶ್ರುತಃ । ಕೈಲಾಸೇ ಯೇನ ಸಂಗ್ರಾಮೇ ಮಾಣಿಭದ್ರಃ ಪರಾಜಿತಃ ॥ ೧೧ ॥ ಬದ್ಧಗೋಧಾಂಗುಳಿತ್ರಾಣಸ್ತ್ವವಧ್ಯಕವಚೋಯುಧಿ । ಧನುರಾದಾಯ ತಿಷ್ಠನ್ ಸ ಅದೃಶ್ಯೋ ಭವತೀಂದ್ರಜಿತ್ ॥ ೧೨ ॥ ಸಂಗ್ರಾಮಸಮಯವ್ಯೂಹೇ ತರ್ಪಯಿತ್ವಾ ಹುತಾಶನಂ । ಅಂತರ್ಧಾನಗತಶ್ಶತ್ರೂನಿಂದ್ರಜಿದ್ಧಂತಿ ರಾಘವ! ॥ ೧೩ ॥ ಮಹೋ

ಅಸುರರಿಗೂ, ರಾಕ್ಷಸರಿಗೂ, ಸರ್ವಭೂತಾನಾಂ-ಇತರ ಸಮಸ್ತ ಭೂತಗಳಿಗೂ, ಅವಧ್ಯಃ-ವಧಾರ್ಹನಲ್ಲ. ॥ ೯ ॥ ರಾವಣಾನಂತರಃ - ರಾವಣನಿಗೆ ಎರಡನೇಯವನಾದ, ಮಮಜ್ಯೇಷ್ಠಶ್ಚ - ನನಗೆ ದೊಡ್ಡವನಾದ, ಮಹಾತೇಜಾಃ - ಮಹಾ ತೇಜಸ್ವಿಯಾದ, ವೀರ್ಯವಾನ್ - ಪರಾಕ್ರಮಿಯಾದ, ಭ್ರಾತಾ - ಒಡಹುಟ್ಟಿದವನಾದ, ಕುಂಭಕರ್ಣಃ - ಕುಂಭಕರ್ಣನೆಂಬುವನು, ಯುಧಿ - ಕಾಳೆಗದಲ್ಲಿ, ಶಕ್ರಪ್ರತಿಬಲಃ - ಇಂದ್ರನಿಗೀಡಾದ ಬಲವುಳ್ಳವನು. ॥ ೧೦ ॥ ಹೇ ರಾಮ - ಎಲೈ ಶ್ರೀರಾಮನೇ, ಕೈಲಾಸೇ - ಕೈಲಾಸಪರ್ವತದಲ್ಲಿ, ಯೇನ - ಯಾವನಿಂದ, ಮಾಣಿಭದ್ರಃ - ಮಾಣಿಭದ್ರನೆಂಬುವನು, ಸಂಗ್ರಾಮೇ-ಕಾಳೆಗದಲ್ಲಿ, ಪರಾಜಿತಃ ಸೋಲಿಸಲ್ಪಟ್ಟನೋ, ಪ್ರಹಸ್ತಃ-ಅಂಥಾ ಪ್ರಹಸ್ತನೆಂಬುವನು, ಸೇನಾಪತಿಃ - ಸೈನ್ಯಾಧಿಪತಿಯು, ಯದಿವಾಶ್ರುತಃ - (ಮ) ಹನುಮಂತನಿಂದ ಕೇಳಲ್ಪಡಲಿಲ್ಲವೇ. ॥ ೧೧ ॥ ಬದ್ಧ....ಣಃ - ಕಟ್ಟಲ್ಪಟ್ಟ ಬೆರಳಿನ ಚೀಲವುಳ್ಳ, ಅವಧ್ಯಕವಚಃ - ಹೊಡೆಯಲಸಾಧ್ಯವಾದ ಕವಚವುಳ್ಳ, ಸಇಂದ್ರಜಿತ್ - ಆ ಇಂದ್ರಜಿತುವು, ಧನುರಾದಾಯ - ಧನುಸ್ಸನ್ನು ತೆಗೆದುಕೊಂಡು, ತಿಷ್ಠನ್ - ನಿಂತವನಾಗಿ, ಯುಧಿ - ಕಾಳೆಗದಲ್ಲಿ, ಅದೃಶ್ಯಃ - ಕಣ್ಣಿಗೆ ಕಾಣದಿರುವನು, ಭವತಿ - ಆಗುವನು. ॥ ೧೨ ॥ ಹೇ ರಾಘವ - ಎಲೈ ಶ್ರೀರಾಮನೇ, ಇಂದ್ರಜಿತ್ - ಇಂದ್ರಜಿತ್ತುವು, ಸಂಗ್ರಾ....ಹೇ - ಯುದ್ಧಕಾಲದಲ್ಲಿ ಸೇರಿದ ಗುಂಪಿನಲ್ಲಿ, ಹುತಾಶನಂ - ಅಗ್ನಿಯನ್ನು, ತರ್ಪಯಿತ್ವಾ-ತೃಪ್ತಿಗೊಳಿಸಿ, ಅಂತರ್ಧಾನಗತಃ - ಅಂತರ್ಹಿತನಾಗಿ, ಶತ್ರೂನ್ - ವೈರಿಗಳನ್ನು, ಹಂತಿ - ಹೊಡಿಯು

ಸುರ ರಾಕ್ಷಸರಿಂದಲೂ ಅವಧ್ಯನಾಗಿರುವನು. ಆ ರಾವಣನಿಗೆ ಎರಡನೆಯವನೂ, ನನಗೆ ಜ್ಯೇಷ್ಠ ಭ್ರಾತೃವೂ ಆದ ಕುಂಭಕರ್ಣನು ಮಹಾ ತೇಜಸ್ವಿಯು ; ಮಹಾ ಪರಾಕ್ರಮಿಯು ; ಕಾಳೆಗದಲ್ಲಿ ಮಹೇಂದ್ರನಿಗೆ ಸಮಾನವಾದ ಭೀಮ ಪರಾಕ್ರಮವುಳ್ಳವನು. ॥೬–೧೦॥ ಶ್ರೀರಾಮಾ ! ಆ ರಾವಣನಿಗೆ ಮಹಾಮಾತ್ಯನಾದವನು ಪ್ರಹಸ್ತನೆಂಬುವನು. ಪ್ರಾಯಶಃ ನೀನುಆತನ ವಿಷಯವನ್ನು ಈವರೆಗಾಗಲೇ ಹನುಮಂತನಿಂದ ಕೇಳಿರಬಹುದು, ಹಿಂದೆ ಈ ಪ್ರಹಸ್ತನು ಕೈಲಾಸಾದ್ರಿಯಲ್ಲಿ ಮಣಿಭದ್ರನ ಮಗನನ್ನು ಕಾಳೆಗದಲ್ಲಿ ಸೋಲಿಸಿರುವನು. ಈ ವಿಷಯವನ್ನೂ ಈ ಮೊದಲೇ ನೀನು ಹನುಮಂತನಿಂದ ಕೇಳಿರಬಹುದು. ಜ್ಯಾಘಾತವನ್ನು ಎದುರಿಸುವ ಅಂಗುಳಿ ತ್ರಾಣವನ್ನು ಧರಿಸಿ, ಅಭೇದ್ಯ ಕವಚವನ್ನು ತೊಟ್ಟು, ಧನುಸ್ಸನ್ನು ಧರಿಸಿ ರಣರಂಗದಲ್ಲಿಶತ್ರುಗಳಿಗೆ ಅದೃಶ್ಯನಾಗುವ ಇಂದ್ರಜಿತ್ತೇ ಆ ರಾವಣನ ಮಗನು. ಎಲೈ ರಾಘವನೇ ! ಆ ಇಂದ್ರಜಿತ್ತುವು ಸಮರಸಮಯದಲ್ಲಿ ತಾನು ಕಟ್ಟಿದ ವ್ಯೂಹದಲ್ಲಿಯೇ ಯಜ್ಞೇಶ್ವರನನ್ನು ಹವ್ಯಕವ್ಯಗಳಿಂದ ತೃಪ್ತಿಗೊಳಿಸಿ ಹಾಗೆ ಅದೃಶ್ಯನಾಗುತ್ತಾನೆ. ಹಾಗೆ ಅದೃಶ್ಯನಾಗಿದ್ದುಕೊಂಡೇ ಅವನು ಶತ್ರುಗಳನ್ನು ಕೊಲ್ಲುತ್ತಾನೆ. ಇನ್ನು ಮಹೋದರ, ಮಹಾಪಾರ್ಶ್ವ,

ದರಮಹಾಪಾರ್ಶ್ವೌ ರಾಕ್ಷಸಶ್ಚಾಪ್ಯಕಂಪನಃ । ಅನೀಕಸ್ಥಾಸ್ತು ತಸ್ಯೈತೇ ಲೋಕಪಾಲ ಸಮಾ ಯುಧಿ ॥೧೪॥ ದಶಕೋಟಿಸಹಸ್ರಾಣಿ ರಕ್ಷಸಾಂ ಕಾಮರೂಪಿಣಾಂ । ಮಾಂಸ ಶೋಣಿತಭಕ್ಷಾಣಾಂ ಲಂಕಾಪುರನಿವಾಸಿನಾಂ ॥ ೧೫ ॥ ಸತೈಸ್ತು ಸಹಿತೋ ರಾಜಾ ಲೋಕಪಾಲಾನಯೋಧಯತ್ । ಸಹದೇವೈಸ್ತು ತೇ ಭಗ್ನಾ ರಾವಣೇನ ಮಹಾತ್ಮನಾ" ॥ ೧೬ ॥ ವಿಭೀಷಣವಚಃ ಶ್ರುತ್ವಾ ರಾಮೋ ದೃಢಪರಾಕ್ರಮಃ । ಅನ್ವೀಕ್ಷ್ಯ ಮನಸಾ ಸರ್ವಮಿದಂ ವಚನಮಬ್ರವೀತ್ ॥ ೧೭ ॥ "ಯಾನಿ ಕರ್ಮಾಪದಾನಾನಿ ರಾವಣಸ್ಯ ವಿಭೀಷಣ ! । ಆಖ್ಯಾತಾನಿ ಚ ತತ್ತ್ವೇನ ಹ್ಯವಗಚ್ಛಾಮಿ ತಾನ್ಯಹಂ ॥ ೧೮ ॥ ಅಹಂ

ತ್ತಾನೆ. ॥೧೪॥ ಮಹೋ......ರ್ಶ್ವೌ - ಮಹೋದರ ಮಹಾಪಾರ್ಶ್ವರು, ಅಕಂಪನಃ - ಅಕಂಪನನೆಂಬ, ರಾಕ್ಷಸಶ್ಚ - ಅಸುರನು, ಏತೇ - ಇವರುಗಳು, ಯುಧಿ - ಕಾಳಗದಲ್ಲಿ, ಲೋಕ......ಮಾಃ - ಲೋಕ ಪಾಲಕರಿಗೆ ಸಮಾನರಾಗಿ, ತಸ್ಯ - ಆ ರಾವಣನ, ಅನೇಕಸ್ಥಾಃ - ಸೇನಾನಾಯಕರಾಗಿರುವರು, ಕಿಂತು - ಆದರೆ, ಮಾಂಸ......ಣಾಂ - ಮಾಂಸವನ್ನು ರಕ್ತವನ್ನು ಭಕ್ಷಿಸುತ್ತಿರುವ, ಲಂಕಾ......ನಾಂ - ಲಂಕಾಪಟ್ಟಣದಲ್ಲಿರುವ, ಕಾಮರೂಪಿಣಾಂ - ಸ್ವೇಚ್ಛಾರೂಪರಾದ, ರಕ್ಷಸಾಂ - ಮುಖ್ಯರಾದ ರಾಕ್ಷಸರ, ದಶ.....ಣಿ ಹತ್ತುಕೋಟಿ ಸಾವಿರಗಳು, ಸಂತಿ-ಇವೆ. ॥೧೫॥ ರಾಜಾ-ರಾಕ್ಷಸರಾಜನಾದ, ಸಃ-ಆ ರಾವ ಣನು, ತೈಸ್ತು-ಅವರಿಂದಲಾದರೆ, ಸಹಿತಃ-ಕೂಡಿದವನಾಗಿ, ಲೋಕಪಾಲಾನ್-ಲೋಕಪಾಲಕರನ್ನು ಕುರಿತು, ಅಯೋಧಯತ್-ಯುದ್ಧಮಾಡಿದನು. ॥೧೫॥ ಮಹಾತ್ಮನಾ-ಮಹಾ ಧೈರ್ಯಶಾಲಿಯಾದ, ರಾವಣೇನ - ರಾವಣಾಸುರನಿಂದ, ತೇತು - ಆಲೋಕಪಾಲಕರಾದರೆ, ದೇವೈಸ್ಸಹ - ದೇವತೆಗಳೊಡನೆ, ಭಗ್ನಾಃ-ಪರಾಜಿತರಾದರು. ॥ ೧೬ ॥ ದೃಢ....ಮಃ-ದೃಢವಾದ ಪರಾಕ್ರಮವುಳ್ಳ, ರಾಮಃ-ಶ್ರೀರಾಮನು, ವಿಭೀಷಣವಚಃ - ವಿಭೀಷಣನ ಮಾತನ್ನು, ಶ್ರುತ್ವಾ - ಕೇಳಿ, ಮನಸಾ - ಮನಸ್ಸಿನಿಂದ, ಸರ್ವಂ - ಸಮಸ್ತವನ್ನೂ, ಅನ್ವೀಕ್ಷ್ಯ - ಆಲೋಚಿಸಿ, ಇದಂವಚನಂ - ಈ ಮಾತನ್ನು, ಅಬ್ರವೀತ್ - ನುಡಿ ದನು. ॥ ೧೭ ॥ ಹೇ ವಿಭೀಷಣ - ಎಲೈ ವಿಭೀಷಣನೇ, ರಾವಣಸ್ಯ - ರಾವಣನ, ಯಾನಿ....ನಿ - ಯಾವ ಚರಿತ್ರೆಗಳು, (ಅಂದರೆ - ಶೌರ್ಯ ವ್ಯಾಪಾರಗಳು,) ತತ್ತ್ವೇನಚ - ಯಥಾರ್ಥದಿಂದಲೇ, ಆಖ್ಯಾತಾನಿ - ಹೇಳಲ್ಪಟ್ಟವೋ, ಅಹಂ - ನಾನು, ತಾನಿ - ಅವುಗಳನ್ನು, ಅವಗಚ್ಛಾಮಿಹಿ - ತಿಳಿದಿ ದ್ದೇನೆ. ॥ ೧೮ ॥ ಅಹಂ - ನಾನು, ಸಪ್ರಹಸ್ತಂ - ಪ್ರಹಸ್ತನಿಂದ ಯುಕ್ತನಾದ, ಸಬಾಂಧವಂ -

ಅಕಂಪನ ಈ ರಾಕ್ಷಸರು ರಣಕ್ಕಿಳಿದರೆ ಕುಬೇರಾದಿ ಲೋಕಪಾಲಕರಿಗೆ ಸಮಾನರಾಗಿ ಯುದ್ಧ ಮಾಡುತ್ತಾರೆ. ಆದರಮೇಲೆ ಕಾಮರೂಪರೂ, ರಕ್ತಮಾಂಸ ಭಕ್ಷಕರೂ ಆದ ಹತ್ತುಕೋಟಿ ಸಹಸ್ರಸಂಖ್ಯಾಕರಾದ ಲಂಕಾವಾಸಿಗಳಾದ ರಾಕ್ಷಸರು ಆ ರಾವಣನಿಗೆ ಸೈನಿಕರಾಗಿದ್ದಾರೆ. ಇವರೆಲ್ಲರನ್ನೂ ಗುಂಪುಕಟ್ಟಿಕೊಂಡು ಹೋಗಿ, ಆ ರಾವಣನು ಹಿಂದೆ ಲೋಕಪಾಲಕರೊಡನೆ ಯುದ್ಧ ಮಾಡಿದನು. ಆಗ ಲೋಕಪಾಲಕರೆಲ್ಲರೂ ಆ ರಾವಣನಿಗೆ ಸೋತು ಹೋದರು" ಎಂದು ಹೇಳಿದನು. ॥ ೧೧–೧೬ ॥ ಸ್ಥಿರಪರಾಕ್ರಮಿಯಾದ ಶ್ರೀರಾಮಮೂರ್ತಿಯು ವಿಭೀ ಷಣನು ಹೇಳಿದ ಶತ್ರುವಿನ ಬಲಾಬಲವರ್ಣನೆಯನ್ನು ಕೇಳಿ ಅವುಗಳೆಲ್ಲವನ್ನೂ ಮನಸ್ಸಿ ನಲ್ಲಿಯೇ ಚೆನ್ನಾಗಿ ಆಲೋಚಿಸಿ ಕರ್ತವ್ಯಾಕರ್ತವ್ಯಗಳನ್ನು ನಿಶ್ಚಯಮಾಡಿಕೊಂಡು ಅವನನ್ನು ಕುರಿತು, "ಅಯ್ಯಾ ವಿಭೀಷಣನೇ ! ನೀನು ಯಥಾರ್ಥವಾಗಿ, ರಾವಣನ ಬಲಪರಾಕ್ರಮ ವೃತ್ತಾಂತವೆಲ್ಲವನ್ನೂ ಹೇಳಿದೆ. ಆದರೆ ಅವೆಲ್ಲವೂ ನನಗೆ ಮೊದಲೇ ತಿಳಿದಿದೆ. ಅವನು

ಹತ್ವಾ ದಶಗ್ರೀವಂ ಸಪ್ರಹಸ್ತಂ ಸಬಾಂಧವಂ । ರಾಜಾನಂ ತ್ವಾಂ ಕರಿಷ್ಯಾಮಿ ಸತ್ಯಮೇತದ್ಬ್ರವೀಮಿ ತೇ ॥ ೧೯ ॥ ರಸಾತಲಂ ವಾ ಪ್ರವಿಶೇತ್ಪಾತಾಳಂ ವಾಪಿ ರಾವಣಃ । ಪಿತಾಮಹಸಕಾಶಂವಾ ನ ಮೇ ಜೀವನ್ ವಿಮೋಕ್ಷ್ಯತೇ ॥ ೨೦ ॥ ಅಹತ್ವಾ ರಾವಣಂ ಸಂಖ್ಯೇ ಸಪುತ್ರಬಲಬಾಂಧವಂ । ಅಯೋಧ್ಯಾಂ ನಪ್ರವೇಕ್ಷ್ಯಾಮಿ ತ್ರಿಭಿಸ್ತೈರ್ಭ್ರಾತೃಭಿಶ್ಶಪೇ ” ॥ ೨೧ ॥ ಶ್ರುತ್ವಾತು ವಚನಂ ತಸ್ಯ ರಾಮಸ್ಯಾಕ್ಲಿಷ್ಟಕರ್ಮಣಃ । ಶಿರಸಾ ವಂದ್ಯ ಧರ್ಮಾತ್ಮಾ ವಕ್ತುಮೇವೋಪಚಕ್ರಮೇ ॥ ೨೨ ॥ “ ರಾಕ್ಷಸಾನಾಂ ವಧೇ ಸಾಹ್ಯಂ ಲಂಕಾಯಾಶ್ಚ ಪ್ರಧರ್ಷಣಂ । ಕರಿಷ್ಯಾಮಿ ಯಥಾಪ್ರಾಣಂ ಪ್ರವೇಕ್ಷ್ಯಾಮಿ

ಬಂಧುಗಳಿಂದೊಡಗೂಡಿದ, ದಶಗ್ರೀವಂ - ರಾವಣನನ್ನು, ಹತ್ವಾ - ಸಂಹರಿಸಿ, ತ್ವಾಂ - ನಿನ್ನನ್ನು, ರಾಜಾನಂ - ಅರಸನನ್ನಾಗಿ, ಕರಿಷ್ಯಾಮಿ - ಮಾಡುವೆನು, ಏತತ್ - ಇದನ್ನು, ಸತ್ಯಂ - ಸತ್ಯವಾಗಿ, ತೇ - ನಿನಗೆ, ಬ್ರವೀಮಿ - ಹೇಳುತ್ತೇನೆ. ॥ ೧೯ ॥ ರಾವಣಃ - ರಾವಣನು, ರಸಾತಲಂವಾ - ಭೂವಿವರವನ್ನಾಗಲಿ, ಪಾತಾಳಂವಾಪಿ - ಪಾತಾಳವನ್ನಾಗಲಿ, ಪಿತಾ....ವಾ - ಬ್ರಹ್ಮ ಸಮೀಪವನ್ನಾಗಲಿ, ಪ್ರವಿಶೇತ್ - ಪ್ರವೇಶಿಸಿದವನಾದರೂ, ಮೇ - ನನ್ನ ಮುಂದೆ, ಜೀವನ್ - ಬದುಕಿ, ನವಿಮೋಕ್ಷ್ಯತೇ - ಬಿಡಲ್ಪಡುವದಿಲ್ಲ. ॥ ೨೦ ॥ ಅಹಂ - ನಾನು, ಸಂಖ್ಯೇ - ಕಾಳಗದಲ್ಲಿ, ಸಪು....ವಂ - ಮಕ್ಕಳಿಂದಲೂ, ಸೈನ್ಯದಿಂದಲೂ, ನೆಂಟರಿಂದಲೂ ಕೂಡಿದ, ರಾವಣಂ - ರಾವಣನನ್ನು, ಅಹತ್ವಾ - ಸಂಹಾರ ಮಾಡದೆ, ಅಯೋಧ್ಯಾಂ - ಅಯೋಧ್ಯಾಪಟ್ಟಣವನ್ನು, ನಪ್ರವೇಕ್ಷ್ಯಾಮಿ - ಪ್ರವೇಶಿಸುವದಿಲ್ಲ, ಇತಿ - ಇಂತೆಂದು, ತೈಃ - ಆ ಪ್ರಸಿದ್ಧರಾದ, ಭ್ರಾತೃಭಿಃ - ಒಡಹುಟ್ಟಿದವರಾದ, ತ್ರಿಭಿಃ - ಭರತ ಶತ್ರುಘ್ನ ಲಕ್ಷ್ಮಣರಿಂದ, ಶಪೇ - ಶಪಥ ಮಾಡುತ್ತೇನೆ. ॥ ೨೧ ॥ ಧರ್ಮಾತ್ಮಾ - ಧರ್ಮಸ್ವಭಾವವುಳ್ಳ ವಿಭೀಷಣನು, ಅಕ್ಲಿ....ಣಃ - ಕ್ಲೇಶವಿಲ್ಲದೆ ಕಾರ್ಯವನ್ನು ಮಾಡುವ, ತಸ್ಯರಾಮಸ್ಯ - ಆ ಶ್ರೀರಾಮನ, ವಚನಂತು - ಮಾತನ್ನಾದರೆ, ಶ್ರುತ್ವಾ - ಕೇಳಿ, ಶಿರಸಾ - ಶಿರಸ್ಸಿನಿಂದ, ವಂದ್ಯ - ನಮಸ್ಕಾರ ಮಾಡಿ, ವಕ್ತುಮೇವ - ಹೇಳುವದಕ್ಕೇನೆ, ಉಪಚಕ್ರಮೇ - ಪ್ರಾರಂಭಿಸಿದನು. ॥ ೨೨ ॥ ರಾಕ್ಷಸಾನಾಂ - ಅಸುರರ, ವಧೇ - ಸಂಹಾರ ವಿಷಯದಲ್ಲಿ, ಸಾಹ್ಯಂ - ಸಹಾಯವನ್ನು, ಲಂಕಾಯಾಃ - ಲಂಕಾಪಟ್ಟಣದ, ಪ್ರಧರ್ಷಣಂಚ - ಭಂಗವನ್ನು ಕುರಿತು, ಯಥಾಪ್ರಾಣಂ - ಶಕ್ತಿ

ಹೇಗಾದರೂ ಇರಲಿ. ಸತ್ಯವಾಗಿ ಹೇಳುವೆನು ಕೇಳು ; ನಾನು ಪ್ರಹಸ್ತನಿಂದಲೂ, ಬಂಧುಗಳಿಂದಲೂ ಕೂಡಿದ ಆ ರಾವಣನನ್ನು ಕೊಂದು ನಿನ್ನನು ಲಂಕಾನಗರಕ್ಕೆ ಧೊರೆಯನ್ನಾಗಿ ಮಾಡುವೆನು. ಆ ರಾವಣನು ರಸಾತಲಕ್ಕಾದರೂ ಹೋಗಲಿ; ಪಾತಾಳವನ್ನಾದರೂ ಸೇರಲಿ; ಬ್ರಹ್ಮದೇವನ ಬಳಿಗೈದಿ ಅವನನ್ನು ಮೊರೆಹೊಕ್ಕರೂ ಹೊಗಲಿ ; ಅವನು ನನ್ನಿಂದ ಬದುಕಿ ಮಾತ್ರ ಹೋಗಲಾರನು. ಅಯ್ಯಾ ವಿಭೀಷಣನೇ ! ರಾವಣನನ್ನು ಕೊಲ್ಲದೆ ನಾನು ಅಯೋಧ್ಯೆಗೆ ಹಿಂತಿರುಗುವುದಿಲ್ಲ. ಆ ಪಟ್ಟಣವನ್ನು ಪ್ರವೇಶಿಸುವುದೂ ಇಲ್ಲವು. ಇಗೋ, ಈ ಮಾತನ್ನು ನನ್ನ ಮೂವರು ತಮ್ಮಂದಿರಮೇಲೂ ಆಣೆಯಿಟ್ಟು ಹೇಳುತ್ತಿದ್ದೇನೆ ” ಎಂದನು. ॥೧೭—೨೧॥ ಎಲ್ಲ ಸಾಹಸ ಕಾರ್ಯಗಳನ್ನೂ ಕ್ಲೇಶವಿಲ್ಲದೆಯೇ ಮಾಡುವ ಶ್ರೀರಾಮನ ಈ ಮಾತುಗಳನ್ನು ಕೇಳಿ ಧರ್ಮಾತ್ಮನಾದ ಆ ವಿಭೀಷಣನು ಆತನಿಗೆ ಶಿರಸ್ಸಿನಿಂದ ನಮಸ್ಕರಿಸಿ, “ಓ ರಾಮಚಂದ್ರ ! ಇದೋ ನಾನು ನಿನ್ನ ಸೇನೆಯನ್ನು ಪ್ರವೇಶಿಸಿ ನನ್ನ ಪ್ರಾಣಗಳಿರುವ ವರೆಗೂ, ರಾಕ್ಷಸರ ವಧೆಯಲ್ಲಿಯೂ, ಲಂಕಾಧರ್ಷಣದಲ್ಲಿಯೂ ಸಹಾಯವನ್ನು ಮಾಡುವೆನು”

ಚ ವಾಹಿನೀಂ" ‖ ೨೩ ‖ ಇತಿ ಬ್ರುವಾಣಂ ರಾಮಸ್ತು ಪರಿಷ್ವಜ್ಯ ವಿಭೀಷಣಂ । ಅಬ್ರವೀಲ್ಲಕ್ಷ್ಮಣಂ ಪ್ರೀತ"ಸ್ಸಮುದ್ರಾಜ್ಜಲಮಾನಯ ‖೨೪‖ ತೇನ ಚೇಮಂ ಮಹಾಪ್ರಾಜ್ಞಮಭಿಷಿಂಚ ವಿಭೀಷಣಂ । ರಾಜಾನಂ ರಕ್ಷಸಾಂ ಕ್ಷಿಪ್ರಂ ಪ್ರಸನ್ನೇ ಮಯಿ ಮಾನದ!" ‖ ೨೫ ‖ ಏವಮುಕ್ತಸ್ತು ಸೌಮಿತ್ರಿರಭ್ಯಷಿಂಚದ್ವಿಭೀಷಣಂ । ಮಧ್ಯೇ ವಾನರಮುಖ್ಯಾನಾಂ ರಾಜಾನಂ ರಾಜಶಾಸನಾತ್ ‖೨೬‖ ತಂ ಪ್ರಸಾದಂ ತು ರಾಮಸ್ಯ ದೃಷ್ಟ್ವಾ ಸದ್ಯಃ ಪ್ಲವಂಗಮಾಃ । ಪ್ರಚುಕ್ರುಶುರ್ಮಹಾತ್ಮಾನಂ "ಸಾಧುಸಾಧ್ವಿ"ತಿ ಚಾಬ್ರುವನ್ ‖೨೭‖ ಅಬ್ರವೀಚ್ಚ ಹನೂಮಾಂಶ್ಚ ಸುಗ್ರೀವಶ್ಚ ವಿಭೀಷಣಂ । "ಕಥಂ

---

ಯಿದ್ಧಮಟ್ಟಿಗೆ, ಕರಿಷ್ಯಾಮಿ - ಮಾಡುವೆನು, ವಾಹಿನೀಂಚ - ಸೇನೆಯನ್ನೂ ಕೂಡ, ಪ್ರವೇಕ್ಷ್ಯಾಮಿ - ಪ್ರವೇಶಿಸುವೆನು. ‖ ೨೩ ‖ ಇತಿ - ಈ ಪ್ರಕಾರವಾಗಿ, ಬ್ರುವಾಣಂ - ಹೇಳುತ್ತಿರುವ, ವಿಭೀಷಣಂ - ವಿಭೀಷಣನನ್ನು, ರಾಮಸ್ತು - ಶ್ರೀರಾಮನಾದರೆ, ಪರಿಷ್ವಜ್ಯ - ಅಪ್ಪಿಕೊಂಡು, ಪ್ರೀತಃ - ಸಂತೋಷಚಿತ್ತನಾಗಿ, ಲಕ್ಷ್ಮಣಂ - ಲಕ್ಷ್ಮಣನನ್ನು ಕುರಿತು, ಹೇ ಮಾನದ - ಎಲೈ ಮಾನಪ್ರದಾಯಕನೇ, ಮಯಿ - ನಾನು, ಪ್ರಸನ್ನೇ - ಪ್ರಸನ್ನನಾಗಿರುವಾಗಲೇ, ಸಮುದ್ರಾತ್ - ಸಮುದ್ರದಿಂದ, ಜಲಂ - ಉದಕವನ್ನು, ಆನಯ - ತೆಗೆದುಕೊಂಡು ಬಾ, ತೇನಚ - ಆ ಉದಕದಿಂದ, ಮಹಾಪ್ರಾಜ್ಞಂ - ಬಹಳ ತಿಳಿವಳಿಕೆಯುಳ್ಳ, ಇಮಂವಿಭೀಷಣಂ - ಈ ವಿಭೀಷಣನನ್ನು, ಕ್ಷಿಪ್ರಂ - ಶೀಘ್ರತೆಯಾಗಿ, ರಕ್ಷಸಾಂ - ಅಸುರರ, ರಾಜಾನಂ - ಅರಸನನ್ನಾಗಿ, ಅಭಿಷಿಂಚ - ಪಟ್ಟಾಭಿಷೇಕ ಮಾಡು. ‖ ೨೫ ‖ ಏವಂ - ಈ ಪರಿಯಾಗಿ, ಉಕ್ತಃ - ಹೇಳಲ್ಪಟ್ಟ, ಸೌಮಿತ್ರಿಸ್ತು - ಲಕ್ಷ್ಮಣನಾದರೆ, ರಾಮಶಾಸನಾತ್ - ರಾಮನ ಆಜ್ಞೆಯಿಂದ, ವಾನರಮುಖ್ಯಾನಾಂ - ಕಪಿಮುಖಂಡರ, ಮಧ್ಯೇ - ಮಧ್ಯದಲ್ಲಿ, ವಿಭೀಷಣಂ - ವಿಭೀಷಣನನ್ನು, ರಾಜಾನಂ - ಲಂಕಾ ರಾಜನನ್ನಾಗಿ, ಅಭ್ಯಷಿಂಚತ್ - ಪಟ್ಟಾಭಿಷೇಕ ಮಾಡಿದನು. ‖೨೬‖ ರಾಮಸ್ಯ - ಶ್ರೀರಾಮನ, ತಂಪ್ರಸಾದಂತು - ಆ ಅನುಗ್ರಹವನ್ನಾದರೆ, ದೃಷ್ಟ್ವಾ - ಕಂಡು, ಪ್ಲವಂಗಮಾಃ - ವಾನರರು, ಸಾಧುಸಾಧ್ವಿತಿ - ಭಲೆ, ಭಲೆ ಎಂದು, ಅಬ್ರುವನ್ - ಹೇಳಿದರು. ‖೨೭‖ ಕಿಂಚ - ಇಷ್ಟುಮಾತ್ರವಲ್ಲದೆ, ಹನೂಮಾಂಶ್ಚ - ಹನುಮಂತನು, ಸುಗ್ರೀವಶ್ಚ - ಸುಗ್ರೀವನೂ ಕೂಡ, ವಿಭೀಷಣಂ - ವಿಭೀಷಣನನ್ನು ಕುರಿತು, ಅಬ್ರವೀತ್ - ನುಡಿದರು, ಸರ್ವೇ - ಎಲ್ಲರೂ, ಮಹೌಜಸಾಂ -

---

ಎಂದನು. ಈ ರೀತಿ ನುಡಿಯುತ್ತಿರುವ ಆ ವಿಭೀಷಣನನ್ನು ಶ್ರೀರಾಮನು ಆಲಿಂಗಿಸಿದವನಾಗಿ ತಮ್ಮನಾದ ಲಕ್ಷ್ಮಣಸ್ವಾಮಿಯನ್ನು ಕುರಿತು, "ಅಯ್ಯಾ ಲಕ್ಷ್ಮಣನೇ! ಸಮುದ್ರೋದಕವನ್ನು ತೆಗೆದುಕೊಂಡು ಬರುವವನಾಗು. ನಾನು ಪ್ರಸನ್ನನಾಗಿರುವಾಗಲೇ ಪ್ರಾಜ್ಞನಾದ ಈ ವಿಭೀಷಣನನ್ನು ರಾಕ್ಷಸರಿಗೆ ರಾಜನನ್ನಾಗಿ ಪಟ್ಟಾಭಿಷಿಕ್ತನನ್ನು ಮಾಡು. ಎಲೈ ಮಾನದನೇ! ಹೋಗು; ಸಮುದ್ರೋದಕದನ್ನು ಜಾಗ್ರತೆಯಾಗಿ ತೆಗೆದುಕೊಂಡು ಬರುವವನಾಗು" ಎಂದು ಹೇಳಿದನು. ಆಗ ಸೌಮಿತ್ರಿಯು ಕೂಡಲೇ ಸಮುದ್ರೋದಕವನ್ನು ತಂದು ಅಲ್ಲಿದ್ದ ವಾನರ ಶ್ರೇಷ್ಠರೆಲ್ಲರ ಸಮ್ಮುಖದಲ್ಲಿ ಶ್ರೀರಾಮಮೂರ್ತಿಯ ಅಪ್ಪಣೆಯಂತೆ ವಿಭೀಷಣನಿಗೆ ಅಭಿಷೇಚನ ಮಾಡಿ ರಾಕ್ಷಸರಾಜನನ್ನು ಮಾಡಿದನು. ಆಗ ಶ್ರೀರಾಮಮೂರ್ತಿಯು ಈ ವಿಧವಾದ ಪ್ರಸನ್ನತೆಯನ್ನು ಕಂಡು ಅಲ್ಲಿದ್ದ ವಾನರರೆಲ್ಲರೂ ಮಹಾತ್ಮನಾದ ಆ ರಾಮಮೂರ್ತಿಯನ್ನು "ಭಲೆ, ಭಲೇ!!" ಎಂದು ಕೊಂಡಾಡಿದರು. ‖೨೨–೨೭‖ ಆಮೇಲೆ ಹನುಮಂತನೂ, ಸುಗ್ರೀವನೂ ಆ ವಿಭೀಷಣನನ್ನು ಕುರಿತು, "ಅಯ್ಯಾ ರಾಕ್ಷಸೋತ್ತಮನೇ! ಪ್ರಕೃತದಲ್ಲಿ ಇಲ್ಲಿರುವ ಸಮಸ್ತ

ಸಾಗರಮಕ್ಷೋಭ್ಯಂ ತರಾಮ ವರುಣಾಲಯಂ || ೨೮ || ಸೈನ್ಯೈಃ ಪರಿವೃತಾಸ್ಸರ್ವೇ ವಾನರಾಣಾಂ ಮಹೌಜಸಾಂ | ಉಪಾಯಂ ನಾಧಿಗಚ್ಛಾಮೋ ಯಥಾ ನದನದೀಪತಿಂ || ೨೯ || ತರಾಮ ತರಸಾ ಸರ್ವೇ ಸಸೈನ್ಯಾ ವರುಣಾಲಯಂ | ಏವಮುಕ್ತಸ್ತು ಧರ್ಮಜ್ಞಃ ಪ್ರತ್ಯುವಾಚ ವಿಭೀಷಣಃ || ೩೦ || ಸಮುದ್ರಂ ರಾಘವೋ ರಾಜಾ ಶರಣಂ ಗಂತುಮರ್ಹತಿ | ಖಾನಿತಸ್ಸಗರೇಣಾಯಮಪ್ರಮೇಯೋ ಮಹೋದಧಿಃ || ೩೧ || ಕರ್ತುಮರ್ಹತಿ ರಾಮಸ್ಯ ಜ್ಞಾತ್ವಾ ಕಾರ್ಯಂ ಮಹಾಮತಿಃ" | ಏವಂ ವಿಭೀಷಣೇನೋಕ್ತೋ ರಾಕ್ಷಸೇನ ವಿಪಶ್ಚಿತಾ || ೩೨ || ಆಜಗಾಮಾಥ ಸುಗ್ರೀವೋ

---

ಮಹಾ ತೇಜಸ್ವಿಗಳಾದ, ವಾನರಾಣಾಂ - ಕಪಿಗಳ, ಸೈನ್ಯೈಃ - ಸೇನೆಗಳಿಂದ, ಪರಿವೃತಾಃ - ಕೂಡಿದವರಾಗಿ, ವರುಣಾಲಯಂ - ವರುಣನಿಗೆ ಮನೆಯಾದ, ಅಕ್ಷೋಭ್ಯಂ - ಕ್ಷೋಭಿಸಲಸಾಧ್ಯವಾದ, ಸಾಗರಂ - ಸಮುದ್ರವನ್ನು, ಕಥಂ - ಹೇಗೆ, ತರಾಮ - ದಾಂಟುವೆವು. || ೨೮ || ನದನದೀಪತಿಂ - ನದಗಳಿಗೂ ನದಿಗಳಿಗೂ ಅಧಿಪತಿಯಾದ, ವರುಣಾಲಯಂ - ಸಮುದ್ರವನ್ನು, ಸರ್ವೇ - ಎಲ್ಲರೂ, ಸಸೈನ್ಯಾಃ - ಸೈನ್ಯಗಳಿಂದ ಕೂಡಿ, ತರಸಾ - ವೇಗದಿಂದ, ಯಥಾತರಾಮ - ಹೇಗೆ ದಾಟುವೆವೋ, ಉಪಾಯಂ - ಉಪಾಯವನ್ನು, ನಾಧಿಗಚ್ಛಾಮಃ - ಹೊಂದಲಿಲ್ಲವು. || ೨೯ || ಏವಂ - ಈ ಪ್ರಕಾರವಾಗಿ, ಉಕ್ತಃ - ಹೇಳಲ್ಪಟ್ಟ, ಧರ್ಮಜ್ಞಃ - ಧರ್ಮಜ್ಞನಾದ, ವಿಭೀಷಣಃ - ವಿಭೀಷಣನು, ಪ್ರತ್ಯುವಾಚ - ಪ್ರತ್ಯುತ್ತರ ಕೊಟ್ಟನು. || ೩೦ || ರಾಜಾ - ಒಡೆಯನಾದ, ರಾಘವಃ - ಶ್ರೀರಾಮನು, ಸಮುದ್ರಂ - ಕಡಲನ್ನು, ಶರಣಂಗಂತುಂ - ಶರಣು ಹೊಂದುವದಕ್ಕೆ, ಅರ್ಹತಿ - ಯೋಗ್ಯನಾಗುತ್ತಾನೆ. ||೩೦|| ಅಪ್ರಮೇಯಃ - ಊಹಿಸಲಸಾಧ್ಯವಾದ, ಮಹಾಮತಿಃ - ಮಹಾ ಬುದ್ಧಿಯುಳ್ಳ, ಅಯಂ ಮಹೋದಧಿಃ - ಈ ಮಹಾ ಸಮುದ್ರವು, ಸಗರೇಣ - ಸಗರಚಕ್ರವರ್ತಿಯಿಂದ, ಖಾನಿತಃ - ಅಗಿಸಲ್ಪಟ್ಟುದಾದಕಾರಣ, ರಾಮಸ್ಯ - ಶ್ರೀರಾಮನ, ಕಾರ್ಯಂ - ಉದ್ಯೋಗವನ್ನು, ಜ್ಞಾತ್ವಾ - ತಿಳಿದು, ಕರ್ತುಂ - ಮಾಡುವದಕ್ಕೆ, ಅರ್ಹತಿ-ಯೋಗ್ಯವಾಗಿದೆ. ||೩೧|| ಏವಂ - ಈ ಪ್ರಕಾರವಾಗಿ, ವಿಪಶ್ಚಿತಾ-ಬುದ್ಧಿವಂತನಾದ, ರಾಕ್ಷಸೇನ - ರಾಕ್ಷಸನಾದ, ವಿಭೀಷಣೇನ - ವಿಭೀಷಣನಿಂದ, ಉಕ್ತಃ - ಹೇಳಲ್ಪಟ್ಟ, ಸುಗ್ರೀವಃ - ಸುಗ್ರೀವನು, ಅಥ - ಬಳಿಕ, ರಾಮಃ - ಶ್ರೀರಾಮನು, ಸಲಕ್ಷ್ಮಣಃ - ಲಕ್ಷ್ಮಣನೊಡಗೂಡಿ, ಯತ್ರ - ಎಲ್ಲಿದ್ದನೋ, ತತ್ರ - ಅಲ್ಲಿಗೆ, ಆಜಗಾಮ - ಬಂದನು. ||೩೨|| ವಿಪುಲಗ್ರೀವಃ-

---

ವಾನರಸೇನೆಗಳೊಡನೆ ನಾವೆಲ್ಲರೂ, ಅಕ್ಷೋಭ್ಯವಾದ ಈ ಸಮುದ್ರವನ್ನು ದಾಟುವುದು ಹೇಗೆ? ಇದಕ್ಕೆ ಯಾವ ಉಪಾಯವೂ ನಮಗೆ ತೋರದಾಗುವುದು" ಎಂದು ಕೇಳಿದರು. ಆಗ ಮಹಾ ಧರ್ಮಿಷ್ಠನಾದ ವಿಭೀಷಣನು ಅವರ ಮಾತುಗಳನ್ನು ಕೇಳಿ, "ಎಲೈ ವಾನರಶ್ರೇಷ್ಠರೇ! ನಮ್ಮ ಪ್ರಭುವಾದ ಶ್ರೀರಾಮಮೂರ್ತಿಯು ಈ ಸಮುದ್ರರಾಜನನ್ನು ಮೊರೆಹೋಗುವುದು ಯುಕ್ತವಾಗಿ ಕಾಣುತ್ತದೆ. ಈ ಮಹೋದಧಿಯು ಹಿಂದೆ ಸಗರನಿಂದ ಅಗೆದುದಾದುದರಿಂದ ಈಗ ಮಹಾ ಬುದ್ಧಿಶಾಲಿಯಾದ ಈ ಸಾಗರರಾಜನು ಶ್ರೀರಾಮಕಾರ್ಯದ ಮಹತ್ವವನ್ನು ತಿಳಿದು ಆತನಿಗೆ ಸಹಾಯಮಾಡಲುಳ್ಳವನು" ಎಂದು ಹೇಳಿದನು. || ೨೮-೩೧ || ರಾಕ್ಷಸನಾದರೂ ಪಂಡಿತನಾದ ವಿಭೀಷಣನಿಂತು ನುಡಿಯಲು ಆ ಕೂಡಲೇ ವಿಪುಲಗ್ರೀವನಾದ ಸುಗ್ರೀವ ಲಕ್ಷ್ಮಣನೊಡನಿದ್ದ ಶ್ರೀರಾಮನ ಬಳಿಗೈದಿ, ವಿಭೀಷಣನು ಹೇಳಿದ ಸಮುದ್ರರಾಜನನ್ನು ಉಪಾಸಿಸುವ ವಿಚಾರವನ್ನು ಅವನಿಗೆ ಅರಿಕೆ ಮಾಡಿದನು. ಈ ವಿಭೀಷಣನ ಮಂತ್ರಾ

ಯತ್ರ ರಾಮಸ್ಸಲಕ್ಷ್ಮಣಃ । ತತಶ್ಚಾಖ್ಯಾತುಮಾರೇಭೇ ವಿಭೀಷಣವಚಃ ಶುಭಂ ॥೩೩॥ ಸುಗ್ರೀವೋ ವಿಪುಲಗ್ರೀವಸ್ಸಾಗರಸ್ಯೋಪವೇಶನಂ । ಪ್ರಕೃತ್ಯಾ ಧರ್ಮಶೀಲಸ್ಯ ರಾಘವಸ್ಯಾಪ್ಯರೋಚತ ॥ ೩೪ ॥ ಸಲಕ್ಷ್ಮಣಂ ಮಹಾತೇಜಾಸ್ಸುಗ್ರೀವಂಚ ಹರೀಶ್ವರಂ । ಸತ್ಕ್ರಿಯಾರ್ಥಂ ಕ್ರಿಯಾದಕ್ಷಃ ಸ್ಮಿತಪೂರ್ವಮುವಾಚಹ ॥೩೫॥ "ವಿಭೀಷಣಸ್ಯ ಮಂತ್ರೋಽಯಂ ಮಮ ಲಕ್ಷ್ಮಣ! ರೋಚತೇ । ಬ್ರೂಹಿ ತ್ವಂ ಸಹಸುಗ್ರೀವಸ್ತವಾಪಿ ಯದಿ ರೋಚತೇ ॥ ೩೬ ॥ ಸುಗ್ರೀವಃ ಪಂಡಿತೋ ನಿತ್ಯಂ ಭವಾನ್ ಮಂತ್ರವಿಚಕ್ಷಣಃ । ಉಭಾಭ್ಯಾಂ ಸಂಪ್ರಧಾರ್ಯಾರ್ಥಂ ರೋಚತೇ ಯತ್ತದುಚ್ಯತಾಂ" ॥೩೭॥ ಏವಮುಕ್ತೌ ತು ತೌ ವೀರಾವುಭೌ ಸುಗ್ರೀವಲಕ್ಷ್ಮಣೌ । ಸಮುದಾಚಾರಸಂಯುಕ್ತಮಿದಂ ವಚನಮೂಚತುಃ ॥ ೩೮ ॥ "ಕಿಮರ್ಥಂ ನೌ ನರವ್ಯಾಘ್ರ! ನರೋಚಿಷ್ಯತಿ

ವಿಸ್ತಾರವಾದ ಕಂಠವುಳ್ಳ, ಸುಗ್ರೀವಃ - ಸುಗ್ರೀವನು, ತತಶ್ಚ - ಆ ಬಳಿಕಲಾದರೆ, ಸಾಗರಸ್ಯ - ಸಮುದ್ರದ, ಉಪವೇಶನಂ - ಉಪಾಸನಾರೂಪವಾದ, ಶುಭಂ - ಶುಭಕರವಾದ, ವಿಭೀಷಣವಚಃ - ವಿಭೀಷಣನ ಮಾತನ್ನು, ಆಖ್ಯಾತುಂ - ಹೇಳುವದಕ್ಕೆ, ಆರೇಭೇ - ಪ್ರಾರಂಭಿಸಿದನು. ॥ ೩೩ ॥ ಪ್ರಕೃತ್ಯಾ - ಸ್ವಭಾವದಿಂದಲೇ, ಧರ್ಮಶೀಲಸ್ಯ - ಧರ್ಮಸ್ವಭಾವವುಳ್ಳ, ರಾಘವಸ್ಯಾಪಿ - ಶ್ರೀರಾಮನಿಗೂ ಕೂಡ, ಅರೋಚತ - ರುಚಿಸಿತು. ॥ ೩೪ ॥ ಕ್ರಿಯಾದಕ್ಷಃ - ಕಾರ್ಯಸಮರ್ಥನಾದ, ಮಹಾತೇಜಾಃ - ಮಹಾ ತೇಜನಾದ, ಸಃ - ಆ ಶ್ರೀರಾಮನು, ಲಕ್ಷ್ಮಣಂಚ - ಲಕ್ಷ್ಮಣನನ್ನೂ, ಹರೀಶ್ವರಂ-ವಾನರಾಧಿಪತಿಯಾದ, ಸುಗ್ರೀವಂಚ - ಸುಗ್ರೀವನನ್ನೂ, ಸತ್ಕ್ರಿಯಾರ್ಥಂ - ಬಹುಮಾನಾರ್ಥವಾಗಿ, ಸ್ಮಿತಪೂರ್ವಂ - ನಸುನಗೆಯೊಡನೆ, ಉವಾಚಹ - ಹೇಳಿದನಷ್ಟೆ. ॥ ೩೫ ॥ ಹೇ ಲಕ್ಷ್ಮಣ - ಎಲೈ ಲಕ್ಷ್ಮಣನೇ, ವಿಭೀಷಣಸ್ಯ - ವಿಭೀಷಣನ, ಅಯಂಮಂತ್ರಃ - (ಸಮುದ್ರವನ್ನು ಪ್ರಾರ್ಥಿಸಬೇಕೆಂಬ) ಈ ಆಲೋಚನೆಯು, ಮಮ - ನನಗೆ, ರೋಚತೇ - ಇಷ್ಟವಾಗಿದ್ದರೆ, ತ್ವಂ - ನೀನು, ಸಹಸುಗ್ರೀವಃ-ಸುಗ್ರೀವನೊಡನೆ, ಬ್ರೂಹಿ - ಹೇಳು. ॥ ೩೬ ॥ ಸುಗ್ರೀವಃ - ಸುಗ್ರೀವನು, ನಿತ್ಯಂ - ಯಾವಾಗಲೂ, ಪಂಡಿತಃ - ತಿಳಿದವನು, ಭವಾನ್ - ನೀನು, ಮಂತ್ರವಿಚಕ್ಷಣಃ - ಆಲೋಚನೆಯಲ್ಲಿ ನಿಪುಣನಾದವನು, ಅರ್ಥಂ - ಪ್ರಯೋಜನವನ್ನು, ಸಂಪ್ರಧಾರ್ಯ - ನಿಶ್ಚಯಿಸಿ, ಉಭಾಭ್ಯಾಂ - ಈರ್ವರಿಂದಲೂ, ಯತ್ - ಯಾವ ಕಾರ್ಯವು, ರೋಚತೇ - ರುಚಿಸುವದೋ, ತತ್ - ಅದು, ಉಚ್ಯತಾಂ - ಹೇಳಲ್ಪಡಲಿ. ॥ ೩೭ ॥ ಏವಂ - ಈ ಪ್ರಕಾರವಾಗಿ, ಉಕ್ತೌ - ಹೇಳಲ್ಪಟ್ಟ, ಉಭೌ - ಇಬ್ಬರಾದ, ತೌಸುಗ್ರೀವಲಕ್ಷ್ಮಣೌತು - ಆ ಸುಗ್ರೀವಲಕ್ಷ್ಮಣರಾದರೆ, ಸಮು.....ಕ್ತಂ - ಉಪಚಾರಯುಕ್ತವಾಗಿ,

ಲೋಚನೆಯು ಸ್ವಭಾವದಿಂದಲೇ ಮಹಾ ಧರ್ಮಿಷ್ಠನಾದ ಶ್ರೀರಾಮಮೂರ್ತಿಗೂ ರುಚಿಸಿತು. ಆಗಲಾತನು ಲಕ್ಷ್ಮಣನೊಡಗೂಡಿದ ಮಹಾ ತೇಜಸ್ವಿಯಾದ ಸುಗ್ರೀವರಾಜನನ್ನು ಕುರಿತು, ವಿಭೀಷಣನ ಮಂತ್ರಾಲೋಚನೆಯನ್ನು ಮನ್ನಿಸಲೋಸುಗ ನಸುನಗೆಯೊಡಗೂಡಿ, "ಲಕ್ಷ್ಮಣ! ವಿಭೀಷಣನ ಈ ಮಂತ್ರಾಲೋಚನೆಯು ನನಗೆ ರುಚಿಸುತ್ತದೆ. ನೀನು ಸುಗ್ರೀವನೊಡನೆ ಆಲೋಚಿಸಿ ಅದು ನಿನಗೂ ರುಚಿಸುವುದೋ ಇಲ್ಲವೋ ಎಂಬ ವಿಚಾರವನ್ನು ತಿಳಿಯಹೇಳು. ಸುಗ್ರೀವನು ನಿಜವಾಗಿಯೂ ಮಹಾ ಪ್ರಾಜ್ಞನು. ಹೇಳಿರುವ ಮಂತ್ರಾಲೋಚನೆಯಾದರೋ ಪಂಡಿತನಾದ ವಿಭೀಷಣನದು. ನೀನು ಮಂತ್ರಾಲೋಚನೆಯಲ್ಲಿ ನಿಪುಣನು. ಆದುದರಿಂದ ನೀನೂ ಸುಗ್ರೀವನೂ ಈ ವಿಚಾರವನ್ನು ಚೆನ್ನಾಗಿ ಆಲೋಚಿಸಿ ನಿಮಗೆ ಯಾವುದು ಸರಿಯೆಂದು ತೋರುವುದೋ ಅದನ್ನು ಹೇಳಿರಿ" ಎಂದನು. ॥ ೩೫-೩೭ ॥ ಶ್ರೀರಾಮನೀರೀತಿ ಹೇಳಿದ ಬಳಿಕ ವೀರರಾದ ಆ ಲಕ್ಷ್ಮಣ ಸುಗ್ರೀವರು, ಸಮುದಾಚಾರದಿಂದ ಕೂಡಿದ ಈ ಮಾತು

ರಾಘವ! । ವಿಭೀಷಣೇನ ಯಚ್ಚೋಕ್ತಮಸ್ಮಿನ್ ಕಾಲೇ ಸುಖಾವಹಂ ॥ ೩೯ ॥
ಅಬಧ್ವಾ ಸಾಗರೇ ಸೇತುಂ ಘೋರೇಽಸ್ಮಿನ್ ವರುಣಾಲಯೇ । ಲಂಕಾ ನಾಸಾದಿತುಂ
ಶಕ್ಯಾ ಸೇಂದ್ರೈರಪಿ ಸುರಾಸುರೈಃ ॥ ೪೦ ॥ ವಿಭೀಷಣಸ್ಯ ಶೂರಸ್ಯ ಯಥಾರ್ಥಂ
ಕ್ರಿಯತಾಂ ವಚಃ। ಅಲಂ ಕಾಲಾತ್ಯಯಂ ಕೃತ್ವಾ ಸಮುದ್ರೋಽಯಂ ನಿಯುಜ್ಯತಾಂ।
ಯಥಾ ಸೈನ್ಯೇನ ಗಚ್ಛಾಮಃ ಪುರೀಂ ರಾವಣಪಾಲಿತಾಂ ॥ ೪೧ ॥

ಏವಮುಕ್ತಃ ಕುಶಾಸ್ತೀರ್ಣೇ ತೀರೇ ನದನದೀಪತೇಃ ।
ಸಂವಿವೇಶ ತದಾ ರಾಮೋ ವೇದ್ಯಾಮಿವ ಹುತಾಶನಃ ॥ ೪೨ ॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಏಕೋನವಿಂಶಸ್ಸರ್ಗಃ

---

ಇದಂವಚನಂ - ಈ ಮಾತನ್ನು, ಊಚತುಃ - ಹೇಳಿದರು. ॥ ೩೮ ॥ ಹೇ ರಾಘವ - ಎಲೈ ರಘುವಂಶೋತ್ಪನ್ನನೇ, ಹೇ ನರವಾಘ್ರ - ಎಲೈ ಪುರುಷಶ್ರೇಷ್ಠನೇ, ಅಸ್ಮಿನ್‌ಕಾಲೇ - ಈ ಸಮಯದಲ್ಲಿ, ಸಖಾವಹಂ - ಸುಖವನ್ನುಂಟುಮಾಡುವ, ಯಚ್ಚ - ಯಾವ ಮಾತು, ವಿಭೀಷಣೇನ - ವಿಭೀಷಣನಿಂದ, ಉಕ್ತಂ - ಹೇಳಲ್ಪಟ್ಟಿತೋ, ತತ್ - ಅದು, ನೌ - ನಮ್ಮಿಬ್ಬರಿಗೂ, ಕಿಮರ್ಥಂ - ಏಕೆ, ನರೋಚಿಷ್ಯತಿ-ರುಚಿಸುವದಿಲ್ಲ? ॥ ೩೯ ॥ ಘೋರೇ - ಭಯಂಕರವಾದ, ವರುಣಾಲಯೇ - ವರುಣನಿಗೆ ಮನೆಯಾದ, ಅಸ್ಮಿನ್‌ಸಾಗರೇ - ಈ ಸಮುದ್ರದಲ್ಲಿ, ಸೇತುಂ - ಸೇತುವನ್ನು, ಅಬಧ್ವಾ - ಕಟ್ಟದೆ, ಸೇಂದ್ರೈಃ - ಇಂದ್ರನಿಂದ ಕೂಡಿದ, ಸುರಾಸುರೈರಪಿ - ದೇವರಾಕ್ಷಸರಿಂದಲಾದರೂ, ಲಂಕಾ - ಲಂಕಾಪಟ್ಟಣವು, ಆಸಾದಿತುಂ - ಹೊಂದುವದಕ್ಕೆ, ನಶಕ್ಯಾ - ಸಾಧ್ಯವಲ್ಲವು. ॥ ೪೦ ॥ ಶೂರಸ್ಯ - ವೀರನಾದ, ವಿಭೀಷಣಸ್ಯ-ವಿಭೀಷಣನ, ವಚಃ - ಮಾತು, ಯಥಾರ್ಥಂ - ಯಥಾರ್ಥವಾಗಿ, ಕ್ರಿಯತಾಂ - ಮಾಡಲ್ಪಡಲಿ, ಸೈನ್ಯೇನ - ಸೇನೆಯೊಡನೆ, ರಾವಣಪಾಲಿತಾಂ - ರಾವಣನಿಂದಪಾಲಿಸಲ್ಪಟ್ಟ, ಪುರೀಂ - ಪಟ್ಟಣವನ್ನು ಕುರಿತು, ಯಥಾ - ಹೇಗೆ, ಗಚ್ಛಾಮಃ - ಹೋಗುವೆವೋ, ತಥಾ - ಹಾಗೆ, ಅಯಂ ಸಮುದ್ರಃ - ಈ ಸಮುದ್ರವು, ನಿಯುಜ್ಯತಾಂ - ಪ್ರಾರ್ಥಿಸಲ್ಪಡಲಿ, ಕಾಲಾತ್ಯಯಂ - ಕಾಲವನ್ನು ಮೀರುವದನ್ನು, ಕೃತ್ವಾ - ಮಾಡಿ, ಅಲಂ - ಸಾಕು. ॥೪೧॥ ಏವಂ - ಈ ಪ್ರಕಾರವಾಗಿ, ಉಕ್ತಃ - ಹೇಳಲ್ಪಟ್ಟವನಾಗಿ, ರಾಮಃ - ಶ್ರೀರಾಮನು, ತದಾ - ಆ ಕಾಲದಲ್ಲಿ, ವೇದ್ಯಾಂ - ವೇದಿಕೆಯಲ್ಲಿ, ಹುತಾಶನಇವ - ಅಗ್ನಿಯಂತೆ, - ಕುಶಾಸ್ತೀರ್ಣೇ - ದರ್ಭೆಗಳಿಂದ ಹಾಸಿದ, ನದನದೀಪತೇಃ - ಸಮುದ್ರದ, ತೀರೇ - ತೀರದಲ್ಲಿ, ಸಂವಿವೇಶ - ಕುಳಿತುಕೊಂಡನು. ॥ ೪೨ ॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಏಕೋನವಿಂಶಸ್ಸರ್ಗಃ.

---

ಗಳನ್ನು ಶ್ರೀರಾಮನಿಗೆ ಹೇಳಿದರು. "ಎಲೈ ಪುರುಷೋತ್ತಮನೇ! ವಿಭೀಷಣನು ಈ ಕಾಲಕ್ಕೆ ಹಿತವಾಗಿ ಯಾವ ಮಾತನ್ನಾಡಿದನೋ ಆ ಮಾತು ನಮಗೇಕೆ ರುಚಿಸಲಾರದು? ಅದು ನಮಗೆ ಸರ್ವಸಮ್ಮತವಾಗಿಯೇ ಇರುವುದು. ಘೋರವಾದ ಈ ಮಹಾ ಸಾಗರದಲ್ಲಿ ಸೇತುವೆಯನ್ನು ಕಟ್ಟದೆ ಇಂದ್ರನೊಡಗೂಡಿದ ದೇವಾಸುರರಿಗಾದರೂ ಇದನ್ನು ದಾಟುವುದು ಅಸಾಧ್ಯವೇ ಆಗಿದೆ. ಆದುದರಿಂದ ಈಗ ವಿಭೀಷಣನು ಹೇಳಿದಂತೆ ಸಮುದ್ರರಾಜನನ್ನೇ ಉಪಾಸಿಸುವನಾಗು. ಕಾಲವಿಳಂಬವಾಗದಿರಲಿ. ಇದರಿಂದ ಸೈನ್ಯಸಮೇತರಾದ ನಾವೆಲ್ಲರೂ ರಾವಣಪಾಲಿತವಾದ ಲಂಕಾನಗರವನ್ನು ಕುರಿತು ಪ್ರಯಾಣ ಮಾಡೋಣ." ಲಕ್ಷ್ಮಣ, ಸುಗ್ರೀವರಿಂತು ನುಡಿಯಲು ಶ್ರೀರಾಮಮೂರ್ತಿಯು ಆ ಸಮುದ್ರತೀರದಲ್ಲಿ ದರ್ಭೆಗಳು ಹಾಸಿದ ನೆಲದಲ್ಲಿ, "ವೇದಿಕೆಯಲ್ಲಿ ಯಜ್ಞೇಶ್ವರನಂತೆ" ಸೇರಿದನು. ॥ ೩೭—೪೨ ॥

ಇಂತಿದು ಶ್ರೀರಾಮಕೃತ ವಿಭೀಷಣಾಭಯಪ್ರದಾನ—ದರ್ಭಶಯನ ವೃತ್ತಾಂತ
ನಿರೂಪಣವೆಂಬ ಹತ್ತೊಂಬತ್ತನೆಯ ಸರ್ಗವು ಸಮಾಪ್ತವಾದುದು.

# ಯುದ್ಧಕಾಂಡೇ ವಿಂಶಸ್ಸರ್ಗಃ

ತತೋ ನಿವಿಷ್ಟಾಂ ಧ್ವಜಿನೀಂ ಸುಗ್ರೀವೇಣಾಭಿಪಾಲಿತಾಂ । ದದರ್ಶ ರಾಕ್ಷಸೋಽಭ್ಯೇತ್ಯ ಶಾರ್ದೂಲೋ ನಾಮ ವೀರ್ಯವಾನ್ ॥೧॥ ಚಾರೋ ರಾಕ್ಷಸರಾಜಸ್ಯ ರಾವಣಸ್ಯ ದುರಾತ್ಮನಃ । ತಾಂ ದೃಷ್ಟ್ವಾ ಸರ್ವತೋಽವ್ಯಗ್ರಂ ಪ್ರತಿಗಮ್ಯ ಸ ರಾಕ್ಷಸಃ । ಪ್ರವಿಶ್ಯ ಲಂಕಾಂ ವೇಗೇನ ರಾವಣಂ ವಾಕ್ಯಮಬ್ರವೀತ್ ॥೨॥ "ಏಷ ವಾನರಋಕ್ಷೌಘೋ ಲಂಕಾಂ ಸಮಭಿವರ್ತತೇ । ಅಗಾಧಶ್ಚಾಪ್ರಮೇಯಶ್ಚ ದ್ವಿತೀಯ ಇವ ಸಾಗರಃ ॥೩॥ ಪುತ್ರೌ ದಶರಥಸ್ಯೇಮೌ ಭ್ರಾತರೌ ರಾಮಲಕ್ಷ್ಮಣೌ । ಉತ್ತ

---

ತತಃ - ಬಳಿಕ, ಶಾರ್ದೂಲೋನಾಮ - ಶಾರ್ದೂಲನೆಂಬ, ವೀರ್ಯವಾನ್ - ಪರಾಕ್ರಮಿಯಾದ, ರಾಕ್ಷಸಃ - ಅಸುರನು, ಅಭ್ಯೇತ್ಯ - ಬಂದು, ಸುಗ್ರೀವೇಣ - ಸುಗ್ರೀವನಿಂದ, ಅಭಿಪಾಲಿತಾಂ - ಪಾಲಿಸಲ್ಪಡುತ್ತಿರುವ, ನಿವಿಷ್ಟಾಂ - ಸಮುದ್ರತೀರದಲ್ಲಿಳಿದಿರುವ, ಧ್ವಜಿನೀಂ - ಸೈನ್ಯವನ್ನು, ದದರ್ಶ - ಕಂಡನು. ॥೧॥ ರಾಕ್ಷಸರಾಜಸ್ಯ - ರಾಕ್ಷಸಾಧಿಪತಿಯಾದ, ದುರಾತ್ಮನಃ - ದುರ್ಬುದ್ಧಿಯುಳ್ಳ, ರಾವಣ್ಯ - ರಾವಣನ, ಚಾರಃ - ಗೂಢಚಾರನಾದ, ಸರಾಕ್ಷಸಃ - ಆ ಶಾರ್ದೂಲನೆಂಬ ರಾಕ್ಷಸನು, ಪ್ರತಿಗಮ್ಯ - ಬಂದು. ಸರ್ವತಃ - ಸಮಸ್ತವಾದ, ತಾಂ - ಆ ಸೈನ್ಯವನ್ನು, ಅವ್ಯಗ್ರಂಯಥಾ - ಚನ್ನಾಗಿ, ದೃಷ್ಟ್ವಾ - ನೋಡಿ, ಲಂಕಾಂ - ಲಂಕಾಪಟ್ಟಣವನ್ನು, ವೇಗೇನ - ಜಾಗ್ರತೆಯಾಗಿ, ಪ್ರವಿಶ್ಯ - ಪ್ರವೇಶಮಾಡಿ, ರಾವಣಂ - ರಾವಣನನ್ನು ಕುರಿತು, ವಾಕ್ಯಂ - ಮಾತನ್ನು, ಅಬ್ರವೀತ್ - ನುಡಿದನು. ॥೨॥ ಏಷವಾನರಋಕ್ಷೌಘಃ - ಈ ಕಪಿಗಳ ಮತ್ತು ಕರಡಿಗಳ ಸಮೂಹವು, ಅಗಾಧಶ್ಚ - ಅಪಾರವಾಗಿಯೂ, (ಪ್ರವೇಶಿಸಲಸಾಧ್ಯವಾಗಿಯೂ) ಅಪ್ರಮೇಯಶ್ಚ - ಊಹಿಸಲಸಾಧ್ಯವಾಗಿಯೂ (ಅಪರಿಚ್ಛೇದ್ಯವಾಗಿಯೂ), ದ್ವಿತೀಯಃ-ಎರಡನೆಯದಾದ, ಸಾಗರಇವ-ಸಮುದ್ರದಂತೆ, ಲಂಕಾಂ-ಲಂಕಾಂ - ಲಂಕಾಪಟ್ಟಣಕ್ಕೆ, ಸಮಭಿವರ್ತತೇ - ಎದುರಾಗಿ ಬರುತ್ತಿದೆ. ॥೩॥ ದಶರಥಸ್ಯ - ದಶರಥ ಮಹಾರಾಯನ, ಪುತ್ರೌ - ಮಕ್ಕಳಿದ, ಭ್ರಾತರೌ - ಅಣ್ಣತಮ್ಮಂದಿರಾದ, ಇಮೌರಾಮಲಕ್ಷ್ಮಣೌ -

---

ಆಮೇಲೆ ಮಹಾ ಪರಾಕ್ರಮಶಾಲಿಯಾದ ಶಾರ್ದೂಲನೆಂಬ ರಾಕ್ಷಸನು, ಸುಗ್ರೀವನಿಂದ ಸುರಕ್ಷಿತವಾಗಿ ಸಮುದ್ರತೀರದಲ್ಲಿಳಿದಿದ್ದ ವಾನರಸೇನೆಯನ್ನು ಕಂಡನು. ಮಹಾ ದುರಾತ್ಮನೂ, ರಾಕ್ಷಸೇಶ್ವರನೂ ಆದ ರಾವಣಾಸುರನ ಗೂಢಚಾರನಾದ ಆ ಶಾರ್ದೂಲನು ಬಹು ಜಾಗರೂಕತೆಯಿಂದ ಆ ವಾನರಸೇನೆಯೆಲ್ಲವನ್ನೂ ಚೆನ್ನಾಗಿ ನೋಡಿದಮೇಲೆ ಬಹು ಶೀಘ್ರವಾಗಿ ಲಂಕಾನಗರಕ್ಕೆ ಹಿಂತಿರುಗಿ ಹೋಗಿ ತನ್ನ ಒಡೆಯನಾದ ರಾವಣಾಸುರನನ್ನು ನೋಡಿ ಅವನನ್ನು ಕುರಿತು, "ರಾಕ್ಷಸೇಶ್ವರಾ! ಪ್ರವೇಶಿಸಲಸದಳವಾಗಿ ಬಹಳ ಅಗಾಧವಾಗಿಯೂ, ಎಣಿಸಲಸಾಧ್ಯವಾಗಿಯೂ ಇರುವ ವಾನರ ಭಲ್ಲೂಕಸೇನೆಗಳು ಎರಡನೆಯ ಸಮುದ್ರವೋ ಎಂಬಂತೆ ನಮ್ಮ ಲಂಕಾಪಟ್ಟಣದಮೇಲೆ ಅಟ್ಟಿಬರುತ್ತಿದೆ. ದಶರಥರಾಜ ಕುಮಾರರೂ, ಅಣ್ಣತಮ್ಮಂದಿರೂ ಆದ ಶ್ರೀರಾಮಲಕ್ಷ್ಮಣರಿಬ್ಬರೂ ಮಹಾ ಶ್ರೇಷ್ಠವಾದ ಆಯುಧಗಳನ್ನು ಧರಿಸಿದವರಾಗಿ ಸೀತೆಯಿರುವ ಸ್ಥಳವನ್ನು ಕುರಿತು ಬರುತ್ತಿರುವರು.

ಮಾಯುಧ ಸಂಪನ್ನೌ ಸೀತಾಯಾಃ ಪದಮಾಗತೌ ॥ ೪ ॥ ಏತೌ ಸಾಗರಮಾಸಾದ್ಯ ಸನ್ನಿವಿಷ್ಟೌ ಮಹಾದ್ಯುತೀ ॥ ೫ ॥ ಬಲಮಾಕಾಶಮಾವೃತ್ಯ ಸರ್ವತೋ ದಶಯೋಜನಂ । ತತ್ವಭೂತಂ ಮಹಾರಾಜ ! ಕ್ಷಿಪ್ರಂ ವೇದಿತುಮರ್ಹಸಿ ॥ ೬ ॥ ತವ ದೂತಾ ಮಹಾರಾಜ! ಕ್ಷಿಪ್ರಮರ್ಹಂತ್ಯವೇಕ್ಷಿತುಂ । ಉಪಪ್ರದಾನಂ ಸಾಂತ್ವಂವಾ ಭೇದೋ ವಾಽತ್ರ ಪ್ರಯುಜ್ಯತಾಂ" ॥ ೭ ॥ ಶಾರ್ದೂಲಸ್ಯ ವಚಃ ಶ್ರುತ್ವಾ ರಾವಣೋ ರಾಕ್ಷಸೇಶ್ವರಃ । ಉವಾಚ ಸಹಸಾಽವ್ಯಗ್ರಸ್ಸಂಪ್ರಧಾರ್ಯಾರ್ಽರ್ಥಮಾತ್ಮನಃ । ಶುಕಂ

ಈ ರಾಮಲಕ್ಷ್ಮಣರು, ಉತ್ತ......ತ್ತೌ-ಉತ್ತಮವಾದ ಆಯುಧಗಳಿಂದ ಕೂಡಿದವರಾಗಿ, ಸೀತಾಯಾಃ-ಸೀತಾದೇವಿಯ, ಪದಂ - ಸ್ಥಾನವನ್ನು ಕುರಿತು, ಆಗತೌ - ಬಂದಿದ್ದಾರೆ. ॥ ೪ ॥ ಮಹಾದ್ಯುತೀ - ಮಹಾ ಪ್ರಕಾಶವುಳ್ಳ, ಏತೌ - ಈ ರಾಮಲಕ್ಷ್ಮಣರು, ಸಾಗರಂ - ಸಮುದ್ರವನ್ನು, ಆಸಾದ್ಯ - ಹೊಂದಿ, ಸಂನಿವಿಷ್ಟೌ - ಇಳಿದಿರುವರು, ಬಲಂ - ಬಲವು, ಸರ್ವತಃ - ನಾಲ್ಕುಕಡೆಗಳಲ್ಲಿಯೂ, ದಶಯೋಜನಂ - ಹತ್ತುಗಾವುದ ಪರಿಮಿತವಾದ, ಆಕಾಶಂ - ಆಕಾಶವನ್ನು, ಆವೃತ್ಯ - ಆವರಿಸಿ, ಸ್ಥಿತಃ - ಇರುವುದು. ॥ ೫ ॥ ಹೇ ಮಹಾರಾಜ - ಎಲೈ ಅರಸೇ, ತತ್ವಭೂತಂ - ಯಥಾರ್ಥವನ್ನು, ಕ್ಷಿಪ್ರಂ-ಜಾಗ್ರತೆಯಾಗಿ, ವೇದಿತುಂ-ತಿಳಿಯುವದಕ್ಕೆ, ಅರ್ಹಸಿ-ಯೋಗ್ಯನಾಗು, ಹೇ ಮಹಾರಾಜ-ಎಲೈ ಮಹಾರಾಜನೇ, ತವ - ನಿನ್ನ, ದೂತಾಃ - ದೂತರು, ಕ್ಷಿಪ್ರಂ - ಜಾಗ್ರತೆಯಾಗಿ, ಅವೇಕ್ಷಿತುಂ-ನೋಡುವದಕ್ಕೆ, ಅರ್ಹಂತಿ - ಯೋಗ್ಯರಾಗಿದ್ದಾರೆ. ॥ ೬ ॥ ಅತ್ರ - ಈ ರಾಮನ ವಿಷಯದಲ್ಲಿ, ಉಪಪ್ರದಾನಂ - ವಿನಯವಾಗಲಿ, (ಸೀತಾ ಪ್ರದಾನವಾಗಲಿ) ಭೇದೋವಾ - ಭೇದವಾಗಲಿ, ಪ್ರಯುಜ್ಯತಾಂ-ಪ್ರಯೋಗಿಸಲ್ಪಡಲಿ. ॥ ೭ ॥ ಶಾರ್ದೂಲಸ್ಯ - ಶಾರ್ದೂಲನ, ವಚಃ - ಮಾತನ್ನು, ಶ್ರುತ್ವಾ - ಕೇಳಿ, ರಾಕ್ಷಸೇಶ್ವರಃ - ರಾಕ್ಷಸಾಧಿಪತಿಯಾದ, ರಾವಣಃ - ರಾವಣನು, ಅವ್ಯಗ್ರಃ - ಸ್ವಸ್ಥಚಿತ್ತನಾಗಿ, ಆತ್ಮನಃ - ತನ್ನ, ಅರ್ಥಂ - ಪ್ರಯೋಜನವನ್ನು, ಸಹಸಾ - ಜಾಗ್ರತೆಯಾಗಿ, ಸಂಪ್ರಧಾರ್ಯ - ನಿಶ್ಚಯಿಸಿಕೊಂಡು, ತದಾ - ಆ ಕಾಲದಲ್ಲಿ, ಅರ್ಥವಿದಾಂ - ಅರ್ಥವನ್ನು ಬಲ್ಲವರಲ್ಲಿ, ವರಂ -

ಮಹಾ ತೇಜಸ್ವಿಗಳಾದ ಆ ಶ್ರೀರಾಮಲಕ್ಷ್ಮಣರಿಬ್ಬರೂ ಸಮುದ್ರತೀರದಲ್ಲಿಯೇ ಇಳಿದಿರುವರು. ಆ ವಾನರ ಸೈನ್ಯವನ್ನು ಹೇಗೆ ನೋಡಿದರೂ ಹತ್ತು ಗಾವುದದ ಭೂಮಿಯನ್ನು ಆವರಿಸಿ ನಿಂತುಬಿಟ್ಟಿರುವುದು. ಮಹಾರಾಜಾ ! ನೀನು ಶೀಘ್ರವಾಗಿ ದೂತರನ್ನು ಕಳುಹಿಸಿ ಚೆನ್ನಾಗಿ ನೋಡಿ ಬನ್ನಿರೆಂದು ಕೂಡಲೇ ಆಜ್ಞಾಪಿಸುವವನಾಗು. ಅಲ್ಲದೆ ಈ ವಿಷಯದಲ್ಲಿ ಸಾಮ ದಾನ ಭೇದಗಳೆಂಬ ಮೂರು ಉಪಾಯಗಳಲ್ಲಿ ಯಾವುದಾದರೊಂದನ್ನು ಪ್ರಯೋಗಿಸು. ದಂಡೋಪಾಯದಿಂದೇನು ಪ್ರಯೋಜನವಿಲ್ಲವು" ಎಂದನು. ॥ ೧–೭ ॥ ಶಾರ್ದೂಲ ನಿಂತು ನುಡಿದೊಡನೆಯೇ, ರಾಕ್ಷಸಾಧಿಪನಾದ ರಾವಣನು ಸ್ವಲ್ಪವೂ ತಡೆಮಾಡದೆ ತಾನು ಮಾಡಬೇಕಾದ ಕಾರ್ಯವನ್ನು ನಿಶ್ಚಯಿಸಿಕೊಂಡು, ಕಾರ್ಯಜ್ಞರಲ್ಲಿ ಉತ್ತಮನಾದ ಶುಕನೆಂಬ ರಾಕ್ಷಸನನ್ನು ನೋಡಿ, "ಎಲೈ ಶುಕನೇ ! ನೀನು ಈಗಲೇ ಜಾಗ್ರತೆಯಾಗಿ ಇಲ್ಲಿಂದ ಹೋಗಿ ವಾನರೇಶ್ವರನಾದ ಸುಗ್ರೀವನನ್ನು ನೋಡಿ ನನ್ನ ಪರವಾಗಿ ಈಗ ನಾನು ಹೇಳುವ ಈ ಮಾತುಗಳನ್ನು ಅವನಿಗೆ ಹೇಳು. ಹಾಗೆ ಹೇಳುವಾಗ ಯಾವ ಮಾತನ್ನೂ ಮರೆಯದೆ, ಧೈರ್ಯವಾಗಿ ಮೃದುವಚನಗಳೊಡನೆ ಕಿವಿಗಿಂಪಾಗಿರುವಂತೆ ಹೇಳಬೇಕು,—ವಾನರೇಶ್ವರಾ !

ನಾಮ ತದಾ ರಕ್ಷೋ ವಾಕ್ಯಮರ್ಥವಿದಾಂ ವರಂ ॥ ೮ ॥ "ಸುಗ್ರೀವಂ ಬ್ರೂಹಿ ಗತ್ವಾ ತ್ವಂ ರಾಜಾನಂ ವಚನಾನ್ಮಮ । ಯಥಾ ಸಂದೇಶಮಕ್ಲೀಬಂ ಶ್ಲಕ್ಷ್ಣಯಾ ಪರಯಾ ಗಿರಾ ॥ ೯ ॥ ತ್ವಂ ವೈ ಮಹಾರಾಜ ! ಕುಲಪ್ರಸೂತೋ ಮಹಾಬಲಶ್ಚರ್ಕ್ಷರಜಸ್ಸುತಶ್ಚ । ನಕಶ್ಚಿದರ್ಥಸ್ತವ ನಾಸ್ತ್ಯನರ್ಥಸ್ತಥಾಹಿ ಮೇ ಭ್ರಾತೃಸಮೋ ಹರೀಶ ! ॥೧೦॥ ಅಹಂ ಯದ್ಯಹರಂ ಭಾರ್ಯಾಂ ರಾಜಪುತ್ರಸ್ಯ ಧೀಮತಃ । ಕಿಂ ತತ್ರ ತವ ಸುಗ್ರೀವ ಕಿಷ್ಕಿಂಧಾಂ ಪ್ರತಿಗಮ್ಯತಾಂ ॥ ೧೧ ॥ ನಹೀಯಂ ಹರಿಭಿರ್ಲಂಕಾ ಶಕ್ಯಾ ಪ್ರಾಪ್ತುಂ

ಉತ್ತಮನಾದ, ಶುಕಂನಾಮ - ಶುಕನೆಂದು ಪ್ರಸಿದ್ಧನಾದ, ರಕ್ಷಃ - ರಾಕ್ಷಸನನ್ನು ಕುರಿತು, ವಾಕ್ಯಂ- ಮಾತನ್ನು, ಉವಾಚ - ಹೇಳಿದನು. ॥ ೮ ॥ ಮಮ - ನನ್ನ, ವಚನಾತ್ - ಮಾತಿನಿಂದ, ತ್ವಂ - ನೀನು, ಸುಗ್ರೀವಂ - ಸುಗ್ರೀವನೆಂಬ, ರಾಜಾನಂ - ಅರಸನನ್ನು ಕುರಿತು, ಗತ್ವಾ - ಹೋಗಿ, ಯಥಾಸಂದೇಶಂ - ಆಜ್ಞಾಪಿಸಿದಂತೆ, ಅಕ್ಲೀಬಂ - ದಿಟ್ಟತನದಿಂದ, ಶ್ಲಕ್ಷ್ಣಯಾ - ಮೃದುವಾದ, ಪರಯಾ - ಶ್ರಾವ್ಯವಾದ, ಗಿರಾ - ವಾಕ್ಕಿನಿಂದ, ಬ್ರೂಹಿ - ಹೇಳು. ॥ ೯ ॥ ಹೇ ಹರೀಶ - ಎಲೈ ವಾನರಾಧಿಪತಿಯೇ, ಹೇ ಮಹಾರಾಜಾ - ಎಲೈ ಮಹಾರಾಜನೇ, ತ್ವಂವೈ - ನೀನಾದರೆ, ಪ್ರಸೂತಃ - ಉತ್ತಮ ವಂಶದಲ್ಲಿ ಹುಟ್ಟಿದವನು, ಮಹಾಬಲಶ್ಚ - ಬಹು ಬಲವುಳ್ಳವನು, ಋಕ್ಷರಜಸಃ - ಬ್ರಹ್ಮನ ಪೌತ್ರನಾದ ಋಕ್ಷರಜಸ್ಸಿಗೆ, ಸುತಶ್ಚ - ಮಗನಾದವನು, ತವ - ನಿನಗೆ, (ರಾಮಾವಲಂಬನೇ - ಶ್ರೀರಾಮನ ಆಶ್ರಯ ವಿಷಯದಲ್ಲಿ,) ಕಶ್ಚಿದರ್ಥಃ-ಯಾವ ಪ್ರಯೋಜನವೂ, ನ-ಇಲ್ಲವು, ಅನರ್ಥಶ್ಚ- ಅನರ್ಥವೂ ಕೂಡ, ನಾಸ್ತಿ - ಇಲ್ಲವು, ತಥಾ - ಹಾಗೆಯೇ, ಮೇ - ನನಗೆ, ಭ್ರಾತೃಸಮೋಹಿ - ಒಡಹುಟ್ಟಿದವಗೆ ಸಮಾನನಾದವನಷ್ಟೆ. ॥೧೦॥ ಹೇ ಸುಗ್ರೀವ - ಎಲೈ ಸುಗ್ರೀವನೇ, ಅಹಂ - ನಾನು, ಧೀಮತಃ - ಬುದ್ಧಿಶಾಲಿಯಾದ, ರಾಜಪುತ್ರಸ್ಯ - ಶ್ರೀರಾಮನ, ಭಾರ್ಯಾಂ - ಹೆಂಡತಿಯನ್ನು, ಅಹರಂಯದಿ - ಅಪಹರಿಸಿದರೆ, ತವ - ನಿನಗೆ, ತತ್ರ - ಆ ವಿಷಯದಲ್ಲಿ, ಕಿಂ - ಏನು, ಕಿಷ್ಕಿಂಧಾಂ- ಕಿಷ್ಕಿಂಧಾಪಟ್ಟಣವನ್ನು ಕುರಿತು, ಪ್ರತಿಗಮ್ಯತಾಂ - ಹಿಂತಿರುಗಿಹೋಗು. ॥ ೧೧ ॥ ಇಯಂಲಂಕಾ - ಈ ಲಂಕಾಪಟ್ಟಣವು, ಸಗಂಧರ್ವೈಃ - ಗಂಧರ್ವರಿಂದ ಕೂಡಿದ, ದೇವೈರಪಿ - ದೇವತೆಗಳಿಂದಲೂ, ಕಥಂಚನ - ಹೇಗಾದರೂ, ಪ್ರಾಪ್ತುಂ - ಹೊಂದುವದಕ್ಕೆ, ನಶಕ್ಯಾಹಿ -

ಮಹಾರಾಜಾ, ಸುಗ್ರೀವಾ ! ! ನೀನು ಸತ್ಕುಲ ಪ್ರಸೂತನಾದವನು. ಮಹಾ ಬಲಾಢ್ಯನು. ಅಲ್ಲದೆ ಬ್ರಹ್ಮಪುತ್ರನಾದ ಋಕ್ಷರಜಸ್ಸಿನ ಮಗನು. ಆದುದರಿಂದ ನನಗೂ ನೀನು ಬಂಧುವಾದವನು ; ಇಷ್ಟೇ ಅಲ್ಲ ಒಡಹುಟ್ಟಿದವನಿಗೆ ಸಮಾನನಾದವನು. ಈಗ ನೀನು ನನಗೆ ವೈರಿಯಾಗಿ ರಾಮನ ಪಕ್ಷವನ್ನು ವಹಿಸಿಕೊಂಡು ನನ್ನೊಡನೆ ಯುದ್ಧಮಾಡುವುದರಿಂದ ನಿನಗೆ ಲಾಭವೇನೂ ಇರುವುದಿಲ್ಲವು. ಸುಗ್ರೀವಾ ! ನಾನು ರಾಜಪುತ್ರನಾದ ಆ ರಾಮನ ಭಾರ್ಯೆಯನ್ನು ಅಪಹರಿಸಿದೆನಾದರೂ ಅದರಿಂದ ನಿನಗೇನು ನಷ್ಟವಾಯಿತು ? ಏನೂ ಇಲ್ಲವು. ನೀನು ಬಹಳ ಬುದ್ಧಿಶಾಲಿಯಾದವನು. ನಾನು ಹೇಳಿರುವ ಈ ವಿಷಯಗಳೆಲ್ಲವನ್ನೂ ಚೆನ್ನಾಗಿ ಆಲೋಚಿಸು. ಇದೆಲ್ಲವೂ ನಿನಗೇಕೆ ? ಸುಮ್ಮನೆ ಕಿಷ್ಕಿಂಧೆಗೆ ಹಿಂತಿರುಗಿ ಹೋಗು. ಈ ಲಂಕಾನಗರವು ವಾನರರಿಗೆಷ್ಟು ಮಾತ್ರಕ್ಕೂ ದೂರಕತಕ್ಕದಲ್ಲ. ದೇವತೆಗಳೂ, ಗಂಧರ್ವರೂ ಸಹ ಈ ಲಂಕೆಯನ್ನು ಪ್ರವೇಶಿಸಲಾರರು. ಎಂದಮೇಲೆ ನರವಾನರರಿಗೆ ಹೊಂದಲು ಸಾಧ್ಯವಾಗುತ್ತದೆಯೆ ? ಆಗುವುದಿಲ್ಲ—ಎಂದು ಸ್ಪಷ್ಟವಾಗಿ ಹೇಳು" ಎಂದು

ಕಥಂಚನ । ದೇವೈರಪಿ ಸಗಂಧರ್ವೈಃ ಕಿಂಪುನರ್ನರವಾನರೈಃ'' ॥ ೧೨ ॥ ಸತಥಾ ರಾಕ್ಷಸೇಂದ್ರೇಣ ಸಂದಿಷ್ಟೋ ರಜನೀಚರಃ । ಶುಕೋ ವಿಹಂಗಮೋ ಭೂತ್ವಾ ತೂರ್ಣ ಮಾಪ್ಲುತ್ಯ ಚಾಂಬರಂ ॥ ೧೩ ॥ ಸಗತ್ವಾ ದೂರಮಧ್ವಾನಮುಪರ್ಯುಪರಿ ಸಾಗರಂ । ಸಂಸ್ಥಿತೋಹ್ಯಂಬರೇ ವಾಕ್ಯಂ ಸುಗ್ರೀವಮಿದಮಬ್ರವೀತ್ । ಸರ್ವಮುಕ್ತಂ ಯಥಾ ದಿಷ್ಟಂ ರಾವಣೇನ ದುರಾತ್ಮನಾ ॥ ೧೪-೧೫॥ ತಂ ಪ್ರಾಪಯಂತಂ ವಚನಂ ತೂರ್ಣ ಮಾಪ್ಲುತ್ಯ ವಾನರಾಃ । ಪ್ರಾಪದ್ಯಂತ ದಿವ ಕ್ಷಿಪ್ರಂ ಲೋಪ್ತುಂ ಹಂತುಂಚ ಮುಷ್ಟಿಭಿಃ ॥ ೧೬ ॥ ಸರ್ವೈಃ ಪ್ಲವಂಗೈಃ ಪ್ರಸಭಂ ನಿಗೃಹೀತೋ ನಿಶಾಚರಃ । ಗಗನಾ

---

ಅಸಾಧ್ಯವಷ್ಟೆ, ನರವಾನರೈಃ - ಮನುಷ್ಯರಿಂದಲೂ, ವಾನರರಿಂದಲೂ (ಪ್ರವೇಶಿಸುವದಕ್ಕೆ), ಕಿಂಪುನಃ- ಏನು ಹೇಳುತಕ್ಕದು. ॥ ೧೨ ॥ ತಥಾ - ಆ ಪ್ರಕಾರವಾಗಿ, ರಾಕ್ಷಸೇಂದ್ರೇಣ - ರಾವಣನಿಂದ, ಸಂದಿಷ್ಟಃ - ಆಜ್ಞಾಪಿಸಲ್ಪಟ್ಟ, ರಜನೀಚರಃ - ರಾಕ್ಷಸನಾದ, ಸಶುಕಃ - ಆ ಶುಕನು, ವಿಹಂಗಮೋ ಭೂತ್ವಾ - ಪಕ್ಷಿಯಾಗಿ, ತೂರ್ಣಂ - ಜಾಗ್ರತೆಯಾಗಿ, ಅಂಬರಂಚ - ಅಂತರಿಕ್ಷದಲ್ಲಿಯೂ, ಅಪ್ಲುತ್ಯ- ಹಾರಿ, ಜಗಾಮ - ಹೊರಟನು. ॥೧೩॥ ಸಃ - ಆ ರಾಕ್ಷಸನು, ಸಾಗರಂ - ಸಮುದ್ರದ, ಉಪರ್ಯುಪರಿ - ಸಮೀಪವಾಗಿರುವ ಮೇಲ್ಭಾಗದಲ್ಲಿ, ದೂರಮಧ್ವಾನಂ - ದೂರಮಾರ್ಗವನ್ನು, ಗತ್ವಾ - ಹೋಗಿ, ಅಂಬರೇ - ಅಂತರಿಕ್ಷದಲ್ಲಿ, ಸಂಸ್ಥಿತಃ - ನಿಂತು, ದುರಾತ್ಮನಾ - ದುರ್ಬುದ್ಧಿಯುಳ್ಳ, ರಾವಣೇನ - ರಾವಣನಿಂದ, ಉಕ್ತಂ - ಹೇಳಲ್ಪಟ್ಟ, ಸರ್ವಂ - ಸಮಸ್ತವಾದ, ಇದಂವಾಕ್ಯಂ - ಈ ವಾಕ್ಯವನ್ನು, ಯಥಾದಿಷ್ಟಂ - ಆಜ್ಞಾಪಿಸಲ್ಪಟ್ಟಂತೆ, ಸುಗ್ರೀವಂ - ಸುಗ್ರೀವನನ್ನು ಕುರಿತು, ಅಬ್ರವೀತ್ - ನುಡಿದನು. ॥ ೧೪-೧೫ ॥ ವಾನರಾಃ - ಕಪಿಗಳು, ವಚನಂ - ಮಾತನ್ನು, ಪ್ರಾಪಯಂತಂ - ಶ್ರವಣ ಮಾಡಿಸುತ್ತಲಿರುವ, ತಂ - ಆ ಶುಕನನ್ನು, ಕ್ಷಿಪ್ರಂ - ಜಾಗ್ರತೆಯಾಗಿ, ಲೋಪ್ತುಂ - ರೆಕ್ಕೆಗಳನ್ನು ಮುರಿಯುವದಕ್ಕಾಗಿಯೂ, ಮುಷ್ಟಿಭಿಃ - ಮುಷ್ಟಿಗಳಿಂದ, ಹಂತುಂ - ಹೊಡೆಯುವದಕ್ಕಾಗಿಯೂ, ದಿವಂ- ಅಂತರಿಕ್ಷಕ್ಕೆ, ತೂರ್ಣಂ - ಜಾಗ್ರತೆಯಾಗಿ, ಅಪ್ಲುತ್ಯ - ಹಾರಿ, ಪ್ರಾಪದ್ಯಂತ - ಸುತ್ತುವರೆದರು. ॥೧೬॥ ತೈಃಪ್ಲವಂಗೈಃ - ಆ ಕಪಿಗಳಿಂದ, ಸನಿಶಾಚರಃ - ಆ ರಾಕ್ಷಸನು, ಪ್ರಸಭಂ - ಬಲಾತ್ಕಾರವಾಗಿ,

---

ಆಜ್ಞಾಪಿಸಿದನು. ॥೮-೧೨॥ ಆ ಕೂಡಲೆ ಶುಕಾಸುರನು ಪಕ್ಷಿರೂಪವನ್ನು ಧರಿಸಿ ಅತಿ ವೇಗದಿಂದ ಗಗನಮಾರ್ಗವಾಗಿ ಶ್ರೀರಾಮಲಕ್ಷ್ಮಣ ಸುಗ್ರೀವಾದಿಗಳು ತಂಗಿದ್ದ ಸಮುದ್ರತೀರಕ್ಕೆ ತಂದನು. ಅವನು ಸಮುದ್ರತೀರದ ಮೇಲಣ ಆಕಾಶದಲ್ಲಿ ಬಹು ದೂರ ಹೋಗಿ ಅಲ್ಲಿಂದಲೇ ಸುಗ್ರೀವನನ್ನು ನೋಡಿ, ಪರಮ ನೀಚನಾದ ರಾವಣಾಸುರನು ಹೇಳಿದ ಮಾತುಗಳೆಲ್ಲವನ್ನೂ ಬಿಡದೆ ಹೇಳಿಬಿಟ್ಟನು. ಹೀಗೆ ಹೇಳುತ್ತಿರುವ ಆ ಶುಕನನ್ನು ನೋಡಿ ಅಲ್ಲಿದ್ದ ವಾನರವೀರರು ಅವನನ್ನು ಮುಷ್ಟಿಗಳಿಂದ ಗುದ್ದಿ ಕೆಡಹಲು ಆಗಲೇ ಆಕಾಶಕ್ಕೆ ಹಾರಿದರು. ಹೀಗೆ ಹಾರಿದ ಆ ವಾನರರೆಲ್ಲರೂ ಅವನನ್ನು ಹಿಡಿದು ಬಲವಾಗಿ ಗುದ್ದಿ ನೆಲಕ್ಕೆ ಕೆಡುಹಿಬಿಟ್ಟರು. ಅವರೆಲ್ಲರೂ ತನ್ನನ್ನು ಪೀಡಿಸುತ್ತಿರಲು ಆ ಶುಕನು ಶ್ರೀರಾಮನನ್ನು ಕುರಿತು, “ಓ ಕಕುತ್ಸ್ಥವಂಶೋದ್ಭವನಾದ ಶ್ರೀರಾಮಚಂದ್ರನೇ! ಧರ್ಮಿಷ್ಠರಾದವರು ದೂತರಾದವರೆನ್ನೆಂದಿಗೂ ವಧಿಸುವುದಿಲ್ಲ. ಇಗೋ ನೋಡು ; ಈ ವಾನರರೆಲ್ಲರೂ ನನ್ನನ್ನು ಗುದ್ದಿ ಸಾಯಿಸಲು ಯತ್ನಿಸುತ್ತಿರುವರು. ಹಾಗೆ ಮಾಡಬೇಡಿರೆಂದು ಆಜ್ಞಾಪಿಸು. ಯಾವನು ಸ್ವಾಮಿಯ ಅಭಿಪ್ರಾಯವನ್ನು

ದ್ಭೂತಲೇ ಚಾಶು ಪರಿಗೃಹ್ಯ ನಿಪಾತಿತಃ || ೧೭ || ವಾನರೈಃ ಪೀಡ್ಯಮಾನಸ್ತು ಶುಕೋ ವಚನಮಬ್ರವೀತ್ | "ನದೂತಾನ್ ಘ್ನಂತಿ ಕಾಕುತ್ಸ್ಥ! ವಾರ್ಯಂತಾಂ ಸಾಧು ವಾನರಾಃ || ೧೮ || ಯಸ್ತು ಹಿತ್ವಾ ಮತಂ ಭರ್ತುಸ್ಸ್ವಮತಂ ಸಂಪ್ರಭಾಷತೇ | ಅನುಕ್ತವಾದೀ ದೂತಸ್ಸನ್ ಸದೂತೋ ವಧಮರ್ಹತಿ" || ೧೯ || ಶುಕಸ್ಯ ವಚನಂ ಶ್ರುತ್ವಾ ರಾಮಸ್ತು ಪರಿದೇವಿತಂ | ಉವಾಚ ಮಾವಧಿಷ್ಟೇತಿ ಘ್ನತಃ ಶಾಖಾ ಮೃಗರ್ಷಭಾನ್ || ೨೦ || ಸಚ ಪತ್ರಲಘುರ್ಭೂತ್ವಾ ಹರಿಭಿರ್ದರ್ಶಿತೇಽಭಯೇ | ಅಂತರಿಕ್ಷಸ್ಥಿತೋ ಭೂತ್ವಾ ಪುನರ್ವಚನಮಬ್ರವೀತ್||೨೧||"ಸುಗ್ರೀವ! ಸತ್ವಸಂಪನ್ನ!

---

ನಿಗೃಹೀತಃ - ಹಿಡಿಯಲ್ಪಟ್ಟವನಾಗಿ, ಆಶು - ಜಾಗ್ರತೆಯಾಗಿ, ಪರಿಗೃಹ್ಯ - ಹಿಡಿದು, ಗಗನಾತ್ - ಅಂತರಿಕ್ಷದ ದೆಶೆಯಿಂದ, ಭೂತಲೇ - ಭೂಪ್ರದೇಶದಲ್ಲಿ, ನಿಪಾತಿತಃ - ಬೀಳಿಸಲ್ಪಟ್ಟನು. || ೧೭ || ವಾನರೈಃ - ಕಪಿಗಳಿಂದ, ಪೀಡ್ಯಮಾನಃ - ಪೀಡಿಸಲ್ಪಡುತ್ತಿರುವ, ಶುಕಸ್ತು - ಶುಕನಾದರೆ, ಹೇ ಕಾಕುತ್ಸ್ಥ - ಎಲೈ ಶ್ರೀರಾಮನೇ, ವಾನರಾಃ - ಕಪಿಗಳು, ಘ್ನಂತಿ - ಹೊಡಿಯುತ್ತಾರೆ, ಸಾಧು-ಚನ್ನಾಗಿ. ವಾರ್ಯಂತಾಂ-ತಡೆಯಲ್ಪಡಲಿ, ದೂತಾನ್-ದೂತರನ್ನು, ನಘ್ನಂತಿ-ಹೊಡಿಯುವದಿಲ್ಲ, ಯಸ್ತು - ಯಾವ ದೂತನಾದರೆ, ಭರ್ತುಃ - ಧಣಿಯ, ಮತಂ - ಅಭಿಪ್ರಾಯವನ್ನು, ಹಿತ್ವಾ - ಬಿಟ್ಟು, ಸ್ವಮತಂ - ತನ್ನ ಅಭಿಪ್ರಾಯವಿದ್ದಂತೆ, ಸಂಪ್ರಭಾಷತೇ - ಮಾತನಾಡುವನೋ, ದೂತಸ್ಸನ್ - ದೂತನಾದರೂ, ಅನುಕ್ತವಾದೀ - ಹೇಳಿದ ಮಾತನ್ನು ಕೇಳದಿರುವ, ಸದೂತಃ - ಆ ದೂತನು, ವಧಂ - ಸಂಹಾರಕ್ಕೆ, ಅರ್ಹತಿ - ಯೋಗ್ಯನಾಗುತ್ತಾನೆ, ಇತಿ - ಇಂತೆಂದು, ವಚನಂ - ಮಾತನ್ನು, ಅಬ್ರವೀತ್-ನುಡಿದನು. || ೧೮-೧೯ || ರಾಮಸ್ತು-ಶ್ರೀರಾಮನಾದರೆ, ಶುಕಸ್ಯ-ಶುಕನ, ಪರಿದೇವಿತಂ-ವಿಲಾಪರೂಪವಾದ, ವಚನಂ - ಮಾತನ್ನು, ಶ್ರುತ್ವಾ - ಕೇಳಿ, ಘ್ನತಃ - ಹೊಡಿಯುತ್ತಿರುವ, ಶಾಖಾ.....ಭಾನ್ ವಾನರೋತ್ತಮರನ್ನು ಕುರಿತು, ಮಾವಧಿಷ್ಟೇತಿ-ಹೊಡಿಯಬೇಡಿರೆಂದು, ಉವಾಚ-ಹೇಳಿದನು. ||೨೦|| ಸಚ - ಆ ಶುಕನೂ ಕೂಡ, ಹರಿಭಿಃ - ವಾನರರಿಂದ, ಪತ್ರಲಘುಃ - ರೆಕ್ಕೆಗಳಿಂದ ಲಘುವಾದನು (ಅಂದರೆ ರೆಕ್ಕೆಗಳನ್ನು ಹೋಗಲಾಗಿಸಿಕೊಂಡವನು), ಭೂತ್ವಾ - ಆಗಿ, ಭಯೇ - ಭೀತಿಯು, ದರ್ಶಿತೇ - ತೋರಿಸಲ್ಪಟ್ಟದಾಗಲು, (ಗೋ) ಅಭಯೇದರ್ಶಿತೇ - ಅಭಯವು ತೋರಿಸಲ್ಪಟ್ಟದಾಗಲು, ಅಂತ....ತ್ವಾ - ಅಂತರಿಕ್ಷದಲ್ಲಿ ನಿಂತು, ಪುನಃ - ಮತ್ತು, ವಚನಮಬ್ರವೀತ್ ನುಡಿದನು. ||೨೧|| ಹೇ ಸುಗ್ರೀವ - ಎಲೈ ಸುಗ್ರೀವನೇ, ಹೇ ಸತ್ವಸಂಪನ್ನ - ಎಲೈ ಸಾಮರ್ಥ್ಯದಿಂದ

---

ತೊರೆದು ತನ್ನ ಮನಸ್ಸಿಗೆ ತೋಚಿದಂತೆ ಹರಟುವನೋ ಅಂತಹ ದೂತನು ವಧಾರ್ಹನಾಗುವನಾಗಲಿ ನನ್ನಂಥವನಲ್ಲವು" ಎಂದು ಪ್ರಲಪಿಸಿದನು. || ೧೩-೧೭ || ಆ ಶುಕನು ಹೀಗೆ ಅಳುತ್ತ ಮೊರೆಯಿಟ್ಟುದನ್ನು ಕೇಳಿ ಶ್ರೀರಾಮನು ದಯೆಗೊಂಡು ಅವನನ್ನು ಹೊಡೆಯುತ್ತಿದ್ದ ವಾನರರನ್ನು, "ಅವನನ್ನು ಕೊಲ್ಲಬೇಡಿರಿ" ಎಂದು ಆಜ್ಞಾಪಿಸಿದನು. ಆಗ ವಾನರರೆಲ್ಲರೂ ಅವನನ್ನು ಪೀಡಿಸುವುದನ್ನು ಬಿಟ್ಟು ಸುಮ್ಮನಾದರು. ಆಮೇಲೆ ಆ ಶುಕನು ಆ ವಾನರರ ಹೊಡೆತಗಳಿಂದ ಅರ್ಧಮರ್ಧವಾಗಿ ಮುರಿದ ರೆಕ್ಕೆಗಳುಳ್ಳವನಾಗಿ, ಬಲಗುಂದಿದ ಆ ರೆಕ್ಕೆಗಳಿಂದಲೇ ಆಕಾಶಕ್ಕೆ ಪುನಃ ಹಾರಿ ಅಲ್ಲಿಯೇ ನಿಂತು ಪುನಃ ಸುಗ್ರೀವನನ್ನು ನೋಡಿ, "ಅಯ್ಯಾ ಪರಾಕ್ರಮಿಯಾದ ಸುಗ್ರೀವನೇ! ಲೋಕರಾವಣನಾದ ರಾವಣನಿಗೆ ನಾನಾವ ಉತ್ತರವನ್ನು ಹೇಳಬೇಕು? ಅದನ್ನು ಹೇಳು" ಎಂದನು. ||೧೮-೨೨|| ರಾವಣಾಸುರನ ಗೂಢಚಾರನಾದ ಆ ಶುಕನ ಮಾತು

ಮಹಾಬಲಪರಾಕ್ರಮ ! । ಕಿಂಮಯಾ ಖಲು ವಕ್ತವ್ಯೋ ರಾವಣೋಲೋಕ ರಾವಣಃ ?" ॥ ೨೨ ॥ ಸಏವಮುಕ್ತಃ ಪ್ಲವಗಾಧಿಪಸ್ತದಾ ಪ್ಲವಂಗಮಾನಾಮೃಷಭೋ ಮಹಾಬಲಃ । ಉವಾಚ ವಾಕ್ಯಂ ರಜನೀಚರಸ್ಯ ಚಾರಂ ಶುಕಂ ತೂರ್ಣಮದೀನ ಸತ್ವಃ ॥ ೨೩ ॥ "ನಮೇಽಸಿ ಮಿತ್ರಂ ನತಥಾನುಕಂಪ್ಯೋ ನಚೋಪಕರ್ತಾಽಸಿ ನಮೇ ಪ್ರಿಯೋಸಿ । ಅರಿಶ್ಚ ರಾಮಸ್ಯ ಸಹಾನುಬಂಧಸ್ಸಮೇಽಸಿ ವಾಲೀವ ವಧಾರ್ಹ! ವಧ್ಯಃ ॥ ೨೪ ॥ ನಿಹನ್ಮ್ಯಹಂ ತ್ವಾಂ ಸಸುತಂ ಸಬಂಧುಂ ಸಜ್ಞಾತಿವರ್ಗಂ ರಜನೀಚ

ಕೂಡಿದವನೇ, (ಗೋ) ಸತ್ವಸಂಪನ್ನ - ಸತ್ವಗುಣ ಸಂಪನ್ನನಾದವನೇ, ಮಹಾ......ಮ - ಬಹಳ ಸಾಮರ್ಥ್ಯವೂ, ಪರಾಕ್ರಮವೂ ಉಳ್ಳವನೇ, ಮಯಾ - ನನ್ನಿಂದ, ಲೋಕರಾವಣಃ - ಲೋಕವನ್ನು ಬಾಧೆಗೊಳಿಸುತ್ತಿರುವ, ರಾವಣಃಖಲು - ರಾವಣನಲ್ಲವೆ (ಅವನು), ಕಿಂವಕ್ತವ್ಯಃ - ಏನು ಹೇಳ ತಕ್ಕವನು. ॥೨೨॥ ಏವಂ - ಈ ಪರಿಯಾಗಿ, ಉಕ್ತಃ - ಹೇಳಲ್ಪಟ್ಟ, ಪ್ಲವಂಗಮಾನಾಂ - ವಾನರರಲ್ಲಿ, ಋಷಭಃ - ಶ್ರೇಷ್ಠನಾದ, ಮಹಾಬಲಃ - ಮಹಾ ಸಾಮರ್ಥ್ಯವಂತನಾದ, ಅದೀನಸತ್ವತಃ - ಧೈರ್ಯ ಯುಕ್ತವಾದ ಮನಸ್ಸುಳ್ಳ, ಪ್ಲವಗಾಧಿಪಃ - ವಾನರರಾಜನಾದ ಸುಗ್ರೀವನು, ತದಾ - ಆ ಕಾಲದಲ್ಲಿ, ರಜನೀಚರಸ್ಯ - ರಕ್ಕಸನಾದ ರಾವಣನ, ಚಾರಂ - ದೂತನಾದ, ಶುಕಂ - ಶುಕನ್ನ ಕುರಿತು, ವಾಕ್ಯಂ- ಮಾತನ್ನು, ತೂರ್ಣಂ - ಜಾಗ್ರತೆಯಾಗಿ, ಉವಾಚ - ಹೇಳಿದನು. ॥ ೨೩ ॥ ಹೇ ವಧಾರ್ಹ - ಎಲೈ ಎಲೈ ಸಂಹಾರಯೋಗ್ಯನೇ ನೀನು, ಮೇ - ನನಗೆ, ಮಿತ್ರಂ - ಮಿತ್ರನು, ನಾಸಿ - ಆದವನಲ್ಲ, ತಥಾ- ಹಾಗೆಯೇ, ಅನುಕಂಪ್ಯಃ - ದಯನೀಯನೂ, ನ - ಅಲ್ಲವು, ಉಪಕರ್ತಾ - ಉಪಕಾರವನ್ನು ಮಾಡಿ ದವನು, ನ - ಅಲ್ಲ, ಮೇ - ನನಗೆ, ಪ್ರಿಯಃ - ಇಷ್ಟನು, ನಾಸಿ - ಆದವನಲ್ಲ, ರಾಮಸ್ಯ - ಶ್ರೀರಾಮನಿಗೆ, ಅರಿಶ್ಚ - ಶತ್ರುವೂ ಆಗಿರುವೆ, ಸಃ - ಅಂಥಾ, ಸಹಾನುಬಂಧಃ - ಅನುಬಂಧಿ ಳಿಂದೊಡಗೂಡಿದವನಾಗಿ, ತ್ವಂ - ನೀನು, ಮೇ - ನನಿಗೆ, ವಾಲೀವ - ವಾಲಿಯಂತೆ, ವಧ್ಯಃ - ವಧೆಗೆ ಅರ್ಹನು, ಅಸಿ - ಆಗಿದ್ದೀಯೆ. ॥೨೪॥ ಹೇ ರಜನೀಚರೇಶ-ಎಲೈ ರಾಕ್ಷಸಾಧಿಪತಿಯೇ, ಅಹಂ- ನಾನು, ಸಸುತಂ - ಮಕ್ಕಳೊಡಗೂಡಿದ, ಸಬಂಧುಂ - ಬಂಧುಗಳೊಡಗೂಡಿದ, ಸಜ್ಞಾತಿವರ್ಗಂ -

ಗಳನ್ನು ಕೇಳಿದೊಡನೆಯೇ, ವಾನರೋತ್ತಮನೂ, ವಾನರೇಶ್ವರನೂ, ಮಹಾ ಪ್ರರಾಕ್ರಮ ಶಾಲಿಯೂ, ಅಮಿತಶಕ್ತಿಸಂಪನ್ನನೂ ಆದ ಸುಗ್ರೀವನು ಆವನನ್ನು ಕುರಿತು, "ಎಲೈ ಶುಕನೇ! ನಿನ್ನೊಡೆಯನಿಗೆ ಈ ಮಾತುಗಳನ್ನು ಹೇಳು,—ಎಲಾ ರಾವಣ ! ನೀನು ನನಗೆ ಮಿತ್ರನೂ ಅಲ್ಲ. ದಯನೀಯನೂ ಅಲ್ಲ. ನೀನು ನನಗೆ ಯಾವೊಂದು ಉಪಕಾರವನ್ನೂ ಮಾಡಿದವನಲ್ಲ. ಹಿತನು ಮೊದಲೇ ಅಲ್ಲ. ಮೇಲಾಗಿ ನನ್ನ ಪರಮ ಮಿತ್ರನಾದ ಶ್ರೀರಾಮಮೂರ್ತಿಗೆ ಶತ್ರು ವಾಗಿದ್ದೀಯೆ. ನನ್ನ ಶತ್ರುವಾದ ವಾಲಿಗೂ ನೀನು ಮಿತ್ರನಾಗಿದ್ದೆ. ಆದುದರಿಂದ ನೀನು ನನಗೆ ಅವಶ್ಯವೂ ವಧ್ಯನಾದವನೇ. ಎಲೈ ರಾಕ್ಷಸೇಶ್ವರನೇ, ರಾವಣಾಸುರನೇ ! ನಾನು ಬಹು ಬೇಗನೆಯೇ ಲಂಕಾನಗರಕ್ಕೈತಂದು ಪುತ್ರಮಿತ್ರ ಬಂಧುಸಮೇತನಾದ ನಿನ್ನನ್ನು ಕೊಂದುಬಿಡುವೆನು. ಇಷ್ಟೇ ಅಲ್ಲದೆ ಅಪರಿಮಿತ ಸೇನೆಯೊಡನೆ ನಿನ್ನ ನಗರಕ್ಕೆ ಬಂದು ಅದನ್ನೆಲ್ಲವನ್ನೂ ಸುಟ್ಟು ಬೂದಿಮಾಡುವೆನು ; ಎಚ್ಚರವಿರಲಿ. ಎಲಾ ಮೂಢನೇ ! ರಾವಣಾ !! ನೀನು ಸಮಸ್ತ ದೇವತೆಗಳೊಡಗೂಡಿದ ದೇವೇಂದ್ರನ ರಕ್ಷಣೆಯಲ್ಲಿದ್ದರೂ, ಇಂದ್ರನನ್ನು ಮರೆಹೊಕ್ಕರೂ, ಸೂರ್ಯನ ಬಳಿಗೈದಿದರೂ, ಪಾತಾಳವನ್ನು ಸೇರಿದರೂ ನನ್ನ ಮಿತ್ರನಾದ

ರೇಶ! । ಲಂಕಾಂಚ ಸರ್ವಾಂ ಮಹತಾ ಬಲೇನ ಕ್ಷಿಪ್ರಂ ಕರಿಷ್ಯಾಮಿ ಸಮೇತ್ಯ ಭಸ್ಮ ॥೨೫॥ ನಮೋಕ್ಷ್ಯಸೇ ರಾವಣ! ರಾಘವಸ್ಯ ಸುರೈಸ್ಸಹೇಂದ್ರೈರಪಿ ಮೂಢ! ಗುಪ್ತಃ। ಅಂತರ್ಹಿತಸ್ಸೂರ್ಯಪಥಂ ಗತೋವಾ ತಥೈವ ಪಾತಾಳಮನುಪ್ರವಿಷ್ಟಃ ॥ ೨೬ ॥ ತಸ್ಯ ತೇ ತ್ರಿಷುಲೋಕೇಷು ನ ಪಿಶಾಚಂ ನ ರಾಕ್ಷಸಂ । ತ್ರಾತಾರಮನುಪಶ್ಯಾಮಿ ನ ಗಂಧರ್ವಂ ನ ಚಾಸುರಂ ॥ ೨೭ ॥ ಅವಧೀರ್ಯಜ್ಜರಾವೃದ್ಧಮಕ್ಷಮಂ ಕಿಂ ಜಟಾಯುಷಂ? ॥ ೨೮ ॥ ಕಿನ್ನು ತೇ ರಾಮಸಾನ್ನಿಧ್ಯೇ ಸಕಾಶೇ ಲಕ್ಷ್ಮಣಸ್ಯವಾ । ಹೃತಾ

ಜ್ಞಾತಿಗಳ ಗುಂಪುಗಳೊಡಗೂಡಿದ, ತ್ವಾಂ - ನಿನ್ನನ್ನು, ನಿಹನ್ಮಿ - ಹೊಡೆಯುವೆನು, ಮಹತಾ - ಮಹತ್ತರವಾದ, ಬಲೇನ - ಸೈನ್ಯದೊಡನೆ, ಸಮೇತ್ಯ - ಬಂದು, ಸರ್ವಾಂ - ಸಮಸ್ತವಾದ, ಲಂಕಾಂಚ - ಲಂಕಾಪಟ್ಟಣವನ್ನು, ಕ್ಷಿಪ್ರಂ - ಜಾಗ್ರತೆಯಾಗಿ, ಭಸ್ಮ - ಬೂದಿಯನ್ನಾಗಿ, ಕರಿಷ್ಯಾಮಿ- ಮಾಡುವೆನು. ॥೨೫॥ ಹೇ ರಾವಣ - ಎಲೈ ರಾವಣನೇ, ತ್ವಂ - ನೀನು, ಸಹೇಂದ್ರೈಃ - ದೇವೇಂದ್ರ ನೊಡಗೂಡಿದ, ಸುರೈಃ - ದೇವತೆಗಳಿಂದ, ಗುಪ್ತೋಪಿ - ಸಂರಕ್ಷಣೆ ಮಾಡಲ್ಪಟ್ಟವನಾದರೂ, ಹೇ ಮೂಢ - ಎಲೈ ಮೂಢನೇ, ತಥೈವ - ಹಾಗೆಯೇ, ಅಂತರ್ಹಿತಃ – ಅಂತರ್ಧಾನವನ್ನು ಹೊಂದಿ, ಪಾತಾಳಂ – ಪಾತಾಳಲೋಕವನ್ನು, ಅನುಪ್ರವಿಷ್ಟೋವಾ - ಪ್ರವೇಶಮಾಡಿದರೂ, ಸೂರ್ಯ ಪಥಂ - ಅಂತರಿಕ್ಷಮಾರ್ಗವನ್ನು, ಗತೋವಾ - ಹೊಂದಿದರೂ, ನಮೋಕ್ಷ್ಯಸೇ - ಬಿಡಲ್ಪಡಲಾರೆ. ॥ ೨೬ ॥ ತಸ್ಯ - ಅಂಥ, ತೇ - ನಿನಗೆ, ತ್ರಾತಾರಂ - ಸಂರಕ್ಷಕನಾದ, ಪಿಶಾಚಂ - ಪಿಶಾಚನನ್ನೇ ಆಗಲೀ, ನಪಶ್ಯಾಮಿ - ಕಾಣೆನು, ತ್ರಾತಾರಂ - ಸಂರಕ್ಷಕನಾದ, ರಾಕ್ಷಸಂ - ರಾಕ್ಷಸನನ್ನು, ನಾನುಪಶ್ಯಾಮಿ - ಕಾಣೆನು, ಗಂಧರ್ವಂ - ಗಂಧರ್ವನನ್ನು, ನ - ಕಾಣೆನು, ಅಸುರಂ - ರಾಕ್ಷಸಭೇಧ ವನ್ನು, ನ - ಕಾಣೆನು. ಜರಾವೃದ್ಧಂ - ಜರೆಯಿಂದ ಮುದುಕನಾದ, ಅಕ್ಷಮಂ - ಯುದ್ಧದಲ್ಲಿ ಅಸಮರ್ಥನಾದ, ಜಟಾಯುಷಂ - ಜಟಾಯುವನ್ನು, ಅವಧೀರಿತಿಯತ್ - ಸಂಹಾರಮಾಡಿದೆಯೆಂಬು ದಾವದೋ, ತತ್ರ - ಆ ವಿಷಯದಲ್ಲಿ, ತೇ - ನಿನಗೆ, ಕಿಂ - ಏನುಪ್ರಯೋಜನವು. ॥ ೨೭ ॥ ರಾಮಸಾನ್ನಿಧ್ಯೇ - ಶ್ರೀರಾಮನ ಸಮೀಪದಲ್ಲಿಯಾದರೂ ಸರಿಯೇ, ಲಕ್ಷ್ಮಣಸ್ಯ - ಲಕ್ಷ್ಮಣನ, ಸಕಾಶೇವಾ - ಸಮೀಪದಲ್ಲಿಯೇ ಆಗಲಿ, ತೇ - ನಿನ್ನಿಂದ, ವಿಶಾಲಾಕ್ಷೀ - ವಿಸ್ತಾರವಾದ ನೇತ್ರ ಗಳುಳ್ಳ, ಸೀತಾ - ಸೀತಾದೇವಿಯು, ಹೃತಾಕಿಂ - ಅಪಹರಿಸಲ್ಪಟ್ಟಳೇನು, ತ್ವಂ - ನೀನು, ಯಾಂ -

ಶ್ರೀರಾಮನು ನಿನ್ನನೆಂದಿಗೂ ಪ್ರಾಣದೊಡನೆ ಬಿಡನೆಂದು ತಿಳಿ. ಖಂಡಿತವಾಗಿಯೂ ವಧಿಸಿ ಬಿಡುವನು. ॥೨೩–೨೬॥ ಶ್ರೀರಾಮನಿಂದ ಹಿಂಬಾಲಿಸಲ್ಪಡುವ ನಿನ್ನನ್ನು ಮೂರು ಲೋಕಗಳಲ್ಲಿ ರುವ, ಪಿಶಾಚಗಳಾಗಲಿ, ರಾಕ್ಷಸರಾಗಲಿ, ಗಂಧರ್ವರಾಗಲಿ, ಅಸುರರಾಗಲಿ ಸಂರಕ್ಷಿಸಲಾರರು. ನೀನು ಜಟಾಯುವನ್ನು ಕೊಂದುದರಿಂದ ಅತಿಯಾಗಿ ಕೊಬ್ಬಿಹೋಗಿರಬಹುದು. ಅವನು ತೀರ ವೃದ್ಧನು. ಶಕ್ತಿಯಿಲ್ಲದವನು. ಅಂಥವನನ್ನು ಕೊಂದುದೇನೂ ಹೆಚ್ಚಲ್ಲ. ಇದ ಲ್ಲದೆ ನೀನು "ಸೀತೆಯನ್ನು ಕದ್ದು ತಂದುದಾಯಿತಲ್ಲ. ಇನ್ನೇನು?" ಎಂದು ಮೈಮರೆ ತಿರುವೆ. ವಿಶಾಲನೇತ್ರಿಯಾದ ಆ ದೇವಿಯನ್ನು ಶ್ರೀರಾಮನಾಗಲಿ, ಲಕ್ಷ್ಮಣನಾಗಲಿ ಇರು ವಾಗ ಅಪಹರಿಸಿಕೊಂಡು ಹೋದೆಯೇನು? ಅದೇನೂ ಇಲ್ಲ. ಹೀಗೆ ಮಾಡಿದುದರಿಂದೇನು ಪ್ರಯೋಜನವು? ನೀನು ಅವರಿಬ್ಬರೂ ಇರುವಾಗ ಆಕೆಯನ್ನು ತಂದಿದ್ದರೆ ಅವರ ಶಕ್ತಿಯನ್ನು ಆಗಲೇ ತಿಳಿಯುತ್ತಿದ್ದೆ. ನಿನ್ನ ಪ್ರಾಣಗಳನ್ನು ಅಪಹರಿಸುವವನೂ, ಮಹಾ ಬಲಿಷ್ಠನೂ,

ಸೀತಾ ವಿಶಾಲಾಕ್ಷೀ ಯಾಂ ತ್ವಂ ಗೃಹ್ಯನಬುಧ್ಯಸೇ || ೨೮ || ಮಹಾಬಲಂ ಮಹಾತ್ಮಾನಂ ದುರ್ಧರ್ಷಮಮರೈರಪಿ | ನಬುಧ್ಯಸೇ ರಘುಶ್ರೇಷ್ಠಂ ಯಸ್ತೇ ಪ್ರಾಣಾನ್ ಹರಿಷ್ಯತಿ" || ೨೯ || ತತೋಽಬ್ರವೀದ್ವಾಲಿಸುತಸ್ತ್ವಂಗದೋ ಹರಿಸತ್ತಮಃ || ೩೦ || ನಾಽಯಂ ದೂತೋ ಮಹಾರಾಜ! ಚಾರಿಕಃ ಪ್ರತಿಭಾತಿ ಮೇ | ತುಲಿತಂ ಹಿ ಬಲಂ ಸರ್ವಮನೇನಾತ್ರೈವ ತಿಷ್ಠತಾ | ಗೃಹ್ಯತಾಂ ಮಾಗಮೇಲ್ಲಂಕಾಮೇತದ್ಧಿ ಮಮ ರೋಚತೇ" || ೩೧ || ತತೋ ರಾಜ್ಞಾ ಸಮಾದಿಷ್ಟಾಃ ಸಮುತ್ಪ್ಲುತ್ಯ ವಲೀಮುಖಾಃ | ಜಗೃಹುಶ್ಚ ಬಬಂಧುಶ್ಚ ವಿಲಪಂತಮನಾಥವತ್ || ೩೨ || ಶುಕಸ್ತು

ಯಾವ ಸೀತಾದೇವಿಯನ್ನು, ಗೃಹ್ಯ - ಅಪಹರಿಸಿ, ನಬುಧ್ಯಸೇ - ಶ್ರೀರಾಮನ ಪರಾಕ್ರಮವನ್ನರಿಯದೆ ಹೋದೆಯೋ (ಗೋ) ಮುಂದೆ ಆಗತಕ್ಕ ಅನರ್ಥವನ್ನು ತಿಳಿಯದೇ ಹೋದೆಯೋ. || ೨೮ || ಯಃ - ಯಾವ ಶ್ರೀರಾಮನು, ತೇ - ನಿನ್ನ, ಪ್ರಾಣಾನ್ - ಪ್ರಾಣಗಳನ್ನು, ಹರಿಷ್ಯತಿ - ಅಪಹರಿಸುವನೋ, ಮಹಾಬಲಂ - ಮಹಾ ಸಾಮರ್ಥ್ಯವಂತನಾದ, ಮಹಾತ್ಮಾನಂ - ಮಹಾ ಧೈರ್ಯಶಾಲಿಯಾದ, ಅಮರೈರಪಿ - ದೇವತೆಗಳಿಂದಲೂ, ದುರ್ಧರ್ಷಂ - ತಿರಸ್ಕರಿಸಲಸಾಧ್ಯನಾದ, ರಘುಶ್ರೇಷ್ಠಂ - ಶ್ರೀರಾಮನನ್ನು, ನಬುಧ್ಯಸೇ - ತಿಳಿಯದೇ ಹೋದೆಯೋ. || ೨೯ || ತತಃ - ಬಳಿಕ, ವಾಲಿಸುತಃ - ವಾಲಿಪುತ್ರನಾದ, ಹರಿಸತ್ತಮಃ-ವಾನರೋತ್ತಮನಾದ, ಅಂಗದಸ್ತು-ಅಂಗದನಾದರೆ, ಅಬ್ರವೀತ್-ನುಡಿದನು. || ೩೦ || ಹೇ ಮಹಾರಾಜ - ಎಲೈ ಮಹಾರಾಜನೇ, ಅಯಂ - ಈ ಶುಕನು, ದೂತಃ - ದೂತನು, ನ - ಅಲ್ಲ, ಕಿಂತು - ಮತ್ತೇನೆಂದರೆ, ಚಾರಿಕಃ - ಗೂಢಚಾರಿಯಾಗಿ, ಮೇ - ನನಗೆ, ಪ್ರತಿಭಾತಿ - ತೋರುತ್ತದೆ, ಅತ್ರ - ಇಲ್ಲಿ, ತಿಷ್ಠತೈವ - ಇದ್ದುಕೊಂಡೇ, ಅನೇನ - ಈ ಶುಕನಿಂದ, ಸರ್ವಂ - ಸಮಸ್ತವಾದ, ಬಲಂ - ಸೈನ್ಯವು, ತುಲಿತಂ - ತುಲನ ಮಾಡಲ್ಪಟ್ಟಿತು, ಗೃಹ್ಯತಾಂ - ಹಿಡಿಯಲ್ಪಡಲಿ, ಲಂಕಾಂ - ಲಂಕಾಪಟ್ಟಣವನ್ನು, ಮಾಗಮತ್ - ಹೊಂದದಿರಲಿ, ಏತತ್ - ಇದು, ಮಮ - ನನಗೆ, ರೋಚತೇಹಿ - ಸಮ್ಮತವಾಗಿರುವುದು. ||೩೧|| ತತಃ - ಬಳಿಕ, ರಾಜ್ಞಾ - ಅರಸಾದ ಸುಗ್ರೀವನಿಂದ, ಸಮಾದಿಷ್ಟಾಃ - ಆಜ್ಞಾಪಿಸಲ್ಪಟ್ಟ, ವಲೀಮುಖಾಃ - ಕಪಿಗಳು, ಸಮುತ್ಪ್ಲುತ್ಯ - ಹಾರಿಬಂದು (ಆ ಶುಕನನ್ನು), ಜಗೃಹುಃ - ಹಿಡಿದುಕೊಂಡರು, ಅನಾಥವತ್ - ದಿಕ್ಕಿಲ್ಲದವನಂತೆ, ವಿಲಪಂತಂ-ವಿಲಪಿಸುತ್ತಿರುವ ಅವನನ್ನು, ಬಬಂಧುಶ್ಚ-ಹಿಂಗಟ್ಟುಮುರಿಗಟ್ಟು ಕಟ್ಟಿದರು. || ೩೨ ||

ಮಹಾ ಬುದ್ಧಿಶಾಲಿಯೂ, ದೇವತೆಗಳಿಗೂ ಎದುರಿಸಲಸದಳನೂ ಆದ ಶ್ರೀರಾಮಮೂರ್ತಿಯನ್ನು ನೀನು ಕಾಣೆ. ಅವನ ಪ್ರಭಾವವು ನಿನಗೆ ತಿಳಿಯದು" ಎಂದು ಹೇಳಿದನು. ||೨೭–೨೯|| ಆಮೇಲೆ ವಾನರೋತ್ತಮನಾದ ವಾಲಿಪುತ್ರನು (ಅಂಗದನು) ಸುಗ್ರೀವನೊಡನೆ "ಮಹಾರಾಜ! ಈ ಶುಕನು ದೂತನಲ್ಲ. ರಾವಣನ ಗೂಢಚಾರನೆಂದು ತೋರುತ್ತಿರುವುದು. ಇವನಿಲ್ಲಿಯೇ ಇದ್ದುಕೊಂಡು ನಮ್ಮ ಸೇನೆಯೆಲ್ಲವನ್ನೂ ಚೆನ್ನಾಗಿನೋಡಿಬಿಟ್ಟನು. ಆದುದರಿಂದ ಇವನನ್ನು ಹಿಡಿದು ಕೊಲ್ಲಬೇಕು. ಇವನನ್ನು ಲಂಕೆಗೆ ಹೋಗಲು ಬಿಡಬಾರದು. ಇದು ನನ್ನ ಅಭಿಪ್ರಾಯವು" ಎಂದು ಹೇಳಿದನು. ಆಗ ಸುಗ್ರೀವನು ಹಾಗೆಯೇ ಮಾಡಿರೆಂದು ವಾನರರೆಲ್ಲರಿಗೂ ಆಜ್ಞೆಯಿತ್ತನು. ಆ ವಾನರರೆಲ್ಲರೂ ತಮ್ಮ ದೊರೆಯ ಅಪ್ಪಣೆಯಂತೆ ಆ ಕೂಡಲೇ ಆಕಾಶಕ್ಕೆ ಹಾರಿ ಅನಾಥನಂತೆ ಅಳುತ್ತಿದ್ದ ಆ ಶುಕನನ್ನು ಹಿಡಿದು ಬಂಧಿಸಿದರು. ಆಗ ಶುಕನು ಮಹಾ ಭಯಂಕರರಾದ ಆ ವಾನರರಿಂದ ಬಹಳ

ವಾನರೈಶ್ಚಂಡೈಸ್ತತ್ರ ತೈಸ್ಸಂಪ್ರಪೀಡಿತಃ । ವ್ಯಾಕ್ರೋಶತ ಮಹಾತ್ಮಾನಂ ರಾಮಂ ದಶರಥಾತ್ಮಜಂ । "ಲುಪ್ಯೇತೇ ಮೇ ಬಲಾತ್ಪಕ್ಷೌ ಭಿದ್ಯೇತೇಚ ತಥಾಕ್ಷಿಣೀ ॥ ೩೪ ॥ ಯಾಂಚ ರಾತ್ರಿಂ ಮರಿಷ್ಯಾಮಿ ಜಾಯೇ ರಾತ್ರಿಂಚ ಯಾಮಹಂ । ಏತಸ್ಮಿನ್ನಂತರೇ ಕಾಲೇ ಯನ್ಮಯಾಹ್ಯಶುಭಂ ಕೃತಂ । ಸರ್ವಂ ತ್ವಮುಪಪದ್ಯೇಥಾ ಜಹ್ಯಾಂಚೇದ್ಯದಿ ಜೀವಿತಂ" ॥೩೫॥ ನಾಘಾತಯತ್ತದಾ ರಾಮಃ ಶ್ರುತ್ವಾ ತತ್ಪರಿದೇವನಂ । ವಾನರಾನ ಬ್ರವೀದ್ರಾಮೋ ಮುಂಚತಾಂ ದೂತ ಆಗತಃ ॥ ೩೬ ॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ವಿಂಶಸ್ಸರ್ಗಃ.

ಶುಕಸ್ತು - ಶುಕನಾದರೆ, ಚಂಡೈಃ - ಕ್ರೂರರಾದ, ತೈರ್ವಾನರೈಃ - ಆ ವಾನರರಿಂದ, ತತ್ರ - ಅಲ್ಲಿ, ಸಂಪ್ರಪೀಡಿತಃ-ಬಾಧೆಗೊಳಿಸಲ್ಪಟ್ಟವನಾಗಿ, ಮಹಾತ್ಮಾನಂ-ಮಹಾ ಮನಸ್ವಿಯಾದ, ದಶರಥಾತ್ಮಜಂ-ದಶರಥಪುತ್ರನಾದ, ರಾಮಂ - ಶ್ರೀರಾಮನನ್ನು ಕುರಿತು, ಬಲಾತ್ - ಬಲಾತ್ಕಾರದಿಂದ, ಮೇ - ನನ್ನ, ಪಕ್ಷೌ - ರೆಕ್ಕೆಗಳು, ಲುಪ್ಯೇತೇ - ನಶಿಸಿ ಹೋಗುತ್ತವೆ, ತಥಾ - ಹಾಗೆಯೇ, ಅಕ್ಷಿಣೀ - ನೇತ್ರಗಳು, ಭಿದ್ಯೇತೇ - ಭೇಧಿಸಲ್ಪಡುತ್ತವೆ, ಇತಿ - ಇಂತೆಂದು, ವ್ಯಾಕ್ರೋಶತ - ಘಟ್ಟಿಯಾಗಿ ಕೂಗಿದನು. ॥೩೩-೩೪॥ ಯಾಂಚರಾತ್ರಿಂ-ಯಾವ ಅಹೋರಾತ್ರಿರೂಪವಾದ ದಿವಸದಲ್ಲಿ, ಮರಿಷ್ಯಾಮಿ-ಸತ್ತುಹೋಗುತ್ತೇನೆಯೋ, ಅಹಂ - ನಾನು, ಯಾಂಚರಾತ್ರಿಂ - ಯಾವ ರಾತ್ರಿಯಲ್ಲಿ, ಜಾಯೇ - ಹುಟ್ಟಿದೆನೋ, ಏತಸ್ಮಿನ್ನಂತರೇಕಾಲೇ - ಈ ಮಧ್ಯಕಾಲದಲ್ಲಿ, ಯದಶುಭಂ - ಯಾವ ಪಾಪವು, ಮಯಾ - ನನ್ನಿಂದ, ಕೃತಂ - ಮಾಡಲ್ಪಟ್ಟಿತೋ, ಜೀವಿತಂ - ಪ್ರಾಣವನ್ನು, ಜಹ್ಯಾಂಚೇದ್ಯದಿ-ಬಿಡುವವನಾದರೆ, ತತ್ಸರ್ವಂ - ಅದನ್ನೆಲ್ಲಾ, ತ್ವಂ - ನೀನು, ಉಪಪದ್ಯೇಥಾಃ - ಹೊಂದುವೆ. ॥೩೫॥ ತದಾ - ಆಗ, ರಾಮಃ - ಶ್ರೀರಾಮನು, ತತ್ಪರಿದೇವನಂ - ಆ ಪರಿತಾಪಧ್ವನಿಯನ್ನು, ಶ್ರುತ್ವಾ - ಕೇಳಿ, ನಾಘಾತಯತ್ - ಹೊಡಿಸಲಿಲ್ಲ, ರಾಮಃ - ಶ್ರೀರಾಮನು, ಆಗತಃ - ಬಂದಿರುವ, ದೂತಃ - ದೂತನು, ಮುಚ್ಯತಾಂ - ಬಿಡಲ್ಪಡಲಿ, ಇತಿ - ಇಂತೆಂದು, ವಾನರಾನ್ - ಕಪಿಗಳನ್ನು ಕುರಿತು, ಅಬ್ರವೀತ್ - ನುಡಿದನು. ॥ ೩೬ ॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ವಿಂಶಸ್ಸರ್ಗಃ.

ಪೀಡಿತನಾಗಿ ಮರಳಿಯೂ, ಮಹಾತ್ಮನೂ, ದಶರಥರಾಜನಂದನನೂ ಆದ ಶ್ರೀರಾಮನನ್ನು ಕುರಿತು ಮೊರೆಯಿಟ್ಟನು,—"ಎಲೈ ಶ್ರೀರಾಮನೇ! ಅಯ್ಯೋ! ಈ ವಾನರರು ಬಲಾತ್ಕಾರವಾಗಿ ನನ್ನ ರೆಕ್ಕೆಗಳನ್ನು ಮುರಿಯುತ್ತಿದ್ದಾರೆ. ನನ್ನ ಕಣ್ಣುಗಳನ್ನು ಕೀಳುತ್ತಿದ್ದಾರೆ. ನಿರಪರಾಧಿಯಾದ ದೂತನಾದರೂ ನಾನು ವಧಿಸಲ್ಪಟ್ಟುದಾದರೆ ಆಮೇಲೆ, ನಾನು ಹುಟ್ಟಿದ ಮೊದಲ್ಗೊಂಡು ಈವರೆಗೂ ಮಾಡಿದ ಪಾಪಗಳೆಲ್ಲವೂ ನಿನ್ನನ್ನೇ ಸೇರುವುವು" ಎಂದು ಅತ್ತನು. ಆಗ ಶ್ರೀರಾಮಮೂರ್ತಿಯು ಆ ಶುಕನ ರೋದನವನ್ನು ಕೇಳಿ, "ಅಯ್ಯಾ ವಾನರರಾ! ದೂತನನ್ನು ಕೊಲ್ಲಬಾರದು. ಅವನನ್ನು ಭದ್ರಪಡಿಸಿರಿ" ಎಂದು ಹೇಳಿ ಅವನನ್ನು ಕೊಲ್ಲದಂತೆ ನಿವಾರಿಸಿದನು. ॥ ೩೦—೩೬ ॥

ಇಂತಿದು ಶಾರ್ದೂಲಕಥಿತ ವಾನರಸೇನಾ ವೃತ್ತಾಂತ-ರಾವಣಕೃತ ಶುಕಪ್ರೇಷಣ-ಶುಕಕಥಿತ ರಾವಣಸಂದೇಶ-ವಾನರಕೃತ ಶುಕಶಿಕ್ಷಣ-ಶ್ರೀರಾಮಕೃತ ಶುಕ ವಿಮೋಕ್ಷಣ-ಎಂಬ ಇಪ್ಪತ್ತನೆಯ ಸರ್ಗವು ಸಮಾಪ್ತವಾದುದು.



# ಯುದ್ಧಕಾಂಡೇ ಏಕವಿಂಶಸ್ಸರ್ಗಃ

¶ ತತಸ್ಸಾಗರವೇಲಾಯಾಂ ದರ್ಭಾನಾಸ್ತೀರ್ಯ ರಾಘವಃ । ಅಂಜಲಿಂ ಪ್ರಾಙ್ಮುಖಃ ಕೃತ್ವಾ ಪ್ರತಿಶಿಶ್ಯೇ ಮಹೋದಧೇಃ ॥೧॥ ಬಾಹುಂ ಭುಜಗಭೋಗಾಭ ಮುಪಧಾಯಾಽರಿಸೂದನಃ । ಜಾತರೂಪಮಯೈಶ್ಚೈವ ಭೂಷಣೈರ್ಭೂಷಿತಂ ಪುರಾ ॥೨॥ ವರಕಾಂಚನಕೇಯೂರ ಮುಕ್ತಾ ಪ್ರವರಭೂಷಣೈಃ । ೪ ಭುಜೈಃ ಪರಮನಾರೀಣಾ

ತತಃ - ಬಳಿಕ, ಅರಿಸೂದನಃ - ಶತ್ರುಸಂಹಾರಕನಾದ, ರಾಘವಃ - ಶ್ರೀರಾಮನು, ಸಾಗ....ಯಾಂ - ಸಮುದ್ರದ ದಡದಲ್ಲಿ, ದರ್ಭಾ - ಕುಶಗಳನ್ನು, ಆಸ್ತೀರ್ಯ - ಹಾಸಿಕೊಂಡು, ಪ್ರಾಂಙ್ಮುಖಸ್ಸ - ಪೂರ್ವಾಭಿಮುಖನಾಗಿ, ಮಹೋದಧೇಃ - ಕಡಲಿಗೆ, ಅಂಜಲಿಂ - ಬೊಗಸೆಯನ್ನು, ಕೃತ್ವಾ - ಮಾಡಿ, ಭುಜ....ಭಂ - ಸರ್ಪದ ಶರೀರದಂತೆ ಹೊಳೆಯುತ್ತಿರುವ, ಜಾತ....ವ - ಸುವರ್ಣ ವಿಕಾರವಾದ, ಭೂಷಣೈಃ - ಒಡವೆಗಳಿಂದ, ಪುರಾ - ಪೂರ್ವದಲ್ಲಿ, ಭೂಷಿತಂ - ಅಲಂಕೃತವಾದ, ವರ....ಣೈಃ - ಶ್ರೇಷ್ಠವಾದ ಚಿನ್ನದ ಬಾಹುಪುರಿಗಳಿಂದಲೂ ಮುತ್ತುಗಳೇ ಪ್ರಚುರವಾಗಿರುವ ಒಡವೆಗಳೂ ಉಳ್ಳ, ಪರಮನಾರೀಣಾಂ - ಉತ್ತಮರಾದ ಪರಿಚಾರಿಕ ಸ್ತ್ರೀರುಗಳ, ಭುಜೈಃ - ಭುಜಗಳಿಂದ, (ಗೋ) ಪೂಜಾಯೋಗ್ಯಳಾದ ಸೀತಾದೇವಿಯ ಭುಜಗಳಿಂದ, ಅನೇಕಧಾ - ಅನೇಕಾವರ್ತಿ, ಅಭಿಮೃಷ್ಟಂ - ಒತ್ತಲ್ಪಟ್ಟ, ಚಂದ....ವ - ಶ್ರೀಗಂಧದಿಂದಲೂ ಅಗುರುಗಂಧಗಳಿಂದಲೂ, ಪುರಸ್ತಾತ್ - ಪೂರ್ವದಲ್ಲಿ, ಅಧಿವಾಸಿತಂ-ವಾಸನೆ ಕಟ್ಟಲ್ಪಟ್ಟ, ಬಾಲ.....ಶೈಃ ಉದಯಕಾಲದ ಸೂರ್ಯನಿಗೆ ಸಮಾನ

ಆ ತರುವಾಯ ಶತ್ರುಸಂಹಾರಕನಾದ ಶ್ರೀರಾಮನು, ಸಮುದ್ರತೀರದಲ್ಲಿ ದರ್ಭೆಗಳನ್ನು ಹಾಸಿಕೊಂಡು ಪೂರ್ವಾಭಿಮುಖವಾಗಿ ಕೈಗಳನ್ನು ಜೋಡಿಸಿ ಸಮುದ್ರರಾಜನಿಗೆ ಪ್ರಣಾಮಮಾಡಿ, ಮಹಾ ಸರ್ಪದ ಶರೀರ ಕಾಂತಿಗೆ ಸಮಾನವಾದ ಕಾಂತಿಯುಳ್ಳ ತನ್ನ ಬಲ ತೋಳನ್ನು ತಲೆಯ ಕೆಳಕ್ಕೆ ಕೊಟ್ಟುಕೊಂಡು ಸಮುದ್ರಕ್ಕೆದುರಾಗಿ ಪವಳಿಸಿದನು. ಮಹಾ ಸಮರ್ಥನೂ, ಮಹಾ ಭಾಹುವೂ ಆ ರಘುರಾಮನು ಹಿಂದೆ ಸ್ವರ್ಣಾಭರಣಗಳಿಂದಲಂಕೃತವಾಗಿದ್ದುದೂ, ಮಹಾರ್ಹವಾದ ಬಂಗಾರದ ಬಾಹುಪುರಿಗಳಿಂದಲೂ, ಶ್ರೇಷ್ಠವಾದ ಮುಕ್ತಾಫಲಗಳಿಂದಲೂ ಒಪ್ಪುತ್ತಿದ್ದ ಕಾಂಚನ ಭೂಷಣಗಳನ್ನು ತೊಟ್ಟು ಮೆರೆಯುವ

¶ ಇಲ್ಲಿ ಕೊಟ್ಟಿರುವ ವಿಶೇಷಣಗಳ ಮಹಿಮೆಯನ್ನು ಆಲೋಚಿಸಿ ನೋಡಿದರೆ, "ಅತಿ ಸುಕುಮಾರವಾದ ಶರೀರವುಳ್ಳ ಶ್ರೀರಾಮನಿಗೆ, ಕಠಿನ ಭೂಶಯನವೂ, ಸರ್ವ ಲೋಕಶರಣ್ಯನಾದರೂ ಇತರಾಪೇಕ್ಷೆಯೂ ಹೇಗುಂಟಾಯಿತೋ!!" ಎಂದು ಆದಿ ಕವಿಯು ಖೇದಪಟ್ಟಿರುವಂತೆ ತೋರುತ್ತದೆ. (ಗೋ)

೪ ಇಲ್ಲಿ ಕೆಲವರು, "ಶ್ರೀರಾಮನಿಗೆ ಸೀತೆಯು ಮಾತ್ರವಲ್ಲವೆ ಇನ್ನೂ ಅನೇಕಮಂದಿ ಭಾರ್ಯೆಯರಿದ್ದರು" ಎಂದು ಆಶಂಕಿಸುತ್ತಾರೆ. ಇದು ಸರ್ವಥಾ ಮಾನ್ಯವಾದ ಆಶಂಕೆಯಲ್ಲವು. ಬಾಲಕಾಂಡದಲ್ಲಿ ಶ್ರೀರಾಮನಿಗೆ ಸೀತೆಯೊಡನೆ ಮಾತ್ರ ವಿವಾಹವು ವರ್ಣಿತವಾಗಿರುವುದಲ್ಲದೆ, ಮತ್ತಾವಳೊಡನೆಯೂ ವಿವಾಹವಾದಂತೆ ಪ್ರತಿಪಾದಿತವಾಗಿರುವುದಿಲ್ಲ. "ರಾಮಸ್ತು ಸೀತಯಾಸಾರ್ಧಂ ವಿಜಹಾರಬಹೂನೃತೂನ್ । ಮನಸ್ವೀತದ್ಗತಸ್ತಸ್ಯಾ ನಿತ್ಯಂ ಹೃದಿಸಮರ್ಪಿತಃ ॥" ಎಂದು ನಿರಂತರವೂ ಸೀತೆಯೊಡನೆಯೇ ಶ್ರೀರಾಮನಿಗೆ ಭೋಗವು ನಿರೂಪಿಸಲ್ಪಟ್ಟಿದೆ. ಆದುದರಿಂದಲೇ ಸೀತೆಯೂ ಸಹ



—: ದರ್ಭಶಯನಃ :—

" ಅಂಜಲಿಂ ಪ್ರಾಙ್ಮುಖಃ ಕೃತ್ವಾ ಪ್ರತಿಶಿಶ್ಯೇ ಮಹೋದಧೇಃ ।
ಬಾಹುಂ ಭುಜಗಭೋಗಾಭಮುಪಧಾಯಾರಿಸೂದನಃ ॥ "

ಪುಟ ೧೯೬

ಮುಭಿಮೃಷ್ಟಮನೇಕಧಾ ॥ ೩ ॥ ಚಂದನಾಗುರುಭಿಶ್ಚೈವ ಪುರಸ್ತಾದಧಿವಾಸಿತಂ ।
ಬಾಲಸೂರ್ಯಪ್ರತೀಕಾಶೈಶ್ಚಂದನೈರುಪಶೋಭಿತಂ ॥೪॥ ಸಂಯುಗೇ ಯುಗಸಂಕಾಶಂ
ಶತ್ರೂಣಾಂ ಶೋಕವರ್ಧನಂ । ಸುಹೃದಾನಂದನಂ ದೀರ್ಘಂ ಸಾಗರಾಂತವ್ಯಪಾ

ಗಳಾದ, ಚಂದನೈಃ - ಕೆಂಪು ಗಂಧಗಳಿಂದಲೂ, ಚಂದನೈಃ - ಕೆಂಪುಗಂಧಗಳಿಂದಲೂ, ಉಪಶೋಭಿತಂ - ಹೊಳೆಯುತ್ತಿರುವ, ಶಯನೇ - ಹಂಸತೂಲಿಕಾತಲ್ಪದಲ್ಲಿ, ಪುರಾ - ಪೂರ್ವದಲ್ಲಿ, ಸೀತಾಯಾಂ - ಸೀತಾದೇವಿಯು, ಉತ್ತಮಾಂಗೇನ - ಶಿರಸ್ಸಿನಿಂದ, ಶೋಭಿತಂ - ಹೊಳೆಯುತ್ತಿರುವ, ತಕ್ಷಕಸ್ಯ - ತಕ್ಷಕನ, ಸಂಭೋಗಮಿವಸ್ಥಿತಂ - ಶರೀರವೋ ಎಂಬಂತಿರುವ, ಗಂಗಾ....ತಂ - ಗಂಗಾನದಿಯ ಉದಕದಿಂದ ಸೇವಿಸಲ್ಪಟ್ಟ, ಸಂಯುಗೇ - ಕಾಳಗದಲ್ಲಿ, ಯುಗಸಂಕಾಶಂ - ಕಾಡೀಮರಕ್ಕೆ ಸಮಾನವಾದ, ಶತ್ರೂಣಾಂ - ಶತ್ರುಗಳಿಗೆ, ಶೋಕವರ್ಧನಂ - ದುಃಖವನ್ನು ವೃದ್ಧಿಗೊಳಿಸುತ್ತಿರುವ,

ಉತ್ತಮ ಸ್ತ್ರೀಯರ ಭುಜಗಳಿಂದ ಪಲುಬಗೆಯಾಗಿ ಪರಾಮೃಷ್ಟವಾಗಿದ್ದುದೂ, ಚಂದನಾಗುರ ಗಂಧಗಳಿಂದಲೂ, ರಕ್ತಚಂದನ ಗಂಧಗಳಿಂದಲೂ ಲೇಪಿತವಾಗಿ ಸುವಾಸನೆಯಿಂದೊಪ್ಪಿರುತ್ತಿದ್ದುದೂ, ಬಾಲಸೂರ್ಯನಂತೆ ಪ್ರಕಾಶಿಸುತ್ತಿರುವುದೂ, ಹಂಸತೂಲಿಕಾತಲ್ಪದಲ್ಲಿ ಸೀತಾದೇವಿಯ ಶಿರಸ್ಸಿನಿಂದ ಸುಶೋಭಿತವಾಗಿದ್ದುದೂ, ಗಂಗಾಜಲದಿಂದ ಸೇವಿತನಾದ ತಕ್ಷಕನೆಂಬ ಸರ್ಪಸಾರ್ವಭೌಮನ ಶರೀರದಂತೆ ಬೆಳಗುತ್ತಿರುವುದೂ, ರಣರಂಗದಲ್ಲಿ ಮಹಾ ಪರಿಘ

"ಸಮಾ ದ್ವಾದಶತತ್ರಾಹಂ ರಾಘವಸ್ಯ ನಿವೇಶನೇ । ಭುಂಜಾನಾ ಮಾನುಷಾನ್ ಭೋಗಾನ್ ಸರ್ವಕಾಮಸಮೃದ್ಧಿನೀ ॥" ಎಂದು ಹೇಳಿರುವಳು. ಹೀಗಿರುವಾಗ ಶ್ರೀರಾಮನಿಗೆ ದಾರಾಂತರಾವಕಾಶವು ಹೇಗೆ ಆಶಂಕಿಸಲಾದೀತು ?

"ರಾಮಸ್ಯ ದಯಿತಾಭಾರ್ಯಾ" ಎಂಬುದಕ್ಕೆ, "ರೋಹಿಣೀಯಥಾ" ಎಂದು ದೃಷ್ಟಾಂತ ಕೊಟ್ಟಿರುವುದರಿಂದ (ಚಂದ್ರನಿಗಿದ್ದಂತೆಯೇ) ಶ್ರೀರಾಮನಿಗೂ ಭಾರ್ಯಾಂತರತ್ವವು ಕೂಡುತ್ತದೆ" ಎಂದು ಹೇಳಬಾರದು. "ದಯಿತೋ ಭ್ರಾತುಃ" ಎಂದಿರುವಂತೆ ಈ ದೃಷ್ಟಾಂತವು ಕೇವಲ ಅನುಗಮನಾರ್ಹತ್ವಕ್ಕಾಗಿಯೇ ಕೊಟ್ಟಿರುವುದು. ಹಾಗಲ್ಲವೆಂದರೆ, ಭರತನು ಶ್ರೀರಾಮನಿಗೆ ಅತ್ಯಂತ ಪ್ರೀತಿಪಾತ್ರನಲ್ಲವೇನು ? ಅಲ್ಲವೆಂದರೆ, ಶ್ರೀರಾಮನೇ ಹೇಳಿರುವ, "ತಾಮೇವೇಕ್ಷ್ವಾಕುನಾಥಸ್ಯ ಭರತಸ್ಯ ಕಥಾಂಕುರು" "ನ ಸರ್ವೇಭ್ರಾತರಸ್ತಾತ ಭವಂತಿ ಭರತೋಪಮಾಃ" ಮೊದಲಾದ ವಾಕ್ಯಗಳಿಗೆ ವಿರೋಧವು ಬರುತ್ತದೆ. "ದಯಿತೋ ಭ್ರಾತುಃ" ಮತ್ತು "ರೋಹಿಣೀಯಥಾ" ಎಂಬ ಕಡೆಗಳಲ್ಲಿ ಮುನಿಹೃದಯವು, "ರಾಮನಲ್ಲಿ ತಮಗಿದ್ದ ಪ್ರೀತ್ಯತಿಶಯದಿಂದಲೂ, ಸೌಕುಮಾರ್ಯಾತಿಶಯದಿಂದಲೂ ದಿವ್ಯ ಸುಖಾನುಭವ ಯೋಗ್ಯರಾದರೂ ಅದನ್ನು ತೊರೆದು ಸೀತಾಲಕ್ಷ್ಮಣರು ಅತನನ್ನು ಅನುಸರಿಸಿ ಬಂದರು" ಎಂದು ತಿಳಿಯಬೇಕು.

"ಹೃಷ್ಟಾಃ ಖಲು ಭವಿಷ್ಯಂತಿ ರಾಮಸ್ಯ ಪರಮಾಸ್ಸ್ತ್ರಿಯಃ । ಅಪ್ರಹೃಷ್ಟಾ ಭವಿಷ್ಯಂತಿ ಸ್ನುಷಾಸ್ತೇ ಭರತಕ್ಷಯೇ ॥" ಎಂಬ ಕಡೆ ಸ್ನುಷಾ (ಸೊಸೆಯರು) ಸಾಹಚರ್ಯದಿಂದ ಶ್ರೀರಾಮನಿಗೆ ಬಹಳಮಂದಿ ಭಾರ್ಯೆಯರಿದ್ದರೆಂದು ತಿಳಿಯುತ್ತದೆ. ಮತ್ತು, ಸುಂದರಕಾಂಡದಲ್ಲಿ ಸೀತಾವಾಕ್ಯ, "ಸ್ತ್ರೀಭಿಸ್ತ್ವಮನ್ಯೇ ವಿಪುಲೇಕ್ಷಣಾಭಿಸ್ತ್ವಂ ರಂಸ್ಯಸೇ ವೀತಭಯಃ ಕೃತಾರ್ಥಃ" ಎಂದಿದೆ. ಈ ಸಂದರ್ಭದಲ್ಲಿಯೂ "ಭುಜೈಃ ಪರಮನಾರೀಣಾಮಭಿಮೃಷ್ಟಮನೇಕಧಾ" ಎಂದು ಹೇಳಿದೆ. ಇವೆಲ್ಲದರವಿವೇಚನೆಯಿಂದ ಶ್ರೀರಾಮನಿಗೆ ಬಹು ಪತ್ನೀತ್ವವು ನಿಸ್ಸಂದೇಹವಾಗಿ ಕೂಡುತ್ತದೆ" ಎಂದೂ ಆಶಂಕಿಸಬಾರದು. "ರಾಮಸ್ಯ ಪರಮಾಃ ಸ್ತ್ರಿಯಃ" ಎಂಬ ಕಡೆ, ರಾಮಸಂಬಂಧಿಗಳಾದ ಕೌಸಲ್ಯಾ ಸೀತಾ, ಅವರ ದಾಸಿಯರು ಎಲ್ಲರೂ ಹೇಳಲ್ಪಡುವರು. ಅಥವಾ, ಬಹುಮಾನಾರ್ಥಕದಲ್ಲಿ ಬಹುವಚನ, "ಪರಮಾಸ್ಸ್ತ್ರಿಯಃ" ಎಂದೆ ಸೀತೆಯೆಂದೇ ಅರ್ಥ, "ತೇಸ್ನುಷಾಃ" ಎಂದಿರುವಂತೆ, ಭರತನಿಗೆ ಅನೇಕ ಭಾರ್ಯೆಯರಿರುವರೆಂಬುದಕ್ಕೆ ಎಲ್ಲಿಯೂ ಪ್ರಮಾಣವಿಲ್ಲವಷ್ಟೆ" "ತ್ವಂ ರಸ್ಯಸೇ" ಎಂದು ಸೀತೆಯು ಕೇವಲ ಲೌಕಿಕರೀತ್ಯಾ ಹೇಳಿರುವಳಾಗಲಿ ಮತ್ತೇನೂ ಇಲ್ಲ. "ಪರಮನಾರೀಣಾಂ" ಎಂದರೆ ಅಲಂಕಾರಮಾಡುವ ಪರಿಚಾರಿಣಿಯರು ಎಂದು ಮಾತ್ರ ಅರ್ಥವು. (ಗೋ)

ಶ್ರಯಂ ॥ ೫ ॥ ಅಸ್ಯತಾಚ ಪುನಸ್ಸವ್ಯಂ ಜ್ಯಾಘಾತನಿಗತತ್ವಚಂ । ದಕ್ಷಿಣೋ ದಕ್ಷಿಣಂ ಬಾಹುಂ ಮಹಾಪರಿಘಸನ್ನಿಭಂ ॥೬॥ ಗೋಸಹಸ್ರಪ್ರದಾತಾರಮುಪಧಾಯ ಮಹದ್ಭುಜಂ । "ಅದ್ಯ ಮೇ ಮರಣಂ ವಾಽಥ ತರಣಂ ಸಾಗರಸ್ಯವಾ" ॥೭॥ ಇತಿ ರಾಮೋ ಮತಿಂ ಕೃತ್ವಾ ಮಹಾಬಾಹುರ್ಮಹೋದಧಿಂ । ಅಧಿಶಿಶ್ಯೇ ಸವಿಧಿವತ್ಪ್ರಯತೋ ನಿಯತೋ ಮುನಿಃ ॥೯॥ ತಸ್ಯ ರಾಮಸ್ಯ ಸುಪ್ತಸ್ಯ ಕುಶಾಸ್ತೀರ್ಣೇ ಮಹೀತಲೇ । ನಿಯಮಾದಪ್ರಮತ್ತಸ್ಯ ನಿಶಾಸ್ತಿಸ್ರೋಽತಿಚಕ್ರಮುಃ ॥ ೧೦ ॥ ಸತ್ರಿರಾತ್ರೋ

ಸುಹೃ....ನಂ - ಸ್ನೇಹಿತರಿಗೆ ಆನಂದಕರವಾದ, ಧೀರ್ಘಂ - ಉದ್ದವಾಗಿರುವ, ಸಾಗ......ಯಂ - ಸಮುದ್ರವೇ ಅಂತವಾಗುಳ್ಳ ಭೂಮಂಡಲಕ್ಕೆ ಆಧಾರಭೂತವಾದ, ಪುನಃ - ಮತ್ತು, ಸವ್ಯಂ - ಅಪ್ರದಕ್ಷಿಣವಾಗಿ, ಅಸ್ಯತಾಚ - ಬಾಣಗಳನ್ನು ಬಿಡುತ್ತಿರುವ ತನ್ನಿಂದಲೇ, ಜಾಘಾ......ಚಂ - ಹೆದೆಯ ಸಂಘರ್ಷಣದಿಂದ ಹೋಗಲಾಡಿಸಲ್ಪಟ್ಟ ಚರ್ಮವುಳ್ಳ, ಮಹಾ......ಭಂ - ದೊಡ್ಡ ಪರಿಘಾಯುಧಕ್ಕೆ ಸಮಾನವಾದ, ಗೋಸ....ರಂ - ಅನೇಕ ಸಾವಿರ ಗೋವುಗಳನ್ನು ದಾನಮಾಡುತ್ತಿರುವ, ದಕ್ಷಿಣಂ ಬಾಹುಂ-ಬಲಭುಜವನ್ನು, ಉಪಧಾಯ-ತಲೆಗೆ ಆಧಾರವಾಗಿ ಮಾಡಿಕೊಂಡು, ಪ್ರತಿಶಿಶ್ಯೇ-ಮಲಗಿದನು ದಕ್ಷಿಣಃ - ದಾಕ್ಷಿಣ್ಯವಂತನಾದ, ಮಹಾಬಾಹುಃ - ಮಹಾ ಭುಜಬಲಪರಾಕ್ರಮಶಾಲಿಯಾದ, ರಾಮಃ- ಶ್ರೀರಾಮನು, ಪ್ರಯತಃ - ಪರಿಶುದ್ಧನಾಗಿ, ನಿಯತಃ - ಉಪವಾಸವ್ರತವುಳ್ಳವನಾಗಿ, ಮುನಿಃ - ಮೌನಶೀಲನಾಗಿ, ದಕ್ಷಿಣಂ - ಬಲಗಡೆಯಲ್ಲಿರುವ, ಮಹದ್ಭುಜಂ - ದೊಡ್ಡದಾದ ಭುಜವನ್ನು, ಉಪಧಾಯ - ತಲೆದಿಂಬಿನನ್ನಾಗಿ ಮಾಡಿಕೊಂಡು, ಅದ್ಯ - ಈಗ, ಮೇ - ನನಗೆ, ಮರಣಂವಾ - ಮರಣವಾದರೂ ಸರಿಯೇ, ಅಥವಾ - ಹಾಗಲ್ಲದಿದ್ದರೆ, ಸಾಗರಸ್ಯ - ಕಡಲಿನ, ತರಣಂವಾ - ದಾಟುವಿಕೆಯಾಗಲಿ ಎರಡರಲ್ಲಿ ಒಂದು ಸಿದ್ಧವೆಂದು, ಮತಿಂ - ಬುದ್ಧಿಯನ್ನು, ಕೃತ್ವಾ - ಮಾಡಿ, ಸಃ - ಆ ಶ್ರೀರಾಮನು, ವಿಧಿವತ್ - ಶಾಸ್ತ್ರೋಕ್ತವಾಗಿ, ಮಹೋದಧಿಂ - ಕಡಲನ್ನು ಕುರಿತು, ಅಧಿಶಿಶ್ಯೇ - ಅಭಿಮುಖವಾಗಿ ಮಲಗಿದನು. ॥ ೧-೯ ॥ ಕುಶಾಸ್ತೀರ್ಣೇ - ದರ್ಭೆಗಳಿಂದ ಹಾಸಲ್ಪಟ್ಟ, ಮಹೀತಲೇ - ನೆಲದಲ್ಲಿ, ಸುಪ್ತಸ್ಯ-ಮಲಗಿರುವ, ನಿಯಮಾತ್-ವ್ರತದ ದೆಶೆಯಿಂದ, ಅಪ್ರಮತ್ತಸ್ಯ-ಮೈಮರೆಯದಿರುವ, ತಸ್ಯರಾಮಸ್ಯ - ಆ ಶ್ರೀರಾಮನಿಗೆ, ತಿಸ್ರಃನಿಶಾಃ - ಮೂರು ರಾತ್ರಿಗಳು, ಅತಿಚಕ್ರಮುಃ - ಕಳೆದುವು. ॥ ೧೦ ॥ ತತ್ರ - ಆ ಕಡಲಿನ ದಡದಲ್ಲಿ, ತ್ರಿರಾತ್ರೋಷಿತಃ - ಮೂರು ರಾತ್ರಿಗಳು ಇದ್ದವ

ಸಮಾನವಾಗಿ ಶತ್ರುಗಳಿಗೆ ಮಹದ್ದುಃಖವನ್ನುಂಟುಮಾಡುವುದೂ, ಮೊಣಕಾಲಿನವರೆಗೂ ಪಸರಿಸಿ ಬಹು ದೀರ್ಘವಾದುದೂ, ಸಮುದ್ರಗಳೇ ಎಲ್ಲೆಯಾಗಿರುವ ಭೂಮಂಡಲಕ್ಕೆಲ್ಲಾ ಆಶ್ರಯವಾದುದೂ, ಪ್ರದಕ್ಷಿಣಾಕಾರವಾಗಿ ಬಾಣಗಳನ್ನು ಬಿಡುವುದೂ, ಅದರಿಂದಲೇ ನಾರಿಯಿಂದ ಸ್ವಲ್ಪಮಾತ್ರ ಹರಿದ ಚರ್ಮವುಳ್ಳುದೂ, ಅನೇಕ ಸಾವಿರ ಗೋದಾನಗಳನ್ನು ಮಾಡಿದ್ದುದೂ ಆದ ತನ್ನ ಆ ಬಲ ತೋಳನ್ನು ತಲೆಯಡಿಯಲ್ಲಿರಿಸಿಕೊಂಡು, "ಈಗ ನನಗೆ ಮರಣವಾಗಲಿ, ಸಮುದ್ರತರಣವಾಗಲಿ ಸಿದ್ಧಿಸಬೇಕು" ಎಂದು ಸಂಕಲ್ಪಿಸಿ ಬಹಳ ಶುಚಿಯಾಗಿ ಮನೋವಾಙ್ನಿಯಮಗಳಿಂದ ಆ ಸಮುದ್ರಕ್ಕೆದುರಾಗಿ ಪವಳಿಸಿದನು. ॥೧-೯॥ ಶ್ರೀರಾಮಚಂದ್ರನಿಂತು ನಿಯಮದಿಂದ ದರ್ಭೆಗಳನ್ನು ನೆಲದಮೇಲೆ ಹಾಸಿ ಪವಳಿಸಿರಲು ಮೂರು ಅಹೋರಾತ್ರಗಳು ಕಳೆದುಹೋದುವು. ನೀತಿವೇತ್ತನೂ, ಪರಮ ಧಾರ್ಮಿಕನೂ ಆದ ಶ್ರೀರಾಮನು ಆ ಸಮುದ್ರತೀರದಲ್ಲಿ ಮೂರು ಅಹೋರಾತ್ರಗಳು ದರ್ಭಶಾಯಿಯಾಗಿ

ಷಿತಸ್ತತ್ರ ನಯಜ್ಞೋ ಧರ್ಮವತ್ಸಲಃ । ಉಪಾಸತ ತದಾ ರಾಮಸ್ಸಾಗರಂ ಸರಿತಾಂ ಪತಿಂ ॥೧೧॥ ¶ ನಚ ದರ್ಶಯತೇ ಮಂದಸ್ತದಾ ರಾಮಸ್ಯ ಸಾಗರಃ । ಪ್ರಯತೇನಾಪಿ ರಾಮೇಣ ಯಥಾರ್ಹಮಭಿಪೂಜಿತಃ ॥ ೧೨ ॥ ಸಮುದ್ರಸ್ಯ ತತಃ ಕ್ರುದ್ಧೋ ರಾಮೋ ರಕ್ತಾಂತಲೋಚನಃ । ಸಮೀಪಸ್ಥಮುವಾಚೇದಂ ಲಕ್ಷ್ಮಣಂ ಶುಭಲಕ್ಷಣಂ । "ಅವಲೇಪಸ್ಸಮುದ್ರಸ್ಯ ನದರ್ಶಯತಿ ಯತ್ಸ್ವಯಂ ॥ ೧೩ ॥ ಪ್ರಶಮಶ್ಚ ಕ್ಷಮಾಚೈವ ಆರ್ಜವಂ ಪ್ರಿಯವಾದಿತಾ । ಅಸಾಮರ್ಥ್ಯಂ ಫಲಂತ್ಯೇತೇ ನಿರ್ಗುಣೇಷು ಸತಾಂ

---

ನಾಗಿ, ನಯಜ್ಞಃ - ವಿನಯವನ್ನು ತಿಳಿದಿರುವ, ಧರ್ಮವತ್ಸಲಃ - ಶರಣಾಗತಸಂರಕ್ಷಣೆ ಮಾಡುವ ಧರ್ಮದಲ್ಲಿ ವಾತ್ಸಲ್ಯವುಳ್ಳ, ಸರಾಮಃ - ಆ ಶ್ರೀರಾಮನು, ಸರಿತಾಂ - ನದಿಗಳಿಗೆ ಪತಿಂ - ಒಡೆಯನಾದ, ಸಾಗರಂ - ಕಡಲನ್ನು, ತದಾ - ಆ ಕಾಲದಲ್ಲಿ, ಉಪಾಸತ - ಪ್ರಾರ್ಥಿಸಿದನು. ॥ ೧೧ ॥ ತದಾ - ಆ ಕಾಲದಲ್ಲಿ, ಮಂದಃ - ಜಡಬುದ್ಧಿಯುಳ್ಳ, ಸಾಗರಃ - ಸಮುದ್ರನು, ಯಥಾರ್ಹಂ - ಯಥಾಯೋಗ್ಯ ವಾಗಿ, ಪ್ರಯತೇನ - ಪರಿಶುದ್ಧನಾದ, ರಾಮೇಣ - ಶ್ರೀರಾಮನಿಂದ, ಅಭಿಪೂಜಿತೋಪಿ - ಪೂಜಿಸ ಲ್ಪಟ್ಟವನಾದರೂ, ರಾಮಸ್ಯ - ಶ್ರೀರಾಮನಿಗೆ, ಆತ್ಮಾನಂ - ಕನ್ನನ್ನು, ನದರ್ಶಯತೇಚ - ತೋರಿಸದೇ ಹೋದನಷ್ಟೆ. ॥ ೧೨ ॥ ತತಃ-ಬಳಿಕ, ಸಮುದ್ರಸ್ಯ ಸಮುದ್ರನ ವಿಷಯವಾಗಿ, ಕ್ರುದ್ಧಃ-ಕೋಪಗೊಂಡ, ರಾಮಃ - ಶ್ರೀರಾಮನು, ರಕ್ತಾಂತಲೋಚನಃ - ಕೆಂಪಾದ ಕಣ್ಣಿನ ಕೊನೆಗಳುಳ್ಳವನಾಗಿ, ಸಮೀ ಪಸ್ಥಂ - ಸಮೀಪವರ್ತಿಯಾದ, ಶುಭಲಕ್ಷಣಂ - ಒಳ್ಳೆಯ ರಾಜಲಕ್ಷಣಗಳುಳ್ಳ, ಲಕ್ಷ್ಮಣಂ - ಲಕ್ಷ್ಮಣ ನನ್ನು ಕುರಿತು, ಇದಂ - ಈ ಮಾತನ್ನು, ಉವಾಚ - ಹೇಳಿದನು. ॥ ೧೩ ॥ ಸ್ವಯಂ - ತಾನು, ಆತ್ಮಾನಂ - ತನ್ನನ್ನು, ನದರ್ಶಯತೀತಿಯತ್ - ತೋರಿಸದಿರುವನೆಂಬುದಾವದುಂಟೋ, ಅಯಂ - ಇದು, ಸಮುದ್ರಸ್ಯ - ಸಮುದ್ರನಿಗೆ, ಅವಲೇಪಃ - ಗರ್ವವು. ॥ ೧೩ ॥ ಪ್ರಶಮಶ್ಚ - ಕ್ರೋಧವಿಲ್ಲ ದಿರುವಿಕೆಯು, ಕ್ಷಮಾಚೈವ - ಅಪರಾಧದ ಸಹನೆಯು, ಆರ್ಜವಂ - ಪರಚಿತ್ತಾನುವರ್ತನವೂ, ಪ್ರಿಯಭಾಷಿತಾ - ಇಷ್ಟವಾದ ಮಾತನ್ನು ಹೇಳುವಿಕೆಯೂ, ಏತೇ - ಇವುಗಳು, ಸತಾಂ - ಸತ್ಪುರುಷರ, ಗುಣಾಃ - ಗುಣಗಳು, ನಿರ್ಗುಣೇಷು - ಗುಣಶೂನ್ಯರಲ್ಲಿ, ಅಸಾಮರ್ಥ್ಯಂ - ಅಸಾಮರ್ಥ್ಯವನ್ನು,

---

ನದನದೀಪತಿಯಾದ ಸಮುದ್ರರಾಜನನ್ನು ಎಡೆಬಿಡದೆ ಉಪಾಸಿಸುತ್ತಿದ್ದನು. ಹಾಗೆ ಆತನು ಶುಚಿಯಾಗಿ ಯಥಾಯೋಗ್ಯವಾಗಿ ಎಷ್ಟು ಪೂಜಿಸಿದರೂ, ಮೂಢನಾದ ಆ ಸಾಗರನು ಆತನಿಗೆ ಪ್ರತ್ಯಕ್ಷನಾಗಲಿಲ್ಲವು. ಆಗ ಶ್ರೀರಾಮನು ಅವನಮೇಲೆ ಪರಮ ಕ್ರುದ್ಧನಾಗಿ, ಕಡೆಗಣ್ಣು ಗಳನ್ನು ಕೆಂಪಾಗಿಸಿಕೊಂಡು ತನ್ನ ಸಮೀಪದಲ್ಲಿಯೇ ಇದ್ದ ಶುಭಲಕ್ಷಣಸಂಪನ್ನನಾದ ಲಕ್ಷ್ಮಣಸ್ವಾಮಿಯನ್ನು ಕುರಿತು ಹೀಗೆಂದನು. ॥೧೦-೧೩॥ "ತಮ್ಮಾ ಲಕ್ಷ್ಮಣನೇ! ಇಷ್ಟಾ ದರೂ ಈ ಸಮುದ್ರರಾಜನು ನನ್ನಲ್ಲಿ ಪ್ರಸನ್ನನಾಗದಿರುವನು. ನೋಡಿದೆಯಾ ಇವನಿಗೆ

---

¶ ಇಲ್ಲಿ, "ಶ್ರೀರಾಮನು ಸಾಗರದಲ್ಲಿ ಸಮ್ಯಕ್ಶರಣಾಗತಿಯನ್ನು ಮಾಡಲಿಲ್ಲವೆ? ಆ ಶರಣಾಗತಿಗೆ ಫಲವಾಗಲಿಲ್ಲ ವೇಕೆ ?" ಎಂಬ ಸಂಶಯವು ಬರುವುದು. ಇದಕ್ಕೆ ಸಮಾಧಾನವು ಹೀಗೆ,—ಲೋಕದಲ್ಲಿ ಆಕಿಂಚನನಾದವನು ಮಾತ್ರ ಶರಣಾಗತಿಯನ್ನು ಮಾಡಲು ಅಧಿಕಾರಿಯಾಗಲಿ, ಸರ್ವವಿಧದಲ್ಲಿಯೂ ಸಮರ್ಥನೂ, ಸರ್ವಶರಣ್ಯನೂ ಆದವನಲ್ಲ. ಶ್ರೀರಾಮನು ಶರಣಾಗತಿಯನ್ನು ಮಾಡುವುದಕ್ಕೆ ಅನಧಿಕಾರಿಯೇ. ಆದುದರಿಂದಲೇ ಅವನು ಮಾಡಿದ ಶರಣಾಗತಿಗೆ ಫಲವಾಗಲಿಲ್ಲ. ಬ್ರಾಹ್ಮಣನಾದವನು ರಾಜಸೂಯವನ್ನು ಮಾಡಿದರೆ ಫಲವು ದೊರಕುವುದೆ ? ರಾಜನು ರಾಜಸೂಯ ವನ್ನು ಮಾಡಿದರಲ್ಲವೆ ಫಲವು ದೊರಕುವುದು ? ಹಾಗೆಯೆ ಇದೂ ಕೂಡ. (ಗೋ)

ಗುಣಾಃ ॥ ೧೪ ॥ ಆತ್ಮಪ್ರಶಂಸಿನಂ ದುಷ್ಟಂ ಧೃಷ್ಟಂ ವಿಪರಿಧಾವಕಂ । ಸರ್ವತ್ರೋತ್ಸೃಷ್ಟದಂಡಂಚ ಲೋಕಸ್ಸತ್ಕುರುತೇ ನರಂ ॥ ೧೫ ॥ ನಸಾಮ್ನಾಶಕ್ಯತೇ ಕೀರ್ತಿರ್ನಸಾಮ್ನಾ ಶಕ್ಯತೇ ಯಶಃ । ಪ್ರಾಪ್ತುಂ ಲಕ್ಷ್ಮಣ ಲೋಕೇಽಸ್ಮಿನ್ ಜಯೋವಾ ರಣಮೂರ್ಧನಿ ॥ ೧೬ ॥ ಅದ್ಯ ಮದ್ಬಾಣನಿರ್ಭಿನ್ನೈರ್ಮಕರೈರ್ಮಕರಾಲಯಂ । ನಿರುದ್ಧತೋಯಂ ಸೌಮಿತ್ರೇ! ಪ್ಲವದ್ಭಿಃ ಪಶ್ಯ ಸರ್ವತಃ ॥ ೧೭ ॥ ಮಹಾಭೋಗಾನಿ ಮತ್ಸ್ಯಾನಾಂ ಕರಿಣಾಂಚ ಕರಾನಿಹ । ಭೋಗಿನಾಂ ಪಶ್ಯ ನಾಗಾನಾಂ ಮಯಾ

ಫಲಂತಿ - ಸೂಚನೆ ಮಾಡುತ್ತವೆ. ॥ ೧೪ ॥ ಲೋಕಃ - ಲೋಕದಲ್ಲಿರುವ ಅಜ್ಞರು, ಆತ್ಮಪ್ರಶಂಸಿನಂ - ಆತ್ಮಸ್ತುತಿಯಲ್ಲಿ ಆಸಕ್ತನಾದ, ದುಷ್ಟಂ - ವಂಚಕನಾದ, ಧೃಷ್ಟಂ - ಧೂರ್ತನಾದ, (ಗೋ) - ದಯಾಹೀನನಾದ, ವಿಪರಿಧಾವಕಂ - ಒಬ್ಬರನ್ನೂ ಹತ್ತಿರ ಸೇರಿಸದೇ ಓಡಿಸುವ, ಸರ್ವತ್ರ - ಗುಣಶೂನ್ಯರಲ್ಲಿಯೂ ಗುಣವಂತರಲ್ಲಿಯೂ, ಉತ್ಸೃಷ್ಟದಂಡಂಚ - ಮಾಡಲ್ಪಟ್ಟ ದಂಡವುಳ್ಳ, ನರಂ - ಮನುಷ್ಯನನ್ನು, ಸತ್ಕುರುತೇ - ಬಹುಮಾನಿಸುತ್ತಾರೆ, ಹೇ ಲಕ್ಷ್ಮಣ - ಎಲೈ ಲಕ್ಷ್ಮಣನೇ, ಅಸ್ಮಿನ್‌ಲೋಕೇ - ಈ ಭೂಲೋಕದಲ್ಲಿ, ಸಾಮ್ನಾ - ಸಾಮೋಪಾಯದಿಂದ, ಕೀರ್ತಿಃ - ಗುಣವಂತನೆಂದು ಪ್ರಖ್ಯಾತಿಯು, ಪ್ರಾಪ್ತುಂ - ಹೊಂದುವವಕ್ಕೆ, ನಶಕ್ಯತೇ - ಆಗುವುದಿಲ್ಲ, ಸಾಮ್ನಾ - ಸಾಮೋಪಾಯದಿಂದ, ಯಶಃ - ದಾನದಿಂದ ಹುಟ್ಟಿದ ಖ್ಯಾತಿಯು, ನಶಕ್ಯತೇ - ಸಾಧ್ಯವಲ್ಲವು, ರಣಮೂರ್ಧನಿ - ಯುದ್ಧರಂಗದಲ್ಲಿ, ಜಯೋವಾ - ಜಯವೇ ಆಗಲಿ, ಪ್ರಾಪ್ತುಂ - ಹೊಂದುವುದಕ್ಕೆ, ನಶಕ್ಯತೇ - ಸಾಧ್ಯವಾಗುವುದಿಲ್ಲವು. ॥ ೧೫-೧೬ ॥ ಹೇ ಸೌಮಿತ್ರೇ - ಎಲೈ ಸುಮಿತ್ರಾದೇವಿಯ ಮಗನೆ, ಅದ್ಯ - ಈಗ, ಮದ್ಬಾ....ನ್ನೈಃ - ನನ್ನ ಬಾಣಗಳಿಂದ ಕತ್ತರಿಸಲ್ಪಟ್ಟ, ಸರ್ವತಃ - ಎಲ್ಲಾ ಪ್ರದೇಶಗಳಲ್ಲಿಯೂ, ಪ್ಲವದ್ಭಿಃ - ತೇಲಾಡುತ್ತಿರುವ, ಮಕರೈಃ - ನೆಗಳುಗಳಿಂದ ತುಂಬಿರುವ, ಮಕರಾಲಯಂ - ಸಮುದ್ರವನ್ನು, ನಿರುದ್ಧತೋಯಂ - ತಡೆಮಾಡಲ್ಪಟ್ಟ ಉದಕವುಳ್ಳದ್ದನ್ನಾಗಿ, ಪಶ್ಯ - ನೋಡು. ॥ ೧೭ ॥ ಹೇ ಲಕ್ಷ್ಮಣ - ಎಲೈ ಲಕ್ಷ್ಮಣನೇ, ಮತ್ಸ್ಯಾನಾಂ - ದೊಡ್ಡ ಮೀನುಗಳ, ಮಹಾಭೋಗಾನಿ - ದೊಡ್ಡ ಶರೀರಗಳನ್ನು, ಕರಿಣಾಂ - ಆನೆಗಳ, ಕರಾಂಶ್ಚ - ಸೊಂಡಿಲಗಳನ್ನು, ಇಹ - ಈ ಸಮುದ್ರದಲ್ಲಿ, ಭೋಗಿನಾಂ - ದೊಡ್ಡ ಶರೀರಗಳುಳ್ಳ, ನಾಗಾನಾಂ - ಸರ್ಪಗಳ, ಮಹಾಭೋಗಾನಿ - ದೊಡ್ಡ ಶರೀರ

ಎಷ್ಟು ಗರ್ವವಿರುವುದೆಂಬುದನ್ನು? ಕೋಪವಿಲ್ಲದಿರುವಿಕೆಯೂ, ಅಪರಾಧವನ್ನು ಸಹಿಸಿಕೊಳ್ಳುವಿಕೆಯೂ, ಕುಟಿಲವಿಲ್ಲದಿರುವಿಕೆಯೂ, ಪ್ರಿಯವಚನಗಳನ್ನಾಡುವಿಕೆಯೂ ಎಂಬ ಇವೆಲ್ಲವೂ ಸತ್ಪುರುಷರ ಗುಣಗಳು. ಇವು ದುಷ್ಟರಾದವರಿಗೆ ಶಕ್ತಿಹೀನತೆಯಂತೆ ತೋರುವುದು. ಇದೂ ಅಲ್ಲದೆ, ಲೋಕದಲ್ಲಿ ಜನಗಳು, ಆತ್ಮಸ್ತುತಿ ಮಾಡಿಕೊಳ್ಳುವವನೂ, ಮಾಯೆಯಿಲ್ಲದವನೂ, ದುಷ್ಟನೂ, ಅಧಿಕ ಪ್ರಸಂಗಿಯಾದವನೂ, ಸದಸದ್ವಿವೇಚನೆಯಿಲ್ಲದವನೂ ಆದವನನ್ನೇ ಗೌರವಿಸುವರು. ಲಕ್ಷ್ಮಣಾ !! ಈ ಲೋಕದಲ್ಲಿ ಕೀರ್ತಿಯಾಗಲಿ, ಯಶಸ್ಸಾಗಲಿ, ರಣದಲ್ಲಿ ಜಯವಾಗಲಿ ಒಳ್ಳೆಯ ತನದಿಂದ ಹೊಂದಲಾಗುವುದಿಲ್ಲವು. ನೋಡು ; ಲಕ್ಷ್ಮಣಾ! ಈ ಕ್ಷಣದಲ್ಲಿಯೇ ನನ್ನ ಬಾಣಪರಂಪರೆಯಿಂದ ಕತ್ತರಿಸಲ್ಪಟ್ಟು ತೇಲುತ್ತಿರುವ ಮೊಸಳೆಗಳಿಂದ ಸಮುದ್ರವೆಲ್ಲಾ ತುಂಬಿಹೋಗುವಂತೆ ಮಾಡುವೆನು. ॥ ೧೪–೧೭ ॥ ದೊಡ್ಡ ದೇಹಗಳುಳ್ಳ ಸರ್ಪಗಳೂ, ಗಜಾಕಾರಗಳಾದ ಮಹಾ ಮತ್ಸ್ಯಗಳೂ ನನ್ನ ಬಾಣಪರಂಪರೆಯಿಂದ ನಿಕೃತ್ತವಾಗಿ ಈ ಸಾಗರದ ಎಲ್ಲೆಡೆಗಳಲ್ಲಿಯೂ ತೇಲಿಹೋಗುವುದನ್ನು ನೀನೀಗಲೇ

ಭಿನ್ನಾನಿ ಲಕ್ಷ್ಮಣ! || ೧೮ || ಸಶಂಖಶುಕ್ತಿಕಾಜಾಲಂ ಸಮೀನಮಕರಂ ಶರೈಃ |
ಅದ್ಯ ಯುದ್ಧೇನ ಮಹತಾ ಸಮುದ್ರಂ ಪರಿಶೋಷಯೇ || ೧೯ || ಕ್ಷಮಯಾಹಿ
ಸಮಾಯುಕ್ತಂ ಮಾಮಯಂ ಮಕರಾಲಯಃ | ಅಸಮರ್ಥಂ ವಿಜಾನಾತಿ ಧಿಕ್
ಕ್ಷಮಾಮೀದೃಶೇ ಜನೇ || ೨೦ || ನದರ್ಶಯತಿ ಸಾಮ್ನಾ ಮೇ ಸಾಗರೋ ರೂಪ
ಮಾತ್ಮನಃ || ೨೧ || ಚಾಪಮಾನಯ ಸೌಮಿತ್ರೇ! ಶರಾಂಶ್ಚಾಶೀವಿಷೋಪಮಾರ್ |
ಸಾಗರಂ ಶೋಷಯಿಷ್ಯಾಮಿ ಪದ್ಭ್ಯಾಂ ಯಾಂತು ಪ್ಲವಂಗಮಾಃ || ೨೨ || ಅದ್ಯಾಕ್ಷೋ

---

ಗಳನ್ನು, ಮಯಾ - ನನ್ನಿಂದ, ಭಿನ್ನಾನಿ - ಭೇದಿಸಲ್ಪಟ್ಟವುಗಳನ್ನಾಗಿ, ಪಶ್ಯ - ನೋಡು. || ೧೮ || ಅದ್ಯ - ಈಗ, ಮಹತಾ - ಮಹತ್ತರವಾದ, ಯುದ್ಧೇನ - ಕಾಳಗದಿಂದ, ಸಶಂ....ಲಂ - ಶಂಖಗಳಿಂದಲೂ, ಮುತ್ತಿನ ಚಿಪ್ಪುಗಳ ತಂಡಗಳಿಂದಲೂ ಕೂಡಿದ, ಸಮೀನಮಕರಂ - ಮೀನುಗಳಿಂದಲೂ, ನೆಗಳುಗಳಿಂದಲೂ ಕೂಡಿದ, ಸಮುದ್ರಂ - ಕಡಲನ್ನು, ಶರೈಃ - ಬಾಣಗಳಿಂದ, ಪರಿಶೋಷಯೇ - ಬತ್ತಿಸುವೆನು. ಹಿ - ಯಾವ ಕಾರಣದಿಂದ, ಮಕರಾಲಯಃ - ಮಕರಗಳಿಗೆಲ್ಲಾ ಮನೆಯಾದ, ಅಯಂ-ಈ ಸಮುದ್ರವು, ಕ್ಷಮಯಾ-ಅಪರಾಧಸಹನೆಯಿಂದ, ಸಮಾಯುಕ್ತಂ-ಕೂಡಿರುವ, ಸಮುದ್ರಂ - ಕಡಲನ್ನು, ಶರೈಃ - ಬಾಣಗಳಿಂದ, ಪರಿಶೋಷಯೇ - ಒಣಗಿಸಿಬಿಡುವೆನು. || ೧೯ || ಹಿ - ಯಾವ ಕಾರಣದ ದೆಸೆಯಿಂದ, ಮಕರಾಲಯಃ - ಮಕರಗಳಿಗೆಲ್ಲಾ ಮನೆಯಾದ, ಅಯಂ - ಈ ಸಮುದ್ರನು, ಕ್ಷಮಯಾ - ಅಪರಾಧಸಹನೆಯಿಂದ, ಸಮಾಯುಕ್ತಂ - ಕೂಡಿರುವ, ಮಾಂ - ನನ್ನನ್ನು, ಅಸಮರ್ಥಂ - ಶಕ್ತಿಹೀನನನ್ನಾಗಿ, ವಿಜಾನಾತಿ - ತಿಳಿದುಕೊಂಡನೋ, ಈದೃಶೇ ಜನೇ - ಇಂಥಾ ಜನರಲ್ಲಿ, ಕ್ಷಮಾಂ - ಸಹನೆಯನ್ನು, ಧಿಕ್ - ನಿಂದಿಸು. || ೨೦ || ಸಾಗರಃ - ಸಮುದ್ರನು, ಆತ್ಮನಃ - ತನ್ನ, ರೂಪಂ - ಸ್ವರೂಪವನ್ನು, ಮೇ - ನನಗೆ, ಸಾಮ್ನಾ - ಸಾಮೋಪಾಯದಿಂದ, ನದರ್ಶಯತಿ - ತೋರಿಸುವದಿಲ್ಲವು. || ೨೧ || ಹೇ ಸೌಮಿತ್ರೇ - ಎಲೈ ಸುಮಿತ್ರಾದೇವಿಯ ಕುವರನೇ, ಚಾಪಂ - ಬಿಲ್ಲನ್ನು, ಆಶೀವಿಷೋಪಮಾಃ - ಸರ್ಪಗಳಿಗೆ ಸಮಾನಗಳಾದ, ಶರಾಶ್ಚ - ಬಾಣಗಳನ್ನೂ, ಆನಯ - ತೆಗದುಕೊಂಡುಬಾ, ಸಾಗರಂ - ಕಡಲನ್ನು, ಶೋಷಯಿಷ್ಯಾಮಿ - ಒಣಗಿಸುವೆನು, ಪ್ಲವಂಗಮಾಃ - ಕಪಿಗಳು, ಪದ್ಭ್ಯಾಂ - ಕಾಲುಗಳಿಂದಲೇ, ಯಾಂತು - ನಡೆದು ಹೋಗಲಿ, ಅದ್ಯ- ಈಗ, ಅಕ್ಷೋಭ್ಯಮಪಿ - ಕ್ಷೋಭಿಸಲಸಾಧ್ಯನಾದರೂ, ಕೃದ್ಧಃ ಕೋಪಿಷ್ಠನಾಗಿ,

---

ನೋಡುವೆ; ಶಂಖಶುಕ್ತಿಸಮೂಹಗಳಿಂದೊಪ್ಪುತ್ತಿರುವುದೂ, ಮತ್ಸ್ಯಗಳಿಂದಲೂ, ಮೊಸಳೆಗಳಿಂದಲೂ ಕೂಡಿರುವುದೂ ಆದ ಈ ಸಾಗರವನ್ನು ನನ್ನ ಬಾಣಗಳಿಂದ ಬತ್ತಿಹೋಗುವಂತೆ ಮಾಡುವೆನು. ನಾನು ಬಹಳ ಶಾಂತನಾಗಿದ್ದುದರಿಂದಲ್ಲವೇ ಈ ಸಮುದ್ರರಾಜನು ನನ್ನನ್ನು ಶಕ್ತಿಹೀನನೆಂದು ತಿಳಿದಿರುವುದು? ಆದುದರಿಂದ ಇಂತಹ ದುಷ್ಟರ ವಿಷಯದಲ್ಲಿ ಸಾಂತ್ವನವು ಎಷ್ಟುಮಾತ್ರಕ್ಕೂ ತಕ್ಕುದೆನಿಸುವುದಿಲ್ಲ. ಸಾಮೋಪಾಯದಿಂದ ಎಷ್ಟುನೋಡಿದರೂ ಈ ಸಾಗರನು ನನಗೆ ಪ್ರತ್ಯಕ್ಷನಾಗದಿರುವನು. ಲಕ್ಷ್ಮಣಾ! ತಡೆಮಾಡಬೇಡ, ಧನುಸ್ಸನ್ನೂ, ಮಹಾ ಸರ್ಪಸಮಾನಗಳಾದ ಬಾಣಗಳನ್ನೂ ತೆಗೆದುಕೊಂಡುಬಾ. ಈಗಲೇ ಈ ಸಮುದ್ರವನ್ನು ಶೋಷಿಸಿ ಬಿಡುವೆನು. ಆಮೇಲೆ ವಾನರರು ಕಾಲ್ನಡಿಗೆಯಿಂದಲೇ ಲಂಕಾನಗರಕ್ಕೆ ಹೋಗುವಂತೆ ಮಾಡುವೆನು. ಮಹಾ ಕುಪಿತನಾದ ನಾನೀಗ ಅಕ್ಷೋಭ್ಯವಾದ ಈ ಸಮುದ್ರವನ್ನು ಕ್ಷೋಭೆಗೊಳಿಸುವೆನು. || ೧೮–೨೨ || ಇಷ್ಟುಮಾತ್ರ

ಕ್ಷೋಭ್ಯಮಪಿ ಕ್ರುದ್ಧಃ ಕ್ಷೋಭಯಿಷ್ಯಾಮಿ ಸಾಗರಂ । ವೇಲಾಸು ಕೃತಮರ್ಯಾದಂ ಸಹಸೋರ್ಮಿಸಮಾಕುಲಂ । ನಿರ್ಮರ್ಯಾದಂ ಕರಿಷ್ಯಾಮಿ ಸಾಯಕೈರ್ವರುಣಾಲಯಂ ॥ ೨೩ ॥ ಮಹಾರ್ಣವಂ ಕ್ಷೋಭಯಿಷ್ಯೇ ಮಹಾದಾನವಸಂಕುಲಂ । ಏವಮುಕ್ತ್ವಾ ಧನುಷ್ಪಾಣಿಃ ಕ್ರೋಧವಿಸ್ಫಾರಿತೇಕ್ಷಣಃ । ಬಭೂವ ರಾಮೋ ದುರ್ಧರ್ಷೋ ಯುಗಾಂತಾಗ್ನಿರಿವ ಜ್ವಲನ್ ॥ ೨೪-೨೫ ॥ ಸಂಪೀಡ್ಯಚ ಧನುರ್ಘೋರಂ ಕಂಪಯಿತ್ವಾ ಶರೈರ್ಜಗತ್ । ಮುಮೋಚ ವಿಶಿಖಾನುಗ್ರಾನ್ ವಜ್ರಾನಿವ ಶತಕ್ರತುಃ ॥೨೬॥ ತೇ ಜ್ವಲಂತೋ ಮಹಾವೇಗಾಸ್ತೇಜಸಾ ಸಾಯಕೋತ್ತಮಾಃ । ಪ್ರವಿಶಂತಿ ಸಮು

ಸಾಗರಂ - ಸಮುದ್ರವನ್ನು, ಕ್ಷೋಭಯಿಷ್ಯಾಮಿ - ಒಣಗಿಸಿಬಿಡುವೆನು. ॥ ೨೨ ॥ ವೇಲಾಸು - ತೀರಗಳಲ್ಲಿಯೂ, ಕೃತಮರ್ಯಾದಂ - ಮಾಡಲ್ಪಟ್ಟ ಅವಧಿಯುಳ್ಳ, ಊರ್ಮಿಸಮಾಕುಲಂ- ತೆರೆಗಳಿಂದ ತುಂಬಿರುವ, ವರುಣಾಲಯಂ - ಸಮುದ್ರವನ್ನು, ಸಹಸಾ - ಜಾಗ್ರತೆಯಾಗಿ, ಸಾಯಕೈಃ - ಬಾಣಗಳಿಂದ, ನಿರ್ಮರ್ಯಾದಂ- ಪಾರಗಳೇ ಇಲ್ಲದಂತೆ, ಕರಿಷ್ಯಾಮಿ-ಮಾಡುವೆನು. ॥೨೩॥ ಮಹಾ.... ಲಂ- ಮಹಾ ದೈತ್ಯರಿಂದ ವ್ಯಾಪ್ತವಾದ, ಮಹಾರ್ಣವಂ - ಮಹಾ ಸಮುದ್ರವನ್ನು, ಕ್ಷೋಭಯಿಷ್ಯೇ - ಕ್ಷೋಭೆಗೊಳಿಸುತ್ತೇನೆ. ॥ ೨೪ ॥ ಏವಂ - ಈ ಪರಿಯಾಗಿ, ಉಕ್ತ್ವಾ - ಹೇಳಿ, ಧನುಷ್ಪಾಣಿಃ - ಬಿಲ್ಲನ್ನು ಹಸ್ತದಲ್ಲಿ ಹಿಡಿದು, ಕ್ರೋಧ....ಣಃ-ಕೋಪದಿಂದ ತಿರುಗಿಸಲ್ಪಟ್ಟ ನೇತ್ರಗಳುಳ್ಳ, ದುರ್ಧರ್ಷಃ- ತಿರಸ್ಕರಿಸಲಸಾಧ್ಯನಾದ, ರಾಮಃ - ಶ್ರೀರಾಮನು, ಯುಗಾಂತಾಗ್ನಿರಿವ - ಪ್ರಳಯಾಗ್ನಿಯಂತೆ, ಜ್ವಲನ್ - ಜಾಜ್ವಲ್ಯಮಾನನು, ಬಭೂವ - ಆದನು. ॥೨೫॥ ಘೋರಂ - ಭಯಂಕರವಾದ, ಧನುಃ - ಬಿಲ್ಲನ್ನು, ಸಂಪೀಡ್ಯಚ - ಘಟ್ಟಿಯಾಗಿ ಹಿಡಿದು, ಶರೈಃ - ಬಾಣಗಳಿಂದ, ಜಗತ್ - ಲೋಕವನ್ನು, ಕಂಪಯಿತ್ವಾ - ನಡುಗಿಸಿ, ಶತಕ್ರತುಃ - ದೇವೇಂದ್ರನು, ವಜ್ರಾನಿವ - ವಜ್ರಾಯುಧಗಳನ್ನಂತೆ, ಉಗ್ರಾನ್ - ಭಯಂಕರಗಳಾದ, ವಿಶಿಖಾನ್ - ಬಾಣಗಳನ್ನು, ಮುಮೋಚ - ಬಿಟ್ಟನು. ॥೨೬॥ ಮಹಾವೇಗಾಃ - ವೇಗವತ್ತಾಗಿ, ತೇಜಸ್ಸಿನಿಂದ, ಜ್ವಲಂತಃ ಪ್ರಜ್ವಲಿಸುತ್ತಿರುವ, ತೇಸಾಯಕೋತ್ತಮಾಃ- ಆ ಶ್ರೇಷ್ಠವಾದ ಬಾಣಗಳು, ತ್ರಸ್ತಪನ್ನಗಂ - ಭಯದಿಂದ ಹೆದರಿದ ಸರ್ಪಗಳುಳ್ಳ, ಸಮುದ್ರಸ್ಯ -

ವಲ್ಲದೆ ತನ್ನ ಎಲ್ಲೆಯನ್ನು ಮೀರದುದೆಂದು ಪ್ರಸಿದ್ಧವಾದುದೂ, ತರಂಗಮಾಲೆಯಿಂದ ನಿಬಿಡೀಕೃತವಾದುದೂ ಆದ ಈ ಸಮುದ್ರವನ್ನು ನನ್ನ ಬಾಣಗಳಿಂದ ಅತಿ ಶೀಘ್ರವಾಗಿ ಎಲ್ಲೆ ಇಲ್ಲದುದನ್ನಾಗಿ ಮಾಡಿಬಿಡುವೆನು. ಅಯ್ಯಾ ಲಕ್ಷ್ಮಣನೇ! ಇದರಲ್ಲಿ ವಾಸಮಾಡಿಕೊಂಡಿರುವ ದಾನವರ ಸಮೇತವಾಗಿ ಇದನ್ನು ಕ್ಷೋಭೆಗೊಳಿಸಿಬಿಡುವೆನು" ಎಂದು ಹೇಳಿದನು. ಶ್ರೀರಾಮಮೂರ್ತಿಯು ಹೀಗೆ ನುಡಿದು ಧನುರ್ಬಾಣಗಳನ್ನು ಧರಿಸಿ, ಬಹಳವಾದ ಕೋಪದಿಂದ ಕಣ್ಣುಗಳನ್ನು ಗಿರಗಿರನೆ ತಿರುಗಿಸುತ್ತ, ಪ್ರಳಯಕಾಲದ ಜ್ವಾಲಾನಲನಂತೆ ಪ್ರಜ್ವಲಿಸುತ್ತ, ಇತರರಿಂದ ನೋಡಲಶಕ್ಯನಾಗಿಬಿಟ್ಟನು. ಶ್ರೀರಾಮನು ಸ್ವಲ್ಪಕಾಲ ಹಾಗಿದ್ದು ಮಹಾ ಭಯಂಕರವಾಗಿ ಜ್ಯಾಘೋಷವನ್ನು ಮಾಡಿ ಧನುಸ್ಸನ್ನು ದೃಢವಾಗಿ ಮುಷ್ಟಿಯಲ್ಲಿ ಹಿಡಿದು ನಿಲ್ಲಿಸಿಕೊಂಡು, ಬಾಣಗಳನ್ನು ತೆಗೆದು ಲೋಕಲೋಕಗಳೇ ಗಡಗಡನೆ ನಡುಗುತ್ತಿರಲು, "ದೇವೇಂದ್ರನು ವಜ್ರಾಯುಧಗಳನ್ನು ಬಿಡುವಂತೆ" ಮಹಾ ತೀಕ್ಷ್ಣವಾದ ಆ ಬಾಣಗಳನ್ನು ಪ್ರಯೋಗಿಸಿಬಿಟ್ಟನು. ಆಗಲಾ ಘೋರ ಬಾಣಗಳು ಮಹಾ ಕಾಂತಿಯಿಂದ ಬೆಳಗುತ್ತ, ಭಯದಿಂದ ಮಿಲಿಮಿಲಿ ಒದ್ದಾಡುತ್ತಿರುವ ಸರ್ಪಗಳಿಂದ ಕೂಡಿದ ಆ ಸಮುದ್ರ

ದ್ರಸ್ಯ ಸಲಿಲಂ ತ್ರಸ್ತಪನ್ನಗಂ ॥ ೨೭ ॥ ತೋಯವೇಗಸ್ಸಮುದ್ರಸ್ಯ ಸನಕ್ರಮಕರೋ ಮಹಾನ್ । ಸಂಬಭೂವ ಮಹಾಘೋರಸ್ಸಮಾರುತರವಸ್ತದಾ ॥೨೮॥ ಮಹೋರ್ಮಿ ಮಾಲಾ ವಿತತ ಶ್ಶಂಖಶುಕ್ತಿಸಮಾವೃತಃ । ಸಧೂಮಪರಿವೃತ್ತೋರ್ಮಿಸ್ಸಹಸಾಽಽಸೀನ್ಮ ಹೋದಧಿಃ ॥ ೨೯ ॥ ವ್ಯಥಿತಾಃ ಪನ್ನಗಾಶ್ಚಾಽಸ್ಮಿನ್ ದೀಪ್ತಾಸ್ಯಾ ದೀಪ್ತಲೋಚನಾಃ । ದಾನವಾಶ್ಚ ಮಹಾವೀರ್ಯಾಃ ಪಾತಾಳತಲವಾಸಿನಃ ॥ ೩೦ ॥ ಊರ್ಮಯಸ್ಸಿಂಧು ರಾಜಸ್ಯ ಸನಕ್ರಮಕರಾಸ್ತದಾ । ವಿಂಧ್ಯಮಂದರಸಂಕಾಶಾ ಸ್ಸಮುತ್ಪೇತು ಸ್ಸಹಸ್ರಶಃ

ಸಮುದ್ರದ, ಸಲಿಲಂ - ಉದಕವನ್ನು, ಪ್ರವಿಂಶತಿ - ಪ್ರವೇಶಿಸಿದವು. ॥ ೨೭ ॥ ತದಾ - ಆ ಕಾಲದಲ್ಲಿ, ಸನಕ್ರಮಕರಃ - ಏಡಿಗಳಿಂದಲೂ ನೆಗಳುಗಳಿಂದಲೂ ಕೂಡಿದ, ಮಹಾಘೋರಃ - ಮಹಾ ಭಯಂಕರ ವಾದ, ಮಹಾನ್ - ದೊಡ್ಡದಾದ, ಸಮುದ್ರಸ್ಯ - ಸಮುದ್ರದ, ತೋಯವೇಗಃ - ನೀರಿನ ವೇಗವು, ಸಮಾರುತರವಃ - ಗಾಳಿಯ ವೇಗದಿಂದೊಡಗೂಡಿದ್ದಾಗಿ, ಸಂಬಭೂವ - ಆಯಿತು. ॥ ೨೮ ॥ ಮಹೋದಧಿಃ - ಮಹಾ ಸಮುದ್ರವು, ಮಹೋ......ತಃ - ಮಹಾ ತರಂಗಗಳಿಂದ ವಿಸ್ತೃತವಾದದ್ದೂ, ಶಂಖ......ತಃ - ಶಂಖಗಳಿಂದಲೂ, ಮುತ್ತುಗಳಿಂದಲೂ, ಸುತ್ತುವರೆಯಲ್ಪಟ್ಟುದಾಗಿಯೂ, ಸಹಸಾ - ಜಾಗ್ರತೆಯಾಗಿ, ಸಧೂ....ರ್ಮಿಃ - ಧೂಮದಿಂದೊಡಗೂಡಿ ತಿರುಗುತ್ತಿರುವ ತೆರೆಗಳುಳ್ಳದ್ದಾಗಿಯೂ, ಆಸೀತ್ - ಆಯಿತು. ॥೨೯॥ ಪನ್ನಗಾಶ್ಚ - ಸರ್ಪಗಳೂ, ದೀಪ್ತಾಸ್ಯಾಃ - ಪ್ರಜ್ವಲಿಸುತ್ತಿರುವ ಮುಖ ಗಳುಳ್ಳವುಗಳಾಗಿ, ದೀಪ್ತಲೋಚನಾಃ - ಹೊಳೆಯುತ್ತಿರುವ ನೇತ್ರಗಳುಳ್ಳವುಗಳಾಗಿ, ವ್ಯಥಿತಾಃ - ವ್ಯಸನಗೊಂಡವುಗಳು, ಆಸನ್ - ಆದವು, ಪಾತಾ......ನಃ - ಪಾತಾಳಲೋಕದಲ್ಲಿ ವಾಸಮಾಡುತ್ತಿರುವ, ಮಹಾವೀರ್ಯಾಃ - ಬಹಳ ಸಾಮರ್ಥ್ಯವಂತರಾದ, ದಾನವಾಶ್ಚ - ರಕ್ಕಸರೂ, ವ್ಯಥಿತಾಃ - ವ್ಯಸನ ಗೊಂಡವರು, ಆಸನ್ - ಆದರು. ॥೩೦॥ ತದಾ - ಆ ಕಾಲದಲ್ಲಿ, ಸನಕ್ರಮಕರಾಃ - ನೆಗಳುಗಳಿಂದಲೂ ಏಡಿಗಳಿಂದಲೂ ಕೂಡಿದ, ಸಿಂಧುರಾಜಸ್ಯ - ಕಡಲಿನ, ಊರ್ಮಯಃ - ತೆರೆಗಳು, ಸಹಸ್ರಶಃ - ಸಾವಿರಾರು, ವಿಂಧ್ಯ......ಶಾಃ - ವಿಂಧ್ಯಪರ್ವತಕ್ಕೂ, ಮಂದರಪರ್ವತಕ್ಕೂ ಸಮಾನಗಳಾಗಿ, ಸಮು ತ್ಪೇತುಃ-ಮೇಲಕ್ಕೆ ಹಾರಿದವು. ॥ ೩೧ ॥ ಸಲಿಲಾಶಯಃ-ಸಮುದ್ರವು, ಆಘೂ.... ಗಃ-ತಿರುಗಿಸಲ್ಪಟ್ಟ

ಜಲದಲ್ಲಿ ಪ್ರವೇಶಿಸಿದುವು. ಇದು ಮಹಾ ಭಯಂಕರವಾಗಿದ್ದಿತು. ಆ ಸಮಯದಲ್ಲಿ ಸಮುದ್ರದಲ್ಲಿನ ತರಂಗವೇಗವು ವಾಯುವೇಗದೊಡನೆ ಕೂಡಿ ಮಹಾ ಭಯಂಕರ ಶಬ್ದ ವನ್ನು ಹುಟ್ಟಿಸಿತು. ॥ ೨೩–೨೮ ॥ ಇಷ್ಟೆಯಲ್ಲದೆ, ಆ ಮಹಾ ಸಮುದ್ರವು ಮಹಾ ವೇಗವಂತಗಳಾದ ತರಂಗಸಮೂಹಗಳಿಂದ ಕೂಡಿ, ಆ ತರಂಗವೇಗದೊಡನೆಯೇ ಮೇಲಕ್ಕೆ ಹಾರಿಬಂದ ಶಂಖಗಳೊಡನೆಯೂ, ಮುತ್ತಿನ ಚಿಪ್ಪುಗಳೊಡನೆಯೂ ಕೂಡಿದುದಾಗಿದ್ದಿತು. ಆ ಸಮುದ್ರದಲ್ಲಿ ಮಹಾ ಪ್ರಕಾಶಮಾನಗಳಾದ ನೇತ್ರಗಳುಳ್ಳ ಸರ್ಪರಾಜಗಳು ಬಹಳವಾಗಿ ಪೀಡಿಸಲ್ಪಟ್ಟು ವಿಷವನ್ನು ಕಕ್ಕುತ್ತ ಹೊರಹೊರಟವು. ಪಾತಾಳಲೋಕವಾಸಿಗಳೂ, ಮಹಾ ಮಹಾ ಪರಾಕ್ರಮಶಾಲಿಗಳೂ ಆದ ದಾನವರು ಶ್ರೀರಾಮನ ಬಾಣಾಗ್ನಿಯಿಂದ ಸಂಪೀಡಿತ ರಾದರು. ಆ ಸಮಯದಲ್ಲಿ ಮಹಾಮತ್ಸ್ಯಗಳೊಡನೆಯೂ, ಮಹಾನಕ್ರಗಳೊಡನೆಯೂ ಕೂಡಿದ ಅಲೆಗಳು ವಿಂಧ್ಯಮಂದರಪರ್ವತಗಳಿಗೆ ಸಮಾನಗಳಾಗಿ ಗುಂಪುಗುಂಪಾಗಿ ಮೇಲ ಕ್ಕೆದ್ದುವು. ಆಗಲಾ ಸಮುದ್ರವು ಬಹಳವಾಗಿ ಸುಳಿಯುತ್ತ ಗಡಗಡನೆ ನಡುಗುತ್ತಿರುವ ಅಲೆಗಳ ಗುಂಪಿನಿಂದ ಕೂಡಿ, ದಿಗ್ಭ್ರಾಂತವಾದ ಸರ್ಪಗಳೂ, ರಾಕ್ಷಸರೂ ಉಳ್ಳದಾಗಿ,

|| ೩೧ || ಆಘೂರ್ಣಿತತರಂಗೌಘ ಸ್ಸಂಭ್ರಾಂತೋರಗರಾಕ್ಷಸಃ । ಉದ್ವರ್ತಿತಮಹಾಗ್ರಾಹಸ್ಸಂವೃತ್ತ ಸಲಿಲಾಶಯಃ ||೩೨||

ತತಸ್ತು ತಂ ರಾಘವಮುಗ್ರವೇಗಂ
ಪ್ರಕರ್ಷಮಾಣಂ ಧನುರಪ್ರಮೇಯಂ ।
ಸೌಮಿತ್ರಿರುತ್ಪತ್ಯ ಸಮುಚ್ಛ್ವಸಂತಂ
"ಮಾಮೇ"ತಿಚೋಕ್ತ್ವಾ ಧನುರಾಲಲಂಬೇ || ೩೩ ||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಏಕವಿಂಶಸ್ಸರ್ಗಃ



ತೆರೆಗಳ ತಂಡಗಳುಳ್ಳದ್ದಾಗಿಯೂ, ಸಂಭ್ರಾಂ......ಸಃ - ತಿರುಗುತ್ತಿರುವ ಸರ್ಪಗಳೂ, ರಾಕ್ಷಸರೂ ಉಳ್ಳದ್ದಾಗಿಯೂ, ಉದ್ವ......ಹಃ - ತಿರುಗಿಸಲ್ಪಟ್ಟ ದೊಡ್ಡ ನೆಗಳುಗಳುಳ್ಳದ್ದಾಗಿಯೂ, ಸಂವೃತ್ತಃ - ಆಯಿತು. || ೩೨ || ತತಃ - ಬಳಿಕ, ಸೌಮಿತ್ರಿಃ - ಲಕ್ಷ್ಮಣಸ್ವಾಮಿಯು, ಉಗ್ರವೇಗಂ - ಭಯಂಕರವಾದ ವೇಗವುಳ್ಳ, ಅಪ್ರಮೇಯಂ - ಅಪರಿಮಿತ ಪ್ರಭಾವವುಳ್ಳ, ಧನುಃ - ಬಿಲ್ಲನ್ನು, ಪ್ರಕರ್ಷಮಾಣಂ- ಸೆಳೆಯುತ್ತಿರುವ, ಸಮುಚ್ಛ್ವಸಂತಂ - ಕ್ರೋಧದಿಂದ ದೀರ್ಘವಾದ ನಿಟ್ಟುಸಿರನ್ನು ಬಿಡುತ್ತಿರುವ, ತಂರಾಘವಂ - ಆ ಶ್ರೀರಾಮುನನ್ನು ಕುರಿತು, ಮಾಮೇತಿಚೋಕ್ತ್ವಾ - ಬೇಡ ಬೇಡ ಎಂದು ಹೇಳಿ, ಉತ್ಪತ್ಯ - ಹಾರಿ, ಧನುಃ - ಧನುಸ್ಸನ್ನು, ಆಲಲಂಬೇ - ಹಿಡಿದುಕೊಂಡನು. || ೩೩ ||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಏಕವಿಂಶಸ್ಸರ್ಗಃ.



ಕ್ಷೋಭೆಗೊಂಡು ನಡುಗುತ್ತಿರುದ ಮಹಾ ನಕ್ರಗಳಿಂದ ಕೂಡಿದ್ದಿತು. ಆ ಸಮಯದಲ್ಲಿ ಮಹಾ ಭಯಂಕರವಾದ ವೇಗವುಳ್ಳವನೂ, ಮಹಾ ಭಯಂಕರವಾಗಿ ಶರಸಂಧಾನ ಮಾಡುತ್ತಿರುವವನೂ, ಮಹಾ ಕೋಪದಿಂದ ನಿಟ್ಟುಸಿರುಗಳನ್ನು ಬಿಡುತ್ತಿದ್ದವನೂ ಆದ ಆ ಶ್ರೀರಾಮುನನ್ನು ನೋಡಿ ಲಕ್ಷ್ಮಣನು ಅವನಬಳಿಸಾರಿ, "ಅಣ್ಣಾ! ನೀನಿನ್ನು ಈ ಸಾಗರನಮೇಲೆ ಶರಸಂಧಾನ ಮಾಡಬೇಡ" ಎಂದು ಹೇಳಿ ಅವನ ಧನುಸ್ಸನ್ನು ಬಲವಾಗಿ ಹಿಡಿದುಕೊಂಡನು. || ೨೯–೩೩ ||

ಇಂತಿದು ಸಾಗರಂಪ್ರತಿ ಶ್ರೀರಾಮು ಕೋಪ ಮತ್ತು ಶರವಿಮೋಕ್ಷಣ ವೃತ್ತಾಂತ
ಎಂಬ ಇಪ್ಪತ್ತೊಂದನೆಯ ಸರ್ಗವು ಸಮಾಪ್ತವಾದುದು.



# ಯುದ್ಧಕಾಂಡೇ ದ್ವಾವಿಂಶಸ್ಸರ್ಗಃ

**ಅಥೋವಾಚ ರಘುಶ್ರೇಷ್ಠಸ್ಸಾಗರಂ ದಾರುಣಂ ವಚಃ । "ಅದ್ಯ ತ್ವಾಂ**
**ಶೋಷಯಿಷ್ಯಾಮಿ ಸಪಾತಾಳಂ ಮಹಾರ್ಣವ! ॥ ೧ ॥ ಶರನಿರ್ದಗ್ಧತೋಯಸ್ಯ**
**ಪರಿಶುಷ್ಕಸ್ಯ ಸಾಗರ! । ಮಯಾ ಶೋಷಿತಸತ್ತ್ವಸ್ಯ ಪಾಂಸುರುತ್ಪದ್ಯತೇ ಮಹಾನ್**
**॥ ೨ ॥ ಮತ್ಕಾರ್ಮುಕವಿಸೃಷ್ಟೇನ ಶರವರ್ಷೇಣ ಸಾಗರ! । ಪಾರಂ ತೇಽದ್ಯಗಮಿಷ್ಯಂತಿ**
**ಪದ್ಭಿರೇವ ಪ್ಲವಂಗಮಾಃ ॥ ೩ ॥ ವಿಚಿನ್ವನ್ನಾಭಿಜಾನಾಸಿ ಪೌರುಷಂ ವಾಪಿ ವಿಕ್ರಮಂ ।**

---

ಅಥ - ಅನಂತರದಲ್ಲಿ, ರಘುಶ್ರೇಷ್ಠಃ - ರಘುವಂಶದಲ್ಲಿ ಉತ್ತಮನಾದ ಶ್ರೀರಾಮಚಂದ್ರನು, ಹೇ ಮಹಾರ್ಣವ ಎಲೈ ಮಹಾ ಸಮುದ್ರನೇ, ತ್ವಾಂ-ನಿನ್ನನ್ನು, ಸಪಾತಾಳಂ-ಪಾತಾಳ ಪರ್ಯಂತವೂ, ಅದ್ಯ - ಈಗ, ಶೋಷಯಿಷ್ಯಾಮಿ - ಶೋಷಿಸುವೆನು, (ಇತಿ - ಇಂತೆಂದು), ಸಾಗರಂ - ಸಮುದ್ರವನ್ನು ಕುರಿತು, ದಾರುಣಂ - ಕ್ರೂರವಾದ, ವಚಃ - ಮಾತನ್ನು, ಉವಾಚ - ಹೇಳಿದನು. ॥ ೧ ॥ ಹೇ ಸಾಗರ - ಎಲೈ ಸಮುದ್ರನೇ, ನಿರ್ದ......ಸ್ಯ - ಬಾಣವರ್ಷದಿಂದ ಶೋಷಿಸಲ್ಪಟ್ಟ (ಗೋ) ನಿರ್ಜಲವಾದ, ಪರಿಶುಷ್ಕಸ್ಯ - ಭ್ಯೂಮಂತರ್ಗತ ಜಲವೂ ಸಹಾ ಇಲ್ಲದಿರುವ, ಮಯಾ - ನನ್ನಿಂದ, ಶೋಷಿತಸತ್ತ್ವಸ್ಯ - ಶೋಷಿಸಲ್ಪಟ್ಟ ಜಂತುಗಳುಳ್ಳ, (ತವ - ನಿನ್ನ), ಮಹಾನ್ - ಮಹತ್ತರವಾದ, ಪಾಂಸುಃ - ಧೂಳಿಯು, ಉತ್ಪದ್ಯತೇ - ಹುಟ್ಟುತ್ತದೆ. ॥ ೨ ॥ ಹೇ ಸಾಗರ - ಎಲೈ ಸಮುದ್ರನೇ, ಮತ್ಕಾ....ನ - ನನ್ನ ಧನುಸ್ಸಿನಿಂದ ಬಿಡಲ್ಪಟ್ಟ, ಶರವರ್ಷೇಣ - ಬಾಣವರ್ಷದಿಂದ, ಪ್ಲವಂಗಮಾಃ - ವಾನರರು, ತೇ - ನಿನ್ನ, ಪಾರಂ - ತೀರವನ್ನು, ಪದ್ಭಿರೇವ - ಕಾಲುಗಳಿಂದಲೇ, ಗಮಿಷ್ಯಂತಿ - ಹೊಂದುವರು. ॥ ೩ ॥ ಹೇ ದಾನವಾಲಯ - ಎಲೈ ರಾಕ್ಷಸರಿಗೆ ಆವಾಸಭೂತನೇ, ವಿಕ್ರಮಂ - (ಗೋ) ಉದಕದ ಉಪರಿಭಾಗದಲ್ಲಿ ಶರಸೇತುಬಂಧನ ಜಲಸ್ತಂಭನಾದಿ ಶಕ್ತಿಸ್ವರೂಪವಾದ ಪರಾಕ್ರಮವನ್ನು, ವಿಚಿನ್ವನ್ - ವಿಶೇಷವಾಗಿ ಪರ್ಯಾಲೋಚಿಸುವವನಾಗಿ, ನಾಭಿಜಾನಾತಿ - ತಿಳಿಯದೇ ಹೋದೆ, ಪೌರುಷಂ - (ಗೋ) ಶಾಸ್ತ್ರವಶ್ಯತ್ವಸೌಜನ್ಯನಿಬಂಧನವಾದ ಶರಣವರಣರೂಪವಾದ ಪುರುಷಕೃತ್ಯವನ್ನು, ನಾಭಿಜಾನಾಸಿ -

---

(ಶರಣು ಹೊಕ್ಕು ಪ್ರಾರ್ಥಿಸಿದರೂ, ಲಕ್ಷ್ಮಣನನ್ನು ಕುರಿತು ಧನುರ್ಬಾಣಗಳನ್ನು ತಾರೆಂದು ಹೇಳಿ ಅದರಿಂದ ಹೆದರಿಸಿದರೂ) ಇಷ್ಟಾದರೂ ಪ್ರತ್ಯಕ್ಷನಾಗದಿರುವ ಸಮುದ್ರನನ್ನು ನೋಡಿ ಶ್ರೀರಾಮಮೂರ್ತಿಯು ಬಹು ದಾರುಣವಾದ ಮಾತುಗಳನ್ನಾಡಿದನು:—"ಎಲೈ ಸಾಗರನೇ! ನಿನ್ನನ್ನೀಗಲೇ ಪಾತಾಳಲೋಕದೊಡನೆ ಬತ್ತಿಹೋಗುವಂತೆ ಮಾಡುವೆನು. ನನ್ನ ಬಾಣಪ್ರಯೋಗದಿಂದ ನಿನ್ನಲ್ಲಿರುವ ನೀರೆಲ್ಲವೂ ಇಂಗಿ ಜಲಜಂತುಗಳೆಲ್ಲವೂ ದಗ್ಧವಾದಮೇಲೆ ನೀನಿರುವ ಸ್ಥಳದಲ್ಲಿ ಮರಳುಮಾತ್ರ ಉಳಿಯುತ್ತದೆ. ಎಲೈ ಮಕರಾಲಯನೇ! ನನ್ನ ಧನುಸ್ಸಿನಿಂದ ಪ್ರಯೋಗಿಸಲಾಗುವ ಬಾಣಗಳ ಮಳೆಯಿಂದ ನಿನ್ನನ್ನು ಶೋಷಿಸಿದ ತರುವಾಯ ನನ್ನ ಈ ವಾನರಸೇನೆಯಲ್ಲವೂ ಕಾಲ್ನಡಿಗೆಯಿಂದಲೇ ಆಚಿನ ದಡಕ್ಕೆ ಹೋಗಲುಳ್ಳವರು. ದಾನವರಿಗೆ ನಿವಾಸಸ್ಥಾನವಾದ ಎಲೈ ಸಮುದ್ರನೇ! ನೀನು ನನ್ನ ಭುಜಬಲಪರಾಕ್ರಮಗಳನ್ನು ಸ್ವಲ್ಪವೂ ಆಲೋಚಿಸದಿರುವೆ;

ದಾನವಾಲಯಸಂತಾಪಂ ಮತ್ತೋ ನಾಧಿಗಮಿಷ್ಯಸಿ'' ॥ ೪ ॥ ಬ್ರಾಹ್ಮೇಣಾಸ್ತ್ರೇಣ ಸಂಯೋಜ್ಯ ¶ ಬ್ರಹ್ಮದಂಡನಿಭಂ ಶರಂ । ಸಂಯೋಜ್ಯ ಧನುಷಿ ಶ್ರೇಷ್ಠೇ ವಿಚಕರ್ಷ ಮಹಾಬಲಃ ॥ ೫ ॥ ತಸ್ಮಿನ್ ವಿಕೃಷ್ಟೇ ಸಹಸಾ ರಾಘವೇಣ ಶರಾಸನೇ । ರೋದಸೀ ಸಂಪಫಾಲೇವ ಪರ್ವತಾಶ್ಚ ಚಕಂಪಿರೇ ॥ ೬ ॥ ತಮಸ್ಚ ಲೋಕಮಾವವ್ರೇ ದಿಶಶ್ಚ ನಚಕಾಶಿರೇ । ಪರಿಚುಕ್ಷುಭಿರೇಚಾಶು ಸರಾಂಸಿ ಸರಿತಸ್ತಥಾ ॥ ೭ ॥ ತಿರ್ಯಕ್ಚ ಸಹನಕ್ಷತ್ರೈಸ್ಸಂಗತೌ ಚಂದ್ರಭಾಸ್ಕರೌ । ಭಾಸ್ಕರಾಂಶುಭಿರಾದೀಪ್ತಂ ತಮಸಾಚ

ಅರಿಯದೇಹೋದೆ, ಮತ್ತಃ - ನನ್ನಿಂದ, (ಗೋ) (ಭಾವಿನಂ - ಆಗತಕ್ಕ), ಸಂತಾಪಂ - ಸಂಕಟವನ್ನು, ನಾಧಿಗಮಿಷ್ಯಸಿ - ತಿಳಿಯದಿರುವೆ. ॥ ೪ ॥ ಮಹಾಬಲಃ - ಬಹು ಬಲಾಢ್ಯನಾದ ಶ್ರೀರಾಮನು, ಬ್ರಹ್ಮದಂಡನಿಭಂ - ಬ್ರಹ್ಮದಂಡಕ್ಕೆ ಸಮಾನವಾದ, ಶರಂ - ಬಾಣವನ್ನು, ಬ್ರಾಹ್ಮೇಣಾಸ್ತ್ರೇಣ - ಬ್ರಹ್ಮಾಸ್ತ್ರ ಮಂತ್ರದಿಂದ, ಸಂಯೋಜ್ಯ - ಅಭಿಮಂತ್ರಿಸಿ, ಶ್ರೇಷ್ಠೇ - ಉತ್ತಮವಾದ, ಧನುಷಿ-ಧನುಸ್ಸಿನಲ್ಲಿ, ಸಂಯೋಜ್ಯ-ಸೇರಿಸಿ, ವಿಚಕರ್ಷ-ಸೆಳೆದನು. ॥ ೫ ॥ ತಸ್ಮಿಃಶರಾಸನೇ - ಆ ಧನುಸ್ಸು, ಸಹಸಾ - ಜಾಗ್ರತೆಯಾಗಿ, ರಾಘವೇಣ - ಶ್ರೀರಾಮನಿಂದ, ವಿಕೃಷ್ಟೇ - ಸೆಳೆಯಲ್ಪಟ್ಟುದಾಗಲೂ, ರೋದಸೀ - ಅಂತರಿಕ್ಷಭೂಮಿಗಳು, ಸಂಪಫಾಲೇವ - ಬಿನ್ನವಾದಂತೆ ಇದ್ದವು, ಪರ್ವತಾಶ್ಚ - ಪರ್ವತಗಳೂ ಸಹಾ, ಚಕಂಪಿರೇ - ಕದಲಿದವು ॥ ೬ ॥ ತಮಶ್ಚ - ಅಂಧಕಾರವೂ ಕೂಡ, ಲೋಕಂ - ಜಗತ್ತನ್ನು, ಆವವ್ರೇ - ಆವರಿಸಿತು, ದಿಶಶ್ಚ - ದಿಕ್ಕುಗಳೂ ಕೂಡ, ನಚಕಾಶಿರೇ - ಹೊಳೆಯಲಿಲ್ಲವು, ತಥಾ - ಹಾಗೆಯೇ, ಸರಾಂಸಿ - ಸರೋವರಗಳು, ಸರಿತಃ - ನದಿಗಳು, ಆಶು - ಜಾಗ್ರತೆಯಾಗಿ, ಪರಿಚುಕ್ಷುಭಿರೇ-ಕ್ಷೋಭಗೊಂಡವು. ॥ ೭ ॥ ಚಂದ್ರಭಾಸ್ಕರೌ-ಚಂದ್ರಸೂರ್ಯರು, ತಿರ್ಯಕ್ಚ - ಅಡ್ಡವಾಗಿಯೂ, ನಕ್ಷತ್ರೈಃಸ್ಸಹ - ನಕ್ಷತ್ರಗಳೊಡನೆ, ಸಂಗತೌ - ಸೇರಿದರು, ತದಾ - ಆ ಕಾಲದಲ್ಲಿ, ಭಾಸ್ಕರಾಂಶುಭಿಃ - ಸೂರ್ಯನ ಕಿರಣಗಳಿಂದ, ಆದೀಪ್ತಂ - ಹೊಳೆಯುತ್ತಿರುವ, ತಮಸಾ-ಅಂಧಕಾರದಿಂದ, ಸಮಾವೃತಂ-ವ್ಯಾಪ್ತವಾದ, ಆಕಾಶಂಚ-ಆಕಾಶವೂ, ಉಲ್ಕಾ....ತಂ-

ನನ್ನಿಂದ ನಿನಗಾಗುವ ಬಾಧೆಯನ್ನೂ ನೀನು ಅರಿಯದಿರುವೆ. ನಿನಗೆ ಈ ವಿಧವಾದ ಅಜ್ಞಾನವು ಆ ದಾನವರ ಸಹವಾಸದಿಂದುಂಟಾಗಿರಬೇಕೆನ್ನಿಸುತ್ತದೆ.'' ಹೀಗೆ ಹೇಳಿದ ಬಳಿಕ ಮಹಾ ಪರಾಕ್ರಮಶಾಲಿಯಾದ ಆ ರಘುವೀರನು ಬ್ರಹ್ಮದಂಡಕ್ಕೆ ಸಮಾನವಾದ ಬಾಣವನ್ನು ಬ್ರಹ್ಮಾಸ್ತ್ರಮಂತ್ರದಿಂದಭಿಮಂತ್ರಿಸಿ ಮಹೋತ್ತಮವಾದ ತನ್ನ ಧನುಸ್ಸಿನಲ್ಲಿ ಸಂಧಿಸಿ ಆ ಕರ್ಣಾಂತವೂ ಸೆಳೆದನು. ॥ ೧-೫ ॥ ಆ ಕೂಡಲೇ ಭೂಮ್ಯಾಕಾಶಗಳೆರಡೂ ಬಿರುಕು ಬಿಟ್ಟಂತಾಯಿತು. ಪರ್ವತಗಳೆಲ್ಲವೂ ಗಡಗಡನೆ ನಡುಗಿದುವು; ಲೋಕದಲ್ಲೆಲ್ಲಾ ಕತ್ತಲು ಕವಿಯಿತು; ದಶದಿಶೆಗಳೂ ಕಾಂತಿಗುಂದಿದವು; ಸರೋವರಗಳೂ ನದನದಿಗಳೂ ಕುದಿಯಲಾರಂಭಿಸಿದುವು; ಚಂದ್ರಸೂರ್ಯರು ಅಡ್ಡವಾಗಿ ನಡೆಯಲುಪಕ್ರಮಿಸಿದರು; ನಕ್ಷತ್ರಗಳೂ ಅಡ್ಡವಾಗಿ ನಡೆದುವು; ಸೂರ್ಯಕಿರಣಗಳಿಂದ ಪ್ರಕಾಶಿಸುತ್ತಿದ್ದರೂ, ಕತ್ತಲು ಕವಿದಿದ್ದ ಆಕಾಶವು ಬಹು ಭಯಂಕರವಾಗಿ ಕಾಣುತ್ತಿದ್ದಿತು. ಆಕಾಶವೆಲ್ಲವೂ ನೂರಾರು

¶ "ಬ್ರಹ್ಮದಂಡವೆಂದರೆ:—ಧ್ವಜವಿಶೇಷವೆಂದು ನಾರದ ಸಂಹಿತೆಯ ವಚನ—ಪಿತಾಮಹಾತ್ಮಜಃ ಕ್ರೂರಸ್ತ್ರಿವರ್ಣಶ್ಶಿಖರಾನ್ವಿತಃ । ಬ್ರಹ್ಮದಂಡಾಹ್ವಯಃ ಕೇತುಸ್ಸರ್ವಭೂತಭಯಾವಹಃ ॥"

ಸಮಾವೃತಂ ॥ ೮ ॥ ಪ್ರಚಕಾಶೇ ತದಾಽಽಕಾಶಮುಲ್ಕಾಶತವಿದೀಪಿತಂ । ಅಂತರಿಕ್ಷಾಚ್ಚ ನಿರ್ಘಾತಾ ನಿರ್ಜಗ್ಮುರತುಲಸ್ವನಾಃ । ಪುಸ್ಫುರುಶ್ಚ ಘನಾ ದಿವ್ಯಾ ದಿವಿ ಮಾರುತಪಙ್ಕ್ತಯಃ ॥ ೯ ॥ ಬಭಂಜಚ ತದಾ ವೃಕ್ಷಾನ್ ಜಲದಾನುದ್ವಹನ್ನಪಿ । ಅರುಜಂಶ್ಚೈವ ಶೈಲಾಗ್ರಾನ್ ಶಿಖರಾಣಿ ಪ್ರಭಂಜನಃ ॥ ೧೦ ॥ ದಿವಿಸ್ಪೃಶೋ ಮಹಾಮೇಘಾಸ್ಸಂಗತಾಸ್ಸಮಹಾಸ್ವನಾಃ । ಮುಮುಚುರ್ವೈದ್ಯುತಾನಗ್ನೀಂಸ್ತೇ ಮಹಾಶನಯಸ್ತದಾ ॥ ೧೧ ॥ ಯಾನಿ ಭೂತಾನಿ ದೃಶ್ಯಾನಿ ಚುಕ್ರುಶುಶ್ಚಾಶನೇಸ್ಸಮಂ । ಅದೃಶ್ಯಾನಿಚ ಭೂತಾನಿ ಮುಮುಚುರ್ಭೈರವಸ್ವನಂ ॥ ೧೨ ॥ ಶಿಶ್ಯಿರೇ ಚಾಪಿ ಭೂತಾನಿ

ನೂರಾರು ಕೊಳ್ಳಿಗಳಿಂದ ಪ್ರಜ್ವಲಿತವಾದದ್ದಾಗಿ, ಪ್ರಚಕಾಶೇ-ಹೊಳೆಯುತ್ತಿತ್ತು. ॥೮॥ ಅಂತರಿಕ್ಷಾಚ್ಚ-ಅಂತರಿಕ್ಷದಿಂದಲೂ, ನಿರ್ಘಾತಾಃ - ಸಿಡಿಲುಗಳು, ಅತುಲಸ್ವನಾಃ - ಸಮಾನವಿಲ್ಲದ ಧ್ವನಿಗಳುಳ್ಳದ್ದಾಗಿ, ನಿರ್ಜಗ್ಮುಃ - ಹೊರಟವು, ಕಿಂಚ - ಇಷ್ಟುಮಾತ್ರವಲ್ಲದೆ, ದಿವ್ಯಾಃ - ದೇವತಾಸಂಬಂಧವಾದ, ಘನಾಃ - ಮೇಘಗಳು, ಪುಸ್ಫುರುಃ - ಚಲಿಸಿದವು, ದಿವಿ - ಅಂತರಿಕ್ಷದಲ್ಲಿ, ಮಾರುತಪಙ್ಕ್ತಯಃ - ಗಾಳಿಯ ಪಙ್ಕ್ತಿಗಳು, ಪುಸ್ಫುರುಶ್ಚ - ಚಲಿಸಿದವು. ॥ ೯ ॥ ತದಾ - ಆ ಕಾಲದಲ್ಲಿ, ಪ್ರಭಂಜನಃ - ವಾಯುವು, ವೃಕ್ಷಾನ್ - ಮರಗಳನ್ನು, ಜಲದಾನ್ - ಮೇಘಗಳನ್ನೂ, ಉದ್ವಹನ್ನಪಿ - ವಹಿಸುತ್ತಿರುವುದಾಗಿ, ಬಭಂಜಚ - ಮುರಿಯಿತು, ಶೈಲಾಗ್ರಾನ್ - ಬೆಟ್ಟದ ತುದಿಗಳನ್ನು, ಶಿಖರಾಣಿ - ಶೃಂಗಗಳನ್ನೂ, ಅರುಜಾಶ್ಚೈವ - ಮುರಿದುಹಾಕಿತು. ॥ ೧೦ ॥ ತದಾ - ಆ ಕಾಲದಲ್ಲಿ, ದಿವಿಸ್ಪೃಶಃ - ಅಂತರಿಕ್ಷವನ್ನು ಮುಟ್ಟುತ್ತಿರುವ, ಮಹಾಮೇಘಾಃ - ದೊಡ್ಡ ಮೇಘಗಳು, ಸಂಗತಾಃ-ಒಂದಕ್ಕೊಂದು ಸೇರಿದವುಗಳಾಗಿ, ಸಮಹಾಸ್ವನಾಃ - ದೊಡ್ಡ ಧ್ವನಿಗಳಿಂದ ಕೂಡಿ, ವೈದ್ಯುತಾನ್ - ಮಿಂಚಿನ ಸಂಬಂಧಗಳಾದ, ಅಗ್ನೀನ್-ಬೆಂಕಿಗಳನ್ನು, ಮುಮುಚುಃ-ಬಿಟ್ಟವು, ತೇ - ಆ ಬೆಂಕಿಗಳು ತದಾ - ಆ ಕಾಲದಲ್ಲಿ, ಮಹಾಶನಯಃ-ದೊಡ್ಡ ಸಿಡಿಲುಗಳು, ಅಭವನ್ - ಆದವು. ॥೧೧॥ ದೃಶ್ಯಾನಿ - ಕಾಣಿಸತಕ್ಕ, ಭೂತಾನಿ - ಭೂತಗಳು, ಯಾನಿ - ಯಾವವೋ, ತಾನಿ - ಆ ಪ್ರಾಣಿಗಳು, ಅಶನೇಃ - ಸಿಡಲಿಗೆ, ಸಮಾನಂ - ಸದೃಶವಾಗಿ, ಚುಕ್ರುಶುಃ - ಕೂಗಿದವು, ಅದೃಶ್ಯಾನಿ - ಅದೃಶ್ಯಗಳಾದ, ಭೂತಾನಿ - ಭೂತಗಳು, ಭೈರವಸ್ವನಂ - ಭಯಂಕರವಾದ ಕೂಗನ್ನು, ಮುಮುಚುಃ - ಬಿಟ್ಟವು. ॥ ೧೨ ॥ ಭೂತಾನಿ-ಭೂತಗಳು, ಸಂತ್ರಸ್ತಾನಿ-ಬಹಳ ಭಯಗೊಂಡವುಗಳಾಗಿ, ಶಿಶ್ಯಿರೇ-ಮಲಗಿದುವು,

ಉಲ್ಕಗಳಿಂದ ಉರಿಯಲಾರಂಭಿಸಿತು ; ಮಹಾ ಭಯಂಕರಧ್ವನಿಯೊಡಗೂಡಿ ಆಕಾಶದಿಂದ ಅನೇಕ ಉಲ್ಕಗಳು ನೆಲಕ್ಕುದುರಿದುವು; ಆಕಾಶದಲ್ಲಿ ಮಹಾ ಪ್ರಳಯವಾತವು ಬಹು ಭಯಂಕರವಾಗಿ ಬೀಸತೊಡಗಿತು. ಆ ಮಹಾ ವಾಯುವೇಗಕ್ಕೆ ಆಕಾಶವೆಲ್ಲವೂ ಮುಗಿಲುಗಳಿಂದ ಹೊದ್ದುದಾಯಿತು. ಇದರಿಂದ ದೊಡ್ಡದೊಡ್ಡ ವೃಕ್ಷಗಳೆಲ್ಲವೂ ಮುರಿದು ನೆಲಕ್ಕುರುಳಿದುವು. ಪರ್ವತಾಗ್ರಗಳೂ, ಸಾಮಾನ್ಯ ಪರ್ವತಗಳೂ ಮಹಾ ವ್ಯಥೆಯನ್ನು ಹೊಂದಿದುವು.॥೭–೧೦॥ ಆ ಸಮಯದಲ್ಲಿ ಆಕಾಶದಲ್ಲಿ ವ್ಯಾಪಿಸಿದ್ದ ಮಹಾ ಮೇಘಗಳೆಲ್ಲವೂ ಒಂದರೊಡನೊಂದು ಸೇರಿ ಮಿಂಚುಗಳ ರೂಪವಾದ ಅಗ್ನಿಜ್ವಾಲೆಗಳನ್ನು ಕಕ್ಕಿದುವು. ಆ ಜ್ವಾಲೆಗಳು ಉಲ್ಕಗಳಾಗಿ ನೆಲಕ್ಕೆ ಬಿದ್ದುವು. ಕಣ್ಣಿಗೆ ಕಾಣುವ ಸಮಸ್ತ ಭೂತಗಳೂ ಆ ಗುಡುಗಿನ ಶಬ್ದದೊಡನೆಯೇ ಮಹಾ ಭಯಂಕರವಾಗಿ ಅರಚಿಕೊಂಡವು. ಕಣ್ಣಿಗೆ ಕಾಣಿಸದ (ಭೂತಪ್ರೇತ) ಪಿಶಾಚಾದಿಗಳು ಮಹಾ ಭಯಂಕರವಾಗಿ ಅರಚಿಕೊಂಡವು. ಒಟ್ಟಿನಮೇಲೆ ಸಮಸ್ತ ಭೂತ

ಸಂತ್ರಸ್ತಾಸ್ತ್ವುದ್ವಿಜಂತಿ ಚ । ಸಂಪ್ರವಿವ್ಯಥಿರೇಚಾಪಿ ನಚ ಪಸ್ಪಂದಿರೇ ಭಯಾತ್ ॥೧೩॥ ಸಹಭೂತೈಸ್ಸತೋಯೋರ್ಮಿಸ್ಸನಾಗಸ್ಸಹರಾಕ್ಷಸಃ । ಸಹಸಾಭೂತ್ತತೋ ವೇಗಾದ್ಭೀಮವೇಗೋ ಮಹೋದಧಿಃ ॥ ೧೪ ॥ ಯೋಜನಂ ವ್ಯತಿಚಕ್ರಾಮ ವೇಲಾಮನ್ಯತ್ರ ಸಪ್ಲವಾತ್ । ತಂ ತದಾ ಸಮತಿಕ್ರಾಂತಂ ನಾತಿಚಕ್ರಾಮ ರಾಘವಃ । ಸಮುದ್ಧತಮಮಿತ್ರಘ್ನೋ ರಾಮೋ ನದನದೀಪತಿಂ ॥ ೧೫-೧೬ ॥ ತತೋ ಮಧ್ಯಾತ್ಸಮುದ್ರಸ್ಯ $ ಸಾಗರಸ್ಯ ಸಮುತ್ಥಿತಃ । § ಉದಯಂಹಿ ಮಹಾಶೈಲಾನ್ಮೇರೋರಿವ ದಿವಾಕರಃ॥೧೭॥ ಪನ್ನಗೈಸ್ಸಹ ದೀಪ್ತಾಸ್ಯೈಸ್ಸಮುದ್ರಃ ಪ್ರತ್ಯದೃಶ್ಯತ । ಸ್ನಿಗ್ಧವೈಡೂರ್ಯಸಂಕಾಶೋ

ಉದ್ವಿಜಂತಿಚ - ನಡುಗುತ್ತಲೂ ಇದ್ದುವು, ಭಯಾತ್ - ಭಯದಿಂದ, ಸಂಪ್ರವಿವ್ಯಥಿರೇ - ದುಃಖಗೊಂಡುವು, ನಪಸ್ಪಂದಿರೇಚ - ಚಲಿಸದಿದ್ದುವು. ॥ ೧೩ ॥ ತತಃ - ಬಳಿಕ, ಸತೋಯೋರ್ಮಿಃ - ಜಲತರಂಗಗಳಿಂದಲೂ, ಸನಾಗಃ - ಹಾವುಗಳಿಂದಲೂ, ಸಹರಾಕ್ಷಸಃ - ರಕ್ಕಸರಿಂದಲೂ (ಕೂಡಿದ), ಮಹೋದಧಿಃ - ಮಹಾ ಸಮುದ್ರವು, ಭೂತೈಸ್ಸಹ - ಜಂತುಗಳೊಡನೆ, ವೇಗಾತ್ - ರಾಮಬಾಣದ ವೇಗದಿಂದ. ಸಹಸಾ - ಶೀಘ್ರವಾಗಿ, ಭೀಮವೇಗಃ - ಭಯಂಕರ ವೇಗವುಳ್ಳುದು, ಅಭವತ್ - ಆಯಿತು. ॥ ೧೪ ॥ ಸಂಪ್ಲವಾದನ್ಯತ್ರ - ಪ್ರಳಯಕ್ಕಿಂತಲೂ ಭಿನ್ನವಾದ ಆ ಕಾಲದಲ್ಲಿ, ವೇಲಾಂ - ದಡವನ್ನು, ಯೋಜನಂ - ಒಂದು ಗಾವುದವು, ವ್ಯತಿಚಕ್ರಾಮ - ದಾಟಿದನು, ತದಾ - ಆ ಕಾಲದಲ್ಲಿ, ಅಮಿತ್ರಘ್ನಃ - ಶತ್ರುಸಂಹಾರಕನಾದ, ರಾಘವಃ - ರಘುವಂಶೋತ್ಪನ್ನನಾದ, ರಾಮಃ - ಶ್ರೀರಾಮನು, ಸಮತಿಕ್ರಾಂತಂ - ದಡವನ್ನು ದಾಟಿಹೋಗುತ್ತಿರುವ, ಸಮುದ್ಧತಂ - ವೃದ್ಧಿಗೊಂಡವನಾದ, ನದನದೀಪತಿಂ-ನದಗಳಿಗೂ, ನದಿಗಳಿಗೂ ಒಡೆಯನಾದ, ತಂ-ಆ ಸಮುದ್ರನನ್ನು, ನಾತಿಚಕ್ರಾಮ-ಹೊಡೆಯಲಿಲ್ಲವು. ॥ ೧೬ ॥ ತತಃ - ಬಳಿಕ, ಸಾಗರಸ್ಯ - ಸಗರವಂಶಸ್ಥರಿಂದ ಉತ್ಪನ್ನನಾದ, ಸಮುದ್ರಸ್ಯ - ಸಮುದ್ರನ, ಮಧ್ಯಾತ್ - ಮಧ್ಯಪ್ರದೇಶದಿಂದ, ಮಹಾಶೈಲಾತ್ - ದೊಡ್ಡ ಬೆಟ್ಟವಾದ, ಮೇರೋಃ- ಮೇರುಪರ್ವತದಿಂದ, ದಿವಾಕರಃ - ಸೂರ್ಯನು, ಉದಯಮಿವ - ಉದಯವನ್ನಂತೆ, ಸಮುತ್ಥಿತಃ - ಮೇಲಕ್ಕೆದ್ದವನಾಗಿ. ॥ ೧೭ ॥ ಸಮುದ್ರಃ - ಸಮುದ್ರನು, ದೀಪ್ತಾಸ್ಯೈಃ - ಹೊಳೆಯುತ್ತಿರುವ ಮುಖ

ಗಳೂ ಬಹಳ ಭಯಪಟ್ಟು ನೆಲಕ್ಕುರುಳಿ ವ್ಯಾಕುಲವಾದುವುಗಳಾಗಿ ಮಹತ್ತರವಾದ ದುಃಖಕ್ಕೆ ತುತ್ತಾದುವು. ॥೧೧-೧೩॥ ಇಷ್ಟೆಯಲ್ಲದೆ ಸಮಸ್ತ ಭೂತಗಳೊಡಗೂಡಿ, ದೊಡ್ಡದೊಡ್ಡ ಅಲೆಗಳಿಂದ ತುಂಬಿದುದಾಗಿ ಮಹಾ ಕ್ರೂರಗಳಾದ ಸರ್ಪಗಳಿಂದಲೂ, ರಾಕ್ಷಸರಿಂದಲೂ ಕೂಡಿ ಭೀಕರವಾಗಿರುವ ಆ ಸಮುದ್ರವು ನೋಡುವವರಿಗೆ ನಡುಕವನ್ನುಂಟುಮಾಡುವುದಾಗಿದ್ದಿತು. ಹೀಗೆ ಮಹಾ ವೇಗವುಳ್ಳ ಆ ಸಮುದ್ರವು ತನ್ನ ಎಲ್ಲೆಕಟ್ಟನ್ನು ಮೀರಿ, ಒಂದು ಗಾವುದದೂರ ಹಿಂದಕ್ಕೆ ಹೋಗಿಬಿಟ್ಟಿತು. ಆಗ ಶತ್ರುಸಂಹಾರಕನಾದ ಶ್ರೀರಾಮಮೂರ್ತಿಯು ಎಲ್ಲೆ ಕಟ್ಟನ್ನು ಮೀರಿ ಹಿಂದಕ್ಕೆ ಹೋದ ಆ ಸಾಗರನಮೇಲೆ ತನ್ನ ಬಾಣವನ್ನು ಬಿಡಲು ಮನಸ್ಸು ಮಾಡದೆ ಹೋದನು. ॥೧೪-೧೬॥ ಆ ಸಮಯದಲ್ಲಿ ಬಹು ದೊಡ್ಡದಾದ ಮೇರುಪರ್ವತದ ಶಿಖರದಿಂದ ಉದಿಸುತ್ತಿರುವ ಸೂರ್ಯನಂತೆ, ಸಾಗರಮಧ್ಯದಿಂದ ಸಾಗರರಾಜನು ಆವಿರ್ಭವಿಸಿದನು. ಬಹು ಸುಂದರವಾದ ದೇಹವುಳ್ಳವನೂ, ಕೆಂಪು ಹೂಗಳನ್ನೂ, ವಸ್ತ್ರಗಳನ್ನೂ

$ " ಸಾಗರಸ್ಸ್ವಯಮುತ್ಥಿತಃ " ತಿ. ಪಾ. § " ಉದಯಾದ್ರಿ " ಮ. ತಿ. ಪಾ.



—: ಸಾಗರಾಗಮನ :—

“ ಉಪಯುಂಹಿ ಮಹಾ ಶೈಲಾನ್ಮೇರೋರಿವ ದಿವಾಕರಃ ।
ಸಮುದ್ರಃ ಪ್ರತ್ಯದೃಶ್ಯತ ॥ ”

ಪುಟ ೨೦೮

ಜಾಂಬೂನದವಿಭೂಷಿತಃ ॥ ೧೮ ॥ ರಕ್ತಮಾಲ್ಯಾಂಬರಧರಃ ಪದ್ಮಪತ್ರನಿಭೇಕ್ಷಣಃ ।
ಸರ್ವಪುಷ್ಪಮಯೀಂ ದಿವ್ಯಾಂ ಶಿರಸಾ ಧಾರಯನ್ ಸ್ರಜಂ ॥ ೧೯ ॥ ಜಾತರೂಪ
ಮಯೈಶ್ಚೈವ ತಪನೀಯವಿಭೂಷಿತೈಃ । ಆತ್ಮಜಾನಾಂಚ ರತ್ನಾನಾಂ ಭೂಷಿತೋ
ಭೂಷಣೋತ್ತಮೈಃ ॥ ೨೦ ॥ ಧಾತುಭಿರ್ಮಂಡಿತಶ್ಶೈಲೋ ವಿವಿಧೈರ್ಹಿಮವಾನಿವ ।
‡ ಏಕಾವಳೀಮಧ್ಯಗತಂ ತರಳಂ ಪಾಟಲಪ್ರಭಂ ॥ ೨೧ ॥ ವಿಪುಲೇನೋರಸಾ ಬಿಭ್ರ
ತ್ಕೌಸ್ತುಭಸ್ಯ ಸಹೋದರಂ । ಆಘೂರ್ಣಿತತರಂಗೌಘಃ ಕಾಳಿಕಾನಿಲಸಂಕುಲಃ ॥೨೨॥
¶ ಉದ್ವರ್ತಿತಮಹಾಗ್ರಾಹಸ್ಸಂಭ್ರಾಂತೋರಗರಾಕ್ಷಸಃ । (ದೇವತಾನಾಂ ಸುರೂ

---

ಗಳುಳ್ಳ, ಪನ್ನಗೈಸ್ಸಹ - ಸರ್ಪಗಳೊಡಗೂಡಿ, ಪ್ರತ್ಯದೃಶ್ಯತ - ಕಾಣಲ್ಪಟ್ಟನು, ಸ್ನಿಗ್ಧ.....ಶಃ - ಸಾಣೆ ಹಿಡಿದ ವೈಡೂರ್ಯಮಣಿಗಳಿಗೆ ಸಮಾನವಾದ, ಜಾಂಬೂ....ತಃ - ಭಂಗಾರದ ಒಡವೆಗಳಿಂದ ಅಲಂ ಕರಿಸಲ್ಪಟ್ಟ, ರಕ್ತ.....ರಃ - ಕೆಂಪಾದ ಪುಷ್ಪಹಾರಗಳನ್ನೂ ವಸ್ತ್ರಗಳನ್ನೂ ಧರಿಸಿರುವ, ಪದ್ಮ.....ಣಃ - ಕಮಲದಳಗಳಿಗೆ ಸದೃಶವಾದ ನೇತ್ರಗಳುಳ್ಳ, ಸರ್ವ.....ಯೀಂ - ಸಮಸ್ತ ಪುಷ್ಪವಿಕಾರವಾದ, ದಿವ್ಯಾಂ-ಮನೋಹರವಾದ, ಸ್ರಜಂ - ಸರವನ್ನು, ಶಿರಸಾ - ಮಂಡೆಯಿಂದ, ಧಾರಯನ್ - ಧರಿಸಿರುವ, ಜಾತ.....ವ - ಸುವರ್ಣವಿಕಾರವಾದ, ತಪ....ತೈಃ - ಕುಂದಣದ ಚಿನ್ನದಿಂದ ಅಲಂಕೃತವಾದ, ಆತ್ಮಜಾನಾಂ - ತನ್ನಲ್ಲೇ ಹುಟ್ಟಿರುವ, ರತ್ನಾನಾಂ - ರತ್ನಗಳ, ಭೂಷಣೋತ್ತಮೈಃ - ಉತ್ತಮವಾದ ಒಡವೆಗಳಿಂದ, ಭೂಷಿತಃ - ಅಲಂಕೃತನಾಗಿ, ವಿವಿಧೈಃ - ನಾನಾ ವಿಧಗಳಾದ, ಧಾತುಭಿಃ - ಗೈರಿಕಾದಿ ಧಾತುಗಳಿಂದ, ಮಂಡಿತಃ - ಅಲಂಕೃತವಾದ, ಹಿಮವಾನ್ಶೈಲಇವ - ಹಿಮವತ್ಪರ್ವತದಂತೆ, ಏಕಾ....ತಂ - ಒಂದೇಸರದ ಮಧ್ಯದಲ್ಲಿರುವ, ಪಾಟಲಪ್ರಭಂ - ಪಾಟಲ ಬಣ್ಣವುಳ್ಳ, ಕೌಸ್ತುಭಸ್ಯ - ಕೌಸ್ತುಭಮಣಿಯ, ಸಹೋದರಂ - ಒಡಹುಟ್ಟಿದ, ತರಳಂ - ನಾಯಕಮಣಿಯನ್ನು, ವಿಪುಲೇನ - ವಿಸ್ತಾರವಾದ, ಉರಸಾ - ವಕ್ಷಸ್ಥಲದಿಂದ, ಬಿಭ್ರತ್ - ಧರಿಸಿರುವ, ಸಮುದ್ರಃ - ಸಮುದ್ರನು, (ಪ್ರತ್ಯದೃಶ್ಯತ-ಕಾಣಲ್ಪಟ್ಟನು), ಆಘೂ....ಘಃ-ತಿರುಗಿಸಲ್ಪಟ್ಟ ತೆರೆಗಳ ತಂಡಗಳುಳ್ಳ, ಕಾಳಿ...ಲಃ - ಮೇಘಮಂಡಲದ ಗಾಳಿಯಿಂದ ವ್ಯಾಪ್ತವಾದ, ಉದ್ವ....ಹಃ - ತಿರುಗಿಸಲ್ಪಟ್ಟ ದೊಡ್ಡ ನೆಗಳುಗಳುಳ್ಳ, ಸಂಭ್ರಾಂ.....ಸಃ - ತಿರುಗುತ್ತಿರುವ ಸರ್ಪಗಳೂ, ರಕ್ಕಸರೂ ಉಳ್ಳ, ಸುರೂಪಾಣಾಂ -

---

ಧರಿಸಿ, ಕಮಲಪತ್ರಗಳನ್ನು ಹೋಲುವ ನೇತ್ರಗಳುಳ್ಳವನೂ, ನಾನಾವಿಧಗಳಾದ ಉತ್ತಮ ಪುಷ್ಪಮಾಲಿಕೆಗಳನ್ನು ಕಂಠದಲ್ಲಿ ಧರಿಸಿ, ತನ್ನಲ್ಲಿಯೇ ಉದಿಸಿದ ರತ್ನಗಳಿಂದಲೂ, ಸುವರ್ಣಾಭರಣಗಳಿಂದಲೂ, ಅಲಂಕೃತವಾಗಿ ವಿವಿಧ ಧಾತುಗಳಿಂದಲಂಕೃತವಾದ ಹಿಮಾಚಲದಂತೆ ಕಂಗೊಳಿಸುತ್ತ, ಕೌಸ್ತುಭಮಣಿಯೊಡನೆ ಹುಟ್ಟಿದ ಮುಕ್ತಾಹಾರವನ್ನು ನಡುದಾರವಾಗಿಸಿಕೊಂಡು, ಕೆಂಪುಕಾಂತಿಯ ನಾಯಕಮಣಿಯಿಂದ ವಿರಾಜಿತವಾದ ವಕ್ಷಸ್ಥಳದಿಂದ ಶೋಭಿಸುತ್ತ,ಮಹಾ ತರಂಗಸಮೂಹಗಳಿಂದಲೂ, ಮೇಘಸಮೂಹಗಳಿಂದಲೂ, ಮಹಾ ವಾತಗಳಿಂದಲೂ ವ್ಯಾಕುಲನಾಗಿ ತೋರುತ್ತಿರುವ ಆ ಸಮುದ್ರನು ಜ್ವಾಲೆಗಳಿಂದುರಿಯುತ್ತಿರುವ ಮುಖಗಳುಳ್ಳ ಮಹಾ ಸರ್ಪಗಳೊಡನೆ ಪ್ರತ್ಯಕ್ಷವಾದನು. ॥೧೭–೨೨॥ ಬಹು ಸುಂದರರೂಪರಾದ ದೇವತೆಗಳಲ್ಲಿ ಉತ್ತಮನಾದ ಆ ಸಾಗರನು, ಗಿರ್ರನೆ ಸುತ್ತುತ್ತಿರುವ ಮಹಾನಕ್ರಗಳುಳ್ಳವ

---

‡ ಈ ಶ್ಲೋಕವು ಗೋ. ಪಾಠದಲ್ಲಿ ಅಧಿಕ. ¶ ಈ ಶ್ಲೋಕವೂ ಗೋ. ಪಾಠದಲ್ಲಿ ಅಧಿಕ.

ಪಾಣಾಂ ನಾನಾರೂಪಾಭಿರೀಶ್ವರಃ । ಗಂಗಾಸಿಂಧುಪ್ರಧಾನಾಭಿರಾಪಗಾಭಿಸ್ಸಮಾವೃತಃ । ಸಾಗರಸ್ಸಮುಪಕ್ರಮ್ಯ ಪೂರ್ವಮಾಮಂತ್ರ್ಯ ವೀರ್ಯವಾನ್ । ಅಬ್ರವೀತ್ ಪ್ರಾಂಜಲಿ ರ್ವಾಕ್ಯಂ ರಾಘವಂ ಶರಪಾಣಿನಂ ॥ ೨೩ ॥ "ಪೃಥಿವೀ ವಾಯುರಾಕಾಶಮಾಪೋ ಜ್ಯೋತಿಶ್ಚ ರಾಘವ! । ಸ್ವಭಾವೇ ಸೌಮ್ಯ! ತಿಷ್ಠಂತಿ ಶಾಶ್ವತಂ ಮಾರ್ಗಮಾಶ್ರಿತಾಃ॥೨೪॥ ತತ್ಸ್ವಭಾವೋ ಮಮಾಪ್ಯೇಷ ಯದಗಾಧೋಽಹಮಪ್ಲವಃ । ವಿಕಾರಸ್ತು ಭವೇದ್ಗಾಧ ಏತತ್ತೇ ಪ್ರವದಾಮ್ಯಹಂ ॥ ೨೫ ॥ ನಕಾಮಾನ್ನಚ ಲೋಭಾದ್ವಾ ನಭಯಾತ್ಪಾರ್ಥಿ

ಸುಂದರರೂಪರಾದ, ದೇವತಾನಾಂ-ದೇವತೆಗಳಿಗೆ, ಈಶ್ವರಃ-ಧೊರೆಯಾದ, ವೀರ್ಯವಾನ್ - ಸಾಮರ್ಥ್ಯವಂತನಾದ, ಸಾಗರಃ - ಸಮುದ್ರನು, ನಾನಾರೂಪಾಭಿಃ - ಅನೇಕ ಆಕಾರಗಳುಳ್ಳ, ಗಂಗಾ....ಭಿಃ - ಗಂಗಾ, ಸಿಂಧೂ, ಮೊದಲಾದ, ಆಪಗಾಭಿಃ - ನದಿಗಳಿಂದ, ಸಮಾವೃತಃ - ಸುತ್ತುವರೆದವನಾಗಿ, ಸಮುಭಿಕ್ರಮ್ಯ - ಬಂದು, ಪೂರ್ವಂ - ಮದಲು, ಆಮಂತ್ರ್ಯ - ಕರೆದು, ಶರಪಾಣಿನಂ - ಚಾಪಪಾಣಿಯಾದ, ರಾಘವಂ - ಶ್ರೀರಾಮನನ್ನು ಕುರಿತು, ಪ್ರಾಂಜಲಿಃ - ಅಂಜಲಿಬದ್ಧನಾಗಿ, ವಾಕ್ಯಂ - ಮಾತನ್ನು, ಅಬ್ರವೀತ್ - ನುಡಿದನು. ॥ ೧೮-೨೩ ॥ ಹೇ ರಾಘವ - ಎಲೈ ಶ್ರೀರಾಮನೇ, ಹೇ ಸೌಮ್ಯ - ಎಲೈ ಪ್ರಸನ್ನನೇ, ಪೃಥಿವೀ - ಭೂಮಿಯು, ವಾಯುಃ - ವಾಯುವು, ಆಕಾಶಃ - ಆಕಾಶವೂ, ಆಪಃ - ಉದಕವೂ, ಜ್ಯೋತಿಃ - ತೇಜಸ್ಸೂ (ಅಂದರೆ ಪೃಥಿವ್ಯಾದಿ ಪಂಚ ಭೂತಗಳು) ಶಾಶ್ವತಂ - ಸ್ಥಿರವಾದ, ಮಾರ್ಗಂ - ಮಾರ್ಗವನ್ನು, ಆಶ್ರಿತಾಃ - ಆಶ್ರಯಿಸಿ, ಸ್ವಭಾವೇ- ತಮ್ಮತಮ್ಮ ಸ್ವಭಾವಗಳನ್ನನುಸರಿಸಿ, ತಿಷ್ಠಂತಿ - ಇರುತ್ತವೆ, ಅಹಂ - ನಾನು, ಅಪ್ಲವಃ - ಅಲಂಘ್ಯನೆಂಬುದೂ, ಅಗಾಧ ಇತಿಚ - ಆಳವಾಗಿದ್ದೇನೆಂಬುದೂ, ಏಷಃ - ಇದು, ಮಮ - ನನಗೂ, ಸ್ವಭಾವವು, ತಸ್ಮಾತ್ - ಆದಕಾರಣ, ವಿಕಾರಸ್ತು - ವಿಕಾರವಾದರೆ, ಗಾಧಃ - ಅಗಾಧವಾನದ್ದು, ಭವೇತ್ - ಆಗುವದು, ಏತತ್ - ಇದನ್ನು, ತೇ - ನಿನಗೆ, ಅಹಂ - ನಾನು, ಪ್ರವದಾಮಿ - ಹೇಳುವೆನು. ॥೨೪ ೨೫॥ ಹೇ ಪಾರ್ಥಿವಾತ್ಮಜ - ಎಲೈ ರಾಜಪುತ್ರನೇ, ಗ್ರಾಹ....ಲಂ - ನೆಗಳುಗಳಿಂದಲೂ, ಮಕರಗಳಿಂದಲೂ ತುಂಬಿದ ಉದಕವನ್ನು, ಕಾಮಾತ್ - ಆರ್ಥಾಕಾಂಕ್ಷೆಯಿಂದ, ಕಥಂಚನ - ಹೇಗಾದರೂ, ನಸ್ತಂಭಯೇಯಂ - ನಿಲ್ಲಿಸಲಾರೆನು, ಲೋಭಾದ್ವಾ - ದೊರಕಿದ ದ್ರವ್ಯವನ್ನು ದಾನ

ನಾಗಿ, ವ್ಯಾಕುಲವಾದ ಸರ್ಪಗಳೊಡಗೂಡಿ, ತಳಮಳಗೊಂಡ ರಾಕ್ಷಸರು ತನ್ನಲ್ಲಿ ತುಂಬಿರಲು, ವಿವಿಧಾಕಾರಗಳುಳ್ಳ ಗಂಗಾ, ಸಿಂಧುವೇ ಮೊದಲಾದ ದೊಡ್ಡ ದೊಡ್ಡ ನದೀದೇವತೆಗಳಿಂದ ಪರಿಶೋಭಿಸುತ್ತ ಶ್ರೀರಾಮಮೂರ್ತಿಗೆ ಪ್ರತ್ಯಕ್ಷನಾದನು. ಹೀಗೆ ಪ್ರತ್ಯಕ್ಷನಾಗುತ್ತಲೇ ಆತನು ಶ್ರೀರಾಮನ ಬಳಿಗೈದಿ ತಾನಾಗಿಯೇ ಆತನಿಗೆ ನಮಸ್ಕರಿಸಿ, ಬಾಣವನ್ನು ಕೈಯಲ್ಲಿ ಹಿಡಿದು ನಿಂತಿದ್ದ ಆತನನ್ನು ಕುರಿತು, "ಓ ರಾಮಚಂದ್ರಾ! ಪ್ರಸನ್ನನಾಗು! ನಿನ್ನ ಮುನಿಸನ್ನು ದೂರಮಾಡು! ಭೂಮಿಯೂ, ವಾಯುವೂ, ಆಕಾಶವೂ, ಜಲವೂ, ಅಗ್ನಿಯೂ, (ಈ ಐದು ಭೂತಗಳೂ) ಸ್ಥಿರವಾದ ಮಾರ್ಗವನ್ನವಲಂಬಿಸಿ ಅದರದರ ಸ್ವಭಾವವನ್ನು ಬಿಡದಿರುವುದು ನಿನಗೆ ತಿಳಿದೇ ಇರುವುದು. ಈ ಒಂದು ಕಾರಣದಿಂದಲೇ ಬಹಳ ಆಳವನ್ನೊಳಗೊಂಡು ದಾಟಲಸದಳವಾಗಿರುವುದೂ ನನ್ನ ಸ್ವಭಾವವಾಗಿರುವುದು. ನಾನಿದನ್ನು ಬಿಡಲಾಗುವುದಿಲ್ಲವು. ನಾನು ಈ ತತ್ವವನ್ನು ನಿನಗೆ ಅರಿಕೆ ಮಾಡಿರುವೆನು. ॥೨೩–೨೫॥ ರಾಜಪುತ್ರ! ಶ್ರೀರಾಮಾ! ಕಾಮದಿಂದಲೋ, ಲೋಭದಿಂದಲೋ, ಭಯದಿಂದಲೋ ನಾನು,

ವಾತ್ಮಜಃ । ಈ ಗ್ರಾಹನಕ್ರಾಕುಲಜಲಂ ಸ್ತಂಭಯೇಯಂ ಕಥಂಚನ ॥೨೬॥ ವಿಧಾಸ್ಯೇ ‡ ರಾಮ ! ಯೇನಾಪಿ ವಿಷಹಿಷ್ಯೇ ಹ್ಯಹಂ ತಥಾ । ಗ್ರಾಹಾ ನಪ್ರಹರಿಷ್ಯಂತಿ ಯಾವ ತ್ಸೇನಾ ತರಿಷ್ಯತಿ । ಹರೀಣಾಂ ತರಣೇ ರಾಮ! ಕರಿಷ್ಯಾಮಿ ಯಥಾಸ್ಥಲಂ"॥೨೭-೨೮॥ ತಮಬ್ರವೀತ್ತದಾ ರಾಮ † " ಉದ್ಯತೋಹಿ ನದೀಪತೇ! । ಅಮೋಘೋಽಯಂ ಮಹಾಬಾಣಃ ಕಸ್ಮಿನ್ ದೇಶೇ ನಿಪಾತ್ಯತಾಂ" ॥೨೯॥ ರಾಮಸ್ಯ ವಚನಂ ಶ್ರುತ್ವಾ ತಂಚ ದೃಷ್ಟ್ವಾ ಮಹಾಶರಂ । ಮಹೋದಧಿರ್ಮಹಾತೇಜಾ ರಾಘವಂ ವಾಕ್ಯಮಬ್ರವೀತ್

ಮಾಡದಿರುವಿಕೆಯಿಂದಲಾದರೂ, ನಸ್ತಂಭಯೇಯಂ - ಸ್ತಭಿಸಲಾರೆನು, ಭಯಾದ್ವಾಪಿ - ದಂಡ ಭಯದಿಂದಲಾದರೂ, ನಸ್ತಂಭಯೇಯಂ-ನಿಲ್ಲಿಸಲಾರೆನು. ॥ ೨೬ ॥ ಹೇ ರಾಮ-ಎಲೈ ಶ್ರೀರಾಮನೇ, ಅಹಂ - ನಾನು, ಯೇನ - ಯಾವುದರಿಂದ, ವಿಷಹಿಷ್ಯೇ - ಸಹಿಸುವ ಸಾಮರ್ಥ್ಯವುಳ್ಳವನೋ, ತಥಾ - ಹಾಗೆಯೇ, ವಿಧಾಸ್ಯೇ - ಮಾಡುವೆನು, ಹೇ ರಾಮ - ಎಲೈ ಶ್ರೀರಾಮನೇ. ಸೇನಾ - ವಾನರಸೇನೆಯು, ಯಾವತ್ - ಎಷ್ಟುಪರ್ಯಂತವೂ, ತರಿಷ್ಯತಿ - ದಾಟುವುದೋ, ತಾವತ್ - ಅಷ್ಟುಪರ್ಯಂತವೂ, ಗ್ರಾಹಾಃ - ನೆಗಳುಗಳು, ನಪ್ರಹರಿಷ್ಯಂತಿ - ಹೊಡೆಯಲಾರವು, ಹರೀಣಾಂ - ವಾನರರ, ತರಣೇ - ದಾಟುವ ವಿಷಯದಲ್ಲಿ, ಯಥಾಸ್ಥಲಂ - ಸ್ಥಲದಂತೆ, ಕರಿಷ್ಯಾಮಿ - ಮಾಡುವೆನು. ॥ ೨೭-೨೮ ॥ ತದಾ - ಆ ಕಾಲದಲ್ಲಿ, ರಾಮಃ - ಶ್ರೀರಾಮನು, ತಂ - ಆ ಸಮುದ್ರನನ್ನು ಕುರಿತು, ಹೇ ನದೀಪತೇ- ಎಲೈ ಸಮುದ್ರನೇ, ಅಮೋಘಃ - ವ್ಯರ್ಥವಾಗದಿರುವ, ಅಯಂಮಹಾಬಾಣಃ - ಈ ಮಹಾ ಬಾಣವು, ಉದ್ಯತೋಹಿ - ಸಂಧಾನ ಮಾಡಲ್ಪಟ್ಟಿರುವುದಷ್ಟೆ, ಕಸ್ಮಿನ್ದೇಶೇ - ಯಾವ ಸ್ಥಳದಲ್ಲಿ, ನಿಪಾತ್ಯತಾಂ - ಬೀಳಿಸಲ್ಪಡಲಿ, ಇತಿ - ಇಂತೆಂದು, ಅಬ್ರವೀತ್ - ನುಡಿದನು. ॥ ೨೯ ॥ ರಾಮಸ್ಯ - ಶ್ರೀರಾಮನ, ವಚನಂ - ಮಾತನ್ನು, ಶ್ರುತ್ವಾ - ಕೇಳಿ, ತಂಮಹಾಶರಂಚ - ಆ ದೊಡ್ಡ ಬಾಣವನ್ನೂ, ದೃಷ್ಟ್ವಾ - ಕಂಡು, ಮಹಾತೇಜಾಃ - ಬಹಳ ತೇಜೋವಂತನಾದ, ಮಹೋದಧಿಃ - ಸಮುದ್ರನು, ರಾಘವಂ - ಶ್ರೀರಾಮನನ್ನು ಕುರಿತು, ವಾಕ್ಯಂ - ಮಾತನ್ನು, ಅಬ್ರವೀತ್ - ನುಡಿದನು. ॥೩೦॥ ಮಮ - ನನಗೆ, ಉತ್ತರೇಣ - ಉತ್ತರಪಾರ್ಶ್ವದಲ್ಲಿ, ಲೋಕೇ - ಲೋಕದಲ್ಲಿ, ಭವಾನ್ - ನೀನು, ಯಥಾ - ಹೇಗೆ,

ಮೊಸಳೆಗಳಿಂದಲೂ, ಮಹಾಮತ್ಸ್ಯಗಳಿಂದಲೂ ತುಂಬಿರುವ ಈ ನನ್ನ ಜಲವನ್ನು ಎಷ್ಟು ಮಾತ್ರಕ್ಕೂ ಸ್ತಂಭಿಸಲಾರೆನು. ಆದರೂ ನನ್ನ ಶಕ್ತಿಗೆ ನಿಲುಕುವ ಕಾರ್ಯವನ್ನುಮಾತ್ರ ನಾನು ಮಾಡುವೆನು. ರಾಮಚಂದ್ರಾ! ನಿಮ್ಮ ಸೇನೆಯು ಈ ಜಲಧಿಯನ್ನು ದಾಟುವವರೆಗೂ, ಮೊಸಳೆಗಳೇ ಮೊದಲಾದ ಕ್ರೂರ ಸತ್ವಗಳು ನಿಮ್ಮನ್ನು ಎಷ್ಟುಮಾತ್ರಕ್ಕೂ ಬಾಧಿಸದಿರುವಂತೆ ನಾನು ನೋಡಿಕೊಳ್ಳುವೆನು. ಈ ವಾನರವೀರರೆಲ್ಲರೂ ಸಮುದ್ರವನ್ನು ದಾಟುವುದಕ್ಕಾಗಿ ಸೇತುವೆಯನ್ನುಕಟ್ಟಲು ತಕ್ಕ ಸಹಾಯವನ್ನೂ ಮಾಡುತ್ತೇನೆ" ಎಂದು ಹೇಳಿದನು.॥೨೬-೨೮॥ ಆ ಶ್ರೀರಾಮನು ಆ ಸಮುದ್ರರಾಜನನ್ನು ಕುರಿತು, "ಅಯ್ಯಾ ಸಾಗರನೇ ! ಬಹಳ ಸಂತೋಷ. ಆದರೆ ಈಗ ನಾನು ವ್ಯರ್ಥವೆಂದಿಗೂ ಆಗದ ಈ ಮಹಾ ಬಾಣವನ್ನು ಸಂಧಾನಮಾಡಿ ಬಿಟ್ಟಿರು ವೆನು. ಇದನ್ನು ಎಲ್ಲಿ ಪ್ರಯೋಗಿಸಲಿ " ಎಂದನು. ಮಹಾ ತೇಜಸ್ವಿಯಾದ ಸಮುದ್ರರಾಜನು ಆತನ ಮಾತುಗಳನ್ನು ಕೇಳಿ ಆತನ ಕೈಯಲ್ಲಿದ್ದ ಜಾಜ್ವಲ್ಯಮಾನವಾದ ಮಹಾ ಬಾಣವನ್ನೂ

ಈ "ರಾಗಾತ್" ರಾ. ತಿ. ಪಾ. ‡ "ಯೇನಗಂತಾಸಿ" ತಿ. ಪಾ. † "ಶ್ರುಣುಮೇ ವರುಣಾಲಯ!" ತಿ. ಪಾ.

||೩೦|| "ಉತ್ತರೇಣಾವಕಾಶೋಽಸ್ತಿ ಕಶ್ಚಿತ್ಪುಣ್ಯತಮೋ ಮಮ | ದ್ರುಮಕುಲ್ಯ ಇತಿ ಖ್ಯಾತೋ ತಥಾ ಲೋಕೇ ಯಥಾ ಭವಾನ್ ||೩೦|| ಉಗ್ರದರ್ಶನಕರ್ಮಾಣೋ ಬಹವ ಸ್ತತ್ರ ದಸ್ಯವಃ | ಆಭೀರಪ್ರಮುಖಾಃ ಪಾಪಾಃ ಪಿಬಂತಿ ಸಲಿಲಂ ಮಮ || ೩೨ || * ತೈಸ್ತು ಸಂಸ್ಪರ್ಶನಂ ಪಾಪೈರ್ನಸಹೇ ಪಾಪಕರ್ಮಭಿಃ | ಅಮೋಘಃ ಕ್ರಿಯತಾಂ ರಾಮ! ತತ್ರ ತೇಷು ಶರೋತ್ತಮಃ || ೩೩ || ತಸ್ಯ ತದ್ವಚನಂ ಶ್ರುತ್ವಾ ಸಾಗರಸ್ಯ ಸ ರಾಘವಃ | ಮುಮೋಚ ತಂ ಶರಂ ದೀಪ್ತಂ ವೀರಸ್ಸಾಗರದರ್ಶನಾತ್ || ೩೪ || ತೇನ ತನ್ಮರುಕಾಂತಾರಂ ಪೃಥಿವ್ಯಾಂ ಖಲು ವಿಶ್ರುತಂ | ನಿಪಾತಿತಃ ಶರೋ ಯತ್ರ

---

ಖ್ಯಾತಃ - ಪ್ರಸಿದ್ಧನಾಗಿರುವೆಯೋ, ತಥಾ - ಹಾಗೆಯೇ, ದ್ರುಮಕುಲ್ಯ ಇತಿ - ದ್ರುಮಕುಲ್ಯವೆಂದು, ಖ್ಯಾತಃ - ಪ್ರಸಿದ್ಧವಾದ, ಪುಣ್ಯತಮಃ - ಪುಣ್ಯತಮವಾದ, ಕಶ್ಚಿತ್ - ಒಂದಾನೊಂದಾದ, ಅವಕಾಶಃ- ಪ್ರದೇಶವು, ಅಸ್ತಿ - ಇರುವುದು. ||೩೧|| ತತ್ರ - ಆ ಪ್ರದೇಶದಲ್ಲಿ, ಉಗ್ರ....ಣಃ - ಭಯಂಕರವಾದ ನೋಟವೂ, ವ್ಯಾಪಾರವೂ ಉಳ್ಳ, ಬಹವಃ - ಬಹಳಮಂದಿ, ಆಭೀರಪ್ರಮುಖಾಃ - ಆಭೀರರೇ ಮೊದಲಾದ, ಪಾಪಾಃ - ಪಾಪಿಷ್ಠರಾದ, ದಸ್ಯವಃ - ಶತ್ರುಗಳು, ಮಮ - ನನ್ನ, ಸಲಿಲಂ - ಉದಕ ವನ್ನು, ಪಿಬಂತಿ - ಕುಡಿಯುತ್ತಾರೆ. || ೩೨ || ಹೇ ರಾಮ - ಎಲೈ ಶ್ರೀರಾಮನೇ, ಪಾಪಕರ್ಮಭಿಃ - ಪಾಪವ್ಯಾಪಾರಗಳುಳ್ಳ, ಪಾಪೈಃ - ಪಾಪಿಷ್ಠರಾದ, ತೈಃ - ಆ ಜನರೊಡನೆ, ಸಂಸ್ಪರ್ಶನಂ - ಸ್ಪರ್ಶ ವನ್ನಾದರೆ, ನಸಹೇ - ಸಹಿಸಲಾರೆನು, ತೇಷು - ಆ ಜನರಲ್ಲಿ, ತತ್ರ - ಆ ದ್ರುಮಕಲ್ಯ ಪ್ರದೇಶದಲ್ಲಿ, ಶರೋತ್ತಮಃ - ಉತ್ತಮವಾದ ಈ ಬಾಣವು, ಅಮೋಘಃ - ಸಫಲವಾಗಿ, ಕ್ರಿಯತಾಂ - ಮಾಡ ಲ್ಪಡಲಿ. ||೩೩|| ತಸ್ಯಸಾಗರಸ್ಯ - ಆ ಸಮುದ್ರನ, ತದ್ವಚನಂ - ಆ ಮಾತನ್ನು, ಶ್ರುತ್ವಾ - ಕೇಳಿ, ವೀರಃ - ಶೂರನಾದ, ರಾಘವಃ - ಶ್ರೀರಾಮನು, ಸಾಗ....ತ್ - ಸಮುದ್ರ ದರ್ಶನದಿಂದ, ದೀಪ್ತಂ- ಹೊಳೆಯುತ್ತಿರುವ, ತಂಶರಂ - ಆ ಬಾಣಗಳನ್ನು, ಮುಮೋಚ - ಬಿಟ್ಟನು. ||೩೪|| ತೇನ - ಆ ಬಾಣ ವಿಮೋಚನದಿಂದ, ಮರುಕಾಂತಾರಂ - ಮರುಕಾಂತಾರವೆಂಬ ಕಾಡುಭೂಮಿಯು, ಪೃಥಿವ್ಯಾಂ - ಭೂಮಂಡಲದಲ್ಲಿ, ಶ್ರುತಂಖಲು-ಪ್ರಸಿದ್ಧವಾಯಿತಷ್ಟೇ, ಯತ್ರ-ಯಾವ ಕಾಡಿನಲ್ಲಿ, ದೀಪ್ತಾ....ಭಃ-

---

ನೋಡಿ ಆತನನ್ನು ಕುರಿತು, "ರಾಮಾ! ಈ ಪ್ರದೇಶಕ್ಕೆ ಸಮೀಪದಲ್ಲಿಯೇ ಉತ್ತರದಿಕ್ಕಿನಲ್ಲಿ ನಿನ್ನಂತೆಯೇ ಲೋಕವಿಖ್ಯಾತವಾದ ದ್ರುಮಕುಲ್ಯವೆಂದು ಹೆಸರುಳ್ಳ ಒಂದು ಪ್ರದೇಶವಿರು ವುದು. ಅಲ್ಲಿ ಮಹಾ ಭಯಂಕರವಾದ ನೋಟವುಳ್ಳವರೂ, ಮಹಾ ಕ್ರೂರ ವ್ಯಾಪಾರವುಳ್ಳ ವರೂ ಬಹು ಪಾಪಿಗಳೂ ಆದ ಆಭೀರಾದಿಗಳು ವಾಸಮಾಡಿಕೊಂಡಿರುವರು. ಅವರು ನನ್ನ ಜಲವನ್ನು ಪಾನಮಾಡುತ್ತ ಅನೇಕ ದುಷ್ಟ ಕಾರ್ಯಗಳನ್ನು ಮಾಡುತ್ತಿರುವರು. ರಾಮಚಂದ್ರಾ! ಆ ಪಾಪಿಗಳ ಸಂಪರ್ಕವನ್ನು ನಾನು ಸಹಿಸಲಾರದವನಾಗಿರುವೆನು. ಆದುದರಿಂದ ಈ ನಿನ್ನ ಬಾಣವನ್ನು ಆ ಪ್ರದೇಶದಲ್ಲಿ ಪ್ರಯೋಗಿಸಿ ನನಗೆ ಉಪಕಾರ ಮಾಡು ವವನಾಗು" ಎಂದು ಹೇಳಿದನು. ||೨೯-೩೩|| ಶ್ರೀರಾಮಮೂರ್ತಿಯು ಆ ಮಾತುಗಳನ್ನು ಕೇಳಿ, ಆತನ ಬಯಕೆಯಂತೆ, ಮಹಾ ಪ್ರಕಾಶಮಾನವಾದ ತನ್ನ ಬಾಣವನ್ನು ದ್ರುಮಕುಲ್ಯ ದೇಶದಮೇಲೆ ಪ್ರಯೋಗಿಸಿದನು. ಅದು ಮೊದಲು ಶ್ರೀರಾಮನು ಪ್ರಯೋಗಿಸಿದ ಆ ಮಹಾ

---

* "ತೈರ್ನತತ್ಸ್ಪರ್ಶನಂ ಪಾಪಂ" ತಿ. ಪಾ.

ದೀಪ್ತಾಶನಿಸಮಪ್ರಭಃ ॥ ೩೫ ॥ ನನಾದಚ ತದಾ ತತ್ರ ವಸುಧಾ ಶರಪೀಡಿತಾ ।
ತಸ್ಮಾದ್ವ್ರಣಮುಖಾತ್ತೋಯಮುತ್ಪಪಾತ ರಸಾತಲಾತ್ ॥ ೩೬ ॥ ಸಬಭೂವ ತದಾ
ಕೂಪೋ ವ್ರಣ § ಇತ್ಯಭಿವಿಶ್ರುತಃ । ಸತತಂಚೋತ್ಥಿತಂ ತೋಯಂ ಸಮುದ್ರಸ್ಯೇವ
ದೃಶ್ಯತೇ । ಅವದಾರಣಶಬ್ದಶ್ಚ ದಾರುಣಸ್ಸಮಪದ್ಯತ ॥೩೭॥ ತಸ್ಮಾತ್ತದ್ಬಾಣಪಾತೇನ
ತ್ವಪಃ ಕುಕ್ಷಿಷ್ವಶೋಷಯತ್ । ವಿಖ್ಯಾತಂ ತ್ರಿಷು ಲೋಕೇಷು ಮರುಕಾಂತಾರಮೇವ
ತತ್ ॥ ೩೮ ॥ ಶೋಷಯಿತ್ವಾ ತತಃ ಕುಕ್ಷಿಂ ರಾಮೋ ದಶರಥಾತ್ಮಜಃ । ವರಂ ತಸ್ಮೈ

---

ಉರಿಯುತ್ತಿರುವ ಸಿಡಿಲಿಗೆ ಸಮಾನವಾದ ಕಾಂತಿಯುಳ್ಳ, ಶರಃ - ಬಾಣವು, ನಿಪಾತಿತಃ - ಬೀಳಿಸಲ್ಪಟ್ಟಿತೋ, ತದಾ - ಆ ಕಾಲದಲ್ಲಿ, ತತ್ರ - ಆ ಸ್ಥಳದಲ್ಲಿ, ಶರಪೀಡಿತಃ - ಬಾಣದಿಂದ ಬಾಧಿಸಲ್ಪಟ್ಟ, ವಸುಧಾ - ಭೂಮಿಯು, ನನಾದಚ - ಗುಡಿಗಿತು, ತಸ್ಮಾತ್ - ಆ, ವ್ರಣಮುಖಾತ್ - ಬಾಣದಿಂದ ಹುಟ್ಟಿದ ವ್ರಣದಿಂದ, ತೋಯಂ - ಉದಕವು, ರಸಾತಲಾತ್ - ಪಾತಾಳದಿಂದ, ಉತ್ಪಪಾತ - ಮೇಲಕ್ಕೆ ಚಿಮ್ಮಿತು. ॥೩೫-೩೬॥ ತದಾ - ಆಗ, ಸಃ - ಪ್ರದೇಶವು, ವ್ರಣಃಕೂಪಇತಿ - ವ್ರಣಕೂಪವೆಂದು, ಅಭಿವಿಶ್ರುತಃ - ಪ್ರಸಿದ್ಧವಾದದ್ದು, ಬಭೂವ - ಆಯಿತು, ಸಮುದ್ರಸ್ಯ - ಕಡಲಿನ, ತೋಯಮಿವ - ಉದಕದಂತೆ, ತೋಯಂ - ಜಲವು, ಸತತಂ - ನಿರಂತರವೂ, ಉತ್ಥಿತಂ - ಮೇಲಕ್ಕೆದ್ದುದಾಗಿ, ದೃಶ್ಯತೇ - ಕಾಣಲ್ಪಡುತ್ತದೆ, ದಾರುಣಃ - ಕ್ರೂರವಾದ, ಬಾಣಸ್ಯ - ಬಾಣದ, ಅವ....ಶ್ಚ - ನೆಲವನ್ನು ಭೇದಿಸುವುದರಿಂದ ಹುಟ್ಟಿದ ಶಬ್ದವು, ಸಮಪದ್ಯತ - ಹುಟ್ಟಿತು. ॥ ೩೭ ॥ ತಸ್ಮಾತ್ - ಆ ಕಾರಣದಿಂದ, ತದ್ಬಾಣಪಾತೇನ - ಆ ಶ್ರೀರಾಮಬಾಣದ ಬೀಳುವಿಕೆಯಿಂದ, ಕುಕ್ಷಿಷು - ಕುಕ್ಷಿಸ್ಥಾನಪನ್ನವಾದ ಸ್ಥಾನದಲ್ಲಿ, ಅಪಃ - ಉದಕಗಳನ್ನು, ಅಶೋಷಯತ್ - ಒಣಗಿಸಿತು, ತ್ರಿಷುಲೋಕೇಷು - ಮೂರುಲೋಕಗಳಲ್ಲಿಯೂ, ತತ್ - ಆ ಸ್ಥಳವು, ಮರುಕಾಂತಾರಂ - ಮರುಕಾಂತಾರವೆಂದು, ವಿಖ್ಯಾತಂ - ಪ್ರಸಿದ್ಧವಾಯಿತು. ॥ ೩೮ ॥ ತತಃ - ಬಳಿಕ, ದಶರಥಾತ್ಮಜಃ - ದಶರಥಪುತ್ರನಾದ, ರಾಮಃ - ಶ್ರೀರಾಮನು, ಕುಕ್ಷಿಂ - ಸಮುದ್ರಮಧ್ಯಪ್ರದೇಶವನ್ನು, ಶೋಷಯಿತ್ವಾ - ಒಣಗಿಸಿ, ತಸ್ಮೈಮರವೇ - ಆ ಮರುಪ್ರದೇಶಕ್ಕೆ, ಅಮರವಿಕ್ರಮಃ - ದೇವತಾಪರಾಕ್ರಮಿಯಾದ, ವಿದ್ವಾನ್ -

---

ಬಾಣವು ಬಿದ್ದು ದ್ರುಮಕುಲ್ಯದೇಶವು ಮರುಕಾಂತಾರವೆಂದು ಲೋಕದಲ್ಲಿ ಹೆಸರಾಯಿತು. ಆ ಬಾಣಪ್ರಯೋಗವಾದೊಡನೆಯೇ ಆ ದ್ರುಮಕುಲ್ಯಪ್ರದೇಶವು ಮಹಾ ಧ್ವನಿಯಿಂದ ಅರಚಿತು. ಆ ಬಾಣವು ಬಿದ್ದ ಪ್ರದೇಶದಿಂದ ಪಾತಾಳಜಲವು ಮೇಲಕ್ಕೆ ಚಿಮ್ಮಿತು. ಆಗಲೇ ಅದೊಂದು ಮಹಾ ಕೂಪವಾಗಿ ಪರಿಣಮಿಸಿತು. ಅದು ವ್ರಣಕೂಪವೆಂದು ಪ್ರಸಿದ್ಧವಾಯಿತು. ಆ ವ್ರಣಕೂಪದಲ್ಲಿನ ಜಲವು ಸಮುದ್ರಜಲದಂತೆಯೇ ಯಾವಾಗಲೂ ಬತ್ತದಿರುವುದು. ಹೀಗೆ ಆ ದ್ರುಮಕುಲ್ಯದೇಶವು ಬಿರಿಯುತ್ತ ಮಹಾ ಧ್ವನಿಯಾಗುತ್ತಿರಲು ಅಲ್ಲಿನ ನಿಮ್ನ ಪ್ರದೇಶಗಳಲ್ಲಿದ್ದ ಜಲವೆಲ್ಲವೂ ಬತ್ತಿಹೋಯಿತು. ಮೂರು ಲೋಕಗಳಲ್ಲಿಯೂ, ಆ ಪ್ರದೇಶವು ಮರುಕಾಂತಾರವೆಂದೇ ಹೆಸರಾಯಿತು. ॥ ೩೫–೩೮ ॥ ಆಮೇಲೆ ದೇವಪರಾಕ್ರಮಿಯೂ, ಪಂಡಿತನೂ, ದಶರಥಕುಮಾರನೂ ಆದ ಶ್ರೀರಾಮನು ಸಮುದ್ರಕುಕ್ಷಿಪ್ರದೇಶವಾದ ಆ ದ್ರುಮಕುಲ್ಯದಲ್ಲಿದ್ದ ಪಾಪಿಷ್ಠರೆಲ್ಲರನ್ನೂ ನಾಶಮಾಡಿ, ಆ ಮರುಕಾಂತಾರವು, ವಿಶೇಷವಾಗಿ

---

§ "ಇತ್ಯೇವ" ತಿ. ಪಾ.

ದದೌ ವಿದ್ವಾನ್ ಮರವೇಽಮರವಿಕ್ರಮಃ ||೩೯|| "ಪಶವ್ಯಶ್ಚಾಲ್ಪರೋಗಶ್ಚ ಫಲಮೂಲ ರಸಾಯುತಃ | ಬಹುಸ್ನೇಹೋ ಬಹುಕ್ಷೀರಸ್ಸುಗಂಧಿರ್ವಿವಿಧೌಷಧಃ || ೪೦ || ಏವ ಮೇತೈರ್ಗುಣೈರ್ಯುಕ್ತೋ ಬಹುಭಿಸ್ಸತತಂ ಮರುಃ" | ರಾಮಸ್ಯ ವರದಾನಾಚ್ಚ ಶಿವಃ ಪಂಥಾ ಬಭೂವಹ || ೪೧ || ತಸ್ಮಿನ್ ದಗ್ಧೇ ತದಾ ಕುಕ್ಷೌ ಸಮುದ್ರಸ್ಸರಿತಾಂಪತಿಃ | ರಾಘವಂ ಸರ್ವಶಾಸ್ತ್ರಜ್ಞಮಿದಂ ವಚನಮಬ್ರವೀತ್ || ೪೨ || " ಅಯಂ ಸೌಮ್ಯ ! ನಳೋನಾಮ ತನುಜೋ ವಿಶ್ವಕರ್ಮಣಃ | ಪಿತ್ರಾ ದತ್ತವರಃ ಶ್ರೀಮಾನ್ ‡ ಪ್ರತಿಮೋ

ವಿದ್ವಾಂಸನಾದ ಶ್ರೀರಾಮನು, ವರಂ - ವರವನ್ನು, ದದೌ - ಕೊಟ್ಟನು. || ೩೯ || ಪಶವ್ಯಶ್ಚ - ಪಶುಗಳಿಗೆ ಹಿತಕರವಾದ ಹುಲ್ಲೂ, ನೀರೂ ಉಳ್ಳುದಾಗಿಯೂ, ಅಲ್ಪರೋಗಶ್ಚ - ಆರೋಗ್ಯವುಳ್ಳದ್ದಾಗಿಯೂ, ಬಹು....ತಃ - ಫಲಗಳೂ, ಕಂದಮೂಲಗಳೂ ಮಧುರರಸದಿಂದ ಕೂಡಿರುವುದಾಗಿಯೂ, ಬಹುಸ್ನೇಹಃ - ಬಹಳವಾದ ಘೃತವುಳ್ಳುದಾಗಿಯೂ, ಬಹುಕ್ಷೀರಃ - ಪ್ರಚುರವಾದ ಕ್ಷೀರವುಳ್ಳುದಾಗಿಯೂ, ಸುಗಂಧಿ - ಬಹಳ ಸುವಾಸನೆಯುಳ್ಳುದಾಗಿಯೂ, ವಿವಿಧೌಷಧಃ - ನಾನಾಬಗೆಗಳಾದ ಮೂಲಿಕೆಗಳುಳ್ಳುದಾಗಿಯೂ (ಇರಲೆಂದು), ವರಂ - ವರವನ್ನು, ದದೌ - ಕೊಟ್ಟನು, ಏವಂ - ಈ ಪರಿಯಾಗಿ, ಏತೈಃ - ಇಂಥಾ, ಬಹುಭಿಃ - ಅನೇಕಗಳಾದ, ಗುಣೈಃ - ಗುಣಗಳಿಂದ, ಯುಕ್ತಃ - ಕೂಡಿರುವ, ಮರುಃ - ಮರುಪ್ರದೇಶವು, ರಾಮಸ್ಯ - ಶ್ರೀರಾಮನ, ವರದಾನಾಚ್ಚ ವರಪ್ರದಾನದಿಂದ, ಸತತಂ - ನಿರಂತರವೂ, ಶಿವಃ - ಶುಭವಾದ, ಪಂಥಾಃ - ಮಾರ್ಗವುಳ್ಳುದಾಗಿ, ಬಭೂವಹ - ಆಯಿತಷ್ಟೆ. || ೪೦-೪೧ || ತಸ್ಮಿನ್‌ಕುಕ್ಷೌ - ಆ ಮರುಕಾಂತಾರವೆಂಬ ಮಧ್ಯಪ್ರದೇಶವು, ದಗ್ಧೇ - ದಹಿಸಲ್ಪಟ್ಟುದಾಗಲು, ಸರಿತಾಂ-ನದಿಗಳಿಗೆ, ಪತಿಃ-ಅಧಿಪತಿಯಾದ, ಸಮುದ್ರಃ-ಸಮುದ್ರನು, ಸರ್ವಶಾಸ್ತ್ರಜ್ಞಂ-ಸಮಸ್ತ ಶಾಸ್ತ್ರಗಳನ್ನೂ ತಿಳಿದಿರುವ, ರಾಘವಂ - ಶ್ರೀರಾಮನನ್ನು ಕುರಿತು, ಇದಂವಚನಂ - ಈ ಮಾತನ್ನು, ಅಬ್ರವೀತ್ - ನುಡಿದನು. || ೪೨ || ಹೇ ಸೌಮ್ಯ - ಎಲೈ ಪ್ರಸನ್ನನೇ, ಅಯಂನಳೋನಾಮ - ಈ ನಳನೆಂದು ಪ್ರಸಿದ್ಧನಾದ ವಾನರನು, ವಿಶ್ವಕರ್ಮಣಃ - ವಿಶ್ವಕರ್ಮನೆಂಬ ದೇವಶಿಲ್ಪಿಗೆ, ತನುಜಃ - ಕುವರನು, ಪಿತ್ರಾ - ತಂದೆಯಿಂದ, ದತ್ತವರಃ - ಕೊಡಲ್ಪಟ್ಟ ವರವುಳ್ಳವನು, ಶ್ರೀಮಾನ್ -

ಗೋಸಮೃದ್ಧವಾಗಿಯೂ, ರೋಗರುಜಿನಾದಿಗಳಿಲ್ಲದಿರುವುದಾದಾಗಿಯೂ, ಕಂದಮೂಲಫಲಗಳಿಂದಲೂ, ಜೇನುಗಳಿಂದಲೂ ತುಂಬಿರುವುದಾಗಿಯೂ ಇರಲೆಂದೂ, ಅಲ್ಲಿ ವಾಸಮಾಡುವ ಪ್ರಾಣಿಗಳೆಲ್ಲವೂ ಅನ್ಯೋನ್ಯ ಮೈತ್ರಿಯಿಂದ ವರ್ತಿಸಲೆಂದೂ, ಕ್ಷೀರಸಮೃದ್ಧಿಯನ್ನು ಪಡೆದು, ಸುವಾಸನೆಯುಳ್ಳ ವಿವಿಧ ಮೂಲಿಕೆಗಳಿಂದೊಪ್ಪಿರಲೆಂದೂ ವರವಿತ್ತನು. ಶ್ರೀರಾಮನ ಈ ವರದಾನದಿಂದ ಆ ದ್ರುಮಕುಲ್ಯದೇಶವು ಮರುಕಾಂತಾರವೆಂದು ಹೆಸರು ಪಡೆದು ಅನೇಕ ಗುಣಗಳಿಂದ ಕೂಡಿ, ನಿರಂತರವೂ ಶುಭಸಂಪತ್ಸಮೃದ್ಧವಾಯಿತು. || ೩೯–೪೧ || ಆಮೇಲೆ ಸಾಗರರಾಜನು ಸಕಲ ಶಾಸ್ತ್ರಜ್ಞನಾದ ಶ್ರೀರಾಮಚಂದ್ರನನ್ನು ಕುರಿತು, "ಎಲೈ ಸೌಮ್ಯನೇ! ಶ್ರೀರಾಮಚಂದ್ರನೇ! ಶ್ರೀಮಂತನಾದ ನಳನೆಂಬ ಈ ವಾನರವೀರನು ವಿಶ್ವಕರ್ಮ ಬ್ರಹ್ಮನ ಮಗನು. ಈತನು ಆ ವಿಶ್ವಕರ್ಮ ಬ್ರಹ್ಮನಿಗೆ ಸಮಾನನಾದವನು. ಮಹೋತ್ಸಾಹವುಳ್ಳ ಈ ವಾನರನು ನನ್ನಲ್ಲಿ ಸೇತುವನ್ನು ನಿರ್ಮಿಸಲು ಯೋಗ್ಯನಾಗಿರುವನು. ಈ

‡ "ಪ್ರೀತಿಮಾನ್" ತಿ. ಪಾ.

ವಿಶ್ವಕರ್ಮಣಾ || ೪೩ || ಏಷ ಸೇತುಂ ಮಹೋತ್ಸಾಹಃ ಕರೋತು ಮಯಿ ವಾನರಃ |
ತಮಹಂ ಧಾರಯಿಷ್ಯಾಮಿ ತಥಾಹ್ಯೇಷ ಯಥಾ ಪಿತಾ" || ೪೪ || ಏವಮುಕ್ತ್ವೋ
ದಧಿರ್ನಷ್ಟಸ್ಸಮುತ್ಥಾಯ ನಳಸ್ತದಾ | ಅಬ್ರವೀದ್ವಾನರಶ್ರೇಷ್ಠೋ ವಾಕ್ಯಂ ರಾಮಂ
ಮಹಾಬಲಃ || ೪೫ || "ಅಹಂ ಸೇತುಂ ಕರಿಷ್ಯಾಮಿ ವಿಸ್ತೀರ್ಣೇ[1] ವರುಣಾಲಯೇ |
ಪಿತುಸ್ಸಾಮರ್ಥ್ಯಮಾಸ್ಥಾಯ ತತ್ತ್ವಮಾಹ ಮಹೋದಧಿಃ || ೪೬ || ದಂಡಏವ
ವರೋ ಲೋಕೇ ಪುರುಷಸ್ಯೇತಿ ಮೇ ಮತಿಃ | ಧಿಕ್ ಕ್ಷಮಾಮಕೃತಜ್ಞೇಷು ಸಾಂತ್ವಂ

ಸಂಪದ್ಯುಕ್ತನು, ಶಕ್ತ್ವರ್ಮಣಾ - ವಿಶ್ವಕರ್ಮ ಬ್ರಹ್ಮನಿಗೆ, ಪ್ರತಿಮಃ - ಸಮಾನನು. ||೪೩|| ಏಷಃ - ಈ, ವಾನರಃ - ಕಪಿಯು, ಮಹೋತ್ಸಾಹಃ - ಮಹೋತ್ಸಾಹವುಳ್ಳವನಾಗಿ, ಮಯಿ - ನನ್ನಲ್ಲಿ, ಸೇತುಂ - ಸೇತುವನ್ನು, ಕರೋತು - ಮಾಡಲಿ, ತಂ - ಆ ಸೇತುವನ್ನು, ಅಹಂ - ನಾನು, ಧಾರಯಿಷ್ಯಾಮಿ - ಧರಿಸುವೆನು, ಪಿತಾ - ತಂದೆಯಾದ ವಿಶ್ವಕರ್ಮನು, ಯಥಾ - ಹೇಗೆಯೋ, ಏಷಃ - ಈ ನಳನು, ತಥಾ - ಹಾಗೆಯೇ. ||೪೪|| ಏವಂ - ಈ ಪರಿಯಾಗಿ, ಉಕ್ತ್ವಾ - ಹೇಳಿ, ಉದಧಿಃ - ಸಮುದ್ರನು, ನಷ್ಟಃ - ಅದೃಶ್ಯನಾದನು, ತದಾ - ಆ ಕಾಲದಲ್ಲಿ, ನಳಃ - ನಳನೆಂಬ, ಮಹಾಬಲಃ - ಮಹಾ ಸಾಮರ್ಥ್ಯವಂತನಾದ, ವಾನರಶ್ರೇಷ್ಠಃ - ವಾನರೋತ್ತಮನು, ಸಮುತ್ಥಾಯ - ಎದ್ದು, ರಾಮಂ - ಶ್ರೀರಾಮನನ್ನು ಕುರಿತು, ವಾಕ್ಯಂ - ಮಾತನ್ನು, ಅಬ್ರವೀತ್ - ನುಡಿದನು. || ೪೫ || ಅಹಂ - ನಾನು, ವಿಸ್ತೀರ್ಣೇ - ವಿಸ್ತಾರವಾದ, ವರುಣಾಲಯೇ - ಕಡಲಿನಲ್ಲಿ, ಪಿತುಃ - ತಂದೆಯ, ಸಾಮರ್ಥ್ಯಂ-ಸಾಮರ್ಥ್ಯವನ್ನು, ಆಸ್ಥಾಯ-ಪಡೆದು, ಸೇತುಂ ಸೇತುಬಂಧನವನ್ನು, ಕರಿಷ್ಯಾಮಿ-ಮಾಡುವೆನು, ಮಹೋದಧಿಃ - ಸಮುದ್ರನು, ತತ್ತ್ವಂ - ಯಥಾರ್ಥವಾಗಿ, ಆಹ - ಹೇಳಿದನು. ||೪೬|| ಲೋಕೇ - ಲೋಕದಲ್ಲಿ, ಪುರುಷಸ್ಯ - ಪುರುಷನಿಗೆ, ದಂಡಯೇವ - ದಂಡೋಪಾಯವೇ, ವರಃ - ಶ್ರೇಷ್ಠವಾದದ್ದು, ಇತಿ - ಇಂತೆಂದು, ಮೇ - ನನ್ನ, ಮತಿಃ - ಬುದ್ಧಿಯು, ಅಕೃತಜ್ಞೇಷು - ಕೃತಜ್ಞ

ರಚನಾಕಾರ್ಯದಲ್ಲಿ ಈತನು ತಂದೆಗೆ ಸಮಾನನಾಗಿರುವನು" ಎಂದು ಹೇಳಿ ಅಂತರ್ಧಾನವಾದನು. ಆಗ ಮಹಾ ಬಲಾಢ್ಯನಾದ ನಳನು ಉತ್ಸಾಹಪೂರಿತನಾಗಿ ಶ್ರೀರಾಮನನ್ನು ಕುರಿತು, "ಶ್ರೀರಾಮಾ! ನಾನು ನನ್ನ ತಂದೆಯಿತ್ತ ಶಕ್ತಿಯನ್ನವಲಂಬಿಸಿ, ಮಹಾ ವಿಶಾಲವಾದ ಈ ಸಮುದ್ರದಲ್ಲಿ ಸೇತುವನ್ನು ಕಟ್ಟುವೆನು. ಸಮುದ್ರರಾಜನು ಹೇಳಿದ ಮಾತು ಯಥಾರ್ಥವಾದುದು. ಅಯ್ಯಾ ವಾನರಿರಾ! ಲೋಕದಲ್ಲಿ ಕೃತಘ್ನರಾದವರ ವಿಷಯದಲ್ಲಿ ಕ್ಷಮೆಯಾಗಲಿ, ಸಾಮದಾನೋಪಾಯಗಳಾಗಲಿ ಪ್ರಯೋಜನಕ್ಕೆ ಬರುವುದಿಲ್ಲವು. ಅಂಥವರ ವಿಷಯದಲ್ಲಿ ಪುರುಷನಾದವನು ದಂಡೋಪಾಯವನ್ನೇ ಅವಲಂಬಿಸುವುದು ಮೇಲೆಂದು ನನ್ನ ಅಭಿಪ್ರಾಯವು. ಮಹಾ ಭಯಂಕರಾಕಾರನಾದ ಈ ಸಾಗರನು ಸಗರಚಕ್ರವರ್ತಿಯು ಭೂಖನನ ಮಾಡಿಸಿದುದರಿಂದಲ್ಲವೆ ಅಗಾಧ ಜಲಸಮೃದ್ಧಿಯನ್ನು ಪಡೆದು ಮಹಾ ಸಾಗರನೆಂದು ಪ್ರಖ್ಯಾತನಾದುದು? ಆದರೂ ಸ್ವಲ್ಪವಾದರೂ ಕೃತಜ್ಞತೆಯಿಲ್ಲದೆ, ಶ್ರೀರಾಮನು ದಂಡಿಸುವನೆಂಬ ಭಯದಿಂದಲೇ ಅಲ್ಲವೆ ತನ್ನಲ್ಲಿ ಸೇತುವೆಯನ್ನು ಕಟ್ಟಲು ಅವಕಾಶವಿತ್ತುದು. || ೪೨—೪೬ || ಶ್ರೀರಾಮಾ! ಮಂದರಪರ್ವತದಲ್ಲಿ ವಿಶ್ವಕರ್ಮನು ನನ್ನ ಜನನಿಗೆ ವರವಿತ್ತನು. ನಾನು ಆತನ ಪುತ್ರಶ್ರೇಷ್ಠನು.

[1] "ಮಕರಾಲಯೇ" ತಿ. ರಾ, ಪಾ.

ದಾನಮಥಾಪಿ ವಾ || ೪೭ || ಅಯಂಹಿ ಸಾಗರೋ ಭೀಮಸ್ಸೇತುಕರ್ಮ ದಿದೃಕ್ಷಯಾ। ದದೌ ದಂಡಭಯಾದ್ಗಾಧಂ ರಾಘವಾಯ ಮಹೋದಧಿಃ || ೪೮ || ಮಮ ಮಾತು ರ್ವರೋ ದತ್ತೋ ಮಂದರೇ ವಿಶ್ವಕರ್ಮಣಾ । * ಔರಸಸ್ತಸ್ಯ ಪುತ್ರೋಹಂ ಸದೃಶೋ ವಿಶ್ವಕರ್ಮಣಾ ||೪೯|| § ಸ್ಮಾರಿತೋಽಸ್ಮ್ಯಹಮೇತೇನ ತತ್ತ್ವಮಾಹ ಮಹೋದಧಿಃ । ನಚಾಪ್ಯಹಮನುಕ್ತೋವೈ ಪ್ರಬ್ರೂಯಾಮಾತ್ಮನೋ ಗುಣಾನ್ || ೫೦ || ಸಮರ್ಥ ಶ್ಚಾಪ್ಯಹಂ ಸೇತುಂ ಕರ್ತುಂ ವೈ ವರುಣಾಲಯೇ । ಕಾಮಮದ್ಯೈವ ಬಧ್ನಂತು ಸೇತುಂ ವಾನರಪುಂಗವಾಃ" || ೫೧ || ತತೋಽತಿಸೃಷ್ಟಾ ರಾಮೇಣ ಸರ್ವತೋ ಹರಿ

ರಲ್ಲದಿರುವಲ್ಲಿ, ಕ್ಷಮಾಂ - ಉಪಶಾಂತಿಯನ್ನು, ಸಾಂತ್ವಂ - ಸಾಮೋಪಾಯವನ್ನು, ಅಥ - ಬಳಿಕ, ದಾನಮಪಿವಾ - ದಾನೋಪಾಯವನ್ನೇ ಆಗಲಿ, ಧಿಕ್ - ನಿಂದಿಸಬೇಕು. || ೪೭ || ಹಿ - ಯಾವ ಕಾರಣದಿಂದ, ಸಾಗರಃ - ಸಗರವಂಶೋತ್ಪನ್ನರಿಂದ ನಿರ್ಮಿತನಾದ, ಭೀಮಃ - ಭಯಂಕರನಾದ, ಅಯಂಮಹೋದಧಿಃ - ಈ ಸಮುದ್ರನು, ಸೇತು.....ಯಾ - ಸೇತುವೆಯ ಕಟ್ಟಾಣಿಕೆಯನ್ನು ನೋಡ ಬಯಸಿ, ದಂಡಭಯಾತ್ - ಶಿಕ್ಷಾಭಯದಿಂದಲೇ, ರಾಘವಾಯ - ಶ್ರೀರಾಮನಿಗೋಸುಗ, ಗಾಧಂ - ಔನ್ನತ್ಯವನ್ನು, ದದೌ - ಕೊಟ್ಟನು. || ೪೮ || ವಿಶ್ವಕರ್ಮಣಾ - ವಿಶ್ವಕರ್ಮನಿಂದ, ಮಂದರೇ - ಮಂದರಪರ್ವತದಲ್ಲಿ, ಮಮ - ನನ್ನ, ಮಾತುಃ - ತಾಯಿಗೆ, ವರಃ - ವರವು, ದತ್ತಃ - ಕೊಡ ಲ್ಪಟ್ಟಿತು, ಅಹಂ - ನಾನು, ತಸ್ಯ - ಆ ವಿಶ್ವಕರ್ಮನಿಗೆ, ಔರಸಃಪುತ್ರಃ - ಔರಸಪುತ್ರನು, ವಿಶ್ವ ಕರ್ಮಣಾ - ವಿಶ್ವಕರ್ಮನೊಡನೆ, ಸದೃಶಃ - ಸಮಾನನು. || ೪೯ || ಅಹಂ - ನಾನು, ಏತೇನ - ಈ ಸಮುದ್ರನಿಂದ, ಸ್ಮಾರಿತಃ - ಜ್ಞಾಪಿಸಲ್ಪಟ್ಟವನು, ಅಸ್ಮಿ - ಆದೆನು, ಮಹೋದಧಿಃ - ಸಮುದ್ರವು, ತತ್ತ್ವಂ - ಯಥಾರ್ಥವಾಗಿ, ಆಹ - ಹೇಳಿದನು, ಅಹಮಪಿ - ನಾನೂ, ಅನುಕ್ತಃ - ಹೇಳಲ್ಪಡದೆಯೇ, ಆತ್ಮನಃ - ನನ್ನ, ಗುಣಾನ್ - ಗುಣಗಳನ್ನು, ನಪ್ರಬ್ರೂಯಾಂ - ಹೇಳಲಾರೆನು. || ೫೦ || ಅಹಂ ಚಾಪಿ - ನಾನಾದರೋ, ವರುಣಾಲಯೇ - ಸಮುದ್ರದಲ್ಲಿ, ಸೇತುಂ - ಸೇತುವನ್ನು, ಕರ್ತುಂ - ಮಾಡು ವುದಕ್ಕೆ, ಸಮರ್ಥಶ್ಚ - ಸಮರ್ಥನು, ವಾನರಪುಂಗವಾಃ - ವಾನರೋತ್ತಮರು, ಅದ್ಯೈವ - ಈಗಲೇ, ಕಾಮಂ - ಇಚ್ಛಾನುಸಾರವಾಗಿ, ಸೇತುಂ - ಸೇತುವನ್ನು, ಬಧ್ನಂತು - ಕಟ್ಟಲಿ, ಇತಿ - ಇಂತೆಂದು, ನಳಃ - ನಳನು, ಅಬ್ರವೀತ್ - ನುಡಿದನು. || ೫೧ || ತತಃ - ಬಳಿಕ, ರಾಮೇಣ - ಶ್ರೀರಾಮನಿಂದ,

ಶಿಲ್ಪವಿದ್ಯೆಯಲ್ಲಿ ಆತನಿಗೆ ಸಮಾನನಾದವನು. ಮೇಲಾಗಿ ಈಗ ನಾನು ಆತ್ಮಪ್ರಶಂಶೆಯನ್ನು ಮಾಡಿಕೊಳ್ಳುತ್ತಿಲ್ಲವು. ಇತರರು ಹೇಳದ ನನ್ನ ಗುಣಗಳನ್ನು ನಾನು ಸ್ವಲ್ಪವೂ ಹೇಳಿ ಕೊಳ್ಳುತ್ತಿಲ್ಲವು. ಈಗ ನಾನು ಈ ಸಮುದ್ರದಲ್ಲಿ ಸೇತುವೆಯನ್ನು ಕಟ್ಟುವೆನು. ಸಮುದ್ರ ರಾಜನು ಯಥಾರ್ಥವನ್ನೇ ನುಡಿದನು. ನಾನು ಈ ವಿಚಾರಗಳೆಲ್ಲವನ್ನೂ ಮರೆತಿದ್ದೆನು. ಶ್ರೀರಾಮಚಂದ್ರ! ನಿನ್ನ ಅನುಮತಿಯಿಂದ ಈ ವಾನರವೀರರೆಲ್ಲರೂ ಈಗಲೇ ಸೇತುವೆ ಯನ್ನು ಕಟ್ಟಲು ಪ್ರಯತ್ನಿಸಲಿ" ಎಂದು ಹೇಳಿದನು. || ೪೭–೫೧ || ಆಗ ಶ್ರೀರಾಮನು ಸೇತುವೆಯನ್ನು ಕಟ್ಟಿರೆಂದು ವಾನರರಿಗೆ ಆಜ್ಞಾಪಿಸಿದನು. ಶ್ರೀರಾಮನು ಈ ರೀತಿ ಆಜ್ಞಾ

* "ಮಯಾತು ಸದೃಶಃ ಪುತ್ರಸ್ತವ ದೇವಿ! ಭವಿಷ್ಯತಿ" ತಿ. ಮ. ರಾ. ಪಾ.

§ ಈ ಪಾದವು ಗೋ. ಪಾಠದಲ್ಲಿ ಅಧಿಕ.

ಯೂಥಪಾಃ । ಅಭಿಪೇತುರ್ಮಹಾರಣ್ಯಂ ಹೃಷ್ಟಾಶ್ಶತಸಹಸ್ರಶಃ ॥ ೫೨ ॥ ತೇ ನಗಾನ್ನಗಸಂಕಾಶಾಃ ಶಾಖಾಮೃಗಗಣರ್ಷಭಾಃ । ಬಭಂಜುರ್ವಾನರಾಸ್ತತ್ರ ಪ್ರಚಕರ್ಷುಶ್ಚ ಸಾಗರಂ ॥ ೫೩ ॥ ತೇ ಸಾಲೈಶ್ಚಾಶ್ವಕರ್ಣೈಶ್ಚ ಧವೈರ್ವಂಶೈಶ್ಚ ವಾನರಾಃ । ಕುಟಜೈರರ್ಜುನೈಸ್ತಾಲೈಸ್ತಿಲಕೈಸ್ತಿಮಿಶೈರಪಿ । ಬಿಲ್ವೈಶ್ಚ ಸಪ್ತಪರ್ಣೈಶ್ಚ ಕರ್ಣಿಕಾರೈಶ್ಚ ಪುಷ್ಪಿತೈಃ । ಚೂತೈಶ್ಚಾಶೋಕವೃಕ್ಷೈಶ್ಚ ಸಾಗರಂ ಸಮಪೂರಯನ್ ॥ ೫೫ ॥ ಸಮೂಲಾಂಶ್ಚ ವಿಮೂಲಾಂಶ್ಚ ಪಾದಪಾನ್ ಹರಿಸತ್ತಮಾಃ । ಇಂದ್ರಕೇತೂನಿವೋದ್ಯಮ್ಯ ಪ್ರಜಹ್ರುರ್ಹರಯಸ್ತರೂನ್ ॥ ೫೬ ॥ ತಾಲಾನ್ ದಾಡಿಮಗುಲ್ಮಾಂಶ್ಚ ನಾರಿ

---

ಅತಿಸೃಷ್ಟಾಃ - ಕಳುಹಲ್ಪಟ್ಟ, ಶತಸಹಸ್ರಶಃ - ಲಕ್ಷೋಪಲಕ್ಷ ಸಂಖ್ಯೆಯುಳ್ಳ, ಹರಿಯೂಥಪಾಃ - ವಾನರಯೂಥಪತಿಗಳು, ಸರ್ವತಃ - ಎಲ್ಲ ಪ್ರದೇಶಗಳಲ್ಲಿಯೂ, ಮಹಾರಣ್ಯಂ - ದೊಡ್ಡ ಅರಣ್ಯವನ್ನು ಕುರಿತು, ಅಭಿಪೇತುಃ - ತೆರಳಿದರು. ॥ ೫೨ ॥ ನಗರಸಂಕಾಶಾಃ - ಬೆಟ್ಟಕ್ಕೆ ಸಮಾನರಾದ, ತೇಶಾ....ಭಾಃ - ವಾನರಯೂಥಪತಿಗಳಾದ, ವಾನರಾಃ - ಕಪಿಗಳು, ತತ್ರ - ಆ ಅರಣ್ಯದಲ್ಲಿ, ನಗಾನ್ - ಗಿಡಗಳನ್ನೂ ಬೆಟ್ಟಗಳನ್ನೂ, ಬಭಂಜುಃ - ಮುರಿದರು, ಸಾಗರಂ - ಕಡಲನ್ನು ಕುರಿತು, ಪ್ರಚಕರ್ಷುಶ್ಚ - ಎಳೆದುಕೊಂಡು ಬಂದರು. ॥ ೫೩ ॥ ತೇವಾನರಾಃ - ಆ ಕಪಿಗಳು, ಸಾಲೈಃ - ಸಾಲವೃಕ್ಷಗಳಿಂದಲೂ, ಅಶ್ವಕರ್ಣೈಶ್ಚ - ಮತ್ತೀಗಿಡಗಳಿಂದಲೂ, ಧವೈಃ - ಕಗ್ಗಲೀಗಿಡಗಳಿಂದಲೂ, ವಂಶೈಶ್ಚ - ಬಿದಿರುಗಳಿಂದಲೂ, ಕುಟಜೈಃ-ಗೋರಂಟೀಗಿಡಗಳಿಂದಲೂ, ಅರ್ಜುನೈಃ-ಕದಂಬವೃಕ್ಷಗಳಿಂದಲೂ, ತಾಲೈಃ - ತಾಳೇಗಿಡಗಳಿಂದಲೂ, ತಿಲಕೈಃ - ಸೂಲೀಗಿಡಗಳಿಂದಲೂ, ತಿಮಿಶೈರಪಿ - ನೇಮಿಾಗಿಡಗಳಿಂದಲೂ, ಬಿಲ್ವೈಶ್ಚ - ಬಿಲ್ವವೃಕ್ಷಗಳಿಂದಲೂ, ಸಪ್ತಪರ್ಣೈಶ್ಚ - ಏಳೆಲೆ ಬಾಳೆಯ ಗಿಡಗಳಿಂದಲೂ, ಪುಷ್ಪಿತೈಃ - ಹುವ್ವು ಬಿಟ್ಟಿರುವ, ಕರ್ಣಿಕಾರೈಶ್ಚ - ಬೆಟ್ಟದ ತಾವರೆಗಳಿಂದಲೂ, ಚೂತೈಶ್ಚ - ಮಾವಿನ ಮರಗಳಿಂದಲೂ, ಅಶೋಕೈಶ್ಚ - ಕೆಂಪು ಚಿನ್ನದೆಲೆ ಗಿಡಗಳಿಂದಲೂ, ಸಾಗರಂ - ಕಡಲನ್ನು, ಸಮಪೂರಯನ್ - ತುಂಬಿಸಿದರು. ॥ ೫೫ ॥ ಹರಿಸತ್ತಮಾಃ - ವಾನರೋತ್ತಮರಾದ, ಹರಯಃ - ಕಪಿಗಳು, ಸಮೂಲಾಂಶ್ಚ - ಬುಡಗಳಿಂದ ಕೂಡಿದ, ವಿಮೂಲಾಂಶ್ಚ - ಬುಡಗಳಿಲ್ಲದಿರುವ, ಪಾದಪಾನ್ - ಗಿಡಗಳನ್ನು, ಇಂದ್ರಕೇತೂನಿವ - ಇಂದ್ರಧ್ವಜಗಳನ್ನಂತೆ, ಉದ್ಯಮ್ಯ - ಮೇಲಕ್ಕೆತ್ತಿ, ತರೂನ್ - ಗಿಡಗಳನ್ನು, ಅಜಹ್ರುಃ - ತಂದುಹಾಕಿದರು. ॥ ೫೬ ॥ ತಾಲಾನ್ - ತಾಳೇಮರಗಳನ್ನೂ, ದಾಡಿಮಗುಲ್ಮಾಂಶ್ಚ - ದಾಳಿಂಬರೇಗಿಡಗಳನ್ನೂ, ನಾರಿಕೇಳಾನ್ - ತೆಂಗಿನಗಿಡಗಳನ್ನೂ, ವಿಭೀತಕಾನ್ - ತಾರೇ

---

ಪಿಸಿದೊಡನೆಯೇ ಆ ವಾನರವೀರರೆಲ್ಲರೂ ಅತ್ಯಂತ ಸಂತುಷ್ಟರಾಗಿ ಲಕ್ಷಲಕ್ಷಗಳಾಗಿ ಗುಂಪು ಕಟ್ಟಿಕೊಂಡು ಸುತ್ತಮುತ್ತಲಿದ್ದ ಮಹಾರಣ್ಯಗಳಿಗೆ ಹೋಗಿ ದೊಡ್ಡದೊಡ್ಡ ಬೆಟ್ಟಗಳಿಗೆ ಸಮಾನಗಳಾದ ಮಹಾ ವೃಕ್ಷಗಳೆಲ್ಲವನ್ನೂ ಮುರಿದು ಸಮುದ್ರಕ್ಕೆ ಸೇರಿಸಿದರು. ಇಷ್ಟೆಯಲ್ಲದೆ ಮಹಾ ಪರಾಕ್ರಮಶಾಲಿಗಳಾದ ಆ ವಾನರರು ಆ ಮಹಾರಣ್ಯದಲ್ಲಿದ್ದ ಸಾಲ, ಅಶ್ವಕರ್ಣ, ಧವ, ಬಿದಿರು, ಅಶೋಕ, ಕುಟಜ, ಅರ್ಜುನ, ತಾಲ, ತಿಲಕ, ತಿಮಿಶ, ಬಿಲ್ವ, ಸಪ್ತಪರ್ಣ, ಕರ್ಣಿಕಾರ, ಚೂತ ಇವೇ ಮೊದಲಾದ ಮಹಾ ವೃಕ್ಷಗಳೆಲ್ಲವನ್ನೂ, ಕೆಲವನ್ನು ಬುಡಸಹಿತವಾಗಿಯೂ, ಕೆಲವನ್ನು ಬುಡವಿಲ್ಲದೆಯೂ ಕಿತ್ತು ಇಂದ್ರಧ್ವಜಗಳನ್ನಂತೆ ಅವುಗಳನ್ನು ಹೊತ್ತು ತಂದ ಸಮುದ್ರದಲ್ಲಿ ಹಾಕಿದರು. ದಾಳಿಂಬರೆ, ತೆಂಗು, ವಕುಳ, ವಿಭೀತಕ, ನಿಂಬ ಮೊದಲಾದ ಅನೇಕ ಗಿಡಮರಗಳನ್ನು ಉರುಳಿಸಿ ತಂದು ಸಮುದ್ರಕ್ಕೆ ಸೇರಿಸಿ

ಕೇಳಾನ್ನಿಭೀತಕಾರ್ | ವಕುಳಾರ್ ಖದಿರಾನ್ನಿಂಬಾರ್ ಸಮಾಜಹ್ರುಸ್ಸಮಂತತಃ ||೫೭|| ಹಸ್ತಿಮಾತ್ರಾನ್ಮಹಾಕಾಯಾಃ ಪಾಷಾಣಾಂಶ್ಚ ಮಹಾಬಲಾಃ | ಪರ್ವತಾಂಶ್ಚ ಸಮುತ್ಪಾಟ್ಯ ಯಂತ್ರೈಃ ಪರಿವಹಂತಿಚ || ೫೮ || ಪ್ರಕ್ಷಿಪ್ಯಮಾಣೈರಚಲೈಸ್ಸಹಸಾ ಜಲಮುದ್ಧತಂ | ಸಮುತ್ಪತಿತಮಾಕಾಶಮುಪಾಸರ್ಪತ್ತತಸ್ತತಃ || ೫೯ || ಸಮುದ್ರಂ ಕ್ಷೋಭಯಾಮಾಸುರ್ವಾನರಾಶ್ಚ ಸಮಂತತಃ | ಸೂತ್ರಾಣ್ಯನ್ಯೇ ಪ್ರಗೃಹ್ಣಂತಿ ವ್ಯಾಯತಂ ಶತಯೋಜನಂ || ೬೦ || ದಂಡಾನನ್ಯೇ ಪ್ರಗೃಹ್ಣಂತಿ ವಿಚಿನ್ವಂತಿ ತಥಾಪರೇ || ೬೧ || ನಳಶ್ಚಕ್ರೇ ಮಹಾಸೇತುಂ ಮಧ್ಯೇ ನದನದೀಪತೇಃ | ಸತಥಾ ಕ್ರಿಯತೇ ಸೇತುರ್ವಾನರೈರ್ಘೋರಕರ್ಮಭಿಃ || ೬೨ || ವಾನರಾಶ್ಯತಶಸ್ತತ್ರ ರಾಮ

---

ಗಿಡಗಳನ್ನೂ, ವಕುಳಾರ್ - ಹುಲ್ಲುಮದ್ದೀಗಿಡಗಳನ್ನೂ, ಖದಿರಾರ್ - ಕಗ್ಗಲೀಗಿಡಗಳನ್ನೂ, ನಿಂಬಾರ್ - ಬೇವಿನಗಿಡಗಳನ್ನೂ, ಸಮಂತತಃ - ಎಲ್ಲಾ ಕಡೆಗಳಲ್ಲಿಯೂ, ಸಮಾಜಹ್ರುಃ - ತಂದರು. || ೫೭ || ಮಹಾಕಾಯಾಃ - ದೊಡ್ಡ ಶರೀರಗಳುಳ್ಳ, ಮಹಾಬಲಾಃ - ಬಹಳ ಬಲಶಾಲಿಗಳಾದ ಕಪಿಗಳು, ಹಸ್ತಿಮಾತ್ರಾರ್ - ಗಜಪ್ರಮಾಣಗಳುಳ್ಳ, ಪಾಷಾಣಾಂಶ್ಚ - ಪಾಷಾಣಗಳನ್ನೂ, ಪರ್ವತಾಂಶ್ಚ - ಬೆಟ್ಟಗಳನ್ನೂ, ಸಮುತ್ಪಾಟ್ಯ - ಕಿತ್ತುತಂದು, ಯಂತ್ರೈಃ - ಬೆಟ್ಟಗಳನ್ನು ಸಾಗಿಸಿಕೊಂಡು ಬರುವ ಯಂತ್ರವಿಶೇಷಗಳಿಂದ, ಪರಿವಹಂತಿಚ - ಹೊತ್ತು ತರುತ್ತಿದ್ದರು. ||೫೮|| ಪ್ರಕ್ಷಿಪ್ಯಮಾಣೈಃ - ಎತ್ತಿಹಾಕಲ್ಪಡುತ್ತಿರುವ, ಅಚಲೈಃ - ಬೆಟ್ಟಗಳಿಂದ, ಉದ್ಧತಂ - ಹೊಡೆಯಲ್ಪಟ್ಟ, ಜಲಂ - ಉದಕವು, ಸಹಸಾ - ಜಾಗ್ರತೆಯಾಗಿ, ಆಕಾಶಂ - ಅಂತರಿಕ್ಷವನ್ನು ಕುರಿತು, ಸಮುತ್ಪತಿತಂ - ಹಾರುತ್ತಿರುವುದಾಗಿ, ತತಸ್ತತಃ - ಅಲ್ಲಲ್ಲಿ, ಉಪಾಸರ್ಪತ್ - ಪ್ರಸರಿಸಿತು. || ೫೯ || ವಾನರಾಶ್ಚ - ಕಪಿಗಳು, ಸಮಂತತಃ - ಎಲ್ಲಾ ಕಡೆಗಳಲ್ಲಿಯೂ, ಸಮುದ್ರಂ - ಕಡಲನ್ನು, ಕ್ಷೋಭಯಾಮಾಸುಃ - ಕೆಸರಾಗಿಸಿದರು, ಅನ್ಯೇ - ಕೆಲವರು, ಸೂತ್ರಾಣಿ - ಧಾರಗಳನ್ನು, ವ್ಯಾಯತಂ - ವಿಸ್ತಾರವಾದ, ಶತಯೋಜನಂ - ನೂರುಗಾವುದವೂ, ಪ್ರಗೃಹ್ಣಂತಿ - ಹಿಡಿದರು. || ೬೦ || ಅನ್ಯೇ - ಕೆಲವರು, ದಂಡಾರ್ - ದಂಡಗಳನ್ನು, ಪ್ರಗೃಹ್ಣಂತಿ - ಹಿಡಿದರು, ತಥಾ - ಹಾಗೆಯೇ, ಅಪರೇ - ಕೆಲವರು, ವಿಚಿನ್ವಂತಿ - ಕಲ್ಲುಗಳನ್ನು ಪರೀಕ್ಷಿಸಿದರು. || ೬೧ || ನಳಃ - ನಳನು, ನದನದೀಪತೇಃ - ನದಗಳಿಗೂ, ನದಿಗಳಿಗೂ ಒಡೆಯನಾದ ಸಮುದ್ರದ, ಮಧ್ಯೇ - ಮಧ್ಯಪ್ರದೇಶದಲ್ಲಿ, ಮಹಾಸೇತುಂ - ದೊಡ್ಡ ಸೇತುವನ್ನು, ಚಕ್ರೇ - ಮಾಡಿದನು, ಘೋರಕರ್ಮಭಿಃ - ಕ್ರೂರಕರ್ಮಿಗಳಾದ, ವಾನರೈಃ - ಕಪಿಗಳಿಂದ, ಸಸೇತುಃ - ಆ ಸೇತುವು, ತಥಾ - ಆ ಪ್ರಕಾರವಾಗಿ, ಕ್ರಿಯತೇ - ಮಾಡಲ್ಪಟ್ಟಿತು. || ೬೨ ||

---

ದರು. ಮಹಾಕಾಯರಾದ ಆ ವಾನರರು ಆನೆಯಗಾತ್ರದ ದೊಡ್ಡದೊಡ್ಡ ಬಂಡೆಗಳನ್ನೂ, ಪರ್ವತಗಳನ್ನೂ ಕಿತ್ತು ಯಂತ್ರಮೂಲಕವಾಗಿ ಹೊತ್ತು ತಂದು ಸಮುದ್ರದಲ್ಲಿ ಕೆಡವಿದರು. ಹೀಗೆ ಆ ವಾನರರು ಆ ಬಂಡೆಗಳನ್ನೂ, ಬೆಟ್ಟಗಳನ್ನೂ ತಂದು ಹಾಕಿದ ಸಮಯದಲ್ಲಿ ಸಮುದ್ರೋದಕವು ಆಕಾಶದಲ್ಲಿ ಒಂದು ಯೋಜನದಷ್ಟು ಮೇಲಕ್ಕೆ ಹಾರಿತು. || ೫೨–೬೦ || ಸೇತುವೆಯನ್ನು ಕಟ್ಟುವಾಗ ಆ ವಾನರರಲ್ಲಿ ಕೆಲವರು, ನೂರುಗಾವುದದುದ್ದವೂ ದಾರವನ್ನು ಹಿಡಿದರು ; ಕೆಲವರು ಅಳತೆಗೋಲುಗಳನು ಹಿಡಿದರು ; ಇನ್ನು ಕೆಲವರು ಕಟ್ಟಡವನ್ನು ಪರೀಕ್ಷಿಸುತ್ತಿದ್ದರು, ಹೀಗೆ ನಳನು ಸಮುದ್ರಮಧ್ಯದಲ್ಲಿ ಹತ್ತುಗಾವುದದಗಲವುಳ್ಳದೂ, ನೂರುಗಾವುದದುದ್ದವುಳ್ಳದೂ ಆದ ಮಹಾ ಸೇತುವೆಯನ್ನು ಕಟ್ಟಲುಪಕ್ರಮಿಸಿದನು. ಶ್ರೀರಾಮಾಜ್ಞೆ

ಸ್ಯಾಜ್ಞಾಪುರಸ್ಸರಾಃ । ಮೇಘಾಭೈಃ ಪರ್ವತಾಗ್ರೈಶ್ಚ ತೃಣೈಃ ಕಾಷ್ಠೈರ್ಬಬಂಧಿರೇ ।
ಪುಷ್ಪಿತಾಗ್ರೈಶ್ಚ ತರುಭಿಸ್ಸೇತುಂ ಬಧ್ನಂತಿ ವಾನರಾಃ ॥ ೬೩ ॥ ಪಾಷಾಣಾಂಶ್ಚ ಗಿರಿ
ಪ್ರಖ್ಯಾನ್ ಗಿರೀಣಾಂ ಶಿಖರಾಣಿಚ । ದೃಶ್ಯಂತೇ ಪರಿಧಾವಂತೋ ಗೃಹ್ಯ ವಾರಣ
ಸನ್ನಿಭಾಃ ॥ ೬೪ ॥ ಶಿಲಾನಾಂ ಕ್ಷಿಪ್ಯಮಾಣಾನಾಂ ಶೈಲಾನಾಂಚ ನಿಪಾತ್ಯತಾಂ ।
ಬಭೂವ ತುಮುಲಃ ಶಬ್ದಸ್ತದಾ ತಸ್ಮಿನ್ ಮಹೋದಧೌ ॥ ೬೫ ॥ ಕೃತಾನಿ ಪ್ರಥಮೇ
ನಾಹ್ನಾ ಯೋಜನಾನಿ ಚತುರ್ದಶ । ಪ್ರಹೃಷ್ಟೈರ್ಗಜಸಂಕಾಶೈಸ್ತ್ವರಮಾಣೈಃ ಪ್ಲವಂ
ಗಮೈಃ ॥ ೬೬ ॥ ದ್ವಿತೀಯೇನ ತಥಾ ಚಾಹ್ನಾ ಯೋಜನಾನಿ ತು ವಿಂಶತಿಃ । ಕೃತಾನಿ

---

ತತ್ರ - ಆ ಸಮುದ್ರದಲ್ಲಿ, ರಾಮಸ್ಯ - ಶ್ರೀರಾಮನ, ಆಜ್ಞಾಪುರಸ್ಸರಾಃ - ಆಜ್ಞೆಯೇ ಮುಂದಾಗುಳ್ಳ, ಶತಶಃ - ಅನೇಕ ಸಂಖ್ಯಾಕರಾದ, ವಾನರಾಃ - ಕಪಿಗಳು, ಮೇಘಾಭೈಃ - ಮೇಘಗಳಂತೆ ಹೊಳೆಯುತ್ತಿರುವ, ಪರ್ವತಾಗ್ರೈಶ್ಚ - ಬೆಟ್ಟದ ಶಿಖರಗಳಿಂದಲೂ, ತೃಣೈಃ - ಹುಲ್ಲುಗಳಿಂದಲೂ, ಕಾಷ್ಠೈಶ್ಚ - ಒಣಗಿದ ಕಟ್ಟಿಗೆಗಳಿಂದಲೂ, ಬಬಂಧಿರೇ - ಕಟ್ಟಿದರು. ॥ ೬೩ ॥ ವಾನರಾಃ - ಕಪಿಗಳು, ಪುಷ್ಪಿತಾಗ್ರೈಶ್ಚ - ಹುವ್ವ ಬಿಟ್ಟಿರುವ ತುದಿಗಳುಳ್ಳ, ತರುಭಿಃ - ಗಿಡಗಳಿಂದಲೂ, ಸೇತುಂ - ಸೇತುವನ್ನು, ಬಧ್ನಂತಿ - ಕಟ್ಟುತ್ತಾರೆ, ಗಿರಿಪ್ರಖ್ಯಾನ್ - ಬೆಟ್ಟಕ್ಕೆ ಸಮಾನವಾದ, ಪಾಷಾಣಾನ್ - ಕಲ್ಲುಗಳನ್ನೂ, ಗಿರೀಣಾಂ - ಬೆಟ್ಟಗಳ, ಶಿಖರಾಣಿಂಚ - ಶೃಂಗಗಳನ್ನೂ, ಗೃಹ್ಯ - ತೆಗೆದುಕೊಂಡು, ವಾರಣಸನ್ನಿಭಾಃ - ಆನೆಗಳಿಗೆ ಸಮಾನರಾದ ವಾನರರು, ಪರಿಧಾವಂತಃ - ಓಡಿಬರುತ್ತಿರುವವರಾಗಿ, ದೃಶ್ಯಂತೇ - ಕಾಣುತ್ತಿದ್ದರು. ॥ ೬೪ ॥ ತದಾ - ಆ ಕಾಲದಲ್ಲಿ, ತಸ್ಮಿನ್ಮಹೋದಧೌ - ಆ ಕಡಲಿನಲ್ಲಿ, ಕ್ಷಿಪ್ಯಮಾಣಾನಾಂ - ಕಿತ್ತುಹಾಕಲ್ಪಡುತ್ತಿರುವ, ಶಿಲಾನಾಂ - ಪಾಷಾಣಗಳ, ನಿಪಾತ್ಯತಾಂ - ಬೀಳಿಸಲ್ಪಡುತ್ತಿರುವ, ಶೈಲಾನಾಂಚ - ಬೆಟ್ಟಗಳ, ತುಮುಲಃ - ಸಂಕುಲವಾದ, ಶಬ್ದಃ - ಕೋಲಾಹಲಧ್ವನಿಯು, ಬಭೂವ - ಆಯಿತು. ॥ ೬೫ ॥ ಪ್ರಹೃಷ್ಟೈಃ - ಸಂತೋಷಗೊಂಡಿರುವ, ಗಜಸಂಕಾಶೈಃ - ಆನೆಗಳಿಗೆ ಸಮಾನಗಳಾದ, ತ್ವರಮಾಣೈಃ - ತ್ವರೆಗೊಂಡಿರುವ, ಪ್ಲವಂಗಮೈಃ - ಕಪಿಗಳಿಂದ, ಪ್ರಥಮೇನಾಹ್ನಾ - ಮೊದಲ ದಿನದಲ್ಲಿ, ಚತು....ನಿ - ಹದಿನಾಲ್ಕು ಯೋಜನಗಳು, ಕೃತಾನಿ - ಮಾಡಲ್ಪಟ್ಟುವು, ತಥಾ - ಹಾಗೆಯೇ, ದ್ವಿತೀಯೇನಾಹ್ನಾಚ - ಎರಡನೆಯ ದಿನದಲ್ಲಿ, ವಿಂಶತಿರ್ಯೋಜನಾನಿ - ಇಪ್ಪತ್ತು ಗಾವುದದ ನೆಲವು, ಭೀಮಕಾಯೈಃ - ಭಯಂಕರವಾದ ಶರೀರಗಳುಳ್ಳ, ಮಹಾಬಲೈಃ - ಮಹಾ

---

ಯಿಂದ ಆ ವಾನರರು ಗುಂಪುಗುಂಪುಗಳಾಗಿ ಸೇರಿ ಮೇಘಕಾಂತಿಯುಳ್ಳ ಶಿಖರಗಳಿಂದೊಪ್ಪುತ್ತಿರುವ ಪರ್ವತಗಳಿಂದಲೂ, ತೃಣವಿಶೇಷಗಳಿಂದಲೂ ಆ ಸೇತುವೆಯನ್ನು ರಚಿಸಿದರು. ಹೂವೊಳೆತ ರೆಂಬೆಗಳುಳ್ಳ ಮರಗಳಿಂದಲೂ ಆ ಸೇತುವೆಯು ಒಪ್ಪುತ್ತಿದ್ದಿತು. ಆ ಸಮುದ್ರ ತೀರದಲ್ಲಿ ಸೇತುವೆಯನ್ನು ಕಟ್ಟುತ್ತಿದ್ದ ಪರ್ವತಾಕಾರರಾದ ಆ ವಾನರರು, ಬಂಡೆಗಳನ್ನೂ, ಬೆಟ್ಟಗಳನ್ನೂ, ಪರ್ವತಗಳನ್ನೂ ಹೊತ್ತು ಬರುತ್ತ ನೋಡುವವರಿಗೆ ಆಶ್ಚರ್ಯವನ್ನುಂಟು ಮಾಡುತ್ತಿದ್ದರು. ಆ ವಾನರರು ಆ ಸಮುದ್ರದಲ್ಲಿ ದೊಡ್ಡದೊಡ್ಡ ಬಂಡೆಗಳನ್ನೂ ಬೆಟ್ಟಗಳನ್ನೂ ಹಾಕುತ್ತಿದ್ದಾಗ ಮಹಾ ಧ್ವನಿಯುಂಟಾಯಿತು. ॥ ೬೧–೬೫ ॥ ಮಹಾ ಗಜಗಳಿಗೆ ಸಮಾನರಾದ ಆ ಮಹಾವಾನರರು ಮಹೋತ್ಸಾಹದಿಂದ, ಬಹು ಬೇಗನೆಯೇ ಮೊದಲದಿನ ಹದಿನಾಲ್ಕು ಯೋಜನಗಳದೂರ ಸೇತುವೆಯನ್ನು ಕಟ್ಟಿದರು. ಭಯಂಕರಾಕಾರರೂ, ಮಹಾ ಪರಾಕ್ರಮಶಾಲಿಗಳೂ ಆದ ಆ ವಾನರರು ಎರಡನೆಯದಿನ ಇಪ್ಪತ್ತು ಯೋಜನಗಳದೂರ

ಪ್ಲವಗೈಸ್ತೂರ್ಣಂ ಭೀಮಕಾಯೈರ್ಮಹಾಬಲೈಃ ॥ ೬೭ ॥ ಅಹ್ನಾ ತೃತೀಯೇನ ತಥಾ ಯೋಜನಾನಿ ಕೃತಾನಿತು । ತ್ವರಮಾಣೈರ್ಮಹಾಕಾಯೈರೇಕವಿಂಶತಿರೇವಚ ॥ ೬೮ ॥ ಚತುರ್ಥೇನ ತಥಾ ಚಾಹ್ನಾ ದ್ವಾವಿಂಶತಿರಥಾಪಿಚ । ಯೋಜನಾನಿ ಮಹಾವೇಗೈಃ ಕೃತಾನಿ ತ್ವರಿತೈಸ್ತು ತೈಃ ॥ ೬೯ ॥ ಪಂಚಮೇನ ತಥಾ ಚಾಹ್ನಾ ಪ್ಲವಗೈಃ ಕ್ಷಿಪ್ರಕಾರಿಭಿಃ । ಯೋಜನಾನಿ ತ್ರಯೋವಿಂಶತ್ಸುವೇಲಮಧಿಕೃತ್ಯ ವೈ ॥ ೭೦ ॥ ಸವಾನರವರಃ ಶ್ರೀಮಾನ್ ವಿಶ್ವಕರ್ಮಾತ್ಮಜೋ ಬಲೀ । ಬಬಂಧ ಸಾಗರೇ ಸೇತುಂ ಯಥಾ ಚಾಸ್ಯ ಪಿತಾ ತಥಾ ॥ ೭೧ ॥ ಸನಳೇನ ಕೃತಸ್ಸೇತುಸ್ಸಾಗರೇ ಮಕರಾಲಯೇ । ಶುಶುಭೇ ಸುಭಗಃ ಶ್ರೀಮಾನ್ ಸ್ವಾತೀಪಥ ಇವಾಂಬರೇ ॥ ೭೨ ॥ ತತೋ ದೇವಾಸ್ಸ

ಬಲಿಷ್ಠರಾದ, ಪ್ಲವಂಗಮೈಃ - ವಾನರರಿಂದ, ತೂರ್ಣಂ - ಜಾಗ್ರತೆಯಾಗಿ, ಕೃತಾನಿ - ಸೇತುಬಂಧನ ಮಾಡಲ್ಪಟ್ಟವು. ॥ ೬೭ ॥ ತಥಾ - ಹಾಗೆಯೆ, ತೃತೀಯೇನಾಹ್ನಾ - ಮೂರನೆಯ ದಿನದಲ್ಲಿ, ಮಹಾಕಾಯೈಃ - ದೊಡ್ಡ ಶರೀರಗಳುಳ್ಳ, ತ್ವರಮಾಣೈಃ - ಸೀತಾದರ್ಶನಕ್ಕೆ ತ್ವರೆಗೊಂಡಿರುವ ವಾನರರಿಂದ, ಏಕವಿಂಶತಿರೇವಚ - ಇಪ್ಪತ್ತೊಂದು ಸಂಖ್ಯೆಯುಳ್ಳ, ಯೋಜನಾನಿ - ಗಾವುದಗಳು, ಕೃತಾನಿ - ಮಾಡಲ್ಪಟ್ಟುವು. ॥ ೬೮ ॥ ಅಥ - ಒಳಿಕ, ತಥಾ - ಹಾಗೆಯೆ, ಮಹಾವೇಗೈಃ - ಬಹಳ ವೇಗಶಾಲಿಗಳಾದ, ತ್ವರಿತೈಃ - ತ್ವರೆಯುಳ್ಳ ಆ ಕಪಿಗಳಿಂದ, ಚತುರ್ಥೇನಾಹ್ನಾ - ನಾಲ್ಕನೆಯ ದಿನದಲ್ಲಿ, ದ್ವಾವಿಂಶತಿರಪಿಚ - ಇಪ್ಪತ್ತೆರಡು ಸಂಖ್ಯೆಯುಳ್ಳ, ಯೋಜನಾನಿ - ಗಾವುದಗಳು, ಕೃತಾನಿ - ಮಾಡಲ್ಪಟ್ಟವು. ॥೬೯॥ ತಥಾ - ಹಾಗೆಯೇ, ಕ್ಷಿಪ್ರಕಾರಿಭಿಃ - ವೇಗವಾಗಿ ಕೆಲಸಗಳನ್ನು ಮಾಡುತ್ತಿರುವ, ಪ್ಲವಗೈಃ - ವಾನರರಿಂದ, ಸುವೇಲಂ - ಸುವೇಲಪರ್ವತವನ್ನು, ಅಧಿಕೃತ್ಯ - ಅವಧಿಯಾಗಿ ಮಾಡಿಕೊಂಡು, ತಥಾ - ಹಾಗೆಯೇ, ಪಂಚಮೇನಾಹ್ನಾ - ಐದನೆಯ ದಿವಸದಲ್ಲಿ, ತ್ರಯೋವಿಂಶದ್ಯೋಜನಾನಿ - ಇಪ್ಪತ್ತುಮೂರು ಗಾವುದಗಳು, ಕೃತಾನಿ - ಮಾಡಲ್ಪಟ್ಟುವು. ॥ ೭೦ ॥ ಶ್ರೀಮಾನ್ - ನಿರ್ಮಾಣಚಾತುರ್ಯಸಂಪನ್ನನಾದ, ವಿಶ್ವಕರ್ಮಾಜಃ - ವಿಶ್ವಕರ್ಮನಿಗೆ ಕುವರನಾದ, ಬಲೀ - ಬಲವಂತನಾದ, ವಾನರವರಃ - ವಾನರಶ್ರೇಷ್ಠನಾದ, ಸಃ - ಆ ನಳನು, ಅಸ್ಯ - ಈ ನಳನ, ಪಿತಾ - ಯಥಾ - ಹೇಗೆಯೋ, ತಥಾ - ಹಾಗೆಯೇ, ಸಾಗರೇ - ಕಡಲಿನಲ್ಲಿ, ಸೇತುಂ - ಸೇತುವನ್ನು, ಬಬಂಧ- ಕಟ್ಟಿದನು. ॥ ೭೧ ॥ ಮಕರಾಲಯೇ - ನೆಗಳುಗಳಿಗೆ ಸ್ಥಾನಭೂತವಾದ, ಸಾಗರೇ - ಕಡಲಿನಲ್ಲಿ, ನಳೇನ - ನಳನಿಂದ, ಕೃತಃ - ಮಾಡಲ್ಪಟ್ಟ, ಸುಭಗಃ - ಸುಂದರವಾದ, ಶ್ರೀಮಾನ್ - ಸಂಪದ್ಯುಕ್ತವಾಧ, ಸಸೇತುಃ - ಆ ಸೇತುವು, ಅಂಬರೇ - ಅಂತರಿಕ್ಷದಲ್ಲಿ, ಸ್ವಾತೀಪಥಇವ - ಸ್ವಾತೀನಕ್ಷತ್ರದ

ಸೇತುವೆಯನ್ನು ರಚಿಸಿದರು. ಮಹಾಕಾಯರಾದ ಆ ವನಚರರು ಮೂರನೆಯದಿನ ಇಪ್ಪತ್ತೊಂದು ಯೋಜನದಷ್ಟೂ, ನಾಲ್ಕನೆಯದಿನ ಇಪ್ಪತ್ತೆರಡು ಯೋಜನದಷ್ಟೂ, ಐದನೆಯದಿನ ಸುವೇಲಪರ್ವತದವರಗೆ ಇಪ್ಪತ್ತುಮೂರು ಯೋಜನದಷ್ಟು ಸೇತುವೆಯನ್ನು ಕಟ್ಟಿದರು. ॥ ೬೬–೭೦ ॥ ತಂದೆಯಂತೆಯೇ ಶಿಲ್ಪಕಾರ್ಯದಲ್ಲಿ ಮಹಾ ಸಮರ್ಥನೂ, ಮಹಾ ತೇಜಸ್ವಿಯೂ, ಮಹಾ ಬಲಾಢ್ಯನೂ, ವಿಶ್ವಕರ್ಮ ಕುಮಾರನೂ, ವಾನರೋತ್ತಮನೂ ಆದ ನಲನು ಸಮುದ್ರಮಧ್ಯದಲ್ಲಿ ಆ ವಾನರವೀರರ ಸಹಾಯದಿಂದ ಈ ರೀತಿ ನೂರು ಯೋಜನದಷ್ಟು ಸೇತುವೆಯನ್ನು ಕಟ್ಟಿ ಮುಗಿಸಿದನು. ಮಕರಗಳಿಗೆ ವಾಸಸ್ಥಾನವಾದ ಆ ಸಾಗರದಲ್ಲಿ ನಳನು ಕಟ್ಟಿದ ಆ ಸೇತುವೆಯು ಗಗನಮಾರ್ಗದಲ್ಲಿ ಶೋಭಿಸುವ ಸ್ವಾತೀಪಥದಂತೆ ಬಹು

ಗಂಧರ್ವಾಸ್ಸಿದ್ಧಾಶ್ಚ ಪರಮರ್ಷಯಃ । ಆಗಮ್ಯ ಗಗನೇ ತಸ್ಥುರ್ದ್ರಷ್ಟುಕಾಮಾಸ್ತ ದದ್ಭುತಂ ॥ ೭೩ ॥ ದಶಯೋಜನವಿಸ್ತೀರ್ಣಂ ಶತಯೋಜನಮಾಯತಂ । ದದೃಶು ರ್ದೇವಗಂಧರ್ವಾ ನಳಸೇತುಂ ಸುದುಷ್ಕರಂ ॥ ೭೪ ॥ ಆಪ್ಲವಂತಃ ಪ್ಲವಂತಶ್ಚ ಗರ್ಜಂತಶ್ಚ ಪ್ಲವಂಗಮಾಃ । ತದಚಿಂತ್ಯಮಸಹ್ಯಂಚ ಅದ್ಭುತಂ ರೋಮಹರ್ಷಣಂ । ದದೃಶುಸ್ಸರ್ವಭೂತಾನಿ ಸಾಗರೇ ಸೇತುಬಂಧನಂ ॥೭೫-೭೬॥ ತಾನಿ ಕೋಟಿಸಹಸ್ರಾಣಿ ವಾನರಾಣಾಂ ಮಹೌಜಸಾಂ । ಬಧ್ನಂತಸ್ಸಾಗರೇ ಸೇತುಂ ಜಗ್ಮುಃ ಪಾರಂ ಮಹೋ ದಧೇಃ ॥ ೭೭ ॥ ವಿಶಾಲಸ್ಸುಕೃತಶ್ಶ್ರೀಮಾನ್ ಸುಭೂಮಿಸ್ಸುಸಮಾಹಿತಃ । ಅಶೋ

ಮಾರ್ಗದಂತೆ, ಶುಶುಭೇ - ಹೊಳೆಯುತ್ತಿತ್ತು. ॥ ೭೨ ॥ ತತಃ - ಬಳಿಕ, ಸಗಂಧರ್ವಾಃ - ಗಂಧರ್ವ ರಿಂದೊಡಗೂಡಿದ, ದೇವಾಃ - ದೇವತೆಗಳು, ಸಿದ್ಧಾಶ - ಸಿದ್ಧಸಂಕಲ್ಪವಾದ, ಪರಮರ್ಷಯಶ್ಚ - ಉತ್ತಮ ಋಷಿಗಳೂ, ತದದ್ಭುತಂ - ಆ ಆಶ್ಚರ್ಯವನ್ನು, ದ್ರಷ್ಟುಕಾಮಾಃ - ನೋಡಲಿಚ್ಛೆಯುಳ್ಳವ ರಾಗಿ, ಆಗಮ್ಯ - ಬಂದು, ಗಗನೇ - ಅಂತರಿಕ್ಷದಲ್ಲಿ, ತಸ್ಥುಃ - ನಿಂತರು. ॥ ೭೩ ॥ ದಶ......ರ್ಣಂ - ಹತ್ತುಗಾವುದನೆಲವಗಲವುಳ್ಳ, ಶತಯೋಜನಂ - ನೂರುಗಾವುದ, ಆಯುತಂ - ವಿಸ್ತಾರವಾಗುಳ್ಳ, ಸುದುಷ್ಕರಂ - ಯಾರಿಂದಲೂ ಮಾಡಲಸಾಧ್ಯವಾದ, ನಲಸೇತುಂ - ನಳನ ಸೇತುವನ್ನು, ದೇವ ಗಂಧರ್ವಾಃ - ದೇವತೆಗಳೂ ಗಂಧರ್ವರೂ, ದದೃಶುಃ - ಕಂಡರು, ಪ್ಲವಂಗಮಾಃ - ಕಪಿಗಳು, ಆಪ್ಲವಂತಃ - ಹಾರುತ್ತಿರುವವರಾಗಿ, ಪ್ಲವಂತಿಶ್ಚ - ನೀರಿನಲ್ಲಿ ತೇಲಿಕೊಂಡು ಹೋಗುತ್ತಿರುವವರಾಗಿ, ಗರ್ಜಂತಶ್ಚ - ಘರ್ಜನೆ ಮಾಡುತ್ತಿರುವರು, ಅಭರ್ವ - ಆದರು. ॥ ೭೪-೭೫ ॥ ಸರ್ವಭೂತಾನಿ - ಸಮಸ್ತ ಪ್ರಾಣಿಗಳೂ, ಸಾಗರೇ - ಕಡಲಿನಲ್ಲಿ, ಆಚಿಂತ್ಯಂ - ಚಿಂತಿಸಲಸಾಧ್ಯವಾದ, ಅಸಹ್ಯಂ - ಯತ್ನಿಸಲಸಾಧ್ಯವಾದ, ಅದ್ಭುತಂ - ಆಶ್ಚರ್ಯಕರವಾದ, ರೋಮಹರ್ಷಣಂ - ರೋಮಾಂಚೋ ತ್ಪಾದಕವಾದ, ತತ್ಸೇತುಬಂಧನಂ - ಆ ಸೇತುಬಂಧನವನ್ನು, ದದೃಶುಃ - ಕಂಡರು. ॥ ೭೭ ॥ ಮಹೌ ಜಸಾಂ - ಮಹಾ ತೇಜೋವಂತರಾದ, ವಾನರಾಣಾಂ - ವಾನರರ, ತಾನಿ....ಣಿ - ಅನೇಕ ಸಹಸ್ರ ಕೋಟಿಗಳು, ಸಾಗರೇ - ಕಡಲಿನಲ್ಲಿ, ಸೇತುಂ - ಸೇತುವನ್ನು, ಬಧ್ನತಃ - ಕಟ್ಟುತ್ತಿರುವವರಾಗಿ, ಮಹೋದಧೇಃಪಾರಂ - ಸಮುದ್ರದ ದಡವನ್ನು ಕುರಿತು, ಜಗ್ಮುಃ - ತೆರಳಿದರು. ॥ ೭೭ ॥ ವಿಶಾಲಃ - ವಿಸ್ತಾರವಾದ, ಸ್ವಕೃತಃ-ಚನ್ನಾಗಿ ಮಾಡಲ್ಪಟ್ಟ, ಶ್ರೀಮಾನ್-ಶೋಭಾಯಮಾನವಾದ, ಸುಭೂಮಿಃ-

ಸುಂದರವಾಗಿ ಕಂಗೊಳಿಸುತ್ತಿದ್ದಿತು. ಆ ಸಮಯದಲ್ಲಿ ದೇವಗಂಧರ್ವ ಸಿದ್ಧಸಾಧ್ಯರೂ, ಪರಮಹರ್ಷಿಗಳೂ ಆ ಅದ್ಭುತವನ್ನು ನೋಡಲು ಅಲ್ಲಿಗೆ ಬಂದು ಗಗನದಲ್ಲಿ ನಿಂತರು. ಅವರೆಲ್ಲರೂ, ಹತ್ತುಯೋಜನದಗಲವೂ, ನೂರು ಯೋಜನದುದ್ದವೂ ಇರುವ, ಎಂತಹರಿಗೂ ರಚಿಸಲಸದಳವಾದ ಆ ಸೇತುವೆಯನ್ನು ಕಂಡರು. ಆಗ ಸೇತುವೆಯು ಸಂಪೂರ್ಣವಾದು ದನ್ನು ಕಂಡು ಆ ವಾನರರೆಲ್ಲರೂ ಅಲ್ಲಿಂದಿಲ್ಲಿಗೆ ಲಂಘಿಸುತ್ತಲೂ, ಸಿಂಹನಾದಗಳನ್ನು ಮಾಡು ತ್ತಲೂ ಸಂತೋಷಪಡುತ್ತಿದ್ದರು. ಮನಸ್ಸಿನಿಂದಲೂ ಊಹಿಸಲಸಾಧ್ಯವಾದುದೂ, ಪರ ಮಾಶ್ಚರ್ಯಕರವಾದುದೂ, ದಿಗ್ಭ್ರಮೆಯನ್ನುಂಟುಮಾಡುವುದೂ ಆದ ಆ ಸೇತುಬಂಧನ ವನ್ನು ಸಮಸ್ತ ಭೂತಗಳೂ ನೋಡಿದುವು. ಮಹಾ ಪರಾಕ್ರಮಶಾಲಿಗಳೂ, ಸೇತುವೆ ಯನ್ನು ಕಟ್ಟುತ್ತಿದ್ದವರೂ, ಇನ್ನೂ ಕಟ್ಟುತ್ತಲೇ ಇರುವವರೂ ಆದ ಸಹಸ್ರಾರುಮಂದಿ ವಾನರರು ಆ ಸಮುದ್ರದ ದಕ್ಷಿಣತೀರವನ್ನು ಸೇರಿದರು. ಬಹು ವಿಶಾಲವಾದುದೂ, ಚನ್ನಾಗಿ

ಭತ ಮಹಾಸೇತುಸ್ಸೀಮಂತಇವ ಸಾಗರೇ ॥ ೭೮ ॥ ತತಃ ಪಾರೇ ಸಮುದ್ರಸ್ಯ ಗದಾಪಾಣಿರ್ವಿಭೀಷಣಃ । ಪರೇಷಾಮಭಿ¶ ಘಾತಾರ್ಥ ಮತಿಷ್ಠತ್ಸಚಿವೈಸ್ಸಹ ॥ ೭೯ ॥ ಸುಗ್ರೀವಸ್ತು ತತಃ ಪ್ರಾಹ ರಾಮಂ ಸತ್ಯಪರಾಕ್ರಮಂ । "ಹನುಮಂತಂ ತ್ವಮಾರೋಹ ಅಂಗದಂಚಾಪಿ ಲಕ್ಷ್ಮಣಃ ॥ ೮೦ ॥ ಅಯಂ ಹಿ ವಿಪುಲೋ ವೀರ! ಸಾಗರೋ ಮಕರಾಲಯಃ । ವೈಹಾಯಸೌ ಯುವಾಮೇತೌ ವಾನರೌ ತಾರಯಿಷ್ಯತಃ" ॥೮೧॥ ಅಗ್ರತಸ್ತಸ್ಯ ಸೈನ್ಯಸ್ಯ ಶ್ರೀಮಾನ್ ರಾಮಸ್ಸಲಕ್ಷ್ಮಣಃ । ಜಗಾಮ ಧನ್ವೀ ಧರ್ಮಾತ್ಮಾ

---

ನಿಮ್ನೋನ್ನತ ರಹಿತವಾದ, ಸುಸಮಾಹಿತಃ - ಛಿದ್ರಗಳಿಲ್ಲದೆ ಮಾಡಲ್ಪಟ್ಟ, ಮಹಾಸೇತುಃ - ದೊಡ್ಡ ಸೇತುವು, ಸಾಗರೇ - ಕಡಲಿನಲ್ಲಿ, ಸೀಮಂತಇವ - ಬೈತಲೆಯಂತೆ, ಅಶೋಭತ - ಹೊಳೆಯುತ್ತಿತ್ತು. ॥೭೮॥ ತತಃ - ಬಳಿಕ, ಸಮುದ್ರಸ್ಯ - ಕಡಲಿನ, ಪಾರೇ - ದಡದಲ್ಲಿ, ಗದಾಪಾಣಿಃ - ಗದಾಯುಧವೇ ಹಸ್ತದಲ್ಲುಳ್ಳ, ವಿಭೀಷಣಃ - ವಿಭೀಷಣನು, ಸಚಿವೈಸ್ಸಹ - ಮಂತ್ರಿಗಳೊಡನೆ, ಪರೇಷಾಂ - ಶತ್ರುಗಳ, ಅಭಿಘಾತಾರ್ಥಂ - ಸಂಹಾರಾರ್ಥವಾಗಿ, ಅತಿಷ್ಠತ್ - ನಿಂತನು. ॥೭೯॥ ತತಃ - ಬಳಿಕ, ಸುಗ್ರೀವಸ್ತು - ಸುಗ್ರೀವನಾದರೆ, ಸತ್ಯಪರಾಕ್ರಮಂ - ಸಫಲಪರಾಕ್ರಮವುಳ್ಳ, ರಾಮಂ - ಶ್ರೀರಾಮನ್ನು ಕುರಿತು, ತ್ವಂ - ನೀನು, ಹನೂಮಂತಂ - ಆಂಜನೇಯನನ್ನು, ಆರೋಹ - ಏರು, ಲಕ್ಷ್ಮಣಶ್ಚ - ಲಕ್ಷ್ಮಣನು, ಅಂಗದಂ - ಅಂಗದನನ್ನು, ಆರೋಹತು - ಏರಲಿ, ಇತಿ - ಇಂತೆಂದು, ಪ್ರಾಹ - ಹೇಳಿದನು. ॥೮೦॥ ಹೇ ವೀರ-ಎಲೈ ಶೂರನೇ, ಮಕರಾಲಯಃ-ಮಕರಾಶ್ರಯವಾದ, ಅಯಂಸಾಗರಃ-ಈ ಸಮುದ್ರವು, ವಿಪುಲೋಹಿ - ವಿಸ್ತಾರವಾಗಿರುವದಷ್ಟೆ, ವೈಹಾಯಸೌ - ಅಂತರಿಕ್ಷಗಮನಶೀಲರಾದ, ಏತೌವಾನರೌ- ಈ ಆಂಜನೇಯಾಂಗದರು, ಯುವಾಂ ನಿಮ್ಮಿಬ್ಬರನ್ನೂ, ತಾರಯಿಷ್ಯತಃ - ಶೀಘ್ರವಾಗಿ ದಾಂಟಿಸುವರು, ಇತಿ - ಇಂತೆಂದು, ಪ್ರಾಹ - ಹೇಳಿದನು. ॥೮೧॥ ತಸ್ಯಸೈನ್ಯಸ್ಯ - ಆ ಸೈನ್ಯದ, ಅಗ್ರತಃ - ಮುಂದುಗಡೆ, ಧರ್ಮಾತ್ಮಾ - ಧರ್ಮಿಷ್ಠನಾದ, ಶ್ರೀಮಾನ್ - ರಾಜಲಕ್ಷಣಯುಕ್ತನಾದ, ಸಲಕ್ಷ್ಮಣಃ - ಲಕ್ಷ್ಮಣನಿಂದೊಡಗೂಡಿದ, ರಾಮಃ - ಶ್ರೀರಾಮನು, ಧನ್ವೀ - ಧನುರ್ಧಾರಿಯಾಗಿ, ಸುಗ್ರೀವೇಣ -

---

ರಚಿತವಾದುದೂ, ಹಳ್ಳತಿಟ್ಟಗಳಿಲ್ಲದೆ ಚೊಕ್ಕವಾಗಿದ್ದುದೂ, ರಂಧ್ರಗಳಿಲ್ಲದಿರುವುದೂ ಆದ ಆ ಮಹಾ ಸೇತುವು ಆ ಸಾಗರದಲ್ಲಿ ಹೆಂಗುಸಿನ ಬೈತಲೆಯಂತೆ ಕಂಗೊಳಿಸುತ್ತಲಿದ್ದಿತು. ॥೭೧-೭೮॥ ಆಗ ವಿಭೀಷಣನು ಗದಾಪಾಣಿಯಾಗಿ, ವಾನರರಮೇಲೆ ತುರುಬಿಬರುವ ಶತ್ರುಗಳನ್ನೊಕ್ಕಲಿಕ್ಕಲೋಸುಗ ಸಮುದ್ರದ ದಕ್ಷಿಣತೀರದಲ್ಲಿ ನಿಂತನು. ಆ ಸಮಯದಲ್ಲಿ ವಾನರೇಶ್ವರನಾದ ಸುಗ್ರೀವನು ಸತ್ಯಪರಾಕ್ರಮಿಯಾದ ಶ್ರೀರಾಮಮೂರ್ತಿಯನ್ನು ಕುರಿತು, "ಶ್ರೀರಾಮಾ ! ನೀನು ಹನುಮಂತನ ಭುಜವನ್ನೇರು. ಲಕ್ಷ್ಮಣನು ಅಂಗದನನ್ನೇರಲಿ. ಮಕರಾಲಯವಾದ ಈ ಸಮುದ್ರವು ಬಹು ವಿಶಾಲವಾದುದಲ್ಲವೆ ? ಆದುದರಿಂದ ನೀವು ನಡೆದು ಬರಬಾರದು. ಗಗನಸಂಚಾರಶೀಲರಾದ ಈ ಕಪಿಶ್ರೇಷ್ಠರು ನಿಮ್ಮನ್ನು ದಾಟಿಸುವರು" ಎಂದು ಹೇಳಿದನು. (ಧರ್ಮಾತ್ಮನೂ, ಶ್ರೀಮಂತನೂ, ಮಹಾ ಧನುರ್ಧಾರಿಯೂ ಆದ ಶ್ರೀರಾಮನು ಹಾಗೆ ಮಾಡುವುದು ಉಚಿತವಲ್ಲೆಂದು ಯೋಚಿಸಿ) ಲಕ್ಷ್ಮಣಸುಗ್ರೀವರೊಡಗೂಡಿ ಆ ವಾನರ ಸೇನೆಗೆ ಮುಂದಾಗಿ ನಡೆದನು. ಆಗ ಕೆಲವರು ವಾನರರು ಆ ಸೇತುವೆಯ ಮಧ್ಯದಲ್ಲಿ ನಡೆ

---

¶ "ಯಾನಾರ್ಥಂ" ತಿ. ಪಾ.

ಸುಗ್ರೀವೇಣ ಸಮನ್ವಿತಃ ॥ ೮೨ ॥ ಅನ್ಯೇ ಮಧ್ಯೇನ ಗಚ್ಛಂತಿ ಪಾರ್ಶ್ವತೋಽನ್ಯೇ ಪ್ಲವಂಗಮಾಃ । ಸಲಿಲೇ ಪ್ರಪತಂತ್ಯನ್ಯೇ ಮಾರ್ಗಮನ್ಯೇ ನಲೇಭಿರೇ ॥ ೮೩ ॥ ಕೇಚಿದ್ವೈಹಾಯಸಗತಾಸ್ಸುಪರ್ಣಾ ಇವ ಪುಪ್ಲುವುಃ । ಘೋಷೇಣ ಮಹತಾ ತಸ್ಯ ಸಿಂಧೋರ್ಘೋಷಂ ಸಮುಚ್ಛ್ರಿತಂ । ಭೀಮಮಂತರ್ದಧೇ ಭೀಮಾ ತರಂತೀ ಹರಿವಾಹಿನೀ ॥ ೮೪ ॥ ವಾನರಾಣಾಂ ಹಿ ಸಾ ತೀರ್ಣಾ ವಾಹಿನೀ ನಳಸೇತುನಾ । ತೀರೇ ನಿವಿವಿಶೇ ರಾಜ್ಞೋ ಬಹುಮೂಲಫಲೋದಕೇ ॥ ೮೫ ॥ ತದದ್ಭುತಂ ರಾಘವಕರ್ಮ ದುಷ್ಕರಂ ಸಮೀಕ್ಷ್ಯ ದೇವಾಸ್ಸಹಸಿದ್ಧಚಾರಣೈಃ । ಉಪೇತ್ಯ ರಾಮಂ ಸಹಸಾ ಮಹರ್ಷಿಭಿಸ್ಸಮಭ್ಯಷಿಂಚನ್ ಸುಶುಭೈರ್ಜಲೈಃ ಪೃಥಕ್ ॥ ೮೬ ॥

---

ಸುಗ್ರೀವನೊಡನೆ, ಸಮನ್ವಿತಃ - ಕೂಡಿದವನಾಗಿ, ಜಗಾಮ - ತೆರಳಿದನು. ॥ ೮೨ ॥ ಅನ್ಯೇ-ಕೆಲವರು, ಪ್ಲವಂಗಮಾಃ - ವಾನರರು, ಮಧ್ಯೇನ - ಸಮುದ್ರಮಧ್ಯದಲ್ಲಿ, ಗಚ್ಛಂತಿ - ಹೋಗುತ್ತಾರೆ, ಅನ್ಯೇ - ಕೆಲವರು, ಪಾರ್ಶ್ವತಃ - ಉಭಯಪಾರ್ಶ್ವಗಳಲ್ಲಿಯೂ, ಗಚ್ಛಂತಿ - ಹೋಗುತ್ತಾರೆ, ಅನ್ಯೇ - ಕೆಲವರು, ಸಲಿಲೇ - ನೀರಿನಲ್ಲಿ, ಪ್ರಪತಂತಿ - ಬೀಳುತ್ತಾರೆ, ಅನ್ಯೇ - ಕೆಲವರು, ಮಾರ್ಗಂ - ಮಾರ್ಗವನ್ನು, ನಲೇಭಿರೇ - ಪೊಂದಲೇ ಇಲ್ಲವು. ॥ ೮೩ ॥ ಕೇಚಿತ್ - ಕೆಲವರು, ವೈಹಾಯಸಗತಾಃ - ಅಂತರಿಕ್ಷಗಮನವುಳ್ಳವರಾಗಿ, ಸುಪರ್ಣಾ ಇವ - ಗರುಡಪಕ್ಷಿಗಳಂತೆ, ಪುಪ್ಲುವುಃ - ಹಾರಿದರು. ॥ ೮೩ ॥ ಭೀಮಾ - ಭಯಂಕರವಾದ, ತರಂತೀ - ದಾಟುತ್ತಿರುವ, ಹರಿವಾಹಿನೀ - ವಾನರಸೈನ್ಯವು, ಮಹತಾ-ದೊಡ್ಡದಾದ, ಘೋಷೇಣ-ಕೋಲಾಹಲಧ್ವನಿಯಿಂದ, ತಸ್ಯಸಿಂಧೋಃ-ಆ ಕಡಲಿನ, ಸಮುಚ್ಛ್ರಿತಂ-ಅತಿಪ್ರವೃದ್ಧಮಾನವಾದ, ಭೀಮಂ - ಭಯಂಕರವಾದ, ಘೋಷಂ - ಧ್ವನಿಯನ್ನು, ಅಂತರ್ದಧೇ - ಅಂತರ್ಧಾನ ಮಾಡಿತು. ॥ ೮೪ ॥ ವಾನರಾಣಾಂರಾಜ್ಞಃ - ಕಪಿಗಳಿಗೆ ಅರಸಾದ ಸುಗ್ರೀವನ, ಸಾವಾಹಿನೀ-ಆ ಕಪಿಸೈನ್ಯವು, ನಳಸೇತುನಾ-ನಳನಸೇತುವಿನಿಂದ, ತೀರ್ಣಾ-ದಾಟದುದಾಗಿ, ಬಹು....ಕೇ-ಬಹಳವಾದ ಕಂದಮೂಲಗಳೂ, ಫಲಗಳೂ, ಉದಕವೂ ಉಳ್ಳ, ತೀರೇ - ಸಮುದ್ರದಲ್ಲಿ, ನಿವಿವಿಶೇ - ಇಳಿಯಿತು. ॥೮೫॥ ದೇವಾಃ - ದೇವತೆಗಳು, ಸಿದ್ಧಚಾರಣೈಸ್ಸಹ - ಸಿದ್ಧಚಾರಣರೊಡನೆ, ದುಷ್ಕರಂ-ಇತರರಿಂದ ಮಾಡಲಸಾಧ್ಯವಾದ, ಅದ್ಭುತಂ-ಆಶ್ಚರ್ಯಕರವಾದ, ತದ್ರಾಘವಕರ್ಮ-ಆ ಶ್ರೀರಾಮನ ವ್ಯಾಪಾರವನ್ನು, ಸಮೀಕ್ಷ್ಯ - ಕಂಡು, ಸಹಸಾ - ಜಾಗ್ರತೆಯಾಗಿ, ಮಹರ್ಷಿಭಿಃ - ಋಷಿಗಳೊಡ

---

ದರು; ಕೆಲವರು ಪಕ್ಕಗಳಲ್ಲಿ ಹೋದರು; ಕೆಲವರಿಗೆ ಮಾರ್ಗವೇ ದೊರಕದೇ ಹೋಯಿತು. ಕೆಲವರು ಗರುಡನಂತೆ ಗಗನದಲ್ಲಿ ಹಾರಿಹೋದರು. ॥೭೯-೮೩॥ ಆ ಸಮಯದಲ್ಲಿ ಮಹಾ ಭಯಂಕರವಾದ ಆ ವಾನರಸೇನೆಯಲ್ಲಿ ಹುಟ್ಟಿದ ಕೋಲಾಹಲಧ್ವನಿಯು ಮಹದದ್ಭುತವಾದ ಆ ಸಾಗರಧ್ವನಿಯನ್ನೇ ಅಡಗಿಸಿಬಿಟ್ಟಿತು. ಆ ವಾನರಸೇನೆಯು ವಾನರೇಶ್ವರನಾದ ಸುಗ್ರೀವನೊಡಗೂಡಿ, ವಿಶೇಷವಾಗಿ ಕಂದಮೂಲಫಲಗಳನ್ನೂ, ಶುಭ್ರ ಜಲವನ್ನೂ ಒಳಗೊಂಡಿರುವ ದಕ್ಷಿಣತೀರದಲ್ಲಿ ಬಂದು ನೆಲಸಿತು. ಆ ಸಮಯದಲ್ಲಿ ದೇವತೆಗಳೂ, ಸಿದ್ಧರೂ, ಚಾರಣರೂ, ಮಹರ್ಷಿಗಳೂ ಶ್ರೀರಾಮನ್ನುಳಿದು ಮತ್ತಾರಿಂದಲೂ ಮಾಡಲಶಕ್ಯವಾದುದೂ, ಮಹದಾಶ್ಚರ್ಯಕರವಾದುದೂ ಆದ ಆ ಕಾರ್ಯವನ್ನು ನೋಡಿ ಬಹು ಜಾಗ್ರತೆಯಾಗಿ ಆತನ ಬಳಿಗೈದಿ ಪುಣ್ಯೋದಕಗಳಿಂದ ಎಲ್ಲರೂ ಬೇರೆಬೇರೆಯಾಗಿ ಆತನನ್ನು ಅಭಿಷೇಚಿಸಿ, “ಓ ಮಾನವೇಶ್ವರಾ! ಶ್ರೀರಾಮಾ! ಶತ್ರುಗಳೆಲ್ಲರನ್ನೂ ಸಂಹರಿಸಿ ಜಯ

" ಜಯಸ್ವ ಶತ್ರೂನ್ನರದೇವ! ಮೇದಿನೀಂ
ಸಸಾಗರಾಂ ಪಾಲಯ ಶಾಶ್ವತೀಸ್ಸಮಾಃ " |
ಇತೀವ ರಾಮಂ ನರದೇವಸತ್ಕೃತಂ
ಶುಭೈರ್ವಚೋಭಿರ್ವಿವಿಧೈರಪೂಜಯನ್ || ೮೭ ||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ದ್ವಾವಿಂಶಸ್ಸರ್ಗಃ.



ಗೂಡಿ, ಉಪೇತ್ಯ - ಬಂದು, ರಾಮಂ - ಶ್ರೀರಾಮನನ್ನು, ಸುಶುಭೈಃ - ಬಹಳ ಶುಭಕರಗಳಾದ, ಜಲೈಃ - ಉದಕಗಳಿಂದ, ಪೃಥಕ್ - ಪ್ರತ್ಯೇಕವಾಗಿ, ಸಮಭ್ಯಷಿಂಚನ್ - ಅಭಿಷೇಕ ಮಾಡಿದರು. ||೮೬|| ಹೇ ನರದೇವ - ಎಲೈ ರಾಜನೇ, ಶತ್ರೂನ್ - ಶತ್ರುಗಳನ್ನು ಜಯಸ್ವ - ಜಯಿಸು, ಸಸಾಗರಾಂ-ಸಮುದ್ರಗಳಿಂದೊಡಗೂಡಿದ, ಮೇದಿನೀಂ - ಭೂಮಿಯನ್ನು, ಶಾಶ್ವತೀಸ್ಸಮಾಃ - ಅನೇಕ ವರ್ಷಗಳು, ಪಾಲಯ - ಪರಿಪಾಲಿಸು, ಇತೀವ - ಇಂತೆಂದೇ, ನರದೇವಸತ್ಕೃತಂ - ಮನುಷ್ಯರಿಂದಲೂ ದೇವತೆಗಳಿಂದಲೂ ಪೂಜಿಸಲ್ಪಟ್ಟ, ರಾಮಂ - ಶ್ರೀರಾಮನನ್ನು, ಶುಭೈಃ - ಶುಭಕರಗಳಾದ, ವಿವಿಧೈಃ - ನಾನಾಬಗೆಗಳಾದ, ವಚೋಭಿಃ ಮಾತುಗಳಿಂದ, ಅಪೂಜಯನ್ - ಪೂಜಿಸಿದರು. || ೮೭ ||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ದ್ವಾವಿಂಶಸ್ಸರ್ಗಃ.



ಶೀಲನಾಗು. ಚತುಸ್ಸಮುದ್ರಮುದ್ರಿತವಾದ ಭೂಮಂಡಲವನ್ನು ಅನೇಕ ಸಂವತ್ಸರಗಳ ಕಾಲ ಆಳುವವನಾಗು" ಎಂದು ಹೇಳಿ ಆತನನ್ನು ಆಶೀರ್ವದಿಸಿ ಮಂಗಳ ವಚನಗಳಿಂದ ಸತ್ಕರಿಸಿದರು. || ೮೪–೮೭ ||

ಇಂತಿದು ಸಾಗರಾವಿರ್ಭಾವ–ನಳಸೇತುನಿರ್ಮಾಣ–ಸಾಗರತರಣ ವೃತ್ತಾಂತ
ನಿರೂಪಣವೆಂಬ ಇಪ್ಪತ್ತೆರಡನೆಯ ಸರ್ಗವು ಸಮಾಪ್ತವಾದುದು.



# ಯುದ್ಧಕಾಂಡೇ ತ್ರಯೋವಿಂಶಸ್ಸರ್ಗಃ

**ನಿಮಿತ್ತಾನಿ ನಿಮಿತ್ತಜ್ಞೋ ದೃಷ್ಟ್ವಾ ಲಕ್ಷ್ಮಣಪೂರ್ವಜಃ । ¶ ಸೌಮಿತ್ರಿಂ ಸಂಪರಿಷ್ವಜ್ಯ ಇದಂ ವಚನಮಬ್ರವೀತ್ ॥ ೧ ॥ " ಪರಿಗೃಹ್ಯೋದಕಂ ಶೀತಂ ವನಾನಿ ಫಲವಂತಿಚ । ಬಲೌಘಂ ಸಂವಿಭಜ್ಯೇಮಂ ವ್ಯೂಹ್ಯ ತಿಷ್ಠಾಮ ಲಕ್ಷ್ಮಣ! ॥ ೨ ॥ ಲೋಕಕ್ಷಯಕರಂ ಭೀಮಂ ಭಯಂ ಪಶ್ಯಾಮ್ಯುಪಸ್ಥಿತಂ । ನಿಬರ್ಹಣಂ ಪ್ರವೀರಾಣಾ ಮೃಕ್ಷವಾನರರಕ್ಷಸಾಂ ॥೩॥ ✠ ವಾತಾಶ್ಚ ಕಲುಷಾ ವಾಂತಿ ಕಂಪತೇಚ ವಸುಂಧರಾ ।**

---

ನಿಮಿತ್ತಜ್ಞಃ - ಶಕುನಗಳನ್ನು ತಿಳಿದಿರುವ, ಲಕ್ಷ್ಮಣಪೂರ್ವಜಃ - ಲಕ್ಷ್ಮಣನಿಗೆ ಅಣ್ಣನಾದ ಶ್ರೀರಾಮನು, ನಿಮಿತ್ತಾನಿ - ಶಕುನಗಳನ್ನು, ದೃಷ್ಟ್ವಾ - ಕಂಡು, ಸೌಮಿತ್ರಿಂ - ಲಕ್ಷ್ಮಣನನ್ನು, ಸಂಪರಿಷ್ವಜ್ಯ - ಅಪ್ಪಿ, ಇದಂವಚನಂ - ಈ ಮಾತನ್ನು, ಅಬ್ರವೀತ್ - ನುಡಿದನು. ॥೧॥ ಹೇ ಲಕ್ಷ್ಮಣ- ಎಲೈ ಲಕ್ಷ್ಮಣನೇ, ಶೀತಂ - ತಣ್ಣಗಿರುವ, ಉದಕಂ - ಜಲವನ್ನೂ, ಫಲವಂತಿ - ಫಲಿಸಿರುವ, ವನಾನಿಚ - ವನಗಳನ್ನೂ ಸಹಾ, ಪರಿಗೃಹ್ಯ - ಆಶ್ರಯಿಸಿ, ಇಮಂಬಲೌಘಂ - ಈ ಸೇನೆಗಳ ಸಮೂಹವನ್ನು, ಸಂವಿಭಜ್ಯ-ವಿಭಾಗಮಾಡಿ, ವ್ಯೂಹ್ಯ ವ್ಯೂಹವನ್ನು ಕಟ್ಟಿ, ತಿಷ್ಠಾಮ-ನಿಲ್ಲೋಣ. ॥೨॥ ಲೋಕಕ್ಷಯಕರಂ - ಕ್ಷುದ್ರಜನರಿಗೆ ಕ್ಷಯವನ್ನುಂಟುಮಾಡುವ, ಪ್ರವೀರಾಣಾ - ಮಹಾ ಶೂರ ರಾದ, ಋಕ್ಷ....ಸಾಂ - ಕರಡಿಗಳು ಕಪಿಗಳು ರಾಕ್ಷಸರು ಎಂಬಿವರುಗಳಿಗೆ, ನಿಬರ್ಹಣಂ - ವಿನಾಶಕ ವಾದ, ಭೀಮಂ - ಮಹತ್ತರವಾದ, ಭಯಂ - ಯುದ್ಧವು, ಉಪಸ್ಥಿತಂ - ಪ್ರಾಪ್ತವಾದುದನ್ನಾಗಿ, ಪಶ್ಯಾಮಿ - ತಿಳಿಯುತ್ತೇನೆ. ॥ ೩ ॥ ವಾತಾಃ - ಗಾಳಿಗಳು, ಕಲುಷಾಃ - ಧೂಳಿಯಿಂದ ವ್ಯಾಪ್ತವಾಗಿ, ವಾಂತಿ - ಬೀಸುತ್ತವೆ, ವಸುಂಧರಾಚ - ಭೂಮಿಯೂ ಕೂಡ, ಕಂಪತೇ - ಚಲಿಸುವುದು, ಪರ್ವತಾ

---

ಆ ತರುವಾಯ ಶುಭಾಶುಭ ನಿಮಿತ್ತಗಳನ್ನು ಚೆನ್ನಾಗಿ ತಿಳಿದವನೂ, ಲಕ್ಷ್ಮಣಾಗ್ರ ಜನೂ ಆದ ಶ್ರೀರಾಮನು ಕೆಲವು (ಶುಭ) ಶಕುನಗಳನ್ನು ನೋಡಿ ಲಕ್ಷ್ಮಣನನ್ನು ಆಲಿಂಗಿಸಿ ಕೊಂಡು ಹೀಗೆಂದನು. "ಲಕ್ಷ್ಮಣಾ! ನಾವು ಶೀತಳೋದಕಪೂರ್ಣವಾಗಿಯೂ, ರುಚಿರ ಫಲಗಳಿಂದ ತುಂಬಿರುವುದಾಗಿಯೂ ಇರುವ ವನೋಪವನಗಳುಳ್ಳ ಪ್ರದೇಶವೊಂದನ್ನು ವಾಸ ಸ್ಥಾನವನ್ನಾಗಿ ಮಾಡಿಕೊಂಡು ಈ ಸೇನಾಸಮೂಹಗಳೆಲ್ಲವನ್ನೂ ಚೆನ್ನಾಗಿ ವಿಭಜಿಸಿ ವ್ಯೂಹ ವಾಗಿ ನಿಲ್ಲಿಸೋಣ. ಮಹಾ ಪರಾಕ್ರಮಶಾಲಿಗಳಾದ ವಾನರಭಲ್ಲೂಕ ಸೇನೆಗಳ ಮತ್ತು ರಾಕ್ಷಸರ ವಧರೂಪವಾದುದೂ, ಜನನಾಶವನ್ನುಂಟುಮಾಡುವುದೂ ಆದ ಮಹಾ ಭಯ ವೊಂದು ಸಂಭವಿಸಿರುವುದೆಂದು ನನಗೆ ತೋರುತ್ತಿದೆ. ಅಯ್ಯಾ ಲಕ್ಷ್ಮಣನೇ! ವಾಯುವು

---

¶ " ಸೌಮಿತ್ರಂ " ಗೋ. ಪಾ.

✠ ಇಲ್ಲಿ ಹೇಳಿರುವ ಭೂಕಂಪದ ಫಲವನ್ನು ವಸಿಷ್ಠರು ಹೀಗೆ ಹೇಳಿರುವರು:—"ಯಾಮತ್ರಯಾಚ್ಚ ಭೂಕಂಪೋ ದ್ವಿಜಾತೀನಾಮರಿಷ್ಟದಃ । ಅರಿಷ್ಟದಃಕ್ಷಿತೀಶಾನಾಂ ಸಂಧ್ಯಯೋರುಭಯೋರಪಿ ॥ ಉಭಯಸಂಧ್ಯೆಗಳಲ್ಲಿಯೂ ಮೊದಲ ಮೂರು ಯಾಮಗಳಲ್ಲಿ ಆಗುವ ಭೂಕಂಪವು ದ್ವಿಜಾತಿಯವರಿಗೂ (ಬ್ರಹ್ಮ ಕ್ಷತ್ರ ವೈಶ್ಯರಿಗೂ) ರಾಜರಿಗೂ ಪೀಡಾಕರವು"

**ಪರ್ವತಾಗ್ರಾಣಿ ವೇಪಂತೇ ಪತಂತಿಚ ಮಹೀರುಹಾಃ || ೪ || ಮೇಘಾಃ ಕ್ರವ್ಯಾದಸಂಕಾಶಾಃ ಪರುಷಾಃ ಪರುಷಸ್ವನಾಃ | ಕ್ರೂರಾಃ ಕ್ರೂರಂ ಪ್ರವರ್ಷಂತಿ ಮಿಶ್ರಂ ಶೋಣಿತಬಿಂದುಭಿಃ || ೫ || ¶ ರಕ್ತಚಂದನಸಂಕಾಶಾ ಸಂಧ್ಯಾ ಪರಮದಾರುಣಾ | ಜ್ವಲತಃ ಪ್ರಪತತ್ಯೇತದಾದಿತ್ಯಾದಗ್ನಿಮಂಡಲಂ || ೬ || ದೀನಾ ದೀನಸ್ವರಾಃ ಕ್ರೂರಾಸ್ಸರ್ವತೋ ಮೃಗಪಕ್ಷಿಣಃ | ಪ್ರತ್ಯಾದಿತ್ಯಂ ವಿನರ್ದಂತಿ ಜನಯಂತೋ ಮಹದ್ಭಯಂ | ರಜನ್ಯಾಮಪ್ರಕಾಶಸ್ತು ಸಂತಾಪಯತಿ ಚಂದ್ರಮಾಃ || ೭ || ಕೃಷ್ಣರಕ್ತಾಂಶು**

ಗ್ರಾಣಿ - ಪರ್ವತಶಿಖರಗಳು, ವೇಪಂತೇ - ಕದಲುತ್ತವೆ, ಮಹೀರುಹಾಶ್ಚ - ವೃಕ್ಷಗಳೂ ಕೂಡ, ಪತಂತಿ - ಬೀಳುತ್ತವೆ. || ೪ || ಕ್ರವ್ಯಾ.....ಶಾಃ - ಗೃಧ್ರಶ್ಯೇನಾದಿಗಳ ವರ್ಣಕ್ಕೆ ಸಮಾನವಾದ ವರ್ಣವುಳ್ಳ, ಪರುಷಾಃ - ನೋಡಲಸಾಧ್ಯವಾದ, ಪರುಷಸ್ವನಾಃ - ಕೇಳಲಶಕ್ಯವಾದ ಶಬ್ದವುಳ್ಳವಾದಕಾರಣ, ಕ್ರೂರಾಃ - ಭಯಂಕರವಾದ, ಮೇಘಾಃ - ಮೇಘಗಳು, ಶೋಣಿತಬಿಂದುಭಿಃ - ರಕ್ತಬಿಂದುಗಳಿಂದ, ಮಿಶ್ರಂ - ಸೇರಿರುವ (ಉದಕವನ್ನು), ಕ್ರೂರಂ - ಭಯಂಕರವಾಗಿ, ಪ್ರವರ್ಷಂತಿ - ಸುರಿಸುತ್ತವೆ. || ೫ || ಸಂಧ್ಯಾ - ಸಂಧ್ಯಾಕಾಲವು, ರಕ್ತ.....ಶಾ - ಕುಂಕುಮಕ್ಕೆ ಸಮಾನವಾಗಿ, ದಾರುಣಾ - ಬಹು ಭಯಂಕರವಾಗಿದೆ, ಜ್ವಲತಃ-ಬೆಳಗುವ, ಆದಿತ್ಯಾತ್-ಸೂರ್ಯನದೆಸೆಯಿಂದ, ಏತದಗ್ನಿಮಂಡಲಂ- ಈ ಅಗ್ನಿಪಿಂಡವು, ಪ್ರಪತತಿ - ಬೀಳುತ್ತಲಿದೆ. || ೬ || ದೀನಾಃ - ದೀನವಾದ ಆಕಾರವುಳ್ಳ, ದೀನಸ್ವರಾಃ - ದೈನ್ಯವಾದ ಸ್ವರವುಳ್ಳ, ಕ್ರೂರಾಃ - ಭಯಂಕರವಾದ, ಮೃಗಪಕ್ಷಿಣಃ - ಮೃಗಪಕ್ಷಿಗಳು, ಸರ್ವತಃ - ಎಲ್ಲಾ ಕಡೆಗಳಲ್ಲಿಯೂ, ಮಹದ್ಭಯಂ - ಬಹು ಭೀತಿಯನ್ನು, ಜನಯಂತಃ - ಸೂಚಿಸುವವಾಗಿ, ಪ್ರತ್ಯಾದಿತ್ಯಂ - ಸೂರ್ಯನಿಗಭಿಮುಖವಾಗಿ, ವಿನರ್ದಂತಿ - ಕೂಗುತ್ತವೆ, ರಜನ್ಯಾಂ - ರಾತ್ರಿಯಲ್ಲಿ, ಚಂದ್ರಮಾಸ್ತು - ಚಂದ್ರನಾದರೆ, ಅಪ್ರಕಾಶಃ - ಬೆಳಕಿಲ್ಲದವನಾಗಿ, ಸಂತಾಪಯತಿ - ಸಂತಪಿಸುತ್ತಾನೆ. ||೭|| ಕೃಷ್ಣ.....ತಃ-ಕಪ್ಪಾಗಿಯೂ, ಕೆಂಪಾಗಿಯೂ ಇರುವ ಕಿರಣಗಳ ಕೊನೆಗಳುಳ್ಳ,

ಮಹಾ ಭಯಂಕರವಾಗಿ ಬೀಸುತ್ತಿರುವುದು. ಭೂಮಿಯು ಗಡಗಡನೆ ನಡುಗುತ್ತಿರುವುದು. ಪರ್ವತಶಿಖರಗಳು ಬಹಳವಾಗಿ ಕಂಪಿಸುತ್ತಿವೆ. ದೊಡ್ಡದೊಡ್ಡ ಮರಗಳೆಲ್ಲವೂ ಇದ್ದಕ್ಕಿದಂತೆಯೇ ಮುರಿದು ಬೀಳುತ್ತಿರುವುವು. ಮೇಘಗಳೆಲ್ಲವೂ ಗೃಧ್ರಗಳಿಗೆ ಸಮಾನಗಳಾಗಿ ಮಹಾ ಭಯಂಕರವಾದ ಧ್ವನಿಗಳನ್ನು ಮಾಡುತ್ತಿರುವುವು. ರಕ್ತವರ್ಷವನ್ನು ಸುರಿಸುತ್ತಿರುವ ಈ ಮೇಘಗಳು ಅಶುಭವನ್ನೇ ಸೂಚಿಸುತ್ತಿರುವುವು. ||೧-೫|| ಸಂಧ್ಯಾಸಮಯವೂ ಸಹ ಚಂದನಗಂಧಕ್ಕೆ ಸಮಾನವಾಗಿ ಮಹಾ ಭಯಂಕರವಾಗಿರುವುದು. ಸೂರ್ಯನು ಉರಿಯುತ್ತಿರುವ ಕೆಂಡದಂತೆ ತೋರಿ ಕೆಂಡಗಳನ್ನೇ ಸುರಿಸುತ್ತಿರುವನು. ಮೃಗಪಕ್ಷಿಗಳು ಬಹಳ ದೈನ್ಯವನ್ನು ಹೊಂದಿ ಮಹಾ ಭಯವನ್ನುಂಟುಮಾಡುತ್ತ ಸೂರ್ಯನೆದುರಿಗೆ ನಿಂತು ದೀನಸ್ವರದಿಂದ ಕೂಗಿಕೊಳ್ಳುತ್ತ ಅಶುಭವನ್ನೇ ಸೂಚಿಸುತ್ತಿರುವುವು. ರಾತ್ರಿಯಲ್ಲಿ ಚಂದ್ರನೂ ಸಹ ಕಾಂತಿಹೀನನಾಗಿ ಸಂತಾಪಗೊಳಿಸುತ್ತಿರುವನು. ತುದಿಗಳಲ್ಲಿ

¶ ಇಲ್ಲಿ ವರಾಹಮಿಹಿರವಚನ:—ದಿವ್ಯುಲ್ಕಾಪತನಂಚೈವ ದಿವಾನಕ್ಷತ್ರದರ್ಶನಂ | ದಿವಾಶನಿಸ್ತಥಾಕಾಷ್ಠತೃಣರಕ್ತಪ್ರವರ್ಷಣಂ || "ಹಗಲಿನಲ್ಲಿ ಉಲ್ಕಗಳು ಬೀಳುವುದು, ನಕ್ಷತ್ರಗಳು ಕಾಣುವುದು, ಸಿಡಿಲು, ಸೌದೆ, ಹುಲ್ಲು ರಕ್ತ ಇವುಗಳ ಮಳೆಬೀಳುವುದು ಇವೆಲ್ಲಾ ಹೇಷ್ಯಕ್ಕೆಂದು ತಿಳಿಯತಕ್ಕದ್ದು"

ಪರ್ಯಂತೋ ಲೋಕಕ್ಷಯ ಇವೋದಿತಃ । ಹ್ರಸ್ವೋ ರೂಕ್ಷೋಽಪ್ರಶಸ್ತಶ್ಚ ¶ ಪರಿವೇಷಸ್ಸುಲೋಹಿತಃ ॥೮॥ ❦ ಆದಿತ್ಯೇ ವಿಮಲೇ ನೀಲಂ ಲಕ್ಷ್ಮ ಲಕ್ಷ್ಮಣ! ದೃಶ್ಯತೇ । ರಜಸಾ ಮಹತಾ ಚಾಪಿ ನಕ್ಷತ್ರಾಣಿ ಹತಾನಿಚ । ಯುಗಾಂತಮಿವ ಲೋಕಾನಾಂ ಪಶ್ಯ ಶಂಸಂತಿ ಲಕ್ಷ್ಮಣ! ॥ ೯-೧೦ ॥ ಕಾಕಾಶ್ಶ್ಯೇನಾಸ್ತಥಾ ಗೃಧ್ರಾ ನೀಚೈಃ ಪರಿಪತಂತಿಚ । ಶಿವಾಶ್ಚಾಪ್ಯಶಿವಾನ್ನಾದಾನ್ನದಂತಿ ಸುಮಹಾಭಯಾನ್ ॥ ೧೧ ॥ ಶೈಲೈಃ

ಸುಲೋಹಿತಃ - ಮಧ್ಯದಲ್ಲಿ ಬಹಳ ಕೆಂಪು ಬಣ್ಣವುಳ್ಳ, ಲೋಕಕ್ಷಯೇ - ಪ್ರಳಯಕಾಲದಲ್ಲಿ, ಉದಿತಃ - ಹುಟ್ಟಿದ, ಪರಿವೇಷಇವ - ಪರಿವೇಷದಂತೆ, ರೂಕ್ಷಃ - ಕ್ರೂರವಾದ, ಅಪ್ರಶಸ್ತಃ - ಅಪ್ರಸಿದ್ಧವಾದ (ಎಂದಿಗೂ ಕಾಣದಿರುವ), ಹ್ರಸ್ವಃ - ಸ್ವಲ್ಪವಾಗಿರುವ, ಪರಿವೇಷಃ - ಪರಿವೇಷವು, ಉದಿತಃ - ಹುಟ್ಟಿತು. ॥೮॥ ಹೇ ಲಕ್ಷ್ಮಣ - ಎಲೈ ಲಕ್ಷ್ಮಣನೇ, ವಿಮಲೇ - ಸ್ವಚ್ಛವಾಗಿರುವ, ಆದಿತ್ಯೇ- ಸೂರ್ಯನಲ್ಲಿ, ನೀಲಂ - ಕಪ್ಪಾಗಿರುವ, ಲಕ್ಷ್ಮ - ಗುರ್ತು, ದೃಶ್ಯತೇ - ಕಾಣುತ್ತದೆ. ॥೯॥ ಕಿಂಚ - ಇಷ್ಟುಮಾತ್ರವಲ್ಲದೆ, ಹೇ ಲಕ್ಷ್ಮಣ - ಎಲೈ ಲಕ್ಷ್ಮಣನೇ, ಮಹತಾ - ಮಹತ್ತರವಾದ, ರಜಸಾ - ಮಾಲಿನ್ಯದಿಂದ, ಹತಾನಿ - ಹೊಡೆಯಲ್ಪಟ್ಟ, ನಕ್ಷತ್ರಾಣಿಚ - ನಕ್ಷತ್ರಗಳೂ ಸಹ, ಲೋಕಾನಾಂ - ಲೋಕಗಳ, ಯುಗಾಂತಂ - ಪ್ರಳಯವನ್ನು, ಶಂಸಂತೀವ - ಹೇಳುತ್ತವೆಯೋ ಎಂಬಂತಿವೆ, ಪಶ್ಯ - ನೋಡು. ॥ ೧೦ ॥ ಕಾಕಾಃ - ಕಾಗೆಗಳು, ಶ್ಯೇನಾಃ - ಗಿಡಗಗಳೂ, ತಥಾ - ಹಾಗೆ, ಗೃಧ್ರಾಶ್ಚ - ಹದ್ದುಗಳೂ, ನೀಚೈಃ-ದುರ್ಬಲವಾದ ಪಕ್ಷಿಗಳಿಂದ, ಪರಿಪತಂತಿ-ತಿರಸ್ಕರಿಸಲ್ಪಡುತ್ತವೆ, ಶಿವಾಶ್ಚಾಪಿ- ನರಿಗಳೂ ಕೂಡಾ, ಮಹಾಭಯಾನ್-ಬಹು ಬಯಂಕರವಾದ, ಅಶಿವಾನ್-ಅಮಂಗಳಕರವಾದ, ನಾದಾನ್-

ಕಪ್ಪಾಗಿ, ಅದಕ್ಕೆ ಹಿಂದ ಕೆಂಪಾಗಿ, ಮಧ್ಯದಲ್ಲಿ ಬಹಳ ಕೆಂಪಾಗಿರುವುದೂ, ಬಹಳ ಕುಗ್ಗಿರುವುದೂ, ಭಯಂಕರವಾಗಿರುವುದೂ, ಇದುವರೆಗೆ ಯಾವಾಗಲೂ ನೋಡಿಲ್ಲದುದೂ ಆದ ಪ್ರಳಯಕಾಲದಲ್ಲಿ ಆಗುವ ಪರಿವೇಷವು ಸೂರ್ಯನನ್ನು ಸುತ್ತುಗಟ್ಟಿರುವುದು. ಸೂರ್ಯನಲ್ಲಿ ನೀಲವಾದ ಗುರ್ತು ಕಾಣುತ್ತಿರುವುದು. ಲಕ್ಷ್ಮಣ! ನಕ್ಷತ್ರಗಳೆಲ್ಲವೂ ಧೂಳಿನಿಂದ ಮುಚ್ಚಿ ಕಾಂತಿಹೀನಗಳಾಗಿವೆ. ಇದು ಲೋಕಕ್ಕೆ ಪ್ರಳಯಕಾಲದಂತೆಯೇ ಪರಿಣಮಿಸಿದೆ. ॥೯–೧೦॥ ಕಾಗೆಗಳೂ, ಗಿಡಗಗಳೂ, ಹದ್ದುಗಳೂ ಕೀಳು ಪ್ರಾಣಿಗಳಿಂದ ಹೊಡೆಯಲ್ಪಟ್ಟು ಕೆಳಕ್ಕೆ ಬೀಳುತ್ತಿವೆ. ನರಿಗಳೂ ಸಹ ಭಯಂಕರವಾದ ಅಮಂಗಳ ನಾದಗಳನ್ನು ಮಾಡು

¶ ಇಲ್ಲಿಯ ಪರಿವೇಷ ಫಲವನ್ನು ಕಾಶ್ಯಪರು, "ದ್ವಿಮಂಡಲಶ್ಚಮೂಪಘ್ನೋ ನೃಪಘ್ನೋಯಸ್ತ್ರಿಮಂಡಲಃ- ಪರಿವೇಷವು ದ್ವಿಮಂಡಲವಾಗಿದ್ದರೆ ಸೇನಾಪತಿನಾಶವೂ, ತ್ರಿಮಂಡಲವಾಗಿದ್ದರೆ ರಾಜನಾಶವೂ ಆಗುತ್ತದೆ" ಎಂದು ಹೇಳಿರುವರು. ಅಲ್ಲದೆ; "ದಿನಕರಪರಿವೇಷಃ ಪೂರ್ವಯಾಮೇತು ಪೀಡಾ । ದಿನಕರಪರಿವೇಷೋ ವೃಷ್ಟಿಯುದ್ಧಂ ದ್ವಿತೀಯೇ । ದಿನಕರಪರಿವೇಷಂ ಕ್ಷೇಮ ಮಾಹುಸ್ತೃತೀಯೇ । ದಿನಕರಪರಿವೇಷಃ ಸರ್ವನಾಶಶ್ಚತುರ್ಥಃ-ಪರಿವೇಷವು ಒಂದೇ ಮಂಡಲವಾಗಿದ್ದರೆ (ಪೂರ್ವಯಾಮದಲ್ಲಿ) ಪೀಡೆಯೂ, ದ್ವಿತೀಯಯಾಮದಲ್ಲಿಯಾದರೆ ವೃಷ್ಟಿಯೂ, ಯುದ್ಧವೂ, ತೃತೀಯಯಾಮದಲ್ಲಿಯಾದರೆ ಕ್ಷೇಮವೂ, ಚತುರ್ಥಯಾಮದಲ್ಲಿಯಾದರೆ ಸರ್ವನಾಶವೂ ಆಗುತ್ತದೆ" ಎಂದೂ ಹೇಳಿರುವರು.

❦ ಇಲ್ಲಿ ವರಾಹಮಿಹಿರರು, "ಅಪರ್ವಣಿ ತಥಾರಾಹು ಗ್ರಹಣಂಚಂದ್ರ ಸೂರ್ಯಯೋಃ । ಚಂದ್ರಾರ್ಕಮಂಡಲಚ್ಛಿದ್ರಂ ದೃಷ್ಟ್ವಾ ಜನಪದಕ್ಷಯಃ"—ಪರ್ವಕಾಲವಲ್ಲದ ಕಾಲದಲ್ಲಿ ಸೂರ್ಯಚಂದ್ರರಿಗೆ ರಾಹುಗ್ರಹಣವಾದರೂ, ಸೂರ್ಯಚಂದ್ರರಲ್ಲಿ ಛಿದ್ರವು ಕಂಡರೂ ಜನಪದಕ್ಕೆ ಕ್ಷಯವುಂಟಾಗುತ್ತದೆ" ಅಥವಾ "ನೀಲಂಲಕ್ಷ್ಮ" ಎಂದರೆ ಸೂರ್ಯನು ಚಂದ್ರನಂತೆ ಕಳಂಕಯುಕ್ತನಾಗಿ ಕಾಣುತ್ತಿರುವನು ಎಂದು ಅರ್ಥ. ಇದೊಂದು ಉತ್ಪಾತ. ಇದನ್ನು ಅಧಿಕರಿಸಿಯೇ, "ಯದಾದಿತ್ಯಸ್ಯ ರೋಹಿತಂ ರೂಪಂ" ಎಂದು ಆರಂಭಿಸಿ, "ಯತ್ಕೃಷ್ಣಂ ತದನ್ನಸ್ಯ" ಎಂದು ಹೇಳುತ್ತಾರೆ.

ಶೂಲೈಶ್ಚ ಖಡ್ಗೈಶ್ಚ ಌ ವಿಸೃಷ್ಟೈಃ ಕಪಿರಾಕ್ಷಸೈಃ । ಭವಿಷ್ಯತ್ಯಾವೃತಾ ಭೂಮಿರ್ಮಾಂಸಶೋಣಿತಕರ್ದಮಾ ॥೧೨॥ ಕ್ಷಿಪ್ರಮದ್ಯೈವ ದುರ್ಧರ್ಷಾಂ ಪುರೀಂ ರಾವಣಪಾಲಿತಾಂ। ಅಭಿಯಾಮ ಜವೇನೈವ ಸರ್ವತೋ ಹರಿಭಿರ್ವೃತಾಃ" ॥ ೧೩ ॥ ಇತ್ಯೇವಮುಕ್ತ್ವಾ ಧರ್ಮಾತ್ಮಾ ಧನ್ವೀ ಸಂಗ್ರಾಮ § ಹರ್ಷಣಃ । ಪ್ರತಸ್ಥೇ ಪುರತೋ ರಾಮೋ ಲಂಕಾಮಭಿಮುಖೋ ವಿಭುಃ ॥ ೧೪ ॥ ಸವಿಭೀಷಣಸುಗ್ರೀವಾ § ಸ್ತತಸ್ತೇ ವಾನರರ್ಷಭಾಃ। ಪ್ರತಸ್ಥಿರೇ ವಿನರ್ದಂತೋ ನಿಶ್ಚಿತಾ ದ್ವಿಷತಾಂ ವಧೇ ॥ ೧೫ ॥

ಶಬ್ದಗಳನ್ನು, ನದಂತಿ-ಕೂಗುತ್ತವೆ. ॥೧೧॥ ವಿಸೃಷ್ಟೈಃ-ಬಿಡಲ್ಪಟ್ಟ, ಶೈಲೈಃ-ಪರ್ವತಗಳಿಂದಲೂ, ಶೂಲೈಃ - ಶೂಲಗಳಿಂದಲೂ, ಖಡ್ಗೈಶ್ಚ - ಕತ್ತಿಗಳಿಂದಲೂ, ಕಪಿರಾಕ್ಷಸೈರಪಿ - ವಾನರರಿಂದಲೂ ರಾಕ್ಷಸರಿಂದಲೂ, ಆವೃತಾ - ವ್ಯಾಪ್ತವಾದ, ಭೂಮಿಃ - ಭೂಮಿಯು, ಮಾಂಸ....ಮಾ - ಮಾಂಸದಿಂದಲೂ ರಕ್ತದಿಂದಲೂ ಕೆಸರಾದುದು, ಭವಿಷ್ಯತಿ - ಆಗುವದು. ॥೧೨॥ ಸರ್ವತಃ - ಸುತ್ತುಮುತ್ತಲೂ, ಹರಿಭಿಃ - ವಾನರರಿಂದ, ವೃತಾಃ - ಪರಿವೃತರಾಗಿ, ದುರ್ಧರ್ಷಾಂ - ತಿರಸ್ಕರಿಸಲಸಾಧ್ಯವಾದ, ರಾವಣಪಾಲಿತಾಂ - ರಾವಣನಿಂದ ಪಾಲಿಸಲ್ಪಟ್ಟ, ಪುರೀಂ - ಲಂಕಾಪಟ್ಟಣವನ್ನು ಕುರಿತು, ಅದ್ಯೈವ - ಈಗಲೇ, ಕ್ಷಿಪ್ರಂ - ತ್ವರೆಯಾಗಿ, ಜವೇನ - ವೇಗದಿಂದ, ಅಭಿಯಾಮ - ಹೋಗೋಣ. ॥೧೩॥ ವಿಭುಃ - ಸಮರ್ಥನಾದ, ಧನ್ವೀ - ಧನುರ್ಧಾರಿಯಾದ, ಧರ್ಮಾತ್ಮಾ - ಧರ್ಮಸ್ವಭಾವವುಳ್ಳ, ಸಂಗ್ರಾಮಹರ್ಷಣಃ - ಕಾಳಗದಲ್ಲಿ ಸಂತೋಷಗೊಳಿಸುವ, ರಾಮಃ - ಶ್ರೀರಾಮನು, ಇತ್ಯೇವಂ - ಈ ಪ್ರಕಾರವಾಗಿ, ಉಕ್ತ್ವಾ - ಹೇಳಿ, ಲಂಕಾಂ - ಲಂಕಾಪಟ್ಟಣಕ್ಕೆ, ಅಭಿಮುಖಃ - ಅಭಿಮುಖನಾಗಿ, ಪ್ರತಸ್ಥೇ - ತೆರಳಿದನು ॥೧೪॥ ಸವಿ....ವಾಃ - ವಿಭೀಷಣನಿಂದಲೂ, ಸುಗ್ರೀವನಿಂದಲೂ ಕೂಡಿದ, ತೇವಾನರರ್ಷಭಾಃ - ಆ ವಾನರಶ್ರೇಷ್ಠರು, ತತಃ - ಬಳಿಕ, ದ್ವಿಷತಾಂ - ಶತ್ರುಗಳ, ವಧೇ - ಸಂಹಾರದಲ್ಲಿ, ನಿಶ್ಚಿತಾಃ - ನಿಶ್ಚಯಿಸಲ್ಪಟ್ಟವರಾಗಿ, ವಿನರ್ದಂತಃ - ಕೂಗುತ್ತ, ಪ್ರತಸ್ಥಿರೇ - ತೆರಳಿದರು. ॥೧೫॥ ಕಿಂತು - ಮತ್ತೇನಂದರೆ, ರಾಘವಸ್ಯ - ಶ್ರೀರಾಮನ, ಪ್ರಿಯಾರ್ಥಂ - ಸಂತೋಷಾರ್ಥವಾಗಿ, ಧೃತಾನಾಂ - ಧೈರ್ಯವುಳ್ಳ (ದೃಢಮನಸ್ಕರಾದ), ವೀರ್ಯಶಾಲಿನಾಂ - ಪರಾಕ್ರಮಶಾಲಿಗಳಾದ, ಹರೀಣಾಂ - ವಾನರರ, ಕರ್ಮಚೇಷ್ಟಾಭಿಃ - ಯುದ್ಧಕರ್ಮವೇ ಮೊದಲಾದ

ತ್ತಿರುವುವು. ವಾನರರಿಂದಲೂ, ರಾಕ್ಷಸರಿಂದ ಪ್ರಯೋಗಿಸಲಾಗುವ ಪರ್ವತಗಳಿಂದಲೂ, ಶೂಲಖಡ್ಗಾದ್ಯಾಯುಧಗಳಿಂದಲೂ ಭೂಮಿಯೆಲ್ಲವೂ ರಕ್ತಮಾಂಸಗಳಿಂದ ತುಂಬಿ ಹೋಗುತ್ತದೆ. ಎಲೈ ಲಕ್ಷ್ಮಣನೇ! ನಾವೀಗಲೇ ಶೀಘ್ರವಾಗಿ ಈ ವಾನರರೊಡಗೂಡಿ, ರಾವಣಪಾಲಿತವಾದ ಲಂಕಾನಗರಕ್ಕೆ ಹೋಗೋಣ." ಈ ಪ್ರಕಾರ ಹೇಳಿ ಧನುರ್ಧಾರಿಯೂ, ಧರ್ಮಾತ್ಮನೂ, ಯುದ್ಧದಿಂದ ಸಂತೋಷಗೊಳ್ಳುವವನೂ ಆದ ಶ್ರೀರಾಮಪ್ರಭುವು ಲಂಕಾನಗರಾಭಿಮುಖವಾಗಿ ಹೊರಟನು. ಶ್ರೀರಾಮನು ಹೊರಟೊಡನೆಯೇ ವಿಭೀಷಣಸುಗ್ರೀವರೊಡಗೂಡಿದ ಆ ವಾನರರೆಲ್ಲರೂ ಶತ್ರುಗಳ ವಧೆಯಲ್ಲಿ ಅತ್ಯುತ್ಸಾಹವುಳ್ಳವರಾಗಿ ವೀರಘರ್ಜನೆಗಳನ್ನು ಮಾಡುತ್ತ ಹೊರಟರು. ಹೀಗೆ ತನಗೆ ಪ್ರಿಯವನ್ನುಂಟುಮಾಡುವುದರಲ್ಲಿ

ಌ "ವಿಮುಕ್ತೈಃ" ತಿ. ಪಾ. § "ಘರ್ಷಣಃ" ತಿ. ಪಾ. § "ಸರ್ವೇ ತೇ" ತಿ. ರಾ. ಪಾ.

ರಾಘವಸ್ಯ ಪ್ರಿಯಾರ್ಥಂತು ‡ ಧೃತಾನಾಂ ವೀರ್ಯಶಾಲಿನಾಂ ।
ಹರೀಣಾಂ ಕರ್ಮಚೇಷ್ಟಾಭಿಸ್ತುತೋಷ ರಘುಪುಂಗವಃ ॥ ೧೬ ॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ತ್ರಯೋವಿಂಶಸ್ಸರ್ಗಃ



ವಿಷಯಗಳಿಗೆ ಸಂಬಂಧಿಸಿದ ಚೇಷ್ಟೆಗಳಿಂದ, ರಘುಪುಂಗವಃ - ಶ್ರೀರಾಮನು, ತುತೋಷ - ಸಂತೋಷಿಸಿದನು. ॥ ೧೬ ॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ತ್ರಯೋವಿಂಶಸ್ಸರ್ಗಃ.



ನ್ಯಸ್ತಚಿತ್ತರಾದ ಆ ವೀರವಾನರರು ಮಾಡುತ್ತಿದ್ದ ಚೇಷ್ಟೆಗಳಿಂದ ಶ್ರೀರಾಮನು ಬಹಳವಾಗಿ ಆನಂದಿಸಿದನು. ॥ ೧೧–೧೬ ॥

ಇಂತಿದು ಶ್ರೀರಾಮಕೃತ ಲಂಕಾಭಿಮುಖಗಮನ ವೃತ್ತಾಂತವೆಂಬ ಇಪ್ಪತ್ತ
ಮೂರನೇ ಸರ್ಗವು ಸಮಾಪ್ತವಾದುದು.



‡ " ಸುತರಾಂ " ಇ. ಪಾ.

# ಯುದ್ಧಕಾಂಡೇ ಚತುರ್ವಿಂಶಸ್ಸರ್ಗಃ

**ಸಾ ವೀರಸಮಿತೀ ರಾಜ್ಞಾ ವಿರರಾಜ ವ್ಯವಸ್ಥಿತಾ । ಶಶಿನಾ ಶುಭನಕ್ಷತ್ರಾ ಪೌರ್ಣಮಾಸೀವ ಶಾರದೀ ॥೧॥ ಪ್ರಚಚಾಲಚ ವೇಗೇನ ತ್ರಸ್ತಾ ಚೈವ ವಸುಂಧರಾ । ಪೀಡ್ಯಮಾನಾ ಬಲೌಘೇನ ತೇನ ಸಾಗರವರ್ಚಸಾ ॥ ೨ ॥ ತತಃ ಶುಶ್ರುವುರಾಕೃಷ್ಟಂ ಲಂಕಾಯಾಂ ಕಾನನೌಕಸಃ । ಭೇರೀಮೃದಂಗಸಂಘುಷ್ಟಂ ತುಮುಲಂ ರೋಮ ಹರ್ಷಣಂ ॥೩॥ ಬಭೂವುಸ್ತೇನ ಘೋಷೇಣ ಸಂಹೃಷ್ಟಾ ಹರಿಯೂಥಪಾಃ । ಅಮೃಷ್ಯಮಾಣಾಸ್ತಂ ಘೋಷಂ ವಿನೇದುರ್ಘೋರವತ್ತರಂ ॥೪॥ ರಾಕ್ಷಸಾಸ್ತು ಪ್ಲವಂಗಾನಾಂ**

---

ರಾಜ್ಞಾ-ಪ್ರಭುವಾದ ಶ್ರೀರಾಮನಿಂದ, ವ್ಯವಸ್ಥಿತಾ-ವ್ಯವಸ್ಥೆ ಮಾಡಲ್ಪಟ್ಟ, ಸಾವೀರಸಮಿತಿಃ-ಆ ಶೂರರ ಸಭೆಯು, ಶಶಿನಾ - ಚಂದ್ರನಿಂದ, ಶುಭನಕ್ಷತ್ರಾ - ಶುಭಕರವಾದ ನಕ್ಷತ್ರಗಳುಳ್ಳ, ಶಾರದೀ - ಶರತ್ಕಾಲಸಂಬಂಧವಾದ, ಪೌರ್ಣಮಾಸೀವ - ಪೌರ್ಣಮಾಸ್ಯೆಯಂತೆ, ವಿರರಾಜ - ಹೊಳೆಯುತ್ತಿತ್ತು. ॥ ೧ ॥ ಸಾಗ....ಸಾ - ಸಮುದ್ರಸದೃಶವಾದ, ತೇನಬಲೌಘೇನ - ಆ ಸೈನ್ಯಗಳ ಗುಂಪುಗಳಿಂದ, ಪೀಡ್ಯಮಾನಾ - ಬಾಧೆಗೊಳಿಸಲ್ಪಟ್ಟುದಾದಕಾರಣ, ವಸುಂಧರಾ - ಭೂಮಿಯು, ವೇಗೇನ - ವೇಗದಿಂದ, ಪ್ರಚಚಾಲ - ಚಲಿಸಿತು, ತ್ರಸ್ತಾ ಚೈವ - ವಿಶೇಷವಾಗಿ ಹೆದರಿದ್ದೂ ಆಯಿತು. ॥೨॥ ತತಃ - ಬಳಿಕ, ಕಾನನೌಕಸಃ - ವಾನರರು, ಲಂಕಾಯಾಂ - ಲಂಕಾಪಟ್ಟಣದಲ್ಲಿ, ಆಕೃಷ್ಟಂ - (ಆಕ್ರೋಶವನ್ನು) ಕೋಲಾಹಲವನ್ನು, ಶುಶ್ರುವುಃ - ಕೇಳಿದರು, ತಮುಲಂ - ಸಂಕುಲವಾದ, ರೋಮಹರ್ಷಣಂ - ರೋಮಾಂಚಕರವಾದ, ಭೇರೀ......ಟ್ಟಂ - ಭೇರೀ ಮೃದಂಗ ಘೋಷವನ್ನು, ಶುಶ್ರುವುಃ - ಕೇಳಿದರು. ॥ ೩ ॥ ಹರಿಯೂಥಪಾಃ - ವಾನರಯೂಥಪತಿಗಳು, ತೇನಘೋಷೇಣ - ಆ ಶಬ್ದದಿಂದ, ಸಂಹೃಷ್ಟಾಃ - ಸಂತೋಷಚಿತ್ತರು, ಬಭೂವುಃ - ಆದರು, ತಂಘೋಷಂ - ಆ ಶಬ್ದವನ್ನು, ಅಮೃಷ್ಯಮಾಣಾಃ - ಸೈರಿಸದಿರುವವರಾಗಿ, ಘೋರವತ್ತರಂ - ಅತಿ ಭಯಂಕರವಾಗಿ, ವಿನೇದುಃ - ಕೂಗಿದರು. ॥ ೪ ॥ ರಾಕ್ಷಸಶ್ಚಾಪಿ - ರಾಕ್ಷಸರೂ ಕೂಡಾ, ಅಂಬರೇ - ಅಂತರಿಕ್ಷದಲ್ಲಿ, ನರ್ದತಾಂ - ಕೂಗುವ, ದೃಪ್ತಾನಾಂ - ತುಂಬಿರುವ, ಮೇಘಾನಾಂ - ಮೇಘಗಳ,

---

ಈ ರೀತಿ, ರಾಜಪುತ್ರನಾದ ಶ್ರೀರಾಮಮೂರ್ತಿಯನ್ನು ಮುಂದಿರಿಸಿಕೊಂಡು ಮುಂಬರಿಯುತ್ತಿದ್ದ ಆ ವಾನರಸೈನ್ಯವು ಚಂದ್ರನಿಂದೊಪ್ಪಿ ಶುಭತಾರೆಗಳೊಡಗೂಡಿದ ಶರದೃತುವಿನ ಹುಣ್ಣಿಮೆಗೆ ಸಮಾನವಾಗಿ ಪ್ರಕಾಶಿಸುತ್ತಿದ್ದಿತು. ಆ ಸಮಯದಲ್ಲಿ ನೆಲವು ಕಡಲಕಾಂತಿಗೆ ಸಮಾನವಾದ ಕಾಂತಿಯುಳ್ಳ ಆ ವಾನರಸೇನೆಯಿಂದ ಪೀಡಿಸಲ್ಪಟ್ಟು ಮಹಾ ಭಯದಿಂದ ಬಹಳವಾಗಿ ನಡುಗಿಹೋಯಿತು. ಆಗ ವಾನರವೀರರು ಲಂಕಾನಗರದಿಂದ ಹೊರಬರುತ್ತಿರುವ, ತುಮುಲವೂ, ರೋಮಾಂಚಕರವೂ ಆದ ಭೇರೀಮೃದಂಗ ಧ್ವನಿಗಳನ್ನೂ ಲಂಕೆಯಲ್ಲಿರುವ ಸೈನಿಕರ ವಿರಾಲಾಪಗಳನ್ನೂ ಕೇಳಿದರು. ಆ ಧ್ವನಿಗಳನ್ನು ಕೇಳಿದೊಡನೆಯೇ ಅವರಿಗೆ ಅಪರಿಮಿತವಾದ ಆನಂದವಾಯಿತು. ಅವರು ಅದಕ್ಕಿಂತಲೂ ಮಹತ್ತರವಾಗಿ ಸಿಂಹನಾದಗಳನ್ನು ಮಾಡಿ ಮೆರೆದರು. ಹೀಗೆ ಮಹಾ ಗರ್ವದಿಂದ ಆ ವಾನರರು ಮಾಡಿದ ಬಹು

ಶುಶ್ರುವುಶ್ಚಾಪಿ ಗರ್ಜಿತಂ । ನರ್ದತಾಮಿವ ದೃಪ್ತಾನಾಂ ಮೇಘಾನಾಮಂಬರೇ ಸ್ವನಂ ॥ ೫ ॥ ದೃಷ್ಟ್ವಾ ದಾಶರಥಿರ್ಲಂಕಾಂ ಚಿತ್ರಧ್ವಜಪತಾಕಿನೀಂ । ಜಗಾಮ ಮನಸಾ ಸೀತಾಂ ದೂಯಮಾನೇನ ಚೇತಸಾ ॥ ೬ ॥ ಅತ್ರ ಸಾ "ಮೃಗಶಾಬಾಕ್ಷೀ ರಾವಣೇನೋಪರುಧ್ಯತೇ । ಅಭಿಭೂತಾ ಗ್ರಹೇಣೇವ ಲೋಹಿತಾಂಗೇನ ರೋಹಿಣೀ" ॥೭॥ ದೀರ್ಘಮುಷ್ಣಂಚ ನಿಶ್ವಸ್ಯ ಸಮುದ್ವೀಕ್ಷ್ಯ ಚ ಲಕ್ಷ್ಮಣಂ । ಉವಾಚ ವಚನಂ ವೀರಸ್ತತ್ಕಾಲಹಿತಮಾತ್ಮನಃ ॥೮॥ "ಆಲಿಖಂತೀಮಿವಾಕಾಶಮುತ್ಥಿತಾಂ ಪಶ್ಯ ಲಕ್ಷ್ಮಣ ! । ಮನಸೇವ ಕೃತಾಂ ಲಂಕಾಂ ನಗಾಗ್ರೇ ವಿಶ್ವಕರ್ಮಣಾ ॥ ೯ ॥ ವಿಮಾನೈರ್ಬಹುಭಿ

---

ಸ್ವನಮೀವಸ್ಥಿತಂ - ಶಬ್ದದಂತಿರುವ, ಪ್ಲವಂಗಾನಾಂ - ವಾನರರ, ಗರ್ಜಿತಂ - ಘೋಷವನ್ನು, ಶುಶ್ರುವುಃ - ಕೇಳಿದರು. ॥ ೫ ॥ ದಾಶರಥಿಃ - ದಶರಥಪುತ್ರನಾದ (ಶ್ರೀರಾಮನು), ಚಿತ್ರ....ನೀಂ - ವಿಚಿತ್ರವಾದ ದೊಡ್ಡದೊಡ್ಡ ಧ್ವಜಗಳೂ ಚಿಕ್ಕಚಿಕ್ಕ ಧ್ವಜಗಳೂ ಉಳ್ಳ, ಲಂಕಾಂ - ಲಂಕಾಪಟ್ಟಣವನ್ನು, ದೃಷ್ಟ್ವಾ - ಕಂಡು, ದೂಯಮಾನೇನ - ಪರಿತಪಿಸುತ್ತಲಿರುವ, ಚೇತಸಾ - ಮನದಿಂದ, ಉಪಲಕ್ಷಿತಃ - ಕೂಡಿ, ಮನಸಾ - ಮನದಿಂದ, ಸೀತಾಂ - ಸೀತಾದೇವಿಯನ್ನು, ಜಗಾಮ - ಸ್ಮರಿಸಿದನು. ॥ ೬ ॥ ಅತ್ರ - ಇಲ್ಲಿ, ಸಾ ಮೃಗಶಾಬಾಕ್ಷೀ - ಜಿಂಕೆಯಮರಿಯ ಕಣ್ಣುಗಳಂತೆ ಕಣ್ಣುಗಳುಳ್ಳ ಆ ಸೀತಾದೇವಿಯು, ಲೋಹಿತಾಂಗೇಣ-ಅಂಗಾರಕಗ್ರಹದಿಂದ, ಅಭಿಭೂತಾ-ತಿರಸ್ಕರಿಸಲ್ಪಟ್ಟ, ರೋಹಿಣೀವ - ರೋಹಿಣೀನಕ್ಷತ್ರದಂತೆ, ರಾವಣೇನ - ರಾವಣನಿಂದ, ಉಪರುಧ್ಯತೇ - ತಡೆಯಲ್ಪಟ್ಟಿರುವಳು. ॥೭॥ ವೀರಃ - ಶೂರನಾದ ಶ್ರೀರಾಮನು, ದೀರ್ಘಂ - ಉದ್ದವಾಗಿಯೂ, ಉಷ್ಣಂಚ-ಬಿಸಿಯಾಗಿಯೂ, ನಿಶ್ವಸ್ಯ - ನಿಟ್ಟುಸಿರುಗಳನ್ನು ಬಿಟ್ಟು, ಲಕ್ಷ್ಮಣಂಚ - ಲಕ್ಷ್ಮಣನನ್ನೂ, ಸಮುದ್ವೀಕ್ಷ್ಯ - ನೋಡಿ, ಆತ್ಮನಃ - ತನಗೆ, ತತ್ಕಾಲಹಿತಂ - ತತ್ಕಾಲಕ್ಕೆ ಹಿತಕರವಾದ, ವಚನಂ - ಮಾತನ್ನು, ಉವಾಚ - ಹೇಳಿದನು. ॥ ೮ ॥ ಹೇ ಲಕ್ಷ್ಮಣ - ಎಲೈ ಲಕ್ಷ್ಮಣನೇ, ಆಕಾಶಂ - ಅಂತರಿಕ್ಷವನ್ನು, ಆಲಿಖಂತೀಮವಸ್ಥಿತಾಂ - ಸ್ಪರ್ಶಿಸುವಂತಿರುವ, ಉತ್ಥಿತಾಂ - ಉನ್ನತವಾದ, ನಗಾಗ್ರೇ-ಪರ್ವತಶಿಖರದಲ್ಲಿ, ವಿಶ್ವಕರ್ಮಣಾ - ವಿಶ್ವಕರ್ಮನಿಂದ, ಮನಸಾ - ಮನಸ್ಸಿನಿಂದ, ಕೃತಾ... ತಾಂ - ಮಾಡಲ್ಪಟ್ಟಂತಿರುವ, ಲಂಕಾಂ - ಲಂಕಾಪಟ್ಟಣವನ್ನು, ಪಶ್ಯ - ನೋಡು. ॥ ೯ ॥ ಭುವಿ - ಭೂಮಿಯಲ್ಲಿ, ಬಹುಭಿಃ - ಅನೇಕವಾದ, ವಿಮಾನೈಃ - ಏಳಂತಸ್ತುಗಳುಳ್ಳ ಪ್ರಾಸಾದಗಳಿಂದ, ಸಂಕೀರ್ಣಾ-

---

ದೊಡ್ಡ ಸಿಂಹನಾದವನ್ನು ಲಂಕಾನಗರವಾಸಿಗಳೆಲ್ಲರೂ ಆಕಾಶದಲ್ಲಿ ಹುಟ್ಟುವ ಮೇಘಗರ್ಜನೆಯಂತಿರುವುದನ್ನಾಗಿ ಕೇಳಿದರು. ॥ ೧–೫ ॥ ಆಗ ಶ್ರೀರಾಮಮೂರ್ತಿಯು ವಿವಿಧ ಧ್ವಜಗಳಿಂದಲೂ, ಪತಾಕೆಗಳಿಂದಲೂ ಒಪ್ಪುತ್ತಿರುವ ಲಂಕಾನಗರವನ್ನು ನೋಡಿ ದುಃಖಮಾನಸನಾಗಿ ಸೀತೆಯನ್ನು ಸ್ಮರಿಸಿ, "ಅಯ್ಯೋ ! ಮೃಗಶಾಬನಿಭೇಕ್ಷಣೆಯಾದ ಜಾನಕಿಯು, ದುಷ್ಟಗ್ರಹವಾದ ಅಂಗಾರಕನಿಂದ ಪೀಡಿಸಲ್ಪಟ್ಟ ರೋಹಿಣಿಯಂತೆ ಈ ಲಂಕೆಯಲ್ಲಿ ರಾವಣನಿಂದ ಬಂಧಿತಳಾಗಿರುವಳಲ್ಲವೆ !" ಎಂದು ಪಂತಪಿಸಿದನು. ಆಮೇಲೆ ಮಹಾ ಶೂರನಾದ ಆತನು ಬಿಸಿಯುಸಿರ್ಗರೆದು ತಮ್ಮನಾದ ಲಕ್ಷ್ಮಣಸ್ವಾಮಿಯನ್ನು ನೋಡಿ ತತ್ಕಾಲೋಚಿತವಾದ ಮಾತುಗಳಿಂದ, "ತಮ್ಮಾ ಲಕ್ಷ್ಮಣನೇ ! ಗಗನವನ್ನು ಮುಟ್ಟುತ್ತಿರುವಂತಿರುವ ಮಹೋನ್ನತವಾದ ಈ ತ್ರಿಕೂಟಾಚಲದ ಶಿಖರದಮೇಲೆ ವಿಶ್ವಕರ್ಮನಿಂದ ಬಹು ಸುಂದರವಾಗಿ ನಿರ್ಮಿಸಲ್ಪಟ್ಟಿರುವ ಈ ಲಂಕಾನಗರವನ್ನು ನೋಡಿದೆಯಾ ! ಈ ನಗರವು ವಿಮಾನಾಕಾರವಾದ

ರ್ಲಂಕಾ ಸಂಕೀರ್ಣಾ ¶ ಭುವಿ ರಾಜತೇ । ವಿಷ್ಣೋಃಪದಮಿವಾಕಾಶಂ ಛಾದಿತಂ ಪಾಂಡರೈರ್ಘನೈಃ ||೧೦|| ಪುಷ್ಪಿತೈಃ ಶೋಭಿತಾ ಲಂಕಾ ವನೈಶ್ಚೈತ್ರರಥೋಪಮೈಃ । ನಾನಾಪತಗಸಂಘುಷ್ಟೈಃ ಫಲಪುಷ್ಪೋಪಗೈಃ ಶುಭೈಃ ||೧೧|| ‡ ಪಶ್ಯ ಮತ್ತವಿಹಂಗಾನಿ ಪ್ರಲೀನಭ್ರಮರಾಣಿ ಚ । ಕೋಕಿಲಾಕುಲಷಂಡಾನಿ ದೋಧವೀತಿ ಶಿವೋಽನಿಲಃ'' ||೧೨|| ಇತಿ ದಾಶರಥೀ ರಾಮೋ ಲಕ್ಷ್ಮಣಂ ಸಮಭಾಷತ । ಬಲಂಚ ತದ್ವೈ ವಿಭಜನ್ ಶಾಸ್ತ್ರದೃಷ್ಟೇನ ಕರ್ಮಣಾ ||೧೩|| ಶಶಾಸ ಕಪಿಸೇನಾಯಾ ಬಲಮಾ

ತುಂಬಿರುವ, ಲಂಕಾ - ಲಂಕಾಪಟ್ಟಣವು, ಪಾಂಡರೈಃ - ಶುಭ್ರವಾದ, ಘನೈಃ - ಮೇಘಗಳಿಂದ, ಛಾದಿತಂ - ಆಚ್ಛಾದಿತವಾದ, ವಿಷ್ಣೋಃ - (ಗೋ) ವ್ಯಾಪನಶೀಲನಾದ ವಾಯುಮಯನಾದ ಬ್ರಹ್ಮನ, ಪದಂ - ಪ್ರಚಾರಸ್ಥಾನವಾದ, ಆಕಾಶಮಿವ - ಅಂತರಿಕ್ಷದಂತೆ, ವಿರಾಜತೇ - ಹೊಳೆಯುತ್ತಲಿದೆ. ||೧೦|| ನಾನಾ.....ಷ್ಟೈಃ-ಅನೇಕ ವಿಧಗಳಾದ ಪಕ್ಷಿಗಳಿಂದ ಶಬ್ದಾಯಮಾನವಾದ, ಫಲಪುಷ್ಪೋಪಗೈಃ-ಫಲಪುಷ್ಪಗಳುಳ್ಳ ಮಲ್ಲಿಗೆ ಮೊದಲಾದವುಗಳಿಂದ ಕೂಡಿದ, ಶುಭೈಃ - ಶುಭಕರವಾದ, ಪುಷ್ಪಿತೈಃ-ಮೊಳೆತ ಹೂಗಳುಳ್ಳ, ಚೈತ್ರ....ಮೈಃ - ಕುಬೇರನ ಉದ್ಯಾನಕ್ಕೆ ಸಮಾನವಾದ, ವನೈಃ - ಉದ್ಯಾನಗಳಿಂದ, ಲಂಕಾ - ಲಂಕಾಪಟ್ಟಣವು, ಶೋಭತೇ - ಹೊಳೆಯುತ್ತಲಿದೆ. ||೧೧|| ಕಿಂಚ - ಇಷ್ಟುಮಾತ್ರವಲ್ಲದೆ, ಶಿವಃ - ಶುಭಕರವಾದ, ಅನಿಲಃ - ವಾಯುವು, ಮತ್ತವಿಹಂಗಾನಿ - ಮದಿಸಿದ ಪಕ್ಷಿಗಳುಳ್ಳ, ಪ್ರಲೀ....ಣಿ - ಅವಿತುಕೊಂಡ ದುಂಬಿಗಳುಳ್ಳ, ಕೋಕಿ....ನಿ - ಕೋಗಿಲೆಗಳಿಂದ ವ್ಯಾಕುಲವಾದ ಗುಂಪುಗಳುಳ್ಳ, (ವನಾನಿ - ವನಗಳನ್ನು), ದೋಧವೀತಿ - ಬಾರಿಬಾರಿಗೂ ಕಂಪಿಸುವಂತೆ ಮಾಡುತ್ತದೆ, ಪಶ್ಯ - ನೋಡು, ಇತಿ - ಇಂತೆಂದು, ದಾಶರಥಿಃ - ದಶರಥಪುತ್ರನಾದ, ರಾಮಃ-ಶ್ರೀರಾಮನು, ಲಕ್ಷ್ಮಣಂ - ಲಕ್ಷ್ಮಣನನ್ನು ಕುರಿತು, ಸಮಭಾಷತಃ - ಮಾತನಾಡಿದನು. ||೧೨|| ಶಾಸ್ತ್ರ.....ಣಾ - ಶಾಸ್ತ್ರೋಕ್ತಪ್ರಕಾರದಿಂದ, ತದ್ಬಲಂ - ಆ ಸೈನ್ಯವನ್ನು, ವಿಭಜನ್ವೈ - ವಿಭಾಗಿಸುವವನಾಗಿ, ಶಶಾಶ - ಆಜ್ಞಾಪಿಸಿದನು. ||೧೩|| ವೀರ್ಯವಾನ್ - ಪರಾಕ್ರಮಿಯಾದ, ದುರ್ಜಯಃ - ಜಯಿಸಲಸಾಧ್ಯನಾದ, ಅಂಗದಃ - ಅಂಗದನು, ಬಲಂ - ತನ್ನ ಬಲವನ್ನು, ಆದಾಯ - ತೆಗದು

ಅಸಂಖ್ಯಾತಭವನಳಿಂದೊಪ್ಪಿ ಬೆಳುಮೋಡಗಳು ಕವಿದ ಆಗಸದಂತೆ ಬಹಳವಾಗಿ ಪ್ರಕಾಶಿಸುತ್ತಿರುವುದು. ಬಹು ಮನೋಜ್ಞಗಳಾದ ಫಲಪುಷ್ಪಗಳಿಂದ ತುಂಬಿ, ಬಗೆಬಗೆಯ ಪಕ್ಷಿಗಳ ಸುಶ್ರಾವ್ಯವಾದ ಧ್ವನಿಗಳೊಡಗೂಡಿ ಚೈತ್ರರಥೋಪಮವಾದವನೋಪವನಗಳಿಂದ ಮನೋಹರವಾಗಿರುವ ಈ ನಗರವು ಬಹಳ ಸೊಗಸಾಗಿ ಕಂಗೊಳಿಸುತ್ತಿದೆ. ಲಕ್ಷ್ಮಣಾ! ಮದಿಸಿದ ಪಕ್ಷಿಗಳಿಂದೊಪ್ಪಿ ಮಧುಮತ್ತಗಳಾಗಿ ಕದಲದಿರುವ ಆರಡಿಗಳಿಂದ ತುಂಬಿ ಕೋಕಿಲಾಕುಲವಾದ ಪುಷ್ಪಗುಚ್ಛಗಳಿಂದ ಶೋಭಿಸುತ್ತಿರುವ ಇಲ್ಲಿನ ವನಗಳು ಮಲಯಮಾರುತದಿಂದ ವಿಚಲಿತವಾಗಿರುವುದು ಎಷ್ಟು ಸೊಗಸಾಗಿದೆ!'' ||೯–೧೨|| ಶ್ರೀರಾಮ ನೀರೀತಿ ಲಕ್ಷ್ಮಣಸ್ವಾಮಿಯೊಡನೆ ಹೇಳಿದ ತರುವಾಯ ವಾನರಸೇನೆಯೆಲ್ಲವನ್ನೂ ಶಾಸ್ತ್ರೋಕ್ತವಾಗಿ ವ್ಯೂಹಕಟ್ಟಿ ನಿಲ್ಲಿಸಲು ಬಯಸಿದವನಾಗಿ ವಾನರವೀರರೆಲ್ಲರನ್ನೂ ಕುರಿತು ಹೀಗೆ ಆಜ್ಞಾಪಿಸಿದನು. "ಎಲೈ ವಾನರೋತ್ತಮರೇ! ಶತ್ರುಗಳಿಗೆ ಜಯಿಸಲಸಾಧ್ಯನೂ, ಮಹಾ ಪರಾಕ್ರಮವಂತನೂ ಆದ

¶ "ರಚಿತಾ ಪುರಾ" ತಿ. ಪಾ. ‡ "ಯಸ್ಯ" ರಾ. ಪಾ.

ದಾಯ ವೀರ್ಯವಾನ್ । "ಅಂಗದಸಹನೀಲೇನ ತಿಷ್ಠೇದುರಸಿ ದುರ್ಜಯಃ ॥ ೧೪ ॥ ತಿಷ್ಠೇದ್ವಾನರವಾಹಿನ್ಯಾ ವಾನರೌಘ ಸಮಾವೃತಃ । ಆಶ್ರಿತ್ಯ ದಕ್ಷಿಣಂ ಪಾರ್ಶ್ವ ಮೃಷಭೋ ವಾನರರ್ಷಭಃ ॥ ೧೫ ॥ ಗಂಧಹಸ್ತೀವ ದುರ್ಧರ್ಷಸ್ತರಸ್ವೀ ಗಂಧಮಾದನಃ । ತಿಷ್ಠೇದ್ವಾನರವಾಹಿನ್ಯಾಸ್ಸವ್ಯಂ ಪಾರ್ಶ್ವಂ ಸಮಾಶ್ರಿತಃ ॥ ೧೬ ॥ ಮೂರ್ಧ್ನಿ ಸ್ಥಾಸ್ಯಾಮ್ಯಹಂ ಯುಕ್ತೋ ಲಕ್ಷ್ಮಣೇನ ಸಮನ್ವಿತಃ ॥ ೧೭ ॥ ಜಾಂಬವಾಂಶ್ಚ ಸುಷೇಣಶ್ಚ ವೇಗದರ್ಶೀಚ ವಾನರಃ । ಋಕ್ಷಮುಖ್ಯಾ ಮಹಾತ್ಮಾನಃ ಕುಕ್ಷಿಂ ರಕ್ಷಂತು ತೇ ತ್ರಯಃ ॥ ೧೭ ॥ ಜಘನಂ ಕಪಿಸೇನಾಯಾಃ ಕಪಿರಾಜೋಽಭಿರಕ್ಷತು । ಪಶ್ಚಾರ್ಧಮಿವ ಲೋಕಸ್ಯ ಪ್ರಚೇತಾಸ್ತೇಜಸಾ ವೃತಃ" ॥ ೧೮ ॥ ಸಂವಿಭಕ್ತಮಹಾವ್ಯೂಹಾ

---

ಕೊಂಡು, ನೀಲೇನಸಹ - ನೀಲನೊಡನೆ, ಕಪಿಸೇನಾಯಾಃ - ವಾನರಸೇನೆಯ, ಉರಸಿ - ಉರಸ್ಥಾನದಲ್ಲಿ, ತಿಷ್ಠೇತ್ - ನಿಲ್ಲಲಿ. ॥ ೧೪ ॥ ವಾನರರ್ಷಭಃ - ವಾನರಶ್ರೇಷ್ಠನಾದ, ಋಷಭಃ - ಋಷಭನು, ವಾನ....ತಃ - ವಾನರರ ಗುಂಪಿನಿಂದ ಪರಿವೃತನಾಗಿ, ವಾನರವಾಹಿನ್ಯಾಃ - ಕಪಿಸೇನೆಯ, ದಕ್ಷಿಣಂ ಪಾರ್ಶ್ವಂ - ಬಲಭಾಗವನ್ನು, ಆಶ್ರಿತ್ಯ - ಆಶ್ರಯಿಸಿ, ತಿಷ್ಠೇತ್ - ಇರಲಿ. ॥ ೧೫ ॥ ಗಂಧಹಸ್ತೀವ - ಮದದಾನೆಯಂತೆ, ದುರ್ಧರ್ಷಃ - ತಿರಸ್ಕರಿಸ್ಕರಿಸಲಸಾಧ್ಯನಾದ, ತರಸ್ವೀ - ಬಲಿಷ್ಠನಾದ, ಗಂಧಮಾದನಃ - ಗಂಧಮಾದನನು, ವಾನ....ನ್ಯಾಃ - ವಾನರಸೇನೆಯ, ಸವ್ಯಂಪಾರ್ಶ್ವಂ - ಎಡಭಾಗವನ್ನು, ಸಮಾಶ್ರಿತಃ - ಆಶ್ರಯಿಸಿ, ತಿಷ್ಠೇತ್ - ಇರಲಿ, ಅಹಂ - ನಾನು, ಯುಕ್ತಃ - ಸಮಾಧಾನದಿಂದ ಯುಕ್ತನಾಗಿ, ಲಕ್ಷ್ಮಣೇನ-ಲಕ್ಷ್ಮಣನಿಂದ, ಸಮನ್ವಿತಃ-ಕೂಡಿ, ವಾನರವಾಹಿನ್ಯಾಃ-ಕಪಿಸೇನೆಯ, ಮೂರ್ಧ್ನಿ - ಶಿರಸ್ಸ್ಥಾನದಲ್ಲಿ, ಸ್ಥಾಸ್ಯಾಮಿ - ನಿಲ್ಲುತ್ತೇನೆ. ॥ ೧೬ ॥ ಮಹಾತ್ಮಾನಃ - ಮಹಾ ಧೈರ್ಯಶಾಲಿಗಳಾದ, ಋಕ್ಷಮುಖ್ಯಾಃ - ಕರಡಿಗಳಲ್ಲಿ ಮುಖ್ಯರಾದ, ಜಾಂಬವಾಂಶ್ಚ - ಜಾಂಬವಂತನೂ, ಸುಷೇಣಶ್ಚ - ಸುಷೇಣನೂ, ವಾನರಃ - ಕಪಿಯಾದ, ವೇಗದರ್ಶೀಚ - ವೇಗದರ್ಶಿಯೆಂಬ, ತೇತ್ರಯಃ- ಆ ಮೂರುಮಂದಿಯು, ಕುಕ್ಷಿಂ - ಸೇನೆಯ ಉದರಪ್ರದೇಶವನ್ನು, ರಕ್ಷಂತು - ಪಾಲಿಸಲಿ. ॥ ೧೭ ॥ ತೇಜಸಾ - ತೇಜಸ್ಸಿನಿಂದ, ವೃತಃ - ಕೂಡಿದ, ಪ್ರಚೇತಾಃ - ವರುಣನು, ಲೋಕಸ್ಯ-ಮನುಷ್ಯಲೋಕದ, ಪಶ್ಚಾರ್ಧಮಿವ - ಪಶ್ಚಿಮಭಾಗವನ್ನಂತೆ, ಕಪಿರಾಜಃ - ಸುಗ್ರೀವನು, ಕಪಿಸೇನಾಯಾಃ - ವಾನರ ಸೈನ್ಯದ, ಜಘನಂ - ಕಟಿಪುರೋಭಾಗವನ್ನು, ಅಭಿರಕ್ಷತು - ಸಂರಕ್ಷಿಸಲಿ. ॥ ೧೮ ॥ ಸಂವಿ.... ಹಾ - ಚೆನ್ನಾಗಿ ವಿಭಾಗಿಸಲ್ಪಟ್ಟ ಮಹಾ ಗರುಡವ್ಯೂಹವುಳ್ಳ, ಮಹಾ.....ತಾ - ಉತ್ತಮ ವಾನರರಿಂದ ರಕ್ಷಿಸಲ್ಪಟ್ಟ, ಸಾಅನೀಕಿನೀ - ಆ ಸೈನ್ಯವು, ಸಾಭ್ರಸಂಪ್ಲವಾ - ಮೇಘಗಳ ಸಂಚಾರದಿಂದ ಕೂಡಿರುವ

---

"ಈ ಅಂಗದಕುಮಾರನು ನೀಲನೊಡಗೂಡಿ ತನ್ನ ಸೈನ್ಯವನ್ನು ತೆಗೆದುಕೊಂಡು ವಾನರಸೇನೆಯ ಉರಸ್ಸಿನಲ್ಲಿ ನಿಲ್ಲಲಿ. ವಾನರೋತ್ತಮನಾದ ಋಷಭನು ತನ್ನ ಯೋಧರೊಡನೆ ಸೇನೆಯ ಬಲಪಾರ್ಶ್ವದಲ್ಲಿರಬೇಕು. ಮದದಾನೆಯಂತೆ ಎದುರಿಸಲಸಾಧ್ಯನೂ, ಮಹಾ ಬಲಾಢ್ಯನೂ ಆದ ಗಂಧಮಾದನನು ತನ್ನ ಯೋಧರೊಡನೆ ಸೇನೆಯ ವಾಮಪಾರ್ಶ್ವದಲ್ಲಿರಬೇಕು. ನಾನೂ, ಲಕ್ಷ್ಮಣನೂ ಸಾವಧಾನಮನಸ್ಕರಾಗಿ ಸೇನೆಯ ಶಿರೋಭಾಗದಲ್ಲಿರುತ್ತೇವೆ. ಜಾಂಬವಂತ, ಸುಷೇಣ, ವೇಗದರ್ಶಿ ಈ ಮೂವರು ಭಲ್ಲೂಕೋತ್ತಮರೂ ಸೇನೆಯ ಕುಕ್ಷಿಪ್ರದೇಶವನ್ನು ಸಂರಕ್ಷಿಸುತ್ತಿರಲಿ." ॥೧೩-೧೮॥ ಶ್ರೀರಾಮನೀರೀತಿ ಆಜ್ಞಾಪಿಸಲು ಆ ವಾನರಸೇನೆಯೆಲ್ಲವೂ ಗರುಡವ್ಯೂಹದಿಂದ ಸುರಚಿತವಾಗಿ ಮಹಾ ವಾನರವೀರರಿಂದ ಸುರಕ್ಷಿತವಾಗಿ

ಮಹಾವಾನರರಕ್ಷಿತಾ । ಅನೀಕಿನೀ ಸಾ ವಿಬಭೌ ಯಥಾ ದ್ಯೌಸ್ಸಾಭ್ರಸಂಪ್ಲವಾ ॥೧೯॥ ಪ್ರಗೃಹ್ಯ ಗಿರಿಶೃಂಗಾಣಿ ಮಹತಶ್ಚ ಮಹೀರುಹಾನ್ । ಆಸೇದುರ್ವಾನರಾ ಲಂಕಾಂ ವಿಮರ್ದಯಿಷವೋ ರಣೇ ॥ ೨೦ ॥ "ಶಿಖರೈರ್ವಿಕಿರಾಮೈನಾಂ ಲಂಕಾಂ ಮುಷ್ಟಿಭಿರೇವವಾ" । ಇತಿಸ್ಮ ದಧಿರೇ ಸರ್ವೇ ಮನಾಂಸಿ ಹರಿಸತ್ತಮಾಃ ॥ ೨೧ ॥ ತತೋ ರಾಮೋ ಮಹಾತೇಜಾಸ್ಸುಗ್ರೀವಮಿದಮಬ್ರವೀತ್ । "ಸುವಿಭಕ್ತಾನಿ ಸೈನ್ಯಾನಿ ಶುಕ ಏಷ ವಿಮುಚ್ಯತಾಂ" ॥ ೨೨ ॥ ರಾಮಸ್ಯ ವಚನಂ ಶ್ರುತ್ವಾ ವಾನರೇಂದ್ರೋ ಮಹಾಬಲಃ । ಮೋಚಯಾಮಾಸ ತಂ ದೂತಂ ಶುಕಂ ರಾಮಸ್ಯ ಶಾಸನಾತ್ ॥ ೨೩ ॥

---

ದ್ಯೌರ್ಯಥಾ - ನಕ್ಷತ್ರಮಂಡಲದಂತೆ. ವಿಬಭೌ - ಹೊಳೆಯುತ್ತಿತ್ತು. ॥೧೯॥ ವಾನರಾಃ - ಕಪಿಗಳು, ರಣೇ - ಕಾಳಗದಲ್ಲಿ, ವಿಮರ್ದಯಿಷವಃ - ಹೊಡೆಯಲಿಚ್ಛೆಯುಳ್ಳವರಾಗಿ, ಗಿರಿಶೃಂಗಾಣಿ - ಪರ್ವತ ಶಿಖರಗಳನ್ನೂ, ಮಹತಃ - ದೊಡ್ಡವಾದ, ಮಹೀರುಹಾಂಶ್ಚ - ವೃಕ್ಷಗಳನ್ನೂ, ಪ್ರಗೃಹ್ಯ - ಹಿಡಿದು, ಲಂಕಾಂ - ಲಂಕಾಪಟ್ಟಣವನ್ನು ಕುರಿತು, ಆಸೇದುಃ - ಬಂದರು. ॥ ೨೦ ॥ ಸರ್ವೇ - ಸಮಸ್ತರಾದ, ಹರಿಸತ್ತಮಾಃ - ವಾನರಶ್ರೇಷ್ಠರು, ಶಿಖರೈಃ - ಶೃಂಗಗಳಿಂದ, ಏನಾಂಲಂಕಾಂ - ಈ ಲಂಕಾಪಟ್ಟಣವನ್ನು ಕುರಿತು, ವಿಕಿರಾಮ - ಎರಚೋಣ, ಮುಷ್ಟಿಭಿರೇವವಾ - ಮುಷ್ಟಿಗಳಿಂದಲಾದರೂ, ವಿಕಿರಾಮ-ಚೂರ್ಣಮಾಡೋಣ, ಇತಿ - ಇಂತೆಂದು, ಮನಾಂಸಿ - ಮನಸ್ಸುಗಳನ್ನು, ದಧಿರೇ - ಧರಿಸಿದರು. ॥೨೧॥ ತತಃ - ಅನಂತರದಲ್ಲಿ, ಮಹಾತೇಜಾಃ - ಮಹಾ ಪರಾಕ್ರಮವಂತನಾದ, ರಾಮಃ - ಶ್ರೀರಾಮನು, ಸುಗ್ರೀವಂ - ಸುಗ್ರೀವನನ್ನು ಕುರಿತು, ಸೈನ್ಯಾನಿ - ಸೇನೆಗಳು, ಸುವಿಭಕ್ತಾನಿ - ಚನ್ನಾಗಿ ವಿಭಾಗ ಮಾಡಲ್ಪಟ್ಟುವಷ್ಟೆ, ಏಷಶುಕಃ - ಈ ಶುಕನು, ವಿಮುಚ್ಯತಾಂ - ಬಿಡಲ್ಪಡಲಿ, ಇತಿ - ಇಂತೆಂದು, ಅಬ್ರವೀತ್ - ನುಡಿದನು. ॥೨೨॥ ಮಹಾಬಲಃ - ಬಹಳ ಬಲಿಷ್ಠನಾದ, ವಾನರೇಂದ್ರಃ - ಸುಗ್ರೀವನು, ರಾಮಸ್ಯ - ಶ್ರೀರಾಮನ, ವಚನಂ - ಮಾತನ್ನು, ಶ್ರುತ್ವಾ - ಕೇಳಿ, ರಾಮಸ್ಯ - ಶ್ರೀರಾಮನ, ಶಾಸನಾತ್ - ಆಜ್ಞೆಯಿಂದ, ದೂತಂ - ದೂತನಾದ, ತಂಶುಕಂ - ಆ ಶುಕನನ್ನು, ಮೋಚಯಾಮಾಸ-ಬಿಡಿಸಿದನು. ॥ ೨೩ ॥ ವಾನರೈಃ - ಕಪಿಗಳಿಂದ, ಅಭಿಪೀಡಿತಃ - ಪೀಡಿಸಲ್ಪಟ್ಟವನಾದರೂ, ರಾಮವಾಕ್ಯೇನ - ಶ್ರೀರಾಮನ ಮಾತಿನಿಂದ, ಮೋಚಿತಃ - ಬಿಡಲ್ಪಟ್ಟ, ಶುಕಃ - ಶುಕನು, ಪರಮಸಂತ್ರಸ್ತಃ-

---

ಮುಗಿಲುಗಳೊಡಗೂಡಿದ ಗಗನದಂತೆ ಶೋಭಿಸುತ್ತಿದ್ದಿತು. ಆ ಸೇನೆಯಲ್ಲಿದ್ದ ವಾನರರೆಲ್ಲರೂ ದೊಡ್ಡದೊಡ್ಡ ಬೆಟ್ಟಗಳನ್ನೂ, ಮರಗಳನ್ನೂ ಕೈಯಲ್ಲಿ ಹಿಡಿದುಕೊಂಡು ರಣರಂಗದಲ್ಲಿ ರಾಕ್ಷಸರೆಲ್ಲರನ್ನೂ ಮರ್ದಿಸಿಬಿಡಲು ಅಪೇಕ್ಷೆಯುಳ್ಳವರಾಗಿ ಲಂಕಾಪಟ್ಟಣದ ಮೇಲೆ ಬೀಳಲು ಯತ್ನಿಸುತ್ತಿದ್ದರು. ಅವರೆಲ್ಲರೂ ಮುಷ್ಟಿಗಳಿಂದಲೋ, ಪರ್ವತಶಿಖರಗಳಿಂದಲೋ, ಲಂಕೆಯೆಲ್ಲವನ್ನೂ ಪುಡಿಗುಟ್ಟಲು ನಿಶ್ಚಯಿಸಿದರು. (ಹೀಗೆ ಆ ವಾನರಸೇನೆಯೆಲ್ಲವೂ ವ್ಯೂಹವಾಗಿ ನಿಂತು ಯುದ್ಧಾಪೇಕ್ಷೆಯಾಗಿರಲು) ಶ್ರೀರಾಮನು ಮಹಾ ತೇಜಸ್ವಿಯಾದ ಸುಗ್ರೀವನನ್ನು ನೋಡಿ, "ಸುಗ್ರೀವಾ! ನಮ್ಮ ಸೇನೆಗಳೆಲ್ಲವನ್ನೂ ವ್ಯೂಹವಾಗಿ ನಿಲ್ಲಿಸಿದುದಾಯಿತು. ಇನ್ನು ಈ ಶುಕನನ್ನು ಬಂಧನದಿಂದ ಬಿಡಿಸುವವನಾಗು" ಎಂದನು. ॥ ೧೯—೨೩ ॥ ಶ್ರೀರಾಮನಿಂತು ನುಡಿದೊಡನೆಯೇ, ಮಹಾ ಬಲಾಢ್ಯನೂ, ವಾನರಾಧಿಪನೂ ಆದ ಸುಗ್ರೀವನು ರಾವಣದೂತನಾದ ಆ ಶುಕನನ್ನು ಬಂಧವಿಮುಕ್ತನನ್ನಾಗಿಸಿ

ಮೋಚಿತೋ ರಾಮವಾಕ್ಯೇನ ವಾನರೈಶ್ಚಾಭಿಪೀಡಿತಃ । ಶುಕಃ ಪರಮಸಂತ್ರಸ್ತೋ ರಕ್ಷೋಧಿಪಮುಪಾಗಮತ್ ||೨೪|| ರಾವಣಃ ಪ್ರಹಸನ್ನೇವ ಶುಕಂ ವಾಕ್ಯಮಭಾಷತ। "ಕಿಮಿಮೌ ತೇ ಸಿತೌ ಪಕ್ಷೌ ಲೂನಪಕ್ಷಶ್ಚ ದೃಶ್ಯಸೇ । ಕಚ್ಚಿನ್ನಾನೇಕ ಚಿತ್ತಾನಾಂ ತೇಷಾಂ ತ್ವಂ ವಶಮಾಗತಃ || ೨೬ || ತತಸ್ಸಭಯಸಂವಿಗ್ನಸ್ತಥಾ ರಾಜ್ಞಾಽಭಿಚೋದಿತಃ । ವಚನಂ ಪ್ರತ್ಯುವಾಚೇದಂ ರಾಕ್ಷಸಾಧಿಪಮುತ್ತಮಂ || ೨೭ || ಸಾಗರಸ್ಯೋತ್ತರೇ ತೀರೇ ಬ್ರುವಂಸ್ತೇ ವಚನಂ ತಥಾ । ಯಥಾ ಸಂದೇಶಮಕ್ಲಿಷ್ಟಂ ಸಾಂತ್ವಯಂ ಶ್ಲಕ್ಷ್ಣಯಾ ಗಿರಾ || ೨೮ || "ಕ್ರುದ್ಧೈಸ್ತೈರಹಮುತ್ಪತ್ಯ ದೃಷ್ಟಮಾತ್ರೈಃ ಪ್ಲವಂಗಮೈಃ । ಗೃಹೀತೋಽಸ್ಮ್ಯಪಿ ಚಾರಬ್ಧೋ ಹಂತುಂ ಲೋಪ್ತುಂ ಚ

---

ಬಹು ಭೀತನಾಗಿ, ರಕ್ಷೋಧಿಪಂ - ರಾವಣನನ್ನು, ಉಪಾಗಮತ್ - ಹೊಂದಿದನು. ||೨೪|| ರಾವಣಃ- ರಾವಣನು, ಪ್ರಹಸನ್ನೇವ - ನಗುತ್ತಲೇ, ಶುಕಂ - ಶುಕನನ್ನು ಕುರಿತು, ವಾಕ್ಯಂ - ಮಾತನ್ನು, ಅಭಾಷತ - ಹೇಳಿದನು, ತೇ - ನಿನ್ನ, ಇಮೌಪಕ್ಷೌ - ಈ ರೆಕ್ಕೆಗಳು, ಸಿತೌಕಿಂ - ಕಟ್ಟಲ್ಪಟ್ಟವೋ ಏನು, ಲೂನಪಕ್ಷಶ್ಚ - ಕತ್ತರಿಸಲ್ಪಟ್ಟ ಗರಿಗಳುಳ್ಳವನಾಗಿ, ದೃಶ್ಯಸೇ - ಕಾಣುತ್ತೀಯೆ, ತ್ವಂ - ನೀನು, ಅನೇಕಚಿತ್ತಾನಾಂ - ಚಪಲಚಿತ್ತರಾದ, ತೇಷಾಂ - ಆ ವಾನರರ, ವಶಂ - ಅಧೀನವನ್ನು, ನಾಗತಃಕಚ್ಚಿತ್ - ಹೊಂದಲಿಲ್ಲವಷ್ಟೆ. ||೨೫-೨೬|| ತತಃ - ಬಳಿಕ, ತಥಾ - ಆ ಪ್ರಕಾರವಾಗಿ, ರಾಜ್ಞಾ- ಅರಸಾದ ರಾವಣನಿಂದ, ಅಭಿಚೋದಿತಃ - ಪ್ರೇರಿತನಾದ, ಸಃ - ಆ ಶುಕನು, ಭಯಸಂವಿಗ್ನಃ - ಭಯಭ್ರಾಂತನಾಗಿ, ರಾಕ್ಷಸಾಧಿಪಂ - ರಾವಣನನ್ನು ಕುರಿತು, ಉತ್ತಮಂ - ಶ್ರೇಷ್ಠವಾದ, ಇದಂ ವಚನಂ - ಈ ಮಾತನ್ನು, ಪ್ರತ್ಯುವಾಚ - ಪ್ರತ್ಯುತ್ತರಕೊಟ್ಟನು, ಸಾಗರಸ್ಯ - ಸಮುದ್ರದ, ಉತ್ತರೇತೀರೇ - ಉತ್ತರತೀರದಲ್ಲಿ, ಯಥಾಸಂದೇಶಂ - ಅಪ್ಪಣೆಯಂತೆ, ಶ್ಲಕ್ಷ್ಣಯಾ - ಮೃದುವಾದ, ಗಿರಾ-ವಾಕ್ಕಿನಿಂದ, ವಚನಂ-ಮಾತನ್ನು, ಬ್ರುವನ್- ಹೇಳುವವನಾಗಿ, ತಥಾ-ಹಾಗೆ, ಸಾಂತ್ವಯಂ- ಸಮಾಧಾನಗೊಳಿಸಿದೆನು. ||೨೭-೨೮|| ದೃಷ್ಟಮಾತ್ರೈಃ - ನೋಡಿದಮಾತ್ರವೇ, ಕ್ರುದ್ಧೈಃ - ಕೋಪಿಷ್ಠರಾದ, ತೈಃಪ್ಲವಂಗಮೈಃ - ಆ ವಾನರರಿಂದ, ಉತ್ಪತ್ಯ - ಹಾರಿ, ಗೃಹೀತಃ - ಗ್ರಹಿಸಲ್ಪಟ್ಟ, ಅಹಂ - ನಾನು, ಮುಷ್ಟಿಭಿಃ - ಮುಷ್ಟಿಗಳಿಂದ, ಹಂತುಂ - ಹೊಡೆಯುವದಕ್ಕೆ, ಲೋಪ್ತುಂಚ-ನಾಶಮಾಡುವ

---

ದನು. ವಾನರರಿಂದ ಚೆನ್ನಾಗಿ ಮರ್ದಿಸಲ್ಪಟ್ಟು ಮಹಾ ಭಯಪೀಡಿತನಾಗಿ ಈಗ ಶ್ರೀರಾಮನ ಅಪ್ಪಣೆಯಿಂದ ಬಂಧವಿಮುಕ್ತನಾದ ಆ ಶುಕನು ಆ ಕೂಡಲೇ ರಾಕ್ಷಸರೊಡೆಯನಾದ ರಾವಣನಲ್ಲಿಗೆ ಹೋದನು. ಆಗ ರಾವಣಾಸುರನು ಅವನನ್ನು ನೋಡಿ, ನಗುತ್ತಾ "ಎಲಾ ಶುಕನೇ! ಆ ವಾನರರು ನಿನ್ನ ರೆಕ್ಕೆಗಳನ್ನು ಮುರಿದಿಕ್ಕಿದರೇ? ಇದೇನು ನಿನ್ನ' ರೆಕ್ಕೆಗಳೆಲ್ಲಾ ಕತ್ತರಿಸಿಹೋಗಿವೆ? ನೀನು ಮಹಾ ಚಪಲಚಿತ್ತರಾದ ಆ ವಾನರರಕೈಗೆ ಸಿಕ್ಕಿಬೀಳಲಿಲ್ಲವಷ್ಟೆ?" ಎಂದು ಕೇಳಿದನು. ಆಗ ಶುಕನು ಭಯದಿಂದ ತತ್ತಳಿಸಿಹೋಗಿ ಆ ರಾಕ್ಷಸನಾಥನನ್ನು ಕುರಿತು, "ಅಯ್ಯಾ ರಾವಣಾಸುರನೇ! ನಾನು ಇಲ್ಲಿಂದ ಸಮುದ್ರದ ಉತ್ತರತೀರವನ್ನುಸೇರಿ ಅಲ್ಲಿ ಸುಗ್ರೀವನನ್ನು ನೋಡಿ ಮೃದುಮಧುರ ವಚನಗಳಿಂದ ನೀನು ಹೇಳಿದಂತೆಯೇ ಸ್ವಲ್ಪವೂ ಹೆಚ್ಚುಕಡಿಮೆಗಳಿಲ್ಲದೆ ಎಲ್ಲ ವಿಷಯಗಳನ್ನೂ ಸ್ಪಷ್ಟವಾಗಿ ಆತನಿಗೆ ತಿಳಿಸಿದೆನು. ಆ ಸಮಯದಲ್ಲಿ ಅಲ್ಲಿದ್ದ ವಾನರರೆಲ್ಲರೂ ನನ್ನನ್ನು ನೋಡಿ ಕೂಡಲೇ ಮಹಾ ಕೋಪೋದ್ದೀಪಿತರಾಗಿ ಗಗನಕ್ಕೆ ಹಾರಿ

ಮುಷ್ಟಿಭಿಃ ॥ ೨೯ ॥ ನೈವ ಸಂಭಾಷಿತುಂ ಶಕ್ಯಾಸ್ಸಂಪ್ರಶ್ನೋಽತ್ರ ನಲಭ್ಯತೇ । ಪ್ರಕೃತ್ಯಾ ಕೋಪನಾಸ್ತೀಕ್ಷ್ಣಾ ವಾನರಾ ರಾಕ್ಷಸಾಧಿಪ! ॥ ೩೦ ॥ ಸಚ ಹಂತಾ ವಿರಾಧಸ್ಯ ಕಬಂಧಸ್ಯ ಖರಸ್ಯಚ । ಸುಗ್ರೀವಸಹಿತೋ ರಾಮಸ್ಸೀತಾಯಾಃ ಪದಮಾಗತಃ ॥ ೩೧ ॥ ಸಕೃತ್ವಾ ಸಾಗರೇ ಸೇತುಂ ತೀರ್ತ್ವಾಚ ಲವಣೋದಧಿಂ । ಏಷ ರಕ್ಷಾಂಸಿ ನಿರ್ಧೂಯ ಧನ್ವೀ ತಿಷ್ಠತಿ ರಾಘವಃ ॥ ೩೨ ॥ ಋಕ್ಷವಾನರಮುಖ್ಯಾನಾಮನೀಕಾನಿ ಸಹಸ್ರಶಃ । ಗಿರಿಮೇಘನಿಕಾಶಾನಾಂ ಛಾದಯಂತಿ ವಸುಂಧರಾಂ ॥ ೩೩ ॥ ರಾಕ್ಷಸಾನಾಂ ಬಲೌಘಸ್ಯ ವಾನರೇಂದ್ರಬಲಸ್ಯಚ । ನೈತಯೋರ್ವಿದ್ಯತೇ ಸಂಧಿರ್ದೇವದಾನವಯೋ

---

ದಕ್ಕಾಗಿಯೂ, ಆರಬ್ಧಃ - ಆರಂಭಿಸಲ್ಪಟ್ಟವನು, ಅಸ್ಮಿ - ಆದೆನು. ॥ ೨೯ ॥ ಹೇ ರಾಕ್ಷಸಾಧಿಪ - ಎಲೈ ಅಸುರರಾಜನೇ, ವಾನರಾಃ - ಕಪಿಗಳು, ಪ್ರಕೃತ್ಯಾ - ಸ್ವಭಾವದಿಂದ, ಕೋಪನಾಃ - ಕೋಪಿಷ್ಠರು, *ತೀಕ್ಷ್ಣಾಃ - ಕ್ರೂರರು, ಸಂಭಾಷಿತುಂ - ಮಾತಾಡುವದಕ್ಕೆ, ನಶಕ್ಯಾಃ - ಸಾಧ್ಯರಲ್ಲವು, ಅತ್ರ - ಆ ವಾನರರಲ್ಲಿ, ಸಂಪ್ರಶ್ನಃ - ಪ್ರಶ್ನವು, ನಲಭ್ಯತೇ - ದೊರೆಯುವದಿಲ್ಲ. ॥೩೦॥ ವಿರಾಧಸ್ಯ - ವಿರಾಧನಿಗೂ, ಕಬಂಧಸ್ಯ - ಕಬಂಧನಿಗೂ, ಖರಸ್ಯಚ - ಖರನಿಗೂ, ಹಂತಾ - ಸಂಹಾರಕನಾದ, ಸರಾಮಃ-ಆ ಶ್ರೀರಾಮನು, ಸುಗ್ರೀವಸಹಿತಃ-ಸುಗ್ರೀವಯುಕ್ತನಾಗಿ, ಸೀತಾಯಾಃ-ಸೀತಾದೇವಿಯ, ಪದಂ - ಸ್ಥಳವನ್ನು ಕುರಿತು, ಆಗತಃ - ಬಂದಿದ್ದಾನೆ. ॥೩೧॥ ಸಏಷರಾಘವಃ - ಆ ಈ ಶ್ರೀರಾಮನು, ಸಾಗರೇ - ಸಮುದ್ರದಲ್ಲಿ, ಸೇತುಂ - ಸೇತುವನ್ನು, ಕೃತ್ವಾ - ಮಾಡಿ, ಲವಣೋದಧಿಂಚ - ಲವಣ ಸಮುದ್ರವನ್ನೂ, ತೀರ್ತ್ವಾ - ದಾಟಿ, ರಕ್ಷಾಂಸಿ - ರಾಕ್ಷಸರನ್ನು, ನಿರ್ಧೂಯ - ಕಡೆಗಣಿಸಿ, ಧನ್ವೀ - ಧನುರ್ಧಾರಿಯಾಗಿ, ತಿಷ್ಠತಿ - ಇದ್ದಾನೆ. ॥ ೩೨ ॥ ಗಿರಿ....ನಾಂ - ಪರ್ವತಗಳಿಗೂ, ಮೇಘಗಳಿಗೂ ಸಮಾನರಾದ, ವಾನ....ನಾಂ - ವಾನರೋತ್ತಮರ, ಸಹಸ್ರಶಃ - ಅನೇಕವಾದ, ಅನೀಕಾನಿ - ಸೇನೆಗಳು, ವಸುಂಧರಾಂ-ಭೂಮಿಯನ್ನು, ಛಾದಯಂತಿ-ಮುಚ್ಚಿಕೊಂಡಿವೆ. ॥೩೩॥ ರಾಕ್ಷಸಾನಾಂ - ಅಸುರರ, ಬಲೌಘಸ್ಯ - ಸೈನ್ಯಸಮೂಹಕ್ಕೂ, ವಾನ.....ಚ - ಸುಗ್ರೀವನ ಸೈನ್ಯಕ್ಕೂ, ಏತಯೋಃ - ಇವೆರಡಕ್ಕೂ, ದೇವ.....ವ - ದೇವರಾಕ್ಷಸರಿಗಂತೋ ಅಂತು, ಸಂಧಿಃ - ಸಂಧಿಯು, ನೈವವಿದ್ಯತೇ -

---

ನನ್ನನ್ನು ಹಿಡಿದುಕೊಂಡು ಮುಷ್ಟಿಗಳಿಂದ ಗುದ್ದಿ ಕೊಲ್ಲುವುದಕ್ಕೆ ಯತ್ನಿಸಿದರು. ಎಲೈ ರಾಕ್ಷಸಾಧಿಪನೇ! ನಾನು ಆ ವಾನರರೊಡನೆ ಮಾತನಾಡಲು ಸಾಧ್ಯವಿಲ್ಲದೆ ಹೋಯಿತು. ಎಂದಮೇಲೆ ಅವರನ್ನು ಕೇಳಿಕೊಳ್ಳುವುದು ಹೇಗೆತಾನೆ ಸಾಧ್ಯವಾದೀತು? ಅವರಿಂದ ಪ್ರತ್ಯುತ್ತರವು ಬರುವುದು ತಾನೇ ಹೇಗೆ? ಅವರೆಲ್ಲರೂ ಸ್ವಭಾವದಿಂದಲೇ ಮಹಾ ಕೋಪಿಷ್ಠರು; ಮಹಾ ಕ್ರೂರರು. ॥೨೯-೩೦॥ ಪ್ರಭುವೇ! ವಿರಾಧ, ಕಬಂಧ, ಖರ ಇವರೇ ಮೊದಲಾದ ವೀರ ರಾಕ್ಷಸರನ್ನು ಸಂಹರಿಸಿದ ಮಹಾ ಪರಾಕ್ರಮಶಾಲಿಯಾದ ಶ್ರೀರಾಮನು ಸುಗ್ರೀವನೊಡಗೂಡಿ ಸೀತೆಯಿರುವ ಈ ಲಂಕಾನಗರಕ್ಕೆ ಬರುತ್ತಿರುವನು. ಮಹಾ ಧನುರ್ಧಾರಿಯಾದ ಆತನು ಸಮುದ್ರಕ್ಕೆ ಸೇತುವೆಯನ್ನು ಕಟ್ಟಿ ಅದನ್ನು ದಾಟಿ ಇದೀಗ ರಾಕ್ಷಸರೆಲ್ಲರನ್ನೂ ತೃಣೀಕರಿಸುತ್ತಿರುವನು. ಮಹಾರಾಜ! ಪರ್ವತಾಕಾರರರೂ, ಮೇಘಸಮಾನರೂ ಆದ ಋಕ್ಷ ವಾನರರಸೇನಾಸಮೂಹಗಳು ಸಾವಿರಗಟ್ಲೆಯಾಗಿ ಭೂಮಿಯೆಲ್ಲವನ್ನೂ ಆವರಿಸಿರುವುದು. ನಮ್ಮ ರಾಕ್ಷಸಸೇನೆಗೂ, ಆ ವಾನರೇಶ್ವರನಾದ ಸುಗ್ರೀವನ ಸೇನಾಸಮೂಹಗಳಿಗೂ, ದೇವದಾನವ ಸೇನೆಗಳಿಗೆಂತೋ ಅಂತು ಸಮ್ಮರ್ದವು ಸರಿಹೋಗುವುದಿಲ್ಲವು.

ರಿವ ॥ ೩೪ ॥ ಪುರಾ ಪ್ರಾಕಾರಮಾಯಾಂತಿ ಕ್ಷಿಪ್ರಮೇಕತರಂ ಕುರು । ಸೀತಾಂ ವಾಸ್ಮೈ ಪ್ರಯಚ್ಛಾಶು ಸುಯುದ್ಧಂ ವಾ ಪ್ರದೀಯತಾಂ" ॥ ೩೫ ॥ ಶುಕಸ್ಯ ವಚನಂ ಶ್ರುತ್ವಾ ರಾವಣೋ ವಾಕ್ಯಮಬ್ರವೀತ್ । ರೋಷಸಂರಕ್ತನಯನೋ ನಿರ್ದಹನ್ನಿವ ಚಕ್ಷುಷಾ ॥೩೬॥ "ಯದಿ ಮಾಂ ಪ್ರತಿಯುಧ್ಯೇರನ್ ದೇವಗಂಧರ್ವದಾನವಾಃ । ನೈವ ಸೀತಾಂ ಪ್ರಯಚ್ಛಾಮಿ ಸರ್ವಲೋಕಭಯಾದಪಿ ॥ ೩೭ ॥ ಕದಾ ನಾಮಾಭಿಧಾವಂತಿ ರಾಘವಂ ಮಾಮಕಾಃ ಶರಾಃ । ವಸಂತೇ ಪುಷ್ಪಿತಂ ಮತ್ತಾ ಭ್ರಮರಾ ಇವ ಪಾದಪಂ ॥ ೩೮ ॥ ಕದಾ ತೂಣೀಶಯೈರ್ದೀಪ್ತೈರ್ಗಣಶಃ ಕಾರ್ಮುಕಚ್ಯುತೈಃ । ಶರೈರಾದೀಪ

---

ಇಲ್ಲವೇ ಇಲ್ಲವು. ॥೩೪॥ ಪ್ರಾಕಾರಂ - ಕೋಟೆಯನ್ನು ಕುರಿತು, ಆಯಾಂತಿ - ಬರುವರು, ಕ್ಷಿಪ್ರಂ-ಜಾಗ್ರತೆಯಾಗಿ, ಏಕತರಂ-ಎರಡರಲ್ಲಿ ಒಂದನ್ನು, ಕುರು-ಮಾಡು, ಸೀತಾಂವಾ-ಸೀತಾದೇವಿಯನ್ನಾದರೂ, ಅಸ್ಮೈ - ಈ ಶ್ರೀರಾಮನಿಗೆ, ಆಶು-ಜಾಗ್ರತೆಯಾಗಿ, ಪ್ರಯಚ್ಛ-ಕೊಡು, ಸುಯುದ್ಧಂವಾ - ಒಳ್ಳೆಯ ಯುದ್ಧವಾದರೂ, ಪ್ರದೀಯತಾಂ - ಕೊಡಲ್ಪಡಲಿ. ॥೩೫॥ ಶುಕಸ್ಯ - ಶುಕನ, ವಚನಂ - ಮಾತನ್ನು, ಶ್ರುತ್ವಾ - ಕೇಳಿ, ರಾವಣಃ - ರಾವಣನು, ರೋಷ....ನಃ - ಕೋಪದಿಂದ ಕೆಂಪಾದ ಕಣ್ಣುಗಳುಳ್ಳವನಾಗಿ, ಚಕ್ಷುಷಾ - ಕಣ್ಣಿನಿಂದ, ನಿರ್ದಹನ್ನಿವ - ದಹಿಸುವವನಂತೆ, ವಾಕ್ಯಂ - ಮಾತನ್ನು, ಅಬ್ರವೀತ್ - ನುಡಿದನು ॥೩೬॥ ದೇವ....ವಾಃ - ದೇವಗಂಧರ್ವರಾಕ್ಷಸರೂ, ಮಾಂ-ನನ್ನನ್ನು ಕುರಿತು, ಪ್ರತಿ....ದಿ-ಯುದ್ಧಮಾಡಿದವರಾದರೂ, ಸರ್ವ......ಪಿ-ಸಮಸ್ತ ಲೋಕಗಳ ದೆಸೆಯಿಂದುಂಟಾದ ಭಯದಿಂದಲೇ ಆಗಲಿ, ಸೀತಾಂ - ಸೀತಾದೇವಿಯನ್ನು, ನೈವಪ್ರಯಚ್ಛಾಮಿ - ಕೊಡುವುದಿಲ್ಲವು. ॥ ೩೭ ॥ ಮಾಮಕಾಃ - ನನ್ನ ಸಂಬಂಧವಾದ, ಶರಾಃ - ಬಾಣಗಳು, ವಸಂತೇ - ವಸಂತಕಾಲದಲ್ಲಿ, ಮತ್ತಾಃ - ಮದಿಸಿದ, ಭ್ರಮರಾಃ - ದುಂಬಿಗಳು, ಪುಷ್ಪಿತಂ - ಪುಷ್ಪಗಳುಳ್ಳ, ಪಾದಪಮಿವ-ವೃಕ್ಷವನ್ನಂತೇ, ರಾಘವಂ-ಶ್ರೀರಾಮನನ್ನು ಕುರಿತು, ಕದಾನಾಮ-ಯಾವಾಗ, ಅಭಿಧಾವಂತಿ-ಓಡಿಬರುವವೋ ! ॥ ೩೮ ॥ ತೂಣೀಶಯೈಃ - ಬತ್ತಳಿಕೆಗಳಲ್ಲಿರುವ, ಕಾರ್ಮುಕಚ್ಯುತೈಃ - ಬಿಲ್ಲಿನಿಂದ ಹೊರಟು, ದೀಪ್ತೈಃ - ಹೊಳೆಯುವ, ಶರೈಃ - ಬಾಣಗಳಿಂದ, ಏನಂ - ಈ ರಾಮನನ್ನು, ಉಲ್ಕಾಭಿಃ - ಕೊಳ್ಳಿಗಳಿಂದ, ಕುಂಜರಮಿವ - ಆನೆಯನ್ನಂತೆ, ಕದಾ - ಯಾವಾಗ, ಆದೀಪಯಾಮಿ - ಸುಡುವೆನೋ.

---

ಇದೋ ನೋಡು ; ವಾನರರೆಲ್ಲರೂ ಲಂಕಾನಗರದ ಪ್ರಾಕಾರಗಳಮೇಲೆ ತುರುಬಿ ಬರುತ್ತಿರುವರು. ಪ್ರಭುವೇ ! ನೀನು ಜಾಗ್ರತೆಯಾಗಿ ಸೀತೆಯನ್ನು ಶ್ರೀರಾಮನಿಗೆ ಒಪ್ಪಿಸಿಬಿಡು. ಇಲ್ಲದಿದ್ದರೆ ಆತನೊಡನೆ ಯುದ್ಧವನ್ನಾದರೂ ಮಾಡು. ಇವೆರಡರಲ್ಲಿ ಯಾವದದಾದರೊಂದನ್ನು ಜಾಗ್ರತೆಯಾಗಿ ಮಾಡಬೇಕು" ಎಂದು ಹೇಳಿದನು. ॥ ೩೧–೩೫ ॥ ರಾವಣನು ಈ ಮಾತುಗಳನ್ನು ಕೇಳಿ ಮಹಾ ಕೋಪದಿಂದ ಕಣ್ಣುಗಳನ್ನು ಕೆಂಪಾಗಿಸಿಕೊಂಡು ಹಲ್ಲುಗಳನ್ನು ಕಟಕಟನೆ ಕಡಿಯುತ್ತ, "ಎಲೋ ಶುಕನೇ! ದೇವದಾನವ ಗಂಧರ್ವರೆಲ್ಲರೂ ಒಂದಾಗಿ ನನ್ನಮೇಲೆ ಯುದ್ಧಕ್ಕೆ ಬಂದರೂ, ಸಮಸ್ತ ಲೋಕಗಳೂ ನನ್ನನ್ನು ಭಯಗೊಳಿಸಿದರೂ ನಾನು ಸೀತೆಯನ್ನು ಎಷ್ಟುಮಾತ್ರವೂ ಕೊಡುವುದಿಲ್ಲವು. ಶುಕಾ ! ವಸಂತಋತುವಿನಲ್ಲಿ ಚೆನ್ನಾಗಿ ಹೂಮೊಳೆತ ವೃಕ್ಷವನ್ನು ಪ್ರಮತ್ತವಾದ ಷಟ್ಪದಗಳು ಮುತ್ತುವಂತೆ, ನನ್ನ ಬಾಣಗಳು ಆ ರಾಮನ ದೇಹವನ್ನು ಬಹು ಬೇಗನೆಯೇ ಮುತ್ತುವುವು. ನಾನು ಬಹುಕಾಲದಿಂದಲೂ ಬತ್ತಳಿಕೆಯಲ್ಲಿಯೇ ಇರುವುವೂ, ಮಹಾ ಪ್ರಕಾಶಮಾನಗಳಾದುವೂ ಆದ ನನ್ನ

ಯಾಮ್ಯೇನಮುಲ್ಕಾಭಿರಿವ ಕುಂಜರಂ || ೩೯ || ತಚ್ಚಾಸ್ಯ ಬಲಮಾದಾಸ್ಯೇ ಬಲೇನ ಮಹತಾವೃತಃ | ಜ್ಯೋತಿಷಾಮಿವ ಸರ್ವೇಷಾಂ ಪ್ರಭಾಮುದ್ಯ್ರ್ ದಿವಾಕರಃ || ೪೦ || ಸಾಗರಸ್ಯೇವ ಮೇ ವೇಗೋ ಮಾರುತಸ್ಯೇವ ಮೇ ಗತಿಃ | ನಹಿ ದಾಶರಥಿರ್ವೇದ ತೇನ ಮಾಂ ಯೋದ್ಧುಮಿಚ್ಛತಿ || ೪೧ || ನಮೇ ತೂಣೀಶಯಾರ್ ಬಾಣಾರ್ ಸವಿಷಾನಿವ ಪನ್ನಗಾರ್ | ರಾಮಃ ಪಶ್ಯತಿ ಸಂಗ್ರಾಮೇ ತೇನ ಮಾಂ ಯೋದ್ಧುಮಿಚ್ಛತಿ | ನಜಾನಾತಿ ಪುರಾ ವೀರ್ಯಂ ಮಮ ಯುದ್ಧೇ ಸರಾಘವಃ || ೪೨ || ಮಮ ಚಾಪಮಯೀಂ ವೀಣಾಂ ಶರಕೋಣೈಃ ಪ್ರಣಾದಿತಾಂ | ಜ್ಯಾಶಬ್ದತುಮುಲಾಂಘೋರಾಮಾರ್ತಭೀತ

|| ೩೯ || ಮಹತಾ - ಬಹಳವಾದ, ಬಲೇನ - ಸೈನ್ಯದಿಂದ, ವೃತೇನ - ಸುತ್ತುವರೆಯಲಾದವನಾಗಿ, ಉದ್ಯ್ರ್ - ಉದಯಿಸುವ, ದಿವಾಕರಃ - ಸೂರ್ಯನು, ಸರ್ವೇಷಾಂ - ಸಮಸ್ತವಾದ, ಜ್ಯೋತಿಷಾಂ - ನಕ್ಷತ್ರಗಳ, ಪ್ರಭಾಮಿವ - ಪ್ರಕಾಶವನ್ನಂತೆ, ಅಸ್ಯ - ಈ ಶ್ರೀರಾಮನ, ತದ್ಬಲಂ - ಆ ಸೈನ್ಯವನ್ನು, (ಗೋ) ಆ ಸಾಮರ್ಥ್ಯವನ್ನು, ಆದಾಸ್ಯೇ-ತಿರಸ್ಕರಿಸುವೆನು. ||೪೦|| ಸಾಗರಸ್ಯ-ಸಮುದ್ರದ, ವೇಗಇವ-ವೇಗದಂತೆ, ಮೇ - ನನ್ನ, ವೇಗಃ - ವೇಗವು, ಮೇ - ನನ್ನ, ಗತಿಃ - ಗಮನವು, ಮಾರುತಸ್ಯೇವ - ವಾಯುವಿನ ಗಮನದಂತಿರುವುದು, ದಾಶರಥಿಃ - ಶ್ರೀರಾಮನು, ನವೇದ - ತಿಳಿದವನಲ್ಲ, ತೇನ - ಅದರಿಂದ, ಮಾಂ - ನನ್ನನ್ನು ಕುರಿತು, ಯೋದ್ಧುಂ - ಯುದ್ಧ ಮಾಡುವದಕ್ಕಾಗಿ, ಇಚ್ಛತಿ - ಅಪೇಕ್ಷಿಸುತ್ತಾನೆ. || ೪೧ || ರಾಮಃ - ಶ್ರೀರಾಮನು, ಸಂಗ್ರಾಮೇ - ಕಾಳಗದಲ್ಲಿ, ಮೇ - ನನ್ನ, ತೂಣೀಶಯಾರ್ - ಬತ್ತಳಿಕೆಗಳಲ್ಲಿ ಮಲಗಿರುವ, ಸವಿಷಾರ್ - ವಿಷಯುಕ್ತವಾದ, ಪನ್ನ....ಗಾರ್ - ಸರ್ಪಗಳಂತಿರುವ, ಬಾಣಾರ್ - ಬಾಣಗಳನ್ನು, ನಪಶ್ಯತಿ - ನೋಡಿದವನಲ್ಲ, ತೇನ - ಅದರಿಂದ, ಮಾಂ - ನನ್ನನ್ನು ಕುರಿತು, ಯೋದ್ಧುಂ - ಕಾಳಗಮಾಡಲು, ಇಚ್ಛತಿ - ಅಪೇಕ್ಷಿಸುತ್ತಾನೆ, ಪುರಾ - ಪೂರ್ವದಲ್ಲಿ, ಸರಾಘವಃ - ಆ ಶ್ರೀರಾಮನು, ಯುದ್ಧೇ - ಕಾಳಗದಲ್ಲಿ, ಮಮ - ನನ್ನ, ವೀರ್ಯಂ - ಸಾಮರ್ಥ್ಯವನ್ನು, ನಜಾನಾತಿ - ತಿಳಿದವನಲ್ಲ. || ೪೨ || ಅಹಂ - ನಾನು, ಶರಕೋಣೈಃ - ಬಾಣಗಳ ತುದಿಗಳಿಂದ, ಪ್ರಣಾದಿತಾಂ - ಬಾರಿಸಲ್ಪಟ್ಟ, ಜ್ಯಾಶ....ಲಾಂ - ಧನುಷ್ಟಂಕಾರದಿಂದ ಸಂಕುಲವಾದ, ಘೋರಾಂ - ಭಯಂಕರವಾದ, ಮಮ - ನನ್ನ, ಚಾಪಮಯೀಂ - ಧನುರ್ವಿಕಾರವಾದ, ವೀಣಾಂ -

ಬಾಣಗಳನ್ನು ತಂಡತಂಡವಾಗಿ ಪ್ರಯೋಗಿಸಿ, ಕೊಳ್ಳಿಗಳಿಂದ ಮದಗಜವನ್ನು ಬಾಧಿಸುವಂತೆ ಆ ರಾಮನನ್ನು ಬಾಧಿಸುತ್ತೇನೆ. ನಾನು ರಾಕ್ಷಸರ ಮಹಾ ಸೇನೆಯಿಂದ ಪರಿವೃತನಾಗಿ, ಉದಯಿಸುತ್ತಿರುವ ಸೂರ್ಯನು ಜ್ಯೋತಿಶ್ಚಕ್ರದಲ್ಲಿರುವ ಸಮಸ್ತ ಗ್ರಹಗಳ ಕಾಂತಿಗಳನ್ನೂ ಹೋಗಲಾಡಿಸುವಂತೆ ಆ ರಾಮನನ್ನೂ, ಆತನೊಡನಿರುವ ವಾನರಸೇನೆಯನ್ನೂ ನಾಶಗೊಳಿಸುವೆನು. ||೩೬–೪೦|| ಓ ಶುಕನೇ ! ನನಗೆ ಸಮುದ್ರರಾಜನಿಗಿರುವಂತೆ ಮಹಾ ವೇಗವೂ, ವಾಯುವಿಗಿರುವಂತೆ ಗಮನಶಕ್ತಿಯೂ ಇರುವುದು ಆ ರಾಮನಿಗೆ ತಿಳಿಯದು. ಆದುದರಿಂದಲೇ ನನ್ನೊಡನೆ ಅವನು ಯುದ್ಧಮಾಡಲಪೇಕ್ಷಿಸುತ್ತಿರುವನು. ನನ್ನ ಬತ್ತಳಿಕೆಯಲ್ಲಿ ವಿಷದೊಡಗೂಡಿದ ಮಹಾ ಸರ್ಪಸಮಾನಗಳಾದ ಬಾಣಗಳನ್ನು ಆ ರಾಮನು ಯಾವಾಗಲೂ ಕಂಡವನಲ್ಲವು. ಆದುದರಿಂದಲೇ ಅವನು ನನ್ನೊಡನೆ ಸೆಣಸಲು ಬಯಸಿರುವನು. ಅವನು ನನ್ನ ಪರಾಕ್ರಮವನ್ನು ಯುದ್ಧದಲ್ಲಿ ನಿಂತು ಯಾವಾಗಲೂ ಕಂಡರಿತವನಲ್ಲವು ! ಎಲೈ ಶುಕನೇ ! ಆಲಿಸಿ ಕೇಳು ; ನಾನು ಯುದ್ಧರಂಗದಲ್ಲಿ ಶತ್ರುಸೇನೆಯನ್ನು ಪ್ರವೇಶಿಸಿ, ಬಾಣಕೋಣಗಳಲ್ಲಿ

ಮಹಾಸ್ವನಾಂ || ೪೩ || ನಾರಾಚತಲಸನ್ನಾದಾ ತಾಂ ಮಮಾಹಿತವಾಹಿನೀಂ | ಅವಗಾಹ್ಯ ಮಹಾರಂಗಂ ನಾದಯಿಷ್ಯಾಮ್ಯಹಂ ರಣೇ || ೪೪ ||

ನವಾಸವೇನಾಪಿ ಸಹಸ್ರಚಕ್ಷುಷಾ
ಯಥಾಸ್ಮಿ ಶಕ್ಯೋ ವರುಣೇನ ವಾ ಸ್ವಯಂ |
ಯಮೇನ ವಾ ಧರ್ಷಯಿತುಂ ಶರಾಗ್ನಿನಾ
ಮಹಾಹವೇ ವೈಶ್ರವಣೇನ ವಾಪುನಃ || ೪೫ ||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಚತುರ್ವಿಂಶಸ್ಸರ್ಗಃ



ವೀಣೆಯನ್ನು, ಆರ್ತ....ನಾಂ-ದೀನರಾದವರ ಮತ್ತು ಭಯಸ್ಥರ, ಮಹಾ ಘೋಷವುಳ್ಳ, ನಾರಾ....ದಾಂ-ನಿಡುಸರಳುಗಳೆಂಬ ಹಸ್ತತಾಳಗಳ ಶಬ್ದವುಳ್ಳ, ಮಮ - ನನ್ನ, ತಾಂಅಹಿತವಾಹಿನೀಂ - ಆ ಶತ್ರುಸೈನ್ಯವೆಂಬ, ಮಹಾರಂಗಂ - ರಂಗಸ್ಥಳವನ್ನು, ಅವಗಾಹ್ಯ - ಪ್ರವೇಶಿಸಿ, ವಾದಯಿಷ್ಯಾಮಿ - ಬಾರಿಸುತ್ತೇನೆ. || ೪೩ ೪೪ || ಸಹಸ್ರಚಕ್ಷುಸಾ ಸಾವಿರಕಣ್ಣುಗಳುಳ್ಳ, ವಾಸವೇನಾಪಿ-ಇಂದ್ರನಿಂದಲಾದರೂ, ಯಥಾ - ಹೇಗೆ, ವರುಣೇನವಾಪಿ - ವರುಣನಿಂದಲಾದರೂ, ಯಮೇನವಾ - ಯಮನಿಂದಲಾದರೂ, ಸ್ವಯಂ - ತಾನು, ಧರ್ಷಯಿತುಂ - ತಿರಸ್ಕರಿಸಲು, ಯಥಾ - ಹೇಗೆ, ಶಕ್ಯಃನಾಸ್ಮಿ - ಸಾಧ್ಯನಲ್ಲದಿದ್ದೇನೋ, ತಥಾ - ಹಾಗೆ, ವೈಶ್ರವಣೇನವಾ - ಕುಬೇರನಿಂದಲಾದರೂ, ಪುನಃ - ಮತ್ತೂ, ಮಹಾಹವೇ - ದೊಡ್ಡ ಕಾಳೆಗದಲ್ಲಿ, ಶರಾಗ್ನಿನಾ - ಬಾಣಾಗ್ನಿಯಿಂದ, ಧರ್ಷಯಿತುಂ - ತಿರಸ್ಕರಿಸಲು, ನಶಕ್ಯಃ - ಸಾಧ್ಯನಲ್ಲವು. || ೪೫ ||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಚತುರ್ವಿಂಶಸ್ಸರ್ಗಃ.



ಧ್ವನಿಗೈವುದೂ, ಬಿಲ್ಲಿನ ನಾರಿಯಧ್ವನಿಯೇ ಬಹಳ ಸಂಕುಲವಾಗಿ ಮಹಾ ಭಯಂಕರವಾಗಿರುವುದೂ, ಭೀತರೂ, ದುಃಖಿತರೂ ಆದ ವಾನರರ ಆರ್ತಧ್ವನಿಯೇ ವಿಶೇಷವಾಗುಳ್ಳುದೂ ಆದ ನನ್ನ ಧನುರ್ವೀಣೆಯನ್ನು ಬಹು ಚೆನ್ನಾಗಿ ನುಡಿಸಿಬಿಡುವೆನು. ಸಹಸ್ರಾಕ್ಷನಾದ ದೇವೇಂದ್ರನಾಗಲಿ, ವರುಣನಾಗಲಿ, ಯಮನಾಗಲಿ, ಕುಬೇರನೇ ಆಗಲಿ ರಣರಂಗದಲ್ಲಿ ಅಗ್ನಿಜ್ವಾಲಾಸಮಾನಗಳಾದ ಬಾಣಗಳನ್ನು ಪ್ರಯೋಗಿಸಿಯೂ ನನ್ನನ್ನೆದುರಿಸಲು ಸಮರ್ಥರಾಗದೇ ಹೋದುದನ್ನು ನೀನರಿಯೆಯಾ ?" ಎಂದು ಹೇಳಿದನು. || ೪೧-೪೫ ||

ಇಂತಿದು ಶುಕವಿಮೋಚನ, ಶುಕಕಥಿತ ಶ್ರೀರಾಮವೃತ್ತಾಂತ, ರಾವಣಪ್ರಕೋಪ
ಎಂಬ ಇಪ್ಪತ್ತನಾಲ್ಕನೆಯ ಸರ್ಗವು ಸಮಾಪ್ತವಾದುದು.



# ಯುದ್ಧಕಾಂಡೇ ಪಂಚವಿಂಶಸ್ಸರ್ಗಃ

**ಸಬಲೇ ಸಾಗರಂ ತೀರ್ಣೇ ರಾಮೇ ದಶರಥಾತ್ಮಜೇ । ಅಮಾತ್ಯೌ ರಾವಣ ಶ್ರೀಮಾನಬ್ರವೀಚ್ಛುಕಸಾರಣೌ ॥ ೧ ॥ "ಸಮಗ್ರಂ ಸಾಗರಂ ತೀರ್ಣಂ ದುಸ್ತರಂ ವಾನರಂ ಬಲಂ । ಅಭೂತಪೂರ್ವಂ ರಾಮೇಣ ಸಾಗರೇ ಸೇತುಬಂಧನಂ ॥ ೨ ॥ ಸಾಗರೇ ಸೇತುಬಂಧಂತು ನಶ್ರದ್ದಧ್ಯಾಂ ಕಥಂಚನ । ಅವಶ್ಯಂ ಚಾಪಿ ಸಂಖ್ಯೇಯಂ ತನ್ಮಯಾ ವಾನರಂ ಬಲಂ ॥ ೩ ॥ ಭವಂತೌ ವಾನರಂ ಸೈನ್ಯಂ ಪ್ರವಿಶ್ಯಾನುಪಲಕ್ಷಿತೌ। ಪರಿಮಾಣಂಚ ವೀರ್ಯಂಚ ಯೇಚ ಮುಖ್ಯಾಃ ಪ್ಲವಂಗಮಾಃ ॥ ೪ ॥ ಮಂತ್ರಿಣೋ**

ದಶರಥಾತ್ಮಜೇ - ದಶರಥಪುತ್ರನಾದ, ರಾಮೇ - ಶ್ರೀರಾಮನು, ಸಬಲೇ - ಸೇನೆಯೊಡಗೂಡಿ, ಸಾಗರಂ - ಸಮುದ್ರವನ್ನು, ತೀರ್ಣೇ - ದಾಟಿದವನಾಗಲೂ, ಶ್ರೀಮಾನ್ - (ಗೋ) ಮದಾತಿಶಯವುಳ್ಳ, ರಾವಣಃ - ರಾವಣನು, ಅಮಾತ್ಯೌ - ಮಂತ್ರಿಗಳಾದ, ಶುಕಸಾರಣೌ - ಶುಕಸಾರಣರೆಂಬವರನ್ನು ಕುರಿತು, ಅಬ್ರವೀತ್ - ನುಡಿದನು. ॥ ೧ ॥ ವಾನರಂ - ವಾನರರ ಸಂಬಂಧವಾದ, ಬಲಂ - ಸೈನ್ಯವು, ದುಸ್ತರಂ - ದಾಟಲಶಕ್ಯವಾದ, ಸಮಗ್ರಂ - ವಿಸ್ತಾರವಾದ, ಸಾಗರಂ - ಸಮುದ್ರವನ್ನು, ತೀರ್ಣಂ - ದಾಟಿತು, ರಾಮೇಣ - ಶ್ರೀರಾಮನಿಂದ, ಸಾಗರೇ - ಸಮುದ್ರದಲ್ಲಿ, ಸೇತುಬಂಧನವು, ಕೃತಂ-ಮಾಡಲ್ಪಟ್ಟಿತು, (ಈ ಎರಡೂ) ಅಭೂತಪೂರ್ವಂ-ಎಂದಿಗೂ ನಡೆಯದಿರುವುದು. ॥ ೨ ॥ ಸಾಗರೇ - ಸಮುದ್ರದಲ್ಲಿ, (ರಾಮನಿಂದ ಮಾಡಲ್ಪಟ್ಟ) ಸೇತುಬಂಧಂತು - ಸೇತುಬಂಧನವನ್ನಾದರೆ, ಕಥಂಚನ - ಹೇಗಾದರೂ, ನಶ್ರದ್ದಧ್ಯಾಂ - ನಾನು ನಂಬುವುದಿಲ್ಲ, ಅಪಿಚ - ಇಷ್ಟುಮಾತ್ರವಲ್ಲ, (ಹೇಗಾದರೂ) ವಾನರಂ - ಕಪಿಗಳ ಸಂಬಂಧವಾದ, ತದ್ಬಲಂ - ಆ ಸೈನ್ಯವು, ಮಯಾ-ನನ್ನಿಂದ, ಅವಶ್ಯಂ- ಅಗತ್ಯವಾಗಿ, ಸಂಖ್ಯೇಯಂ - ಎಣಿಸಲ್ಪಡಬೇಕು. ॥೩॥ ಭವಂತೌ - ನೀವುಗಳು, ಅನುಪಲಕ್ಷಿತೌ - ಇತರರಿಂದ ತಿಳಿಯಲ್ಪಡದೆ, ವಾನರಂಸೈನ್ಯಂ - ಕಪಿಸೇನೆಯನ್ನು, ಪ್ರವಿಶ್ಯ - ಹೊಕ್ಕು, ಪರಿಮಾಣಂಚ-ಇಯತ್ತೆಯನ್ನೂ, ವೀರ್ಯಂಚ-ಬಲಪರಿಚ್ಛೇದವನ್ನೂ, ಯೇಪ್ಲವಂಗಮಾಃ-ಯಾವ ವಾನರರು, ಮುಖ್ಯಾಶ್ಚ - ಪ್ರಧಾನರೋ, ಯೇ - ಯಾರು, ರಾಮಸ್ಯ - ಶ್ರೀರಾಮನಿಗೂ,

ದಶರಥರಾಜಪುತ್ರನಾದ ಶ್ರೀರಾಮಮೂರ್ತಿಯು ವಾನರಸೇನೆಯೊಡನೆ ಸಾಗರವನ್ನು ದಾಟಿಬಂದನೆಂಬ ಸಮಾಚಾರವನ್ನು ಕೇಳಿ ಮಹಾ ಗರ್ವಿಯಾದ ಆ ರಾವಣಾಸುರನು ತನ್ನ ಮಂತ್ರಿಗಳಾದ ಶುಕಸಾರಣರನ್ನು ನೋಡಿ, "ಅಯ್ಯಾ ಶುಕಸಾರಣರಿರಾ! ವಾನರಸೇನೆಯೆಲ್ಲವೂ, ದಾಟಲಸದಳವಾದ ಸಾಗರವನ್ನು ದಾಟಿರುವುದು. ಶ್ರೀರಾಮನು ಸಮುದ್ರದಲ್ಲಿ ಹಿಂದಾರೂ ಮಾಡಲಾಗದ ಸೇತುವೆಯನ್ನು ಕಟ್ಟಿಸಿದನೆಂದು ಕೇಳಿದೆನು. ಆದರೂ ಸಮುದ್ರದಲ್ಲಿ ಸೇತುವೆಯನ್ನು ಕಟ್ಟಿದ್ದಾರೆಂಬುದನ್ನು ನಾನು ಎಷ್ಟುಮಾತ್ರಕ್ಕೂ ನಂಬುವುದಿಲ್ಲವು. ಈಗ ನಾನು ಹೇಗಾದರೂ ಮಾಡಿ ಆ ವಾನರಸೇನೆಯ ಇಯತ್ತೆಯನ್ನು ತಿಳಿದುಕೊಳ್ಳಬೇಕು. ಆದುದರಿಂದ ಈಗ ನೀವಿಬ್ಬರೂ ಆ ವಾನರರಿಗೆ ತಿಳಿಯದಂತೆ ಅವರ ಸೇನೆಯನ್ನು ಪ್ರವೇಶಿಸಿ, ಅದರ ಪರಿಮಿತಿಯನ್ನೂ, ಆ ವಾನರರ ಪರಾಕ್ರಮವನ್ನೂ, ಅವರಲ್ಲಿ ಮುಖ್ಯರಾರೆಂಬುದನ್ನೂ, ಆ ರಾಮಸುಗ್ರೀವರಿಗೆ ಮುಖ್ಯಮಂತ್ರಿಗಳಾ

**ಯೇಚ ರಾಮಸ್ಯ ಸುಗ್ರೀವಸ್ಯಚ ಸಮ್ಮತಾಃ । ಯೇ ಪೂರ್ವಮಭಿವರ್ತಂತೇ ಯೇಚ ಶೂರಾಃ ಪ್ಲವಂಗಮಾಃ ॥ ೫ ॥ ಸಚ ಸೇತುರ್ಯಥಾಬದ್ಧಸ್ಸಾಗರೇ ಸಲಿಲಾಶಯೇ । ನಿವೇಶಂ ಯದ್ಯಥಾ ತೇಷಾಂ ವಾನರಾಣಾಂ ಮಹಾತ್ಮನಾಂ ॥ ೬ ॥ ರಾಮಸ್ಯ ವ್ಯವಸಾಯಂಚ ವೀರ್ಯಂ ಪ್ರಹರಣಾನಿಚ । ಲಕ್ಷ್ಮಣಸ್ಯಚ ವೀರ್ಯಂಚ ತತ್ವತೋ ಜ್ಞಾತುಮರ್ಹಥಃ ॥ ೭ ॥ ಕಶ್ಚ ಸೇನಾಪತಿಸ್ತೇಷಾಂ ವಾನರಾಣಾಂ ಮಹೌಜಸಾಂ । ಏತತ್ ಜ್ಞಾತ್ವಾ ಯಥಾತತ್ವಂ ಶೀಘ್ರಮಾಗಂತುಮರ್ಹಥಃ" ॥ ೮ ॥ ಇತಿ ಪ್ರತಿಸಮಾದಿಷ್ಟೌ ರಾಕ್ಷಸೌ ಶುಕಸಾರಣೌ । ಹರಿರೂಪಧರೌ ವೀರೌ ಪ್ರವಿಷ್ಟೌ ವಾನರಂ**

ಸುಗ್ರೀವಸ್ಯಚ - ಸುಗ್ರೀವನಿಗೂ, ಸಮ್ಮತಾಃ - ಇಷ್ಟರಾದ, ಮಂತ್ರಿಣಃ - ಮಂತ್ರಿಗಳೋ, ಯೇ - ಯಾರು, ಪೂರ್ವಂ - ಮೊದಲು, ಅಭಿವರ್ತಂತೇ - ಮುಂದೆ ಬರುವರೋ, ಯೇಚಪ್ಲವಂಗಮಾಃ - ಯಾವ ವಾನರರು, ಶೂರಾಃ - ಸ್ವತಸ್ಸಿದ್ಧವಾಗಿ ಶೂರರೋ, ಸಾಗರೇ - ಸಗರಚಕ್ರವರ್ತಿಯಿಂದ ಅಗಿಸಲ್ಪಟ್ಟ, ಸಲಿಲಾಶಯೇ - ಸಮುದ್ರದಲ್ಲಿ, ಸಸೇತುಶ್ಚ - ಆ ಸೇತುವೂ, ಯಥಾ - ಹೇಗೆ, ಬದ್ಧಃ - ಕಟ್ಟಲ್ಪಟ್ಟಿತೋ, ಮಹಾತ್ಮನಾಂ-ಮಹಾ ಧೈರ್ಯಶಾಲಿಗಳಾದ, ತೇಷಾಂವಾನರಾಣಾಂ-ಆ ಕಪಿಗಳ, ನಿವೇಶಂ - ನಿವಾಸವು, ಯದ್ಯಥಾ - ಯಾವರೀತಿಯಲ್ಲಿರುವುದೋ, (ತಾನಿ - ಅವುಗಳನ್ನೂ), ರಾಮಸ್ಯ- ಶ್ರೀರಾಮನ, ವ್ಯವಸಾಯಂಚ - ಉದ್ಯೋಗವನ್ನೂ, ವೀರ್ಯಂಚ - ಬಲವನ್ನೂ, ಪ್ರಹರಣಾನಿಚ - ಆಯುಧಗಳನ್ನೂ, ಲಕ್ಷ್ಮಣಸ್ಯ - ಲಕ್ಷ್ಮಣನ, ವೀರ್ಯಂಚ - ಬಲವನ್ನೂ, (ಪ್ರಹರಣಾನಿಚ - ಆಯುಧಗಳನ್ನೂ), ತತ್ವತಃ - ಯಥಾರ್ಥವಾಗಿ, ಜ್ಞಾತುಂ - ತಿಳಿಯುವದಕ್ಕೆ, ಅರ್ಹಥಃ - ಯೋಗ್ಯರಾಗಿರಿ. ॥ ೪-೭ ॥ ಕಿಂಚ - ಇಷ್ಟುಮಾತ್ರವಲ್ಲ, ಮಹೌಜಸಾಂ - ಮಹಾ ಪರಾಕ್ರಮಿಗಳಾದ, ತೇಷಾಂವಾನರಾಣಾಂ - ಆ ಕಪಿಗಳ, ಸೇನಾಪತಿಃ - ಸೇನಾನಾಯಕನು, ಕಃ - ಯಾರು, ಏತತ್ - ಇದನ್ನು, ಯಥಾತತ್ವಂ - ನಿಶ್ಚಯವಾಗಿ, ಜ್ಞಾತ್ವಾ - ತಿಳಿದು, ಶೀಘ್ರಂ - ಬೇಗನೆ, ಆಗಂತುಂ - ಬರುವದಕ್ಕೆ, ಅರ್ಹಥಃ - ಯೋಗ್ಯರಾಗಿರಿ. ॥ ೮ ॥ ಇತಿ - ಈ ಪರಿಯಾಗಿ, ಪ್ರತಿಸಮಾದಿಷ್ಟೌ - ಆಜ್ಞಾಪಿಸಲ್ಪಟ್ಟ, ಶುಕಸಾರಣೌ - ಶುಕಸಾರಣರೆಂಬ, ರಾಕ್ಷಸೌ - ಅಸುರರು, ಹರಿರೂಪಧರೌ - ವಾನರರೂಪವನ್ನು ಧರಿಸಿ, ವಾನರಂಬಲಂ - ಕಪಿಸೈನ್ಯವನ್ನು, ಪ್ರವಿಷ್ಟೌ - ಹೊಕ್ಕರು. ॥೯॥ ತತಃ - ಅನಂತರದಲ್ಲಿ, ನಿಶಾಚರೌ - ರಾಕ್ಷಸರಾದ, ಶುಕಸಾರಣೌ - ಶುಕಸಾರಣರು, ತದಾ - ಆ ಕಾಲದಲ್ಲಿ,

ರೆಂಬುದನ್ನೂ, ಯುದ್ಧದಲ್ಲಿ ಮುಂದುನಿಲ್ಲುವ ಶೂರರಾರೆಂಬುದನ್ನೂ, ಆ ವಾನರಸೇನೆಯಲ್ಲಿ ಶೂರರಾರಿರುವರೆಂಬುದನ್ನೂ ತಿಳಿದುಬರಬೇಕು. ಮೇಲಾಗಿ ಅವರು ಸಾಗರದಲ್ಲಿ ಸೇತುವೆಯನ್ನು ಕಟ್ಟಿದಬಗೆ ಹೇಗೆಂಬುದನ್ನೂ ತಿಳಿಯಬೇಕು. ಮಹಾ ಪರಾಕ್ರಮಶಾಲಿಗಳಾದ ಆ ವಾನರವೀರರಿರುವ ಪ್ರದೇಶಗಳನ್ನೂ, ಯುದ್ಧಕ್ಕಾಗಿ ಆ ರಾಮನು ಮಾಡುತ್ತಿರುವ ಪ್ರಯತ್ನಗಳನ್ನೂ ತಿಳಿಯಬೇಕು. ಇಷ್ಟೆಯಲ್ಲದೆ ಆ ರಾಮನ ಪರಾಕ್ರಮು, ಅವನಲ್ಲಿರುವ ಆಯುಧಗಳು, ಅವನ ತಮ್ಮನಾದ ಲಕ್ಷ್ಮಣನ ಶೌರ್ಯ ಈ ಎಲ್ಲ ವಿಚಾರಗಳನ್ನೂ ಯಥಾರ್ಥವಾಗಿ ತಿಳಿದುಬರಬೇಕು. ಇದೂ ಅಲ್ಲದೆ ಆ ವಾನರಸೇನೆಗಳಿಗೆ ನಾಯಕರಾರೆಂಬುದನ್ನು ತಿಳಿದು ಜಾಗ್ರತೆಯಾಗಿ ಬರಬೇಕು" ಎಂದು ಅಪ್ಪಣೆ ಮಾಡಿದನು. ॥ ೧-೮ ॥ ಆಗ ಮಹಾ ಪರಾಕ್ರಮಶಾಲಿಗಳಾದ ಆ ಶುಕಸಾರಣರು ರಾವಣನ ಆಜ್ಞೆಯಂತೆ ವಾನರರ ರೂಪಗಳನ್ನು ತಾಳಿ ಮಹಾ ವೇಗದಿಂದ ಹೋಗಿ ವಾನರಸೇನೆಯನ್ನು ಪ್ರವೇಶಿಸಿದರು. ಅವರಿಬ್ಬರೂ ಹೀಗೆ ಪ್ರವೇಶಿಸಿದೊಡನೆಯೇ ಚಿಂತಿಸಲಸದಳವಾಗಿಯೂ, ನೋಡಿದವರಿಗೆ

ಬಲಂ ॥ ೯ ॥ ತತಸ್ತದ್ವಾನರಂ ಸೈನ್ಯಮಚಿಂತ್ಯಂ ರೋಮಹರ್ಷಣಂ । ಸಂಖ್ಯಾತುಂ ನಾಧ್ಯಗಚ್ಛೇತಾಂ ತದಾ ತೌ ಶುಕಸಾರಣೌ ॥ ೧೦ ॥ ಸಂಸ್ಥಿತಂ ಪರ್ವತಾಗ್ರೇಷು ನಿರ್ದರೇಷು ಗುಹಾಸುಚ । ಸಮುದ್ರಸ್ಯಚ ತೀರೇಷು ವನೇಷೂಪವನೇಷುಚ ॥ ೧೧ ॥ ತರಮಾಣಂಚ ತೀರ್ಣಂಚ ತರ್ತುಕಾಮಂಚ ಸರ್ವಶಃ । ನಿವಿಷ್ಟಂ ನಿವಿಶಚ್ಚೈವ ಭೀಮನಾದಂ ಮಹಾಬಲಂ । ತದ್ಬಲಾರ್ಣವಮಕ್ಷೋಭ್ಯಂ ದದೃಶಾತೇ ನಿಶಾಚರೌ ॥ ೧೨ ॥ ತೌ ದದರ್ಶ ಮಹಾತೇಜಾಃ ಪ್ರಚ್ಛನ್ನೌ ಚ ವಿಭೀಷಣಃ । ಆಚಚಕ್ಷೇಽಥ ರಾಮಾಯ ಗೃಹೀತ್ವಾ ಶುಕಸಾರಣೌ ॥ ೧೩ ॥ "ತಸ್ಯೇಮೌ ರಾಕ್ಷಸೇಂದ್ರಸ್ಯ ಮಂತ್ರಿಣೌ ಶುಕಸಾರಣೌ । ಲಂಕಾಯಾಸ್ಸಮನುಪ್ರಾಪ್ತೌ ಚಾರೌ ಪರಪುರಂಜಯ !" ॥ ೧೪ ॥ ತೌ

ಅಚಿಂತ್ಯಂ-ಚಿಂತಿಸಲಸಾಧ್ಯವಾದ, ರೋಮಹರ್ಷಣಂ-ರೋಮಾಂಚಕರವಾದ, ತದ್ವಾನರಂಸೈನ್ಯಂ-ಆ ಕಪಿಸೈನ್ಯವನ್ನು, ಸಂಖ್ಯಾತುಂ - ಎಣಿಸಲು, ನಾಧ್ಯಗಚ್ಛೇತಾಂ - ಸಮರ್ಥರಾಗಲಿಲ್ಲವು. ॥ ೧೦ ॥ ಪರ್ವತಾಗ್ರೇಷು-ಗಿರಿಶಿಖರಗಳಲ್ಲಿಯೂ, ನಿರ್ದರೇಷು-ಸೀಳಿದ ಪರ್ವತಪ್ರದೇಶಗಳಲ್ಲಿಯೂ, ಗುಹಾಸುಚ-ಗುಹೆಗಳಲ್ಲಿಯೂ, ಸಮುದ್ರಸ್ಯ-ಕಡಲಿನ, ತೀರೇಷುಚ-ದಡಗಳಲ್ಲಿಯೂ, ವನೇಷು-ವನಗಳಲ್ಲಿಯೂ, ಉಪವನೇಷುಚ - ಉದ್ಯಾನವನಗಳಲ್ಲಿಯೂ, ಸ್ಥಿತಂ - ಇರುವ ಸೈನ್ಯವನ್ನು, ತರಮಾಣಂ - ದಾಟುವ ಸೈನ್ಯವನ್ನು, ತೀರ್ಣಂಚ - ದಾಟಿದ್ದನ್ನು, ತರ್ತುಕಾಮಂಚ - ದಾಂಟಲುದ್ಯುಕ್ತವಾದದ್ದನ್ನೂ, ಸರ್ವಶಃ - ಸರ್ವಪ್ರದೇಶದಲ್ಲಿಯೂ, ನಿವಿಷ್ಟಂ - ಇಳಿದದ್ದನ್ನೂ, ನಿವಿಶಚ್ಚೈವ - ಇಳಿಯುತ್ತಲಿರುವುದನ್ನೂ, ಭೀಮನಾದಂ - ಭಯಂಕರವಾದ ಶಬ್ದವುಳ್ಳ, ಮಹಾಬಲಂ - ಬಹು ಸಾಮರ್ಥ್ಯವುಳ್ಳ, ಅಕ್ಷೋಭ್ಯಂ - ಕ್ಷೋಭಿಸಲಸಾಧ್ಯವಾದ, ತದ್ಬಲಾರ್ಣವಂ - ಆ ಸೈನ್ಯವೆಂಬ ಸಮುದ್ರವನ್ನು, ದದೃಶಾತೇ - ಕಂಡರು. ॥೧೧-೧೨॥ ಅಥ - ಅನಂತರದಲ್ಲಿ, ಮಹಾತೇಜಾಃ - ಬಹು ಪರಾಕ್ರಮಿಯಾದ, ವಿಭೀಷಣಃ - ವಿಭೀಷಣನು, ಪ್ರಚ್ಛನ್ನೌ - ಮಾರುರೂಪವನ್ನುತಾಳಿದ, ತೌಶುಕಸಾರಣೌ - ಆ ಶುಕಸಾರಣರನ್ನು, ದದರ್ಶ - ನೋಡಿದನು, ತೌಚ - ಅವರನ್ನಾದರೆ, ಗೃಹೀತ್ವಾ - ಹಿಡಿದು, ರಾಮಾಯ-ಶ್ರೀರಾಮನಿಗೆ, ಆಚಚಕ್ಷೇ - ಹೇಳಿದನು. ॥ ೧೩ ॥ ಹೇ ಪರಪುಂಜಯ - ಎಲೈ ಶತ್ರುಸಂಹಾರಕನೇ, ರಾಕ್ಷಸೇಂದ್ರಸ್ಯ - ರಾಕ್ಷಸಾಧಿಪತಿಯಾದ, ತಸ್ಯ - ಆ ರಾವಣನ, ಮಂತ್ರಿಣೌ - ಮಂತ್ರಿಗಳಾದ, ಶುಕಸಾರಣೌ - ಶುಕಸಾರಣರು, ಚಾರೌ - ಚಾರರಾಗಿ, ಲಂಕಾಯಾಃ - ಲಂಕೆಯಿಂದ, ಸಮನು

ದಿಗ್ಭ್ರಮೆಯನ್ನುಂಟುಮಾಡುವುದಾಗಿಯೂ ಇರುವ ಆ ಮಹಾ ಸೇನೆಯನ್ನು ಎಣಿಸಲಾರದೆ ಹೋದರು. ಪರ್ವತ ಶಿಖರಗಳಲ್ಲಿಯೂ, ದರಿಗಳಲ್ಲಿಯೂ, ಗುಹೆಗಳಲ್ಲಿಯೂ, ಸಮುದ್ರ ತೀರದಲ್ಲಿಯೂ, ಅರಣ್ಯಗಳಲ್ಲಿಯೂ, ಉದ್ಯಾನಗಳಲ್ಲಿಯೂ ಬೀಡುಬಿಟ್ಟಿದ್ದ ವಾನರಸೇನೆಯನ್ನೂ, ಆಗತಾನೇ ಸಮುದ್ರವನ್ನು ದಾಟಿದ್ದ ಕೆಲವು ಸೇನೆಯನ್ನೂ, ಇನ್ನೂ ದಾಟುತ್ತಿರುವ ಸೇನೆಯನ್ನೂ, ದಾಟಲುಪಕ್ರಮಿಸಿರುವ ಸೇನೆಯನ್ನೂ ಕಂಡ ಆ ಶುಕಸಾರಣರು ದಿಗ್ಭ್ರಾಂತರಾಗಿಹೋದರು. ಮಹಾ ಭಯಂಕರಧ್ವನಿಯುಳ್ಳುದೂ, ಮಹಾ ಬಲವುಳ್ಳುದೂ, ಅಕ್ಷೋಭ್ಯವಾದುದೂ ಆದ ಆ ಮಹಾ ವಾನರಸೇನಾಸಾಗರವು ನಾಲ್ಕುದಿಕ್ಕುಗಳನ್ನು ಆವರಿಸಿಬಿಟ್ಟಿದ್ದುದನ್ನು ಅವರಿಬ್ಬರೂ ನೋಡುತ್ತಿದ್ದರು. ॥ ೯–೧೨ ॥ ಆ ಸಮಯದಲ್ಲಿ ವಿಭೀಷಣನು ಅವರಿಬ್ಬರನ್ನೂ ಕಂಡು ಕೂಡಲೇ ಅವರನ್ನು ಹಿಡಿದು ಶ್ರೀರಾಮನ ಬಳಿಗೈದಿ, "ಎಲೈ ಪರಪುರಂಜಯನೇ; ರಾಮಚಂದ್ರನೇ! ಇವರು ರಾವಣನ ಮಂತ್ರಿಗಳಾದ ಶುಕಸಾರಣರು. ಲಂಕೆಯಿಂದ ಗೂಢಚಾರರಾಗಿ ಇಲ್ಲಿಗೈತಂದಿರುವರು" ಎಂದು ಹೇಳಿದನು.

ದೃಷ್ಟ್ವಾ ವ್ಯಥಿತೌ ರಾಮಂ ನಿರಾಶೌ ಜೀವಿತೇ ತದಾ । ಕೃತಾಂಜಲಿಪುಟೌ ಭೀತೌ ವಚನಂ ಚೇದಮೂಚತುಃ ॥ ೧೫ ॥ "ಆವಾಮಿಹಾಗತೌ ಸೌಮ್ಯ ! ರಾವಣಪ್ರಹಿತಾವುಭೌ । ಪರಿಜ್ಞಾತುಂ ಬಲಂ ಕೃತ್ಸ್ನಂ ತವೇದಂ ರಘುನಂದನ ! ॥ ೧೬ ॥ ತಯೋಸ್ತದ್ವಚನಂ ಶ್ರುತ್ವಾ ರಾಮೋ ದಶರಥಾತ್ಮಜಃ । ಅಬ್ರವೀತ್ಪ್ರಹಸನ್ವಾಕ್ಯಂ ಸರ್ವಭೂತಹಿತೇ ರತಃ ॥ ೧೭ ॥ ಯದಿ ದೃಷ್ಟಂ ಬಲಂ ಕೃತ್ಸ್ನಂ ವಯಂ ವಾ ಸುಪರೀಕ್ಷಿತಾಃ । ಯಥೋಕ್ತಂ ವಾ ಕೃತಂ ಕಾರ್ಯಂ ಛಂದತಃ ಪ್ರತಿಗಮ್ಯತಾಂ ॥ ೧೮ ॥ ಅಥಕಿಂಚಿದದೃಷ್ಟಂ ವಾ ಭೂಯಸ್ತದ್ದ್ರಷ್ಟುಮರ್ಹಥಃ । ವಿಭೀಷಣೋ ವಾ ಕಾತ್ಸ್ನ್ಯೇನ

ಪ್ರಾಪ್ತೌ - ಬಂದಿದ್ದಾರೆ. ॥೧೪॥ ಜೀವಿತೇ - ಪ್ರಾಣದಲ್ಲಿ, ನಿರಾಶೌ - ಆಶೆಯಿಲ್ಲದಕಾರಣ, ಭೀತೌ - ಭಯಬಿದ್ದವರಾದ, ವ್ಯಥಿತೌ - ದುಃಖಿತರಾದ, ತೌ - ಅವರೀರ್ವರು, ರಾಮಂ - ಶ್ರೀರಾಮನನ್ನು, ದೃಷ್ಟ್ವಾ - ಕಂಡು, ತದಾ - ಆಗ, ಕೃತಾಂಜಲಿಪುಟೌ - ಬದ್ಧಾಂಜಲಿಪುಟರಾಗಿ, ಇದಂವಚನಂಚ - ಈ ಮಾತನ್ನು ಕೂಡ, ಊಚತುಃ - ಹೇಳಿದರು. ॥ ೧೫ ॥ ಹೇ ಸೌಮ್ಯ - ಎಲೈ ಕೋಪರಹಿತನೇ, ಹೇ ರಘುನಂದನ - ಎಲೈ ರಾಮನೇ, ಕೃತ್ಸ್ನಂ - ಸಮಸ್ತವಾದ, ತವ - ನಿನ್ನ, ಇದಂಬಲಂ - ಈ ಸೈನ್ಯವನ್ನು, ಪರಿಜ್ಞಾತುಂ - ತಿಳಿಯುವದಕ್ಕಾಗಿ, ಆವಾಂಉಭೌ - ನಾವೀರ್ವರೂ, ರಾವಣಪ್ರಹಿತೌ- ರಾವಣನಿಂದ ಕಳುಹಿಸಲ್ಪಟ್ಟವರಾಗಿ, ಇಹ - ಇಲ್ಲಿಗೆ, ಆಗತೌ - ಬಂದವರಾದೆವು. ॥೧೬॥ ಸರ್ವಭೂತಹಿತೇ - ಸಮಸ್ತ ಪ್ರಾಣಿಗಳ ಹಿತದಲ್ಲಿ, ರತಃ - ಆಸಕ್ತನಾದ, ದಶರಥಾತ್ಮಜಃ - ದಶರಥಪುತ್ರನಾದ, ರಾಮಃ - ಶ್ರೀರಾಮನು, ತಯೋಃ - ಅವರ, ತದ್ವಚನಂ - ಆ ಮಾತನ್ನು, ಶ್ರುತ್ವಾ - ಕೇಳಿ, ಪ್ರಹಸನ್ - ನಕ್ಕು, ವಾಕ್ಯಂ - ಮಾತನ್ನು, ಅಬ್ರವೀತ್ - ನುಡಿದನು. ॥ ೧೭ ॥ ಕೃತ್ಸ್ನಂ - ಸಮಸ್ತವಾದ, ಬಲಂ - ಸೈನ್ಯವು, ದೃಷ್ಟಂಯದಿ - ನೋಡಲ್ಪಟ್ಟಿದ್ದರೆ, ವಯಂವಾ - ನಾವುಗಳಾದರೂ, ಸುಪರೀಕ್ಷಿತಾಃ - ಚನ್ನಾಗಿ ಪರೀಕ್ಷಿಸಲ್ಪಟ್ಟಿದ್ದರೆ, ಕಾರ್ಯಂವಾ - ಉದ್ಯೋಗವಾದರೂ, ಯಥೋಕ್ತಂ- ದಣಿಯಿಂದ ಹೇಳಲ್ಪಟ್ಟಂತೆ, ಕೃತಂಯದಿ - ಮಾಡಲ್ಪಟ್ಟಿದ್ದರೆ, ಛಂದತಃ - ಇಷ್ಟವಿದ್ದಂತೆ, ಪ್ರತಿಗಮ್ಯತಾಂ - ಹೇಳಲ್ಪಡಲಿ. ॥ ೧೮ ॥ ಅಥವಾ - ಹಾಗಲ್ಲದಿದ್ದರೆ, ಅದೃಷ್ಟಂ - ನೋಡಲ್ಪಡದಿರುದು, ಕಿಂಚಿದ್ಯದಿ - ಸ್ವಲ್ಪವಿದ್ದರೆ, ಭೂಯಃ - ಮತ್ತು, ತತ್ - ಆದನ್ನು, (ಯುವಾಂ-ನೀವು), ದ್ರಷ್ಟುಂ - ನೋಡುವುದಕ್ಕೆ, ಅರ್ಹಥಃ - ಯೋಗ್ಯರಾಗಿ, ಅಥವಾ - ಹಾಗಲ್ಲದಿದ್ದರೆ, ವಿಭೀಷಣಃ - ವಿಭೀಷಣನು, ಕಾತ್ಸ್ನ್ಯೇನ - ಸಾಮರ್ಥ್ಯದಿಂದ, ಭೂಯಃ - ಇನ್ನೂ, ದರ್ಶಯಿಷ್ಯತಿ - ತೋರಿಸುವನು, ಇದಂ

ಆಗಲಾ ರಾಕ್ಷಸರೀರ್ವರೂ ದುಃಖಿತರಾಗಿ ಪ್ರಾಣದ ಮೇಲಣ ಆಶೆಯೇ ಇಲ್ಲದವರಾಗಿ (ಆದರೂ ಧೈರ್ಯದಿಂದ) ಕೈಗಳನ್ನು ಜೋಡಿಸಿಕೊಂಡು ಶ್ರೀರಾಮಮೂರ್ತಿಯನ್ನು ಕುರಿತು, "ಎಲೈ ಸೌಮ್ಯನೇ ರಘುನಂದನನೇ ! ರಾವಣನು ನಮ್ಮನ್ನಿಲ್ಲಿಗೆ ಕಳುಹಿಸಿರುವನು. ನಿನ್ನ ಸೇನೆಯೆಲ್ಲವನ್ನೂ ನೋಡಿಕೊಂಡು ಬರಲು ಆತನು ನಮ್ಮನ್ನಿಲ್ಲಿಗೆ ಕಳುಹಿಸಿರುವನು" ಎಂದರು. ॥ ೧೫, ೧೬ ॥ ಸರ್ವಭೂತದಯಾಪರನಾದ ದಾಶರಥಿಯು ಅವರ ಮಾತುಗಳನ್ನು ಕೇಳಿ ನಸುನಗುತ್ತ, "ಅಯ್ಯಾ ಶುಕಸಾರಣರಿರಾ ! ನೀವು ನಮ್ಮ ಸೇನೆಯೆಲ್ಲವನ್ನೂ ಕಂಡುದಾಗಿದ್ದರೆ, ನಮ್ಮನ್ನೂ ಚೆನ್ನಾಗಿ ಪರೀಕ್ಷಿಸಿದ್ದೂ ಮುಗಿದಿದ್ದರೆ ನಿಮ್ಮ ಸ್ವಾಮಿಯು ಹೇಳಿದ ಕಾರ್ಯಗಳೆಲ್ಲವೂ ಸಂಪೂರ್ಣವಾಗಿ ನೆರವೇರಿದುದಾಗಿದ್ದರೆ ನಿಮ್ಮ ಮನಬಂದಂತೆ ಹಿಂತಿರುಗಿ ಹೋಗಿರಿ. ಅಥವಾ ಇನ್ನೂ ನೋಡಬೇಕಾದುದೂ, ತಿಳಿಯಬೇಕಾದುದೂ ಏನಾದರೂ ಉಳಿದಿದ್ದರೆ ಅದನ್ನು ನೋಡಿರಿ. ಈ ವಿಭೀಷಣನು ಅದೆಲ್ಲವನ್ನೂ ನಿಮಗೆ

ಭೂಯಸ್ಸಂದರ್ಶಯಿಷ್ಯತಿ ‖ ೧೯ ‖ ನಚೇದಂ ಗ್ರಹಣಂ ಪ್ರಾಪ್ಯ ಭೇತ್ತವ್ಯಂ ಜೀವಿತಂ ಪ್ರತಿ । ನ್ಯಸ್ತಶಸ್ತ್ರೌ ಗೃಹೀತೌ ವಾ ನ ದೂತೌ ವಧಮರ್ಹತಃ ‖೨೦‖ ಪೃಚ್ಛ್ಯಮಾನೌ ವಿಮುಂಚಂತೌ ಚಾರೌ ರಾತ್ರಿಂಚರಾವುಭೌ । ಶತ್ರುಪಕ್ಷಸ್ಯ ಸತತಂ ವಿಭೀಷಣವಿಕರ್ಷಣೌ ‖ ೨೧ ‖ ಪ್ರವಿಶ್ಯ ನಗರೀಂ ಲಂಕಾಂ ಭವದ್ಭ್ಯಾಂ ಧನದಾನುಜಃ । ವಕ್ತವ್ಯೋ ರಕ್ಷಸಾಂ ರಾಜಾ ಯಥೋಕ್ತಂ ವಚನಂ ಮಮ ‖ ೨೨ ‖ ಯದ್ಬಲಂಚ ಸಮಾಶ್ರಿತ್ಯ ಸೀತಾಂ ಮೇ ಹೃತವಾನಸಿ । ತದ್ದರ್ಶಯ ಯಥಾಕಾಮಂ ಸಸೈನ್ಯಸ್ಸಹಬಾಂಧವಃ ‖ ೨೩ ‖ ಶ್ವಃ ಕಾಲ್ಯೇ ನಗರೀಂ ಲಂಕಾಂ ಸಪ್ರಾಕಾರಾಂ ಸತೋರಣಾಂ । ರಾಕ್ಷಸಂಚ

---

ಗ್ರಹಣಂ - ಈ ಹಿಡಿಯೋಣವನ್ನು, ಪ್ರಾಪ್ಯ - ಹೊಂದಿ, ಜೀವಿತಂಪ್ರತಿ - ಬದುಕೋಣವನ್ನು ಕುರಿತು, ನಭೇತ್ತವ್ಯಂ - ಭಯಪಡತಕ್ಕುದಲ್ಲ, ನ್ಯಸ್ತಶಸ್ತ್ರೌ - ಬಿಡಲ್ಪಟ್ಟ ಶಸ್ತ್ರಗಳುಳ್ಳ, ದೂತೌ - ದೂತರಾದ ನೀವು, ಗೃಹೀತೌವಾ - ಹಿಡಿಯಲ್ಪಟ್ಟವರಾದರೂ, ವಧಂ - ಸಂಹಾರವನ್ನು ಕುರಿತು, ನಾರ್ಹಥಃ - ಯೋಗ್ಯರಲ್ಲವು. ‖ ೧೯-೨೦ ‖ ಹೇ ವಿಭೀಷಣ - ಎಲೈ ವಿಭೀಷಣನೇ, ಶತ್ರುಪಕ್ಷಸ್ಯ - ವೈರಿಪಕ್ಷಕ್ಕೆ, ಸತತಂ - ಯಾವಾಗಲೂ, ವಿಕರ್ಷಣೌ - ಬಾಧಕರಾದ, ಪೃಚ್ಛ್ಯಮಾನೌ - ಕೇಳಿಕೊಳ್ಳುವ, ಚಾರೌ - ಚಾರರಾದ, ತಾವುಭೌರಾತ್ರಿಂಚರೌ - ಆ ಈರ್ವರು ರಾಕ್ಷಸರೂ, ವಿಮುಂಚಂತೌ - ಬಿಡತಕ್ಕವರು, (ಅಂದರೆ ಅವರೀರ್ವರನ್ನು ಬಿಡೆಂದು ಭಾವವು). ‖ ೨೧ ‖ ಲಂಕಾಂನಗರೀಂ - ಲಂಕಾಪಟ್ಟಣವನ್ನು, ಪ್ರವಿಶ್ಯ - ಹೊಕ್ಕು, ಭವದ್ಭ್ಯಾಂ - ನಿಮ್ಮಿಂದ, ಧನದಾನುಜಃ - ಕುಬೇರನ ತಮ್ಮನಾದ, ರಕ್ಷಸಾಂ - ರಾಕ್ಷಸರಿಗೆ, ರಾಜಾ - ಅರಸಾದ ರಾವಣನ, ಮಮ - ನನ್ನಿಂದ, ವಚನಂ - ಮಾತು, ಯಥೋಕ್ತಂ - ಹೇಳಲ್ಪಟ್ಟಂತೆ, ವಕ್ತವ್ಯಃ - ಹೇಳಲ್ಪಡತಕ್ಕವನು. ‖ ೨೨ ‖ ಯದ್ಬಲಂ - ಯಾವ ಬಲವನ್ನು, ಸಮಾಶ್ರಿತ್ಯ - ಆಶ್ರಯಿಸಿ, ಮೇ - ನನ್ನ, ಸೀತಾಂ - ಸೀತಾದೇವಿಯನ್ನು, ಹೃತವಾನ್ - ಅಪಹರಿಸಿದವನು, ಅಸಿ - ಆದೆಯೋ, ಸಸೈನ್ಯಃ - ಸೇನೆಯಿಂದೊಡಗೂಡಿದವನಾಗಿ, ಸಹಬಾಂಧವಃ - ಬಂಧುಗಳಿಂದ ಯುಕ್ತನಾಗಿ, ಯಥಾಕಾಮಂ - ಇಷ್ಟವಿದ್ದಂತೆ, ತಚ್ಚ - ಆ ಬಲವನ್ನೇ, ದರ್ಶಯ - ತೋರಿಸು. ‖೨೩‖ ಸಪ್ರಾಕಾರಾಂ - ಕೋಟೆಯಿಂದ ಯುಕ್ತವಾದ, ಸತೋರಣಾಂ - ಹೊರಬಾಗಿಲುಗಳಿಂದೊಡಗೂಡಿದ, ಲಂಕಾಂ - ಲಂಕಾಪಟ್ಟಣವನ್ನು, ಶ್ವಃಕಾಲ್ಯೇ - ನಾಳೆ ಪ್ರಾತಃಕಾಲದಲ್ಲಿ, ಮಯಾ-

---

ಸಮಗ್ರವಾಗಿ ತೋರಿಸಲುಳ್ಳವನು. "ಸಿಕ್ಕಿಬಿದ್ದೆವಲ್ಲಾ! ಇನ್ನು ನಾವು ಉಳಿಯುವೆವೆ?" ಎಂದು ನೀವು ಭಯಪಡಬೇಕಾದ್ದಿಲ್ಲವು. ಆಯುಧಗಳನ್ನು ಕೆಳಗಿಟ್ಟವರಾಗಲಿ, ಹಿಡಿಯಲ್ಪಟ್ಟವರಾಗಲಿ, ದೂತರಾದವರು ವಧಾರ್ಹರಲ್ಲವು" ಎಂದು ಹೇಳಿ ವಿಭೀಷಣನನ್ನು ನೋಡಿ, "ವಿಭೀಷಣಾ! ಇವರು ಶತ್ರುಪಕ್ಷವನ್ನು ಆಕರ್ಷಿಸುವಂತಹ ಚಾರರಾದರೂ ಕೇಳಿಕೊಳ್ಳುತ್ತಿರುವುದರಿಂದ ಇವರನ್ನು ಬಿಟ್ಟುಬಿಡು" ಎಂದನು. ‖ ೧೭-೨೧ ‖ ಆಮೇಲೆ ಆ ರಘುನಾಥನು ಆ ಶುಕಸಾರಣರನ್ನು ನೋಡಿ ಪುನಃ ಅವರನ್ನು ಕುರಿತು, "ಎಲೈ ಶುಕಸಾರಣರಿರಾ! ನೀವು ಪುನಃ ಲಂಕಾನಗರಕ್ಕೆ ಹೋಗಿ ಕುಬೇರಾನುಜನೂ, ರಾಕ್ಷಸೇಶ್ವರನೂ ಆದ ರಾವಣನಿಗೆ ನಾನು ಹೇಳುವ ಮಾತುಗಳನ್ನು ಸ್ವಲ್ಪವೂ ಹೆಚ್ಚುಕಡಿಮೆಗಳಿಲ್ಲದೆ ಹೇಳಬೇಕು.—ಎಲೈ ರಾವಣನೇ! ನೀನು ಯಾವ ಬಲವನ್ನು ಅವಲಂಬಿಸಿ ನನ್ನ ಭಾರ್ಯೆಯಾದ ಸೀತೆಯನ್ನಪಹರಿಸಿದೆಯೋ ಆ ಬಲವನ್ನು ಈಗಲೂ ನೀನು ಬಂಧುಮಿತ್ರಸೇನಾಸಮೇತನಾಗಿ ಪ್ರದರ್ಶಿಸಬೇಕು. ನಾಳಿನ ಪ್ರಾತಃಕಾಲದಲ್ಲಿಯೇ, ಪ್ರಾಕಾರಗಳಿಂದಲೂ,

**ಬಲಂ ಪಶ್ಯ ಶರೈರ್ವಿಧ್ವಂಸಿತಂ ಮಯಾ ||೨೪|| ಘೋರಂ ರೋಷಮಹಂ ಮೋಕ್ಷ್ಯೇ ಬಲಂ ಧಾರಯ ರಾವಣ । ಶ್ವಃ ಕಾಲ್ಯೇ ವಜ್ರವಾನ್ವಜ್ರಂ ದಾನವೇಷ್ವಿವ ವಾಸವಃ || ೨೫ || ಇತಿ ಪ್ರತಿಸಮಾದಿಷ್ಟೌ ರಾಕ್ಷಸೌ ಶುಕಸಾರಣೌ । ಜಯೇತಿ ಪ್ರತಿನಂದ್ಯೈತೌ ರಾಘವಂ ಧರ್ಮವತ್ಸಲಂ । ಆಗಮ್ಯ ನಗರೀಂ ಲಂಕಾಮಬ್ರೂತಾಂ ರಾಕ್ಷಸಾಧಿಪಂ || ೨೬-೨೭ || "ವಿಭೀಷಣಗೃಹೀತೌತು ¶ ವಧಾರ್ಹೌ ರಾಕ್ಷಸೇಶ್ವರಃ । ದೃಷ್ಟ್ವಾ ಧರ್ಮಾತ್ಮನಾ ಮುಕ್ತೌ ರಾಮೇಣಾಽಮಿತತೇಜಸಾ || ೨೮ || ಏಕಸ್ಥಾನಗತಾ ಯತ್ರ**

ನನ್ನಿಂದ, ಶರೈಃ - ಬಾಣಗಳಿಂದ, ವಿಧ್ವಂಸಿತಂ - ಧ್ವಂಸಿಸಲ್ಪಟ್ಟ, ರಾಕ್ಷಸಂಬಲಂಚ - ರಾಕ್ಷಸರ ಸಂಬಂಧವಾದ ಸೈನ್ಯವನ್ನೂ ಸಹಾ, ಪಶ್ಯ - ನೋಡು. ||೨೪|| ದಾನವೇಷು - ರಾಕ್ಷಸರಲ್ಲಿ, ವಜ್ರವಾನ್-ವಜ್ರಾಯುಧವುಳ್ಳ, (ಅಂದರೆ - ಅಭ್ಯಾಸ ಮಾಡಲ್ಪಟ್ಟ ವಜ್ರಾಯುಧವುಳ್ಳ), ವಾಸವ ಇವ - ದೇವೇಂದ್ರನಂತೆ, ಅಹಂ - ನಾನು, ಶ್ವಃಕಾಲ್ಯೇ - ನಾಳೆಯ ಪ್ರಾತಃಕಾಲದಲ್ಲಿ, ಘೋರಾ - ಭಯಂಕರವಾದ, ರೋಷಂ - ಕೋಪವನ್ನು, ಮೋಕ್ಷ್ಯೇ - ಬಿಡುತ್ತೇನೆ, ಹೇ ರಾವಣ - ಎಲೈ ರಾವಣನೇ, ಬಲಂ - ಬಲವನ್ನು ಧಾರಯ - ಧರಿಸಿಕೋ. || ೨೫ || ಇತಿ - ಈ ಪರಿಯಾಗಿ, ಶುಕಸಾರಣೌ - ಶುಕಸಾರಣರೆಂಬ, ಏತೌರಾಕ್ಷಸೌ - ಈ ಇಬ್ಬರು ರಾಕ್ಷಸರೂ, ಪ್ರತಿಸಮಾದಿಷ್ಟೌ - ರಾಮನಿಂದ ಆಜ್ಞಾಪಿಸಲ್ಪಟ್ಟವರಾಗಿ, ಧರ್ಮವತ್ಸಲಂ - ಧರ್ಮದಲ್ಲಿ ವಿಶ್ವಾಸವುಳ್ಳ, ರಾಘವಂ - ಶ್ರೀರಾಮನನ್ನು, ಜಯೇತಿ-ಜಯಜಯ ಎಂದು, ಪ್ರತಿನಂದ್ಯ - ಸಂತೋಷಗೊಳಿಸಿ, ಲಂಕಾಂನಗರೀಂ - ಲಂಕಾಪಟ್ಟಣವನ್ನು ಕುರಿತು, ಆಗಮ್ಯ - ಬಂದು, ರಾಕ್ಷಸಾಧಿಪಂ - ರಾವಣನನ್ನು ಕುರಿತು, ಅಬ್ರೂತಾಂ - ಹೇಳಿದರು. || ೨೬-೨೭ || ಹೇ ರಾಕ್ಷಸೇಶ್ವರ - ಎಲೈ ರಾಕ್ಷಸಾಧಿಪತಿಯೇ, ದೃಷ್ಟ್ವಾ - ಕಂಡು, ವಿಭೀ....ತೌ - ವಿಭೀಷಣನಿಂದ ಹಿಡಿಯಲ್ಪಟ್ಟವರಾದಕಾರಣ, ವಧಾರ್ಹೌತು - ವಧೆಗೆ ಯೋಗ್ಯರಾದ ನಾವು, ಅಮಿತತೇಜಸಾ - ಅಪಾರ ಪರಾಕ್ರಮವುಳ್ಳ, ಧರ್ಮಾತ್ಮನಾ - ಧರ್ಮಸ್ವಭಾವವುಳ್ಳ, ರಾಮೇಣ - ಶ್ರೀರಾಮನಿಂದ, ಮುಕ್ತೌ - ಬಿಡಲ್ಪಟ್ಟೆವು. || ೨೮ || ಲೋಕ....ಮಾಃ - ಲೋಕಪಾಲಕರಿಗೆ ಸಮಾನರಾದ,

ಬಹಿರ್ದ್ವಾರಗಳಿಂದಲೂ ಕೂಡಿದ ಲಂಕಾನಗರವನ್ನೂ ರಾಕ್ಷಸಸೇನೆಯನ್ನೂ ನನ್ನ ಬಾಣಪರಂಪರೆಗಳಿಂದ ನಾಶಗೊಳಿಸುವುದನ್ನು ನೋಡು. ರಾವಣಾ! ನಾಳೆ ಸೂರ್ಯೋದಯದಲ್ಲಿಯೇ, ವಜ್ರಾಯುಧಧರನಾದ ದೇವೇಂದ್ರನು ದಾನವರಮೇಲೆ ವಜ್ರಾಯುಧವನ್ನು ಬಿಡುವಂತೆ ಮಹಾ ಭಯಂಕರವಾದ ನನ್ನ ಕೋಪವನ್ನು ನಿನ್ನಮೇಲೆ ಪ್ರದರ್ಶಿಸುತ್ತೇನೆ. ಆದುದರಿಂದ ನಿನ್ನ ಸೇನೆಯನ್ನು ಸಜ್ಜುಗೊಳಿಸಿಕೊಂಡು ಎಚ್ಚರವಾಗಿರು—ಎಲೈ ಶುಕಸಾರಣರಿರಾ! ನೀವು ಈ ಮಾತುಗಳನ್ನು ಏನೊಂದೂ ವ್ಯತ್ಯಾಸ ಮಾಡದೆ ನಿಮ್ಮ ಪ್ರಭುವಾದ ರಾವಣಾಸುರನಿಗೆ ತಿಳಿಸಿರಿ" ಎಂದನು. || ೨೨–೨೫ || ಆಗ ಶುಕಸಾರಣರಿಬ್ಬರೂ ಶ್ರೀರಾಮನು ಹೇಳಿದ ಮಾತುಗಳನ್ನು ಕೇಳಿ ಧರ್ಮದಲ್ಲಿ ಪ್ರೇಮವುಳ್ಳ ಆತನನ್ನು "ಜಯಜಯ !" ಎಂದು ಹೊಗಳಿ, ಬಹುಬೇಗನೆ ಲಂಕಾನಗರಕ್ಕೆ ಹೋಗಿ ರಾಕ್ಷಸೇಶ್ವರನಾದ ರಾವಣಾಸುರನನ್ನು ನೋಡಿ, "ರಾಕ್ಷಸೇಶ್ವರನೇ! ರಾವಣಾಸುರನೇ!! ನಾವು ವಾನರಸೇನೆಯಲ್ಲಿರುವಾಗ ವಿಭೀಷಣನು ನಮ್ಮನ್ನು ಹಿಡಿದುಕೊಂಡು ಹೋಗಿ ರಾಮನಿಗೊಪ್ಪಿಸಿದನು. ಧರ್ಮಾತ್ಮನೂ, ಮಹಾ ಪರಾಕ್ರಮಶಾಲಿಯೂ ಆದ ಆತನು ನಮ್ಮನ್ನು ನೋಡಿ ನಾವು ವಧಾರ್ಹರಾದರೂ ದಯೆ

¶ "ವಧಾರ್ಹಂ ರಾಕ್ಷಸೇಶ್ವರ!" ತಿ. ರಾ. ಪಾ.

ಚತ್ವಾರಃ ಪುರುಷರ್ಷಭಾಃ । ಲೋಕಪಾಲೋಪಮಾಃ ಶೂರಾಃ ಕೃತಾಸ್ತ್ರಾ ದೃಢ ವಿಕ್ರಮಾಃ ॥ ೨೯ ॥ ರಾಮೋ ದಾಶರಥಿಃ ಶ್ರೀಮಾನ್ ಲಕ್ಷ್ಮಣಶ್ಚ ವಿಭೀಷಣಃ । ಸುಗ್ರೀವಶ್ಚ ಮಹಾತೇಜಾ ಮಹೇಂದ್ರಸಮವಿಕ್ರಮಃ ॥ ೩೦ ॥ ಏತೇ ಶಕ್ತಾಃ ಪುರೀಂ ಲಂಕಾಂ ಸಪ್ರಾಕಾರಾಂ ಸತೋರಣಾಂ । ಉತ್ಪಾಟ್ಯ ಸಂಕ್ರಾಮಯಿತುಂ ಸರ್ವೇ ತಿಷ್ಠಂತು ವಾನರಾಃ ॥ ೩೧ ॥ ಯಾದೃಶಂ ತಸ್ಯ ರಾಮಸ್ಯ ರೂಪಂ ಪ್ರಹರಣಾನಿ ಚ । ವಧಿಷ್ಯತಿ ಪುರೀಂ ಲಂಕಾಮೇಕಸ್ತಿಷ್ಠಂತು ತೇ ತ್ರಯಃ ॥೩೨॥ ರಾಮಲಕ್ಷ್ಮಣಗುಪ್ತಾ ಸಾ ಸುಗ್ರೀವೇಣ ಚ ವಾಹಿನೀ । ಬಭೂವ ದುರ್ಧರ್ಷತರಾ ಸೇಂದ್ರೈರಪಿ ಸುರಾ

---

ಶೂರಾಃ - ವೀರರಾದ, ಕೃತಾಸ್ತ್ರಾಃ - ಅಸ್ತ್ರಾಭ್ಯಾಸವುಳ್ಳ, ದೃಢವಿಕ್ರಮಾಃ - ಧೃಢವಾದ ಪರಾಕ್ರಮ ವುಳ್ಳ, ದಾಶರಥಿಃ - ದಶರಥಪುತ್ರನಾದ, ರಾಮಃ - ಶ್ರೀರಾಮನು, ಶ್ರೀಮಾನ್ - ಸಂಪದ್ಯುಕ್ತನಾದ, ಲಕ್ಷ್ಮಣಶ್ಚ - ಲಕ್ಷ್ಮಣನೂ, ವಿಭೀಷಣಃ - ವಿಭೀಷಣನೂ, ಮಹೇಂ....ಮಃ - ಇಂದ್ರಸದೃಶವಾದ ಪರಾಕ್ರಮವುಳ್ಳ, ಮಹಾತೇಜಾಃ - ಅತಿತೇಜೋವಂತನಾದ, ಸುಗ್ರೀವಶ್ಚ - ಸುಗ್ರೀವನು, (ಎಂಬ) ಚತ್ವಾರಃ - ನಾಲ್ಕುಮಂದಿಯಾದ, ಪುರುಷರ್ಷಭಾಃ - ಪುರುಷಶ್ರೇಷ್ಠರು, ಯತ್ರ - ಲಂಕಾಮರ್ದನ ರೂಪವಾದ ಯಾವ ಕೃತ್ಯದಲ್ಲಿ, ಏಕಸ್ಥಾನಗತಾಃ - ಐಕಮತ್ಯವನ್ನು ಹೊಂದಿರುವರೋ, ತತ್ರ - ಆ ವ್ಯಾಪಾರದಲ್ಲಿ, ಸರ್ವೇವಾನರಾಃತಿಷ್ಠಂತು - ಕಪಿಗಳೆಲ್ಲರು ನಿಂತಿರಲಿ, ಏತೇ - ಇವರುಗಳು, ಸಪ್ರಾಕಾರಾಂ - ಕೋಟೆಯಿಂದ ಯುಕ್ತವಾದ, ಸತೋರಣಾಂ - ಊರುಬಾಗಿಲುಗಳಿಂದ ಕೂಡಿದ, ಲಂಕಾಂ ಪುರೀಂ - ಲಂಕಾಪಟ್ಟಣವನ್ನು, ಉತ್ಪಾಟ್ಯ - ಕಿತ್ತು, ಸಂಕ್ರಾಮಯಿತುಂ - ಮತ್ತೊಂದು ಕಡೆ ಯಲ್ಲಿಡುವದಕ್ಕೆ, ಶಕ್ತಾಃ - ಸಮರ್ಥರು. ॥ ೨೯-೩೧ ॥ ತಸ್ಯರಾಮಸ್ಯ - ಆ ಶ್ರೀರಾಮನ, ರೂಪಂ - ರೂಪವು, ಯಾದೃಶಂ - ಎಂಥಾದ್ದೋ, ಪ್ರಹರಣಾನಿಚ - ಆಯುಧಗಳೂ ಕೂಡ, (ಎಂತಹವುಗಳೋ ಅವುಗಳನ್ನು ನೋಡಿದರೆ) ತೇತ್ರಯಃ - ಆ ಮೂರುಮಂದಿಯು, ತಿಷ್ಠಂತು - ಇರಲಿ, ಏಕಃ - ರಾಮ ನೊಬ್ಬನೇ, ಲಂಕಾಂಪುರೀಂ - ಲಂಕಾಪಟ್ಟಣವನ್ನು, ವಧಿಷ್ಯತಿ - ಸಂಹಾರ ಮಾಡುವನು, (ಎಂದೆಣಿಸು ತ್ತೇವೆ). ॥ ೩೨ ॥ ಸಾವಾಹಿನೀ-ಆ ಸೇನೆಯು, ಸುಗ್ರೀವೇಣಚ-ಸುಗ್ರೀವನಿಂದಲೂ, ರಾಮ....ಪ್ತಾ-ರಾಮಲಕ್ಷ್ಮಣರಿಂದಲೂ, ಸಂರಕ್ಷಿಸಲ್ಪಟ್ಟದ್ದಾದಕಾರಣ, ಸೇಂದ್ರೈಃ - ಇಂದ್ರನೊಡಗೂಡಿದ, ಸುರಾ

---

ಯಿಂದ ಬಿಡಿಸಿಬಿಟ್ಟನು. ಅಲ್ಲದೆ ಮಹಾ ತೇಜಸ್ವಿಯೂ, ದಶರಥಕುಮಾರನೂ ಆದ ಆ ರಾಮನೂ, ಲಕ್ಷ್ಮಣನೂ, ವಿಭೀಷಣನೂ, ಮಹಾ ತೇಜೋವಂತನಾದ ದೇವೇಂದ್ರನಿಗೆ ಸಮಾನವಾದ ಪರಾಕ್ರವುಳ್ಳ ಸುಗ್ರೀವನೂ ಒಂದುಗೂಡಿರುವರು. ಅವರು ದಿಕ್ಪಾಲಕರಿಗೆ ಸಮಾನರು ; ಮಹಾ ಶೂರರೂ, ಸಮಸ್ತ ಶಸ್ತ್ರಾಸ್ತ್ರಸಮನ್ವಿತರೂ, ದೃಢಪರಾಕ್ರಮ ವುಳ್ಳವರೂ ಆಗಿದ್ದಾರೆ. ಅವರು ನಾಲ್ವರೂ ವೀರಶ್ರೇಷ್ಠರು. ಎಲೈ ರಾಕ್ಷಸನಾಥನೇ ! ವಾನರರೆಲ್ಲರೂ ಹಾಗಿರಲಿ ; ಆ ರಾಮಲಕ್ಷ್ಮಣ ವಿಭೀಷಣ ಸುಗ್ರೀವರು ನಾಲ್ವರೇ ಪ್ರಾಕಾರ ಗಳಿಂದಲೂ, ಬಹಿರ್ದ್ವಾರಗಳಿಂದಲೂ ಕೂಡಿದ ಈ ಲಂಕಾನಗರವನ್ನು ಬುಡಸಹಿತ ಪೆಳಗಿಸಿ ಕೊಂಡು ಹೋಗಲು ಸಾಮರ್ಥ್ಯವುಳ್ಳವರು. ॥ ೨೬-೩೧ ॥ ಬಹಳವಾಗಿ ಹೇಳಿಯೇನು ; ಶ್ರೀರಾಮರೂಪವನ್ನೂ, ಆಯುಧಗಳನ್ನೂ ನೋಡಿದರೆ,—ಲಕ್ಷ್ಮಣ ವಿಭೀಷಣ ಸುಗ್ರೀವರು ಮೂವರೂ ಹಾಗಿರಲಿ—ಆತನೊಬ್ಬನೇ ಲಂಕಾನಗರವನ್ನು ನಾಶಮಾಡುತ್ತಾನೆಂದು ತೋರು ತ್ತಿರುವುದು. ಇದೂ ಅಲ್ಲದೆ ರಾಮಲಕ್ಷ್ಮಣ ಸುಗ್ರೀವರಿಂದ ಸುರಕ್ಷಿತವಾಗಿರುವ ಆ ವಾನರ

ಸುರೈಃ || ೩೩ || (ವ್ಯಕ್ತಸ್ಸೇತುಸ್ತಥಾ ಬದ್ಧೋ ದಶಯೋಜನವಿಸ್ತೃತಃ | ಶತಯೋಜನಮಾಯಾಮಸ್ತೀರ್ಣಾ ಸೇನಾಚ ಸಾಗರಂ || ೩೪ || ನಿವಿಷ್ಟೋ ದಕ್ಷಿಣೇ ತೀರೇ ರಾಮಸ್ಸಚ ನದೀಪತೇಃ | ತೀರ್ಣಸ್ಯ ತರಮಾಣಸ್ಯ ಬಲಸ್ಯಾಂತೋ ನವಿದ್ಯತೇ) ||೩೫||

ಪ್ರಹೃಷ್ಟರೂಪಾ ಧ್ವಜಿನೀ ವನೌಕಸಾಂ
ಮಹಾತ್ಮನಾಂ ಸಂಪ್ರತಿ ಯೋದ್ಧುಮಿಚ್ಛತಾಂ ||
ಅಲಂ ವಿರೋಧೇನ ಶಮೋ ವಿಧೀಯತಾಂ
ಪ್ರದೀಯತಾಂ ದಾಶರಥಾಯ ಮೈಥಿಲೀ.'' || ೩೪ ||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಪಂಚವಿಂಶಸ್ಸರ್ಗಃ.

---

ಸುರೈರಪಿ - ದೇವರಾಕ್ಷಸರಿಂದಲೂ, ದುರ್ಧರ್ಷತರಾ - ಬಲದಿಂದಲೂ (ಮನದಿಂದಲೂ) ತಿರಸ್ಕರಿಸಲ ಸಾಧ್ಯವಾದದ್ದು, ಬಭೂವ - ಆಯಿತು. || ೩೩ || ಸಂಪ್ರತಿ - ಈಗ, ಯೋದ್ಧುಂ - ಯುದ್ಧಮಾಡಲು, ಇಚ್ಛತಾಂ - ಅಪೇಕ್ಷಿಸುವ, ಮಹಾತ್ಮನಾಂ - ಮಹಾ ಧೈರ್ಯಶಾಲಿಗಳಾದ, ವನೌಕಸಾಂ - ವಾನರರ, ಧ್ವಜಿನೀ-ಸೇನೆಯು, ಪ್ರಹೃಷ್ಟರೂಪಾ-ಸಂತೋಷಗೊಂಡ ರೂಪವುಳ್ಳದ್ದು, ವಿರೋಧೇನ-ದ್ವೇಷಬುದ್ಧಿಯಿಂದ, ಅಲಂ - ಸಾಕು, ಶಮಃ - ಶಾಂತಿಗುಣವು, ವಿಧೀಯತಾಂ - ಮಾಡಲ್ಪಡಲಿ, ದಾಶರಥಾಯ - ಶ್ರೀರಾಮನಿಗೆ, ಮೈಥಿಲೀ - ಸೀತಾದೇವಿಯು, ಪ್ರದೀಯತಾಂ - ಕೊಡಲ್ಪಡಲಿ.||೩೪||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಪಂಚವಿಂಶಸ್ಸರ್ಗಃ.

---

ಸೇನೆಯು ದೇವೇಂದ್ರನೊಡಗೂಡಿದ ದೇವಾಸುರರಿಗಾದರೂ ಎದುರಿಸಲಸದಳವಾದುದಾಗಿರುವುದು. ಎಲೈ ಪ್ರಭುವೇ! ಹತ್ತುಗಾವುದದಗಲವೂ, ನೂರುಗಾವುದದುದ್ದವೂ ಆದ ಸೇತುವೆಯು ಸಮುದ್ರಮಧ್ಯದಲ್ಲಿ ರಚಿತವಾಗಿರುವುದು ಸ್ಪಷ್ಟವಾಗಿದೆ. ವಾನರಸೇನೆಯು ಸಮುದ್ರವನ್ನು ದಾಟಿರುವುದು. ಶ್ರೀರಾಮನು ಸಾಗರದ ದಕ್ಷಿಣತೀರದಲ್ಲಿ ತಂಗಿರುವನು. ಸೇನೆಯು ಸ್ವಲ್ಪ ದಾಟಿದೆ; ಸ್ವಲ್ಪ ದಾಟುತ್ತಿದೆ. ಆ ಸೇನೆಗೆ ತುದಿ ಮೊದಲೇ ಗೊತ್ತಾಗದಿದೆ. ಮಹಾ ಬಲಪರಾಕ್ರಮಶಾಲಿಗಳಾದ ಆ ವಾನರರು ಮಹಾ ಸಂತೋಷದಿಂದ ಈಗಲೇ ಯುದ್ಧಮಾಡಲಪೇಕ್ಷಿಸುತ್ತಿರುವರು. ಆದುದರಿಂದ ಅವರೊಡನೆ ವಿರೋಧ ಕಟ್ಟಿಕೊಳ್ಳುವುದು ಯುಕ್ತವಾಗಿ ತೋರುವುದಿಲ್ಲವು. ಇನ್ನು ನೀನು ಶಾಂತವನ್ನವಲಂಬಿಸುವವನಾಗು. ದಶರಥರಾಜ ಕುಮಾರನಾದ ಶ್ರೀರಾಮನಿಗೆ ಸೀತಾದೇವಿಯನ್ನೊಪ್ಪಿಸಿಬಿಡು" ಎಂದು ಹೇಳಿದರು. || ೩೨–೩೪ ||

ಇಂತಿದು ರಾವಣಕೃತ ಶುಕಸಾರಣಪ್ರೇಷಣ—ಶುಕಸಾರಣರ ವಾನರಸೇನಾಪ್ರವೇಶ-
ವಿಭೀಷಣಕೃತ ಶುಕಸಾರಣಬಂಧನ—ಶ್ರೀರಾಮಕೃತ ತದ್ವಿಮೋಚನ—
ಶುಕಸಾರಣರ ಲಂಕಾಗಮನಪೂರ್ವಕ ರಾವಣದರ್ಶನ ವೃತ್ತಾಂತ
ನಿರೂಪಣವೆಂಬ ಇಪ್ಪತ್ತೈದನೆಯ ಸರ್ಗವು ಸಮಾಪ್ತವಾದದು.



# ಯುದ್ಧಕಾಂಡೇ ಷಡ್ವಿಂಶಸ್ಸರ್ಗಃ

**ತದ್ವಚಃ ಪಥ್ಯಮಕ್ಲೀಬಂ ಸಾರಣೇನಾಭಿಭಾಷಿತಂ । ನಿಶಮ್ಯ ರಾವಣೋ ರಾಜಾ ಪ್ರತ್ಯಭಾಷತ ಸಾರಣಂ ॥ ೧ ॥ "ಯದಿ ಮಾಂ ¶ ಪ್ರತಿಯುಧ್ಯೇರನ್ ದೇವ ಗಂಧರ್ವದಾನವಾಃ । ನೈವ ಸೀತಾಂ ಪ್ರದಾಸ್ಯಾಮಿ ಸರ್ವಲೋಕಭಯಾದಪಿ ॥ ೨ ॥ ತ್ವಂತು ಸೌಮ್ಯ ! ಪರಿತ್ರಸ್ತೋ ಹರಿಭಿ ‡ ರ್ನಿರ್ಜಿತೋ ಭೃಶಂ । ಪ್ರತಿಪ್ರದಾನ ಮದ್ಯೈವ ಸೀತಾಯಾಸ್ಸಾಧುಮನ್ಯಸೇ ॥ ೩ ॥ ಕೋಹಿ ನಾಮ ಸಪತ್ನೋ ಮಾಂ**

---

ರಾಜಾ - ಒಡೆಯನಾದ, ರಾವಣಃ - ರಾವಣನು, ಪಥ್ಯಂ - ಹಿತವಾಗಿ, ಅಕ್ಲೀಬಂ - ಭಯರಹಿತವಾಗಿ, ಸಾರಣೇನ - ಸಾರಣನಿಂದ, ಅಭಿಭಾಷಿತಂ - ಹೇಳಲ್ಪಟ್ಟ, ತದ್ವಚಃ - ಆ ಮಾತನ್ನು, ನಿಶಮ್ಯ - ಕೇಳಿ, ಸಾರಣಂಪ್ರತಿ - ಸಾರಣನನ್ನು ಕುರಿತು, ಅಭಾಷತ-ಹೇಳಿದನು. ॥೧॥ ದೇವ......ವಾಃ- ದೇವತೆಗಳೂ, ಗಂಧರ್ವರೂ, ದಾನವರೂ, ಮಾಂಪ್ರತಿ - ನನ್ನನ್ನು ಕುರಿತು, ಯುಧ್ಯೇರನ್ಯದಿ - ಯುದ್ಧಮಾಡುವವರಾದರೂ, ಸರ್ವ.....ಪಿ - ಸಮಸ್ತ ಲೋಕದ ದೆಶೆಯಿಂದುಂಟಾದ ಭಯದಿಂದಲೂ, ಸೀತಾಂ - ಸೀತಾದೇವಿಯನ್ನು, ನೈವಪ್ರದಾಸ್ಯಾಮಿ - ಕೊಡುವದೇ ಇಲ್ಲವು. ॥ ೨ ॥ ಹೇ ಸೌಮ್ಯ - ಎಲೈ ಕೋಪರಹಿತನೇ, ತ್ವಂತು - ನೀನಾದರೆ, ಪರಿತ್ರಸ್ತಃ - ಹೆದರಿರುವೆ, ಹರಿಭಿಃ - ವಾನರರಿಂದ, ಭೃಶಂ - ಬಹಳವಾಗಿ, ನಿರ್ಜಿತಃ - ಜಯಿಸಲ್ಪಟ್ಟವನಾದೆ, ಅದ್ಯೈವ - ಈಗಲೇ, ಸೀತಾಯಾಃ - ಸೀತಾದೇವಿಯ, ಪ್ರತಿಪ್ರದಾನಂ - ಪ್ರತ್ಯರ್ಪಣವನ್ನು, ಸಾಧು - ಚನ್ನಾಗಿರುವುದೆಂದು, ಮನ್ಯಸೇ - ತಿಳಿಯುವೆ, ಸಪತ್ನಃ - ಶತ್ರುವಾದವನು, ಕೋಹಿನಾಮ - ಯಾವನುತಾನೆ, ಸಮರೇ - ಕಾಳಗದಲ್ಲಿ, ಮಾಂ - ನನ್ನನ್ನು, ಜೇತುಂ - ಜಯಿಸುವದಕ್ಕೆ, ಅರ್ಹತಿ - ಯೋಗ್ಯನಾದಾನು. ॥ ೩ ॥ ಶ್ರೀಮಾನ್ - ಗರ್ವಾತಿಶಯವುಳ್ಳ, ರಾಕ್ಷಸಾಧಿಪಃ - ಅಸುರರೊಡೆಯನಾದ, ರಾವಣಃ - ಶತ್ರುಗಳನ್ನು ದೀನಧ್ವನಿಯುಳ್ಳವರನ್ನಾಗಿ ಮಾಡುವ, ರಾವಣಃ - ರಾವಣನು, ಇತಿ - ಈ ಪ್ರಕಾರವಾಗಿ, ಪರುಷಂ - ಕಠಿಣ

---

ಆ ಬಳಿಕ ರಾಕ್ಷಸೇಶ್ವರನಾದ ರಾವಣಾಸುರನು ಸಾರಣನು ನಿರ್ಭಯವಾಗಿ ಹೇಳಿದ ಹಿತವಾಕ್ಯಗಳನ್ನು ಕೇಳಿ ಅವನನ್ನು ಕುರಿತು, "ಎಲೈ ಸಾರಣನೇ! ದೇವತೆಗಳು, ಗಂಧರ್ವರು, ದಾನವರು ಎಲ್ಲರೂ ಒಟ್ಟಾಗಿ ಸೇರಿ ಯುದ್ಧಕ್ಕೆ ಬಂದರೂ, ಸಮಸ್ತ ಲೋಕಗಳೂ ಭಯಗೊಳಿಸಿದರೂ ನಾನು ಸೀತೆಯನ್ನು ಎಷ್ಟುಮಾತ್ರವೂ ಕೊಡೆನು. ನೀನು ಶೂರನಲ್ಲ; ನೀನು ವಾನರರಿಂದ ಚೆನ್ನಾಗಿ ಹೊಡೆತಗಳನ್ನು ತಿಂದಿರುವೆಯಾದುದರಿಂದ ಬಹಳವಾಗಿ ಭಯಗೊಂಡಿದ್ದೀಯೆ. ಅವರಿಗೆ ಸೋತು ಈ ರೀತಿ ನುಡಿಯುತ್ತಿರುವೆ. ಆದುದರಿಂದಲೇ ಸೀತೆಯನ್ನು ಕೊಟ್ಟುಬಿಡೆಂದೂ ಹೇಳುತ್ತಿರುವೆ. ಶತ್ರುವಾದವನಾವನೂ ಯುದ್ಧದಲ್ಲಿ ನನ್ನನ್ನು ಗೆಲ್ಲಲಾರನು" ಎಂದು ಹೇಳಿದನು. ॥೧-೩॥ ಆ ರಾವಣನು ಸಾರಣನೊಡನೆ ಈ ರೀತಿ ನುಡಿದು ಆಮೇಲೆ ವಾನರಸೇನೆಯೆಲ್ಲವನ್ನೂ ನೋಡಲಪೇಕ್ಷಿಸಿದವನಾಗಿ ಅನೇಕ ತಾಲಪ್ರಮಾಣಗಳ

---

¶ "ಸತ್ಯ" ತಿ. ಪಾ. ‡ "ಪೀಡಿತೋ" ಮ. ತಿ. ಪಾ.

ಸಮರೇ ಜೇತುಮರ್ಹತಿ ? ” | ಇತ್ಯುಕ್ತ್ವಾ ಪರುಷಂ ವಾಕ್ಯಂ ರಾವಣೋ ರಾಕ್ಷಸಾಧಿಪಃ || ೪ || ಆರುರೋಹ ತತಃ ಶ್ರೀಮಾನ್ ಪ್ರಾಸಾದಂ ಹಿಮಪಾಂಡರಂ | ಬಹುತಾಲಸಮುತ್ಸೇಧಂ ರಾವಣೋಽಥದಿದೃಕ್ಷಯಾ ||೫|| ತಾಭ್ಯಾಂ ಚರಾಭ್ಯಾಂ ಸಹಿತೋ ರಾವಣಃ ಕ್ರೋಧಮೂರ್ಛಿತಃ | ಪಶ್ಯಮಾನಸ್ಸಮುದ್ರಂಚ ಪರ್ವತಾಂಶ್ಚ ವನಾನಿಚ | ದದರ್ಶ ಪೃಥಿವೀದೇಶಂ ಸುಸಂಪೂರ್ಣಂ ಪ್ಲವಂಗಮೈಃ || ೬ || ‡ ತದಪಾರ ಮಸಂಖ್ಯೇಯಂ ವಾನರಾಣಾಂ ಮಹದ್ಬಲಂ | ಆಲೋಕ್ಯ ರಾವಣೋ ರಾಜಾ ಪರಿಪಪ್ರಚ್ಛ ಸಾರಣಂ ||೭|| ಏಷಾಂ § ವಾನರಮುಖ್ಯಾನಾಂ ಕೇ ಶೂರಾಃ ಕೇ ಮಹಾಬಲಾಃ ? | ಕೇ ಪೂರ್ವಮಭಿವರ್ತಂತೇ ಮಹೋತ್ಸಾಹಾಸ್ಸಮಂತತಃ? ||೮|| ಕೇಷಾಂ ಶೃಣೋತಿ

---

ವಾದ, ವಾಕ್ಯಂ - ಮಾತನ್ನು, ಉಕ್ತ್ವಾ - ಹೇಳಿ, ಅಥ - ಅನಂತರದಲ್ಲಿ, ದಿದೃಕ್ಷಯಾ - ವಾನರ ಬಲವನ್ನು ನೋಡಲಿಚ್ಛೆಯಿಂದ, ತತಃ - ಆ ಪ್ರದೇಶದಿಂದ, ಹಿಮಪಾಂಡರಂ - ಹಿಮವತ್ಪರ್ವತದಂತೆ ಬೆಳ್ಳಗಿರುವ, ಬಹು.....ಧಂ-ಅನೇಕ ತಾಲವೃಕ್ಷಗಳ ಔನ್ನತ್ಯವುಳ್ಳ, ಪ್ರಾಸಾದಂ ಏಳಂತಸ್ತುಗಳುಳ್ಳ ಉಪ್ಪರಿಗೆಯನ್ನು, ಆರುರೋಹ - ಏರಿದನು. ||೪-೫|| ತಾಭ್ಯಾಂಚರಾಭ್ಯಾಂ - ಆ ಚಾರರಿಂದ, ಸಹಿತಃ-ಕೂಡಿರುವ, ರಾವಣಃ - ರಾವಣನು, ಕ್ರೋಧಮೂರ್ಛಿತಃ - ಕೋಪದಿಂದ ಕೆರಳಿ, ಸಮುದ್ರಂಚ - ಸಮುದ್ರವನ್ನೂ, ಪರ್ವತಾಂಶ್ಚ - ಪರ್ವತಗಳನ್ನೂ, ವನಾನಿಚ - ಕಾಡುಗಳನ್ನೂ, ಪಶ್ಯಮಾನಃ - ನೋಡುವವನಾಗಿ, ಪ್ಲವಂಗಮೈಃ - ವಾನರರಿಂದ, ಸುಸಂಪೂರ್ಣಂ - ತುಂಬಿರುವ, ಪೃಥಿವೀದೇಶಂ-ತ್ರಿಕೂಟಪರ್ವತದ ತಪ್ಪಲುಭೂಮಿಯನ್ನು, ದದರ್ಶ - ಕಂಡನು. || ೬ || ರಾಜಾ - ಅರಸಾದ, ರಾವಣಃ - ರಾವಣನು, ಅಪಾರಂ - ಅವಧಿಯಿಲ್ಲದಿರುವ, ಅಸಂಖ್ಯೇಯಂ - ಎಣಿಸಲಸಾಧ್ಯವಾದ, ವಾನರಾಣಾಂ - ಕಪಿಗಳ, ತನ್ಮಹದ್ಬಲಂ - ಆ ಮಹಾ ಸೈನ್ಯವನ್ನು, ಆಲೋಕ್ಯ - ನೋಡಿ, ಸಾರಣಂ - ಸಾರಣನನ್ನು, ಪರಿಪಪ್ರಚ್ಛ - ಕೇಳಿದನು. || ೭ || ಹೇ ಸಾರಣ - ಎಲೈ ಸಾರಣನೇ, ಏಷಾಂವಾನರಮುಖ್ಯಾನಾಂ - ಈ ಕಪಿಮುಖ್ಯರಲ್ಲಿ, ಕೇಶೂರಾಃ - ಯಾರು ವೀರರು, ಕೇಮಹಾಬಲಾಃ - ಯಾರು ಬಹು ಬಲವಂತರು, ಕೇ - ಯಾರು, ಪೂರ್ವಮಭಿವರ್ತಂತೇ - ಸೇನಾಮುಖದಲ್ಲಿ ನಿಲ್ಲುವವರು, ಸಮಂತತಃ - ಎಲ್ಲಾ ಕಡೆಗಳಲ್ಲಿಯೂ, ಮಹೋತ್ಸಾಹಾಃ - ಮಹಾ ಉತ್ಸಾಹವುಳ್ಳವರು, ಕೇ-ಯಾರು, ಸುಗ್ರೀವಃ-ಸುಗ್ರೀವನು, ಕೇಷಾಂ-ಯಾರ ಮಾತನ್ನು, ಶೃಣೋತಿ-ಕೇಳುತ್ತಾರೆ,

---

ಔನ್ನತ್ಯವುಳ್ಳದಾಗಿಯೂ, ಶುಭ್ರವಾಗಿ ಬೆಳಗುತ್ತಿರುವುದಾಗಿಯೂ ಇರುವ ತನ್ನ ಅರಮನೆಯ ಉಪ್ಪರಿಗೆಯನ್ನು ಶುಕಸಾರಣರೊಡನೆ ಹತ್ತಿ ನಿಂತು ಮಹಾ ಕೋಪೋದ್ದೀಪಿತನಾಗಿ ಸಮುದ್ರವೂ, ಪರ್ವತಗಳೂ, ವನೋಪವನಗಳೂ, ವಾನರಸೇನೆಯಿಂದ ತುಂಬಿರುವುದನ್ನು ನೋಡಿದನು. ಆದ್ಯಂತಗಳಿಲ್ಲದ್ದೂ, ಲೆಕ್ಕಿಸಲಾಗದ್ದೂ, ಅಪಾರವಾದುದೂ ಆದ ಆ ವಾನರಸೇನೆಯನ್ನು ನೋಡಿ ಬೆರಗಾದ ಆ ರಾವಣನು ಸಾರಣನನ್ನು ಕುರಿತು, “ ಎಲೈ ಸಾರಣನೇ ! ಈ ವಾನರಶ್ರೇಷ್ಠರಲ್ಲಿ ಶೂರರಾದವರು ಯಾರು ? ಮಹಾ ಬಲಾಢ್ಯರಾದವರು ಯಾರು ? ಅಧಿಕೋತ್ಸಾಹದಿಂದ ಹಿಂತಿರುಗದೆ ಯುದ್ಧಮಾಡುವವರು ಯಾರು ? ಸುಗ್ರೀವನು ಯಾರ ಮಾತುಗಳನ್ನು ಕೇಳುತ್ತಾನೆ? ಅಗ್ರಸೇನಾನಾಯಕನಾರು ? ಸಾರಣಾ ! ಈ ಸೇನೆ

---

‡ “ ಅಸಹ್ಯಂಚ ” ತಿ. ಪಾ. § “ ಕೇ ವಾನರಾ ಮುಖ್ಯಾಃ ” ತಿ ಪಾ.

ಸುಗ್ರೀವಃ ಕೇವಾ ಯೂಥಪಯೂಥಪಾಃ ? । ಸಾರಣಾಽಚಕ್ಷ್ವ * ತತ್ತ್ವೇನ ಕೇ ಪ್ರಧಾನಾಃ ಪ್ಲವಂಗಮಾಃ ? " ॥ ೯ ॥ ಸಾರಣೋ ರಾಕ್ಷಸೇಂದ್ರಸ್ಯ ವಚನಂ ಪರಿಪೃಚ್ಛತಃ । ಆಚಚಕ್ಷೇಽಥ ಮುಖ್ಯಜ್ಞೋ ಮುಖ್ಯಾಂಸ್ತಾಂಸ್ತು ವನೌಕಸಃ । " ಏಷ ಯೋಽಭಿಮುಖೋ ಲಂಕಾಂ ನರ್ದಂಸ್ತಿಷ್ಠತಿ ವಾನರಃ ॥೧೦-೧೧॥ ಯೂಥಪಾನಾಂ ಸಹಸ್ರೇಣ ಶತೇನ ಪರಿವಾರಿತಃ । ಯಸ್ಯ ಘೋಷೇಣ ಮಹತಾ ಸಪ್ರಾಕಾರಾ ಸತೋರಣಾ ॥ ೧೨ ॥ ಲಂಕಾ ಪ್ರವೇಪತೇ ಸರ್ವಾ ಸಶೈಲವನಕಾನನಾ । ಸರ್ವಶಾಖಾಮೃಗೇಂದ್ರಸ್ಯ ಸುಗ್ರೀವಸ್ಯ ಮಹಾತ್ಮನಃ ॥ ೧೩ ॥ ಬಲಾಗ್ರೇ ತಿಷ್ಠತೇ ವೀರೋ

---

ಯೂಥ.....ಪಾಃ - ಮುಖ್ಯ ಸೇನಾಧಿಪತಿಗಳು, ಕೇವಾ - ಯಾರೋ, ಕೇಪ್ಲವಂಗಮಾಃ - ಯಾವ ವಾನರರು, ಪ್ರಧಾನಾಃ - ಸೇನಾಪತಿಗಳೋ, ತತ್ತ್ವೇನ - ಯಥಾರ್ಥದಿಂದ, ಆಚಕ್ಷ್ವ - ಹೇಳು. ॥ ೮-೯ ॥ ಪರಿಪೃಚ್ಛತಃ - ಕೇಳುತ್ತಿರುವ, ರಾಕ್ಷಸೇಂದ್ರಸ್ಯ - ರಾವಣನ, ವಚನಂ - ಮಾತನ್ನು, (ಶ್ರುತ್ವಾ - ಕೇಳಿ), ಮುಖ್ಯಜ್ಞಃ - ಮುಖ್ಯರನ್ನು ತಿಳಿದಿರುವ, ಸಾರಣಃ - ಸಾರಣನು, ಅಥ - ಬಳಿಕ, ಮುಖ್ಯಾನ್ - ಮುಖಂಡರಾದ, ತಾನ್ವನೌಕಸಸ್ತು - ಆ ವಾನರರನ್ನಾದರೆ, ಆಚಚಕ್ಷೇ - ಹೇಳಿದನು. ॥೧೦॥ ಯಏಷವಾನರಃ - ಯಾವ ಈ ವಾನರನು, ಲಂಕಾಂ - ಲಂಕಾಪಟ್ಟಣಕ್ಕೆ, ಅಭಿಮುಖಃ - ಎದುರಾಗಿ, ನರ್ದ - ಕೂಗುತ್ತ, ಯೂಥಪಾನಾಂ - ಯೂಥಪತಿಗಳ, ಶತೇನಸಹಸ್ರೇಣ - ಲಕ್ಷದಿಂದ, ಪರಿವೃತಃ - ಸುತ್ತುವರೆದವನಾಗಿ, ತಿಷ್ಠತಿ - ನಿಂತಿದ್ದಾನೆಯೋ, ಯಸ್ಯ - ಯಾವನ, ಮಹತಾ - ಮಹತ್ತರವಾದ, ಘೋಷೇಣ - ಶಬ್ದದಿಂದ, ಸಪ್ರಾಕಾರಾ - ಕೋಟೆಯಿಂದ ಕೂಡಿದ, ಸತೋರಣಾ - ಹೊರಬಾಗಿಲುಗಳಿಂದ ಕೂಡಿರುವ, ಸರ್ವಾ - ಸಮಸ್ತವಾದ, ಸಶೈ....ನಾ - ಪರ್ವತಗಳಿಂದಲೂ, ತೋಪುಗಳಿಂದಲೂ, ಕಾಡುಗಳಿಂದಲೂ ಕೂಡಿದ, ಲಂಕಾಂ - ಲಂಕಾಪಟ್ಟಣವು, ಪ್ರವೇಪತೇ - ಕಂಪಿಸುತ್ತಿರುವುದೂ, ಸರ್ವ......ಸ್ಯ - ಸಮಸ್ತ ವಾನರರಿಗೆ ಅಧಿಪತಿಯಾದ, ಮಹಾತ್ಮನಃ - ಮಹಾ ಧೈರ್ಯವಂತನಾದ, ಸುಗ್ರೀವಸ್ಯ - ಸುಗ್ರೀವನ, ಬಲಾಗ್ರೇ - ಸೇನೆಯ ಮುಂಭಾಗದಲ್ಲಿ, ತಿಷ್ಠತೇ - ನಿಲ್ಲುತ್ತಾನೋ, ವೀರಃ - ಶೂರನಾದ, ಏಷಃ - ಇವನು, ನೀಲೋನಾಮ - ನೀಲನೆಂದು ಪ್ರಸಿದ್ಧನಾದ,

---

ಯಲ್ಲಿ ಉತ್ತಮವಾನರವೀರರಾರು ? ಈ ವಿಷಯಗಳೆಲ್ಲವನ್ನೂ ಯಥಾರ್ಥವಾಗಿ ನನಗೆ ತಿಳಿಯಹೇಳು " ಎಂದು ಕೇಳಿದನು. ॥ ೪-೯ ॥ ಆಗ ವಾನರರೆಲ್ಲರನ್ನೂ ನೋಡಿಕೊಂಡು ಬಂದಿದ್ದ ಸಾರಣನು ತನ್ನ ಪ್ರಭುವಾದ ರಾವಣನಿಗೆ ಅವರಲ್ಲಿ ಮುಖ್ಯರಾದ ವಾನರವೀರರ ವಿಚಾರವನ್ನು ಮಾತ್ರ ಹೀಗೆ ಹೇಳಲುಪಕ್ರಮಿಸಿದನು. "ಪ್ರಭುವೇ ! ಯಾವಾತನು ಅನೇಕ ಸಾವಿರ ವಾನರಯೂಥಪತಿಗಳೊಡಗೂಡಿ, ಲಂಕಾನಗರಕ್ಕಭಿಮುಖವಾಗಿ ಸಿಂಹನಾದವನ್ನು ಮಾಡುತ್ತಿರುವನೋ, ಯಾವನ ಆ ಸಿಂಹನಾದದಿಂದ ಪ್ರಾಕಾರಗಳಿಂದಲೂ, ಬಹಿದ್ವಾರಗಳಿಂದಲೂ, ವನೋಪವನಗಳಿಂದಲೂ ಕೂಡಿದ ಲಂಕಾನಗರವೆಲ್ಲವೂ ಗಡಗಡನೆ ನಡುಗುತ್ತಿರುವುದೋ, ಆತನೇ, ಸಮಸ್ತ ವಾನರರಿಗೂ ಪ್ರಭುವೂ, ಮಹಾ ಬಲಾಢ್ಯನೂ ಆದ ಸುಗ್ರೀವನ ಸೇನಾಗ್ರಭಾಗದಲ್ಲಿ ನಿಲ್ಲುವ ಮಹಾ ಪರಾಕ್ರಮಶಾಲಿಯಾದ ನೀಲನೆಂಬ ವಾನರನು. ಈತನೇ ಅಗ್ರಸೇನಾನಾಯಕನು. ॥ ೧೦-೧೩ ॥ ದೊರೆಯೇ ! ಯಾವನು ಚರಣಗಳನ್ನು

---

* " ಮೇ ಸರ್ವಂ ಕಿಂ ಪ್ರಭಾವಾಃ " ತಿ. ರಾ. ಪಾ.

ನೀಲೋ ನಾಮ್ನೈಷ ಯೂಥಪಃ । ಬಾಹೂ ಪ್ರಗೃಹ್ಯ ಯಃ ಪದ್ಭ್ಯಾಂ ಮಹೀಂ ಗಚ್ಛತಿ
ವೀರ್ಯವಾನ್ ॥ ೧೪ ॥ ಲಂಕಾಮಭಿಮುಖಂ ಕ್ರೋಧಾದಭೀಕ್ಷ್ಣಂಚ ವಿಜೃಂಭತೇ ।
ಗಿರಿಶೃಂಗಪ್ರತೀಕಾಶಃ ಪದ್ಮಕಿಂಜಲ್ಕಸನ್ನಿಭಃ ॥ ೧೫ ॥ ಸ್ಫೋಟಯತ್ಯಭಿಸಂರಬ್ಧೋ
ಲಾಂಗೂಲಂಚ ಪುನಃಪುನಃ । ಯಸ್ಯ ಲಾಂಗೂಲಶಬ್ದೇನ ಸ್ವನಂತಿ ಪ್ರದಿಶೋ ದಶ
॥ ೧೬ ॥ ಏಷ ವಾನರರಾಜೇನ ಸುಗ್ರೀವೇಣಾಭಿಷೇಚಿತಃ । ಯೌವರಾಜ್ಯೇಽಂಗದೋ
ನಾಮ ತ್ವಾಮಾಹ್ವಯತಿ ಸಂಯುಗೇ ॥ ೧೭ ॥ ವಾಲಿನಸ್ಸದೃಶಃ ಪುತ್ರಸ್ಸುಗ್ರೀವಸ್ಯ
ಸದಾ ಪ್ರಿಯಃ । ರಾಘವಾರ್ಥೇ ಪರಾಕ್ರಾಂತಃ ಶಕ್ರಾರ್ಥೇ ವರುಣೋ ಯಥಾ ॥೧೮॥

---

ಯೂಥಪಃ - ಸೇನಾಧಿಪತಿಯು. ॥೧೨-೧೩॥ ವೀರ್ಯವಾನ್ - ಸಾಮರ್ಥ್ಯವಂತನಾದ, ಯಃ - ಯಾವ ವಾನರನು, ಪದ್ಭ್ಯಾಂ - ಕಾಲುಗಳಿಂದ, ಬಾಹೂ - ಭುಜಗಳನ್ನು, ಪರಿಗೃಹ್ಯ - ಹಿಡಿದು, ಮಹೀಂ - ಭೂಮಿಯಲ್ಲಿ, ಗಚ್ಛತಿ - ಹೋಗುತ್ತಾನೆಯೋ, ಕ್ರೋಧಾತ್ - ಕೋಪದಿಂದ, ಲಂಕಾಂ - ಲಂಕಾ ಪಟ್ಟಣವನ್ನು ಕುರಿತು, ಅಭಿಮುಖಂ - ಎದುರಾಗಿ, ಅಭೀಕ್ಷ್ಣಂ - ಬಹಳವಾಗಿ, ವಿಜೃಂಭತೇ - ಆಕಳಿಸುತ್ತಾನೋ. ॥ ೧೪ ॥ ಗಿರಿ.....ಶಃ - ಬೆಟ್ಟದ ಶಿಖರಕ್ಕೆ ಸಮಾನವಾದ, ಪದ್ಮ....ಭಃ - ಕಮಲ ಕೇಸರಗಳ ಕಾಂತಿಯುಳ್ಳ, ಯಃ - ಯಾವನು, ಅಭಿಸಂರಬ್ಧಃ - ಕೋಪವುಳ್ಳವನಾಗಿ, ಲಾಂಗೂಲಂಚ - ಬಾಲವನ್ನು, ಪುನಃಪುನಃ - ಬಾರಿಬಾರಿಗೂ, ಸ್ಫೋಟಯತಿ - ಹೊಡೆಯುವನೊ, ಯಸ್ಯ - ಯಾವ ವಾನರನ, ಲಾಂಗೂಲಶಬ್ದೇನ - ಬಾಲದ ಧ್ವನಿಯಿಂದ, ದಶಪ್ರದಿಶಃ - ಹತ್ತುದಿಕ್ಕುಗಳೂ, ಸ್ವನಂತಿ - ಧ್ವನಿಗೊಳ್ಳುತ್ತಿವೆಯೋ, ವಾನರರಾಜೇನ - ಕಪಿರಾಜನಾದ, ಸುಗ್ರೀವೇಣ - ಸುಗ್ರೀವ ನಿಂದ, ಯೌವರಾಜ್ಯೇ - ಯೌವರಾಜ್ಯದಲ್ಲಿ, ಅಭಿಷೇಚಿತಃ - ಪಟ್ಟಾಭಿಷೇಕ ಮಾಡಲ್ಪಟ್ಟ, ಅಂಗದೋ ನಾಮ - ಅಂಗದನೆಂದು ಪ್ರಖ್ಯಾತನಾದ, ಏಷಃ - ಈ ವಾನರನು, ತ್ವಾಂ - ನಿನ್ನನ್ನು, ಸಂಯುಗೇ - ಕಾಳೆಗದಲ್ಲಿ, ಆಹ್ವಯತಿ - ಕರೆಯುತ್ತಾನೆ, ವಾಲಿನಃ - ವಾಲಿಗೆ, ಸದೃಶಃ - ಸಮಾನನಾದ, ಪುತ್ರಃ - ಕುವರನು, ಸುಗ್ರೀವಸ್ಯ - ಸುಗ್ರೀವನಿಗೆ, ಸದಾ - ನಿರಂತರವೂ, ಪ್ರಿಯಃ - ಇಷ್ಟವನ್ನು, ಶಕ್ರಾರ್ಥೇ- ದೇವೇಂದ್ರನ ನಿಮಿತ್ತವಾಗಿ, ವರುಣೋಯಥಾ - ವರುಣನ ಹಾಗೆ, ರಾಘವಾರ್ಥೇ - ಶ್ರೀರಾಮನಿ ಗೋಸುಗ, ಪರಾಕ್ರಾಂತಃ - ಪರಾಕ್ರಮಿಸಲುದ್ಯುಕ್ತನಾಗಿದ್ದಾನೆ. ॥ ೧೫-೧೮ ॥ ರಾಘವಸ್ಯ - ಶ್ರೀರಾಮನಿಗೆ, ಹಿತೈಷಿಣಾ - ಹಿತಕಾಂಕ್ಷಿಯಾದ, ವೇಗವತಾ - ವೇಗವಂತನಾದ, ಹನೂಮತಾ -

---

ಭೂಮಿಯಮೇಲೂರಿ ಕೈಗಳನ್ನು ಮೇಲಕ್ಕೆತ್ತಿ ಮಹಾ ಕೋಪದಿಂದ ಲಂಕೆಗೆದುರಾಗಿ ನಿಂತು ವಿಜೃಂಭಿಸುತ್ತಿರುವನೋ ಯಾವನು ಪರ್ವತಶಿಖರಕ್ಕೆ ಸಮಾನವಾದ ಆಕಾರವುಳ್ಳವನೂ, ಪದ್ಮಕಿಂಜಲ್ಕಗಳಿಗೆ ಸಮಾನವಾದ ದೇಹಚ್ಛಾಯೆಯುಳ್ಳವನೂ ಆಗಿರುವನೋ, ಯಾವನು ಮಹಾ ಕುಪಿತನಾಗಿ ತನ್ನ ವಾಲವನ್ನು ಅಡಿಗಡಿಗೂ ನೆಲಕ್ಕೆ ಅಪ್ಪಳಿಸಿ ಹೊಡೆಯುತ್ತಿರುವನೋ ಯಾವನ ಆ ವಾಲಾಘಾತದಿಂದ ದಶದಿಶೆಗಳೂ ಪ್ರತಿಧ್ವನಿತವಾಗುತ್ತಿರುವುವೋ ಆ ವಾನರನೇ ಅಂಗದನೆಂದು ಹೆಸರುಳ್ಳವನು. ಆತನು ವಾನರಪ್ರಭುವಾದ ಸುಗ್ರೀವನಿಂದ ಯೌವರಾಜ್ಯದಲ್ಲಿ ಅಭಿಷಿಕ್ತನಾಗಿರುವನು. ಆತನು ನಿನ್ನನ್ನು ಯುದ್ಧಕ್ಕೆ ಕರೆಯುತ್ತಿರುವನು. ವಾಲಿಯ ಕುಮಾರನಿವನು; ಆತನಿಗೆ ಸಮಾನವಾದ ಪರಾಕ್ರಮವುಳ್ಳವನು; ಸುಗ್ರೀವ ರಾಜನಿಗೆ ಬಹಳ ಇಷ್ಟನೂ ಆಗಿರುವನು. ದೇವೇಂದ್ರನಿಗೋಸುಗ ವರುಣನೆಂತೋ ಅಂತು ಈತನು ಶ್ರೀರಾಮನಿಗೋಸುಗ ಮಹಾ ಪರಾಕ್ರಮವನ್ನವಲಂಬಿಸಿರುವನು. ಶ್ರೀರಾಮನಿಗೆ

ಏತಸ್ಯ ಸಾ ಮತಿಸ್ಸರ್ವಾ ಯದ್ದೃಷ್ಟಾ ಜನಕಾತ್ಮಜಾ । ಹನೂಮತಾ ವೇಗವತಾ ರಾಘವಸ್ಯ ಹಿತೈಷಿಣಾ ॥ ೧೯ ॥ ಬಹೂನಿ ವಾನರೇಂದ್ರಾಣಾಮೇಷ ಯೂಥಾನಿ ವೀರ್ಯವಾನ್ । ಪರಿಗೃಹ್ಯಾಭಿಯಾತಿ ತ್ವಾಂ ಸ್ವೇನಾನೀಕೇನ ದುರ್ಜಯಃ ॥ ೨೦ ॥ ಅನುವಾಲಿಸುತಸ್ಯಾಪಿ ಬಲೇನ ಮಹತಾ ವೃತಃ । ವೀರಸ್ತಿಷ್ಠತಿ ಸಂಗ್ರಾಮೇ ಸೇತುಹೇತುರಯಂ ನಲಃ ॥೨೧॥ ಯೇತು ವಿಷ್ಟಭ್ಯ ಗಾತ್ರಾಣಿ ಕ್ಷ್ವೇಳಯಂತಿ ನದಂತಿಚ । ¶ ಉತ್ಥಾಯಚ ವಿಜೃಂಭಂತೇ ಕ್ರೋಧೇನ ಹರಿಪುಂಗವಾಃ ॥ ೨೨ ॥ ಏತೇ ದುಷ್ಪ್ರಸಹಾ ಘೋರಾಶ್ಚಂಡಾಶ್ಚಂಡಪರಾಕ್ರಮಾಃ । ಅಷ್ಟೌ ಶತಸಹಸ್ರಾಣಿ ದಶಕೋಟಿ

ಆಂಜನೇಯನಿಂದ, ಜನಕಾತ್ಮಜಾ - ಸೀತಾದೇವಿಯು, ದೃಷ್ಟೇತಿಯತ್ - ನೋಡಲ್ಪಟ್ಟಳೆಂಬುದು ಯಾವುದೋ, ಸರ್ವಾ - ಸಮಸ್ತವಾದ, ಸಾಮತಿಃ - ಆ ಬುದ್ಧಿಯು, ಏತಸ್ಯ - ಈ ಅಂಗದನ ಮೂಲಕವಾದದ್ದು. ॥ ೧೯ ॥ ವೀರ್ಯವಾನ್ - ಸಾಮರ್ಥ್ಯವಂತನಾದ, ಏಷಃ - ಇವನು, ವಾನರೇಂದ್ರಾಣಾಂ - ಶ್ರೇಷ್ಠರಾದ ಕಪಿಗಳ, ಬಹೂನಿ - ಅನೇಕಗಳಾದ, ಯೂಥಾನಿ - ಗುಂಪುಗಳನ್ನು, ಪರಿಗೃಹ್ಯ - ತೆಗದುಕೊಂಡು, ಸ್ವೇನ - ಸ್ವಕೀಯವಾದ, ಅನೀಕೇನ - ಆ ಸೈನ್ಯದಿಂದ, ದುರ್ಜಯಃ - ಜಯಿಸಲಸಾಧ್ಯನಾಗಿ, ತ್ವಾಂ-ನಿನ್ನನ್ನು ಕುರಿತು, ಅಭಿಯಾತಿ-ಬರುತ್ತಾನೆ. ॥ ೨೦ ॥ ವಾಲಿಸುತಸ್ಯ-ವಾಲಿಯ ಮಗನಾದ ಅಂಗದನಿಗೆ, ಅನು - ಹಿಂಭಾಗದಲ್ಲಿ, ಮಹಾಬಲೇನ - ದೊಡ್ಡ ಸೈನ್ಯದಿಂದ, ವೃತಃ - ಸುತ್ತುವರೆದು, ಸಂಗ್ರಾಮೇ - ಕಾಳಗದಲ್ಲಿ, ವೀರಃ - ಶೂರನಾದ, ಸೇತುಹೇತುಃ - ಸೇತುವಿಗೆ ಕಾರಣನಾದ, ಅಯಂ - ಈ ವಾನರನು, ನಲಃ - ನಲನು ॥ ೨೧ ॥ ಏಹರಿಪುಂಗವಾಃ - ಯಾವ ವಾನರೋತ್ತಮರು, ಗಾತ್ರಾಣಿ - ಶರೀರಗಳನ್ನು, ವಿಷ್ಟಭ್ಯ - ಎತ್ತಿಕೊಂಡು, ಕ್ಷ್ವೇಳಯಂತಿ - ಸಿಂಹನಾದ ಮಾಡುತ್ತಿರುವರೋ, ನದಂತಿಚ - ಕೂಗುತ್ತಿರುವರೋ, ಕ್ರೋಧೇನ - ಕೋಪದಿಂದ, ಉತ್ಥಾಯ-ಎದ್ದು, ವಿಜೃಂಭಂತೇ-ಶರೀರಗಳನ್ನು ಬೆಳಿಸುತ್ತಾರೋ, ಏತೇ-ಇವರು, ದುಷ್ಪ್ರಸಹಾಃ-ಸಹಿಸಲಸಾಧ್ಯರು, ಘೋರಾಃ - ಭಯಂಕರರು, ಚಂಡಾಃ - ಕ್ರೂರ ಮುಖವುಳ್ಳವರು, ಚಂಡ....ಮಾಃ-ಕ್ರೂರವಾದ ಪರಾಕ್ರಮವುಳ್ಳವರು, ಯೇಚ ಯಾರು, ದಶ....ಣಿ-ಸಾವಿರಕೋಟಿಗಳೂ, ಅಷ್ಟೌ......ಣಿ-

ಮೇಲ್ಮೆಯನ್ನು ಕೋರುವವನೂ, ಮಹಾ ವೇಗವುಳ್ಳವನೂ ಆದ ಆಂಜನೇಯನು ಲಂಕೆಗೆ ಬಂದು ಸೀತಾದೇವಿಯನ್ನು ಕಂಡುಹೋದುದೂ ಈ ಅಂಗದನ ಪ್ರೋತ್ಸಾಹದಿಂದಲೇ ನಡೆಯಿತು. ರಾಕ್ಷಸೇಂದ್ರಾ ! ಮಹಾ ಶೌರ್ಯವಂತನೂ, ಅಜೇಯನೂ ಆದ ಈ ಅಂಗದನು ವಾನರೋತ್ತಮರ ಸೇನೆಗಳನೇಕವನ್ನು ತೆಗೆದುಕೊಂಡು ನಿನ್ನಮೇಲೆ ಯುದ್ಧಕ್ಕೆ ಬರುತ್ತಿರುವನು. ॥ ೧೪-೨೦ ॥ ಈ ವಾಲಿಪುತ್ರನಾದ ಅಂಗದಕುಮಾರನ ಹಿಂದುಗಡೆ ಬಹಳ ದೊಡ್ಡ ಸೇನೆಯನ್ನು ತೆಗೆದುಕೊಂಡು ಯುದ್ಧಸನ್ನದ್ಧನಾಗಿ ಬರುತ್ತಿರುವಾತನೇ ನಲನು. ಆತನೇ ಸಮುದ್ರದಲ್ಲಿ ಸೇತುವೆಯನ್ನು ಕಟ್ಟಿದವನು. ಈತನು ಮಹಾ ಪರಾಕ್ರಮಶಾಲಿಯಾದವನು. ಇತ್ತನೋಡು ; ಯಾರು ತಮ್ಮ ದೇಹಗಳನ್ನು ಮುರಿದು ಸಿಂಹನಾದವನ್ನು ಮಾಡುತ್ತ ನಳನನ್ನು ಹಿಂಬಾಲಿಸಿ ಲಂಕೆಯಮೇಲೆ ಬರುತ್ತಿರುವರೋ ಅವರೇ ಮಹಾ ಶೌರ್ಯವಂತರೆನಿಸಿದ ಚಂದನ ವನನಿವಾಸಿಗಳಾದ ವೀರ ವಾನರರು. ಇವರ ಸಂಖ್ಯೆಯು ಎಂಟುಸಾವಿರ

¶ ಇಲ್ಲಿಂದ ಒಂದೂವರೆ ಶ್ಲೋಕವು ಗೋ. ಪಾಠದಲ್ಲಿ ಅಧಿಕ.

ಶತಾನಿಚ ‖ ೨೩ ‖ ಯ ಏನಮನುಗಚ್ಛಂತಿ ವೀರಾಶ್ಚಂದನವಾಸಿನಃ । ಏಷೈವಾಶಂಸತೇ ಲಂಕಾಂ ಸ್ವೇನಾನೀಕೇನ ಮರ್ದಿತುಂ ‖ ೨೪ ‖ ಶ್ವೇತೋ ರಜತಸಂಕಾಶಶ್ಚಪಲೋ ಭೀಮವಿಕ್ರಮಃ । ಬುದ್ಧಿಮಾನ್ ವಾನರೋ ವೀರ ಸ್ತ್ರಿಷು ಲೋಕೇಷು ವಿಶ್ರುತಃ ‖ ೨೫ ‖ ತೂರ್ಣಂ ಸುಗ್ರೀವಮಾಗಮ್ಯ ಪುನರ್ಗಚ್ಛತಿ ಸತ್ವರಃ । ವಿಭಜನ್ ವಾನರೀಂ ಸೇನಾಮನೀಕಾನಿ ಪ್ರಹರ್ಷಯನ್ ‖ ೨೬ ‖ ಯಃ ಪುರಾ ಗೋಮತೀ ತೀರೇ ರಮ್ಯಂ ಪರ್ಯೇತಿ ಪರ್ವತಂ । ನಾಮ್ನಾ * ಸಂಕೋಚನೋ ನಾಮ ನಾನಾನಗಯುತೋ

ಎಂಟು ಲಕ್ಷಗಳೂ, ಚಂದ.....ನಃ - ಶ್ರೀಗಂಧದ ವನದಲ್ಲಿರುವ, ವೀರಾಃ - ಶೂರರಾದವರು, ಏನಂ - ಈ ವಾನರರನ್ನು, ಅನುಗಚ್ಛಂತಿ - ಅನುಸರಿಸುತ್ತಾರೆಯೋ, ಏಷಏವ - ಈ ನಳನೇ, ಸ್ವೇನಾನೀಕೇನ- ತನ್ನ ಸೈನ್ಯದಿಂದ, ಲಂಕಾಂ - ಲಂಕಾಪಟ್ಟಣವನ್ನು, ಮರ್ದಿತುಂ - ಮರ್ದಿಸಲು, ಆಶಂಸತೇ - ಕೋರುತ್ತಾನೆ. ‖೨೨-೨೪‖ ರಜತಸಂಕಾಶಃ - ಬೆಳ್ಳಿಗೆ ಸಮಾನವಾದ, ಚಪಲಃ - ಯುದ್ಧಚಪಲನಾದ, ಭೀಮವಿಕ್ರಮಃ - ಭಯಂಕರ ಪರಾಕ್ರಮವುಳ್ಳ, ಬುದ್ಧಿಮಾನ್ - ಬುದ್ಧಿಶಾಲಿಯಾದ, ವೀರಃ - ಶೂರನಾದ, ಏಷಃವಾನರಃ - ಈ ಕಪಿಯು, ಶ್ವೇತಃ - ಶ್ವೇತನೆಂಬುದಾಗಿ, ತ್ರಿಷುಲೋಕೇಷು - ಮೂರು ಲೋಕಗಳಲ್ಲಿಯೂ, ವಿಶ್ರುತಃ - ಪ್ರಸಿದ್ಧನು, ಸುಗ್ರೀವಂ - ಸುಗ್ರೀವನನ್ನು ಕುರಿತು, ತೂರ್ಣಂ - ಜಾಗ್ರತೆಯಾಗಿ, ಆಗಮ್ಯ-ಬಂದು, ಸತ್ವರಃ - ತ್ವರೆಯುಳ್ಳವನಾಗಿ,ಪುನಃ - ಮತ್ತು, ಗಚ್ಛತಿ - ಹೋಗುತ್ತಾನೆಯೋ, ವಾನರೀಂ - ಕಪಿಸಂಬಂಧವಾದ, ಸೇನಾಂ - ಸೈನ್ಯವನ್ನು, ವಿಭಜನ್ - ವಿಭಾಗಮಾಡಿದವನಾಗಿ, ಅನೀಕಾನಿ - ಗುಂಪುಗಳನ್ನು, ಪ್ರಹರ್ಷಯನ್ - ಸಂತೋಷಗೊಳಿಸಿ, ಗಚ್ಛತಿ - ಹೋಗುತ್ತಾನೆ. ‖೨೫-೨೬‖ ಯಃ - ಯಾವ ಕಪಿಯು, ಪುರಾ - ಮೊದಲು, ಗೋಮತೀತೀರೇ - ಗೋಮತಿ ನದಿಯ ದಡದಲ್ಲಿ, ರಮ್ಯಂ - ಮನೋಹರವಾದ, ಪರ್ವತಂ - ಬೆಟ್ಟವನ್ನು, ಪರ್ಯೇತಿ - ಸುತ್ತಿಕೊಂಡಿದ್ದನೋ, ಯಃಗಿರಿಃ - ಯಾವ ಪರ್ವತವು, ನಾಮ್ನಾ - ಹೆಸರಿನಿಂದ, ಸಂಕೋಚನೋನಾಮ- ಸಂಕೋಚನವೆಂದು ಪ್ರಸಿದ್ಧವಾಗಿ, ನಾನಾ.....ತಃ - ಅನೇಕ ಶಿಖರಗಳಿಂದ ಕೂಡಿದೆಯೋ, ತತ್ರ - ಆ ಸಂಕೋಚನಪರ್ವತದಲ್ಲಿ, ಏಷಃಕುಮುದೋನಾಮ - ಈ ಕುಮುದನೆಂದು ಪ್ರಸಿದ್ಧನಾದ,

ಲಕ್ಷಗಳು. ಇವರು ಮಹಾ ಭಯಂಕರ ಪರಾಕ್ರಮಿಗಳು. ಯುದ್ಧದಲ್ಲಿ ಇತರರಿಂದೆದುರಿಸಲಸಾಧ್ಯರು. ನೋಡಲೂ ಮಹಾ ಭಯಂಕರರಾಗಿರುವರು ; ಮಹಾ ಕ್ರೂರರು. ಇವರೆಲ್ಲರನ್ನೂ ಹಿಂದಿಟ್ಟುಕೊಂಡು ನಲನೊಬ್ಬನೇ ಲಂಕಾನಗರವೆಲ್ಲವನ್ನೂ ನೆಲಸಮ ಮಾಡಬಯಸಿರುವನು. ‖ ೨೧—೨೪ ‖ ಇದೋ ನೋಡು ; ಬೆಳ್ಳಿಯಂತೆ ಬೆಳ್ಳಗಿರುವ ದೇಹವುಳ್ಳವನಾಗಿರುವ ಈತನು ಶ್ವೇತನೆಂಬ ವಾನರನು. ಈತನು ಮಹಾ ಯುದ್ಧಚಪಲನು. ಮೂರು ಲೋಕಗಳಲ್ಲಿಯೂ ಬಹಳ ಪ್ರಸಿದ್ಧಿಯನ್ನು ಹೊಂದಿದವನು. ಈ ಶ್ವೇತನು ಅತಿ ಶೀಘ್ರವಾಗಿ ಸುಗ್ರೀವನ ಬಳಿಗೈದಿ ಮತ್ತೆ ಜಾಗ್ರತೆಯಾಗಿ ಹಿಂತಿರುಗಿ ವಾನರಸೇನೆಯನ್ನು ಪ್ರವೇಶಿಸಿ ಸೇನೆಗಳೆಲ್ಲವನ್ನು ವಿಭಜಿಸಿ ಎಲ್ಲರನ್ನೂ ಪ್ರೋತ್ಸಾಹಗೊಳಿಸುತ್ತ ಬಹು ವೇಗವಾಗಿ ಅಲ್ಲಿಂದಿಲ್ಲಿಗೆ ಹೋಗುತ್ತಿರುವನು. ಇದೋ ; ಈತನೇ ಕುಮುದನು. ಇವನು ಮೊದಲು ನಾನಾವಿಧಗಳಾದ ಶಿಖರಗಳೊಡಗೂಡಿದುದೂ, ಗೋಮತೀತೀರದಲ್ಲಿರುವುದೂ, ಮಹಾ ಸುಂದರವಾದುದೂ, ಸಂಕೋಚನವೆಂದು ಹೆಸರುಳ್ಳುದೂ ಆದ ಪರ್ವತದಲ್ಲಿಯೇ ಇದ್ದುಕೊಂಡು

* “ ಸಂರೋಚನಃ ” ತಿ. ಪಾ.

ಗಿರಿಃ ॥ ೨೭ ॥ ತತ್ರ ರಾಜ್ಯಂ ಪ್ರಶಾಸ್ತ್ಯೇಷ ಕುಮುದೋ ನಾಮ ಯೂಥಪಃ । ಯೋಽಸೌ ಶತಸಹಸ್ರಾಣಾಂ ಸಹಸ್ರಂ ಪರಿಕರ್ಷತಿ ॥ ೨೮ ॥ ಯಸ್ಯ ವಾಲಾ ಬಹುವ್ಯಾಮಾ ದೀರ್ಘಾ ಲಾಂಗೂಲಮಾಶ್ರಿತಾಃ । ತಾಮ್ರಾಃ ಪೀತಾಸ್ಸಿತಾಃ ಶ್ವೇತಾಃ ಪ್ರಕೀರ್ಣಾ ಘೋರಕರ್ಮಣಃ ॥ ೨೯ ॥ ಅದೀನೋ ರೋಷಣಶ್ಚಂಡಸ್ಸಂಗ್ರಾಮಮಭಿಕಾಂಕ್ಷತಿ । ಏಷೋಽಪ್ಯಾಶಂಸತೇ ಲಂಕಾಂ ಸ್ವೇನಾನೀಕೇನ ಮರ್ದಿತುಂ ॥೩೦॥ ಯಸ್ತ್ವೇಷ ಸಿಂಹಸಂಕಾಶಃ ಕಪಿಲೋ ದೀರ್ಘಲೋಚನಃ । ನಿಭೃತಃ ಪ್ರೇಕ್ಷತೇ ಲಂಕಾಂ ದಿಧಕ್ಷನ್ನಿವ ಚಕ್ಷುಷಾ ॥ ೩೧ ॥ ವಿಂಧ್ಯಂ ಕೃಷ್ಣಂ ಗಿರಿಂ ಸಹ್ಯಪರ್ವತಂಚ ಸುದರ್ಶನಂ । ರಾಜನ್! ಸತತಮಧ್ಯಾಸ್ತೇ ರಂಭೋ ನಾಮೈಷ ಯೂಥಪಃ ॥ ೩೨ ॥

---

ಯೂಥಪಃ - ಸೇನಾಧಿಪತಿಯು, ರಾಜ್ಯಂ - ರಾಜ್ಯವನ್ನು, ಪ್ರಶಾಸ್ತಿ - ಪರಿಪಾಲನೆ ಮಾಡುತ್ತಾನೆ. ॥೨೭॥ ಯೋಸೌ - ಯಾವ ಈ ಕುಮುದನು, ಶತ......ಸ್ರಂ - ಸಾವಿರಲಕ್ಷ ವಾನರರನ್ನು, ಪರಿಕರ್ಷತಿ- ತೆಗೆದುಕೊಂಡು ಬಂದಿದ್ದಾನೋ, ಘೋರಕರ್ಮಣಃ - ಭಯಂಕರ ವ್ಯಾಪಾರವುಳ್ಳ, ಯಸ್ಯ - ಯಾವ ಕುಮುದನ, ಲಾಂಗೂಲಂ - ಬಾಲವನ್ನು, ಆಶ್ರಿತಾಃ - ಆಶ್ರಯಿಸಿರುವ, ವಾಲಾಃ - ರೋಮಗಳು, ಬಹುವ್ಯಾಮಾಃ - ಅನೇಕ ಬಾರುಗಳು, ದೀರ್ಘಾಃ - ಉದ್ದವಾಗಿವೆಯೋ, ತಾಮ್ರಾಃ - ಕೆಂಪಾಗಿವೆಯೋ, ಪೀತಾಃ-ಹಚ್ಚಗಿವೆಯೋ, ಸಿತಾಃ-ಶುಭ್ರವಾಗಿವೆಯೋ, ಶ್ವೇತಾಃ-ಬೆಳ್ಳಗಿವೆಯೋ, ಪ್ರಕೀರ್ಣಾಃ - ವಿಸ್ತಾರವಾಗಿವೆಯೋ, ಯಃ - ಯಾವ ಪುರುಷನು, ಅದೀನಃ - ದೈನ್ಯವಿಲ್ಲದವನೋ, ರೋಷಣಃ - ಕೋಪಿಷ್ಠನೋ, ಚಂಡಃ - ಕ್ರೂರನಾಗಿ, ಸಂಗ್ರಾಮಂ - ಕಾಳಗವನ್ನು, ಅಭಿಕಾಂಕ್ಷತಿ- ಕೋರುತ್ತಾನೆಯೋ, ಏಷಃ - ಈ ಕುಮುದನು, ಸ್ವೇನಾನೀಕೇನ - ತನ್ನ ಸೇನೆಯಿಂದ, ಲಂಕಾಂ- ಲಂಕಾಪಟ್ಟಣವನ್ನು, ಮರ್ದಿತುಂ - ಹೊಡೆಯುವದಕ್ಕೆ, ಆಶಂಸತೇ - ಅಪೇಕ್ಷಿಸುತ್ತಾನೆ. ॥೨೮-೩೦॥ ಸಿಂಹಸಂಕಾಶಃ - ಸಿಂಹಸಮಾನನಾಗಿ, ಕಪಿಲಃ - ಕಪ್ಪಗಿರುವ, ದೀರ್ಘಲೋಚನಃ - ವಿಶಾಲಾಕ್ಷನಾದ, ನಿಭೃತಃ - ನಿಶ್ಚಂಚಲನಾದ, ಯಏಷಃ - ಯಾವ ಈ ವಾನರನು, ಚಕ್ಷುಷಾ - ಕಣ್ಣಿನಿಂದ, ಲಂಕಾಂ- ಲಂಕಾಪಟ್ಟಣವನ್ನು, ದಿಧಕ್ಷನ್ನಿವ - ದಹಿಸಲಿಚ್ಛಿಸುವನೋ ಎಂಬಂತೆ, ಪ್ರೇಕ್ಷತೇ - ನೋಡುತ್ತಾನೆಯೋ, ಯಃ - ಯಾವ ಪುರುಷನು, ವಿಂಧ್ಯಂ - ವಿಂಧ್ಯಪರ್ವತವನ್ನು, ಕೃಷ್ಣಂಗಿರಿಂ - ಕೃಷ್ಣಪರ್ವತವನ್ನು, ಸುದರ್ಶನಂ - ಸುದರ್ಶನಪರ್ವತವನ್ನು, ಸತತಂ - ನಿರಂತರವೂ, ಅಧ್ಯಾಸ್ತೇ - ನೆಲೆ

---

ಗೋಮತೀತೀರದ ವಾನರರಾಜ್ಯವನ್ನು ಪರಿಪಾಲಿಸುತ್ತಲಿದ್ದನು. ಯಾವಾತನ ವಾಲಾಗ್ರಕೇಶಗಳು ಬಹಳ ದೀರ್ಘವಾಗಿ ಬಹುದೂರ ವ್ಯಾಪಿಸಿ ಹಳದಿ, ಕೆಂಪು, ಅಚ್ಚಬಿಳುಪು ಮೊದಲಾದ ವಿವಿಧ ವರ್ಣಗಳುಳ್ಳವಾಗಿ ಹರಡಿಕೊಂಡಿರುವುವೋ ಆ ಈ ಕುಮುದನು ಸಾವಿರಲಕ್ಷ ವಾನರರ ಸೇನೆಯನ್ನು ಹಿಂದಿಟ್ಟುಕೊಂಡು ಬಂದಿರುವನು. ಈತನು ಮಹಾ ಭಯಂಕರವಾದ ಕಾರ್ಯಗಳನ್ನು ಮಾಡುವಾತನು; ಮಹಾ ಧೈರ್ಯವಂತನು; ಮಹಾ ಕೋಪವುಳ್ಳವನು; ಅತಿ ಭಯಂಕರನು; ತಾನೊಬ್ಬನೇ ತನ್ನ ಸೇನೆಯೊಡನೆ ಲಂಕೆಯನ್ನು ಪುಡಿಗಟ್ಟಲು ಮನಸ್ಸುಮಾಡಿರುವನು. ॥ ೨೫-೩೦ ॥ ಎಲೈ ರಾಕ್ಷಸೇಶ್ವರನೇ! ಸಿಂಹಕ್ಕೆ ಸಮಾನನೂ, ಕಪಿಲವರ್ಣವುಳ್ಳವನೂ, ಬಹಳ ಅಗಲವಾದ ಕಣ್ಣುಗಳುಳ್ಳವನೂ, ನೆಟ್ಟ ದೃಷ್ಟಿಯಿಂದ ಲಂಕೆಯೆಲ್ಲವನ್ನೂ ಸುಡುವಂತೆ ಬಹಳ ಕ್ರೂರವಾಗಿ ನೋಡುತ್ತಿರುವನೂ ಆದ ಈತನೇ ರಂಭನೆಂಬ ಯೂಥಪತಿಯು. ಈತನು ವಿಂಧ್ಯ, ಕೃಷ್ಣಗಿರಿ, ಸಿಂಹಾದ್ರಿ·

ಶತಂ ಶತಸಹಸ್ರಾಣಾಂ ತ್ರಿಂಶಚ್ಚ ಹರಿಪುಂಗವಾಃ । ಯಮೇತೇ ವಾನರಾಃ ಶೂರಾ ಶ್ಚಂಡಾಶ್ಚಂಡಪರಾಕ್ರಮಾಃ । ಪರಿವಾರ್ಯಾನುಗಚ್ಛಂತಿ ಲಂಕಾಂ ಮರ್ದಿತುಮೋಜಸಾ ॥ ೩೩ ॥ ಯಸ್ತು ಕರ್ಣೌ ವಿವೃಣುತೇ ಜೃಂಭತೇಚ ಪುನಃಪುನಃ । ನಚ ಸಂವಿಜತೇ ಮೃತ್ಯೋರ್ನಚ ಯುದ್ಧಾದ್ವಿಧಾವತಿ ॥ ೩೪ ॥ ಪ್ರಕಂಪತೇಚ ರೋಷೇಣ ತಿರ್ಯಕ್ಚ ಪುನರೀಕ್ಷತೇ । ಪಶ್ಯನ್ ಲಾಂಗೂಲಮಪಿ ಚ ಕ್ಷ್ವೇಳತೇಚ ಮಹಾಬಲಃ ॥ ೩೫ ॥ ¶ ಮಹಾಬಲೋ ವೀತಭಯೋ ರಮ್ಯಂ ಸಾಲ್ವೇಯಪರ್ವತಂ । ರಾಜನ್ ಸತತ ಮಧ್ಯಾಸ್ತೇ ಶರಭೋನಾಮ ಯೂಥಪಃ ॥ ೩೬ ॥ ಏತಸ್ಯ ಬಲಿನಸ್ಸರ್ವೇ ವಿಹಾರಾ

---

ಮನೆಗಳಾಗಿಸಿಕೊಂಡಿರುವನೋ, ಏಷಯೂಥಪಃ - ಈ ಯೂಥಪತಿಯು, ರಂಭೋನಾಮ - ರಂಭನೆಂದು ಪ್ರಸಿದ್ಧನಾದವನು, ಶತಂ.....ಚ್ಚ - ನೂರುಮೂವತ್ತುಲಕ್ಷಗಳು, ಹರಿಪುಂಗವಾಃ - ವಾನರ ಶ್ರೇಷ್ಠರಾದ, ಶೂರಾಃ - ಶೂರರಾದ, ಚಂಡಾಃ - ಕ್ರೂರರಾದ, ಚಂಡ....ಮಾಃ - ಕ್ರೂರ ಪರಾಕ್ರಮವುಳ್ಳ, ತೇವಾನರಾಃ - ಈ ಕಪಿಗಳು, ಯಂ - ಯಾವ ರಂಭನನ್ನು, ಪರಿವಾರ್ಯ - ಸುತ್ತುವರೆದು, ಓಜಸಾ - ಸಾಮರ್ಥ್ಯದಿಂದ, ಲಂಕಾಂ - ಲಂಕಾಪಟ್ಟಣವನ್ನು, ಮರ್ದಿತುಂ - ಹೊಡೆಯುವದಕ್ಕಾಗಿ, ಅನುಗಚ್ಛಂತಿ - ಅನುಸರಿಸಿ ಬರುತ್ತಾರೆಯೋ. ॥ ೩೨-೩೩ ॥ ಯಃ - ಯಾವ ವಾನರನು, ಕರ್ಣೌ - ಕಿವಿಗಳನ್ನು, ವಿವೃಣುತೇ - ವಿಸ್ತಾರಗೊಳಿಸುತ್ತ, ಪುನಃಪುನಃ - ಬಾರಿಬಾರಿಗೂ, ಜೃಂಭತೇಚ - ಆಕಳಿಸುತ್ತಾನೆಯೋ, ಮೃತ್ಯೋಃ - ಯಮನದೆಸೆಯಿಂದಲೂ, ನಸಂವಿಜತೇ - ಭಯಗೊಳ್ಳುವುದಿಲ್ಲವೋ, ಯುದ್ಧಾತ್ - ರಣರಂಗದಿಂದ, ನವಿಧಾವತಿ - ಓಡಿಹೋಗುವದಿಲ್ಲವೋ, ರೋಷೇಣ - ಕ್ರೋಧದಿಂದ, ಪ್ರಕಂಪತೇಚ - ಕಂಪಿಸುತ್ತಾನೆಯೋ, ಪುನಃ - ಮತ್ತು, ತಿರ್ಯಕ್ಚ - ಅಡ್ಡವಾಗಿ, ಈಕ್ಷತೇಚ - ನೋಡುತ್ತಾನೆಯೋ, ಮಹಾಬಲಃ - ಮಹಾ ಸಾಮರ್ಥ್ಯವಂತನಾದ, ಯಃ - ಯಾವ ವಾನರನು, ಲಾಂಗೂಲಂ - ಬಾಲವನ್ನು, ಪಶ್ಯನ್ನಪಿ - ನೋಡುತ್ತ, ಕ್ಷ್ವೇಳತೇಚ - ಸಿಂಹನಾದ ಮಾಡುತ್ತಾನೆಯೋ, ಹೇ ರಾಜನ್ - ಎಲೈ ಅರಸನೇ, ಮಹಾಬಲಃ - ಮಹಾ ಸಾಮರ್ಥ್ಯವಂತನಾದ, ವೀತಭಯಃ - ಕಳೆದುಹೋದ ಭಯವುಳ್ಳ, ಶರಭೋನಾಮ - ಶರಭನೆಂದು ಪ್ರಸಿದ್ಧನಾದ, ಯೂಥಪಃ- ಯೂಥಪತಿಯು, ರಮ್ಯಂ - ಮನೋಹರವಾದ, ಸಾಲ್ವೇಯಪರ್ವತಂ - ಸಾಲ್ವೇಯವೆಂಬ ಬೆಟ್ಟ

---

ಸುದರ್ಶನಗಿರಿ ಎಂಬ ಮಹಾ ಪರ್ವತಗಳಲ್ಲಿದ್ದುಕೊಂಡು ಅಲ್ಲಿಯ ವಾನರರಾಜ್ಯವನ್ನು ಪರಿಪಾಲಿಸುತ್ತಿರುವನು. ಅಲ್ಲದೆ ಮಹಾ ಶೂರರೂ, ಭಯಂಕರ ಪರಾಕ್ರಮಿಗಳೂ, ಮಹಾ ಭಯಂಕರರೂ ಆದ ವಾನರಶ್ರೇಷ್ಠರು (ನೂರಮೂವತ್ತುಲಕ್ಷಮಂದಿ) ಈ ರಂಭನನ್ನು ಸುತ್ತುವರೆದಿರುವರು. ಈ ವಾನರರು ತಮ್ಮ ಪರಾಕ್ರಮದಿಂದ ಈ ಲಂಕಾನಗರವನ್ನು ಮರ್ದಿಸಲು ಕೋರುತ್ತಿರುವರು. ಎಲೈ ಮಹಾ ಪರಾಕ್ರಮಶಾಲಿಯಾದ ರಾವಣಾಸುರನೇ! ಇತ್ತನೋಡು ; ಕಿವಿಗಳನ್ನು ನೆಟ್ಟಗೆ ಮಾಡಿಕೊಂಡು ಮಾತುಮಾತಿಗೂ ಆಕಳಿಸುತ್ತ, ಅಡಿಗಡಿಗೂ ಅಡ್ಡವಾಗಿ ನೋಡುತ್ತ, ಬಾರಿಬಾರಿಗೂ ತನ್ನ ಬಾಲವನ್ನು ನೋಡಿಕೊಂಡು ಸಿಂಹನಾದವನ್ನು ಮಾಡುತ್ತಿರುವ ಮಹಾ ಬಲಾಢ್ಯನೂ, ಇತರರಾರಿಂದಲೂ ಭಯಗೊಳಿಸಲಸಾಧ್ಯನೂ ಆದ ಈ ವಾನರನಾಯಕನೇ ಶರಭನು. ಈತನು ಮೃತ್ಯುವಿಗೂ ಭಯಪಡದವನು ; ಈತನು

---

¶ "ಮಹಾಜವಃ" ಗೋ. ಪಾ.

ನಾಮ ಯೂಥಪಾಃ । ರಾಜನ್! ಶತಸಹಸ್ರಾಣಿ ಚತ್ವಾರಿಂಶತ್ತಥೈವಚ ॥ ೩೭ ॥ ಯಸ್ತು ಮೇಘ ಇವಾಕಾಶಂ ಮಹಾನಾವೃತ್ಯ ತಿಷ್ಠತಿ । ಮಧ್ಯೇ ವಾನರವೀರಾಣಾಂ ಸುರಾಣಾಮಿವ ವಾಸವಃ ॥೩೮॥ ಭೇರೀಣಾಮಿವ ಸನ್ನಾದೋ ಯಸ್ಯೈಷ ಶ್ರೂಯತೇ ಮಹಾನ್ । ಘೋಷಃ ಶಾಖಾಮೃಗೇಂದ್ರಾಣಾಂ ಸಂಗ್ರಾಮಮಭಿಕಾಂಕ್ಷತಾಂ ॥ ೩೯ ॥ ಏಷ ಪರ್ವತಮಧ್ಯಾಸ್ತೇ ಪಾರಿಯಾತ್ರಮನುತ್ತಮಂ । ಯುದ್ಧೇ ದುಷ್ಪ್ರಸಹೋ ನಿತ್ಯಂ ಪನಸೋ ನಾಮ ಯೂಥಪಃ ॥ ೪೦ ॥ ಏನಂ ಶತಸಹಸ್ರಾಣಾಂ ಶತಾರ್ಧಂ ಪರ್ಯುಪಾಸತೇ । ಯೂಥಪಾ ಯೂಥಪಶ್ರೇಷ್ಠಂ ಯೇಷಾಂ ಯೂಥಾನಿ ಭಾಗಶಃ

---

ವನ್ನು, ಸತತಂ-ನಿರಂತರವೂ, ಅಧ್ಯಾಸ್ತೇ-ಅನುಸರಿಸಿರುತ್ತಾನೆ. ॥೩೫-೩೬॥ ಹೇ ರಾಜನ್-ಎಲೈ ಅರಸೇ, ಏತಸ್ಯ - ಈ ಶರಭನ, ಬಲಿನಃ - ಬಲವಂತರಾದ, ಸರ್ವೇ - ಸಮಸ್ತರಾದ, ವಿಹಾರಾನಾಮ - ವಿಹಾರರೆಂದು ಪ್ರಸಿದ್ಧರಾದ, ಯೂಥಪಾಃ - ಯೂಥಪತಿಗಳು, ತಥೈವ - ಹಾಗೆಯೇ, ಚತ್ವಾರಿಂಶತ್-ನಲವತ್ತಾದ, ಶತಸಹಸ್ರಾಣಿ - ಲಕ್ಷಗಳು. ॥ ೩೭ ॥ ಮಹಾನ್ - ದೊಡ್ಡವನಾದ, ಯಃ - ಯಾವ ಪುರುಷನು, ಆಕಾಶಂ - ಆಕಾಶವನ್ನು, ಮೇಘಇವ - ಮೇಘದಂತೆ, ಆವೃತ್ಯ - ಆವರಿಸಿ, ಸುರಾಣಾಂ-ದೇವತೆಗಳ ಮಧ್ಯದಲ್ಲಿ, ವಾಸವಇವ-ದೇವೇಂದ್ರನಂತೆ, ವಾನರಶೂರಾಣಾಂ-ಶೂರರಾದ ವಾನರರ, ಮಧ್ಯೇ - ಮಧ್ಯದಲ್ಲಿ, ತಿಷ್ಠತಿ - ಇರುವನೋ. ॥ ೩೮ ॥ ಭೇರೀಣಾಂ - ಭೇರಿಗಳ, ಸನ್ನಾದಇವ-ಧ್ವನಿಯಂತೆ, ಯಸ್ಯ - ಯಾವ ವಾನರನ, ಸಂಗ್ರಾಮಂ - ಕಾಳಗವನ್ನು, ಅಭಿಕಾಂಕ್ಷತಾಂ - ಕೋರುತ್ತಿರುವ, ಶಾಖಾ....ಣಾಂ - ವಾನರಶ್ರೇಷ್ಠರ, ಘೋಷಃ - ಕೋಲಾಹಲಧ್ವನಿಯು, ಮಹಾನ್ - ದೊಡ್ಡದಾಗಿ, ಶ್ರೂಯತೇ - ಕೇಳಲ್ಪಡುತ್ತಿದೆಯೋ. ॥೩೯॥ ಏಷಃ - ಈ ವಾನರನು, ಯುದ್ಧೇ - ಕಾಳಗದಲ್ಲಿ, ದುಷ್ಪ್ರಸಹಃ - ಸಹಿಸಲಸಾಧ್ಯನಾದ, ಪನಸೋನಾಮ - ಪನಸನೆಂದು ಪ್ರಖ್ಯಾತನಾದ, ಯೂಥಪಃ - ಯೂಥಪತಿಯು, ನಿತ್ಯಂ - ನಿರಂತರವೂ, ಅನುತ್ತಮಂ - ಸರ್ವೋತ್ತಮವಾದ, ಪಾರಿಯಾತ್ರಂ - ಪಾರಿಯಾತ್ರವೆಂಬ, ಪರ್ವತಂ - ಬೆಟ್ಟವನ್ನು, ಅಧ್ಯಾಸ್ತೇ - ಅಧಿಷ್ಠಿಸಿದ್ದಾನೆ. ॥ ೪೦ ॥ ಯೂಥಪಶ್ರೇಷ್ಠಃ - ಯೂಥಪತಿಗಳಲ್ಲಿ ಶ್ರೇಷ್ಠನಾದ, ಏನಂ - ಈ ಪನಸನನ್ನು, ಶತ....ರ್ಧಂ - ಐವತ್ತುಲಕ್ಷ, ಯೂಥಪಾಃ - ವಾನರಯೂಥಪತಿಗಳು, ಭಾಗಶಃ - ಪ್ರತ್ಯೇಕವಾಗಿ, ಯೂಥಾನಿ - ಗುಂಪು

---

ನಿರಂತರವೂ ಬಹು ರಮ್ಯವಾದ ಸಾಲ್ವೇಯಪರ್ವತದಮೇಲೆಯೇ ವಾಸಮಾಡಿಕೊಂಡು ಅಲ್ಲಿನ ವಾನರರಾಜ್ಯವನ್ನು ಪರಿಪಾಲಿಸುತ್ತಿರುವವನು. ಈತನ ಕೈಕೆಳಗೆ ವಿಹಾರರೆಂಬ ಹೆಸರುಳ್ಳ ವಾನರವೀರರು ನಲವತ್ತುಲಕ್ಷಮಂದಿ ಇದ್ದಾರೆ. ಅವರೆಲ್ಲರೂ ಮಹಾ ಬಲಾಢ್ಯರು. ॥ ೩೧-೩೭ ॥ ಎಲೈ ರಾಕ್ಷಸಪ್ರಭುವೇ! ಇತ್ತಕಡೆ ನೋಡು; ದೊಡ್ಡ ದೇಹವುಳ್ಳವರಾಗಿ ಮುಗಿಲಂತೆ ಬಾಂದಳವನ್ನಾವರಿಸಿರುವವರೂ, ಭೇರೀಧ್ವನಿಯಂತೆ ಸಿಂಹನಾದವನ್ನು ಮಾಡುತ್ತಿರುವವರೂ, ಯುದ್ಧಕ್ಕಾಗಿ ಮಹಾ ಸಂತೋಷದಿಂದಿರುವವರೂ, ವಾನರಶ್ರೇಷ್ಠರೂ ಆದ ಈ ವಾನರರಿಗೆ ಯೂಥಪತಿಯಾದವನು ಪನಸನು. ಈತನು ಈ ಮಹಾ ವಾನರಸೇನೆಯ ನಡುವೆ ನಿಂತು ದೇವತೆಗಳ ಮಧ್ಯದಲ್ಲಿರುವ ದೇವೇಂದ್ರನಂತೆ ಶೋಭಿಸುತ್ತಿರುವನು. ಈತನು ಮಹಾ ಭಯಂಕರನಾದವನು. ಯಾವಾಗಲೂ ಯುದ್ಧದಲ್ಲಿ ಎದುರಿಸಲಸಾಧ್ಯನಾಗಿರುವವನು. ಈತನು ಮಹೋನ್ನತವೂ, ಮಹೋತ್ತಮವೂ ಆದ ಪಾರಿಯಾತ್ರ ಪರ್ವತದಲ್ಲಿ ವಾಸವಾಗಿರುವವನು. ಈ ಪನಸನ ಕೈಕೆಳಗೆ ಹತ್ತುಲಕ್ಷ ವಾನರವೀರರಿರುವರು.

|| ೪೧ || ಯಸ್ತು ಭೀಮಾಂ ಪ್ರವಲ್ಗಂತೀಂ ಚಮೂಂ ತಿಷ್ಠತಿ ಶೋಭಯನ್ | ಸ್ಥಿತಾಂ ತೀರೇ ಸಮುದ್ರಸ್ಯ ದ್ವಿತೀಯ ಇವ ಸಾಗರಃ | ಏಷ ದರ್ದುರಸಂಕಾಶೋ ವಿನತೋ ನಾಮ ಯೂಥಪಃ || ೪೨-೪೩ || ಪಿಬಂಶ್ಚರತಿ ಪರ್ಣಾಸಾಂ ನದೀನಾಮುತ್ತಮಾಂ ನದೀಂ | ಷಷ್ಟಿಃ ಶತಸಹಸ್ರಾಣಿ ಬಲಮಸ್ಯ ಪ್ಲವಂಗಮಾಃ || ೪೪ || ತ್ವಾಮಾಹ್ವಯತಿ ಯುದ್ಧಾಯ ಕ್ರೋಧನೋ ನಾಮ ಯೂಥಪಃ | ವಿಕ್ರಾಂತಾ ಬಲವಂತಶ್ಚ ಯಥಾ ಯೂಥಾನಿ ಭಾಗಶಃ || ೪೫ || ಯಸ್ತು ಗೈರಿಕವರ್ಣಾಭಂ ¶ ವಪುಃ ಪುಷ್ಯತಿ ವಾನರಃ |

---

ಗಳಾಗಿ, ಪರ್ಯುಪಾಸತೇ - ಸೇವಿಸುತ್ತಾರೆಯೋ. || ೪೧ || ಯಸ್ತು - ಯಾವ ವಾನರನಾದರೆ, ಸಮುದ್ರಸ್ಯ - ಕಡಲಿನ, ತೀರೇ - ದಡದಲ್ಲಿ, ದ್ವಿತೀಯಃಸಾಗರಇವಸ್ಥಿತಾಂ - ಎರಡನೆಯ ಸಮುದ್ರದಂತಿರುವ, ಭೀಮಾಂ - ಭಯಂಕರವಾಗಿ, ಪ್ರವಲ್ಗಂತೀಂ - ಕೂಗಾಡುತ್ತಿರುವ, ಚಮೂಂ - ಸೈನ್ಯವನ್ನು, ಶೋಭಯನ್ - ಪ್ರಕಾಶಗೊಳಿಸುತ್ತ, ತಿಷ್ಠತಿ - ಇರುತ್ತಾನೆಯೋ, ಏಷಃ - ಈತನು, ದರ್ದುರಸಂಕಾಶಃ - ದರ್ದುರವೆಂಬ ಬೆಟ್ಟಕ್ಕೆ ಸಮಾನನಾದ, ವಿನತೋನಾಮ - ವಿನತನೆಂದು ಪ್ರಖ್ಯಾತನಾದ, ಯೂಥಪಃ - ಯೂಥಪತಿಯು, ಯಃ - ಯಾವನು, ನದೀನಾಂ - ನದಿಗಳಲ್ಲಿ, ಉತ್ತಮಾಂ - ಉತ್ಕೃಷ್ಟವಾದ, ಪರ್ಣಾಸಾಂ - ಪರ್ಣಾಸವೆಂಬ, ನದೀಂ - ಹೊಳೆಯನ್ನು, ಪಿಬನ್ - ಕುಡಿಯುತ್ತಿರುವವನಾಗಿ, ಚರತಿ - ಸಂಚಾರ ಮಾಡುತ್ತಾನೆ, ಅಸ್ಯ - ಈ ವಾನರನ, ಷಷ್ಟಿಃ....ಣಿ - ಅರವತ್ತುಲಕ್ಷಮಂದಿ, ಪ್ಲವಂಗಮಾಃ - ವಾನರರು, ಏಷಃ - ಈತನು, ಕ್ರೋಧನೋನಾಮ - ಕ್ರೋಧನನೆಂದು ಪ್ರಸಿದ್ಧನಾದ, ಯೂಥಪಃ - ಯೂಥಪತಿಯು, ಯುದ್ಧಾಯ - ಕಾಳಗಕ್ಕೋಸ್ಕರ, ತ್ವಾಂ - ನಿನ್ನನ್ನು, ಆಹ್ವಯತಿ - ಕರೆಯುತ್ತಾನೆ, ವಿಕ್ರಾಂತಾಃ - ಪರಾಕ್ರಮಶಾಲಿಗಳಾದ, ಬಲವಂತಶ್ಚ - ಬಲಿಷ್ಠರಾದ ವಾನರರು, ಭಾಗಶಃ - ಪ್ರತ್ಯೇಕಪ್ರತ್ಯೇಕವಾಗಿ, ಯೂಥಾನಿಯಥಾ - ಗುಂಪುಗಳಾಗಿ, ತ್ವಾಂ - ನಿನ್ನನ್ನು, ಆಹ್ವಯಂತಿ - ಕರೆಯುತ್ತಾರೆ, ಯಃವಾನರಸ್ತು - ಯಾವ ವಾನರನಾದರೆ, ಗೈರಿಕವರ್ಣಾಭಂ - ಗೈರಿಕಾದಿ ಧಾತುಗಳ ವರ್ಣದಂತೆ ಕಾಂತಿಯುಳ್ಳ, ವಪುಃ - ಶರೀರವನ್ನು, ಪುಷ್ಯತಿ - ಪೋಷಿಸುತ್ತಾನೆಯೋ, ಸದಾ - ನಿರಂತರವೂ, ಸರ್ವಾನ್ - ಸಮಸ್ತರಾದ, ಬಲದರ್ಪಿತಾನ್ - ಸಾಮರ್ಥ್ಯದಿಂದ ಗರ್ವಿತರಾದ,

---

ಅವರೆಲ್ಲರೂ ಬೇರೆಬೇರೆ ಸೇನೆಗಳುಳ್ಳವರು. || ೩೮-೪೧ || ಇದೋ, ಮಹಾ ಭಯಂಕರವಾಗಿರುವುದೂ, ಬಹು ಮನೋಜ್ಞವಾಗಿರುವುದೂ ಆದ ಈ ಸೇನೆಯ ನಡುವೆ ಪ್ರಕಾಶಿಸುತ್ತಿರುವವನೂ, ದರ್ದುರಪರ್ವತಕ್ಕೆ ಸಮಾನನಾಗಿರುವವನೂ ಆದ ಈ ಯೂಥಪತಿಯೇ ವಿನತನು. ಈತನು ನದೀಶ್ರೇಷ್ಠವಾದ ಪರ್ಣಾನದ್ಯುದಕವನ್ನು ಸೇವಿಸುತ್ತ ಆ ತೀರದಲ್ಲಿಯೇ ಸಂಚರಿಸುತ್ತಿರುತ್ತಾನೆ. ಈ ವಿನತನ ಕೈಕೆಳಗೆ ಅರುವತ್ತುಲಕ್ಷಮಂದಿ ವಾನರವೀರರಿರುವರು. ಇವನು ಕ್ರೋಧನನೆಂಬ ಸೇನಾನಾಯಕನು. ಈತನು ಯುದ್ಧಕ್ಕಾಗಿ ನಿನ್ನನ್ನು ಆಹ್ವಾನಿಸುತ್ತಿರುವನು. ಈತನ ಕೈಕೆಳಗೆ ಅನೇಕಮಂದಿ (ಅಸಂಖ್ಯಾತ) ವಾನರವೀರರಿರುವರು. ಆ ಪ್ರತಿಯೊಬ್ಬ ವಾನರವೀರನ ಕೈಕೆಳಗೂ ಅನೇಕಮಂದಿ ವಾನರವೀರರಿರು. ರಾಕ್ಷಸೇಶ್ವರಾ! ಬಲದಿಂದ ಗರ್ವಿಸಿದವರೆಲ್ಲರನ್ನೂ ಅವಮಾನಪಡಿಸುವವನೂ, ಸ್ವರ್ಣಚ್ಛಾಯೆಯುಳ್ಳ ದೇಹದಿಂದೊಪ್ಪುತ್ತಿರುವವನೂ, ತನ್ನ ದೇಹವನ್ನು ಬಹಳವಾಗಿ ಬೆಳೆಯಿಸುತ್ತಿರುವವನೂ ಆದ ಈ ವಾನರ

---

¶ "ಕ್ರಥನೋನಾಮವಾನರಃ" ತಿ. ಪಾ,

ಅವಮತ್ಯ ಸದಾ ಸರ್ವಾನ್ವಾನರಾನ್ ಬಲದರ್ಪಿತಾನ್ || ೪೬ || ಗವಯೋ ನಾಮ ತೇಜಸ್ವೀ ತ್ವಾಂ ಕ್ರೋಧಾದಭಿವರ್ತತೇ ! | ಏವಂ ಶತಸಹಸ್ರಾಣಿ ಸಪ್ತತಿಃ ಪರ್ಯುಪಾಸತೇ | ಏಷೈವಾಶಂಸತೇ ಲಂಕಾಂ ಸ್ವೇನಾನೀಕೇನ ಮರ್ದಿತುಂ || ೪೭ ||

ಏತೇ ದುಷ್ಪ್ರಸಹಾ * ಘೋರಾ ಬಲಿನಃ ಕಾಮರೂಪಿಣಃ |
ಯೂಥಪಾ ಯೂಥಪಶ್ರೇಷ್ಠಾ ಏಷಾಂ ಯೂಥಾನಿ ಭಾಗಶಃ || ೪೮ ||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಷಡ್ವಿಂಶಸ್ಸರ್ಗಃ

---

ವಾನರಾನ್ - ಕಪಿಗಳನ್ನು, ಅವಮತ್ಯ - ತಿರಸ್ಕರಿಸಿ, ತೇಜಸ್ವೀ - ಪರಾಕ್ರಮಶಾಲಿಯಾಗಿರುವವನು, ಗವಯೋನಾಮ - ಗವಯನೆಂದು ಪ್ರಖ್ಯಾತನಾದವನು, ಏಷಃ - ಇವನು, ತ್ವಾಂ - ನಿನ್ನನ್ನು ಕುರಿತು, ಕ್ರೋಧಾತ್ - ಕೋಪದಿಂದ, ಅಭಿವರ್ತತೇ - ಎದುರಾಗಿದ್ದಾನೆ, ಏನಂ - ಈ ಗವಯನನ್ನು, ಸಪ್ತ....ಣಿ-ಎಪ್ಪತ್ತುಲಕ್ಷ ವಾನರರು, ಪರ್ಯುಪಾಸತೇ - ಸೇವಿಸುತ್ತಾರೆ, ಏಷಏವ - ಇವನೊಬ್ಬನೇ, ಸ್ವೇನ - ತನ್ನ, ಅನೀಕೇನ - ಸೈನ್ಯದಿಂದ, ಲಂಕಾಂ - ಲಂಕಾಪಟ್ಟಣವನ್ನು, ಮರ್ದಿತುಂ - ಹೊಡೆಯುವುದಕ್ಕೆ, ಆಶಂಸತೇ - ಅಪೇಕ್ಷಿಸುತ್ತಾನೆ. || ೪೬-೪೭ || ಏತೇ - ಈ, ಯೂಥಪಾಃ - ಯೂಥಪತಿಗಳು, ದುಷ್ಪ್ರಸಹಾಃ - ಕಾಳೆಗದಲ್ಲಿ ಸಹಿಸಲಸಾಧ್ಯರು, ಘೋರಾಃ - ಭಯಂಕರರು, ಬಲಿನಃ - ಬಲವಂತರು, ಕಾಮರೂಪಿಣಃ - ಬೇಕಾದ ರೂಪವನ್ನು ಧರಿಸುವ ಸಾಮರ್ಥ್ಯವುಳ್ಳವರು, ಯೂಥಪಶ್ರೇಷ್ಠಾಃ - ಯೂಥಪತಿಗಳಲ್ಲಿ ಶ್ರೇಷ್ಠರು, ಏಷಾಂ - ಈ ಯೂಥಪತಿಗಳ, ಯೂಥಾನಿ - ಗುಂಪುಗಳು, ಭಾಗಶಃ - ಪ್ರತ್ಯೇಕವಾಗಿ, ಸಂತಿ - ಇರುತ್ತವೆ. || ೪೮ ||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಷಡ್ವಿಂಶಸ್ಸರ್ಗಃ.

---

ಸೇನಾಪತಿಯೇ ಗವಯನು. ಇವನು ಮಹಾ ತೇಜಸ್ವಿಯಾದವನು ; ಮಹಾ ಕೋಪಿಷ್ಠನು ; ಇವನು ನಿನ್ನಮೇಲೆ ಯುದ್ಧಕ್ಕಾಗಿ ಬರುತ್ತಿರುವನು. ಈ ಯೂಥಪತಿಯ ಕೈಕೆಳಗೆ ಎಪ್ಪತ್ತು ಲಕ್ಷಮಂದಿ ವಾನರರಿರುವರು. ಈ ಗವಯನೊಬ್ಬನೇ ತನ್ನ ಸೇನೆಯಮಾತ್ರದಿಂದಲೇ ಲಂಕಾನಗರವನ್ನು ಮರ್ದಿಸಲು ಬಯಸಿರುವನು. ಈ ವಾನರೋತ್ತಮರೆಲ್ಲರೂ ಯುದ್ಧದಲ್ಲಿ ಜಯಿಸಲಸಾಧ್ಯರು. ಬೇಕಾದ ರೂಪಗಳನ್ನು ತಾಳುವ ಸಾಮರ್ಥ್ಯವುಳ್ಳವರು. ಇವರಲ್ಲಿ ಪ್ರತಿಯೊಬ್ಬ ವಾನರವೀರನ ಕೈಕೆಳಗೂ ಬೇರೆಬೇರೆ ಸೇನೆಗಳಿರುವುವು. || ೪೬–೪೮ ||

ಇಂತಿದು ಸಾರಣಕೃತ ವಾನರಸೇನಾವರ್ಣನವೆಂಬ ಇಪ್ಪತ್ತಾರನೆಯ ಸರ್ಗವು
ಸಮಾಪ್ತವಾದುದು.

---

* “ವೀರಾ ಯೇಷಾಂ ಸಂಖ್ಯಾನವಿದ್ಯತೇ” ತಿ. ರಾ. ಪಾ.

# ಯುದ್ಧಕಾಂಡೇ ಸಪ್ತವಿಂಶಸ್ಸರ್ಗಃ

ತಾಂಸ್ತು ತೇಽಹಂ ಪ್ರವಕ್ಷ್ಯಾಮಿ ಪ್ರೇಕ್ಷಮಾಣಸ್ಯ ಯೂಥಪಾನ್ । ರಾಘವಾರ್ಥೇ ಪರಾಕ್ರಾಂತಾ ಯೇಚ ರಕ್ಷಂತಿ ಜೀವಿತಂ ॥ ೧ ॥ ಸ್ನಿಗ್ಧಾ ಯಸ್ಯ ಬಹುವ್ಯಾಮಾ ¶ ವಾಲಾ ಲಾಂಗೂಲಮಾಶ್ರಿತಾಃ । ತಾಮ್ರಾಃ ಪೀತಾಸ್ಸಿತಾಶ್ಶ್ವೇತಾಃ ಪ್ರಕೀರ್ಣಾ ಘೋರಕರ್ಮಣಃ ॥ ೨ ॥ ಪ್ರಗೃಹೀತಾಃ ಪ್ರಕಾಶಂತೇ ಸೂರ್ಯಸ್ಯೇವ ಮರೀಚಯಃ । ಪೃಥಿವ್ಯಾಂ ಚಾನುಕೃಷ್ಯಂತೇ ಹರೋ ನಾಮೈಷ ಯೂಥಪಃ ॥ ೩ ॥

---

ಯೇ - ಯಾವ ಯೂಥಪತಿಗಳು, ರಾಘವಾರ್ಥೇ - ಶ್ರೀರಾಮನ ನಿಮಿತ್ತವಾಗಿ, ಪರಾಕ್ರಾಂತಾಃ - ಪರಾಕ್ರಮಿಸಲುದ್ಯುಕ್ತರಾಗಿ, ಜೀವಿತಂ - ಪ್ರಾಣವನ್ನು, ನರಕ್ಷಂತಿ - ರಕ್ಷಿಸುವುದಿಲ್ಲವೋ, ತಾಂಸ್ತುಯೂಥಪಾನ್-ಅಂಥಾ ಯೂಥಪತಿಗಳನ್ನು, ಪ್ರೇಕ್ಷಮಾಣಸ್ಯ-ನೋಡುತ್ತಿರುವ, ತೇ ನಿನಗೆ, ಅಹಂ - ನಾನು, ಪ್ರವಕ್ಷ್ಯಾಮಿ - ಹೇಳುತ್ತೇನೆ. ॥ ೧ ॥ ಘೋರಕರ್ಮಣಃ - ಭಯಂಕರ ಕೃತ್ಯವುಳ್ಳ, ಯಸ್ಯ - ಯಾವ ವಾನರನ, ಲಾಂಗೂಲಂ - ಪುಚ್ಛವನ್ನು, ಆಶ್ರಿತಾಃ - ಹೊಂದಿರುವ, ವಾಲಾಃ - ರೋಮಗಳು, ಸ್ನಿಗ್ಧಾಃ - ನುಣ್ಣಗಿವೆಯೋ, ಬಹುವ್ಯಾಮಾಃ - ಅನೇಕ ಮಾರುಗಳಿರುವವೋ, ತಾಮ್ರಾಃ-ಕೆಂಪಾಗಿಯೂ, ಪೀತಾಃ - ಹಸುರುಬಣ್ಣವುಳ್ಳವುಗಳಾಗಿಯೂ, ಸಿತಾಃ - ಕೊಂಚ ಬಿಳುಪಾಗಿಯೂ, ಶ್ವೇತಾಃ-ಬಹಳ ಬೆಳ್ಳಗೂ, ಪ್ರಕೀರ್ಣಾಃ-ವಿರಳವಾಗಿಯೂ, ಪ್ರಗೃಹೀತಾಃ-ಯೆತ್ತಲ್ಪಟ್ಟುವಾಗಿಯೂ, ಸೂರ್ಯಸ್ಯ - ಸೂರ್ಯನ, ಮರೀಚಯಇವ - ಕಿರಣಗಳಂತೆ, ಪ್ರಕಾಶಂತೇ - ಹೊಳೆಯುತ್ತಲಿವೆಯೋ, ಪೃಥಿವ್ಯಾಂ - ನೆಲದಲ್ಲಿ, ಅನುಕೃಷ್ಯಂತೇಚ - ಸೆಳೆದುಕೊಂಡು ಹೋಗಲ್ಪಡುವವಾಗಿವೆಯೋ, ಏಷಃ - ಇವನು, ಹರೋನಾಮ - ಹರನೆಂದು ಪ್ರಸಿದ್ಧನಾದ, ಯೂಥಪಃ - ಯೂಥಪತಿಯು, ಯಂ - ಯಾವ ಹರನೆಂಬ ವಾನರನನ್ನು, ಹರಿರಾಜಸ್ಯ - ಸುಗ್ರೀವನಿಗೆ, ಕಿಂಕರಾಃ - ಸೇವಕರಾದ, ಯೂಥಪಾಃ -

---

“ ರಾಕ್ಷಸೇಶ್ವರಾ ! ಶ್ರೀರಾಮಕಾರ್ಯಕ್ಕಾಗಿ ಪರಾಕ್ರಮಿಸುವವರೂ, ಆತನಿಗೋಸುಗ ತಮ್ಮ ಪ್ರಾಣಗಳನ್ನು ತೊರೆಯುವುದಕ್ಕೂ ಸಿದ್ಧರಾಗಿರುವವರೂ, ಹಾಗೆಯೇ ಸಂಕಲ್ಪಿಸಿರುವವರೂ, ಮಹಾ ಪರಾಕ್ರಮಶಾಲಿಗಳಾದವರೂ ಆದ ಈ ವಾನರವೀರರೆಲ್ಲರನ್ನೂ ಕಣ್ಣಿಟ್ಟು ನೋಡು. ಇವರ ಪರಿಚಯವನ್ನು ಈಗ ಹೇಳುವೆನು ಆಲಿಸಿ ಕೇಳು. ಅದೋ, ದೀರ್ಘವಾಗಿಯೂ, ಕೆಂಪು, ಹಳದಿ, ಬಿಳುಪು ಇವೇ ಮೊದಲಾದ ವಿವಿಧ ವರ್ಣಗಳುಳ್ಳ ಬಾಲವನ್ನು ಮೇಲಕ್ಕೆತ್ತಿಕೊಂಡಿರುವುದರಿಂದ ಅದರ ಕಾಂತಿಯು ಸುತ್ತಲೂ ಹರಡಿ, ಸೂರ್ಯನಂತೆ ಪ್ರಕಾಶಿಸುತ್ತಿರುವ ವಾಲಾಗ್ರಕೇಶಗಳಿಂದ ಬೆಳಗುತ್ತಿರುವ ಈತನು ಹರನೆಂಬ ವಾನರನು. ಈತನು ಮಹಾ ಭಯಂಕರ ಕಾರ್ಯಗಳನ್ನು ಮಾಡುವಾತನು. ಪ್ರಭುವೇ ! ವಾನರೇಶ್ವರನಾದ ಸುಗ್ರೀವಾನುಚರರಾದ ಈ ವಾನರರು ಸಾವಿರಸಾವಿರವಾಗಿ ಗುಂಪುಗೂಡಿ, ವೃಕ್ಷಗಳೇ ಮೊದಲಾದುವುಗಳನ್ನು ಕೈಯಲ್ಲಿ ಹಿಡಿದು ಅತಿ ವೇಗವಾಗಿ ಲಂಕೆಯ ಮೇಲೆ ಬರಲು ಆಸಕ್ತಿ

---

¶ “ ದೀರ್ಘ ” ತಿ. ಪಾ.

ಯಂ ಪೃಷ್ಠತೋಽನುಗಚ್ಛಂತಿ ಶತಶೋಽಥ ಸಹಸ್ರಶಃ । ದ್ರುಮಾನುದ್ಯಮ್ಯ ಸಹಸಾ ಲಂಕಾರೋಹಣತತ್ಪರಾಃ ॥ ೪ ॥ * ಏಷಕೋಟಿಸಹಸ್ರೇಣ ವಾನರಾಣಾಂ ಮಹೌಜಸಾಂ । ಆಕಾಂಕ್ಷತೇ ತ್ವಾಂ ಸಂಗ್ರಾಮೇ ಜೇತುಂ ಪರಪುರಂಜಯ! । ಯೂಥಪಾ ಹರಿರಾಜಸ್ಯ ಕಿಂಕರಾಸ್ಸಮುಪಸ್ಥಿತಾಃ । ನೀಲಾನಿವ ಮಹಾಮೇಘಾಂಸ್ತಿಷ್ಠತೋ ಯಾಂಸ್ತು ಪಶ್ಯಸಿ ॥ ೫ ॥ ಅಸಿತಾಂಜನಸಂಕಾಶಾನ್ ಯುದ್ಧೇ ಸತ್ಯಪರಾಕ್ರಮಾನ್ । ಅಸಂಖ್ಯೇಯಾನನಿರ್ದೇಶ್ಯಾನ್ ಪರಂ ಪಾರಮಿವೋದಧೇಃ ॥ ೬ ॥ ಪರ್ವತೇಷು ಚ ಯೇ ಕೇಚಿ † ದ್ವಿಷಮೇಷು ನದೀಷು ಚ । ಏತೇ ತ್ವಾಮಭಿವರ್ತಂತೇ ರಾಜನ್ನೃಕ್ಷಾಸ್ಸುದಾರುಣಾಃ ॥ ೭ ॥ ಏಷಾಂ ಮಧ್ಯೇ ಸ್ಥಿತೋ ರಾಜನ್! ಭೀಮಾಕ್ಷೋ ಭೀಮ

ಯೂಥಪತಿಗಳು, ಸಮುಪಸ್ಥಿತಾಃ - ಸವಿಾಪವರ್ತಿಗಳಾಗಿ, ಸಹಸಾ - ಜಾಗ್ರತೆಯಾಗಿ, ದ್ರುಮಾನ್ - ದೊಡ್ಡ ಮರಗಳನ್ನು, ಉದ್ಯಮ್ಯ - ಎತ್ತಿಕೊಂಡು, ಲಂಕಾ....ರಾಃ - ಲಂಕಾಪಟ್ಟಣದ ಕೊತ್ತಲವನ್ನು ಹತ್ತುವ ವಿಷಯದಲ್ಲಿ ಆಸಕ್ತರಾಗಿ, ಶತಶಃ - ನೂರಾರುಗುಂಪುಗಳು, ಅಥ - ಬಳಿಕ, ಸಹಸ್ರಶಃ-ಸಾವಿರಾರುಗುಂಪುಗಳು, ಪೃಷ್ಠತಃ-ಹಿಂದುಗಡೆ, ಅನುಗಚ್ಛಂತಿ-ಅನುಸರಿಸಿ ಬರುತ್ತಾರೆಯೋ, ಏಷಃ - ಇವನೇ, ಹರಃ - ಹರನು. ॥ ೨-೪ ॥ ನೀಲಾನ್ - ಕಪ್ಪಾಗಿರುವ, ಮಹಾಮೇಘಾನಿವ - ದೊಡ್ಡ ಮುಗಿಲುಗಳಂತೆ, ತಿಷ್ಠತಃ - ಇರುತ್ತಿರುವ, ಅಸಿ....ಶಾನ್ - ಕಪ್ಪಗಿರುವ ಕಾಡಿಗೆಗೆ ಸಮಾನವಾದ, ಯುದ್ಧೇ - ಕಾಳಗದಲ್ಲಿ, ಸತ್ಯ....ಮಾನ್ - ಸಫಲವಾದ ಪರಾಕ್ರಮಗಳುಳ್ಳ, ಅಸಂಖ್ಯೇಯಾನ್ - ಗಣನೆ ಮಾಡಲಸಾಧ್ಯವಾದ, ಅನಿರ್ದೇಶ್ಯಾನ್ - ಇಷ್ಟೇಸರಿ ಎಂದು ಹೇಳಲಸಾಧ್ಯರಾದ, ಮಹೋದಧೇಃ - ಕಡಲಿನ, ಪರಂ - ಉತ್ಕೃಷ್ಟವಾದ, ಪಾರಮಿವ - ಎರಡನೆಯ ದಡದಂತಿರುವ, ಯಾಂಸ್ತು - ಯಾವ ವಾನರರನ್ನಾದರೆ, ಪಶ್ಯಸಿ - ನೋಡುತ್ತೀಯೋ, ಯೇಕೇಚಿತ್ - ಯಾವ ಕೆಲವರು, ಪರ್ವತೇಷು - ಬೆಟ್ಟಗಳಲ್ಲಿರುವರೋ, ಯೇ - ಯಾರು, ವಿಷಮೇಷು - ನಿಮ್ನೋನ್ನತ ಪ್ರದೇಶಗಳಲ್ಲಿ, ಸಂತಿ - ಇರುವರೋ, ಯೇ - ಯಾರು, ನದೀಷು ಚ - ನದಿಗಳಲ್ಲಿಯೂ, ಸಂತಿ - ಇರುತ್ತಾರೆಯೋ, ಏತೇ - ಇವರುಗಳು, ಸುದಾರುಣಾಃ - ಬಹಳ ಕ್ರೂರರಾದ, ಋಕ್ಷಾಃ - ಕರಡಿಗಳು, ಹೇ ರಾಜನ್ - ಎಲೈ ಅರಸೇ, ತ್ವಾಂ - ನಿನ್ನನ್ನು, ಅಭಿವರ್ತಂತೇ - ಎದುರುನೋಡುತ್ತಿದ್ದಾರೆ. ॥ ೫-೭ ॥ ಏಷಾಂ - ಈ ಕರಡಿಗಳ, ಮಧ್ಯೇ - ಮಧ್ಯದಲ್ಲಿ, ಸ್ಥಿತಃ - ಇರುವ, ಭೀಮಾಕ್ಷಃ - ಭಯಂಕರ ನೇತ್ರಗಳುಳ್ಳ,

ಯುಳ್ಳವರಾಗಿ ಈ ಹರನನ್ನು ಹಿಂಬಾಲಿಸಿರುವರು. ಶತ್ರುಂಜಯನೇ; ರಾವಣನೇ! ಈ ಹರನು ಮಹಾ ಪರಾಕ್ರಮಶಾಲಿಗಳಾದ ಒಂದು ಸಾವಿರ ಕೋಟಿ ವಾನರರನ್ನು ಹಿಂದಿಟ್ಟುಕೊಂಡು ಬಂದು ಯುದ್ಧದಲ್ಲಿ ನಿನ್ನನ್ನು ಜಯಿಸಲಪೇಕ್ಷಿಸುತ್ತಿರುವನು. ॥ ೧-೪ ॥ ಮಹಾರಾಜ! ಕಾರ್ಮುಗಿಲುಗಳಂತಿರುವುವೂ, ಕಪ್ಪಾದ ಕಾಡಿಗೆಯ ಬೆಟ್ಟದಂತಿರುವುವೂ, ಯುದ್ಧದಲ್ಲಿ ಬಹಳ ತಥ್ಯವಾದ ಪರಾಕ್ರಮವುಳ್ಳುವೂ, ನೋಡಲಶಕ್ಯವಾದುವೂ, ಮಹಾ ಸಮುದ್ರದಂತೆ ಪಾರವೇ ಇಲ್ಲದುವೂ ಆದ ಈ ಭಲ್ಲೂಕಗಳ ಸೇನೆಯನ್ನು ನೋಡು. ಕೆಲವು ಪರ್ವತ ಪ್ರದೇಶಗಳಲ್ಲಿಯೂ, ಕೆಲವು ನಿಮ್ನೋನ್ನತ ಭೂಮಿಗಳಲ್ಲಿಯೂ, ನದೀತೀರಗಳಲ್ಲಿಯೂ ಇರುವ ಈ ಭಲ್ಲೂಕಗಳು ಮಹಾ ಭಯಂಕರವಾಗಿರುವುವು. ಇವೂ ನಿನ್ನಮೇಲೆ ಯುದ್ಧ

* ಈ ಶ್ಲೋಕವು ತಿ. ಪಾ. ಗೋ. ಪಾಠಗಳಲ್ಲಿ ಅಧಿಕ. † "ವಿಷಯೇಷು" ತಿ ಪಾ.

ದರ್ಶನಃ । ಪರ್ಜನ್ಯ ಇವ ಜೀಮೂತೈಸ್ಸಮಂತಾತ್ಪರಿವಾರಿತಃ ॥ ೮ ॥ ಋಕ್ಷವಂತಂ ಗಿರಿಶ್ರೇಷ್ಠಮಧ್ಯಾಸ್ತೇ ನರ್ಮದಾಂ ಪಿಬನ್ । ಸರ್ವಋಕ್ಷಾಣಾಮಧಿಪತಿರ್ಧೂಮ್ರೋ ನಾಮ್ನೈಷ ಯೂಥಪಃ ॥ ೯ ॥ ಯವೀಯಾನಸ್ಯ ತು ಭ್ರಾತಾ ಪಶ್ಯೈನಂ ಪರ್ವತೋಪಮಮ್ । ಭ್ರಾತ್ರಾ ಸಮಾನೋ ರೂಪೇಣ ವಿಶಿಷ್ಟಸ್ತು ಪರಾಕ್ರಮೈಃ ॥ ೧೦ ॥ ಸ ಏಷ ಜಾಂಬವಾನ್ನಾಮ ಮಹಾಯೂಥಪಯೂಥಪಃ । ೧ಪ್ರಕ್ರಾಂತೋ ಗುರುವರ್ತೀ ಚ ಸಂಪ್ರಹಾರೇಷ್ವಮರ್ಷಣಃ ॥ ೧೧ ॥ ಏತೇನ ಸಾಹ್ಯಂ ಸುಮಹತ್ಕೃತಂ

ಭೀಮದರ್ಶನಾಃ - ಭಯಂಕರ ನೋಟವುಳ್ಳ, ಜೀಮೂತೈಃ - ಮೇಘಗಳಿಂದ, ಸಮಂತಾತ್ - ಎಲ್ಲಾ ಕಡೆಗಳಲ್ಲಿಯೂ, ಪರಿವಾರಿತಃ - ಸುತ್ತುವರೆಯಲ್ಪಟ್ಟ, ಪರ್ಜನ್ಯ ಇವ - ಮೇಘಾಭಿಮಾನಿ ದೇವತೆಯಂತಿರುವವನಾಗಿ, ನರ್ಮದಾಂ - ನರ್ಮದಾನದಿಯ ಉದಕವನ್ನು, ಪಿಬನ್ - ಕುಡಿಯುತ್ತಿರುವವನಾಗಿ, ಋಕ್ಷವಂತಂ - ಋಕ್ಷವಂತವೆಂಬ, ಗಿರಿಶ್ರೇಷ್ಠಂ - ಪರ್ವತಶ್ರೇಷ್ಠದಲ್ಲಿ, ಅಧ್ಯಾಸ್ತೇ - ಇರುತ್ತಾನೆಯೋ, ಏಷಃ - ಈತನು, ಸರ್ವಋಕ್ಷಾಣಾಂ - ಸಮಸ್ತ ಕರಡಿಗಳಿಗೆ, ಅಧಿಪತಿಃ - ಅಧಿಪತಿಯಾದ, ಧೂಮ್ರೋನಾಮ - ಧೂಮ್ರನೆಂದು ಪ್ರಖ್ಯಾತನಾದ, ಯೂಥಪಃ - ಯೂಥಪತಿಯು. ॥೮-೯॥ ಪರ್ವತೋಪಮಂ - ಬೆಟ್ಟಕ್ಕೆ ಸಮಾನನಾದ, ಏನಂ - ಇವನನ್ನು, ಪಶ್ಯ - ನೋಡು, ಅಯಂ - ಇವನು, ಅಸ್ಯ - ಈ ಧೂಮ್ರನಿಗೆ, ಯವೀಯಾನ್ಭ್ರಾತಾ - ಕಿರಿಯ ತಮ್ಮನು, ರೂಪೇಣ - ರೂಪದಿಂದ, ಭ್ರಾತ್ರಾ - ಅಣ್ಣನಾದ ಧೂಮ್ರನೊಡನೆ, ಸಮಾನಃ - ಸದೃಶನು, ಪರಾಕ್ರಮೈಃ - ಸಾಮರ್ಥ್ಯಗಳಿಂದ, ವಿಶಿಷ್ಟಃ - ಅಧಿಕನು, ಯಃ - ಯಾರೋ, ಸಏಷಃ - ಆ ಇವನು, ಜಾಂಬವಾನ್ನಾಮ - ಜಾಂಬವಂತನೆಂದು ಪ್ರಖ್ಯಾತನಾದ, ಮಹಾ....ಪಃ - ದೊಡ್ಡ ಸೇನಾಧಿಪತಿಗಳಿಗೆ ಅಧಿಪತಿಯು, ಅಯಂ - ಈತನು, ಪ್ರಕ್ರಾಂತಃ-ಪರಾಕ್ರಮವುಳ್ಳವನು, ಗುರುವರ್ತೀಚ-ಗುರುಶುಶ್ರೂಷೆ ಮಾಡತಕ್ಕವನು, ಸಂಪ್ರಹಾರೇಷು-ಕಾಳಗದಲ್ಲಿ, ಅಮರ್ಷಣಃ - ಕೋಪಿಷ್ಠನು, ಧೀಮತಾ - ಬುದ್ಧಿಶಾಲಿಯಾದ, ಏತೇನಜಾಂಬವತಾ - ಈ ಜಾಂಬವಂತನಿಂದ, ದೈವಾಸುರೇ - ದೇವರಾಕ್ಷಸರ ಯುದ್ಧದಲ್ಲಿ, ಶಕ್ರಸ್ಯ - ದೇವೇಂದ್ರನಿಗೆ, ಸುಮಹತ್ - ಬಹಳವಾದ, ಸಾಹ್ಯಂ - ಸಹಾಯವು, ಕೃತಂ - ಮಾಡಲ್ಪಟ್ಟಿತು, ಬಹವಃ - ಅನೇಕ

ಮಾಡಲು ಬರುತ್ತಿರುವುವು. ಮಹಾ ಪ್ರಭು! ಮೇಘಗಳಿಂದ ಪರಿವೇಷ್ಟಿತನಾಗಿಯೂ, ವರ್ಷಾಧಿದೇವತೆಯೂ ಆದ ದೇವೇಂದ್ರನಂತೆ ಈ ಭಲ್ಲೂಕಗಳಿಂದ ಪರಿವೇಷ್ಟಿತನಾಗಿರುವ ಈ ಸೇನಾನಾಯಕನೇ ಧೂಮ್ರನೆಂಬಾತನು. ಈತನೇ ಈ ಭಲ್ಲೂಕಗಳೆಲ್ಲಕ್ಕೂ ಪ್ರಭುವು. ಈತನು ನರ್ಮದಾ ಜಲವನ್ನು ಸೇವಿಸುತ್ತ ಋಕ್ಷವಂತವೆಂಬ ಪರ್ವತದಲ್ಲಿ ವಾಸವಾಗಿರುವನು. ಅದೋ ಅಲ್ಲಿ ಕಾಣುತ್ತಿರುವ, ಪರ್ವತಸಮಾನವಾದ ರೂಪವುಳ್ಳ ಆತನೇ ಧೂಮ್ರನ ತಮ್ಮನು; ತನ್ನ ಅಣ್ಣನಂತೆಯೇ ಮಹೋಗ್ರರೂಪವುಳ್ಳವನು ; ಪರಾಕ್ರಮದಲ್ಲಿ ಅಣ್ಣನಿಗಿಂತಲೂ ಮಿಗಿಲಾದವನು. ॥೫ ೧೦॥ ಎಲೈ ರಾಕ್ಷಸೇಶ್ವರನೇ! ಇತ್ತ ನೋಡು. ಈತನೇ ಜಾಂಬವಂತನು. ಈತನು ಅನೇಕ ಮಂದಿ ಯೂಥಪತಿಗಳಿಗೆ ಅಧಿನಾಯಕನು ; ಮಹಾ ಶೌರ್ಯವಂತನು ; ಗುರುಶುಶ್ರೂಷೆಯನ್ನು ಬಹಳ ಭಕ್ತಿಯಿಂದೆಸಗಿದವನು ; ರಣರಂಗದಲ್ಲಿ ಶತ್ರುಗಳಿಂದ ಅಜೇಯನಾದವನು. ಮಹಾ ಮತಿವಂತನಾದ ಈತನು ಹಿಂದೆ ದೇವಾಸುರ ಯುದ್ಧದಲ್ಲಿ

೧ "ಪ್ರಶಾಂತಃ" ಇ ಪಾ

ಶಕ್ರಸ್ಯ ಧೀಮತಾ । ದ್ವೈವಾಸುರೇ ಜಾಂಬವತಾ ಲಬ್ಧಾಶ್ಚ ಬಹವೋ ವರಾಃ ॥ ೧೨ ॥
ಆರುಹ್ಯ ಪರ್ವತಾಗ್ರೇಭ್ಯೋ ಮಹಾಭ್ರವಿಪುಲಾಃ ಶಿಲಾಃ । ಮುಂಚಂತಿ ವಿಪುಲಾಕಾರಾ
ನ್ನ ಮೃತ್ಯೋರುದ್ವಿಜಂತಿಚ ॥ ೧೩ ॥ ರಾಕ್ಷಸಾನಾಂಚ ಸದೃಶಾಃ ಪಿಶಾಚಾನಾಂ ಚ
ಲೋಮಶಾಃ । ಏತಸ್ಯ ಸೈನ್ಯಾ ಬಹವೋ ವಿಚರಂತ್ಯಗ್ನಿತೇಜಸಃ ॥ ೧೪ ॥ ಯತ್ತ್ವೇನ
ಮಭಿಸಂರಬ್ಧಂ ಪ್ಲವಮಾನಮಿವ ಸ್ಥಿತಂ । ಪ್ರೇಕ್ಷಂತೇ ವಾನರಾಸ್ಸರ್ವೇ ಸ್ಥಿತಾ
ಯೂಥಪಯೂಥಪಂ ॥ ೧೫ ॥ ಏಷ ರಾಜನ್! ಸಹಸ್ರಾಕ್ಷಂ ಪರ್ಯುಪಾಸ್ತೇ ಹರೀ
ಶ್ವರಃ । ಬಲೇನ ಬಲಸಂಪನ್ನೋ ದಂಭೋ ನಾಮೈಷ ಯೂಥಪಃ ॥೧೬॥ ಯಸ್ಸ್ಥಿತಂ
ಯೋಜನೇ ಶೈಲಂ ಗಚ್ಛನ್ ಪಾರ್ಶ್ವೇನ ಸೇವತೇ । ಊರ್ಧ್ವಂ ತಥೈವ ಕಾಯೇನ ಗತಃ

ಗಳಾದ, ವರಾಶ್ಚ - ವರಗಳು, ಲಬ್ಧಾಃ - ಹೊಂದಲ್ಪಟ್ಟವು. ॥ ೧೦-೧೨ ॥ ಪರ್ವತಾಗ್ರೇಭ್ಯಃ - ಬೆಟ್ಟಗಳ ತುದಿಗಳಿಂದ, ಆರುಹ್ಯ - ಏರಿ, ಮಹಾ....ಲಾಃ - ದೊಡ್ಡ ಮುಗಿಲುಗಳಂತೆ ವಿಸ್ತಾರವಾದ, ವಿಪುಲಾಕಾರಾಃ - ವಿಸ್ತಾರವಾದ ಆಕಾರಗಳುಳ್ಳ, ಶಿಲಾಃ - ಕಲ್ಲುಗಳನ್ನು, ಮುಂಚಂತಿ - ಬಿಡುತ್ತಾರೆ, ಮೃತ್ಯೋಃ - ಯಮನಿಗೂ ಕೂಡ, ನೋದ್ವಿಜಂತಿಚ - ಹೆದರುವುದಿಲ್ಲವು, ರಾಕ್ಷಸಾನಾಂ - ರಕ್ಕಸರಿಗೆ, ಸದೃಶಾಃ - ಸಮಾನಸ್ಕಂಧರು, ಪಿಶಾಚಾನಾಂಚ - ಪಿಶಾಚಗಳಿಗೂ, ಸದೃಶಾಃ - ಸಮಾನರು, ಏತಸ್ಯ - ಈ ಜಾಂಬವಂತನ, ಸೈನ್ಯಾಃ - ಸೇನೆಯಲ್ಲಿರುವರು, ಲೋಮಶಾಃ - ಬಹು ರೋಮಗಳುಳ್ಳವರು, ಬಹವಃ - ಬಹಳ ಮಂದಿಯು, ಅಗ್ನಿತೇಜಸಃ - ಅಗ್ನಿಯ ತೇಜಸ್ಸಿನಂತೆ ಪ್ರಕಾಶವುಳ್ಳವರಾಗಿ, ವಿಚರಂತಿ - ಸಂಚರಿಸುತ್ತಾರೆ. ॥ ೧೩-೧೪ ॥ ಅಭಿಸಂಕ್ರುದ್ಧಂ-ಸರ್ವಥಾ ಕೋಪಿಷ್ಠನಾದ, ಪ್ಲವ....ತಂ - ನೀರಿನಲ್ಲಿ ತೇಲಿಕೊಂಡು ಹೋಗುವವನಂತಿರುವ, ಯಂತ್ವೇನಂ - ಯಾವ ಈ, ಯೂಥ....ಪಂ-ಯೂಥಪತಿಗಳಿಗೆ ಅಧಿಪತಿಯಾದವನನ್ನು, ಸ್ಥಿತಾಃ - ಇರುತ್ತಿರುವ, ಸರ್ವೇವಾನರಾಃ - ಸಮಸ್ತ ಕಪಿಗಳೂ, ಪ್ರೇಕ್ಷಂತೇ - ನೋಡುತ್ತಾರೆಯೋ, ಹೇ ರಾಜನ್ - ಎಲೈ ಅರಸೇ, ಬಲಸಂಪನ್ನಃ - ಸಾಮರ್ಥ್ಯದಿಂದ ಕೂಡಿರುವ, ದಂಭೋನಾಮ - ದಂಭನೆಂದು ಪ್ರಖ್ಯಾತನಾದ, ಯೂಥಪಃ - ಯೂಥಪತಿಯು, ಏಷಃ - ಇವನು, ಹರೀಶ್ವರಃ- ವಾನರಶ್ರೇಷ್ಠನು, ಬಲೇನ-ಸೈನ್ಯದಿಂದ, ಸಹಸ್ರಾಕ್ಷಂ-ದೇವೇಂದ್ರನನ್ನು, ಪರ್ಯುಪಾಸ್ತೇ-ಸೇವಿಸುತ್ತಾನೆ. ॥ ೧೫-೧೬ ॥ ಯಃ - ಯಾವ ವಾನರನು, ಯೋಜನೇ - ಯೋಜನ ದೂರವು, ಸ್ಥಿತಂ - ಇರುವ, ಶೈಲಂ - ಬೆಟ್ಟವನ್ನು, ಗಚ್ಛನ್ - ಹೆಜ್ಜೆಯನ್ನಿಡುತ್ತಿರುವವನಾಗಿ, ಪಾರ್ಶ್ವೇನ - ಪಾರ್ಶ್ವ

ದೇವೇಂದ್ರನಿಗೆ ಬಹಳ ದೊಡ್ಡ ಉಪಕಾರವನ್ನು ಮಾಡಿರುವನು. ಅದರಿಂದ ತೃಪ್ತನಾದ ಮಹೇಂದ್ರನಿಂದ ಈತನು ಅನೇಕ ವರಗಳನ್ನು ಪಡೆದಿರುವನು. ಇದೂ ಅಲ್ಲದೆ ಈತನ ಕೈಕೆಳಗೆ ಮಹಾಕಾಯರಾಗಿ, ರಾಕ್ಷಸರಿಗೂ ಪಿಶಾಚಗಳಿಗೂ ಸಮಾನರಾಗಿ, ಅಗ್ನಿಸಮಾನರೂ, ಬಹಳವಾದ ಕೇಶಗಳಿಂದ ತುಂಬಿದ ದೇಹವುಳ್ಳವರೂ ಆದ ಸೈನಿಕರು ಅಸಂಖ್ಯಾತರಾಗಿದ್ದಾರೆ. ಅವರೆಲ್ಲರೂ ಪರ್ವತಶಿಖರಗಳ ಮೇಲೇರಿ ಮೇಘಗಳಿಗೆ ಸಮಾನಗಳಾದ ದೊಡ್ಡ ಬಂಡೆಗಳನ್ನು ಕೆಳಕ್ಕೆ ಬಿಸುಡುತ್ತಾರೆ. ಅವರೆಲ್ಲರೂ ಯಮನಿಗೂ ಹೆದರತಕ್ಕವರಲ್ಲವು. ॥ ೧೧–೧೫ ॥ ಎಲೈ ರಾಕ್ಷಸನಾಥನೇ! ಅದೋ ಅತ್ತನೋಡು, ಮಹಾ ಕೋಪಿಷ್ಠನೂ, ಕೋಪಾತಿಶಯದಿಂದ ಮೇಲಕ್ಕೆ ನೆಗೆಯುವನೋ ಎಂಬಂತಿರುವವನೂ ಆದ ಆ ವಾನರಶ್ರೇಷ್ಠನೇ ದಂಭನೆಂದು ಪ್ರಸಿದ್ಧನಾದವನು. ಆತನು ಮಹಾ ಪರಾಕ್ರಮಿಯಾದ ಯೂಥಪತಿಯು. ಯುದ್ಧದಲ್ಲಿ ಆತನು ಮಹೇಂದ್ರನಿಗೆ ಸಾಟಿಯಾದವನು. ಆತನ ಸೇನೆಗಳನ್ನು ನೋಡು. ಅವ

ಪ್ರಾಪ್ನೋತಿ ಯೋಜನಂ ॥ ೧೭ ॥ ಯಸ್ಮಾನ್ನ ಪರಮಂ ರೂಪಂ ಚತುಷ್ಪಾದೇಷು ವಿದ್ಯತೇ । ಶ್ರುತಸ್ಸನ್ನಾದನೋ ನಾಮ ವಾನರಾಣಾಂ ಪಿತಾಮಹಃ ॥ ೧೮ ॥ ಯೇನ ಯುದ್ಧಂ ಪುರಾ ದತ್ತಂ ರಣೇ ಶಕ್ರಸ್ಯ ಧೀಮತಾ । ಪರಾಜಯಶ್ಚ ನಪ್ರಾಪ್ತ ಸ್ಸೋಽಯಂ ಯೂಥಪಯೂಥಪಃ ॥ ೧೯ ॥ ಯಸ್ಯ ವಿಕ್ರಮಮಾಣಸ್ಯ ಶಕ್ರಸ್ಯೇವ ಪರಾಕ್ರಮಃ । ಏಷ ಗಂಧರ್ವಕನ್ಯಾಯಾಮುತ್ಪನ್ನಃ ಕೃಷ್ಣವರ್ತ್ಮನಃ ॥ ೨೦ ॥ ತದಾ ದೈವಾಸುರೇ ಯುದ್ಧೇ ಸಾಹ್ಯಾರ್ಥಂ ತ್ರಿದಿವೌಕಸಾಂ । ಯಸ್ಯ ವೈಶ್ರವಣೋ ರಾಜಾ

---

ಭಾಗದಿಂದ, ಸೇವತೇ - ಹೊಂದುತ್ತಾನೆಯೋ, ತಥೈವ - ಹಾಗೆಯೇ, ಕಾಯೇನ - ಶರೀರದಿಂದ, ಗತಃ - ಹೋಗುತ್ತಿರುವವನಾಗಿ, ಊರ್ಧ್ವಂ - ಮೇಲ್ಭಾಗದಲ್ಲಿ, ಯೋಜನಂ - ಗಾವುದವನ್ನು, ಪ್ರಾಪ್ನೋತಿ - ಹೊಂದುತ್ತಾನೆಯೋ, ಚತುಷ್ಪಾದೇಷು - ನಾಲ್ಕು ಪಾದಗಳುಳ್ಳ ಜಂತುಗಳಲ್ಲಿ, ಯಸ್ಮಾತ್ - ಯಾವನಿಗಿಂತಲೂ, ಪರಂ - ಹೆಚ್ಚಾದ, ರೂಪಂ - ಆಕಾರವು, ನವಿದ್ಯತೇ - ಇಲ್ಲವೋ, ಏಷಃ - ಈತನು, ವಾನರಾಣಾಂ - ಕಪಿಗಳಿಗೆ, ಪಿತಾಮಹಃ - ತಾತನಾದವನು, ಸನ್ನಾದನೋನಾಮ - ಸನ್ನಾದನನೆಂಬ ಪ್ರಸಿದ್ಧನಾಗಿ, ಶ್ರುತಃ - ಕೇಳಲ್ಪಟ್ಟವನು. ॥ ೧೭-೧೮ ॥ ಪುರಾ - ಪೂರ್ವದಲ್ಲಿ, ಧೀಮತಾ - ಬುದ್ಧಿವಂತನಾದ, ಯೇನ - ಯಾವ ಸನ್ನಾದನನಿಂದ, ಶಕ್ರಸ್ಯ - ದೇವೇಂದ್ರನ, ರಣೇ - ಕಾಳಗದಲ್ಲಿ, ಯುದ್ಧಂ - ಯುದ್ಧವು, ದತ್ತಂ - ಕೊಡಲ್ಪಟ್ಟಿತೋ, ಪರಾಜಯಶ್ಚ - ಪರಾಜಯವೂ, ನಪ್ರಾಪ್ತಃ - ಹೊಂದಲ್ಪಡಲಿಲ್ಲವೋ, ಸೋಽಯಂ - ಆ ಈ ಸನ್ನಾದನನು, ಯೂಥಪಯೂಥಪಃ - ಯೂಥಪತಿಗಳಿಗೆಲ್ಲಾ ಅಧಿಪತಿಯು, ವಿಕ್ರಮಮಾಣಸ್ಯ - ಪರಾಕ್ರಮಿಸುತ್ತಿರುವ, ಯಸ್ಯ - ಯಾವನ, ಪರಾಕ್ರಮಃ - ಬಲವು, ಶಕ್ರಸ್ಯ - ದೇವೇಂದ್ರನ, ಪರಾಕ್ರಮಇವ - ಪರಾಕ್ರಮದಂತಿರುವುದೋ, ಏಷಃ - ಈ ಸನ್ನಾದನನು, ಗಂಧರ್ವಕನ್ಯಾಯಾಂ - ಗಂಧರ್ವಕನ್ಯಕೆಯಲ್ಲಿ, ಕೃಷ್ಣವರ್ತ್ಮನಃ - ಅಗ್ನಿಯ ದೆಸೆಯಿಂದ, ತದಾ - ಆಕಾಲದಲ್ಲಿ, ದೈವಾಸುರೇಯುದ್ಧೇ - ದೇವಾಸುರ ಯುದ್ಧದಲ್ಲಿ, ಸಾಹ್ಯಾರ್ಥಂ - ಸಹಾಯಾರ್ಥವಾಗಿ, ಉತ್ಪನ್ನಃ-ಹುಟ್ಟಿದವನು. ॥ ೧೯-೨೦ ॥ ಯಸ್ಯ-ಯಾವ ಬೆಟ್ಟಕ್ಕೆ, ವೈಶ್ರವಣಃ-ಕುಬೇರನು, ರಾಜಾ - ಅರಸೋ, ಯಃ - ಯಾವ ಬೆಟ್ಟವು, ಜಂಬೂಂ - ಜಂಬೂವೃಕ್ಷವುಳ್ಳ, ಬಹು....ನಾಂ - ಅನೇಕ ಕಿನ್ನರರಿಗೆ ಆಶ್ರಯಭೂತವಾದ, ಪರ್ವತೇಂದ್ರಾಣಾಂ - ಪರ್ವತಶ್ರೇಷ್ಠಗಳಿಗೆ,

---

ರೆಲ್ಲರೂ ಪರಮಾಶ್ಚರ್ಯದಿಂದ ಲಂಕೆಯನ್ನು ನೋಡುತ್ತಿರುವರು. ಪ್ರಭುವೇ! ನಡೆಯುವಾಗ ಒಂದಡಿಯಿಟ್ಟ ಮಾತ್ರದಿಂದಲೇ ಯೋಜನ ದೂರದಲ್ಲಿರುವ ಪರ್ವತವನ್ನು ಸೇರುವವನೂ, ಎದ್ದು ನಿಂತಾಗ ಒಂದು ಯೋಜನದಷ್ಟು ಔನ್ನತ್ಯವಿರುವವನೂ, ಚತುಷ್ಪಾದ ಜಂತುಗಳಲ್ಲಿ ಎಲ್ಲಕ್ಕಿಂತಲೂ ಮಹಾದ್ಭುತಾಕಾರವುಳ್ಳವನೂ ಆದ ಈ ವೀರವಾನರನಾಯಕನೇ ಸನ್ನಾದನನೆಂದು ಪ್ರಸಿದ್ಧನಾದವನು. ಈತನು ಹಿಂದೆ ದೇವೇಂದ್ರನೊಡನೆ ಯುದ್ಧಮಾಡಿ ಎಷ್ಟು ಮಾತ್ರಕ್ಕೂ ಪರಾಜಯವನ್ನೇ ಹೊಂದಲಿಲ್ಲವು. ಈತನು ವಾನರಯೂಥಪತಿಗಳಲ್ಲೆಲ್ಲಾ ಶ್ರೇಷ್ಠನಾದವನು; ವಾನರರೆಲ್ಲರಿಗೂ ಪಿತಾಮಹನಾದವನು; ದೇವೇಂದ್ರನಿಗೆ ಸಮಾನವಾದ ಪರಾಕ್ರಮವುಳ್ಳವನು; ಈತನು ಯಜ್ಞೇಶ್ವರನಿಂದ ಓರ್ವ ಗಂಧರ್ವಾಂಗನೆಯಲ್ಲಿ ಜನಿಸಿದವನು. ಯಜ್ಞೇಶ್ವರನು ಪೂರ್ವದಲ್ಲಿ ದೇವಾಸುರರಿಗೆ ಯುದ್ಧವು ಘಟಿಸಿದಾಗ ಈತನನ್ನು ಹುಟ್ಟಿಸಿದನು. ॥ ೧೬–೨೦ ॥ ಎಲೈ ರಾಕ್ಷಸನಾಥನೇ! ಈ ವಾನರೋತ್ತಮನು, ನೇರಿಳೆಯಮರಗಳಿಂದೊಪ್ಪುತ್ತಿರುವ, ಸಮಸ್ತ ಕಿನ್ನರರಿಗೂ ವಾಸಸ್ಥಾನವಾದ, ನಿನ್ನ

ಜಂಬೂಮುಪನಿಷೇವತೇ ॥ ೨೧ ॥ ಯೋ ರಾಜಾ ಪರ್ವತೇಂದ್ರಾಣಾಂ ಬಹುಕಿನ್ನರ ಸೇವಿನಾಂ । ವಿಹಾರಸುಖದೋ ನಿತ್ಯಂ ಭ್ರಾತುಸ್ತೇ ರಾಕ್ಷಸಾಧಿಪ ! ॥೨೨॥ ತತ್ರೈಷ ವಸತಿ ಶ್ರೀಮಾನ್ಬಲವಾನ್ ವಾನರರ್ಷಭಃ । ಯುದ್ಧೇಷ್ವಕತ್ಥನೋ ನಿತ್ಯಂ ಕ್ರಥನೋ ನಾಮ ಯೂಥಪಃ ॥ ೨೩ ॥ ವೃತಃ ಕೋಟಿಸಹಸ್ರೇಣ ಹರೀಣಾಂ ಸಮುಪಸ್ಥಿತಃ । ಏಷೈವಾಶಂಸತೇ ಲಂಕಾಂ ಸ್ವೇನಾನೀಕೇನ ಮರ್ದಿತುಂ ॥ ೨೪ ॥ ಯೋ ಗಂಗಾಮನುಪರ್ಯೇತಿ ತ್ರಾಸಯನ್ ಹರಿಯೂಥಪಾನ್ । ಹಸ್ತಿನಾಂ ವಾನರಾಣಾಂಚ ಪೂರ್ವವೈರಮನುಸ್ಮರನ್ ॥ ೨೫ ॥ ಏಷ ಯೂಥಪತಿರ್ನೇತಾ ಗಚ್ಛನ್ ಗಿರಿಗುಹಾಶಯಃ । ಗಜಾನ್

ರಾಜಾ - ಅರಸಾಗಿ, ಉಪನಿಷೇವತೇ - ಹೊಂದಿದೆಯೋ, ಹೇ ರಾಕ್ಷಸಾಧಿಪ - ಎಲೈ ರಾಕ್ಷಸಾಧಿಪತಿಯೇ, ತೇ - ನಿನ್ನ, ಭ್ರಾತುಃ - ಅಣ್ಣನಾದ ಕುಬೇರನಿಗೆ, ನಿತ್ಯಂ - ನಿರಂತರವೂ, ವಿಹಾರಸುಖದಃ - ವಿಹಾರಸುಖವನ್ನು ಕೊಡುತ್ತಿರುವುದೋ, ತತ್ರ - ಆ ಬೆಟ್ಟದಲ್ಲಿ, (ಅಂದರೆ - ಹಿಮವತ್ಪರ್ವತದಲ್ಲಿ,) ಶ್ರೀಮಾನ್ - ಸಂಪದ್ಯುಕ್ತನಾದ, ಬಲವಾನ್ - ಬಲವಂತನಾದ, ಯುದ್ಧೇಷು - ಕಾಳಗಗಳಲ್ಲಿ, ನಿತ್ಯಂ - ನಿರಂತರವೂ, ಅಕತ್ಥನಃ - ಆತ್ಮಸ್ತುತಿಯನ್ನು ಮಾಡಿಕೊಳ್ಳದೇ ಯುದ್ಧಮಾಡತಕ್ಕ, ವಾನರರ್ಷಭಃ - ಕಪಿಶ್ರೇಷ್ಠನಾದ, ಏಷಯೂಥಪಃ - ಈ ಯೂಥಪತಿಯು, ಕ್ರಥನೋನಾಮ - ಕ್ರಥನನೆಂದು ಪ್ರಸಿದ್ಧನು, ಹರೀಣಾಂ - ವಾನರರ, ಕೋಟಿಸಹಸ್ರೇಣ - ಸಹಸ್ರಕೋಟಿಗಳಿಂದ, ವೃತಃ - ಸುತ್ತುವರಿದವನಾಗಿ, ಸಮುಪಸ್ಥಿತಃ - ಬಂದಿರುವ, ಏಷಏವ - ಈ ವಾನರನೇ, ಸ್ವೇನ - ತನ್ನ, ಅನೀಕೇನ - ಸೈನ್ಯದಿಂದ, ಲಂಕಾಂ - ಲಂಕಾಪುರವನ್ನು, ಮರ್ದಿತುಂ - ಹೊಡೆಯುವುದಕ್ಕಾಗಿ, ಆಶಂಸತೇ - ಅಪೇಕ್ಷಿಸುತ್ತಾನೆ. ॥ ೨೧-೨೪ ॥ ಯಃ - ಯಾವ ವಾನರನು, ಹಸ್ತೀನಾಂ - ಆನೆಗಳಿಗೂ, ವಾನರಾಣಾಂಚ - ಕಪಿಗಳೂ ಇದ್ದ, ಪೂರ್ವವೈರಂ - ಪೂರ್ವದಲ್ಲಿ ಹುಟ್ಟಿದ ದ್ವೇಷವನ್ನು, ಅನುಸ್ಮರನ್ - ಸ್ಮರಿಸಿ, ಹಸ್ತಿಯೂಥಪಾನ್ - ಸಲಗಗಳನ್ನು, ತ್ರಾಸಯನ್ - ಹೆದರಿಸುವವನಾಗಿ, ಗಂಗಾಂ - ಗಂಗಾನದಿಯನ್ನು, ಅನುಪರ್ಯೇತಿ - ತೀರದಲ್ಲಿ ತಿರುಗುತ್ತಾನೆಯೋ, ಏಷಃ - ಈ, ಯೂಥಪತಿಃ - ಯೂಥಪತಿಯಾದ, ನೇತಾ - ಕಪಿನಾಯಕನು, ಗಚ್ಛನ್ - ಹೋಗುತ್ತಿರುವವನಾಗಿ, ಗಿರಿ....ಯಃ - ಪರ್ವತ ಗುಹೆಗಳಲ್ಲಿ

ಅಗ್ರಜನಾದ ಕುಬೇರನಿಗೆ ವಾಸಭೂಮಿಯಾದ ಪರ್ವತೋತ್ತಮವಾದ ಹಿಮತ್ಪರ್ವತದಲ್ಲಿ ವಾಸಮಾಡುತ್ತಿರುವನು. ಇದೋ, ಈತನು ಕ್ರೋಧನನೆಂದು ಹೆಸರುಳ್ಳ ಯೂಥಪತಿಯು. ಈತನು ಮಹಾ ತೇಜಸ್ವಿಯು; ಮಹಾ ಬಲಾಢ್ಯನೂ, ಪರಾಕ್ರಮಶಾಲಿಯೂ ಆಗಿರುವನು. ಸರ್ವಕಾಲಗಳಲ್ಲಿಯೂ ಯುದ್ಧಾಸಕ್ತನಾದವನು. ರಣರಂಗದಲ್ಲಿ ಆತ್ಮಪ್ರಶಂಸೆ ಮಾಡಿಕೊಳ್ಳುವವನಲ್ಲವು. ಈ ವಾನರಯೂಥಪನ ಕೈಕೆಳಗೆ ಸಾವಿರಕೋಟಿಮಂದಿ ವಾನರವೀರರಿರುವರು. ಈ ಕ್ರೋಧನನೊಬ್ಬನೇ ತನ್ನ ಸೈನ್ಯದಿಂದ ಮಾತ್ರ ನಿನ್ನ ಈ ಲಂಕೆಯನ್ನು ಮರ್ದಿಸಲಪೇಕ್ಷಿಸಿರುವನು. ಇದೋ, ಈ ವಾನರೋತ್ತಮನನ್ನು ನೋಡು. ಈತನು ಪೂರ್ವದಲ್ಲಿ ಲಂಕೆಗೈತಂದು ಸೀತೆಯನ್ನು ಕಂಡುಹೋದ ಹನುಮಂತನ ತಂದೆಯಾದ ಕೇಸರಿಯೆಂಬವನು. ಈತನು ವಾನರರಿಗೂ, ಗಜಗಳಿಗೂ ಇದ್ದ ಪೂರ್ವವೈರವನ್ನು ಸ್ಮರಿಸಿಕೊಂಡು ಆ ಗಜಗಳನ್ನು ಭಯಗೊಳಿಸುತ್ತ, ತಾನು ಸಂಚರಿಸುವ ಮಾರ್ಗದಲ್ಲಿ ಗಜಗಳನ್ನೆತ್ತಿ ಪರ್ವತಗಳಮೇಲಕ್ಕೆತ್ತಿ ಬಡಿಯುತ್ತಲೂ, ಪರ್ವತಗಳನ್ನೆತ್ತಿ ಗಜಗಳಮೇಲೆ ಕುಕ್ಕುತ್ತಲೂ, ಮಹಾ ವೃಕ್ಷಗಳಮೇಲಕ್ಕೆ ಗಜಗಳನ್ನೂ, ಗಜಗಳಮೇಲೆ ಮಹಾ ವೃಕ್ಷಗಳನ್ನೂ ಎಸೆದು ಕಣ್ಣಿಗೆಬಿದ್ದ ಗಜಗಳೆಲ್ಲವನ್ನೂ

**ಯೋಧಯತೇ ವನ್ಯಾನ್ ಗಿರೀಂಶ್ಚೈವ ಮಹೀರುಹಾನ್ ॥ ೨೬ ॥ ಯ ಏಷ ವಾಹಿನೀಮುಖ್ಯೋ ನದೀಂ ಹೈಮವತೀಮನು । ಉಶೀರಬೀಜಮಾಶ್ರಿತ್ಯ ಪರ್ವತಂ ಮಂದರೋಪಮಂ ॥ ೨೭ ॥ ರಮತೇ ವಾನರಶ್ರೇಷ್ಠೋ ದಿವಿ ಶಕ್ರ ಇವ ಸ್ವಯಂ । ಏನಂ ಶತಸಹಸ್ರಾಣಾಂ ಸಹಸ್ರಮನುವರ್ತತೇ ॥೨೮॥ ವೀರ್ಯವಿಕ್ರಮದೃಪ್ತಾನಾಂ ನರ್ದತಾಂ ಬಲಶಾಲಿನಾಂ । ಸ ಏಷ ನೇತಾಚೈತೇಷಾಂ ವಾನರಾಣಾಂ ತರಸ್ವಿನಾಂ ॥ ೨೯ ॥ ಸ ಏಷ ದುರ್ಧರೋ ರಾಜನ್! ಪ್ರಮಾಥೀ ನಾಮ ಯೂಥಪಃ । ವಾತೇನೇವೋದ್ಧತಂ ಮೇಘಂ ಯಮೇನಮನುಪಶ್ಯಸಿ ॥ ೩೦ ॥ ಅನೀಕಮಪಿ ಸಂರಬ್ಧಂ ವಾನರಾಣಾಂ**

---

ವಾಸಿಸುವವನು, ವನ್ಯಾನ್ - ವನದಲ್ಲಿ ಹುಟ್ಟಿದ, ಗಜಾನ್ - ಗಜಗಳನ್ನೂ, ಗಿರೀಂಶ್ಚೈವ - ಪರ್ವತಗಳನ್ನೂ, ಮಹೀರುಹಾನ್ - ಗಿಡಗಳನ್ನೂ ಕುರಿತು, ಯೋಧಯತೇ-ಯುದ್ಧ ಮಾಡುವನೋ, ಯಏಷಃ-ಯಾವ ಈ, ವಾಹಿನೀಮುಖ್ಯಃ - ಸೇನೆಯಲ್ಲಿ ಮುಖ್ಯನಾದ, ವಾನರಶ್ರೇಷ್ಠಃ - ವಾನರೋತ್ತಮನು, ಹೈಮವತೀಂನದೀಮನು - ಗಂಗಾನದಿಯನ್ನನುಸರಿಸಿ, ಉಶೀರಬೀಜಂನಾಮ - ಉಶೀರಬೀಜವೆಂಬ, ಮಂದರೋಪಮಂ - ಮಂದರಪರ್ವತಕ್ಕೆ ಸಮಾನವಾದ, ಪರ್ವತಂ - ಬೆಟ್ಟವನ್ನು, ಆಶ್ರಿತ್ಯ - ಆಶ್ರಯಿಸಿ, ದಿವಿ-ಸ್ವರ್ಗದಲ್ಲಿ, ಶಕ್ರಇವ - ಇಂದ್ರನಂತೆ, ಸ್ವಯಂ-ತಾನು, ರಮತೇ-ವಿಹರಿಸುತ್ತಿದ್ದಾನೋ, ಏನಂ - ಇವನನ್ನು, ವೀರ್ಯ....ನಾಂ - ಸಾಮರ್ಥ್ಯದಿಂದಲೂ, ಪರಾಕ್ರಮದಿಂದಲೂ ಗರ್ವಿತರಾದ, ನರ್ದತಾಂ - ಕೂಗುತ್ತಿರುವ, ಬಲಶಾಲಿನಾಂ - ಸಾಮರ್ಥ್ಯದಿಂದೊಪ್ಪುವ ವಾನರರ, ಶತಸಹಸ್ರಾಣಾಂ-ಲಕ್ಷಗಳ, ಸಹಸ್ರಂ - ಸಾವಿರವು, ಅನುವರ್ತತೇ - ಅನುಸರಿಸುತ್ತದೆ, ಸಏಷಃ - ಆ ಈ ವಾನರನು, ತರಸ್ವಿನಾಂ - ಬಲವಂತರಾದ, ಏತೇಷಾಂವಾನರಾಣಾಂ - ಈ ಕಪಿಗಳಿಗೆ, ನೇತಾ - ನಾಯಕನು. ॥ ೨೭ ೨೯ ॥ ಹೇ ರಾಜನ್ - ಎಲೈ ಅರಸೇ, ಯತ್ರ - ಯಾವ ಸೈನ್ಯಗಳಲ್ಲಿ, ಪವನೇನ - ಗಾಳಿಯಿಂದ, ಸಮಂತತಃ - ಎಲ್ಲಾ ಕಡೆಗಳಲ್ಲಿಯೂ, ಊದ್ಧೂತಂ - ಕೊಡಹಲ್ಪಟ್ಟ, ಅರುಣಾಭಾಸಂ - ಕೆಂಪಾಗಿ ಹೊಳೆಯುತ್ತಿರುವ, ಬಹುಧಾ - ಅನೇಕ ಪ್ರಕಾರವಾಗಿ, ವಿವರ್ತಮಾನಂ - ತಿರುಗುವ, ಏತತ್ - ಈ, ಬಹುಳಂ - ಅನೇಕವಾದ, ರಜಶ್ಚ - ಧೂಳಿಯು, ದೃಶ್ಯತೇ - ಕಾಣಲ್ಪಡುವುದೋ, ವಾತೇನ - ಗಾಳಿಯಿಂದ, ಉದ್ಧತಂ - ಹೊಡೆಯಲ್ಪಟ್ಟ, ಮೇಘಮಿವ - ಮೇಘವನ್ನಂತೆ, ತರಸ್ವಿನಾಂ - ವೇಗವಂತರಾದ,

---

ಕೊಳ್ಳುತ್ತ ಗಂಗಾನದೀರತೀರದಲ್ಲಿರುವ ಪರ್ವತಗಳ ಗುಹಾಪ್ರದೇಶಗಳಲ್ಲಿ ವಾಸಮಾಡಿಕೊಂಡಿರುವವನು. ಈತನೇ ಈ ವಾನರಸೇನೆಗೆಲ್ಲಾ ಮುಖ್ಯನಾದವನು. ಈ ವಾನರೋತ್ತಮನು ಹಿಮವತ್ಪರ್ವತದಲ್ಲಿ ಹುಟ್ಟಿದುದೂ, ಗಂಗಾನದಿಗೆ ಸಮೀಪವಾಗಿರುವುದೂ ಆದ ಉಶೀರಬೀಜವೆಂಬ ಪರ್ವತದಲ್ಲಿ ದೇವೇಂದ್ರನು ಸ್ವರ್ಗದಲ್ಲಿ ಎಂತೋ ಅಂತು ವಿಹರಿಸುತ್ತಿರುವವನು. ಈತನ ಕೈಕೆಳಗೆ ಒಂದುಸಾವಿರ ಲಕ್ಷಮಂದಿ ವೀರವಾನರರಿರುವರು. ಈತನು ಉತ್ಸಾಹದಿಂದಲೂ, ಶೌರ್ಯದಿಂದಲೂ ಗರ್ವಿಸಿ ಸಿಂಹನಾದಗಳನ್ನು ಮಾಡುತ್ತಿರುವ ಮಹಾ ಬಲಪರಾಕ್ರಮಶಾಲಿಗಳೂ, ಮಹಾ ವೇಗವುಳ್ಳವರೂ ಆದ ಆ ಒಂದು ಸಾವಿರ ಲಕ್ಷಮಂದಿಗಳಿಗೂ ಅಧಿನಾಯಕನು. ॥ ೨೦–೨೯ ॥ ಒಡೆಯಾ ! ಅದೋ ; ನೋಡು. ಅಲ್ಲಿ ವಾಯುವಿನಿಂದ ಹಾರಿಸಲ್ಪಟ್ಟು, ರಕ್ತಕಾಂತಿಯುಳ್ಳುದಾಗಿ ನಾನಾವಿಧಗಳಾದ ಸುಳಿಗಳಾಗಿ ತಿರುಗುತ್ತಿರುವ ಧೂಳಿಯು ಕಾಣುತ್ತಿರುವುದಷ್ಟೆ! ಅಲ್ಲಿ ಮಹಾ ಬಲಿಷ್ಠರಾದ ವಾನರಸೇನೆಗಳು ಯುದ್ಧಸಂರಂಭದಿಂದಿರುವುವು. ಅವುಗಳ ನಡುವೆ ಗಾಳಿಯಿಂದ ಹಾರಿಸಲಾದ

ತರಸ್ವಿನಾಂ | ಉದ್ಧೂತಮರುಣಾಭಾಸಂ ಪವನೇನ ಸಮಂತತಃ | ವಿವರ್ತಮಾನಂ ಬಹುಧಾ ಯತ್ರೈತದ್ಬಹುಳಂ ರಜಃ ||೩೦|| ಏತೇ ಸಿತಮುಖಾ ಘೋರಾ ಗೋಲಾಂಗೂಲಾ ಮಹಾಬಲಾಃ | ಶತಂ ಶತಸಹಸ್ರಾಣಿ ದೃಷ್ಟ್ವಾ ವೈ ಸೇತುಬಂಧನಂ || ೩೨ || ಗೋಲಾಂಗೂಲಂ ಮಹಾವೇಗಂ ಗವಾಕ್ಷಂ ನಾಮ ಯೂಥಪಂ | ಪರಿವಾರ್ಯಾಭಿವರ್ತಂತೇ ಲಂಕಾಂ ಮರ್ದಿತುಮೋಜಸಾ || ೩೩ || ಭ್ರಮರಾಚರಿತಾ ಯತ್ರ ಸರ್ವಕಾಲಫಲದ್ರುಮಾಃ | ಯಂ ಸೂರ್ಯಸ್ತುಲ್ಯವರ್ಣಾಭಮನುಪರ್ಯೇತಿ ಪರ್ವತಂ || ೩೪ || ಯಸ್ಯ ಭಾಸಾ ಸದಾ ಭಾಂತಿ ತದ್ವರ್ಣಾ ಮೃಗಪಕ್ಷಿಣಃ | ಯಸ್ಯ ಪ್ರಸ್ಥಂ ಮಹಾತ್ಮಾನೋ ನತ್ಯಜಂತಿ ಮಹರ್ಷಯಃ || ೩೫ || ಸರ್ವಕಾಮಫಲಾ ವೃಕ್ಷಾಸ್ಸದಾ

---

ವಾನರಾಣಾಂ - ವಾನರರ, ಸಂರಬ್ಧಂ - ಕೋಪಯುಕ್ತವಾದ, ತದನೀಕಮಪಿ - ಆ ಸೈನ್ಯವನ್ನೂ, ಯವೇನಂ - ಯಾವ ಇವನನ್ನು ನೋಡುತ್ತೀಯೋ, ಸಏಷಃ - ಆ ಇವನು, ದುರ್ಧರಃ - ಯುದ್ಧದಲ್ಲಿ ಸಹಿಸಲಸಾಧ್ಯನಾದ, ಪ್ರಮಾಥೀನಾಮ - ಪ್ರಮಾಥಿ ಎಂಬ, ಯೂಥಪಃ - ಯೂಥಪತಿಯು. ||೩೦-೩೧|| ಸಿತಮುಖಾಃ - ಬೆಳ್ಳಗಿರುವ ಮುಖಗಳುಳ್ಳ, ಘೋರಾಃ - ಭಯಂಕರರಾದ, ಮಹಾಬಲಾಃ - ಬಹು ಬಲವಂತರಾದ, ಶತಂಶತಸಹಸ್ರಾಣಿ - ನೂರುಲಕ್ಷ ಸಂಖ್ಯೆಯುಳ್ಳ, ಏತೇಗೋಲಾಂಗೂಲಾಃ - ಈ ಶಿವಂಗಿಗಳು, ಸೇತುಬಂಧನಂ - ಸೇತುನಿರ್ಮಾಣವನ್ನು, ದೃಷ್ಟ್ವಾ - ಕಂಡು, ಮಹಾವೇಗಂ - ಬಹು ವೇಗವಂತನಾದ, ಗೋಲಾಂಗೂಲಂ - ಗೋಪುಚ್ಛನಾದ, ಗವಾಕ್ಷಂನಾಮ - ಗವಾಕ್ಷನೆಂದು ಪ್ರಖ್ಯಾತನಾದ, ಯೂಥಪಂ - ಯೂಥಪತಿಯನ್ನು, ಪರಿವಾರ್ಯ - ಸುತ್ತುವರೆದು, ಓಜಸಾ - ಸಾಮರ್ಥ್ಯದಿಂದ ಲಂಕಾಂ - ಲಂಕಾಪಟ್ಟಣವನ್ನು, ಮರ್ದಿತುಂ - ಹೊಡೆಯುವುದಕ್ಕಾಗಿ, ಅಭಿವರ್ತಂತೇ - ಎದುರಾಗಿ ನಿಂತಿದ್ದಾರೆ. || ೩೨-೩೩ || ಯತ್ರ - ಯಾವ ಕಾಂಚನ ಪರ್ವತದಲ್ಲಿ, ಸರ್ವ....ಮಾಃ - ಯಾವಾಗಲೂ ಫಲಗಳುಳ್ಳ ಗಿಡಗಳು, ಭ್ರಮ......ತಾಃ - ದುಂಬಿಗಳಿಂದ ಸಂಚಾರ ಮಾಡಲ್ಪಟ್ಟವುಗಳೋ, ಸೂರ್ಯಃ - ಸೂರ್ಯನು, ತುಲ್ಯವರ್ಣಾಭಂ - ಸಮಾನಕಾಂತಿಯುಳ್ಳ, ಯಂಪರ್ವತಂ - ಯಾವ ಬೆಟ್ಟವನ್ನು, ಅನುಪರ್ಯೇತಿ - ಅನುಸರಿಸಿ ಸಂಚಾರಮಾಡುತ್ತಾನೆಯೋ, ಯಸ್ಯ - ಯಾವ ಪರ್ವತದ, ಭಾಸಾ - ಕಾಂತಿಯಿಂದ, ಮೃಗಪಕ್ಷಿಣಃ - ಮೃಗಗಳೂ, ಹಕ್ಕಿಗಳೂ, ಸದಾ - ನಿರಂತರವೂ, ತದ್ವರ್ಣಾಃ - ಆ ಸುವರ್ಣ ವರ್ಣವುಳ್ಳವುಗಳಾಗಿ, ಭಾಂತಿ - ಹೊಳೆಯುವವೋ, ಮಹಾತ್ಮಾನಃ - ಮಹಾ ಪ್ರಭಾವವಂತರಾದ, ಮಹರ್ಷಯಃ - ಮಹಾ ಮುನಿಗಳು, ಯಸ್ಯ - ಯಾವ ಕಾಂಚನಪರ್ವತದ, ಪ್ರಸ್ಥಂ - ಜರಿ

---

ಮುಗಿಲಂತಿರುವವನೂ, ಎಂತಹನಿಗಾದರೂ ಸಹಿಸಲಸಾಧ್ಯನೂ ಆದ ಪ್ರಮಾಥಿಯೆಂಬ ಸೇನಾನಾಯಕನಿರುವನು. ಎಲೈ ಪ್ರಭುವೇ! ಬಿಳುಪಾದ ಮುಖಗಳುಳ್ಳವರಾಗಿ ಮಹಾ ಬಲಸಂಪತ್ತಿಯುಳ್ಳ ಹತ್ತುಕೋಟಿಮಂದಿ ಗೋಲಾಂಗೂಲಗಳು ಸೇತುವೆಯನ್ನು ಕಟ್ಟಿ ಮುಗಿಸಿದೊಡನೆಯೇ ಲಂಕೆಯನ್ನು ಮರ್ದಿಸಲು ಬಯಸಿದ್ದು ಇದೀಗ ಮಹಾ ವೇಗದಿಂದ ಬರುತ್ತಿರುವುವು. ಇವುಗಳಿಗೆಲ್ಲ ಅಧಿನಾಯಕನಾದವನು ಗವಾಕ್ಷನೆಂದು ಪ್ರಸಿದ್ಧನಾದವನು. ಅದೋ, ಆತನು ಆ ಗೋಲಾಂಗೂಲಗಳ ನಡುವೆ ಮಹಾ ವೇಗದಿಂದೈತರುತ್ತಿರುವನು. ನೋಡು. ಎಲೈ ಮಹಾರಾಜನೇ! ಎಲ್ಲ ಕಾಲಗಳಲ್ಲಿಯೂ ಫಲಿಸುವ ವೃಕ್ಷಗಳಿಂದೊಪ್ಪಿರುವುದರಿಂದ ದುಂಬಿಗಳಿಂದ ಕೂಡಿರುವುದೂ, ಸೂರ್ಯನು ತನ್ನ ಸಮೀಪಕ್ಕೆ ಬರುವುದರಿಂದ ಕಾಂಚನಮಯವಾದ ಕಾಂತಿಯನ್ನೊಳಕೊಂಡಿರುವುದೂ, ಅಲ್ಲಿ ಸಂಚರಿಸುತ್ತಿರುವ ಮೃಗಪಕ್ಷಿಗಳೆಲ್ಲವನ್ನೂ

ಫಲಸಮನ್ವಿತಾಃ । ಮಧೂನಿ ಚ ಮಹಾರ್ಹಾಣಿ ಯಸ್ಮಿನ್ ಪರ್ವತಸತ್ತಮೇ ॥ ೩೬ ॥
ತತ್ರೈಷ ರಮತೇ ರಾಜನ್! ರಮ್ಯೇ ಕಾಂಚನಪರ್ವತೇ । ಮುಖ್ಯೋ ವಾನರ
ಮುಖ್ಯಾನಾಂ ಕೇಸರೀ ನಾಮ ಯೂಥಪಃ ॥೩೭॥ ಷಷ್ಟಿರ್ಗಿರಿಸಹಸ್ರಾಣಾಂ ರಮ್ಯಾಃ
ಕಾಂಚನಪರ್ವತಾಃ । ತೇಷಾಂ ಮಧ್ಯೇ ಗಿರಿವರಸ್ತ್ವಮಿವಾಽನಘ! ರಕ್ಷಸಾಂ ॥೩೮॥
ತತ್ರೈತೇ ಕಪಿಲಾಃ ಶ್ವೇತಾ ಸ್ತಾಮ್ರಾಸ್ಯಾ ಮಧುಪಿಂಗಳಾಃ । ನಿವಸಂತ್ಯುತ್ತಮಗಿರೌ
ತೀಕ್ಷ್ಣದಂಷ್ಟ್ರಾ ನಖಾಯುಧಾಃ ॥ ೩೯ ॥ ಸಿಂಹಾಇವ ಚತುರ್ದಂಷ್ಟ್ರಾ ವ್ಯಾಘ್ರಾಇವ

---

ಯನ್ನು, ನತ್ಯಜಂತಿ - ಬಿಡುವುದಿಲ್ಲವೋ, ಯಸ್ಮಿನ್‌ಪರ್ವತಸತ್ತಮೇ - ಯಾವ ಪರ್ವತಶ್ರೇಷ್ಠದಲ್ಲಿ, ಸರ್ವ....ಲಾಃ - ಸಮಸ್ತರಿಂದಲೂ ಅಪೇಕ್ಷಿಸಲ್ಪಟ್ಟ ಫಲಗಳುಳ್ಳ, ವೃಕ್ಷಾಃ - ಮರಗಳು, ಸದಾ - ಯಾವಾಗಲೂ, ಫಲಸಮನ್ವಿತಾಃ-ಫಲಯುಕ್ತವಾಗಿರುವವೋ, ಮಧೂನಿ-ಜೇನುಗಳು, ಮಹಾರ್ಹಾಣಿ-ಅಮೂಲ್ಯವಾಗಿವೆಯೋ, ಹೇ ರಾಜನ್ - ಎಲೈ ಅರಸೇ, ರಮ್ಯೇ - ಮನೋಹರವಾದ, ತತ್ರಕಾಂಚನ ಪರ್ವತೇ - ಆ ಕಾಂಚನ ಪರ್ವತದಲ್ಲಿ, ವಾನರಮುಖ್ಯಾನಾಂ - ಶ್ರೇಷ್ಠರಾದ ವಾನರರಲ್ಲಿ, ಮುಖ್ಯಃ - ಪ್ರಧಾನನಾದ, ಏಷಃ-ಈ ಪರಿದೃಶ್ಯನಾದ, ಕೇಸರೀನಾಮ-ಕೇಸರೀ ಎಂದು ಪ್ರಸಿದ್ಧನಾದ, ಯೂಥಪಃ-ಯೂಥಪತಿಯು, ರಮತೇ-ವಿಹಾರಮಾಡುತ್ತಾನೆ. ॥೩೪-೩೭॥ ಹೇ ಅನಘ-ಎಲೈ ದೋಷರಹಿತನೇ, ಗಿರಿ ಸಹಸ್ರಾಣಾಂ - ಸಾವಿರಾರು ಪರ್ವತಗಳ, ಷಷ್ಟಿಃ - ಅರುವತ್ತು, ಅಸ್ತಿ - ಇರುವುದು, (ತೇ - ಅವು ಗಳು,) ರಮ್ಯಾಃ - ಮನೋಹರವಾದ, ಕಾಂಚನಪರ್ವತಾಃ - ಸುವರ್ಣವಿಕಾರವಾದ ಪರ್ವತಗಳು, ರಕ್ಷಸಾಂ - ರಾಕ್ಷಸರೊಳಗೆ, ತ್ವಮಿವ - ನಿನ್ನಂತೆ, ತೇಷಾಂ - ಆ ಪರ್ವತಗಳ, ಮಧ್ಯೇ - ಮಧ್ಯ ದಲ್ಲಿ, ಗಿರಿವರಃ - ಪರ್ವತಶ್ರೇಷ್ಠವಾದ ಮೇರುಪರ್ವತವು, ಅಸ್ತಿ - ಇರುವುದು, ತತ್ರ - ಆ, ಉತ್ತಮ ಗಿರೌ - ಶ್ರೇಷ್ಠವಾದ ಮೇರುಪರ್ವತದಲ್ಲಿ, ಕಪಿಲಾಃ - ಕಪಿಲವರ್ಣವುಳ್ಳ, ಶ್ವೇತಾಃ - ಶುಭ್ರವಾದ, ತಾಮ್ರಾಸ್ಯಾಃ - ಕೆಂಪಾದ ಮುಖಗಳುಳ್ಳ, ಮಧುಪಿಂಗಳಾಃ - ಜೇನಿನಂತೆ ಪಿಂಗಳವರ್ಣವುಳ್ಳ, ತೀಕ್ಷ್ಣದಂಷ್ಟ್ರಾಃ - ಮೊನಚಾದ ಕೋರೆಹಲ್ಲುಗಳುಳ್ಳ, ಏತೇನಖಾಯುಧಾಃ - ಈ ವಾನರರು, ನಿವ ಸಂತಿ - ಇದ್ದಾರೆ, ಸರ್ವೇ - ಎಲ್ಲರೂ, ಸಿಂಹಾಇವ - ಸಿಂಹಗಳಂತೆ, ಚತುರ್ದಂಷ್ಟ್ರಾಃ - ನಾಲ್ಕು ಕೋರೆದಾಡೆಗಳುಳ್ಳವರು, ವ್ಯಾಘ್ರಾಇವ - ಹುಲಿಗಳಂತೆ, ದುರಾಸದಾಃ - ಹೊಂದಲಸಾಧ್ಯರು,

---

ತನ್ನ ಕಾಂತಿಗೆ ಸಮಾನವಾದ ಕಾಂತಿಯುಳ್ಳವುಗಳನ್ನಾಗಿ ಮಾಡುತ್ತಿರುವುದೂ, ನಿರಂತರವೂ ಮಹರ್ಷಿಸಮೂಹಗಳಿಂದೊಪ್ಪುತ್ತಿರುವುದೂ, ಸಮಸ್ತ ಫಲವೃಕ್ಷಗಳಿಂದ ನಿಬಿಡವಾಗಿರು ವುದೂ ಆದ ಸುಮೇರುಪರ್ವತದಲ್ಲಿ ವಾಸಿಸುತ್ತಿರುವ ವಾನರವೀರನೇ ಈ ಕೇಸರಿಯು. ॥೩೦-೩೭॥ ಎಲೈ ಅನಘನೇ, ರಾವಣಾಸುರನೇ! ಬಹು ರಮಣೀಯಗಳಾದ ಒಂದುಸಾವಿರ ಕಾಂಚನಪರ್ವತಗಳಿರುವುವು. ರಾಕ್ಷಸರಲ್ಲಿ ನೀನು ಹೇಗೆ ಸರ್ವೋತ್ತಮನಾಗಿರುವೆಯೋ ಹಾಗೆಯೇ ಅವುಗಳಲ್ಲಿಯೂ ಒಂದು ಪರ್ವತೋತ್ತಮವಿರುವುದು. ಕಪಿಲವರ್ಣವುಳ್ಳವರೂ, ಬೆಳುದಿಂಗಳ ಬಣ್ಣವುಳ್ಳವರೂ, ಕೆಂಪುಬಣ್ಣದ ಮುಖಗಳುಳ್ಳವರೂ, ಮಧುವಿನಂತೆಯೂ, ಗೋರೋಚನದಂತೆಯೂ ದೇಹಚ್ಛಾಯೆಯುಳ್ಳವರೂ, ಮೊನಚಾದ ಉಗುರುಗಳೇ ಆಯುಧ ಗಳಾಗುಳ್ಳವರೂ, ನಾಲ್ಕು ಕೋರೆದಾಡೆಗಳುಳ್ಳ ಸಿಂಹಗಳನ್ನು ಹೋಲುವವರೂ, ಮಹಾ ವ್ಯಾಘ್ರಗಳಂತೆ ದುರ್ಜಯರೂ, ಬೆಂಕಿಗೆ ಸಮಾನರಾದವರೂ, ಮಹಾ ಕ್ರೂರಸರ್ಪಗಳಂತಿರು ವವರೂ, ಬಹು ದೀರ್ಘವಾದ ವಾಲಗಳುಳ್ಳವರೂ, ಮದದಾನೆಗಳಿಗೆ ಸಮಾನರೂ, ಮಹಾ

ದುರಾಸದಾಃ । ಸರ್ವೇ ವೈಶ್ವಾನರಸಮಾ ಜ್ವಲಿತಾಶೀವಿಷೋಪಮಾಃ ॥ ೪೦ ॥ ಸುದೀರ್ಘಾಂಚಿತಲಾಂಗೂಲಾ ಮತ್ತಮಾತಂಗಸನ್ನಿಭಾಃ । ಮಹಾಪರ್ವತಸಂಕಾಶಾ ಮಹಾಜೀಮೂತನಿಸ್ವನಾಃ ॥ ೪೧ ॥ ವೃತ್ತಪಿಂಗಳರಕ್ತಾಕ್ಷಾ ಭೀಮಾಭೀಮಗತಿಸ್ವರಾಃ । ಮರ್ದಯಂತೀವ ತೇಸರ್ವೇ ತಸ್ಥುರ್ಲಂಕಾಂ ಸಮೀಕ್ಷ್ಯತೇ ॥ ೪೨ ॥ ಏಷ ಚೈಷಾಮಧಿಪತಿರ್ಮಧ್ಯೇ ತಿಷ್ಠತಿ ವೀರ್ಯವಾನ್ । § ಜಯಾರ್ಥೀ ನಿತ್ಯಮಾದಿತ್ಯಮುಪತಿಷ್ಠತಿ ಬುದ್ಧಿಮಾನ್ ॥ ೪೩ ॥ ನಾಮ್ನಾ ಪೃಥಿವ್ಯಾಂ ವಿಖ್ಯಾತೋ ರಾಜನ್! ಶತವಲೀತಿಯಃ । ಏಷೈವಾಶಂಸತೇ ಲಂಕಾಂ ಸ್ವೇನಾನೀಕೇನ ಮರ್ದಿತುಂ ॥ ೪೪ ॥ ವಿಕ್ರಾಂತೋ

---

ಸರ್ವೇ - ಸಮಸ್ತರೂ, ವೈಶ್ವಾನರಸಮಾಃ - ಅಗ್ನಿಗೆ ಸಮಾನರು, ಜ್ವಲಿ......ಮಾಃ - ಪ್ರಜ್ವಲಿಸುವ ಸರ್ಪಗಳಿಗೆ ಸಮಾನರು, ಸುದೀ......ಲಾಃ - ಬಹಳ ಉದ್ದವಾಗಿ ಎತ್ತಲ್ಪಟ್ಟ ಬಾಲಗಳುಳ್ಳವರು, ಮತ್ತ.....ಭಾಃ - ಮದವೇರಿದ ಆನೆಗಳಿಗೆ ಸಮಾನವಾದವರು, ಮಹಾ....ಶಾಃ - ದೊಡ್ಡ ಬೆಟ್ಟಕ್ಕೆ ಸಮಾನರು, ಮಹಾ....ನಾಃ-ದೊಡ್ಡ ಮೇಘಧ್ವನಿಗೆ ಸಮಾನವಾದ ಧ್ವನಿಯುಳ್ಳವರು, ವೃತ್ತ....ಕ್ಷಾಃ-ಗುಂಡಾಗಿಯೂ, ಪಿಂಗಳವರ್ಣವಾಗಿಯೂ, ಕೆಂಪಾಗಿಯೂ ಇರುವ ಕಣ್ಣುಗಳುಳ್ಳವರು, ಭೀಮ....ರಾಃ-ಅತ್ಯಂತ ಭಯಂಕರವಾದ ಗಮನವೂ, ಸ್ವರವೂ ಉಳ್ಳವರು, ತೇಸರ್ವೇ - ಅವರೆಲ್ಲರೂ, ತೇ - ನಿನ್ನ, ಲಂಕಾಂ - ಲಂಕಾಪಟ್ಟಣವನ್ನು, ಸಮೀಕ್ಷ್ಯ - ಕಂಡು, ಮರ್ದಯಂತೀವ - ಹೊಡೆಯುವರೋ ಎಂಬಂತೆ, ತಸ್ಥುಃ - ನಿಂತಿದ್ದಾರೆ. ॥ ೩೮-೪೨ ॥ ವೀರ್ಯವಾನ್ - ಪರಾಕ್ರಮಶಾಲಿಯಾದ, ಏಷಃ - ಇವನು, ಏಷಾಂ - ಇವರುಗಳಿಗೆ, ಅಧಿಪತಿಃ - ಅಧಿಪತಿಯಾಗಿ, ಮಧ್ಯೇ - ಮಧ್ಯಪ್ರದೇಶದಲ್ಲಿ, ತಿಷ್ಠತಿ - ಇರುತ್ತಾನೆ, ಬುದ್ಧಿಮಾನ್ - ಬುದ್ಧಿವಂತನಾದ, ಯಃ - ಯಾವ ವಾನರನು, ನಿತ್ಯಂ - ನಿರಂತರವೂ, ಜಯಾರ್ಥೀ - ರಾಮಜಯವನ್ನು ಇಚ್ಛಿಸುವವನಾಗಿ, ಆದಿತ್ಯಂ - ಸೂರ್ಯನನ್ನು, ಉಪತಿಷ್ಠತಿ-ಉಪಸ್ಥಾನ ಮಾಡುತ್ತಾನೆಯೋ, ಪೃಥಿವ್ಯಾಂ - ನೆಲದಲ್ಲಿ, ನಾಮ್ನಾ-ಹೆಸರಿನಿಂದ, ಶತವಲಿಃ-ಶತವಲಿಯೆಂದು, ವಿಖ್ಯಾತಃ-ಪ್ರಸಿದ್ಧನೋ, ಹೇ ರಾಜನ್-ಎಲೈ ಅರಸೇ, (ಸಃ-ಅವನು) ಸ್ವೇನಾನೀಕೇನ-ತನ್ನ ಸೈನ್ಯದಿಂದ, ಲಂಕಾಂ - ಲಂಕಾಪಟ್ಟಣವನ್ನು, ಮರ್ದಿತುಂ - ಹೊಡೆಯುವುದಕ್ಕಾಗಿ, ಆಶಂಸತೇ -

---

ಪರ್ವತಗಳಂತಿರುವರೂ, ಮಹಾ ಮೇಘಧ್ವನಿಯಂತೆ ಸಿಂಹನಾದ ಮಾಡುವವರೂ, ಗುಂಡಾಗಿಯೂ, ರಕ್ತಪಿಂಗಳ ವರ್ಣವುಳ್ಳವುಗಳಾಗಿಯೂ ಇರುವ ನೇತ್ರಗಳುಳ್ಳವರಾಗಿ, ಮಹಾ ಭಯಂಕರರೂ, ಮಹಾ ಭಯಂಕರವಾದ ಗಮನವೂ, ಕಂಠಧ್ವನಿಯೂ ಉಳ್ಳ ಈ ವಾನರರೆಲ್ಲರೂ ಆ ಉತ್ತಮಪರ್ವತದಲ್ಲಿ ವಾಸಮಾಡುವವರು ; ಇವರಲ್ಲರೂ ಈ ಲಂಕಾನಗರವನ್ನು ನೋಡಿದೊಡನೆಯೇ ಪುಡಿಗುಟ್ಟಲು ಯೋಚಿಸಿದ್ದಾರೆ. ॥ ೩೮—೪೨ ॥ ಓ ರಾಕ್ಷಸೇಶ್ವರನೇ! ಅದೋ ನೋಡು ; ಈ ವಾನರರೆಲ್ಲರಿಗೂ ಸೇನಾನಾಯಕನು ಇವರ ನಡುವೆ ಪ್ರಕಾಶಿಸುತ್ತಿರುವನು. ಇವನ ಹೆಸರು ಶತವಲಿಯೆಂದು ಭೂಲೋಕದಲ್ಲೆಲ್ಲಾ ಪ್ರಸಿದ್ಧವಾಗಿದೆ; ಮಹಾ ಶೂರನು ; ಮಹಾ ಮೇಧಾವಿಯು ; ಆತನು ಜಯೇಚ್ಛೆಯುಳ್ಳವನಾಗಿ ನಿರಂತರವೂ ಸೂರ್ಯನನ್ನು ಆರಾಧಿಸುತ್ತಿರುತ್ತಾನೆ. ಆತನೊಬ್ಬನೇ ತನ್ನ ಸೈನ್ಯದೊಡನೆ ಬಂದು ಈ ಲಂಕೆಯನ್ನು ಮರ್ದಿಸಬಯಸಿರುವನು. ಆತನು ಮಹಾ ಪರಾಕ್ರಮಶಾಲಿಯಾದವನು.

---

§ “ರಾಜ್ಯಾರ್ಥೀ” ರಾ. ಪಾ.

ಬಲವಾ೯ ಶೂರಃ ಪೌರುಷೇ ಸ್ವೇ ವ್ಯವಸ್ಥಿತಃ । ರಾಮಪ್ರಿಯಾರ್ಥಂ ಪ್ರಾಣಾನಾಂ ದಯಾಂ ನಕುರುತೇ ಹರಿಃ ॥ ೪೫ ॥ ಗಜೋ ಗವಾಕ್ಷೋ ಗವಯೋ ನಳೋ ನೀಲಶ್ಚ ವಾನರಃ । ಏಕೈಕಏವ ಯೂಥಾನಾಂ ಕೋಟಿಭಿರ್ದಶಭಿರ್ವೃತಃ ॥ ೪೬ ॥ ತಥಾನ್ಯೇ ವಾನರಶ್ರೇಷ್ಠಾ ವಿಂಧ್ಯಪರ್ವತವಾಸಿನಃ । ನಶಕ್ಯಂತೇ ಬಹುತ್ವಾತ್ತು ಸಂಖ್ಯಾತುಂ ಲಘುವಿಕ್ರಮಾಃ ॥ ೪೭ ॥

ಸರ್ವೇ ಮಹಾರಾಜ! ಮಹಾಪ್ರಭಾವಾ ಸ್ಸರ್ವೇ ಮಹಾಶೈಲನಿಕಾಶಕಾಯಾಃ ।
ಸರ್ವೇ ಸಮರ್ಥಾಃ ಪೃಥಿವೀಂ ಕ್ಷಣೇನ ಕರ್ತುಂ ಪ್ರವಿಧ್ವಸ್ತ ವಿಕೀರ್ಣಶೈಲಾಂ ॥೪೮॥
ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಸಪ್ತವಿಂಶಸ್ಸರ್ಗಃ

---

ಪ್ರಾರ್ಥಿಸುತ್ತಾನೆ, ವಿಕ್ರಾಂತಃ - ಪರಾಕ್ರಮಶಾಲಿಯಾದ, ಬಲವಾ೯ - ಬಲವಂತನಾದ, ಶೂರಃ - ಶೌರ್ಯವಂತನಾದ, ಸ್ವೇ - ತನ್ನ, ಪೌರುಷೇ - ಪುರುಷಪ್ರಯತ್ನದಲ್ಲಿ, ವ್ಯವಸ್ಥಿತಃ - ಇರುವ, ಹರಿಃ - ಶತವಲಿಯು, ರಾಮಪ್ರಿಯಾರ್ಥಂ - ಶ್ರೀರಾಮನ ಹಿತಕ್ಕಾಗಿ, ಪ್ರಾಣಾನಾಂ - ಪ್ರಾಣಗಳ ವಿಷಯದಲ್ಲಿ, ದಯಾಂ-ದಯೆಯನ್ನು, ನಕುರುತೇ-ಮಾಡುವನಲ್ಲವೋ. ||೪೩-೪೫|| ಗಜಃ - ಗಜನು, ಗವಾಕ್ಷಃ - ಗವಾಕ್ಷನು, ಗವಯಃ - ಗವಯನು, ನಳಃ - ನಳನು, ನೀಲಶ್ಚ - ನೀಲನು ಎಂಬ, ವಾನರಃ-ವಾನರನು, ಏಕಏವ-ಒಬ್ಬನೇ, ಯೂಥಾನಾಂ-ವಾನರರ ಗುಂಪುಗಳ, ದಶಭಿಃಕೋಟೀಭಿಃ-ಹತ್ತತ್ತುಕೋಟಿಗಳಿಂದ, ವೃತಃ - ಸುತ್ತುವರೆಯಲ್ಪಟ್ಟವರು. || ೪೬ || ತಥಾ - ಹಾಗೆಯೇ, ಅನ್ಯೇ - ಮತ್ತೆ ಕೆಲವರಾದ, ವಾನರಶ್ರೇಷ್ಠಾಃ - ವಾನರೋತ್ತಮರು, ವಿಂಧ್ಯ....ನಃ - ವಿಂಧ್ಯಪರ್ವತದಲ್ಲಿ ವಾಸಮಾಡತಕ್ಕವರು, ಲಘುವಿಕ್ರಮಾಃ - ಬಹು ಲಾಘವದಿಂದ ಸಂಚಾರ ಮಾಡತಕ್ಕವರು, ಬಹುತ್ವಾತ್ತು-ಬಾಹುಳ್ಯದದೆಸೆಯಿಂದ, ಸಂಖ್ಯಾತುಂ-ಲೆಕ್ಕಮಾಡುವದಕ್ಕೆ, ನಶಕ್ಯಂತೇ-ಆಗತಕ್ಕವರಲ್ಲ. || ೪೭ || ಹೇ ಮಹಾರಾಜ - ಎಲೈ ಮಹಾರಾಜನೇ, ಸರ್ವೇ - ಸಮಸ್ತರೂ, ಮಹಾಪ್ರಭಾವಾಃ - ಮಹಾ ಮಹಾತ್ಮ್ಯೆಯುಳ್ಳವರು, ಸರ್ವೇ - ಎಲ್ಲರೂ, ಮಹಾ...ಯಾಃ - ದೊಡ್ಡ ಬೆಟ್ಟಗಳಿಗೆ ಸಮಾನವಾದ ಶರೀರಗಳುಳ್ಳವರು, ಸರ್ವೇ - ಸಮಸ್ತರೂ, ಪೃಥಿವೀಂ - ಭೂಮಿಯನ್ನು, ಕ್ಷಣೇನ - ಕ್ಷಣಮಾತ್ರದಲ್ಲಿ, ಪ್ರವಿ.....ಲಾಂ - ಧ್ವಂಸಮಾಡಲ್ಪಟ್ಟ ವಿಶೀರ್ಣವಾದ ಬೆಟ್ಟಗಳುಳ್ಳುದನ್ನಾಗಿ, ಕರ್ತುಂ - ಮಾಡುವದಕ್ಕೆ, ಸಮರ್ಥಾಃ - ಸಮರ್ಥರು. || ೪೮ ||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಸಪ್ತವಿಂಶಸ್ಸರ್ಗಃ.

---

ತನ್ನ ಪೌರುಷವನ್ನು ಬಿಡದೆ ರಣರಂಗದಲ್ಲಿ ಸ್ಥಿರವಾಗಿ ನಿಲ್ಲುವವನು. ಈ ಶತವಲಿಯು ಶ್ರೀರಾಮಕಾರ್ಯಾರ್ಥಿಯಾಗಿ ತನ್ನ ಪ್ರಾಣವನ್ನೇ ಒಪ್ಪಿಸುವುದಕ್ಕೂ ಹಿಂಜರಿಯುವುದಿಲ್ಲವು. ಇವರುಮಾತ್ರವಲ್ಲದೆ, ಗಜ, ಗವಯ, ಗವಾಕ್ಷ, ನೀಲ, ನಲ ಎಂಬೀ ವಾನರೋತ್ತಮರು ಪ್ರತಿಯೊಬ್ಬರೂ ಹತ್ತುಕೋಟಿ ಮಂದಿ ವಾನರರುಳ್ಳ ಸೇನೆಗಳನ್ನು ತಂದಿರುವರು. ಈ ರೀತಿಯಾಗಿಯೇ ವಿಂಧ್ಯಪರ್ವತದಲ್ಲಿ ವಾಸಮಾಡುವವರೂ, ಮಿತಿಯಿಲ್ಲದ ಪರಾಕ್ರಮವುಳ್ಳವರೂ ಆದ ವಾನರವೀರರು ಅನೇಕಮಂದಿ ಇರುವರು. ಇವರನ್ನು ಲೆಕ್ಕಮಾಡುವುದಕ್ಕಾಗುವುದಿಲ್ಲವು. ಎಲೈ ಮಹಾರಾಜನೇ! ರಾಕ್ಷಸೇಶ್ವರನೇ! ಈ ವಾನರರೆಲ್ಲರೂ ಅಮಿತಪರಾಕ್ರಮವುಳ್ಳವರು. ಇವರೆಲ್ಲರೂ ಪರ್ವತಸಮಾನವಾದ ದೇಹಗಳುಳ್ಳವರು. ಭೂಲೋಕದಲ್ಲಿರುವ ಪರ್ವತಗಳೆಲ್ಲವನ್ನೂ ಕ್ಷಣಮಾತ್ರದಲ್ಲಿಯೇ ಪುಡಿಗುಟ್ಟಿಗಾಳಿಗೆ ತೂರಬಲ್ಲರು.'' || ೪೩–೪೮ ||

ಇಂತಿದು ಸಾರಣಕೃತ ವಾನರಸೇನಾವರ್ಣನವೆಂಬ ಇಪ್ಪತ್ತೇಳನೆಯ
ಸರ್ಗವು ಸಮಾಪ್ತವಾದುದು.

## ಯುದ್ಧಕಾಂಡೇ ಅಷ್ಟಾವಿಂಶಸ್ಸರ್ಗಃ

ಸಾರಣಸ್ಯ ವಚಃ ಶ್ರುತ್ವಾ ರಾವಣಂ ರಾಕ್ಷಸಾಧಿಪಂ । ಬಲಮಾದಿಶ್ಯ ತತ್ಸರ್ವಂ ಶುಕೋ ವಾಕ್ಯಮಥಾಽಬ್ರವೀತ್ ॥ ೧ ॥ "ಸ್ಥಿತಾನ್ ಪಶ್ಯಸಿ ಯಾನೇತಾನ್ ಮತ್ತಾನಿವ ಮಹಾದ್ವಿಪಾನ್ । ನ್ಯಗ್ರೋಧಾನಿವ ಗಾಂಗೇಯಾನ್ ಸಾಲಾನ್ ಹೈಮವತಾನಿವ ॥ ೨ ॥ ಏತೇ ದುಷ್ಪ್ರಸಹಾ ರಾಜನ್ಬಲಿನಃ ಕಾಮರೂಪಿಣಃ । ದೈತ್ಯದಾನವಸಂಕಾಶಾ ಯುದ್ಧೇ ದೇವಪರಾಕ್ರಮಾಃ ॥ ೩ ॥ ಏಷಾಂ ಕೋಟಿಸಹಸ್ರಾಣಿ ನವಪಂಚಚ ಸಪ್ತಚ । ತಥಾ

ಸಾರಣಸ್ಯ - ಸಾರಣನ, ವಚಃ - ಮಾತನ್ನು, ಶ್ರುತ್ವಾ - ಕೇಳಿ, ಶುಕಃ - ಶುಕನು, ಸರ್ವಂ-ಸಮಸ್ತವಾದ, ತದ್ಬಲಂ-ಆ ಸೈನ್ಯವನ್ನು, ಆದಿಶ್ಯ-ಬೆರಳಿನಿಂದ ತೋರಿಸಿ, ರಾಕ್ಷಸಾಧಿಪಂ-ಅಸುರಾಧಿಪತಿಯಾದ, ರಾವಣಂ - ರಾವಣನನ್ನು ಕುರಿತು, ಅಥ - ಬಳಿಕ, ವಾಕ್ಯಂ - ಮಾತನ್ನು, ಅಬ್ರವೀತ್ - ನುಡಿದನು. ॥ ೧ ॥ ಹೇ ರಾಜನ್ - ಎಲೈ ಒಡೆಯನೇ, ಮತ್ತಾನ್ - ಮದವೇರಿದ, ಮಹಾದ್ವಿಪಾನಿವ - ದೊಡ್ಡಆನೆಗಳಂತೆ, ಗಾಂಗೇಯಾನ್ - ಗಂಗಾತೀರದಲ್ಲಿ ಹುಟ್ಟಿದ, ನ್ಯಗ್ರೋಧಾನಿವ - ವಟವೃಕ್ಷಗಳಂತೆ, ಹೈಮವತಾನ್ - ಹಿಮವತ್ಪರ್ವತದಲ್ಲಿ ಹುಟ್ಟಿದ, ಸಾಲಾನಿವ - ಸಾಲವೃಕ್ಷಗಳಂತೆ, ಸ್ಥಿತಾನ್ - ನಿಂತಿರುವ, ಯಾನೇತಾನ್ - ಯಾವ ಇವರನ್ನು, ಪಶ್ಯಸಿ - ನೋಡುತ್ತಿರುವೆಯೋ, ಏತೇ - ಇವರುಗಳು, ದುಷ್ಪ್ರಸಹಾಃ - ಸಹಿಸಲಸಾಧ್ಯರು, ಬಲಿನಃ - ಬಲವಂತರು, ಕಾಮರೂಪಿಣಃ - ಬೇಕಾದ ರೂಪವನ್ನು ಧರಿಸುವವರು, ಯುದ್ಧೇ - ಕಾಳಗದಲ್ಲಿ, ದೈತ್ಯ....ಶಾಃ - ದೈತ್ಯರಿಗೂ, ದಾನವರಿಗೂ ಸಮಾನವಾದ ಬಲವುಳ್ಳವರು, ದೇವಪರಾಕ್ರಮಾಃ - ದೇವತೆಗಳ ಪರಾಕ್ರಮದಂತೆ ಪರಾಕ್ರಮವುಳ್ಳವರು. ॥ ೨-೩ ॥ ಏಷಾಂ - ಇವರುಗಳ, ಕೋಟಿಸಹಸ್ರಾಣಿ - ಸಾವಿರಕೋಟಿಗಳು, ನವ - ಒಂಭತ್ತು, ಪಂಚಚ - ಐದೂ, ಸಪ್ತಚ - ಏಳು, ತಥಾ - ಹಾಗೆಯೇ, ಶಂಖ......ಣಿ - ಶಂಖವೆಂಬ ಸಂಖ್ಯೆಯ ಸಹಸ್ರಗಳೂ,

ಆಮೇಲೆ ಶುಕನು, (ಸಾರಣನು ಹೇಳಿದುದೆಲ್ಲವನ್ನೂ ಕೇಳಿ, ಅವನು ಎಲ್ಲ ಸಮಾಚಾರಗಳನ್ನೂ ಸಂಪೂರ್ಣವಾಗಿ ಅರಿಕೆಮಾಡದಿದ್ದುದರಿಂದ, ತಾನೂ ಸಹ ಅವುಗಳನ್ನು ಅರಿಕೆ ಮಾಡಲು) ತನ್ನ ಪ್ರಭುವಾದ ರಾವಣಾಸುರನಿಗೆ ಆ ವಾನರಸೈನ್ಯವೆಲ್ಲವನ್ನೂ ಚೆನ್ನಾಗಿ ತೋರಿಸಿ ಹೀಗೆ ಹೇಳಿದನು. "ಮಹಾರಾಜ! ಮದಿಸಿರುವ ಸಲಗಗಳಂತಿರುವವರೂ, ಗಂಗಾತೀರದ ವಟವೃಕ್ಷಗಳನ್ನು ಹೋಲುವವರೂ, ಹಿಮವತ್ಪರ್ವತದ ಸಾನುಪ್ರದೇಶಗಳಲ್ಲಿ ಬೆಳೆದಿರುವ ಸಾಲವೃಕ್ಷಗಳಿಗೆ ಸಮಾನರಾದವರೂ ಆದ ಈ ವೀರವಾನರರೆಲ್ಲರನ್ನೂ ಚೆನ್ನಾಗಿ ಕಣ್ಣಿಟ್ಟು ನೋಡು. ಇವರೆಲ್ಲರೂ ಪರಮ ದುರ್ಜಯರಾದವರು. ಮಹಾ ಪರಾಕ್ರಮಶಾಲಿಗಳಾದವರು; ಬೇಕುಬೇಕಾದ ರೂಪಗಳನ್ನು ಧರಿಸುವ ಸಾಮರ್ಥ್ಯವುಳ್ಳವರು; ದೈತ್ಯದಾನವವೀರರಿಗೆ ಸಮಾನರಾದವರು ; ಯುದ್ಧರಂಗದಲ್ಲಿ ದೇವತೆಗಳಿಗೆ ಸಮಾನವಾದ ಪರಾಕ್ರಮವುಳ್ಳವರು. ಈ ವಾನರರು ಒಂಬತ್ತುಸಾವಿರಕೋಟಿಗಳ ಒಂದು ಗುಂಪಾಗಿಯೂ, ಏಳುಸಾವಿರ ಕೋಟಿಗಳ ಒಂದು ಗುಂಪಾಗಿಯೂ, ಐದುಸಾವಿರ ಕೋಟಿಗಳ ಒಂದು ಗುಂಪಾಗಿಯೂ, ಕೆಲವು ಗುಂಪುಗಳಲ್ಲಿ ಅನೇಕ ಸಾವಿರ ಶಂಖಗಳ ಸಂಖ್ಯೆಳ್ಳವರಾಗಿಯೂ, ಅನೇಕ ನೂರು ಬೃಂದ

ಶಂಖಸಹಸ್ರಾಣಿ ತಥಾ ಬೃಂದಶತಾನಿಚ ॥ ೪ ॥ ಏತೇ ಸುಗ್ರೀವಸಚಿವಾಃ ಕಿಷ್ಕಿಂಧಾನಿಲಯಾಸ್ಸದಾ । ಹರಯೋ ದೇವಗಂಧರ್ವೈರುತ್ಪನ್ನಾಃ ಕಾಮರೂಪಿಣಃ ॥ ೫ ॥ ಯೌ ತೌ ಪಶ್ಯಸಿ ತಿಷ್ಠಂತೌ ‡ ಕುಮಾರೌ ದೇವರೂಪಿಣೌ । ಮೈಂದಶ್ಚ ದ್ವಿವಿದಶ್ಚೋಭೌ ತಾಭ್ಯಾಂ ನಾಸ್ತಿ ಸಮೋ ಯುಧಿ ॥ ೬ ॥ ಬ್ರಹ್ಮಣಾ ಸಮನುಜ್ಞಾತಾವಮೃತಪ್ರಾಶಿನಾವುಭೌ । ಆಶಂಸೇತೇ ಯುಧಾ ಲಂಕಾಮೇತೌ ಮರ್ದಿತುಮೋಜಸಾ ॥ ೭ ॥ ಯಾವೇತಾವೇತಯೋಃ ಪಾರ್ಶ್ವೇ ಸ್ಥಿತೌ ಪರ್ವತಸನ್ನಿಭೌ । ಸುಮುಖೋ೭

ತಥಾ - ಹಾಗೆಯೇ, ಬೃಂದದಶಾನಿಚ - ನೂರು ಬೃಂದಗಳೂ, (ಸಂತಿ - ಇವೆ). ॥೪॥ ಏತೇಹರಯಃ- ಈ ವಾನರರು, ಸುಗ್ರೀವಸಚಿವಾಃ - ಸುಗ್ರೀವಸಹಾಯಕರು, ಸದಾ - ಯಾವಾಗಲೂ, ಕಿಷ್ಕಿಂಧಾನಿಲಯಾಃ-ಕಿಷ್ಕಿಂಧಾಪಟ್ಟಣದಲ್ಲಿರುವವರು, ದೇವಗಂಧರ್ವೈಃ-ದೇವತೆಗಳಿಂದಲೂ ಗಂಧರ್ವರಿಂದಲೂ, ಉತ್ಪನ್ನಾಃ - ಹುಟ್ಟಿದವರು, ಕಾಮರೂಪಿಣಃ - ಸ್ವೇಚ್ಛಾರೂಪವುಳ್ಳವರು. ॥೫॥ ಹೇ ದೇವ - ಎಲೈ ಸ್ವಾಮಿಯೆ, ರೂಪಿಣೌ - ರೂಪವಂತರಾದ, ಕುಮಾರೌ - ಯೌವನಸ್ಥರಾದ, ತಿಷ್ಠಂತೌ - ನಿಂತಿರುವ, ಯೌ - ಯಾರನ್ನು, ಪಶ್ಯಸಿ - ನೋಡುತ್ತಲಿರುವೆಯೋ, ತಾವುಭೌ - ಅವರಿಬ್ಬರೂ, ಮೈಂದಶ್ಚ - ಮೈಂದನು, ದ್ವಿವಿದಶ್ಚ - ದ್ವಿವಿದನೂ, (ಎಂಬವರು) ಯುಧಿ - ಕಾಳಗದಲ್ಲಿ, ತಾಭ್ಯಾಂ - ಅವರೀರ್ವರೊಡನೆ, ಸಮಃ - ಸಮಾನನು, ನಾಸ್ತಿ - ಇಲ್ಲವು, ಉಭೌ - ಇಬ್ಬರೂ, ಬ್ರಹ್ಮಣಾ - ಬ್ರಹ್ಮನಿಂದ, ಸಮನುಜ್ಞಾತೌ - ಆಜ್ಞಾಪಿಸಲ್ಪಟ್ಟವರಾಗಿ, ಅಮೃತಪ್ರಾಶಿನೌ - ಅಮೃತಪಾನಮಾಡಿದವರು, ಏತೌ - ಇವರುಗಳು, ಓಜಸಾ - ಪರಾಕ್ರಮದಿಂದ, ಯುಧಾ - ಕಾಳಗದಿಂದ, ಲಂಕಾಂ - ಲಂಕಾಪಟ್ಟಣವನ್ನು, ಮರ್ದಿತುಂ - ಹೊಡೆಯುವದಕ್ಕೆ, ಆಶಂಸೇತೇ - ಇಚ್ಛಿಸುತ್ತಾರೆ, ಏತಯೋಃ - ಇವರುಗಳ, ಪಾರ್ಶ್ವೇ - ಪಕ್ಕದಲ್ಲಿ, ಪರ್ವತಸನ್ನಿಭೌ - ಪರ್ವತಸದೃಶರಾದ, ಯೌ - ಯಾವ ಇಬ್ಬರು, ಸ್ಥಿತೌ - ಇರುವರೋ, ಸುಮುಖಃ - ಸುಮುಖನು, ದುರ್ಮುಖಶ್ಚೈವ - ದುರ್ಮುಖನು (ಎಂಬ), ಏತೌ - ಇವರು, ಮೃತ್ಯುಪುತ್ರೌ - ಮೃತ್ಯುದೇವತೆಯ ಮಕ್ಕಳು, ಪಿತುಃ - ತಂದೆಗೆ, ಸಮೌ - ಸಮಾನರು,

ಗಳ ಸಂಖ್ಯೆಯುಳ್ಳವರಾಗಿಯೂ ಇರುವರು. ॥ ೧–೪ ॥ ರಾಕ್ಷಸೇಶ್ವರಾ ! ಇದೋ ನೋಡು ; ಇವರಿಬ್ಬರೂ ಸುಗ್ರೀವನ ಮಂತ್ರಿಗಳು. ಇವರು ಯಾವಾಗಲೂ ಕಿಷ್ಕಿಂಧಾನಗರಿಯಲ್ಲಿಯೇ ಇರುತ್ತಾರೆ. ಇವರು ದೇವಗಂಧರ್ವರಿಂದ ಹುಟ್ಟಿದವರು. ಹುಟ್ಟಿದುದು ಮೊದಲು ಇವರಿಬ್ಬರೂ ಬೇಕುಬೇಕಾದ ರೂಪಗಳನ್ನು ಧರಿಸುವ ಸಾಮರ್ಥ್ಯವನ್ನು ಪಡೆದಿದ್ದಾರೆ. ಪ್ರಭುವೇ! ಮಹಾ ರೂಪವಂತರೂ, ಯುವಕರೂ ಆದ ಇವರಿಬ್ಬರೂ ಮೈಂದದ್ವಿವಿದರೆಂದು ಹೆಸರುಳ್ಳವರು. ರಣರಂಗದಲ್ಲಿ ಇವರಿಗೆ ಸಮಾನರಾದವರಾರೂ ಇಲ್ಲವು. ಇವರಿಬ್ಬರೂ ಪೂರ್ವದಲ್ಲಿ ಬ್ರಹ್ಮದೇವನ ಅನುಮತಿಯನ್ನು ಪಡೆದು ಅಮೃತಪಾನವನ್ನು ಮಾಡಿರುವರು. ಇವರಿಬ್ಬರೂ ಯುದ್ಧದಲ್ಲಿ ಅತುಳಪರಾಕ್ರಮವನ್ನವಲಂಬಿಸಿ ಲಂಕೆಯೆಲ್ಲವನ್ನೂ ಮರ್ದನಮಾಡಬಯಸಿರುವರು. ಈ ಮೈಂದದ್ವಿವಿದರ ಪಾರ್ಶ್ವದಲ್ಲಿ ಪರ್ವತೋಪಮರಾಗಿರುವ ಇವರಿಬ್ಬರೂ ಹತ್ತುಕೋಟಿ ವಾನರಸೇನೆಯೊಡನೆ ಈ ಲಂಕಾನಗರವನ್ನು ಮರ್ದಿಸಲೋಸುಗ ಮಹೋಗ್ರವಾಗಿ ನೋಡುತ್ತಿರುವರು. ಇವರು ಸುಮುಖ ದುರ್ಮುಖರೆಂದು

‡ " ವಸೂನಾ೦ " ತಿ. ಪಾ.

**ಸುಮುಖಶ್ಚೈವ ಮೃತ್ಯುಪುತ್ರೌ ಪಿತುಸ್ಸಮೌ ॥ ೮ ॥ ಪ್ರೇಕ್ಷಂತೌ ನಗರೀಂ ಲಂಕಾಂ ಕೋಟಿಭಿರ್ದಶಭಿರ್ವೃತೌ । ಯಂ ತು ಪಶ್ಯಸಿ ತಿಷ್ಠಂತಂ ಪ್ರಭಿನ್ನಮಿವ ಕುಂಜರಂ ॥ ೯ ॥ ಯೋ ಬಲಾತ್ ಕ್ಷೋಭಯೇತ್ಕ್ರುದ್ಧಸ್ಸಮುದ್ರಮಪಿ ವಾನರಃ । ಏಷೋಽಭಿಗಂತಾ ಲಂಕಾಯಾ ವೈದೇಹ್ಯಾಸ್ತವಚ ಪ್ರಭೋ ! ॥ ೧೦ ॥ ಏನಂ ಪಶ್ಯ ಪುರಾದೃಷ್ಟಂ ವಾನರಂ ಪುನರಾಗತಂ । ಜ್ಯೇಷ್ಠಃ ಕೇಸರಿಣಃ ಪುತ್ರೋ ವಾತಾತ್ಮಜ ಇತಿ ಶ್ರುತಃ ॥೧೧॥ ಹನುಮಾನಿತಿ ವಿಖ್ಯಾತೋ ಲಂಘಿತೋ ಯೇನ ಸಾಗರಃ । ಕಾಮರೂಪೀ ಹರಿಶ್ರೇಷ್ಠೋ ಬಲರೂಪಸಮನ್ವಿತಃ ॥ ೧೨ ॥ ಅನಿವಾರ್ಯಗತಿಶ್ಚೈವ ಯಥಾ ಸತತಗಃ**

ದಶಭಿಃಕೋಟಿಭಿಃ - ಹತ್ತುಕೋಟಿಗಳಿಂದ, ವೃತೌ - ಪರಿವೃತರಾಗಿ, ಲಂಕಾಂನಗರೀಂ - ಲಂಕಾಪಟ್ಟಣವನ್ನು, ಪ್ರೇಕ್ಷಂತೌ - ನೋಡುತ್ತಲಿರುವರು. ॥ ೬-೮ ॥ ಹೇ ಪ್ರಭೋ - ಎಲೈ ಸ್ವಾಮಿಯೇ, ಪ್ರಭಿನ್ನಂ - ಮದಿಸಿದ, ಕುಂಜರಮಿವ - ಆನೆಯಂತೆ, ತಿಷ್ಠಂತಂ - ನಿಂತಿರುವ, ಯಂತು - ಯಾವನನ್ನಾದರೆ, ಪಶ್ಯಸಿ - ನೋಡುತ್ತೀಯೋ, ಯಃವಾನರಃ - ಯಾವ ಕಪಿಯು, ಕೃದ್ಧಃ - ಕುಪಿತನಾಗಿ, ಸಮುದ್ರಮಪಿ - ಸಮುದ್ರವನ್ನೂ ಕೂಡ, ಬಲಾತ್ - ಬಲದಿಂದ, ಕ್ಷೋಭಯೇತ್ - ಕ್ಷೋಭಿಗೊಳಿಸುವನೋ, ಏಷಃ - ಇವನು, ಲಂಕಾಯಾಃ - ಲಂಕಾಪಟ್ಟಣಕ್ಕೆ, ಅಭಿಗಂತಾ - ಬಂದವನು, ವೈದೇಹ್ಯಾಃ - ಸೀತಾದೇವಿಯ, ಅಭಿಗಂತಾ - ಅನ್ವೇಷಣವನ್ನು ಮಾಡಿದವನು, ತವಚ - ನಿನ್ನ ದರ್ಶನವನ್ನೂ ಮಾಡಿದವನು, ಪುರಾ - ಪೂರ್ವದಲ್ಲಿ, ದೃಷ್ಟಂ - ನೋಡಲ್ಪಟ್ಟ, ಪುನರಾಗತಂ - ಮತ್ತೆ ಬಂದಿರುವ, ಏನಂವಾನರಂ - ಈ ಕಪಿಯನ್ನು, ಪಶ್ಯ - ನೋಡು, (ಏಷಃ - ಇವನು), ಕೇಸರಿಣಃ - ಕೇಸರಿಯೆಂಬ ವಾನರನ, ಜ್ಯೇಷ್ಠಃಪುತ್ರಂ - ಹಿರಿಮಗನು, ವಾತಾತ್ಮಜಇತಿ - ವಾಯುಪುತ್ರನೆಂದು, ಶ್ರುತಃ - ಕೇಳಲ್ಪಟ್ಟಿದ್ದಾನೆ, ಹನುಮಾನಿತಿ - ಹನುಮಂತನೆಂದು, ವಿಖ್ಯಾತಃ - ಪ್ರಸಿದ್ಧನು, ಯೇನ - ಯಾವನಿಂದ, ಸಾಗರಃ - ಸಮುದ್ರವು, ಲಂಘಿತಃ - ದಾಂಟಲ್ಪಟ್ಟಿತೋ, ಕಾಮರೂಪೀ - ಸ್ವೇಚ್ಛಾರೂಪವುಳ್ಳವನು, ಹರಿಶ್ರೇಷ್ಠಃ - ವಾನರರೊಳಗೆ ಉತ್ತಮನು, ಬಲ....ತಃ - ಬಲದಿಂದಲೂ ರೂಪದಿಂದಲೂ ಕೂಡಿದವನು, ಪ್ರಭುಃ - ಸಮರ್ಥನಾದ, ಸತತಗಃ - ಯಾವಾಗಲೂ ಹರಿಯುವ ವಾಯುವು, ಯಥಾ - ಹೇಗೋ, ತಥಾ - ಹಾಗೆ, ಅನಿವಾರ್ಯಗತಿಶ್ಚೈವ - ನಿವಾರಿಸಲಶಕ್ಯವಾದ ಗಮನವುಳ್ಳವನು. ॥ ೯-೧೨ ॥ ಪುರೇವ - ಪೂರ್ವದಲ್ಲಿಯೇ, ಬಲದರ್ಪಿತಃ - ಬಲದಿಂದ

ಹೆಸರುಳ್ಳವರು. ಇವರು ಯಮಪುತ್ರರು. ಪರಾಕ್ರಮದಲ್ಲಿ ತಂದೆಗೆ ಸಮಾನರಾದವರು. ॥ ೫-೮ ॥ ಮಹಾ ಪ್ರಭುವೇ ! ಮದದಾನೆಯಂತಿರುವ ಈ ವಾನರವೀರನನ್ನು ನೋಡು ; ಇವನು ಕುಪಿತನಾದುದಾದರೆ ಮಹಾ ಸಾಗರವನ್ನೂ ಕ್ಷೋಭೆಗೊಳಿಸುವಂಥವನು. ಇವನು ಲಂಕೆಗೆ ಬಂದು ಸೀತೆಯನ್ನು ನೋಡಿ ನಿನ್ನೊಡನೆ ಮಾತನಾಡಿ ಹೋಗಿರುವನು. ಇವನನ್ನು ಈ ಮೊದಲೇ ನೀನು ನೋಡಿರುವೆಯಷ್ಟೆ. ಈಗ ಇವನು ಪುನಃ ಬಂದಿರುವನು ; ಕಣ್ಣಿಟ್ಟು ನೋಡು. ಈತನು ಎಲ್ಲ ವಾನರರಿಗೂ ಮೊದಲಿಗನಾದ ಕೇಸರಿಯೆಂಬ ವಾನರನ ಮಗನು. ವಾಯುದೇವನ ಪ್ರಸಾದದಿಂದ ಜನಿಸಿದವನು. ಈತನ ಹೆಸರು ಹನುಮಂತನೆಂದು ಪ್ರಸಿದ್ಧವಾಗಿರುವುದು. ಸಮುದ್ರವನ್ನು ದಾಟಿ ಲಂಕೆಗೆ ಬಂದ ಮಹಾತ್ಮನೇ ಈತನು ; ಈತನು ಕಾಮರೂಪನು. ಮಹಾ ಪರಾಕ್ರಮಶಾಲಿ. ಸರ್ವವ್ಯಾಪಿಯಾದ ವಾಯುದೇವನಂತೆ ಈತನೂ ಇತರರಿಂದೆದುರಿಸಲು ಅಸಾಧ್ಯನಾಗಿರುವನು. ॥ ೯-೧೨ ॥ ಪೂರ್ವದಲ್ಲಿ ಈತನು

ಪ್ರಭುಃ । ಉದ್ಯಂತಂ ಭಾಸ್ಕರಂ ದೃಷ್ಟ್ವಾ ಬಾಲಃ ಕಿಲ $ ಪಿಪಾಸಿತಃ ॥ ೧೩ ॥
ತ್ರಿಯೋಜನಸಹಸ್ರಂತು ಅಧ್ವಾನಮವತೀರ್ಯಹಿ । "ಆದಿತ್ಯಮಾಹರಿಷ್ಯಾಮಿ
ನ ಮೇ ಕ್ಷುತ್ ಪ್ರತಿಯಾಸ್ಯತಿ" ॥ ೧೪ ॥ ಇತಿ ಸಂಚಿಂತ್ಯ ಮನಸಾ ಪುರೈಷ ಬಲ
ದರ್ಪಿತಃ । ಅನಾಧೃಷ್ಯತಮಂ ದೇವಮಪಿ ದೇವರ್ಷಿದಾನವೈಃ ॥೧೫॥ ಅನಾಸಾದ್ಯೈವ
ಪತಿತೋ ಭಾಸ್ಕರೋದಯನೇ ಗಿರೌ । ಪತಿತಸ್ಯ ಕಪೇರಸ್ಯ ಹನುರೇಕಾ ಶಿಲಾತಲೇ
॥ ೧೬ ॥ ಕಿಂಚಿದ್ಭಿನ್ನಾ ದೃಢಹನೋರ್ಹನುಮಾನೇಷ ತೇನ ವೈ । ತಸ್ಯ ಆಗಮ
ಯೋಗೇನ ಮಮೈಷ ವಿದಿತೋ ಹರಿಃ ॥೧೭॥ ನಾಸ್ಯ ಶಕ್ಯಂ ಬಲಂ ರೂಪಂ ಪ್ರಭಾವೋ

---

ಗರ್ವವುಳ್ಳವನಾಗಿ, ಏಷಃ - ಇವನು, ಬಾಲಃಕಿಲ - ಮಗುವಾಗಿರುವಾಗಲೇ, ಪಿಪಾಸಿತಃ - ಸ್ತನ್ಯಪಾನ ದಲ್ಲಿ ಇಚ್ಛೆಯುಳ್ಳವನಾಗಿ (ಅಂದರೆ ಹಸಿದಿರುವನಾಗಿ), ಉದ್ಯಂತಂ-ಉದಯಿಸುತ್ತಲಿರುವ, ಭಾಸ್ಕರಂ-ಸೂರ್ಯನನ್ನು, ದೃಷ್ಟ್ವಾ - ನೋಡಿ, ಮೇ - ನನಗೆ, ಕ್ಷುತ್ - ಹಸಿವು, ಪ್ರತಿಯಾಸ್ಯತಿ - ಹೋಗುವು ದಿಲ್ಲ, ಆದಿತ್ಯಂ - ಸೂರ್ಯನನ್ನು, ಆಹರಿಷ್ಯಾಮಿ - ಹಿಡಿದು ತಿನ್ನುವೆನು, ಇತಿ - ಇಂತೆಂದು, ಮನಸಾ - ಮನಸ್ಸಿನಿಂದ, ಸಂಚಿತ್ಯ-ಆಲೋಚಿಸಿ, ತ್ರಿಯೋಜನಸಹಸ್ರಂ - ಮೂರುಸಾವಿರ ಗಾವುದಗಳ ದೂರವಾದ, ಅಧ್ವಾನಂತು - ಮಾರ್ಗವನ್ನಾದರೆ, ಅವತೀರ್ಯ - ದಾಟಿ, ದೇವ.....ವೈಃ - ದೇವರ್ಷಿ ಗಳಿಂದಲೂ, ದಾನವರಿಂದಲೂ ಕೂಡ, ಅನಾ.....ಮಂ - ಮನಸ್ಸಿನಿಂದಲೂ ತಿರಸ್ಕರಿಸಲಸಾಧ್ಯ ನಾದ, ದೇವಂ - ಸೂರ್ಯದೇವನನ್ನು, ಅನಾಸಾದ್ಯೈವ - ಹೊಂದದೆಯೇ, ಭಾಸ್ಕರೊದಯನೇ - ಸೂರ್ಯನು ಉದಯಿಸುವ, ಗಿರೌ - ಪರ್ವತದಲ್ಲಿ, ಶಿಲಾತಲೇ - ಕಲ್ಲಿನಮೇಲೆ, ಪತಿತೋಹಿ - ಬಿದ್ದ ನಷ್ಟೆ. ಪತಿತಸ್ಯ - ಬಿದ್ದವನಾದರೂ, ದೃಢಹನೋಃ - ಘಟ್ಟಿಯಾಗಿರುವ ಕೆನ್ನೆಯುಳ್ಳವನಾದಕಾರಣ, ಅಸ್ಯಕಪೇಃ - ಈ ವಾನರನ, ಏಕಾಹನುಃ - ಒಂದು ಕೆನ್ನೆಯು, ಕಿಂಚಿತ್ - ಸ್ವಲ್ಪವಾಗಿ, ಭಗ್ನಾ - ಮುರಿಯಿತು, ತೇನವೈ - ಅದರಿಂದಲೇ, ಏಷಃ - ಇವನು, ಹನುಮಾನ್ - ಹನುಮಂತನು, ಏಷಹರಿಃ- ಈ ವಾನರನು, ಆಗಮಯೋಗೇನ - ಆಪ್ತವಾಕ್ಯವೆಂಬ ಉಪಾಯದಿಂದ, (ಅಥವಾ - ಆಪ್ತವಾಕ್ಯ ಶ್ರವಣದಿಂದ), ಸತ್ಯಂ - ಯಥಾರ್ಥವಾಗಿ, ಮಮ - ನನ್ನಿಂದ, ವಿದಿತಃ - ತಿಳಿಯಲ್ಪಟ್ಟಿದ್ದಾನೆ,

---

ಎಳೆಗೂಸಾಗಿರುವಾಗ ಕ್ಷುತ್ಪಿಪಾಸೆಗಳಿಂದ ಪೀಡಿತನಾಗಿ, ಉದ್ಯತ್ಸೂರ್ಯನನ್ನು ನೋಡಿ ಬಲ ಗರ್ವಿತನಾಗಿ, "ನನಗೆ ಹಸಿವು ತೀರದಿರುವುದು. ಈ ಸೂರ್ಯನನ್ನೇ ಹಿಡಿದು ತಿನ್ನುವೆನು" ಎಂದು ಯೋಚಿಸಿ ಮೂರುಸಾವಿರಯೋಜನಗಳದೂರ ಮೇಲಕ್ಕೆಹೋಗಿ, ದೇವದಾನವರಿಗೂ, ಮಹರ್ಷಿಗಳಿಗೂ ಎಷ್ಟುಮಾತ್ರಕ್ಕೂ ನೋಡಲಸದಳನಾದ ಸೂರ್ಯದೇವನ ಸಮೀಪಕ್ಕೆ ಹೋಗಲು ಸಾಧ್ಯವಾಗದೆ ಉದಯಪರ್ವತದಮೇಲೆ ಬಿದ್ದನು. ಬಹಳ ದೃಢವಾದ ಕಪೋಲ ಪ್ರದೇಶವುಳ್ಳ ಈ ವಾನರನು ಹಾಗೆ ಆ ಪರ್ವತದಮೇಲೆ ಬಿದ್ದೊಡನೆಯೇ ಈತನ ಒಂದು ಕಪೋಲದ ಮೇಲ್ಭಾಗವು ಸ್ವಲ್ಪ ಮುರಿದುಹೋಯಿತು. ಅದರಿಂದಲೇ ಈತನಿಗೆ ಹನು ಮಂತನೆಂದು ಹೆಸರಾದುದು. ಒಬ್ಬ ವಾನರವೀರನು ನನಗೆ ಈತನ ವಿಚಾರವನ್ನು ಹೇಳಿ ದನು. ಅದರಿಂದ ಇವನ ವಿಷಯವು ನನಗೆ ಯಥಾರ್ಥವಾಗಿ ತಿಳಿಯಿತು. ಇವನ ಬಲಪರಾ ಕ್ರಮಗಳನ್ನಾಗಲಿ, ರೂಪವನ್ನಾಗಲಿ, ಪ್ರಭಾವವನ್ನಾಗಲಿ ಹೇಳುವುದಕ್ಕೆ ಅಸಾಧ್ಯವಾಗಿರು

---

$ "ಬುಭುಕ್ಷಿತಃ" ಪಾ.

ವಾಪಿ ಭಾಷಿತುಂ । ಏಷ ಆಶಂಸತೇ ಲಂಕಾಮೇಕೋ ಮರ್ದಿತುಮೋಜಸಾ ॥ ೧೮ ॥ ಯಶ್ಚೈವಾನಂತರಶ್ಶೂರಃ ಶ್ಯಾಮಃ ಪದ್ಮನಿಭೇಕ್ಷಣಃ । ಇಕ್ಷ್ವಾಕೂಣಾಮತಿರಥೋ ಲೋಕೇ ವಿಖ್ಯಾತ ಪೌರುಷಃ ॥ ೧೯ ॥ ಯಸ್ಮಿನ್ನಚಲತೇ ಧರ್ಮೋ ಯೋ ಧರ್ಮಂ ನಾತಿವರ್ತತೇ । ಯೋ ಬ್ರಾಹ್ಮಮಸ್ತ್ರಂ ವೇದಾಂಶ್ಚ ವೇದವೇದವಿದಾಂ ವರಃ ॥ ೨೦ ॥ ಯೋ ಭಿಂದ್ಯಾದ್ಗಗನಂ ಬಾಣೈಃ ಪರ್ವತಾನಪಿ ದಾರಯೇತ್ । ಯಸ್ಯ ಮೃತ್ಯೋರಿವ ಕ್ರೋಧಃ ಶಕ್ರಸ್ಯೇವ ಪರಾಕ್ರಮಃ ॥ ೨೧ ॥ ಯಸ್ಯ ಭಾರ್ಯಾಜನಸ್ಥಾನಾತ್ಸೀತಾ

ಅಸ್ಯ - ಇವನ, ಬಲಂ - ಶಕ್ತಿಯು, ರೂಪಂ - ರೂಪವು, ಭಾಷಿತುಂ - ಮಾತನಾಡುವದಕ್ಕೆ, ನಶಕ್ಯಂ - ಆಗಲಾರದು, ಪ್ರಭಾವೋವಾಪಿ - ಸಾಮರ್ಥ್ಯವೂಕೂಡ, ನಶಕ್ಯಂ - ಆಗಲಾರದು, ಏಷಃ - ಇವನು, ಏಕಃ - ಒಬ್ಬನು, ಓಜಸಾ - ಸಾಮರ್ಥ್ಯದಿಂದ, ಲಂಕಾಂ - ಲಂಕಾಪಟ್ಟಣವನ್ನು, ಮರ್ದಿತುಂ - ಹೊಡೆಯುವದಕ್ಕೆ, ಆಶಂಸತೇ - ಪ್ರಾರ್ಥಿಸುತ್ತಾನೆ. ॥ ೧೩-೧೮ ॥ ಯಃಏಷಃ - ಯಾವ ಇವನಾದರೆ, ಅನಂತರಃ - ಆಂಜನೇಯನ ಸಮೀಪದಲ್ಲಿರುವನೋ, ಶೂರಃ - ಶೂರನಾದವನೋ, ಶ್ಯಾಮಃ - ನೀಲಮೇಘಶ್ಯಾಮನೋ, ಪದ್ಮನಿಭೇಕ್ಷಣಃ - ತಾವರೆಯ ಎಸಳಿನಂತೆ ಬೆಳಗುವ ಕಣ್ಣುಗಳುಳ್ಳವನೋ, ಇಕ್ಷ್ವಾಕೂಣಾಂ - ಇಕ್ಷ್ವಾಕುವಂಶಸ್ಥರಲ್ಲಿ, ಅತಿರಥಃ - ಅತಿಶಯವಾದರಥವುಳ್ಳವನೋ, ಲೋಕೇ - ಜಗತ್ತಿನಲ್ಲಿ, ವಿಖ್ಯಾತಪೌರುಷಃ - ಪ್ರಸಿದ್ಧವಾದ ಪರಾಕ್ರಮವುಳ್ಳವನೋ, ಯಸ್ಮಿನ್ - ಯಾವನಲ್ಲಿ, ಧರ್ಮಃ - ಧರ್ಮವು, ನಚಲತೇ - ಚಲಿಸುವದಿಲ್ಲವೋ, ಯಃ - ಯಾವನು, ಧರ್ಮಂ - ಧರ್ಮವನ್ನು, ನಾನುವರ್ತತೇ - ಮೀರುವುದಿಲ್ಲವೋ, ಯಃ - ಯಾವನು, ಬ್ರಾಹ್ಮಮಸ್ತ್ರಂ - ಬ್ರಹ್ಮಾಸ್ತ್ರಮಂತ್ರಗಳನ್ನು, ವೇದ - ತಿಳಿದಿದ್ದಾನೆಯೋ, ವೇದವಿದಾಂ - ವೇದವನ್ನು ಬಲ್ಲವರೊಳಗೆ, ವರಃ - ಉತ್ತಮನೋ, ಯಃ - ಯಾವನು, ಬಾಣೈಃ - ಬಾಣಗಳಿಂದ, ಗಗನಂ - ಅಂತರಿಕ್ಷವನ್ನು, ಭಿಂದ್ಯಾತ್ - ಭೇದಿಸುವನೋ, ಪರ್ವತಾನಪಿ - ಪರ್ವತಗಳನ್ನೂ ಕೂಡ, ದಾರಯೇತ್ - ಸೀಳುವನೋ, ಯಸ್ಯ - ಯಾವನ, ಕ್ರೋಧಃ - ಕೋಪವು, ಮೃತ್ಯೋರಿವ - ಮೃತ್ಯುವಿನಂತಿರುವುದೋ, ಶಕ್ರಸ್ಯ - ಇಂದ್ರನ, ಪರಾಕ್ರಮಇವ - ಪರಾಕ್ರಮದಂತಿರುವುದೋ,

ವುದು. ಎಲೈ ಮಹಾರಾಜನೇ! ಈ ಹನುಮಂತನೊಬ್ಬನೇ ಈ ಲಂಕಾನಗರವನ್ನು ತನ್ನ ಸಾಮರ್ಥ್ಯದಿಂದ ಪುಡಿಗುಟ್ಟಲು ಯೋಚಿಸಿದ್ದಾನೆ. ॥ ೯-೧೮ ॥ ಮಹಾರಾಜಾ! ಈ ಹನುಮಂತನ ಸಮೀಪದಲ್ಲಿ ಮಹಾ ಶೂರನೂ, ಶ್ಯಾಮಲವರ್ಣವುಳ್ಳವನೂ, ಪದ್ಮದಳೋಪಮಗಳಾದ ನೇತ್ರಗಳುಳ್ಳವನೂ ಆದ ಒಬ್ಬ ದಿವ್ಯಪುರುಷನಿರುವುದನ್ನು ಕಾಣು. ಆತನೇ ಇಕ್ಷ್ವಾಕುವಂಶಜರಲ್ಲೆಲ್ಲಾ ಶ್ರೇಷ್ಠನಾದವನು; ಲೋಕಪ್ರಸಿದ್ಧವಾದ ಪರಾಕ್ರಮವುಳ್ಳವನು; ಧರ್ಮವು ಆತನನ್ನು ಎಡೆಬಿಡದೆ ಹೊಂದಿಕೊಂಡಿರುವುದು; ಆತನೂ ಸಹ ಆ ಧರ್ಮವನ್ನೇ ಎಡೆಬಿಡದೆ ಹೊಂದಿಕೊಂಡಿರುವನು. ಆತನೂ ಧರ್ಮವನ್ನು ಸ್ವಲ್ಪವೂ ಅತಿಕ್ರಮಿಸುವುದಿಲ್ಲವು. ವೇದವಿದರಲ್ಲಿ ಆತನು ಶ್ರೇಷ್ಠನಾದವನು. ಬ್ರಹ್ಮಾಸ್ತ್ರವೇ ಮೊದಲಾದ ಸಮಸ್ತ ಅಸ್ತ್ರಗಳನ್ನೂ ತಿಳಿದವನಾತನು. ತನ್ನ ಬಾಣಗಳಿಂದ ಗಗನಾಂಗಣವನ್ನೇ ಭೇದಿಸಬಲ್ಲನು; ಪರ್ವತಗಳೆಲ್ಲವನ್ನೂ ಪುಡಿಗುಟ್ಟಬಲ್ಲನವನು. ಆತನ ಕೋಪವೆಂಬುದು ಮೃತ್ಯುವಿನ ಕೋಪಕ್ಕೆ

ಚಾಪಾಹೃತಾ ತ್ವಯಾ । ಸ ಏಷ ರಾಮಸ್ತ್ವಾಂ ಯೋದ್ಧುಂ ರಾಜರ್ ! ಸಮಭಿವರ್ತತೇ ॥ ೨೨ ॥ ಯಸ್ಯೈಷ ದಕ್ಷಿಣೇ ಪಾರ್ಶ್ವೇ ಶುದ್ಧಜಾಂಬೂನದಪ್ರಭಃ । ವಿಶಾಲವಕ್ಷಾಸ್ತಾಮ್ರಾಕ್ಷೋ ನೀಲಕುಂಚಿತಮೂರ್ಧಜಃ ॥ ೨೩ ॥ ಏಷೋಽಸ್ಯ ಲಕ್ಷ್ಮಣೋ ನಾಮ ಭ್ರಾತಾ ಪ್ರಾಣಸಮಃ ಪ್ರಿಯಃ । ನಯೇ ಯುದ್ಧೇಚ ಕುಶಲಸ್ಸರ್ವಶಾಸ್ತ್ರವಿಶಾರದಃ ॥೨೪॥ ಅಮರ್ಷೀ ದುರ್ಜಯೋ ಜೇತಾ ವಿಕ್ರಾಂತೋ ಬುದ್ಧಿಮಾನ್ ಬಲೀ । ರಾಮಸ್ಯ ದಕ್ಷಿಣೋ ಬಾಹುರ್ನಿತ್ಯಂ ಪ್ರಾಣೋ ಬಹಿಶ್ಚರಃ ॥ ೨೫ ॥ ನಹ್ಯೇಷ ರಾಘವಸ್ಯಾರ್ಥೇ

---

ಯಸ್ಯ - ಯಾವನ, ಭಾರ್ಯಾ - ಹೆಂಡತಿಯಾದ, ಸೀತಾಚ - ಸೀತಾದೇವಿಯೂಕೂಡ, ಜನಸ್ಥಾನಾತ್ - ಪಂಚವಟೀತೀರದಿಂದ, ತ್ವಯಾ - ನಿನ್ನಿಂದ, ಆಹೃತಾ - ತರಲ್ಪಟ್ಟಳೋ, ಹೇ ರಾಜನ್ - ಎಲೈ ಒಡೆಯನೇ, ಸಏಷರಾಮಃ - ಅಂತಹ ಈ ಶ್ರೀರಾಮನು, ಯೋದ್ಧುಂ - ಯುದ್ಧ ಮಾಡುವುದಕ್ಕಾಗಿ, ತ್ವಾಂ - ನಿನ್ನನ್ನು ಕುರಿತು, ಸಮಭಿವರ್ತತೇ - ಎದುರುಗೊಳ್ಳುತ್ತಾನೆ. ॥೧೯-೨೨॥ ಯಸ್ಯ- ಯಾವ ರಾಮನ, ದಕ್ಷಿಣೇಪಾರ್ಶ್ವೇ - ಬಲಭಾಗದಲ್ಲಿ, ಶುದ್ಧ.....ಭಃ - ಅಪರಂಜಿಯ ಬಣ್ಣವುಳ್ಳ, ವಿಶಾಲವಕ್ಷಾಃ-ವಿಸ್ತಾರವಾದ ವಕ್ಷಸ್ಥಳವುಳ್ಳ, ತಾಮ್ರಾಕ್ಷಃ-ಕೆಂಪಾದ ಕಣ್ಣುಗಳುಳ್ಳ, ನೀಲ.....ಜಃ- ಕಪ್ಪಾಗಿಯೂ, ವಕ್ರವಾಗಿಯೂ ಇರುವ ಕೂದಲುಗಳುಳ್ಳ, ಏಷಃ-ಇವನು, ಅಸ್ಯ-ಈ ಶ್ರೀರಾಮನಿಗೆ, ಭ್ರಾತಾ-ತಮ್ಮನಾದವನು, ಲಕ್ಷ್ಮಣೋನಾಮ-ಲಕ್ಷ್ಮಣನೆಂದು ಪ್ರಸಿದ್ಧನು, (ಈತನು) ಪ್ರಾಣಸಮಃ - ಪ್ರಾಣಗಳಿಗೆ ಸಮಾನನು, ಪ್ರಿಯಃ - ಇಷ್ಟನು, ಏಷಃ - ಇವನು, ನಯೇ - ನೀತಿಯಲ್ಲಿಯೂ, ಯುದ್ಧೇಚ - ಕಾಳಗದಲ್ಲಿಯೂ, ಕುಶಲಃ - ಚಮತ್ಕಾರಿಯು, ಸರ್ವ.....ದಃ - ಸಮಸ್ತಶಾಸ್ತ್ರಗಳಲ್ಲಿಯೂ ಪಂಡಿತನು, ಅಮರ್ಷೀ - ಕೋಪಿಯು, ದುರ್ಜಯಃ - ಜಯಿಸಲಸಾಧ್ಯನು, ಜೇತಾ - ಜಯಿಸತಕ್ಕವನು, ವಿಕ್ರಾಂತಃ - ಪರಾಕ್ರಮಿಯು, ಬುದ್ಧಿಮಾನ್ - ಮತಿವಂತನು, ಬಲೀ - ದೇಹತ್ರಾಣವುಳ್ಳವನು, ರಾಮಸ್ಯ - ಶ್ರೀರಾಮನಿಗೆ, ದಕ್ಷಿಣೋಬಾಹುಃ - ಬಲಭುಜವು, ನಿತ್ಯಂ - ಯಾವಾಗಲೂ, ಬಹಿಶ್ಚರಃ - ಹೊರಗೆ ತಿರುಗುವ, ಪ್ರಾಣಃ - ಪ್ರಾಣವು. ॥೨೩-೨೫॥ ಏಷಃ - ಇವನು, ರಾಘವಸ್ಯ -

---

ಸಮಾನವಾದುದು. ಆತನ ಪರಾಕ್ರಮವು ದೇವೇಂದ್ರನ ಪರಾಕ್ರಮವನ್ನು ಹೋಲುವುದು. ॥ ೧೩–೨೧ ॥ ಮಹಾಪ್ರಭು ! ಜನಸ್ಥಾನದಿಂದ ಯಾವಾತನ ಭಾರ್ಯೆಯನ್ನು ನೀನು ಅಪಹರಿಸಿ ತಂದೆಯೋ ಆ ಶ್ರೀರಾಮನೇ ಆತನು. ಆತನು ರಣರಂಗದಲ್ಲಿ ನಿನ್ನನ್ನು ಎದುರಿಸಲು ಬರುತ್ತಿರುವನು. ಇಗೋ ನೋಡು; ಆ ರಾಮನ ಬಲಪಾರ್ಶ್ವದಲ್ಲಿ, ನಿರ್ಮಲಕಾಂಚನ ಕಾಂತಿಯಂತಹ ದೇಹಕಾಂತಿಯುಳ್ಳವನಾಗಿ, ಬಹು ಕಪ್ಪಾಗಿ ಗುಂಗುರುಗುಂಗುರಾಗಿರುವ ಕೇಶರಾಶಿಯುಳ್ಳವನಾಗಿರುವ ಒಬ್ಬ ರಾಜಪುತ್ರನಿರುವನು. ಆತನೇ ಲಕ್ಷ್ಮಣನೆಂಬಾತನು ; ಸುಪ್ರಸಿದ್ಧನಾದವನು. ಆತನೇ ಶ್ರೀರಾಮನಿಗೆ ಪ್ರಾಣಾಧಿಕನಾದ ತಮ್ಮನು. ಆತನು ರಾಜನೀತಿಶಾಸ್ತ್ರದಲ್ಲಿಯೂ, ಯುದ್ಧಕ್ರಿಯೆಯಲ್ಲಿಯೂ ಬಹಳ ಸಾಮರ್ಥ್ಯವುಳ್ಳವನು. ಆತನು ಸಮಸ್ತ ಶಾಸ್ತ್ರಗಳಲ್ಲಿಯೂ ನಿಷ್ಣಾತನಾದವನು. ಮಹಾ ಕೋಪವುಳ್ಳವನಾತನು ; ಮಹಾತ್ಮನೂ, ಅಜೇಯನೂ, ಜಯಶೀಲನೂ, ಮಹಾ ಶೌರ್ಯವಂತನೂ, ಮಹಾ ಬುದ್ಧಿವಂತನೂ, ಅಧಿಕ ಬಲವುಳ್ಳವನೂ, ಶ್ರೀರಾಮನಿಗೆ ಬಲಭುಜದಂತಿರುವವನೂ ಆಗಿರುವನು ; ಯಾವಾಗಲೂ ಶ್ರೀರಾಮನಿಗೆ ಹೊರಗಣ ಪ್ರಾಣಗಳಂತಿದ್ದಾನೆ. ಆತನು ತನ್ನ ಅಣ್ಣನಾದ ಶ್ರೀರಾಮನಿ

ಜೀವಿತಂ ಪರಿರಕ್ಷತಿ । ಎಷ್ಯೈವಾಶಂಸತೇ ಯುದ್ಧೇ ನಿಹಂತುಂ ಸರ್ವರಾಕ್ಷಸಾನ್ ॥೨೬॥ ಯಸ್ತು ಸವ್ಯಮಸೌ ಪಕ್ಷಂ ರಾಮಸ್ಯಾಶ್ರಿತ್ಯ ತಿಷ್ಠತಿ । ರಕ್ಷೋಗಣಪರಿಕ್ಷಿಪ್ತೋ ರಾಜಾ ಹ್ಯೇಷ ವಿಭೀಷಣಃ ॥ ೨೭ ॥ ಶ್ರೀಮತಾ ರಾಜರಾಜೇನ ಲಂಕಾಯಾಮಭಿಷೇಚಿತಃ । ತ್ವಾಮೇವ ಪ್ರತಿಸಂರಬ್ಧೋ ಯುದ್ಧಾಯೈಷೋಽಭಿವರ್ತತೇ ॥ ೨೮ ॥ ಯಂತು ಪಶ್ಯಸಿ ತಿಷ್ಠಂತಂ ಮಧ್ಯೇ ಗಿರಿಮಿವಾಚಲಂ । ಸರ್ವಶಾಖಾಮೃಗೇಂದ್ರಾಣಾಂ ಭರ್ತಾರಮಪರಾಜಿತಂ ॥೨೯॥ ತೇಜಸಾ ಯಶಸಾ ಬುದ್ಧ್ಯಾ ಜ್ಞಾನೇನಾಭಿಜನೇನ ಚ । ಯಃ

ಶ್ರೀರಾಮನ, ಅರ್ಥೇ - ಪ್ರಯೋಜನದವಿಷಯದಲ್ಲಿ, ಜೀವಿತಂ - ಪ್ರಾಣವನ್ನು, ನಪರಿರಕ್ಷತಿ - ರಕ್ಷಿಸುವದಿಲ್ಲ, ಏಷ್ಯೈವ - ಇವನೊಬ್ಬನೇ, ಯುದ್ಧೇ - ಕಾಳಗದಲ್ಲಿ, ಸರ್ವರಾಕ್ಷಸಾನ್ - ಸಮಸ್ತ ರಾಕ್ಷಸರನ್ನೂ, ನಿಹಂತುಂ - ಹೊಡೆಯಲು, ಆಶಂಸತೇ - ಬಯಸುತ್ತಾನೆ. ॥ ೨೬ ॥ ಯಸ್ತು - ಯಾವನಾದರೆ, ರಾಮಸ್ಯ - ರಾಮನ, ಸವ್ಯಂಪಕ್ಷಂ - ಎಡಬಾಗವನ್ನು, ಆಶ್ರಿತ್ಯ - ಆಶ್ರಯಿಸಿ, ತಿಷ್ಠತಿ - ಇದ್ದಾನೋ, ರಕ್ಷೋ....ಪ್ತಃ - ನಾಲ್ಕುಮಂದಿಯಾದ ಸಮೂಹಬಲವುಳ್ಳ ರಾಕ್ಷಸರಿಂದ ಪರಿವೃತನಾದ, ಏಷಃ - ಇವನು, ರಾಜಾ - ಅರಸಾದ, ವಿಭೀಷಣೋಹಿ - ವಿಭೀಷಣನಷ್ಟೆ. ॥ ೨೭ ॥ ಏಷಃ - ಇವನು, ಶ್ರೀಮತಾ - ಶ್ರೀಮಂತನಾದ, ರಾಜರಾಜೇನ - ಚಕ್ರವರ್ತಿಯಾದ ರಾಮನಿಂದ, ಲಂಕಾಯಾಂ - ಲಂಕಾರಾಜ್ಯದಲ್ಲಿ, ಅಭಿಷೇಚಿತಃ - ಪಟ್ಟಾಭಿಷೇಕ ಮಾಡಲ್ಪಟ್ಟವನಾಗಿ, ತ್ವಾಮೇವ - ನಿನ್ನನ್ನೇ ಕುರಿತು, ಸಂರಬ್ಧಃ - ಕೋಪವುಳ್ಳವನಾಗಿ, ಪ್ರತಿಯುದ್ಧಾಯ - ಪ್ರತಿಯುದ್ಧ ಮಾಡುವುದಕ್ಕಾಗಿ, ಅಭಿವರ್ತತೇ - ಬರುವನು. ॥೨೮॥ ಮಧ್ಯೇ - ರಾಮವಿಭೀಷಣರ ಮಧ್ಯದಲ್ಲಿ, ಅಚಲಂ - ಚಲಿಸದಿರುವ, ಗಿರಿಮಿವ - ಪರ್ವತದಂತೆ, ತಿಷ್ಠಂತಂ - ನಿಂತಿರುವ, ಸರ್ವ..... ಣಾಂ - ಸಮಸ್ತ ವಾನರಾಧಿಪತಿಗಳಿಗೆ, ಭರ್ತಾರಂ - ಪತಿಯಾದ, ಅಪರಾಜಿತಂ - ಪರಾಜಯವನ್ನು ಹೊಂದದಿರುವ, ಯಂತು - ಯಾವನನ್ನಾದರೆ, ಪಶ್ಯಸಿ - ನೋಡುವೆಯೋ, ತೇಜಸಾ - ತೇಜಸ್ಸಿನಿಂದಲೂ, ಯಶಸಾ - ಕೀರ್ತಿಯಿಂದಲೂ, ಬುದ್ಧ್ಯಾ - ಊಹಾಪೋಹರೂಪವಾದ ಜ್ಞಾನದಿಂದಲೂ, ಜ್ಞಾನೇನ - ಶಾಸ್ತ್ರಜನ್ಯ ಜ್ಞಾನದಿಂದಲೂ, ಅಭಿಜನೇನಚ - ಸತ್ಕುಲಪ್ರಸೂತತ್ವದಿಂದಲೂ, ಯಃ - ಯಾವನು, ಕಪೀನ್ - ವಾನರರನ್ನೂ, ಪರ್ವತಾನ್ - ಪರ್ವತಗಳನ್ನೂ, ಹಿಮವಾನಿವ - ಹಿಮವತ್ಪರ್ವತದಂತೆ, ಅತಿಬಭ್ರಾಜ -

ಗಾಗಿ ತನ್ನ ಪ್ರಾಣಗಳನ್ನಾದರೂ ತೊರೆಯುತ್ತಾನೆ. ಮಹಾರಾಜನೇ! ಆತನೊಬ್ಬನೇ ಯುದ್ಧದಲ್ಲಿ ಸಮಸ್ತ ರಾಕ್ಷಸರನ್ನೂ ವಧಿಸಲು ಕೋರಿರುವನು. ॥ ೨೨–೨೬ ॥ ಅದೋ ಅತ್ತ ನೋಡು; ನಾಲ್ವರು ರಾಕ್ಷಸರೊಡಗೂಡಿ ಶ್ರೀರಾಮನ ವಾಮಪಾರ್ಶ್ವದಲ್ಲಿ ನಿಂತಿರುವವನೇ ರಾಕ್ಷಸರಾಜನಾದ ವಿಭೀಷಣನು. ಶ್ರೀಮಂತನೂ, ರಾಜರಾಜನೂ ಆದ ಶ್ರೀರಾಮನು ಈ ವಿಭೀಷಣನನ್ನು ಲಂಕಾರಾಜ್ಯಕ್ಕೆ ರಾಜನನ್ನಾಗಿ ಅಭಿಷೇಕ ಮಾಡಿರುವನು. ಆದುದರಿಂದಲೇ ಇವನು ಯುದ್ಧಸನ್ನದ್ಧನಾಗಿ ನಿನ್ನಮೇಲೆ ಯುದ್ಧಕ್ಕೆ ಬರುತ್ತಿರುವನು. ಇವರ ಮಧ್ಯದಲ್ಲಿ ಮಹಾ ಪರ್ವತದಂತೆ ನಿಶ್ಚಲನಾಗಿರುವವನೂ, ಸಮಸ್ತ ವಾನರಸೇನೆಗಳನ್ನೂ ಕಣ್ಣಿಟ್ಟು ನೋಡುತ್ತಿರುವವನೂ ಆದ ಈತನೇ ವಾನರೇಶ್ವರನಾದ ಸುಗ್ರೀವನು. ಹಿಮಗಿರಿಯು ಸಮಸ್ತಪರ್ವತಗಳನ್ನೂ ಮೀರಿಸಿರುವಂತೆ ಈತನು ತನ್ನ ಕಾಂತಿಯಿಂದಲೂ, ಕೀರ್ತಿಯಿಂದಲೂ, ಬುದ್ಧಿಯಿಂದಲೂ, ಜ್ಞಾನದಿಂದಲೂ, ಕುಲದಿಂದಲೂ ಸಮಸ್ತ ವಾನರರನ್ನೂ ಮೀರಿಸಿರುವನು. ಈತನು ಪ್ರವೇಶಿಸಲಸದಳವಾಗಿಯೂ, ಪರ್ವತದುರ್ಗಗಳಿಂದ ಆವರಿಸ

ಕಪೀನತಿಬಭ್ರಾಜ ಹಿಮವಾನಿವ ಪರ್ವತಾನ್ ॥ ೩೦ ॥ ಕಿಷ್ಕಿಂಧಾಂ ನಿತ್ಯಮಧ್ಯಾಸ್ತೇ ಗುಹಾಂ ಸಗಹನದ್ರುಮಾಂ । ದುರ್ಗಾಂ ಪರ್ವತದುರ್ಗಸ್ಥಾಂ ಪ್ರಧಾನೈಸ್ಸಹ ಯೂಥಪೈಃ ॥ ೩೧ ॥ ಯಸ್ಯೈಷಾ ಕಾಂಚನೀ ಮಾಲಾ ಶೋಭತೇ ಶತಪುಷ್ಕರಾ । ಕಾಂತಾ ದೇವಮನುಷ್ಯಾಣಾಂ ಯಸ್ಯಾಂ ಲಕ್ಷ್ಮೀಃ ಪ್ರತಿಷ್ಠಿತಾ ॥ ೩೨ ॥ ಏತಾಂ ಚ ಮಾಲಾಂ ತಾರಾಂಚ ಕಪಿರಾಜ್ಯಂಚ ಶಾಶ್ವತಂ । ಸುಗ್ರೀವೋ ವಾಲಿನಂ ಹತ್ವಾ ರಾಮೇಣ ಪ್ರತಿಪಾದಿತಃ ॥ ೩೩ ॥ ಶತಂ ಶತಸಹಸ್ರಾಣಾಂ ಕೋಟಿಮಾಹುರ್ಮನೀಷಿಣಃ । ಶತಂ ಕೋಟಿಸಹಸ್ರಾಣಾಂ ಶಂಖ ಇತ್ಯಭಿಧೀಯತೇ ॥ ೩೪ ॥ ಶತಂ ಶಂಖಸಹಸ್ರಾಣಾಂ ಮಹಾಶಂಖಮಿತಿ ಸ್ಮೃತಃ । ಮಹಾಶಂಖ ಸಹಸ್ರಾಣಾಂ ಶತಂ

---

ಅತಿಕ್ರಮಿಸಿ ಶೋಭಿಸುತ್ತಿರುವನೋ, ಯಃ - ಯಾವನು, ಸಗ....ಮಾಂ - ವನಗಳಿಂದಲೂ, ವೃಕ್ಷಗಳಿಂದಲೂ ಕೂಡಿದ, ದುರ್ಗಾಂ - ಪ್ರಾಕಾರಾದಿಗಳಿಂದ ಪ್ರವೇಶಿಸಲಸಾಧ್ಯವಾದ, ಪರ್ವ....ಸ್ಥಾಂ - ಪರ್ವತರೂಪವಾದ ದುರ್ಗದಲ್ಲಿರುವ, ಗುಹಾಂ - ಗುಹಾರೂಪವಾದ, ಕಿಷ್ಕಿಂಧಾಂ - ಕಿಷ್ಕಿಂಧಾಪಟ್ಟಣವನ್ನು, ಪ್ರಧಾನನ್ಯೈಸ್ಸಹ-ಮಂತ್ರಿಗಳೊಡನೆ, ಯೂಥಪೈಸ್ಸಹ-ಯೂಥಪತಿಗಳೊಡನೆ, ನಿತ್ಯಮಧ್ಯಾಸ್ತೇ-ಯಾವಾಗಲೂ ವಾಸವಾಗಿರುವನೋ, ಯಸ್ಯಾಂ - ಯಾವುದರಲ್ಲಿ, ಲಕ್ಷ್ಮೀಃ - ವೀರಲಕ್ಷ್ಮಿಯು, ಪ್ರತಿಷ್ಠಿತಾ - ನೆಲೆಯಾಗಿರುವಳೋ, ಯಸ್ಯ - ಯಾವನ, ಏಷಾಮಾಲಾ - ಈ ಮಾಲಿಕೆಯು, ಶತಪುಷ್ಕರಾ - ನೂರು ಕಮಲಗಳುಳ್ಳದಾಗಿ, ದೇವಮನುಷ್ಯಾಣಾಂ - ದೇವತೆಗಳಿಗೂ, ಮನುಷ್ಯರಿಗೂ, ಕಾಂತಾ - ಮನೋಹರವಾಗಿ, ಶೋಭತೇ - ಹೊಳೆಯುತ್ತಿದೆಯೋ, ವಾಲಿನಂ - ವಾಲಿಯನ್ನು, ಹತ್ವಾ - ಕೊಂದು, ರಾಮೇಣ - ಶ್ರೀರಾಮನಿಂದ, ಸುಗ್ರೀವಃ - ಸುಗ್ರೀವನು, ಏತಾಂಮಾಲಾಂಚ - ಈ ಮಾಲಿಕೆಯನ್ನೂ, ಶಾಶ್ವತಂ - ಸ್ಥಿರವಾದ, ಕಪಿರಾಜ್ಯಂಚ - ವಾನರರಾಜ್ಯವನ್ನೂ ಸಹ, ಪ್ರತಿಪಾದಿತಃ - ಹೊಂದಿಸಲ್ಪಟ್ಟನು. ॥ ೨೯-೩೩ ॥ ಮನೀಷಿಣಃ - ವಿದ್ವಾಂಸರು, ಶತಸಹಸ್ರಾಣಾಂ - ನೂರು ಸಾವಿರಗಳ, ಶತಂ - ನೂರನ್ನು, (ಅಂದರೆ - ನೂರುಲಕ್ಷಗಳನ್ನು), ಕೋಟಿಂ - ಕೋಟಿಯನ್ನಾಗಿ, ಆಹುಃ - ಹೇಳುತ್ತಾರೆ, ಕೋಟಿ....ಣಾಂ - ಕೋಟಿಸಾವಿರಗಳ, ಶತಂ - ನೂರು, ಶಂಖಇತಿ - ಶಂಖವೆಂದು, ಅಭಿಧೀಯತೇ - ಹೇಳಲ್ಪಡುತ್ತದೆ, ಶಂಖಸಹಸ್ರಾಣಾಂ - ಸಹಸ್ರಶಂಖಗಳ, ಶತಂ - ನೂರು, ಮಹಾಶಂಖಮಿತಿ - ಮಹಾಶಂಖವೆಂದು, ಸ್ಮೃತಃ - ಹೇಳಲ್ಪಟ್ಟಿದೆ, ಮಹಾ.....ಣಾಂ - ಸಹಸ್ರ

---

ಲ್ಪಟ್ಟುದೂ, ಸುತ್ತಲೂ ಸಮಸ್ತ ವೃಕ್ಷಗಳಿಂದ ತುಂಬಿರುವುದೂ, ಗುಹಾರೂಪವಾದುದೂ ಆದ ಕಿಷ್ಕಿಂಧಾನಗರದಲ್ಲಿ ಪ್ರಧಾನ ಯೂಥಪತಿಗಳೊಡನೆ ವಾಸಮಾಡುತ್ತಿರುವನು. ಈತನ ವಕ್ಷಸ್ಥಳದಲ್ಲಿ ನೂರು ಕಮಲಗಳುಳ್ಳದೂ, ಸುವರ್ಣಮಯವಾಗಿರುವುದೂ, ದೇವತೆಗಳಿಗೂ, ಮಾನವರಿಗೂ ದುರ್ಲಭವಾಗಿರುವುದೂ ಆದ ಕಾಂಚನಮಾಲೆಯು ಶೋಭಿಸುತ್ತಿರುವುದನ್ನು ನೋಡು. ಅದನ್ನು ಧರಿಸಿದವನು ಎಂದಿಗೇ ಆಗಲಿ ಯುದ್ಧದಲ್ಲಿ ಪರಾಜಯವನ್ನು ಹೊಂದುವುದಿಲ್ಲವು. ಶ್ರೀರಾಮನು ಯುದ್ಧದಲ್ಲಿ ವಾಲಿಯನ್ನು ಕೊಂದು ಈ ಕಾಂಚನಮಾಲೆಯನ್ನೂ, ತಾರೆಯನ್ನೂ, ಶಾಶ್ವತವಾದ ವಾನರರಾಜ್ಯವನ್ನೂ ಈತನಿಗೆ ಕೊಟ್ಟನು. ॥ ೨೭-೩೩ ॥ ಎಲೈ ರಾಕ್ಷಸೇಶ್ವರನೇ! ನೂರುಲಕ್ಷಗಳು ಒಂದು ಕೋಟಿಯೆಂದೂ, ನೂರುಸಾವಿರ ಕೋಟಿಗಳು ಒಂದು ಶಂಖವೆಂದೂ ಹೇಳುವರು. ನೂರುಸಾವಿರ ಶಂಖಗಳು ಒಂದು ಮಹಾಶಂಖವಾಗುವುದು. ನೂರುಸಾವಿರ ಮಹಾಶಂಖಗಳು ಒಂದು ಬೃಂದವೆನಿಸುವುದು. ನೂರು

ಬೃಂದಮಿತಿ ಸ್ಮೃತಂ ||೩೫|| ಶತಂ ಬೃಂದಸಹಸ್ರಾಣಾಂ ಮಹಾಬೃಂದಮಿತಿ ಸ್ಮೃತಂ | ಮಹಾಬೃಂದಸಹಸ್ರಾಣಾಂ ಶತಂ ಪದ್ಮಮಿತಿ ಸ್ಮೃತಂ ||೩೬|| ಶತಂ ಪದ್ಮಸಹಸ್ರಾಣಾಂ ಮಹಾಪದ್ಮಮಿತಿ ಸ್ಮೃತಂ | ಮಹಾಪದ್ಮಸಹಸ್ರಾಣಾಂ ಶತಂ ಖರ್ವಮಿಹೋಚ್ಯತೇ ||೩೭|| ಶತಂ ಖರ್ವಸಹಸ್ರಾಣಾಂ ಮಹಾಖರ್ವಮಿತಿ ಸ್ಮೃತಂ | ಮಹಾಖರ್ವ ಸಹಸ್ರಾಣಾಂ ಸಮುದ್ರಮಭಿಧೀಯತೇ || ೩೮ || ಶತಮೋಘಸಹಸ್ರಾಣಾಂ ಮಹೌಘ ಇತಿ ವಿಶ್ರುತಃ | ಏವಂ ಕೋಟಿಸಹಸ್ರೇಣ ಶಂಖಾನಾಂಚ ಶತೇನಚ || ೩೯ || ಮಹಾ ಶಂಖಸಹಸ್ರೇಣ ತಥಾಬೃಂದಶತೇನಚ | ಮಹಾಬೃಂದ ಸಹಸ್ರೇಣ ತಥಾ ಪದ್ಮಶತೇ

ಮಹಾಶಂಖಗಳ, ಶತಂ - ನೂರು, ಬೃಂದಮಿತಿ - ಬೃಂದವೆಂದು, ಸ್ಮೃತಂ - ಹೇಳಲ್ಪಡುತ್ತದೆ. ಬೃಂದಸಹಸ್ರಾಣಾಂ - ಬೃಂದಸಹಸ್ರಗಳ, ಶತಂ - ನೂರು, ಮಹಾಬೃಂದಮಿತಿ - ಮಹಾಬೃಂದವೆಂದು, ಸ್ಮೃತಂ - ಹೇಳಲ್ಪಡುವದು, ಮಹಾ....ಣಾಂ - ಮಹಾಬೃಂದಗಳ ಸಹಸ್ರಗಳ, ಶತಂ - ನೂರು, ಪದ್ಮಮಿತಿ - ಪದ್ಮವೆಂದು, ಸ್ಮೃತಂ - ಹೇಳಲ್ಪಡುತ್ತೆ, ಪದ್ಮಸಹಸ್ರಾಣಾಂ - ಸಾವಿರಪದ್ಮಗಳ, ಶತಂ-ನೂರು, ಮಹಾಪದ್ಮಮಿತಿ - ಮಹಾಪದ್ಮವೆಂದು, ಸ್ಮೃತಂ - ನುಡಿಯಲ್ಪಡುತ್ತೆ, ಇಹ - ಈ ಜಗತ್ತಿನಲ್ಲಿ, ಮಹಾ....ಣಾಂ - ಸಾವಿರ ಮಹಾಪದ್ಮಗಳ, ಶತಂ - ನೂರು, ಖರ್ವಂ - ಖರ್ವವೆಂದು, ಉಚ್ಯತೇ - ಹೇಳಲ್ಪಡುತ್ತದೆ, ಖರ್ವ....ಣಾಂ - ಸಹಸ್ರಖರ್ವಗಳ, ಶತಂ - ನೂರು, ಮಹಾಖರ್ವಮಿತಿ - ಮಹಾಖರ್ವವೆಂದು, ಸ್ಮೃತಂ - ಹೇಳಲ್ಪಡುವದು, ಮಹಾ.....ಣಾಂ - ಸಾವಿರ ಮಹಾಖರ್ವಗಳ, ಶತಂ - ನೂರು, ಸಮುದ್ರಂ - ಸಮುದ್ರವೆಂದು, ಅಭಿಧೀಯತೇ - ಹೇಳಲ್ಪಡುತ್ತದೆ, ಸಮುದ್ರಸಾಹಸ್ರಂ - ಸಹಸ್ರಸಮುದ್ರ ಸಂಖ್ಯೆಯುಳ್ಳ, ಶತಂ - ನೂರು, ಓಘಇತಿ - ಓಘವೆಂದು, ಅಭಿಧೀಯತೇ-ಹೇಳಲ್ಪಡುವದು, ಓಘಸಹಸ್ರಾಣಾಂ - ಸಾವಿರ ಓಘಗಳ, ಶತಂ-ನೂರು, ಮಹೌಘಇತಿ-ಮಹೌಘವೆಂದು, ವಿಶ್ರುತಃ - ಕೇಳಲ್ಪಟ್ಟಿದೆ. ||೩೮-೩೯|| ನಿತ್ಯಂ - ಯಾವಾಗಲೂ, ಮಹಾಬಲವೃತಃ-ಬಹಳವಾದ ಸೇನೆಯಿಂದ ಪರಿವೃತನಾದ, ಮಹಾ.....ಮಃ - ಬಹು ದೇಹಶಕ್ತಿಯೂ, ಪರಾಕ್ರಮವೂ ಉಳ್ಳ, ವಾನರೇಂದ್ರಃ - ವಾನರಾಧಿಪತಿಯಾದ, ಸುಗ್ರೀವಃ - ಸುಗ್ರೀವನು, ಏವಂ - ಈಪರಿಯಾಗಿರುವ, ಕೋಟಿಸಹಸ್ರೇಣ-ಸಾವಿರಕೋಟಿಗಳಿಂದಲೂ, ಶಂಖಾನಾಂ-ಶಂಖಗಳ, ಶತೇನಚ-ನೂರರಿಂದಲೂ, ಮಹಾ....ಣ - ಮಹಾಶಂಖಗಳ ಸಹಸ್ರದಿಂದಲೂ, ತಥಾ - ಹಾಗೆಯೇ, ಬೃಂದಶತೇನಚ - ಬೃಂದಗಳ ನೂರರಿಂದಲೂ, ಮಹಾ....ಣ-ಸಾವಿರ ಮಹಾಬೃಂದಗಳಿಂದಲೂ, ತಥಾ-ಹಾಗೆಯೇ, ಪದ್ಮಶತೇನಚ-ನೂರು ಪದ್ಮಗಳಿಂದಲೂ, ಮಹಾ.....ಣ - ಸಹಸ್ರ ಮಹಾಪದ್ಮಗಳಿಂದಲೂ, ತಥಾ - ಹಾಗೆಯೇ,

ಸಾವಿರ ಬೃಂದಗಳು ಒಂದು ಮಹಾ ಬೃಂದವಾಗುವುದು. ನೂರುಸಾವಿರ ಮಹಾಬೃಂದಗಳು ಒಂದು ಪದ್ಮವೆನಿಸುವುದು. ನೂರುಸಾವಿರ ಪದ್ಮಗಳು ಒಂದು ಮಹಾಪದ್ಮವೆನಿಸುತ್ತದೆ. ನೂರುಸಾವಿರ ಮಹಾಪದ್ಮಗಳು ಒಂದು ಖರ್ವವೆಂದೂ, ನೂರುಸಾವಿರ ಖರ್ವಗಳು ಒಂದು ಮಹಾಖರ್ವವೆಂದೂ ಹೇಳುತ್ತಾರೆ. ನೂರುಸಾವಿರ ಮಹಾಖರ್ವಗಳು ಒಂದು ಸಮುದ್ರವೆನಿಸುವುದು. ನೂರುಸಾವಿರ ಸಮುದ್ರಗಳು ಓಘವೆನಿಸುತ್ತದೆ. ಓಘಗಳು ನೂರುಸಾವಿರಗಳಾದರೆ ಒಂದು ಮಹೌಘವಾಗುವುದು. ಹೀಗೆ ಸಾವಿರಕೋಟಿಗಳೂ, ನೂರು ಶಂಖಗಳೂ, ಸಾವಿರ ಮಹಾಶಂಖಗಳೂ, ನೂರು ಬೃಂದಗಳೂ, ಸಾವಿರ ಮಹಾಬೃಂದಗಳೂ, ನೂರು ಪದ್ಮಗಳೂ, ಸಾವಿರ ಮಹಾಪದ್ಮಗಳೂ, ನೂರು ಖರ್ವಗಳೂ, ಸಾವಿರ ಮಹಾಖರ್ವ

ನಚ ॥ ೪೦ ॥ ಮಹಾಪದ್ಮಸಹಸ್ರೇಣ ತಥಾ ಖರ್ವಶತೇನಚ । ಸಮುದ್ರೇಣ ಶತೇ
ನೈವ ಮಹೌಘೇನ ತಥೈವಚ ॥ ೪೧ ॥ ಏಷ ಕೋಟಿಮಹೌಘೇನ ಸಮುದ್ರ ಸದೃಶೇ
ನಚ । ವಿಭೀಷಣೇನ ಸಚಿವೈ ರಾಕ್ಷಸೈಃ ಪರಿವಾರಿತಃ ॥ ೪೨ ॥ ಸುಗ್ರೀವೋ ವಾನ
ರೇಂದ್ರಸ್ತ್ವಾಂ ಯುದ್ಧಾರ್ಥಮಭಿವರ್ತತೇ । ಮಹಾಬಲವೃತೋ ನಿತ್ಯಂ ಮಹಾಬಲ
ಪರಾಕ್ರಮಃ ॥ ೪೩ ॥

ಇಮಾಂ ಮಹಾರಾಜ! ಸಮೀಕ್ಷ್ಯ ವಾಹಿನೀ
ಮುಪಸ್ಥಿತಾಂ ಪ್ರಜ್ವಲಿತಗ್ರಹೋಪಮಾಂ ।
ತತಃ ಪ್ರಯತ್ನಃ ಪರಮೋ ವಿಧೀಯತಾಂ
ಯಥಾ ಜಯಸ್ಯಾ ನ್ನಪರೈಃ ಪರಾಜಯಃ" ॥ ೪೪ ॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಅಷ್ಟಾವಿಂಶಸ್ಸರ್ಗಃ.

---

ಖರ್ವಶತೇನಚ - ನೂರುಖರ್ವಗಳಿಂದಲೂ, ಸಮುದ್ರೇಣ - ಸಮುದ್ರಸಂಖ್ಯಾತವಾದ, ಶತೇನೈವ - ಶತಮಾನದಿಂದ, ತಥೈವಚ - ಹಾಗೆಯೇ, ಮಹೌಘೇನ - ಮಹೌಘಸಂಖ್ಯಾಕವಾದ ನೂರರಿಂದಲೂ, ಕೋಟಿಮಹೌಘೇನ - ಕೋಟಿಮಹೌಘಗಳಿಂದಲೂ, ಸಮು....ಚ - ಸಮುದ್ರಸಮಾನವೂ ಆದ, (ಈ ಸಂಖ್ಯೆಯುಳ್ಳ ಸೇನೆಗಳಿಂದಲೂ), ಸಚಿವೈಃ - ಮಂತ್ರಿಗಳಾದ, ರಾಕ್ಷಸೈಃ - ಅಸುರರಿಂದ, (ಅಸುರರಿಂದ ಕೂಡಿರುವ), ವಿಭೀಷಣೇನಚ - ವಿಭೀಷಣನಿಂದಲೂ, ಪರಿವಾರಿತಃ - ಸುತ್ತುವರೆಯಲ್ಪಟ್ಟವನಾಗಿ, ತ್ವಾಮಭಿ - ನಿನ್ನನ್ನು ಕುರಿತು, ಯುದ್ಧಾಯ - ಯುದ್ಧಕ್ಕಾಗಿ, ವರ್ತತೇ - ಇದ್ದಾನೆ. ಹೇ ಮಹಾರಾಜ - ಎಲೈ ಮಹಾರಾಜನೇ, ಪ್ರಜ್ವ....ಮಾಂ - ಪ್ರಜ್ವಲಿತವಾದ ಗ್ರಹದಜ್ವಾಲೆಗೆ ಸಮಾನವಾದ, ಉಪಸ್ಥಿತಾಂ - ಬಂದಿರುವ, ಇಮಾಂವಾಹಿನೀಂ - ಈ ಸೈನ್ಯವನ್ನು, ಸಮೀಕ್ಷ್ಯ - ನೋಡಿ, ತತಃ - ಬಳಿಕ, ಯಥಾ - ಹೇಗೆ, ಜಯಃ - ಜಯವು, ಸ್ಯಾತ್ - ಆಗುವದೋ, ಪರೈಃ - ಶತ್ರುಗಳಿಂದ, ಪರಾಜಯಃ - ಪರಾಜಯವು, ನಸ್ಯಾತ್ - ಆಗಲಾರದೋ, ತಥಾ - ಹಾಗೆ, ಪರಮಃ - ಉತ್ತಮವಾದ, ಪ್ರಯತ್ನಃ - ಪ್ರಯತ್ನವು, ವಿಧೀಯತಾಂ - ಮಾಡಲ್ಪಡಲಿ. ॥೪೩-೪೪॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಅಷ್ಟಾವಿಂಶಸ್ಸರ್ಗಃ.

---

ಗಳೂ, ನೂರುಸಮುದ್ರಗಳೂ, ಸಾವಿರ ಮಹಾಸಮುದ್ರಗಳೂ, ನೂರು ಓಘಗಳೂ, ಕೋಟಿ ಮಹೌಘಗಳೂ ಉಳ್ಳ ಅಪಾರಸೇನೆಯೊಡಗೂಡಿ ವಿಭೀಷಣನೂ, ಆತನ ನಾಲ್ವರು ಮಂತ್ರಿಗಳೂ ತನ್ನನ್ನು ಸುತ್ತುವರೆದು ಬರುತ್ತಿರಲು ಮಧ್ಯದಲ್ಲಿ ಮಹಾ ಬಲಪರಾಕ್ರಮಶಾಲಿಯೂ, ವಾನರೇಶ್ವರನೂ ಆದ ಸುಗ್ರೀವನು ನಿನ್ನೊಡನೆ ಯುದ್ಧಮಾಡಲು ಬರುತ್ತಿರುವನು. ಮಹಾರಾಜನೇ, ರಾವಣಾಸುರನೇ! ಮಹಾ ಕ್ರೂರಗ್ರಹಕ್ಕೆ ಸಮಾನವಾಗಿ ಪ್ರಕಾಶಿಸುತ್ತಿರುವುದೂ, ಸಮೀಪಕ್ಕೆ ಬರುತ್ತಿರುವುದೂ ಆದ ಈ ಮಹಾ ಸೇನೆಯನ್ನು ನೋಡಿ ಇನ್ನು ನಮಗೆ ಜಯವು ಲಭಿಸುವಂತೆಯೂ, ಶತ್ರುಗಳಿಂದ ಅಪಜಯವುಂಟಾಗದಂತೆಯೂ ಚೆನ್ನಾಗಿ ಪ್ರಯತ್ನಿಸುವವನಾಗು" ಎಂದು ಹೇಳಿದನು. ॥ ೩೪-೪೪ ॥

ಇಂತಿದು ಶುಕಕೃತ ಶ್ರೀರಾಮಸೇನಾಪ್ರಕಾರ ನಿರೂಪಣವೆಂಬ ಇಪ್ಪತ್ತೆಂಟನೆಯ ಸರ್ಗವು ಸಮಾಪ್ತವಾದುದು.



# ಯುದ್ಧಕಾಂಡೇ ಏಕೋನತ್ರಿಂಶಸ್ಸರ್ಗಃ

ಶುಕೇನತು ಸಮಾಖ್ಯಾತಾಂ ಸ್ತಾನ್ ದೃಷ್ಟ್ವಾ ಹರಿಯೂಥಪಾನ್ । ಸಮೀಪಸ್ಥಂ ಚ ರಾಮಸ್ಯ ಭ್ರಾತರಂ ಸ್ವಂ ವಿಭೀಷಣಂ ॥೧॥ ಲಕ್ಷ್ಮಣಂಚ ಮಹಾವೀರ್ಯಂ ಭುಜಂ ರಾಮಸ್ಯ ದಕ್ಷಿಣಂ । ಸರ್ವವಾನರರಾಜಂಚ ಸುಗ್ರೀವಂ ಭೀಮವಿಕ್ರಮಂ ॥ ೨ ॥ (ಗಜಂ ಗವಾಕ್ಷಂ ಗವಯಂ ಮೈಂದಂ ದ್ವಿವಿದಮೇವಚ । ಅಂಗದಂಚೈವ ಬಲಿನಂ ವಜ್ರಹಸ್ತಾತ್ಮಜಾತ್ಮಜಂ ॥ ಹನೂಮಂತಂಚ ವಿಕ್ರಾಂತಂ ಜಾಂಬವಂತಂ ಚ ದುರ್ಜಯಂ । ಸುಷೇಣಂ ಕುಮುದಂ ನೀಲಂ ನಲಂಚ ಪ್ಲವಗರ್ಷಭಂ) ॥ ಕಿಂಚಿದಾವಿಗ್ನಹೃದಯೋ ಜಾತಕ್ರೋಧಶ್ಚ ರಾವಣಃ । ಭರ್ತ್ಸಯಾಮಾಸ ತೌ ವೀರೌ ಕಥಾಂತೇ ಶುಕಸಾರಣೌ ॥೩॥ ಅಧೋಮುಖೌ ತೌ ಪ್ರಣತಾವಬ್ರವೀಚ್ಛುಕಸಾರಣೌ । ರೋಷಗದ್ಗದಯಾ ವಾಚಾ ಸಂರಬ್ಧಃ ಪರುಷಂ ವಚಃ ॥೪॥ ನತಾವತ್ಸದೃಶಂ ನಾಮ

---

ಶುಕೇನತು - ಶುಕನಿಂದ, ಸಮಾಖ್ಯಾತಾನ್ - ಹೇಳಲ್ಪಟ್ಟ, ತಾನ್‌ಹರಿಯೂಥಪಾನ್ - ಆ ವಾನರ ಯೂಥಪತಿಗಳನ್ನೂ, ರಾಮಸ್ಯ - ಶ್ರೀರಾಮನ, ಸಮೀಪಸ್ಥಂ - ಸಮೀಪವರ್ತಿಯಾದ, ಸ್ವಂ - ತನ್ನವನಾದ, ಭ್ರಾತರಂ - ತಮ್ಮನಾದ, ವಿಭೀಷಣಂಚ - ವಿಭೀಷಣನನ್ನೂ, ರಾಮಸ್ಯ - ಶ್ರೀರಾಮನಿಗೆ, ದಕ್ಷಿಣಂಭುಜಂ - ಬಲಭುಜಪ್ರಾಯನಾದ, ಮಹಾವೀರ್ಯಂ - ಮಹಾ ಪರಾಕ್ರಮವಂತನಾದ, ಲಕ್ಷ್ಮಣಂಚ - ಲಕ್ಷ್ಮಣನನ್ನೂ, ಸರ್ವ.....ಚ - ಸಮಸ್ತ ಕಪಿಗಳಿಗೂ ನಾಥನಾದ, ಭೀಮವಿಕ್ರಮಂ - ಭಯಂಕರವಾದ ಪರಾಕ್ರಮವುಳ್ಳ, ಸುಗ್ರೀವಂಚ - ಸುಗ್ರೀವನನ್ನೂ, ದೃಷ್ಟ್ವಾ - ಕಂಡು, ಕಿಂಚಿತ್ - ಸ್ವಲ್ಪವಾಗಿ, ಆವಿ....ಯಃ - ಭಯಗೊಂಡ ಮನಸ್ಸುಳ್ಳ, ರಾವಣಃ - ರಾವಣನು, ಜಾತಕ್ರೋಧಶ್ಚ - ಹುಟ್ಟಿದ ಕೋಪವುಳ್ಳವನಾಗಿ, ಕಥಾಂತೇ - ಮಾತುಮುಗಿದಮೇಲೆ, ವೀರೌ - ಶೂರರಾದ, ತೌಶುಕಸಾರಣೌ - ಆ ಶುಕಸಾರಣರೆಂಬ ದೂತರನ್ನು, ಭರ್ತ್ಸಯಾಮಾಸ - ಗದರಿದನು. ॥೧-೩॥ ಅಧೋಮುಖೌ - ಕೆಳಮುಖರಾದ, ಪ್ರಣತೌ - ನಮ್ರರಾದ, ತೌಶುಕಸಾರಣೌ - ಆ ಶುಕಸಾರಣರೆಂಬ ಚಾರರನ್ನು ಕುರಿತು, ಸಂರಬ್ಧಃ - ಕೋಪವುಳ್ಳವನಾಗಿ, ರೋಷಗದ್ಗದಯಾ - ಕೋಪದಿಂದ ವಿಸ್ವರವಾದ, ವಾಚಾ - ಮಾತಿನಿಂದ, ಪರುಷಂ - ಕಠಿನವಾದ, ವಚಃ - ಮಾತನ್ನು, ಅಬ್ರ

---

ಆ ರೀತಿಯಾಗಿ ಶುಕನು ಹೇಳಿದ ವಾನರಾಧಿಪತಿಗಳನ್ನೂ, ಶ್ರೀರಾಮನ ಪಕ್ಕದಲ್ಲಿದ್ದ ತನ್ನ ತಮ್ಮನಾದ ವಿಭೀಷಣನನ್ನೂ, ಶ್ರೀರಾಮನಿಗೆ ಬಲಭುಜದಂತಿರುವ ಮಹಾ ವೀರ್ಯಸಂಪನ್ನನಾದ ಲಕ್ಷ್ಮಣನನ್ನೂ, ಸರ್ವವಾನರರಿಗೆ ಅಧಿಪತಿಯಾಗಿ ಭಯಂಕರ ಪರಾಕ್ರಮವುಳ್ಳ ಸುಗ್ರೀವನನ್ನೂ, ಹನುಮಂತನೇ ಮೊದಲಾದ ಇತರ ವಾನರಶ್ರೇಷ್ಠರನ್ನೂ ನೋಡಿ ರಾವಣಾಸುರನು ಸ್ವಲ್ಪ ಕಕ್ಕುಬಿಕ್ಕಾಗಿ ಒಡನೆಯೇ ಕೋಪೋದ್ದೀಪಿತನಾದನು. ಆಗಲೇ ಅವನು ತನಗೆ ಭಯವುಂಟಾಗುವಂತೆ ಶ್ರೀರಾಮನ ವೃತ್ತಾಂತವನ್ನು ಹೊಗಳುತ್ತಿದ್ದ ಶುಕಸಾರಣರೆಂಬ ಚಾರರನ್ನು ನಾನಾವಿಧ ಕ್ರೂರ ವಾಕ್ಯಗಳಿಂದ ಬೆದರಿಸಿದನು. ಆ ಸಮಯದಲ್ಲಿ ಆ ಶುಕಸಾರಣರಿಬ್ಬರೂ ನಾಚಿಕೆಯಿಂದ ತಲೆತಗ್ಗಿಸಿ ನಿಂತರು. ಆಗ ರಾವಣನು ರೋಷಗದ್ಗದಿತನಾಗಿ ಬಹಳವಾಗಿ ಕೋಪಗೊಂಡು ಕಠಿನ ವಾಕ್ಕುಗಳಿಂದ, "ಎಲೈ ಶುಕಸಾರಣರಿರಾ!

ಸಚಿವೈರುಪಜೀವಿಭಿಃ । ವಿಪ್ರಿಯಂ ನೃಪತೇರ್ವಕ್ತುಂ ನಿಗ್ರಹೇ ಪ್ರಗ್ರಹೇ ಪ್ರಭೋಃ ॥ ೫ ॥ ರಿಪೂಣಾಂ ಪ್ರತಿಕೂಲಾನಾಂ ಯುದ್ಧಾರ್ಥಮಭಿವರ್ತತಾಂ । ಉಭಾಭ್ಯಾಂ ಸದೃಶಂನಾಮ ವಕ್ತುಮಪ್ರಸ್ತವೇ ಸ್ತವಂ? ॥ ೬ ॥ ಆಚಾರ್ಯಾ ಗುರವೋ ವೃದ್ಧಾ ವೃಥಾ ವಾಂ ಪರ್ಯುಪಾಸಿತಾಃ । ಸಾರಂ ಯದ್ರಾಜಶಾಸ್ತ್ರಾಣಾಮನುಜೀವ್ಯಂ ನಗೃಹ್ಯತೇ ॥೭॥ ಗೃಹೀತೋಽಪಿ ನವಿಜ್ಞಾತೋ ಭಾರೋ ಜ್ಞಾನಸ್ಯ ವೋಹ್ಯತೇ । ಈದೃಶೈಸ್ಸಚಿವೈರ್ಯುಕ್ತೋ ಮೂರ್ಖೈರ್ದಿಷ್ಟ್ಯಾ ಧರಾಮ್ಯಹಂ ! ॥ ೮ ॥ ಕಿನ್ನು ಮೃತ್ಯೋ

ವೀತ್ - ನುಡಿದನು. ॥ ೪ ॥ ಉಪಜೀವಿಭಿಃ - ಅನುಸರಣೆಯಿಂದ ಜೀವಿಸುವ, ಸಚಿವೈಃ - ಮಂತ್ರಿಗಳಿಂದ, ನಿಗ್ರಹೇ - ಶತ್ರುನಿಗ್ರಹದಲ್ಲಿಯೂ, ಪ್ರಗ್ರಹೇ - ಅನುಗ್ರಹದಲ್ಲಿಯೂ, ಪ್ರಭೋಃ - ಸ್ವಾಮಿಯಾದ, ನೃಪತೇಃ - ಅರಸಿಗೆ, ವಿಪ್ರಿಯಂ - ಅನಿಷ್ಟ ವಾಕ್ಯವನ್ನು, ವಕ್ತುಂ - ಹೇಳುವದಕ್ಕೆ, ತಾವತ್-ಮೊದಲೇ, ಸದೃಶಂನಾಮನ - ಯೋಗ್ಯವಲ್ಲವಷ್ಟೆ. ॥ ೫ ॥ ಉಭಾಭ್ಯಾಂ - ನಿಮ್ಮಿಬ್ಬರಿಂದ, ಯುದ್ಧಾರ್ಥಂ - ಯುದ್ಧಕ್ಕಾಗಿ, ಅಭಿವರ್ತತಾಂ - ಎದುರಾಗಿ ನಿಂತಿರುವ, ಪ್ರತಿಕೂಲಾನಾಂ - ಪ್ರತಿಪಕ್ಷಿಗಳಾದ, ರಿಪೂಣಾಂ - ಶತ್ರುಗಳ, ಅಪ್ರಸ್ತವೇ - ಸ್ತೋತ್ರಕ್ಕೆ ಅಯೋಗ್ಯಕಾಲದಲ್ಲಿ, ಸ್ತವಂ - ಸ್ತೋತ್ರವನ್ನು, ಕರ್ತುಂ - ಮಾಡುವದಕ್ಕೆ, ಸದೃಶಂನಾಮ - ಯೋಗ್ಯವೇ, ॥ ೬ ॥ ಯತ್ - ಯಾವ ಕಾರಣದಿಂದ, ರಾಜಶಾಸ್ತ್ರಾಣಾಂ - ರಾಜನೀತಿ ಶಾಸ್ತ್ರಗಳಲ್ಲಿ, ಸಾರಂ - ಸಾರಭೂತವಾದ, ಅನುಜೀವ್ಯಂ - ಅನುಸರಿಸಿ ಜೀವನಮಾಡುವ ನಡತೆಯು, ನಗೃಹ್ಯತೇ - ತಿಳಿಯಲ್ಪಡುವದಿಲ್ಲವೋ, ಅತಃ - ಈ ಕಾರಣದಿಂದ, ವಾಂ - ನಿಮ್ಮಿಂದ, ವೃದ್ಧಾಃ - ಜ್ಞಾನವೃದ್ಧರಾದ, ಆಚಾರ್ಯಾಃ - ಉಪನಯನಪೂರ್ವಕವಾಗಿ ವೇದವನ್ನು ಹೇಳಿದವರೂ, ಗುರವಃ - ತಂದೆಯೇ ಮೊದಲಾದವರೂ, ವೃಥಾ - ವ್ಯರ್ಥವಾಗಿ, ಪರ್ಯುಪಾಸಿತಾಃ - ಸೇವಿಸಲ್ಪಟ್ಟರು. ॥ ೭ ॥ ಗೃಹೀತೋಽಪಿ - ಗ್ರಹಿಸಲ್ಪಟ್ಟುದಾದರೂ, ನವಿಗೃಹೀತೋವಾ - ತಿಳಿಯಲ್ಪಡಲಿಲ್ಲವೋ ಏನೋ, ಜ್ಞಾನಸ್ಯ - ಜ್ಞಾನದ, ಭಾರಃ - ಭಾರವು, ಊಹ್ಯತೇ - ವಹಿಸಲ್ಪಡುತ್ತದೋ, ಈದೃಶಃ - ಇಂಥವರಾದ, ಮೂರ್ಖೈಃ - ಮೂಢರಾದ, ಸಚಿವೈಃ - ಮಂತ್ರಿಗಳಿಂದ, ಯುಕ್ತಃ - ಕೂಡಿದವನಾಗಿ, ಅಹಂ - ನಾನು, ದಿಷ್ಟ್ಯಾ - ದೈವಾಧೀನ

ಒಬ್ಬ ಪ್ರಭುವನ್ನಾಶ್ರಯಿಸಿ ಜೀವಿಸುತ್ತಿರುವ ಮಂತ್ರಿಗಳು ಶತ್ರುಗಳ ನಿಗ್ರಹಾನುಗ್ರಹಗಳಲ್ಲಿ ಆ ಪ್ರಭುವಿಗೆ ಪ್ರಿಯವಾದ ಮಾತುಗಳನ್ನೇ ಆಡುವುದು ರಾಜನೀತಿಶಾಸ್ತ್ರದ ನಿಬಂಧನೆ. ಈ ವಿಷಯವನ್ನರಿಯದೆ ನೀವಿಬ್ಬರೂ ನನ್ನ ಮುಂದೆ ಈ ರೀತಿ ಶತ್ರುಗಳನ್ನು ಹೊಗಳಿದುದು ಕೇವಲ ಅನುಚಿತವೇ ಸರಿ. ॥ ೧–೫ ॥ ಎಲೈ ರಾಕ್ಷಸರಿರಾ ! ಪ್ರತಿಕೂಲವಾಗಿ ನಡೆಯುತ್ತಿರುವವರೂ, ಯುದ್ಧಕ್ಕಾಗಿ ಪ್ರವರ್ತಿಸುತ್ತಿರುವವರೂ ಆದ ಶತ್ರುಗಳ ವೃತ್ತಾಂತವನ್ನು ಉಚಿತವಲ್ಲದ ಕಾಲಗಳಲ್ಲಿ ಹೊಗಳುವುದು ನಿಮಗೆ ಸರಿಯೆನಿಸುವುದೇ? ಈಗ ನೀವಿಬ್ಬರೂ ಅಕಾರ್ಯವನ್ನು ಮಾಡಿದಿರಿ. ಎಲೈ ! ನೀವಿಬ್ಬರೂ ರಾಜನೀತಿಶಾಸ್ತ್ರಗಳ ಸಾರವನ್ನು ಗ್ರಹಿಸಿ ಸರಿಯಾಗಿ ಬಾಳದಿರುವುದರಿಂದ, ಅವುಗಳನ್ನು ನಿಮಗೆ ಕಲಿಸಿಕೊಟ್ಟ ಆಚಾರ್ಯರನ್ನೂ, ಗುರುಗಳನ್ನೂ, ವೃದ್ಧರನ್ನೂ ನೀವು ವ್ಯರ್ಥವಾಗಿ ಸೇವಿಸಿದಂತಾಯಿತು. ನೀವಿಬ್ಬರೂ ಶಾಸ್ತ್ರಗ್ರಂಥಗಳನ್ನು ಕೇವಲ ಹೊರೆಯಾಗಿ ಹೊತ್ತಿರಾಗಲಿ ಜ್ಞಾನಸಂಪಾದನೆಗಾಗಿ ಹೊರಲಿಲ್ಲವೆಂದು ತೋರುತ್ತದೆ. ಇಂತಹ ಮೂರ್ಖ ಮಂತ್ರಿಗಳೊಡಗೂಡಿದ ನಾನು ಕೇವಲ ದೈವಯೋಗದಿಂದ ರಾಜ್ಯವನ್ನಾಳುತ್ತಿರುವೆನು. ನಿಜವಾಗಿಯೂ ಮಂತ್ರಿಗಳಾದ ನಿಮ್ಮ ಸಹಾಯ

ರ್ಭಯಂ ನಾಸ್ತಿ ವಕ್ತುಂ ಮಾಂ ಪರುಷಂ ವಚಃ । ಯಸ್ಯ ಮೇ ಶಾಸತೋ ಜಿಹ್ವಾ ಪ್ರಯಚ್ಛತಿ ಶುಭಾಶುಭಂ ॥ ೯ ॥ ಅಪ್ಯೇವ ದಹನಂ ಸ್ಪೃಷ್ಟ್ವಾ ವನೇ ತಿಷ್ಠಂತಿ ಪಾದಪಾಃ? । ರಾಜದೋಷಪರಾಮೃಷ್ಟಾಸ್ತಿಷ್ಠಂತೇ ನಾಽಪರಾಧಿನಃ ॥೧೦॥ ಹನ್ಯಾಮಹಂ ತ್ವಿಮೌ ಪಾಪೌ ಶತ್ರುಪಕ್ಷಪ್ರಶಂಸಕೌ । ಯದಿ ಪೂರ್ವೋಪಕಾರೈಸ್ತು ನಕ್ರೋಧೋ ಮೃದುತಾಂ ವ್ರಜೇತ್ ॥ ೧೧ ॥ ಅಪಧ್ವಂಸತ ಗಚ್ಛಧ್ವಂ ಸನ್ನಿಕರ್ಷಾದಿತೋ ಮಮ। ನಹಿ ವಾಂ ಹಂತುಮಿಚ್ಛಾಮಿ ಸ್ಮರಾಮ್ಯುಪಕೃತಾನಿ ವಾಂ । ಹತಾವೇವ ಕೃತಘ್ನೌ ತೌ

ದಿಂದ, ಧರಾಮಿ - ರಾಜ್ಯವನ್ನು ವಹಿಸುತ್ತಿದೇನೆ. ॥೮॥ ಶಾಸತಃ - ಶಿಕ್ಷಾಕರ್ತನಾದ, ಯಸ್ಯ - ಯಾವ, ಮೇ - ನನ್ನ, ಜಿಹ್ವಾ - ನಾಲಿಗೆಯು, ಶುಭಾಶುಭಂ - ಶುಭವನ್ನೂ ಅಶುಭವನ್ನೂ, ಪ್ರಯಚ್ಛತಿ- ಕೊಡುತ್ತದೆಯೋ, ತಂಮಾಂ - ಅಂಥಾ ನನ್ನನ್ನು ಕುರಿತು, ಪರುಷಂ - ಕಠಿನವಾದ, ವಚಃ- ಮಾತನ್ನು, ವಕ್ತುಂ - ಹೇಳುವದಕ್ಕೆ, ಮೃತ್ಯೋಃ - ಮರಣದಿಂದ, ಭಯಂ - ಭಯವು, ನಾಸ್ತಿಕಿಂ- ಇಲ್ಲವೇ. ॥೯॥ ವನೇ - ಅರಣ್ಯದಲ್ಲಿ, ಪಾದಪಾಃ - ಗಿಡಗಳು, ದಹನಂ - ಅಗ್ನಿಯನ್ನು, ಸ್ಪೃಷ್ಟ್ವೈವ- ಸ್ಪರ್ಶಮಾಡಿ, ಅಪಿತಿಷ್ಠಂತಿ - ನಿಲ್ಲುತ್ತವೆಯೆ ? (ಅಂತೆಯೇ) ರಾಜ....ಷ್ಟಾಃ - ರಾಜಕೋಪಕ್ಕೆ ಒಳಗಾದ, ಅಪರಾಧಿನಃ - ಅಪರಾಧಿಗಳು, ನತಿಷ್ಠಂತೇ - ಇರುವದಿಲ್ಲವು. ॥೧೦॥ ಪೂರ್ವೋಪಕಾರೈಃ- ಪೂರ್ವದಲ್ಲಿ ಮಾಡಿದ ಉಪಕಾರಗಳಿಂದ, ಕ್ರೋಧಃ - ಕೋಪವು, ಮೃದುತಾಂ - ಮಾರ್ದವವನ್ನು, ನವ್ರಜೇದ್ಯದಿ - ಹೊಂದದೇ ಹೋದರೆ, ಅಹಂತು - ನಾನಾದರೆ, ಶತ್ರು....ತೌ - ಶತ್ರುಗಳ ಪಕ್ಷವನ್ನು ಸ್ತೋತ್ರಮಾಡುತ್ತಿರುವ, ಪಾಪೌ - ಪಾಪಿಷ್ಠರಾದ, ಇಮೌ - ಈ ಶುಕಸಾರಣರನ್ನು, ಹನ್ಯಾಂ- ಕೊಲ್ಲುತ್ತಿದ್ದೆನು. ॥೧೧॥ ಮಮ - ನನ್ನ, ಇತಸ್ಸನ್ನಿಕರ್ಷಾತ್ - ಈ ಸಮೀಪದಿಂದ, ಗಚ್ಛಧ್ವಂ- ಹೊರಟುಹೋಗಿ, ಅಪಧ್ವಂಸತ - ಹಾಳಾಗಿ ಹೋಗಿರಿ, ಹಿ - ಯಾವ ಕಾರಣದಿಂದ, ವಾಂ - ನಿಮ್ಮಿಂದ, ಉಪಕೃತಾನಿ - ಮಾಡಲ್ಪಟ್ಟ ಉಪಕಾರಗಳನ್ನು, ಸ್ಮರಾಮಿ - ಸ್ಮರಿಸಿಕೊಳ್ಳುತ್ತೇನೆಯೋ, ಅತಃ - ಆ ಕಾರಣದಿಂದ, ವಾಂ - ನಿಮ್ಮನ್ನು, ಹಂತುಂ - ಕೊಲ್ಲಲು, ನೇಚ್ಛಾಮಿ - ಇಚ್ಛಿಸ

ದಿಂದಲ್ಲವು. ಎಲೈ ಶುಕಸಾರಣರಿರಾ ! ನನ್ನೆದುರಿಗೆ ನಿಂತು ಈ ರೀತಿ ಕಠಿನ ವಚನಗಳನ್ನಾಡುವಾಗ ನಿಮಗೆ ಮರಣಭಯವುಂಟಾಗದಿರುವುದಕ್ಕೆ ಕಾರಣವೇನು ? ಪ್ರಭುತ್ವವನ್ನು ಮಾಡುತ್ತಿರುವ ನನ್ನ ಜಿಹ್ವೆಯು ಶುಭಾಶುಭ ಫಲಗಳನ್ನು ಕೊಡಬಲ್ಲುದೆಂಬುದನ್ನರಿತೂ ನೀವೀರೀತಿ ನುಡಿಯಲು ಕಾರಣವೇನು? ಅಯ್ಯೋ! ವನವೃಕ್ಷಗಳು ದಳ್ಳುರಿಯು ತಗುಲಿದರೂ ಬದುಕುವುದು ಹೇಗೆ ಸಾಧ್ಯವಿಲ್ಲವೋ ಹಾಗೆಯೇ ಪ್ರಭುಗಳಿಗೆ ಅಪಕಾರವನ್ನು ಮಾಡಿಯೂ ಬದುಕಲು ಸಾಧ್ಯವಿಲ್ಲವೆಂದು ರಾಜನೀತಿಶಾಸ್ತ್ರವು ಸಾರುತ್ತಿರುವುದನ್ನು ನೀವರಿಯರೇನು? ॥ ೬–೧೦ ॥ ನೀತಿಶಾಸ್ತ್ರವನ್ನು ಸಂಪೂರ್ಣವಾಗಿ ಓದಿಯೂ ನೀವೀರೀತಿ ಮಾತನಾಡಿದುದು ಮಹಾಪರಾಧವೇ ಸರಿ. ಆದುದರಿಂದ ಮಹಾ ಪಾಪಿಷ್ಠರೂ, ಶತ್ರುಪಕ್ಷದವರನ್ನು ಹೊಗಳಿದವರೂ ಆದ ನಿಮ್ಮನ್ನು ಆಗಲೇ ಕೊಂದುಬಿಡುತ್ತಿದ್ದೆನು. ಆದರೂ ಪೂರ್ವದಲ್ಲಿ ನೀವು ಮಾಡಿದ ಉಪಕಾರಸ್ಮರಣೆಯಿಂದ ನಿಮ್ಮನ್ನು ಸುಮ್ಮನೆ ಬಿಟ್ಟಿರುತ್ತೇನೆ. ಹಿಂದಿನ ಉಪಕಾರವು ಸ್ಮರಣೆಗೆ ಬಾರದಿದ್ದರೆ ನಿಮ್ಮನ್ನು ಕೊಂದೇ ಬಿಡುತ್ತಿದ್ದೆನು. ಎಲಾ ಶುಕಸಾರಣರಿರಾ ! ದುರಾತ್ಮರಾದ ನಿಮ್ಮ ಮುಖವನ್ನು ನೋಡಬಾರದು. ನೀವು ನನ್ನ ಬಳಿಯಲ್ಲಿ ನಿಲ್ಲಬೇಡಿರಿ. ತೊಲಗಿ

ಮಯಿ ಸ್ನೇಹಪರಾಙ್ಮುಖೌ" ‖ ೧೨ ‖ ಏವಮುಕ್ತೌತು ಸವ್ರೀಳೌ ತಾವುಭೌ ಶುಕ ಸಾರಣೌ । ರಾವಣಂ ಜಯಶಬ್ದೇನ ಪ್ರತಿನಂದ್ಯಾಭಿನಿಸ್ಸೃತೌ ‖೧೩‖ ಅಬ್ರವೀತ್ತುದಶ ಗ್ರೀವ ಸ್ಸಮೀಪಸ್ಥಂ ಮಹೋದರಂ । "ಉಪಸ್ಥಾಪಯ ಮೇ ಶೀಘ್ರಂ ಚಾರಾನ್ನೀತಿ ವಿಶಾರದಾನ್" ‖೧೪‖ ಮಹೋದರಸ್ತಥೋಕ್ತಸ್ತು ಶೀಘ್ರಮಾಜ್ಞಾಪಯಚ್ಚರಾನ್ । ತತಶ್ಚಾರಾಸ್ಸಂತ್ವರಿತಾಃ ಪ್ರಾಪ್ತಾಃ ಪಾರ್ಥಿವಶಾಸನಾತ್ । ಉಪಸ್ಥಿತಾಃ ಪ್ರಾಂಜ ಲಯೋ ವರ್ಧಯಿತ್ವಾ ಜಯಾಶಿಷಾ ‖ ೧೫-೧೬ ‖ ತಾನಬ್ರವೀತ್ತತೋ ವಾಕ್ಯಂ ರಾವಣೋ ರಾಕ್ಷಸಾಧಿಪಃ । ಚಾರಾನ್ ಪ್ರತ್ಯಾಯಿತಾನ್ ಶೂರಾನ್ ಭಕ್ತಾನ್ ವಿಗತ

---

ಲಾರೆ, ಮಯಿ - ನನ್ನಲ್ಲಿ, ಸ್ನೇಹಪರಾಙ್ಮುಖೌ - ಮೈತ್ರೀವಿಮುಖರಾದ, ಕೃತಘ್ನೌ - ಉಪ ಕಾರವನ್ನು ಸ್ಮರಣೆಮಾಡದಿರುವ, ತೌ - ಆ ಶುಕಸಾರಣರು, ಹತಾವೇವ - ಸತ್ತವರೇ ಸರಿ. ‖ ೧೨ ‖ ಏವಂ - ಈ ಪರಿಯಾಗಿ, ಉಕ್ತೌ - ಹೇಳಲ್ಪಟ್ಟವರಾದಕಾರಣ, ಸವ್ರೀಳೌ - ಲಜ್ಜೆಯಿಂದ ಕೂಡಿದವ ರಾಗಿ, ತೌಶುಕಸಾರಣಾವುಭೌ - ಆ ಶುಕಸಾರಣರೀರ್ವರೂ, ರಾವಣಂ-ರಾವಣನನ್ನು, ಜಯಶಬ್ದೇನ- ಜಯಶಬ್ದದಿಂದ, ಪ್ರತಿನಂದ್ಯ - ಸಂತೋಷಗೊಳಿಸಿ, ಅಭಿನಿಸ್ಸೃತೌ - ಈಚೆಗೆ ಹೊರಟುಬಂದರು. ‖ ೧೩ ‖ ದಶಗ್ರೀವಸ್ತು - ದಶಕಂಠನಾದರೆ, ಸಮೀಪಸ್ಥಂ - ಸಮೀಪವರ್ತಿಯಾದ, ಮಹೋದರಂ - ಮಹೋದರನನ್ನು ಕುರಿತು, ಶೀಘ್ರಂ - ಜಾಗ್ರತೆಯಾಗಿ, ನೀತಿವಿಶಾರದಾನ್ - ಶಾಸ್ತ್ರಜ್ಞರಾದ, ಮೇ- ನನ್ನ, ಚಾರಾನ್ - ಚಾರರನ್ನು, ಉಪಸ್ಥಾಪಯ - ಕರೆದುಕೊಂಡು ಬಾ, (ಇತಿ - ಇಂತೆಂದು, ಅಬ್ರ ವೀತ್ - ನುಡಿದನು). ‖ ೧೪ ‖ ತಥಾ - ಆಪರಿಯಾಗಿ, ಉಕ್ತಃ - ಹೇಳಲ್ಪಟ್ಟ, ಮಹೋದರಃ - ಮಹೋದರನು, ಚಾರಾನ್ - ಚಾರರನ್ನು, ಶೀಘ್ರಂ - ಜಾಗ್ರತೆಯಾಗಿ, ಆಜ್ಞಾಪಯತ್ - ಆಜ್ಞಾಪಿಸಿ ದನು, ತತಃ - ಬಳಿಕ, ಪಾರ್ಥಿ......ತ್ - ರಾಜಾಜ್ಞೆಯಿಂದ, ಸಂತ್ವರಿತಾಃ - ತ್ವರೆಯುಳ್ಳ, ಚಾರಾಃ - ಗೂಢಚಾರರು, ಪ್ರಾಪ್ತಾಃ - ಬಂದು, ಪ್ರಾಂಜಲಯಃ - ಅಂಜಲಿಬದ್ಧರಾಗಿ, ಜಯಾಶಿಷಾ - ಜಯ ಶಬ್ದದಿಂದ, ವರ್ಧಯಿತ್ವಾ - ವೃದ್ಧಿಗೊಳಿಸಿ, ಉಪಸ್ಥಿತಾಃ - ಸಮೀಪದಲ್ಲಿ ನಿಂತರು. ‖ ೧೫-೧೬ ‖ ತತಃ - ಬಳಿಕ, ರಾಕ್ಷಸಾಧಿಪಃ - ರಕ್ಕಸರಿಗೆ ಅಧಿಪತಿಯಾದ, ರಾವಣಃ - ರಾವಣನು, ಪ್ರತ್ಯಾ ಯಿತಾನ್ - ನಂಬುಗೆಯುಳ್ಳ, ಶೂರಾನ್ - ಶೂರರಾದ, ಭಕ್ತಾನ್ - ತನ್ನಲ್ಲಿ ಭಕ್ತಿಯುಳ್ಳ, ವಿಗ....ಸಾನ್ -

---

ಹೋಗಿ. ನೀವು ಮಾಡಿದ ಪೂರ್ವೋಪಕಾರವನ್ನು ಸ್ಮರಿಸಿ ನಿಮ್ಮನ್ನು ಜೀವಸಹಿತ ಬಿಟ್ಟಿರು ತ್ತೇನೆ. ಹೊರಟುಹೋಗಿರಿ" ಎಂದು ಹೇಳಿದನು. ಆಗ ಶುಕಸಾರಣರಿಬ್ಬರೂ ತಮ್ಮ ಕೃತಘ್ನತೆಯನ್ನೂ, ರಾವಣಾಸುರನ ಪೌರುಷವಚನಗಳನ್ನೂ ಸ್ಮರಿಸಿಕೊಂಡು ಸತ್ತವರಿಗೆ ತಾವು ಸಮಾನರಾದೆವೆಂದುಕೊಂಡು ನಾಚಿಕೆಯಿಂದ ತಲೆತಗ್ಗಿಸಿಕೊಂಡು, "ಜಯ ಜಯ" ಎಂದು ತಮ್ಮ ಪ್ರಭುವನ್ನು ಹೊಗಳಿ ಅಲ್ಲಿಂದ ಹೊರಟುಹೋದರು. ಆಮೇಲೆ ರಾವಣನು ತನ್ನ ಬಳಿಯಲ್ಲಿದ್ದ ಮಹೋದರನೆಂಬ ಮಂತ್ರಿಶ್ರೇಷ್ಠನನ್ನು ಕರೆದು, "ಮಹೋ ದರಾ! ನೀತಿವಿಶಾರದರಾದ ಚಾರರನ್ನಿಲ್ಲಿಗೆ ಕರೆಯಿಸು" ಎಂದನು. ಮಹೋದರನು ಆತನ ಅಪ್ಪಣೆಯಂತೆ ಆ ಚಾರರನ್ನು ಜಾಗ್ರತೆಯಾಗಿ ಕರೆಯಿಸಿದನು. ಆ ಚಾರರು ತಮ್ಮ ಪ್ರಭು ವಿನ ಆಜ್ಞೆಯನ್ನು ಶಿರಸಾವಹಿಸಿ, ಅಲ್ಲಿಗೈತಂದು ಕೈಗಳನ್ನು ಜೋಡಿಸಿಕೊಂಡು, ಜಯಶಬ್ದ ಗಳಿಂದ ತಮ್ಮ ಪ್ರಭುವನ್ನು ಹರಿಸಿದರು. ‖ ೧೧-೧೬ ‖ ಆ ರೀತಿ ಪರಮಭಕ್ತಿಯಿಂದ ತನ್ನ ಬಳಿಗೈದಿದ ನಂಬುಗೆಯುಳ್ಳ ಆ ಚಾರರನ್ನು ನೋಡಿ ರಾವಣನು "ಅಯ್ಯಾ ಚಾರರಿರಾ!

ಸಾಧ್ವಸಾನ್ ॥ ೧೭ ॥ "ಇತೋ ಗಚ್ಛತ ರಾಮಸ್ಯ ವ್ಯವಸಾಯಂ ಪರೀಕ್ಷಥ । ಮಂತ್ರಿಷ್ವಭ್ಯಂತರಾ ಯೇಽಸ್ಯ ಪ್ರೀತ್ಯಾ ತೇನ ಸಮಾಗತಾಃ ॥ ೧೮ ॥ ಕಥಂ ಸ್ವಪಿತಿ ಜಾಗರ್ತಿ ಕಿಮನ್ಯಚ್ಚ ಕರಿಷ್ಯತಿ । ವಿಜ್ಞಾಯ ನಿಪುಣಂ ಸರ್ವಮಾಗಂತವ್ಯಮಶೇಷತಃ ॥ ೧೯ ॥ ಚಾರೇಣವಿದತಶ್ಶತ್ರುಃ ಪಂಡಿತೈರ್ವಸುಧಾಧಿಪೈಃ । ಯುದ್ಧೇ ಸ್ವಲ್ಪೇನ ಯತ್ನೇನ ಸಮಾಸಾದ್ಯ ನಿರಸ್ಯತೇ ॥ ೨೦ ॥ ಚಾರಾಸ್ತು ತೇ ತಥೇತ್ಯುಕ್ತ್ವಾ ಪ್ರಹೃಷ್ಟಾ ರಾಕ್ಷಸೇಶ್ವರಂ । ಶಾರ್ದೂಲಮಗ್ರತಃ ಕೃತ್ವಾ ತತಶ್ಚಕ್ರುಃ ಪ್ರದಕ್ಷಿಣಂ ॥ ೨೧ ॥ ತತಸ್ತೇ ತಂ

ಭಯವುಳ್ಳ, ತಾನ್‌ಚಾರಾನ್ - ಆ ಗೂಢಚಾರರನ್ನು ಕುರಿತು, ಅಬ್ರವೀತ್ - ನುಡಿದನು. ॥೧೭॥ ಇತಃ - ಇಲ್ಲಿಂದ, ಗಚ್ಛತ - ಹೋಗಿರಿ, ರಾಮಸ್ಯ - ಶ್ರೀರಾಮನ, ವ್ಯವಸಾಯಂ - ಉದ್ಯೋಗವನ್ನು, ಪರೀಕ್ಷಥ - ಪರೀಕ್ಷೆಮಾಡಿರಿ, ಅಸ್ಯ - ಈ ಶ್ರೀರಾಮನಿಗೆ, ಯೇ - ಯಾರು, ಮಂತ್ರಿಷು - ಮಂತ್ರಿಗಳಲ್ಲಿ, ಅಭ್ಯಂತರಾಃ-ಅಂತರಂಗಭೂತರಾದವರೋ, ಪ್ರೀತ್ಯಾ ವಿಶ್ವಾಸದಿಂದ, ತೇನ - ಆ ಶ್ರೀರಾಮನೊಡನೆ, ಸಮಾಗತಾಃ-ಕೂಡಿರುವರಾರೋ, ತಾನಪಿ ಅವರನ್ನೂ ಕೂಡ, ಪರೀಕ್ಷಥ-ಪರೀಕ್ಷೆ ಮಾಡಿರಿ, (ಆ ರಾಮನು) ಕಥಂ - ಹೇಗೆ, ಸ್ವಪಿತಿ - ನಿದ್ದೆಮಾಡುವನೋ, ಜಾಗರ್ತಿ - ಎಚ್ಚರಗೊಳ್ಳುವನೋ, ಅನ್ಯತ್ - ಮತ್ತೊಂದು ಕಾರ್ಯವನ್ನು, ಕಿಂಕರಿಷ್ಯತಿ - ಏನುಮಾಡುವನೋ, ನಿಪುಣಂ - ಚಾತುರ್ಯವಾಗಿ, ಸರ್ವಂ - ಸಮಸ್ತವನ್ನೂ, ಅಶೇಷತಃ - ಸಮಗ್ರವಾಗಿ, ವಿಜ್ಞಾಯ - ತಿಳಿದು, ಆಗಂತವ್ಯಂ-ಬರತಕ್ಕುದು. ॥೧೮-೧೯॥ ಪಂಡಿತೈಃ - ಪಂಡಿತರಾದ, ವಸುಧಾಧಿಪೈಃ - ರಾಜರಿಂದ, ಚಾರೇಣ-ಚಾರಮುಖದಿಂದ, ಅಶೇಷತಃ - ಸಮಗ್ರವಾಗಿ, ವಿದಿತಃ - ತಿಳಿಯಲ್ಪಟ್ಟ, ಶತ್ರುಃ - ವೈರಿಯು, ಯುದ್ಧೇ - ಕಾಳಗದಲ್ಲಿ, ಸ್ವಲ್ಪೇನಯತ್ನೇನ - ಅಲ್ಪಪ್ರಯತ್ನದಿಂದ, ಸಮಾಸಾದ್ಯ - ಹೊಂದಿ, ನಿರಸ್ಯತೇ - ಹೊಡೆಯಲ್ಪಡುತ್ತಾನೆ. ॥೨೦॥ ತೇಚಾರಾಸ್ತು - ಆ ಚಾರರಾದರೆ, ಪ್ರಹೃಷ್ಟಾಃ-ಸಂತೋಷಗೊಂಡವರಾಗಿ, ತಥೇತಿ - ಹಾಗೆಯೇ ಆಗಲೆಂದು, ಉಕ್ತ್ವಾ - ಹೇಳಿ, ಶಾರ್ದೂಲಂ-ಶಾರ್ದೂಲನನ್ನು, ಅಗ್ರತಃ - ಮುಂದುಗಡೆ, ಕೃತ್ವಾ - ಮಾಡಿ, ತತಃ - ಅನಂತರ, ರಾಕ್ಷಸೇಶ್ವರಂ-

ನೀವಿಲ್ಲಿಂದ ಹೊರಟು ಆ ರಾಮನ ಉದ್ಯೋಗವೆಲ್ಲವನ್ನೂ ಚೆನ್ನಾಗಿ ತಿಳಿದುಬನ್ನಿರಿ. ಅಲ್ಲದೆ ಆ ರಾಮನ ಮಂತ್ರಿಗಳಲ್ಲಿ ಯಾರು ಅವನಿಗೆ ಅಂತರಂಗಭೂತರೋ, ಯಾರು ಅತ್ಯಂತ ಪ್ರಿಯರೋ, ಯಾರು ಪರಮ ಮಿತ್ರರೋ, ಅವರೆಲ್ಲರನ್ನೂ ಚೆನ್ನಾಗಿ ಪರೀಕ್ಷಿಸಿಕೊಂಡು ಬನ್ನಿರಿ. ಇದೂ ಅಲ್ಲದೆ ಆ ರಾಮನು ನಿದ್ರಿಸುವ ಬಗೆಯನ್ನೂ, ಎಚ್ಚರಗೊಳ್ಳುವ ಬಗೆಯನ್ನೂ ತಿಳಿಯಿರಿ. ಹೆಚ್ಚಾಗಿ ಹೇಳಿಯೇನು; ಬಹು ಜಾಣತನದಿಂದ ಎಲ್ಲವನ್ನೂ ಚೆನ್ನಾಗಿ ತಿಳಿದುಕೊಂಡು ಜಾಗ್ರತೆಯಾಗಿ ಹಿಂತಿರುಗಿ ಬನ್ನಿರಿ. ಎಲೈ ಗೂಢಚಾರರಿರಾ! ಚಾರರ ಮೂಲಕ ಶತ್ರುಗಳ ವೃತ್ತಾಂತವೆಲ್ಲವನ್ನೂ ತಿಳಿದವರೂ, ಪಂಡಿತರೂ ಆದ ಪ್ರಭುಗಳು ಯುದ್ಧಗಳಲ್ಲಿ ಬಹಳ ಸ್ವಲ್ಪ ಪ್ರಯತ್ನಗಳಿಂದಲೇ ಶತ್ರುವನ್ನು ಜಯಿಸಬಲ್ಲರು. ಈ ವಿಷಯಗಳೆಲ್ಲವೂ ನೀವು ಬಲ್ಲುದೇ ಆಗಿದೆ" ಎಂದು ಹೇಳಿದನು. ॥ ೧೭-೨೦ ॥ ತಮ್ಮ ಪ್ರಭುವಾದ ರಾವಣಾಸುರನು ಈ ರೀತಿ ನುಡಿಯುತ್ತಲೇ ಆ ಗೂಢಚಾರರು ಪರಮಸಂತುಷ್ಟಸ್ವಾಂತರಾಗಿ,

ಮಹಾತ್ಮಾನಂ ಚಾರಾ ರಾಕ್ಷಸಸತ್ತಮಂ । ಕೃತ್ವಾ ಪ್ರದಕ್ಷಿಣಂ ಜಗ್ಮುರ್ಯತ್ರ ರಾಮ
ಸ್ಸಲಕ್ಷ್ಮಣಃ ॥೨೨॥ ತೇ ಸುವೇಲಸ್ಯ ಶೈಲಸ್ಯ ಸಮೀಪೇ ರಾಮಲಕ್ಷ್ಮಣೌ । ಪ್ರಚ್ಛನ್ನಾ
ದದೃಶುರ್ಗತ್ವಾ ಸಸುಗ್ರೀವವಿಭೀಷಣೌ ॥ ೨೩ ॥ ಪ್ರೇಕ್ಷಮಾಣಾಶ್ಚಮೂಂ ತಾಂಚ
ಬಭೂವುರ್ಭಯವಿಕ್ಲಬಾಃ । ತೇತು ಧರ್ಮಾತ್ಮನಾ ದೃಷ್ಟ್ವಾ ರಾಕ್ಷಸೇಂದ್ರೇಣ ರಾಕ್ಷಸಾಃ
॥ ೨೪ ॥ ವಿಭೀಷಣೇನ ತತ್ರಸ್ಥಾ ನಿಗೃಹೀತಾ ಯದೃಚ್ಛಯಾ । ಶಾರ್ದೂಲೋ ಗ್ರಾಹಿ
ತಸ್ತ್ವೇಕಃ ಪಾಪೋಽಯಮಿತಿ ರಾಕ್ಷಸಃ ॥ ೨೫ ॥ ಮೋಚಿತಸ್ಸೋಽಪಿ ರಾಮೇಣ ವಧ್ಯ
ಮಾನಃ ಪ್ಲವಂಗಮೈಃ । ಆನೃಶಂಸ್ಯೇನ ರಾಮಸ್ಯ ಮೋಚಿತಾ ರಾಕ್ಷಸಾಃ ಪರೇ ॥೨೬॥

---

ರಾವಣನನ್ನು, ಪ್ರದಕ್ಷಿಣಂ - ಪ್ರದಕ್ಷಿಣವನ್ನು, ಚಕ್ರುಃ - ಮಾಡಿದರು. ॥ ೨೧ ॥ ತತಃ - ಬಳಿಕ, ತೇಚಾರಾಃ - ಆ ಚಾರರು, ಮಹಾತ್ಮಾನಂ - ಮಹಾತ್ಮನಾದ, ತಂರಾ....ಮಂ - ಆ ರಾಕ್ಷಸೋತ್ತಮ ನಾದ ರಾವಣನನ್ನು, ಪ್ರದಕ್ಷಿಣಂ - ಪ್ರದಕ್ಷಿಣವನ್ನು, ಕೃತ್ವಾ - ಮಾಡಿ, ಯತ್ರ - ಯಾವ ಸ್ಥಳದಲ್ಲಿ, ಸಲಕ್ಷ್ಮಣಃ - ಲಕ್ಷ್ಮಣನಿಂದೊಡಗೂಡಿದ, ರಾಮಃ - ಶ್ರೀರಾಮನು, ಅಸ್ತಿ - ಇದ್ದಾನೆಯೋ, ತತ್ರ - ಅಲ್ಲಿಗೆ, ಜಗ್ಮುಃ - ಹೊರಟರು. ॥೨೨॥ ತೇ - ಆ ಗೂಢಚಾರರು, ಸುವೇಲಸ್ಯಶೈಲಸ್ಯ - ಸುವೇಲವೆಂಬ ಪರ್ವತದ, ಸಮೀಪೇ - ಸಮೀಪದಲ್ಲಿ, ಪ್ರಚ್ಛನ್ನಾಃ - ಗೂಢರಾಗಿ, ಗತ್ವಾ - ಹೋಗಿ, ಸಸು....ಣೌ- ಸುಗ್ರೀವವಿಭೀಷಣರಿಂದೊಡಗೂಡಿದ, ರಾಮಲಕ್ಷ್ಮಣೌ - ರಾಮಲಕ್ಷ್ಮಣರನ್ನು, ದದೃಶುಃ - ಕಂಡರು, ತಾಂಚಮೂಂ - ಆ ಸೈನ್ಯವನ್ನು, ಪ್ರೇಕ್ಷಮಾಣಾಃ - ನೋಡುತ್ತಿರುವವರಾಗಿ, ಭಯವಿಕ್ಲಬಾಃ - ಭಯದಿಂದ ಚಂಚಲಚಿತ್ತರು, ಬಭೂವುಃ - ಆದರು. ॥ ೨೩ ॥ ತೇತುರಾಕ್ಷಸಾಃ - ಆ ರಾಕ್ಷಸರು, ತತ್ರಸ್ಥಾಃ - ಆ ಪರ್ವತ ಸಮೀಪದಲ್ಲಿ ನಿಂತು, ಧರ್ಮಾತ್ಮನಾ - ಧರ್ಮದಲ್ಲಿಯೇ ಮನವುಳ್ಳ, ರಾಕ್ಷಸೇಂದ್ರೇಣ - ರಾಕ್ಷಸಾಧಿಪತಿಯಾದ, ವಿಭೀಷಣೇನ - ವಿಭೀಷಣನಿಂದ, ಯದೃಚ್ಛಯಾ - ಅಕಸ್ಮಾತ್ತಾಗಿ, ನಿಗೃಹೀತಾಃ - ತಿರಸ್ಕರಿಸಲ್ಪಟ್ಟರು, ಏಕಃ - ಓರ್ವನಾದ, ಶಾರ್ದೂಲಃ - ಶಾರ್ದೂಲ ನೆಂಬ, ರಾಕ್ಷಸಃ - ರಕ್ಕಸನು, ಅಯಂ - ಇವನು, ಪಾಪಇತಿ - ಪಾಪಿಷ್ಠನೆಂದು, ಗ್ರಾಹಿತಃ - ಹಿಡಿದುಕೊಳ್ಳಲ್ಪಟ್ಟನು. ॥ ೨೪-೨೫ ॥ ಸೋಽಪಿ - ಆ ಶಾರ್ದೂಲನೂಕೂಡ, ಪ್ಲವಂಗಮೈಃ - ವಾನರ ರಿಂದ, ವಧ್ಯಮಾನಃ - ಹೊಡೆಯಲ್ಪಟ್ಟವನಾಗಿ, ರಾಮೇಣ - ಶ್ರೀರಾಮನಿಂದ, ಮೋಚಿತಃ - ಬಿಡಿಸ ಲ್ಪಟ್ಟನು, ಪರೇರಾಕ್ಷಸಾಃ - ಆ ಶಾರ್ದೂಲನಿಗೆ ಸಹಾಯಭೂತರಾದ ಇತರ ರಾಕ್ಷಸರು, ರಾಮಸ್ಯ -

---

"ಪ್ರಭುವೇ ! ನಿನ್ನ ಆಜ್ಞಾನುಸಾರವಾಗಿಯೇ ನಡೆದುಕೊಳ್ಳುವೆವು" ಎಂದು ಹೇಳಿ ಶಾರ್ದೂಲ ನೆಂಬವನನ್ನು ಮುಂದಿರಿಸಿಕೊಂಡು ಆ ರಾವಣನಿಗೆ ಪ್ರದಕ್ಷಿಣನಮಸ್ಕಾರವನ್ನು ಮಾಡಿ ಅಲ್ಲಿಂದ ಶ್ರೀರಾಮಲಕ್ಷ್ಮಣರಿರುವ ಪ್ರದೇಶಕ್ಕೆ ಹೋದರು. ಆಗ ಸುವೇಲಪರ್ವತದ ಅಗ್ರ ಭಾಗದಲ್ಲಿ ಶ್ರೀರಾಮಲಕ್ಷ್ಮಣರು ಸುಗ್ರೀವವಿಭೀಷಣರೊಡಗೂಡಿದ್ದರು. ಆ ಸಮಯದಲ್ಲಿ ರಾವಣನ ಗೂಢಚಾರರು ಪ್ರಚ್ಛನ್ನ ವೇಷಧಾರಿಗಳಾಗಿ ಅವರನ್ನು ಕಂಡರು. ಆಗ ಅವರು ಭಯಪೀಡಿತರಾದರೂ ಬಿಡದೆ ಆ ವಾನರಸೈನ್ಯವೆಲ್ಲವನ್ನೂ ನೋಡುತ್ತಿದ್ದರು. ಹೀಗೆ ಸೇನೆಯೆಲ್ಲವನ್ನೂ ಕಣ್ಣಿಟ್ಟು ನೋಡುತ್ತಿದ್ದ ಆ ಗೂಢಚಾರರನ್ನು ಧರ್ಮಾತ್ಮನಾದ ವಿಭೀಷಣನು ಕಂಡನು. ಅವರನ್ನು ತನ್ನವರಿಂದ ಹಿಡಿಸಿ, ಅವರಲ್ಲಿ ಶಾರ್ದೂಲನು ಮಹಾ ಪಾಪಿಷ್ಠನೆಂದು ಅವನನ್ನು ಬಂಧನಗೊಳಿಸಿದನು ; ವಾನರಭಟರಿಂದ ಅವನನ್ನು ಕೊಲ್ಲಿಸಲೂ

ವಾನರೈರರ್ದಿತಾಸ್ತೇತು ವಿಕ್ರಾಂತೈರ್ಲಘುವಿಕ್ರಮೈಃ । ಪುನರ್ಲಂಕಾಮನುಪ್ರಾಪ್ತಾಃ ಶ್ವಸಂತೋ ನಷ್ಟಚೇತಸಃ ॥ ೨೭ ॥

ತತೋ ದಶಗ್ರೀವಮುಪಸ್ಥಿತಾಸ್ತು ತೇ
ಚಾರಾಬಹಿರ್ನಿತ್ಯಚರಾ ನಿಶಾಚರಾಃ ।
ಗಿರೇಸ್ಸುವೇಲಸ್ಯ ಸಮೀಪವಾಸಿನಂ
ನ್ಯವೇದಯನ್ ಭೀಮಬಲಂ ಮಹಾಬಲಾಃ ॥ ೨೮ ॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಏಕೋನತ್ರಿಂಶಸ್ಸರ್ಗಃ.



ಶ್ರೀರಾಮನ, ಆನೃಶಂಸ್ಯೇನ - ದಯಾಳುತ್ವದಿಂದ, ಮೋಚಿತಾಃ - ಬಿಡಿಸಲ್ಪಟ್ಟನು. ॥ ೨೬ ॥ ಲಘುವಿಕ್ರಮೈಃ - ಲಾಘವದಿಂದ ಸಂಚಾರಶೀಲರಾದ, ವಿಕ್ರಾಂತೈಃ - ಪರಾಕ್ರಮಿಗಳಾದ, ವಾನರೈಃ - ಕಪಿಗಳಿಂದ, ಅರ್ದಿತಾಃ - ಹೊಡೆಯಲ್ಪಟ್ಟ, ತೇತು - ಆ ಶಾರ್ದೂಲನೇ ಮೊದಲಾದ ಚಾರರು, ಶ್ವಸಂತಃ - ನಿಟ್ಟುಸಿರು ಬಿಡುವವರಾಗಿ, ನಷ್ಟಚೇತಸಃ - ಪ್ರಜ್ಞೆ ತಪ್ಪಿ, ಪುನಃ - ಮತ್ತು, ಲಂಕಾಂ - ಲಂಕಾಪಟ್ಟಣವನ್ನು ಕುರಿತು, ಅನುಪ್ರಾಪ್ತಾಃ - ಬಂದು ಸೇರಿದರು. ॥೨೭॥ ತತಃ - ಬಳಿಕ, ಮಹಾ ಬಲಾಃ - ಬಹಳ ಬಲವಂತರಾದ, ಬಹಿಃ - ಹೊರಗೆ, ನಿತ್ಯಚರಾಃ - ನಿರಂತರವೂ ಸಂಚರಿಸುತ್ತಿರುವ, ನಿಶಾಚರಾಃ - ರಾತ್ರಿಂಚರರಾದ, ತೇಚಾರಾಃ - ಆ ಗೂಢಚಾರರು, ದಶಗ್ರೀವಂ - ರಾವಣನನ್ನು ಕುರಿತು, ಉಪಸ್ಥಿತಾಃ - ಸಮೀಪದಲ್ಲಿ ನಿಂತವರಾಗಿ, ಸುವೇಲಸ್ಯಗಿರೇಃ - ಸುವೇಲಪರ್ವತದ, ಸಮೀ....ನಂ - ಸಮೀಪದಲ್ಲಿರುವ, ಭೀಮಬಲಂ - ಭಯಂಕರ ಕಪಿಸೈನ್ಯವನ್ನು, ನ್ಯವೇದಯನ್ - ತಿಳಿಸಿದರು. ॥ ೨೮ ॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಏಕೋನತ್ರಿಂಶಸ್ಸರ್ಗಃ.



ಪ್ರಯತ್ನಿಸಿದನು. ಆಗ ದಯಾಳುವಾದ ಶ್ರೀರಾಮನು ಆ ಶಾರ್ದೂಲನನ್ನು ಕೊಲ್ಲಕೂಡ ದೆಂದು ಹೇಳಿ ಅವನನ್ನು ಉಳಿದ ಚಾರರನ್ನೂ ಬಿಡಿಸಿದನು. ॥೨೧–೨೬॥ ಆ ಬಳಿಕ ಮಹಾ ಪರಾಕ್ರಮಶಾಲಿಗಳಾದ ವಾನರವೀರರಿಂದಲೂ, ಇತರ ಕಪಿಗಳಿಂದಲೂ ಬಹಳವಾಗಿ ಪೀಡಿಸ ಲ್ಪಟ್ಟ ಆ ರಾವಣಾಸುರನ ಗೂಢಚಾರರು ಏನು ಮಾಡುವುದಕ್ಕೂ ತೋಚದೆ ಪ್ರಾಣಮಾತ್ರ ದಿಂದ ತಪ್ಪಿಸಿಕೊಂಡವರಾಗಿ ಲಂಕಾಪಟ್ಟಣಕ್ಕೆ ಹೋದರು. ಸರ್ವಕಾಲಗಳಲ್ಲಿಯೂ ಕಾವಲಿ ಗಾಗಿ ತಿರುಗುತ್ತಿದ್ದ ಆ ರಾಕ್ಷಸರು ಕೂಡಲೇ ರಾವಣಾಸುರನ ಬಳಿಗೆ ಹೋಗಿ ಆತನಿಗೆ ನಮಸ್ಕರಿಸಿ, "ಎಲೈ ಪ್ರಭುವೇ! ಮಹಾ ಬಲಸಾದ ರಾಮನು ಸುವೇಲಪರ್ವತದ ಶಿಖರ ದಲ್ಲಿರುವನು" ಎಂದು ಹೇಳಿದರು. ॥ ೨೭–೨೮ ॥

ಇಂತಿದು ರಾವಣಕೃತ ಶುಕಸಾರಣಧಿಕ್ಕಾರ–ಪುನಶ್ಚಾರಪ್ರೇಷಣ–ಚಾರನಿವರ್ತನ ವೃತ್ತಾಂತ ಎಂಬ ಇಪ್ಪತ್ತೊಂಬತ್ತನೆಯ ಸರ್ಗವು ಸಮಾಪ್ತವಾದುದು.



# ಯುದ್ಧಕಾಂಡೇ ತ್ರಿಂಶಸ್ಸರ್ಗಃ

ತತಸ್ತಮಕ್ಷೋಭ್ಯಬಲಂ ಲಂಕಾಧಿಪತಯೇ ಚರಾಃ । ಸುವೇಲೇ ರಾಘವಂ ಶೈಲೇ ನಿವಿಷ್ಟಂ ಪ್ರತ್ಯವೇದಯನ್ ॥ ೧ ॥ ಚಾರಾಣಾಂ ರಾವಣಃ ಶ್ರುತ್ವಾ ಪ್ರಾಪ್ತಂ ರಾಮಂ ಮಹಾಬಲಂ । ಜಾತೋದ್ವೇಗೋಽಭವತ್ಕಿಂಚಿಚ್ಛಾರ್ದೂಲಂ ವಾಕ್ಯಮಬ್ರವೀತ್ ॥ ೨ ॥ " ಅಯಥಾವಚ್ಚ ತೇ ವರ್ಣೋ ದೀನಶ್ಚಾಸಿ ನಿಶಾಚರ ! । ನಾಸ್ತಿ ಕಚ್ಚಿದಮಿತ್ರಾಣಾಂ ಕ್ರುದ್ಧಾನಾಂ ವಶಮಾಗತಃ ?" ॥ ೩ ॥ ಇತಿ ತೇನಾನುಶಿಷ್ಟಸ್ತು ವಾಚಂ ಮಂದಮುದೀರಯತ್ । ತದಾ ರಾಕ್ಷಸಶಾರ್ದೂಲಂ ಶಾರ್ದೂಲೋ ಭಯ

---

ತತಃ - ಬಳಿಕ, ಚರಾಃ - ಗೂಢಚಾರರು, ಸುವೇಲೇಶೈಲೇ - ಸುವೇಲಪರ್ವತದಲ್ಲಿ, ನಿವಿಷ್ಟಂ - ಬೀಡಾರ ಮಾಡಿರುವ, ಅಕ್ಷೋಭ್ಯಬಲಂ - ಕ್ಷೋಭಿಸಲಸಾಧ್ಯವಾದ ಸೈನ್ಯವುಳ್ಳ, ತಂರಾಘವಂ - ಆ ಶ್ರೀರಾಮನನ್ನು, ಲಂಕಾಧಿಪತಯೇ - ರಾವಣಾಸುರನಿಗೆ, ಪ್ರತ್ಯವೇದಯನ್ - ತಿಳಿಸಿದರು. ॥ ೧ ॥ ರಾವಣಃ - ರಾವಣನು, ಚಾರಾಣಾಂ - ಗೂಢಚಾರರ ವಚನದಿಂದ, ಮಹಾಬಲಂ - ಬಹಳ ಬಲ ಶಾಲಿಯಾದ, ರಾಮಂ - ಶ್ರೀರಾಮನನ್ನು, ಪ್ರಾಪ್ತಂ - ಬಂದವನನ್ನಾಗಿ, ಶ್ರುತ್ವಾ - ಕೇಳಿ, ಕಿಂಚಿತ್ - ಸ್ವಲ್ಪವಾಗಿ, ಜಾತೋದ್ವೇಗಃ - ಹುಟ್ಟಿದ ಭಯವುಳ್ಳವನು, ಅಭವತ್ - ಆದನು, ಶಾರ್ದೂಲಂ - ಶಾರ್ದೂಲನನ್ನು ಕುರಿತು, ವಾಕ್ಯಂ - ಮಾತನ್ನು, ಅಬ್ರವೀತ್ - ನುಡಿದನು. ॥೨॥ ಹೇ ನಿಶಾಚರ - ಎಲೈ ರಾಕ್ಷಸನೇ, ತೇ - ನಿನ್ನ, ವರ್ಣಃ - ಬಣ್ಣವು, ಅಯಥಾವಚ್ಚ - ಪೂರ್ವದಂತಿಲ್ಲವು, ದೀನಶ್ಚ - ದೈನ್ಯಯುಕ್ತವಾದ ಮುಖವುಳ್ಳವನು, ಅಸಿ - ಆಗಿರುವೆ, ಕ್ರುದ್ಧಾನಾಂ - ಕೋಪಿಷ್ಠರಾದ, ಅಮಿತ್ರಾಣಾಂ - ಶತ್ರುಗಳ, ವಶಂ - ಸ್ವಾಧೀನತೆಯನ್ನು, ಆಗತಃ - ಹೊಂದಿದವನು, ನಾಸಿಕಚ್ಚಿತ್ - ಆಗಲಿಲ್ಲವಷ್ಟೆ. ॥ ೩ ॥ ಇತಿ - ಹೀಗೆ, ತೇನ - ಆ ರಾವಣನಿಂದ, ಅನುಶಿಷ್ಟಃ - ಕೇಳಲ್ಪಟ್ಟ, ಶಾರ್ದೂಲಃ - ಶಾರ್ದೂಲನು, ಭಯವಿಹ್ವಲಃ - ಭೀತಿಯಿಂದ ತತ್ತಳಿಸಿದವನಾಗಿ, ತದಾ - ಆಗ, ರಾಕ್ಷ......ಲಂ - ರಾಕ್ಷಸಶ್ರೇಷ್ಠನಾದ ರಾವಣನನ್ನು ಕುರಿತು, ಮಂದಂ - ಮೆಲ್ಲಗೆ, ಉದೀರಯತ್ - ಹೇಳಿದನು, ಹೇ ರಾಜನ್ - ಎಲೈ ಅರಸೇ, ವಾನರಪುಂಗವಾಃ - ಆ ವಾನರೋತ್ತಮರು, ಚಾರಯಿತುಂ -

---

ಆಮೇಲೆ ಆ ಗೂಢಚಾರರು, ಇತರರಿಂದ ಕ್ಷೋಭೆಗೊಳಿಸಲು ದುಸ್ಸಾಧ್ಯವಾದ ಆ ಮಹಾ ವಾನರಸೈನ್ಯದ ವೃತ್ತಾಂತವನ್ನೂ, ಶ್ರೀರಾಮಮೂರ್ತಿಯು ಸುವೇಲಾದ್ರಿಯಲ್ಲಿ ಬಂದು ಬೀಡಾರ ಮಾಡಿರುವ ವೃತ್ತಾಂತವನ್ನೂ ತಮ್ಮ ಪ್ರಭುವಾದ ಲಂಕಾನಾಥನಿಗೆ ಅರಿಕೆ ಮಾಡಿದರು. ಈ ವೃತ್ತಾಂತವನ್ನು ಕೇಳಿ ಬಹಳವಾಗಿ ಉದ್ವೇಗಗೊಂಡ ರಾವಣಾಸುರನು ಅವರಲ್ಲಿ ಶಾರ್ದೂಲನೆಂಬವನನ್ನು ನೋಡಿ, "ಎಲೈ ಶಾರ್ದೂಲನೇ ! ನಿನ್ನ ಮುಖಕಾಂತಿಯು ಮೊದಲಿನಂತಿರದೆ ಕುಗ್ಗಿಹೋಗಿರುವುದು. ಎಲೈ ರಾಕ್ಷಸೋತ್ತಮನೇ ! ಈಗ ನೀನು ದೀನ ನಾಗಿ ಹೋಗಿರುವೆ. ಹೀಗಾಗಲು ಕಾರಣವೇನು ? ಕೋಪೋದ್ದೀಪಿತರಾದ ಶತ್ರುಗಳ ಕೈಗೆ ಸಿಕ್ಕಿ ಕಷ್ಟಪಡಲಿಲ್ಲವಷ್ಟೆ ? ನಿನ್ನ ವೃತ್ತಾಂತವೆಲ್ಲವನ್ನೂ ತಿಳಿಯಹೇಳು" ಎಂದನು. ಆಗ ಶಾರ್ದೂಲನು ರಾವಣಾಸುರನಿಗೆ ಸಮಸ್ತ ವೃತ್ತಾಂತವನ್ನು ತಿಳಿಸಲಪೇಕ್ಷಿಸಿ, ಭಯದಿಂದ

ವಿಹ್ವಲಃ । "ನ ತೇ ಚಾರಯಿತುಂ ಶಕ್ಯಾ ರಾಜನ್ ! ವಾನರಪುಂಗವಾಃ ॥೪॥ ವಿಕ್ರಾಂತಾ ಬಲವಂತಶ್ಚ ರಾಘವೇಣ ಚ ರಕ್ಷಿತಾಃ । ನಾಪಿ ಸಂಭಾಷಿತುಂ ಶಕ್ಯಾಸ್ಸಂಪ್ರಶ್ನೋಽತ್ರ ನಲಭ್ಯತೇ ॥ ೫ ॥ ಸರ್ವತೋ ರಕ್ಷ್ಯತೇ ಪಂಥಾ ವಾನರೈಃ ಪರ್ವತೋಪಮೈಃ । ಪ್ರವಿಷ್ಟಮಾತ್ರೇ ಜ್ಞಾತೋಽಹಂ ಬಲೇ ತಸ್ಮಿನ್ನಚಾರಿತೇ । ಬಲಾದ್ಗೃಹೀತೋ ರಕ್ಷೋಭಿರ್ಬಹುಧಾಸ್ಮಿ ವಿಚಾಲಿತಃ ॥ ೬-೭ ॥ ಜಾನುಭಿರ್ಮುಷ್ಟಿಭಿರ್ದಂತೈಸ್ತಲೈಶ್ಚಾಭಿಹತೋ ಭೃಶಂ । ಪರಿಣೀತೋಽಸ್ಮಿ ಹರಿಭಿರ್ಬಲವದ್ಭಿರಮರ್ಷಣೈಃ ॥ ೮ ॥

ಚಾರಮುಖದಿಂದ ತಿಳಿಯಲು, ನಶಕ್ಯಾಃ - ಸಾಧ್ಯರಲ್ಲವು. ॥ ೪ ॥ ವಿಕ್ರಾಂತಾಃ - ಪರಾಕ್ರಮಶಾಲಿಗಳು, ರಾಘವೇಣ - ಶ್ರೀರಾಮನಿಂದ, ರಕ್ಷಿತಾಶ್ಚ - ಸಂರಕ್ಷಿಸಲ್ಪಟ್ಟವರು, ಸಂಭಾಷಿತುಮಪಿ - ಮಾತನಾಡುವದಕ್ಕೂ, ನಶಕ್ಯಾಃ - ಸಾಧ್ಯರಲ್ಲವು, ಅತ್ರ - ಈ ವಾನರರ ಗುಂಪಿನಲ್ಲಿ, ಸಂಪ್ರಶ್ನಃ - ಪ್ರಶ್ನೆಯು, ನಲಭ್ಯತೇ - ದೊರೆಯುವದಿಲ್ಲವು. ॥ ೫ ॥ ಸರ್ವತಃ - ಎಲ್ಲ ದಿಕ್ಕುಗಳಲ್ಲಿ, ಪಂಥಾಃ - ಮಾರ್ಗವು, ಪರ್ವತೋಪಮೈಃ - ಬೆಟ್ಟಕ್ಕೆ ಸಮಾನರಾದ ವಾನರರಿಂದ, ಸಂರಕ್ಷ್ಯತೇ - ಸಂರಕ್ಷಿಸಲ್ಪಡುತ್ತದೆ, ಅಚಾರಿತೇ - ಸಂಚಾರ ಮಾಡಲ್ಪಡದಿರುವ, ತಸ್ಮಿನ್ಬಲೇ - ಆ ಸೈನ್ಯವು, ಪ್ರವಿಷ್ಟಮಾತ್ರೇ - ಪ್ರವೇಶಿಸಿದೊಡನೆಯೇ, ಅಹಂ - ನಾನು, ಜ್ಞಾತಃ - ತಿಳಿದುಕೊಳ್ಳಲ್ಪಟ್ಟೆನು. ॥ ೬ ॥ ರಕ್ಷೋಭಿಃ - ರಕ್ಕಸರಿಂದ, ಬಲಾತ್ - ಸಾಮರ್ಥ್ಯದಿಂದ, ಗೃಹೀತಃ - ಗ್ರಹಿಸಲ್ಪಟ್ಟು, ಬಹುಧಾ - ಅನೇಕ ಬಗೆಯಾಗಿ, ವಿಚಾಲಿತಃ - ನೆಲದಲ್ಲಿ ಹೊರಳಿಸಲ್ಪಟ್ಟವನು, ಅಸಿ - ಆದೆನು. ॥ ೭ ॥ ಜಾನುಭಿಃ - ಮೊಳಕಾಲುಗಳಿಂದಲೂ, ಮುಷ್ಟಿಭಿಃ - ಕೈಹಿಡಿಗಳಿಂದಲೂ, ದಂತೈಃ - ಹಲ್ಲುಗಳಿಂದಲೂ, ತಲೈಶ್ಚ - ಅಂಗೈಗಳಿಂದಲೂ, ಭೃಶಂ - ಬಹಳವಾಗಿ, ಅಭಿಹತಃ - ಹೊಡೆಯಲ್ಪಟ್ಟವನಾಗಿ, ಅಮರ್ಷಣೈಃ - ಕೋಪಿಷ್ಠರಾದ, ಬಲವದ್ಭಿಃ - ಬಲವಂತರಾದ, ಹರಿಭಿಃ - ವಾನರರಿಂದ, ಪರಿಣೀತಃ - ತೆಗೆದುಕೊಂಡು ಹೋಗಲ್ಪಟ್ಟವನು, ಅಸ್ಮಿ - ಆದೆನು, ಸರ್ವತ್ರ - ಸರ್ವಪ್ರದೇಶಗಳಲ್ಲಿಯೂ, ಪರಿಣೀಯ - ತಿರುಗಿಸಿ, ಅಹಂ -

ತತ್ತಳಿಸುತ್ತ ಆತನನ್ನು ಕುರಿತು ಮೆಲ್ಲಮೆಲ್ಲಗೆ ಹೀಗೆಂದನು:— ॥ ೧–೪ ॥ "ಎಲೈ ರಾಕ್ಷಸೇಶ್ವರನೇ ! ವಾನರರು ಗೂಢಚಾರರಿಂದ ತಿಳಿಯಲಸಾಧ್ಯರಾದವರು. ಅವರೆಲ್ಲರೂ ಮಹಾ ಪರಾಕ್ರಮಶಾಲಿಗಳು ; ಮಹಾ ಬಲಸಂಪನ್ನರು ; ಪ್ರಭುವಾದ ಶ್ರೀರಾಮನು ಅವರೆಲ್ಲರನ್ನೂ ಬಹಳ ಚೆನ್ನಾಗಿ ಕಾಪಾಡುತ್ತಿರುವನು. ಆ ವಾನರವೀರರೊಡನೆ ಸಂಭಾಷಿಸುವುದಕ್ಕೂ ಶಕ್ಯವಿಲ್ಲವು. ಆದುದರಿಂದ ಯಾವ ಪ್ರತ್ಯುತ್ತರವೂ ಅವರಿಂದ ದೊರೆಯುವುದು ದುರ್ಲಭವಾಗಿರುವುದು. ಪ್ರಭುವೇ ! ಪರ್ವತಗಳಿಗೆ ಸಮಾನರಾದ ಆ ವಾನರರೆಲ್ಲರೂ ಬಹು ಜಾಗರೂಕರಾಗಿ ಶತ್ರುಗಳ ಮಾರ್ಗಗಳೆಲ್ಲವನ್ನೂ ಕಾಪಾಡುತ್ತಿರುವರು. ನಾನು ಅಲ್ಲಿ ಪ್ರವೇಶಮಾಡಿದೊಡನೆಯೇ ಅವರ ವೃತ್ತಾಂತವು ಗೂಢಚಾರರಾದವರಿಗೆ ಗೋಚರವಾಗದುದೆಂದು ಅರಿತುಕೊಂಡೆನು. ನಾನು ಆ ವಾನರಸೇನೆಯನ್ನು ಪ್ರವೇಶಿಸಿದಕೂಡಲೇ ಅವರು ನನ್ನನ್ನು ಬಲಾತ್ಕಾರದಿಂದ ಬಂಧಿಸಿಬಿಟ್ಟರು. ಆಗ ನನಗೆ ಬಹಳ ಭಯವಾಯಿತು. ಮಹಾ ಬಲಾಢ್ಯರೂ, ಮಹಾ ಕೋಪನರೂ ಆದ ಆ ವಾನರರು ನನ್ನನು ದಂತಗಳಿಂದಲೂ, ಮೊಣಕಾಲುಗಳಿಂದಲೂ, ಮುಷ್ಟಿಗಳಿಂದಲೂ, ಕಾಲುಗಳಿಂದಲೂ ಬಹಳ ಕಠಿನವಾಗಿ ಹೊಡೆದು ಪೀಡಿಸಿದರು. ಹೀಗೆ ನನ್ನನ್ನು ವಿಧವಿಧವಾಗಿ ಬಾಧಿಸಿ

**ಪರಿಣೀಯಚ ಸರ್ವತ್ರ ನೀತೋಽಹಂ ರಾಮಸಂಸದಂ । ರುಧಿರಾದಿಗ್ಧ ಸರ್ವಾಂಗೋ ವಿಹ್ವಲಶ್ಚಲಿತೇಂದ್ರಿಯಃ ॥೯॥ ಹರಿಭಿರ್ವಧ್ಯಮಾನಶ್ಚ ಯಾಚಮಾನಃ ಕೃತಾಂಜಲಿಃ । ರಾಘವೇಣ ಪರಿತ್ರಾತೋ ಜೀವಾಮೀತಿ ಯದೃಚ್ಛಯಾ ॥ ೧೦ ॥ ಏಷ ಶೈಲೈಶ್ಶಿಲಾಭಿಶ್ಚ ಪೂರಯಿತ್ವಾ ಮಹಾರ್ಣವಂ । ದ್ವಾರಮಾಶ್ರಿತ್ಯ ಲಂಕಾಯಾ ರಾಮಸ್ತಿಷ್ಠತಿ ಸಾಯುಧಃ ॥ ೧೧ ॥ ಗರುಡವ್ಯೂಹಮಾಸ್ಥಾಯ ಸರ್ವತೋ ಹರಿಭಿರ್ವೃತಃ । ಮಾಂ ವಿಸೃಜ್ಯ ಮಹಾತೇಜಾ ಲಂಕಾಮೇವಾಭಿವರ್ತತೇ ॥೧೨॥ ಪುರಾ ಪ್ರಾಕಾರಮಾಯಾತಿ ಕ್ಷಿಪ್ರಮೇಕತರಂ ಕುರು । ಸೀತಾಂ ವಾಽಸ್ಮೈ ಪ್ರಯಚ್ಛಾಶು ಸುಯುದ್ಧಂವಾ ಪ್ರದೀ**

---

ನಾನು, ರಾಮಸಂಸದಂ - ಶ್ರೀರಾಮಸಭೆಯನ್ನು, ನೀತಃ - ಹೊಂದಿಸಲ್ಪಟ್ಟೆನು, ರುಧಿ.....ಗಃ - ರಕ್ತದಿಂದ ಲೇಪನ ಮಾಡಲ್ಪಟ್ಟ ಸರ್ವಾವಯವಗಳುಳ್ಳವನಾಗಿ, ವಿಹ್ವಲಃ - ಭ್ರಾಂತಚಿತ್ತನಾಗಿ, ಚಲಿತೇಂದ್ರಿಯಃ-ಕದಲಿಸಲ್ಪಟ್ಟ ಸಕಲೇಂದ್ರಿಯಗಳುಳ್ಳವನಾಗಿ, ಹರಿಭಿಃ-ವಾನರರಿಂದ, ವಧ್ಯಮಾನಃ-ಹೊಡೆಯಲ್ಪಡುತ್ತಿರುವವನಾಗಿ, ಕೃತಾಂಜಲಿಃ - ಅಂಜಲಿಬದ್ಧನಾಗಿ, ತ್ರಾಣಂ - ಸಂರಕ್ಷಣೆಯನ್ನು, (ಹೊಂದಿ) ಜೀವಾಮೀತಿ-ಬದುಕುವೆನೆಂದು, ಯಾಚಮಾನಃ-ಬೇಡುತ್ತಿರುವವನಾಗಿ, ಯದೃಚ್ಛಯಾ - ಅದೃಷ್ಟವಶದಿಂದ, ರಾಘವೇಣ - ಶ್ರೀರಾಮನಿಂದ, ಪರಿತ್ರಾತಃ - ಸಂರಕ್ಷಣೆ ಮಾಡಲ್ಪಟ್ಟೆನು. ॥೮-೧೦॥ ಏಷಃರಾಮಃ - ಈ ಶ್ರೀರಾಮನು, ಶಿಲಾಭಿಃ - ಕಲ್ಲುಗಳಿಂದ, ಮಹಾರ್ಣವಂ - ದೊಡ್ಡ ಕಡಲನ್ನು, ಪೂರಯಿತ್ವಾ - ತುಂಬಿಸಿ, ಸಾಯುಧಃ - ಆಯುಧಗಳಿಂದೊಡಗೂಡಿದವನಾಗಿ, ಲಂಕಾಯಾಃ - ಲಂಕಾ ಪಟ್ಟಣದ, ದ್ವಾರಂ - ಬಾಗಿಲನ್ನು, ಆಶ್ರಿತ್ಯ - ಆಶ್ರಯಿಸಿ, ಶೈಲೇ - ಸುವೇಲಪರ್ವತದಲ್ಲಿ, ತಿಷ್ಠತಿ - ಇರುವನು. ॥ ೧೧ ॥ ಗರುಡವ್ಯೂಹಂ - ಗರುಡವ್ಯೂಹವನ್ನು, ಆಸ್ಥಾಯ - ರಚಿಸಿ, ಸರ್ವತಃ - ಎಲ್ಲ ಪ್ರದೇಶಗಳಲ್ಲಿಯೂ, ಹರಿಭಿಃ - ವಾನರರಿಂದ, ವೃತಃ - ಸುತ್ತುವರೆಯಲ್ಪಟ್ಟವನಾಗಿ, ಮಹಾತೇಜಾಃ - ಬಹಳ ತೇಜೋವಂತನಾದ ಶ್ರೀರಾಮನು, ಮಾಂ - ನನ್ನನ್ನು, ವಿಸೃಜ್ಯ - ಬಿಡಿಸಿ, ಲಂಕಾಮೇವ - ಲಂಕಾಪಟ್ಟಣವನ್ನು ಕುರಿತು, ಅಭಿವರ್ತತೇ - ಎದುರಾಗಿ ಬರುತ್ತಿರುವನು. ॥ ೧೨ ॥ ಪ್ರಾಕಾರಂ - ಪ್ರಾಕಾರವನ್ನು, ಪುರಾಆಯಾತಿ - ಮುತ್ತಿಗೆ ಹಾಕಲು ಬರುವನು, ಕ್ಷಿಪ್ರಂ - ಜಾಗ್ರತೆಯಾಗಿ, ಏಕತರಂ-ಎರಡರಲ್ಲಿ ಒಂದನ್ನು, ಕುರು - ಮಾಡು, ಸೀತಾಂವಾ - ಸೀತಾದೇವಿಯನ್ನಾದರೂ, ಅಸ್ಮೈ - ಈ

---

ಕಡೆಗೆ ರಾಮನ ಸಮೀಪಕ್ಕೆ ಕರದೊಯ್ದರು. ಆಗ ನಾನು ರಕ್ತಸಿಕ್ತವಾದ ಸಮಸ್ತಾವಯವಗಳುಳ್ಳವನಾಗಿ ಬಹಳವಾಗಿ ವ್ಯಸನಗೊಂಡು, ಚಪಲವಾದ ಪ್ರಾಣಗಳುಳ್ಳವನಾಗಿ ಹೋಗಿದ್ದೆನು. ಆದರೂ ಆ ವಾನರರು ನನ್ನನು ಬಿಡದೆ ಬಹಳವಾಗಿ ಹೊಡೆಯುತ್ತಲೇ ಇದ್ದರು. ಆಗ ನಾನು ಅವರ ಹೊಡೆತಗಳನ್ನು ತಾಳಲಾರದೆ ಶ್ರೀರಾಮನಿಗೆ ಕೈಮುಗಿದು ಕಾಪಾಡೆಂದು ಬೇಡಿಕೊಂಡೆನು. ಆ ಮಹಾನುಭಾವನು ನನ್ನ ಅದೃಷ್ಟವಶದಿಂದ ನನ್ನನ್ನು ಬಿಡಿಸಿದನು. ಅದರಿಂದ ನಾನು ಬದುಕಿದೆನು. ॥ ೫–೧೦ ॥ ಮಹಾಪ್ರಭು ! ಆ ರಾಮನು ದೊಡ್ಡದೊಡ್ಡ ಬಂಡೆಗಳಿಂದ ಸಮುದ್ರದಲ್ಲಿ ಸೇತುವೆಯನ್ನು ಕಟ್ಟಿ ಮಹಾ ತೀಕ್ಷ್ಣವಾದ ಆಯುಧಗಳೊಡಗೂಡಿ ನಮ್ಮ ಲಂಕಾನಗರದ ಬಾಗಿಲನ್ನು ಆವರಿಸಿ ನಿಂತಿರುವನು. ಆತನು ಗರುಡವ್ಯೂಹವನ್ನವಲಂಬಿಸಿರುವ ವಾನರವೀರರಿಂದ ಪರಿವೇಷ್ಟಿತನಾಗಿ ನನ್ನನ್ನು ಬಿಟ್ಟು ಕಳುಹಿಸಿದ ಬಳಿಕ ನಮ್ಮ ನಗರಿಗಭಿಮುಖವಾಗಿ ಯುದ್ಧಕ್ಕೆ ಬರುತ್ತಿರುವನು. ಪ್ರಭುವೇ ! ಆ ರಾಮನು ನಮ್ಮ ನಗರದ ಪ್ರಾಕಾರದಮೇಲೆ ಬರುತ್ತಿರುವನಾದುದರಿಂದ ಈಗ ನೀನು ಆತನಿಗೆ

ಯತಾಂ" ॥ ೧೩ ॥ ಮನಸಾ ತಂ ತದಾ ಪ್ರೇಕ್ಷ್ಯ ತಚ್ಛ್ರುತ್ವಾ ರಾಕ್ಷಸಾಧಿಪಃ । ಶಾರ್ದೂಲಂ ಸುಮಹದ್ವಾಕ್ಯಮಥೋವಾಚ ಸ ರಾವಣಃ ॥ ೧೪ ॥ "ಯದಿ ಮಾಂ ಪ್ರತಿಯುಧ್ಯೇರನ್ ದೇವಗಂಧರ್ವದಾನವಾಃ । ನೈವ ಸೀತಾಂ ಪ್ರದಾಸ್ಯಾಮಿ ಸರ್ವಲೋಕಭಯಾದಪಿ" ॥೧೫॥ ಏವಮುಕ್ತ್ವಾ ಮಹಾತೇಜಾ ರಾವಣಃ ಪುನರಬ್ರವೀತ್ । "ಚಾರಿತಾ ಭವತಾ ಸೇನಾ ಕೇಽತ್ರ ಶೂರಾಃ ಪ್ಲವಂಗಮಾಃ? ॥ ೧೬ ॥ ಕೀದೃಶಾಃ ಕಿಂಪ್ರಭಾಸ್ಸೌಮ್ಯ! ವಾನರಾ ಯೇ ದುರಾಸದಾಃ । ಕಸ್ಯ ಪುತ್ರಾಶ್ಚ ಪೌತ್ರಾಶ್ಚ ತತ್ತ್ವ

ಶ್ರೀರಾಮನಿಗೆ, ಆಶು - ಜಾಗ್ರತೆಯಾಗಿ, ಪ್ರಯಚ್ಛ - ಕೊಡು, ಸುಯುದ್ಧಂವಾ - ಒಳ್ಳೆಯ ಯುದ್ಧವನ್ನಾದರೂ, ಪ್ರದೀಯತಾಂ - ಕೊಡಲ್ಪಡಲಿ. ॥ ೧೩ ॥ ರಾಕ್ಷಸಾಧಿಪಃ - ರಕ್ಕಸರೊಡೆಯನಾದ, ಸರಾವಣಃ - ಆ ರಾವಣನು, ತತ್ - ಆ ಶಾರ್ದೂಲನ ವಾಕ್ಯವನ್ನು, ಶ್ರುತ್ವಾ - ಕೇಳಿ, ಮನಸಾ - ಮನಸ್ಸಿನಿಂದ, ತದಾ - ಆ ಕಾಲದಲ್ಲಿ, ಪ್ರೇಕ್ಷ್ಯ - ಆಲೋಚಿಸಿ, ಅಥ - ಬಳಿಕ, ತಂಶಾರ್ದೂಲಂ - ಆ ಶಾರ್ದೂಲನನ್ನು ಕುರಿತು, ಸುಮಹತ್ - ಬಹಳ ಮಹತ್ವಯುಕ್ತವಾದ, ವಾಕ್ಯಂ - ಮಾತನ್ನು ಉವಾಚ - ಹೇಳಿದನು. ॥ ೧೪ ॥ ದೇವ....ವಾಃ - ದೇವತೆಗಳೂ, ಗಂಧರ್ವರೂ, ದಾನವರೂ, ಮಾಂಪ್ರತಿ - ನನ್ನನ್ನುಕುರಿತು, ಯುಧ್ಯೇರನ್‌ಯದಿ - ಯುದ್ಧಮಾಡಿದರೂ, ಸರ್ವ....ಪಿ - ಸರ್ವಲೋಕಗಳ ಭಯದಿಂದಲೂ, ಸೀತಾಂ - ಸೀತೆಯನ್ನು, ನೈವಪ್ರದಾಸ್ಯಾಮಿ - ಕೊಡುವುದೇ ಇಲ್ಲವು. ॥ ೧೫ ॥ ಏವಂ - ಈ ಪರಿಯಾಗಿ, ಉಕ್ತ್ವಾ - ಹೇಳಿ, ಮಹಾತೇಜಾಃ - ಮಹಾ ಪರಾಕ್ರಮಶಾಲಿಯಾದ, ರಾವಣಃ - ರಾವಣನು, ಪುನಃ - ಮತ್ತು, ಅಬ್ರವೀತ್ - ನುಡಿದನು, ಹೇ ಸೌಮ್ಯ - ಎಲೈ ಸೌಮ್ಯನೇ, ಭವತಾ - ನಿನ್ನಿಂದ, ಸೇನಾ - ಕಪಿಸೈನ್ಯವು, ಚಾರಿತಾ - ಚನ್ನಾಗಿ ನೋಡಲ್ಪಟ್ಟಿತಷ್ಟೆ, ಅತ್ರ - ಈ ಸೈನ್ಯದಲ್ಲಿ, ಕೇಪ್ಲವಂಗಮಾಃ - ಯಾವ ವಾನರರು, ಶೂರಾಃ - ಶೂರರು, ಕೀದೃಶಾಃ - ಎಂಥವರು, ಕಿಂಪ್ರಭಾಃ - ಎಂಥಾ ಪ್ರಭಾವವನ್ನು ಕುರಿತು, ಯೇವಾನರಾಃ - ಯಾವ ಕಪಿಗಳು, ದುರಾಸದಾಃ - ಹೊಂದಲಸಾಧ್ಯರು, ಕಸ್ಯ - ಯಾವನಿಗೆ, ಪುತ್ರಾಶ್ಚ - ಮಕ್ಕಳು, ಪೌತ್ರಾಶ್ಚ - ಮೊಮ್ಮಕ್ಕಳು, ಹೇ ರಾಕ್ಷಸ - ಎಲೈ ರಕ್ಕಸನೇ, ತತ್ತ್ವಂ - ಯಥಾರ್ಥವಾಗಿ, ಆಖ್ಯಾಹಿ - ಹೇಳು, ತಥಾಸತಿ - ಹಾಗಾಗಲೂ, ತೇಷಾಂ - ಆ ಕಪಿಗಳ, ಬಲಾಬಲಂ - ಬಲದೌರ್ಬಲ್ಯಗಳನ್ನು, ಜ್ಞಾತ್ವಾ -

ಜಾಗ್ರತೆಯಾಗಿ ಸೀತೆಯನ್ನಾದರೂ ಒಪ್ಪಿಸು; ಇಲ್ಲವಾದರೆ ಯುದ್ಧವನ್ನಾದರೂ ಮಾಡು" ಎಂದು ಆ ಶಾರ್ದೂಲನು ಹೇಳಿದನು. ॥೧೧-೧೩॥ ಆಗ ರಾವಣಾಸುರನು ಆ ಶಾರ್ದೂಲನ ಮಾತುಗಳೆಲ್ಲವನ್ನೂ ಕೇಳಿ ಎಲ್ಲವನ್ನೂ ತನ್ನ ಮನಸ್ಸಿನಲ್ಲಿಯೇ ಪರ್ಯಾಲೋಚಿಸಿಕೊಂಡು ಅವನನ್ನು ಕುರಿತು, "ಎಲೈ ಶಾರ್ದೂಲನೇ! ದೇವತೆಗಳೂ, ಗಂಧರ್ವರೂ, ದಾನವರೂ ಎಲ್ಲರೂ ಒಟ್ಟಿಗೆ ಸೇರಿ ನನ್ನೊಡನೆ ಯುದ್ಧಮಾಡಿದರೂ, ಸಮಸ್ತ ಲೋಕಗಳಿಂದಲೂ ಭಯಪಡಿಸಿ ಬಂದರೂ ನಾನು ಬೇರೆ ಸೀತೆಯನ್ನು ಕೊಡುವುದಿಲ್ಲವು" ಎಂದು ಹೇಳಿ ಪುನಃ, "ಶಾರ್ದೂಲಾ! ಗೂಢಚಾರರಾದ ನೀವೆಲ್ಲರೂ ಆ ವಾನರಸೈನ್ಯವೆಲ್ಲವನ್ನೂ ಚೆನ್ನಾಗಿ ನೋಡಿಕೊಂಡು ಬಂದಿರುವಿರಷ್ಟೆ? ಅಲ್ಲಿರುವ ವಾನರರಲ್ಲಿ ಯಾರು ಯಾರೆಂಬುದನ್ನು ತಿಳಿಯ ಹೇಳು. ಎಲೈ ಸೌಮ್ಯನೇ! ಆ ವಾನರರೆಂತಹವರು? ಎಂತಹ ಸಾಮರ್ಥ್ಯವುಳ್ಳವರು? ಅವರಲ್ಲಿ ಅಜೇಯರಾದವರಾರು? ಅವರು ಯಾರ ಮಕ್ಕಳು? ಯಾರ ಮೊಮ್ಮಕ್ಕಳು? ಆ ವೃತ್ತಾಂತವೆಲ್ಲವನ್ನೂ ವಿಶದವಾಗಿ ಹೇಳು. ಅವರೆಲ್ಲರ ವೃತ್ತಾಂತವನ್ನೂ ತಿಳಿಸಿದ ತರುವಾಯ

ಮಾಖ್ಯಾಹಿ ರಾಕ್ಷಸ! ‖ ೧೭ ‖ ತಥಾತ್ರ ಪ್ರತಿಪತ್ಸ್ಯಾಮಿ ಜ್ಞಾತ್ವಾ ತೇಷಾಂ ಬಲಾಬಲಂ । ಅವಶ್ಯಂ ಬಲಸಂಖ್ಯಾನಂ ಕರ್ತವ್ಯಂ ಯುದ್ಧಮಿಚ್ಛತಾ" ‖ ೧೮ ‖ ಅಥೈವಮುಕ್ತಃ ಶಾರ್ದೂಲೋ ರಾವಣೇನೋತ್ತಮಶ್ಚರಃ । ಇದಂ ವಚನಮಾರೇಭೇ ವಕ್ತುಂ ರಾವಣಸನ್ನಿಧೌ ‖೧೯‖ "ಅಥರ್ಕ್ಷರಜಸಃ ಪುತ್ರೋ ಯುಧಿ ರಾಜಾ ಸುದುರ್ಜಯಃ । ಗದ್ಗದಸ್ಯಾಥ ಪುತ್ರೋಽತ್ರ ಜಾಂಬವಾನಿತಿ ವಿಶ್ರುತಃ ‖ ೨೦ ‖ ಗದ್ಗದಸ್ಯೈವ ಪುತ್ರೋಽನ್ಯೋ ಗುರುಪುತ್ರಃ ಶತಕ್ರತೋಃ । ಕದನಂ ಯಸ್ಯ ಪುತ್ರೇಣ ಕೃತಮೇಕೇನ ರಕ್ಷಸಾಂ ‖ ೨೧ ‖ ಸುಷೇಣಶ್ಚಾಪಿ ಧರ್ಮಾತ್ಮಾ ಪುತ್ರೋ ಧರ್ಮಸ್ಯ ವೀರ್ಯವಾನ್ ।

ತಿಳಿದು, ಅತ್ರ - ಈ ಕಪಿಗಳ ವಿಷಯಕ್ಕಾಗಿ, ಪ್ರತಿಪತ್ಸ್ಯಾಮಿ - ಮಾಡತಕ್ಕ ಪ್ರತಿಕ್ರಿಯೆಯನ್ನು ಮಾಡುವೆನು, ಯುದ್ಧಮಿಚ್ಛತಾ - ಕಾಳಗವನ್ನು ಕೋರುವವನಿಂದ, ಬಲಸಂಖ್ಯಾನಂ - ಬಲದ ಸಂಖ್ಯೆಯು, ಅವಶ್ಯಂ - ನಿಶ್ಚಯವಾಗಿ, ಕರ್ತವ್ಯಂ - ಮಾಡತಕ್ಕದು. ‖ ೧೭-೧೮ ‖ ಅಥ - ಬಳಿಕ, ರಾವಣೇನ - ರಾವಣನಿಂದ, ಏವಂ - ಈ ಪರಿಯಾಗಿ, ಉಕ್ತಃ - ಹೇಳಲ್ಪಟ್ಟ, ಉತ್ತಮಃ - ಉತ್ತಮನಾದ, ಚರಃ - ಗೂಢಚಾರಿಯಾದ, ಶಾರ್ದೂಲಃ - ಶಾರ್ದೂಲನು, ರಾವಣಸನ್ನಿಧೌ - ರಾವಣಾಸುರನ ಸಮೀಪದಲ್ಲಿ, ಇದಂವಚನಂ - ಈ ವಕ್ಷ್ಯಮಾಣ ವಚನವನ್ನು, ವಕ್ತುಂ - ಹೇಳಲು, ಆರೇಭೇ - ಆರಂಭಿಸಿದನು. ‖ ೧೯ ‖ ಅಥ - ಬಳಿಕ, ಅತ್ರ - ಈ ಸೈನ್ಯದಲ್ಲಿ, ಋಕ್ಷರಜಸಃ - ಋಕ್ಷರಜಸ್ಸಿನ, ಪುತ್ರಃ-ಮಗನಾದ, ರಾಜಾ - ವಾನರರಾಜನಾದ ಸುಗ್ರೀವನು, ಯುಧಿ-ಕಾಳಗದಲ್ಲಿ, ಸುದುರ್ಜಯಃ - ಜಯಿಸಲಸಾಧ್ಯನು, ಅಥ - ಬಳಿಕ, ಗದ್ಗದಸ್ಯ - ಗದ್ಗದನಿಗೆ, ಪುತ್ರಃ - ಮಗನು, ಜಾಂಬವಾನಿತಿ - ಜಾಂಬವಂತನೆಂದು, ವಿಶ್ರುತಃ - ಪ್ರಸಿದ್ಧನು. ‖ ೨೦ ‖ ಗದ್ಗದಸ್ಯ - ಗದ್ಗದನಿಗೆ, ಅನ್ಯಃಪುತ್ರಃ - ಮತ್ತೊಬ್ಬನು ಧೂಮ್ರನೆಂಬವನು, ಯಸ್ಯ - ಯಾವ ಕೇಸರಿಯ, ಏಕೇನಪುತ್ರೇಣ - ಒಬ್ಬನಾದ ಮಗನಿಂದ, ರಕ್ಷಸಾಂ - ರಕ್ಕಸರ, ಕದನಂ - ಕಾಳಗವು, ಕೃತಂ - ಮಾಡಲ್ಪಟ್ಟಿತೋ, ಸಃ - ಆ ಕೇಸರಿಯು, ಶತಕ್ರತೋಃ - ದೇವೇಂದ್ರನ, ಗುರುಪುತ್ರಃ - ಗುರುವಾದ ಬೃಹಸ್ಪತಿಯ ಮಗನು. ‖ ೨೧ ‖ ಧರ್ಮಾತ್ಮಾ - ಧರ್ಮಿಷ್ಠನಾದ, ವೀರ್ಯವಾನ್ - ಸಾಮರ್ಥ್ಯವಂತನಾದ, ಸುಷೇಣಶ್ಚ - ಸುಷೇಣನು, ಧರ್ಮಸ್ಯ - ಯಮನ, ಪುತ್ರಃ - ಮಗನು, ಹೇ ರಾಜನ್ - ಎಲೈ ಅರಸೇ, ಅತ್ರ - ಈ ಸೈನ್ಯದಲ್ಲಿ,

ಅವರ ಬಲಾಬಲಗಳನ್ನು ನಾನು ಚೆನ್ನಾಗಿ ತಿಳಿದುಕೊಳ್ಳುವೆನು. ಯುದ್ಧಾಪೇಕ್ಷೆಯುಳ್ಳವರು ಮುಖ್ಯವಾಗಿ ಶತ್ರುಬಲವನ್ನು ಚೆನ್ನಾಗಿ ತಿಳಿದುಕೊಳ್ಳಬೇಕು. ಆದುದರಿಂದ ಈ ವೃತ್ತಾಂತವೆಲ್ಲವನ್ನೂ ವಿಶದವಾಗಿ ತಿಳಿಸಿರಿ" ಎಂದು ಹೇಳಿದನು. ‖ ೧೭-೧೮ ‖ ರಾವಣಾಸುರನಿಂತು ಕೇಳಲು ಗೂಢಚಾರರಲ್ಲಿ ಉತ್ತಮನಾದ ಶಾರ್ದೂಲನು ಆತನ ಸನ್ನಿಧಿಯಲ್ಲಿ ಈ ರೀತಿ ನುಡಿಯಲುಪಕ್ರಮಿಸಿದನು :—"ಎಲೈ ಪ್ರಭುವೇ! ಋಕ್ಷರಜಸ್ಸಿನ ಮಗನಾದ ಸುಗ್ರೀವನು ಯುದ್ಧದಲ್ಲಿ ಶತ್ರುಗಳಿಂದ ಜಯಿಸಲಸಾಧ್ಯನಾದವನು. ಗದ್ಗದನೆಂಬುವನ ಮಗನಾದ ಜಾಂಬವಂತನು ಮಹಾ ಪ್ರಸಿದ್ಧನು. ಆ ಗದ್ಗದನಿಗೆ ಧೂಮ್ರನೆಂಬ ಮತ್ತೊಬ್ಬ ಮಗನಿರುವನು. ಆತನು ಅಕ್ಷಾದಿ ರಾಕ್ಷಸರೊಡನೆ ಘೋರವಾದ ಯುದ್ಧವನ್ನು ಮಾಡಿ ಅವರನ್ನು ಜಯಿಸಿದನು. ಆ ಧೂಮ್ರನು ಮಹೇಂದ್ರನಿಗೆ ಗುರುವಾದ ಬೃಹಸ್ಪತಿಗೆ ಮಗನಾಗಬೇಕು. ಧರ್ಮದೇವತೆಯ ಮಗನಾದ ಸುಷೇಣನು ಮಹಾ ವೀರ್ಯವಂತನು. ರಾಕ್ಷಸೇಶ್ವರಾ! ಚಂದ್ರನ ಮಗನಾದ ದಧಿಮುಖನು ಬಹಳ ಸೌಮ್ಯಸ್ವಭಾವವುಳ್ಳವನು. ಸುಮುಖ

ಸೌಮ್ಯಸ್ಸೋಮಾತ್ಮಜಶ್ಚಾತ್ರ ರಾಜನ್! ದಧಿಮುಖಃ ಕಪಿಃ ‖ ೨೨ ‖ ಸುಮುಖೋ ದುರ್ಮುಖಶ್ಚಾತ್ರ ವೇಗದರ್ಶೀ ಚ ವಾನರಃ । ಮೃತ್ಯುರ್ವಾನರರೂಪೇಣ ನೂನಂ ಸೃಷ್ಟಸ್ಸ್ವಯಂಭುವಾ ‖ ೨೩ ‖ ಪುತ್ರೋ ಹುತವಹಸ್ಯಾಥ ನೀಲಸ್ಸೇನಾಪತಿಸ್ಸ್ವಯಂ । ಅನಿಲಸ್ಯ ಚ ಪುತ್ರೋಽತ್ರ ಹನುಮಾನಿತಿ ವಿಶ್ರುತಃ ‖೨೪‖ ನಪ್ತಾ ಶಕ್ರಸ್ಯ ದುರ್ಧರ್ಷೋ ಬಲವಾನಂಗದೋ ಯುವಾ । ಮೈಂದಶ್ಚ ದ್ವಿವಿದಶ್ಚೋಭೌ ಬಲಿನಾವಶ್ವಿಸಂಭವೌ ‖೨೫‖ ಪುತ್ರಾ ವೈವಸ್ವತಸ್ಯಾತ್ರ ಪಂಚಕಾಲಾಂತಕೋಪಮಾಃ । ಗಜೋ ಗವಾಕ್ಷೋ ಗವಯಃ ಶರಭೋ ಗಂಧಮಾದನಃ ‖ ೨೬ ‖ ದಶ ವಾನರಕೋಟ್ಯಶ್ಚ ಶೂರಾಣಾಂ

ಸೌಮ್ಯಃ - ಪ್ರಸನ್ನನಾದ, ದಧಿಮುಖಃ - ದಧಿಮುಖನೆಂಬ, ಕಪಿಃ - ವಾನರನು, ಸೋಮಾತ್ಮಜಃ - ಚಂದ್ರನಿಗೆ ಕುವರನ. ‖ ೨೨ ‖ ಅತ್ರ - ಈ ಸೈನ್ಯದಲ್ಲಿ, ಸುಮುಖಃ - ಸುಮುಖನು, ದುರ್ಮುಖಃ - ದುರ್ಮುಖನೂ, ವೇಗದರ್ಶೀ ಚ - ವೇಗದರ್ಶೀ ಎಂಬ, ವಾನರಶ್ಚ - ವಾನರನೂ, ಮೃತ್ಯುಃ - ಮೃತ್ಯುವೇ, ವಾನರರೂಪೇಣ - ಈ ಮೂವರು ವಾನರರ ರೂಪದಿಂದ, ಸ್ವಯಂಭುವಾ - ಬ್ರಹ್ಮದೇವರಿಂದ ಸೃಷ್ಟಃ - ಸೃಜಿಸಲ್ಪಟ್ಟರು, ಏವಂಚ - ಇವರು ಮೂವರೂ ಮೃತ್ಯುವಿನ ಮಕ್ಕಳೆಂದು ಕೆಲವರು ಹೇಳುತ್ತಾರೆ. ‖ ೨೩ ‖ ಅಥ - ಬಳಿಕ, ಸೇನಾಪತಿಃ - ಸೇನಾಧಿಪತಿಯಾದ, ನೀಲಃ - ನೀಲನು, ಹುತವಹಸ್ಯ - ಅಗ್ನಿಗೆ, ಸ್ವಯಂ - ತಾನು, ಪುತ್ರಃ - ಮಗನು, ಅತ್ರ - ಈ ಕಪಿಗಳಲ್ಲಿ, ಹನೂಮಾನ್ - ಆಂಜನೇಯನೆಂಬವನು, ಅನಿಲಸ್ಯ ಚ - ವಾಯುವಿಗೆ, ಪುತ್ರಃ - ಮಗನು (ಹನುಮಂತನೆಂದು), ವಿಶ್ರುತಃ - ಪ್ರಖ್ಯಾತನಾದವನು, ಬಲವಾನ್ - ಬಲವಂತನಾದ, ಯುವಾ - ಯೌವನಸ್ಥನಾದ, ದುರ್ಧರ್ಷಃ - ತಿರಸ್ಕರಿಸಲಸಾಧ್ಯನಾದ, ಅಂಗದಃ - ಅಂಗದನು, ಶಕ್ರಸ್ಯ - ದೇವೇಂದ್ರನಿಗೆ, ನಪ್ತಾ - ಮೊಮ್ಮಗನು, ಮೈಂದಶ್ಚ - ಮೈಂದನು, ದ್ವಿವಿದಶ್ಚ - ದ್ವಿವಿದನು ಎಂಬ, ಬಲಿನಶ್ಚ - ಬಲವಂತರಾದ, ಉಭೌ - ಈರ್ವರು, ಅಶ್ವಿಸಂಭವೌ - ಅಶ್ವಿನೀದೇವತೆಗಳ ಮಕ್ಕಳು. ‖ ೨೪-೨೫ ‖ ಅತ್ರ - ಈ ವಾನರರಲ್ಲಿ, ವೈವಸ್ವತಸ್ಯ - ಯಮನಿಗೆ, ಪುತ್ರಾಃ - ಮಕ್ಕಳು, ಕಾಲಾಂ....ಮಾಃ - ಪ್ರಳಯಕಾಲದ ಯಮನಿಗೆ ಸಮಾನರಾದವರು, ಗಜಃ-ಗಜನು, ಗವಾಕ್ಷಃ-ಗವಾಕ್ಷನು, ಗವಯಃ-ಗವಯನು, ಶರಭಃ-ಶರಭನು, ಗಂಧಮಾದನಃ - ಗಂಧಮಾದನನೂ ಎಂಬುದಾಗಿ, ಪಂಚ - ಐದು ಜನರು. ‖ ೨೬ ‖ ಶ್ರೀಮತಾಂ - ಸಂಪದ್ಯುಕ್ತರಾದ, ದೇವಪುತ್ರಾಣಾಂ - ದೇವತೆಗಳಿಗೆ ಮಕ್ಕಳಾದ, ಯುದ್ಧಕಾಂಕ್ಷಿಣಾಂ - ಯುದ್ಧ

ನೆಂಬ ವಾನರವೀರನೂ, ದುರ್ಮುಖನೂ, ದೀರ್ಘದರ್ಶಿಯೆಂಬವನೂ ಬಹಳ ಪರಾಕ್ರಮಶಾಲಿಗಳು. ಇವರನ್ನು ನೋಡಿದರೆ ಬ್ರಹ್ಮದೇವನು, ವಾನರರೂಪದಿಂದ ಮೃತ್ಯುವನ್ನೇ ಸೃಷ್ಟಿಸಿದನೆಂದು ತೋರುತ್ತದೆ. ಅಗ್ನಿಪುತ್ರನಾದ ನೀಲನೆಂಬ ವಾನರನು ವಾನರಸೇನೆಗೆಲ್ಲಕ್ಕೂ ಅಧಿಪತಿಯಾಗಿರುವನು. ಎಲೈ ರಾಕ್ಷಸರಾಜನೇ! ಕೇಳು; ವಾಯುದೇವನ ಮಗನೇ ಹನುಮಂತನು. ‖೧೮–೨೪‖ ಈ ಹನುಮಂತನು ಮಹಾ ಪ್ರಸಿದ್ಧನಾದವನು. ದೇವೇಂದ್ರನಿಗೆ ಮೊಮ್ಮಗನೂ, ವಾಲಿಗೆ ಮಗನೂ ಆದ ಅಂಗದನು ಶತ್ರುಗಳಿಂದ ಅಜೇಯನಾದವನು; ಯುವಕರಲ್ಲಿ ಈತನೇ ಅಗ್ರೇಸರನು. ಅಶ್ವಿನೀದೇವತೆಗಳ ಮಕ್ಕಳಾದ ಮೈಂದ ದ್ವಿವಿದರೆಂಬಿಬ್ಬರು ವಾನರೋತ್ತಮರೂ ಮಹಾ ಪರಾಕ್ರಮಶಾಲಿಗಳಾದವರು. ಯಮಪುತ್ರರಾದ ಗಜ, ಗವಯ, ಗವಾಕ್ಷ, ಶರಭ, ಗಂಧಮಾದನ ಎಂಬ ಐವರು ವಾನರೋತ್ತಮರೂ ಕಾಲಯಮನಿಗೆ ಸಮಾನರಾದವರು. ಪ್ರಭುವೇ! ಯುದ್ಧಮಾಡಲಪೇಕ್ಷೆಯುಳ್ಳ ವಾನರವೀರರು

ಯುದ್ಧಕಾಂಕ್ಷಿಣಾಂ । ಶ್ರೀಮತಾಂ ದೇವಪುತ್ರಾಣಾಂ ಶೇಷಂ ನಾಖ್ಯಾತುಮುತ್ಸಹೇ ॥೨೭॥ ಪುತ್ರೋ ದಶರಥಸ್ಯೈಷ ಸಿಂಹಸಂಹನನೋ ಯುವಾ । ದೂಷಣೋ ನಿಹತೋ ಯೇನ ಖರಶ್ಚ ತ್ರಿಶಿರಾಸ್ತಥಾ ॥ ೨೮ ॥ ನಾಸ್ತಿ ರಾಮಸ್ಯ ಸದೃಶೋ ವಿಕ್ರಮೇ ಭುವಿ ಕಶ್ಚನ । ವಿರಾಧೋ ನಿಹತೋ ಯೇನ ಕಬಂಧಶ್ಚಾಂತಕೋಪಮಃ ॥ ೨೯ ॥ ವಕ್ತುಂ ನಶಕ್ತೋ ರಾಮಸ್ಯ ನರಃ ಕಶ್ಚಿದ್ಗುಣಾನ್ ಕ್ಷಿತೌ । ಜನಸ್ಥಾನಗತಾ ಯೇನ ಯಾವಂತೋ ರಾಕ್ಷಸಾ ಹತಾಃ ॥೩೦॥ ಲಕ್ಷ್ಮಣಶ್ಚಾತ್ರ ಧರ್ಮಾತ್ಮಾ ಮಾತಂಗಾನಾಮಿವರ್ಷಭಃ । ಯಸ್ಯ ಬಾಣಪಥಂ ಪ್ರಾಪ್ಯ ನಜೀವೇದಪಿ ವಾಸವಃ ॥೩೧॥ ಶ್ವೇತೋ ಜ್ಯೋತಿರ್ಮುಖ

---

ವನ್ನು ಕೋರುತ್ತಿರುವ, ಶೂರಾಣಾಂ - ಶೂರರಾದ ವಾನರರ, ದಶಕೋಟ್ಯಃ - ಹತ್ತು ಕೋಟಿಗಳು, ಶೇಷಂ - ಮಿಕ್ಕ ವಾನರ ಸೈನ್ಯವನ್ನು, ಆಖ್ಯಾತುಂ - ಹೇಳುವದಕ್ಕೆ, ನೋತ್ಸಹೇ - ಸಮರ್ಥನಾಗ ಲಾರೆನು. ॥೨೭॥ ಯೇನ - ಯಾವ ಶ್ರೀರಾಮನಿಂದ, ದೂಷಣಃ - ದೂಷಣನು, ಖರಶ್ಚ - ಖರನೂ, ತಥಾ - ಹಾಗೆಯೇ, ತ್ರಿಶಿರಾಶ್ಚ - ತ್ರಿಶಿರಸನೂ, ನಿಹತಃ - ಕೊಲ್ಲಲ್ಪಟ್ಟರೋ, ಏಷಃ - ಈ, ಯುವಾ - ಯೌವನವಯಸ್ಕನಾದ, ಸಿಂಹಸಂಹನನಃ - ಸಿಂಹದಂತೆ ನೋಟಕ್ಕೆ ಅರ್ಹವಾದ ಶರೀರವುಳ್ಳ, ದಶ ರಥಸ್ಯಚ - ದಶರಥರಾಯನಿಗೆ, ಪುತ್ರಃ - ಮಗನಾದ ಶ್ರೀರಾಮನು. ॥ ೨೮ ॥ ರಾಮಸ್ಯ - ಶ್ರೀರಾಮ ನಿಗೆ, ವಿಕ್ರಮೇ - ಪರಾಕ್ರಮ ವಿಷಯದಲ್ಲಿ, ಭುವಿ - ನೆಲದಲ್ಲಿ, ಕಶ್ಚನ - ಯಾವ ಪುರುಷನೂ, ಸದೃಶಃ - ಸಮಾನನು, ನಾಸ್ತಿ - ಇಲ್ಲವು, ಯೇನ - ಯಾವ ಶ್ರೀರಾಮನಿಂದ, ವಿರಾಧಃ - ವಿರಾಧನು, ನಿಹತಃ - ಹೊಡೆಯಲ್ಪಟ್ಟನೋ, ಅಂತಕೋಪಮಃ - ಯಮನಿಗೆ ಸಮಾನನಾದ, ಕಬಂಧಶ್ಚ - ಕಬಂಧನೂ, ಯೇನ - ಯಾವ ಶ್ರೀರಾಮನಿಂದ, ನಿಹತಃ-ಹೊಡೆಯಲ್ಪಟ್ಟನೋ, ತಸ್ಯರಾಮಸ್ಯ - ಅಂಥಾ ಶ್ರೀರಾಮನ, ಗುಣಾನ್ - ಗುಣಗಳನ್ನು, ವಕ್ತುಂ - ಹೇಳುವದಕ್ಕೆ, ಕ್ಷಿತೌ - ಭೂಮಿಯಲ್ಲಿ, ಕಶ್ಚಿನ್ನರಃ - ಯಾವ ಮನುಷ್ಯನೂ, ನಶಕ್ತಃ - ಸಮರ್ಥನಲ್ಲವು, ಯೇನ - ಯಾವ ಶ್ರೀರಾಮನಿಂದ, ಜನಸ್ಥಾನಗತಾಃ - ಜನಸ್ಥಾನವನ್ನು ಹೊಂದಿದ (ಪಂಚವಟೀತೀರವಾಸಿಗಳಾದ,) ಯಾವಂತಃ - ಯಾವದ್ವಿಶಿಷ್ಟರಾದ, ರಾಕ್ಷಸಾಃ - ರಕ್ಕಸರು, ಹತಾಃ - ಹೊಡೆಯಲ್ಪಟ್ಟರೋ. ॥ ೩೦ ॥ ಅತ್ರ - ಈ ಸೈನ್ಯದಲ್ಲಿ, ಯಸ್ಯ - ಯಾವ ಲಕ್ಷ್ಮಣನ, ಬಾಣಪಥಂ - ಬಾಣಮಾರ್ಗವನ್ನು, ಪ್ರಾಪ್ಯ - ಹೊಂದಿ, ವಾಸವೋಪಿ - ದೇವೇಂದ್ರನೂ ಕೂಡ, ನಜೀವೇತ್ - ಬದುಕಲಾರನೋ, ಧರ್ಮಾತ್ಮಾ - ಧರ್ಮಿಷ್ಠನಾದ, ಸಲಕ್ಷ್ಮಣಃ -

---

ಹತ್ತುಕೋಟಿಗಳಿಗೆ ಮಿಾರಿದ ಸಂಖ್ಯೆಯುಳ್ಳವರಾಗಿರುವರು. ಮಹಾ ತೇಜಸ್ವಿಗಳಾದ ಆ ವಾನರವೀರರ ಕುಲಗೋತ್ರಗಳನ್ನು ನಾನು ಹೇಳಲುಸಮರ್ಥನಾಗಿರುವೆನು. ಮಹಾರಾಜಾ ! ದಶರಥರಾಯನ ಮಗನೂ, ವಯೋವಂತನೂ ಆದ ಶ್ರೀರಾಮನು ಸಿಂಹಸಂಹನನಾಗಿರುವನು. ಆತನು ಖರದೂಷಣ ತ್ರಿಶಿರರೆಂಬ ರಾಕ್ಷಸೋತ್ತಮರನ್ನು ಸಂಹರಿಸಿದನು. ಈ ಭೂಲೋಕ ದಲ್ಲಿ ಯಾರೂ ಪರಾಕ್ರಮದಲ್ಲಿ ಆತನಿಗೆ ಸಾಟಿಯಾಗಲಾರರು. ಆದುದರಿಂದಲೇ ಆತನು ಯಮನಿಗೆ ಸರಿಹೋಲುವ ವಿರಾಧ ಕಬಂಧರನೊಕ್ಕಲಿಕ್ಕಿದನು. ಎಲೈ ರಾಕ್ಷಸೋತ್ತಮನೇ ! ಆ ರಾಮನ ಗುಣಗಳನ್ನು ವರ್ಣಿಸಲು ಈ ಲೋಕದಲ್ಲಿ ಯಾರೂ ಸಮರ್ಥರಲ್ಲವು. ಆತನು ಜನಸ್ಥಾನದಲ್ಲಿದ್ದ ಸಮಸ್ತ ರಾಕ್ಷಸರನ್ನೂ ಸಂಹರಿಸಿದನಲ್ಲವೆ ! ॥ ೨೫–೩೦ ॥ ಆತನಿಗೆ ತಮ್ಮ ನಾದ ಲಕ್ಷ್ಮಣನೆಂಬವನು ಮದಗಜಸಮಾನನು. ಆತನ ಬಾಣಗಳು ಸೋಕಿದರೆ ದೇವೇಂದ್ರನೂ ಜೀವಿಸಲಾರನು. ಇವರಾದಮೇಲೆ ಸೂರ್ಯಪುತ್ರರಾದ ಶ್ವೇತನೂ, ಜ್ಯೋತಿರ್ಮುಖನೂ

ಶ್ಚಾಽತ್ರ ಭಾಸ್ಕರಸ್ಯಾಽತ್ಮಸಂಭವೌ । ವರುಣಸ್ಯ ಚ ಪುತ್ರೋಽನ್ಯೋ ಹೇಮಕೂಟಃ ಪ್ಲವಂಗಮಃ ‖ ೩೨ ‖ ವಿಶ್ವಕರ್ಮಸುತೋ ವೀರೋ ನಳಃ ಪ್ಲವಗಸತ್ತಮಃ । ವಿಕ್ರಾಂತೋ ಬಲವಾನತ್ರ ವಸುಪುತ್ರಸ್ಸುದುರ್ಧರಃ ‖ ೩೩ ‖ ರಾಕ್ಷಸಾನಾಂ ವರಿಷ್ಠಶ್ಚ ತವ ಭ್ರಾತಾ ವಿಭೀಷಣಃ । ಪರಿಗೃಹ್ಯ ಪುರೀಂ ಲಂಕಾಂ ರಾಘವಸ್ಯ ಹಿತೇ ರತಃ ‖ ೩೪ ‖

ಇತಿ ಸರ್ವಂ ಸಮಾಖ್ಯಾತಂ ತವೇದಂ ವಾನರಂ ಬಲಂ ।
ಸುವೇಲೇಽಧಿಷ್ಠಿತಂ ಶೈಲೇ ಶೇಷಕಾರ್ಯೇ ಭವಾನ್ ಗತಿಃ ‖ ೩೫ ‖

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ತ್ರಿಂಶಸ್ಸರ್ಗಃ

---

ಅಂಥಾ ಲಕ್ಷ್ಮಣನು, ಮಾತಂಗಾನಾಂ - ಆನೆಗಳಲ್ಲಿ, ಋಷಭಇವ - ಶ್ರೇಷ್ಠವಾದ ಸಲಗದಂತಿರುವನು. ‖ ೩೧ ‖ ಅತ್ರ - ಈ ಸೈನ್ಯದಲ್ಲಿ, ಶ್ವೇತಃ-ಶ್ವೇತನೆಂಬವನು, ಜ್ಯೋತಿರ್ಮುಖಶ್ಚ-ಜ್ಯೋತಿರ್ಮುಖನು, ಭಾಸ್ಕರಸ್ಯ - ಸೂರ್ಯನಿಗೆ, ಆತ್ಮಸಂಭವೌ - ಔರಸಪುತ್ರರು, ಹೇಮಕೂಟಃ - ಹೇಮಕೂಟನೆಂಬ, ಪ್ಲವಂಗಮಃ - ಕಪಿಯು, ವರುಣಸ್ಯ - ವರುಣನಿಗೆ, ಅನ್ಯಃಪುತ್ರಃ - ಮತ್ತೊಬ್ಬ ಮಗನು. ‖ ೩೨ ‖ ಅತ್ರ - ಈ ಸೈನ್ಯದಲ್ಲಿ, ಬಲವಾನ್ - ಬಲಿಷ್ಠನಾದ, ವಿಕ್ರಾಂತಃ - ಪರಾಕ್ರಮಶಾಲಿಯಾದ, ವೀರಃ - ಶೂರನಾದ, ನಳಃ - ನಳನೆಂಬ, ಪ್ಲವಗಸತ್ತಮಃ - ವಾನರಶ್ರೇಷ್ಠನು, ವಿಶ್ವಕರ್ಮಸುತಃ - ವಿಶ್ವಕರ್ಮಬ್ರಹ್ಮನಿಗೆ ಮಗನು, ದುರ್ಧರಃ - ದುರ್ಧರನೆಂಬವನು, ವಸುಪುತ್ರಃ - ವಸುವಿಗೆ ಮಗನು. ‖ ೩೩ ‖ ರಾಕ್ಷಸಾನಾಂ - ರಕ್ಕಸರಲ್ಲಿ, ವರಿಷ್ಠಃ - ಶ್ರೇಷ್ಠನಾದ, ತವ - ನಿನಗೆ, ಭ್ರಾತಾ - ತಮ್ಮನಾದ, ವಿಭೀಷಣಃ - ವಿಭೀಷಣನು, ಲಂಕಾಂಪುರೀಂ - ಲಂಕಾಪಟ್ಟಣವನ್ನು, ಪರಿಗೃಹ್ಯ - ಪರಿಗ್ರಹಿಸಿ, ರಾಘವಸ್ಯ - ಶ್ರೀರಾಮನ, ಹಿತೇ - ಹಿತದಲ್ಲಿ, ರತಃ - ಆಸಕ್ತನು. ‖ ೩೪ ‖ ಇತಿ - ಹೀಗೆ, ಸರ್ವಂ - ಸಮಸ್ತವಾದ, ವಾನರಂಬಲಂ - ಕಪಿಸೈನ್ಯವು, ತೇ - ನಿನಗೆ, ಸಮಾಖ್ಯಾತಂ - ಚೆನ್ನಾಗಿ ಹೇಳಲ್ಪಟ್ಟಿತು, ಸುವೇಲೇಶೈಲೇ-ಸುವೇಲಪರ್ವತದಲ್ಲಿ, ಅಧಿಷ್ಠಿತಂ-ಇಳಿದಿರುವುದು, ಶೇಷಕಾರ್ಯೇ - ಉಳಿದ ಕಾರ್ಯದಲ್ಲಿ, ಭವಾನ್ - ನೀನು, ಗತಿಃ - ಶರಣ್ಯನು. ‖ ೩೫ ‖

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ತ್ರಿಂಶಸ್ಸರ್ಗಃ.

---

ಮಹಾ ಪರಾಕ್ರಮಶಾಲಿಗಳಾದ ವಾನರರು. ವರುಣಪುತ್ರನಾದ ಹೇಮಕೂಟ ಪ್ಲವಂಗನೆಂಬುವನು ವಾನರವೀರರಲ್ಲಿ ಅಗ್ರಗಳಿಯನು ; ಮಹಾ ಬಲಪರಾಕ್ರಮಶಾಲಿಯು. ವಿಶ್ವಕರ್ಮಪುತ್ರನಾದ ನಳನು ವಾನರರಲ್ಲಿ ಉತ್ತಮೋತ್ತಮನು. ದುರ್ಧರನು ವಸುವಿನ ಮಗನು. ಈತನು ಮಹಾ ವಿಕ್ರಾಂತನಾದವನು. ಎಲ್ಲರಿಗೂ ಮೇಲಾಗಿ ರಾಕ್ಷಸರರೆಲ್ಲರಲ್ಲಾ ಮಹಾತ್ಮನೂ, ನಿನ್ನ ತಮ್ಮನೂ ಆದ ವಿಭೀಷಣನು ಶ್ರೀರಾಮನಿಂದ ಲಂಕಾರಾಜ್ಯಾಧಿಪತ್ಯವನ್ನು ಪಡೆದು ಆತನ ಕಾರ್ಯದಲ್ಲಿ ಅತ್ಯಂತ ಶ್ರದ್ಧಾಳುವಾಗಿ ನಡೆದುಕೊಳ್ಳುತ್ತಿರುವನು.” ಈ ಪ್ರಕಾರವಾಗಿ ಆ ಶಾರ್ದೂಲನು ಸುವೇಲಾದ್ರಿಯಲ್ಲಿ ತಂಗಿರುವ ವಾನರಸೈನ್ಯವೃತ್ತಾಂತವೆಲ್ಲವನ್ನೂ ತನ್ನ ಪ್ರಭುವಾದ ರಾವಣಾಸುರನಿಗೆ ಅರಿಕೆಮಾಡಿ, “ಮಿಕ್ಕ ಕಾರ್ಯಕ್ಕೆ ನೀನೇ ಪ್ರಮಾಣವು” ಎಂದು ಹೇಳಿದನು. ‖ ೨೦-೩೫ ‖

ಇಂತಿದು ಶಾರ್ದೂಲಕಥಿತ ವಾನರವೃತ್ತಾಂತನಿರೂಪಣವೆಂಬ ಮುವ್ವತ್ತನೆಯ ಸರ್ಗವು ಸಮಾಪ್ತವಾದುದು.



# ಯುದ್ಧಕಾಂಡೇ ಏಕತ್ರಿಂಶಸ್ಸರ್ಗಃ

ತತಸ್ತಮಕ್ಷೋಭ್ಯಬಲಂ ಲಂಕಾಧಿಪತಯೇ ಚರಾಃ । ಸುವೇಲೇ ರಾಘವಂ ಶೈಲೇ ನಿವಿಷ್ಟಂ ಪ್ರತ್ಯವೇದಯನ್ ॥ ೧ ॥ ಚಾರಾಣಾಂ ರಾವಣಃ ಶ್ರುತ್ವಾ ಪ್ರಾಪ್ತಂ ರಾಮಂ ಮಹಾಬಲಂ । ಜಾತೋದ್ವೇಗೋಽಭವತ್ಕಿಂಚಿತ್ಸಚಿವಾನಿದಮಬ್ರವೀತ್ ॥೨॥ "ಮಂತ್ರಿಣಃ ಶೀಘ್ರಮಾಯಾಂತು ಸರ್ವೇ ವೈ ಸುಸಮಾಹಿತಾಃ । ಅಯಂ ನೋ

ತತಃ - ಬಳಿಕ, ಚರಾಃ - ಗೂಢಚಾರರು, ಸುವೇಲೇಶೈಲೇ - ಸುವೇಲಪರ್ವತದಲ್ಲಿ, ನಿವಿಷ್ಟಂ - ವಾಸಮಾಡುತ್ತಿರುವ, ಅಕ್ಷೋಭ್ಯಬಲಂ - ಕ್ಷೋಭಿಸಲಸಾಧ್ಯವಾದ ಸೈನ್ಯವುಳ್ಳ, ತಂರಾಘವಂ - ಆ ಶ್ರೀರಾಮನನ್ನು, ಲಂಕಾಧಿಪತೇಃ - ಲಂಕಾಧಿಪತಿಯಾದ ರಾವಣನಿಗೆ, ಪ್ರತ್ಯವೇದಯನ್ - ತಿಳಿಸಿದರು. ॥ ೧ ॥ ರಾವಣಃ - ರಾವಣನು, ಚಾರಾಣಾಂ - ಗೂಢಚಾರರ ಪೇಸೆಯಿಂದ, ಮಹಾಬಲಂ - ಮಹಾ ಬಲನಾದ, ರಾಮಂ - ಶ್ರೀರಾಮನನ್ನು, ಪ್ರಾಪ್ತಂ - ಬಂದವನನ್ನಾಗಿ, ಶ್ರುತ್ವಾ - ಕೇಳಿ, ಕಿಂಚಿತ್ - ಸ್ವಲ್ಪ, ಜಾತೋದ್ವೇಗಃ - ಹುಟ್ಟಿದ ಭಯವುಳ್ಳವನು, ಅಭವತ್ - ಆದನು, ಸಚಿವಾನ್ - ಮಂತ್ರಿಗಳನ್ನು ಕುರಿತು, ಇದಂ - ಈ ಮಾತನ್ನು, ಅಬ್ರವೀತ್ - ನುಡಿದನು. ॥ ೨ ॥ ಹೇ ರಾಕ್ಷಸಾಃ - ಎಲೈ ರಕ್ಕಸರೇ, ಅಯಂಮಂತ್ರಕಾಲಃ - ಈಗ ಆಲೋಚನೆಯ ಕಾಲವು, ನಃ - ನಮಗೆ, ಸಂಪ್ರಾಪ್ತ ಇತಿ - ಒದಗಿತೆಂದು, ಸರ್ವೇ - ಸಮಸ್ತರಾದ, ಮಂತ್ರಿಣಃ -

ತರುವಾಯ ಆ ಚಾರರು, ಶತ್ರುಗಳಿಂದ ಅಜೇಯವಾದ ವಾನರಸೇನೆಯೊಡಗೂಡಿ ಸುವೇಲಾದ್ರಿಯಲ್ಲಿ ತಂಗಿರುವ ಶ್ರೀರಾಮನ ವೃತ್ತಾಂತವೆಲ್ಲವನ್ನೂ ಸವಿಸ್ತಾರವಾಗಿ ತಮ್ಮ ಪ್ರಭುವಾದ ರಾವಣೇಶ್ವರನಿಗೆ ಬಿನ್ನವಿಸಿದರು. ಆಗ ರಾವಣಾಸುರನು ಅವರ ಮಾತುಗಳೆಲ್ಲವನ್ನೂ ಕೇಳಿ ಶ್ರೀರಾಮನು ಮಹಾ ಬಲಾಢ್ಯನೆಂದು ತನ್ನಲ್ಲಿತಾನೇ ಯೋಚಿಸಿ ಬಹಳ ಉದ್ವೇಗವುಳ್ಳವನಾಗಿ ಮಂತ್ರಿಗಳೊಡನೆ, "ಎಲೈ ಮಂತ್ರಿಗಳಿರಾ! ನೀವೆಲ್ಲರೂ ಒಟ್ಟುಗೂಡಿ ಜಾಗ್ರತೆಯಾಗಿ ನನ್ನ ಬಳಿಗೆ ಬನ್ನಿರಿ. ಇದೀಗ ನಿಮ್ಮೆಲ್ಲರೊಡನೆ ನಾನು ಮಂತ್ರಾಲೋಚನೆ

¶ ಕಥಾ ಸಂಘಟನೆಗಾಗಿ ಹಿಂದೆ ಹೇಳಿದುದನ್ನೆಲ್ಲ ಇಲ್ಲಿ ಮತ್ತೆ (ಹೇಳಿರುತ್ತಾನೆ) ಅನುವಾದಿಸಿರುವನು. (ಗೋ)

ರಾಮಾನುಜರ ಅಭಿಪ್ರಾಯ :—"ತತಸ್ತಮಕ್ಷೋಭ್ಯಬಲಃ" ಎಂಬ ಶ್ಲೋಕವು ಪೂರ್ವಸರ್ಗಾದಿಯಲ್ಲಿಯೂ ಇದ್ದು, ಇಲ್ಲಿ ಕೇವಲ ಅನುವಾದವಾಗಿರುವುದು. ಪೂರ್ವದಲ್ಲಿ "ಪೂರ್ವಮೇವ ಮಯಾ ಸೃಷ್ಟೋ ಜಾಂಬವಾನ್ ಋಕ್ಷಪುಂಗವಃ । ಜೃಂಭಮಾಣಸ್ಯ ಸಹಸಾ ಮಮವಕ್ತ್ರಾದಜಾಯತ ॥" ಎಂಬಂತೆ ಪಿತಾಮಹ (ಬ್ರಹ್ಮ) ವಕ್ತ್ರದಿಂದ ಜನಿಸಿದವನೆಂದು ಪ್ರಸಿದ್ಧನಾಗಿರುವ ಜಾಂಬವಂತನು ಗದ್ಗದ ಪುತ್ರನೆಂದು ಪೂರ್ವಸರ್ಗದಲ್ಲಿ ಪ್ರತಿಪಾದಿತವಾಗಿರುವುದು. ಇದು ತೀರ ವಿರೋಧವೇ ಸರಿ. ಆದರೂ "ಸ್ಥಿತಸ್ಯ ಗತಿಶ್ಚಿಂತನೀಯಾ" ಎಂಬಂತೆ ಪೂರ್ವಸರ್ಗವನ್ನು ವ್ಯಾಖ್ಯಾನಿಸಿದುದಾಯಿತು.

ಕೆಲವರು ಈ ಹಿಂದಿನ ಸರ್ಗವೆಲ್ಲವೂ ಪ್ರಕ್ಷಿಪ್ತವೆಂದು ಹೇಳುವರು. ರಾಮಾನುಜರು ಎತ್ತಿರುವ ಒಂದು ವಿರೋಧವೇ ಅಲ್ಲದೆ, ಪೂರ್ವದಲ್ಲಿ ಶುಕಸಾರಣರಿಂದ ನಿರೂಪಿತವಾಗಿರುವ ವೃತ್ತಾಂತವೆಲ್ಲವೂ ಮತ್ತೊಂದು ವಿಧದಲ್ಲಿ ಅನುವೃತ್ತವಾಗಿರುವುದು. ಮತ್ತೊಂದು ವಿರೋಧವೆಂದು ಅವರು ಹೇಳುವರು.

ಮಂತ್ರಕಾಲೋಹಿ ಸಂಪ್ರಾಪ್ತ ಇತಿ ರಾಕ್ಷಸಾಃ'' ‖ ೩ ‖ ತಸ್ಯ ತಚ್ಛಾಸನಂ ಶ್ರುತ್ವಾ ಮಂತ್ರಿಣೋಽಭ್ಯಾಗಮನ್ ದ್ರುತಂ । ತತಸ್ಸಮಂತ್ರಯಾಮಾಸ ಸಚಿವೈ ರಾಕ್ಷಸೈಸ್ಸಹ ‖ ೪ ‖ ಮಂತ್ರಯಿತ್ವಾ ಸದುರ್ಧರ್ಷಃ ಕ್ಷಮಂ ಯತ್ತನಮನಂತರಂ । ವಿಸರ್ಜಯಿತ್ವಾ ಸಚಿವಾನ್ಪ್ರವಿವೇಶ ಸ್ವಮಾಲಯಂ ‖೫‖ ತತೋ ರಾಕ್ಷಸಮಾಹೂಯ ವಿದ್ಯುಜ್ಜಿಹ್ವಂ ಮಹಾಬಲಂ । ಮಾಯಾವಿದಂ ಮಹಾಮಾಯಃ ಪ್ರಾವಿಶದ್ಯತ್ರ ಮೈಥಿಲೀ ‖ ೬ ‖ ವಿದ್ಯುಜ್ಜಿಹ್ವಂಚ ಮಾಯಾಜ್ಞಮಬ್ರವೀದ್ರಾಕ್ಷಸಾಧಿಪಃ । "ಮೋಹಯಿಷ್ಯಾವಹೇ ಸೀತಾಂ ಮಾಯಯಾ ಜನಕಾತ್ಮಜಾಂ ‖ ೭ ‖ ಶಿರೋ ಮಾಯಾಮಯಂ ಗೃಹ್ಯ

ಮಂತ್ರಿಗಳು, ಸುಸಮಾಹಿತಾಃ - ಸಮಾಧಾನಯುಕ್ತರಾಗಿ, ಶೀಘ್ರಂ - ಜಾಗ್ರತೆಯಾಗಿ, ಆಯಾಂತು - ಬರಲಿ, ಇತಿ - ಇಂತೆಂದು, ಅಬ್ರವೀತ್ - ನುಡಿದನು. ‖ ೩ ‖ ತಸ್ಯ - ಆ ರಾವಣನ, ತಚ್ಛಾಸನಂ - ಆ ಆಜ್ಞಾವಾಕ್ಯವನ್ನು, ಶ್ರುತ್ವಾ - ಕೇಳಿ, ಮಂತ್ರಿಣಃ - ಮಂತ್ರಿಗಳು, ದ್ರುತಂ - ಶೀಘ್ರವಾಗಿ, ಅಭ್ಯಾಗಮನ್ - ಬಂದರು, ತತಃ - ಬಳಿಕ, ಸಃ - ಆ ರಾವಣನು, ಸಚಿವೈಃ - ಮಂತ್ರಿಗಳಾದ, ರಾಕ್ಷಸೈಸ್ಸಹ - ರಕ್ಕಸರೊಡನೆ, ಮಂತ್ರಯಾಮಾಸ - ಆಲೋಚಿಸಿದನು. ‖೪‖ ಯತ್ - ಯಾವುದು, ಕ್ಷಮಂ - ಆ ಕಾಲಕ್ಕೆ ಯುಕ್ತವೋ, ತತ್ - ಅದನ್ನು, ದುರ್ಧರ್ಷಃ - ತಿರಸ್ಕರಿಸಲಸಾಧ್ಯನಾದ, ಸಃ - ಆ ರಾವಣನು, ಮಂತ್ರಯಿತ್ವಾ - ಆಲೋಚಿಸಿ, ಸಮನಂತರಂ - ಬಳಿಕ, ಸಚಿವಾನ್ - ಮಂತ್ರಿಗಳನ್ನು, ವಿಸರ್ಜಯಿತ್ವಾ - ಬಿಟ್ಟು, ಸ್ವಂ - ಸ್ವಕೀಯವಾದ, ಆಲಯಂ - ಮನೆಯನ್ನು, ಪ್ರವಿವೇಶ - ಹೊಕ್ಕನು. ‖೫‖ ತತಃ - ಬಳಿಕ, ಮಹಾಮಾಯಃ - ಮಹಾ ಮಾಯಾವಂತನಾದ ರಾವಣನು, ಮಹಾಬಲಂ - ಬಹಳ ಬಲಶಾಲಿಯಾದ, ವಿದ್ಯುಜ್ಜಿಹ್ವಂ ವಿದ್ಯುಜ್ಜಿಹವನೆಂಬ, ಮಾಯಾವಿದಂ - ಮಾಯೆಗಳನ್ನು ತಿಳಿದಿರುವ, ರಾಕ್ಷಸಂ - ರಕ್ಕಸನನ್ನು, ಆಹೂಯ - ಕರೆದು, ಮೈಥಿಲೀ - ಸೀತಾದೇವಿಯು, ಯತ್ರ - ಎಲ್ಲಿಯೋ, ತತ್ರ - ಅಲ್ಲಿ, ಪ್ರಾವಿಶತ್ - ಹೊಕ್ಕನು. ‖ ೬ ‖ ರಾಕ್ಷಸಾಧಿಪಃ - ರಕ್ಕಸರಿಗೆ ಒಡೆಯನಾದ, ಮಾಯಾಜ್ಞಂ - ಮಾಯೆಯನ್ನು ತಿಳಿದಿರುವ, ವಿದ್ಯುಜ್ಜಿಹ್ವಂ - ವಿದ್ಯುಜ್ಜಿಹ್ವನೆಂಬ ರಾಕ್ಷಸನನ್ನು ಕುರಿತು, ಮಾಯಯಾ - ಮಾಯೆಯಿಂದ, ಜನಕಾತ್ಮಜಾಂ - ಜನಕ ರಾಜನ ಮಗಳಾದ, ಸೀತಾಂ - ಸೀತಾದೇವಿಯನ್ನು, ಮೋಹಯಿಷ್ಯಾವಹೇ - ಮೋಸಗೊಳಿಸೋಣ. ‖ ೭ ‖ ಹೇ ನಿಶಾಚರ - ಎಲೈ ರಾಕ್ಷಸನೇ, ತ್ವಂ - ನೀನು, ಮಾಯಾಮಯಂ -

ಮಾಡುವ ಕಾಲವು ಸನ್ನಿಹಿತವಾಗಿರುವುದು. ಆದುದರಿಂದ ನಾವು ಎಲ್ಲಾ ವಿಚಾರಗಳನ್ನೂ ಕೂಲಂಕಷವಾಗಿ ವಿಮರ್ಶಿಸಬೇಕು'' ಎಂದು ಹೇಳಿದನು. ತಮ್ಮ ಪ್ರಭುವು ಆ ರೀತಿ ಆಜ್ಞಾಪಿಸಿದೊಡನೆಯೇ ಮಂತ್ರಿಗಳೆಲ್ಲರೂ ಒಟ್ಟುಗೂಡಿ ಬಹು ಜಾಗ್ರತೆಯಾಗಿ ಆತನ ಸನ್ನಿದಿಗೈತಂದರು. ದುರ್ಧರನಾದ ರಾವಣನಾದರೋ ಆ ಕಾಲಕ್ಕೆ ಯಾವ ವಿಷಯವು ಅವಶ್ಯಕವೋ ಅದನ್ನು ಮಂತ್ರಿಗಳೊಡನೆ ಚೆನ್ನಾಗಿ ಆಲೋಚಿಸಿ ಆಮೇಲೆ ತನ್ನರಮನೆಗೆ ಹೊರಟುಹೋದನು. ‖೧–೫‖ ಆ ತರುವಾಯ ಆತನು ಮಹಾಬಲನೂ, ಅನೇಕ ಮಾಯಾವಿದ್ಯೆಗಳಲ್ಲಿ ನಿಷ್ಣಾತನಾದವನೂ ಆದ ವಿದ್ಯುಜ್ಜಿಹ್ವನೆಂಬ ರಾಕ್ಷಸನನ್ನು ಕರೆದುಕೊಂಡು ಸೀತಾದೇವಿಯಿರುವೆಡೆಗೆ ಹೊರಟನು. ಹಾಗೆ ಹೊರಡುವಾಗ ಮಹಾ ಮಾಯಾವಿಯಾದ ಆ ರಾವಣನು ಅವನನ್ನು ಕುರಿತು "ಎಲೈ ವಿದ್ಯುಜ್ಜಿಹವನೇ ! ನಾವಿಬ್ಬರೂ ಮಾಯೆಯಿಂದ ಜಾನಕಿಯನ್ನು ಮೋಹಗೊಳಿಸೋಣ. ಎಲೈ ರಾಕ್ಷಸೋತ್ತಮನೇ ! ಈಗ ನೀನು ನಿನ್ನ

ರಾಘವಸ್ಯ ನಿಶಾಚರ! । ತ್ವಂ ಮಾಂ ಸಮುಪತಿಷ್ಠಸ್ವ ಮಹಚ್ಚ ಸಶರಂ ಧನುಃ ” ||೮|| ಏವಮುಕ್ತಸ್ತಥೇತ್ಯಾಹ ವಿದ್ಯುಜ್ಜಿಹ್ವೋ ನಿಶಾಚರಃ । ತಸ್ಯ ತುಷ್ಟೋಽಭವದ್ರಾಜಾ ಪ್ರದದೌಚ ವಿಭೂಷಣಂ || ೯ || ಅಶೋಕವನಿಕಾಯಾಂತು ಸೀತಾದರ್ಶನಲಾಲಸಃ । ನೈರ್ಋತಾನಾಮಧಿಪತಿ ಸ್ಸಂವಿವೇಶ ಮಹಾಬಲಃ || ೧೦ || ತತೋ ದೀನಾಮದೈನ್ಯಾರ್ಹಾಂ ದದರ್ಶ ಧನದಾನುಜಃ । ಅಧೋಮುಖೀಂ ಶೋಕಪರಾಮುಪವಿಷ್ಟಾಂ ಮಹೀತಲೇ || ೧೧ || ಭರ್ತಾರಮೇವ ಧ್ಯಾಯಂತೀ ಮಶೋಕವನಿಕಾಂ ಗತಾಂ । ಉಪಾಸ್ಯಮಾನಾಂ ಘೋರಾಭೀ ರಾಕ್ಷಸೀಭಿರಿತಸ್ತತಃ || ೧೨ || (ರಾಕ್ಷಸೀಭಿರ್ವೃತಾಂ

---

ಮಾಯಾವಿಕಾರವಾದ, ರಾಘವಸ್ಯ - ಶ್ರೀರಾಮನ, ಶಿರಃ - ಮಂಡೆಯನ್ನು, ಮಹತ್ - ದೊಡ್ಡದಾದ, ಸಶರಂ-ಬಾಣಗಳಿಂದೊಡಗೂಡಿದ, ಧನುಶ್ಚ-ಬಿಲ್ಲನ್ನೂ, ಗೃಹ್ಯ-ತೆಗೆದುಕೊಂಡು, ಮಾಂ-ನನ್ನನ್ನು ಕುರಿತು, ಸಮುಪತಿಷ್ಠಸ್ವ - ಹಿಂಬಾಲಿಸಿ ಬರುವವನಾಗು. ||೮|| ಏವಂ - ಈ ಪರಿಯಾಗಿ, ಉಕ್ತಃ-ಹೇಳಲ್ಪಟ್ಟ, ವಿದ್ಯುಜ್ಜಿಹ್ವಃ - ವಿದ್ಯುಜ್ಜಿಹ್ವನೆಂಬ, ನಿಶಾಚರಃ - ರಾಕ್ಷಸನು, ತಥೇತಿ - ಹಾಗೆಯೇ ಆಗಲೆಂದು, ಆಹ - ಹೇಳಿದನು, ತಸ್ಯ - ಆ ವಿದ್ಯುಜ್ಜಿಹ್ವನಿಗೆ, ರಾಜಾ - ಅರಸು, ತುಷ್ಟಃ - ಸಂತೋಷಗೊಂಡವನು, ಅಭವತ್ - ಆದನು, ವಿಭೂಷಣಂಚ - ಒಂದು ಒಡವೆಯನ್ನೂ, ಪ್ರದದೌ-ಕೊಟ್ಟನು. ||೯|| ಮಹಾಬಲಃ - ಬಹಳ ಬಲಶಾಲಿಯಾದ, ನೈರ್ಋತಾನಾಂ - ರಾಕ್ಷಸರಿಗೆ, ಅಧಿಪತಿಃ-ಒಡೆಯನಾದ ರಾವಣನು, ಸೀತಾ....ಸಃ - ಸೀತಾದೇವಿಯನ್ನು ನೋಡುವದರಲ್ಲಿಯೇ ಆಸಕ್ತನಾಗಿ, ಅಶೋ....ತು - ಅಶೋಕವನದಲ್ಲಾದರೆ, ಸಂವಿವೇಶ - ಪ್ರವೇಶ ಮಾಡಿದನು. ||೧೦|| ತತಃ - ಬಳಿಕ, ಧನದಾನುಜಃ - ರಾವಣನು, ದೀನಾಂ - ದೀನಳಾಗಿರುವ, ಅದೈನ್ಯಾರ್ಹಾಂ - ದೈನ್ಯಕ್ಕೆ ಅನರ್ಹಳಾದ, ಅಧೋಮುಖೀಂ - ತಲೆಬೊಗ್ಗಿಸಿಕೊಂಡಿರುವ, ಶೋಕಪರಾಂ - ವ್ಯಸನದಲ್ಲಿ ಆಸಕ್ತಳಾದ, ಮಹೀತಲೇ - ನೆಲದಲ್ಲಿ, ಉಪವಿಷ್ಟಾಂ - ಕುಳಿತುಕೊಂಡಿರುವ, ಭರ್ತಾರಮೇವ - ಗಂಡನನ್ನೇ, ಧ್ಯಾಯಂತೀಂ - ಧ್ಯಾನಿಸುತ್ತಿರುವ, ಅಶೋಕವನಿಕಾಂ - ಅಶೋಕವನವನ್ನು, ಗತಾಂ - ಹೊಂದಿ, ಇತಸ್ತತಃ - ಇಲ್ಲಿ ಅಲ್ಲಿ, ಘೋರಾಭಿಃ - ಭಯಂಕರರಾದ, ರಾಕ್ಷಸೀಭಿಃ - ರಕ್ಕಸರ ಹೆಂಗುಸರಿಂದ, ಉಪಾಸ್ಯಮಾನಾಂ - ಅನುಸರಿಸಲ್ಪಟ್ಟ, ಸೀತಾಂ - ಸೀತಾದೇವಿಯನ್ನು, ದದರ್ಶ - ಕಂಡನು.

---

ಮಾಯೆಯಿಂದ ರಾಮನ ಶಿರಸ್ಸನ್ನು ನಿರ್ಮಿಸಿ ಧನುರ್ಬಾಣಗಳೊಡನೆ ನನ್ನ ಹಿಂದೆ ಬರುವವನಾಗು ” ಎಂದು ಹೇಳಿದನು. ರಾವಣನಿಂತು ನುಡಿಯಲು ವಿದ್ಯುಜ್ಜಿಹ್ವನು, “ ಅಂತಯೇ ಆಗಲಿ ” ಎಂದನು. ಆಗ ತಾನುಹೇಳಿದುದಕ್ಕೆ ಸಮ್ಮತಿಸಿದ ವಿದ್ಯುಜ್ಜಿಹ್ವನಿಗೆ ಆ ರಾವಣನು ಬಹು ಸಂತೋಷದಿಂದ ಒಂದು ದಿವ್ಯಾಭರಣವನ್ನು ಪಾರಿತೋಷಿಕವಾಗಿ ತೆಗೆದುಕೊಟ್ಟನು. ಇದಾದ ಬಳಿಕ ಮಹಾಬಲನೂ, ರಾಕ್ಷಸಾಧಿಪತಿಯೂ ಆದ ಆ ರಾವಣಾಸುರನು ಸೀತಾದೇವಿಯನ್ನು ನೋಡಬೇಕೆಂಬ ಬಯಕೆಯುಳ್ಳವನಾಗಿ ಅಶೋಕವನವನ್ನು ಪ್ರವೇಶಿಸಿದನು. ||೬–೧೦|| ಅಲ್ಲಿಯಾದರೋ, ದೈನ್ಯವನ್ನು ಹೊಂದಲು ಅರ್ಹಳಲ್ಲದವಳಾಗಿಯೂ, ಮುಖವನ್ನು ತಗ್ಗಿಸಿಕೊಂಡು ದುಃಖಿಸುತ್ತಿರುವವಳಾಗಿಯೂ, ಭೂಮಿಯಲ್ಲಿ ಕುಳಿತಿರುವವಳಾಗಿಯೂ, ಭರ್ತನಾದ ಶ್ರೀರಾಮನನ್ನೇ ಸರ್ವಕಾಲಗಳಲ್ಲಿಯೂ ಸ್ಮರಿಸುತ್ತಿರುವಳಾಗಿಯೂ, ಆತನನ್ನೇ ಕುರಿತು ಧ್ಯಾನಿಸುತ್ತಿರುವಳಾಗಿಯೂ, ಆ ಅಶೋಕವನ ಮಧ್ಯದಲ್ಲಿ ಭಯಂಕರೆಯರಾದ ರಾಕ್ಷಸಿಯರಿಂದ ಸೇವಿತಳಾಗಿಯೂ ಇರುವ ಸೀತಾದೇವಿಯ ಬಳಿಗೆ ಕುಬೇರಾನುಜನಾದ ಆ

ಸೀತಾಂ ಪೂರ್ಣಚಂದ್ರನಿಭಾನನಾಂ । ಉತ್ಪಾತ ಮೇಘಜಾಲಾಭಿಶ್ಚಂದ್ರರೇಖಾಮಿವಾವೃತಾಂ ॥ ಭೂಷಣೈರುತ್ತಮೈಃ ಕೈಶ್ಚಿನ್ಮಂಗಳಾರ್ಥಮಲಂಕೃತಾಂ । ಚರಂತೀಂ ಮಾರುತೋದ್ಧೂತಾಂ ಕ್ಷಿಪ್ತಾಂ ಪುಷ್ಪಲತಾಮಿವ ॥ ಹರ್ಷಶೋಕಾಂತರೇ ಮಗ್ನಾಂ ವಿಷಾದಸ್ಯ ವಿಲಕ್ಷಣಾಂ । ಸ್ತಿಮಿತಾಮಿವ ಗಾಂಭೀರ್ಯಾನ್ನದೀಂ ಭಾಗೀರಥೀಮಿವ) ॥ ಉಪಸೃತ್ಯ ತತಸ್ಸೀತಾಂ ಪ್ರಹರ್ಷಂ ನಾಮ ಕೀರ್ತಯನ್ । ಇದಂಚ ವಚನಂ ಧೃಷ್ಟಮುವಾಚ ಜನಕಾತ್ಮಜಾಂ ॥ ೧೩ ॥ "ಸಾಂತ್ವ್ಯಮಾನಾ ಮಯಾ ಭದ್ರೇ! ಯಮುಪಾಶ್ರಿತ್ಯ ವಲ್ಗಸೇ । ಖರಹಂತಾ ಸತೇ ಭರ್ತಾ ರಾಘವಸ್ಸಮರೇ ಹತಃ ॥ ೧೪ ॥ ಛಿನ್ನಂ ತೇ ಸರ್ವತೋ ಮೂಲಂ ದರ್ಪಸ್ತೇ ನಿಹತೋ ಮಯಾ । ವ್ಯಸನೇನಾತ್ಮನಸ್ಸೀತೇ! ಮಮ ಭಾರ್ಯಾ ಭವಿಷ್ಯಸಿ ॥ ೧೫ ॥ ವಿಸೃಜೇಮಾಂ ಮತಿಂ ಮೂಢೇ!

॥ ೧೧-೧೨ ॥ ತತಃ - ಬಳಿಕ, ಸೀತಾಂ - ಸೀತಾದೇವಿಯನ್ನು ಕುರಿತು, ಉಪಸೃತ್ಯ - ಬಂದು, ಕೀರ್ತಯನ್-ಹೇಳಿದವನಾಗಿ, ಪ್ರಹರ್ಷಂನಾಮ - (ಗೋ) ಸಂತೋಷವಾರ್ತೆಯನ್ನಾದರೆ, ಕೀರ್ತಯನ್-ಹೇಳುತ್ತಿರುವನಾಗಿ, ಜನಕಾತ್ಮಜಾಂ - ಸೀತಾದೇವಿಯನ್ನು ಕುರಿತು, ಧೃಷ್ಟಂ - ಧೂರ್ತತೆಯಿಂದ ಕೂಡಿರುವ, ಇದಂವಚನಂ - ಈ ಮಾತನ್ನು, ಉವಾಚ - ಹೇಳಿದನು. ॥೧೩॥ ಹೇ ಭದ್ರೇ - ಎಲೌ ಶುಭಕರಳೇ, ಮಯಾ - ನನ್ನಿಂದ, ಸಾಂತ್ವ್ಯಮಾನಾ - ಸಮಾಧಾನಗೊಳಿಸಲ್ಪಟ್ಟವಳಾದರೂ, ಯಂ-ಯಾವ ಶ್ರೀರಾಮನನ್ನು, ಉಪಾಶ್ರಿತ್ಯ-ಆಶ್ರಯಿಸಿ, ವಲ್ಗಸೇ-ಕಠಿನೋಕ್ತಿಯನ್ನು ಹೇಳುತ್ತಿದ್ದೀಯೋ, ಸಃ - ಅಂತಹ, ಖರಹಂತಾ - ಖರಾಸುರನನ್ನು ಕೊಂದ, ತೇ - ನಿನ್ನ, ಭರ್ತಾ - ಗಂಡನಾದ, ರಾಘವಃ - ಶ್ರೀರಾಮನು, ಸಮರೇ - ಕಾಳಗದಲ್ಲಿ, ಹತಃ - ಹೊಡೆಯಲ್ಪಟ್ಟನು. ॥೧೪॥ ಹೇ ಸೀತೇ - ಎಲೌ ಸೀತಾದೇವಿಯೇ, ತೇ - ನಿನ್ನ, ಮೂಲಂ - ಆಧಾರಭೂತವಸ್ತುವು, ಸರ್ವಥಾ - ಸರ್ವಪ್ರಕಾರದಲ್ಲಿಯೂ, ಛಿನ್ನಂ - ಕತ್ತರಿಸಲ್ಪಟ್ಟಿತು, ತೇ - ನಿನ್ನ, ದರ್ಪಃ - ಗರ್ವವು, ಮಯಾ - ನನ್ನಿಂದ, ನಿಹತಃ - ಹೊಡೆಯಲ್ಪಟ್ಟಿತು, ಆತ್ಮನಃವ್ಯಸನೇನ - ಮನಶ್ಶೋಕದಿಂದ, ಮಮ - ನನಗೆ, ಭಾರ್ಯಾ-ಹೆಂಡತಿಯು, ಭವಿಷ್ಯಸಿ - ಆಗುವೆ. ॥೧೫॥ ಹೇ ಮೂಢೇ - ಎಲೌ ಮೂಢಳೇ, ಇಮಾಂಮತಿಂ - ಇಂತಹ ಬುದ್ಧಿಯನ್ನು, ವಿಸೃಜ್ಯ - ಬಿಡು, ಮೃತೇನ - ಮೃತನಾದವನಿಂದ, ಕಿಂಕರಿಷ್ಯಸಿ - ಏನು ಮಾಡುವೆ,

ರಾವಣಾಸುರನು ಹೋದನು. ಆಗಲಾತನು ತನ್ನ ಹೆಸರನ್ನು ಬಹು ಸಂತೋಷದಿಂದ ಹೊಗಳಿಕೊಂಡು ಆ ಸೀತಾದೇವಿಯನ್ನು ಕುರಿತು ಬಹಳ ಕಠಿನವಾದ ಮಾತುಗಳಿಂದ, "ಎಲೆ ಮಂಗಳಾಂಗಿ, ಸೀತೇ! ನಾನು ನಿನ್ನನ್ನು ಬಗೆಬಗೆಯಾಗಿ ಸಮಾಧಾನ ಮಾಡುತ್ತಿದ್ದೆನಲ್ಲವೆ? (ಆದರೂ ನೀನು ನನಗೊಲಿಯಲಿಲ್ಲವು). ಯಾರನ್ನು ಕುರಿತು ಭಯಗೊಂಡಿರುವೆ? ಇನ್ನು ನಿನಗೆ ಭಯವೆಲ್ಲಿಯದು? ಎಲ್ಲವೂ ನಿರಾತಂಕವಾಯಿತು. ಕೇಳು! ಖರಾಸುರನನ್ನು ಸಂಹರಿಸಿದವನೂ, ನಿನಗೆ ಭರ್ತನೂ ಆದ ಆ ರಾಮನು ಯುದ್ಧದಲ್ಲಿ ಹತನಾದನು. ಇಷ್ಟುಮಾತ್ರದಿಂದಲೇ ನಿನ್ನ ಮೂಲಬಲವೆಲ್ಲವೂ ಮುರಿದುಹೋಯಿತು. ಆದರಿಂದಲೇ ನಿನ್ನ ಗರ್ವವೆಲ್ಲವೂ ಉಡುಗಿಹೋಯಿತು. ಆದುದರಿಂದ ಇನ್ನು ನೀನು ನಿನ್ನ ವ್ಯಸನವೆಲ್ಲವನ್ನೂ ತೊರೆದು ನನಗೆ ಭಾರ್ಯೆಯಾಗು. ಎಲೌ ಮೂಢಳೇ! ಇನ್ನು ನೀನೀ ದುರ್ಬುದ್ಧಿಯನ್ನು ಬಿಟ್ಟುಬಿಡು. ಸತ್ತ ಗಂಡನನ್ನು ಕುರಿತು ಅತ್ತರೇನು ಉಪಯೋಗ? ಹಾಗೊಂದು ವೇಳೆ ಅತ್ತರೂ ನೀನೇನು ಮಾಡಬಲ್ಲೆ? ಏನೂ ಮಾಡಲಾರೆ! ಆದುದರಿಂದೆಲೌ ಮಂಗಳ

ಕಿಂ ಮೃತೇನ ಕರಿಷ್ಯಸಿ । ಭವಸ್ವ ಭದ್ರೇ! ಭಾರ್ಯಾಣಾಂ ಸರ್ವಾಸಾಮೀಶ್ವರೀ ಮಮ ॥ ೧೬ ॥ ಅಲ್ಪಪುಣ್ಯೇ! ನಿವೃತ್ತಾರ್ಥೇ ಮೂಢೇ! ಪಂಡಿತಮಾನಿನಿ! । ಶೃಣು ಭರ್ತೃವಧಂ ಸೀತೇ ಘೋರಂ ವೃತ್ರವಧಂ ಯಥಾ ॥ ೧೭ ॥ ಸಮಾಯಾತ ಸ್ಸಮುದ್ರಾಂತಂ ಮಾಂ ಹಂತುಂ ಕಿಲ ರಾಘವಃ? । ವಾನರೇಂದ್ರಪ್ರಣೀತೇನ ಬಲೇನ ಮಹತಾವೃತಃ ॥ ೧೮ ॥ ಸನ್ನಿವಿಷ್ಟಸ್ಸಮುದ್ರಸ್ಯ ಪೀಡ್ಯ ತೀರಮಥೋತ್ತರಂ । ಬಲೇನ ಮಹತಾ ರಾಮೋ ವ್ರಜತ್ಯಸ್ತಂ ದಿವಾಕರೇ ॥೧೯॥ ಅಥಾಽಧ್ವನಿ ಪರಿಶ್ರಾಂತಮರ್ಧ ರಾತ್ರೇ ಸ್ಥಿತಂ ಬಲಂ । ಸುಖಸಂಸುಪ್ತಮಾಸಾದ್ಯ ಚಾರಿತಂ ಪ್ರಥಮಂ ಚರೈಃ ॥೨೦॥

---

ಹೇ ಭದ್ರೇ - ಎಲೆ ಶುಭಕರಳೇ, ಮಮ - ನನ್ನ, ಸರ್ವಾಸಾಂ - ಸಮಸ್ತರಾದ, ಭಾರ್ಯಾಣಾಂ - ಹೆಂಡತಿಯರಿಗೆ, ಈಶ್ವರೀ - ರಾಣಿಯು, ಭವಸ್ವ - ಆಗು. ॥ ೧೬ ॥ ಹೇ ಅಲ್ಪಪುಣ್ಯೇ - ಎಲೌ ಪುಣ್ಯ ಹೀನಳೇ, ನಿವೃತ್ತಾರ್ಥೇ-ನಿವೃತ್ತವಾದ ಪುರುಷಾರ್ಥವುಳ್ಳವಳೇ, ಮೂಢೇ-ಮೂಢಳೇ, ಹೇ ಪಂಡಿತ ಮಾನಿನಿ - ನಾನೇ ಪಂಡಿತೆಯೆಂದು ತಿಳಿದುಕೊಂಡಿರುವವಳೇ, ಹೇ ಸೀತೇ - ಎಲೆ ಸೀತೇ, ಘೋರಂ - ಭಯಂಕರವಾದ, ವೃತ್ರವಧಂಯಥಾ - ವೃತ್ರಾಸುರನ ಸಂಹಾರವನ್ನಂತೆ, ಭರ್ತೃವಧಂ - ನಿನ್ನ ಗಂಡನ ಸಂಹಾರವನ್ನು, ಶೃಣು - ಕೇಳು. ॥೧೭॥ ವಾನ....ನ - ಕಪಿರಾಜನಾದ ಸುಗ್ರೀವನಿಂದ ತರಲಾದ, ಮಹತಾ - ದೊಡ್ಡದಾದ, ಬಲೇನ - ಸೈನ್ಯದಿಂದ, ವೃತಃ - ಸುತ್ತುವರೆಯಲ್ಪಟ್ಟ, ರಾಘವಃ - ಶ್ರೀರಾಮನು, ಮಾಂ-ನನ್ನನ್ನು, ಹಂತುಂ-ಹೊಡೆಯಲು, ಸಮುದ್ರಾಂತಂ - ಕಡಲಿನ ಸಾಮೀಪ್ಯಕ್ಕೆ, ಸಮಾಯಾತಃಕಿಲ - ಬಂದನಷ್ಟೆ. ॥೧೮॥ ಸಮುದ್ರಸ್ಯ - ಸಮುದ್ರದ, ಉತ್ತರಂತೀರಂ - ಉತ್ತರತೀರ ವನ್ನು, ಪೀಡ್ಯ-ಆಕ್ರಮಿಸಿ, ಮಹತಾ - ಮಹತ್ತರವಾದ, ಬಲೇನ - ಸೈನ್ಯದಿಂದ, ರಾಮಃ-ಶ್ರೀರಾಮನು, ದಿವಾಕರೇ - ಸೂರ್ಯನು, ಅಸ್ತಂವ್ರಜತಿ-ಅಸ್ತಪರ್ವತವನ್ನುಹೊಂದಲು, ಸನ್ನಿವಿಷ್ಟಃ - ವಾಸಮಾಡಿ ದನು. ॥ ೧೯ ॥ ಅಥ - ಬಳಿಕ, ಅಧ್ವನಿ - ಮಾರ್ಗದಲ್ಲಿ, ಪರಿಶ್ರಾಂತಂ - ಶ್ರಮೆಗೊಂಡಿರುವುದಾಗಿ, ಸ್ಥಿತಂ-ಇರುವ, ಬಲಂ-ಸೈನ್ಯವನ್ನು, ಅರ್ಧರಾತ್ರೇ - ಅರ್ಧರಾತ್ರಿಯ ಸಮಯದಲ್ಲಿ, ಸುಖಂಸುಪ್ತಂ - ಸುಖವಾಗಿ ಮಲಗಿದ್ದ ಆ ಸೇನೆಯನ್ನು, ಆಸಾದ್ಯ - ತಿಳಿದು, ಚಾರೈಃ - ಗೂಢಚಾರರಿಂದ, ಚಾರಿತಂ - ಸಂಚಾರಮಾಡಲ್ಪಟ್ಟುದು, ಅಭೂತ್ - ಆಯಿತು. ॥೨೦॥ ಯತ್ರ - ಯಾವ ಸೈನ್ಯದಲ್ಲಿ, ಸಲಕ್ಷ್ಮಣಃ-

---

ಕರಳೇ! ಈಗ ನೀನು ನನಗೆ ಭಾರ್ಯೆಯಾಗಿ ನನ್ನ ಭಾರ್ಯೆಯರೆಲ್ಲರಿಗೂ ಒಡತಿಯಾಗು. ॥೧೧–೧೬॥ ಎಲೆ ಸೀತೇ! ಸ್ವಲ್ಪಪುಣ್ಯವುಳ್ಳವಳೂ, ಪುರುಷಾರ್ಥಹೀನೆಯಾದವಳೂ, ಮೂಢಳೂ, ಪಂಡಿತೆಯೆಂಬ ಅಭಿಮಾನವುಳ್ಳವಳೂ ಆದವಳೇ! ಕೇಳು. ಭಯಂಕರವಾದ ವೃತ್ರವಧೆಯಂತೆ ನಿನ್ನ ಗಂಡನ ವಧೆಯ ವೃತ್ತಾಂತವನ್ನು ಕೇಳು. ರಘುಕುಲೋದ್ಭವನಾದ ಆ ರಾಮನು ನನ್ನನ್ನು ಕೊಲ್ಲಲು ವಾನರೇಂದ್ರನಾದ ಸುಗ್ರೀವನಿಂದ ಕಳುಹಲಾದ ವಾನರಸೈನ್ಯದೊಡಗೂಡಿ ಸಮುದ್ರದ ಬಳಿಗೆ ಬಂದನು. ಹಾಗೆ ಬಂದು ಸಮುದ್ರದ ಉತ್ತರತೀರವನ್ನು ಪೀಡಿಸುತ್ತಿದ್ದನು. ಸೂರ್ಯಾಸ್ತಮಯದವರೆಗೂ ಅವನು ಬಹು ದೊಡ್ಡದಾದ ವಾನರಸೈನ್ಯದೊಡಗೂಡಿಯೇ ಇದ್ದನು. ಆಮೇಲೆ ಸಸೈನ್ಯನಾದ ಅವನಿಗೆ ಮಾರ್ಗಾಯಸದಿಂದ ನಿದ್ರೆ ಬಂದಿತು; ಆ ಸಮುದ್ರತೀರದಲ್ಲಿಯೇ ನಿದ್ರಿಸಿದನು. ಹಾಗೆ ಸುಖವಾಗಿ ನಿದ್ರಿಸುತ್ತಿರುವ ಆ ವಾನರ ಸೇನೆಯ ವೃತ್ತಾಂತವನ್ನು ತಿಳಿಯುವುದಕ್ಕಾಗಿ ನಾನು ನನ್ನ ಚಾರರನ್ನು ಕಳುಹಿಸಿದ್ದೆನು. ಅವರೆಲ್ಲರೂ ಎಲ್ಲವನ್ನು ಬಂದು ತಿಳಿಸಿದರು. ॥ ೧೭–೨೦ ॥ ಆಗಲೇ ಪ್ರಹಸ್ತನು ಸೇನೆ

ತತ್ ಪ್ರಹಸ್ತಪ್ರಣೀತೇನ ಬಲೇನ ಮಹತಾ ಮಮ । ಬಲಮಸ್ಯ ಹತಂ ರಾತ್ರೌ ಯತ್ರ ರಾಮಸ್ಸಲಕ್ಷ್ಮಣಃ ॥ ೨೧ ॥ ಪಟ್ಟಿಶಾನ್ ಪರಿಘಾಂಶ್ಚಕ್ರಾನ್ ದಂಡಾನ್ ಖಡ್ಗಾನ್ ಮಹಾಯಸಾನ್ । ಬಾಣಜಾಲಾನಿ ಶೂಲಾನಿ ಭಾಸ್ವರಾನ್ ಕೂಟಮುದ್ಗರಾನ್ ॥ ೨೨ ॥ ಯಷ್ಟೀಶ್ಚ ತೋಮರಾನ್ ಶಕ್ತೀಶ್ಚಕ್ರಾಣಿ ಮುಸಲಾನಿಚ । ಉದ್ಯಮ್ಯೋದ್ಯಮ್ಯ ರಕ್ಷೋಭಿರ್ವಾನರೇಷು ನಿಪಾತಿತಾಃ ॥ ೨೩ ॥ ಅಥ ಸುಪ್ತಸ್ಯ ರಾಮಸ್ಯ ಪ್ರಹಸ್ತೇನ ಪ್ರಮಾಥಿನಾ । ಅಸಕ್ತಂ ಕೃತಹಸ್ತೇನ ಶಿರಶ್ಛಿನ್ನಂ ಮಹಾಸಿನಾ ॥ ೨೪ ॥ ವಿಭೀಷಣಸ್ಸಮುತ್ಪತ್ಯ ನಿಗೃಹೀತೋ ಯದೃಚ್ಛಯಾ । ದಿಶಃ ಪ್ರವ್ರಾಜಿತಸ್ಸರ್ವೈರ್ಲಕ್ಷ್ಮಣಃ

ಲಕ್ಷ್ಮಣನಿಂದೊಡಗೂಡಿದ, ರಾಮಃ - ಶ್ರೀರಾಮನು, ಯತ್ರ - ಯಾವ ಸೈನ್ಯದಲ್ಲಿ, ಅಸ್ತಿ - ಇದ್ದಾನೆಯೋ, ಅಸ್ಯ - ಈ ಶ್ರೀರಾಮನ, ತದ್ಬಲಂ - ಆ ಕಪಿಸೈನ್ಯವು, ರಾತ್ರೌ - ರಾತ್ರಿಯ ವೇಳೆಯಲ್ಲಿ, ಪ್ರಹಸ್ತಪ್ರಣೀತೇನ - ಪ್ರಹಸ್ತನಿಂದ ಕಳುಹಲ್ಪಟ್ಟ, ಮಹತಾ - ಬಹಳವಾದ, ಮಮ - ನನ್ನ, ಬಲೇನ - ಸೈನ್ಯದಿಂದ, ಹತಂ - ಸಂಹಾರ ಮಾಡಲ್ಪಟ್ಟಿತು. ॥ ೨೧ ॥ ರಕ್ಷೋಭಿಃ - ರಕ್ಕಸನಿಂದ, ಪಟ್ಟಿಶಾನ್ - ದೊಡ್ಡ ಪಟ್ಟಾಕತ್ತಿಗಳನ್ನೂ, ಪರಿಘಾನ್ - ಗದಾಯುಧಗಳನ್ನೂ, ಚಕ್ರಾನ್ - ಚಕ್ರಾಯುಧಗಳನ್ನೂ, ಮಹಾಯಸಾನ್ - ಕಬ್ಬಿಣದ ವಿಕಾರವಾದ, ದಂಡಾನ್ - ದೊಣ್ಣೆಗಳನ್ನೂ, ಖಡ್ಗಾನ್ - ಸಣ್ಣ ಕತ್ತಿಗಳನ್ನೂ, ಬಾಣಜಾಲಾನಿ - ಬಾಣಗಳ ತಂಡಗಳನ್ನೂ, ಶೂಲಾನಿ - ಭಲ್ಲಾಯುಧಗಳನ್ನೂ, ಭಾಸ್ವರಾನ್ - ಹೊಳೆಯುತ್ತಿರುವ, ಕೂಟಮುದ್ಗರಾನ್ - ಕಬ್ಬಿಣದ ಕೊಂಕಿಗಳುಳ್ಳ ಕೊಡತಿಗಳನ್ನೂ, ಯಷ್ಟೀಶ್ಚ - ದೊಣ್ಣೆಗಳನ್ನೂ, ತೋಮರಾನ್ - ತೋಮರಾಯುಧಗಳನ್ನು, ಶಕ್ತೀಶ್ಚ - ಶಕ್ತ್ಯಾಯುಧಗಳನ್ನು, ಚಕ್ರಾಣಿ-ದೊಡ್ಡ ಚಕ್ರಗಳನ್ನು, ಮುಸಲಾನಿಚ-ಒನಕೆಗಳನ್ನೂ, ಉದ್ಯಮ್ಯೋದ್ಯಮ್ಯ-ಎತ್ತಿ ಎತ್ತಿ, ವಾನರೇಷು - ಕಪಿಗಳಲ್ಲಿ, ನಿಪಾತಿತಾಃ - ಬೀಳಿಸಲ್ಪಟ್ಟವು. ॥೨೨-೨೩॥ ಅಥ - ಬಳಿಕ, ಸುಪ್ತಸ್ಯ - ನಿದ್ದೆ ಹೋಗುತ್ತಿರುವ, ರಾಮಸ್ಯ - ಶ್ರೀರಾಮನ, ಶಿರಃ - ಮಂಡೆಯು, ಪ್ರಮಾಥಿನಾ - ಶೂರನಾದ, ಪ್ರಹಸ್ತೇನ - ಪ್ರಹಸ್ತನಿಂದ, ಕೃತಹಸ್ತೇನ - ಕೈಯಿಂದ ಹಿಡಿದುಕೊಳ್ಳಲ್ಪಟ್ಟ, ಮಹಾಸಿನಾ - ದೊಡ್ಡ ಕತ್ತಿಯಿಂದ, ಅಸಕ್ತಂ - ಶೀಘ್ರವಾಗಿ, ಛಿನ್ನಂ - ಕತ್ತರಿಸಲ್ಪಟ್ಟಿತು. ॥ ೨೪ ॥ ಸಮುತ್ಪತ್ಯ - ಹಾರಿ, ಯದೃಚ್ಛಯಾ - ಸ್ವೇಚ್ಛೆಯಿಂದ, ವಿಭೀಷಣಃ - ವಿಭೀಷಣನು ನಿಗೃಹೀತಃ - ಹಿಡಿದುಕೊಳ್ಳಲ್ಪಟ್ಟನು, ಲಕ್ಷ್ಮಣಃ - ಲಕ್ಷ್ಮಣನು, ಸರ್ವೈಃ - ಸಮಸ್ತರಾದ, ಪ್ಲವಗೈಸ್ಸಹ - ವಾನರರೊಡನೆ, ದಿಶಃ - ದಿಕ್ಕುಗಳನ್ನು ಕುರಿತು, ಪ್ರವ್ರಾಜಿತಃ - ಓಡಿಸಲ್ಪಟ್ಟನು. ॥ ೨೫ ॥ ಹೇ ಸೀತೇ-

ಯನ್ನು ಕಳುಹಿಸಿದನು. ಆ ರಾತ್ರಿಯಲ್ಲಿಯೇ ಆ ಸೇನೆಯು ಆ ರಾಮಲಕ್ಷ್ಮಣರಿರುವ ಸ್ಥಳಕ್ಕೆ ಹೋಯಿತು. ಆ ರಾಕ್ಷಸರೆಲ್ಲರೂ ಪಟ್ಟಿಶಗಳು, ಪರಿಘಗಳು, ಚಕ್ರಗಳು, ಶೂಲಗಳು, ಬಹಳವಾಗಿ ಪ್ರಕಾಶಿಸುತ್ತಿರುವ ಕೂಟಗಳು, ಮುದ್ಗರಗಳು, ಯಷ್ಟಿಗಳು, ತೋಮರಗಳು, ಕತ್ತಿಗಳು, ಮುಸಲಗಳು, ಇವೇ ಮೊದಲಾದ ಆಯುಧಗಳನ್ನೆತ್ತಿ ಆ ವಾನರರಮೇಲೆ ಪ್ರಯೋಗಿಸಿದರು. ಆಮೇಲೆ ಮಹಾ ಬಲಿಷ್ಠನೂ, ಯುದ್ಧಗಳಲ್ಲಿ ಮಹಾ ಸಮರ್ಥನೂ ಆದ ಪ್ರಹಸ್ತನು ದೊಡ್ಡ ಕತ್ತಿಯೊಂದನ್ನೆತ್ತಿ ನಿದ್ರಿಸುತ್ತಿದ್ದ ರಾಮನ ಶಿರಸ್ಸನ್ನು ಖಂಡಿಸಿಬಿಟ್ಟನು. ಅದೇ ಸಮಯದಲ್ಲಿ ವಿಭೀಷಣನೂ ನಿಗ್ರಹಿಸಲ್ಪಟ್ಟನು. ಅಷ್ಟರಲ್ಲಿ ಲಕ್ಷ್ಮಣನು ಪರಮ ಭೀತನಾಗಿ ವಾನರರೊಡಗೂಡಿ ಓಡಿಹೋದನು. ಎಲೌ ಸೀತೇ! ವಾನರಾಧಿಪತಿಯಾದ ಸುಗ್ರೀವನ ಶಿರಸ್ಸು ಭಗ್ನವಾಗಿ ಹೋಯಿತು. ನಮ್ಮ ರಾಕ್ಷಸವೀರರು ಆ ಹನುಮಂತನ

**ಪ್ಲವಗೈಸ್ಸಹ ॥ ೨೫ ॥ ಸುಗ್ರೀವೋ ಗ್ರೀವಯಾ ಸೀತೇ! ಭಗ್ನಯಾ ಪ್ಲವಗಾಧಿಪಃ । ನಿರಸ್ತಹನುಕಃ ಶೇತೇ ಹನುಮಾನ್ ರಾಕ್ಷಸೈರ್ಹತಃ ॥ ೨೬ ॥ ಜಾಂಬವಾನಥ ಜಾನುಭ್ಯಾಮುತ್ಪತನ್ನಿಹತೋ ಯುಧಿ । ಪಟ್ಟಿಶೈರ್ಬಹುಭಿಶ್ಛಿನ್ನೋ ನಿಕೃತ್ತಃ ಪಾದಪೋ ಯಥಾ ॥ ೨೭ ॥ ಮೈಂದಶ್ಚ ದ್ವಿವಿದಶ್ಚೋಭೌ ನಿಹತೌ ವಾನರರ್ಷಭೌ । ನಿಶ್ವಸಂತೌ ರುದಂತೌ ಚ ರುಧಿರೇಣ ಪರಿಪ್ಲುತೌ ॥ ೨೮ ॥ ಅಸಿನಾ ವ್ಯಾಯುತೌ ಛಿನ್ನೌ ಮಧ್ಯೇ ಹ್ಯರಿನಿಷೂದನೌ । ಅನುತಿಷ್ಠತಿ ಮೇದಿನ್ಯಾಂ ಪನಸಃ ಪನಸೋ ಯಥಾ ॥ ೨೯ ॥ ನಾರಾಚೈರ್ಬಹುಭಿಶ್ಛಿನ್ನಶ್ಶೇತೇ ದರ್ಯಾಂ ದರೀಮುಖಃ । ಕುಮುದಸ್ತು ಮಹಾತೇಜಾ ನಿಷ್ಕೂಜಸ್ಸಾಯಕೈಃ ಕೃತಃ ॥ ೩೦ ॥ ಅಂಗದೋ ಬಹುಭಿಶ್ಛಿನ್ನಃ ಶರೈರಾಸಾದ್ಯ**

---

ಎಲೌ ಸೀತಾದೇವಿಯೇ, ಪ್ಲವಗಾಧಿಪಃ-ವಾನರಾಧಿಪತಿಯಾದ, ಸುಗ್ರೀವಃ-ಸುಗ್ರೀವನು, ಭಗ್ನಯಾ-ಮುರಿದ, ಗ್ರೀವಯಾ - ಕೊರಳಿನಿಂದ, ಯುಕ್ತಃ - ಕೂಡಿದವನಾದನು, ರಾಕ್ಷಸೈಃ - ರಕ್ಕಸರಿಂದ, ಹನುಮಾನ್ - ಆಂಜನೇಯನು, ನಿರಸ್ತಹನುಕಃ - ಹೋಗಲಾಡಿಸಲ್ಪಟ್ಟ ಕೆನ್ನೆಗಳುಳ್ಳವನಾಗಿ, ಹತಃ - ಹೊಡೆಯಲ್ಪಟ್ಟವನಾಗಿ, ಶೇತೇ - ಮಲಗಿದನು ॥ ೨೬ ॥ ಅಥ - ಬಳಿಕ, ಜಾಂಬವಾನ್ - ಜಾಂಬವಂತನು, ಜಾನುಭ್ಯಾಂ - ಮೊಣಕಾಲುಗಳಿಂದ, ಉತ್ಪತನ್ - ಹಾರಿದವನಾಗಿ, ಯುಧಿ - ಕಾಳಗದಲ್ಲಿ, ಬಹುಭಿಃ - ಅನೇಕಗಳಾದ, ಪಟ್ಟಿಶೈಃ - ಪಟ್ಟಾಕತ್ತಿಗಳಿಂದ, ನಿಕೃತ್ತಃ - ಕತ್ತರಿಸಲ್ಪಟ್ಟ, ಪಾದಪೋ ಯಥಾ - ಮರದಂತೆ, ಯುಧಿ - ಕಾಳಗದಲ್ಲಿ, ಛಿನ್ನಃ - ಕತ್ತರಿಸಲ್ಪಟ್ಟವನಾಗಿ, ನಿಹತಃ - ಹತನಾದನು. ॥ ೨೭ ॥ ಮೈಂದಶ್ಚ - ಮೈಂದನು, ದ್ವಿವಿದಶ್ಚ - ದ್ವಿವಿದನೂ ಎಂಬ, ಉಭೌ - ಈರ್ವರಾದ, ವಾನರರ್ಷಭೌ - ವಾನರಶ್ರೇಷ್ಠರು, ಅರಿನಿಷೂದನಾವಪಿ - ಶತ್ರುಸಂಹಾರಕರಾದರೂ, ವ್ಯಾಯತೌ - ದೀರ್ಘಶರೀರವುಳ್ಳವರಾಗಿ, ನಿಹತೌ - ಹೊಡೆಯಲ್ಪಟ್ಟು, ಮಧ್ಯೇ - ರಣರಂಗಮಧ್ಯದಲ್ಲಿ, ಅಸಿನಾ - ಕತ್ತಿಯಿಂದ, ಛಿನ್ನೌ - ಛೇದಿಸಲ್ಪಟ್ಟವರಾಗಿ, ರುಧಿರೇಣ - ರಕ್ತದಿಂದ, ಪರಿಪ್ಲುತೌ - ತೋಯ್ದು, ನಿಶ್ವಸಂತೌ - ನಿಟ್ಟುಸಿರನ್ನು ಬಿಡುತ್ತ, ನಿಹತೌ - ಹೊಡೆಯಲ್ಪಟ್ಟರು. ॥ ೨೮ ॥ ಪನಸಃ - ಪನಸನೆಂಬ ಕಪಿಯು, ಪನಸೋಯಥಾ - ಹಲಸಿನ ಮರದಂತೆ, ಮೇದಿನ್ಯಾಂ - ನೆಲದಲ್ಲಿ, ಅನುತಿಷ್ಠತಿ - ಇರುತ್ತಾನೆ, ದರೀಮುಖಃ - ದರೀಮುಖನು, ಬಹುಭಿಃ - ಅನೇಕಗಳಾದ, ನಾರಾಚೈಃ - ಬಾಣವಿಶೇಷಗಳಿಂದ, ಛಿನ್ನಃ - ಕತ್ತರಿಸಲ್ಪಟ್ಟವನಾಗಿ, ದರ್ಯಾಂ - ಗುಹೆಯಲ್ಲಿ, ಶೇತೇ - ಮಲಗಿದ್ದಾನೆ. ॥ ೨೯ ॥ ಮಹಾತೇಜಾಃ - ಬಹಳ ತೇಜೋವಂತನಾದ, ಕುಮುದಸ್ತು - ಕುಮುದನಾದರೆ, ಸಾಯಕೈಃ - ಬಾಣಗಳಿಂದ, ನಿಷ್ಕೂಜಃ - ಧ್ವನಿಯಿಲ್ಲದವನಾಗಿ, ಕೃತಃ - ಮಾಡಲ್ಪಟ್ಟನು. ॥ ೩೦ ॥ ಅಂಗದಃ-ಅಂಗದನು, ರಾಕ್ಷಸೈಃ-ರಕ್ಕಸರಿಂದ, ಬಹುಭಿಃ-ಅನೇಕಗಳಾದ,

---

ದವಡೆಗಳನ್ನು ಸೀಳಿ ಕೊಂದುಹಾಕಿದರು. ಮೊಣಕಾಲುಗಳಿಂದ ಹಾರುತ್ತಿದ್ದ ಜಾಂಬವಂತನು ಪಟ್ಟಿಶಾಯುಧಗಳಿಂದ ಮಹಾ ವೃಕ್ಷದಂತೆ ಕತ್ತರಿಸಲ್ಪಟ್ಟನು. ಮೈಂದ ದ್ವಿವಿದರು ಸಂಹೃತರಾದರು. ಅವರಿಬ್ಬರೂ ನಿಟ್ಟುಸಿರುಗಳನ್ನು ಬಿಡುತ್ತ, ಗೊಳಗೊಳನೆ ರೋದನ ಮಾಡುತ್ತ, ರಕ್ತವನ್ನು ಕಾರುತ್ತ ಕೆಳಕ್ಕುರುಳಿದರು. ॥೨೧–೨೮॥ ಎಲೆ ಸೀತೆ! ಪನಸನೆಂಬ ವಾನರನು ಪನಸವೃಕ್ಷದಂತೆ ಭೂಮಿಗೆ ಬಿದ್ದನು. ದರೀಮುಖನು ನಾನಾವಿಧಗಳಾದ ಭಾಣಗಳಿಂದ ಭೇದಿಸಲ್ಪಟ್ಟವನಾಗಿ ನೆಲದಲ್ಲಿ ಬಿದ್ದನು. ಮಹಾ ತೇಜಸ್ವಿಯಾದ ಕುಮುದನು ಬಾಣಗಳಿಂದ ಸದ್ದಡಗಿಸಲ್ಪಟ್ಟನು. ಇಷ್ಟೆಯಲ್ಲದೆ ನನ್ನ ಕಡೆಯ ಅನೇಕಮಂದಿ ರಾಕ್ಷಸರು

ರಾಕ್ಷಸೈಃ । ಪತಿತೋ ರುಧಿರೋದ್ಗಾರೀ ಕ್ಷಿತೌ ನಿಪತಿತಾಂಗದಃ ॥ ೩೧ ॥ ಹರಯೋ ಮಥಿತಾ ನಾಗೈ ರಥ ಜಾತೈಸ್ತಥಾಪರೇ । ಶಾಯಿತಾ ಮೃದಿತಾಶ್ಚಾಶ್ವೈ ರ್ವಾಯುವೇಗೈ ರಿವಾಂಬುದಾಃ ॥ ೩೨ ॥ ಪ್ರಹೃತಾಶ್ಚಾಪರೇ ತ್ರಸ್ತಾ ಹನ್ಯಮಾನಾ ಜಘನ್ಯತಃ । ಅಭಿದ್ರುತಾಸ್ತು ರಕ್ಷೋಭಿ ಸ್ಸಿಂಹೈರಿವ ಮಹಾದ್ವಿಪಾಃ ॥ ೩೩ ॥ ಸಾಗರೇ ಪತಿತಾಃ ಕೇಚಿ ತ್ಕೇಚಿದ್ಗಗನಮಾಶ್ರಿತಾಃ । ಋಕ್ಷೋ ವೃಕ್ಷಾನುಪಾರೂಢಾ ವಾನರೀಂ ವೃತ್ತಿಮಾಶ್ರಿತಾಃ ॥ ೩೪ ॥ ಸಾಗರಸ್ಯ ಚ ತೀರೇಷು ಶೈಲೇಷು ಚ ವನೇಷುಚ । ಪಿಂಗಳಾಸ್ತೇ ವಿರೂಪಾಕ್ಷೈರ್ಬಹುಬಿರ್ಭಹವೋ ಹತಾಃ ॥ ೩೫ ॥ ಏವಂ ತವ ಹತೋ ಭರ್ತಾ

---

ಶರೈಃ - ಬಾಣಗಳಂದ, ಛಿನ್ನಃ - ಕತ್ತರಿಸಲ್ಪಟ್ಟವನಾಗಿ, ಆಸಾದ್ಯ - ಬಂದು, ಕ್ಷಿತೌ - ನೆಲದಲ್ಲಿ, ನಿಪತಿತಾಂಗದಃ - ಬೀಳಿಸಲ್ಪಟ್ಟ ಬಾಹುಪುರಿಗಳುಳ್ಳವನಾಗಿ, ರುಧಿರೋದ್ಗಾರೀ - ರಕ್ತವನ್ನು ಸುರಿಸುತ್ತಲಿರುವವನಾಗಿ, ಪತಿತಃ - ಬಿದ್ದನು. ॥೩೧॥ ಅಥ - ಬಳಿಕ, ಅಪರೇಹರಯಃ - ಮತ್ತೆ ಕೆಲವಾನರರು, ನಾಗೈಃ - ಆನೆಗಳಿಂದಲೂ, ರಥಜಾತೈಃ - ತೇರುಗಳ ತಂಡಗಳಿಂದಲೂ, ಮಥಿತಾಃ - ತುಳಿಯಲ್ಪಟ್ಟವರಾಗಿ, ವಾಯುವೇಗೈಃ - ಗಾಳಿಯ ವೇಗಗಳಿಂದ, ಅಂಬುದಾಇವ - ಮೇಘಗಳಂತೆ, ಅಶ್ವೈಶ್ಚ - ಕುದುರೆಗಳಿಂದಲೂ, ಮೃದಿತಾಃ - ತುಳಿಯಲ್ಪಟ್ಟವರಾಗಿ, ಶಾಯಿತಾಃ - ಮಲಗಿಸಲ್ಪಟ್ಟರು. ॥ ೩೨ ॥ ರಕ್ಷೋಭಿಃ - ರಾಕ್ಷಸರಿಂದ, ಸಿಂಹೈಃ - ಸಿಂಹಗಳಿಂದ, ಮಹಾದ್ವಿಪಾಇವ - ದೊಡ್ಡ ಆನೆಗಳಂತೆ, ಜಘನ್ಯತಃ - ಹಿಂದುಗಡೆ, ಅಭಿದ್ರುತಾಃ - ಅಟ್ಟಲ್ಪಟ್ಟವರಾಗಿ, ಹನ್ಯಮಾನಾಃ - ಹೊಡೆಯಲ್ಪಡುತ್ತಿರುವವರಾಗಿಯೂ, ತ್ರಸ್ತಾಃ - ಭಯಗೊಂಡವರಾಗಿ, ಅಪರೇ - ಮತ್ತೆ ಕೆಲವಾನರರು, ಪ್ರಹೃತಾಃ - ಸಂಹರಿಸಲ್ಪಟ್ಟವರು. ॥೩೩॥ ಕೇಚಿತ್ - ಕೆಲವಾನರರು, ಸಾಗರೇ - ಕಡಲಿನಲ್ಲಿ, ಪತಿತಾಃ - ಬಿದ್ದರು, ಕೇಚಿತ್ - ಕೆಲವರು, ಗಗನಂ - ಅಂತರಿಕ್ಷವನ್ನು, ಆಶ್ರಿತಾಃ - ಹೊಂದಿದರು, ಋಕ್ಷಾಃ - ಕರಡಿಗಳು, ವಾನರೀಂ - ಕಪಿಗಳ, ವೃತ್ತಿಂ - ವೃತ್ತಿಯನ್ನು, ಆಶ್ರಿತಾಃ - ಆಶ್ರಯಿಸಿ, ವೃಕ್ಷಾನ್ - ಗಿಡಗಳನ್ನು, ಉಪಾರೂಢಾಃ - ಏರಿದರು. ॥೩೪॥ ವಿರೂಪಾಕ್ಷೈಃ - ವಕ್ರವಾದ ನೇತ್ರಗಳುಳ್ಳ, ಬಹುಭಿಃ - ಅನೇಕ ರಕ್ಕಸರಿಂದ, ಸಾಗರಸ್ಯ - ಸಮುದ್ರದ, ತೀರೇಷು - ದಡಗಳಲ್ಲಿ, ಶೈಲೇಷುಚ - ಬೆಟ್ಟಗಳಲ್ಲಿಯೂ, ವನೇಷುಚ - ಅರಣ್ಯಗಳಲ್ಲಿಯೂ, ಬಹವಃ - ಅನೇಕರಾದ, ತೇಪಿಂಗಳಾಃ - ಆ ವಾನರರು, ಹತಾಃ - ಸಂಹರಿಸಲ್ಪಟ್ಟರು. ॥೩೫॥ ಏವಂ - ಈ ಪರಿಯಾಗಿ, ತವ - ನಿನ್ನ, ಭರ್ತಾ - ಗಂಡನು, ಸಸೈನ್ಯಃ- ಬಲಸಹಿತನಾಗಿ, ಮಮ-ನನ್ನ, ಸೇನಯಾ-ಸೈನ್ಯದಿಂದ, ಹತಃ-ಹೊಡೆಯಲ್ಪಟ್ಟನು, ಕ್ಷತಜಾರ್ದ್ರಂ-

---

ನಾನಾವಿಧಗಳಾದ ಬಾಣಗಳಿಂದ ಅಂಗದನನ್ನು ಭೇದಿಸಿಬಿಟ್ಟರು. ಅಗಲಾ ಅಂಗದನು ರಕ್ತವನ್ನು ಕಾರುತ್ತ ಕೆಳಕ್ಕೆ ಬಿದ್ದನು. ಹಾಗೆಯೇ ಇತರ ವಾನರರೂ ವಿಧವಿಧಗಳಾದ ಗಜಗಳಿಂದಲೂ, ರಥಸಮುದಾಯಗಳಿಂದಲೂ ಮಥಿಸಲ್ಪಟ್ಟರು. ಕೆಲವರು ವಾನರರು ವಾಯುವೇಗವುಳ್ಳ ಅಶ್ವಗಳಿಂದ ತುಳಿಯಲ್ಪಟ್ಟರು. ಕೆಲವರು ಹಿಂದಟ್ಟಿಸಿಕೊಂಡು ಹೋಗಿ ಚೆನ್ನಾಗಿ ಪ್ರಹೃತರಾದರು. ಕೆಲವರನ್ನು ನಮ್ಮ ರಾಕ್ಷಸರು ಸಿಂಹಗಳು ಆನೆಗಳನ್ನೆಂತೋ ಅಂತೆ ಅಟ್ಟಿಕೊಂಡು ಹೋದರು. ಆಗ ಕೆಲವರು ಸಮುದ್ರದಲ್ಲಿ ಬಿದ್ದರು. ಕೆಲವರು ಅಂತರಿಕ್ಷವನ್ನು ಸೇರಿದರು. ಕರಡಿಗಳೆಲ್ಲವೂ ಕಪಿವೃತ್ತಿಯನ್ನಾಶ್ರಯಿಸಿ ಮರಗಳನ್ನೇರಿದುವು. ॥ ೨೯—೩೪ ॥ ಇಷ್ಟುಮಾತ್ರವಲ್ಲದೆ ಮರಗಳನ್ನು ಹತ್ತಿದವರೂ, ನಾನಾವಿಧವಾಗಿ ರಾಕ್ಷಸರಿಂದ ಸಮುದ್ರತೀರದಲ್ಲಿಯೂ, ಪರ್ವತಗಳಲ್ಲಿಯೂ, ವನಗಳಲ್ಲಿಯೂ ಚಿತ್ರವಿಚಿತ್ರವಾಗಿ ವಧಿಸಲ್ಪಟ್ಟರು.

ಸಸೈನ್ಯೋ ಮಮ ಸೇನಯಾ । ಕ್ಷತಜಾರ್ದ್ರಂ ರಜೋಧ್ವಸ್ತಮಿದಂ ಚಾಽಸ್ಯಾಹೃತಂ ಶಿರಃ" ॥ ೩೬ ॥ ತತಃ ಪರಮದುರ್ಧರ್ಷೋ ರಾವಣೋ ರಾಕ್ಷಸಾಧಿಪಃ । ಸೀತಾಯಾ ಮುಪಶೃಣ್ವಂತ್ಯಾಂ ರಾಕ್ಷಸೀ ಮಿದಮಬ್ರವೀತ್ ॥೩೭॥ "ರಾಕ್ಷಸಂ ಕ್ರೂರಕರ್ಮಾಣಂ ವಿದ್ಯುಜ್ಜಿಹ್ವಂ ತ್ವಮಾನಯ । ಯೇನ ತದ್ರಾಘವಶಿರಸ್ಸಂಗ್ರಾಮಾತ್ಸ್ವಯಮಾಹೃತಂ" ॥೩೮॥ ವಿದ್ಯುಜ್ಜಿಹ್ವಸ್ತತೋ ಗೃಹ್ಯ ಶಿರಸ್ತತ್ಸಶರಾಸನಂ । ಪ್ರಣಾಮಂ ಶಿರಸಾ ಕೃತ್ವಾ ರಾವಣಸ್ಯಾಽಗ್ರತಸ್ಸ್ಥಿತಃ ॥ ೩೯ ॥ ತಮಬ್ರವೀತ್ತತೋ ರಾಜಾ ರಾವಣೋ ರಾಕ್ಷಸಂ ಸ್ಥಿತಂ । ವಿದ್ಯುಜ್ಜಿಹ್ವಂ ಮಹಾಜಿಹ್ವಂ ಸಮೀಪಪರಿವರ್ತಿನಂ ॥ ೪೦ ॥ ಅಗ್ರತಃ

---

ರಕ್ತದಿಂದ ನೆನೆದುಹೋದ, ರಜೋಧ್ವಸ್ತಂ - ಧೂಳಿಯಿಂದ ವ್ಯಾಪ್ತವಾದ, ಅಸ್ಯ - ಈ ಶ್ರೀರಾಮನ, ಇದಂಶಿರಃ - ಈ ಮಂಡೆಯು, ಆಹೃತಂ - ತರಲ್ಪಟ್ಟಿತು. ||೩೬|| ತತಃ - ಬಳಿಕ, ಪರಮದುರ್ಧರ್ಷಃ- ಬಹಳ ಧೂರ್ತನಾದ, ರಕ್ಷಸಾಧಿಪಃ - ರಾಕ್ಷಸಾಧಿಪತಿಯಾದ, ರಾವಣಃ - ರಾವಣನು, ಸೀತಾಯಾಂ- ಸೀತಾದೇವಿಯು, ಉಪಶೃಣ್ವಂತ್ಯಾಂ - ಕೇಳುತ್ತಿರಲು, ರಾಕ್ಷಸೀಂ - ರಾಕ್ಷಸಸ್ತ್ರೀಯನ್ನು ಕುರಿತು, ಇದಂ - ಈ ಮಾತನ್ನು, ಅಬ್ರವೀತ್ - ನುಡಿದನು. || ೩೭ || ಯೇನ - ಯಾವ ವಿದುಜ್ಜಿಹ್ವನಿಂದ, ತದ್ರಾಘವಶಿರಃ - ಆ ಶ್ರೀರಾಮನ ಮಂಡೆಯು, ಸಂಗ್ರಾಮಾತ್ - ಕಾಳೆಗದಿಂದ, ಸ್ವಯಮೇವ - ತಾನೇ, ಆಹೃತಂ - ತರಲ್ಪಟ್ಟಿತೋ, ತಂ - ಅಂತಹ, ಕ್ರೂರಕರ್ಮಾಣಂ - ಕ್ರೂರಕೃತ್ಯವುಳ್ಳ, ವಿದ್ಯುಜ್ಜಿಹ್ವಂ - ವಿದ್ಯುಜ್ಜಿಹ್ವನೆಂಬ, ರಾಕ್ಷಸಂ - ರಕ್ಕಸನನ್ನು, ತ್ವಂ - ನೀನು, ಆನಯ - ಕರೆದು ಕೊಂಡುಬಾ. ||೩೮|| ತತಃ - ಬಳಿಕ, ವಿದ್ಯುಜ್ಜಿಹ್ವಃ - ವಿದ್ಯುಜ್ಜಿಹ್ವನು, ಸಶರಾಸನಂ - ಆ ಧನುರ್ಬಾಣಗಳಿಂದೊಡಗೂಡಿದ, ತಚ್ಛಿರಃ - ಆ ಶ್ರೀರಾಮನ ಶಿರವನ್ನು, ಗೃಹ್ಯ - ತೆಗೆದುಕೊಂಡು, ಶಿರಸಾ- ಮಂಡೆಯಿಂದ, ಪ್ರಣಾಮಂ - ನಮಸ್ಕಾರವನ್ನು, ಕೃತ್ವಾ - ಮಾಡಿ, ರಾವಣಸ್ಯ - ರಾವಣನ, ಅಗ್ರತಃ - ಮುಂದುಗಡೆ, ಸ್ಥಿತಃ - ನಿಂತನು. ||೩೯|| ತತಃ - ಬಳಿಕ, ರಾಜಾ - ರಾಕ್ಷಸರಾಜನಾದ, ರಾವಣಃ - ರಾವಣನು, ಸ್ಥಿತಂ - ನಿಂತಿರುವ, ಮಹಾಜಿಹ್ವಂ - ದೊಡ್ಡನಾಲಿಗೆಯುಳ್ಳ, ಸಮೀಪಪರಿವರ್ತಿನಂ - ಸಮೀಪಕ್ಕೆ ಬರುತ್ತಿರುವ, ವಿದ್ಯುಜ್ಜಿಹ್ವಂ - ವಿದ್ಯುಜ್ಜಿಹ್ವನೆಂಬ, ತಂರಾಕ್ಷಸಂ - ಆ ರಕ್ಕಸನನ್ನು ಕುರಿತು, ಅಬ್ರವೀತ್ - ನುಡಿದನು. ||೪೦|| ಸೀತಾಯಾಃ - ಸೀತಾದೇವಿಯ, ಅಗ್ರತಃ-

---

ಎಲೌ ಸೀತೇ! ಈ ರೀತಿ ನಿನ್ನ ಭರ್ತನೂ, ಆತನ ಸೇನೆಯವರೂ ನನ್ನ ಸೇನೆಯಿಂದ ಹತರಾಗಿ ಹೋದರು. ರಕ್ತದಿಂದ ತೊಯ್ದು ಧೂಳಿಮುಚ್ಚಿರುವ ಇದೋ ಇದೇ ಆ ನಿನ್ನ ಭರ್ತನ ಶಿರಸ್ಸು" ಎಂದು ಹೇಳಿ, ಪರಮ ದುರ್ಧರ್ಷನಾದ ಆ ರಾಕ್ಷಸಾಧಿಪನು ಸೀತೆಗೆ ಕೇಳಿಸುವಂತೆಯೇ ಅಲ್ಲಿದ್ದ ರಾಕ್ಷಸಿಯರನ್ನು ಕುರಿತು, "ಎಲೆ ರಾಕ್ಷಸಿಯೇ! ಯುದ್ಧಭೂಮಿಯಿಂದ ಆ ರಾಮನ ಶಿರಸ್ಸನ್ನು ತಂದಿರುವ ಕ್ರೂರಕರ್ಮಿಯಾದ ವಿದ್ಯುಜ್ಜಿಹ್ವನನ್ನು ಕರೆದುಕೊಂಡುಬಾ" ಎಂದನು. ॥ ೩೭-೩೮ ॥ ಆಗಲಾ ರಾಕ್ಷಸಿಯು ಕೂಡಲೇ ಆ ವೃತ್ತಾಂತವನ್ನು ವಿದ್ಯುಜ್ಜಿಹ್ವನಿಗೆ ತಿಳಿಸಿದಳು. ಆಗ ವಿದ್ಯುಜ್ಜಿಹ್ವನು ರಾಮನ ಶಿರಸ್ಸನ್ನೂ, ಅವನ ಧನುರ್ಬಾಣಗಳನ್ನೂ ತೆಗೆದುಕೊಂಡು ಬಂದು ತನ್ನ ಪ್ರಭುವಾದ ರಾವಣನಿಗೆ ತಲೆಬಾಗಿ ನಮಸ್ಕರಿಸಿ ಆತನೆದುರಿನಲ್ಲಿ ನಿಂತನು. ರಾಕ್ಷಸೇಶ್ವರನಾದ ರಾವಣನು ತನ್ನೆದುರಿಗಿರುವ, ದೊಡ್ಡ ನಾಲಿಗೆಯುಳ್ಳ ಆ

ಕುರು ಸೀತಾಯಾಃ ಶೀಘ್ರಂ ದಾಶರಥೇಃ ಶಿರಃ । ಅವಸ್ಥಾಂ ಪಶ್ಚಿಮಾಂ ಭರ್ತುಃ ಕೃಪಣಾ ಸಾಧು ಪಶ್ಯತು ॥ ೪೧ ॥ "ಏವಮುಕ್ತಂತು ತದ್ರಕ್ಷಃ ಶಿರಸ್ತತ್ಪ್ರಿಯ ದರ್ಶನಂ । ಉಪನಿಕ್ಷಿಪ್ಯ ಸೀತಾಯಾಃ ಕ್ಷಿಪ್ರಮಂತರಧೀಯತ ॥ ೪೨ ॥ ರಾವಣ ಶ್ಚಾಪಿ ಚಿಕ್ಷೇಪ ಭಾಸ್ವರಂ ಕಾರ್ಮುಕಂ ಮಹತ್ । ತ್ರಿಷು ಲೋಕೇಷು ವಿಖ್ಯಾತಂ ಸೀತಾಮಿದಮುವಾಚಚ" ॥ ೪೩ ॥ ಇದಂತು ತವ ರಾಮಸ್ಯ ಕಾರ್ಮುಕಂ ಜ್ಯಾಸಮಾ ಯುತಂ । ಇಹ ಪ್ರಹಸ್ತೇನಾನೀತಂ ಹತ್ವಾ ತಂ ನಿಶಿ ಮಾನುಷಂ ॥ ೪೪ ॥

---

ಮುಂದುಗಡೆ, ದಾಶರಥೇಃ - ಶ್ರೀರಾಮನ, ಶಿರಃ - ಮಂಡೆಯನ್ನು, ಶೀಘ್ರಂ - ಜಾಗ್ರತೆಯಾಗಿ, ಕುರು - ಮಾಡು, ಕೃಪಣಾ - ದೀನಳಾದ ಸೀತಾದೇವಿಯು, ಭರ್ತುಃ - ಗಂಡನ, ಪಶ್ಚಿಮಾಮವಸ್ಥಾಂ- ಮರಣಾವಸ್ಥೆಯನ್ನು, ಸಾಧು - ಚನ್ನಾಗಿ, ಪಶ್ಯತು - ನೋಡಲಿ. ||೪೧| ಏವಂ - ಈ ಪರಿಯಾಗಿ, ಉಕ್ತಂ - ಹೇಳಲ್ಪಟ್ಟ, ತದ್ರಕ್ಷಃ - ಆ ವಿದ್ಯುಜ್ಜಿಹ್ವನು, ಪ್ರಿಯದರ್ಶನಂ - ಪ್ರಿಯವಾಗಿರುವ ನೋಟವುಳ್ಳ, ತಚ್ಛಿರಃ - ಆ ಮಂಡೆಯನ್ನು, ಸೀತಾಯಾಃ - ಸೀತಾದೇವಿಯ, ಉಪ - ಸಮೀಪ ದಲ್ಲಿ, ನಿಕ್ಷಿಪ್ಯ - ಇರಿಸಿ, ಕ್ಷಿಪ್ರಂ - ಜಾಗ್ರತೆಯಾಗಿ, ಅಂತರಧೀಯತ - ಅಂತರ್ಧಾನವಾದನು. ||೪೨|| ರಾವಣಶ್ಚಾಪಿ - ರಾವಣನೂ, ತ್ರಿಷುಲೋಕೇಷು - ಮೂರುಲೋಕಗಳಲ್ಲಿಯೂ, ವಿಖ್ಯಾತಂ- ಪ್ರಸಿದ್ಧವಾದ, ಭಾಸ್ವರಂ - ಹೊಳೆಯುತ್ತಿರುವ, ಮಹತ್ - ದೊಡ್ಡದಾದ, ಕಾರ್ಮುಕಂ - ಬಿಲ್ಲನ್ನು, ಚಿಕ್ಷೇಪ - ಸೆಳೆದನು, ಸೀತಾಂ - ಸೀತಾದೇವಿಯನ್ನು ಕುರಿತು, ಇದಂ - ಈ ಮಾತನ್ನು, ಉವಾಚ - ಹೇಳಿದನು. ॥ ೪೩ ॥ ತವ - ನಿನ್ನ ಸಂಬಂಧಿಯಾದ, ರಾಮಃ - ಶ್ರೀರಾಮನ, ಜ್ಯಾಸನಾಯುತಂ- ನಾರಿಯಿಂದ ಕೂಡಿರುವ, ಇದಂಕಾರ್ಮುಕಂ - ಈ ಧನುಸ್ಸು, ನಿಶಿ - ರಾತ್ರಿಯಲ್ಲಿ, ತಂಮಾನುಷಂ - ಆ ಮನುಷ್ಯನನ್ನು, ಹತ್ವಾ - ಕೊಂದು, ಪ್ರಹಸ್ತೇನ - ಪ್ರಹಸ್ತನಿಂದ, ಇಹ - ಇಲ್ಲಿಗೆ, ಆನೀತಂ - ತರಲ್ಪಟ್ಟಿತು. ||೪೪|| ಸರಾವಣಃ - ಆ ರಾವಣನು, ವಿದ್ಯುಜ್ಜಿಹ್ವೇನ - ವಿದ್ಯುಜ್ಜಿಹ್ವನಿಂದ, ಸಹೈವ - ಏಕಕಾಲದಲ್ಲಿಯೇ, ತಚ್ಛಿರಃ-ಆ ಶಿರಸ್ಸು, ಧನುಸುಶ್ಚ-ಧನುಸ್ಸೂ, ಭೂಮೌ-ನೆಲದಲ್ಲಿ, ವಿನಿಕ್ಷಿಪ್ಯ-

---

ವಿದ್ಯುಜ್ಜಿಹ್ವನನ್ನು ನೋಡಿ, "ಎಲೈ ವಿದ್ಯುಜ್ಜಿಹ್ವನೇ! ದಶರಥರಾಜನ ಮಗನಾದ ರಾಮನ ಶಿರಸ್ಸನ್ನು ಈ ಸೀತೆಗೆ ತೋರಿಸು. ಈ ದೀನೆಯು ತನ್ನ ಭರ್ತನ ಚರಮಾವಸ್ಥೆಯನ್ನು ನೋಡಲಿ! ಜಾಗ್ರತೆಯಾಗಿ ತೋರಿಸು" ಎಂದು ಹೇಳಿದನು. ॥ ೩೯—೪೧ ॥ ರಾವಣನಿಂತು ನುಡಿಯಲು ಆ ವಿದ್ಯುಜ್ಜಿಹ್ವನು ಸೀತೆಯು ಪ್ರೀತಿಯಿಂದ ನೋಡಲರ್ಹವಾದ ಆ ರಾಮನ ಶಿರಸ್ಸನ್ನು ಅವಳೆದುರಿಗಿಟ್ಟು ಧನುರ್ಬಾಣಗಳನ್ನಲ್ಲಿಯೇ ಹಾಕಿ ಕೂಡಲೇ ಅಂತರ್ಹಿತನಾದನು. ಆಮೇಲೆ ಆ ರಾವಣಾಸುರನು ಲೋಕತ್ರಯದಲ್ಲಿಯೂ ಪ್ರಸಿದ್ಧವಾಗಿ ಪ್ರಕಾಶಿಸುತ್ತಿರುವ ಆ ರಾಮನ ಧನುಸ್ಸನ್ನು ಆಕರ್ಷಿಸಿ ಹಿಡಿದು ಸೀತಾದೇವಿಯನ್ನು ಕುರಿತು, "ಸೀತೇ! ನಾರಿ ಯೊಡಗೂಡಿದ- ಈ ಧನುಸ್ಸೇ ಆ ರಾಮನದು. ಪ್ರಹಸ್ತನು ರಾತ್ರಿಯಲ್ಲಿ ನಿದ್ರಿಸುತ್ತಿದ್ದ ಆ ರಾಮನನ್ನು ಕೊಂದು ಈ ಶಿರಸ್ಸನ್ನು ತೆಗೆದುಕೊಂಡು ಬಂದನು. ಅವನು ತಂದ ಶಿರಸ್ಸನ್ನೂ, ಈ ಧನುರ್ಭಾಣಗಳನ್ನೂ ನೀನು ನೋಡುವುದಕ್ಕಾಗಿಯೇ ವಿದ್ಯುಜ್ಜಿಹ್ವನಿಂದಿಲ್ಲಿಗೆ ತರಿಸಿದೆನು ನೋಡು ; ನೋಡು" ಎಂದು ಹೇಳಿ ಅದನ್ನು ಅವಳ ಮುಂದಿಟ್ಟು ತೋರಿಸುತ್ತ, ಅಧಿಕ

ಸವಿದ್ಯುಜ್ಜಿಹ್ವೇನ ಸಹೈವ ತಚ್ಛಿರೋ
ಧನುಶ್ಚ ಭೂಮೌ ವಿನಿಕೀರ್ಯ ರಾವಣಃ ।
ವಿದೇಹರಾಜಸ್ಯ ಸುತಾಂ ಯಶಸ್ವಿನೀಂ
ತತೋಽಬ್ರವೀತ್ತಾಂ "ಭವ ಮೇ ವಶಾನುಗಾ" ॥ ೪೫ ॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಏಕತ್ರಿಂಶಸ್ಸರ್ಗಃ. ¶

ಇತಿ, ವಿದೇಹರಾಜಸ್ಯ - ಜನಕರಾಯನ, ಸುತಾಂ - ಮಗಳಾದ, ಯಶಸ್ವಿನೀಂ - ಕೀರ್ತಿವಂತಳಾದ, ತಾಂ - ಆ ಸೀತಾದೇವಿಯನ್ನು ಕುರಿತು, ಮೇ - ನನಗೆ, ವಶಾನುಗಾ - ಸ್ವಾಧೀನಳು, ಭವ - ಆಗು, ಇತಿ - ಇಂತೆಂದು, ತತಃ - ಬಳಿಕ, ಅಬ್ರವೀತ್ - ನುಡಿದನು. ॥ ೪೫ ॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಏಕತ್ರಿಂಶಸ್ಸರ್ಗಃ.

ಕೀರ್ತಿವತಿಯೂ, ಜನಕರಾಜನ ಕುವರಿಯೂ ಆದ ಆಕೆಯನ್ನು ತನಗೆ ವಶಳಾಗಬೇಕೆಂದು ಕೇಳಿದನು. ॥ ೪೨-೪೫ ॥

ಇಂತಿದು ರಾವಣಕೃತ ಮಾಯಾರಾಮ ಶಿರಃಪ್ರದರ್ಶನಪೂರ್ವಕ ಸೀತಾ ಪ್ರಲೋಭನ ವೃತ್ತಾಂತ ನಿರೂಪಣವೆಂಬ ಮುವ್ವತ್ತೊಂದನೆಯ ಸರ್ಗವು ಸಮಾಪ್ತವಾದುದು.

¶ "ಉಪಸೃತ್ಯ ತತಸ್ಸೀತಾಂ ಪ್ರಹರ್ಷಂ ನಾಮಕೀರ್ತಯನ್" ಎಂಬ ಶ್ಲೋಕವು ಮೊದಲ್ಗೊಂಡು ಸರ್ಗ ಸಮಾಪ್ತಿಯವರೆಗೂ ವಾಸ್ತವಾರ್ಥವೇನೆಂದರೆ:—ರಾವಣನು ಸೀತಾದೇವಿಯನ್ನು ತನ್ನ ಆರಾಧ್ಯದೇವತೆಯೆಂದು ಅರಿತಿದ್ದರೂ, ಶ್ರೀರಾಮ ಹಸ್ತದಿಂದ ವಧೆಯನ್ನು ಬಯಸಿರುವವನಾದರೂ, "ರಾವಣನು ಶ್ರೀರಾಮನೊಡನೆ ವೈರವನ್ನು ಕಟ್ಟಿಕೊಂಡು ಅವನಿಂದ ಹತನಾಗಿ ಹೋದನು" ಎಂದು ತಿಳಿದಿರುವ ಇತರ ರಾಕ್ಷಸರನ್ನು ವಂಚಿಸಲೋಸುಗ ಶ್ರೀರಾಮನ ಮಾಯಾಶಿರಸ್ಸೇ ಮೊದಲಾದುವುಗಳನ್ನು ನಿರ್ಮಿಸಿ ಸೀತಾದೇವಿಯನ್ನು ಮೋಹಗೊಳಿಸುವನೋ ಎಂಬಂತೆ, ಏಕಾಂತವಾಗಿ ರಾಮವಧ ಶಂಕೆಯಿಂದ ಮೋಹಿತೆಯಾದ ಆಕೆಯನ್ನು ಪ್ರಿಯವಚನಗಳಿಂದ ಸಮಾಧಾನಗೊಳಿಸುವನು. "ಉಪಸೃತ್ಯ ತತಸ್ಸೀತಾಂ" ಎಂಬುದರಿಂದ ಸರ್ಗಸಮಾಪ್ತಿಯವರೆಗಣ ಗ್ರಂಥದಿಂದ, "ಉಪಸೃತ್ಯ - ಬಳಿಸಾರಿ, ಪ್ರಹರ್ಷಣ - ಸಂತೋಷಗೊಳಿಸಿ, ("ಧೃಷ್ಟಂ" ಎಂದು ಗೋ. ಪಾ.) ದುಷ್ಟಂ ವಚನಂ - ರಾಕ್ಷಸರ ದೃಷ್ಟಿಯಿಂದ ದುಷ್ಟವಾಗಿಯೂ, ತನ್ನ ದೃಷ್ಟಿಯಿಂದ ಪ್ರಿಯವಾಗಿಯೂ ಇರುವ ಮಾತನ್ನು ಆಡುವನು. "ಸಾಂತ್ವ್ಯಮಾನಾ" "ಎಲೌ ದೇವಿಯೇ! ಶ್ರೀರಾಮಮೂರ್ತಿಗೆ ಯಾರಿಂದಲೂ ಯಾವ ಹಾನಿಯೂ ಇಲ್ಲವೆಂದು ನಾನು ಸಾರಿಸಾರಿಗೂ ನಿನ್ನನ್ನು ಸಮಾಧಾನಗೊಳಿಸುತ್ತಿದ್ದರೂ, ನೀನು ಆತನನ್ನು ಕುರಿತು ಹಗಲಿರಳೂ ದುಃಖಿಸುತ್ತಿದ್ದೀಯೆ. ಬೇಡ. ದುಃಖಿಸಬೇಡ. ಹೀಗೇಕೆ ದುಃಖಾತಿಶಯದಿಂದ ವ್ಯಸನಪಡುತ್ತೀಯೆ. ಖರ ಸಂಹಾರಕನಾದ ಆ ನಿನ್ನ ಭರ್ತನು (ಸಮರೇ ಹತೋಽಕಿಂ?) ಕೊಲ್ಲಲ್ಪಟ್ಟನೇನು? ಇಲ್ಲವು. ಆದುದರಿಂದ ನೀನು ದುಃಖಿಸಬಾರದು. ("ನನ್ನ ದುಃಖದಿಂದ ನನಗೆ ಯಾವ ಹಾನಿಯಿದೆ?" ಎಂದರೆ) ಎಲೌ ಸೀತಾದೇವಿಯೇ! ನಿನ್ನ ವ್ಯಸನನಿಮಿತ್ತದಿಂದ ನಿನ್ನ ಭೃತ್ಯನಾದ ನನ್ನ ಗರ್ವವೆಲ್ಲವೂ ಭಗ್ನವಾಯಿತು. ನಾನು ಎಲ್ಲ ರೀತಿಗಳಿಂದಲೂ ಶ್ರೀಮಂತನಾಗುವುದೂ ತಪ್ಪಿಹೋಯಿತು. ಆದುದರಿಂದ ನೀನು ಶ್ರೀರಾಮನಿಂದ ಭರಿಸಲ್ಪಡಬೇಕು. ಆದಕಾರಣ ನೀನು ದುಃಖಿಸಬೇಡ. (ಹೇ ಭದ್ರೇ! ಹೇ ಪಂಡಿತೇ) ಎಲೌ ಮಂಗಳಕರಳೇ, ಸರ್ವಜ್ಞಳೇ! ರಾಮವಿಷದ್ವಿಷಯಕವಾದ ಯೋಚನೆಯನ್ನು ತೊರೆದು ನನಗೂ ನನ್ನ ಭಾರ್ಯೆಯರಿಗೂ ಈಶ್ವರೀ (ದೇವತೆ)ಯಾಗು. ಅಲ್ಪ ಪುಣ್ಯನಾಗಿಯೂ, ಕಳೆದುಕೊಂಡ ಮುಖ್ಯ ಪ್ರಯೋಜನ (ಪುರುಷಾರ್ಥ) ವುಳ್ಳವನಾಗಿಯೂ, ನಾನೇ ಪಂಡಿತನೆಂಬ ಭ್ರಾಂತಿಯುಳ್ಳವನಾಗಿಯೂ (ಅಪಂಡಿತನಾಗಿಯೂ), ಸತ್ತವರಿಗೆ ಸಾಟಿಯಾಗಿಯೂ ಇರುವ ನನ್ನಲ್ಲಿ ನೀನು ದಯತೋರದಿದ್ದರೆ ಈಗಲೇ ಸಾಯುವೆನು. "ನಿನ್ನ ಭಾವನೆಯು ಈ ರೀತಿಯಿದ್ದರೆ ಈ ರಾಕ್ಷಸಿಯರು ರಾಮವಿಪದ್ವಿಷಯವನ್ನೇಕೆ ಹೇಳುವರು?" ಎಂದು ಸೀತೆಯು ಕೇಳಿಯಾಳೆಂದು ಶಂಕಿಸಿ ರಾವಣನು, "ದೇವೀ! ಕೇಳು. ಈ ರಾಕ್ಷಸಿಯರು ಹೇಳಿದ ರಾಮವಧ ವಿಷಯವನ್ನು ನಾನು ನಂಬುವುದಿಲ್ಲ. ಅದು ಕೇವಲ ಮಿಥ್ಯೆಯು. ಇವರು ಕೇವಲ ಮಾಯಾರಾಮ ಶಿರಸ್ಸನ್ನು ಕಲ್ಪಿಸಿರುವರು. ನೀನು ನಿಜವೆಂದು ನಂಬದಿರು" ಎಂಬ ಅರ್ಥವು ಗ್ರಾಹ್ಯವು. (ಮ)

# ಯುದ್ಧಕಾಂಡೇ ದ್ವಾತ್ರಿಂಶಸ್ಸರ್ಗಃ

**ಸಾ ಸೀತಾ ತಚ್ಛಿರೋ ದೃಷ್ಟ್ವಾ ತಚ್ಚ ಕಾರ್ಮುಕಮುತ್ತಮಂ । ಸುಗ್ರೀವ ಪ್ರತಿಸಂಸರ್ಗಮಾಖ್ಯಾತಂಚ ಹನೂಮತಾ ॥ ೧ ॥ ನಯನೇ ಮುಖವರ್ಣಂಚ ಭರ್ತು ಸ್ತತ್ಸದೃಶಂ ಮುಖಂ । ಕೇಶಾ ಕೇಶಾಂತದೇಶಂಚ ತಂಚ ಚೂಡಾಮಣಿಂ ಶುಭಂ ॥ ೨ ॥ ಏತೈಸ್ಸರ್ವೈರಭಿಜ್ಞಾನೈರಭಿಜ್ಞಾಯ ಸುದುಃಖಿತಾ । ವಿಜಗರ್ಹೇಽಥ ಕೈಕೇಯೀಂ ಕ್ರೋಶಂತೀ ಕುರರೀ ಯಥಾ ॥ ೩ ॥ "ಸಕಾಮಾ ಭವ ಕೈಕೇಯಿ! ಹತೋಽಯಂ ಕುಲನಂದನಃ । ಕುಲಮುತ್ಸಾದಿತಂ ಸರ್ವಂ ತ್ವಯಾ ಕಲಹಶೀಲಯಾ**

---

ಸಾಸೀತಾ - ಆ ಸೀತಾದೇವಿಯು, ತಚ್ಛಿರಃ - ಆ ಶಿರಸ್ಸನ್ನು, ಉತ್ತಮಂ - ಉತ್ಕೃಷ್ಟವಾದ, ತತ್ಕಾರ್ಮುಕಂಚ - ಆ ಕೋದಂಡವನ್ನೂ, ದೃಷ್ಟ್ವಾ - ಕಂಡು, ಹನೂಮತಾ - ಆಂಜನೇಯನಿಂದ ಆಖ್ಯಾತಂ-ಹೇಳಲ್ಪಟ್ಟ, ಸುಗ್ರೀ....ರ್ಗಂ-ಸುಗ್ರೀವರಾಮುಸಂಬಂಧವನ್ನು, (ಗೋ) ರಾವಣನು ಕಲ್ಪಿಸಿ ಹೇಳಿದ ವಾನರವಧರೂಪವಾದ ಪ್ರಬಂಧವನ್ನು, ದೃಷ್ಟ್ವಾ-ತಿಳಿದು, (ಕೇಳಿ) ನಯನೇ-ನೇತ್ರಗಳನ್ನು-ಮುಖವರ್ಣಂಚ - ಮುಖದ ಬಣ್ಣವನ್ನೂ, ಭರ್ತುಃ - ಪತಿಗೆ, ಸದೃಶಂ - ಸಮಾನವಾದ, ಮುಖಂ - ಮುಖವನ್ನೂ, ಕೇಶಾ - ಕೂದಲುಗಳನ್ನೂ, ಕೇಶಾಂತದೇಶಂಚ - ಲಲಾಟಪ್ರದೇಶವನ್ನು, ಶುಭಂ-ಶುಭಕರವಾದ, ತಂಚೂಡಾಮಣಿಂಚ - ಆ ಶಿರೋಭೂಷಣವನ್ನೂ ಸಹ, ಸರ್ವೈಃ - ಸಮಸ್ತವಾದ, ಏತೈರಭಿಜ್ಞಾನೈಃ - ಈ ಗುರುತುಗಳಿಂದ, ಅಭಿಜ್ಞಾಯ - ತಿಳಿದು, ಸುದುಃಖಿತಾ - ಮಹಾ ದುಃಖವುಳ್ಳವಳಾಗಿ, ಅಥ-ಬಳಿಕ, ಕುರರೀಯಥಾ-ಕುರರಪಕ್ಷಿಯಂತೆ, ಕ್ರೋಶಂತೀ-ಕೂಗುತ್ತ, ಕೈಕೇಯೀಂ-ಕೈಕೇಯಿಯನ್ನು, ವಿಜಗರ್ಹೇ - ನಿಂದಿಸಿದಳು. ॥ ೧ ೩ ॥ ಹೇ ಕೈಕೇಯಿ - ಎಲೆ ಕೈಕೇಯಿ, ಸಕಾಮಾ - ಸಫಲವಾದ ಮನೋರಥವುಳ್ಳವಳು, ಭವ - ಆಗು, ಕುಲನಂದನಃ - ಕುಲಸಂತೋಷಕರನಾದ, ಅಯಂ - ಈ ಶ್ರೀರಾಮನು, ಹತಃ - ಮೃತನಾದನು, ಕಲಹಶೀಲಯಾ - ಕಲಹಸ್ವಭಾವವುಳ್ಳ, ತ್ವಯಾ - ನಿನ್ನಿಂದ, ಸರ್ವಂ - ಸಮಸ್ತವಾದ, ಕುಲಂ - ವಂಶವು, ಉತ್ಸಾದಿತಂ - ಕಿತ್ತುಹಾಕಲ್ಪಟ್ಟಿತು ॥೪॥ ಹೇ ಕೈಕೇಯಿ - ಎಲೌ ಕೈಕೇಯಿಯೆ, ಮಯಾಸಹ - ನನ್ನೊಡನೆ, ಚೀರವಸನ-

---

ಆ ಬಳಿಕ ಸೀತಾದೇವಿಯು ಆ ರಾಮನ ಶಿರಸ್ಸನ್ನೂ, ಶ್ರೇಷ್ಠವಾದ ಧನುಸ್ಸನ್ನೂ ನೋಡಿ, ಹನುಮಂತನು ಹೇಳಿದ್ದ ರಾಮುಸುಗ್ರೀವರ ಸಖ್ಯವನ್ನು ನೆನೆದು, ಆ ರಾಮನ ಚಾರು ನೇತ್ರಗಳನ್ನೂ, ಮುಖವರ್ಣವನ್ನೂ, ಗುಂಗುರು ಗುಂಗುರಾದ ತಲೆಗೂದಲುಗಳನ್ನೂ, ಅದರಲ್ಲಿದ್ದ ಮಂಗಳಕರವಾದ ಚೂಡಾಮಣಿಯನ್ನೂ, ಹಣೆಯನ್ನೂನೋಡಿ ಎಲ್ಲ ರೀತಿಗಳಲ್ಲಿಯೂ ಅದು (ಮಾಯೆಯಾಗಿದ್ದರೂ) ರಾಮನ ಶಿರಸ್ಸೆಂದೇ ತಿಳಿದು ಬಹಳ ದುಃಖಿತಳಾದಳು. ಕುರರ ಪಕ್ಷಿಯಂತೆ ಕೂಗುತ್ತ ಆ ಸಮಯದಲ್ಲಿ ಆಕೆಯು ಕೈಕೇಯಿಯನ್ನು ಬಗೆಬಗೆಯಾಗಿ ನಿಂದಿಸುತ್ತ, "ಓ ಕೈಕೇಯಿ! ನಿನ್ನ ಕೋರಿಕೆಗಳೆಲ್ಲಾ ಸಫಲವಾದುವು! ಕುಲದೀಪಕನಾದ ಶ್ರೀರಾಮನು ಹತನಾದನು. ಕಲಹಸ್ವಭಾವಳಾದ ನಿನ್ನಿಂದ ರಘುಕುಲವೆಲ್ಲವೂ ನಾಶವಾಯಿತು. ಕೈಕೇಯಿ! ಶ್ರೀರಾಮನು ನಿನಗಾವ ಅಪಕಾರವನ್ನೆಸಗಿದನು! ನೀನಾವ ಕಾರಣದಿಂದ ನನಗೆ

|| ೪ || ಆರ್ಯೇಣ ಕಿಂ ತೇ ಕೈಕೇಯಿ ! ಕೃತಂ ರಾಮೇಣ ವಿಪ್ರಿಯಂ ? | ಯನ್ಮಯಾ ಚೀರವಸನಸ್ತ್ವಯಾ ಪ್ರಸ್ಥಾಪಿತೋ ವನಂ" || ೫ || ಏವಮುಕ್ತ್ವಾ ತು ವೈದೇಹೀ ವೇಪಮಾನಾ ತಪಸ್ವಿನೀ | ಜಗಾಮ ಜಗತೀಂ ಬಾಲಾ ಛಿನ್ನಾ ತು ಕದಳೀ ಯಥಾ ||೬|| ಸಾ ಮುಹೂರ್ತಾತ್ಸಮಾಶ್ವಾಸ್ಯ ಪ್ರತಿಲಭ್ಯ ಚ ಚೇತನಾಂ | ತಚ್ಛಿರಸ್ಸಮುಪಾಘ್ರಾಯ ವಿಲಲಾಪಾಽಯತೇಕ್ಷಣಾ || ೭ || ಹಾ ! ಹತಾಸ್ಮಿ ಮಹಾಬಾಹೋ ! ವೀರವ್ರತಮನುವ್ರತ ! | ಇಮಾಂ ತೇ ಪಶ್ಚಿಮಾವಸ್ಥಾಂ ಗತಾಸ್ಮಿ ವಿಧವಾ ಕೃತಾ || ೮ || ಪ್ರಥಮಂ ಮರಣಂ ನಾರ್ಯಾರ್ಭರ್ತುರ್ವೈಗುಣ್ಯಮುಚ್ಯತೇ | ಸುವೃತ್ತ ! ಸಾಧುವೃತ್ತಾಯಾಸ್ಸಂವೃತ್ತಸ್ತ್ವಂ ಮಮಾಗ್ರತಃ ||೯|| ದುಃಖಾದ್ದುಃಖಂ ಪ್ರಪನ್ನಾಯಾ ಮಗ್ನಾಯಾಃ

---

ನಾರುಮಡಿಗಳನ್ನುಟ್ಟು, ತ್ವಯಾ - ನಿನ್ನಿಂದ, ವನಂ - ಅರಣ್ಯದಲ್ಲಿ, ಯತ್ - ಯಾವ ಕಾರಣದಿಂದ, ಪ್ರಸ್ಥಾಪಿತಃ - ಸ್ಥಾಪಿಸಲ್ಪಟ್ಟನೋ, ಆರ್ಯೇಣ - ಪೂಜ್ಯನಾದ, ರಾಮೇಣ - ಶ್ರೀರಾಮನಿಂದ, ತೇ- ನಿನಗೆ, ಕಿಂವಿಪ್ರಿಯಂ - ಯಾವ ಅಪಕಾರವು, ಕೃತಂ - ಮಾಡಲ್ಪಟ್ಟಿತು. ||೫|| ಏವಂ - ಈ ಪ್ರಕಾರವಾಗಿ, ಉಕ್ತ್ವಾತು - ಹೇಳಿ, ವೇಪಮಾನಾ - ನಡಗುತ್ತಲಿರುವ, ತಪಸ್ವಿನೀ - ದುಃಖಿತಳಾದ, ಬಾಲಾ - ಬಾಲಕಿಯಾದ, ವೈದೇಹೀತು - ಸೀತಾದೇವಿಯು, ಛಿನ್ನಾ - ಕತ್ತರಿಸಲ್ಪಟ್ಟ, ಕದಳೀಯಥಾ- ಬಾಳೆಯಂತೆ, ಜಗತೀಂ - ಭೂಮಿಯನ್ನು, ಜಗಾಮ - ಹೊಂದಿದಳು (ಮೂರ್ಛಿತಳಾದಳು). ||೬|| ಆಯತೇಕ್ಷಣಾ - ವಿಸ್ತಾರವಾದ ಕಣ್ಣುಗಳುಳ್ಳ, ಸಾ - ಆ ಸೀತಾದೇವಿಯು, ಮುಹೂರ್ತಾತ್ - ಮುಹೂರ್ತಮಾತ್ರದಲ್ಲಿ, ಸಮಾಶ್ವಾಸ್ಯ - ಸಮಾಧಾನಗೊಂಡು, ಚೇತನಾಂಚ - ಜ್ಞಾನವನ್ನೂ, ಪ್ರತಿಲಭ್ಯ - ಹೊಂದಿ, ತಚ್ಛಿರಃ - ಆ ಶಿರಸ್ಸನ್ನು, ಸಮುಪಾಘ್ರಾಯ - ಚನ್ನಾಗಿ ಆಘ್ರಾಣಮಾಡಿ, ವಿಲಲಾಪ - ಅತ್ತಳು. ||೭|| ಹೇ ಮಹಾಬಾಹೋ - ಎಲೈ ಮಹಾ ಭುಜಪರಾಕ್ರಮಿಯೇ, ವೀರ......ತ- ವೀರವ್ರತವನ್ನಾಚರಿಸುವವನೇ, ತೇ - ನಿನ್ನ, ಇಮಾಂಪಶ್ಚಿಮಾವಸ್ಥಾಂ - ಈ ಅಂತಿಮಾವಸ್ಥೆಯನ್ನು, ಗತಾಸ್ಮಿ - ಹೊಂದಿದವಳಾದೆನು, ವಿಧವಾ - ಪತಿಹೀನಳಾಗಿ, ಕೃತಾ - ಮಾಡಲ್ಪಟ್ಟೆನು, ಹಾ - ಅಯ್ಯೋ ! ||೮|| ನಾರ್ಯಾಃ - ಹೆಂಗುಸಿಗೆ, ಭರ್ತುಃ - ಪತಿಯ, ಮರಣಂ - ಮೃತಿಯು, ಪ್ರಥಮಂ ವೈಗುಣ್ಯಂ - ಮುಖ್ಯವಾದ ಅನರ್ಥವೆಂದು, ಉಚ್ಯತೇ - ಹೇಳಲ್ಪಡುತ್ತೆ, ಸುವೃತ್ತಃ - ಒಳ್ಳೆಯ ನಡತೆಯುಳ್ಳ, ತ್ವಂ - ನೀನು, ಸಾಧುವೃತ್ತಾಯಾಃ - ಒಳ್ಳೆಯ ನಡತೆಯುಳ್ಳ, ಮಮ - ನನ್ನ, ಅಗ್ರತಃ- ಮುಂದುಗಡೆಯೇ, ಸಂವೃತ್ತಃ - ಮೃತನಾದೆ. || ೯ || ದುಃಖಾತ್ - ದುಃಖದಿಂದ, ದುಃಖಂ - ದುಃಖ

---

ನಾರುಮಡಿಗಳನ್ನುಡಿಸಿ ಕಾಡಿಗೆ ಕಳುಹಿದೆ!" ಎಂದು ಹೇಳಿ ಸ್ವಲ್ಪಕಾಲ ರೋದನ ಮಾಡುತ್ತಿದ್ದು, ಆಮೇಲೆ ತನ್ನ ಸ್ಥಿತಿಯನ್ನು ನೆನೆದು ಗಡಗಡನೆ ನಡುಗುತ್ತ ಕತ್ತರಿಸಿದ ಕದಳಿಯಂತೆ ಮೂರ್ಛಿತಳಾಗಿ ಬಿದ್ದಳು. ||೧-೬|| ಆಮೇಲೆ ಒಂದು ಕ್ಷಣದಲ್ಲಿಯೇ ಎಚ್ಚೆತ್ತು ಆ ರಾಮನ ಶಿರಸ್ಸನ್ನು ಮುದ್ದಿಸಿ ಬಹಳವಾಗಿ ಅಳುತ್ತ, ಅಯ್ಯೋ ! ರಾಮ ; ಪ್ರಾಣನಾಥ ! ನಾನು ಹತಳಾದೆನು ! ಎಲೈ ಮಹಾ ಭುಜನೇ ವೀರವ್ರತಗಳುಳ್ಳವನೂ, ನನ್ನೊಡನೆ ವ್ರತಗಳನ್ನಾಚರಿಸುವವನೂ ಆದ ನಿನ್ನ ಚರಮಾವಸ್ಥೆಯನ್ನು ನೋಡಿದೆನಲ್ಲವೆ ? ಅಯ್ಯೋ ! ನಾನು ವಿಧವೆಯಾದೆನಲ್ಲಾ ! ಭಾರ್ಯೆಗಿಂತಲೂ ಮುಂಚೆ, ಭರ್ತನು ಮೃತಿಹೊಂದುವುದು ಉಚಿತವಲ್ಲವಷ್ಟೆ ! ಸಚ್ಚಾರಿತ್ರವುಳ್ಳ ನನ್ನಲ್ಲಿ ಯಾವ ಅಪರಾಧವು ಹುಟ್ಟಿ ನೀನಿಂತು ನನಗಿಂತಲೂ ಮೊದಲೇ ಮರಣವನ್ನು ಹೊಂದಿದೆಯೋ ! ನಾನಾವ ಅಪರಾಧವನ್ನೂ ಮಾಡಿದವಳಲ್ಲವು.

ಶೋಕಸಾಗರೇ । ಯೋಹಿ ಮಾಮುದ್ಯತಸ್ತ್ರಾತುಂ ಸೋಽಪಿ ತ್ವಂ ವಿನಿಪಾತಿತಃ ॥ ೧೦ ॥ ಸಾ ಶ್ವಶ್ರೂರ್ಮಮ ಕೌಸಲ್ಯಾ ತ್ವಯಾ ಪುತ್ರೇಣ ರಾಘವ! । ವತ್ಸೇನೇವ ಯಥಾ ಧೇನುರ್ವಿವತ್ಸಾ ವತ್ಸಲಾ ಕೃತಾ ॥ ೧೧ ॥ ಆದಿಷ್ಟಂ ದೀರ್ಘಮಾಯುಸ್ತೇ ಯೈರಚಿಂತ್ಯ ಪರಾಕ್ರಮ! । ಅನೃತಂ ವಚನಂ ತೇಷಾಮಲ್ಪಾಯುರಸಿ ರಾಘವ! ॥೧೨॥ ಅಥವಾ ನಶ್ಯತಿ ಪ್ರಜ್ಞಾ ಪ್ರಾಜ್ಞಸ್ಯಾಪಿ ಸತಸ್ತವ । ಪಚತ್ಯೇನಂ ಯಥಾ ಕಾಲೋ ಭೂತಾನಾಂ ಪ್ರಭವೋಹ್ಯಯಂ ॥ ೧೩ ॥ ಅದೃಷ್ಟಂ ಮೃತ್ಯುಮಾಪನ್ನಃ ಕಸ್ಮಾತ್ತ್ವಂ ನಯಶಾಸ್ತ್ರ

---

ವನ್ನು, ಪ್ರಸನ್ನಾಯಾಃ - ಹೊಂದಿರುವ ನಾನು, ಶೋಕಸಾಗರೇ - ವ್ಯಸನಸಮುದ್ರದಲ್ಲಿ, ಮಗ್ನಾಯಾಃ- ಮುಳುಗಿರುವ, ಮಾಂ - ನನ್ನನ್ನು, ತ್ರಾತುಂ - ಸಂರಕ್ಷಿಸುವದಕ್ಕೆ, ಯಃ - ಯಾವ ನೀನು, ಉದ್ಯತಃ - ಉದ್ಯುಕ್ತನಾದೆಯೋ, ಸೋಽಪಿ ತ್ವಂ - ಅಂಥಾ ನೀನು ಕೂಡ, ವಿನಿಪಾತಿತೋಽಹಿ - ಬೀಳಿಸಲ್ಪಟ್ಟೆಯಷ್ಟೆ. ॥ ೧೦ ॥ ಹೇ ರಾಘವ - ಎಲೈ ಶ್ರೀರಾಮನೇ, ಮಮ - ನನ್ನ, ಶ್ವಶ್ರೂಃ - ಅತ್ತೆಯಾದ, ವತ್ಸಲಾ - ವಿಶ್ವಾಸವುಳ್ಳ, ಸಾ ಕೌಸಲ್ಯಾ - ಆ ಕೌಸಲ್ಯಾದೇವಿಯು, ಪುತ್ರೇಣ - ಮಗನಾದ, ತ್ವಯಾ - ನಿನ್ನಿಂದ, ವತ್ಸೇನ - ಕರುವಿನಿಂದ, ಧೇನುಃ-ಆಕಳು, ಯಥಾ - ಹೇಗೆಯೋ, ತಥಾ - ಹಾಗೆ, ವಿವತ್ಸಾ - ಪುತ್ರಹೀನಳಾಗಿ, ಕೃತಾ - ಮಾಡಲ್ಪಟ್ಟಳು. ॥ ೧೧ ॥ ಹೇ ಅಚಿಂತ್ಯಪರಾಕ್ರಮ - ಎಲೈ ಚಿಂತಿಸಲಸಾಧ್ಯವಾದ ಪರಾಕ್ರಮವುಳ್ಳವನೇ, ತೇ-ನಿನ್ನ, ಆಯುಃ-ಆಯುಸ್ಸು, ಯೈಃ-ಯಾರಿಂದ, ದೀರ್ಘಂ - ಚಿರಕಾಲದ್ದೆಂದು, ಆದಿಷ್ಟಂ - ಹೇಳಲ್ಪಟ್ಟಿತೋ, ತೇಷಾಂ - ಅವರ, ವಚನಂ - ಮಾತು, ಅನೃತಂ - ಅಸತ್ಯವು, ಹೇ ರಾಘವ - ಎಲೈ ಶ್ರೀರಾಮನೇ, ಅಲ್ಪಾಯುಃ - ಸ್ವಲ್ಪಾಯುಸ್ಸುಳ್ಳವನು, ಅಸಿ - ಆದೆ. ॥ ೧೨ ॥ ಅಥವಾ - ಹಾಗಲ್ಲದಿದ್ದರೆ, ಭೂತಾನಾಂ - ಪ್ರಾಣಿಗಳಿಗೆ, ಪ್ರಭವಃ - ಕಾರಣಭೂತವಾದ, ಅಯಂಕಾಲಃ - ಈ ಸಮಯವು, ಯಥಾ - ಯಾವ ಕಾರಣದಿಂದ, ಏನಂ - ಈ ನಿನ್ನನ್ನು, ಪಚತಿ - ಪಕ್ವ ಕರ್ಮವುಳ್ಳವನನ್ನಾಗಿ ಮಾಡಿತೋ (ಗೋ) ಮರಣವನ್ನುಂಟುಮಾಡಿತೋ, ತೇನ - ಆ ಕಾರಣದಿಂದ, ಪ್ರಾಜ್ಞಸ್ಯಾಪಿ - ಭವಿಷ್ಯದರ್ಥಜ್ಞಾನವುಳ್ಳ, ಸತಃ - ಸತ್ಪುರುಷನಾದ, ತವ - ನಿನ್ನ ವಿಷಯದಲ್ಲಿ, ಪ್ರಜ್ಞಾ - ಜ್ಞಾನವು, ನಶ್ಯತಿ - ನಷ್ಟವಾಯಿತು. ॥ ೧೩ ॥ ಹಿ - ಯಾವ ಕಾರಣದಿಂದ, ವ್ಯಸನಾನಾಂ - ದುಃಖಗಳ, ವರ್ಜನೇ - ಪ್ರತಿರೋಧದಲ್ಲಿ, ಕುಶಲಃ - ಪಂಡಿತನು, ಅಸಿ - ಆಗಿರುವೆಯೋ, ಉಪಾಯಜ್ಞಃ - ಅಂಥಾ ಉಪಾಯಗಳನ್ನರಿತಿರುವ, ನಯ

---

ಹೀಗಿದ್ದೂ ನೀನು ಮೃತಿಯೊಂದಲು ಕಾರಣವೇನು? ದುಃಖಗಳ ಮೇಲೆ ದುಃಖಗಳನ್ನು ಹೊಂದುತ್ತಿರುವವಳೂ, ದುಃಖಸಮುದ್ರದಲ್ಲಿಯೇ ಮುಳುಗಿಹೋಗಿರುವವಳೂ, ಆದ ನನ್ನನ್ನು ರಕ್ಷಿಸಲೋಸುಗ ಬಂದ ನೀನೇ ಮರಣವನ್ನು ಹೊಂದಿದೆಯಲ್ಲಾ! ಅಯ್ಯೋ ದೈವವೇ!! ನಾನೇನು ಮಾಡಲಿ! ಎಲೈ ರಾಘವನೇ! ಪುತ್ರನಾದ ನಿನ್ನಿಂದ ನನ್ನ ಅತ್ತೆಯೂ, ವತ್ಸಲೆಯೂ ಆದ ಕೌಸಲ್ಯಾದೇವಿಯು ಕರುವಿಲ್ಲದ ಆಕಳಿನಂತಾಗಿಸಲ್ಪಟ್ಟಳು! ಆಕೆಯು ಪರಮ ದುಃಖಿನಿಯಾದಳು! ಎಲೈ ಮಹಾ ಪರಾಕ್ರಮಶಾಲಿಯೇ! ನಿನ್ನ ಜನನ ಕಾಲದಲ್ಲಿ ಅನೇಕ ಜ್ಯೋತಿಷ್ಕರು ನೀನು ದೀರ್ಘಾಯುವೆಂದು ಹೇಳಿದ್ದರಲ್ಲವೆ? ಈಗ ಅವರ ಮಾತುಗಳೆಲ್ಲವೂ ಸುಳ್ಳಾದುವು. ॥೭–೧೨॥ ಅಕಟಾ! ನೀನು ಅಲ್ಪಾಯುವಾದೆ! ಈಗ ನಾನೇನು ಮಾಡಲಿ. ಜ್ಯೋತಿಷ್ಕರ ಮಾತುಗಳನ್ನು ನಿಂದಿಸಿ ಫಲವೇನು? ಎಲ್ಲ ವಿಷಯಗಳನ್ನೂ ತಿಳಿದ ನಿನ್ನ ಪ್ರಜ್ಞೆಯೆಲ್ಲವೂ ನಶಿಸಿ ಹೋಯಿತೆ? ಅಥವಾ ಸಮಸ್ತ ಭೂತಗಳ ವಿನಾಶಕ್ಕೂ ಕಾರಣವಾದ ಕಾಲವೇ ಈ

ವಿತ್ | ವ್ಯಸನಾನಾಮುಪಾಯಜ್ಞಃ ಕುಶಲೋಽಹ್ಯಸಿ ವರ್ಜನೇ || ೧೪ || ತಥಾ ತ್ವಂ ಸಂಪರಿಷ್ವಜ್ಯ ರೌದ್ರ್ಯಯಾಽತಿನೃಶಂಸಯಾ | ಕಾಳರಾತ್ರ್ಯಾ ಮಯಾಚ್ಛಿದ್ಯ ಹೃತಃ ಕಮಲಲೋಚನ! || ೧೫ || ಉಪಶೇಷೇ ಮಹಾಬಾಹೋ! ಮಾಂ ವಿಹಾಯ ತಪಸ್ವಿನೀಂ | ಪ್ರಿಯಾಮಿವ ಸಮಾಶ್ಲಿಷ್ಯ ಪೃಥಿವೀಂ ಪುರುಷರ್ಷಭ! || ೧೬ || ಅರ್ಚಿತಂ ಸತತಂ ಯತ್ನಾತ್ ಗಂಧಮಾಲ್ಯೈರ್ಮಯಾ ತವ | ಇದಂ ತೇ ಮತ್ಪ್ರಿಯಂ ವೀರ! ಧನುಃ ಕಾಂಚನಭೂಷಣಂ || ೧೭ || ಪಿತ್ರಾ ದಶರಥೇನ ತ್ವಂ ಶ್ವಶುರೇಣ ಮಮಾ

---

ಶಾಸ್ತ್ರವಿತ್ - ನೀತಿಶಾಸ್ತ್ರವನ್ನು ತಿಳಿದಿರುವ, ತ್ವಂ - ನೀನು, ಕಸ್ಮಾತ್ - ಯಾವಕಾರಣ, ಅದೃಷ್ಟಂ - ಅಚಿಂತಿತವಾದ, ಮೃತ್ಯುಂ - ಮರಣವನ್ನು, ಆಪನ್ನಃ - ಹೊಂದಿದೆ. ||೧೪|| ಹೇ ಕಮಲಲೋಚನ - ಎಲೈ ಕಮಲನೇತ್ರನೇ, ತ್ವಂ - ನೀನು, ಮಯಾ - ನನ್ನ ದೆಸೆಯಿಂದ, ರೌದ್ರ್ಯಾ - ಕ್ರೂರವಾದ, ಅತಿನೃಶಂಸಯಾ - ಬಹಳ ಘಾತುಕವಾದ, ಕಾಳರಾತ್ರ್ಯಾ - ಕಾಳರಾತ್ರಿಯೆಂಬ ಶಕ್ತಿಯಿಂದ, ಸಂಪರಿಷ್ವಜ್ಯ - ಅಪ್ಪಿಕೊಂಡು, ಆಚ್ಛಿದ್ಯ - ಸೆಳೆದುಕೊಂಡು, ತ್ವಂ - ನೀನು, ತಥಾ - ಹಾಗೆ, ಹೃತಃ - ಅಪಹರಿಸಲ್ಪಟ್ಟವನಾದೆ. ||೧೫|| ಹೇ ಮಹಾಬಾಹೋ - ಎಲೈ ಮಹಾಭುಜಪರಾಕ್ರಮಿಯೇ, ಹೇ ಪುರುಷರ್ಷಭ - ಎಲೈ ಪುರುಷಶ್ರೇಷ್ಠನೇ, ತಪಸ್ವಿನೀಂ - ದೀನಳಾದ, ಮಾಂ - ನನ್ನನ್ನು, ವಿಹಾಯ - ಬಿಟ್ಟು, ಪೃಥಿವೀಂ - ಭೂಮಿಯನ್ನು, ಪ್ರಿಯಾಂ - ನನಗಿಂತಲೂ ಪ್ರೀತಿಪಾತ್ರಳಾದವಳನ್ನು, ಸಮಾಶ್ಲಿಷ್ಯೇವ - ಅಪ್ಪಿಕೊಂಡವನಂತೆ, ಉಪಶೇಷೇ - ಮಲಗಿರುವೆ. || ೧೬ || ಹೇ ವೀರ - ಎಲೈ ಶೂರನೇ, ಮಯಾ - ನನ್ನೊಡನೆ, ತವ - ನಿನ್ನ, ಗಂಧಮಾಲ್ಯೈಃ - ಗಂಧಗಳಿಂದಲೂ ಪುಷ್ಪಗಳಿಂದಲೂ, ಕಾಂಚನಭೂಷಣಂ - ಸುವರ್ಣದಿಂದಲಂಕೃತವಾದ, ಯದ್ಧನುಃ - ಯಾವ ಧನುವು, ಸತತಂ - ಯಾವಾಗಲೂ, ಅರ್ಚಿತಂ - ಪೂಜಿಸಲ್ಪಡುತ್ತಲಿತ್ತೋ, ತತ್ - ಅಂಥಾ, ತೇ - ನಿನ್ನ, ಮತ್ಪ್ರಿಯಂ - ನನ್ನಿಷ್ಟವಾದ, ಧನುಃ - ಧನುಸ್ಸು, ಇದಂ - ಇದು. || ೧೭ || ಹೇ ಅನಘ - ಎಲೈ ಪೂಜ್ಯನೇ, ಕಿಂಚ - ಇಷ್ಟುಮಾತ್ರವಲ್ಲ, ಸ್ವರ್ಗೇ - ಸ್ವರ್ಗಲೋಕದಲ್ಲಿ, ಸರ್ವೈಃ - ಸಮಸ್ತರಾದ ಪಿತೃಭಿಸ್ಸಾರ್ಧಂ - ಪಿತೃದೇವತೆಗಳೊಡನಿರುವ, ಪಿತ್ರಾ - ತಂದೆಯಾದ, ಮಮ - ನನಗೆ, ಶ್ವಶುರೇಣ -

---

ರೀತಿ ನಿನ್ನ ಬುದ್ಧಿಯನ್ನು ನಾಶಗೊಳಿಸಿತೆಂದು ಯೋಚಿಸುವೆನು. ರಾಮಾ! ನೀತಿಶಾಸ್ತ್ರವೇತ್ತನಾದ ನೀನು ಮರಣಕಾಲವನ್ನು ತಿಳಿದುಕೊಳ್ಳದಿರಲು ಕಾರಣವೇನು? ಮಹಾ ಮೇಧಾವಿಯೂ, ಬುದ್ಧಿಶಾಲಿಯೂ ಆದ ನೀನು ಒದಗಿಬರುವ ವ್ಯಸನಗಳನ್ನು ನೀಗಿಕೊಳ್ಳುವುದರಲ್ಲಿ ಸಮರ್ಥನಲ್ಲವೇ? ಹಾಗಿದ್ದೂ ನೀನೀರೀತಿ ದುಃಖಗಳನ್ನು ಹೋಗಲಾಡಿಸಿಕೊಳ್ಳದಿರಲು ಕಾರಣವು ತಿಳಿಯಲಿಲ್ಲವು. ಎಲೈ ಕಮಲಲೋಚನನೇ! ನೀನು ನನಗೋಸುಗ ಹೊರಟು ಬಂದು, ಮಹಾ ಘಾತುಕಳೂ, ಕಾಳರಾತ್ರಿಸ್ವರೂಪಳೂ ಆದ ಮೃತ್ಯುವನ್ನು ಆಲಿಂಗಿಸಿ ಮೃತಿಯೊಂದಿದೆಯಲ್ಲವೆ! ಇನ್ನು ನಾನೆಂತು ಜೀವಿಸಲಿ! ಪುರುಷೋತ್ತಮನೂ, ಮಹಾ ಭುಜನೂ ಆದ ಎಲೈ ಶ್ರೀರಾಮನೇ! ದೀನಳಾಗಿರುವ ನನ್ನನ್ನು ತೊರೆದು ನನಗಿಂತಲೂ ಪ್ರಿಯವಾದ ಈ ಭೂಮಿಯನ್ನು ಅಪ್ಪಿಕೊಂಡು ಶಯನಿಸಿರುವೆಯಲ್ಲವೆ! ಎಲೈ ವೀರನೇ! ಸ್ವರ್ಣಾಲಂಕೃತವಾಗಿ, ಎಲ್ಲ ಕಾಲಗಳಲ್ಲಿಯೂ ನೀನು ಧರಿಸುತ್ತಿದ್ದ ಈ ನಿನ್ನ ಧನುಸ್ಸನ್ನು ನಾನು ಯಾವಾವಾಗಲೂ ಗಂಧಪುಷ್ಪಾದಿಗಳಿಂದ ಪೂಜಿಸುತ್ತಿದ್ದೆನಲ್ಲವೆ? ಎಲೈ ರಾಘವನೇ! ನಿನಗೆ ತಂದೆಯೂ, ನನಗೆ ಮಾವನೂ ಆದ ದಶರಥರಾಯನೊಡನೆಯೂ, ಇತರ ಪಿತೃದೇವತೆ

ನಘ! । ಸರ್ವೈಶ್ಚ ಪಿತೃಭಿಸ್ಸಾರ್ಧಂ ನೂನಂ ಸ್ವರ್ಗೇ ಸಮಾಗತಃ ॥ ೧೮ ॥ ದಿವಿ
ನಕ್ಷತ್ರಭೂತಸ್ತ್ವಂ ಮಹತ್ಕರ್ಮ ಕೃತಾಂ ಪ್ರಿಯಂ । ಪುಣ್ಯಂ ರಾಜರ್ಷಿವಂಶಂ
ತ್ವಮಾತ್ಮನಸ್ಸಮುಪೇಕ್ಷಸೇ ॥ ೧೯ ॥ ಕಿಂ ಮಾಂ ನಪ್ರೇಕ್ಷಸೇ ರಾಜನ್! ಕಿಂ ಮಾಂ
ನಪ್ರತಿಭಾಷತೇ । ಬಾಲಾಂ ಬಾಲ್ಯೇನ ಸಂಪ್ರಾಪ್ತಾಂ ಭಾರ್ಯಾಂ ಮಾಂ ಸಹ
ಚಾರಿಣೀಂ ॥ ೨೦ ॥ ಸಂಶ್ರುತಂ ಗೃಹ್ಣತಾ ಪಾಣಿಂ ಚರಿಷ್ಯಾಮೀತಿ ಯತ್ತ್ವಯಾ ।
ಸ್ಮರ ತನ್ಮಮ ಕಾಕುತ್ಸ್ಥ! ನಯ ಮಾಮಪಿ ದುಃಖಿತಾಂ ॥ ೨೧ ॥ ಕಸ್ಮಾನ್ಮಾಮಪ
ಹಾಯ ತ್ವಂ ಗತೋ ಗತಿಮತಾಂವರ! । ಅಸ್ಮಾಲ್ಲೋಕಾದಮುಂ ಲೋಕಂ ತ್ಯಕ್ತ್ವಾ

---

ಮಾವನಾದ, ದಶರಥೇನ - ದಶರಥಮಹಾರಾಯನೊಡನೆ, ತ್ವ - ನೀನು, ಸಮಾಗತಃ - ಸೇರಿದವ ನಾದೆ, ನೂನಂ - ನಿಶ್ಚಯವು. ॥ ೧೮ ॥ ಮಹ.....ತಾಂ - ಮಹಾ ಕಾರ್ಯವನ್ನು ಮಾಡಿದವರಿಗೆ, ಪ್ರಿಯಂ - ಇಷ್ಟವಾದ, ಆತ್ಮನಃ - ನಿನ್ನ, ಪುಣ್ಯಂ - ಪುಣ್ಯಕರವಾದ, ರಾಜರ್ಷಿವಂಶಂ - ರಾಜರ್ಷಿ ವಂಶವನ್ನು, ತ್ವಂ - ನೀನು, ದಿವಿ - ಅಂತರಿಕ್ಷದಲ್ಲಿ, ನಕ್ಷತ್ರಭೂತಃ - ನಕ್ಷತ್ರಭೂತನಾಗಿ, ಸಮು ಪೇಕ್ಷಸೇ - ಉಪೇಕ್ಷಿಸುವೆ. ॥೧೯॥ ಹೇ ರಾಜನ್ - ಎಲೈ ಅರಸೇ, ಮಾಂ - ನನ್ನನ್ನು, ಕಿನ್ನಪ್ರೇಕ್ಷಸೇ- ಏಕೆ ನೋಡುವದಿಲ್ಲ, ಬಾಲ್ಯೇನ - ಬಾಲ್ಯದಲ್ಲಿಯೇ, ಸಂಪ್ರಾಪ್ತಾಂ - ವಿವಾಹಿತಳಾದ, ಸಹಚಾರಿಣೀಂ- ನಿನ್ನ ಸಂಗಡ ಇರುವ, ಮಾಂ - ಇಂಥಾ ಅವಸ್ಥೆಯನ್ನು ಹೊಂದಿದ, ಭಾರ್ಯಾಂ - ಧರಿಸಲು ಯೋಗ್ಯ ಳಾದ, ಮಾಂ - ನನ್ನನ್ನು ಕುರಿತು, ಕಿನ್ನಪ್ರತಿಭಾಷ್ಯಸೇ - ಏಕೆ ಮಾತಾಡದೆ ಇರುವೆ. ॥ ೨೦ ॥ ತ್ವಯಾಸಹ - ನಿನ್ನೊಡನೆ, ಚರಿಷ್ಯಾಮಿ - ಆಚರಿಸುವೆನೆಂದು, ಮಮ - ನನ್ನ, ಪಾಣಿಂ - ಪಾಣಿ ಯನ್ನು, ಗೃಹ್ಣತಾ - ಗ್ರಹಿಸಿದ, ತ್ವಯಾ - ನಿನ್ನಿಂದ, ಯತ್ಸಂಶ್ರುತಂ - ಯಾವದು ಪ್ರತಿಜ್ಞೆ ಮಾಡ ಲ್ಪಟ್ಟಿತೋ, ತತ್ - ಅದನ್ನು, ಸ್ಮರ - ಸ್ಮರಿಸಿಕೋ, ದುಃಖಿತಾಂ - ದುಃಖಿತಳಾದ, ಮಾಮಪಿ - ನನ್ನನ್ನೂ, ನಯ - ಕರೆದುಕೊಂಡು ಹೋಗು. ॥ ೨೧ ॥ ಮತಿಮತಾಂ - ಬುದ್ಧಿಶಾಲಿಗಳಲ್ಲಿ, ವರ - ಉತ್ತಮನೇ, ಮಾಂ - ನನ್ನನ್ನು, ಅಪಹಾಯ - ಬಿಟ್ಟು, ಅಸ್ಮಾಲ್ಲೋಕಾತ್ - ಈ ಲೋಕ ದಿಂದ, ಸುದುಃಖಿತಾಂ - ಬಹು ದುಃಖಿತಳಾದ, ಮಾಮಪಿ - ಪ್ರಿಯಪಾತ್ರಳಾದರೂ ನನ್ನನ್ನು, ತ್ಯಕ್ತ್ವಾ - ಬಿಟ್ಟು, ಅಮುಂಲೋಕಂ - ಪರಲೋಕವನ್ನು, ಕಸ್ಮಾತ್ - ಯಾವ ಕಾರಣದಿಂದ, ತ್ವಂ- ನೀನು, ಗತಃ - ಹೋದೆ. ॥೨೨॥ ಕಲ್ಯಾಣೈಃ - ಶುಭಕರವಾದ ಚಂದನಾದಿಗಳಿಂದಲೂ (ಗೋ) ಅಲಂ

---

ಗಳೊಡನೆಯೂ ಸೇರಿ ಸ್ವರ್ಗಲೋಕದಲ್ಲಿ ವಾಸಿಸಲು ಹೋದೆಯಾ! ಮಹಾ ಪುಣ್ಯಗಳನ್ನು ಮಾಡಿದವರು ಹೊಂದಬಯಸುವ ಪಾವನವಾದ ನಿಮ್ಮ ರಾಜರ್ಷಿವಂಶವನ್ನು ನೀನಿನ್ನುಮೇಲೆ ಅಂತರಿಕ್ಷದಲ್ಲಿಯೇ ನಕ್ಷತ್ರರೂಪನಾಗಿ ನಿಂತು ನೋಡುತ್ತಿರುವೆಯಾ! ಎಲೈ ರಾಜಶ್ರೇಷ್ಠನೇ! ಇದೇನಿದು; ನೀನು ನನ್ನನ್ನೇಕೆ ನೋಡುವುದಿಲ್ಲ? ನನ್ನೊಡನೇಕೆ ಮಾತನಾಡುವುದಿಲ್ಲ? ಬಾಲೆಯೂ, ಬಾಲ್ಯದಲ್ಲಿಯೇ ನಿನ್ನೊಡನೆ ವಿವಾಹಿತಳಾಗಿ ನೀನು ಮಾಡುವ ಧರ್ಮಕಾರ್ಯ ಗಳಲ್ಲಿ ಸಹಧರ್ಮಚಾರಿಣಿಯೂ, ಭಾರ್ಯೆಯೂ ಆಗಿರುವ ನನ್ನೊಡನೆ ಮಾತನಾಡದಿರಲು ಕಾರಣವೇನು?॥೧೩–೨೦॥ಎಲೈಕಾಕುತ್ಸ್ಥನೇ! ನೀನು ನನ್ನಪಾಣಿಗ್ರಹಣವನ್ನುಮಾಡುವ ಕಾಲ ದಲ್ಲಿ ನನ್ನೊಡನೆಯೇ ಎಲ್ಲ ಕಾಲಗಳಲ್ಲಿಯೂ ಧರ್ಮದಿಂದ ನಡೆದುಕೊಳ್ಳುವೆನೆಂದು ಮಾತು ಕೊಟ್ಟಿಯಲ್ಲವೆ? ಈಗ ನೀನು ನಿನ್ನನ್ನು ತೊರೆದು ದುಃಖಿಸುತ್ತಿರುವ ನನ್ನನ್ನೂ ಕರೆದುಕೊ! ಗತಿವಂತರಲ್ಲಿ ಶ್ರೇಷ್ಠನಾದವನೇ! ನೀನಾವ ಕಾರಣದಿಂದ ನನ್ನನ್ನು ತೊರೆದು ಹೊರಟು

ಮಾಮಪಿ ದುಃಖಿತಾಂ ॥ ೨೨ ॥ ಕಲ್ಯಾಣೈರುಚಿತಂ ಯತ್ತತ್ಪರಿಷ್ವಕ್ತಂ ಮಯೈವತು । ಕ್ರವ್ಯಾದೈಸ್ತಚ್ಛರೀರಂ ತೇ ನೂನಂ ವಿಪರಿಕೃಷ್ಯತೇ ॥ ೨೩ ॥ * ಅಗ್ನಿಷ್ಟೋಮಾದಿಭಿರ್ಯಜ್ಞೈರಿಷ್ಟವಾನಾಪ್ತದಕ್ಷಿಣೈಃ । ಅಗ್ನಿಹೋತ್ರೇಣ ಸಂಸ್ಕಾರಂ ಕೇನ ತ್ವಂ ತು ನಲಪ್ಸ್ಯಸೇ ॥ ೨೪ ॥ ಪ್ರವ್ರಜ್ಯಾಮುಪಪನ್ನಾನಾಂ ತ್ರಯಾಣಾಮೇಕಮಾಗತಂ । ಪರಿಪ್ರಕ್ಷ್ಯತಿ ಕೌಸಲ್ಯಾ ಲಕ್ಷ್ಮಣಂ ಶೋಕಲಾಲಸಾ ॥ ೨೫ ॥ ಸತಸ್ಯಾಃ ಪರಿಪೃಚ್ಛಂತ್ಯಾಃ ವಧಂ ಮಿತ್ರಬಲಸ್ಯತೇ । ತವ ಚಾಖ್ಯಾಸ್ಯತೇ ನೂನಂ ನಿಶಾಯಾಂ ರಾಕ್ಷಸೈ

---

ಕಾರಗಳಿಂದಲೂ, ಉಚಿತಂ-ಅಭ್ಯಸ್ತವಾದ, ಯತ್-ಯಾವ ಶರೀರವೋ, ತತ್-ಅದು, ಮಯೈವ-ನನ್ನಿಂದಲೇ, ಪರಿಷ್ವಕ್ತಂ-ಆಲಿಂಗನ ಮಾಡಲ್ಪಟ್ಟಿತು, ಕಿಂತು - ಮತ್ತೇನಂದರೆ, ತೇ - ನಿನ್ನ, ತಚ್ಛರೀರಂ - ಆ ಶರೀರವು, ಕ್ರವ್ಯಾದೈಃ - ರಾಕ್ಷಸರಿಂದ, (ಅಥವಾ - ಮಾಂಸಾಹಾರಿಗಳಾದ ಡೇಗೆ ಮೊದಲಾದವುಗಳಿಂದ), ವಿಪರಿಕೃಷ್ಯತೇ - ಸೆಳೆಯಲ್ಪಡುತ್ತದೆ. ॥ ೨೩ ॥ ತ್ವಂತು - ನೀನಾದರೆ, ಆಪ್ತದಕ್ಷಿಣೈಃ-ಸಾಕಾದ ದಕ್ಷಿಣೆಗಳುಳ್ಳ, ಅಗ್ನಿಷ್ಟೋಮಾದಿಭಿಃ-ಅಗ್ನಿಷ್ಟೋಮವೇ ಮೊದಲಾದ, ಯಜ್ಞೈಃ-ಯಾಗಗಳಿಂದ, ಇಷ್ಟವಾನ್ - ದೇವತಾಪೂಜೆಯನ್ನುಮಾಡಿ, ಅಗ್ನಿಹೋತ್ರೇಣ - ಯಜ್ಞಸಂಬಂಧವಾದ ಅಗ್ನಿಯಿಂದ, ಸಂಸ್ಕಾರಂ - ಸಂಸ್ಕಾರವನ್ನು, ಕೇನ - ಯಾವ ಕಾರಣದಿಂದ, ನಲಪ್ಸ್ಯತೇ - ಹೊಂದಲಿಲ್ಲ. ॥೨೪॥ ಪ್ರವ್ರಜ್ಯಾಂ - ಪ್ರಯಾಣವನ್ನು, ಉಪಪನ್ನಾನಾಂ - ಹೊಂದಿದ, ತ್ರಯಾಣಾಂ-ರಾಮಾದಿಗಳ ಮಧ್ಯದಲ್ಲಿ, ಏಕಂ - ಒಬ್ಬನಾಗಿ, ಆಗತಂ - ಬಂದ, ಲಕ್ಷ್ಮಣಂ - ಲಕ್ಷ್ಮಣನನ್ನು, ಕೌಸಲ್ಯಾ-ಕೌಸಲ್ಯಾದೇವಿಯು, ಶೋಕಲಾಲಸಾ-ಶೋಕಾಕ್ರಾಂತಳಾಗಿ, ಪರಿಪ್ರಕ್ಷ್ಯತಿ-ಹೇಳಿದಳು.॥೨೫॥ ಪರಿಪೃಚ್ಛಂತ್ಯಾಃ - ಕೇಳುತ್ತಿರುವ, ತಸ್ಯಾಃ - ಆ ಕೌಸಲ್ಯಾದೇವಿಗೆ, ಸಃ - ಆ ಲಕ್ಷ್ಮಣನು, ತೇ - ನಿನ್ನ ಸಂಬಂಧವಾದ, ಮಿತ್ರಬಲಸ್ಯ - ಸ್ನೇಹಿತರ, ವಧಂ - ಸಂಹಾರವನ್ನು, ನಿಶಾಯಾಂ - ರಾತ್ರಿಕಾಲವಲ್ಲ,

---

ಹೋದೆ? ಅಧಿಕ ದುಃಖವನ್ನು ಹೊಂದುತ್ತಿರುವ ನನ್ನನ್ನು ಈ ಲೋಕದಲ್ಲಿಯೇ ಬಿಟ್ಟು ನೀನು ಮಾತ್ರ ಪರಲೋಕವನ್ನೈದುವುದು ಯೋಗ್ಯವೆನಿಸುವುದೆ? ರಘುಕುಲೋತ್ತಮಾ; ರಾಮಾ! ಮಂಗಳಗಳೊಡಗೂಡಿರುವುದೂ, ನನ್ನಿಂದ ಆಲಿಂಗಿತವಾಗಿರುವುದೂ ಆದ ನಿನ್ನ ಶರೀರವನ್ನು ಗೃಧ್ರವೇ ಮೊದಲಾದ ಪಕ್ಷಿಗಳು ತಿನ್ನುತ್ತಿರಬಹುದೇನೋ! ನಾನೇನು ಮಾಡಲಿ! ಅಯ್ಯೋ!! ರಾಮಚಂದ್ರ! ಸಂಪೂರ್ಣ ದಕ್ಷಿಣೆಗಳಿಂದ ರಾಜರು ಮಾಡಬೇಕಾದ ಅಗ್ನಿಷ್ಟೋಮಾದಿ ಯಜ್ಞಗಳನ್ನು ಮಾಡಿದ ನಿನ್ನ ದೇಹಕ್ಕೆ ಅಗ್ನಿಸಂಸ್ಕಾರವಾಗದಿರಲು ಕಾರಣವೇನು? ಪೂಜ್ಯನೇ! ನಾನೂ, ನೀನೂ, ಲಕ್ಷ್ಮಣನೂ ಅರಣ್ಯಕ್ಕೆ ಹೊರಟುಬಂದೆವಲ್ಲವೆ? ಈಗ ಲಕ್ಷ್ಮಣನೊಬ್ಬನೇ ಅಯೋಧ್ಯೆಗೆ ಹೋದಲ್ಲಿ ಕೌಸಲ್ಯಾದೇವಿಯು ಅಧಿಕ ದುಃಖದಿಂದ ಸೀತಾರಾಮರೆಲ್ಲಿಯೆಂದು ಕೇಳುವಳು. ಆಗ ಲಕ್ಷ್ಮಣನು ನಿನ್ನ ಸ್ನೇಹಿತನಾದ ಸುಗ್ರೀವನ ಸೇನೆಯೆಲ್ಲವೂ

---

* ಇಲ್ಲಿ ರಾಮಪಂಡಿತರೂ, ರಾಮಾನುಜರೂ, "ಶ್ರೀರಾಮನು ಈವರೆಗಾಗಲೇ ಅಗ್ನಿಷ್ಟೋಮಾದಿಗಳನ್ನು ಮಾಡಿರುವುದಾಗಿಯೂ, ಅಂತಹನಿಗೆ ಸಲ್ಲಬೇಕಾದ ವೈತಾನಾಗ್ನಿಸಂಸ್ಕಾರವೇಕೆ ದೊರೆಯಲಿಲ್ಲವೆಂದೂ" ಸೀತಾ ವಾಕ್ಯದ ಅಭಿಪ್ರಾಯವೆಂದು ವ್ಯಾಖ್ಯಾನಿಸಿರುವರು. ಆದರೆ ಗೋವಿಂದರಾಜರು, "ವನವಾಸನಿವೃತ್ಯನಂತರ ಜ್ಯೋತಿಷ್ಟೋಮಾದಿಗಳನ್ನು ಮಾಡಿ ದೇಹಾವಸಾನದಲ್ಲಿ ವೈತಾನಾಗ್ನಿಯಿಂದ ಸಂಸ್ಕೃತನಾಗಬೇಕಾಗಿದ್ದ ನಿನಗೆ ಹಾಗಾಗದಿರಲು ಕಾರಣವೇನು?" ಎಂಬ ಅರ್ಥವನ್ನು ಬರೆದು ವನವಾಸಾತ್ಪೂರ್ವದಲ್ಲಿ ರಾಮನು ಯಾವ ಯಜ್ಞವನ್ನೂ ಮಾಡಿಲ್ಲವೆಂದೂ, ಈ ವಿಚಾರವು ಅಯೋಧ್ಯಾಕಾಂಡದಲ್ಲಿ ಚೆನ್ನಾಗಿ ಪ್ರತಿಪಾದಿತವಾಗಿರುವುದೆಂದೂ ಬರೆದಿರುವರು.

ರ್ವಧಂ ॥ ೨೬ ॥ ಸಾ ತ್ವಾಂ ಸುಪ್ತಂ ಹತಂ ಶ್ರುತ್ವಾ ಮಾಂಚ ರಕ್ಷೋಗೃಹಂ ಗತಾಂ । ಹೃದಯೇನಾವದೀರ್ಣೇನ ನಭವಿಷ್ಯತಿ ರಾಘವ ! ॥ ೨೭ ॥ ಮಮ ಹೇತೋರ ನಾರ್ಯಾಯಾಹ್ಯನರ್ಹಃ ಪಾರ್ಥಿವಾತ್ಮಜಃ । ರಾಮಸ್ಸಾಗರಮುತ್ತೀರ್ಯ ಸತ್ವವಾ ಗೋಷ್ಪದೇ ಹತಃ ॥ ೨೮ ॥ ಅಹಂ ದಾಶರಥೇನೋಢಾ ಮೋಹಾತ್ಸ್ವಕುಲಪಾಂಸನೀ । ಆರ್ಯಪುತ್ರಸ್ಯ ರಾಮಸ್ಯ ಭಾರ್ಯಾ ಮೃತ್ಯುರಜಾಯತ ॥ ೨೯ ॥ ನೂನಮನ್ಯಾಂ ಮಯಾಜಾತಿಂ ವಾರಿತಂ ದಾನಮುತ್ತಮಂ । ಯಾಹಮದ್ಯೇಹ ಶೋಚಾಮಿ ಭಾರ್ಯಾ

ರಾಕ್ಷಸೈಃ - ರಾಕ್ಷಸರಿಂದ ಮಾಡಲ್ಪಟ್ಟ, ತವ - ನಿನ್ನ, ವಧಂಚ - ಸಂಹಾರವನ್ನು, ಆಖ್ಯಾಸ್ಯತೇ - ಹೇಳುತ್ತಾನೆ. ॥೨೬॥ ಸಾ - ಆಕೆಯು ಸುಪ್ತಂಹತಂ - ಮಲಗಿದ್ದಾಗ ಹತನಾದ, ತ್ವಾಂ - ನಿನ್ನನ್ನೂ, ರಕ್ಷೋಗೃಹಂಗತಾಂ - ರಾಕ್ಷಸರ ಮನೆಯನ್ನು ಹೊಂದಿದ, ಮಾಂಚ - ನನ್ನನ್ನೂ, ಶ್ರುತ್ವಾ - ಕೇಳಿ, ಹೇ ರಾಘವ - ಎಲೈ ಶ್ರೀರಾಮನೇ, ಅವದೀರ್ಣೇನ - ಸೀಳಿದ, ಹೃದಯೇನ - ಮನದಿಂದ ಕೂಡಿ, ನಭವಿಷ್ಯತಿ - ಜೀವಿಸಲಾರಳು. ॥ ೨೭ ॥ ಅನಾರ್ಯಾಯಾಃ - ನೀಚಳಾದ, ಮಮಹೇತೋಃ - ನನ್ನ ನಿಮಿತ್ತವಾಗಿ, ಅನರ್ಹಃ - ಇಂಥಾ ವಧೆಗೆ ಅರ್ಹನಾಗದಿರುವ, ಪಾರ್ಥಿವಾತ್ಮಜಃ - ರಾಜಪುತ್ರನಾದ, ಸತ್ವವಾ - ಬಲವಂತನಾದ, ರಾಮಃ - ಶ್ರೀರಾಮನು, ಸಾಗರೇ - ಸಮುದ್ರವನ್ನು, ಉತ್ತೀರ್ಯ - ದಾಟಿ, ಗೋಷ್ಪದೇ - ಗೋಷ್ಪಾದದಲ್ಲಿ, ಹತಃ - ಹತನಾದನೋ. ॥ ೨೮ ॥ ಕುಲಪಾಂಸನೀ - ಕುಲ ನಾಶಕಳಾದ, ಅಹಂ - ನಾನು, ದಾಶರಥೇನ - ಶ್ರೀರಾಮನಿಂದ, ಯಸ್ಮಾದೂಢಾ - ಯಾವ ನಿಮಿತ್ತ ದಿಂದ ಮದುವೆ ಮಾಡಲ್ಪಟ್ಟವಳಾದೆನೋ, ತಸ್ಮಾತ್ - ಆ ಕಾರಣದಿಂದ, ಆರ್ಯಪುತ್ರಸ್ಯ - ರಾಜಪುತ್ರ ನಾದ, ರಾಮಸ್ಯ - ಶ್ರೀರಾಮನಿಗೆ, ಭಾರ್ಯಾ - ಹೆಂಡತಿಯಾದ ನಾನೇ, ಮೃತ್ಯುಃ - ಮೃತ್ಯುಸ್ವರೂ ಪಳು, ಅಜಾಯತ - ಆದೆನು. ॥೨೯॥ (ಗೋ) ಅನ್ಯಾಂಜಾತಿಂ - ಮತ್ತೊಂದು ಜನ್ಮದಲ್ಲಿ, ಉತ್ತಮಂ - ಸರ್ವೋತ್ತಮವಾದ, ದಾನಂ - ಕನ್ಯಾದಾನವು, ವಾರಿತಂ - ತಡೆಯಲ್ಪಟ್ಟಿತು, ನೂನಂ - ನಿಶ್ಚಯವು, ಇಹ - ಈ ಜನ್ಮದಲ್ಲಿ, ಯಾಹಂ - ಯಾವ ನಾನು, ಸರ್ವಾತಿಥೇಃ - ಸಮಸ್ತರಾದ ಅತಿಥಿಗಳನ್ನು ಪೂಜಿಸುತ್ತಿರುವ ಶ್ರೀರಾಮನಿಗೆ, ಭಾರ್ಯಾ - ಹೆಂಡತಿಯಾದರೂ, ಶೋಚಾಮಿ - ದುಃಖಿಸುತ್ತೇನೆಯೋ.

ನಾಶವಾದುದು, ರಾತ್ರಿಯಲ್ಲಿ ರಾಕ್ಷಸರು ನಿನ್ನನ್ನು ಕೊಂದುದು ಇವೇ ಮೊದಲಾದ ವೃತ್ತಾಂತ ಗಳನ್ನು ತಿಳಿಸುವನು. ಆಗಲಾಕೆಯು ಬಹಳ ದುಃಖಿತೆಯಾಗುವಳು. ಎಲೈ ಶ್ರೀರಾಮನೇ! ಆ ಕೌಸಲ್ಯಾದೇವಿಯು ನೀನು ಮೃತಿಯೊಂದಿದುದನ್ನೂ, ನಾನು ರಾಕ್ಷಸರ ವಶವೈದಿದುದನ್ನೂ ಕೇಳಿ ಎದೆಯೊಡದು ಮೃತಿಯೊಂದುವಳು. ॥ ೨೧-೨೭ ॥ ಅಯ್ಯಯ್ಯೋ! ಪಾಪಿಷ್ಠಳಾದ ನನ್ನ ನಿಮಿತ್ತವಾಗಿ ದಶರಥಮಹಾರಾಜನ ಕುಮಾರನಾದ ಶ್ರೀರಾಮಚಂದ್ರನು ಇಂತಹ ದುರ್ಮರಣವನ್ನು ಹೊಂದಿದನು ! ಅಕಟಕಟಾ !! ಶ್ರೀರಾಮನು ಸಾಗರವನ್ನು ದಾಟಿಬಂದು ಗೋಷ್ಪದದಲ್ಲಿಯೇ ಹತನಾಗಿ ಹೋದನು. ನಾನೇನುಮಾಡಲಿ! ಅಯ್ಯೋ!! ಕುಲನಾಶಕಳಾದ ನಾನು ಅನ್ಯಾಯವಾಗಿ ದಶರಥರಾಜಕುಮಾರನನ್ನು ಮದುವೆ ಮಾಡಿಕೊಂಡೆನು. ಅಕಟಾ! ಆರ್ಯಪುತ್ರನಾದ ಶ್ರೀರಾಮನಿಗೆ ಭಾರ್ಯೆಯಾಗಲು ದೈವವು ಮೃತ್ಯುರೂಪಳಾದ ನನ್ನನ್ನೇ ಸೃಜಿಸಿರಬೇಕು. ಆದುದರಿಂದಲೇ, ಸರ್ವಲೋಕಪೂಜ್ಯನಾದ ಆತನಿಗೆ ಭಾರ್ಯೆಯಾದರೂ ನಾನಿಂತು ದುಃಖವನ್ನು ಹೊಂದುತ್ತಿರುವೆನು. ನಾನು ಹಿಂದಿನ ಜನ್ಮದಲ್ಲಿ ಉತ್ತಮೋತ್ತಮ ವಾದ ಕನ್ಯಾದಾನವನ್ನು ತಡೆದಿರಬೇಕು. ಅದರಿಂದಲೇ ಸರ್ವೋತ್ತಮನಾದ ರಾಮಭಾರ್ಯೆ

ಸರ್ವಾತಿಥೇರಪಿ ||೩೦|| ಸಾಧು ಪಾತಯ ಮಾಂ ಕ್ಷಿಪ್ರಂ ರಾಮಸ್ಯೋಪರಿ ರಾವಣ! | ಸಮಾನಯ ಪತಿಂ ಪತ್ನ್ಯಾ ಕುರು ಕಲ್ಯಾಣಮುತ್ತಮಂ || ೩೧ || ಶಿರಸಾ ಮೇ ಶಿರಶ್ಚಾಸ್ಯ ಕಾಯಂ ಕಾಯೇನ ಯೋಜಯ | ರಾವಣಾಽನುಗಮಿಷ್ಯಾಮಿ ಗತಿಂ ಭರ್ತುರ್ಮಹಾತ್ಮನಃ | (ಮುಹೂರ್ತಮಪಿ ನೇಚ್ಛಾಮಿ ಜೀವಿತುಂ ಪಾಪಜೀವಿತಾ | ಶ್ರುತಂ ಮಯಾ ವೇದವಿದಾಂ ಬ್ರಾಹ್ಮಣಾನಾಂ ಪಿತುರ್ಗೃಹೇ || ಯಾಸಾಂ ಸ್ತ್ರೀಣಾಂ ಪ್ರಿಯೋ ಭರ್ತಾ ತಾಸಾಂ ಲೋಕಾ ಮಹೋದಯಾಃ | ಕ್ಷಮಾ ಯಸ್ಮಿನ್ ದಮಸ್ತ್ಯಾಗಃ ಸತ್ಯಂ ಧರ್ಮಃ ಕೃತಜ್ಞತಾ | ಅಹಿಂಸಾಚೈವ ಭೂತಾನಾಂ ತಮೃತೇ ಕಾಗತಿರ್ಮಮ) ||೩೨|| ಇತಿ ಸಾ ದುಃಖಸಂತಪ್ತಾ ವಿಲಲಾಪಾಯತೇಕ್ಷಣಾ | ಭರ್ತುಃ ಶಿರೋ ಧನುಸ್ತತ್ರ ಸಮೀಕ್ಷ್ಯ ಚ ಪುನಃಪುನಃ" || ೩೩ || ಏವಂ ಲಾಲಪ್ಯಮಾನಾಯಾಂ ಸೀತಾಯಾಂ ತತ್ರ ರಾಕ್ಷಸಃ | ಅಭಿಚಕ್ರಾಮ ಭರ್ತಾರಮನೀಕಸ್ಥಃ ಕೃತಾಂಜಲಿಃ || ೩೪ ||

(ಗೋ) || ೩೦ || ಹೇ ರಾವಣ - ಎಲೈ ರಾವಣನೇ, ಮಾಂ - ನನ್ನನ್ನು, ಕ್ಷಿಪ್ರಂ - ಜಾಗ್ರತೆಯಾಗಿ, ರಾಮಸ್ಯ - ಶ್ರೀರಾಮನ, ಉಪರಿ - ಮೇಲ್ಭಾಗದಲ್ಲಿ, ಸಾಧು - ಚನ್ನಾಗಿ, ಪಾತಯ - ಬೀಳಿಸು, ಪತಿಂ - ಪತಿಯನ್ನು, ಸಮಾನಯ - ಸೇರಿಸು, ಪತ್ನ್ಯಾಃ - ಹೆಂಡತಿಗೆ, ಉತ್ತಮಂ - ಸರ್ವೋತ್ತಮವಾದ, ಕಲ್ಯಾಣಂ - ಪತಿಸಂಯೋಗರೂಪವಾದ ಶುಭವನ್ನು, ಕುರು - ಮಾಡು. || ೩೧ || ಅಸ್ಯ - ಈ ಶ್ರೀರಾಮನ, ಕಾಯೇನ - ಶರೀರದೊಡನೆ, ಕಾಯಂ - ಶರೀರವನ್ನೂ, ಶಿರಸಾ - ಶಿರಸ್ಸಿನೊಡನೆ, ಶಿರಃ - ಶಿರಸ್ಸನ್ನೂ, ಯೋಜಯ - ಸೇರಿಸು, ಮಹಾತ್ಮನಃ - ಮಹಾನುಭಾವನಾದ, ಭರ್ತುಃ - ಪತಿಯ, ಗತಿಂ - ಗತಿಯನ್ನು, ಅನುಗಮಿಷ್ಯಾಮಿ - ಅನುಸರಿಸುವೆನು. || ೩೨ || ಆಯತೇಕ್ಷಣಾ - ವಿಸ್ತಾರವಾದ ನೇತ್ರಗಳುಳ್ಳ, ಸಾ - ಆ ಸೀತಾದೇವಿಯು, ತತ್ರ - ಆ ಅಶೋಕವನದಲ್ಲಿ, ಭರ್ತುಃ - ಪತಿಯ, ಶಿರಃ - ಶಿರವನ್ನೂ, ಧನುಃ - ಕೋದಂಡವನ್ನೂ, ಸಮೀಕ್ಷ್ಯಚ - ನೋಡಿ, ಪುನಃಪುನಃ - ಬಾರಿಬಾರಿಗೂ, ದುಃಖಸಂತಪ್ತಾ - ದುಃಖಾಕ್ರಾಂತಳಾಗಿ, ವಿಲಲಾಪ - ಪ್ರಲಾಪಮಾಡಿದಳು. ||೩೩|| ತತ್ರ - ಆ ಅಶೋಕವನದಲ್ಲಿ, ಸೀತಾಯಾಂ - ಸೀತಾದೇವಿಯು, ಏವಂ - ಈ ಪ್ರಕಾರವಾಗಿ, ವಿಲ....ಯಾಂ - ವಿಲಾಪಮಾಡುತ್ತಿರಲು, ಅನೀಕಸ್ಥಃ - ದ್ವಾರಪಾಲಕನು, ಕೃತಾಂಜಲಿಃ - ಅಂಜಲಿಬದ್ಧನಾಗಿ, ಭರ್ತಾರಂ - ಧಣಿಯಾದ ರಾವಣನನ್ನು, ಅಭಿಚಕ್ರಾಮ - ಉದ್ದೇಶಿಸಿ ಬಂದನು. || ೩೪ || ಹೇ ಆರ್ಯಪುತ್ರ - ಎಲೈ ರಾಜಪುತ್ರನೇ, ವಿಜಯಸ್ವ - ಜಯಶೀಲನಾಗು, ಇತಿ - ಇಂತೆಂದು,

ಯಾನರೂ ಈ ರೀತಿ ದುಃಖಕ್ಕೀಡಾದೆನು. ಓ ರಾವಣಾ! ನನ್ನನ್ನೀಗಲೇ ಶ್ರೀರಾಮಮೂರ್ತಿಯ ಕಳೇಬರದಮೇಲೆ ಬೀಳಿಸು. ಎಲೈ ರಾವಣಾಸುರನೇ! ಭಾರ್ಯೆಯಾದ ನನ್ನನ್ನು ಭರ್ತನಾದ ರಾಮನೊಡನೆ ಸೇರಿಸು. ನನ್ನ ಶಿರಸ್ಸನ್ನು ರಾಮನ ಶಿರಸ್ಸಿನೊಡಗೂಡಿಸು. ನನ್ನ ಶರೀರವನ್ನು ಆತನ ಶರೀರದೊಡನೆ ಸೇರಿಸು. ನೀನಿಂತುಗೈದರೆ ನಾನು ನನ್ನ ಭರ್ತನಾದ ಶ್ರೀರಾಮನೊಡನೆ ಪರಲೋಕಕ್ಕೆ ಹೋಗುವೆನು" ಎಂದುಹೇಳಿ ವಿಶಾಲನೇತ್ರೆಯಾದ ಆಕೆಯು ಭರ್ತನಾದ ಆ ರಾಮನ ಶಿರಸ್ಸನ್ನೂ, ಧನುಸ್ಸನ್ನೂ ಅಡಿಗಡಿಗೂ ನೋಡಿನೋಡಿ ಬಹಳವಾಗಿ ದುಃಖಿಸುತ್ತಿದ್ದಳು. || ೨೮-೩೩ || ಆಕೆಯು ಈ ರೀತಿ ದುಃಖಿಸುತ್ತಿರಲು ರಾವಣನ ಸೈನ್ಯದಲ್ಲಿದ್ದ ರಾಕ್ಷಸನೊಬ್ಬನು ಅಲ್ಲಿಗೈತಂದು ಕೈಗಳನ್ನು ಜೋಡಿಸಿ ತನ್ನ ಪ್ರಭುವನ್ನು ಜಯಶಬ್ದಗಳಿಂದ ಹರಿಸಿ, "ಎಲೈ ರಾಕ್ಷಸರಾಜೋತ್ತಮನೇ! ನಿನ್ನ ಸೇನಾಪತಿಯಾದ ಪ್ರಹಸ್ತನು

"ವಿಜಯಸ್ವಾರ್ಯಪುತ್ರೇತಿ ಸೋಽಭಿವಾದ್ಯ ಪ್ರಸಾದ್ಯ ಚ । ನ್ಯವೇದಯದನುಪ್ರಾಪ್ತಂ ಪ್ರಹಸ್ತಂ ವಾಹಿನೀಪತಿಂ ॥ ೩೫ ॥ ಅಮಾತ್ಯೈಸ್ಸಹಿತಸ್ಸರ್ವೈಃ ಪ್ರಹಸ್ತಸ್ಸಮುಪಸ್ಥಿತಃ । ತೇನ ದರ್ಶನಕಾಮೇನ ವಯಂ ಪ್ರಸ್ಥಾಪಿತಾಃ ಪ್ರಭೋ ! ॥ ೩೬ ॥ ನೂನಮಸ್ತಿ ಮಹಾರಾಜ ! ರಾಜಭಾವಾತ್ ಕ್ಷಮಾನ್ವಿತಂ । ಕಿಂಚಿದಾತ್ಯಯಿಕಂ ಕಾರ್ಯಂ ತೇಷಾಂ ತ್ವಂ ದರ್ಶನಂ ಕುರು" ॥ ೩೭ ॥ ಏತಚ್ಛ್ರುತ್ವಾ ದಶಗ್ರೀವೋ ರಾಕ್ಷಸಪ್ರತಿವೇದಿತಂ । ಅಶೋಕವನಿಕಾಂ ತ್ಯಕ್ತ್ವಾ ಮಂತ್ರಿಣಾಂ ದರ್ಶನಂ ಯಯೌ ॥ ೩೮ ॥ ಸತು ಸರ್ವಂ ಸಮರ್ಥ್ಯೈವ ಮಂತ್ರಿಭಿಃ ಕೃತ್ಯಮಾತ್ಮನಃ । ಸಭಾಂ ಪ್ರವಿಶ್ಯ ವಿದಧೇ ವಿದಿತ್ವಾ ರಾಮವಿಕ್ರಮಂ ॥ ೩೯ ॥ ಅಂತರ್ಧಾನಂತು ತಚ್ಛೀರ್ಷಂ ತಚ್ಚ ಕಾರ್ಮುಕ

---

ಅಭಿವಾದ್ಯ - ನಮಸ್ಕರಿಸಿ, ಪ್ರಸಾದ್ಯ - ಸಮಾಧಾನಗೊಳಿಸಿ, ವಾಹಿನೀಪತಿಂ - ಸೇನಾನಾಯಕನಾದ, ಪ್ರಹಸ್ತಂ - ಪ್ರಹಸ್ತನನ್ನು, ಅನುಪ್ರಾಪ್ತಂ - ಬಂದವನನ್ನಾಗಿ, ನ್ಯವೇದಯತ್ - ತಿಳುಹಿದನು. ॥೩೫॥ ಹೇ ಪ್ರಭೋ - ಎಲೈ ಸ್ವಾಮಿಯೇ, ಸರ್ವೈಃ - ಸಮಸ್ತರಾದ, ಅಮಾತ್ಯೈಃ - ಮಂತ್ರಿಗಳಿಂದ, ಸಹಿತಃ - ಕೂಡಿದವನಾಗಿ, ಪ್ರಹಸ್ತಃ - ಪ್ರಹಸ್ತನು, ಸಮುಪಸ್ಥಿತಃ - ಬಂದಿದ್ದಾನೆ, ದರ್ಶನಕಾಮೇನ- ನೋಡಲಿಚ್ಛೆಯುಳ್ಳ, ತೇನ - ಆತನಿಂದ, ವಯಂ - ನಾವು, ಪ್ರಸ್ಥಾಪಿತಾಃ - ಕಳುಹಿಸಲ್ಪಟ್ಟೆವು. ॥೩೬॥ ಹೇ ಮಹಾರಾಜ - ಎಲೈ ಮಹಾರಾಜನೇ, ರಾಜಭಾವಾತ್ - ನೀನು ರಾಜನಾಗಿರುವುದರಿಂದ, ಕ್ಷಮಾನ್ವಿತಂ - ನಿನ್ನ ಆಜ್ಞಾನಿರೀಕ್ಷಣೆಯಿಂದ, ಆತ್ಯಯಿಕಂ-ಪ್ರಯಾಸಸಾಧ್ಯವಾದ, ಕಿಂಚಿತ್ಕಾರ್ಯಂ- ಕೊಂಚ ಕೆಲಸವು, ಅಸ್ತಿ - ಇದೆ, ನೂನಂ - ನಿಶ್ಚಯವು, ತ್ವಂ - ನೀನು, ತೇಷಾಂ - ಅವರುಗಳ, ದರ್ಶನಂ - ದರ್ಶನವನ್ನು, ಕುರು - ಮಾಡು. ॥ ೩೭ ॥ ದಶಗ್ರೀವಃ - ರಾವಣನು, ರಾಕ್ಷ....ತಂ- ರಾಕ್ಷಸರಿಂದ ತಿಳುಹಿಸಲ್ಪಟ್ಟ, ಏತತ್ - ಈ ಮಾತನ್ನು, ಶ್ರುತ್ವಾ - ಕೇಳಿ, ಅಶೋಕವನಿಕಾಂ- ಅಶೋಕವನವನ್ನು, ತ್ಯಕ್ತ್ವಾ - ಬಿಟ್ಟು, ಮಂತ್ರಿಣಾಂ - ಮಂತ್ರಿಗಳ, ದರ್ಶನಂ - ದರ್ಶನವನ್ನು ಕುರಿತು, ಯಯೌ - ತೆರಳಿದನು. ॥ ೩೮ ॥ ಸಃ - ಆ ರಾವಣನು, ರಾಮವಿಕ್ರಮಂ - ರಾಮನ ಪರಾಕ್ರಮವನ್ನು, ವಿದಿತ್ವಾತು - ತಿಳಿದಾದರೆ, ಸಭಾಂ - ಮನೆಯನ್ನು, ಪ್ರವಿಶ್ಯ - ಪ್ರವೇಶಿಸಿ, ಮಂತ್ರಿಭಿಃ - ಮಂತ್ರಿಗಳೊಡನೆ, ಸಮರ್ಥ್ಯ - ನಿಶ್ಚಯಿಸಿ, ಆತ್ಮನಃ - ತನ್ನ, ಕೃತ್ಯಂ - ಕೃತ್ಯವನ್ನು, ವಿದಧೇ - ಮಾಡಿದನು. ॥ ೩೯ ॥ ರಾವಣಸ್ಯ - ರಾವಣನ, ನಿರ್ಯಾ....ವ - ಪ್ರಯಾಣವಾಗುತ್ತಲೇ, ತಚ್ಛೀರ್ಷಂತು - ಆ ಶಿರಸ್ಸಾದರೆ, ಅಂತರ್ಧಾನಂ - ಮಾಯವಾಯಿತು, ಉತ್ತಮಂ - ಶ್ರೇಷ್ಠವಾದ, ತತಾ-

---

ಇಲ್ಲಿಗೈತಂದು ಬಾಗಿಲಿನಲ್ಲಿ ನಿಂತಿರುವನು. ಆತನು ಮಂತ್ರಿಶ್ರೇಷ್ಠರೆಲ್ಲರನ್ನೂ ಹಿಂದಿಟ್ಟುಕೊಂಡು ಬಂದಿರುವನು; ನಿಮ್ಮನ್ನು ನೋಡಬಯಸಿ ಮುಂದಾಗಿ ನಮ್ಮನ್ನು ಕಳುಹಿಸಿರುವನು. ಎಲೈ ಧೊರೆಯೇ ! ಬಹು ಜಾಗ್ರತೆಯಾಗಿ ನಡೆಯಿಸಬೇಕಾದ ಕಾರ್ಯವಿರುವುದಂತೆ. ಆದುದರಿಂದ ರಾಜಭಾವವನ್ನವಲಂಬಿಸಿ ಸಮಾಧಾನಚಿತ್ತದಿಂದ ಅವರಿಗೆ ದರ್ಶನವೀಯಬೇಕು" ಎಂದು ಅನೇಕ ವಿಧವಾಗಿ ಪ್ರಾರ್ಥಿಸಿದನು. ಆ ರಾಕ್ಷಸನ ಮಾತುಗಳನ್ನು ಕೇಳಿದ ರಾವಣಾಸುರನು ಅಂತೆಯೇ ಮಂತ್ರಿಗಳನ್ನು ನೋಡಲು ಹೊರಟುಹೋದನು. ಆ ತರುವಾಯ ಅವನು ಮಂತ್ರಿಗಳ ಸಭೆಯನ್ನು ಸೇರಿ ಶ್ರೀರಾಮನ ಪರಾಕ್ರಮವನ್ನರಿತುಕೊಂಡು ಕಾರ್ಯಭಾರವೆಲ್ಲವನ್ನೂ ನಿಶ್ಚಯಿಸಿದನು. ಆ ರಾವಣನು ಹೊರಟುಹೋದಬಳಿಕ ಮಾಯಾಕಲ್ಪಿತವಾದ ಆ ರಾಮನ ಶಿರಸ್ಸೂ, ಧನುಸ್ಸೂ ಮಾಯವಾದುವು. ॥ ೩೪—೪೦ ॥ ಆಮೇಲೆ

ಮುತ್ತಮಂ । ಜಗಾಮ ರಾವಣಸ್ಯೈವ ನಿರ್ಯಾಣಸಮನಂತರಂ ॥ ೪೦ ॥ ರಾಕ್ಷಸೇಂದ್ರಸ್ತು ತೈಸ್ಸಾರ್ಧಂ ಮಂತ್ರಿಭಿರ್ಭೀಮವಿಕ್ರಮೈಃ । ಸಮರ್ಥಯಾಮಾಸ ತದಾ ರಾಮಕಾರ್ಯವಿನಿಶ್ಚಯಂ ॥೪೧॥ ಅವಿದೂರಸ್ಥಿತಾನ್ ಸರ್ವಾನ್ ಬಲಾಧ್ಯಕ್ಷಾನ್ ಹಿತೈಷಿಣಃ । ಅಬ್ರವೀತ್ಕಾಲಸದೃಶೋ ರಾವಣೋ ರಾಕ್ಷಸಾಧಿಪಃ ॥ ೪೨ ॥ "ಶೀಘ್ರಂ ಭೇರೀನಿನಾದೇನ ಸ್ಫುಟಕೋಣಾಹತೇನ ಮೇ । ಸಮಾನಯಧ್ವಂ ಸೈನ್ಯಾನಿ ವಕ್ತವ್ಯಂಚ ನಕಾರಣಂ" ॥ ೪೩ ॥

ತತಸ್ತಥೇತಿ ಪ್ರತಿಗೃಹ್ಯ ತದ್ವಚೋ ಬಲಾಧಿಪಾಸ್ತೇ ಮಹದಾತ್ಮನೋ ಬಲಂ । ಸಮಾನಯಂಶ್ಚೈವ ಸಮಾಗಮಂಚ ತೇ ನ್ಯವೇದಯನ್ ಭರ್ತರಿ ಯುದ್ಧಕಾಂಕ್ಷಿಣಿ ॥ ೪೪ ॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ದ್ವಾತ್ರಿಂಶಸ್ಸರ್ಗಃ

---

ಮುಖಂಚ - ಆ ಧನುಸ್ಸೂ ಕೂಡ, ಜಗಾಮ - ಹೊರಟುಹೋಯಿತು. ॥ ೪೦ ॥ ರಾಕ್ಷಸೇಂದ್ರಸ್ತು - ರಾವಣನಾದರೆ, ಭೀಮವಿಕ್ರಮೈಃ - ಭಯಂಕರವಾದ ಪರಾಕ್ರಮವುಳ್ಳ, ಮಂತ್ರಿಭಿಸ್ಸಾರ್ಧಂ - ಮಂತ್ರಿಗಳೊಡನೆ, ತದಾ - ಆ ಕಾಲದಲ್ಲಿ, ರಾಮವಿನಿಶ್ಚಯಂ - ರಾಮನ ವಿಷಯದಲ್ಲಿ ತಾನು ಮಾಡತಕ್ಕ ಕಾರ್ಯದ ನಿಶ್ಚಯವನ್ನು, ಸಮರ್ಥಯಾಮಾಸ - ನಿಶ್ಚಯಿಸಿದನು. ॥ ೪೧ ॥ ಕಾಲಸದೃಶಃ - ಯಮಸದೃಶನಾದ, ರಾಕ್ಷಸಾಧಿಪಃ - ರಾಕ್ಷಸರಾಜನಾದ, ರಾವಣಃ - ರಾವಣನು, ಅವಿದೂರಸ್ಥಿತಾನ್ - ಸಮೀಪದಲ್ಲಿರುವ, ಹಿತೈಷಿಣಃ - ಹಿತಕಾಂಕ್ಷಿಗಳಾದ, ಸರ್ವಾನ್ - ಸಮಸ್ತರಾದ, ಬಲಾಧ್ಯಕ್ಷಾನ್ - ಸೈನ್ಯಾಧಿಪತಿಗಳನ್ನು ಕುರಿತು, ಅಬ್ರವೀತ್ - ನುಡಿದನು. ॥ ೪೨ ॥ ಸ್ಫುಟ......ನ - ದಪ್ಪವಾಗಿರುವ ದಂಡದಿಂದ ಹೊಡೆಯಲ್ಪಟ್ಟ, ಭೇರೀನಿನಾದೇನ - ಭೇರೀಶಬ್ದದಿಂದ, ಮೇ - ನನ್ನ, ಸೈನ್ಯಾನಿ - ಸೇನೆಗಳನ್ನು, ಶೀಘ್ರಂ - ಬೇಗ, ಸಮಾನಯಧ್ವಂ - ಕರೆಸಿರಿ, ಕಾರಣಂಚ - ಕಾರಣವಾದರೆ, ನವಕ್ತವ್ಯಂ - ಹೇಳತಕ್ಕುದಲ್ಲ. ॥ ೪೩ ॥ ಆತ್ಮನಃ - ತಮ್ಮ, ಭರ್ತರಿ - ಧಣಿಯಾದ ರಾವಣನು, ಯುದ್ಧಕಾಂಕ್ಷಿಣೀ - ಯುದ್ಧವನ್ನಿಚ್ಛಿಸಿದವನಾಗಲೂ, ತೇಬಲಾಧಿಪಾಃ - ಸೈನ್ಯಾಧಿಪತಿಗಳು, ತದ್ವಚಃ- ಆ ಮಾತನ್ನು, ಪ್ರತಿಗೃಹ್ಯ - ಪರಿಗ್ರಹಿಸಿ, ತಥೇತಿ - ಹಾಗೆಯೇ ಆಗಲೆಂದು, ಮಹತ್ - ಮಹತ್ತರವಾದ, ಬಲಂ - ಸೈನ್ಯವನ್ನು, ಸಮಾನಯನ್ - ತೆಗೆದುಕೊಂಡು ಬಂದರು, ತೇ - ಅವರು, ಸಮಾಗಮಂಚ - ಆಗಮನವನ್ನೂ ಕೂಡ, ನ್ಯವೇದಯನ್ - ತಿಳುಹಿಸಿದನು. ॥ ೪೪ ॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ದ್ವಾತ್ರಿಂಶಸ್ಸರ್ಗಃ.

---

ಮಹಾ ಭಯಂಕರ ಪರಾಕ್ರಮಿಗಳಾದ ಆ ಮಂತ್ರಿಗಳೊಡಗೂಡಿದ ಆ ರಾವಣನು ರಾಮನ ವಿಷಯದಲ್ಲಿ ಮಾಡಬೇಕಾದ ಕಾರ್ಯವೆಲ್ಲವನ್ನೂ ನಿಶ್ಚಯಿಸಿದನು. ಹಾಗೆ ಸಕಲ ಕಾರ್ಯಗಳನ್ನೂ ಚೆನ್ನಾಗಿ ನಿಶ್ಚಯಿದ ಬಳಿಕ ರಾಕ್ಷಸಾಧಿಪನಾದ ಆ ರಾವಣನು ತನ್ನ ಸಮೀಪದಲ್ಲಿಯೇ ಇದ್ದ ಹಿತಕಾಂಕ್ಷಿಗಳಾದ ಆ ಮಂತ್ರಿಗಳನ್ನುಕುರಿತು ತತ್ಕಾಲೋಚಿತವಾದ ಮಾತುಗಳನ್ನಾಡಬಯಸಿ, "ಎಲೈಮಂತ್ರಿಪುಂಗವರಿರಾ ! ನೀವೆಲ್ಲರೂ ಭೇರೀನಿನಾದದಿಂದ ಸೈನ್ಯವೆಲ್ಲವನ್ನೂ ಜಾಗ್ರತೆಯಾಗಿ ಕರೆಯಿಸಿರಿ" ಎಂದನು. ಆ ಮಂತ್ರಿಗಳು ತಮ್ಮ ಪ್ರಭುವಾಕ್ಯವನ್ನಂಗೀಕರಿಸಿ ಸೈನ್ಯವೆಲ್ಲವನ್ನೂ ಕರೆಯಿಸಿ ಆ ವಿಚಾರವನ್ನು ಆತನಿಗೆ ಅರಿಕೆಮಾಡಿದರು.॥೪೧—೪೪॥

ಇಂತಿದು ಮಾಯಾರಾಮ ಶಿರಃಪ್ರದರ್ಶನಪೂರ್ವಕ ಸೀತಾಮೋಹನ ವೃತ್ತಾಂತವೆಂಬ ಮೂವತ್ತೆರಡನೆಯ ಸರ್ಗವು ಸಮಾಪ್ತವಾದುದು.

# ಯುದ್ಧಕಾಂಡೇ ತ್ರಯಸ್ತ್ರಿಂಶಸ್ಸರ್ಗಃ

**ಸೀತಾಂತು ಮೋಹಿತಾಂ ದೃಷ್ಟ್ವಾ ಸರಮಾ ನಾಮ ರಾಕ್ಷಸೀ । ಆಸಸಾದಾಽಥ ವೈದೇಹೀಂ ಪ್ರಿಯಾಂ ಪ್ರಣಯಿನೀಂ ಸಖೀಂ ॥ ೧ ॥ ಮೋಹಿತಾಂ ರಾಕ್ಷಸೇಂದ್ರೇಣ ಸೀತಾಂ ಪರಮದುಃಖಿತಾಂ । ಆಶ್ವಾಸಯಾಮಾಸ ತದಾ ಸರಮಾ ಮೃದುಭಾಷಿಣೀ ॥೨॥ ಸಾ ಹಿ ತತ್ರ ಕೃತಾಽಮಿತ್ರಂ ಸೀತಯಾ ರಕ್ಷ್ಯಮಾಣಯಾ । ರಕ್ಷಂತೀ ರಾವಣಾದಿಷ್ಟಾ ಸಾನುಕ್ರೋಶಾ ದೃಢವ್ರತಾ ॥ ೩ ॥ ಸಾ ದದರ್ಶ ತತಸ್ಸೀತಾಂ ಸರಮಾ ನಷ್ಟಚೇತನಾಂ । ಉಪಾವೃತ್ಯೋತ್ಥಿತಾಂ ಧ್ವಸ್ತಾಂ ಬಡಬಾಮಿವ ಪಾಂಸುಲಾಂ ॥ ೪ ॥**

---

ಅಥ - ಬಳಿಕ, ಸರಮಾನಾಮ - ಸರಮೆಯೆಂದು ಪ್ರಖ್ಯಾತಳಾದ, ರಾಕ್ಷಸೀ - ರಾಕ್ಷಸಿಯು, ಮೋಹಿತಾಂ - ರಾವಣನಿಂದ ಮೋಸಗೊಳಿಸಲ್ಪಟ್ಟ, ಸೀತಾಂತು - ಸೀತಾದೇವಿಯನ್ನು, ದೃಷ್ಟ್ವಾ - ಕಂಡು, ಪ್ರಿಯಾಂ - ಇಷ್ಟಳಾದ, ಪ್ರಣಯಿನೀಂ - ವಿಶ್ವಾಸಪಾತ್ರಳಾದ, ವೈದೇಹೀಂ - ಸೀತಾದೇವಿಯನ್ನು, ಆಸಸಾದ - ಹೊಂದಿದಳು. ॥ ೧ ॥ ಮೃದುಭಾಷಿಣೀ - ಮೃದುವಾಗಿ ಮಾತನಾಡುವ, ಸರಮಾ - ಸರಮೆಯೆಂಬ (ಗೋ) ವಿಭೀಷಣನ ಪತ್ನಿಯು, ತದಾ - ಆ ಕಾಲದಲ್ಲಿ, ರಾಕ್ಷಸೇಂದ್ರೇಣ - ರಾವಣನಿಂದ, ಮೋಹಿತಾಂ - ಮೋಸಗೊಳಿಸಲ್ಪಟ್ಟ, ಪರಮದುಃಖಿತಾಂ - ಬಹು ವ್ಯಸನವನ್ನು ಹೊಂದಿದ, ಸೀತಾಂ - ಸೀತಾದೇವಿಯನ್ನು, ಆಶ್ವಾಸಯಾಮಾಸ - ಸಮಾಧಾನಗೊಳಿಸಿದನು. ॥ ೨ ॥ ದೃಢವ್ರತಾ - ದೃಢವಾದ ನಿಯಮವುಳ್ಳ, ಸಾನುಕ್ರೋಶಾ - ದಯೆಯಿಂದೊಡಗೂಡಿದ, (ಸರಮೆಯು) ಹಿ - ಯಾವ ಕಾರಣದಿಂದ, ರಾವಣಾದಿಷ್ಟಾ - ರಾವಣನಿಂದ ಆಜ್ಞಾಪಿಸಲ್ಪಟ್ಟವಳಾಗಿ, ರಕ್ಷಂತೀ - ಸಂರಕ್ಷಿಸುತ್ತಿದ್ದಳೋ, ತಸ್ಮಾತ್ - ಆ ಕಾರಣದಿಂದ, ರಕ್ಷ್ಯಮಾಣಯಾ - ರಕ್ಷಿಸಲ್ಪಡುತ್ತಿರುವ, ಸೀತಯಾ - ಸೀತದೇವಿಯಿಂದ, ತತ್ರ - ಅಲ್ಲಿ, ಸಾ - ಸರಮೆಯು, ಮಿತ್ರಂ - ಸಖಿಯಾಗಿ, ಕೃತಾ - ಮಾಡಲ್ಪಟ್ಟಳು. ॥೩॥ ಸಾಸರಮಾ - ಆ ಸರಮೆಯು, ತತಃ - ಅನಂತರದಲ್ಲಿ, ಧ್ವಸ್ತಾಂ - ಪೀಡಿಸಲ್ಪಟ್ಟು, ಉಪಾವೃತ್ಯ - ಹೊರಳಾಡಿ, ಉತ್ಥಿತಾಂ - ಮೇಲಕ್ಕೆದ್ದ, ಪಾಂಸುಲಾಂ - ಧೂಳಿಮುಚ್ಚಿರುವ, ಬಡಬಾಮಿವ - ಹೆಣ್ಣು ಕುದುರೆಯಂತಿರುವ, ನಷ್ಟಚೇತನಾಂ - ನಷ್ಟವಾದ ಚೈತನ್ಯವುಳ್ಳ, ಸೀತಾಂ- ಸೀತಾದೇವಿಯನ್ನು, ದದರ್ಶ - ಕಂಡಳು. ॥೪॥ ಸಖೀ - ಸ್ನೇಹಿತಳಾದ, ಸುವ್ರತಾ - ಒಳ್ಳೆಯ ನಡತೆ

---

ರಾವಣನ ಮಾಯಾಪ್ರಯೋಗದಿಂದ ಚಿತ್ತಸ್ವಾಸ್ಥ್ಯವಿಲ್ಲದೆ ವ್ಯಸನದಿಂದ ತಳಮಳಗೊಳ್ಳುತ್ತಿರುವ ತನ್ನ ನಚ್ಚಿನ ವಿದೇಹ ರಾಜಪುತ್ರಿಯನ್ನು ನೋಡಿ ಪ್ರಿಯ ಸಖಿಯಾದ ಸರಮೆಯೆಂಬವಳು ಆಕೆಯ ಬಳಿಗೈದಿದಳು. ಮೃದುಭಾಷಿಣಿಯಾದ ಆ ಸರಮೆಯು ರಾಕ್ಷಸೇಂದ್ರ ಮೋಹಿತೆಯಾಗಿ ಬಹಳವಾಗಿ ದುಃಖಿಸುತ್ತಿರುವ ಆ ಸೀತಾದೇವಿಯನ್ನು ಆ ಸಮಯದಲ್ಲಿ ಸಮಾಧಾನಗೊಳಿಸಿದಳು. ರಾವಣಾಸುರನು ಸೀತೆಯ ಸಂರಕ್ಷಣೆಗಾಗಿ ನಿಯಮಿಸಿದ, ದೃಢವ್ರತೆಯಾದ ಆ ಸರಮೆಯು ಆ ದೇವಿಯ ದುಃಖವನ್ನು ನೋಡಿ ಬಹಳವಾಗಿ ಪಶ್ಚಾತ್ತಾಪಪಟ್ಟಳು. ಆ ಸಮಯದಲ್ಲಿ ಆಕೆಯು ತನ್ನಿಂದ ರಕ್ಷಿತಳಾದ ಆ ಸೀತಾದೇವಿಯು ಪ್ರಜ್ಞೆ ತಪ್ಪಿ, ನೆಲದಲ್ಲಿ ಹೊರಳುತ್ತ ಧೂಳಿನಿಂದ ವ್ಯಾಪ್ತವಾದ ಶರೀರವುಳ್ಳವಳಾಗಿ ಅಶ್ವಸ್ತ್ರೀಯಂ

ತಾಂ ಸಮಾಶ್ವಾಸಯಾಮಾಸ ಸಖೀಸ್ನೇಹೇನ ಸುವ್ರತಾ । ಸಮಾಶ್ವಸಿಹಿ ವೈದೇಹಿ! ಮಾಭೂತ್ತೇ ಮನಸೋ ವ್ಯಥಾ ॥ ೫ ॥ ಉಕ್ತಾ ಯದ್ರಾವಣೇನ ತ್ವಂ ಪ್ರತ್ಯುಕ್ತಂಚ ಸ್ವಯಂ ತ್ವಯಾ । ಸಖೀಸ್ನೇಹೇನ ತದ್ಭೀರು! ಮಯಾ ಸರ್ವಂ ಪ್ರತಿಶ್ರುತಂ ॥ ೬ ॥ ಲೀನಯಾ ಗಗನೇ ಶೂನ್ಯೇ ಭಯಮುತ್ಸೃಜ್ಯ ರಾವಣಾತ್ । ತವ ಹೇತೋರ್ವಿಶಾಲಾಕ್ಷಿ! ನಹಿ ಮೇ ಜೀವಿತಂ ಪ್ರಿಯಂ ॥ ೭ ॥ ಸ ಸಂಭ್ರಾಂತಶ್ಚ ನಿಷ್ಕ್ರಾಂತೋ ಯತ್ಕೃತೇ ರಾಕ್ಷಸಾಧಿಪಃ । ತಚ್ಚ ಮೇ ವಿದಿತಂ ಸರ್ವಮಭಿನಿಷ್ಕ್ರಮ್ಯ ಮೈಥಿಲಿ! ॥ ೮ ॥ ನಶಕ್ಯಂ ಸೌಪ್ತಿಕಂ ಕರ್ತುಂ ರಾಮಸ್ಯ ವಿದಿತಾತ್ಮನಃ । ವಧಶ್ಚ ಪುರುಷವ್ಯಾಘ್ರೇ

---

ಯುಳ್ಳ ಸರಮೆಯು, ಸ್ನೇಹೇನ - ಸ್ನೇಹದಿಂದ, ತಾಂ - ಆ ಸೀತಾದೇವಿಯನ್ನು, ಸಮಾಶ್ವಾಸಯಾಮಾಸ - ಸಮಾಧಾನಗೊಳಿಸಿದಳು. ॥೫॥ ಹೇ ವೈದೇಹಿ - ಎಲೌ ಸೀತಾದೇವಿಯೇ! ಯತ್ - ಯಾವ ಮಾತು, ಉಕ್ತಾ - ಹೇಳಲ್ಪಟ್ಟಿಯೋ, ತ್ವಯಾ - ನಿನ್ನಿಂದ, ಸ್ವಯಂ - ತಾನು, ಪ್ರತ್ಯುಕ್ತಃ - ಪ್ರತಿಯಾಗಿ ಹೇಳಲ್ಪಟ್ಟಿನೋ, ಹೇ ಭೀರು - ಎಲೌ ಭಯಶೀಲಳೆ, ಸಖೀಸ್ನೇಹೇನ - ಸಖಿಯ ವಿಶ್ವಾಸದಿಂದ, ತತ್ಸರ್ವಂ - ಅದೆಲ್ಲವೂ, ಮಯಾ - ನನ್ನಿಂದ, ಪ್ರತಿಶ್ರುತಂ - ಕೇಳಲ್ಪಟ್ಟಿತು. ॥ ೬ ॥ ಹೇ ವಿಶಾಲಾಕ್ಷೀ - ವಿಸ್ತಾರವಾದ ನೇತ್ರಗಳುಳ್ಳವಳೇ, ರಾವಣಾತ್ - ರಾವಣನ ದೆಸೆಯಿಂದ, ಭಯಂ - ಭೀತಿಯನ್ನು, ಉತ್ಸೃಜ್ಯ - ಬಿಟ್ಟು, ಗಹನೇ - ಮರೆಯಾಗಿರುವ, ಶೂನ್ಯೇ - ವಿಜನವಾದ ಪ್ರದೇಶದಲ್ಲಿ, ಲೀನಯಾ - ಅವಿತುಕೊಂಡ ನನ್ನಿಂದ, (ತತ್ - ಆ ರಾವಣನ ಮಾತು), ಶ್ರುತಂ - ಕೇಳಲ್ಪಟ್ಟದೆ, ಮೇ - ನನಗೆ, ಜೀವಿತಂ - ಪ್ರಾಣವು, ನಪ್ರಿಯಂಹಿ - ಇಷ್ಟವಲ್ಲವಷ್ಟೆ. ॥ ೭ ॥ ಹೇ ಮೈಥಿಲೀ - ಎಲೌ ಸೀತಾದೇವಿಯೇ, ರಾಕ್ಷಸಾಧಿಪಃ - ರಾಕ್ಷಸಾಧಿಪತಿಯಾದ ರಾವಣನು, ಯತ್ಕೃತೇ - ಯಾವ ನಿಮಿತ್ತವಾಗಿ, ಅಭಿನಿಷ್ಕ್ರಮ್ಯ-ಹೊರಗೆ ಬಂದು, ಸಸಂಭ್ರಾಂತಃ-ತ್ವರೆಯುಳ್ಳವನಾಗಿ, ನಿಷ್ಕ್ರಾಂತಃ-ಹೊರಟುಹೋದನೋ, ತತ್ಸರ್ವಂಚ - ಆ ಸಮಸ್ತವೂ, ಮೇ - ನನ್ನಿಂದ, ವಿದಿತಂ - ತಿಳಿಯಲ್ಪಟ್ಟಿತು. ॥ ೮ ॥ ವಿದಿತಾತ್ಮನಃ - ಮಹಾ ಬುದ್ಧಿಶಾಲಿಯಾದ, ರಾಮಸ್ಯ - ಶ್ರೀರಾಮನ, ಸೌಪ್ತಿಕಂಕರ್ಮ - ಮಲಗಿರುವಾಗ ವಧೆಯು, ನಶಕ್ಯಂ - ಆಗತಕ್ಕದ್ದಲ್ಲ, ಪುರುಷವ್ಯಾಘ್ರೇ - ಪುರುಷಶ್ರೇಷ್ಠನಾದ, ತಸ್ಮಿ-

---

ತೊಪ್ಪುತ್ತಿದ್ದಳು. ॥ ೧-೪ ॥ ಆಗ ಪ್ರಾಣಸಖಿಯಾದ ಆ ಸರಮೆಯು ಸ್ನೇಹವಶದಿಂದ ಆಕೆಯನ್ನು ಸಮಾಧಾನಗೊಳಿಸುವವಳಾಗಿ, "ವೈದೇಹಿ! ದುಃಖಿಸಬೇಡ; ತಾಳಿಕೊ. ನಿನ್ನ ಮನಸ್ಸಿನಲ್ಲಿ ಮೂಡಿರುವ ವ್ಯಸನವೆಲ್ಲವೂ ಕಳೆದು ಹೋಗುವುದು. ಎಲೆ ಭಯಶೀಲಳೇ! ನನಗೆ ನಿನ್ನಲ್ಲಿರುವ ಸಖೀಸ್ನೇಹದಿಂದ ಆ ರಾವಣನಾಡಿದ ಮಾತುಗಳನ್ನೂ ನೀನು ಪ್ರತ್ಯುತ್ತರವಾಗಿ ಹೇಳಿದ ಮಾತುಗಳನ್ನೂ ನಾನು ಮರೆಯಲ್ಲಿಯೇ ಅವಿತಿದ್ದು ಎಲ್ಲವನ್ನೂ ಕೇಳಿದೆನು. ನೀನು ಹೇಳಿದುದೆಲ್ಲವೂ ಯುಕ್ತಿಯುಕ್ತವಾಗಿಯೇ ಇರುವುದು. ಅವುಗಳನ್ನು ಕೇಳಿ ನನಗೆ ಬಹಳ ಆನಂದವಾಯಿತು. ರಾವಣಾಸುರನೇನು ಮಾಡುವನೋ ಎಂಬ ಭಯದಿಂದ ವನದೊಳಕ್ಕೆ ಬಾರದಿದ್ದೆನು. ದೇವಿ! ನಿನ್ನನ್ನು ರಕ್ಷಿಸುವುದಕ್ಕಿಂತಲೂ ನನಗೆ ಪ್ರಾಣಗಳಲ್ಲಿ ಅಭಿಮಾನವು ಅಧಿಕವಾಗಿಲ್ಲವು. ಸೀತೇ! ರಾವಣಾಸುರನು ಯಾವ ನಿಮಿತ್ತವಾಗಿ ಬಹಳ ಸಂಭ್ರಮದಿಂದ ಹೊರಟುಹೋದನೋ ಆ ವಿಷಯವೆಲ್ಲವನ್ನೂ ನಾನು ಗೂಢವಾಗಿಯೇ ಇದ್ದುಕೊಂಡು ತಿಳಿದು ಬಂದೆನು. ಸಮಸ್ತ ವಿಚಾರಗಳನ್ನೂ ಕೂಲಂಕಷವಾಗಿ ತಿಳಿದಿರುವ ಶ್ರೀರಾಮನು ಹತನಾದನೆಂಬ ವಾರ್ತೆಯನ್ನು ನೀನು ನಂಬದಿರು. ಪುರುಷೋತ್ತಮನಾದ

ತಸ್ಮಿನ್ನೈವೋಪಪದ್ಯತೇ ||೯|| ನತ್ವೇವ ವಾನರಾಹಂತುಂ ಶಕ್ಯಾಃ ಪಾದಪಯೋಧಿನಃ | ಸುರಾ ದೇವರ್ಷಭೇಣೇವ ರಾಮೇಣಹಿ ಸುರಕ್ಷಿತಾಃ || ೧೦ || ದೀರ್ಘವೃತ್ತಭುಜಃ ಶ್ರೀಮಾನ್ ಮಹೋರಸ್ಕಃ ಪ್ರತಾಪವಾನ್ | ಧನ್ವೀ ಸಂಹನನೋಪೇತೋ ಧರ್ಮಾತ್ಮಾ ಭುವಿ ವಿಶ್ರುತಃ || ೧೧ || ವಿಕ್ರಾಂತೋ ರಕ್ಷಿತಾ ನಿತ್ಯಮಾತ್ಮನಶ್ಚ ಪರಸ್ಯಚ | ಲಕ್ಷ್ಮಣೇನ ಸಹಭ್ರಾತ್ರಾ ಕುಶಲೀ ನಯಶಾಸ್ತ್ರವಿತ್ || ೧೨ || ಹಂತಾ ಪರಬಲೌಘಾನಾಮಚಿಂತ್ಯಬಲಪೌರುಷಃ | ನಹತೋ ರಾಘವಃ ಶ್ರೀಮಾನ್ ಸೀತೇ! ಶತ್ರುನಿಬರ್ಹಣಃ || ೧೩ || ಅಯುಕ್ತಬುದ್ಧಿಕೃತ್ಯೇನ ಸರ್ವಭೂತವಿರೋಧಿನಾ | ಇಯಂ ಪ್ರಯುಕ್ತಾ

ಆ ರಾಮನು, (ಎಚ್ಚರಿಕೆಯಾಗಿರುವಾಗ) ವಧಶ್ಚ - ಸಂಹಾರವೂ, ನೈವೋಪಪದ್ಯತೇ - ಸಂಭವಿಸುವುದಿಲ್ಲವು. ||೯|| ಪಾದಪಯೋಧಿನಃ - ವೃಕ್ಷಗಳಿಂದ ಯುದ್ಧಮಾಡುವ, ವಾನರಾಸ್ತು - ಕಪಿಗಳಾದರೆ, ದೇವರ್ಷಭೇಣ - ದೇವೇಂದ್ರನಿಂದ, ಸುರಕ್ಷಿತಾಃ - ಚನ್ನಾಗಿ ರಕ್ಷಿಸಲ್ಪಟ್ಟು, ಸುರಾಇವ - ದೇವತೆಗಳಂತೆ, ರಾಮೇಣ - ಶ್ರೀರಾಮನಿಂದ, ಸುರಕ್ಷಿತಾಃ - ಪಾಲಿಸಲ್ಪಟ್ಟವರಾಗಿ, ಹಂತುಂ - ಹೊಡೆಯುವುದಕ್ಕೆ, ನಶಕ್ಯಾಏವ - ಶಕ್ತರೇ ಆಲ್ಲವು. ||೧೦|| ಸೀತೇ - ಸೀತಾದೇವಿಯೇ, ದೀಘ....ಜಃ - ಉದ್ದವಾಗಿಯೂ, ಗುಂಡಾಗಿಯೂ ಇರುವ ಭುಜಗಳುಳ್ಳ, ಶ್ರೀಮಾನ್ - ಸಂಪದ್ಯುಕ್ತನಾದ, ಮಹೋರಸ್ಕಃ - ವಿಸ್ತಾರವಾದ ಎದೆಯುಳ್ಳ, ಪ್ರತಾಪವಾನ್ - ಪರಾಕ್ರಮಿಯಾದ, ಧನ್ವೀ - ಧನುರ್ಧಾರಿಯಾದ, ಸಂಹನನೋಪೇತಃ - ಶುಭಕರವಾದ ಅವಯವಗಳಿಂದ ಯುಕ್ತನಾದ, ಧರ್ಮಾತ್ಮಾ - ಧರ್ಮಸ್ವಭಾವವುಳ್ಳ, ಭುವಿ - ಭೂಮಂಡಲದಲ್ಲಿ, ವಿಶ್ರುತಃ - ಪ್ರಖ್ಯಾತನಾದ, ವಿಕ್ರಾಂತಃ - ಶೂರನಾದ, ಭ್ರಾತ್ರಾ- ತಮ್ಮನಾದ, ಲಕ್ಷ್ಮಣೇನಸಹ - ಲಕ್ಷಣನೊಡನೆ, ಆತ್ಮನಶ್ಚ - ತನಗೂ, ಪರಸ್ಯಚ - ಇತರರಿಗೂ, ರಕ್ಷಿತಾ - ಸಂರಕ್ಷಕನಾದ, ಕುಶಲೀ - ಪಂಡಿತನಾದ, ನಯಶಾಸ್ತ್ರವಿತ್ - ನೀತಿಶಾಸ್ತ್ರವನ್ನು ಬಲ್ಲವನಾದ, ಪರಬಲೌಘಾನಾಂ - ಶತ್ರುಸೇನೆಗಳಿಗೆ, ಹಂತಾ - ಸಂಹಾರಕನಾದ, ಅಚಿಂ......ಷಃ - ಚಿಂತಿಸಲಸಾಧ್ಯವಾದ ದೇಹತ್ರಾಣವೂ, ಪರಾಕ್ರಮವೂ ಉಳ್ಳ, ಶತ್ರುನಿಬರ್ಹಣಃ - ಶತ್ರುಸಂಹಾರಕನಾದ, ಶ್ರೀಮಾನ್ - ಸಂಪದ್ಯುಕ್ತನಾದ, ರಾಘವಃ - ಶ್ರೀರಾಮನು, ನಹತಃ - ಹೊಡೆಯಲ್ಪಡಲಿಲ್ಲ. ||೧೧-೧೩|| ಮಾಯಾವಿದಾ - ಮಾಯೆಗಳನ್ನುತಿಳಿದಿರುವ, ರೌದ್ರೇಣ - ಕ್ರೂರನಾದ ರಾವಣನಿಂದ, ಸರ್ವ......ನಾ-

ಶ್ರೀರಾಮನಿಗೆ ಅಂತಹ ದುರ್ಮರಣವೆಂದಿಗೂ ಸಂಭವಿಸುವುದಿಲ್ಲವು. ದೇವೇಂದ್ರನಿಂದ ಸುರಕ್ಷಿತರಾದ ದೇವತೆಗಳನ್ನು ಹೇಗೊ, ಹಾಗೆ ಶ್ರೀರಾಮನಿಂದ ಸುರಕ್ಷಿತರಾದ ಪಾದಪಯೋಧರಾಗಿರುವ ವಾನರರು ಈ ರಾಕ್ಷಸರಿಂದ ಆ ರೀತಿ ಸಂಹೃತರಾಗಲು ಶಕ್ಯರಲ್ಲವು. ದೀರ್ಘಗಳೂ, ವರ್ತುಳಗಳೂ ಆದ ಮಹಾ ಭುಜಗಳುಳ್ಳವನೂ, ಶ್ರೀಮಂತನೂ, ವಿಶಾಲವಾದ ವಕ್ಷಸ್ಥಳವುಳ್ಳವನೂ, ಮಹಾ ಪರಾಕ್ರಮವಂತನೂ, ಮಹೋಗ್ರಧನುರ್ಧರನೂ ಶತ್ರುಮಾರಕನೂ, ಈ ಲೋಕದಲ್ಲೆಲ್ಲಾ ಧರ್ಮಾತ್ಮನೆಂದು ಪ್ರಸಿದ್ಧನಾದವನೂ, ಎಲ್ಲರನ್ನೂ ಸಂರಕ್ಷಿಸುವವನೂ, ಅನುಜಾತನಾದ ಲಕ್ಷ್ಮಣನೊಡಗೂಡಿರುವವನೂ, ನಯಶಾಸ್ತ್ರಕೋವಿದನೂ. ಶತ್ರುಸೈನ್ಯವಿನಾಶಕನೂ, ಅಪರಿಮಿತ ಬಲಪೌರುಷಗಳುಳ್ಳವನೂ ಆದ ರಘುರಾಮನು ಈ ರೀತಿ ಮರಣವನ್ನು ಹೊಂದಲಾರನು. ಅವನು ನಿಜವಾಗಿಯೂ ಹತನಾಗಿಲ್ಲವೆಂದು ತಿಳಿ. ||೫–೧೨|| ಆದುದರಿಂದ ನೀನಿಂತು ವ್ಯಸನಪಡಬೇಡ. ತಾಳಿಕೊ. ಎಲ್ಲ ಕಾಲಗಳಲ್ಲಿಯೂ ಮನಸ್ಸಿನಲ್ಲಿ ಪಾಪಕೃತ್ಯಗಳನ್ನೇ ಯೋಚಿಸುವವನೂ, ಸಕಲ ಭೂತವಿರೋಧಿಯಾದವನೂ, ಸಕಲ ಮಾಯೆ

ರೌದ್ರೇಣ ಮಾಯಯಾ ಮಾಯಾವಿದಾ ತ್ವಯಿ ॥ ೧೪ ॥ ಶೋಕಸ್ತೇ ವಿಗತಸ್ಸರ್ವಃ ಕಲ್ಯಾಣಂ ತ್ವಾಮುಪಸ್ಥಿತಂ । ಧ್ರುವಂ ತ್ವಾಂ ಭಜತೇ ಲಕ್ಷ್ಮೀಃ ಪ್ರಿಯಂ ಪ್ರೀತಿಕರಂ ಶೃಣು ॥ ೧೫ ॥ ಉತ್ತೀರ್ಯ ಸಾಗರಂ ರಾಮಸ್ಸಹವಾನರಸೇನಯಾ । ಸನ್ನಿವಿಷ್ಟಸ್ಸಮುದ್ರಸ್ಯ ತೀರಮಾಸಾದ್ಯ ದಕ್ಷಿಣಂ ॥ ೧೬ ॥ ದೃಷ್ಟೋ ಮೇ ಪರಿಪೂರ್ಣಾರ್ಥಃ ಕಾಕುತ್ಸ್ಥಸ್ಸಹಲಕ್ಷ್ಮಣಃ । ಸಹಿತೈಸ್ಸಾಗರಾಂತಸ್ಥೈರ್ಬಲೈಸ್ತಿಷ್ಠತಿ ರಕ್ಷಿತಃ ॥೧೭॥ ಅನೇನ ಪ್ರೇಷಿತಾ ಯೇ ಚ ರಾಕ್ಷಸಾ ಲಘುವಿಕ್ರಮಾಃ । ರಾಘವಸ್ತೀರ್ಣ ಇತ್ಯೇವ ಪ್ರವೃತ್ತಿಸ್ತೈರಿಹಾಽಽಹೃತಾ ॥ ೧೮ ॥ ಸ ತಾಂ ಶ್ರುತ್ವಾ ವಿಶಾಲಾಕ್ಷಿ ! ಪ್ರವೃತ್ತಿಂ

ಸಮಸ್ತ ಭೂತಗಳಿಗೂ ವಿರೋಧಿಯಾದ, ಅಯು......ನ - ಯೋಗ್ಯವಲ್ಲದ ವ್ಯಾಪಾರದಿಂದ, ಇಯಂ ಮಾಯಾ - ಈ ಮಾಯೆಯು, ಪ್ರಯುಕ್ತಾ - ಪ್ರಯೋಗಿಸಲ್ಪಟ್ಟಿತು. ॥೧೪॥ ತೇ - ನಿನಗೆ, ಸರ್ವಃ- ಸಮಸ್ತವಾದ, ಶೋಕಃ - ವ್ಯಸನವು, ವಿಗತಃ - ಹೋಯಿತು, ಕಲ್ಯಾಣಂ - ಶುಭವು, ತ್ವಾಂ - ನಿನ್ನನ್ನು, ಉಪಸ್ಥಿತಂ - ಹೊಂದುವುದು, ಲಕ್ಷ್ಮೀಃ - ಲಕ್ಷ್ಮಿಯು, ಧ್ರುವಂ - ನಿಶ್ಚಯವಾಗಿ, ತ್ವಾಂ - ನಿನ್ನನ್ನು, ಭಜತೇ - ಹೊಂದುತ್ತದೆ, ಪ್ರೀತಿಕರಂ - ವಿಶ್ವಾಸವನ್ನುಂಟುಮಾಡುವ, ಪ್ರಿಯಂ- ಪ್ರಿಯವಚನವನ್ನು, ಶೃಣು - ಕೇಳು. ॥ ೧೫ ॥ ರಾಮಃ - ಶ್ರೀರಾಮನು, ವಾನರಸೇನಯಾ - ಕಪಿಸೇನೆಯೊಡನೆ, ಸಾಗರಂ - ಸಮುದ್ರವನ್ನು, ಉತ್ತೀರ್ಯ - ದಾಟಿ, ಸಮುದ್ರಸ್ಯ - ಕಡಲಿನ, ದಕ್ಷಿಣ ತೀರಂ - ದಕ್ಷಿಣತೀರವನ್ನು, ಆಸಾದ್ಯ - ಹೊಂದಿ, ಸನ್ನಿವಿಷ್ಟಃ - ಇಳಿದಿದ್ದಾನೆ. ॥ ೧೬ ॥ ಸಹಲಕ್ಷ್ಮಣಃ - ಲಕ್ಷ್ಮಣನಿಂದ ಕೂಡಿದ, ಪರಿಪೂರ್ಣಾರ್ಥಃ - ಸಂಪೂರ್ಣ ಪ್ರಯೋಜನವುಳ್ಳ, ಕಾಕುತ್ಸ್ಥಃ - ಶ್ರೀರಾಮನು, ಸಹಿತೈಃ - ಒಡಬಂದ, ಸಾಗರಾಂತಸ್ಥೈಃ - ಸಮುದ್ರದ ಸಮೀಪದಲ್ಲಿರುವ, ಬಲೈಃ - ಸೇನೆಗಳಿಂದ, ರಕ್ಷಿತಃ - ಸಂರಕ್ಷಿಸಲ್ಪಟ್ಟವನಾಗಿ, ತಿಷ್ಠತಿ - ಇರುತ್ತಾನೆ, ಮೇ - ನನ್ನಿಂದ, ದೃಷ್ಟಃ - ನೋಡಲ್ಪಟ್ಟನು. ॥ ೧೭ ॥ ಕಿಂಚ - ಇಷ್ಟುಮಾತವಲ್ಲ, ಅನೇನ - ಈ ರಾವಣನಿಂದ, ಲಘುವಿಕ್ರಮಾಃ - ಶೀಘ್ರ ಪರಾಕ್ರಮಿಗಳಾದ, ಯೇ ರಾಕ್ಷಸಾಃ - ಯಾವ ರಾಕ್ಷಸರು, ಪ್ರೇಷಿತಾಃ - ಕಳುಹಿಸಲ್ಪಟ್ಟರೋ, ತೈಃ - ಅವರಿಂದ, ರಾಘವಃ - ಶ್ರೀರಾಮನು, ತೀರ್ಣ ಇತಿ - ಸಮುದ್ರವನ್ನು ದಾಟಿದನೆಂದು, ಪ್ರವೃತ್ತಿಃ - ವೃತ್ತಾಂತವು, ಇಹ - ಇಲ್ಲಿಗೆ, ಆಹೃತಾ - ತರಲ್ಪಟ್ಟಿತು. ॥ ೧೮ ॥ ಹೇ ವಿಶಾಲಾಕ್ಷಿ - ವಿಸ್ತಾರವಾದ ನೇತ್ರಗಳುಳ್ಳವಳೇ, ರಾಕ್ಷಸಾಧಿಪಃ - ರಾಕ್ಷಸರಿಗೆ ಪ್ರಭು

ಗಳನ್ನೂ ತಿಳಿದವನೂ ಆದ ಆ ರಾವಣನು ತನ್ನ ಮಾಯೆಯಿಂದ ರಾಮನ ಶಿರಸ್ಸನ್ನು ಕಲ್ಪಿಸಿ ತಂದು ನಿನಗೆ ತೋರಿಸಿರುವನು. ಅದು ನಿಜವಾಗಿಯೂ ಯಥಾರ್ಥವಾದ ರಾಮನ ಶಿರಸ್ಸಲ್ಲವು. ಆದುದರಿಂದ ನೀನಿಂತು ಚಿಂತಿಸುವುದೇಕೆ? ನಿನ್ನ ದುಃಖಕಾಲವೆಲ್ಲವೂ ಕಳೆದು ಹೋಯಿತು. ನಿನಗೆ ಇದೀಗ ಸುಖಕಾಲವು. ವಿಜಯಲಕ್ಷ್ಮಿಯು ನಿನ್ನನ್ನು ದೃಢವಾಗಿ ಹೊಂದುವಳು. ನಾನು ನಿನಗೆ ಪ್ರಿಯವಾದ ಮಾತುಗಳನ್ನು ಹೇಳುತ್ತಿರುವೆನು. ನನ್ನ ಮಾತುಗಳು ಪ್ರಿಯಕರಗಳಾಗಿರುವುದೂ ಅಲ್ಲದೆ ಹಿತಕರಗಳೂ ಆಗಿವೆ. ಈಗ ನೀನು ನನ್ನ ಸಂತೋಷಕ್ಕಾದರೂ ಈ ವ್ಯಸನವನ್ನು ತೊರೆಯುವವಳಾಗು. ಶ್ರೀರಾಮಚಂದ್ರನು ವಾನರಸೇನೆಯೊಡನೆ ಸಾಗರವನ್ನು ದಾಟಿ ಸಮುದ್ರದ ದಕ್ಷಿಣ ತೀರದಲ್ಲಿ ಬಂದು ತಂಗಿರುವನು. ॥ ೧೩-೧೬ ॥ ದೇವಿ ! ನಾನು, ಕಕುತ್ಸ್ಥವಂಶೋದ್ಭವನಾದ ಶ್ರೀರಾಮನು, ತಮ್ಮನಾದ ಲಕ್ಷ್ಮಣಸ್ವಾಮಿಯೊಡಗೂಡಿ ವಾನರ ಸೇನೆಯಿಂದ ಸುರಕ್ಷಿತನಾಗಿರುವದನ್ನು ನೋಡಿದೆ. ಆತನು ಪರಿಪೂರ್ಣಾರ್ಥನಾಗಿರುವನು. ಈ ರಾವಣನು ಅಲ್ಪಬಲವುಳ್ಳವನಾದುದರಿಂದ ರಾಕ್ಷಸರನ್ನು ಶ್ರೀರಾಮನ ಬಲಪರಿಕ್ಷೆಗಾಗಿ

ರಾಕ್ಷಸಾಧಿಪಃ । ಏಷ ಮಂತ್ರಯತೇ ಸರ್ವೈ ಸ್ಸಚಿವೈಸ್ಸಹ ರಾವಣಃ" ॥ ೧೯ ॥ ಇತಿ ಬ್ರುವಾಣಾ ಸರಮಾ ರಾಕ್ಷಸೀ ಸೀತಯಾಸಹ । ಸರ್ವೋದ್ಯೋಗೇನ ಸೈನ್ಯಾನಾಂ ಶಬ್ದಂ ಶುಶ್ರಾವ ಭೈರವಂ ॥ ೨೦ ॥ ದಂಡನಿರ್ಘಾತವಾದಿನ್ಯಾಃ ಶ್ರುತ್ವಾ ಭೇರ್ಯಾ ಮಹಾಸ್ವನಂ । ಉವಾಚ ಸರಮಾ ಸೀತಾಮಿದಂ ಮಧುರಭಾಷಿಣೀ ॥ ೨೧ ॥ " ಸನ್ನಾಹಜನನೀ ಹ್ಯೇಷಾ ಭೈರವಾ ಭೀರು ! ಭೇರಿಕಾ । ಭೇರೀನಾದಂಚ ಗಂಭೀರಂ ಶೃಣು ತೋಯದನಿಸ್ವನಂ ॥ ೨೨ ॥ ಕಲ್ಪ್ಯಂತೇ ಮತ್ತಮಾತಂಗಾ ಯುಜ್ಯಂತೇ ರಥವಾಜಿನಃ । ಹೃಷ್ಯಂತೇ ತುರಗಾರೂಢಾಃ ಪ್ರಾಸಹಸ್ತಾಸ್ಸಹಸ್ರಶಃ ॥ ೨೩ ॥ ತತ್ರ

---

ವಾದ, ಏಷರಾವಣಃ - ಈ ರಾವಣನು, ತಾಂಪ್ರವೃತ್ತಿಂ - ಆ ವಾರ್ತೆಯನ್ನು, ಶ್ರುತ್ವಾ - ಕೇಳಿ, ಸರ್ವೈಃ - ಸಮಸ್ತರಾದ, ಸಚಿವೈಸ್ಸಹ - ಮಂತ್ರಿಗಳೊಡನೆ, ಮಂತ್ರಯತೇ - ಆಲೋಚಿಸುತ್ತಾನೆ, ॥ ೧೯ ॥ ಇತಿ - ಈ ಪ್ರಕಾರವಾಗಿ, ಸೀತಯಾಸಹ - ಸೀತಾದೇವಿಯೊಡನೆ, ಬ್ರುವಾಣಾ - ಹೇಳುತ್ತಿರುವ, ರಾಕ್ಷಸೀ - ರಕ್ಕಸಿಯಾದ, ಸರಮಾ - ಸರಮೆಯು, ಸೈನ್ಯಾನಾಂ - ಸೇನೆಗಳ, ಸರ್ವೋದ್ಯೋಗೇನ - ಸರ್ವಪ್ರಯತ್ನದಿಂದಲೂ ಹುಟ್ಟಿದ, ಭೈರವಂ - ಭಯಂಕರವಾದ, ಶಬ್ದ - ಘೋಷವನ್ನು, (ಅಥವಾ - ಸಿಂಹನಾದವನ್ನು) ಶುಶ್ರಾವ - ಕೇಳಿದಳು. ॥ ೨೦ ॥ ಮಧು....ಣೀಂ - ಮಧುರವಾಗಿ ಮಾತನಾಡುವ, ಸರಮಾ - ಸರಮೆಯು, ದಂಡ....ನ್ಯಾಃ - ದಂಡದ ಹೊಡತೆಯಿಂದ ಶಬ್ದಾಯಮಾನವಾದ, ಭೇರ್ಯಾಃ - ಭೇರಿಯ, ಮಹಾಸ್ವನಂ - ಮಹಾ ಘೋಷವನ್ನು, ಶ್ರುತ್ವಾ - ಕೇಳಿ, ಸೀತಾಂ - ಸೀತಾದೇವಿಯನ್ನು ಕುರಿತು, ಇದಂ - ಈ ಮಾತನ್ನು, ಉವಾಚ - ಹೇಳಿದನು. ॥ ೨೧ ॥ ಹೇ ಭೀರು ಎಲೆ ಭಯಶೀಲಳೇ, ಸನ್ನಾಹಜನನೀ-ಯುದ್ಧಸನ್ನಾಹಕ್ಕೆ ಪ್ರೋತ್ಸಾಹಕರಾದ, ಭೈರವೀ-ಭಯಂಕರವಾದ, ಏಷಾಭೇರಿಕಾ ಈ ಭೇರಿಯು, (ತಾಡ್ಯತೇ-ಹೊಡೆಯಲ್ಪಡುತ್ತೆ), ತೋಯ....ನಂ-ಮೇಘದಂತೆ ಶಬ್ದಾಯಮಾನವಾದ, ಗಂಭೀರಂ - ಮನೋಹರವಾದ, ಭೇರೀನಾದಂಚ - ಭೇರಿಧ್ವನಿಯನ್ನೂ ಕೂಡ, ಶೃಣು - ಕೇಳು. ॥ ೨೨ ॥ ಮತ್ತಮಾತಂಗಾಃ - ಮದದಾನೆಗಳು, ಕಲ್ಪ್ಯಂತೇ - ಅಲಂಕರಿಸಲ್ಪಡುತ್ತವೆ, ರಥವಾಜಿನಃ - ರಥಾಶ್ವಗಳು, ಯುಜ್ಯಂತೇ - ರಥಗಳಿಗೆ ಕಟ್ಟಲ್ಪಡುತ್ತವೆ. ಪ್ರಾಸಹಸ್ತಾಃ ಖಡ್ಗಪಾಣಿಗಳಾದ, ಸಹಸ್ರಶಃ-ಅನೇಕರಾದ, ತುರಗಾರೂಢಾಃ-ಕುದುರೆ ಸವಾರರು, ಹೃಷ್ಯಂತೇ - ಸಂತೋಷಗೊಳ್ಳುತ್ತಿರುವರು. ॥ ೨೩ ॥ ಕಿಂಚ - ಇಷ್ಟುಮಾತ್ರವಲ್ಲದೆ, ಪದಾತಯಃ -

---

ಕಳುಹಿಸಿದನು. ಅಷ್ಟರಲ್ಲಿ ರಾಘವನು ಸಮುದ್ರವನ್ನು ದಾಟಿ ಸೇನಾಸಮೇತನಾಗಿ ಬಂದನೆಂಬ ಸುದ್ದಿಯನ್ನು ಕೇಳಿ ಮಂತ್ರಿಗಳೊಡಗೂಡಿ ತತ್ಕಾಲೋಚಿತವಾದ ಆಲೋಚನೆಯನ್ನೂ ಮಾಡುತ್ತಿರುವನು" ಎಂದು ಆ ಸರಮೆಯು ಹೇಳಿದಳು. ಆ ಸಮಯದಲ್ಲಿ ಯುದ್ಧಕ್ಕಾಗಿ ಸರ್ವಸನ್ನಾಹಗಳನ್ನೂ ಮಾಡುತ್ತಿದ್ದ ಸೈನ್ಯದ ಭಯಂಕರ ಶಬ್ದವು ಕೇಳಿಸಿತು; ದಂಡಾಘಾತದಿಂದ ಮೊಳಗುತ್ತಿದ್ದ ರಣಭೇರಿಯ ಭಯಂಕರ ಶಬ್ದವೂ ಕೇಳಿಸಿತು. ॥೧೭-೨೦॥ ಆಗಲಾ ಮಧುರ ಭಾಷಿಣಿಯಾದ ಸರಮೆಯು ಸೀತಾದೇವಿಯನ್ನು ಕುರಿತು, "ಅಮ್ಮಾ ಸೀತೇ! ಮಹಾ ಭಯಂಕರವಾದ ಈ ರಣಭೇರೀನಾದವನ್ನು ಕೇಳು. ಈ ಮಹಾ ಧ್ವನಿಯು ಮೇಘಧ್ವನಿಯನ್ನು ಹೋಲುತ್ತಿರುವುದು. ಮದದಾನೆಗಳೆಲ್ಲವೂ ಯುದ್ಧಸನ್ನದ್ಧಗಳಾಗುತ್ತಿರುವುವು. ರಥಗಳನ್ನೆಳೆಯುವ ಜಾತ್ಯಶ್ವಗಳೂ ಯುದ್ಧಾಭಿಮುಖಗಳಾಗುತ್ತಿರುವುವು. ಪ್ರಾಸಾಯುಧಗಳನ್ನು ಧರಿಸಿದ ಭಟರನೇಕರು ಅಶ್ವಗಳನ್ನೇರಿ ಮಹಾ ಸಂತೋಷಸಂಭ್ರಮ

ತತ್ರಚ ಸನ್ನದ್ಧಾಸ್ಸಂಪತಂತಿ ಪದಾತಯಃ । ಆಪೂರ್ಯಂತೇ ರಾಜಮಾರ್ಗಾಃ ಸೈನ್ಯೈರದ್ಭುತದರ್ಶನೈಃ ॥ ೨೪ ॥ ವೇಗವದ್ಭಿರ್ನದದ್ಭಿಶ್ಚ ತೋಯದೈರಿವ ಸಾಗರಃ । ಶಸ್ತ್ರಾಣಾಂಚ ಪ್ರಸನ್ನಾನಾಂ ಚರ್ಮಣಾಂ ವರ್ಮಣಾಂ ತಥಾ । ರಥವಾಜಿಗಜಾನಾಂಚ ಭೂಷಿತಾನಾಂಚ ರಕ್ಷಸಾಂ ॥ ೨೫ ॥ ಪ್ರಭಾಂ ವಿಸೃಜತಾಂ ಪಶ್ಯ ನಾನಾವರ್ಣಾಂ ಸಮುತ್ಥಿತಾಂ । ವನಂ ನಿರ್ದಹತೋ ಘರ್ಮೇ ಯಥಾ ರೂಪಂ ವಿಭಾವಸೋಃ ॥೨೬॥ ಘಂಟಾನಾಂ ಶೃಣು ನಿರ್ಘೋಷಂ ರಥಾನಾಂ ಶೃಣು ನಿಸ್ಸ್ವನಂ । ಹಯಾನಾಂ ಹೇಷಮಾಣಾನಾಂ ಶೃಣು ತೂರ್ಯಧ್ವನಿಂ ಯಥಾ ॥ ೨೭ ॥ ಉದ್ಯತಾಯುಧ ಹಸ್ತಾನಾಂ ರಾಕ್ಷಸೇಂದ್ರಾನುಯಾಯಿನಾಂ । ಸಂಭ್ರಮೋ ರಕ್ಷಸಾಮೇಷ ತುಮುಲೋ

---

ಕಾಲಾಳುಗಳು, ತತ್ರತತ್ರ-ಅಲ್ಲಿಅಲ್ಲಿ, ಸನ್ನದ್ಧಾಃ-ಯುದ್ಧಸನ್ನದ್ಧರಾಗಿ, ಸಂಪತಂತಿ-ಬರುತ್ತಲಿದ್ದಾರೆ, ಅದ್ಭು....ನೈಃ - ನೋಡಲು ಸೊಂಪಾಗಿರುವ, ವೇಗವದ್ಭಿಃ - ವೇಗವುಳ್ಳ, ಸೈನ್ಯೈಃ - ಸೇನೆಗಳಿಂದ, ರಾಜಮಾರ್ಗಾಃ - ರಾಜಬೀದಿಗಳು, ನದದ್ಭಿಃ - ಶಬ್ದಾಯಮಾನವಾದ, ತೋಯದೈಃ - ಮೇಘಗಳಿಂದ, ಸಾಗರಇವ - ಸಮುದ್ರದಂತೆ, ಆಪೂರ್ಯಂತೇ - ತುಂಬಲ್ಪಡುತ್ತವೆ. ॥ ೨೪ ॥ ಪ್ರಸನ್ನಾನಾಂ - ನಿರ್ಮಲವಾದ, ಶಸ್ತ್ರಾಣಾಂಚ ಶಸ್ತ್ರಗಳ, ತಥಾ-ಹಾಗೆ, ವರ್ಮಣಾಂ ಕವಚಗಳುಳ್ಳ, ಚರ್ಮಣಾಂ-ಖೇಡ್ಯಗಳ, ರಥ......ಚ - ರಥಗಳ, ಕುದುರೆಗಳ, ಆನೆಗಳ, ವಿಭೂಷಿತಾನಾಂ - ಅಲಂಕೃತರಾಗಿ, ಪ್ರಭಾಂ - ಕಾಂತಿಯನ್ನು, ವಿಸೃಜತಾಂ - ಬಿಡುತ್ತಿರುವ, ರಕ್ಷಸಾಂಚ - ರಾಕ್ಷಸರ ಸಂಬಂಧವಾದ, ಉತ್ಥಿತಾಂ - ಹುಟ್ಟಿರುವ, ನಾನಾವರ್ಣಾಂ - ನಾನಾಬಣ್ಣಗಳ, ಪ್ರಭಾಂ - ಕಾಂತಿಯನ್ನು, ಘರ್ಮೇ-ಗ್ರೀಷ್ಮಕಾಲದಲ್ಲಿ, ವನಂ - ಅರಣ್ಯವನ್ನು, ನಿರ್ದಹತಃ - ದಹಿಸುವ, ವಿಭಾವಸೋಃ - ಸೂರ್ಯನ, ರೂಪಂಯಥಾ - ರೂಪವನ್ನಂತೆ, ಪಶ್ಯ - ನೋಡು, (ಗೋ) ತಾಂ - ಆ ಶೋಕವನ್ನು, ವಿಸೃಜ - ಬಿಡು. ॥ ೨೬ ॥ ಘಂಟಾನಾಂ - ಘಂಟೆಗಳ, ನಿರ್ಘೋಷಂ - ಶಬ್ದವನ್ನು, ಶೃಣು - ಕೇಳು, ರಥಾನಾಂ - ರಥಗಳ, ನಿಸ್ವನಂ - ಶಬ್ದವನ್ನು, ಶೃಣು - ಕೇಳು, ತೂರ್ಯಧ್ವನಿಂಯಥಾ - ತುತ್ತೂರಿಯ ಶಬ್ದವನ್ನಂತೆ, ಹೇಷಮಾಣಾನಾಂ-ಹೂಂಕರಿಸುತ್ತಿರುವ, ಹಯಾನಾಂ-ಕುದುರೆಗಳ, ಧ್ವನಿಂ-ಶಬ್ದವನ್ನು, ಶೃಣು - ಕೇಳು. ॥ ೨೭ ॥ ರಾಕ್ಷ...ನಾಂ - ರಾವಣನನ್ನು ಅನುಸರಿಸಿ ಹೋಗುವ, ಉದ್ಯ...ನಾಂ - ಎತ್ತಲ್ಪಟ್ಟ ಆಯುಧಗಳೇ ಹಸ್ತಗಳಲ್ಲಿ ಉಳ್ಳ, ರಕ್ಷಸಾಂ - ಅಸುರರ, ತುಮುಲಃ -

---

ಗಳಿಂದಿರುವರು. ಅಲ್ಲಲ್ಲಿ ಪದಾತಿಗಳೆಲ್ಲರೂ ಗುಂಪುಗುಂಪುಗಳಾಗಿ ಕೂಡಿ ಆಲೋಚಿಸುತ್ತಿರುವರು. ಅತ್ಯದ್ಭುತ ದರ್ಶನಗಳುಳ್ಳ ಸೇನೆಗಳು ರಾಜಮಾರ್ಗವನ್ನೆಲ್ಲ ಅಕ್ರಮಿಸುತ್ತಿರುವುವು. ಈ ರಾವಣಾಸುರನ ಆ ಸೇನೆಗಳು ಧ್ವನಿಗೈಯ್ಯುತ್ತಿರುವ ಮಹಾ ಮೇಘಗಳು ಸಮುದ್ರವನ್ನಾವರಿಸುವಂತೆ ಲಂಕಾನಗರವೆಲ್ಲವನ್ನೂ ವ್ಯಾಪಿಸುತ್ತಿರುವುದು. ಎಲೌ ಸೀತಾದೇವಿಯೇ! ನಿರ್ಮಲ ಶಸ್ತ್ರಗಳು, ಖೇಡ್ಯಗಳು, ಕವಚಗಳು, ರಥಗಳು, ರಥಾಶ್ವಗಳು, ಗಜಗಳು, ರಾಕ್ಷಸನಿವಹಗಳು ಇವುಗಳ ಕಾಂತಿಪುಂಜಗಳು ಬೇಸಗೆಯಲ್ಲಿ ವನಗಳನ್ನು ದಹಿಸುವ ಬೆಂಕಿಯ ವಿವಿಧ ವರ್ಣಶೋಭಿತವಾದ ಜ್ವಾಲಾಸಮುದಾಯದಂತೆ ಪ್ರಕಾಶಿಸುತ್ತಿರುವುದು. ॥ ೨೧–೨೫ ॥ ದೇವಿ! ಘಂಟೆಗಳ ಘುಣುಘುಣುನಾದವನ್ನೂ, ರಥಧ್ವನಿಯನ್ನೂ, ರಥಾಶ್ವಗಳ ಹೇಷಾರವವನ್ನೂ, ಇತರ ಮಂಗಳವಾದ್ಯಗಳ ಧ್ವನಿಗಳನ್ನೂ ಕೇಳು. ಮಹಾ ತೀಕ್ಷ್ಣವಾದ ಆಯುಧಗಳನ್ನು ಧರಿಸಿರುವ ರಾಕ್ಷಸೇಂದ್ರನ ಭಟರ ಸಂಭ್ರಮವು ನೋಡುವವರಿಗೆ

ರೋಮಹರ್ಷಣಃ ‖ ೨೮ ‖ ಶ್ರೀಸ್ತ್ವಾಂ ಭಜತಿ ಶೋಕಘ್ನೀ ರಕ್ಷಸಾಂ ಭಯಮಾಗತಂ । ರಾಮಃ ಕಮಲಪತ್ರಾಕ್ಷೋ ದೈತ್ಯಾನಾಮಿವ ವಾಸವಃ ‖ ೨೯ ‖ ವಿನಿರ್ಜಿತ್ಯ ಜಿತಕ್ರೋಧಸ್ತ್ವಾಮಚಿಂತ್ಯಪರಾಕ್ರಮಃ । ರಾವಣಂ ಸಮರೇ ಹತ್ವಾ ಭರ್ತಾ ತ್ವಾಽಧಿಗಮಿಷ್ಯತಿ ‖ ೩೦ ‖ ವಿಕ್ರಮಿಷ್ಯತಿ ರಕ್ಷಸ್ಸು ಭರ್ತಾ ತೇ ಸಹಲಕ್ಷ್ಮಣಃ । ಯಥಾ ಶತ್ರುಷು ಶತ್ರುಘ್ನೋ ವಿಷ್ಣುನಾ ಸಹವಾಸವಃ ‖ ೩೧ ‖ ಆಗತಸ್ಯಹಿ ರಾಮಸ್ಯ ಕ್ಷಿಪ್ರ

---

ಸಂಕುಲವಾದ, ಏಷಸಂಭ್ರಮಃ - ಈ ತ್ವರೆಯು, ರೋಮಹರ್ಷಣಃ - ರೋಮಾಂಚಕರವಾಗಿದೆ.‖೨೮‖ ಶೋಕಘ್ನೀ - ಶೋಕಪರಿಹಾರಕವಾದ, ಶ್ರೀಃ - ಸಂಪತ್ತು, ತ್ವಾಂ - ನಿನ್ನನ್ನು, ಭಜತಿ - ಹೊಂದುತ್ತದೆ, ರಕ್ಷಸಾಂ - ರಕ್ಕಸರಿಗೆ, ಭಯಂ - ಭೀತಿಯು, ಆಗತಂ - ಬಂದಿತು. ‖೨೯‖ ಕಮಲಪತ್ರಾಕ್ಷಃ - ತಾವರೆಯೆಸಳಿನಂತೆ ನೇತ್ರಗಳುಳ್ಳ, ಅಚಿಂತ್ಯಪರಾಕ್ರಮಃ - ಚಿಂತಿಸಲಸಾಧ್ಯವಾದ ಪರಾಕ್ರಮವುಳ್ಳ, ಭರ್ತಾ - ನಿನ್ನ ಪತಿಯಾದ, ರಾಮಃ - ಶ್ರೀರಾಮನು, ವಿನಿರ್ಜಿತ್ಯ - ಜಯಿಸಿ, ಜಿತಕ್ರೋಧಃ - ಜಯಿಸಲ್ಪಟ್ಟ ಕೋಪವುಳ್ಳವನಾಗಿ, ವಾಸವಃ - ದೇವೇಂದ್ರನು, ದೈತ್ಯಾನಾಮಿವ - ರಾಕ್ಷಸರ ಸಮೀಪದಲ್ಲಿರುವ ಲಕ್ಷ್ಮೀದೇವಿಯನ್ನಂತೆ, ರಾವಣಂ - ರಾವಣನನ್ನು, ಸಮರೇ - ಕಾಳಗದಲ್ಲಿ, ಹತ್ವಾ - ಕೊಂದು, ತ್ವಾಂ - ನಿನ್ನನ್ನು, ಅಧಿಗಮಿಷ್ಯತಿ - ಹೊಂದುವನು. ‖ ೩೦ ‖ ಸಹಲಕ್ಷ್ಮಣಃ - ಲಕ್ಷ್ಮಣನಿಂದ ಕೂಡಿದ, ತೇಭರ್ತಾ - ನಿನ್ನ ಗಂಡನು, ರಕ್ಷಸ್ಸು - ರಾಕ್ಷಸರಲ್ಲಿ, ಶತ್ರುಷು - ವೈರಿಗಳಲ್ಲಿ, ಶತ್ರುಘ್ನಃ - ಶತ್ರುಸಂಹಾರಕನಾದ, ವಾಸವಃ - ದೇವೇಂದ್ರನು, ವಿಷ್ಣುನಾಸಹ - ವಿಷ್ಣುವಿನ ಅವತಾರಭೂತನಾದ ಉಪೇಂದ್ರನೊಡನೆ ಕೂಡಿ, ಯಥಾ - ಹೇಗೋ, ತಥಾ - ಹಾಗೆ, ವಿಕ್ರಮಿಷ್ಯತಿ - ಪರಾಕ್ರಮಿಸುವನು. ‖ ೩೧ ‖ ಶತ್ರೌ - ವೈರಿಯಾದ ರಾವಣನು, ವಿನಿಪಾತಿತೇ - ಬೀಳಿಸಲ್ಪಡಲು, ಆಗತಸ್ಯ - ಬಂದ, ರಾಮಸ್ಯ - ಶ್ರೀರಾಮನ, ಅಂಕಗತಾಂ - ತೊಡೆಯನ್ನೈದಿದ, (ಮ) ಸಮೀಪ

---

ರೋಮಾಂಚವನ್ನುಂಟುಮಾಡುತ್ತಿರುವುದು. ಸೀತೇ ! ಪದ್ಮಪತ್ರನಿಭೇಕ್ಷಣನಾದ ಶ್ರೀರಾಮನು ದೇವೇಂದ್ರನು ರಾಕ್ಷಸರನ್ನು ವಧಿಸಿದಂತೆ ಈ ರಾವಣಾಸುರನ ಭಟರನ್ನೂ, ಸೇನೆಗಳನ್ನೂ ಒಕ್ಕಲಿಕ್ಕಿ, ಪುತ್ರಮಿತ್ರಕಳತ್ರಾದಿಗಳೊಡಗೂಡಿದ ಅವನನ್ನೂ ಸಂಹರಿಸಿ ನಿನ್ನನ್ನು ಪಡೆಯುವನು. ಅಪರಿಮಿತ ಪರಾಕ್ರಮವಂತನೂ, ಕೋಪರಹಿತನೂ ಆದ ಶ್ರೀರಾಮನು ರಣರಂಗದಲ್ಲಿ ರಾವಣಾಸುರನನ್ನು ಖಂಡಿತವಾಗಿಯೂ ಸಂಹರಿಸಿ ನಿನ್ನನ್ನು ಪಡೆಯುವನು. ಆ ರಘುರಾಮನು, ತಮ್ಮನಾದ ಲಕ್ಷ್ಮಣನೊಡಗೂಡಿ, ಶತ್ರುಗಳನ್ನು ನಾಶಗೊಳಿಸುವ ದೇವೇಂದ್ರನು ವಿಷ್ಣುವಿನೊಡಗೂಡಿ ಶತ್ರುಗಳಮೇಲೆ ಪರಾಕ್ರಮಿಸುವಂತೆ ಈ ರಾಕ್ಷಸರಮೇಲೆ ಪರಾಕ್ರಮಿಸುವನು. ಎಲೌ ಸೀತಾದೇವಿಯೇ ! ಶತ್ರುಗಳನ್ನು ಸಂಹಾರಮಾಡಿ ಇಲ್ಲಿಗೈತರುವ ಶ್ರೀರಾಮನ ತೊಡೆಯಲ್ಲಿ ಅತಿಶಯ ಸಂತೋಷದಿಂದ ಕುಳಿತು ಕೃತಾರ್ಥಳಾಗುವ ಪತಿವ್ರತೆಯಾದ ನಿನ್ನನ್ನು ನೋಡಿ ನಾನು ಸಂತೋಷಪಡುವೆನು. ಎಲೆ ಮಂಗಳಾಗಿ ! ನೀನು ಬಹು ಬೇಗನೆಯೇ ನಿನ್ನ ವಲ್ಲಭನು ಆಲಿಂಗಿಸಲು ಆನಂದಬಾಷ್ಪಗಳನ್ನು ಸುರಿಸುವೆ. ‖ ೨೬–೩೦ ‖ ಎಲೌ ದೇವಿಯೇ ! ನಿತಂಬದವರೆಗೂ ಬಳೆದಿರುವ, ಅನೇಕ ಮಾಸಗಳಿಂದಲೂ ಬಿಡಿಸದಿರುವ ನಿನ್ನ ಈ ಜಡೆಯನ್ನು ನಿನ್ನ ಭರ್ತನಾದ ರಾಘವನು ಸ್ವಲ್ಪ ದಿನಗಳಲ್ಲಿಯೇ ಬಿಡಿಸಿ ನಿನಗೆ ಸಂತೋಷವನ್ನುಂಟುಮಾಡುವನು. ನೀನು ಉದಿಸುತ್ತಿರುವ ಪೂರ್ಣಚಂದ್ರೋಪಮ

ಮಂಕಗತಾಂ ಸತೀಂ । ಅಹಂ ದ್ರಕ್ಷ್ಯಾಮಿ ಸಿದ್ಧಾರ್ಥಾ ತ್ವಾಂ ಶತ್ರೌ ವಿನಿಪಾತಿತೇ ॥ ೩೨ ॥ ಅಶ್ರೂಣ್ಯಾನಂದಜಾನ್ಯಿತ್ವಂ ವರ್ತಯಿಷ್ಯಸಿ ಶೋಭನೇ! । ಸಮಾಗಮ್ಯ ಪರಿಷ್ವಜ್ಯ ತಸ್ಯೋರಸಿ ಮಹೋರಸಃ ॥೩೩॥ ಅಚಿರಾನ್ಮೋಕ್ಷ್ಯತೇ ಸೀತೇ! ದೇವಿ!! ತೇ ಜಘನಂ ಗತಾಂ । ಧೃತಾಮೇತಾನ್ ಬಹೂನ್ ಮಾಸಾನ್ ವೇಣೀಂ ರಾಮೋ ಮಹಾ ಬಲಃ ॥ ೩೪ ॥ ತಸ್ಯ ದೃಷ್ಟ್ವಾ ಮುಖಂ ದೇವಿ! ಪೂರ್ಣಚಂದ್ರಮಿವೋದಿತಂ । ಮೋಕ್ಷ್ಯಸೇಽಶೋಕಜಂ ವಾರಿ ನಿರ್ಮೋಕಮಿವ ಪನ್ನಗೀ ॥೩೫॥ ರಾವಣಂ ಸಮರೇ ಹತ್ವಾ ನಚಿರಾದೇವ ಮೈಥಿಲಿ! । ತ್ವಯಾ ಸಮಗ್ರಃ ಪ್ರಿಯಯಾ ಸುಖಾರ್ಹೋ ಲಪ್ಸ್ಯತೇ ಸುಖಂ ॥೩೬॥ ಸಮಾಗತಾ ತ್ವಂ ವೀರ್ಯೇಣ ಮೋದಿಷ್ಯಸಿ ಮಹಾತ್ಮನಾ । ಸುವರ್ಷೇಣ ಸಮಾಯುಕ್ತಾ ಯಥಾ ಸಸ್ಯೇನ ಮೇದಿನೀ ॥ ೩೭ ॥

---

ವನ್ನು ಹೊಂದಿದ, ಸತೀಂ - ಪತಿವ್ರತೆಯಾದ, ತ್ವಾಂ - ನಿನ್ನನ್ನು, ಅಹಂ - ನಾನು, ಸಿದ್ಧಾರ್ಥಾ - ದೊರಕಿದ ಪ್ರಯೋಜನವುಳ್ಳವಳಾಗಿ, ಕ್ಷಿಪ್ರಂ - ಜಾಗ್ರತೆಯಾಗಿ, ದ್ರಕ್ಷ್ಯಾಮಿ - ನೋಡುತ್ತೇನೆ. ॥೩೨॥ ಹೇ ಶೋಭನೇ - ಎಲೆ ಶುಭಕರಳೇ, ಸಮಾಗಮ್ಯ - ಬಂದು, ಪರಿಷ್ವಜ್ಯ - ಅಪ್ಪಿ, (ಸ್ಥಿತಸ್ಯ - ನಿಂತಿರುವ), ಮಹೋರಸಃ - ಮಹತ್ತರವಾದ ವಕ್ಷಸ್ಥಳವುಳ್ಳ, ತಸ್ಯ - ಆ ಶ್ರೀರಾಮನ, ಉರಸಿ - ವಕ್ಷಸ್ಥಳದಲ್ಲಿ, ತ್ವಂ - ನೀನು, ಅನಂದಜಾನಿ - ಸಂತೋಷದಿಂದ ಹುಟ್ಟಿದ, ಅಶ್ರೂಣಿ - ಕಂಬನಿ ಗಳನ್ನು, ವರ್ತಯಿಷ್ಯಸಿ - ಬಿಡುವೆ. ॥ ೩೩ ॥ ಹೇ ಸೀತೇ - ಎಲೌ ಸೀತಾದೇವಿಯೇ, ಮಹಾಬಲಃ - ಬಹು ಬಲಿಷ್ಠನಾದ, ರಾಮಃ - ಶ್ರೀರಾಮನು, ಬಹೂನ್ - ಅನೇಕವಾದ, ಏತಾನ್ಮಾಸಾನ್ - ಈ ತಿಂಗಳುಗಳಲ್ಲಿ, ಧೃತಾಂ - ಧರಿಸಲ್ಪಟ್ಟ, ತೇ - ನಿನ್ನ, ಜಘನಂ - ಜಘನಪ್ರದೇಶವನ್ನು, ಗತಾಂ - ಹೊಂದಿದ, ವೇಣೀಂ - ಜಡೆಯನ್ನು, ಅಚಿರಾತ್ - ಬೇಗ, ಮೋಕ್ಷ್ಯತೇ - ಬಿಡುವನು. ॥ ೩೪ ॥ ಹೇ ದೇವಿ - ಎಲೌ ದೇವಿಯೇ, ಉದಿತಂ - ಹುಟ್ಟಿದ, ಪೂರ್ಣ....ತಂ - ಪೂರ್ಣಿಮಾಚಂದ್ರನಂತಿರುವ, ತಸ್ಯ - ಆ ಶ್ರೀರಾಮನ, ಮುಖಂ - ಮುಖವನ್ನು, ದೃಷ್ಟ್ವಾ - ಕಂಡು, ಪನ್ನಗೀ - ಸರ್ಪವು, ನಿರ್ಮೋಕಮಿವ-ಪೊರೆಯನ್ನಂತೆ, ಅಶೋಕಜಂ-ಸಂತೋಷದಿಂದ ಹುಟ್ಟಿದ, ವಾರಿ-ಉದಕವನ್ನು, ಮೋಕ್ಷ್ಯಸೇ - ಬಿಡುವೆ. ॥ ೩೫ ॥ ಹೇ ಮೈಥಿಲಿ - ಎಲೌ ಸೀತಾದೇವಿಯೇ, ಸುಖಾರ್ಹಃ - ಸುಖಕ್ಕೆ ಯೋಗ್ಯನಾದ ಶ್ರೀರಾಮನು, ರಾವಣಂ - ರಾವಣನನ್ನು, ಸಮರೇ - ಕಾಳಗದಲ್ಲಿ, ಹತ್ವಾ - ಕೊಂದು. ನಚಿರಾದೇವ - ಸ್ವಲ್ಪಕಾಲದಲ್ಲಿಯೇ, ಪ್ರಿಯಯಾ - ಪ್ರೀತಿಪಾತ್ರಳಾದ, ತ್ವಯಾ - ನಿನ್ನಿಂದ, ಸಮಗ್ರಃ - ಸಂಪೂರ್ಣವಾಗಿ, ಸುಖಂ - ಸುಖವನ್ನು, ಲಪ್ಸ್ಯತೇ - ಹೊಂದುವನು. ॥೩೬॥ ಸಸ್ಯೇನ - ಪೈರಿನಿಂದ, ಸಮಾಸಕ್ತಾ - ಕೂಡಿರುವ, ಮೇದಿನೀ - ಭೂಮಿಯು, ವರ್ಷೇಣ - ವರ್ಷದಿಂದ, ಯಥಾ- ಹೇಗೆಯೋ, ತಥಾ - ಹಾಗೆ, ಮಹಾತ್ಮನಾ - ಮಹಾ ಮನಸ್ವಿಯಾದ ರಾಮನಿಂದ, ಸಮಾಗತಾ - ಕೂಡಿದ, ತ್ವಂ - ನೀನು, ವೀರ್ಯೇಣ - ಆತನ ಪರಾಕ್ರಮದಿಂದ, ಮೋದಿಷ್ಯಸಿ - ಸಂತೋಷಿಸುವೆ.

---

ವಾದ ಶ್ರೀರಾಮನ ಮುಖವನ್ನು ಬಹು ಬೇಗನೆಯೇ ನೋಡಿ, ಪೊರೆಬಿಟ್ಟ ಸರ್ಪದಂತೆ, ಈ ದುಃಖವನ್ನು ತೊರೆದು ಆನಂದಿಸುವೆ. ಎಲೆ ಮೈಥಿಲಿ! ಸುಖಯೋಗ್ಯನಾದ ಶ್ರೀರಾಮನು ನಿನ್ನೊಡಗೂಡಿ ಸಂಪೂರ್ಣಸುಖವನ್ನನುಭವಿಸುವನು. ಮಹಾನುಭಾವನೂ, ಅಧಿಕ ವೀರ್ಯನೂ ಆದ ಶ್ರೀರಾಮನೊಡಗೂಡಿ ನೀನು ಪರಮಾನಂದವನ್ನು ಹೊಂದುವೆಯೆಂಬುದ ರಲ್ಲಿ ಸಂದೇಹವೇ ಇಲ್ಲವು. ಶ್ರೀರಾಮನೊಡಗೂಡಿದ ನೀನು ಮಳೆಯೊಡಗೂಡಿದ ಗಿಡದಂತೆ ಬಹಳ ಸಂತೋಷದಿಂದ ಹಿಗ್ಗುವೆ. ಎಲೌ ಸೀತಾದೇವಿಯೇ! ಮೇರುಪರ್ವತವನ್ನು ಪ್ರದ

ಗಿರಿವರಮಭಿತೋಽನುವರ್ತಮಾನೋ
ಹಯಇವ ಮಂಡಲಮಾಶು ಯಃ ಕರೋತಿ ।
ತಮಿಹ ಶರಣಮಭ್ಯುಪೈಹಿ ದೇವಂ
¶ ದಿವಸಕರಂ ಪ್ರಭವೋ ಹ್ಯಯಂ ಪ್ರಜಾನಾಂ ॥ ೩೮ ॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ತ್ರಯಸ್ತ್ರಿಂಶಸ್ಸರ್ಗಃ. ☬

||೩೭|| ಯಃ - ಯಾವ ದೇವನು, ಗಿರಿವರಂ - ಮೇರುಪರ್ವತದ, ಅಭಿತಃ - ಎಲ್ಲಾ ಕಡೆಯಲ್ಲಿಯೂ, ಅನುವರ್ತಮಾನಃ - ಅನುಕೂಲವಾಗಿ ತಿರುಗುವವನಾಗಿ, ಹಯಇವ - ಕುದುರೆಯಂತೆ, ಆಶು - ಜಾಗ್ರತೆಯಾಗಿ, ಮಂಡಲಂ - ಪ್ರದಕ್ಷಿಣವನ್ನು, ಕರೋತಿ - ಮಾಡುತ್ತಾನೆಯೋ, ದೇವಂ - ಪ್ರಕಾಶಮಾನನಾದ, ಇಹ - ಈ ಲೋಕದಲ್ಲಿ, ದಿವಸಕರಂ - ಹಗಲನ್ನುಂಟುಮಾಡುವ, ತಂ - ಸೂರ್ಯನನ್ನು, ಶರಣಂ - ಶರಣನ್ನ, ಅಭ್ಯುಪೈಹಿ - ಹೊಂದು, ಅಯಂ - ಈತನು, ಪ್ರಜಾನಾಂ - ಜನಗಳಿಗೆ, ಪ್ರಭವೋಹಿ - ಕಾರಣನಷ್ಟೆ. || ೩೮ ||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ತ್ರಯಸ್ತ್ರಿಂಶಸ್ಸರ್ಗಃ.

ಕ್ಷಿಣೆ ಮಾಡುವವನೂ, ಉತ್ತಮಾಶ್ವಗಳಂತೆ ಮಂಡಲಗತಿಯನ್ನೈದುತ್ತಿರುವವನೂ, ಪಭ್ರುವೂ ಆದ ಸೂರ್ಯನನ್ನು ಶರಣು ಹೊಂದು. ಈತನು ಪ್ರಜೆಗಳೆಲ್ಲರಿಗೂ ಪ್ರಭುವಾದವನು. ಆದುದರಿಂದ ನೀನೀಗ ಈತನನ್ನಾರಾಧಿಸು. || ೩೧–೩೮ ||

ಇಂತಿದು ಸರಮಾಕೃತ ಸೀತಾಸಾಂತ್ವನ ವೃತ್ತಾಂತವೆಂಬ ಮೂವತ್ತ
ಮೂರನೆಯ ಸರ್ಗವು ಸಮಾಪ್ತವಾದುದು.

¶ ಈ ಶ್ಲೋಕದಲ್ಲಿ, ಸೂರ್ಯನು ಜಗದಾಪ್ಯಾಯಕನೆಂಬ ಅರ್ಥವನ್ನು ಮಾತ್ರ ಗ್ರಹಿಸತಕ್ಕುದು. ಶ್ರುತಿಯೂ ಕೂಡ, "ಅಗ್ನೌ ಪ್ರಾಸ್ತಾಹುತಿಃ ಸಮ್ಯಗಾದಿತ್ಯಮುಪತಿಷ್ಠತೇ । ಆದಿತ್ಯಾಜ್ಜಾಯತೇ ವೃಷ್ಟಿರ್ವೃಷ್ಟೇರನ್ನಂ ತತಃ ಪ್ರಜಾಃ ॥" ಎಂದು ಹೇಳಿರುತ್ತದೆ. ಇದರಿಂದ ಆದಿತ್ಯನಲ್ಲಿ ಜಗತ್ಕಾರಣತ್ವೋಕ್ತಿಯು ಕೂಡುವುದಿಲ್ಲ. ಅಶ್ಲೋಪಮಾನನಿರುವುದರಿಂದ ತನ್ನಿಂದ ಅತಿರಿಕ್ತನಾದ ಪುರುಷನಿಂದ ತನಗಿರುವ ಪ್ರೇರಣೆಯು ಹೇಳಿದಂತಾಯಿತು. "ಭೀಷಾಸ್ಮಾದ್ವಾತಃ ಪವತೇ, ಭೀಷೋದೇತಿ ಸೂರ್ಯಃ" ಎಂದು ಶ್ರುತಿಯು ಸಾರುತ್ತದೆ. ಸೂರ್ಯನೂ ಪರಮಾತ್ಮನ ಆಜ್ಞೆಗೊಳಗಾದವನು. (ಗೋ)

☬ ಈ ಸರ್ಗದಲ್ಲಿರುವುದು ೩೫ ಶ್ಲೋಕಗಳು ಮಾತ್ರ. ಇನ್ನು ಮೂರು ಶ್ಲೋಕಗಳು ಪ್ರಕ್ಷಿಪ್ತವೆಂದು ಕತಕರೂ, ತಿಲಕಕಾರರೂ ಹೇಳುತ್ತಾರೆ.

# ಯುದ್ಧಕಾಂಡೇ ಚತುಸ್ತ್ರಿಂಶಸ್ಸರ್ಗಃ

**ಅಥ ತಾಂ ಜಾತಸಂತಾಪಾಂ ತೇನ ವಾಕ್ಯೇನ ಮೋಹಿತಾಂ । ಸರಮಾಽಽಹ್ಲಾದಯಾಮಾಸ ಪೃಥಿವೀಂ ದ್ಯೌರಿವಾಂಭಸಾ ॥ ೧ ॥ ತತಸ್ತಸ್ಯಾ ಹಿತಂ ಸಖ್ಯಂ ಚಿಕೀರ್ಷಂತೀ ಸಖೀವಚಃ । ಉವಾಚ ಕಾಲೇ ಕಾಲಜ್ಞಾ ಸ್ಮಿತಪೂರ್ವಾಽಭಿಭಾಷಿಣೀ ॥ ೨ ॥ "ಉತ್ಸಹೇಯಮಹಂ ಗತ್ವಾ ತ್ವದ್ವಾಕ್ಯಮಸಿತೇಕ್ಷಣೇ ! । ನಿವೇದ್ಯ ಕುಶಲಂ ರಾಮೇ ಪ್ರತಿಚ್ಛನ್ನಾ ನಿವರ್ತಿತುಂ ॥ ೩ ॥ ನಹಿ ಮೇ ಕ್ರಮಮಾಣಾಯಾ ನಿರಾಲಂಬೇ ವಿಹಾಯಸಿ । ಸಮರ್ಥೋ ಗತಿಮನ್ವೇತುಂ ಪವನೋ ಗರುಡೋಽಪಿವಾ" ॥ ೪ ॥**

---

ಅಥ - ಅನಂತರದಲ್ಲಿ, ಮೋಹಿತಾಂ - ರಾವಣನ ಮಾಯೆಗೊಳಗಾಗಿ, ಜಾತಸಂತಾಪಾಂ - ಹುಟ್ಟಿದ ಸಂತಾಪವುಳ್ಳ, ತಾಂ - ಆ ಸೀತಾದೇವಿಯನ್ನು, ಸರಮಾ - ಸರಮೆಯು, ದ್ಯೌಃ - ಅಂತರಿಕ್ಷವು, ಅಂಭಸಾ - ಉದಕದಿಂದ, ಪೃಥಿವೀಮಿವ - ಭೂಮಿಯನ್ನಂತೆ, ತೇನವಾಕ್ಯೇನ - ಆ ಮಾತಿನಿಂದ, ಆಹ್ಲಾ....ಸ - ಸಂತೋಷಗೊಳಿಸಿದಳು. ॥ ೧ ॥ ಸ್ಮಿತ.....ಣೀ - ಮುಗುಳುನಗೆಯೊಡನೆಯೇ ಮಾತಾಡುವ, ಕಾಲಜ್ಞಾ - ಸಮಯವನ್ನರಿತವಳಾದ, ಸಖೀ - ಸ್ನೇಹಿತಳಾದ ಸರಮೆಯು, ತತಃ - ಬಳಿಕ, ತಸ್ಯಾಃ - ಆ ಸೀತಾದೇವಿಗೆ, ಹಿತಂ - ಹಿತಕರವಾದ, ಸಖ್ಯಂ - ಸಖಿಯು ಮಾಡತಕ್ಕ ಕೆಲಸವನ್ನು, ಚಿಕೀರ್ಷಂತೀ - ಮಾಡಲಿಚ್ಛೆಯುಳ್ಳವಳಾಗಿ, ಕಾಲೇ - ಆ ಸಮಯದಲ್ಲಿ, ವಚಃ - ಮಾತನ್ನು, ಉವಾಚ - ಹೇಳಿದಳು. ॥ ೨ ॥ ಹೇ ಅಸಿತೇಕ್ಷಣೇ - ಎಲೌ ಕಪ್ಪಾದ ಕಣ್ಣುಗಳುಳ್ಳವಳೇ, ಅಹಂ - ನಾನು, ಪ್ರತಿಚ್ಛನ್ನಾ - ಗೂಢವಾಗಿ, ಗತ್ವಾ - ಹೋಗಿ, ಕುಶಲಂ - ಕುಶಲಪ್ರಶ್ನೆಯರೂಪವಾದ, ತ್ವದ್ವಾಕ್ಯಂ - ನಿನ್ನ ಮಾತನ್ನು, ರಾಮೇ - ಶ್ರೀರಾಮನಲ್ಲಿ, ನಿವೇದ್ಯ - ತಿಳುಹಿಸಿ, ನಿವರ್ತಿತುಂ - ಹಿಂತಿರುಗಿ ಬರುವುದಕ್ಕೆ, ಉತ್ಸಹೇಯಂ - ಉದ್ಯುಕ್ತಳಾಗಿರುವೆನು. ॥ ೩ ॥ ನಿರಾಲಂಬೇ - ಆಲಂಬವಿಲ್ಲದಿರುವ, ವಿಹಾಯಸಿ - ಆಕಾಶದಲ್ಲಿ, ಕ್ರಮಮಾಣಾಯಾಃ - ಹೋಗುತ್ತಿರುವ, ಮೇ - ನನ್ನ, ಗತಿಂ - ಗಮನವನ್ನು, ಅನ್ವೇತುಂ - ಹಿಂಬಾಲಿಸಿ ಬರಲು, ಪವನಃ - ವಾಯುವಾಗಲಿ, ಗರುಡೋಪಿವಾ -

---

ರಾವಣಾಸುರನು ಹೇಳಿದ ಮಾತುಗಳಿಂದ ಮೋಹಗೊಂಡು, ಬಹಳವಾಗಿ ದುಃಖಿಸುತ್ತಿರುವ ಆ ಸೀತಾದೇವಿಗೆ, ಸರಮೆಯೆಂಬ ಆ ವಿಭೀಷಣಪತ್ನಿಯು ಮೃದುಮಧುರ ವಚನಗಳಿಂದ, ಆಕಾಶವು ವರ್ಷೋದಕದಿಂದ ಭೂಮಿಯನ್ನೆಂತೋ ಅಂತು ಸಂತೋಷವನ್ನುಂಟುಮಾಡಿದಳು. ಇದೂ ಅಲ್ಲದೆ ಆ ಸರಮೆಯು ತನ್ನ ಗೆಳತಿಗೆ ತನ್ನ ಕರ್ತವ್ಯವಾಗಿ ಮಾಡಬೇಕಾದ ಸಹಾಯವನ್ನು ಮಾಡಲು ಬಯಸಿದವಳಾಗಿ ಸ್ಮಿತಮುಖಿಯಾಗಿ ಸಮಯವರಿತು ಅದಕ್ಕೆ ತಕ್ಕಂತೆ ಆಕೆಯನ್ನು ಕುರಿತು, "ಎಲೌ ಚಾರುನೇತ್ರೆಯೇ ! ನಾನು ವೇಷಾಂತರದಿಂದ ಶ್ರೀರಾಮನ ಬಳಿಗೈದಿ ಆತನಿಗೆ ನಿನ್ನ ಕುಶಲವಾರ್ತೆಯನ್ನರುಹಿ ಆತನ ಕುಶಲವನ್ನು ತಿಳಿದು ನಿನ್ನಲ್ಲಿಗೆ ಬರಬೇಕೆಂದಿರುವೆನು. ನಿರಾಲಂಬವಾದ ಆಕಾಶದಲ್ಲಿ ಹೋಗುವ ನನಗೆ ಸಮಾನವಾಗಿ ವಾಯುದೇವನೂ, ಗರುತ್ಮಂತನೂ ಹೋಗಲಾರರು. ನಾನು ಆಕಾಶದಲ್ಲಿ ಯಾರಿಗೂ ಕಾಣಿಸಿಕೊಳ್ಳದೆಯೇ ಸಂಚರಿಸಬಲ್ಲೆನು. ಆದುದರಿಂದ ಈಗ ನಾನು ಶ್ರೀರಾಮನ ಬಳಿಗೆ

ಏವಂ ಬ್ರುವಾಣಾಂ ತಾಂ ಸೀತಾ ಸರಮಾಂ ಪುನರಬ್ರವೀತ್ । ಮಧುರಂ ಶ್ಲಕ್ಷ್ಣಯಾ ವಾಚಾ ಪೂರ್ವಂ ಶೋಕಾಭಿಪನ್ನಯಾ ॥ ೫ ॥ "ಸಮರ್ಥಾ ಗಗನಂ ಗಂತುಮಪಿ ವಾ ತ್ವಂ ರಸಾತಲಂ । ಅವಗಚ್ಛಾಮ್ಯಕರ್ತವ್ಯಂ ಕರ್ತವ್ಯಂ ತೇ ಮದಂತರೇ ॥ ೬ ॥ ಮತ್ಪ್ರಿಯಂ ಯದಿ ಕರ್ತವ್ಯಂ ಯದಿ ಬುದ್ಧಿಃ ಸ್ಥಿರಾ ತವ । ಜ್ಞಾತುಮಿಚ್ಛಾಮಿ ತಂ ಗತ್ವಾ ಕಿಂ ಕರೋತೀತಿ ರಾವಣಃ ॥ ೭ ॥ ಸಹಿ ಮಾಯಾಬಲಃ ಕ್ರೂರೋ ರಾವಣ ಶ್ಶತ್ರುರಾವಣಃ । ಮಾಂ ಮೋಹಯತಿ ದುಷ್ಟಾತ್ಮಾ ಪೀತಮಾತ್ರೇವ ವಾರುಣೀ ॥೮॥

ಗರುಡನಾಗಲಿ, ನಸಮರ್ಥೋಽಹಿ - ಸಮರ್ಥನಲ್ಲವಷ್ಟೆ. ॥ ೪ ॥ ಪೂರ್ವಂ - ಸರಮೆಯು ಸಮಾಧಾನ ಹೇಳುವದಕ್ಕೆ ಮೊದಲು, ಶೋಕಾ.....ಯಾ - ಶೋಕಾಕ್ರಾಂತವಾದ, ಶ್ಲಕ್ಷ್ಣಯಾ - ಮೃದುವಾದ, ವಾಚಾ-ಮಾತಿನಿಂದ, ಸೀತಾ-ಸೀತಾದೇವಿಯು, ಏವಂ-ಈ ಪ್ರಕಾರವಾಗಿ, ಮಧುರಂ ಇಂಪಾಗಿ, ಬ್ರುವಾಣಾಂ - ಹೇಳುತ್ತಿರುವ, ತಾಂಸರಮಾಂ - ಆ ಸರಮೆಯನ್ನು ಕುರಿತು, ಪುನಃ - ಮತ್ತು, ಅಬ್ರವೀತ್ - ನುಡಿದಳು. ॥ ೫ ॥ ಅಕರ್ತವ್ಯಂ - ಮಾಡಲಸಾಧ್ಯವಾದರೂ, ಮದಂತರೇ - ನನ್ನ ವಿಷಯದಲ್ಲಿ, ತೇ - ನಿನ್ನಿಂದ, ಕರ್ತವ್ಯಂ - ಮಾಡತಕ್ಕುದೆಂದು, ಅವಗಚ್ಛಾಮಿ - ತಿಳಿದಿದ್ದೇನೆ, ತ್ವಂ - ನೀನು, ಗಗನಂ - ಅಂತರಿಕ್ಷದಲ್ಲಿಯೂ, ಅಪಿವಾ - ಹಾಗಲ್ಲದಿದ್ದರೆ, ರಸಾತಲಂ - ಪಾತಾಳ ದಲ್ಲಾದರೂ, ಗಂತುಂ - ಹೋಗಲು, ಸಮರ್ಥಾ - ಸಮರ್ಥಳಾಗಿರುವೆ. ॥ ೬ ॥ ಮತ್ಪ್ರಿಯಂ - ನನಗೆ ಇಷ್ಟವಾದ ಕಾರ್ಯವು, ಕರ್ತವ್ಯಂಯದಿ - ಮಾಡತಕ್ಕುದಾಗಿದ್ದರೆ, ತವ - ನಿನ್ನ, ಬುದ್ಧಿಃ - ಮತಿಯು, ಸ್ಥಿರಾಯದಿ - ಚಂಚಲವಾಗಿಲ್ಲದಿದ್ದರೆ, ತಂ - ಅವನನ್ನು ಕುರಿತು, ಗತ್ವಾ - ಹೋಗಿ, ರಾವಣಃ - ರಾವಣನು, ಕಿಂಕರೋತಿ - ಏನುಮಾಡುತ್ತಾನೆ, ಜ್ಞಾತುಮಿಚ್ಛಾಮಿ - ತಿಳಿಯಲಿಚ್ಛಿಸುತ್ತೇನೆ. ॥ ೭ ॥ ಶತ್ರುರಾವಣಃ - ಶತ್ರುಗಳನ್ನು ಗೋಳಾಡಿಸುತ್ತಿರುವ, ಕ್ರೂರಃ - ಕ್ರೂರನಾದ, ರಾವಣಃ - ರಾವಣನು, ಮಾಯಾಬಲಃ - ಮಾಯಾಬಲವುಳ್ಳವನು, ದುರಾತ್ಮಾ - ದುಷ್ಟ ಸ್ವಭಾವವುಳ್ಳವನು, (ಆದಕಾರಣ) ಪೀತಮಾತ್ರಾ - ಆಗತಾನೆ ಪಾನಮಾಡಲ್ಪಟ್ಟ, ವಾರುಣೀವ-ಮದ್ಯದಂತೆ, ಮಾಂ-ನನ್ನನ್ನು, ಮೋಹ ಯತಿ - ಮೋಸಗೊಳಿಸುವನು. ॥ ೮ ॥ ನಿತ್ಯಶಃ - ಯಾವಾಗಲೂ, ಯಾಃ - ಯಾವ ಹೆಂಗುಸರು, ಮಾಂ - ನನ್ನನ್ನು, ರಕ್ಷಂತಿ - ಕಾದುಕೊಂಡಿದ್ದಾರೋ, ಸುಘೋರಾಭಿಃ - ಮಹಾ ಭಯಂಕರೆಯ

ಹೋಗಿ ಬರುವೆನು" ಎಂದು ಹೇಳಿದಳು. ॥೧-೪॥ ಆಗ ಸೀತಾದೇವಿಯು ಮೃದುಮಧುರ ವಾದ ಆದರೂ ದುಃಖಸೂಚಕವಾದ ಮಾತುಗಳನ್ನು ಹೇಳುವವಳಾಗಿ ಆ ಸರಮೆಯನ್ನು ಕುರಿತು, "ಪ್ರಾಣಸಖಿ, ಸರಮೆ! ನೀನು ಆಕಾಶದಲ್ಲಿಯೇ ಅಲ್ಲದೆ ರಸಾತಲದಲ್ಲಿ ಸಂಚರಿಸು ವುದಕ್ಕೂ ಸಮರ್ಥಳಾಗಿರುವೆಯೆಂಬುದರಲ್ಲಿ ಸಂದೇಹವೇ ಇಲ್ಲವು. ನನಗೋಸುಗ ಮಾಡ ಬೇಕಾದ ಕಾರ್ಯಗಳಲ್ಲಿ ಯಾವ ಕಾರ್ಯವೂ ನಿನಗೆ ಅಸಾಧ್ಯವಾದುದಲ್ಲವು. ಇದನ್ನು ನಾನು ಬಲ್ಲೆನು. ಆದರೆ, ಎಲೌ ಸಖಿಯೇ! ನನಗೆ ಪ್ರಿಯವನ್ನು ಮಾಡಬೇಕೆಂಬ ಬಯಕೆಯು ನಿನಗಿರುವುದಾದರೆ ಈಗ ರಾವಣಾಸುರನು ಏನುಮಾಡುತ್ತಿರುವನೆಂಬುದನ್ನರಿತುಬಾರೆಂದು ನಿನ್ನನ್ನು ಪ್ರಾರ್ಥಿಸುವೆನು. ಮಾಯಾಬಲನೂ, ಶತ್ರುಗಳನ್ನು ಪೀಡಿಸುವವನೂ ಆದ ಆ ರಾವ ಣನು ಮಹಾ ಕ್ರೂರನು. ಅಂತಹ ದುಷ್ಟನು ಕುಡಿದೊಡನೆಯೇ ಮದ್ಯವು ಮತ್ತೇರಿಸುವಂತೆ ನನ್ನನ್ನು ನೋಡಿದೊಡನೆಯೇ ನನ್ನನ್ನು ತೊಂದರೆಗೊಳಿಸಲುಪಕ್ರಮಿಸುವನು. ದುರ್ಮಾರ್ಗ ನಾದ ಅವನು ನನ್ನನ್ನು ಯಾವಾಗಲೂ ಬೆದರಿಸುವನು; ಭಯದಿಂದ ನಡುಗುವಂತೆ ಮಾತು

ತರ್ಜಾಪಯತಿ ಮಾಂ ನಿತ್ಯಂ ಭರ್ತ್ಸಯತಿ ಚಾಸಕೃತ್ । ರಾಕ್ಷಸೀಭಿಸ್ಸುಘೋರಾಭಿರ್ಯಾ ಮಾಂ ರಕ್ಷಂತಿ ನಿತ್ಯಶಃ ॥ ೯ ॥ ಉದ್ವಿಗ್ನಾ ಶಂಕಿತಾ ಚಾಽಸ್ಮಿ ನಸ್ವಸ್ಥಂ ಚ ಮನೋ ಮಮ । ತದ್ಭಯಾಚ್ಚಾಹಮುದ್ವಿಗ್ನಾ ಅಶೋಕವನಿಕಾಂ ಗತಾ ॥ ೧೦ ॥ ಯದಿ ನಾಮ ಕಥಾ ತಸ್ಯ ನಿಶ್ಚಿತಂ ವಾಪಿ ಯದ್ಭವೇತ್ । ನಿವೇದಯೇಥಾ ಸರ್ವಂ ತತ್ ಪರೋ ಮೇ ಸ್ಯಾದನುಗ್ರಹಃ" ॥೧೧॥ ಸಾ ತ್ವೇವಂ ಬ್ರುವತೀಂ ಸೀತಾಂ ಸರಮಾ ವಲ್ಗುಭಾಷಿಣೀ । ಉವಾಚ ವದನಂ ತಸ್ಯಾಸ್ಸ್ಪೃಶಂತೀ ಬಾಷ್ಪವಿಕ್ಲಬಂ ॥ ೧೨ ॥ " ಏಷ ತೇ ಯದ್ಯಭಿಪ್ರಾಯಸ್ತದಾಗಚ್ಛಾಮಿ ಜಾನಕಿ ! । ಗೃಹ್ಯ ಶತ್ರೋರಭಿಪ್ರಾಯಮುಪಾವೃತ್ತಾಂ ಚ ಪಶ್ಯ ಮಾಂ " ॥ ೧೩ ॥ ಏವಮುಕ್ತ್ವಾ ತತೋ ಗತ್ವಾ ಸಮೀಪಂ

---

ರಾದ, ತಾಭಿಃರಾಕ್ಷಸೀಭಿಃ - ಆ ರಾಕ್ಷಸಸ್ತ್ರೀಯರಿಂದ, ಮಾಂ - ನನ್ನನ್ನು, ತರ್ಜಾಪಯತಿ - ಹೆದರಿಸುತ್ತಾನೆ, ಅಸಕೃತ್ - ಬಾರಿಬಾರಿಗೂ, ಭರ್ತ್ಸಯತಿಚ - ಗದರಿಸುತ್ತಾನೆ. ॥ ೯ ॥ ತದ್ಭಯಾತ್ - ಆ ರಾವಣನ ಭಯದಿಂದ, ಅಹಂ - ನಾನು, ಉದ್ವಿಗ್ನಾ - ಹೆದರಿಕೆಯುಳ್ಳವಳಾಗಿ, ಅಶೋಕವನಿಕಾಂ- ಅಶೋಕವನವನ್ನು, ಗತಾ - ಹೊಂದಿದವಳಾಗಿದ್ದೇನೆ, ಮಮ - ನನ್ನ, ಮನಶ್ಚ - ಮನವೂ ಕೂಡ, ಸ್ವಸ್ಥಂ - ಸ್ವಸ್ಥಚಿಂತೆಯಾಗಿ, ನ - ಇಲ್ಲವು, ಉದ್ವಿಗ್ನಾ - ಹೆದರಿದವಳಾಗಿ, ಶಂಕಿತಾಚ - ಸಂದೇಹಚಿತ್ತಳೂ ಕೂಡಾ, ಅಸ್ಮಿ-ಆಗಿದ್ದೇನೆ. ॥ ೧೦ ॥ ತಸ್ಯ-ಆ ರಾವಣನಿಗೆ, ಕಥಾಯದಿನಾಮ-ಪ್ರಸ್ತಾಪವುಂಟಾದರೆ, ನಿಶ್ಚಿತಂವಾಪಿ - ನಿಶ್ಚಯವಾದರೂ, ಯದ್ಭವೇತ್ - ಯಾವದು ಉಂಟೋ, ತತ್ಸರ್ವಂ- ಆ ಸಮಸ್ತವನ್ನೂ, ನಿವೇದಯಥಾಃ - ತಿಳಿಸು, ಮೇ - ನನಗೆ, ಪರಃ - ಉತ್ತಮವಾದ, ಅನುಗ್ರಹಃ- ಪ್ರಸಾದವು, ಸ್ಯಾತ್-ಉಂಟಾಗುವದು. ॥ ೧೧ ॥ ವಲ್ಗುಭಾಷಿಣೀ-ಮನೋಹರವಾಗಿ ಮಾತನಾಡುವ, ಸಾಸರಮಾ - ಆ ಸರಮೆಯು, ಬಾಷ್ಪವಿಕ್ಲಬಂ - ಕಂಬನಿಯಿಂದ ಕಲುಷಿತವಾದ, ತಸ್ಯಾಃ - ಆ ಸೀತಾದೇವಿಯ, ವದನಂ - ಮುಖವನ್ನು, ಸ್ಪೃಶಂತೀ - ಸ್ಪರ್ಶಿಸುವವಳಾಗಿ, ಏವಂ - ಈ ಪರಿಯಾಗಿ, ಬ್ರುವಂತೀಂ - ಹೇಳುತ್ತಿರುವ, ಸೀತಾಂ - ಸೀತಾದೇವಿಯನ್ನು ಕುರಿತು, ಉವಾಚ-ಹೇಳಿದಳು. ॥ ೧೨॥ ಹೇ ಜಾನಕಿ - ಎಲೌ ಸೀತಾದೇವಿಯೇ, ತೇ - ನಿನಗೆ, ಏಷಃಅಭಿಪ್ರಾಯಃ - ಈ ಅಭಿಪ್ರಾಯವು, ಯದಿ - ಇದ್ದರೆ, ತತ್ - ಆ ಕಾರಣದಿಂದ, ಶತ್ರೋಃ - ರಾವಣನ, ಅಭಿಪ್ರಾಯಂ - ಆಶಯವನ್ನು, ಗೃಹ್ಯ - ತಿಳಿದುಕೊಂಡು, ಉಪಾವೃತ್ತಾಂ - ಹಿಂತಿರುಗಿಬರುವ, ಮಾಂ - ನನ್ನನ್ನು, ಪಶ್ಯ - ಕಾಣು, ಆಗಚ್ಛಾಮಿ - ಹೋಗಿಬರುತ್ತೇನೆ. ॥ ೧೩ ॥ ಏವಂ - ಈ ಪ್ರಕಾರವಾಗಿ, ಉಕ್ತ್ವಾ - ಹೇಳಿ, ತತಃ -

---

ನಾಡುವನು. ಮಹಾ ಭಯಂಕರರಾದ ರಾಕ್ಷಸಿಯರಿಂದ ನನ್ನನ್ನು ಯಾವಾಗಲೂ ರಕ್ಷಿಸುತ್ತಿರುವನು. ಸರಮೆ ! ಇದರಿಂದ ನಾನು ಬಹಳವಾಗಿ ಸಂಶಯಪಟ್ಟಿದ್ದೇನೆ; ನನ್ನ ಮನಸ್ಸು ನನ್ನ ಸ್ವಾಧೀನವನ್ನು ತಪ್ಪಿದೆ; ನಾನು ಬಹಳ ವ್ಯಾಕುಲಿತಳಾಗಿದ್ದೇನೆ. ಈ ಅಶೋಕವನದಲ್ಲಿರುವ ನಾನು ಭಯದಿಂದ ತತ್ತಳಿಸಿಹೋಗಿರುವೆನು. ॥ ೫–೧೦ ॥ ಆದುದರಿಂದ ಈಗ ನೀನು ಆ ರಾವಣನು ಈಗೇನು ಮಾಡುತ್ತಿರುವನು, ಯಾವ ನಿಶ್ಚಯವನ್ನು ಮಾಡಿಕೊಂಡಿರುವನು ಎಂಬುದನ್ನು ತಿಳಿದು ನನಗೆ ಹೇಳಿದರೆ ಅದೇ ನನಗೆ ಒಂದು ಅನುಗ್ರಹವಾಗುವುದು" ಎಂದು ಹೇಳಿದಳು. ಸೀತೆಯಿಂತು ನುಡಿಯಲು ಮೃದುಭಾಷಿಣಿಯಾದ ಆ ಸರಮೆಯು ಆಕೆಯ ಕಣ್ಣೀರನ್ನು ಒರಿಸುತ್ತ, "ತಾಯೇ, ಜಾನಕಿ ! ನಿನ್ನ ಅಭಿಪ್ರಾಯವು ಇದೇ ಆದರೆ, ಇದೋ ನಾನೀಗಲೇ ಹೊರಟು ಆ ರಾವಣನ ವೃತ್ತಾಂತವನ್ನು ಅರಿತು ಬರುವೆನು. ನಿನ್ನ

ತಸ್ಯ ರಕ್ಷಸಃ । ಶುಶ್ರಾವ ಕಥಿತಂ ತಸ್ಯ ರಾವಣಸ್ಯ ಸಮಂತ್ರಿಣಃ ॥ ೧೪ ॥ ಸಾ ಶ್ರುತ್ವಾ ನಿಶ್ಚಯಂ ತಸ್ಯ ನಿಶ್ಚಯಜ್ಞಾ ದುರಾತ್ಮನಃ । ಪುನರೇವಾಗಮತ್ ಕ್ಷಿಪ್ರಮ ಶೋಕವನಿಕಾಂ ತದಾ ॥ ೧೫ ॥ ಸಾ ಪ್ರವಿಷ್ಟಾ ಪುನಸ್ತತ್ರ ದದರ್ಶ ಜನಕಾತ್ಮಜಾಂ । ಪ್ರತೀಕ್ಷಮಾಣಾಂ ಸ್ವಾಮೇವ ಭ್ರಷ್ಟಪದ್ಮಾಮಿವ ಶ್ರಿಯಂ ॥ ೧೬ ॥ ತಾಂತು ಸೀತಾ ಪುನಃ ಪ್ರಾಪ್ತಾಂ ಸರಮಾಂ ವಲ್ಗುಭಾಷಿಣೀಂ । ಪರಿಷ್ವಜ್ಯಚ ಸುಸ್ನಿಗ್ಧಂ ದದೌ ಚ ಸ್ವಯಮಾಸನಂ ॥೧೭॥ " ಇಹಾಸೀನಾ ಸುಖಂ ಸರ್ವಮಾಖ್ಯಾಹಿ ಮಮ ತತ್ವತಃ । ಕ್ರೂರಸ್ಯ ನಿಶ್ಚಯಂ ತಸ್ಯ ರಾವಣಸ್ಯ ದುರಾತ್ಮನಃ " ॥ ೧೮ ॥ ಏವಮುಕ್ತಾತು

---

ಬಳಿಕ, ತಸ್ಯರಕ್ಷಸಃ - ಆ ರಾವಣನ, ಸಮೀಪಂ - ಸಮೀಪವನ್ನು ಕುರಿತು, ಗತ್ವಾ - ಹೋಗಿ, ಸಮಂತ್ರಿಣಃ - ಮಂತ್ರಿಗಳಿಂದ ಕೂಡಿದ, ತಸ್ಯರಾವಣಸ್ಯ - ಆ ರಾವಣನಿಂದ, ಕಥಿತಂ - ಹೇಳಲ್ಪಟ್ಟ ಮಾತನ್ನು, ಶುಶ್ರಾವ - ಕೇಳಿದಳು. ॥ ೧೪ ॥ ನಿಶ್ಚಯಜ್ಞಾ - ನಿಶ್ಚಯವನ್ನು ತಿಳಿದಿರುವ, ಸಾ - ಆ ಸರಮೆಯು, ದುರಾತ್ಮನಃ - ದುರ್ಬುದ್ಧಿಯುಳ್ಳ, ತಸ್ಯ - ಆ ರಾವಣನ, ನಿಶ್ಚಯಂ - ಕಾರ್ಯ ನಿಶ್ಚಯವನ್ನು, ಶ್ರುತ್ವಾ - ಕೇಳಿ, ತದಾ ತತ್ಕ್ಷಣದಲ್ಲಿ, ಪುನರೇವ - ಮರಳಿಯೂ, ಕ್ಷಿಪ್ರಂ - ಜಾಗ್ರತೆಯಾಗಿ, ಅಶೋಕವನಿಕಾಂ - ಅಶೋಕವನವನ್ನು ಕುರಿತು, ಆಗಮತ್ - ಬಂದಳು. ॥೧೫॥ ಸಾ - ಆ ಸರಮೆಯು, ಪ್ರವಿಷ್ಟಾ - ಪ್ರವೇಶಿಸಿ, ತತ್ರ - ಆ ಅಶೋಕವನದಲ್ಲಿ, ಸ್ವಾಮೇವ - ತನ್ನನ್ನೇ, ಪ್ರತೀಕ್ಷಮಾಣಾಂ - ನಿರೀಕ್ಷಿಸುತ್ತಿರುವ, ಭ್ರಷ್ಟಪದ್ಮಾಂ - ಜಾರಿದ ಕಮಲವುಳ್ಳ, ಶ್ರಿಯಮಿವಸ್ಥಿತಾಂ- ಲಕ್ಷ್ಮಿಯಂತಿರುವ, ಜನಕಾತ್ಮಜಾಂ - ಸೀತಾದೇವಿಯನ್ನು, ಪುನಃ - ಮತ್ತು, ದದರ್ಶ - ಕಂಡಳು. ॥೧೬॥ ಸೀತಾತು - ಸೀತಾದೇವಿಯಾದರೆ, ಪುನಃ - ತಿರುಗಿ, ಪ್ರಾಪ್ತಾಂ - ಬಂದ, ವಲ್ಗುಭಾಷಿಣೀಂ- ಮನೋಹರವಾಗಿ ಮಾತನಾಡುವ, ಸರಮಾಂ - ಸರಮೆಯನ್ನು, ಪರಿಷ್ವಜ್ಯಚ - ಅಪ್ಪಿಕೊಂಡು, ಸುಸ್ನಿಗ್ಧಂ - ಸ್ನೇಹಯುಕ್ತಳಾದಂತೆ, ಸ್ವಯಂ - ಸ್ವಕೀಯವಾದ, ಆಸನಂಚ - ಆಸನವನ್ನೂಕೂಡಾ- ದದೌ - ಕೊಟ್ಟಳು. ॥ ೧೭ ॥ ಇಹ - ಈ ಆಸನದಲ್ಲಿ, ಸುಖಂ - ಸುಖವಾಗಿ, ಆಸೀನಾ - ಕುಳಿತು, ಕ್ರೂರಸ್ಯ - ದಾರುಣನಾದ, ದುರಾತ್ಮನಃ - ದುರ್ಬುದ್ಧಿಯುಳ್ಳ, ರಾವಣಸ್ಯ - ರಾವಣನ, ನಿಶ್ಚಯಂ - ನಿಶ್ಚಯವನ್ನು, ಸರ್ವಂ - ಸಮಸ್ತವನ್ನು, ಮಮ - ನನಗೆ, ತತ್ವತಃ - ಯಥಾರ್ಥವಾಗಿ, ಆಖ್ಯಾಹಿ- ಹೇಳು. ॥ ೧೮ ॥ ವೇಪಮಾನಯಾ - ಪರಿತಪಿಸುತ್ತಿರುವ, ಸೀತಯಾ - ಸೀತಾದೇವಿಯಿಂದ, ಏವಂ -

---

ಶತ್ರುವಾದ ಆ ರಾವಣನ ವೃತ್ತಾಂತವನ್ನು ತಿಳಿದು ಬಂದೇ ನಿನ್ನ ನೋಡುವೆನು " ಎಂದು ಹೇಳಿ ಕೂಡಲೇ ರಾವಣನ ಬಳಿಗೈದಿ ಅವನ ಮತ್ತು ಅವನ ಮಂತ್ರಿಗಳ ಆಲೋಚನೆಗಳೆಲ್ಲವನ್ನೂ ತಿಳಿದುಕೊಂಡಳು. ದುರಾತ್ಮನಾದ ಆ ರಾವಣನ ನಿಶ್ಚಯವನ್ನು ತಿಳಿದ ಬಳಿಕ ಆ ಸರಮೆಯು ಮರಳಿ ಅಶೋಕವನಕ್ಕೆ ಬಂದು ಸೀತೆಯನ್ನು ಕಂಡಳು. ॥ ೧೧-೧೫ ॥ ಆಗ ಸೀತೆಯು ಜಾರಿದ ಕಮಲವುಳ್ಳ ಲಕ್ಷ್ಮಿಯಂತೊಪ್ಪುತ್ತ ತನ್ನನ್ನೇ ನಿರೀಕ್ಷಿಸುತ್ತಿದ್ದಳು. ಆ ದೇವಿಯು ಹಿಂತಿರುಗಿ ಬಂದ ಮೃದುಭಾಷಿಣಿಯಾದ ಆ ಸರಮೆಯನ್ನು ಕಂಡು ಪ್ರೀತಿಯಿಂದ ಅವಳನ್ನಪ್ಪಿ ತನ್ನ ಆಸನವನ್ನವಳಿಗೆ ಕೊಟ್ಟು, " ಸರಮೆ ! ನೀನಿಲ್ಲಿ ಕುಳಿತು ಕ್ರೂರನಾದ ಆ ರಾವಣನ ಸಂಕಲ್ಪ ವಿಚಾರವೆಲ್ಲವನ್ನೂ ಯಥಾರ್ಥವಾಗಿ ನನಗೆ ತಿಳಿಸು "

ಸರಮಾ ಸೀತಯಾ ವೇಪಮಾನಯಾ । ಕಥಿತಂ ಸರ್ವಮಾಚಷ್ಟೇ ರಾವಣಸ್ಯ ಸಮಂತ್ರಿಣಃ ॥ ೧೯ ॥ ಜನನ್ಯಾ ರಾಕ್ಷಸೇಂದ್ರೋವೈ ತ್ವನ್ಮೋಕ್ಷಾರ್ಥಂ ಬೃಹದ್ವಚಃ । ಅವಿದ್ಧೇನಚ ವೈದೇಹಿ ! ಮಂತ್ರಿವೃದ್ಧೇನ ಬೋಧಿತಃ ॥ ೨೦ ॥ "ದೀಯತಾಮಭಿಸತ್ಕೃತ್ಯ ಮನುಜೇಂದ್ರಾಯ ಮೈಥಿಲೀ । ನಿದರ್ಶನಂ ತೇ ಪರ್ಯಾಪ್ತಂ ಜನಸ್ಥಾನೇ ಯದದ್ಭುತಂ ॥ ೨೧ ॥ ಲಂಘನಂ ಚ ಸಮುದ್ರಸ್ಯ ದರ್ಶನಂಚ ಹನೂಮತಃ । ವಧಂಚ ರಕ್ಷಸಾಂ ಯುದ್ಧೇ ಕಃ ಕುರ್ಯಾನ್ಮಾನುಷೋ ಭುವಿ" ॥ ೨೨ ॥ ಏವಂ

ಈ ಪ್ರಕಾರವಾಗಿ, ಉಕ್ತಾ - ಹೇಳಲ್ಪಟ್ಟ, ಸರಮಾತು - ಸರಮೆಯಾದರೆ, ಸಮಂತ್ರಿಣಃ - ಮಂತ್ರಿಗಳಿಂದ ಕೂಡಿದ, ರಾವಣಸ್ಯ - ರಾವಣನ, ಸರ್ವಂ - ಸಮಸ್ತವಾದ, ಕಥಿತಂ - ಮಾತುಗಳನ್ನು, ಆಚಷ್ಟೇ - ಹೇಳಿದಳು. ॥ ೧೯ ॥ ಹೇ ವೈದೇಹಿ - ಎಲೌ ಸೀತಾದೇವಿಯೇ, ರಾಕ್ಷಸೇಂದ್ರೋವೈ - ರಾವಣನಾದರೆ, ತ್ವನ್ಮೋಕ್ಷಾರ್ಥಂ - ನಿನ್ನನ್ನು ಬಿಡುವುದಕ್ಕಾಗಿ, ಜನನ್ಯಾ - ತಾಯಿಯಾದ ಕೈಕೆಸಿಯಿಂದಲೂ ಮಂತ್ರಿವೃದ್ಧೇನ - ಮಂತ್ರಿಗಳಲ್ಲಿ ವೃದ್ಧನಾದ, ಅವಿರುದ್ಧೇನಚ - ಅವಿರುದ್ಧನೆಂಬವನಿಂದಲೂ, ಬೃಹದ್ವಚಃ - ಬಹಳ ಮಾತುಗಳನ್ನು, ಬೋಧಿತಃ - ಬೋಧಿಸಲ್ಪಟ್ಟನು. ॥ ೨೦ ॥ ಅಭಿಸತ್ಕೃತ್ಯ - ಸನ್ಮಾನಿಸಿ, ಮನುಜೇಂದ್ರಾಯ - ಶ್ರೀರಾಮನಿಗೆ, ಮೈಥಿಲೀ - ಸೀತಾದೇವಿಯು, ದೀಯತಾಂ - ಕೊಡಲ್ಪಡಲಿ, ಜನಸ್ಥಾನೇ - ಜನಸ್ಥಾನದಲ್ಲಿ, ಅದ್ಭುತಂ - ಆಶ್ಚರ್ಯಕರವಾದ ಖರಾದಿವಧೆಯು, ಯತ್-ಯಾವದು ಮಾಡಲ್ಪಟ್ಟಿತೋ, ತೇ ನಿನಗೆ, ಪರ್ಯಾಪ್ತಂ-ಸಾಕಾದ, ನಿದರ್ಶನಂ-ದೃಷ್ಟಾಂತವು. ॥೨೧॥ ಸಮುದ್ರಸ್ಯ - ಸಮುದ್ರದ, ಲಂಘನಂಚ - ದಾಟುವಿಕೆಯನ್ನೂ, ದರ್ಶನಂಚ - ಸೀತಾದೇವಿಯ ಸಂದರ್ಶನವನ್ನೂ, ಯುದ್ಧೇ - ಕಾಳಗದಲ್ಲಿ, ರಕ್ಷಸಾಂ - ಅಸುರರ, ವಧಂಚ - ಸಂಹಾರವನ್ನೂ ಕೂಡ, ಹನೂಮತಃ - ಹನುಮಂತನಹೊರ್ತು, ಭುವಿ - ಭೂಮಂಡಲದಲ್ಲಿ, ಕಃಮಾನುಷಃ - ಯಾವ ಪುರುಷನು, ಕುರ್ಯಾತ್ - ಮಾಡುವನು. ॥ ೨೨ ॥ ಏವಂ - ಈ ಪ್ರಕಾರ

ಎಂದು ಕೇಳಿದಳು. ॥ ೧೬-೧೮ ॥ ದುಃಖಸಂತಪ್ತಳಾದ ಸೀತಾದೇವಿಯು ಈ ರೀತಿ ನುಡಿಯಲು ಸರಮೆಯು ಮಂತ್ರಿಗಳೊಡಗೂಡಿದ ಆ ರಾವಣನಾಡಿದ ಮಾತುಗಳೆಲ್ಲವನ್ನೂ ಹೇಳುವವಳಾಗಿ, "ವೈದೇಹಿ ! ರಾಕ್ಷಸೇಂದ್ರನ ಜನನಿಯಾದ ಕೈಕಸಿಯೂ, ವೃದ್ಧಾಮಾತ್ಯನೂ, ಮಹಾರಾಜ! ಮನುಜೇಂದ್ರನಾದ ಶ್ರೀರಾಮನಿಗೆ ಸತ್ಕಾರದೊಡನೆ ಸೀತಾದೇವಿಯನ್ನು ಒಪ್ಪಿಸಿಬಿಡು. ಆತನ ಶೌರ್ಯ ಸ್ಥೈರ್ಯ ಪರಾಕ್ರಮಗಳೂ, ಆತನು ಜನಸ್ಥಾನದಲ್ಲಿ ಮಾಡಿದ ಅದ್ಭುತ ಕಾರ್ಯಗಳೇ ನಿನಗೆ ನಿದರ್ಶನವಾಗಿರುವುದಲ್ಲವೆ? ಎಲೈ ರಾವಣನೇ! ಹನುಮಂತನೊಬ್ಬನನ್ನು ಹೊರ್ತು ಮತ್ತಾವನು ತಾನೇ ಅಪಾರ ಜಲಧಿಯನ್ನುದಾಟಿ ಲಂಕಾನಗರದಲ್ಲಿನ ವೀರರಾಕ್ಷಸರನ್ನು ಸಂಹರಿಸಿಯಾನು? ಆ ಹನುಮಂತನೊಬ್ಬನನ್ನು ಬಿಟ್ಟು ಮತ್ತಾವ ಮಾನವನುತಾನೆ ಇಷ್ಟು ಕಾರ್ಯಗಳನ್ನು ಮಾಡಿ ನೀನು ಅಶೋಕವನದಲ್ಲಿಟ್ಟಿರುವ ಸೀತಾದೇವಿಯನ್ನು ಕಂಡು ಹಿಂತಿರುಗಿ ಹೋದಾನು? ಆದುದರಿಂದೆಲೈ ಮಹಾರಾಜನೇ ! ನೀನೀಗ ನಿನ್ನ ಶ್ರೇಯಸ್ಸಿಗಾಗಿಯಾದರೂ ಸೀತಾದೇವಿಯನ್ನ ಶ್ರೀರಾಮನಿಗೆ ಸಮರ್ಪಿಸು" ಎಂದು ಹೇಳಿದರು. ॥೧೯—೨೨॥ ಎಲೆ ಸಖಿ! ಹೀಗೆ ಮಂತ್ರಿವೃದ್ಧರೂ, ರಾಜಮಾತೆಯೂ ಆ ರಾವಣನಿಗೆ ಬಹಳವಾಗಿ ಬೋಧಿಸಿದರು. ಆದರೂ ಆ ದುಷ್ಟ ರಾವಣನು ಹಣಸಂಪಾ

ಸಮಂತ್ರಿವೃದ್ಧೈಶ್ಚಾವಿದ್ಧೇನ ಬಹುಭಾಷಿತಃ । ನತ್ವಾಮುತ್ಸಹತೇ ಮೋಕ್ತು ಮರ್ಥ ಮರ್ಥಪರೋ ಯಥಾ ॥೨೩॥ ನೋತ್ಸಹತ್ಯಮೃತೋ ಮೋಕ್ತುಂ ಯುದ್ಧೇ ತ್ವಾಮಿತಿ ಮೈಥಿಲಿ ! । ಸಾಮಾತ್ಯಸ್ಯ ನೃಶಂಸಸ್ಯ ನಿಶ್ಚಯೋ ಹ್ಯೇಷ ವರ್ತತೇ ॥ ೨೪ ॥ ತದೇಷಾ ನಿಶ್ಚಿತಾ ಬುದ್ಧಿರ್ಮೃತ್ಯುಲೋಭಾದುಪಸ್ಥಿತಾ । ಭಯಾನ್ನಶಕ್ತಸ್ತ್ವಾಂ ಮೋಕ್ತುಮ ನಿರಸ್ತಸ್ತು ಸಂಯುಗೇ । ರಾಕ್ಷಸಾನಾಂಚ ಸರ್ವೇಷಾಮಾತ್ಮನಶ್ಚ ವಧೇನಹಿ ॥ ೨೫ ॥ ನಿಹತ್ಯ ರಾವಣಂ ಸಂಖ್ಯೇ ಸರ್ವಥಾ ನಿಶಿತೈಃ ಶರೈಃ । ಪ್ರತಿನೇಷ್ಯತಿ ರಾಮಸ್ತ್ವಾಮ

ವಾಗಿ, ಸಃ - ಆ ರಾವಣನು, ಮಂತ್ರಿವೃದ್ಧೈಶ್ಚ - ವೃದ್ಧರಾದ ಮಂತ್ರಿಗಳಿಂದಲೂ, ಅವಿದ್ಧೇನಚ - ಅವಿದ್ಧನೆಂಬವನಿಂದಲೂ, ಬಹು-ವಿಶೇಷವಾಗಿ, ಭಾಷಿತಃ-ಹೇಳಲ್ಪಟ್ಟವನಾದರೂ, ತ್ವಾಂ-ನಿನ್ನನ್ನು, ಅರ್ಥಂ - ದ್ರವ್ಯವನ್ನು, ಅರ್ಥಪರೋಯಥಾ - ಅರ್ಥಾಸಕ್ತನಂತೆ, ಮೋಕ್ತುಂ - ಬಿಡುವದಕ್ಕೆ, ನೋತ್ಸಹತೇ - ಉದ್ಯುಕ್ತನಾಗುವುದಿಲ್ಲವು. ॥ ೨೩ ॥ ಹಿ - ಯಾವ ಕಾರಣದಿಂದ, ಸಾಮಾತ್ಯಸ್ಯ - ಮಂತ್ರಿಗಳಿಂದ ಕೂಡಿದ, ನೃಶಂಸಸ್ಯ - ಘಾತುಕನಾದ ರಾವಣನಿಗೆ, ಏಷನಿಶ್ಚಯಃ - ಬಿಡುವದಿಲ್ಲ ವೆಂಬ ಈ ನಿಶ್ಚಯವು, ವರ್ತತೇ - ಇದೆಯೋ, ತಸ್ಮಾತ್ - ಆ ಕಾರಣದಿಂದ, ಹೆ ಮೈಥಿಲೀ - ಎಲೌ ಸೀತಾದೇವಿಯೇ, ಯುದ್ಧೇ - ಕಾಳಗದಲ್ಲಿ, ಅಮೃತಃ - ಮೃತನಾಗದೆ, ತ್ವಾಂ - ನಿನ್ನನ್ನು, ಮೋಕ್ತುಂ- ಬಿಡುವದಕ್ಕೆ, ನೋತ್ಸಹತಿ - ಉದ್ಯುಕ್ತನಾಗುವದಿಲ್ಲ, ಇತಿ - ಇಂತೆಂದು, ಮನ್ಯೇ - ತಿಳಿದಿದ್ದೇನೆ. ॥ ೨೪ ॥ ತತ್ - ಆ ರಾವಣನಿಗೆ, ಏಷಾಬುದ್ಧಿಸ್ತು - ಈ ಬುದ್ಧಿಯಾದರೆ, ಮೃತ್ಯುಲೋಭಾತ್ - ಮೃತ್ಯುವಿನ ಆಶೆಯಿಂದ, ಉಪಸ್ಥಿತಾ - ಪ್ರಾಪ್ತವಾಗಿದೆ, ಸರ್ವೇಷಾಂ - ಸಮಸ್ತರಾದ, ರಾಕ್ಷಸಾನಾಂ- ರಾಕ್ಷಸರ, ವಧೇನಚ - ಸಂಹಾರದಿಂದಲೂ, ಆತ್ಮನಃ - ತನ್ನ, ವಧೇನಚ - ಸಂಹಾರದಿಂದಲೂ, ಸಂಯುಗೇ - ಕಾಳಗದಲ್ಲಿ, ಅನಿರಸ್ತಃ - ನಿರಾಕರಿಸಲ್ಪಡದವನಾಗಿ, ಭಯಾತ್ - ಭೀತಿಯಿಂದ, ತ್ವಾಂ - ನಿನ್ನನ್ನು, ಮೋಕ್ತುಂ - ಬಿಡುವದಕ್ಕೆ, ನಶಕ್ತೋಹಿ - ಉದ್ಯುಕ್ತನಾಗುವುದಿಲ್ಲವಷ್ಟೆ. ॥೨೫॥ ಹೇ ಅಸಿತೇಕ್ಷಣೇ - ಎಲೌ ಕಪ್ಪಾದ ನೇತ್ರಗಳುಳ್ಳವಳೇ, ರಾಮಃ - ಶ್ರೀರಾಮನು, ಸಂಖ್ಯೇ - ಕಾಳಗ ದಲ್ಲಿ, ರಾವಣಂ - ರಾವಣನನ್ನು, ನಿಶಿತೈಃ - ತೀಕ್ಷ್ಣವಾದ, ಶರೈಃ - ಬಾಣಗಳಿಂದ, ಸರ್ವಥಾ - ಹೇಗಾದರೂ, ನಿಹತ್ಯ - ಸಂಹರಿಸಿ, ತ್ವಾಂ - ನಿನ್ನನ್ನು, ಅಯೋಧ್ಯಾಂಪ್ರತಿ - ಅಯೋಧ್ಯಾ

ದನೆಯಲ್ಲಿ ಅತ್ಯಾಶೆಯುಳ್ಳ ಲುಬ್ಧಕನಂತೆ ನಿನ್ನನ್ನು ತೊರೆಯಲಾರದೆ ಹಠಹಿಡಿದಿರುವನು. ಅವನು ಕೇವಲ ಮೊರಟನು; ಯುದ್ಧದಲ್ಲಿ ಮಡಿದಲ್ಲದೆ ನಿನ್ನನ್ನು ಬಿಡಲಾಗುವುದಿಲ್ಲವೆಂದು ಮೊಂಡುಹಿಡಿದಿದ್ದಾನೆ. ಅವನ ಮಂತ್ರಿಗಳೂ ಅವನ ನಿಶ್ಚಯವನ್ನೇ ಅನುಮೋದಿಸಿರುವರು. ಮೈಥಿಲಿ! ಅವನಿಗೆ ಈ ಸ್ಥಿರಬುದ್ಧಿಯು ಕೇವಲ ಮೃತ್ಯುಲೋಭದಿಂದಲೇ ಉಂಟಾಗಿರು ವುದು. ಅವನು ಯುದ್ಧದಲ್ಲಿ ನೆಲಕ್ಕುರುಳುವವರೆಗೂ ಭಯವೇ ಮೊದಲಾದ ಯಾವುದ ರಿಂದಲೂ ಅವನು ನಿನ್ನನ್ನು ಬಿಡಲು ಸಮ್ಮತಿಸುವುದಿಲ್ಲವು. ಇದಕ್ಕಾಗಿ ನೀನು ಸ್ವಲ್ಪವೂ ಚಿಂತಿಸಬೇಡ. ಶ್ರೀರಾಮನು ರಾಕ್ಷಸರೆಲ್ಲರನ್ನೂ, ಈ ರಾವಣನನ್ನೂ ಕೂರಂಬುಗಳಿಂದ ಸಂಹರಿಸಿ ನಿನ್ನನ್ನು ಅಯೋಧ್ಯೆಗೆ ಕರೆದೊಯ್ಯುವನು" ಎಂದು ಹೇಳಿದಳು. ಸರಮೆಯು

ಯೋಧ್ಯಾಮಸಿತೇಕ್ಷಣೇ ||೨೬|| ಏತಸ್ಮಿನ್ನಂತರೇ ಶಬ್ದೋ ಭೇರೀಶಂಖಸಮಾಕುಲಃ |
ಶ್ರುತೋ ವಾನರಸೈನ್ಯಾನಾಂ ಕಂಪಯರ್ನ್ಧರಣೀತಲಂ || ೨೭ ||

ಶ್ರುತ್ವಾ ತು ತದ್ವಾನರಸೈನ್ಯಶಬ್ದಂ
ಲಂಕಾಗತಾ ರಾಕ್ಷಸರಾಜಭೃತ್ಯಾಃ |
ನಷ್ಟೌಜಸೌ ದೈನ್ಯಪರೀತಚೇಷ್ಟಾಃ
ಶ್ರೇಯೋ ನಪಶ್ಯಂತಿ ನೃಪಸ್ಯ ದೋಷೇ || ೨೮ ||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಚತುಸ್ತ್ರಿಂಶಸ್ಸರ್ಗಃ.



ಪಟ್ಟಣವನ್ನು ಕುರಿತು, ನೇಷ್ಯತಿ-ಕರೆದುಕೊಂಡುಹೋಗುವನು. ||೨೬|| ಏತಸ್ಮಿನ್ನಂತರೇ - ಇಷ್ಟರಲ್ಲಿ. ಭೇರೀ....ಲಃ - ಭೇರೀಶಂಖಗಳ ಶಬ್ದದಿಂದ ಕೂಡಿರುವ, ವಾನರಸೈನ್ಯಾನಾಂ - ಕಪಿಸೇನೆಗಳ, ಶಬ್ದಃ- ಘೋಷವು, ಧರಣೀತಲಂ - ಭೂಪ್ರದೇಶವನ್ನು, ಕಂಪಯರ್ನ್ - ಕಂಪಿಸುವುದಾಗಿ, ಶ್ರುತಃ - ಕೇಳಲ್ಪಟ್ಟಿತು. || ೨೭ || ನೃಪಸ್ಯ - ರಾಜನ, ದೋಷೇ - ದೋಷವು, (ನಿಮಿತ್ತಭೂತವಾಗಲೂ) ಲಂಕಾಗತಾಃ-ಲಂಕಾಪಟ್ಟಣವನ್ನು ಹೊಂದಿದ, ರಾಕ್ಷ....ತ್ಯಾ-ರಾಕ್ಷಸೇಂದ್ರನ ಭೃತ್ಯನಾದರೆ, ತದ್ವಾ....ಬ್ದಂ- ಆ ವಾನರಸೇನೆಗಳ ಘೋಷೆಯನ್ನು, ಶ್ರುತ್ವಾ - ಕೇಳಿ, ನಷ್ಟೌಜಸಃ - ನಷ್ಟವಾದ ಸಾಮರ್ಥ್ಯವುಳ್ಳವರಾಗಿ, ದೈನ್ಯ....ತಾಃ - ದೈನ್ಯದಿಂದ ವ್ಯಾಪ್ತವಾದ ಮನವುಳ್ಳವರಾಗಿ, ಶ್ರೇಯಃ - ಜೀವನಭೂತವಾದ ತಮ್ಮತಮ್ಮ ಶ್ರೇಯಸ್ಸನ್ನು, ನಪಶ್ಯಂತಿ - ಕಾಣಲಿಲ್ಲ. || ೨೮ ||

ಇತ್ಯಾರ್ಷೇ ಶೀಮದ್ರಾಮಾಯಣೇ ಯುದ್ಧಕಾಂಡೇ ಚತುಸ್ತ್ರಿಂಶಸ್ಸರ್ಗಃ.



ಸೀತೆಯನ್ನಿಂತು ಸಮಾಧಾನ ಮಾಡುತ್ತಿರಲು ಭೇರೀಶಂಖಗಳ ಸಂಕುಲಶಬ್ದವು ಕೇಳಿಬಂದಿತು. ವಾನರಸೇನೆಗಳ ಆ ಶಬ್ದವು ಭೂಮಿಯನ್ನೇ ನಡುಗಿಸಿಬಿಟ್ಟಿತು. ಲಂಕಾನಗರದಲ್ಲಿದ್ದ ರಾಕ್ಷಸರಾಜ ಭೃತ್ಯರೆಲ್ಲರೂ ಆ ವಾನರಸೈನ್ಯದ ಸಿಂಹನಾದವನ್ನು ಕೇಳಿ, ಕಳೆಗುಂದಿ, ದೈನ್ಯದಿಂದ ವಿಪರೀತ ಚೇಷ್ಟೆಗಳುಳ್ಳವರಾಗಿ ತಮ್ಮ ಶ್ರೇಯಸ್ಸನ್ನೇ ಕಾಣದವರಾದರು. ಇಷ್ಟೂ ಅವರ ದೊರೆಯಾದ ರಾವಣನ ಅಪರಾಧದಿಂದುಂಟಾಯಿತು. || ೨೩—೨೮ ||

ಇಂತಿದು ಸರಮಾ ಸೀತಾಸಂವಾದವೆಂಬ ಮೂವತ್ತನಾಲ್ಕನೆಯ ಸರ್ಗವು
ಸ ಮಾ ಪ್ತ ವಾ ದು ದು .



# ಯುದ್ಧಕಾಂಡೇ ಪಂಚತ್ರಿಂಶಸ್ಸರ್ಗಃ

**ತೇನ ಶಂಖವಿಮಿಶ್ರೇಣ ಭೇರೀಶಬ್ದೇನ ರಾಘವಃ । ಉಪಯಾತಿ ಮಹಾಬಾಹೂ ರಾಮಃ ಪರಪುರಂಜಯಃ ॥ ೧ ॥ ತನ್ನಿನಾದಂ ನಿಶಮ್ಯಾಽಥ ರಾವಣೋ ರಾಕ್ಷಸೇಶ್ವರಃ । ಮುಹೂರ್ತಂ ಧ್ಯಾನಮಾಸ್ಥಾಯ ಸಚಿವಾನಭ್ಯುದೈಕ್ಷತ ॥ ೨ ॥ ಅಥ ತಾನ್ ಸಚಿವಾಂಸ್ತತ್ರ ಸರ್ವಾನಾಭಾಷ್ಯ ರಾವಣಃ । ಸಭಾಂ ಸನ್ನಾದಯನ್ ಸರ್ವಾನಿತ್ಯುವಾಚ ಮಹಾಬಲಃ । ಜಗತ್ಸಂತಾಪನಃ ಕ್ರೂರೋ ಗರ್ಹಯನ್ರಾಕ್ಷಸೇಶ್ವರಃ ॥ ೩ ॥ "ತರಣಂ ಸಾಗರಸ್ಯಾಪಿ ವಿಕ್ರಮಂ ಬಲಸಂಚಯಂ । ಯದುಕ್ತವಂತೋ ರಾಮಸ್ಯ ಭವಂತಸ್ತನ್ಮಯಾ ಶ್ರುತಂ ॥ ೪ ॥ ಭವತಶ್ಚಾಪ್ಯಹಂ ವೇದ್ಮಿ**

---

ಪರಪುರಂಜಯಃ - ಶತ್ರುಸಂಹಾರಕನಾದ ಮಹಾಬಾಹುಃ - ಮಹಾ ಭುಜಪರಾಕ್ರಮಿಯಾದ, ರಾಘವಃ - ರಘುವಂಶೋತ್ಪನ್ನನಾದ, ರಾಮಃ - ಶ್ರೀರಾಮನು, ಶಂಖವಿಮಿಶ್ರೇಣ - ಶಂಖಧ್ವನಿಯಿಂದ ಕೂಡಿದ, ತೇನಭೇರೀಶಬ್ದೇನ-ಆ ಭೇರೀಧ್ವನಿಯಿಂದ ಕೂಡಿ, ಉಪಯಾತಿ-ಬಂದನು. ॥ ೧ ॥ ಅಥ - ಆನಂತರದಲ್ಲಿ, ರಾಕ್ಷಸೇಶ್ವರಃ - ರಾಕ್ಷಸನಾಥನಾದ, ರಾವಣಃ - ರಾವಣನು, ತಂನಿನಾದಂ - ಆ ಶಬ್ದವನ್ನು, ನಿಶಮ್ಯ - ಕೇಳಿ, ಮುಹೂರ್ತಂ - ಮುಹೂರ್ತಕಾಲ, ಧ್ಯಾನಂ-ಧ್ಯಾನವನ್ನು, ಆಸ್ಥಾಯ - ಹೊಂದಿ, ಸಚಿವಾನ್ - ಮಂತ್ರಿಗಳನ್ನು, ಅಭ್ಯುದೈಕ್ಷತ - ನೋಡಿದನು. ॥೨॥ ಅಥ - ಅನಂತರದಲ್ಲಿ, ಮಹಾಬಲಃ - ಬಹು ಬಲವಂತನಾದ, ಜಗತ್ಸಂತಾಪನಃ - ಜಗತ್ತನ್ನು ಸಂತಪಿಸುವಂತೆ ಮಾಡುವ, ಕ್ರೂರಃ - ದಾರುಣನಾದ, ರಾವಣಃ - ರಾವಣನು, ತತ್ರ - ಆ ಪ್ರದೇಶದಲ್ಲಿ, ಸರ್ವಾನ್ - ಸಮಸ್ತರಾದ, ತಾನ್‌ಸಚಿವಾನ್ - ಆ ಮಂತ್ರಿಗಳನ್ನು, ಆಭಾಷ್ಯ - ಕರೆದು, ಸರ್ವಾನ್-ಸಮಸ್ತವಾದ, ಸಭಾಂ - ಸಭೆಯನ್ನು, ಸನ್ನಾದಯನ್ - ಧ್ವನಿಗೊಳಿಸುವವನಾಗಿ, ಗರ್ಹಯನ್ - ಮಂತ್ರಿಗಳನ್ನು ನಿಂದಿಸುತ್ತ, ಇತಿ - ಈ ಪ್ರಕಾರವಾಗಿ, ಉವಾಚ - ಹೇಳಿದನು. ॥೩॥ ಭವಂತಃ - ನೀವು, ಸಾಗರಸ್ಯ-ಸಮುದ್ರದ, ಯತ್ ತರಣಮಪಿ-ಯಾವ ಲಂಘನವನ್ನೂ, ರಾಮಸ್ಯ-ಶ್ರೀರಾಮನ, ವಿಕ್ರಮಂಚ - ಪರಾಕ್ರಮವನ್ನೂ, ಬಲಸಂಚಯಂಚ - ಬಲದ ಸೇರುವಿಕೆಯನ್ನೂ, ಉಕ್ತವಂತಃ - ಹೇಳಿದವರಾದರೋ, ತತ್ - ಅದು, ಮಯಾ - ನನ್ನಿಂದ, ಶ್ರುತಂ - ಕೇಳಲ್ಪಟ್ಟಿತು, ಅಹಂ-

---

ಆ ರೀತಿ ಶಂಖಧ್ವನಿಗಳೊಡಗೂಡಿದ ರಣಭೇರಿಗಳ ಸನ್ನಾದದಿಂದ ರಘುಕುಲೋದ್ಭವನೂ, ಶತ್ರುಪುರಂಜಯನೂ, ಆಜಾನುಬಾಹುವೂ ಆದ ಶ್ರೀರಾಮನು ಲಂಕೆಗೆ ಬಂದನೆಂಬುದನ್ನು ರಾಕ್ಷಸರೆಲ್ಲರೂ ತಿಳಿಸಿದರು. ಆ ಸಮಯದಲ್ಲಿ ರಾಕ್ಷಸಾಧಿಪತಿಯಾದ ರಾವಣಾಸುರನು ಆ ಮಹಾಧ್ವನಿಯನ್ನುಕೇಳಿ, ಒಂದು ಕ್ಷಣಕಾಲ ಆಲೋಚನಾಮಗ್ನನಾಗಿ, ಆಮೇಲೆ ತನ್ನ ಸಮೀಪದಲ್ಲಿದ್ದ ಮಂತ್ರಿಗಳೆಲ್ಲರನ್ನೂ ನೋಡಿ, ಸಭೆಯೆಲ್ಲ ಪ್ರತಿಧ್ವನಿಗೈಯ್ಯುವಂತೆ ಅವರೆಲ್ಲರನ್ನೂ ಕುರಿತು ಹೀಗೆಂದನು. ಲೋಕಸಂತಾಪಕನಾದ ಆ ರಾವಣನು ಅವರೆಲ್ಲರನ್ನೂ ಕುರಿತು "ಎಲೈ ಮಂತ್ರಿಶ್ರೇಷ್ಠರಿರಾ! ರಾಮನು ಸಾಗರವನ್ನು ದಾಟಿಬಂದನೆಂದೂ, ಅಧಿಕ ಸೈನ್ಯಸಮುದಾಯಗಳಿಂದ ಕೂಡಿರುವನೆಂದೂ, ನೀವೆಲ್ಲರೂ ಹೇಳಿದುದನ್ನು ನಾನು ಕೇಳಿದೆನು.

ಯುದ್ಧೇ ಸತ್ಯಪರಾಕ್ರಮಾಃ । ತೂಷ್ಣೀಕಾನೀಕ್ಷತೋಽನ್ಯೋನ್ಯಂ ವಿದಿತ್ವಾ ರಾಮ ವಿಕ್ರಮಂ" ॥ ೫ ॥ ತತಸ್ತು ಸುಮಹಾಪ್ರಾಜ್ಞೋ ಮಾಲ್ಯವಾನ್ನಾಮ ರಾಕ್ಷಸಃ । ರಾವಣಸ್ಯ ವಚಃ ಶ್ರುತ್ವಾ ಮಾತುಃ ಪೈತಾಮಹೋಽಬ್ರವೀತ್ ॥೬॥ ¶ "ವಿದ್ಯಾಸ್ವಭಿ ವಿನೀತೋ ಯೋ ರಾಜಾ ರಾಜನ್ನಯಾನುಗಃ । ಸಶಾಸ್ತಿ ಚಿರಮೈಶ್ವರ್ಯಮರೀಂಶ್ಚ ಕುರುತೇ ವಶೇ ॥ ೭ ॥ ಸಂದಧಾನೋಹಿ ಕಾಲೇನ ವಿಗೃಹ್ಣಂಶ್ಚಾರಿಭಿಸ್ಸಹ । ಸ್ವಪಕ್ಷ

---

ನಾನು, ಯುದ್ಧೇ - ಕಾಳಗದಲ್ಲಿ, ಸತ್ಯಪರಾಕ್ರಮಾಃ - ಸತ್ಯವಾದ ಪರಾಕ್ರಮವುಳ್ಳ, ಭವಂತಶ್ಚಾಪಿ - ನಿಮ್ಮನ್ನೂ ಕೂಡ, ರಾಮವಿಕ್ರಮಂ-ಶ್ರೀರಾಮನ ಪರಾಕ್ರಮವನ್ನೂ, ವಿದಿತ್ವಾ-ತಿಳಿದು, ಅನ್ಯೋನ್ಯಂ-ಪರಸ್ಪರವಾಗಿ, ವೀಕ್ಷತಃ - ನೋಡುವವರಾಗಿ, ತೂಷ್ಣೀಕಾಃ - ಉತ್ಸಾಹವುಳ್ಳವರನ್ನಾಗಿ, ವೇದ್ಮಿ - ತಿಳಿದಿದ್ದೇನೆ, ಇತ್ಯುವಾಚ-ಇಂತೆಂದು ಹೇಳಿದನು. ॥ ೪-೫ ॥ ತತಸ್ತು-ಆಮೇಲೆ, ಮಹಾಪ್ರಾಜ್ಞಃ-ಬಹಳ ತಿಳಿವಳಿಕೆಯುಳ್ಳ, ಮಾತುಃ - ತಾಯಿಯಾದ ಕೈಕಸಿಗೆ, ಪೈತಾಮಹಃ - ಪಿತಾಮಹನ ಪುತ್ರನಾದ, ಮಾಲ್ಯವಾನ್ನಾಮ - ಮಾಲ್ಯವಂತನೆಂದು ಪ್ರಸಿದ್ಧನಾದ, ರಾಕ್ಷಸಃ - ಅಸುರನು, ರಾವಣಸ್ಯ - ರಾವಣನ, ವಚಃ - ಮಾತನ್ನು, ಶ್ರುತ್ವಾ - ಕೇಳಿ, ಅಬ್ರವೀತ್ - ನುಡಿದನು ॥ ೬ ॥ ಹೇ ರಾಜನ್ - ಎಲೈ ಅರಸೇ, ಯೋರಾಜಾ-ಯಾವ ಅರಸು, "ವಿದ್ಯಾಸು-ಆನ್ವೀಕ್ಷಕೀ ದಂಡನೀತಿ ತ್ರಯೀವಾರ್ತಾ" ಎಂಬ ವಿದ್ಯೆಗಳಲ್ಲಿ, ಅಭಿವಿನೀತಃ - ಶಿಕ್ಷಿತನಾದಕಾರಣ, ನಯಾನುಗಃ - ನೀತಿಶಾಸ್ತ್ರವನ್ನನುಸರಿಸುವನೋ, ಸಃ - ಆ ರಾಜನು, ಚಿರಂ - ಬಹುಕಾಲ, ಐಶ್ವರ್ಯಂ - ಈಶ್ವರತ್ವವನ್ನು, ಶಾಸ್ತಿ - ಅಧಿಷ್ಠಾನಮಾಡಿಕೊಂಡಿರುವನು, ಅರೀಂಶ್ಚ - ಶತ್ರುಗಳನ್ನೂ ಕೂಡ, ವಶೇ - ಅಧೀನದಲ್ಲಿ, ಕುರುತೇ - ಮಾಡಿಕೊಳ್ಳುತ್ತಾನೆ. ॥೭॥ ಕಾಲೇನ - ತನ್ನ ಬಲದ ನಾಶಕಾಲದಿಂದ, ಅರಿಭಿಸ್ಸಹ-ಶತ್ರುಗಳೊಡನೆ,

---

ನೀವೆಲ್ಲರೂ ಯುದ್ಧದಲ್ಲಿ ಸ್ಥಿರವಾದ ಪರಾಕ್ರಮವುಳ್ಳವರು ; ರಣರಂಗದಲ್ಲಿ ಮಹಾ ಸಾಮರ್ಥ್ಯವುಳ್ಳ ನೀವೆಲ್ಲರೂ ಆ ರಾಮನ ಪರಾಕ್ರಮವನ್ನರಿತು ಯುದ್ಧಮಾಡಲು ಕುತೂಹಲಿಗಳಾಗಿರುವಿರಿ. ಹೀಗಿರಲು ಕಾರಣವೇನೆಂಬುದನ್ನು ತಿಳಿಸಿರಿ" ಎಂದನು. ॥ ೧–೫ ॥ ಆ ರಾಕ್ಷಸಾಧಿಪನಿಂತು ನುಡಿಯಲು ಆತನ ತಾಯಿಯಾದ ಕೈಕಸಿಯ ತಂದೆಯೂ, ಮಹಾ ಮೇಧಾವಿಯೂ ಆದ ಮಾಲ್ಯವಂತನೆಂಬವನು ಎದ್ದುನಿಂತು, "ಎಲೈ ರಾಕ್ಷಸಶ್ರೇಷ್ಠನಾದ ರಾವಣನೇ ! ವಿದ್ಯಾಪರಿಣತರೂ, ನೀತಿಶಾಸ್ತ್ರಾನುಸಾರವಾಗಿ ನಡೆಯುವವರೂ ಆದ ರಾಜರು ಬಹುಕಾಲ

---

¶ ಇಲ್ಲಿ ಕಾಮಂದಕನು, "ನಯಾನುಸಾರವಾಗಿ ನಡೆದುಕೊಳ್ಳುವ ದೊರೆಯು ಸಕಲೈಶ್ವರ್ಯಗಳನ್ನೂ ಚಿರಕಾಲ ಅನುಭವಿಸುತ್ತಾನೆ" ಎಂಬ ವಿಷಯವನ್ನು ಕುರಿತು ಹೇಳಿರುವ ಈ ಶ್ಲೋಕಗಳು ಗ್ರಾಹ್ಯಗಳು.

ಆನ್ವೀಕ್ಷಕೀಂ ತ್ರಯೀಂ ವಾರ್ತಾಂ ದಂಡನೀತಿಂಚ ಪಾರ್ಥಿವಃ ।
ತದ್ವಿದ್ಭಿಸ್ತತ್ಕ್ರಿಯೋಪೇತೈಶ್ಚಿಂತಯೇದ್ವಿನಯಾನ್ವಿತಃ ॥
ಆನ್ವೀಕ್ಷಕ್ಯಾತ್ಮ ವಿಜ್ಞಾನಂ ಧರ್ಮಾಧರ್ಮೌ ತ್ರಯೀಸ್ಥಿತೌ ।
ಅರ್ಥಾನರ್ಥೌತು ವಾರ್ತಾಯಾಂ ದಂಡನೀತ್ಯಾಂ ನಯಾನಯೌ ॥
ವಿದ್ಯಾಶ್ಚತಸ್ರ ಏವೈತಾ ಯೋಗಕ್ಷೇಮಾಯ ದೇಹಿನಾಂ ।
ವಿದ್ಯಾವಿನೀತೋ ನೃಪತಿರ್ನಕೃಚ್ಛ್ರೇಷ್ವವಸೀದತಿ ॥

ವರ್ಧನಂ ಕುರ್ವನ್ಮಹದೈಶ್ವರ್ಯಮಶ್ನುತೇ ||೮|| ಹೀಯಮಾನೇನ ಕರ್ತವ್ಯೋ ರಾಜ್ಞಾ ಸಂಧಿಸ್ಸಮೇನಚ | ನಶತ್ರುಮವಮನ್ಯೇತ ಜ್ಯಾಯಾನ್ಕುರ್ವೀತ ವಿಗ್ರಹಂ || ೯ || ತನ್ಮಹ್ಯಂ ರೋಚತೇ ಸಂಧಿಸ್ಸಹರಾಮೇಣ ರಾವಣ ! | ಯದರ್ಥಮಭಿಯುಕ್ತಾಸ್ಸ್ಮ ಸೀತಾ ತಸ್ಮೈ ಪ್ರದೀಯತಾಂ || ೧೦ || ತಸ್ಯ ದೇವರ್ಷಯಸ್ಸರ್ವೇ ಗಂಧರ್ವಾಶ್ಚ

ಸಂದಧಾನಃ-ಸಂಧಾನವನ್ನು ಮಾಡುವವನಾಗಿ, ಕಾಲೇನ-ತನ್ನ ಬಲದ ವೃದ್ಧಿಕಾಲದಿಂದ, ವಿಗೃಹ್ಣನ್-ಯುದ್ಧಮಾಡುವವನಾಗಿ, ಸ್ವಪಕ್ಷವರ್ಧನಂ - ತನ್ನ ಕಡೆಯವರಿಗೆ ವೃದ್ಧಿಯನ್ನು, ಕುರ್ವನ್ - ಮಾಡುವವನಾಗಿ, ಮಹದೈಶ್ವರ್ಯಂ - ಬಹಳವಾದ ಸಂಪತ್ತನ್ನು, ಅಶ್ನುತೇ - ಅನುಭವಿಸುತ್ತಾನೆ. || ೮ || ಹೀಯಮಾನೇನ - ಹೀನವಾಗುತ್ತಿರುವ ಸೈನ್ಯವುಳ್ಳ, ಸಮಬಲೇನಚ - ಸಮಾನವಾದ ಬಲವುಳ್ಳ, ರಾಜ್ಞಾ - ಅರಸಿನಿಂದ, ಸಂಧಿಃ - ಸಂಧಿಯು, ಕರ್ತವ್ಯಃ - ಮಾಡತಕ್ಕುದು, ಜ್ಯಾಯಾನ್ - ಅಧಿಕ ಬಲವುಳ್ಳವನು, ಶತ್ರುಂ - ದ್ವೇಷಿಯನ್ನು, ನಾವಮನ್ಯೇತ - ದುರ್ಬಲನೆಂದು ಉಪೇಕ್ಷೆ ಮಾಡಬಾರದು, ವಿಗ್ರಹಂ - ಯುದ್ಧವನ್ನು, ಕುರ್ವೀತ - ಮಾಡಬೇಕು. || ೯ || ಹೇ ರಾವಣ - ಎಲೈ ರಾವಣನೇ, ತತ್ - ಆ ಕಾರಣದಿಂದ, (ಅಂದರೆ - ನೀತಿಶಾಸ್ತ್ರವು ಈ ರೀತಿಯಾಗಿರುವುದರಿಂದ), ತೇ - ಹೀನವಾಗುತ್ತಿರುವ ಬಲವುಳ್ಳ ನಿನಗೆ, ರಾಮೇಣ - ಬಲಿಷ್ಠನಾದ ಶ್ರೀರಾಮನೊಡನೆ, ಸಂಧಿಃ - ಸಂಧಿಯು, ಮಹ್ಯಂ - ನನಗೆ, ರೋಚತೇ - ಇಷ್ಟವಾಗಿದೆ, ಯದರ್ಥಂ - ಯಾವ ಸೀತಾನಿಮಿತ್ತವಾಗಿ, ಅಭಿಯುಕ್ತಾಃ - ಅಭಿನಿವೇಶದಿಂದ ಯುಕ್ತರಾದವರು, ಸ್ಮ - ಆದೆವೋ, (ಸಾ - ಅದು), ಸೀತಾ - ಸೀತಾದೇವಿಯು, ತಸ್ಮೈ - ಆ ಶ್ರೀರಾಮನಿಗೆ, ಪ್ರದೀಯತಾಂ - ಕೊಡಲ್ಪಡಲಿ. || ೧೦ || ಸರ್ವೇ - ಸಮಸ್ತರಾದ, ದೇವರ್ಷಯಃ - ದೇವತೆಗಳೂ ಋಷಿಗಳೂ, ಗಂಧರ್ವಾಶ್ಚ - ಗಂಧರ್ವರೂ ಸಹಾ,

ರಾಜ್ಯವನ್ನನುಭವಿಸುವುದುಮಾತ್ರವಲ್ಲದೆ, ಶತ್ರುಗಳನ್ನೂ, ಸ್ವಾಧೀನಪಡಿಸಿಕೊಳ್ಳುವರು. ಎಲೈ ಮಹಾರಾಜನೇ! ಬಲಹೀನತೆಯುಂಟಾದಾಗ ಶತ್ರುಗಳೊಡನೆ ಸಂಧಿಮಾಡಿಕೊಳ್ಳುವಾತನೂ, ಬಲಾಧಿಕ್ಯವುಂಟಾದಾಗ ಶತ್ರುನಿಗ್ರಹ ಮಾಡುವವನೂ ಆದ ದೊರೆಯು ತನ್ನ ಪಕ್ಷವನ್ನು ಪ್ರಬಲಗೊಳಿಸಿಕೊಳ್ಳುವನು; ಚಿರಕಾಲ ಐಶ್ವರ್ಯವನ್ನು ಅನುಭವಿಸುವನು. ಆದುದರಿಂದೆಲೈ ಪ್ರಭುವೇ! ಹೀನಸ್ಥಿತಿಯನ್ನು ಹೊಂದುತ್ತಿರುವವನೂ, ಸಮಬಲನೂ ಆದವನು ಶತ್ರುವಿನೊಡನೆ ಸಂಧಿಯನ್ನು ಮಾಡಿಕೊಳ್ಳಬೇಕು. ತಾನು ಪ್ರಬಲನಾಗಿದ್ದರೆ ಸಮಯವರಿತು ಶತ್ರುವನ್ನು ತಿರಸ್ಕರಿಸಬೇಕು; ಅವನೊಡನೆ ಯುದ್ಧಮಾಡುವ ಯೋಚನೆಯನ್ನೂ ಮಾಡಬೇಕು. ಎಲೈ ರಾವಣನೇ! ಈ ಸಮಯದಲ್ಲಿ ನೀನು ಶ್ರೀರಾಮನೊಡನೆ ಸಂಧಿ ಮಾಡಿಕೊಳ್ಳುವುದು ಉಚಿತವೆಂದು ನನಗೆ ತೋರುತ್ತದೆ. ಮಹಾಬಲನಾದ ಶ್ರೀರಾಮನು ಬಲಹೀನರಾದ ನಮ್ಮೊಡನೆ ಯುದ್ಧಮಾಡುವನೋ, ಮಾಡನೋ ಎಂದು ಸಂದೇಹಿಸಬೇಡ. ನಮಗೆ ಶ್ರೀರಾಮನೊಡನೆ ವಿರೋಧವು ಸೀತಾನಿಮಿತ್ತವಾಗಿ ಉಂಟಾಗಿರುವುದು. ಸೀತೆಯನ್ನು ಆತನಿಗೆ ಸಮರ್ಪಿಸುವುದರಿಂದ ಈ ವಿರೋಧವು ಕೊನೆಗಾಣುವುದು. ಆದುದರಿಂದ ನೀನೀಗ ಸೀತೆಯನ್ನು ಶ್ರೀರಾಮನಿಗೆ ಒಪ್ಪಿಸಿಬಿಡು. ಇದರಿಂದ ನಮ್ಮೆಲ್ಲರಿಗೂ, ನಿನಗೂ ಶ್ರೇಯಸ್ಸಾಗುವುದು. || ೬-೧೦ || ಮಹಾ ಪ್ರಭುವೇ! ಮತ್ತೊಂದು ವಿಷಯವನ್ನು ಗಮನಕ್ಕೆ ತಂದುಕೊಳ್ಳಬೇಕು. ಆ ರಾಮನಿಗೆ ಜಯವಾಗಬೇಕೆಂದು ಸಮಸ್ತ ದೇವತೆಗಳೂ, ಋಷಿ

ಜಯೈಷಿಣಃ । ವಿರೋಧಂ ಮಾಗಮಸ್ತೇನ ಸಂಧಿಸ್ತೇ ತೇನ ರೋಚತಾಂ ॥ ೧೧ ॥
ಅಸೃಜದ್ಭಗವಾನ್ಪಕ್ಷೌ ದ್ವಾವೇವಹಿ ಪಿತಾಮಹಃ । ಸುರಾಣಾಮಸುರಾಣಾಂಚ ಧರ್ಮಾ
ಧರ್ಮೌ ತದಾಶ್ರಯೌ ॥ ೧೨ ॥ ಧರ್ಮೋಹಿ ಶ್ರೂಯತೇ ಪಕ್ಷೋ ಹ್ಯಮರಾಣಾಂ ಚ
ರಾವಣ! ॥ ೧೩ ॥ ಧರ್ಮೋವೈ ಗ್ರಸತೇ ಧರ್ಮಂ ತತಃ ಕೃತಮಭೂದ್ಯುಗಂ ।
ಅಧರ್ಮೋ ಗ್ರಸತೇ ಧರ್ಮಂ ತತಸ್ತಿಷ್ಯಃ ಪ್ರವರ್ತತೇ ॥ ೧೪ ॥ ತತ್ತ್ವಯಾ ಚರತಾ
ಲೋಕಾ ಧರ್ಮೋ ವಿನಿಹತೋ ಮಹಾ । ಅಧರ್ಮಃ ಪ್ರಗೃಹೀತಶ್ಚ ತೇನಾಸ್ಮ

---

ತಸ್ಯ - ಆ ಶ್ರೀರಾಮನಿಗೆ, ಜಯೈಷಿಣಃ - ಜಯವನ್ನು ಇಚ್ಛಿಸುತ್ತಾರೆ, ತೇನ - ಆ ಶ್ರೀರಾಮನೊಡನೆ, ವಿರೋಧಂ - ದ್ವೇಷವನ್ನು, ಮಾಗಮಃ - ಹೊಂದಬೇಡ, ತೇನ - ಆ ದೈವಬಲವುಳ್ಳ ರಾಮಚಂದ್ರನೊಡನೆ, ತೇ - ದೈವಬಲವಿಲ್ಲದ ನಿನಗೆ, ಸಂಧಿಃ - ಸಂಧಿಯು, ರೋಚತಾಂ - ರುಚಿಸಲಿ. ॥ ೧೧ ॥ ಭಗವಾ - ಪೂಜ್ಯನಾದ, ಪಿತಾಮಹಃ - ಬ್ರಹ್ಮನು, ಧರ್ಮಾಧರ್ಮೌ - ಧರ್ಮಾಧರ್ಮಗಳೆಂಬ, ದ್ವೌಪಕ್ಷೌ - ಎರಡು ಪಕ್ಷಗಳನ್ನು, ಸುರಾಣಾಂಅಸುರಾಣಾಂಚ - ದೇವತೆಗಳಿಗೂ, ರಾಕ್ಷಸರಿಗೂ, ಅಸೃಜತ್ - ಸೃಷ್ಟಿಮಾಡಿದನು, ಧರ್ಮಾಧರ್ಮೌ - ಧರ್ಮಾಧರ್ಮಗಳೆರಡೂ, ತದಾಶ್ರಯೌಹಿ - ಆ ದೇವರಾಕ್ಷಸರಿಗೆ ಆಶ್ರಯವಷ್ಟೆ. ॥ ೧೨ ॥ ಹೇ ರಾವಣ - ಎಲೈ ರಾವಣನೇ, ಧರ್ಮಃ - ಧರ್ಮವು, ಮಹಾತ್ಮನಾಂ - ಮಹಾ ಮಹಾತ್ಮ್ಯವಂತರಾದ, ಅಮರಾಣಾಂ - ದೇವತೆಗಳಿಗೆ, ಪಕ್ಷಃ - ಸಹಾಯವೆಂದು, ಶ್ರೂಯತೇಹಿ - ಕೇಳಲ್ಪಡುತ್ತದಷ್ಟೆ, ಅಧರ್ಮಃ - ಅಧರ್ಮವು, ಅಸುರಾಣಾಂ - ಅಸರರಿಗೂ, ರಕ್ಷಸಾಂಚ - ರಕ್ಕಸರಿಗೂ ಸಹಾ, ಪಕ್ಷಃ - ಆಶ್ರಯವೆಂದು, ಶ್ರೂಯತೇಹಿ - ಕೇಳಲ್ಪಡುತ್ತದೆಯಷ್ಟೆ. ॥ ೧೩ ॥ ಯದಾ - ಯಾವಾಗ, ಧರ್ಮಃವೈ - ಧರ್ಮವಾದರೆ, ಅಧರ್ಮಂ - ಪಾಪವನ್ನು, ಗ್ರಸತೇ - ನುಂಗುತ್ತದೋ, ತತಃ - ಆ ಕಾಲದಲ್ಲಿ, ಕೃತಂಯುಗಂ - ಕೃತಯುಗವು, ಅಭೂತ್ - ಆಯಿತು, ಯದಾ - ಯಾವಾಗ, ಅಧರ್ಮಃ - ಪಾಪವು, ಧರ್ಮಂ - ಪುಣ್ಯವನ್ನು, ಗ್ರಸತೇ - ನಾಶಗೊಳಿಸುತ್ತದೋ, ತತಃ - ಆಗ, ತಿಷ್ಯಃ - ಕಲಿಯುಗವು, ಪ್ರವರ್ತತೇ - ಪ್ರವರ್ತಿಸುತ್ತದೆ. ॥ ೧೪ ॥ ತತ್ - ಆ ಕಾರಣದಿಂದ, ಲೋಕಾ - ಲೋಕಗಳಲ್ಲಿ, ಚರತಾ - ಸಂಚರಿಸುತ್ತಲಿರುವ, ತ್ವಯಾ - ನಿನ್ನಿಂದ, ಮಹಾ - ಮಹತ್ತರವಾದ, ಧರ್ಮಃ - ಧರ್ಮವು, ವಿನಿಹತಃ - ನಾಶಗೊಳಿಸಲ್ಪಟ್ಟಿತು, ಅಧರ್ಮಃ -

---

ಗಳೂ, ಗಂಧರ್ವರೂ ಬಯಸುತ್ತಿರುವರು. ಆದುದರಿಂದ ನೀನೀಗ ಆತನೊಡನೆ ವಿರೋಧವನ್ನು ಕಟ್ಟಿಕೊಳ್ಳಬೇಡ ; ಸಂಧಿಮಾಡಿಕೊ ; ಅದಕ್ಕಾಗಿ ಪ್ರಯತ್ನಿಸು. ಹಿಂದೆ ಷಡ್ಗುಣೈಶ್ವರ್ಯಸಂಪನ್ನನಾದ ಬ್ರಹ್ಮದೇವನು ದೇವತೆಗಳಿಗೂ ರಾಕ್ಷಸರಿಗೂ ಧರ್ಮಾಧರ್ಮಗಳೆಂಬ ಎರಡು ರೆಕ್ಕೆಗಳನ್ನುಂಟುಮಾಡಿದನು. ಮಹಾನುಭಾವರಾದ ದೇವತೆಗಳು ಧರ್ಮಪಕ್ಷವನ್ನು ಸ್ಥಿರವಾಗಿ ಆಶ್ರಯಿಸಿದರು. ಹಾಗೆ ಮಾಡಬೇಕೆಂದೇ ಬ್ರಹ್ಮನು ವಿಧಿಸಿದನು. ಆ ಬ್ರಹ್ಮನಿಯಾಮಕದಿಂದಲೇ ಅಸುರರಿಗೆ ಅಧರ್ಮಪಕ್ಷವು ಆಶ್ರಯವಾಯಿತು. ಈ ಅಧರ್ಮವು ಅಸುರರಿಗೆ ಸ್ಥಿರವಾಗಿ ಹೋಯಿತು. ಆದುದರಿಂದ ಎಲೈ ರಾವಣಾಸುರನೇ! ಧರ್ಮವು ಅಧರ್ಮವನ್ನು ನುಂಗುವ ಕಾಲವೇ ಕೃತಯುಗವೆನಿಸುತ್ತದೆ. ಅಧರ್ಮವೇ ಧರ್ಮವನ್ನು ನುಂಗುವಕಾಲವೇ ಕಲಿಯುಗವೆನಿಸುವುದು. ಪ್ರಕೃತ ಸಂದರ್ಭದಲ್ಲಿ ಅಧರ್ಮವೇ ಧರ್ಮವನ್ನು ನುಂಗುತ್ತಿದೆ. ಆದುದರಿಂದಲೇ ನಮ್ಮ ಶತ್ರುಗಳಾದ ರಾಮಾದಿಗಳು ನಮಗಿಂತಲೂ ಬಲಿಷ್ಠರಾಗಿದ್ದಾರೆ. ॥೧೧-೧೪॥ ಎಲೈ ರಾವಣನೇ! ನೀನು ಯಾವೊಂದು ಮುಂದಾಲೋಚ

ದ್ಬಲಿನಃ ಪರೇ ||೧೫|| ಸಪ್ರಮಾದಾದ್ವಿವೃದ್ಧಸ್ತೇ ಧರ್ಮೋಽಭಿಗ್ರಸತೇಹಿ ನಃ |
ವಿವರ್ಧಯತಿ ಪಕ್ಷಂಚ ಸುರಾಣಾಂ ಸುರಭಾವನಃ || ೧೬ || ವಿಷಯೇಷು ಪ್ರಸಕ್ತೇನ
ಯತ್ಕಿಂಚಿತ್ಕಾರಣಾತ್ತ್ವಯಾ | ಋಷೀಣಾಮಗ್ನಿಕಲ್ಪಾನಾಮುದ್ವೇಗೋ ಜನಿತೋ
ಮಹಾನ್ || ೧೭ || ತೇಷಾಂ ಪ್ರಭಾವೋ ದುರ್ಧರ್ಷಃ ಪ್ರದೀಪ್ತ ಇವ ಪಾವಕಃ ||೧೮||
ತಪಸಾ ಭಾವಿತಾತ್ಮಾನೋ ಧರ್ಮಸ್ಯಾಽನುಗ್ರಹೇ ರತಾಃ | ಮುಖ್ಯೈರ್ಯಜ್ಞೈರ್ಯಜಂ
ತ್ಯೇವ ನಿತ್ಯಂ ತೈಸ್ತೈ ದ್ವಿಜಾತಯಃ ||೧೯|| ಜುಹ್ವತ್ಯಗ್ನೀಂಶ್ಚ ವಿಧಿವದ್ವೇದಾಂಶ್ಚೋಚ್ಚೈ

---

ಅಧರ್ಮವು, ಪ್ರಗೃಹೀತಶ್ಚ - ಪರಿಗ್ರಹಿಸಲ್ಪಟ್ಟಿತು, ತೇನ - ಆದರಿಂದ, ಪರೇ - ಶತ್ರುಗಳು, ಅಸ್ಮತ್-ನಮಗಿಂತಲೂ, ಬಲಿನಃ - ಧರ್ಮಬಲವುಳ್ಳವರು. ||೧೫|| ತೇ - ನಿನ್ನ, ಪ್ರಮಾದಾತ್ - ಮೈಮರೆಯುವಿಕೆಯಿಂದ, ವಿವೃದ್ಧಃ - ವೃದ್ಧಿಹೊಂದಿದ, ಸಃಅಧರ್ಮಃ - ಆ ಅಧರ್ಮವು, ಅಸ್ಮಾನ್ - ನಮ್ಮನ್ನು, ಗ್ರಸತೇ - ನುಂಗುತ್ತಲಿದೆ, ಸುರಭಾವನಃ - ದೇವತೆಗಳಿಗೆ ಅನುಕೂಲವಾದದ್ದಾಗಿ, ಸುರಾಣಾಂ-ದೇವತೆಗಳ, ಪಕ್ಷಂ - ಬಲವನ್ನು, ವಿವರ್ಧಯತಿ - ವೃದ್ಧಿಗೊಳಿಸುತ್ತದೆ. || ೧೬ || ವಿಷಯೇಷು-ಸ್ರಕ್ಚಂದನಾದಿ ವಿಷಯಗಳಲ್ಲಿ, ಪ್ರಸಕ್ತೇನ - ಉದ್ಯುಕ್ತನಾದ, ತ್ವಯಾ - ನಿನ್ನಿಂದ, ಯತ್ಕಿಂಚಿತ್ಕಾರಣಾತ್-ಯಾವದೋ ಒಂದು ಕಾರಣದಿಂದ, ಅಗ್ನಿಕಲ್ಪಾನಾಂ-ಅಗ್ನಿಸದೃಶರಾದ, ಋಷೀಣಾಂ-ಮುನಿಗಳಿಗೆ, ಮಹಾನ್ - ಮಹತ್ತರವಾದ, ಉದ್ವೇಗಃ - ಕಂಪನವು, ಜನಿತಃ - ಹುಟ್ಟಿಸಲ್ಪಟ್ಟಿತು. || ೧೭ || ತೇಷಾಂ - ಆ ಮುನಿಗಳ, ಪ್ರಭಾವಃ - ಮಾಹಾತ್ಮ್ಯವು, ಪ್ರದೀಪ್ತಃ - ಪ್ರಜ್ವಲಿಸುವ, ಪಾವಕಇವ - ಅಗ್ನಿಯಂತೆ, ದುರ್ಧರ್ಷಃ - ತಿರಸ್ಕರಿಸಲಸಾಧ್ಯವು. || ೧೮ || ತಪಸಾ - ತಪದಿಂದ, ಭಾವಿತಾತ್ಮನಃ - ಪರಿಶುದ್ಧವಾದ ಮನವುಳ್ಳವರಾಗಿ, ಧರ್ಮಸ್ಯ - ಧರ್ಮದ, ಅನುಗ್ರಹೇ - ಸಂಗ್ರಹದಲ್ಲಿ, ರತಾಃ - ಆಸಕ್ತರಾದ, ಏತೇದ್ವಿಜಾತಯಃ - ಈ ಬ್ರಾಹ್ಮಣರು, ನಿತ್ಯಂ - ಯಾವಾಗಲೂ, ಮುಖ್ಯೈಃ - ಶ್ರೇಷ್ಠವಾದ, ತೈಸ್ತೈರ್ಯಜ್ಞೈಃ - ಆಯಾ ಯಜ್ಞಗಳಿಂದ, ಯಜಂತಿ - ಯಾಗ ಮಾಡುತ್ತಾರೆ. || ೧೯ || ಅಗ್ನೀನ್ - ತ್ರೇತಾಗ್ನಿಗಳನ್ನು, ವಿಧಿವತ್ - ಯಥಾಶಾಸ್ತ್ರವಾಗಿ, ಜಿಹ್ವತಿ -

---

ನೆಯೂ ಇಲ್ಲದೆ ಪ್ರವರ್ತಿಸುತ್ತಿರುವುದರಿಂದ ಅಧರ್ಮವು ಅಭಿವೃದ್ಧಿಯಾಗಿ ನಮ್ಮೆಲ್ಲರನ್ನೂ ನಾಶಗೊಳಿಸುತ್ತಿರುವುದು. ದೇವತೆಗಳಿಗೆ ಅನುಕೂಲವಾದ ಧರ್ಮವು ಈಗ ಬಹು ಮನೋಹರವಾಗಿ ಬೆಳೆಯುತ್ತಿದೆ. ಆದುದರಿಂದಲೈ ಪ್ರಭುವೇ! ನೀನು ವಿಷಯಸುಖಗಳಲ್ಲಿ ಕೇವಲ ಬಯಕೆಯುಳ್ಳವನಾಗಿ ಕೆಲವು ಕಾರಣಗಳಿಂದ ಅಗ್ನಿಸಮಾನರಾದ ಮುನಿವರರಿಗೂ ಮಹತ್ತರವಾದ ಉದ್ವೇಗವನ್ನುಂಟುಮಾಡಿರುವೆ. ಮಹಾನುಭಾವರಾದ ಆ ಋಷಿಗಳ ಪ್ರಬಲ ಕೋಪವೂ ಪ್ರಜ್ವಲಿಸುತ್ತಿರುವ ಅಗ್ನಿಜ್ವಾಲೆಗಳಿಗೆ ಸಮಾನವಾಗಿರುವುದು. ರಾವಣಾ! ತಪಸ್ಸಿನಿಂದ ಪ್ರಕಾಶಿಸುತ್ತಿರುವ ಆತ್ಮತತ್ವವುಳ್ಳವರೂ, ಧರ್ಮಸಂಗ್ರಹಾನುಗ್ರಹಗಳಲ್ಲಿ ಆಸಕ್ತಿಯುಳ್ಳವರೂ ಆದ ಬ್ರಾಹ್ಮಣಶ್ರೇಷ್ಠರು ಉತ್ತಮೋತ್ತಮವಾದ ಯಜ್ಞಗಳನ್ನು ಮಾಡುತ್ತಿರುವರು; ಶಾಸ್ತ್ರೋಕ್ತವಾಗಿ ಅಗ್ನಿಹೋತ್ರಗಳಲ್ಲಿ ಹೋಮಗಳನ್ನು ಮಾಡುತ್ತಿರುವರು; ಅವರು ರಾಕ್ಷಸರನ್ನು ಲಕ್ಷ್ಯಮಾಡದೆ ಬ್ರಹ್ಮಘೋಷಗಳನ್ನು ಮಾಡುತ್ತ, ಅವಿಚ್ಛಿತವಾಗಿ ನಿಷ್ಠೆಯಿಂದ ವೇದಾಧ್ಯಯನವನ್ನು ಮಾಡುತ್ತಿರುವರು; ಆ ಪರಮರ್ಷಿಗಳ ಹೋಮಧೂಮವೂ, ಬ್ರಾಹ್ಮಣಶ್ರೇಷ್ಠರ ವೇದಘೋಷವೂ, ರಾಕ್ಷಸರ ಬಲತೇಜಸ್ಸುಗಳನ್ನೂ ಸೆಳೆದು

ರಧೀಯತೇ । ಅಭಿಭೂಯ ಚ ರಕ್ಷಾಂಸಿ ಬ್ರಹ್ಮಘೋಷಾನುದೈರಯನ್ ॥ ೨೦ ॥
ದಿಶೋ ವಿಪ್ರದ್ರುತಾಸ್ಸರ್ವೇ ಸ್ತನಯಿತ್ನುರಿವೋಷ್ಣಗೇ । ಋಷೀಣಾಮಗ್ನಿಕಲ್ಪಾನಾ
ಮಗ್ನಿಹೋತ್ರಸಮುತ್ಥಿತಃ ॥ ೨೧ ॥ ಆದತ್ತೇ ರಕ್ಷಸಾಂ ತೇಜೋ ಧೂಮೋ ವ್ಯಾಪ್ಯ
ದಿಶೋದಶ । ತೇಷು ತೇಷು ಚ ದೇಶೇಷು ಪುಣ್ಯೇಷ್ವೇಷು ದೃಢವ್ರತೈಃ ॥೨೨॥ ಚರ್ಯ
ಮಾಣಂ ತಪಸ್ತೀವ್ರಂ ಸಂತಾಪಯತಿ ರಾಕ್ಷಸಾನ್ । ದೇವದಾನವ ಯಕ್ಷೇಭ್ಯೋ ಗೃಹೀ
ತಶ್ಚ ವರಸ್ತ್ವಯಾ ॥ ೨೩ ॥ ಮಾನುಷಾ ವಾನರಾ ಋಕ್ಷಾ ಗೋಲಾಂಗೂಲಾ ಮಹಾ

ಹೋಮಮಾಡುತ್ತಾರೆ, ವೇದಾಂಶ್ಚ - ವೇದಗಳನ್ನೂ, ಉಚ್ಚೈಃ - ಘಟ್ಟಿಯಾಗಿ, ಅಧೀಯತೇ - ಅಧ್ಯಯನ ಮಾಡುತ್ತಾರೆ, ರಕ್ಷಾಂಸಿ - ರಾಕ್ಷಸರನ್ನು, ಅಭಿಭೂಯ - ತಿರಸ್ಕರಿಸಿ, ಬ್ರಹ್ಮಘೋಷಾನ್ - ವೇದಘೋಷಗಳನ್ನೂ, ಉದೈರಯನ್ - ಹೇಳುತ್ತಾರೆ. ॥ ೨೦ ॥ ಸರ್ವೇ - ಸಮಸ್ತರಾದ ರಾಕ್ಷಸರು, ಉಷ್ಣಗೇ - ಗ್ರೀಷ್ಮಕಾಲದಲ್ಲಿ, ಸ್ತನಯಿತ್ನುರಿವ - ಮೇಘಗಳಂತೆ, ದಿಶಃ - ದಿಕ್ಕುಗಳಲ್ಲಿ, ವಿಪ್ರದ್ರುತಾಃ- ಓಡಿಹೋದರು, ಅಗ್ನಿಕಲ್ಪಾನಾಂ - ಅಗ್ನಿಸದೃಶರಾದ, ಋಷೀಣಾಂ - ಮುನಿಗಳ, ಅಗ್ನಿ.... ತಃ - ಅಗ್ನಿಹೋತ್ರದಿಂದ ಹುಟ್ಟಿದ, ಧೂಮಃ - ಹೊಗೆಯು, ದಶದಿಶಃ - ಹತ್ತುದಿಕ್ಕುಗಳಲ್ಲಿಯೂ, ವ್ಯಾಪ್ಯ - ವ್ಯಾಪಿಸಿ, ರಕ್ಷಸಾಂ - ರಾಕ್ಷಸರ, ತೇಜಃ - ತೇಜಸ್ಸನ್ನು, ಆದತ್ತೇ - ಹೀರುತ್ತಿದೆ, ದೃಢವ್ರತೈಃ - ದೃಢವಾದ ನಿಯಮವುಳ್ಳ ಮುನಿಗಳಿಂದ, ಪುಣ್ಯೇಷು - ಪುಣ್ಯಕರಗಳಾದ, ತೇಷುತೇಷುದೇಶೇಷು - ಆಯಾ ಕ್ಷೇತ್ರಗಳಲ್ಲಿ, ಚರ್ಯಮಾಣಂ - ಮಾಡಲ್ಪಡುತ್ತಲಿರುವ, ತೀವ್ರಂ - ತೀಕ್ಷ್ಣವಾದ, ತಪಃ - ತಪವು, ರಾಕ್ಷಸಾನ್ - ರಾಕ್ಷಸರನ್ನು, ಸಂತಾಪಯತಿ - ಪೀಡಿಸುತ್ತದೆ. ॥ ೨೧-೨೨ ॥ ತ್ವಯಾ - ನಿನ್ನಿಂದ, ದೇವ.... ಭ್ಯಃ - ದೇವತೆಗಳಿಂದಲೂ, ದಾನವರಿಂದಲೂ, ಯಕ್ಷರಿಂದಲೂ, ವರಃ - ಅವಧ್ಯತ್ವ ವರವು, ಗೃಹೀತಶ್ಚ - ಗ್ರಹಿಸಲ್ಪಟ್ಟಿತಷ್ಟೆ, ಮಾನುಷಾಃ - ಮನುಷ್ಯರೂ, ವಾನರಾಃ - ಕಪಿಗಳೂ, ಋಕ್ಷಾಃ - ಕರಡಿಗಳೂ, ಮಹಾಬಲಾಃ - ಬಹು ಬಲವಂತರಾದ, ಗೋಲಾಂಗೂಲಾಃ - ಶಿಮಂಗಿಗಳೂ, ಬಲವಂತಃ - ಬಲಿಷ್ಠರಾಗಿ, ದೃಢವಿಕ್ರಮಾಃ - ದೃಢವಾದ ಪರಾಕ್ರಮವುಳ್ಳವರಾಗಿ, ಇಹ - ಇಲ್ಲಿ,

ಹಾಕುತ್ತಿರುವುದು. ಇದರಿಂದ ರಾಕ್ಷಸರ ಬಲತೇಜಸ್ಸುಗಳೆಲ್ಲವೂ ಕುಗ್ಗಿಹೋಗುತ್ತಿರುವುವು. ಆದುದರಿಂದಲೇ ನಮ್ಮ ರಾಕ್ಷಸರೆಲ್ಲರೂ, ಭಯಗ್ರಸ್ತರಾಗಿ, "ಬೇಸಗೆಯಲ್ಲಿ ಗುಡುಗುವ ಮೇಘಗಳಂತೆ" ದಶದಿಶೆಗಳಿಗೂ ಪಲಾಯನವಾಗುತ್ತಿರುವರು. ॥೧೬–೨೦॥ ಎಲೈ ಮಹಾರಾಜನೇ! ಆ ಆ ದೇಶಗಳಲ್ಲಿರುವ ಸದ್ಬ್ರಾಹ್ಮಣರೆಲ್ಲರೂ ನಿಯಮನಿಷ್ಠೆಗಳಿಂದ ಪುಣ್ಯಕರ್ಮಗಳನ್ನು ಮಾಡುತ್ತಿರುವರು. ಆ ಬ್ರಾಹ್ಮಣೋತ್ತಮರು ಆಚರಿಸುತ್ತಿರುವ ತಪಸ್ಸೇ ಮೊದಲಾದ ಸತ್ಕರ್ಮಗಳೂ ನಮ್ಮ ರಾಕ್ಷಸರನ್ನು ಬಹು ತೀವ್ರವಾಗಿ ತಪಿಸುತ್ತಲಿರುವುದು. ಇದೆಲ್ಲವೂ ಹಾಗಿರಲಿ; ರಾವಣಭೂಪಾಲ! ನೀನು ಪೂರ್ವದಲ್ಲಿ ಅತ್ಯುಗ್ರ ತಪಸ್ಸನ್ನು ಮಾಡಿ ದೇವದಾನವ ಯಕ್ಷರಿಂದ ಮರಣವುಂಟಾಗದಂತೆ ವರವನ್ನು ಪಡೆದಿರುವೆ; ಆದರೆ ತದಿತರರಿಂದ ಮರಣವುಂಟಾಗದಂತೆ ವರವನ್ನು ಬೇಡಲಿಲ್ಲವು. ಈ ಕಾರಣದಿಂದ ದೃಢವಾದ ವಿಕ್ರಮವುಳ್ಳವರೂ, ಅಧಿಕ ಬಲಸಂಪನ್ನರಾದವರೂ ಆದ ಮಾನವರೂ, ವಾನರರೂ, ಋಕ್ಷಭಲ್ಲೂಕಗಳೂ ನಮ್ಮ ಲಂಕಾನಗರಕ್ಕೈತಂದು ಬಹು ಭಯಂಕರವಾಗಿ ಗರ್ಜಿಸುತ್ತಿರುವರು. ಎಲೈ ಪ್ರಭುವೆ! ಈಗ ಭಯಂಕರಗಳಾದ ಅನೇಕ ಅಪಶಕುನಗಳು ತಲೆದೋರಿರುವುವು.

ಬಲಾಃ । ಬಲವಂತ ಇಹಾಗಮ್ಯ ಗರ್ಜಂತಿ ದೃಢವಿಕ್ರಮಾಃ ॥ ೨೪ ॥ ಉತ್ಪಾತಾನ್ವಿವಿಧಾರ್ನ್ ದೃಷ್ಟ್ವಾ ಘೋರಾನ್ಬಹುವಿಧಾಂಸ್ತಥಾ। ವಿನಾಶಮನುಪಶ್ಯಾಮಿ ಸರ್ವೇಷಾಂ ರಕ್ಷಸಾಮಹಂ ॥ ೨೫ ॥ ಖರಾಭಿಸ್ತನಿತಾ ಘೋರಾ ಮೇಘಾಃ ಪ್ರತಿಭಯಂಕರಾಃ । ಶೋಣಿತೇನಾಭಿವರ್ಷಂತಿ ಲಂಕಾಮುಷ್ಣೇನ ಸರ್ವತಃ ॥ ೨೬ ॥ ರುದತಾಂ ವಾಹನಾನಾಂಚ ಪ್ರಪತಂತ್ಯಸ್ರಬಿಂದವಃ । ಧ್ವಜಾ ಧ್ವಸ್ತಾ ವಿವರ್ಣಾಶ್ಚ ನಪ್ರಭಾಂತಿ ಯಥಾಪುರಾ ॥ ೨೭ ॥ ವ್ಯಾಳಾ ಗೋಮಾಯವೋ ಗೃಧ್ರಾ ವಾಶ್ಯಂತಿ ಚ ಸುಭೈರವಂ । ಪ್ರವಿಶ್ಯ ಲಂಕಾಮನಿಶಂ ಸಮವಾಯಾಂಶ್ಚ ಕುರ್ವತೇ ॥೨೮॥ ಕಾಳಿಕಾಃ ಪಾಂಡುರೈರ್ದಂತೈಃ ಪ್ರಹಸಂತ್ಯಗ್ರತಃಸ್ಥಿತಾಃ । ಸ್ತ್ರಿಯಸ್ಸ್ವಪ್ನೇಷು ಮುಷ್ಣಂತ್ಯೋ

---

ಆಗಮ್ಯ - ಬಂದು, ಗರ್ಜಂತಿ - ಗರ್ಜಿಸುತ್ತಾರೆ. ॥೨೩-೨೪॥ ತಥಾ-ಹಾಗೆಯೇ, ಬಹುವಿಧಾರ್ನ್-ಅನೇಕ ವಿಧವಾದ, ಘೋರಾರ್ನ್ - ಭಯಂಕರವಾದ, ವಿವಿಧಾರ್ನ್ - ನಾನಾಬಗೆಗಳಾದ, ಉತ್ಪಾತಾರ್ನ್ - ಅಶುಭ ಸೂಚನೆಗಳನ್ನು, ದೃಷ್ಟ್ವಾ - ಕಂಡು, ಅಹಂ - ನಾನು, ಸರ್ವೇಷಾಂ - ಸಮಸ್ತರಾದ, ರಕ್ಷಸಾಂ - ರಕ್ಕಸರ, ವಿನಾಶಂ - ನಾಶವನ್ನು, ಅನುಪಶ್ಯಾಮಿ - ಊಹಿಸುತ್ತೇನೆ. ॥ ೨೫ ॥ ಖರಾಭಿಸ್ತನಿತಾಃ - ಭಯಂಕರವಾದ ಧ್ವನಿಗಳುಳ್ಳ, ಘೋರಾಃ - ಕ್ರೂರವಾದ, ಪ್ರತಿಭಯಂಕರಾಃ - ದಾರುಣವಾದ, ಮೇಘಾಃ - ಮೇಘಗಳು, ಲಂಕಾಂ - ಲಂಕಾಪಟ್ಟಣದ, ಸರ್ವತಃ - ಸಮಸ್ತ ಪ್ರದೇಶಗಳಲ್ಲಿಯೂ, ಉಷ್ಣೇನ - ಬಿಸಿಯಾದ, ಶೋಣಿತೇನ - ರಕ್ತದಿಂದ, ಅಭಿವರ್ಷಂತಿ - ವರ್ಷಿಸುತ್ತವೆ. ॥ ೨೬ ॥ ರುದತಾಂ - ಅಳುತ್ತಿರುವ, ವಾಹನಾನಾಂಚ - ಆನೆ, ಕುದುರೆ ಮೊದಲಾದ ವಾಹನಗಳ, ಅಸ್ರಬಿಂದವಃ- ಕಣ್ಣೀರ ತೊಟ್ಟುಗಳು, ಪ್ರಪತಂತಿ - ಬೀಳುತ್ತವೆ, ಧ್ವಜಾಃ - ನಿಶಾನಿಗಳು, ಧ್ವಸ್ತಾಃ - ಧ್ವಂಸಿಸಲ್ಪಟ್ಟವುಗಳಾಗಿ, ವಿವರ್ಣಾಶ್ಚ - ವರ್ಣಹೀನವಾಗಿ, ಯಥಾಪುರಾ - ಪೂರ್ವದಂತೆ, ನಪ್ರಭಾಂತಿ-ಹೊಳೆಯುವುದಿಲ್ಲವು. ॥ ೨೭ ॥ ವ್ಯಾಳಾಃ-ಮಾಂಸಭಕ್ಷಗಳಾದ, ಗೋಮಾಯವಃ - ನರಿಗಳೂ, ಗೃಧ್ರಾಃ - ಹದ್ದುಗಳೂ, ಲಂಕಾಂ - ಲಂಕಾಪಟ್ಟಣವನ್ನು, ಪ್ರವಿಶ್ಯ - ಹೊಕ್ಕು, ಸುಭೈರವಂ - ಭಯಂಕರವಾಗಿ, ವಾಶ್ಯಂತಿ - ಕೂಗುತ್ತವೆ, ಅನಿಶಂ - ನಿರಂತರವೂ, ಸಮವಾಯಾಂಶ್ಚ - ಗುಂಪುಗಳನ್ನು, ಕುರ್ವತೇ - ಮಾಡುತ್ತವೆ. ॥ ೨೮ ॥ ಕಾಳಿಕಾಃ - ಕಪ್ಪಾಗಿರುವ, ಸ್ತ್ರಿಯಃ - ಸ್ತ್ರೀಯರು, (ಅಂದರೆ - ಶಕ್ತಿಗಳು), ಸ್ವಪ್ನೇಷು-ಕನಸುಗಳಲ್ಲಿ, ಅಗ್ರತಃ-ಮುಂದುಗಡೆಯಲ್ಲಿ, ಸ್ಥಿತಾಃ-ನಿಂತು, ಪ್ರತಿಭಾಷ್ಯ-ಮಾತನಾಡುತ್ತಾ, ಗೃಹಾಣಿ - ಮನೆಗಳಲ್ಲಿರುವ ವಸ್ತುಗಳನ್ನು, ಮುಷ್ಣಂತ್ಯಃ - ಅಪಹರಿಸುತ್ತ, ಪಾಂಡುರೈಃ - ಬೆಳ್ಳಗಿರುವ, ದಂತೈಃ - ಹಲ್ಲುಗಳಿಂದ, ಪ್ರಹಸಂತಿ - ನಗುತ್ತಾರೆ. ॥ ೨೯ ॥ ಶ್ವಾನಃ -

---

ಇವೆಲ್ಲವನ್ನೂ ನೋಡಿದರೆ ನಮ್ಮ ರಾಕ್ಷಸಕುಲವೆಲ್ಲವೂ ನಾಶವಾಗಿ ಹೋಗುವಂತೆ ತೋರುತ್ತಿದೆ. ॥೨೧–೨೪॥ ಮೇಘಗಳು ಬಹು ಭಯಂಕರವಾದ ಆಕಾರಗಳುಳ್ಳವಾಗಿ ಬಹು ಕಠಿನವಾಗಿ ಗರ್ಜಿಸುತ್ತ ಬಿಸಿ ರಕ್ತವನ್ನು ಮಳೆಗರೆಯುತ್ತಿರುವುವು. ಕುದುರೆಗಳು ಬಹಳವಾಗಿ ರೋದಿಸುತ್ತ ಕಣ್ಣೀರು ಸುರಿಸುತ್ತಿರುವುವು. ನಿಶಾನಿಗಳೆಲ್ಲವೂ ಮುರಿದು ಬೀಳುತ್ತಿರುವುವು. ಲಂಕಾನಗರವೆಲ್ಲವೂ ನಿಸ್ತೇಜವಾಗಿರುವುದು. ಸರ್ಪಗಳೂ, ನರಿಗಳೂ, ಹದ್ದುಗಳೂ ಭಯಂಕರವಾಗಿ ಧ್ವನಿಮಾಡುತ್ತಿರುವುವು. ಮಾಂಸಾಶನಗಳಾದ ನರಿಗಳು ಗುಂಪುಗೂಡಿ ಪಟ್ಟಣದೊಳಕ್ಕೆ ನುಗ್ಗಿ ವಕ್ರವಕ್ರವಾಗಿ ಅರಚುತ್ತಿರುವುವು. ಕರಾಳ ಸ್ತ್ರೀರೂಪಗಳುಳ್ಳ ಕಾಳಿಕಾದಿ ಶಕ್ತಿಗಳು ನಮ್ಮ ರಾಕ್ಷಸರ ಸ್ವಪ್ನದಲ್ಲಿ ಕಾಣಿಸಿಕೊಂಡು ಪಕಪಕನೆ ನಗುತ್ತ ಮನೆಗಳಲ್ಲಿರುವ

ಗೃಹಾಣಿ ಪ್ರತಿಭಾಷ್ಯಚ || ೨೯ || ಗೃಹಾಣಾಂ ಬಲಿಕರ್ಮಾಣಿ ಶ್ವಾನಃ ಪರ್ಯುಪ
ಭುಂಜತೇ | ಖರಾ ಗೋಷು ಪ್ರಜಾಯಂತೇ ಮೂಷಕಾ ನಕುಲೈಸ್ಸಹ || ೩೦ ||
ಮಾರ್ಜಾರಾ ದ್ವೀಪಿಭಿಸ್ಸಾರ್ಧಂ ಸೂಕರಾಃ ಶುನಕೈಸ್ಸಹ | ಕಿನ್ನರಾ ರಾಕ್ಷಸೈಶ್ಚಾಪಿ
ಸಮಿಯುರ್ಮಾನುಷೈಸ್ಸಹ || ೩೧ || ಪಾಂಡುರಾ ರಕ್ತಪಾದಾಶ್ಚ ವಿಹಂಗಾಃ ಕಾಲ
ಚೋದಿತಾಃ | ರಾಕ್ಷಸಾನಾಂ ವಿನಾಶಾಯ ಕಪೋತಾ ವಿಚರಂತಿಚ | ವೀಚೀ
ಕೂಚೀತಿ ವಾಶ್ಯಂತ್ಯಃ ಶಾರಿಕಾ ವೇಶ್ಮಸು ಸ್ಥಿತಾಃ || ೩೨ || ಪತಂತಿ ಗ್ರಥಿತಾಶ್ಚಾಪಿ
ನಿರ್ಜಿತಾಃ ಕಲಹೈಷಿಣಃ | ಪಕ್ಷಿಣಶ್ಚ ಮೃಗಾಸ್ಸರ್ವೇ ಪ್ರತ್ಯಾದಿತ್ಯಂ ರುದಂತಿಚ ||೩೩||

---

ನಾಯಿಗಳು, ಗೃಹಾಣಾಂ - ಗೃಹಾಭಿಮಾನಿದೇವತೆಗಳ, ಬಲಿಕರ್ಮಾಣಿ - ಬಲ್ಯರ್ಥವಾಗಿ ಕೊಡಲ್ಪಟ್ಟ ಹವಿರ್ಭಾಗಗಳನ್ನು, ಪರ್ಯುಪಭುಂಜತೇ - ತಿನ್ನುತ್ತವೆ, ಖರಾಃ - ಕತ್ತೆಗಳು, ಗೋಷು - ಗೋವುಗಳಲ್ಲಿ, ಪ್ರಜಾಯಂತೇ - ಹುಟ್ಟುತ್ತವೆ, ಮೂಷಕಾಃ - ಸುಂಡಿಲಿಗಳು, ನಕುಲೈಸ್ಸಹ - ಮುಂಗಸಿಗಳೊಡನೆ, ಮಾರ್ಜಾಲಾಃ - ಬೆಕ್ಕುಗಳು, ದ್ವೀಪಿಭಿಸ್ಸಾರ್ಧಂ - ವ್ಯಾಘ್ರಗಳೊಡನೆಯೂ, ಸೂಕರಾಃ-ಹಂದಿಗಳು, ಶುನಕೈಸ್ಸಹ-ನಾಯಿಗಳೊಡನೆಯೂ, ಕಿನ್ನರಾಃ-ಕಿನ್ನರರು, ರಾಕ್ಷಸೈಶ್ಚಾಪಿ - ರಾಕ್ಷಸರೊಡನೆಯೂ, (ರಾಕ್ಷಸಾಃ-ರಾಕ್ಷಸರು), ಮಾನುಷೈಶ್ಚಾಪಿ- ಈ ಉತ್ಪಾತದಿಂದ ಹುಟ್ಟಿದ ಮನುಷ್ಯರೊಡನೆಯೂ, ಸಮಿಯುಃ - ಕೂಡಿದಂತೆ ತೋರುತ್ತದೆ. || ೩೦-೩೧ || ಪಾಂಡುರಾಃ - ಬೆಳ್ಳಗಿರುವ, ರಕ್ತಪಾದಾಶ್ಚ - ಕೆಂಪಾದ ಕಾಲುಗಳುಳ್ಳ, ವಿಹಂಗಾಃ - ಪಕ್ಷಿಗಳು, ಕಾಲಚೋದಿತಾಃ - ಕಾಲಪ್ರೇರಿತಗಳಾಗಿ, ಕಪೋತಾಃ - ಕಪೋತಪಕ್ಷಿಗಳು, ರಾಕ್ಷಸಾನಾಂ - ಅಸುರರ, ವಿನಾಶಾಯ - ನಾಶಕ್ಕಾಗಿ, ವಿಚರಂತಿ - ಸಂಚರಿಸುತ್ತವೆ || ೩೨ || ವೇಶ್ಮಸು - ಮನೆಗಳಲ್ಲಿ, ಸ್ಥಿತಾಃ - ಇರುವ, ಶಾರಿಕಾಃ - ಹೆಣ್ಣುಗಿಳಿಗಳು, ವೀಚೀಕೂಚೀತಿ - ವೀಚೀಕೂಚೀ ಎಂದು, ವಾಶ್ಯಂತ್ಯಃ - ಕೂಗುವುವು, ಕಲಹೈಷಿಣಃ - ಕಲಹವನ್ನು ಇಚ್ಛಿಸುವ, ಪಕ್ಷಿಣಶ್ಚ - ಹಕ್ಕಿಗಳೂ, ನಿರ್ಜಿತಾಃ - ಜಯಿಸಲ್ಪಟ್ಟವುಗಳಾಗಿ, ಗ್ರಥಿತಾಶ್ಚ - ಗುಂಪುಸೇರಿ, ಪತಂತಿ - ಬೀಳುತ್ತವೆ, ಸರ್ವೇ - ಸಮಸ್ತವಾದ, ಮೃಗಾಃ - ಮೃಗಗಳು, ಆದಿತ್ಯಂಪ್ರತಿ - ಸೂರ್ಯಾಭಿಮುಖವಾಗಿ, ರುದಂತಿಚ - ಅಳುತ್ತಲೂ ಇವೆ. || ೩೩ || ಕರಾಳಃ -

---

ಪದಾರ್ಥಗಳೆಲ್ಲವನ್ನೂ ಕದಿಯುತ್ತಿರುವುವು. ಮನೆಗಳ ಮುಂದಿರುವ ಬಲಿಗಳೆಲ್ಲವನ್ನೂ ನಾಯಿಗಳುತಿನ್ನುತ್ತಿವೆ. ಮಹಾರಾಜಾ! ಹಸುಗಳಲ್ಲಿ ಕತ್ತೆಗಳು ಹುಟ್ಟುತ್ತಿವೆ! ಇಲಿಗಳು ಮುಂಗಸಿಗಳೊಡನೆಯೂ, ಬೆಕ್ಕುಗಳು ಹುಲಿಗಳೊಡನೆಯೂ, ಹಂದಿಗಳು ನಾಯಿಗಳೊಡನೆಯೂ ಕೂಡುತ್ತಿರುವುವು. ಕಿನ್ನರರು ರಾಕ್ಷಸರೊಡನೆಯೂ, ರಾಕ್ಷಸರು ಮಾನವರೊಡನೆಯೂ ಕೂಡುತ್ತಿರುವರು. || ೨೯-೩೧ || ಪ್ರಭುವೇ! ಬಿಳುಪಾದ ದೇಹಛಾಯೆಯೂ, ಕೆಂಪಾದ ಪಾದಛಾಯೆಯೂ ಉಳ್ಳ ಕಪೋತಗಳು ಕಾಲಚೋದಿತಗಳಾಗಿ ರಾಕ್ಷಸರ [illegible]ಕ್ಕಾಗಿಯೇ ಲಂಕಾನಗರದಮೇಲೆ ಸಂಚರಿಸುತ್ತಿರುವುವು. ಮನೆಗಳಲ್ಲಿ ಸಾಕಿಕೊಂಡಿರುವ ಗಿಳಿಗಳೆಲ್ಲವೂ ವೀಚೀಕೂಚೀ ಎಂದು ಅರಚಿಕೊಳ್ಳುತ್ತಿರುವುವು. ಪಕ್ಷಿಗಳೆಲ್ಲವೂ ಹೀಗೆ [illegible]ನಾಗಿ ಕೂಗಿಕೊಳ್ಳುವುದೂ ಅಲ್ಲದೆ ಜಗಳವಾಡಿ ಸತ್ತು ಕೆಳಕ್ಕೆ ಬೀಳುತ್ತಿರುವುವು. ಪಕ್ಷಿಗಳೂ, ಮೃಗ

ಕರಾಳೋ ವಿಕಟೋ ಮುಂಡಃ ಪುರುಷಃ ಕೃಷ್ಣಪಿಂಗಳಃ । ಕಾಲೋ ಗೃಹಾಣಿ ಸರ್ವೇಷಾಂ ಕಾಲೇ ಕಾಲೇಽನ್ವವೇಕ್ಷತೇ ॥ ೩೪ ॥ ಏತಾನ್ಯನ್ಯಾನಿ ದುಷ್ಟಾನಿ ನಿಮಿತ್ತಾನ್ಯುತ್ಪತಂತಿಚ । §(ವಿಷ್ಣುಂ ಮನ್ಯಾಮಹೇ ದೇವಂ ಮಾನುಷಂ ರೂಪಮಾಸ್ಥಿತಂ । ನಹಿ ಮಾನುಷಮಾತ್ರೋಽಸೌ ರಾಘವೋ ದೃಢವಿಕ್ರಮಃ ॥ ಯೇನ ಬದ್ಧಸ್ಸಮುದ್ರಸ್ಯ ಸಸೇತುಃ ಪರಮಾದ್ಭುತಃ । ಕುರುಷ್ವ ನರರಾಜೇನ ಸಂಧಿಂ ರಾಮೇಣ ರಾವಣ! ॥) ಜ್ಞಾತ್ವಾ ಪ್ರಧಾರ್ಯಕಾರ್ಯಾಣಿ ಕ್ರಿಯತಾ ಮಾಯತಿಕ್ಷಮಂ" ॥ ೩೫ ॥

ಇದಂವಚಸ್ತತ್ರ ನಿಗದ್ಯಮಾಲ್ಯವಾ
ನ್ಪರೀಕ್ಷ್ಯ ರಕ್ಷೋಧಿಪತೇರ್ಮನಃ ಪುನಃ ।

ಕ್ರೂರನಾದ, ವಿಕಟಃ - ವಕ್ರವಾದ ಶರೀರವುಳ್ಳ, ಮುಂಡಃ - ಬೋಳುತಲೆಯುಳ್ಳ, ಕೃಷ್ಣಪಿಂಗಳಃ - ಕಪ್ಪುಬಣ್ಣವೂ ಪಿಂಗಳವರ್ಣವೂ ಉಳ್ಳ, ಪುರುಷಃ - ಪುರುಷಾಕಾರವುಳ್ಳ, (ಗೋ + ಮ) ಪರುಷಃ - ಕ್ರೂರನಾದ, ಕಾಲಃ-ಕಾಲಪುರುಷನು, ಕಾಲೇಕಾಲೇ-ಸಾಯಂಕಾಲ ಪ್ರಾತಃಕಾಲಗಳಲ್ಲಿ, ಸರ್ವೇಷಾಂ-ಸಮಸ್ತ ರಾಕ್ಷಸರ, ಗೃಹಾಣಿ - ಮನೆಗಳನ್ನು, ಅನ್ವವೇಕ್ಷತೇ - ಹುಡುಕಿ ನೋಡುತ್ತಾನೆ. ॥ ೩೪ ॥ ಏತಾನಿ - ಇವುಗಳೂ, ಅನ್ಯಾನಿ - ಮತ್ತೂ ಕೆಲವಾದ, ದುಷ್ಟಾನಿ - ದುಷ್ಟವಾದ, ನಿಮಿತ್ತಾನಿಚ - ಶಕುನಗಳು, ಉತ್ಪತಂತಿ - ಹುಟ್ಟುತ್ತವೆ, ಏತಾನಿ - ಈ ದುರ್ನಿಮಿತ್ತಗಳನ್ನು, ಜ್ಞಾತ್ವಾ - ತಿಳಿದು, ಕಾರ್ಯಾಣಿ - ಕೆಲಸಗಳನ್ನು, ಪ್ರಧಾರ್ಯ - ನಿಶ್ಚಯಿಸಿ, ಆಯತಿಕ್ಷಮಂ - ಮುಂದೆ ಮಾಡತಕ್ಕ ಯೋಗ್ಯಕಾರ್ಯವು, ಕ್ರಿಯತಾಂ - ಮಾಡಲ್ಪಡಲಿ. ॥೩೫॥ ತತ್ರ - ಆ ಸಭೆಯಲ್ಲಿ, ಅನುತ್ತಮೇಷು - ಸರ್ವೋತ್ತಮರಾದ ಮಂತ್ರಿಶ್ರೇಷ್ಠರಲ್ಲಿ, ಉತ್ತಮಪೌರುಷಃ - ಉತ್ಕೃಷ್ಟ ಪರಾಕ್ರಮವುಳ್ಳ, ಬಲೀ - ಬಲವಂತನಾದ, ಮಾಲ್ಯವಾನ್ - ಮಾಲ್ಯವಂತನು, ಇದಂವಚಃ - ಈ ಮಾತನ್ನು, ನಿಗದ್ಯ - ಹೇಳಿ,

ಗಳೂ ಸೂರ್ಯಾಭಿಮುಖಗಳಾಗಿ ಅಳುತ್ತಿರುವುವು. ಮಹಾ ಭಯಂಕರನೂ, ವಿಕಟಾಕಾರವುಳ್ಳವನೂ ಆದ ಯಮನು ಸಾಯಂಪ್ರಾತಃಕಾಲಗಳಲ್ಲಿ ಗೃಹಗಳೆಲ್ಲವನ್ನೂ ಹುಡುಕಿಹುಡುಕಿ ನೋಡುತ್ತಿರುವನು. ಅವನು ಮುಂಡನಾಗಿ ಕೃಷ್ಣಪಿಂಗಳ ವರ್ಣಗಳುಳ್ಳವನಾಗಿರುತ್ತಾನೆ. ಈ ದುಶ್ಶಕುನಗಳೇ ಅಲ್ಲದೆ ಇನ್ನೂ ಕೆಲವು ದುಶ್ಶಕುನಗಳು ಕಂಡುಬರುತ್ತಿರುವುವು. ಆದುದರಿಂದೆಲೈ ರಾವಣಾಸುರನೇ! ಈ ವಿಷಯಗಳೆಲ್ಲವನ್ನೂ ತಿಳಿದುಕೊಂಡು ಪ್ರಕೃತದಲ್ಲಿ ಮಾಡಬೇಕಾದ ಕಾರ್ಯವನ್ನು ನಿಶ್ಚಯಿಸಬೇಕು" ಎಂದು ಹೇಳಿದನು. ಮಂತ್ರಿಶ್ರೇಷ್ಠನೂ, ಮಹಾ ಪರಾಕ್ರಮವಂತನೂ ಆದ ಆ ಮಾಲ್ಯವಂತನು ಈ ರೀತಿ ಹೇಳಿ ಮರಳಿ ತನ್ನ ಪ್ರಭು

§ ಈ ಎರಡು ಶ್ಲೋಕಗಳೂ ಪ್ರಕ್ಷಿಪ್ತಗಳು, ಕತಕರು ಇವಕ್ಕೆ ವ್ಯಾಖ್ಯಾನವನ್ನು ಬರೆದಿರುವುದಿಲ್ಲವು.

ಅನುತ್ತಮೇಷೂತ್ತಮಪೌರುಷೋ ಬಲೀ
ಬಭೂವ ತೂಷ್ಣೀಂ ಸಮವೇಕ್ಷ್ಯ ರಾವಣಂ || ೩೬ ||
ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಪಂಚತ್ರಿಂಶಸ್ಸರ್ಗಃ. ¶

---

ರಕ್ಷೋಧಿಪತೇಃ - ರಾವಣನ, ಮನಃ - ಮನವನ್ನು, ಪುನಃ - ಮತ್ತೂ, ಪರೀಕ್ಷ್ಯ - ಪರೀಕ್ಷಿಸಿ, ರಾವಣಂ - ರಾವಣನನ್ನು, ಸಮವೇಕ್ಷ್ಯ - ಕಂಡು, ತೂಷ್ಣೀಂಬಭೂವ - ಸುಮ್ಮನಾದನು. ||೩೬||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಪಂಚತ್ರಿಂಶಸ್ಸರ್ಗಃ.

---

ವಾದ ರಾವಣನ ಮನಸ್ಸನ್ನು ಪರೀಕ್ಷಿಸಿ ಆಮೇಲೆ ಯಾವ ಮಾತನ್ನೂ ಹೇಳದೆ ಸುಮ್ಮನಾಗಿ ಬಿಟ್ಟನು. || ೩೧–೩೬ ||

ಇಂತಿದು ಮಾಲ್ಯವತ್ಕೃತ ಹಿತೋಪದೇಶ ವೃತ್ತಾಂತವೆಂಬ ಮೂವತ್ತೈದನೆಯ ಸರ್ಗವು ಸಮಾಪ್ತವಾದುದು.

---

¶ ೧೪ ಶ್ಲೋಕದಲ್ಲಿ ಹೇಳಿರುವ ಧರ್ಮಾಧರ್ಮಗಳ ವಿಚಾರ.

ಪ್ರಪಂಚದಲ್ಲಿ ಸುಖಸಾಧನರೂಪವಾದ ಧರ್ಮವು ಒಂದೇ ರೂಪವುಳ್ಳುದು. ಅಧರ್ಮವು ಮಾತ್ರ, (೧) ಧರ್ಮೇತರವಾದುದು, (೨) ಅದಕ್ಕೆ ವಿರುದ್ಧವಾದುದು, (೩) ಅದೇ ಇಲ್ಲದ್ದು ಎಂಬದಾಗಿ ಮೂರು ಬಗೆ. ಮೊದಲನೆಯದು ಶಾಕ್ತಾದಿಮತಗಳಲ್ಲಿ ಕಾಣುವ ಧರ್ಮಾಭಾಸವು, ಎರಡನೆಯದು ಹತ್ಯಾದಿಲಕ್ಷಣಗಳುಳ್ಳುದು ; ಮೂರನೆಯದು ವಿಧಾಯಕವಾದ ನಿತ್ಯಧರ್ಮಲೋಪವುಳ್ಳುದು. ಕೃತಯುಗದಲ್ಲಿ ಮೂರೂ ಬಗೆಯ ಅಧರ್ಮಗಳೂ ಅಂತರ್ಹಿತವಾಗಿರುತ್ತವೆ. ಮಿಕ್ಕ ಮೂರು ಯುಗಗಳಲ್ಲಿ ಕ್ರಮವಾಗಿ ಒಂದು, ಎರಡು, ಮೂರರಂತೆ ಅಧರ್ಮರೂಪಗಳು ಧರ್ಮವನ್ನು ಮುಚ್ಚುತ್ತವೆ. ಆದುದರಿಂದ ಕಲಿಯಲ್ಲಿ ಅಧರ್ಮದ ಮೂರೂ ರೂಪಗಳೂ ಧರ್ಮವನ್ನು ಮುಚ್ಚಿಬಿಡುತ್ತವೆ. ಆಗ ಧರ್ಮದ ಒಂದು ಪಾದವು ಮಾತ್ರ ಅಕ್ಷತವಾಗಿ ನಿಲ್ಲುತ್ತದೆ. ಒಟ್ಟಿನಮೇಲೆ ಧರ್ಮದಿಂದ ದೇವತ್ವವೂ, ಅಧರ್ಮದಿಂದ ರಾಕ್ಷಸತ್ವವೂ ಉಂಟಾಗುವುದೆಂದು ಸೂಚಿತವಾಯಿತು.

ಆದರೆ ಈ ಸಂಶಯವು ಬರಬಹುದು : ಅಧರ್ಮವೇ ಅಸುರರಾಕ್ಷಸರ ಧರ್ಮವಾದರೆ ಅವರಿಗೆ ಧರ್ಮಫಲವೂ, ಐಶ್ವರ್ಯ ಮತ್ತು ಜಯಾದಿಗಳು ಹೇಗೆ ಲಭಿಸುವುವು ? ಎಂದರೆ, ದೇವತೆಗಳು ಕೇವಲ ಧರ್ಮಪರರು ; ಅಸುರ ರಾಕ್ಷಸರು ಕಾಮ್ಯವಾದ ರಾಜಸತಾಮಸ ಧರ್ಮಾನುಷ್ಠಾನದಲ್ಲಿ ಮಾತ್ರ ಆಸಕ್ತರಾದವರು ; ಅವರು ಧರ್ಮಾನುಷ್ಠಾನ ಮಾಡಿದರೂ ಅವರಿಗೆ ಸಹಜವಾದ ಮೂರು ಬಗೆಯ ಅಧರ್ಮಗಳು ಅವರನ್ನು ಬಿಡುವುದೇ ಇಲ್ಲವು ; ಅವರು ಕೇವಲ ರಾಜಸತಾಮಸ ಪ್ರಕೃತಿಯವರಾದುದರಿಂದ ಹೀಗಾಗುವುದು. ಆದುದರಿಂದಲೇ ಅವರು ಕಾಮ್ಯಕರ್ಮಗಳನ್ನು ಮಾಡಿ ಅದರ ಫಲಾನುಭವಾನಂತರ ಅಧರ್ಮಫಲಭಾಜನರೇ ಆಗುತ್ತಾರೆ. (ರಾಮಪಂಡಿತರು)

ರಾಮಾನುಜರು, " ತಪಶ್ಶೌಚಂದಯಾ ಸತ್ಯಂ " ಎಂಬ ನಾಲ್ಕು ಪಾದಗಳಿಂದ ಕೂಡಿದ ಧರ್ಮವು ಅಕ್ಷತವಾಗಿರುವುದು ಕೃತಯುಗ ; ಆಗ ಧರ್ಮಪಕ್ಷಪಾತಿಗಳಿಗೆ ವೃದ್ಧಿಯೂ, ಅಧರ್ಮಪಕ್ಷಪಾತಿಗಳಿಗೆ ಹಾನಿಯೂ ಉಂಟಾಗುತ್ತದೆ. ಕಲಿಯುಗದಲ್ಲಿ ಸಂಗಮದ ಅನೃತಗಳೆಂಬ ಅಧರ್ಮಪಾದತ್ರಗಳಿದ್ದು ಧರ್ಮದ ಒಂದೇ ಪಾದವು ಉಳಿಯುತ್ತದೆ. ಆಗ ಅಧರ್ಮಪಕ್ಷಪಾತಿಗಳಿಗೆ ವೃದ್ಧಿಯೂ, ಧರ್ಮಪಕ್ಷಪಾತಿಗಳಿಗೆ ಹಾನಿಯೂ ಉಂಟಾಗುತ್ತದೆ " ಎಂಬ ಶ್ರೀ ಭಾಗವತದಲ್ಲಿರುವ ವಿಷಯವು ಈ ಶ್ಲೋಕದಿಂದ ಸೂಚಿತವಾಗುತ್ತದೆ.

ಒಟ್ಟಿನಮೇಲೆ ಇಲ್ಲಿ ಮಾಲ್ಯವದ್ವಾಕ್ಯ ತಾತ್ಪರ್ಯವು, " ರಾವಣಾ ! ನೀನು ಈಗ ಕೇವಲ ಅಧರ್ಮವನ್ನೇ ವರಿಸಿರುವೆ. ಕಲಿಯು ನಿನ್ನನ್ನು ಸಂಪೂರ್ಣವಾಗಿ ಆವರಿಸಿಬಿಟ್ಟಿದ್ದಾನೆ. ಆದುದರಿಂದಲೇ ಸದ್ಯದಲ್ಲಿ ನಿನಗೆ ಎಲ್ಲವೂ ಜಯಮುಖಗಳಾಗಿಯೇ ಇರುವುದು. ಆದರೆ ಕಡೆಗೆ ಧರ್ಮಕ್ಕೇ ಜಯವಾಗುವುದರಿಂದಲೂ, ಪ್ರಕೃತದಲ್ಲಿ ನಿನ್ನ ಅಧರ್ಮವರ್ತನೆಯು ಮಿತಿಮೀರಿ ಹೋಗಿರುವುದರಿಂದಲೂ ನಿನಗೀಗ ವಿನಾಶಕಾಲವೇ ಸಮೀಪಿಸಿದೆ. ಆದುದರಿಂದ ಧರ್ಮಾತ್ಮನಾದ ಶ್ರೀರಾಮನಿಗೆ ಸೀತೆಯನ್ನೊಪ್ಪಿಸಿ ಧರ್ಮವನ್ನಾರ್ಜಿಸಿ ಶ್ರೇಯಸ್ವಿಯಾಗಿ ಬಾಳು" ಎಂಬದಾಗಿ ಗ್ರಹಿಸಬೇಕು.

# ಯುದ್ಧಕಾಂಡೇ ಷಟ್ತ್ರಿಂಶಸ್ಸರ್ಗಃ

ತತ್ತು ಮಾಲ್ಯವತೋ ವಾಕ್ಯಂ ಹಿತಮುಕ್ತಂ ದಶಾನನಃ । ನಮರ್ಷಯತಿ ದುಷ್ಟಾತ್ಮಾ ಕಾಲಸ್ಯ ವಶಮಾಗತಃ ॥೧॥ ಸಬದ್ಧ್ವಾ ಭ್ರುಕುಟಿಂ ವಕ್ತ್ರೇ ಕ್ರೋಧಸ್ಯ ವಶಮಾಗತಃ । ಅಮರ್ಷಾತ್ಪರಿವೃತ್ತಾಕ್ಷೋ ಮಾಲ್ಯವಂತಮಥಾಬ್ರವೀತ್ ॥ ೨ ॥ "ಹಿತಬುದ್ಧ್ಯಾ ಯದಹಿತಂ ವಚಃ ಪರುಷಮುಚ್ಯತೇ । ಪರಪಕ್ಷಂ ಪ್ರವಿಶ್ಯೈವ ನೈತಚ್ಛ್ರೋತ್ರಂ ಗತಂ ಮಮ ॥೩॥ ¶ ಮಾನುಷಂ ಕೃಪಣಂ ರಾಮಮೇಕಂ ಶಾಖಾಮೃಗಾ

ದುಷ್ಟಾತ್ಮಾ - ದುಷ್ಟಸ್ವಭಾವವುಳ್ಳ, ದಶಾನನಃ - ದಶಮುಖನು, ಕಾಲಸ್ಯ - ಯಮನಿಗೆ ವಶಂ - ಸ್ವಾಧೀನತೆಯನ್ನು, ಆಗತಃ - ಹೊಂದಿದವನಾಗಿ, ಹಿತಂ - ಇಷ್ಟವಾಗಿ, ಉಕ್ತಂ - ಹೇಳಲ್ಪಟ್ಟ, ಮಾಲ್ಯವತಃ - ಮಾಲ್ಯವಂತನ, ತದ್ವಾಕ್ಯಂತು - ಆ ಮಾತನ್ನಾದರೆ, ನಮರ್ಷಯತಿ - ಸೈರಿಸಲಿಲ್ಲವು. ॥ ೧ ॥ ಅಥ - ಬಳಿಕ, ಸಃ - ಆ ರಾವಣನು, ಕ್ರೋಧಸ್ಯ - ಕೋಪಕ್ಕೆ, ವಶಂ - ಸ್ವಾಧೀನವನ್ನು, ಆಗತಃ - ಹೊಂದಿ, ವಕ್ತ್ರೇ - ಮುಖದಲ್ಲಿ, ಭೃಕುಟಿಂಬದ್ಧ್ವಾ - ಕಣ್ಣುಬ್ಬುಗಳನ್ನು ಗಂಟಿಕ್ಕಿ, ಅಮರ್ಷಾತ್ - ರೋಷದಿಂದ, ಪರಿವೃತ್ತಾಕ್ಷಃ - ತಿರಿಗಿಸಲ್ಪಟ್ಟ ಕಣ್ಣುಗಳುಳ್ಳವನಾಗಿ, ಮಾಲ್ಯವಂತಂ - ಮಾಲ್ಯವಂತನನ್ನು ಕುರಿತು, ಅಬ್ರವೀತ್ - ನುಡಿದನು. ॥ ೨ ॥ ಹಿತಬುಧ್ಯಾ - ಹಿತವೆಂಬ ಭ್ರಾಂತಿಯಿಂದ, ಪರಪಕ್ಷಂ - ಶತ್ರುಪಕ್ಷವನ್ನು, ಪ್ರವಿಶ್ಯ - ಅವಲಂಬಿಸಿ, ಪರುಷಂ - ಕಠಿನವಾದ, ಅಹಿತಂ - ಅಪ್ರಿಯವಾದ, ಯದ್ವಚಃ - ಯಾವ ಮಾತು, ಉಚ್ಯತೇ - ಹೇಳಲ್ಪಡುತ್ತದೋ, ಏತತ್ - ಈ ಮಾತು, ಮಮ - ನನ್ನ, ಶ್ರೋತ್ರಂ - ಕಿವಿಯನ್ನು, ನಗತಮೇವ - ಹೊಂದಲೇ ಇಲ್ಲವು, ಶಾಖಾ....ಯಂ - ಕೋತಿಗಳೇ ಆಶ್ರಯವಾಗುಳ್ಳ, ಮಾನುಷಂ-ಮನುಷ್ಯನಾದ,

ಕೇವಲ ದುಷ್ಟಾತ್ಮನಾದ ಆ ರಾವಣನು ವಿಪರೀತಕಾಲಕ್ಕೊಳಗಾಗಿದ್ದುದರಿಂದ ಮಾಲ್ಯವಂತನು ಹೇಳಿದ ಹಿತೋಕ್ತಿಗಳನ್ನು ಮನಸ್ಸಿಗೆ ತೆಗೆದುಕೊಳ್ಳದೇಹೋದನು ; ಮಹಾ ಕುಪಿತನಾಗಿ ಹುಬ್ಬುಗಳನ್ನು ಗಂಟಿಕ್ಕಿ ಬಹಳವಾದ ರೋಷಾವೇಶದಿಂದ ಕಣ್ಣುಗಳನ್ನು ತಿರುಗಿಸುತ್ತ ಆ ಮಾಲ್ಯವಂತನನ್ನು ಕುರಿತು, "ಎಲೈ ಮಾಲ್ಯವಂತನೇ! ನೀನು ಶತ್ರುಪಕ್ಷವನ್ನು ವಹಿಸಿ, ನನಗೆ ಹಿತಕರವಾದುದೆಂದು ಯಾವ ಯಾವ ಅಪಥ್ಯವಚನಗಳನ್ನಾಡಿದೆಯೋ ಅವು ನನ್ನ ಕಿವಿಗೇ ಬೀಳಲಿಲ್ಲವು. ಎಲವೋ ಮೂರ್ಖನೇ! ಕೇವಲ ಮನುಷ್ಯ; ದೀನ; ಕೋತಿಗಳನ್ನಾಶ್ರಯಿ

¶ ೪ ಮತ್ತು ೫ ನೇ ಶ್ಲೋಕದ ವಾಸ್ತವಿಕಾರ್ಥ.

ವನಾಲಯಂ - ಉದಧಿಯೇ ಆವಾಸಸ್ಥಾನವಾಗುಳ್ಳ (ಎಂದರೆ) ವಟಪತ್ರಶಾಯಿಯಾದ ಶ್ರೀಮನ್ನಾರಾಯಣನು, (ಆದುದರಿಂದಲೇ) ಪಿತ್ರಾತ್ಯಕ್ತಂ-ಜನ್ಮಾದಿರಹಿತನಾದ (ಹುಟ್ಟುಸಾವುಗಳಿಲ್ಲದ)ವನು "ಈಶ್ವರನಿಗೆ ಜನ್ಮಾದಿಗಳಿಲ್ಲದಿರುವುದರಿಂದಲೇ ಪಿತ್ರಾದ್ಯಭಾವವೆಂದು ಗ್ರಹಿಸಬೇಕು" ಏಕಂ - ಅದ್ವಿತೀಯನಾದ, (ಆದುದರಿಂದಲೇ) ಶಾಖಾಮೃಗಾಶ್ರಯಂ - ವೇದಶಾಖೆಗಳಿಂದ ಮೃಗ್ಯನಾದ (ಎಂದರೆ) ವೇದವೇದ್ಯನಾದ ಸರ್ವೇಶ್ವರನು. ಇಂತಹ ಪರಮೇಶ್ವರನಾದರೂ ಯಾವುದೋ ಒಂದು ಕಾರಣದಿಂದ ಮಾನುಷನಾಗಿ ಅವತರಿಸಿರುವ ಶ್ರೀರಾಮಮೂರ್ತಿಯನ್ನು ಸಮರ್ಥನನ್ನಾಗಿ ತಿಳಿದಿರುವುದು ಬಹಳ ಸರಿ. ಆದರೆ ಸರ್ವವಿಧ ಪೌರುಷ ಪರಾಕ್ರಮಗಳಿಂದಲೂ ಹೀನನಾಗಿರುವ ನನ್ನನ್ನು ಅಹೀನನಾಗಿ ನೀನು ಭಾವಿಸುವುದು ಕೇವಲ ಅನುಚಿತವು. (ಮಹೇಶ್ವರತೀರ್ಥರು)

ಶ್ರಿಯಂ । ಸಮರ್ಥಂ ಮನ್ಯಸೇ ಕೇನ ತ್ಯಕ್ತಂ ಪಿತ್ರಾ ವನಾಲಯಂ? ॥ ೪ ॥ ರಕ್ಷಸಾಮೀಶ್ವರಂ ಮಾಂಚ ದೇವತಾನಾಂ ಭಯಂಕರಂ । ಹೀನಂ ಮಾಂ ಮನ್ಯಸೇ ಕೇನ ಹ್ಯಹೀನಂ ಸರ್ವವಿಕ್ರಮೈಃ? ॥ ೫ ॥ ವೀರದ್ವೇಷೇಣ ವಾ ಶಂಕೇ ಪಕ್ಷಪಾತೇನ ವಾ ರಿಪೋಃ । ತ್ವಯಾಽಹಂ ಪರುಷಾಣ್ಯುಕ್ತಃ ಪರಪ್ರೋತ್ಸಾಹನೇನ ವಾ? ॥ ೬ ॥ ಪ್ರಭವಂತಂ ಪದಸ್ಥಂಹಿ ಪರುಷಂ ಕೋಽಭಿಧಾಸ್ಯತಿ । ಪಂಡಿತಶ್ಶಾಸ್ತ್ರತತ್ವಜ್ಞೋ ವಿನಾ ಪ್ರೋತ್ಸಾಹನಾದ್ರಿಪೋಃ? ॥ ೭ ॥ ಆನೀಯಚ ವನಾತ್ಸೀತಾಂ ಪದ್ಮಹೀನಾಮಿವ ಶ್ರಿಯಂ । ಕಿಮರ್ಥಂ ಪ್ರತಿದಾಸ್ಯಾಮಿ ರಾಘವಸ್ಯ ಭಯಾದಹಂ? ॥ ೮ ॥ ವೃತಂ

---

ಪಿತ್ರಾ-ತಂದೆಯಿಂದ, ತ್ಯಕ್ತಂ-ಬಿಡಲ್ಪಟ್ಟ, ವನಾಲಯಂ-ವನವಾಸಿಯಾದ, ಏಕಂ ಒಬ್ಬಂಟಿಗನಾದ, ರಾಮಂ-ರಾಮನನ್ನು, ಕೇನ-ಯಾವ ಕಾರಣದಿಂದ, ಸಮರ್ಥಂ ಸಮರ್ಥನನ್ನಾಗಿ, ಮನ್ಯಸೇ-ಎಣಿಸುತ್ತೀಯೋ. ॥೩-೪॥ ರಕ್ಷಸಾಂ - ರಾಕ್ಷಸರಿಗೆ, ಈಶ್ವರಂ - ಸ್ವಾಮಿಯಾದ, ದೇವತಾನಾಂ - ದೇವತೆಗಳಿಗೆ, ಭಯಂಕರಂ - ಭಯಂಕರನಾದ, ಸರ್ವವಿಕ್ರಮೈಃ - ಸಮಸ್ತ ಪರಾಕ್ರಮಗಳಿಂದಲೂ, ಅಹೀನಂ - ಕೊರತೆಯಿಲ್ಲದ, ಮಾಂ - ನನ್ನನ್ನು, ಕೇನ - ಯಾವ ಕಾರಣದಿಂದ, ಹೀನಂ - ಕಡಿಮೆಯಾದವನನ್ನಾಗಿ, ಮನ್ಯಸೇಹಿ - ತಿಳಿದಿದ್ದೀಯೋ, ತತ್ - ಅದನ್ನು, ನವೇದ್ಮಿ - ಅರಿಯೆನು. ॥ ೫ ॥ ತ್ವಯಾ - ನಿನ್ನಿಂದ, ಅಹಂ - ನಾನು, ವೀರದ್ವೇಷೇಣವಾ - ಸಜಾತೀಯ ವೀರನೆಂಬ ದ್ವೇಷದಿಂದಲಾಗಲಿ, ರಿಪೋಃ - ಶತ್ರುವಿನ, ಪಕ್ಷಪಾತೇನವಾ - ಪಕ್ಷಪಾತದಿಂದಲಾಗಲಿ, ಪರಪ್ರೋತ್ಸಾಹನೇನವಾ- ಶತ್ರುವಿನ ಉಪದೇಶಬಲದಿಂದಾಗಲಿ, ಪರುಷಾಣಿ - ಕಠಿನೋಕ್ತಿಗಳನ್ನು, ಉಕ್ತಃ - ಹೇಳಲ್ಪಟ್ಟೆನೆಂದು, ಶಂಕೇ - ಊಹಿಸುತ್ತೇನೆ. ॥ ೬ ॥ ಶಾಸ್ತ್ರತತ್ವಜ್ಞಃ - ಶಾಸ್ತ್ರರಹಸ್ಯವನ್ನು ತಿಳಿದಿರುವ, ಪಂಡಿತಃ - ಬಲ್ಲವನಾದ, ಕಃ - ಯಾವನು, ರಿಪೋಃ - ಶತ್ರುವಿನ, ಪ್ರೋತ್ಸಾಹನಾದ್ವಿನಾ - ಪ್ರೇರಣೆಯಹೊರತು, ಪ್ರಭವಂತಂ - ವರ್ಧಿಷ್ಣುವಾದ, ಪದಸ್ಥಂ - ರಾಜ್ಯಪದವಿಯಲ್ಲಿರುವ ಪುರುಷನನ್ನು ಕುರಿತು, ಪರುಷಂ - ಕ್ರೂರವಾದ ಮಾತುಗಳನ್ನು, ಅಭಿಧಾಸ್ಯತಿ - ಹೇಳುವನು. ॥ ೭ ॥ ವನಾತ್ - ವನದಿಂದ, ಪದ್ಮಹೀನಾಂ - ಕಮಲರಹಿತಳಾದ, ಶ್ರಿಯಮಿವಸ್ಥಿತಾಂ - ಲಕ್ಷ್ಮೀದೇವಿಯಂತಿರುವ, ಸೀತಾಂ - ಸೀತಾದೇವಿಯನ್ನು, ಆನೀಯ - ಕರೆತಂದು, ರಾಘವಸ್ಯ - ಶ್ರೀರಾಮನ, ಭಯಾತ್ - ಭೀತಿಯಿಂದ, ಅಹಂ - ನಾನು, ಕಿಮರ್ಥಂ - ಏತಕ್ಕೋಸ್ಕರ, ಪ್ರತಿದಾಸ್ಯಾಮಿ - ಮತ್ತೂ ಕೊಡ

---

ಸಿದ್ದಾನೆ; ತಂದೆಯು ತೊರೆಯಲಾಗಿ ವನವಾಸಮಾಡುತ್ತಿದ್ದಾನೆ; ಒಬ್ಬಂಟಿಗ; ಇಂಥಾ ಆ ರಾಮನು ಮಹಾ ಸಮರ್ಥನೆಂದು ಯಾವ ಕಾರಣದಿಂದ ನೀನು ಹೇಳುತ್ತಿರುವೆ? ನಾನು ರಾಕ್ಷಸರೆಲ್ಲರಿಗೂ ಪ್ರಭುವಾದವನು; ದೇವತೆಗಳಿಗೂ ಭಯಂಕರನು; ಶೌರ್ಯ ಸ್ಥೈರ್ಯ ಪರಾಕ್ರಮಗಳು ನನ್ನಲ್ಲಿ ಸಂಪೂರ್ಣವಾಗಿರುವುವು; ಇಂಥಾ ನನ್ನನ್ನು ನೀನು ಕೇವಲ ದೀನನೆಂದು ತಿಳಿದ ಬಗೆಯೆಂತು? ॥೧-೫॥ ನಾನು ವೀರನಾಗಿರುವುದನ್ನು ಸಹಿಸದೆ ದ್ವೇಷಬುದ್ಧಿಯಿಂದಲೋ, ಶತ್ರುಪಕ್ಷಪಾತದಿಂದಲೋ, ಇಲ್ಲವೇ ಇತರರ ಪ್ರೋತ್ಸಾಹದಿಂದಲೋ ನೀನು ನನ್ನನ್ನು ಕಠಿನೋಕ್ತಿಗಳಿಂದ ತಿರಸ್ಕರಿಸುತ್ತಿದ್ದೀಯೆ. ಪಂಡಿತನೂ, ರಾಜನೀತಿಶಾಸ್ತ್ರಕೋವಿದನೂ ಆದ ಯಾವನು ತಾನೆ ಪರಪ್ರೋತ್ಸಾಹವಿಲ್ಲದೆ, ಪದವೀಧರನೂ, ಪ್ರಭಾವಶಾಲಿಯೂ ಆದ ಪ್ರಭುವನ್ನು ಕುರಿತು ಕಠಿನೋಕ್ತಿಗಳನ್ನಾಡುತ್ತಾನೆ? ಮಾಲ್ಯವಂತಾ! ಜನಸ್ಥಾನದಿಂದ ಕಮಲವಿಹೀನೆಯಾದ ಲಕ್ಷ್ಮಿಯಂತಿರುವ ಸೀತೆಯನ್ನು ಕರೆದು ತಂದಿರುವ ನಾನು ಆ

ವಾನರಕೋಟೀಭಿಸ್ಸಸುಗ್ರೀವಂ ಸಲಕ್ಷ್ಮಣಂ । ಪಶ್ಯ ಕೈಶ್ಚಿದಹೋಭಿಸ್ತ್ವಂ ರಾಘವಂ ನಿಹತಂ ಮಯಾ ॥ ೯ ॥ ದ್ವಂದ್ವೇ ಯಸ್ಯ ನ ತಿಷ್ಠಂತಿ ದೈವತಾನ್ಯಪಿ ಸಂಯುಗೇ । ಸಕಸ್ಮಾದ್ರಾವಣೋ ಯುದ್ಧೇ ಭಯಮಾಹರಯಿಷ್ಯತಿ ॥ ೧೦ ॥ ದ್ವಿಧಾ ಭಜ್ಯೇಯಮಪ್ಯೇವಂ ನನಮೇಯಂತು ಕಸ್ಯಚಿತ್ । ಏಷ ಮೇ ಸಹಜೋ ದೋಷಸ್ಸ್ವಭಾವೋ ದುರತಿಕ್ರಮಃ ॥ ೧೧ ॥ ಯದಿ ತಾವತ್ಸಮುದ್ರೇತು ಸೇತುರ್ಬದ್ಧೋ ಯದೃಚ್ಛಯಾ । ರಾಮೇಣ ವಿಸ್ಮಯಃ ಕೋತ್ರ ಯೇನ ತೇ ಭಯಮಾಗತಂ? ॥ ೧೨ ॥

ಬೇಕು. ॥ ೮ ॥ ತ್ವಂ - ನೀನು, ವಾನರಕೋಟೀಭಿಃ - ಕಪಿಕೋಟಿಗಳಿಂದ, ವೃತಂ - ಪರಿವೃತನಾದ, ಸಸುಗ್ರೀವಂ - ಸುಗ್ರೀವನಿಂದೊಡಗೂಡಿದ, ಸಲಕ್ಷ್ಮಣಂ - ಲಕ್ಷ್ಮಣನಿಂದ ಯುಕ್ತನಾದ, ರಾಘವಂ- ರಾಮನನ್ನು, ಕೈಶ್ಚಿದಹೋಭಿಃ - ಕೆಲವು ದಿವಸಗಳಲ್ಲಿ, ಮಯಾ - ನನ್ನಿಂದ, ನಿಹತಂ - ಹೊಡೆಯಲ್ಪಟ್ಟವನನ್ನಾಗಿ, ಪಶ್ಯ - ನೋಡುವಿ. ॥೯॥ ದೈವತಾನ್ಯಪಿ - ದೇವತೆಗಳೂ ಕೂಡಾ, ಯಸ್ಯ - ಯಾವ ಶೂರನಾದ ನನ್ನ, ದ್ವಂದ್ವೇ - ದ್ವಂದ್ವಯುದ್ಧದಲ್ಲಿ, ನತಿಷ್ಠಂತಿ - ನಿಲ್ಲಲಾರರೋ, ಸಃರಾವಣಃ - ಅಂಥಾ ರಾವಣನು, ಯುದ್ಧೇ - ಕಾಳಗದಲ್ಲಿ, ಕಸ್ಮಾತ್ - ಯಾವ ನಿಮಿತ್ತದಿಂದಲೂ, ಭಯಂ - ಭೀತಿಯನ್ನು, ಆಹಾರಯಿಷ್ಯತಿ - ಹೊಂದಿಯಾನು. ॥ ೧೦ ॥ ಏವಂತು - ಹೀಗಾದರೆ, ದ್ವಿಧಾ - ಎರಡು ವಿಧವಾಗಿ, ಭಜ್ಯೇಯಮಪಿ - ಭೇದಿಸಲ್ಪಟ್ಟವನಾದರೂ, ಕಸ್ಯಚಿತ್ - ಯಾವನಿಗಾದರೂ, ನನಮೇಯಂ - ನಮ್ರನಾಗಲಾರೆನು, ಏಷಃ - ಇದು, ಮೇ - ನನಗೆ, ಸಹಜಃ - ಸ್ವಭಾವಸಿದ್ಧವಾದ, ದೋಷಃ - ದೋಷವು, ಸ್ವಭಾವಃ - ಸ್ವಭಾವವು, ದುರತಿಕ್ರಮಃ - ಮೀರಲಸಾಧ್ಯವಾದದ್ದು. ॥ ೧೧ ॥ ತಾವತ್ - ಆದರೆ, ಸಮುದ್ರೇ - ಸಮುದ್ರದಲ್ಲಿ, ಸೇತುಃ - ಸೇತುವು, ಯದೃಚ್ಛಯಾ - ಆಕಸ್ಮಾತ್ತಾಗಿ, ರಾಮೇಣ - ರಾಮನಿಂದ, ಬದ್ಧೋಯದಿ - ಕಟ್ಟಲ್ಪಟ್ಟಿದ್ದರೆ, ಅತ್ರ - ಈ ವಿಷಯದಲ್ಲಿ, ಕಃವಿಸ್ಮಯಃ - ಏನಾಶ್ಚರ್ಯವು, ಯೇನ - ಯಾವುದರಿಂದ, ತೇ - ನನಗೆ, ಭಯಂ - ಭೀತಿಯು, ಆಗತಂ - ಪ್ರಾಪ್ತವಾಯಿತು. ॥ ೧೨ ॥ ಸರಾಮಸ್ತು - ಆ ರಾಮನಾದರೆ, ವಾನರಸೇನಯಾಸಹ -

ರಾಮನಿಗೆ ಭಯಪಟ್ಟು ಅವಳನ್ನು ಹಿಂದಕ್ಕೆ ಕೊಟ್ಟೇನೆ? ಖಂಡಿತವಾಗಿಯೂ ಇಲ್ಲವು. ಅಯ್ಯಾ ಮಾಲ್ಯವಂತನೇ! ಅನೇಕ ವಾನರಸಮೂಹಗಳಿಂದಲೂ, ಲಕ್ಷ್ಮಣನಿಂದಲೂ, ವಾನರಪ್ರಭುವಾದ ಸುಗ್ರೀವನಿಂದಲೂ ಕೂಡಿದ ಆ ರಾಮನನ್ನು ಕೆಲವು ದಿನಗಳೊಳಗಾಗಿ ಸಂಹರಿಸುತ್ತೇನೆ; ನೀನೇ ನೋಡುತ್ತೀರು. ನಾನು ಯುದ್ಧಸನ್ನದ್ಧನಾದರೆ ದೇವತೆಗಳೂ ನನ್ನೆದರು ನಿಲ್ಲಲಾರರು. ಹೀಗಿರುವಾಗ ಆ ರಾಮನು ನನ್ನನ್ನು ಎದುರಿಸಬಲ್ಲನೇ! ಇಂತಹ ಈ ರಾವಣನಿಗೆ ಅದಾವನು ತಾನೇ ಭಯವನ್ನುಂಟುಮಾಡಿಯಾನು? ॥ ೬-೧೦ ॥ ಎಲವೋ ಮಾಲ್ಯವಂತನೇ! ನನ್ನನ್ನು ಎರಡು ತುಂಡುಗಳಾಗಿ ಕತ್ತರಿಸಿದರೂ ನಾನು ಶತ್ರುವಿಗೆ ನಮ್ರನಾಗಿ ತಲೆಬಾಗಲಾರೆನು. ಈ ರೀತಿ ಮೊಂಡುಹಿಡಿಯುವುದು ಉಚಿತವಲ್ಲವೆನ್ನುವೆಯೇನೋ? ಏನು ಮಾಡುವುದು; ಇದು ನನ್ನ ಸ್ವಭಾವ. ಸ್ವಭಾವವು ಯಾವ ರೀತಿಯಿಂದಲೂ ಮಾರ್ಪಡುವುದಿಲ್ಲವಷ್ಟೆ? ಆದುದರಿಂದ ಇನ್ನು ನೀನೀರೀತಿ ಮಾತನಾಡಬೇಡ. ರಾಮನು ಕಾಕತಾಳನ್ಯಾಯದಂತೆ ಸಮುದ್ರಕ್ಕೆ ಸೇತುವೆಯನ್ನು ಕಟ್ಟಿದ್ದರೆ ಏನಾಯಿತು. ಅದರಲ್ಲಿ ಯಾವ ಆಶ್ಚರ್ಯವಿರುವುದು? ರಾಮನು ಸಮುದ್ರವನ್ನು ದಾಟಿ ಈಚಿನ

¶ ಸತು ತೀರ್ತ್ವಾರ್ಣವಂ ರಾಮಸ್ಸಹ ವಾನರಸೇನಯಾ । ಪ್ರತಿಜಾನಾಮಿ ತೇ ಸತ್ಯಂ ನ ಜೀವನ್ ಪ್ರತಿಯಾಸ್ಯತಿ " ||೧೩|| ಏವಂ ಬ್ರುವಾಣಂ ಸಂರಬ್ಧಂ ರುಷ್ಟಂ ವಿಜ್ಞಾಯ ರಾವಣಂ । ವ್ರೀಡಿತೋ ಮಾಲ್ಯವಾನ್ ವಾಕ್ಯಂ ನೋತ್ತರಂ ಪ್ರತ್ಯಪದ್ಯತ || ೧೪ || ಜಯಾಶಿಷಾ ಚ ರಾಜಾನಂ ವರ್ಧಯಿತ್ವಾ ಯಥೋಚಿತಂ । ಮಾಲ್ಯವಾನಭ್ಯನುಜ್ಞಾತೋ ಜಗಾಮ ಸ್ವಂ ನಿವೇಶನಂ || ೧೫ || ರಾವಣಸ್ತು ಸಹಾಮಾತ್ಯೋ ಮಂತ್ರಯಿತ್ವಾ ವಿಮೃಶ್ಯಚ । ಲಂಕಾಯಾಮತುಲಾಂ ಗುಪ್ತಿಂ ಕಾರಯಾಮಾಸ ರಾಕ್ಷಸಃ

ಕಪಿಸೇನೆಯೊಡನೆ, ಅರ್ಣವಂ - ಸಮುದ್ರವನ್ನು, ತೀರ್ತ್ವಾ - ದಾಟಿ, ಜೀವನ್ - ಬದುಕಿ, ನಪ್ರತಿಯಾಸ್ಯತಿ - ಹಿಂದಕ್ಕೆ ಹೋಗಲಾರನು, ತೇ - ನಿನಗೆ, ಸತ್ಯಂ - ಯಥಾರ್ಥವಾಗಿ, ಪ್ರತಿಜಾನಾಮಿ - ಪ್ರತಿಜ್ಞೆಮಾಡುವೆನು. ||೧೩|| ಏವಂ - ಈ ಪ್ರಕಾರವಾಗಿ, ಬ್ರುವಾಣಂ - ಹೇಳುತ್ತಿರುವ, ಸಂರಬ್ಧಂ - ಕುಪಿತನಾದ, ರಾವಣಂ - ರಾವಣನನ್ನು, ರುಷ್ಟಂ - ರೋಷಯುಕ್ತನನ್ನಾಗಿ, ವಿಜ್ಞಾಯ - ತಿಳಿದು, ಮಾಲ್ಯವಾನ್ - ಮಾಲ್ಯವಂತನು, ವ್ರೀಡಿತಃ - ನಾಚಿಕೆಯುಳ್ಳವನಾಗಿ, ಉತ್ತರಂವಾಕ್ಯಂ - ಉತ್ತರವನ್ನು, ನಪ್ರತಿಪದ್ಯತ-ಅರಿಕೆ ಮಾಡಲಿಲ್ಲವು. || ೧೪ || ಮಾಲ್ಯವಾನ್-ಮಾಲ್ಯವಂತನು, ರಾಜಾನಂ - ರಾವಣನನ್ನು, ಜಯಾಶಿಷಾಚ - ಜಯವಚನದಿಂದಲೂ, ಯಥೋಚಿತಂ - ಯಥಾಯೋಗ್ಯವಾಗಿ, ವರ್ಧಯಿತ್ವಾ - ವೃದ್ಧಿಗೊಳಿಸಿ, ಅಭ್ಯನುಜ್ಞಾತಃ - ಅನುಜ್ಞೆಪಡೆದು, ಸ್ವಂನಿವೇಶನಂ - ತನ್ನ ಮನೆಯನ್ನು ಕುರಿತು, ಜಗಾಮ - ತೆರಳಿದನು. ||೧೫|| ರಾಕ್ಷಸಃ - ಅಸುರನಾದ, ರಾವಣಸ್ತು - ರಾವಣನಾದರೆ, ಸಹಾಮಾತ್ಯಃ - ಮಂತ್ರಿಗಳೊಡಗೂಡಿ, ಮಂತ್ರಯಿತ್ವಾ - ಆಲೋಚಿಸಿ, ವಿಮೃಶ್ಯಚ - ವಿಮರ್ಶಿಸಿಯೂ, ಲಂಕಾಯಾಂ - ಲಂಕಾಪಟ್ಟಣದಲ್ಲಿ, ಅತುಲಾಂ - ಅಸದೃಶವಾದ, ಗುಪ್ತಿಂ - ರಕ್ಷಣೆಯನ್ನು, ಕಾರಯಾಮಾಸ-ಮಾಡಿಸಿದನು. || ೧೬ || ಸಃ-ಆ ರಾವಣನು, ಪೂರ್ವಸ್ಯಾಂದ್ವಾರಿ-ಪೂರ್ವದ್ವಾರದಲ್ಲಿ, ಪ್ರಹಸ್ತಂ - ಪ್ರಹಸ್ತನೆಂಬ, ರಾಕ್ಷಸಂ - ರಾಕ್ಷಸನನ್ನು, ವ್ಯಾದಿದೇಶ - ಆಜ್ಞಾ

ತೀರಕ್ಕೆ ಬಂದಿರುವನೆಂದು ಕೇಳಿ ಭಯಪಟ್ಟು ನೀನು ಹೇಗೆ ಹೇಳುತ್ತಿದ್ದೀಯೆ? ಅವನು ವಾನರಸೇನೆಯೊಡನೆ ಇಲ್ಲಿಗೆ ಬಂದಿದ್ದರೆ ಬಂದಿರಲಿ; ಅವನು ನನ್ನಿಂದ ಬದುಕಿ ಬೇರೆ ಹೋಗುವಂತಿಲ್ಲವು. ಆದುದರಿಂದಲೈ ಮಾಲ್ಯವಂತನೇ ! ನೀನು ಸ್ವಲ್ಪವೂ ಭಯಪಡಬೇಡ" ಎಂದು ಹೇಳಿದನು. ರಾವಣನೀರೀತಿ ನುಡಿಯಲು ಮಾಲ್ಯವಂತನು, ಅವನು ಕೋಪರೋಷಗಳಿಂದ ವ್ಯಾಪ್ತನಾಗಿರುವನೆಂದರಿತು ತಾನಾಡಿದ ಮಾತುಗಳಿಗೆ ತಾನೇ ನಾಚಿ ಯಾವ ಪ್ರತ್ಯುತ್ತರವನ್ನೂ ಕೊಡದೆ ಯಥೋಚಿತವಾಗಿ ಜಯಾಶಿಷಗಳಿಂದ ಆತನನ್ನು ಹರಿಸಿ, ಅಪ್ಪಣೆ ಪಡೆದು ತನ್ನ ಮನೆಗೆ ಹೊರಟುಹೋದನು. ||೧೧–೧೫|| ಆಮೇಲೆ ರಾವಣನು ತನ್ನ ಮಂತ್ರಿಗಳೊಡನೆ ಪ್ರಕೃತಕಾರ್ಯಗಳನ್ನು ಆಲೋಚಿಸಿದವನಾಗಿ ಲಂಕಾನಗರದ ರಕ್ಷಣೆಗಾಗಿ ಈ ರೀತಿ ತನ್ನವರನ್ನು ಆಜ್ಞಾಪಿಸಿದನು: ಪೂರ್ವದ್ವಾರ ಸಂರಕ್ಷಣೆಗಾಗಿ ಪ್ರಹಸ್ತನನ್ನೂ, ದಕ್ಷಿಣ

¶ " ಶ್ರೀರಾಮನು ವಾನರಸೇನೆಯೊಡನೆ ಸಾಗರವನ್ನು ದಾಟಿ ಇಲ್ಲಿಗೆ ಬಂದಿರುವನು. ಅವನು ಯಾವ ಹಾನಿಯೂ ಇಲ್ಲದೆ ಹಿಂತಿರುಗುವನು. ಇದನ್ನು ಪ್ರಮಾಣವಾಗಿಯೂ ಹೇಳುತ್ತೇನೆ. ಆದರೆ ಸೀತೆಯನ್ನು ಅವನಿಗೊಪ್ಪಿಸುವುದಾಗಲಿ, ಅವನಿಗೆ ನಮ್ರನಾಗಿ ಶರಣಾಗತನಾಗುವುದಾಗಲಿ ನನ್ನ ಸ್ವಭಾವಕ್ಕೆ ವ್ಯತಿರಿಕ್ತವಾದುದು. ಸ್ವಭಾವವು ಮಾರ್ಪಡುವುದಲ್ಲವಷ್ಟೆ " ಎಂಬುದು ಇಲ್ಲಿನ ವಾಸ್ತವಿಕಾರ್ಥವು. (ಮಹೇಶ್ವರತೀರ್ಥರು)

||೧೭|| ಸ ವ್ಯಾದಿದೇಶ ಪೂರ್ವಸ್ಯಾಂ ಪ್ರಹಸ್ತಂ ದ್ವಾರಿ ರಾಕ್ಷಸಂ । ದಕ್ಷಿಣಸ್ಯಾಂ ಮಹಾವೀರ್ಯೌ ಮಹಾಪಾರ್ಶ್ವ ಮಹೋದರೌ || ೧೭ || ಪಶ್ಚಿಮಾಯಾಮಥೋ ದ್ವಾರಿ ಪುತ್ರಮಿಂದ್ರಜಿತಂ ತಥಾ । ವ್ಯಾದಿದೇಶ ಮಹಾಮಾಯಂ ಬಹುಭೀ ರಾಕ್ಷಸೈರ್ವೃತಂ || ೧೮ || ಉತ್ತರಸ್ಯಾಂ ಪುರದ್ವಾರಿ ವ್ಯಾದಿಶ್ಯ ಶುಕಸಾರಣೌ । ಸ್ವಯಂ ಚಾತ್ರ ಭವಿಷ್ಯಾಮಿ ಮಂತ್ರಿಣಸ್ತಾನುವಾಚಹ ||೧೯ || ರಾಕ್ಷಸಂತು ವಿರೂಪಾಕ್ಷಂ ಮಹಾವೀರ್ಯಪರಾಕ್ರಮಂ । ಮಧ್ಯಮೇ ಸ್ಥಾಪಯದ್ಗುಲ್ಮೇ ಬಹುಭಿಸ್ಸಹರಾಕ್ಷಸೈಃ || ೨೦ || ಏವಂ ವಿಧಾನಂ ಲಂಕಾಯಾಃ ಕೃತ್ವಾ ರಾಕ್ಷಸಪುಂಗವಃ । ಕೃತಕೃತ್ಯಮಿವಾತ್ಮಾನಂ ಮನ್ಯತೇ ಕಾಲಚೋದಿತಃ || ೨೧ ||

---

ಪಿಸಿದನು, ದಕ್ಷಿಣಸ್ಯಾಂ - ದಕ್ಷಿಣದ್ವಾರದಲ್ಲಿ, ಮಹಾವೀರ್ಯೌ - ಮಹಾ ಪರಾಕ್ರಮಶಾಲಿಗಳಾದ, ಮಹಾ....ರೌ - ಮಹಾಪಾರ್ಶ್ವ ಮಹೋದರರನ್ನು, ವ್ಯಾದಿದೇಶ - ಆಜ್ಞಾಪಿಸಿದನು, || ೧೭ || ಅಥ - ಬಳಿಕ, ಪಶ್ಚಿಮಾಯಾಂದ್ವಾರಿ - ಪಡವಲು ಬಾಗಿಲಲ್ಲಿ, ಬಹುಭಿಃ - ಅನೇಕರಾದ, ರಾಕ್ಷಸೈಃ - ಅಸುರರಿಂದ, ವೃತಂ - ಸುತ್ತುವರೆದ, ಮಹಾಮಾಯಂ - ಬಹು ಮಾಯಾವಂತನಾದ, ಪುತ್ರಂ - ಮಗನಾದ, ಇಂದ್ರಜಿತಂ - ಇಂದ್ರಜಿತ್ತುವನ್ನು, ತಥಾ - ಹಾಗೆಯೇ, ವ್ಯಾದಿದೇಶ - ಆಜ್ಞಾಪಿಸಿದನು. || ೧೮ || ಉತ್ತರಸ್ಯಾಂಪುರದ್ವಾರಿ - ಉತ್ತರದ ಕಡೆಯಲ್ಲಿರುವ ಪಟ್ಟಣದ ಬಾಗಿಲಲ್ಲಿ, ಶುಕಸಾರಣೌ - ಶುಕಸಾರಣರನ್ನು, ವ್ಯಾದಿಶ್ಯ - ಆಜ್ಞಾಪಿಸಿ, ಸ್ವಯಂ - ತಾನೂ ಕೂಡ, ಅತ್ರ - ಈ ಬಾಗಿಲಲ್ಲಿ, ಭವಿಷ್ಯಾಮೀತಿ-ಇರುವೆನೆಂದು, ತಾನ್ಮಂತ್ರಿಣಃ-ಆ ಮಂತ್ರಿಗಳನ್ನು ಕುರಿತು, ಉವಾಚಹ-ಹೇಳಿದನು. || ೧೯ || ಮಹಾ....ಮಂ - ಮಹಾ ವೀರ್ಯವೂ, ಪರಾಕ್ರಮವೂ ಉಳ್ಳ, ವಿರೂಪಾಕ್ಷಂ - ವಿರೂಪಾಕ್ಷನೆಂಬ, ರಾಕ್ಷಸಂ - ರಾಕ್ಷಸನನ್ನು, ಮಧ್ಯಮೇಗುಲ್ಮೇ - ಪಟ್ಟಣದ ಮಧ್ಯದಲ್ಲಿರುವ ಸೈನ್ಯದ ಗುಂಪಿನಲ್ಲಿ, ಬಹುಭಿಃ - ಅನೇಕರಾದ, ರಾಕ್ಷಸೈಸ್ಸಹ - ರಾಕ್ಷಸರೊಡನೆ, ಸ್ಥಾಪಯತ್ - ಇರಿಸಿದನು. || ೨೦ || ರಾಕ್ಷಸಪುಂಗವಃ - ರಾಕ್ಷಸಶ್ರೇಷ್ಠನಾದ ರಾವಣನು, ಕಾಲಚೋದಿತಃ - ಕಾಲಪುರುಷನಿಂದ ಪ್ರೇರಿತನಾದಕಾರಣ, ಏವಂ - ಈ ಪರಿಯಾಗಿ, ಲಂಕಾಯಾಃ - ಲಂಕಾಪಟ್ಟಣಕ್ಕೆ, ವಿಧಾನಂ - ರಕ್ಷಣವನ್ನು, ಕೃತ್ವಾ - ಮಾಡಿ, ಆತ್ಮಾನಂ - ತನ್ನನ್ನು, ಕೃತಕೃತ್ಯಮಿವ - ಕೃತಾರ್ಥನನ್ನಂತೆ, ಮನ್ಯತೇ - ತಿಳಿದುಕೊಂಡನು. || ೨೧ || ತತಃ - ಬಳಿಕ, ಸಃ - ಆ ರಾವಣನು, ಪುರಸ್ಯ - ಪಟ್ಟಣಕ್ಕೆ, ಪುಷ್ಕಲಂ - ಸಂಪೂರ್ಣವಾದ, ವಿಧಾನಂ - ರಕ್ಷಣವನ್ನು, ಆಜ್ಞಾಪ್ಯ - ಆಜ್ಞಾಪಿಸಿ,

---

ದ್ವಾರ ರಕ್ಷಣೆಗಾಗಿ ಮಹಾಪಾರ್ಶ್ವಮಹೋದರರನ್ನೂ, ಪಶ್ಚಿಮದ್ವಾರ ರಕ್ಷಣೆಗಾಗಿ ತನ್ನ ಮಗನಾದ ಮಹಾ ಮಾಯಾವಿಯಾದ ಇಂದ್ರಜಿತ್ತುವನ್ನು ಅನೇಕ ಮಂದಿ ರಾಕ್ಷಸರೊಡಗೂಡಿದವನನ್ನಾಗಿಯೂ, ಉತ್ತರದ್ವಾರ ರಕ್ಷಣೆಗಾಗಿ ಶುಕಸಾರಣರನ್ನೂ ನಿಯಮಿಸಿ, ಆತನೂ ಸಹ ಬಾಗಿಲಿನಲ್ಲಿಯೇ ನಿಲ್ಲುವುದಾಗಿ ಮಂತ್ರಿಗಳಿಗೆ ಹೇಳಿದನು. ಇದಾದಮೇಲೆ ಆ ರಾವಣನು ಮಧ್ಯಗುಲ್ಮದಲ್ಲಿ ಮಹಾ ಪರಾಕ್ರಮಿಯಾದ ವಿರುಪಾಕ್ಷನನ್ನು ನಿಲ್ಲಿಸಿದನು. ಹೀಗೆ ತನ್ನ ಸೇನೆಯನ್ನು ವಿಭಾಗಮಾಡಿ ನಿಲ್ಲಿಸಿದ ಬಳಿಕ ಕಾಲಚೋದಿತನಾದ ಆ ರಾವಣನು ತಾನು ಕೃತಕೃತ್ಯನಾದನೆಂದು ತಿಳಿದನು. ಈ ರೀತಿ ಲಂಕಾರಕ್ಷಣೆಗಾಗಿ ಸೇನಾವಿಧಾನವನ್ನು ಆಜ್ಞಾಪಿಸಿ ಆ ರಾವಣನು ತನ್ನ ಮಂತ್ರಿಗಳೆಲ್ಲರನ್ನೂ ಕಳುಹಿಸಿಕೊಟ್ಟನು. ಅವರೆಲ್ಲರೂ ತಮ್ಮ ಪ್ರಭುವ

ವಿಸರ್ಜಯಾಮಾಸ ತತಸ್ಸಮಂತ್ರಿಣೋ
ವಿಧಾನಮಾಜ್ಞಾಪ್ಯ ಪುರಸ್ಯ ಪುಷ್ಕಲಂ ।
ಜಯಾಶಿಷಾ ಮಂತ್ರಿಗಣೇನ ಪೂಜಿತೋ
ವಿವೇಶಚಾಂತಃಪುರಮೃದ್ಧಿಮನ್ಮಹತ್ ॥ ೨೨ ॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಷಟ್ತ್ರಿಂಶಸ್ಸರ್ಗಃ



ಮಂತ್ರಿಣಃ - ಮಂತ್ರಿಗಳನ್ನು, ವಿಸರ್ಜಯಾಮಾಸ-ಕಳುಹಿಸಿಕೊಟ್ಟನು, ಮಂತ್ರಿಗಣೇನ - ಮಂತ್ರಿಗಳ ಸಮೂಹದಿಂದ, ಜಯಾಶೀಷಾ - ಜಯಾಶೀರ್ವಾದದಿಂದ, ಪೂಜಿತಃ - ಪೂಜಿಸಲ್ಪಟ್ಟವನಾಗಿ, ಋದ್ಧಿಮತ್ - ಸಕಲೈಶ್ವರ್ಯವುಳ್ಳ, ಮಹತ್ - ದೊಡ್ಡದಾದ, ಅಂತಃಪುರಂಚ - ಅಂತಃಪುರವನ್ನು ಕುರಿತು, ವಿವೇಶ - ಹೊಕ್ಕನು. ॥ ೨೨ ॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಷಟ್ತ್ರಿಂಶಸ್ಸರ್ಗಃ.



ವನ್ನು ಜಯಜಯಕಾರಗಳಿಂದ ಸ್ತುತಿಸಿ ತೆರಳಿದರು. ಆಮೇಲೆ ಆ ರಾಕ್ಷಸಪ್ರಭುವು ತನ್ನ ಅತಃಪುರಕ್ಕೆ ತೆರಳಿದನು. ॥ ೧೬–೨೨ ॥

ಇಂತಿದು ಮಾಲ್ಯವತ್ಕೃತ ರಾವಣೋಪದೇಶವೆಂಬ ಮೂವತ್ತಾರನೆಯ
ಸರ್ಗವು ಸಮಾಪ್ತವಾದುದು.



# ಯುದ್ಧಕಾಂಡೇ ಸಪ್ತತ್ರಿಂಶಸ್ಸರ್ಗಃ

ನರವಾನರರಾಜೌ ತೌ ಸಚ ವಾಯುಸುತಃ ಕಪಿಃ । ಜಾಂಬವಾನೃಕ್ಷರಾಜಶ್ಚ ರಾಕ್ಷಸಶ್ಚ ವಿಭೀಷಣಃ ॥ ೧ ॥ ಅಂಗದೋ ವಾಲಿಪುತ್ರಶ್ಚ ಸೌಮಿತ್ರಿಃ ಶರಭಃ ಕಪಿಃ । ಸುಷೇಣಸ್ಸಹದಾಯಾದೋ ಮೈಂದೋ ದ್ವಿವಿದಏವಚ ॥ ೨ ॥ ಗಜೋ ಗವಾಕ್ಷಃ ಕುಮುದೋ ನಲೋಽಥ ಪನಸಸ್ತಥಾ । ಅಮಿತ್ರವಿಷಯಂ ಪ್ರಾಪ್ತಾಸ್ಸಮವೇತಾಸ್ಸಮರ್ಥಯನ್ ॥ ೩ ॥ "ಇಯಂ ಸಾ ಲಕ್ಷ್ಯತೇ ಲಂಕಾ ಪುರೀ ರಾವಣಪಾಲಿತಾ । ಸಾಸುರೋರಗಗಂಧರ್ವೈರಮರೈರಪಿ ದುರ್ಜಯಾ ॥ ೪ ॥ ಕಾರ್ಯಸಿದ್ಧಿಂ ಪುರಸ್ಕೃತ್ಯ ಮಂತ್ರಯಧ್ವಂ

---

ಅಥ - ಅನಂತರದಲ್ಲಿ, ನರ....ಜೌ - ಮನುಷ್ಯಕಪಿರಾಜನಾದ, ತೌ - ಆ ಸುಗ್ರೀವ ರಾಮರೂ, ಕಪಿಃ - ವಾನರನಾದ, ವಾಯುಸುತಃ - ವಾಯುಪುತ್ರನಾದ, ಸಚ - ಆ ಆಂಜನೇಯನೂ, ಋಕ್ಷರಾಜಃ - ಕರಡಿಗಳಿಗೆ ದಣಿಯಾದ, ಜಾಂಬವಾಂಶ್ಚ - ಜಾಂಬವಂತನೂ, ರಾಕ್ಷಸಃ - ರಾಕ್ಷಸನಾದ, ವಿಭೀಷಣಶ್ಚ-ವಿಭೀಷಣನೂ, ವಾಲಿಪುತ್ರಃ-ವಾಲಿಯ ಮಗನಾದ, ಅಂಗದಶ್ಚ-ಅಂಗದನೂ, ಸೌಮಿತ್ರಿಃ - ಲಕ್ಷ್ಮಣನೂ, ಶರಭಃ - ಶರಭನೆಂಬ, ಕಪಿಃ - ವಾನರನೂ, ಸಹದಾಯಾದಃ - ಬಂಧುಗಳಿಂದ ಕೂಡಿದ, ಸುಷೇಣಃ - ಸುಷೇಣನೂ, ಮೈಂದಃ - ಮೈಂದನು, ದ್ವಿವಿದಏವಚ - ದ್ವಿವಿದನೂ, ಗಜಃ-ಗಜನು, ಗವಾಕ್ಷಃ-ಗವಾಕ್ಷನೂ, ಕುಮುದಃ-ಕುಮುದನೂ, ತಥಾ-ಹಾಗೆಯೇ, ನಲಃ-ನಲನೂ, ಪನಸಃ - ಪನಸನೂ, ಅಮಿತ್ರವಿಷಯಂ - ಶತ್ರುವೇಷವನ್ನು, ಪ್ರಾಪ್ತಾಃ - ಹೊಂದಿದವರಾಗಿ, ಸಮವೇತಾಃ - ಗುಂಪುಸೇರಿ, ಸಮರ್ಥಯನ್ - ಆಲೋಚಿಸಿದರು. ॥ ೧-೩ ॥ ರಾವಣಪಾಲಿತಾ - ರಾವಣನಿಂದ ಸಂರಕ್ಷಿತವಾದ, ಸೇಯಂಲಂಕಾಪುರೀ - ಆ ಈ ಲಂಕಾಪಟ್ಟಣವು, ಲಕ್ಷ್ಯತೇ - ಕಾಣಲ್ಪಡುತ್ತದೆ, ಸಾಸು....ರೈಃ - ಅಸುರರೂ, ಸರ್ಪಗಳೂ, ಗಂಧರ್ವರೂ, ಎಂಬಿವರಿಂದೊಡಗೂಡಿದ, ಅಮರೈರಪಿ - ದೇವತೆಗಳಿಂದಲೂ ಕೂಡ, ದುರ್ಜಯಾ - ಜಯಿಸಲಸಾಧ್ಯವಾಗಿದೆ, ಅತ್ರ - ಈ ಪಟ್ಟಣದಲ್ಲಿ, ರಾಕ್ಷಸಾಧಿಪಃ ರಾಕ್ಷಸರಿಗೆ ಒಡೆಯನಾದ, ರಾವಣಃ-ರಾವಣನು, ನಿತ್ಯಂ-ಯಾವಾ

---

ಇತ್ತ ವಾನರಾಧಿಪತಿಯಾದ ಸುಗ್ರೀವನೂ, ಮಾನವಾಧೀಶನಾದ ಶ್ರೀರಾಮಮೂರ್ತಿಯೂ, ವಾಯುಪುತ್ರನಾದ ಹನುಮಂತನೂ, ಭಲ್ಲೂಕಾಧಿಪನಾದ ಜಾಂಬವಂತನೂ, ರಾಕ್ಷಸನಾಥನಾದ ವಿಭೀಷಣನೂ, ವಾಲಿಪುತ್ರನಾದ ಅಂಗದನೂ, ಲಕ್ಷ್ಮಣನೂ, ಶರಭ, ಸುಷೇಣ, ಮೈಂದ, ದ್ವಿವಿದ, ಗಜ, ಗವಾಕ್ಷ, ಕುಮುದ, ನಲ, ಪನಸನೇ ಮೊದಲಾದವರೂ ಒಟ್ಟುಗೂಡಿ ಶತ್ರುವಾದ ರಾವಣನನ್ನು ಜಯಿಸುವ ವಿಧಾನವನ್ನು ಕುರಿತು ಯಥೋಚಿತವಾಗಿ ಮಂತ್ರಾಲೋಚನೆ ಮಾಡಿದರು. ಮೊದಲು ಆ ವಾನರಸೇನೆಯಲ್ಲಿದ್ದವರೆಲ್ಲರೂ "ಎಲೈ ವಾನರೋತ್ತಮರೇ! ಇದೋ ನೋಡಿರಿ; ರಾವಣಪಾಲಿತವಾದ ಲಂಕಾನಗರವು ಇಲ್ಲಿಯೇ ಕಾಣುತ್ತಿರುವುದು. ಇದು ಸುರಪನ್ನಗ ಗಂಧರ್ವರಿಂದಾಗಲಿ, ಯಾರಿಂದಲೇ ಆಗಲಿ ಜಯಿಸಲಸದಳವಾದುದು; ಆದುದರಿಂದ ನೀವೆಲ್ಲರೂ ಕಾರ್ಯಸಿದ್ಧಿಯನ್ನು ಪುರಸ್ಕರಿಸಿ

ವಿನಿರ್ಣಯೇ । ನಿತ್ಯಂ ಸನ್ನಿಹಿತೋಽಪ್ಯತ್ರ ರಾವಣೋ ರಾಕ್ಷಸಾಧಿಪಃ" ॥ ೫ ॥ ತಥಾ ತೇಷು ಬ್ರುವಾಣೇಷು ರಾವಣಾವರಜೋಽಬ್ರವೀತ್ । ವಾಕ್ಯಮಗ್ರಾಮ್ಯಪದವತ್ ಪುಷ್ಕಲಾರ್ಥಂ ವಿಭೀಷಣಃ ॥೬॥ "ಅನಲಃ ಶರಭಶ್ಚೈವ ಸಂಪಾತಿಃ ಪ್ರಘಸಸ್ತಥಾ । ಗತ್ವಾ ಲಂಕಾಂ ಮಮಾಮಾತ್ಯಾಃ ಪುರೀಂ ಪುನರಿಹಾಗತಾಃ ॥ ೭ ॥ ಭೂತ್ವಾ ಶಕುನಯಸ್ಸರ್ವೇ ಪ್ರವಿಷ್ಟಾಶ್ಚ ರಿಪೋರ್ಬಲಂ । ವಿಧಾನಂ ವಿಹಿತಂ ಯಚ್ಚ ತದ್ದೃಷ್ಟ್ವಾ ಸಮುಪಸ್ಥಿತಾಃ ॥೮॥ ಸಂವಿಧಾನಂ ಯದಾಹುಸ್ತೇ ರಾವಣಸ್ಯ ದುರಾತ್ಮನಃ । ರಾಮ ! ತದ್ಬ್ರುವತಸ್ಸರ್ವಂ ಯಥಾತತ್ತ್ವೇನ ಮೇ ಶೃಣು ॥೯॥ ಪೂರ್ವಂ ಪ್ರಹಸ್ತಸ್ಸಬಲೋ

---

ಗಲೂ, ಸನ್ನಿಹಿತಃ - ಕಾದುಕೊಂಡಿದ್ದಾನೆ, ಕಾರ್ಯಸಿದ್ಧಿಂ - ಕಾರ್ಯಸಿದ್ಧಿಯನ್ನು, ಪುರಸ್ಕೃತ್ಯ - ಮುಂದುಮಾಡಿಕೊಂಡು, ವಿನಿರ್ಣಯೇ - ನಿಶ್ಚಯವಿಷಯದಲ್ಲಿ, ಮಂತ್ರಯಧ್ವಂ - ಆಲೋಚಿಸಿರಿ. ॥೪-೫॥ ತಥಾ-ಆ ಪ್ರಕಾರವಾಗಿ, ತೇಷು-ಆ ವಾನರರು, ಬ್ರುವಾಣೇಷು-ಹೇಳಲು, ರಾವಣಾವರಜಃ - ರಾವಣನ ತಮ್ಮನಾದ, ವಿಭೀಷಣಃ-ವಿಭೀಷಣನು, ಅಗ್ರಾಮ್ಯಪದವತ್-ನೀಚಪದಗಳಿಲ್ಲದಂತಿರುವ, ಪುಷ್ಕಲಾರ್ಥಂ - ವಿಶೇಷವಾದ ಅರ್ಥವುಳ್ಳ, ವಾಕ್ಯಂ - ಮಾತನ್ನು, ಅಬ್ರವೀತ್ - ನುಡಿದನು. ॥ ೬ ॥ ಮಮ - ನನ್ನ, ಅಮಾತ್ಯಾಃ - ಮಂತ್ರಿಗಳಾದ, ಅನಲಃ - ಅನಲನು, ಶರಭಶ್ಚೈವ - ಶರಭನೂ, ಸಂಪಾತಿಃ - ಸಂಪಾತಿಯೂ, ತಥಾ - ಹಾಗೆಯೇ, ಪ್ರಘಸಃ - ಪ್ರಘಸನೂ ಎಂಬ ಈ ನಾಲ್ವರೂ, ಲಂಕಾಪುರೀಂ- ಲಂಕಾಪಟ್ಟಣವನ್ನು ಕುರಿತು, ಗತ್ವಾ - ಹೋಗಿ, ಪುನಃ - ಮತ್ತೂ, ಇಹ - ಇಲ್ಲಿಗೆ, ಆಗತಾಃ - ಬಂದರು. ॥ ೭ ॥ ಸರ್ವೇ - ಸಮಸ್ತರೂ, ಶಕುನಯೋಭೂತ್ವಾ - ಪಕ್ಷಿಗಳಾಗಿ, ರಿಪೋರ್ಬಲಂ - ಶತ್ರುಬಲವನ್ನು, ಪ್ರವಿಷ್ಟಾಃ - ಪ್ರವೇಶಿಸಿ, ಯದ್ವಿಧಾನಂ - ಯಾವ ನಗರರಕ್ಷಣರೂಪವಾದ ಕಾರ್ಯವು, ವಿಹಿತಂ - ಮಾಡಲ್ಪಟ್ಟಿತೋ, ತತ್ - ಅದನ್ನು, ದೃಷ್ಟ್ವಾ - ಕಂಡು, ಸಮುಪಸ್ಥಿತಾಃ - ಹೊರಟುಬಂದರು, ತೇ - ಅವರು, ದುರಾತ್ಮನಃ - ದುರ್ಬುದ್ಧಿಯುಳ್ಳ, ರಾವಣಸ್ಯ - ರಾವಣನ, ಯತ್ಸಂವಿಧಾನಂ - ಯಾವ ಸಂಧಾನವನ್ನು, ಆಹುಃ - ಹೇಳಿದರೋ, ಹೇ ರಾಮ - ಎಲೈ ಶ್ರೀರಾಮನೇ, ತತ್ಸರ್ವಂ - ಅದನ್ನೆಲ್ಲ, ಯಥಾತತ್ತ್ವೇನ - ಯಥಾರ್ಥದಿಂದ, ಬ್ರುವತಃ - ಹೇಳುವ, ಮೇ - ನನ್ನಿಂದ, ಶೃಣು - ಕೇಳು. ॥೮-೯॥ ಪೂರ್ವಂದ್ವಾರಂ - ಪೂರ್ವದ್ವಾರವನ್ನು, ಪ್ರಹಸ್ತಃ - ಪ್ರಹಸ್ತನೆಂಬುವನು, ಸಬಲಃ - ಸೈನ್ಯಸಮೇತನಾಗಿ, ಆಸಾದ್ಯ - ಹೊಂದಿ, ತಿಷ್ಠತಿ - ಇದ್ದಾನೆ,

---

ಈಗ ಉಚಿತ ರೀತಿಯಲ್ಲಿ ಮಂತ್ರಾಲೋಚನೆ ಮಾಡಿರಿ. ಈ ಪಟ್ಟಣದಲ್ಲಿ ರಾಕ್ಷಸಪ್ರಭುವಾದ ರಾವಣಾಸುರನು ಯಾವಾಗಲೂ ವಾಸಿಸುತ್ತಿರುವನು" ಎಂದು ಹೇಳಿದರು. ॥ ೧-೫ ॥ ಅವರು ಈ ರೀತಿ ನುಡಿಯುತ್ತಿರಲು ರಾವಣಾನುಜನಾದ ವಿಭೀಷಣನು, ಗ್ರಾಮ್ಯಪದಗಳಿಲ್ಲದ ಸುಸಂಸ್ಕೃತವೂ, ಸಂಪೂರ್ಣವೂ, ಸಾರಭೂತವೂ ಆದ ಅರ್ಥಸಂಪತ್ತಿಯುಳ್ಳ ಮಾತನ್ನು ಹೇಳಬಯಿಸಿ ಶ್ರೀರಾಮನನ್ನು ಕುರಿತು, "ರಘುಕುಲೋತ್ತಮಾ ! ನನ್ನ ಮಂತ್ರಿಗಳಾದ ನಲ, ಶರಭ, ಸಂಪಾತಿ, ಪ್ರಘಸರೆಂಬ ಇವರು ನಾಲ್ವರೂ ಲಂಕಾಪಟ್ಟಣಕ್ಕೆ ಹೋಗಿ ಈಗ ತಾನೇ ಬಂದಿರುವರು. ಇವರು ಪಕ್ಷಿರೂಪಗಳನ್ನು ಧರಿಸಿ ಶತ್ರುವಾದ ರಾವಣನ ಸೇನೆಯನ್ನು ಹೊಕ್ಕು ಆ ರಾವಣನು ನಿಶ್ಚಯಿಸಿರುವ ವಿಷಯಗಳೆಲ್ಲವನ್ನೂ ತಿಳಿದು ಬಂದಿರುವರು. ಇವರು ದುರಾತ್ಮನಾದ ಆ ರಾವಣನ ವೃತ್ತಾಂತವೆಲ್ಲವನ್ನೂ ನನಗೆ ತಿಳಿಸಿದ್ದಾರೆ. ಎಲೈ ಶ್ರೀರಾಮಚಂದ್ರನೇ ! ಈಗ ನಾನು ಆ ವಿಷಯಗಳೆಲ್ಲವನ್ನೂ ಹೇಳುವೆನು ; ಲಾಲಿಸಬೇಕು. ಪ್ರಹಸ್ತ

ದ್ವಾರಮಾಸಾದ್ಯ ತಿಷ್ಠತಿ । ದಕ್ಷಿಣಂಚ ಮಹಾವೀರ್ಯೌ ಮಹಾಪಾರ್ಶ್ವಮಹೋದರೌ ॥ ೧೦ ॥ ಇಂದ್ರಜಿತ್ ಪಶ್ಚಿಮದ್ವಾರಂ ರಾಕ್ಷಸೈರ್ಬಹುಭಿರ್ವೃತಃ । ಪಟ್ಟಿಸಾಸಿಧನುಷ್ಮದ್ಭಿಃ ಶೂಲಮುದ್ಗರಪಾಣಿಭಿಃ ॥ ೧೧ ॥ ನಾನಾಪ್ರಹರಣೈಃ ಶೂರೈರಾವೃತೋ ರಾವಣಾತ್ಮಜಃ । ರಾಕ್ಷಸಾನಾಂ ಸಹಸ್ರೈಸ್ತು ಬಹುಭಿಃ ಶಸ್ತ್ರಪಾಣಿಭಿಃ ॥ ೧೨ ॥ ಯುಕ್ತಃ ಪರಮಸಂವಿಗ್ನೋ ರಾಕ್ಷಸೈರ್ಬಹುಭಿರ್ವೃತಃ । ಉತ್ತರಂ ನಗರದ್ವಾರಂ ರಾವಣಸ್ಸ್ವಯಮಾಸ್ಥಿತಃ ॥ ೧೩ ॥ ವಿರೂಪಾಕ್ಷಸ್ತು ಮಹತಾ ಶೂಲಖಡ್ಗಧನುಷ್ಮತಾ । ಬಲೇನ ರಾಕ್ಷಸೈಸ್ಸಾರ್ಧಂ ಮಧ್ಯಮಂ ಗುಲ್ಮಮಾಸ್ಥಿತಃ ॥ ೧೪ ॥ ಏತಾನೇವಂ ವಿಧಾನ್

ಮಹಾವೀರ್ಯೌ-ಬಹುಪರಾಕ್ರಮಿಗಳಾದ, ಮಹಾ....ರೌ-ಮಹಾಪಾರ್ಶ್ವಮಹೋದರರು, ದಕ್ಷಿಣಂ-ದಕ್ಷಿಣದ್ವಾರವನ್ನೂ, ರಾವಣಾತ್ಮಜಃ-ರಾವಣನಪುತ್ರನಾದ, ಇಂದ್ರಜಿತ್-ಇಂದ್ರಜಿತುವು, ಬಹುಭಿಃ-ಅನೇಕರಾದ, ರಾಕ್ಷಸೈಃ - ರಕ್ಕಸರಿಂದ, ವೃತಃ - ಪರಿವೃತನಾಗಿ, ಪಶ್ಚಿಮದ್ವಾರಂ - ಪಡವಲಬಾಗಿಲನ್ನೂ, ಆಸಾದ್ಯ - ಹೊಂದಿ, ಪಟ್ಟಿ....ದ್ಭಿಃ - ಪಟ್ಟಾಕತ್ತಿಗಳು, ಚಿಕ್ಕ ಕತ್ತಿಗಳು, ಬಿಲ್ಲುಗಳೂ ಉಳ್ಳ, ಶೂಲ....ಭಿಃ - ಶೂಲಾಯುಧಗಳೂ, ಮುದ್ಗರಾಯುಧಗಳೂ ಹಸ್ತಗಳಲ್ಲಿ ಉಳ್ಳ, ನಾನಾ....ಣೈಃ - ನಾನಾವಿಧವಾದ ಆಯುಧಗಳುಳ್ಳ, ಶೂರೈಃ - ಶೂರರಿಂದ, ಆವೃತಃ - ಸುತ್ತುವರೆದವರಾಗಿ, ತಿಷ್ಠತಿ - ಇದ್ದಾನೆ. ॥ ೧೦-೧೧ ॥ ಬಹುಭಿಃ - ಅನೇಕರಾದ, ಶಸ್ತ್ರಪಾಣಿಭಿಃ - ಶಸ್ತ್ರಗಳೇ ಹಸ್ತಗಳಲ್ಲಿ ಉಳ್ಳ, ರಾಕ್ಷಸೈಃ - ಮುಖ್ಯ ರಾಕ್ಷಸರಿಂದಲೂ, ರಾಕ್ಷಸಾನಾಂ - ರಕ್ಕಸರ, ಸಹಸ್ರೈಃ - ಸಾವಿರಗಳಿಂದಲೂ, ವೃತ್ತಂ - ಸುತ್ತುವರೆದವನಾಗಿ, ಪರಂ - ವಿಶೇಷವಾಗಿ, ಅಸಂವಿಗ್ನಃ - ಹೆದರಿಕೆಯಿಲ್ಲದವನಾಗಿ, ರಾವಣಃ - ರಾವಣನು, ಸ್ವಯಂ - ತಾನೆ, ಉತ್ತರಂನಗರದ್ವಾರಂ - ಉತ್ತರಬಾಗದಲ್ಲಿರುವ ಊರಬಾಗಿಲುನಲ್ಲಿ, ಆಸ್ಥಿತಃ-ಇದ್ದಾನೆ. ॥೧೨-೧೩॥ ವಿರೂಪಾಕ್ಷಸ್ತು-ವಿರೂಪಾಕ್ಷನಾದರೆ, ಶೂಲ....ತಾ-ತ್ರಿಶೂಲಗಳೂ, ಕತ್ತಿಗಳೂ, ಬಿಲ್ಲುಗಳೂ ಉಳ್ಳ, ಮಹತಾ - ಬಹಳವಾದ, ಬಲೇನ - ಸೈನ್ಯದಿಂದ, ರಾಕ್ಷಸೈಸ್ಸಾರ್ಧಂ - ಮುಖ್ಯ ರಾಕ್ಷಸರೊಡನೆ, ಮಧ್ಯಮಂಗುಲ್ಮಂ - ಮಧ್ಯಪ್ರದೇಶದಲ್ಲಿರುವ ಸೈನ್ಯವನ್ನು, ಆಸ್ಥಿತಃ - ಹೊಂದಿದ್ದಾನೆ. ॥೧೪॥ ಏವಂವಿಧಾನ್ - ಈ ರೀತಿಯಾಗಿರುವ, ಏತಾನ್‌ಗುಲ್ಮಾನ್ -

ನೆಂಬವನು ಲಂಕಾಪಟ್ಟಣದ ಪೂರ್ವದ್ವಾರದಲ್ಲಿ ಸೈನ್ಯಸಮೇತನಾಗಿ ಕಾವಲಿರುವನು. ದಕ್ಷಿಣ ದ್ವಾರದಲ್ಲಿ ಮಹಾ ಪರಾಕ್ರಮಿಗಳಾದ ಮಹಾಪಾರ್ಶ್ವಮಹೋದರರು ಕಾವಲಿದ್ದಾರೆ. ॥೬–೧೦॥ ಅನೇಕ ಕೋಟಿ ರಾಕ್ಷಸರಿಂದ ಕೂಡಿದ ಇಂದ್ರಜಿತ್ತುವು ಪಶ್ಚಿಮ ದ್ವಾರವನ್ನು ಕಾಯುತ್ತಿರುವನು. ಆ ಇಂದ್ರಜಿತ್ತುವಿಗೆ ಸಹಾಯಕರಾಗಿರುವ ರಾಕ್ಷಸರೆಲ್ಲರೂ ಪಟ್ಟಿಶಗಳು, ಖಡ್ಗಗಳು, ಧನುಸ್ಸುಗಳು, ಶೂಲಗಳು, ಮುದ್ಗರಗಳು ಇವೇ ಮೊದಲಾದ ಆಯುಧಗಳನ್ನು ಧರಿಸಿದ್ದಾರೆ. ನಾನಾವಿಧಗಳಾದ ಶಸ್ತ್ರಗಳನ್ನು ಧರಿಸಿರುವವರೂ, ಮಹಾ ಶೂರರೂ, ಅಸಂಖ್ಯಾತರೂ ಆದ ಆ ರಾಕ್ಷಸರಿಂದ ಕೂಡಿದ ಆ ಇಂದ್ರಜಿತ್ತುವು ಯುದ್ಧೋನ್ಮುಖನಾಗಿ ಬಹಳ ಉದ್ವೇಗಗೊಂಡಿರುವನು. ಇದೂ ಅಲ್ಲದೆ ಸ್ವಯಂ ರಾವಣಾಸುರನೇ ಸಹಸ್ರಾರು ರಾಕ್ಷಸರೊಡಗೂಡಿ ಉತ್ತರ ದ್ವಾರದಲ್ಲಿ ಕಾವಲಿದ್ದಾನೆ. ವಿರೂಪಾಕ್ಷನೂ ಶೂಲ ಖಡ್ಗ ಧನುಸ್ಸುಗಳನ್ನು ಧರಿಸಿದವನಾಗಿ ಅನೇಕ ರಾಕ್ಷಸರೊಡಗೂಡಿ ಲಂಕಾಸೈನ್ಯದ ಮಧ್ಯೆ ಗುಲ್ಮವನ್ನು ರಕ್ಷಿಸುತ್ತಿದ್ದಾನೆ. ಶ್ರೀರಾಮಾ ! ಈ ರೀತಿ ಲಂಕಾನಗರದ ಗುಲ್ಮಗಳೆಲ್ಲವನ್ನೂ

ಗುಲ್ಮಾ೯ ಲಂಕಾಯಾಂ ಸಮುದೀಕ್ಷ್ಯತೇ । ಮಾಮಕಾಸ್ಸಚಿವಾಸ್ಸರ್ವೇ ಪುನಃ ಶೀಘ್ರ ಮಿಹಾಗತಾಃ ||೧೫|| ಗಜಾನಾಂಚ ಸಹಸ್ರಂಚ ರಥಾನಾಮಯುತಂಪುರೇ । ಹಯ ನಾಮಯುತೇ ದ್ವೇಚ ಸಾಗ್ರಕೋಟಿಶ್ಚ ರಕ್ಷಸಾಂ || ೧೬ || ವಿಕ್ರಾಂತಾ ಬಲವಂತಶ್ಚ ಸಂಯುಗೇಷ್ವಾತತಾಯಿನಃ । ಇಷ್ಟಾ ರಾಕ್ಷಸರಾಜಸ್ಯ ನಿತ್ಯಮೇತೇ ನಿಶಾಚರಾಃ ||೧೭|| ಏಕೈಕಸ್ಯಾಽತ್ರ ಯುದ್ಧಾರ್ಥೇ ರಾಕ್ಷಸಸ್ಯ ವಿಶಾಂಪತೇ! । ಪರಿವಾರಸ್ಸಹಸ್ರಾಣಾಂ ಸಹಸ್ರಮುಪತಿಷ್ಠತೇ" ||೧೮|| ಏತಾಂ ಪ್ರವೃತ್ತಿಂ ಲಂಕಾಯಾಂ ಮಂತ್ರಿಪ್ರೋಕ್ತಾಂ ವಿಭೀಷಣಃ । ಏವಮುಕ್ತ್ವಾ ಮಹಾಬಾಹೂ ರಾಕ್ಷಸಾಂಸ್ತಾನದರ್ಶಯತ್ । ಲಂಕಾ ಯಾಂ ಸಚಿವೈಸ್ಸರ್ವಂ ರಾಮಾಯ ಪ್ರತ್ಯವೇದಯತ್ || ೧೯ || ರಾಮಂ ಕಮಲ

ಈ ಸೇನಾನಿವೇಶಗಳನ್ನು, ಲಂಕಾಯಾಂ - ಲಂಕಾಪಟ್ಟಣದಲ್ಲಿ, ಸಮುದೀಕ್ಷ್ಯ - ಕಂಡು, ಮಾಮಕಾಃ- ನನ್ನ ಸಂಬಂಧಿಗಳಾದ, ಸರ್ವೇ - ಸಮಸ್ತರಾದ, ತೇಸಚಿವಾಃ - ಆ ಮಂತ್ರಿಗಳು, ಪುನಃ - ಮತ್ತು, ಶೀಘ್ರಂ - ಜಾಗ್ರತೆಯಾಗಿ, ಇಹ - ಇಲ್ಲಿಗೆ, ಆಗತಾಃ - ಬಂದರು, || ೧೫ || ಪುರೇ - ಪಟ್ಟಣದಲ್ಲಿ, ಗಜಾನಾಂ - ಆನೆಗಳ, ಸಹಸ್ರಂ - ಸಾವಿರವು, ರಥಾನಾಂ - ತೇರುಗಳ, ಅಯುತಂ - ಹತ್ತುಸಾವಿ ರವು, ಹಯಾನಾಂ - ಕುದುರೆಗಳ, ದ್ವೇಅಯುತೇ - ಇಪ್ಪತ್ತುಸಾವಿರವು, ರಕ್ಷಸಾಂ - ರಾಕ್ಷಸರ, ಸಾಗ್ರಕೋಟಿಶ್ಚ - ಸಮಗ್ರವಾದ ಒಂದು ಕೋಟಿಯೂ, (ಸಂತಿ - ಇವೆ), ಏತೇ - ಈ, ನಿಶಾಚರಾಃ- ರಾಕ್ಷಸರು, ರಾಕ್ಷಸರಾಜಸ್ಯ-ರಾಕ್ಷಸಾಧಿಪತಿಯಾದ ರಾವಣನಿಗೆ, ನಿತ್ಯಂ-ಯಾವಾಗಲೂ, ಇಷ್ಟಾಃ- ಇಷ್ಟರು, ವಿಕ್ರಾಂತಾಃ - ಪರಾಕ್ರಮಶಾಲಿಗಳು, ಬಲವಂತಶ್ಚ - ಸಾಮರ್ಥ್ಯವಂತರು, ಸಂಯುಗೇಷು- ಕಾಳಗಗಳಲ್ಲಿ, ಆತತಾಯಿನಃ - ಶತ್ರುಗಳಾದವರು. || ೧೬ ೧೭ || ಹೇ ವಿಶಾಂಪತೇ - ಎಲೈ ಅರಸೇ, ಅತ್ರ - ಈ ಸೈನ್ಯದಲ್ಲಿ, ಏಕೈಕಸ್ಯ - ಒಬ್ಬೊಬ್ಬನಾದ, ರಾಕ್ಷಸಸ್ಯ - ರಕ್ಕಸನಿಗೆ, ಸಹಸ್ರಾಣಾಂ - ಸಹಸ್ರಗಳ, ಸಹಸ್ರಂ - ಸಾವಿರವಾದ, ಪರಿವಾರಃ - ಪರಿವಾರವೂ, ಉಪತಿಷ್ಠತೇ - ಹಿಂದೆ ಬರು ತ್ತದೆ. || ೧೮ || ಮಹಾಬಾಹುಃ - ಮಹಾ ಭುಜಪರಾಕ್ರಮಿಯಾದ, ವಿಭೀಷಣಃ - ವಿಭೀಷಣನು, ಲಂಕಾಯಾಂ - ಲಂಕಾಪಟ್ಟಣದಲ್ಲಿ, ಮಂತ್ರಿಪ್ರೋಕ್ತಾಂ - ಮಂತ್ರಿಗಳಿಂದ ಹೇಳಲ್ಪಟ್ಟ, ಏತಾಂ ಪ್ರವೃತ್ತಿಂ - ಈ ಸಮಾಚಾರವನ್ನು, ಏವಂ - ಈ ಪರಿಯಾಗಿ, ಉಕ್ತ್ವಾ - ಹೇಳಿ, ತಾನ್‌ರಾಕ್ಷಸಾನ್ - ಆ ರಾಕ್ಷಸರನ್ನು, ಅದರ್ಶಯತ್ - ತೋರಿಸಿದನು, ಲಂಕಾಯಾಂ - ಲಂಕಾಪಟ್ಟಣದಲ್ಲಿ, ಸಚಿವೈಃ - ಮಂತ್ರಿಗಳಿಂದ, ಉಕ್ತಾಂ - ಹೇಳಲ್ಪಟ್ಟ, ಸರ್ವಂ - ಸಮಸ್ತವಾದ ವಾರ್ತೆಯನ್ನು, ರಾಮಾಯ -

ಕಾಪಾಡುತ್ತಿರುವ ಆ ರಾಕ್ಷಸರೆಲ್ಲರ ವೃತ್ತಾಂತವನ್ನೂ ತಿಳಿದು ನನ್ನ ಈ ಮಂತ್ರಿಗಳು ಹಿಂತಿರುಗಿ ಬಂದು ನನಗೆ ತಿಳಿಸಿದರು. || ೧೧–೧೫ || ಸಾವಿರ ಆನೆಗಳೂ, ಹತ್ತುಸಾವಿರ ರಥ ಗಳೂ, ಇಪ್ಪತ್ತುಸಾವಿರ ಕುದುರೆಗಳೂ, ಒಂದು ಕೋಟಿ ರಾಕ್ಷಸಸೇನೆಯೂ, ಮಹಾ ಪರಾ ಕ್ರಮವಂತರೂ, ಬಲಾಢ್ಯರೂ, ಯುದ್ಧಸಮರ್ಥರೂ, ರಾವಣಾಸುರನಿಗೆ ಅತ್ಯಂತ ಹಿತರೂ ಆದ ರಾಕ್ಷಸರನೇಕರು ಪ್ರತಿಯೊಬ್ಬ ಯೋಧನಿಗೂ ಸಹಾಯಕರಾಗಿದ್ದಾರೆ. ಎಲೈ ರಾಘ ವನೇ! ಈಗ ನಾನು ಹೇಳಿದ ಪ್ರತಿಯೊಬ್ಬ ಯೋಧನಿಗೂ, ಇತರ ಯೋಧರಿಗೂ ಅಸಂಖ್ಯಾತ ವಾದ ಚತುರಂಗಸೇನೆಯಿರುವುದು.'' ಈ ರೀತಿ ತನ್ನ ಮಂತ್ರಿಗಳು ತನಗೆ ಅರಿಕೆ ಮಾಡಿದ ಲಂಕಾವೃತ್ತಾಂತವೆಲ್ಲವನ್ನೂ ಶ್ರೀರಾಮನಿಗೆ ಅರಿಕೆ ಮಾಡಿದ ತರುವಾಯ ವಿಭೀಷಣನು ಆ ತನ್ನ ನಾಲ್ವರು ಮಂತ್ರಿಗಳನ್ನೂ ಆತನಿಗೆ ತೋರಿದನು. ಆ ಮಂತ್ರಿಗಳಿಂದಲೂ ಶ್ರೀರಾಮ

ಪತ್ರಾಕ್ಷಮಿದಮುತ್ತರಮಬ್ರವೀತ್ । " ರಾವಣಾವರಜಃ ಶ್ರೀಮಾನ್ ರಾಮಪ್ರಿಯ ಚಿಕೀರ್ಷಯಾ ॥ ೨೦ ॥ ಕುಬೇರಂತು ಯದಾ ರಾಮ! ರಾವಣಃ ಪ್ರತ್ಯಯುಧ್ಯತ । ಷಷ್ಟಿಃ ಶತಸಹಸ್ರಾಣಿ ತದಾ ನಿರ್ಯಾಂತಿ ರಾಕ್ಷಸಾಃ॥೨೧॥ ಪರಾಕ್ರಮೇಣ ವೀರ್ಯೇಣ ತೇಜಸಾ ಸತ್ವಗೌರವಾತ್ । ಸದೃಶಾ ಯೇಽತ್ರ ದರ್ಪೇಣ ರಾವಣಸ್ಯ ದುರಾತ್ಮನಃ ॥ ೨೨ ॥ ಅತ್ರ ಮನ್ಯುರ್ನಕರ್ತವ್ಯೋ ರೋಷಯೇ ತ್ವಾಂ ನಭೀಷಯೇ । ಸಮರ್ಥೋ ಹ್ಯಸಿ ವೀರ್ಯೇಣ ಸುರಾಣಾಮಪಿ ನಿಗ್ರಹೇ ॥ ೨೩ ॥ ತದ್ಭವಾಂಶ್ಚತುರಂಗೇಣ ಬಲೇನ

---

ಶ್ರೀರಾಮನಿಗೆ, ಪ್ರತ್ಯವೇದಯತ್ - ತಿಳಿಸಿದನು. ॥ ೧೯ ॥ ರಾವ.... ಜಃ - ರಾವಣನಿಗೆ ತಮ್ಮನಾದ, ಶ್ರೀಮಾನ್ - ಸಂಪದ್ಯುಕ್ತನಾದ ವಿಭೀಷಣನು, ರಾಮ..... ಯಾಃ - ಶ್ರೀರಾಮನಿಗೆ ಹಿಂತವನ್ನುಂಟು ಮಾಡುವ ಬುದ್ಧಿಯಿಂದ, ಕಮಲಪತ್ರಾಕ್ಷಂ - ತಾವರೆ ಎಸಳಿಗೆ ಸಮಾನವಾದ ನೇತ್ರಗಳುಳ್ಳ, ರಾಮಂ- ಶ್ರೀರಾಮನನ್ನು ಕುರಿತು, ಇದಮುತ್ತರಂ - ಈ ಮಾತನ್ನು, ಅಬ್ರವೀತ್ - ನುಡಿದನು. ॥ ೨೦ ॥ ಹೇ ರಾಮ - ಎಲೈ ಶ್ರೀರಾಮನೇ, ಯದಾ - ಯಾವ ಕಾಲದಲ್ಲಿ, ರಾವಣಃ - ರಾವಣನು, ಕುಬೇರಂ ಪ್ರತಿ - ಕುಬೇರನನ್ನು ಕುರಿತು, ಅಯುಧ್ಯತ - ಯುದ್ಧಮಾಡಿದನೋ, ತದಾ - ಆ ಕಾಲದಲ್ಲಿ, ಷಷ್ಟಿ..... ಣಿ - ಅರುವತ್ತುಲಕ್ಷ ಸಂಖ್ಯೆಯುಳ್ಳ, ರಾಕ್ಷಸಾಃ - ರಾಕ್ಷಸರು, ನಿರ್ಯಾಂತಿ - ಹೊರಟು ಬರುತ್ತಿದ್ದರು, ಅತ್ರ - ಈ ಸೈನ್ಯದಲ್ಲಿ, ಪರಾಕ್ರಮೇಣ - ಪರಾಕ್ರಮದಿಂದಲೂ, ವೀರ್ಯೇಣ - ಸಾಮರ್ಥ್ಯದಿಂದಲೂ, ತೇಜಸಾ - ಅಂತಸ್ಸಾರದಿಂದಲೂ, ಸತ್ವಗೌರವಾತ್ - ಧೈರ್ಯಾತಿಶಯ ದಿಂದಲೂ, ದರ್ಪೇಣ - ಗರ್ವದಿಂದಲೂ, ದುರಾತ್ಮನಃ - ದುರ್ಬುದ್ಧಿಯುಳ್ಳ, ರಾವಣಸ್ಯ - ರಾವಣ ನಿಗೆ, ಯೇ-ಯಾರು, ಸದೃಶಾಃ-ಸಮಾನಸ್ಕಂಧರೋ, ತಾದೃಶಾಃ-ಅಂಥಾ ರಾಕ್ಷಸರು, ನಿರ್ಯಾಂತಿ- ಹೊರಟುಬರುವರು. ॥೨೧-೨೨॥ ಅತ್ರ - ಈ ಸೈನ್ಯವರ್ಣನೆಯ ವಿಷಯದಲ್ಲಿ, ಮನ್ಯುಃ - ಕೋಪವು, ನಕರ್ತವ್ಯಃ - ಮಾಡತಕ್ಕದಲ್ಲ, ತ್ವಾಂ - ನಿನ್ನನ್ನು, ರೋಷಯೇ - ರೋಷಯುಕ್ತನನ್ನಾಗಿ ಮಾಡು ತ್ತೇನೆ, ನಭೀಷಯೇ - ಶತ್ರುಗುಣವರ್ಣನೆಯಿಂದ ಹೆದರಿಸಲಿಲ್ಲ, ವೀರ್ಯೇಣ - ಸಾಮರ್ಥ್ಯದಿಂದ, ಸುರಾಣಾಂ - ದೇವತೆಗಳ, ನಿಗ್ರಹೇಪಿ - ನಿಗ್ರಹಿಸುವದರಲ್ಲಿಯೂ, ಸಮರ್ಥಃ - ಘಟಕನು, ಅಸಿಹಿ - ಆಗಿರುವೆಯಷ್ಟೆ. ॥೨೩॥ ತತ್ - ಆ ಕಾರಣದಿಂದ, ಭವಾನ್ - ನೀನು, ಮಹತಾ - ಮಹತ್ತರವಾದ,

---

ನಿಗೆ ಲಂಕಾನಗರ ವೃತ್ತಾಂತವನ್ನು ಅರಿಕೆ ಮಾಡಿಸಿದ ಬಳಿಕ ಆ ವಿಭೀಷಣನು ಕಮಲ ಪತ್ರಾಕ್ಷನಾದ ಆತನನ್ನು ಕುರಿತು ಹೀಗೆ ಹೇಳಿದನು. ॥೧೬-೨೦॥ "ರಾಮಾ! ಪೂರ್ವದಲ್ಲಿ ರಾವಣನು ಕುಬೇರನೊಡನೆ ಯುದ್ಧಮಾಡಿದನು. ಆಗ ರಾವಣನೊಡನೆ ನಾಲ್ಕು ಲಕ್ಷ ಸೇನೆಯು ಹೋಗಿದ್ದಿತು. ಅವರೆಲ್ಲರೂ ಪರಾಕ್ರಮದಲ್ಲಿಯೂ, ವೀರ್ಯದಲ್ಲಿಯೂ, ಬಲ ದಲ್ಲಿಯೂ ದುರಾತ್ಮನಾದ ಆ ರಾವಣನಿಗೆ ಸಮಾನರಾದವರು. ಅಂತಹ ರಾಕ್ಷಸರಿನ್ನೂ ಅನೇಕ ಕೋಟಿಗಳಿರುವರು. ನಾನೀರೀತಿ ಹೇಳುವುದು ನಿನಗೆ ಭಯವನ್ನುಂಟುಮಾಡುವು ದಕ್ಕಾಗಿಯಲ್ಲವೆಂದು ತಿಳಿಯಬೇಕು. ನಾನು ನಿನ್ನಲ್ಲಿರುವ ರೋಷವನ್ನು ಉದ್ರೇಕಗೊಳಿಸು ತ್ತಿರುವೆನು. ರಾಮಾ! ನಾನು ಹೇಳುತ್ತಿರುವ ಶತ್ರುವಿಷಯವನ್ನು ಕೇಳಿ ನನ್ನಲ್ಲಿ ಕೋಪ ಗೊಳ್ಳಬೇಡ. ನೀನು ರಣರಂಗದಲ್ಲಿ ದೇವತೆಗಳನ್ನೂ ನಿಗ್ರಹಿಸಬಲ್ಲ ಸಾಮರ್ಥ್ಯವುಳ್ಳವನು. ಆದುದರಿಂದ ಚತುರಂಗಬಲಸಮೇತನಾಗಿ, ಈ ವಾನರಸೇನೆಯನ್ನೊಟ್ಟುಗೂಡಿಸಿಕೊಂಡು ಆ

ಮಹತಾವೃತಃ । ವ್ಯೂಹ್ಯೇದಂ ವಾನರಾನೀಕಂ ನಿರ್ಮಥಿಷ್ಯಸಿ ರಾವಣಂ" ॥ ೨೪ ॥ ರಾವಣಾವರಜೇ ವಾಕ್ಯಮೇವಂ ಬ್ರುವತಿ ರಾಘವಃ । ಶತ್ರೂಣಾಂ ಪ್ರತಿಘಾತಾರ್ಥಮಿದಂ ವಚನಮಬ್ರವೀತ್ ॥೨೫॥ "ಪೂರ್ವದ್ವಾರೇತು ಲಂಕಾಯಾ ನೀಲೋ ವಾನರಪುಂಗವಃ । ಪ್ರಹಸ್ತಪ್ರತಿಯೋದ್ಧಾಸ್ಯಾದ್ವಾನರೈರ್ಬಹುಭಿರ್ವೃತಃ । ದಕ್ಷಿಣೇ ಬಾಧತಾಂ ದ್ವಾರೇ ಮಹಾಪಾರ್ಶ್ವಮಹೋದರೌ ॥೨೬-೨೭॥ ಹನುಮಾನ್ ಪಶ್ಚಿಮದ್ವಾರಂ ನಿಪೀಡ್ಯ ಪವನಾತ್ಮಜಃ । ಪ್ರವಿಶತ್ವಪ್ರಮೇಯಾತ್ಮಾ ಬಹುಭಿಃ ಕಪಿಭಿರ್ವೃತಃ ॥ ೨೮ ॥ ದೈತ್ಯದಾನವಸಂಘಾನಾಮೃಷೀಣಾಂಚ ಮಹಾತ್ಮನಾಂ । ವಿಪ್ರಕಾರಪ್ರಿಯಃ ಕ್ಷುದ್ರೋ

---

ಚತುರಂಗೇಣಬಲೇನ - ಚತುರಂಗಸೇನೆಯಿಂದ, ವೃತಃ - ಸುತ್ತುವರೆದವನಾಗಿ, ಇದಂವಾನರಾನೀಕಂ- ಈ ವಾನರಸೇನೆಯನ್ನು, ವ್ಯೂಹ್ಯ - ವ್ಯೂಹರೂಪವಾಗಿ ಮಾಡಿ, ರಾವಣಂ - ರಾವಣನನ್ನು, ನಿರ್ಮಥಿಷ್ಯಸಿ - ಹೊಡೆಯುವೆ. ॥ ೨೪ ॥ ರಾವಣಾವರಜೇ - ರಾವಣನ ತಮ್ಮನಾದ ವಿಭೀಷಣನು, ಏವಂ - ಈ ಪ್ರಕಾರವಾಗಿ, ವಾಕ್ಯಂ - ಮಾತನ್ನು, ಬ್ರುವತಿ - ಹೇಳಲು, ರಾಘವಃ - ಶ್ರೀರಾಮನು, ಶತ್ರೂಣಾಂ- ವೈರಿಗಳ, ಪ್ರತಿಘಾತಾರ್ಥಂ - ಸಂಹಾರಾರ್ಥವಾಗಿ, ಇದಂವಚನಂ - ಈ ಮಾತನ್ನು, ಅಬ್ರವೀತ್ - ನುಡಿದನು. ॥ ೨೫ ॥ ಲಂಕಾಯಾಃ - ಲಂಕಾಪಟ್ಟಣದ, ಪೂರ್ವದ್ವಾರೇತು - ಪೂರ್ವದ ಬಾಗಿಲಿನಲ್ಲಿ, ವಾನರಪುಂಗವಃ - ವಾನರಶ್ರೇಷ್ಠನಾದ, ನೀಲಃ - ನೀಲನು, ಬಹುಭಿಃ - ಅನೇಕರಾದ, ವಾನರೈಃ - ಕಪಿಗಳಿಂದ, ವೃತಃ - ಸುತ್ತುವರೆದವನಾಗಿ, ಪ್ರಹ....ದ್ಧಾ - ಪ್ರಹಸ್ತನಿಗೆ ಸರಿಯಾಗಿ ಯುದ್ಧ ಮಾಡುವನು, ಸ್ಯಾತ್ - ಆಗಲಿ. ॥ ೨೬ ॥ ವಾಲಿಪುತ್ರಃ - ವಾಲಿಯ ಮಗನಾದ, ಅಂಗದಸ್ತು - ಅಂಗದನಾದರೆ, ಮಹತಾ - ಮಹತ್ತರವಾದ, ಬಲೇನ - ಸೈನ್ಯದಿಂದ, ವೃತಃ - ಪರಿವೃತನಾಗಿ, ದಕ್ಷಿಣೇದ್ವಾರಿ - ದಕ್ಷಿಣದ ಬಾಗಿಲಲ್ಲಿ, ಮಹಾ....ರೌ - ಮಹಾಪಾರ್ಶ್ವಮಹೋದರರನ್ನು, ಬಾಧತಾಂ - ಬಾಧಿಸಲಿ. ॥ ೨೭ ॥ ಪವನಾತ್ಮಜಃ - ವಾಯುಪುತ್ರನಾದ, ಅಪ್ರಮೇಯಾತ್ಮಾ - ಅಪರಿಮಿತ ಧೈರ್ಯವುಳ್ಳ, ಹನೂಮಾನ್ - ಹನುಮಂತನು, ಬಹುಭಿಃ - ಅನೇಕರಾದ, ಕಪಿಭಿಃ - ವಾನರರಿಂದ, ವೃತಃ - ಸುತ್ತುವರೆದವನಾಗಿ, ಪಶ್ಚಿಮದ್ವಾರಂ - ಪಡವಲ ಬಾಗಿಲನ್ನು, ನಿಪೀಡ್ಯ - ಬಾಧಿಸಿ, ಪ್ರವಿಶತು - ಹೊಗಲಿ. ॥ ೨೮ ॥ ದೈತ್ಯ....ನಾಂ - ದೈತ್ಯದೈದನವ ಸಮೂಹಗಳಿಗೂ, ಮಹಾತ್ಮನಾಂ - ಮಹಾ ಪ್ರಭಾವವಂತರಾದ, ಋಷೀಣಾಂಚ - ಮುನಿಗಳಿಗೂ, ವಿಪ್ರಕಾರಪ್ರಿಯಃ - ಅಪಕಾರದಲ್ಲಿ

---

ರಾವಣನನ್ನು ಖಂಡಿತವಾಗಿಯೂ ಸಂಹರಿಸಬಲ್ಲೆ." ರಾವಣಾನುಜನಾದ ಆ ವಿಭೀಷಣ ನಿಂತೆನಲು ರಘುಕುಲೋದ್ಭವನಾದ ಶ್ರೀರಾಮನು ಶತ್ರುನಾಶಕ್ಕೆ ಉಚಿತವಾದ ಮಾತುಗಳನ್ನಾಡಬಯಸಿ ಅವನನ್ನು ಕುರಿತು ಹೀಗೆಂದನು. ॥ ೨೧-೨೫ ॥ "ಅಯ್ಯಾ ವಿಭೀಷಣನೇ! ವಾನರಶ್ರೇಷ್ಠನಾದ ನೀಲನು ನಾನಾವಿಧ ವಾನರರ ಸಹಾಯದಿಂದ ಲಂಕಾಪಟ್ಟಣದ ಪೂರ್ವದ್ವಾರದಲ್ಲಿ ಕಾವಲಿರುವ ಪ್ರಹಸ್ತನೊಡನೆ ಯುದ್ಧಮಾಡಲು ಸಮರ್ಥನಾಗಿದ್ದಾನೆ. ವಾಲಿಪುತ್ರನಾದ ಅಂಗದನು, ಮಹಾ ವಾನರಸೇನೆಯೊಡಗೂಡಿ ದಕ್ಷಿಣದ್ವಾರವನ್ನು ರಕ್ಷಿಸುತ್ತಿರುವ ಮಹಾಪಾರ್ಶ್ವ ಮಹೋದರರನ್ನು ಪೀಡಿಸಲಿ. ವಾಯುಪುತ್ರನೂ, ಅಮಿತ ಪರಾಕ್ರಮವಂತನೂ ಆದ ಹನುಮಂತನು ಅನೇಕ ವಾನರವೀರರನ್ನೊಡಗೊಂಡು ಪಶ್ಚಿಮ ದ್ವಾರದಲ್ಲಿ ಕಾವಲಿರುವ ಇಂದ್ರಜಿತ್ತುವನ್ನು ಎದುರಿಸಬಲ್ಲನು. ದೈತ್ಯದಾನವಸಮುದಾಯಗಳಿಗೂ, ಮಹಾತ್ಮರಾದ ಮಹರ್ಷಿಗಳಿಗೂ ಅಪಕಾರವನ್ನು ಮಾಡುವುದರಲ್ಲಿ ಇಷ್ಟವುಳ್ಳವನೂ, ನೀಚ

**ವರದಾನಬಲಾನ್ವಿತಃ || ೨೯ || ಪರಿಕ್ರಾಮತಿ ಯಸ್ಸರ್ವಾನ್ ಲೋಕಾನ್ ಸಂತಾಪಯನ್ ಪ್ರಜಾಃ | ತಸ್ಯಾಽಹಂ ರಾಕ್ಷಸೇಂದ್ರಸ್ಯ ಸ್ವಯಮೇವ ವಧೇ ಧೃತಃ || ೩೦ || ಉತ್ತರಂ ನಗರದ್ವಾರಮಹಂ ಸೌಮಿತ್ರಿಣಾ ಸಹ | ನಿಪೀಡ್ಯಾಽಭಿಪ್ರವೇಕ್ಷ್ಯಾಮಿ ಸಬಲೋ ಯತ್ರ ರಾವಣಃ || ೩೧ || ವಾನರೇಂದ್ರಶ್ಚ ಬಲವಾನೃಕ್ಷರಾಜಶ್ಚ ವೀರ್ಯವಾನ್ | ರಾಕ್ಷಸೇಂದ್ರಾನುಜಶ್ಚೈವ ಗುಲ್ಮೋ ಭವತುಮಧ್ಯಮಃ ||೩೨|| ನಚೈವ ಮಾನುಷಂ ರೂಪಂ ಕಾರ್ಯಂ ಹರಿಭಿರಾಹವೇ | ಏಷಾ ಭವತು ಸಂಜ್ಞಾನೋ ಯುದ್ಧೇಽಸ್ಮಿನ್ ವಾನರೇ ಬಲೇ || ೩೩ || ವಾನರಾ ಏವ ನಶ್ಚಿಹ್ನಂ ಸ್ವಜನೇಽಸ್ಮಿನ್ ಭವಿಷ್ಯತಿ | ವಯಂತು ಮಾನುಷೇಣೈವ ಸಪ್ತ ಯೋತ್ಸ್ಯಾಮಹೇ ಪರಾನ್ || ೩೪ || ಅಹಮೇವ ಸಹಭ್ರಾತ್ರಾ**

---

ಪ್ರೀತಿಯುಳ್ಳ, ಕ್ಷುದ್ರಃ - ನೀಚನಾದ, ವರ....ತಃ - ವರಪ್ರದಾನದಿಂದ ಹುಟ್ಟಿದ ಸಾಮರ್ಥ್ಯದಿಂದ ಕೂಡಿರುವ, ಯಃ - ಯಾವ ರಾವಣನು, ಸರ್ವಾನ್ - ಸಮಸ್ತವಾದ, ಲೋಕಾನ್ - ಲೋಕಗಳಲ್ಲಿ, ಪ್ರಜಾಃ - ಪ್ರಜೆಗಳನ್ನು, ಸಂತಾಪಯನ್ - ಸಂಕಟಗೊಳಿಸುವವನಾಗಿ, ಪರಿಕ್ರಾಮತಿ - ತಿರುಗುತ್ತಾನೆಯೋ, ತಸ್ಯರಾಕ್ಷಸೇಂದ್ರಸ್ಯ - ಅಂಥಾ ರಾಕ್ಷಸರಾಜನ, ವಧೇ - ಸಂಹಾರದಲ್ಲಿ, ಅಹಂ - ನಾನು, ಸ್ವಯಮೇವ-ಸಾಕ್ಷಾತ್ತಾಗಿ, ಧೃತಃ-ಧೈರ್ಯವುಳ್ಳವನಾಗಿದ್ದೇನೆ, ಯತ್ರ-ಯಾವ ಬಾಗಲಲ್ಲಿ, ಸಬಲಃ - ಸೈನ್ಯಸಮೇತನಾದ, ರಾವಣಃ - ರಾವಣನು, ಅಸ್ತಿ - ಇದ್ದಾನೆಯೋ, ತತ್ ಉತ್ತರಂನಗರದ್ವಾರಂ - ಅಂಥಾ ಉತ್ತರದ ಬಾಗಿಲನ್ನು, ಅಹಂ - ನಾನು, ಸೌಮಿತ್ರಿಣಾಸಹ - ಲಕ್ಷ್ಮಣನೊಡನೆ, ನಿಪೀಡ್ಯ - ನಿರೋಧಿಸಿ, ಅಭಿಪ್ರವೇಕ್ಷ್ಯಾಮಿ - ಎದುರಾಗಿ ಪ್ರವೇಶಮಾಡುವೆನು. ||೨೯-೩೧|| ಬಲವಾನ್ - ಬಲಿಷ್ಠನಾದ, ವಾನರೇಂದ್ರಶ್ಚ - ಸುಗ್ರೀವನೂ, ವೀರ್ಯವಾನ್ - ಸಮರ್ಥನಾದ, ಋಕ್ಷರಾಜಶ್ಚ - ಜಾಂಬವಂತನೂ, ರಾಕ್ಷಸೇಂದ್ರಾನುಜಶ್ಚೈವ - ರಾವಣನ ತಮ್ಮನಾದ ವಿಭೀಷಣನೂ, ಮಧ್ಯಮಃಗುಲ್ಮಃ - ಮಧ್ಯಪ್ರದೇಶದಲ್ಲಿರುವ ಸೇನಾನಿವೇಶವು, ಭವತು - ಆಗಲಿ. ||೩೨|| ಆಹವೇ - ಯುದ್ಧದಲ್ಲಿ, ಹರಿಭಿಃ- ವಾನರರಿಂದ, ಮಾನುಷಂ - ಮನುಷ್ಯಸಂಬಂಧವಾದ, ರೂಪಂ - ರೂಪವು, ನಕಾರ್ಯಮೇವ - ಮಾಡತಕ್ಕುದೇ ಅಲ್ಲ, ಅಸ್ಮಿನ್ಯುದ್ಧೇ - ಈ ಯುದ್ಧದಲ್ಲಿ, ವಾನರೇ - ವಾನರಸಂಬಂಧವಾದ, ಬಲೇ- ಸೈನ್ಯದಲ್ಲಿ, ಏಷಾಸಂಜ್ಞಾ - ಈ ಸಂಕೇತವು, ಭವತು - ಆಗಲಿ, ಅಸ್ಮಿನ್ಸ್ವಜನೇ - ಈ ನಮ್ಮ ಜನದಲ್ಲಿ, ವಾನರಾಏವ - ಕಪಿಗಳೇ, ನಃ - ನಮಗೆ, ಚಿಹ್ನಂ - ಗುರ್ತಾಗಿ, ಭವಿಷ್ಯತಿ - ಆಗುತ್ತದೆ.

---

ಸ್ವಭಾವವುಳ್ಳವನೂ, ಎಲ್ಲ ಲೋಕಗಳನ್ನೂ ಆಕ್ರಮಿಸಿರುವವನೂ, ಸಕಲ ಲೋಕಗಳ ಪ್ರಜೆಗಳಿಗೂ ಸಂತಾಪವನ್ನುಂಟುಮಾಡುತ್ತಿರುವವನೂ, ಲಂಕಾನಗರದ ಉತ್ತರ ದ್ವಾರವನ್ನು ಕಾಪಾಡುತ್ತಿರುವವನೂ ಆದ ಆ ರಾವಣನನ್ನು ಸಂಹರಿಸಲು ನಾನೂ ಲಕ್ಷ್ಮಣನೊಡನೆ ಅಲ್ಲಿಗೆ ಹೋಗುವೆನು. || ೨೯-೩೦ || ವಾನರಾಧಿಪನಾದ ಸುಗ್ರೀವನೂ, ಮಹಾ ಪರಾಕ್ರಮಶಾಲಿಯಾದ ಜಾಂಬವಂತನೂ, ನೀನೂ ಲಂಕಾಪಟ್ಟಣದಲ್ಲಿರುವ ಮಧ್ಯಗುಲ್ಮವನ್ನೂ ಕಾಪಾಡುತ್ತಿರುವ ಆ ವಿರುಪಾಕ್ಷನನ್ನು ವಧಿಸಿರಿ. ವಿಭೀಷಣಾ! ಈ ವಾನರರೆಲ್ಲರೂ ಮಾನುಷರೂಪಗಳನ್ನು ಧರಿಸುವುದುಚಿತವಲ್ಲವು. ನಮ್ಮ ವಾನರರು ನರರೂಪವನ್ನು ಧರಿಸಿದರೆ ರಾಕ್ಷಸರೂ ಅದೇ ರೂಪವನ್ನು ಧರಿಸುತ್ತಾರೆ. ಆಗ ನನಗೆ ಯಾರುಯಾರೆಂಬುದೇ ತಿಳಿಯದಂತಾಗುತ್ತದೆ. ಅದರಿಂದ ಅನೇಕ ಕೇಡುಗಳು ಸಂಭವಿಸುತ್ತವೆ. ಆದುದರಿಂದ ವಾನರರು ವಾನರರಾಗಿಯೇ ಯುದ್ಧಮಾಡುವುದು ಉಚಿತವೆಂದು ನನಗೆ ತೋರುತ್ತದೆ. ಆದುದರಿಂದ

ಲಕ್ಷ್ಮಣೇನ ಮಹೌಜಸಾ । ಆತ್ಮನಾ ಪಂಚಮಶ್ಚಾಽಯಂ ಸಖಾ ಮಮ ವಿಭೀ
ಷಣಃ" ॥ ೩೫ ॥ ಸರಾಮಃ ಕೃತ್ಯಸಿದ್ಧ್ಯರ್ಥಮೇವಮುಕ್ತ್ವಾ ವಿಭೀಷಣಂ । ಸುವೇಲಾ
ರೋಹಣೇ ಬುದ್ಧಿಶ್ಚಕಾರ ಮತಿಮಾನ್ ಮತಿಂ । ರಮಣೀಯತರಂ ದೃಷ್ಟ್ವಾ ಸುವೇ
ಲಸ್ಯ ಗಿರೇಸ್ತಟಂ ॥ ೩೬-೩೭ ॥

ತತಸ್ತು ರಾಮೋ ಮಹತಾ ಬಲೇನ
ಪ್ರಚ್ಛಾದ್ಯ ಸರ್ವಾಂ ಪೃಥಿವೀಂ ಮಹಾತ್ಮಾ ।

---

॥ ೩೩-೩೫ ॥ ಅಹಂ - ನಾನೂ, ಭ್ರಾತ್ರಾ - ತಮ್ಮನಾದ, ಮಹೌಜಸಾ - ಮಹಾ ಸಾಮರ್ಥ್ಯವಂತ ನಾದ, ಲಕ್ಷ್ಮಣೇನಸಹ - ಲಕ್ಷ್ಮಣನೊಡನೆ, ಮಮ - ನನಗೆ, ಸಖಾ - ಸ್ನೇಹಿತನಾದ, ಆತ್ಮನಾ - ತನ್ನಿಂದ, ಪಂಚಮಃ - ಐದನೆಯವನಾದ, ಅಯಂವಿಭೀಷಣಶ್ಚ - ಈ ವಿಭೀಷಣನೂ, ಸಪ್ತ - ಈ ಏಳುಮಂದಿಯಾದ, ವಯಂತು - ನಾವುಗಳಾದರೆ, ಪರಾನ್ - ಶತ್ರುಗಳನ್ನುಕುರಿತು, ಯೋತ್ಸ್ಯಾಮಹೇ - ಯುದ್ಧಮಾಡುವೆವು. ॥೩೬॥ ಮತಿಮಾನ್ - ಬುದ್ಧಿಶಾಲಿಯಾದ, ಸರಾಮಃ - ಆ ಶ್ರೀರಾಮನು, ಕೃತ್ಯ ಸಿಧ್ಯರ್ಥಂ - ಕಾರ್ಯಸಿದ್ಧಿಗಾಗಿ, ವಿಭೀಷಣಂ - ವಿಭೀಷಣನನ್ನು ಕುರಿತು, ಏವಂ - ಈ ಪರಿಯಾಗಿ, ಉಕ್ತ್ವಾ - ಹೇಳಿ, ರಮಣೀಯತರಂ - ಅತಿ ಮನೋಹರವಾದ, ಸುವೇಲಸ್ಯಗಿರೇಃ - ಸುವೇಲ ಪರ್ವತದ, ತಟಂ - ದಡವನ್ನು ಕುರಿತು, ದೃಷ್ಟ್ವಾ - ಕಂಡು, ಸುವೇ...ಣೇ-ಸುವೇಲಪರ್ವತವನ್ನು ಹತ್ತುವುದಕ್ಕೆ, ಬುದ್ಧಿಃ - ಬದ್ಧಿಯುಳ್ಳವನಾಗಿ, ಮತಿಂ - ಬುದ್ಧಿಯನ್ನು, ಚಕಾರ - ಮಾಡಿದನು. ॥೩೭॥ ತತಸ್ತು - ಆ ಬಳಿಕ, ಮಹಾತ್ಮಾ - ಮಹಾ ಪ್ರಭಾವವಂತನಾದ, ಮಹಾತ್ಮಾ - ಮಹಾ ಬುದ್ಧಿಶಾಲಿ ಯಾದ, ಸಃ - ಆ ಶ್ರೀರಾಮನು, ಮಹತಾ - ಮಹತ್ತರವಾದ, ಬಲೇನ - ಸೈನ್ಯದಿಂದ, ಸರ್ವಾಮ್ - ಸಮಸ್ತವಾದ, ಪೃಥಿವೀಂ - ಭೂಮಿಯನ್ನು, ಪ್ರಚ್ಛಾದ್ಯ - ತುಂಬಿಸಿ, ಪ್ರಹೃಷ್ಟರೂಪಃ - ಬಹಳ

---

ಹಾಗೆಯೇ ಮಾಡೋಣ. ಎಲೈ ರಾಕ್ಷಸೋತ್ತಮನಾದ ವಿಭೀಷಣನೇ ! ಸಪ್ತಸಂಖ್ಯಾತರಾದ ನಾವೆಲ್ಲರೂ ಶತ್ರುವಿನೊಡನೆ ಹೋರಾಡೋಣ. (* ಈಗ ನಾನು, ದಶರಥಮಹಾರಾಜನಿಗೆ ನೀನೂ ಸೇರಿ ಐವರು ಮಕ್ಕಳೆಂದು ಭಾವಿಸಿದ್ದೇನೆ. ಆದುದರಿಂದ ಮಹಾ ತೇಜಸ್ವಿಯಾದ ನಿನ್ನ ಮತ್ತು ಲಕ್ಷ್ಮಣನ ಸಹಾಯದಿಂದ ನಾನು ಶತ್ರುಸಂಹಾರವನ್ನು ಮಾಡಿ ವಿಜಯವನ್ನು ಪಡೆಯುತ್ತೇನೆ.") ಶ್ರೀರಾಮಮೂರ್ತಿಯು ಈ ರೀತಿ ನುಡಿದು ಕಾರ್ಯಸಿದ್ಧಿಯನ್ನುಕೈಗೂಡಿಸಿ ಕೊಳ್ಳುವುದಕ್ಕಾಗಿ ಸುವೇಲಾದ್ರಿಯನ್ನೇರುವುದು ಉಚಿತವೆಂದೆಣಿಸಿದನು. ಆಮೇಲೆ ಬಹು ರಮಣೀಯವಾದ ಆ ಸುವೇಲಾಚಲವನ್ನು ನೋಡಿ, ತನ್ನ ಅಪಾರ ಸೇನೆಯೊಡಗೂಡಿ, ಅದ

---

(* ಈ ತಾತ್ಪರ್ಯವು ೩೫ನೆಯ ಶ್ಲೋಕದ್ದು ; ಕತಕ ವ್ಯಾಖ್ಯಾನಾಧಾರದಿಂದ ಬರೆದುದು. ಚೆನ್ನಾಗಿರುವುದ ರಿಂದ ಇವನ್ನೇ ಇಲ್ಲಿ ಕೊಟ್ಟಿದೆ. ಇತರ ವ್ಯಾಖ್ಯಾನಗಳಿಗೆ ಸಮ್ಮತವಾದ ಅರ್ಥವು ಪ್ರತಿಪದದಲ್ಲಿಯೇ ಇವೆ.)

ಪ್ರಹೃಷ್ಟರೂಪೋಽಭಿಜಗಾಮ ಲಂಕಾಂ
ಕೃತ್ವಾ ಮತಿಂ ಸೋಽರಿವಧೇ ಮಹಾತ್ಮಾ || ೩೮ ||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಸಪ್ತತ್ರಿಂಶಸ್ಸರ್ಗಃ.



ಸಂತೋಷಗೊಂಡವನಾಗಿ, ಅರಿವಧೇ - ಶತ್ರುಸಂಹಾರದಲ್ಲಿ, ಮತಿಂ - ಬುದ್ಧಿಯನ್ನು, ಕೃತ್ವಾ - ಮಾಡಿ, ಲಂಕಾಂ - ಲಂಕಾಪಟ್ಟಣವನ್ನು ಕುರಿತು, ಅಭಿಜಗಾಮ - ಎದುರಾಗಿ ತೆರಳಿದನು. || ೩೮ ||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಸಪ್ತತ್ರಿಂಶಸ್ಸರ್ಗಃ.



ರಿಂದ ಭೂಮಿಯೆಲ್ಲವನ್ನೂ ಆಕ್ರಮಿಸಿದವನಾದ ಮಹಾ ಸಂತುಷ್ಟನೂ, ಮಹಾನುಭಾವನೂ ಆದ ಆ ಶ್ರೀರಾಮನು ಶತ್ರುವಧೆಗಾಗಿ ನಿಶ್ಚಯಿಸಿದನು. || ೩೧–೩೮ ||

ಇಂತಿದು ಶ್ರೀರಾಮಕೃತ ಸೇನಾವಿಭಾಗಯೋಜನ ವೃತ್ತಾಂತವೆಂಬ
ಮೂವತ್ತೇಳನೆಯ ಸರ್ಗವು ಸಮಾಪ್ತವಾದುದು.



# ಯುದ್ಧಕಾಂಡೇ ಅಷ್ಟತ್ರಿಂಶಸ್ಸರ್ಗಃ

ಸತು ಕೃತ್ವಾ ಸುವೇಲಸ್ಯ ಮತಿಮಾರೋಹಣಂ ಪ್ರತಿ । ಲಕ್ಷ್ಮಣಾನುಗತೋ ರಾಮುಸ್ಸುಗ್ರೀವಮಿದಮಬ್ರವೀತ್ ॥೧॥ ವಿಭೀಷಣಂಚ ಧರ್ಮಜ್ಞಮನುರಕ್ತಂ ನಿಶಾಚರಂ । ಮಂತ್ರಜ್ಞಂ ಚ ವಿಧಿಜ್ಞಂಚ ಶ್ಲಕ್ಷ್ಣಯಾ ಪರಯಾಗಿರಾ ॥೨॥ "ಸುವೇಲಂ ಸಾಧು ಶೈಲೇಂದ್ರಮಿಮಂ ಧಾತುಶತೈಶ್ಚಿತಂ । ಅಧ್ಯಾರೋಹಾಮಹೇ ಸರ್ವೇ ವತ್ಸ್ಯಾಮೋಽತ್ರ ನಿಶಾಮಿಮಾಂ ॥ ೩ ॥ ಲಂಕಾಂ ಚಾಲೋಕಯಿಷ್ಯಾಮೋ ನಿಲಯಂ ತಸ್ಯ ರಕ್ಷಸಃ । ಯೇನ ಮೇ ಮರಣಾಂತಾಯ ಹೃತಾ ಭಾರ್ಯಾ ದುರಾತ್ಮನಾ ॥೪॥ ಯೇನ

---

ಸರಾಮಸ್ತು - ಆ ಶ್ರೀರಾಮನಾದರೆ, ಲಕ್ಷ್ಮಣಾನುಗತಃ - ಲಕ್ಷ್ಮಣನಿಂದ ಅನುಸರಿಸಲ್ಪಟ್ಟವನಾಗಿ, ಸುವೇಲಸ್ಯ - ಸುವೇಲಪರ್ವತದ, ಆರೋಹಣಂಪ್ರತಿ - ಏರುವಿಕೆಯನ್ನು ಕುರಿತು, ಮತಿಂ - ಬುದ್ಧಿಯನ್ನು, ಕೃತ್ವಾ - ಮಾಡಿ, ಸುಗ್ರೀವಂ - ಸುಗ್ರೀವನನ್ನು ಕುರಿತು, ಧರ್ಮಜ್ಞಂ - ಧರ್ಮವನ್ನು ತಿಳಿದಿರುವ, ಅನುರಕ್ತಂ - ತನ್ನಲ್ಲಿ ಅನುರಾಗವುಳ್ಳ, ಮಂತ್ರಜ್ಞಂ - ಆಲೋಚನಾಪರನಾದ, ವಿಧಿಜ್ಞಂ - ಶಾಸ್ತ್ರಜ್ಞನಾದ, ನಿಶಾಚರಂ - ರಾಕ್ಷಸನಾದ, ವಿಭೀಷಣಂ - ವಿಭೀಷಣನನ್ನು ಕುರಿತು, ಪರಯಾ - ಉತ್ತಮವಾದ, ಶ್ಲಕ್ಷ್ಣಯಾ - ಮೃದುವಾದ, ಗಿರಾ - ಮಾತಿನಿಂದ, ಇದಂ - ಈ ಮಾತನ್ನು, ಅಬ್ರವೀತ್ - ನುಡಿದನು. ॥ ೧-೨ ॥ ಧಾತುಶತೈಃ - ಅನೇಕ ಧಾತುಗಳಿಂದ, ಸಾಧು - ಚೆನ್ನಾಗಿ, ಚಿತಂ - ವ್ಯಾಪ್ತವಾದ, ಶೈಲೇಂದ್ರಂ - ಪರ್ವತಶ್ರೇಷ್ಠವಾದ, ಇಮಂಸುವೇಲಂ - ಈ ಸುವೇಲಪರ್ವತವನ್ನು, ಸರ್ವೇ - ಎಲ್ಲರೂ, ಅಧ್ಯಾರೋಹಾಮಹೇ - ಏರೋಣ, ಅತ್ರ - ಇಲ್ಲಿ, ಇಮಾಂನಿಶಾಂ - ಈ ರಾತ್ರಿಯಲ್ಲಿ, ವತ್ಸ್ಯಾಮಹೇ - ಇರೋಣ. ॥ ೩ ॥ ಲಂಕಾಂಚ - ಲಂಕಾಪಟ್ಟಣವನ್ನೂ, ತಸ್ಯರಕ್ಷಸಃ - ಆ ರಾಕ್ಷಸನ, ನಿಲಯಂಚ - ಮನೆಯನ್ನೂ, ಆಲೋಕಯಿಷ್ಯಾಮಃ - ನೋಡೋಣ, ಯೇನದುರಾತ್ಮನಾ - ಯಾವ ದುರ್ಬುದ್ಧಿಯುಳ್ಳ ರಾವಣನಿಂದ, ಮರಣಾಂತಾಯ - ಮರಣರೂಪ ಫಲಕ್ಕಾಗಿ, ಮೇ - ನನ್ನ, ಭಾರ್ಯಾ - ಹೆಂಡತಿಯು, ಹೃತಾ - ಅಪಹರಿಸಲ್ಪಟ್ಟಳೋ, ಯೇನ - ಯಾವ ರಾವಣನಿಂದ, ಧರ್ಮಃ - ಧರ್ಮವು, ನವಿಜ್ಞಾತಃ - ತಿಳಿಯಲ್ಪಡಲಿಲ್ಲವೋ, ತತ್ -

---

ಆಮೇಲೆ ಲಕ್ಷ್ಮಣಪೂರ್ವಜನಾದ ಶ್ರೀರಾಮಮೂರ್ತಿಯು ಸುವೇಲಾದ್ರಿಯನ್ನೇರಬೇಕೆಂಬ ಬಯಕೆಯುಳ್ಳವನಾಗಿ ಸುಗ್ರೀವನೊಡನೆಯೂ, ಧರ್ಮಜ್ಞನೂ, ತನ್ನಲ್ಲಿ ಅನುರಕ್ತನೂ, ರಾಕ್ಷಸನೂ ಆದರೂ ಮಂತ್ರಾಲೋಚನಾನಿಪುಣನೂ, ಸಮಸ್ತ ವಿಧಿಗಳನ್ನರಿತವನೂ ಆದ ವಿಭೀಷಣನೊಡನೆಯೂ ಮೃದುಮಧುರವಾದ ವಚನಗಳಿಂದ "ಮಿತ್ರರೇ! ವಿವಿಧ ಧಾತುಚಿತ್ರಿತವೂ, ಸುಮನೋಹರವೂ ಆದ ಈ ಸುವೇಲಾದ್ರಿಯ ಮೇಲಕ್ಕೆ ಹೋಗಿ ಈ ರಾತ್ರಿಯಲ್ಲಿ ಅಲ್ಲಿಯೇ ಸುಖವಾಗಿ ವಾಸಮಾಡೋಣ. ಎಲೈ ಮಿತ್ರರೇ! ಯಾವನು ತನ್ನ ಮೃತ್ಯುವಿಗಾಗಿಯೇ ನನ್ನ ಭಾರ್ಯೆಯಾದ ಸೀತೆಯನ್ನಪಹರಿಸಿದನೋ ಆ ರಾವಣನಿಗೆ ನಿವಾಸಸ್ಥಾನವಾದ ಈ ಲಂಕಾಪಟ್ಟಣವೆಲ್ಲವನ್ನೂ ಈ ಪರ್ವತವನ್ನೇರಿ ಅಲ್ಲಿಂದಲೇ ಚೆನ್ನಾಗಿ ನೋಡಿ ಅದರ ರೀತಿನೀತಿಗಳೆಲ್ಲವನ್ನೂ ಪರಿಶೀಲಿಸೋಣ. ಎಲೈ ಸುಗ್ರೀವ ವಿಭೀಷಣರೇ! ರಾವಣಾ

ಧರ್ಮೋ ನವಿಜ್ಞಾತೋ ನತದ್ವೃತ್ತಂ ಕುಲಂ ತಥಾ । ರಾಕ್ಷಸ್ಯಾ ನೀಚಯಾ ಬುದ್ಧ್ಯಾ ಯೇನ ತದ್ಗರ್ಹಿತಂ ಕೃತಂ ॥೫॥ ತಸ್ಮಿನ್ ಮೇ ವರ್ತತೇ ರೋಷಃ ಕೀರ್ತಿತೇ ರಾಕ್ಷಸಾಧಮೇ । ಯಸ್ಯಾಪರಾಧಾನ್ನೀಚಸ್ಯ ವಧಂ ದ್ರಕ್ಷ್ಯಾಮಿ ರಕ್ಷಸಾಂ ॥ ೬ ॥ ಏಕೋಹಿ ಕುರುತೇ ಪಾಪಂ ಕಾಲಪಾಶವಶಂ ಗತಃ । ನೀಚೇ ನಾತ್ಮಾಪಚಾರೇಣ ಕುಲಂ ತೇನ ವಿನಶ್ಯತಿ" ॥೭॥ ಏವಂ ಸಮ್ಮಂತ್ರಯನ್ನೇವ ಸಕ್ರೋಧೋ ರಾವಣಂ ಪ್ರತಿ । ರಾಮಸ್ಸುವೇಲಂ ವಾಸಾಯ ಚಿತ್ರಸಾನುಮುಪಾರುಹತ್ ॥೮॥ ಪೃಷ್ಠತೋ ಲಕ್ಷ್ಮಣಶ್ಚೈನಮನ್ವ

ಅಂಥಾ ಪ್ರಸಿದ್ಧವಾದ, ಕುಲಂ - ಕುಲವು, ವೃತ್ತಂ - ನಡತೆಯೂ, ನವಿಜ್ಞಾತಂ - ತಿಳಿಯಲ್ಪಡಲಿಲ್ಲವೊ, ಯೇನ - ಯಾವ ರಾವಣನಿಂದ, ರಾಕ್ಷಸ್ಯಾ - ರಾಕ್ಷಸಸಂಬಂಧಿಯಾದ, ನೀಚಯಾ - ನೀಚವಾದ, ಬುಧ್ಯಾ - ಮತಿಯಿಂದ, ಗರ್ಹಿತಂ - ನಿಂದಿತವಾದ, ತತ್ - ಆ ಭಾರ್ಯಾಪಹರಣರೂಪವಾದ ಕಾರ್ಯವು, ಕೃತಂ - ಮಾಡಲ್ಪಟ್ಟಿತೋ, ತಸ್ಮಿನ್ - ಅಂಥಾ, ರಾಕ್ಷಸಾಧಮೇ - ನೀಚರಾಕ್ಷಸನಾದ ರಾವಣನಲ್ಲಿ, ಮೇ - ನನಗೆ, ರೋಷಃ - ಕೋಪವು, ವರ್ತತೇ - ಇರುವುದು, ಯಸ್ಯನೀಚಸ್ಯ - ಯಾವ ನೀಚನ, ಅಪರಾಧಾತ್ - ದ್ರೋಹದಿಂದ, ರಕ್ಷಸಾಂ - ರಕ್ಕಸರ, ವಧಂ - ಸಂಹಾರವನ್ನು, ದ್ರಕ್ಷ್ಯಾಮಿ - ನೋಡುವೆನೋ. ॥ ೪-೬ ॥ ಕಾಲ....ತಃ - ಯಮಪಾಶಕ್ಕೆ ಅಧೀನನಾಗಿ, ಏಕಃ - ಒಬ್ಬನು, ಪಾಪಂ - ಪಾತಕವನ್ನು, ಕುರುತೇಹಿ - ಮಾಡುವನಷ್ಟೆ, ನೀಚೇನ ನೀಚನಾದ, ತೇನ - ಅವನಿಂದ, ಆತ್ಮಾಪಚಾರೇಣ - ತನ್ನ ದೋಷದಿಂದ, ಕುಲಂ - ತನ್ನ ಕುಲವು, ವಿನಶ್ಯತಿ - ನಶಿಸಿ ಹೋಗುವದು. ॥ ೭ ॥ ಏವಂ - ಈ ಪ್ರಕಾರವಾಗಿ, ಸಮಂತ್ರಯನ್ನೇವ - ಹೇಳುವವನಾಗಿಯೇ, ರಾಮಃ - ಶ್ರೀರಾಮನು, ರಾವಣಂಪ್ರತಿ - ರಾವಣನನ್ನು ಕುರಿತು, ಸಕ್ರೋಧಃ - ಕೋಪದಿಂದ ಕೂಡಿದವನಾಗಿ, ವಾಸಾಯ - ನಿವಾಸಾರ್ಥವಾಗಿ, ಚಿತ್ರಸಾನುಂ - ನಾನಾವಿಧವಾದ ಜರಿಗಳುಳ್ಳ, ಸುವೇಲಂ- ಸುವೇಲಪರ್ವತವನ್ನು, ಉಪಾರುಹತ್ - ಏರಿದನು. ॥ ೮ ॥ ವಿಕ್ರಮೇ - ಪರಾಕ್ರಮದಲ್ಲಿ, ರತಃ - ಆಸಕ್ತನಾದ, ಲಕ್ಷ್ಮಣಶ್ಚ - ಲಕ್ಷ್ಮಣನೂ, ಸಮಾಹಿತಃ - ಸಮಾಧಾನಚಿತ್ತನಾಗಿ, ಮಹತ್ - ಮಹತ್ತರವಾದ, ಸಶರಂ - ಬಾಣಯುಕ್ತವಾದ, ಚಾಪಂ - ಬಿಲ್ಲನ್ನು, ಉದ್ಯಮ್ಯ - ಎತ್ತಿಕೊಂಡು, ಏನಂ- ಈ ರಾಮಚಂದ್ರನನ್ನು, ಪೃಷ್ಠತಃ ಹಿಂದುಗಡೆಯಲ್ಲಿ, ಅನ್ವಗಚ್ಛತ್-ಅನುಸರಿಸಿ ಹೋದನು.

ಸುರನು ರಾಕ್ಷಸಕುಲಕ್ಕೆ ತಕ್ಕುದೂ, ಬಹು ನೀಚವಾದುದೂ ಆದ ದುರ್ಬುದ್ಧಿಯಿಂದ ಮಾಡಿದ ದುಷ್ಕಾರ್ಯದಿಂದ ರಾಕ್ಷಸಕುಲವೇ ನಿಂದಿತವಾಯಿತು. ॥ ೧–೫ ॥ ರಾಕ್ಷಸಾಧಮನಾದ ಈ ರಾವಣನ ಹೆಸರೆತ್ತುತ್ತಲೇ ನನ್ನಲ್ಲಿ ಅಪರಿಮಿತವಾದ ಕೋಪವು ಉಕ್ಕೇರುತ್ತಿರುವುದು. ದುರ್ಮಾರ್ಗನಾದ ಆ ರಾವಣನ ದುರ್ನಡತೆಯಿಂದ ರಾಕ್ಷಸಕುಲವೇ ನಾಶವಾಗಬೇಕಾಗಿ ಬಂದಿತು. ಎಲೈ ಮಿತ್ರರೇ! ಕಾಲವಶವನ್ನೈದಿ ಕುಲದಲ್ಲಿ ಯಾವನಾದರೊಬ್ಬನು ಪಾಪ ಮಾಡುತ್ತಾನೆ. ಅವನ ಮೂಲಕವಾಗಿ ನಿಂದಿತವಾದ ಆ ಪಾಪಕಾರ್ಯದ ದೆಸೆಯಿಂದ ಕುಲವೆಲ್ಲವೂ ನಶಿಸಿಹೋಗುವುದು. ಆದುದರಿಂದ ಒಬ್ಬ ರಾವಣನ ಮೂಲಕ ರಾಕ್ಷಸ ಕುಲಕ್ಕೆಲ್ಲಾ ನಾಶವು ಸಂಭವಿಸಬೇಕಾಯಿತು" ಎಂದು ಹೇಳಿದನು. ಹೀಗೆ ಶ್ರೀರಾಮನು ಮಹಾ ಕೋಪೋದ್ದೀಪಿತನಾಗಿ ಮಾತನಾಡುತ್ತ ವಾಸಮಾಡಲೋಸುಗ ವಿಚಿತ್ರವಾದ ಬೆಟ್ಟದ ಜರಿತೆಗಳಿಂದ ಕೂಡಿದ ಆ ಸುವೇಲಾದ್ರಿಯನ್ನೇರಿದನು. ಆತನನ್ನು ಹಿಂಬಾಲಿಸಿ ಲಕ್ಷ್ಮಣನು ಪರ್ವತವನ್ನೇರಿದನು. ಆತನು ಪರಾಕ್ರಮವನ್ನು ತೋರುವುದರಲ್ಲಿ ಆಸಕ್ತಿ

ಗಚ್ಛತ್ ಸಮಾಹಿತಃ । ಸಶರಂ ಚಾಪಮುದ್ಯಮ್ಯ ಸುಮಹದ್ವಿಕ್ರಮೋರತಃ ॥೯॥ ತಮ
ನ್ವರೋಹತ್ ಸುಗ್ರೀವಸ್ಸಾಮಾತ್ಯಸ್ಸವಿಭೀಷಣಃ । ಹನುಮಾನಂಗದೋ ನೀಲೋ
ಮೈಂದೋ ದ್ವಿವಿದಏವಚ ॥ ೧೦ ॥ ಗಜೋ ಗವಾಕ್ಷೋ ಗವಯಃ ಶರಭೋ ಗಂಧ
ಮಾದನಃ । ಪನಸಃ ಕುಮುದಶ್ಚೈವ ಹರೋ ರಂಭಶ್ಚ ಯೂಥಪಃ ॥ ೧೧ ॥ ಜಾಂಬ
ವಾಂಶ್ಚ ಸುಷೇಣಶ್ಚ ಋಷಭಶ್ಚ ಮಹಾಮತಿಃ । ದುರ್ಮುಖಶ್ಚ ಮಹಾತೇಜಾಸ್ತಥಾ
ಶತವಲಿಃ ಕಪಿಃ ॥ ೧೨ ॥ ಏತೇ ಚಾನ್ಯೇಚ ಬಹವೋ ವಾನರಾಃ ಶೀಘ್ರಗಾಮಿನಃ ।
ತೇ ವಾಯುವೇಗ ಪ್ರವಣಾಸ್ತಂ ಗಿರಿಂ ಗಿರಿಚಾರಿಣಃ । ಅಧ್ಯಾರೋಹಂತ ಶತಶಸ್ಸು
ವೇಲಂ ಯತ್ರ ರಾಘವಃ ॥೧೩॥ ತೇತ್ವದೀರ್ಘೇಣ ಕಾಲೇನ ಗಿರಿಮಾರುಹ್ಯ ಸರ್ವತಃ ।

---

ಸುಗ್ರೀವಃ - ಸುಗ್ರೀವನು, ಸಾಮಾತ್ಯಃ - ಮಂತ್ರಿಗಳಿಂದೊಡಗೂಡಿ, ಸವಿಭೀಷಣಃ - ವಿಭೀಷಣ ಸಹಿತನಾಗಿ, ತಂ - ಆ ಸುವೇಲಪರ್ವತವನ್ನು. ಅಧ್ವರೋಹತ್ - ಅನುಸರಿಸಿ ಏರಿದನು. ॥ ೯ ॥ ಹನೂಮಾನ್-ಹನುಮಂತನು, ಅಂಗದಃ-ಅಂಗದನೂ, ನೀಲಃ ನೀಲನೂ, ಮೈಂದಃ-ಮೈಂದನೂ, ದ್ವಿವಿದಏವಚ - ದ್ವಿವಿದನೂ, ಗಜಃ - ಗಜನೂ, ಗವಾಕ್ಷನೂ, ಗವಯಃ - ಗವಯನೂ, ಶರಭಃ - ಶರಭನೂ, ಗಂಧಮಾದನಃ - ಗಂಧಮಾದನನೂ, ಪನಸಃ - ಪನಸನೂ, ಕುಮುದಶ್ಚೈವ - ಕುಮುದನೂ, ಹರಃ - ಹರನೂ, ಯೂಥಪಃ - ಯೂಥಪತಿಯಾದ, ರಂಭಶ್ಚ - ರಂಭನೂ, ಜಾಂಬವಾಂಚ-ಜಾಂಬವಂತನೂ, ಸುಷೇಣಶ್ಚ - ಸುಷೇಣನೂ, ಮಹಾಮತಿಃ - ಬಹು ಬುದ್ಧಿವಂತನಾದ, ಋಷಭಶ್ಚ-ಋಷಭನೂ, ಮಹಾತೇಜಾಃ - ಅತಿ ತೇಜೋವಂತನಾದ, ದುರ್ಮುಖಶ್ಚ - ದುರ್ಮುಖನೂ, ತಥಾ - ಹಾಗೆಯೇ, ಶತವಲಿಃ - ಶತವಲಿಯೆಂಬ, ವಾನರಃ - ಕಪಿಯೂ, ಏತೇಚ - ಇವರೂ, ಅನ್ಯೇಚ - ಇತರರಾದ, ಬಹವಃ - ಬಹುಮಂದಿ, ಶೀಘ್ರಗಾಮಿನಃ - ಜಾಗ್ರತೆಯಾಗಿ ಹೋಗುವ, ತೇವಾನರಾಃ- ಆ ಕಪಿಗಳು, ವಾಯು....ಣಾಃ - ವಾಯುವೇಗದಲ್ಲಿ ಆಸಕ್ತಿಯುಳ್ಳವರಾಗಿ, ಗಿರಿಚಾರಿಣಃ - ಪರ್ವತಗಳಲ್ಲಿ ಸಂಚರಿಸುವ, ಯತ್ರ-ಯಾವ ಪರ್ವತದಲ್ಲಿ, ರಾಘವಃ-ಶ್ರೀರಾಮನು, ಅಸ್ತಿ-ಇದ್ದಾನೆಯೋ, ತಂಗಿರಿಂ - ಅಂಥಾ ಪರ್ವತವಾದ, ಸುವೇಲಂ - ಸುವೇಲವನ್ನು, ಅಧ್ಯಾರೋಹಂತ - ಏರಿದರು. ॥ ೧೨-೧೩ ॥ ತೇತು - ಆ ವಾನರರಾದರೆ, ಅದೀರ್ಘೇಣಕಾಲೇನ - ಸ್ವಲ್ಪಕಾಲದಿಂದಲೇ, ಗಿರಿಂ - ಪರ್ವತವನ್ನು, ಆರುಹ್ಯ - ಏರಿ, ಸರ್ವತಃ - ಎಲ್ಲಾಕಡೆಯಲ್ಲಿಯೂ, ತಸ್ಯ - ಆ ಪರ್ವತದ, ಶಿಖರೇ-

---

ಯುಳ್ಳವನಾಗಿ ಧನುರ್ಬಾಣಗಳನ್ನು ಧರಿಸಿ ಆ ಗಿರಿಯನ್ನೇರಿ ಹೊರಟನು. ಅವರಿಬ್ಬರನ್ನೂ ಹಿಂಬಾಲಿಸಿ ಸುಗ್ರೀವ ವಿಭೀಷಣರು ತಮ್ಮ ಮಂತ್ರಿಗಳೊಡಗೂಡಿ ಹೊರಟರು. ॥ ೬–೧೦ ॥ ಅವರೊಡನೆಯೇ ಹನುಮಂತ, ಅಂಗದ, ನೀಲ, ಮೈಂದ, ದ್ವಿವಿದ, ಗಜ, ಗವಯ, ಗವಾಕ್ಷ, ಶರಭ, ಗಂಧಮಾದನ, ಪನಸ, ಕುಮುದ, ಮಹಾ ಮೇಧಾವಿಯಾದ ಋಷಭ, ಮಹಾ ತೇಜಸ್ವಿಯಾದ ದುರ್ಮುಖ, ಶತವಲಿ ಮೊದಲಾದವರೂ, ಇತರ ನೂರಾರು ವಾನರಮುಖ್ಯರೂ ಹೊರಟರು. ಇವರೆಲ್ಲರೂ ಬಹು ಶೀಘ್ರವಾಗಿ ನಡೆಯಬಲ್ಲವರು; ಎಲ್ಲರೂ ಪರ್ವತಗಳಲ್ಲಿಯೇ ಸಂಚರಿಸಬಲ್ಲ ಸಾಮರ್ಥ್ಯವುಳ್ಳವರು; ವಾಯುವೇಗವುಳ್ಳವರು; ಎಲ್ಲರೂ ರಘುಕುಲೋದ್ಭವನಾದ ಶ್ರೀರಾಮಮೂರ್ತಿಯೊಡನೆ ಸುವೇಲಾರೋಹಣ ಮಾಡಿದರು. ॥ ೧೧–೧೩ ॥ ಈ ರೀತಿ ಎಲ್ಲರೂ ಬಹಳಬೇಗನೆ ಆ ಪರ್ವತವನ್ನೇರಿ ಆ ಪರ್ವತ ಶಿಖರದಿಂದ, ಆಕಾಶದಲ್ಲಿ ಜೋಲಾಡುತ್ತಿರುವ ಸ್ವರ್ಣಗರಿಯಂತೊಪ್ಪಿ ಮೆರೆಯುತ್ತ ಬಹು ಮಂಗಳಕರವಾಗಿ ಪ್ರಬಲ

ದದೃಶುಃ ಶಿಖರೇ ತಸ್ಯ ವಿಷಕ್ತಾಮಿವ ಖೇ ಪುರೀಂ ||೧೪|| ತಾಂ ಶುಭಾಂ ಪ್ರವರದ್ವಾರಾಂ ಪ್ರಾಕಾರಪರಿಶೋಭಿತಾಂ | ಲಂಕಾಂ ರಾಕ್ಷಸಸಂಪೂರ್ಣಾಂ ದದೃಶುರ್ಹರಿಯೂಥಪಾಃ || ೧೫ || ಪ್ರಾಕಾರಚಯಸಂಸ್ಥೈಶ್ಚ ತದಾ ನೀಲೈರ್ನಿಶಾಚರೈಃ | ದದೃಶುಸ್ತೇ ಹರಿಶ್ರೇಷ್ಠಾಃ ಪ್ರಾಕಾರಮಪರಂ ಕೃತಂ ||೧೬|| ತೇ ದೃಷ್ಟ್ವಾ ವಾನರಾಸ್ಸರ್ವೇ ರಾಕ್ಷಸಾನ್ ಯುದ್ಧಕಾಂಕ್ಷಿಣಃ | ಮುಮುಚುರ್ವಿವಿಧಾನ್ನಾದಾಂಸ್ತತ್ರ ರಾಮಸ್ಯ ಪಶ್ಯತಃ ||೧೭|| ತತೋಽಸ್ತಮಗಮತ್ಸೂರ್ಯಃ ಸ್ಸಂಧ್ಯಯಾ ಪ್ರತಿರಂಜಿತಃ | ಪೂರ್ಣಚಂದ್ರಪ್ರದೀಪ್ತಾ ಚ ಕ್ಷಪಾ ಸಮಭಿವರ್ತತ || ೧೮ ||

---

ಶಿಖರದಲ್ಲಿ, ಖೇ - ಅಂತರಿಕ್ಷದಲ್ಲಿ, ವಿಷಕ್ತಾಮಿವ - ಸಂಬಂಧಿಸಿರುವಂತಿರುವ, ಪುರಂ - ಲಂಕಾಪಟ್ಟಣವನ್ನು, ದದೃಶುಃ - ಕಂಡರು. || ೧೪ || ಹರಿಯೂಥಪಾಃ - ವಾನರಯೂಥಪತಿಗಳು, ಶುಭಾಂ - ಶುಭಕರವಾದ, ರಾಕ್ಷ...ರ್ಣಾಂ - ರಾಕ್ಷಸರಿಂದ ತುಂಬಿರುವ, ಪ್ರಾಕಾ....ತಾಂ - ಪ್ರಾಕಾರದಿಂದ ಹೊಳೆವ, ಪ್ರವರದ್ವಾರಾಂ ಉತ್ತಮವಾದ ದ್ವಾರಗಳುಳ್ಳ, ತಾಂಲಂಕಾಂ - ಆ ಲಂಕಾಪಟ್ಟಣವನ್ನು, ದದೃಶುಃ-ಕಂಡರು. || ೧೫ || ತೇಹರಿಶ್ರೇಷ್ಠಾಃ-ಆ ವಾನರೋತ್ತಮರು, ಪ್ರಾಕಾ....ಸ್ಥೈಃ-ಕೋಟೆಯ ಗೋಡೆಯಮೇಲೆ ನಿಂತಿರುವ, ನೀಲೈಃ - ಕಪ್ಪುಬಣ್ಣವುಳ್ಳ, ನಿಶಾಚರೈಃ - ರಾಕ್ಷಸರಿಂದ, ಕೃತಂ - ಮಾಡಲ್ಪಟ್ಟ, ಅಪರಂಪ್ರಾಕಾರಂ - ಮತ್ತೊಂದು ಪ್ರಾಕಾರವನ್ನು, ದದೃಶುಃ - ಕಂಡರು. || ೧೬ || ಯುದ್ಧಕಾಂಕ್ಷಿಣಃ - ಕಾಳಗವನ್ನಿಚ್ಛಿಸುವ, ಸರ್ವೇ - ಸಮಸ್ತರಾದ, ತೇವಾನರಾಃ - ಆ ಕಪಿಗಳು, ರಾಕ್ಷಸಾನ್ - ರಾಕ್ಷಸರನ್ನು, ದೃಷ್ಟ್ವಾ - ಕಂಡು, ತತ್ರ - ಆ ಸುವೇಲಪರ್ವತದಲ್ಲಿ, ರಾಮಸ್ಯ - ಶ್ರೀರಾಮನು, ಪಶ್ಯತಃ - ನೋಡುತ್ತಿರಲು, ವಿವಿಧಾನ್ - ನಾನಾವಿಧವಾದ, ನಾದಾನ್ - ಘೋಷಗಳನ್ನು, ಮುಮುಚುಃ - ಮಾಡಿದರು. || ೧೭ || ತತಃ - ಬಳಿಕ, ಸೂರ್ಯಃ - ಸೂರ್ಯನು, ಸಂಧ್ಯಯಾ - ಸಂಧ್ಯಾರಾಗದಿಂದ, ಪ್ರತಿರಂಜಿತಃ - ಕೆಂಪಾಗಿ ಮಾಡಲ್ಪಟ್ಟವನಾಗಿ, ಅಸ್ತಂ - ಅಸ್ತಮಾನವನ್ನು, ಅಗಮತ್ - ಹೊಂದಿದನು, ಪೂರ್ಣ....ಪ್ತಾಂ - ಸಂಪೂರ್ಣಚಂದ್ರನಿಂದ ಹೊಳೆಯುವ, ಕ್ಷಪಾಚ - ರಾತ್ರಿಯೂ, ಸಮಭಿವರ್ತತ - ಪ್ರವರ್ತಿಸಿತು. || ೧೮ || ತತಃ - ಬಳಿಕ, ಹರಿ....ತಿಃ - ವಾನರ ಸೈನ್ಯಪತಿಯಾದ, ಸರಾಮಃ-ಆ ಶ್ರೀರಾಮನು, ವಿಭೀಷಣೇನ-ವಿಭೀಷಣನಿಂದ, ಪ್ರತಿನಂದ್ಯ-ಸಂತೋಷಿಸಿ,

---

ಪುರದ್ವಾರಗಳಿಂದ ಕೂಡಿ ಪ್ರಾಕಾರಾಲಂಕೃತವಾಗಿ ರಾಕ್ಷಸರಿಂದ ನಿಬಿಡೀಕೃತವಾಗಿರುವ ಆ ಲಂಕಾಪಟ್ಟಣವನ್ನು ಕಂಡರು. ಆಗ ಆ ಲಂಕಾನಗರ ಪ್ರಾಕಾರಗಳಲ್ಲಿ ಕಾಳವರ್ಣವುಳ್ಳ ರಾಕ್ಷಸರು ತುಂಬಿದ್ದು ಎರಡನೆಯ ಪ್ರಾಕಾರವು ನೂತನವಾಗಿ ರಚಿತವಾಗಿ ಶೋಭಿಸುತ್ತಿರುವುದೋ ಎಂಬಂತಿರುವ ಆ ಪಟ್ಟಣವನ್ನು ನೋಡಿ ಆ ವಾನರವೀರರೆಲ್ಲರೂ ಪರಮಾಶ್ಚರ್ಯಭರಿತರಾದರು. ಆ ವಾನರಮುಖ್ಯರೆಲ್ಲರೂ ಯುದ್ಧಮಾಡಬೇಕೆಂಬ ಮಹೋತ್ಸಾಹವುಳ್ಳ ಆ ರಾಕ್ಷಸರೆಲ್ಲರನ್ನೂ ನೋಡಿ ಶ್ರೀರಾಮನ ಸಮ್ಮುಖದಲ್ಲಿಯೇ ನಾನಾವಿಧವಾದ ಭಯಂಕರ ಸಿಂಹನಾದಗಳನ್ನು ಮಾಡಿದರು. ಸ್ವಲ್ಪಕಾಲವಾದ ತರುವಾಯ ಸಂಧ್ಯಾರಾಗೋಪರಂಜಿತನಾದ ಭಗವಾನ್ ಭಾಸ್ಕರನು ಅಂತರ್ಹಿತನಾಗಿ ಪೂರ್ಣಚಂದ್ರವಿರಾಜಿತವಾದ ರಾತ್ರಿಯು ಮೊದಲಾಗಿ ಎಲ್ಲರಿಗೂ ಮನೋಹ್ಲಾದವನ್ನುಂಟುಮಾಡಿತು. ಆಗ ವಿಭೀಷಣನಿಂದ ಸತ್ಕೃತನೂ, ನಮಸ್ಕೃತನೂ ಆದ ಶ್ರೀರಾಮಮೂರ್ತಿಯೂ, ವಾನರೇಶ್ವರನಾದ ಸುಗ್ರೀವನೂ,

ತತಸ್ಸರಾಮೋ ಹರಿವಾಹಿನೀಪತಿ
ರ್ವಿಭೀಷಣೇನ ಪ್ರತಿನಂದ್ಯ ಸತ್ಕೃತಃ ।
ಸಲಕ್ಷ್ಮಣೋ ಯೂಥಪಯೂಥಸಂವೃತ
ಸ್ಸುವೇಲಪೃಷ್ಠೇ ನ್ಯವಸದ್ಯಥಾಸುಖಂ ॥ ೧೯ ॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಅಷ್ಟತ್ರಿಂಶಸ್ಸರ್ಗಃ.



ಸತ್ಕೃತಃ - ಶ್ಲಾಘಿಸಲ್ಪಟ್ಟವನಾಗಿ, ಯೂಥ....ತಃ - ಯೂಥಪತಿಗಳ ತಂಡಗಳಿಂದ ಪರಿವೃತನಾಗಿ, ಸುವೇಲಪೃಷ್ಠೇ - ಸುವೇಲಪರ್ವತದ ನಿತಂಬಪ್ರದೇಶದಲ್ಲಿ, ಯಥಾಸುಖಂ - ಸುಖವಾಗಿ, ನ್ಯವಸತ್ - ಇದ್ದನು. ॥ ೧೯ ॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಅಷ್ಟತ್ರಿಂಶಸ್ಸರ್ಗಃ.



ರಾಮಾನುಜನಾದ ಲಕ್ಷ್ಮಣಸ್ವಾಮಿಯೂ, ವಾನರಯೋಧರೂ, ಯೂಥಮುಖ್ಯರೂ ಆ ಸುವೇಲಾದ್ರಿಯ ಪೃಷ್ಠಭಾಗದಲ್ಲಿ ಸುಖವಾಗಿದ್ದರು. ॥ ೧೪-೧೯ ॥

ಇಂತಿದು ಪರಿವಾರಸಹಿತ ಶ್ರೀರಾಮಕೃತ ಸುವೇಲಾರೋಹಣ ವೃತ್ತಾಂತವೆಂಬ
ಮೂವತ್ತೆಂಟನೆಯ ಸರ್ಗವು ಸಮಾಪ್ತವಾದುದು.



# ಯುದ್ಧಕಾಂಡೇ ಏಕೋನಚತ್ವಾರಿಂಶಸ್ಸರ್ಗಃ

**ತಾಂ ರಾತ್ರಿಮುಷಿತಾಸ್ತತ್ರ ಸುವೇಲೇ ಹರಿಪುಂಗವಾಃ । ಲಂಕಾಯಾಂ ದದೃಶುರ್ವೀರಾ ವನಾನ್ಯುಪವನಾನಿಚ ॥ ೧ ॥ ಸಮಸೌಮ್ಯಾನಿ ರಮ್ಯಾಣಿ ವಿಶಾಲಾನ್ಯಾಯತಾನಿಚ । ದೃಷ್ಟಿರಮ್ಯಾಣಿ ತೇ ದೃಷ್ಟ್ವಾ ಬಭೂವುರ್ಜಾತವಿಸ್ಮಯಾಃ ॥ ೨ ॥ ಚಂಪಕಾಶೋಕಪುನ್ನಾಗ ಸಾಲತಾಲಸಮಾಕುಲಾ । ತಮಾಲವನಸಂಛನ್ನಾ ನಾಗಮಾಲಾ ಸಮಾವೃತಾ ॥ ೩ ॥ ಹಿಂತಾಲೈರರ್ಜುನೈರ್ನೀಪೈ ಸ್ಸಪ್ತಪರ್ಣೈಶ್ಚ ಪುಷ್ಪಿತೈಃ । ತಿಲಕೈಃ ಕರ್ಣಿಕಾರೈಶ್ಚ ಪಾಟಲೈಶ್ಚ ಸಮಂತತಃ ॥ ೪ ॥ ಶುಶುಭೇ ಪುಷ್ಪಿತಾಗ್ರೈಶ್ಚ ಲತಾಪರಿಗತೈರ್ದ್ರುಮೈಃ । ಲಂಕಾಬಹುವಿಧೈರ್ದಿವ್ಯೈ ರ್ಯಥೇಂದ್ರಸ್ಯಾಽಮರಾವತೀ**

---

ತತ್ರಸುವೇಲೇ - ಆ ಸುವೇಲಪರ್ವತದಲ್ಲಿ, ತಾಂರಾತ್ರಿಂ - ಆ ರಾತ್ರಿಯಕಾಲದಲ್ಲಿ, ಉಷಿತಾಃ-ತಂಗಿರುವ, ವೀರಾಃ-ಶೂರರಾದ, ಹರಿಪುಂಗವಾಃ-ವಾನರೋತ್ತಮರು, ಲಂಕಾಯಾಂ-ಲಂಕಾಪಟ್ಟಣದಲ್ಲಿ, ವನಾನಿ - ತೋಪುಗಳನ್ನೂ, ಉಪವನಾನಿಚ - ಹುವ್ವಿನ ತೋಟಗಳನ್ನೂ ಸಹಾ, ದದೃಶುಃ - ಕಂಡರು. ॥ ೧ ॥ ಸಮಸೌಮ್ಯಾನಿ - ಸಮವಾಗಿಯೂ, ನಿರ್ಮಲವಾಗಿಯೂ ಇರುವ, ರಮ್ಯಾಣಿ - ಮನಸ್ಸಿಗಿಂಪಾಗಿರುವ, ವಿಶಾಲಾನಿ - ವಿಸ್ತಾರಗಳಾದ, ಆಯತಾನಿಚ - ಉದ್ದವಾಗಿರುವ, ದೃಷ್ಟಿ ರಮ್ಯಾಣಿ - ನೇತ್ರಗಳಿಗೆ ರಮ್ಯವಾದ, ತಾನಿ - ಆ ವನಗಳನ್ನು, ದೃಷ್ಟ್ವಾ - ಕಂಡು, ತೇ - ಆ ವಾನರರು, ಜಾತವಿಸ್ಮಯಾಃ - ಹುಟ್ಟಿದ ಆಶ್ಚರ್ಯವುಳ್ಳವರು, ಬಭೂವುಃ - ಆದರು. ॥ ೨ ॥ ಚಂಪ....ಲಾ-ಸಂಪಗೆ, ಅಶೋಕ, ಹೊನ್ನೇ, ಸಾಲ,ತಾಳೇ ಈ ವೃಕ್ಷಗಳಿಂದ ವ್ಯಾಪ್ತವಾದ, ತಮಾ......ನ್ನಾ-ಹೊಂಗೇಮರಗಳ ವನಗಳಿಂದ ವ್ಯಾಪ್ತವಾದ, ನಾಗ.... ತಾ - ನಾಗಕೇಸರ ಗಿಡಗಳಿಂದ ವ್ಯಾಪ್ತವಾದ, ಹಿಂತಾಳೈಃ - ಕಿರತಾಳೇ ಗಿಡಗಳಿಂದಲೂ, ಅರ್ಜುನೈಃ-ಅರ್ಜುನವೃಕ್ಷಗಳಿಂದಲೂ, ನೀಪೈಃ - ಈಚಲು ಮರಗಳಿಂದಲೂ, ಪುಷ್ಪಿತೈಃ - ಹುವ್ವುಬಿಟ್ಟಿರುವ, ಸಪ್ತಪರ್ಣೈಶ್ಚ - ಏಳೆಲೆ ಬಾಳೇಗಿಡಗಳಿಂದಲೂ, ತಿಲಕೈಃ - ತಿಲಕವೃಕ್ಷಗಳಿಂದಲೂ, ಕರ್ಣಿಕಾರೈಶ್ಚ - ಬೆಟ್ಟದ ತಾವರೆಗಳಿಂದಲೂ, ಸಮಂತತಃ - ಎಲ್ಲಾ ಕಡೆಯಲ್ಲಿಯೂ, ಪಾಟಲೈಶ್ಚ - ಪಾದರೀಗಿಡಗಳಿಂದಲೂ, ಪುಷ್ಪಿತಾಗ್ರೈಃ - ಹುವ್ವುಬಿಟ್ಟಿರುವ ಕೊನೆಗಳುಳ್ಳ, ಲತಾಪರಿಗತೈಃ - ನಾನಾಬಣ್ಣಗಳ ಹುವ್ವುಗಳಿಂದ ಕೂಡಿರುವ, ರಕ್ತ .. ವೈಃ - ಕೆಂಪಾ

---

ಆ ಸುವೇಲನಗಾಗ್ರಭಾಗದಲ್ಲಿಯೇ ವಾನರವೀರರೆಲ್ಲರೂ ಆ ರಾತ್ರಿ ಸುಖವಾಗಿ ಕಾಲಕಳೆಯುತ್ತ ಆ ಲಂಕಾನಗರದ ಉದ್ಯಾನವನಗಳನ್ನು ಕಂಡರು. ಆ ವನಗಳು ಅಚ್ಚುಕಟ್ಟಾಗಿಯೂ, ಸೌಮ್ಯಗಳಾಗಿಯೂ, ಮನೋಹರಗಳಾಗಿಯೂ, ವಿಶಾಲಗಳಾಗಿಯೂ, ಬಹು ದೀರ್ಘಗಳಾಗಿಯೂ, ನೋಡಲು ಬಹು ಸುಂದರಗಳಾಗಿಯೂ ಇದ್ದುವು. ಆ ವನಗಳನ್ನು ನೋಡಿ ಆ ವಾನರರೆಲ್ಲರೂ ಪರಮಾಶ್ಚರ್ಯಭರಿತರಾದರು. ಚಂಪಕಾಶೋಕ, ಪುನ್ನಾಗ, ಸಾಲ, ತಾಲವೃಕ್ಷನಿಚಯಗಳಿಂದ ವ್ಯಾಪ್ತವಾಗಿ, ತಮಾಲವನದಿಂದ ಮುಚ್ಚಿ, ವೀಳೆಯದ ಬಳ್ಳಿಗಳಿಂದ ಶೋಭಿಸಿ, ಹಿಂತಾಲ, ಅರ್ಜುನ, ನೀಪ, ಸಪ್ತಪರ್ಣ, ಕದಳೀ, ತಿಲಕ, ಕರ್ಣಿಕಾರ, ಪಾಟಲ ಮೊದಲಾದ ಹೂಮೊಳೆತ ಅಗ್ರಭಾಗಗಳುಳ್ಳ ದ್ರುಮಪಙ್ಕ್ತಿವಿರಾಜಿತ

|| ೫ || ವಿಚಿತ್ರಕುಸುಮೋಪೇತೈ ರಕ್ತಕೋಮಳಪಲ್ಲವೈಃ । ಶಾದ್ವಲೈಶ್ಚ ತಥಾ ನೀಲೈ ಶ್ಚಿತ್ರಾಭಿರ್ವನರಾಜಿಭಿಃ || ೬ || ಗಂಧಾಢ್ಯಾನ್ಯಭಿರಮ್ಯಾಣಿ ಪುಷ್ಪಾಣಿ ಚ ಫಲಾನಿ ಚ । ಧಾರಯಂತ್ಯಗಮಾಸ್ತತ್ರ ಭೂಷಣಾನೀವ ಮಾನವಾಃ || ೭ || ತಚ್ಚೈತ್ರರಥಸಂಕಾಶಂ ಮನೋಜ್ಞಂ ನಂದನೋಪಮಂ । ವನಂ ಸರ್ವರ್ತುಕಂ ರಮ್ಯಂ ಶುಶುಭೇ ಷಟ್ಪದಾಯುತಂ || ೮ || ನತ್ಯೂಹಕೋಯಷ್ಟಿಮಕೈರ್ನೃತ್ಯಮಾನೈಶ್ಚ ಬರ್ಹಿಭಿಃ । ರುತಂ ಪರಭೃತಾನಾಂಚ ಶುಶ್ರುವುರ್ವನನಿರ್ಝರೇ ||೯|| ನಿತ್ಯಮತ್ತವಿಹಂಗಾನಿ ಭ್ರಮರಾಚರಿತಾನಿಚ । ಕೋಕಿಲಾಕುಲಷಂಡಾನಿ ವಿಹಂಗಾಭಿರುತಾನಿಚ || ೧೦ || ಭೃಂಗ

---

ಗಿರುವ ಮೃದುವಾದ ಚಿಗುರುಳ್ಳ, ನೀಲೈಃ - ಈಚಲು ಮರಗಳಿಂದಲೂ, ತಥಾ - ಹಾಗೆಯೇ, ಶಾಡ್ವಲೈಶ್ಚ - ಹುಲ್ಲುಗಳಿಂದಲೂ, ಚಿತ್ರಾಭಿಃ - ಆಶ್ಚರ್ಯಕರವಾದ, ವನರಾಜಿಭಿಃ - ವನಪಙ್ತಿಗಳಿಂದಲೂ, ಲಂಕಾ - ಲಂಕಾಪಟ್ಟಣವು, ಇಂದ್ರಸ್ಯ - ದೇವೇಂದ್ರನ, ಅಮರಾವತೀವ - ಅಮರಾವತೀಪಟ್ಟಣದಂತೆ ಶುಶುಭೇ - ಹೊಳೆಯುತ್ತಿತ್ತು. ||೩-೬|| ತತ್ರ - ಆ ಲಂಕಾಪಟ್ಟಣದಲ್ಲಿ, ಮಾನವಾಃ - ಮನುಷ್ಯರು, ಭೂಷಣಾನೀವ ಒಡವೆಗಳನ್ನಂತೆ, ಆಗಮಾಃ-ವೃಕ್ಷಗಳು, ಗಂಧಾಡ್ಯಾನಿ-ಗಂಧದಿಂದ ತುಂಬಿರುವ, ಅಭಿರಮ್ಯಾಣಿ - ಮನೋಹರವಾದ, ಪುಷ್ಪಾಣಿ - ಹುವ್ವುಗಳನ್ನೂ, ಫಲಾನಿಚ - ಫಲಗಳನ್ನೂ, ಧಾರಯಂತಿ-ಧರಿಸಿದ್ದವು. ||೭|| ಚೈತ್ರ....ಶಂ-ಕುಬೇರನ ಉದ್ಯಾನಕ್ಕೆ ಸದೃಶವಾದ, ನಂದನೋಪಮಂ-ಇಂದ್ರನವನಕ್ಕೆ ಸಮಾನವಾದ, ಮನೋಜ್ಞಂ - ಮನೋಹರವಾದ, ರಮ್ಯಂ - ಇಂಪಾಗಿರುವ, ಸರ್ವರ್ತುಕಂ - ಸರ್ವಋತುಗಳಲ್ಲಿಯೂ ಏಕರೀತಿಯಾಗಿರುವ, ತದ್ವನಂ - ಆ ವನವು, ಷಟ್ಪದಾಯುತಂ - ದುಂಬಿಗಳಿಂದಕೂಡಿ, ಶುಶುಭೇ - ಹೊಳೆಯುತ್ತಿತ್ತು. ||೮|| ವನನಿರ್ಝರೇ - ವನದಲ್ಲಿರುವ ಪ್ರವಾಹಗಳಲ್ಲಿ, ನತ್ಯೂ... ಕೈಃ - ನತ್ಯೂಹವೆಂಬ ಪಕ್ಷಿವಿಶೇಷಗಳಿಂದಲೂ, ನೀರುಕೋಳಿಗಳಿಂದಲೂ, ನೃತ್ಯಮಾನೈಃ - ನರ್ತನ ಮಾಡುತ್ತಿರುವ, ಬರ್ಹಿಭಿಶ್ಚ - ನವಿಲುಗಳಿಂದಲೂ ಕೂಡಿರುವ, ಪರಭೃತಾನಾಂ - ಕೋಗಿಲೆಗಳ, ರುತಂಚ - ಶಬ್ದವನ್ನೂ, ಶುಶ್ರುವುಃ - ಕೇಳಿದರು. || ೯ || ತತಃ - ಬಳಿಕ, ನಿತ್ಯ..... ನಿ - ನಿರಂತರವೂ ಮದವೇರಿದ ಹಕ್ಕಿಗಳುಳ್ಳ, ಭ್ರಮ.....ಚ - ದುಂಬಿಗಳಿಂದ ಸಂಚರಿಸಲ್ಪಟ್ಟ, ಕೋಕಿ......ನಿ - ಕೋಗಿಲೆಗಳಿಂದ ವ್ಯಾಕುಲವಾದವೃಕ್ಷಸಮೂಹಗಳುಳ್ಳ, ವಿಹಂ....ಚ - ಪಕ್ಷಿಗಳ ಧ್ವನಿ

---

ವಾಗಿದ್ದ ಆ ಲಂಕಾನಗರವು ದೇವೇಂದ್ರನ ಅಮರಾವತೀನಗರದಂತೊಪ್ಪಿ ಮೆರೆಯುತ್ತಿದ್ದಿತು. ||೧-೫|| ವಿಚಿತ್ರಕುಸುಮಸಮೃದ್ಧಿಯಿಂದೊಪ್ಪಿ, ಮೃದುವಾದ ಅರುಣಪಲ್ಲವವಿರಾಜಿತವಾದ ವೃಕ್ಷರಾಜಗಳಿಂದಲೂ, ನೀಲಿಮವಾದ ಗರಿಕೆಯ ಹಾಸುಗಳಿಂದ ಕೂಡಿ ಕಂಗೊಳಿಸುತ್ತಿರುವ ವನರಾಜಿಗಳಿಂದಲೂ ಆ ವನಗಳು ನೋಡಲು ಬಹು ಮನೋಹರವಾಗಿದ್ದುವು. ಆ ವನಗಳಲ್ಲಿರುವ ಫಲವೃಕ್ಷಗಳೆಲ್ಲವೂ, ವಿಚಿತ್ರಾಭರಣಾಲಂಕೃತರಾದ ಮಾನವರಂತೆ ಸುಗಂಧಭರಿತವಾದ ಫಲಪುಷ್ಪಾಲಂಕೃತಗಳಾಗಿ ಶೋಭಿಸುತ್ತಿದ್ದುವು. ಸರ್ವರ್ತುಗಳಲ್ಲಿ ಒಂದೇ ಸಮನಾಗಿ ಫಲಪುಷ್ಪಗಳಿಂದ ತುಂಬಿರುವ, ವಿವಿಧ ವೃಕ್ಷಗಳಿಂದ ತುಂಬಿ ತುಳುಕುತ್ತಿರುವ ಆ ವನಪಙ್ತಿಗಳು ಚೈತ್ರರಥದಂತೊಪ್ಪಿ ನಯನಮನೋಹರವಾಗಿ ವಿರಾಜಿಸುತ್ತಿದ್ದುವು. ಆ ಸುವೇಲಾದ್ರಿಯಲ್ಲಿ ನೆಲಸಿದ್ದ ವಾನರರೆಲ್ಲರೂ ಆ ಲಂಕಾನಗರದ ವನನಿರ್ಝರ ಪ್ರದೇಶಗಳಲ್ಲಿ ಕಿವಿಗಿಂಪಾಗಿ ಗಾನಮಾಡುತ್ತಿದ್ದ ಹಂಸಕಾರಂಡಗಳ ಧ್ವನಿಗಳನ್ನು ಕೇಳಿ ಆನಂದಿಸಿದರು. ಎಲ್ಲಕಾಲಗಳಲ್ಲಿಯೂ ಮದಿಸಿಯೇ ಇರುವ ವಿವಿಧ ಪಕ್ಷಿಸಂಘಗಳೂ, ಬಹಳವಾಗಿ ಮದಿಸಿಹೋಗಿರುವ

ರಾಜಾಭಿಗೀತಾನಿ ಭ್ರಮರೈಸ್ಸೇವಿತಾನಿಚ । ಕೋಣಾಲಕವಿಘುಷ್ಟಾನಿ ಸಾರಸಾಭಿರುತಾನಿಚ ॥ ೧೦ ॥ ವಿವಿಶುಸ್ತೇ ತತಸ್ತಾನಿ ವನಾನ್ಯುಪವನಾನಿಚ । ಹೃಷ್ಟಾ ಪ್ರಮುದಿತಾ ವೀರಾಃ ಹರಯಃ ಕಾಮರೂಪಿಣಃ ॥ ೧೨ ॥ ತೇಷಾಂ ಪ್ರವಿಶತಾಂ ತತ್ರ ವಾನರಾಣಾಂ ಮಹೌಜಸಾಂ । ಪುಷ್ಪಸಂಸರ್ಗಸುರಭಿರ್ವವೌ ಘ್ರಾಣಸುಖೋಽನಿಲಃ ॥೧೩॥ ಅನ್ಯೇತು ಹರಿವೀರಾಣಾಂ ಯೂಥಾನ್ನಿಷ್ಕ್ರಮ್ಯ ಯೂಥಪಾಃ । ಸುಗ್ರೀವೇಣಾಭ್ಯನುಜ್ಞಾತಾ ಲಂಕಾಂ ಜಗ್ಮುಃ ಪತಾಕಿನೀಂ ॥ ೧೪ ॥ ವಿತ್ರಾಸಯಂತೋ ವಿಹಗಾಂಸ್ತ್ರಾಸಯಂತೋ ಮೃಗದ್ವಿಪಾನ್ । ಕಂಪಯಂತಶ್ಚ ತಾಂ ಲಂಕಾಂ ನಾದೈಸ್ತೇ ನದತಾಂ

---

ಗಳುಳ್ಳ, ಭೃಂಗ....ನಿ-ಉತ್ತಮವಾದ ದುಂಬಿಗಳಿಂದ ಗಾನಮಾಡಲ್ಪಟ್ಟ, ಭ್ರಮರೈಃ-ದುಂಬಿಗಳಿಂದ, ಸೇವಿತಾನಿಚ - ಸೇವಿಸಲ್ಪಟ್ಟ, ಕೋಣಾ ...ನಿ - ಗೀಜುಗಹಕ್ಕಿಗಳಿಂದ ಶಬ್ದಾಯಮಾನವಾದ, ಸಾ....ಚ - ಸಾರಸಪಕ್ಷಿಗಳಿಂದ ಧ್ವನಿಗೊಳಿಸಲ್ಪಟ್ಟ, ತಾನಿವನಾನಿ-ಆ ವನಗಳನ್ನೂ, ಉಪವನಾನಿಚ-ತೋಟಗಳನ್ನೂ, ವೀರಾಃ - ಶೂರರಾದ, ಕಾಮರೂಪಿಣಃ - ಕಾಮರೂಪಿಗಳಾದ, ತೇಹರಯಃ - ಆ ಕಪಿಗಳು, ಹೃಷ್ಟಾಃ - ಮನಸ್ಸಂತೋಷವುಳ್ಳವರಾಗಿ, ಪ್ರಮುದಿತಾಃ - ಬಹಿಸ್ಸಂತೋಷವುಳ್ಳವರಾಗಿ, ವಿವಿಶುಃ - ಹೊಕ್ಕರು. ॥೧೦-೧೨॥ ತತ್ರ - ಅಲ್ಲಿ, ಪ್ರವಿಶತಾಂ - ಹೋಗುತ್ತಿರುವ, ಮಹೌಜಸಾಂ - ಮಹಾ ಸಾಮರ್ಥ್ಯವಂತರಾದ, ತೇಷಾಂವಾನರಾಣಾಂ - ಆ ಕಪಿಗಳಿಗೆ, ಪುಷ್ಪ......ಭಿಃ - ಹುವ್ವುಗಳ ಸಂಬಂಧದಿಂದ ಸುವಾಸನೆಯುಳ್ಳ, ಘ್ರಾಣಸುಖಃ - ಮೂಗಿಗೆ ಸುಖಕರವಾದ, ಅನಿಲಃ - ವಾಯುವು, ವವೌ - ಬೀಸಿತು. ॥೧೩॥ ಅನ್ಯೇ - ಮತ್ತು ಕೆಲವರಾದ, ಯೂಥಪಾಃ - ಯೂಥಪತಿಗಳು, ಹರಿವೀರಾಣಾಂ - ಶೂರರಾದ ವಾನರರ, ಯೂಥಾತ್ - ಗುಂಪಿನಿಂದ, ನಿಷ್ಕ್ರಮ್ಯ - ಹೊರಟು, ಸುಗ್ರೀವೇಣ - ಸುಗ್ರೀವನಿಂದ, ಅಭ್ಯನುಜ್ಞಾತಾಃ - ಸಮ್ಮತಿಸಲ್ಪಟ್ಟವರಾಗಿ, ಪತಾಕಿನೀಂ - ಧ್ವಜಪಟಗಳಿಂದ ಕೂಡಿದ, ಲಂಕಾಂ - ಲಂಕಾಪಟ್ಟಣವನ್ನು ಕುರಿತು, ಜಗ್ಮುಃ - ತೆರಳಿದರು. ॥೧೪॥ ನದತಾಂ-ಕೂಗುವವರಲ್ಲಿ, ವರಾಃ - ಉತ್ತಮರಾದ, ತೇ - ಆ ಕಪಿಗಳು, ವಿಹಗಾನ್ - ಪಕ್ಷಿಗಳನ್ನು, ವಿತ್ರಾಸಯಂತಃ - ಹೆದರಿಸುವವರಾಗಿ, ಮೃಗದ್ವಿಪಾನ್ - ಮೃಗಗಳನ್ನೂ ಆನೆಗಳನ್ನೂ, ತ್ರಾಸಯಂತಃ-ಹೆದರಿಸುವವರಾಗಿ, ತಾಂಲಂಕಾಂ - ಆ ಲಂಕಾಪಟ್ಟಣವನ್ನು, ನಾದೈಃ - ಧ್ವನಿಗಳಿಂದ, ಕಂಪಯಂತಶ್ಚ - ನಡುಗಿಸುವವರಾಗಿ, ಮಹಾವೇಗಾಃ - ಮಹಾ ವೇಗವುಳ್ಳವರಾಗಿ, ಮಹೀಂ - ನೆಲವನ್ನು, ಚರಣಪೀಡಿತಾಂ - ಕಾಲುಗಳಿಂದ ಪೀಡಿಸಲ್ಪಟ್ಟದನ್ನಾಗಿ, ಕುರ್ವಂತಃ - ಮಾಡುವವರಾಗಿ, ಜಗ್ಮುಃ -

---

ದುಂಬಿಗಳೂ, ಕೋಗಿಲೆಗಳ ಗುಂಪುಗಳೂ ಬಹು ಮನೋಹರವಾಗಿ ಆ ಉದ್ಯಾನಗಳಲ್ಲಿ ಧ್ವನಿಗೈಯುತ್ತಿದ್ದುವು. ಹೀಗೆ ಬಹು ರಮಣೀಯವಾಗಿರುವ ಆ ವನಗಳಲ್ಲಿ ವಾನರರೆಲ್ಲರೂ ಕಾಮರೂಪಗಳುಳ್ಳವರಾಗಿ ಪ್ರವೇಶಿಸಿದರು. ॥ ೬–೧೨ ॥ ಈ ರೀತಿ ಆ ವನಗಳನ್ನು ಪ್ರವೇಶಿಸುತ್ತಲೇ, ಮಹಾ ತೇಜಸ್ವಿಗಳಾದ ಆ ವಾನರವೀರರಿಗೆ ಘ್ರಾಣೇಂದ್ರಿಯವನ್ನು ತೃಪ್ತಿಗೊಳಿಸುವುದಾಗಿಯೂ, ಪುಷ್ಪಪರಿಮಳದಿಂದ ಕೂಡಿದುದಾಗಿಯೂ ಇರುವ ಮಲಯಮಾರುತವು ಬಹು ಮಂಗಳಕರವಾಗಿ ಬೀಸತೊಡಗಿತು. ಆ ಸಮಯದಲ್ಲಿ ಕೆಲವರು ವಾನರಪುಂಗವರು ತಮ್ಮ ಒಡೆಯನಾದ ಸುಗ್ರೀವನ ಅಪ್ಪಣೆಯನ್ನು ಪಡೆದು ಸೈನ್ಯದಿಂದ ಹೊರಹೊರಟು ನಾನಾವಿಧಗಳಾದ ಧ್ವಜಗಳಿಂದ ವಿರಾಜಿಸುತ್ತಿರುವ ಆ ಲಂಕಾನಗರಕ್ಕೆ ಹೋಗಿ ಅಲ್ಲಿದ್ದ ಪಕ್ಷಿಗಳೆಲ್ಲವನ್ನೂ ಭಯಗೊಳಿಸಿ, ಮೃಗಗಳನ್ನೂ, ಗಜಗಳನ್ನೂ ಬೆದರಿಸಿ ಅತ್ಯದ್ಭುತವಾಗಿ

ಪರಾಃ ॥ ೧೫ ॥ ಕುರ್ವಂತಸ್ತೇ ಮಹಾವೇಗಾ ಮಹೀಂ ಚರಣಪೀಡಿತಾಂ । ರಜಶ್ಚ ಸಹಸೈವೋರ್ಧ್ವಂ ಜಗಾಮ ಚರಣೋತ್ಥಿತಂ ॥ ೧೬ ॥ ಋಕ್ಷಾಸ್ಸಿಂಹಾ ವರಾಹಾಶ್ಚ ಮಹಿಷಾ ವಾರಣಾ ಮೃಗಾಃ । ತೇನ ಶಬ್ದೇನ ವಿತ್ರಸ್ತಾ ಜಗ್ಮುರ್ಭೀತಾ ದಿಶೋದಶ ॥ ೧೭ ॥ ಶಿಖರಂ ತತ್ತ್ರಿಕೂಟಸ್ಯ ಪ್ರಾಂಶು ಚೈಕಂ ದಿವಿಸ್ಪೃಶಂ । ಸಮಂತಾತ್ಪುಷ್ಪ ಸಂಛನ್ನಂ ಮಹಾರಜತಸನ್ನಿಭಂ ॥ ೧೮ ॥ ಶತಯೋಜನವಿಸ್ತೀರ್ಣಂ ವಿಮಲಂ ಚಾರು ದರ್ಶನಂ । ಶ್ಲಕ್ಷ್ಣಂ ಶ್ರೀಮನ್ಮಹಚ್ಚೈವ ದುಷ್ಪ್ರಾಪಂ ಶಕುನೈರಪಿ । ಮನಸಾಪಿ ದುರಾರೋಹಂ ಕಿಂಪುನಃ ಕರ್ಮಣಾ ಜನೈಃ ॥೨೦॥ ನಿವಿಷ್ಟಾ ತತ್ರ ಶಿಖರೇ ಲಂಕಾ ರಾವಣ

ತೆರಳಿದರು. ॥ ೧೫ ॥ ಚರಣೋತ್ಥಿತಂ - ಕಾಲುಗಳಿಂದ ಹುಟ್ಟಿದ, ರಜಶ್ಚ - ಧೂಳಿಯೂ ಕೂಡಾ, ಸಹಸೈವ - ಬೇಗನೆಯೇ, ಊರ್ಧ್ವಂ - ಮೇಲ್ಭಾಗವನ್ನು, ಜಗಾಮ - ಹೊಂದಿತು, ಋಕ್ಷಾಃ - ಕರಡಿಗಳು, ಸಿಂಹಾಃ - ಸಿಂಹಗಳೂ, ವರಾಹಾಶ್ಚ - ಹಂದಿಗಳೂ, ಮಹಿಷಾಶ್ಚ - ಕೋಣಗಳೂ, ವಾರಣಾಃ-ಆನೆಗಳು, ಮೃಗಾಃ-ಚಿಗರಿಗಳು, ತೇನಶಬ್ದೇನ-ಆ ವಾನರರ ಘೋಷದಿಂದ, ವಿತ್ರಸ್ತಾಃ-ಹೆದರಿ, ಭೀತಾಃ - ಭಯಗೊಂಡು, ದಶದಿಶಃ - ಹತ್ತು ದಿಕ್ಕುಗಳಿಗೂ, ಜಗ್ಮುಃ - ಓಡಿಹೋದರು. ॥ ೧೬-೧೭ ॥ ತ್ರಿಕೂಟಸ್ಯ - ತ್ರಿಕೂಟಪರ್ವತದ, ಪ್ರಾಂಶು - ದೀರ್ಘವಾದ, ತಚ್ಛಿಖರಂ - ಆ ಶಿಖರವು, ದಿವಿಸ್ಪೃಶಂ - ಅಂತರಿಕ್ಷದಲ್ಲಿ ಸ್ಪರ್ಶಿಸುವ, ಸಮಂತಾತ್ - ಎಲ್ಲಾ ಕಡೆಯಲ್ಲಿಯೂ, ಪುಷ್ಪಸಂಛನ್ನಂ - ಹೂವುಗಳಿಂದ ತುಂಬಿರುವ, ಮಹಾ....ಭಂ - ಭಂಗಾರಕ್ಕೆ ಸಮಾನವಾದ, ಶತ....ರ್ಣಂ - ನೂರುಗಾವುದದ ವಿಸ್ತಾರವುಳ್ಳ, ವಿಮಲಂ- ನಿರ್ಮಲವಾದ, ಚಾರುದರ್ಶನಂ - ಇಂಪಾಗಿರುವ ನೋಟವುಳ್ಳ, ಶ್ಲಕ್ಷ್ಣಂ - ನುಣುಪಾಗಿರುವ, ಶ್ರೀಮತ್ - ಕಾಂತಿಯುಳ್ಳ, ಮಹಚ್ಚೈವ - ದೊಡ್ಡದೂ ಆದ, ಶಕುನೈರಪಿ - ಪಕ್ಷಿಗಳಿಂದಲೂ ಕೂಡಾ, ದುಷ್ಪ್ರಾಪಂ - ಹೊಂದಲಸಾಧ್ಯವಾದ, ಏಕಂ - ಒಂದಾದ, ತಚ್ಛಿಖರಂ - ಆ ಶಿಖರವು, ಮನಸಾಪಿ - ಮನಸ್ಸಿನಿಂದಲೂ, ಜನೈಃ - ಜನರಿಂದ, ದುರಾರೋಹಂ - ಏರಲಸಾಧ್ಯವಾದದ್ದು, ಕರ್ಮಣಾ - ಕಾಯಕವ್ಯಾಪಾರದಿಂದ, ಕಿಂಪುನಃ - ಏನು ಹೇಳತಕ್ಕದು, ಶತ....ರ್ಣಾ - ನೂರುಗಾವುದ ವಿಸ್ತಾರವುಳ್ಳ, ತ್ರಿಂಶದ್ಯೋಜನಂ - ಮುವ್ವತ್ತು

ಸಿಂಹನಾದಗಳನ್ನು ಮಾಡುತ್ತ ಪಟ್ಟಣವನ್ನೆಲ್ಲಾ ನಡುಗಿಸಿಬಿಟ್ಟರು. ಅವರ ಪಾದಘಟ್ಟನದಿಂದ ಮೇಲೆದ್ದ ಧೂಳಿಯು ಬಹು ಬೇಗನೆಯೇ ಆಕಾಶವನ್ನೆಲ್ಲಾ ಆವರಿಸಿತು. ॥೧೩-೧೬॥ ವಾನರವೀರರ ಭಯಂಕರ ಧ್ವನಿಯನ್ನು ಕೇಳುತ್ತಲೇ ಆ ಲಂಕೆಯಲ್ಲಿದ್ದ ಭಲ್ಲೂಕಗಳೂ, ಸಿಂಹಗಳೂ, ವರಾಹಗಳೂ, ಮಹಿಷಗಳೂ, ಗಜಗಳೂ, ಮೃಗಗಳೂ ಭಯಪಟ್ಟು ದಶದಿಶೆಗಳಿಗೂ ಪಲಾಯನವಾಗಿ ಹೋದುವು. ಆ ತ್ರಿಕೂಟಾಚಲದ ಒಂದು ಶಿಖರವು ಆಕಾಶವನ್ನೇ ಮುಟ್ಟುತ್ತಿರುವಂತಿದ್ದಿತು. ಸಮಸ್ತ ದಿಕ್ಕುಗಳಲ್ಲಿಯೂ ಪುಷ್ಪಗಳಿಂದ ಆಚ್ಛಾದಿತವಾಗಿ, ಮಹಾ ರಜತಸಮಾನವಾದ ಕಾಂತಿಯಿಂದ ಕೂಡಿದುದಾಗಿ ನೂರುಯೋಜನಗಳ ವಿಸ್ತಾರವುಳ್ಳದಾಗಿಯೂ, ನಿರ್ಮಲವಾದುದಾಗಿಯೂ, ನೋಡಲು ಬಹು ಸುಂದರವಾಗಿಯೂ ಬಹು ಮೃದುವಾಗಿಯೂ, ಸಮೃದ್ಧೈಶ್ವರ್ಯಪೂರ್ಣವಾಗಿಯೂ, ಮಹೋನ್ನತವಾಗಿಯೂ, ಪಕ್ಷಿಗಳಿಂದಲೂ ಹೊಂದಲಸದಳವಾಗಿಯೂ, ಮನೋವಾಕ್ಕಾಯಕರ್ಮಗಳಿಂದಲೂ ಯಾವ ಮಾನವನಿಂದಲೂ ದುಷ್ಪ್ರಾಪ್ಯವಾಗಿಯೂ ಇರುವುದಾಗಿವಾಗಿದ್ದಿತು. ॥ ೧೭-೨೦ ॥ ಆ ಶಿಖರದಮೇಲೆ ರಾವಣಾಸುರನಿಂದ ಪರಿಪಾಲಿತವಾಗಿ,

ಪಾಲಿತಾ । ಶತಯೋಜನವಿಸ್ತೀರ್ಣಾ ತ್ರಿಂಶದ್ಯೋಜನಮಾಯತಾ ||೨೦|| ಸಾ ಪುರೀ ಗೋಪುರೈರುಚ್ಚೈಃ ಪಾಂಡುರಾಂಬುದಸನ್ನಿಭೈಃ । ಕಾಂಚನೇನ ಚ ಸಾಲೇನ ರಾಜತೇನ ಚ ಶೋಭಿತಾ || ೨೧ || ಪ್ರಾಸಾದೈಶ್ಚ ವಿಮಾನೈಶ್ಚ ಲಂಕಾ ಪರಮಭೂಷಿತಾ । ಘನೈರಿವಾತಪಾಪಾಯೇ ಮಧ್ಯಮಂ ವೈಷ್ಣವಂ ಪದಂ || ೨೨ || ಯಸ್ಯಾಂ ಸ್ತಂಭಸಹಸ್ರೇಣ ಪ್ರಾಸಾದಸ್ಸಮಲಂಕೃತಃ । ಕೈಲಾಸಶಿಖರಾಕಾರೋ ದೃಶ್ಯತೇ ಖಮಿವೋಲ್ಲಿಖನ್ || ೨೩ || ಚೈತ್ಯಸ್ಸ ರಕ್ಷಸೇಂದ್ರಸ್ಯ ಬಭೂವ ಪುರಭೂಷಣಂ । ಬಲೇನ ರಕ್ಷಸಾಂ ನಿತ್ಯಂ ಯಸ್ಸಮಗ್ರೇಣ ರಕ್ಷತೇ || ೨೪ || ಮನೋಜ್ಞಾಂ ಕಾನನವತೀಂ ಪರ್ವತೈರುಪ

ಗಾವುದ, ಆಯತಾ - ದೀರ್ಘವಾದ, ರಾವಣಪಾಲಿತಾ - ರಾವಣನಿಂದ ಪರಿಪಾಲಿಸಲ್ಪಟ್ಟ, ಲಂಕಾ - ಲಂಕಾಪಟ್ಟಣವು, ತತ್ರಶಿಖರೇ - ಆ ಶಿಖರದಲ್ಲಿ, ನಿವಿಷ್ಟಾ - ಇರಿಸಲ್ಪಟ್ಟಿದೆ. ||೧೮-೨೦|| ಸಾಪುರೀ - ಆ ಲಂಕಾಪಟ್ಟಣವು, ಉಚ್ಚೈಃ - ಉನ್ನತವಾದ, ಪಾಂಡು....ಭೈಃ - ಶುಭ್ರವಾದ ಮೇಘಗಳಿಗೆ ಸಮಾನವಾದ, ಗೋಪುರೈಃ - ಪುರದ್ವಾರಗಳಿಂದಲೂ, ಕಾಂಚನೇನ - ಸುವರ್ಣದ, ರಾಜತೇನಚ - ಬೆಳ್ಳಿಯ, ಸಾಲೇನ - ಕೋಟೆಯ ಗೋಡೆಯಿಂದ, ಶೋಭಿತಾ - ಪ್ರಕಾಶಮಾನವಾಗಿದೆ, ಲಂಕಾ - ಲಂಕಾಪಟ್ಟಣವು, ಪ್ರಾಸಾದೈಃ - ಉಪ್ಪರಿಗೆಗಳಿಂದಲೂ, ವಿಮಾನೈಶ್ಚ - ದೇವಸ್ಥಾನಗಳಿಂದಲೂ, ಆತಪಾಪಾಯೇ - ಬಿಸಿಲಿಲ್ಲದ ಕಾಲದಲ್ಲಿ, ಘನೈಃ - ಮೇಘಗಳಿಂದ, ಮಧ್ಯಮಂ - ಮಧ್ಯವರ್ತಿಯಾದ, ವೈಷ್ಣವಂಪದಮಿವ - ಅಂತರಿಕ್ಷದಂತೆ, ಪರಮಭೂಷಿತಾ - ಬಹು ಅಲಂಕಾರಭೂತವಾದದ್ದಾಗಿದೆ, ಯಸ್ಯಾಂ - ಯಾವ ಪಟ್ಟಣದಲ್ಲಿ, ಸ್ತಂಭಸಹಸ್ರೇಣ - ಸಹಸ್ರ ಸ್ತಂಭಗಳಿಂದ, ಸಮಲಂಕೃತಃ - ಅಲಂಕರಿಸಲ್ಪಟ್ಟ, ಕೈಲಾ....ರಃ - ಕೈಲಾಸಪರ್ವತ ಶಿಖರದ ಆಕಾರವುಳ್ಳ, ಪ್ರಾಸಾದಃ - ಉಪ್ಪರಿಗೆಯು, ಖಂ - ಅಂತರಿಕ್ಷವನ್ನು, ಉಲ್ಲಖನ್ನಿವ - ಒರೆಯುವುದೋ ಎಂಬಂತೆ, ದೃಶ್ಯತೇ - ಕಾಣುತ್ತದೆಯೋ, ಯಃ - ಯಾವ ಪ್ರಾಸಾದವು, ನಿತ್ಯಂ - ನಿರಂತರವೂ, ಸಮಗ್ರೇಣ - ಸಂಪೂರ್ಣವಾದ, ರಕ್ಷಸಾಂ-ರಕ್ಕಸರ, ಬಲೇನ-ಸೈನ್ಯದಿಂದ, ರಕ್ಷತೇ-ಸಂರಕ್ಷಿಸಲ್ಪಡುತ್ತದೆಯೋ, ಸಚೈತ್ಯಃ - ಆ ಪ್ರಾಸಾದವು, ರಾಕ್ಷಸೇಂದ್ರಸ್ಯ - ರಾವಣನ, ಪುರಭೂಷಣಂ - ಪಟ್ಟಣಕ್ಕೆ ಅಲಂಕಾರಪ್ರಾಯವಾಗಿ, ಬಭೂವ - ಇದ್ದಿತು. ||೨೧-೨೪|| ಮನೋಜ್ಞಾಂ - ಮನೋಹರವಾದ, ಕಾನನವತೀಂ- ಕಾಡುಗಳುಳ್ಳ, ನಾನಾ....ತ್ರೈಃ - ನಾನಾಬಗೆಗಳಾದ ಧಾತುಗಳಿಂದ ಚಿತ್ರವರ್ಣವುಳ್ಳ, ಉದ್ಯಾನೈಃ -

ನೂರುಯೋಜನದಗಲವೂ, ಮೂವತ್ತುಯೋಜನದುದ್ದವೂ ಉಳ್ಳ ಲಂಕಾನಗರವು ವಿರಾಜಿಸುತ್ತಿದ್ದಿತು. ಆ ನಗರವು ಬೆಳುಮೋಡಗಳಿಗೆ ಸಮಾನಗಳಾದುವೂ, ಮಹೋನ್ನತವಾದುವೂ ಆದ ಉಪ್ಪರಿಗೆಗಳಿಂದಲೂ, ಸ್ವರ್ಣರಜತಗಳಿಂದ ರಚಿತವಾದ ಪ್ರಾಕಾರಗಳಿಂದಲೂ, ಉಪ್ಪರಿಗೆಗಳಿಂದಲೂ, ವಿಮಾನಗಳಿಂದಲೂ ಬಹಳ ಮನೋಹರವಾಗಿ ಅಲಂಕೃತವಾಗಿದ್ದಿತು. ವರ್ಷಾಕಾಲದಲ್ಲಿ ಮೇಘಗಳಿಂದ ಮುಚ್ಚಿದ ಆಕಾಶದಂತೆ ಆ ಲಂಕಾಪಟ್ಟಣದಲ್ಲಿನ ಪ್ರಾಸಾದವು ಅನೇಕ ಸಹಸ್ರ ಸ್ತಂಭಗಳಿಂದ ಪ್ರಕಾಶಿಸುತ್ತಿದ್ದಿತು. ಆ ಪಟ್ಟಣಕ್ಕೆ ಉತ್ತಮ ಭೂಷಣಪ್ರಾಯವಾದುದೂ, ಕೈಲಾಸಪರ್ವತದ ಶಿಖರದ ಆಕಾರವುಳ್ಳದ್ದೂ, ಆಕಾಶವನ್ನು ಸೋಕುತ್ತಿರುವುದೂ ಆದ ಆ ರಾವಣಾಸುರನ ಅರಮನೆಯ ಉಪ್ಪರಿಗೆಯು ಬಹು ಸುಂದರವಾಗಿ ಪ್ರಕಾಶಿಸುತ್ತಿದ್ದಿತು. ಆ ರಾವಣನು ಎಲ್ಲಕಾಲಗಳಲ್ಲಿಯೂ ಸಹಸ್ರಾರು ರಾಕ್ಷಸವೀರರಿಂದ ಅದನ್ನು ರಕ್ಷಿಸುತ್ತಿರುವನು. || ೨೦-೨೪ || ಇಮ್ಮೂ ಅಲ್ಲದೆ ಬಹು

ಶೋಭಿತಾಂ । ನಾನಾಧಾತುವಿಚಿತ್ರೈಶ್ಚ ಉದ್ಯಾನೈರುಪಶೋಭಿತಾಂ ॥ ೨೫ ॥ ನಾನಾ
ವಿಹಗಸಂಘುಷ್ಟಾಂ ನಾನಾಮೃಗನಿಷೇವಿತಾಂ । ನಾನಾಕಾನನಸಂತಾನಾಂ ನಾನಾ
ರಾಕ್ಷಸಸೇವಿತಾಂ ॥ ೨೬ ॥ ತಾಂ ಸಮೃದ್ಧಾಂ ಸಮೃದ್ಧಾರ್ಥಾಂ ಲಕ್ಷ್ಮೀವಾನ್
ಲಕ್ಷ್ಮಣಾಗ್ರಜಃ । ರಾವಣಸ್ಯ ಪುರೀಂ ರಾಮೋ ದದರ್ಶ ಸಹವಾನರೈಃ ॥ ೨೭ ॥
ತಾಂ ಮಹಾಗೃಹ ಸಂಬಾಧಾಂ ದೃಷ್ಟ್ವಾ ಲಕ್ಷ್ಮಣಪೂರ್ವಜಃ । ನಗರೀಮಮರ
ಪ್ರಖ್ಯೋ ವಿಸ್ಮಯಂ ಪ್ರಾಪ ವೀರ್ಯವಾನ್ ॥ ೨೮ ॥

ತಾಂ ರತ್ನಪೂರ್ಣಾಂ ಬಹುಸಂವಿಧಾನಾಂ
ಪ್ರಾಸಾದಮಾಲಾಭಿರಲಂಕೃತಾಂಚ ।

---

ತೋಟಗಳಿಂದ, ಉಪಶೋಭಿತಾಂ - ಹೊಳೆಯುತ್ತಿರುವ, ನಾನಾ ....ಷ್ಟಾಂ - ಅನೇಕ ವಿಧವಾದ ಪಕ್ಷಿಗಳಿಂದ ಶಬ್ದಾಯಮಾನವಾದ, ನಾನಾ....ತಾಂ - ಅನೇಕ ವಿಧವಾದ ಮೃಗಗಳಿಂದ ಸೇವಿಸಲ್ಪಟ್ಟ, ನಾನಾ.... ನಾಂ - ನಾನಾಬಗೆಗಳಾದ ಅರಣ್ಯಪರಂಪರೆಗಳುಳ್ಳ, ನಾನಾ....ತಾಂ - ಅನೇಕ ರಾಕ್ಷಸರಿಂದ ಸೇವಿಸಲ್ಪಟ್ಟ, ಸಮೃದ್ಧಾಂ - ಸಕಲೈಶ್ವರ್ಯಸಂಪನ್ನವಾದ, ಸಮೃದ್ಧಾರ್ಥಾಂ - ಸಂಪೂರ್ಣವಾದ ಪದಾರ್ಥಗಳುಳ್ಳ, ತಾಂ - ಆ, ರಾವಣಸ್ಯ - ರಾವಣನ, ಪುರೀಂ - ಪುರವನ್ನು, ಲಕ್ಷ್ಮೀವಾನ್ - ಐಶ್ವರ್ಯಸಂಪನ್ನನಾದ, ಲಕ್ಷ್ಮಣಾಗ್ರಜಃ - ಲಕ್ಷ್ಮಣನಿಗೆ ಅಣ್ಣನಾದ, ರಾಮಃ - ಶ್ರೀರಾಮನು, ವಾನರೈಸ್ಸಹ - ಕಪಿಗಳೊಡನೆ, ದದರ್ಶ - ಕಂಡನು. ॥ ೨೫-೨೭ ॥ ಅಮರಪ್ರಖ್ಯಃ - ದೇವತಾಸದೃಶನಾದ, ವೀರ್ಯವಾನ್ - ಪರಾಕ್ರಮಿಯಾದ, ಲಕ್ಷ್ಮಣಪೂರ್ವಜಃ - ಶ್ರೀರಾಮನು, ಮಹಾ.... ಧಾಂ - ದೊಡ್ಡ ಮನೆಗಳಿಂದ ತುಂಬಿದ, ತಾಂನಗರೀಂ - ಆ ಲಂಕಾಪಟ್ಟಣವನ್ನು, ದೃಷ್ಟ್ವಾ - ಕಂಡು, ವಿಸ್ಮಯಂ - ಆಶ್ಚರ್ಯವನ್ನು, ಪ್ರಾಪ - ಹೊಂದಿದನು. ॥೨೮॥ ರಾಮಃ - ಶ್ರೀರಾಮನು, ಮಹತಾ - ಮಹತ್ತರವಾದ, ಬಲೇನ - ಸೈನ್ಯದೊಡನೆ, ರತ್ನಪೂರ್ಣಾಂ - ರತ್ನಗಳಿಂದ ತುಂಬಿರುವ, ಬಹುಸಂವಿಧಾನಾಂ - ಅನೇಕ ವಿಧವಾದ ರಚನೆಗಳುಳ್ಳ, ಪ್ರಾಸಾ.... ಭಿಃ - ಉಪ್ಪರಿಗೆಗಳ ಪಙ್ಕ್ತಿಗಳಿಂದ, ಅಲಂಕೃತಾಂಚ - ಹೊಳೆಯುತ್ತಲೂ ಇರುವ, ಮಹಾ... ಪ್ಟಾಂ - ದೊಡ್ಡ ಯಂತ್ರಗಳಿಂದ

---

ಮನೋಹರವೂ, ಅನೇಕ ಉದ್ಯಾನಗಳಿಂದ ನಿಬಿಡೀಕೃತವೂ, ಪರ್ವತಪಙ್ಕ್ತಿವಿರಾಜಿತವೂ, ವಿವಿಧ ಪಕ್ಷಿಗಳ ಕಲಕಲಧ್ವನಿಭೂಷಿತವೂ, ನಾನಾವಿಧ ಮೃಗನಿಷೇವಿತವೂ, ಬಹುವಿಧ ವನೋಪವನಶೋಭಿತವೂ, ಸಮಸ್ತ ಸಂಪತ್ಸಮೃದ್ಧವೂ ಆಗಿ ರಾವಣಾಸುರಸಂರಕ್ಷಿತವಾಗಿರುವ ಆ ಲಂಕಾಪಟ್ಟಣವು ಬಹಳ ಸೊಗಸಾಗಿದ್ದಿತು. ಲಕ್ಷ್ಮಣಾಗ್ರಜನಾದ ಶ್ರೀರಾಮನು ವಾನರವೀರರೆಲ್ಲರೊಡನೆಯೂ ಆ ಪಟ್ಟಣವನ್ನು ನೋಡಿದನು. ಮಹೋನ್ನತವಾದ ಗೃಹಗಳಿಂದ ಕಿಕ್ಕಿರಿದು ಶೋಭಿಸುತ್ತಿರುವ ಆ ಲಂಕಾಪಟ್ಟಣವನ್ನು ನೋಡಿ ಲಕ್ಷ್ಮಣಪೂರ್ವಜನೂ, ಉತ್ತಮ ಪರಾಕ್ರಮವುಳ್ಳವನೂ ಆದ ಶ್ರೀರಾಮನು ಪರಮಾಶ್ಚರ್ಯಭರಿತನಾದನು. ಅನೇಕ ರತ್ನಗಳಿಂದ ತುಂಬಿ, ನಾನಾವಿಧಗಳಾದ ಸಂವಿಧಾನಗಳಿಂದ ಶೋಭಿಸಿ, ಉಪ್ಪರಿಗೆಗಳ ಸಾಲುಗಳಿಂದೊಪ್ಪಿ, ದೊಡ್ಡದೊಡ್ಡ ಯಂತ್ರಗಳಿಂದಲೂ, ಮಹಾ ದ್ವಾರಗಳಿಂದಲೂ ಪ್ರಕಾಶಿಸು

ಪುರೀಂ ಮಹಾಯಂತ್ರಕವಾಟಮುಖ್ಯಾಂ
ದದರ್ಶ ರಾಮೋ ಮಹತಾ ಬಲೇನ || ೨೯ ||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಏಕೋನಚತ್ವಾರಿಂಶಸ್ಸರ್ಗಃ



(ಚಿಲಕುಗಳಿಂದ) ಕೂಡಿದ ಉತ್ತಮವಾದ ಕದಗಳುಳ್ಳ, ತಾಂಪುರೀಂ - ಆ ಪಟ್ಟಣವನ್ನು, ದದರ್ಶ ಕಂಡನು. || ೨೯ ||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಏಕೋನಚತ್ವಾರಿಂಶಸ್ಸರ್ಗಃ.



ತ್ತಿರುವ ಆ ಲಂಕಾಪಟ್ಟಣವನ್ನು ನೋಡಿ ವಾನರಸೇನಾಸಮೇತನಾದ ಆ ಶ್ರೀರಾಮ ಮೂರ್ತಿಯು ಪರಮಾಶ್ಚರ್ಯಭರಿತನಾದನು. || ೨೫–೨೯ ||

ಇಂತಿದು ಶ್ರೀರಾಮಕೃತ ಸುವೇಲಾಚಲಾರೋಹಣ, ಲಂಕಾವೀಕ್ಷಣ ವೃತ್ತಾಂತವೆಂಬ
ಮೂವತ್ತೊಂಬತ್ತನೆಯ ಸರ್ಗವು ಸಮಾಪ್ತವಾದುದು.



# ಯುದ್ಧಕಾಂಡೇ ಚತ್ವಾರಿಂಶಸ್ಸರ್ಗಃ

**ತತೋ ರಾಮುಸ್ಸುವೇಲಾಗ್ರಂ ಯೋಜನದ್ವಯಮಂಡಲಂ । ಅರುರೋಹ ಸಸುಗ್ರೀವೋ ಹರಿಯೂಥಪಸಂವೃತಃ ॥ ೧ ॥ ಸ್ಥಿತ್ವಾ ಮುಹೂರ್ತಂ ತತ್ರೈವ ದಿಶೋ ದಶ ವಿಲೋಕಯನ್ । ತ್ರಿಕೂಟಶಿಖರೇ ರಮ್ಯೇ ನಿರ್ಮಿತಾಂ ವಿಶ್ವಕರ್ಮಣಾ ॥ ೨ ॥ ದದರ್ಶ ಲಂಕಾಂ ಸುನ್ಯಸ್ತಾಂ ರಮ್ಯಕಾನನಶೋಭಿತಾಂ । ತಸ್ಯಾಂ ಗೋಪುರಶೃಂಗಸ್ಥಂ ರಾಕ್ಷಸೇಂದ್ರಂ ದುರಾಸದಂ ॥೩॥ ಶ್ವೇತಚಾಮರಪರ್ಯಂತಂ ವಿಜಯಚ್ಛತ್ರಶೋಭಿತಂ। ರಕ್ತಚಂದನಸಂಲಿಪ್ತಂ ರತ್ನಾಭರಣಭೂಷಿತಂ ॥ ೪ ॥ ನೀಲಜೀಮೂತಸಂಕಾಶಂ**

---

ತತಃ - ಅನಂತರದಲ್ಲಿ, ರಾಮಃ - ಶ್ರೀರಾಮನು, ಸಸುಗ್ರೀವಃ - ಸುಗ್ರೀವನೊಂದೊಡಗೂಡಿ, ಹರಿ....ತಃ - ವಾನರಯೂಥಪತಿಗಳಿಂದ ಪರಿವೃತನಾಗಿ, ಯೋಜ....ಲಂ - ಎರಡು ಯೋಜನಗಳ ವಿಸ್ತಾರವಾದ ಪ್ರಮಾಣವುಳ್ಳ, ಸುವೇಲಾಗ್ರಂ - ಸುವೇಲಪರ್ವತದ ಅಗ್ರಭಾಗವನ್ನು, ಆರುರೋಹ - ಏರಿದನು. ॥೧॥ ತತ್ರೈವ - ಆ ಸುವೇಲಾಗ್ರದಲ್ಲಿಯೇ, ಮುಹೂರ್ತಂ - ಮುಹೂರ್ತಕಾಲ, ಸ್ಥಿತ್ವಾ- ನಿಂತು, ದಶದಿಶಃ - ಹತ್ತುದಿಕ್ಕುಗಳನ್ನೂ, ವಿಲೋಕಯನ್ - ನೋಡುತ್ತ, ರಮ್ಯೇ - ಮನೋಹರ ವಾದ, ತ್ರಿಕೂಟಪರ್ವತೇ - ತ್ರಿಕೂಟಪರ್ವತದಲ್ಲಿ, ವಿಶ್ವಕರ್ಮಣಾ - ವಿಶ್ವಕರ್ಮನಿಂದ, ನಿರ್ಮಿತಾಂ- ನಿರ್ಮಿಸಲ್ಪಟ್ಟ, ರಮ್ಯ....ತಾಂ-ಮನೋಹರವಾದ ತೋಟಗಳಿಂದ ಬೆಳಗುವ, ಸುನ್ಯಸ್ತಾಂ-ಚನ್ನಾಗಿ ರಚಿಸಿದ, ಲಂಕಾಂ - ಲಂಕಾಪಟ್ಟಣವನ್ನು, ದದರ್ಶ - ಕಂಡನು. ॥ ೨ ॥ ತಸ್ಯಾಂ - ಆ ಲಂಕಾ ಪಟ್ಟಣದಲ್ಲಿ, ಗೋಪುರಶೃಂಗಸ್ಥಂ - ಊರುಬಾಗಿಲಿನ ಶೃಂಗದಲ್ಲಿ ನಿಂತಿರುವ, ದುರಾಸದಂ - ಹೊಂದ ಲಸಾಧ್ಯನಾದ, ಶ್ವೇತ....ತಂ - ಬೆಳ್ಳೀಚೌರಿಗಳೇ ಪಾರ್ಶ್ವಭಾಗಗಳಲ್ಲಿ ಉಳ್ಳ, ವಿಜ....ತಂ - ಜಯ ಶೀಲವಾದ ಛತ್ರದಿಂದ ಹೊಳೆಯುವ, ರಕ್ತ....ಪ್ತಂ - ಕೆಂಪು ಗಂಧದಿಂದ ಲೇಪನ ಮಾಡಲ್ಪಟ್ಟ, ರತ್ನಾ....ತಂ - ರತ್ನವಿಕಾರವಾದ ಒಡವೆಗಳಿಂದ ಅಲಂಕೃತನಾದ, ನೀಲ....ಶಂ - ಕಾಲಮೇಘ ಸಮಾನನಾದ, ಹೇಮ....ರಂ - ಹೊದೆದುಕೊಂಡಿರುವ ಸುವರ್ಣವಸ್ತ್ರವುಳ್ಳ, ಐರಾ....ಗ್ರೈಃ - ಐರಾವತದ ದಂತಾಗ್ರಗಳಿಂದ, ಉಕ್ಲ್ಯ....ಷಂ - ಚುಚ್ಚೋಣದರಿಂದ ಹುಟ್ಟಿದ ಕಾಯಿಗಳೇ ವಕ್ಷ

---

ಆಮೇಲೆ ಶ್ರೀರಾಮನು ಸುಗ್ರೀವನೊಡನೆಯೂ, ವಾನರಯೂಥಪತಿಗಳೊಡನೆಯೂ ಎರಡುಯೋಜನಗಳ ವಿಸ್ತಾರವುಳ್ಳ ಆ ಸುವೇಲಾದ್ರಿಯ ಅಗ್ರಭಾಗವನ್ನು ಹತ್ತಿ ಅಲ್ಲಿ ಒಂದು ಕ್ಷಣಕಾಲ ನಿಂತು ದಶದಿಶೆಗಳನ್ನೂ ಪರಿಶೀಲಿಸುತ್ತಿದ್ದನು. ಆಮೇಲೆ ರಮ್ಯವಾದ ತ್ರಿಕೂಟಾ ಚಲ ಶಿಖರದಲ್ಲಿ ವಿಶ್ವಕರ್ಮನಿಂದ ನಿರ್ಮಿತವಾಗಿ, ರಮ್ಯೋದ್ಯಾನಗಳಿಂದ ಶೋಭಿತ ವಾಗಿಯೂ, ಬಹು ಸುಂದರವಾದ ರಚನಾವಿಶೇಷಗಳಿಂದ ತುಂಬಿದುದಾಗಿಯೂ ಇರುವ ಆ ಲಂಕಾಪಟ್ಟಣವನ್ನು ನೋಡಿದನು. ಆ ಸಮಯದಲ್ಲಿ ಆ ಪಟ್ಟಣದ ಗೋಪುರ ಶೃಂಗದಲ್ಲಿ ಬಿಳಿಯಬಣ್ಣದ ಚಾಮರಗಳಿಂದ ಬೀಸಲ್ಪಡುತ್ತ ಜಯಸೂಚಕವಾದ ಶ್ವೇತಚ್ಛತ್ರಗಳಿಂದ ಕೂಡಿ, ರಕ್ತಚಂದನಗಂಧದಿಂದ ಲೇಪಿಸಲ್ಪಟ್ಟ ದೇಹವುಳ್ಳವನೂ, ರತ್ನಾಭರಣಾಲಂಕೃತನೂ, ಕರಿಮೋಡಗಳ ಕಾಂತಿಯುಳ್ಳವನೂ, ಸ್ವರ್ಣರಚಿತವಾದ ವಸ್ತ್ರಗಳಿಂದಲಂಕೃತನಾದವನೂ,

ಹೇಮಸಂಛಾದಿತಾಂಬರಂ । ಐರಾವತವಿಷಾಣಾಗ್ರೈರುತ್ಕೃಷ್ಟಕಿಣವಕ್ಷಸಂ ॥ ೫ ॥ ಶಶಲೋಹಿತರಾಗೇಣ ಸಂವೀತಂ ರಕ್ತವಾಸಸಾ । ಸಂಧ್ಯಾತಪೇನ ಸಂವೀತಂ ಮೇಘರಾಶಿಮಿವಾಂಬರೇ ॥ ೬ ॥ ಪಶ್ಯತಾಂ ವಾನರೇಂದ್ರಾಣಾಂ ರಾಘವಸ್ಯಾಪಿ ಪಶ್ಯತಃ । ದರ್ಶನಾದ್ರಾಕ್ಷಸೇಂದ್ರಸ್ಯ ಸುಗ್ರೀವಸ್ಸಹಸೋತ್ಥಿತಃ ॥೭॥ ಕ್ರೋಧವೇಗೇನ ಸಂಯುಕ್ತಸ್ಸತ್ತ್ವೇನಚ ಬಲೇನಚ । ಅಚಲಾಗ್ರಾದಥೋತ್ಥಾಯ ಪುಪ್ಲುವೇ ಗೋಪುರಸ್ಥಲೇ ॥೮॥ ಸ್ಥಿತ್ವಾ ಮುಹೂರ್ತಂ ಸಂಪ್ರೇಕ್ಷ್ಯ ನಿರ್ಭಯೇನಾಂತರಾತ್ಮನಾ । ತೃಣೀಕೃತ್ಯ ಚ ತದ್ರಕ್ಷಃ ಸೋಽಬ್ರವೀತ್ಪರುಷಂ ವಚಃ ॥ ೯ ॥ "ಲೋಕನಾಥಸ್ಯ ರಾಮಸ್ಯ ಸಖಾ

---

ಸ್ಥಲದಲ್ಲಿ ಉಳ್ಳ, ಶಶ....ಣ - ಮೊಲದ ರಕ್ತಕ್ಕೆ ಸಮಾನವಾದ ಕೆಂಪು ಬಣ್ಣವುಳ್ಳ, ರಕ್ತವಾಸಸಾ - ಕೆಂಪಗಿರುವ ಉತ್ತರೀಯದಿಂದ, ಸಂವೀತಂ - ಸುತ್ತುವರೆದ, ಅಂಬರೇ - ಅಂತರಿಕ್ಷದಲ್ಲಿ, ಸಂಧ್ಯಾತಪೇನ - ಸಂಧ್ಯಾಕಾಲದ ಬಿಸಿಲಿನಿಂದ, ಸಂವೀತಂ - ವ್ಯಾಪ್ತವಾದ, ಮೇಘರಾಶಿಮಿವ - ಮೇಘತಂಡಗಳಂತಿರುವ, ರಾಕ್ಷಸೇಂದ್ರಂ - ರಾವಣನನ್ನು, ದದರ್ಶ - ಕಂಡನು. ॥೩-೬॥ ವಾನರೇಂದ್ರಾಣಾಂ - ವಾನರಯೂಥಪತಿಗಳು, ಪಶ್ಯತಾಂ ನೋಡುತ್ತಿರಲು, ರಾಘವಸ್ಯಾಪಿ-ಶ್ರೀರಾಮನೂಕೂಡ, ಪಶ್ಯತಃ- ನೋಡುತ್ತಿರಲು, ಸುಗ್ರೀವಃ - ಸುಗ್ರೀವನು, ರಾಕ್ಷಸೇಂದ್ರಸ್ಯ - ರಾವಣನ, ದರ್ಶನಾತ್ - ನೋಡುವಿಕೆಯಿಂದ, ಸಹಸಾ - ಜಾಗ್ರತೆಯಾಗಿ, ಉತ್ಥಿತಃ - ಎದ್ದನು, ಅಥ - ಬಳಿಕ, ಅಚಲಾಗ್ರಾತ್ - ಪರ್ವತದ ತುದಿಯಿಂದ, ಉತ್ಥಾಯ - ಹಾರಿ, ಕ್ರೋಧವೇಗೇನ - ಕೋಪಾತಿಶಯದಿಂದ, ಸತ್ವೇನ - ತ್ರಾಣದಿಂದಲೂ, ಬಲೇನಚ - ಶರೀರಬಲದಿಂದಲೂ, ಸಂಯುಕ್ತಃ - ಕೂಡಿ, ಗೋಪುರಸ್ಥಲೇ - ಊರುಬಾಗಲಿನ ಶಿಖರದಲ್ಲಿ, ಸ್ಥಿತ್ವಾ - ನಿಂತು, ಪುಪ್ಲುವೇ - ಹಾರಿದನು. ॥೭-೮॥ ಸಃ - ಆ ಸುಗ್ರೀವನು, ಮುಹೂರ್ತಂ - ಮುಹೂರ್ತಕಾಲ, ತದ್ರಕ್ಷಃ - ಆ ರಾವಣನನ್ನು, ಸಂಪ್ರೇಕ್ಷ್ಯ - ಕಂಡು, ನಿರ್ಭಯೇನ - ಭಯರಹಿತವಾದ, ಅಂತರಾತ್ಮನಾ - ಮನಸ್ಸಿನಿಂದ, ತೃಣೀಕೃತ್ಯ - ತೃಣವಾಗಿ ಎಣಿಸಿ, ಪರುಷಂ - ಕ್ರೂರವಾದ, ವಚಃ - ಮಾತನ್ನು, ಅಬ್ರವೀತ್ - ನುಡಿದನು. ॥೯॥ ಹೇ ರಾಕ್ಷಸ- ಎಲೈ ರಕ್ಕಸನೇ, ಲೋಕನಾಥಸ್ಯ - ಲೋಕಕ್ಕೆ ಸ್ವಾಮಿಯಾದ, ರಾಮಸ್ಯ - ಶ್ರೀರಾಮನಿಗೆ, ಸಖಾ - ಸ್ನೇಹಿತನು, ದಾಸಶ್ಚ - ಭಕ್ತನೂ ಸಹ, ಅಸ್ಮಿ - ಆಗಿದ್ದೇನೆ, ಅದ್ಯ - ಈಗ, ತ್ವಂ - ನೀನು,

---

ಐರಾವತದ ದಂತಗಳ ಹೊಡೆತಗಳಿಂದ ಎದೆಯಮೇಲೆ ಜಡ್ಡುಕಟ್ಟಿದ ಗಾಯದ ಗಂಟುಗಳುಳ್ಳವನೂ, ಮೊಲದ ರಕ್ತದಂತೆ ಬಹಳ ಕೆಂಪಾದ ವಸ್ತ್ರವನ್ನುಟ್ಟಿರುವವನೂ, ರಾಕ್ಷಸಾಧಿಪತಿಯೂ, ಶತ್ರುಗಳಿಂದ ಎದುರಿಸಲಸದಳನೂ ಆದ ರಾವಣಾಸುರನು ನಿಂತು ವಾನರಸೇನೆಯೆಲ್ಲವನ್ನೂ ಕಣ್ಣಿಟ್ಟು ನೋಡುತ್ತಿದ್ದನು. ॥ ೧-೬ ॥ ವಾನರವೀರರೂ, ರಘುಕುಲೋದ್ಭವನಾದ ಶ್ರೀರಾಮನೂ ಅವನನ್ನು ನೋಡುತ್ತಿರುವಂತೆಯೇ ಅವರ ಸಮೀಪದಲ್ಲಿದ್ದ ಸುಗ್ರೀವನು, ಕ್ರೋಧಾವೇಗದಿಂದಲೂ, ಸತ್ವಸಾಮರ್ಥ್ಯಗಳಿಂದಲೂ ಕೂಡಿದವನಾಗಿ ಆ ಸುವೇಲಾಚಲಶಿಖರದಿಂದ ಆ ಗೋಪುರದಮೇಲಕ್ಕೆ ಹಾರಿದನು. ಅವನು ಒಂದು ಕ್ಷಣಕಾಲ ಭಯರಹಿತವಾದ ಮನಸ್ಸಿನಿಂದ ಆ ರಾವಣಾಸುರನನ್ನು ನೋಡಿ ಅವನನ್ನು ತೃಣದಂತೆ ಭಾವಿಸಿ ಅವನನ್ನು ಕುರಿತು ಬಹುಕಠಿನವಾಗಿ, "ಎಲವೋ ರಾಕ್ಷಸಾಧಮನೇ! ರಾವಣನೇ; ನಾನು ಲೋಕನಾಥನಾದ ಶ್ರೀರಾಮನ ಸ್ನೇಹಿತನು ; ಅವನಿಗೆ ದಾಸನೂ ಆಗಿರುವೆನು. ಆದುದರಿಂದ

ದಾಸೋಽಸ್ಮಿ ರಾಕ್ಷಸ || ನಮಯಾ ಮೋಕ್ಷ್ಯಸೇಽದ್ಯ ತ್ವಂ ಪಾರ್ಥಿವೇಂದ್ರಸ್ಯ ತೇಜಸಾ ||೧೦|| ಇತ್ಯುಕ್ತ್ವಾ ಸಹಸೋತ್ಪತ್ಯ ಪುಪ್ಲುವೇ ತಸ್ಯ ಚೋಪರಿ | ಆಕೃಷ್ಯ ಮುಕುಟಂ ಚಿತ್ರಂ ಪಾತಯಿತ್ವಾಽಪತದ್ಭುವಿ ||೧೧|| ಸಮೀಕ್ಷ್ಯ ತೂರ್ಣಮಾಯಾಂತಮಾಬಭಾಷೇ ನಿಶಾಚರಃ | "ಸುಗ್ರೀವಸ್ತ್ವಂ ಪರೋಕ್ಷಂ ಮೇ ಹೀನಗ್ರೀವೋ ಭವಿಷ್ಯಸಿ" ||೧೨|| ಇತ್ಯುಕ್ತ್ವೋತ್ಥಾಯ ತಂ ಕ್ಷಿಪ್ರಂ ಬಾಹುಭ್ಯಾಮಾಕ್ಷಿಪತ್ತಲೇ | ತಂಕುವತ್ತಂ ಸಮುತ್ಥಾಯ ಬಾಹುಭ್ಯಾಮಾಕ್ಷಿಪದ್ಧರಿಃ ||೧೩|| ಪರಸ್ಪರಂ ಸ್ವೇದವಿದಿಗ್ಧಗಾತ್ರೌ ಪರಸ್ಪರಂ ಶೋಣಿತದಿಗ್ಧದೇಹೌ | ಪರಸ್ಪರಂ ಶ್ಲಿಷ್ಟನಿರುದ್ಧಚೇಷ್ಟೌ ಪರಸ್ಪರಂ ಶಾಲ್ಮಲಿ

---

ಪಾರ್ಥಿವೇಂದ್ರಸ್ಯ - ಶ್ರೀರಾಮನ, ತೇಜಸಾ - ಪ್ರಭಾವದಿಂದ, ಮಯಾ - ನನ್ನಿಂದ, ನಮೋಕ್ಷ್ಯಸೇ - ಬಿಡಲ್ಪಡುವದಿಲ್ಲವು. ||೧೦|| ಇತಿ - ಇಂತೆಂದು, ಉಕ್ತ್ವಾ - ಹೇಳಿ, ಸಹಸಾ - ಜಾಗ್ರತೆಯಾಗಿ, ಉತ್ಪತ್ಯ - ಹಾರಿ, ತಸ್ಯ - ಆ ರಾವಣನ, ಉಪರಿ - ಮೇಲೆ, ಪುಪ್ಲುವೇ - ಹಾರಿದನು, ಚಿತ್ರಂ - ಆಶ್ಚರ್ಯಕರವಾದ, ಮುಕುಟಂ - ಕಿರೀಟವನ್ನು, ಆಕೃಷ್ಯ - ಸೆಳದು, ಭುವಿ - ನೆಲದಲ್ಲಿ, ಪಾತಯಿತ್ವಾ-ಬೀಳಿಸಿ, ಅಪತತ್ - ಬಿದ್ದನು. ||೧೧|| ನಿಶಾಚರಃ - ರಾಕ್ಷಸನಾದ ರಾವಣನು, ತೂರ್ಣಂ - ಜಾಗ್ರತೆಯಾಗಿ, ಆಯಾಂತಂ - ಬರುತ್ತಿರುವ ಸುಗ್ರೀವನನ್ನು, ಸಮೀಕ್ಷ್ಯ - ಕಂಡು, ತ್ವಂ - ನೀನು, ಮೇ-ನನ್ನ, ಪರೋಕ್ಷಂ - ಅಸನ್ನಿಧಾನದಲ್ಲಿ, ಸುಗ್ರೀವಃ - ಒಳ್ಳೇ ಕಂಠವುಳ್ಳವನು, ಹೀನಗ್ರೀವಃ - ಸಮಕ್ಷಮದಲ್ಲಿ ಕಂಠಹೀನನು, ಭವಿಷ್ಯಸಿ - ಆಗುವೆ. ||೧೨|| ಇತ್ಯುಕ್ತ್ವಾ - ಈ ರೀತಿ ಹೇಳಿ, ಉತ್ಥಾಯ - ಎದ್ದು, ತಂ - ಆ ಸುಗ್ರೀವನನ್ನು, ಕ್ಷಿಪ್ರಂ - ಜಾಗ್ರತೆಯಾಗಿ, ಬಾಹುಭ್ಯಾಂ - ಭುಜಗಳಿಂದ, ತಲೇ - ಗೋಪುರದ ಪ್ರದೇಶವಲ್ಲಿ, ಆಕ್ಷಿಪತ್ - ಹಾರಿದನು, ಕಂತುವತ್ - ಚಂಡಿನಂತೆ, ಹರಿಃ-ಸುಗ್ರೀವನು, ಸಮುತ್ಥಾಯ - ಎದ್ದು, ತಂ - ಆ ರಾವಣನನ್ನು, ಬಾಹುಭ್ಯಾಂ - ಭುಜಗಳಿಂದ, ಆಕ್ಷಿಪತ್ - ಎತ್ತಿಹಾಕಿದನು. ||೧೩|| (ಅವರಿಬ್ಬರೂ) ಪರಸ್ಪರಂ - ಅನ್ಯೋನ್ಯವಾಗಿ, ಸ್ವೇದ....ತ್ರೌ - ಬೆವರಿನಿಂದ ತೊಯಿಸಲ್ಪಟ್ಟ ಶರೀರವುಳ್ಳವರಾದರು, ಪರಸ್ಪರಂ - ಒಬ್ಬರಿಗೊಬ್ಬರು, ಶೋಣಿ....ಹೌ - ರಕ್ತದಿಂದಲೇ ಲೇಪಿಸಲ್ಪಟ್ಟ ಶರೀರವುಳ್ಳವರಾದರು, ಪರಸ್ಪರಂ - ಅನ್ಯೋನ್ಯವಾಗಿ, ಶಾಲ್ಮ....ಥಾ - ಬೂರುಗದ ಮರದಂತೆಯೂ, ಮುತ್ತುಗದ ಗಿಡದಂತೆಯೂ, ಪರಸ್ಪರಂ - ಅನ್ಯೋನ್ಯವಾಗಿ,

---

ಆ ಮಹಾತ್ಮನ ತೇಜೋಮಹಿಮೆಯಿಂದ ಕೂಡಿದ ನನ್ನಕೈಗೆ ಸಿಕ್ಕಿರುವ ನೀನು ಎಷ್ಟುಮಾತ್ರವೂ ತಪ್ಪಿಸಿಕೊಂಡು ಹೋಗಲಾರೆಯೆಂದು ತಿಳಿ" ಎಂದು ಹೇಳಿದನು. ||೭-೧೦|| ಆ ಸುಗ್ರೀವನು ಈ ರೀತಿ ನುಡಿದು ಬಹು ಶೀಘ್ರವಾಗಿ ಆ ರಾವಣನಮೇಲೆ ಹಾರಿ ಅವನ ಕಿರೀಟವನ್ನು ಒದ್ದು ಭೂಮಿಯಲ್ಲಿ ಕೆಡವಿದನು. ಇಂತಹ ಅದ್ಭುತ ಕಾರ್ಯವನ್ನು ಮಾಡಿ ತನಗೆದುರಾಗಿರುವ ಆ ಸುಗ್ರೀವನನ್ನು ನೋಡಿ ರಾವಣನು ಅವನನ್ನು ಕುರಿತು, "ಎಲಾ ಸುಗ್ರೀವಾ! ನೀನು ನನ್ನೆದುರುಬೀಳುವುದಕ್ಕೆ ಮುಂಚೆ ಸುಗ್ರೀವನೆಂದು ಕೀರ್ತಿಯನ್ನು ಪಡೆದಿದ್ದೆ. ಇನ್ನು ಮುಂದೆ ನಿನ್ನ ಆ ಹೆಸರು ಅಳಿದು ಹೀನಗ್ರೀವನೆಂದು ಹೆಸರು ಪಡೆಯುವೆ" ಎಂದು ಹೇಳಿ ಬಹು ಬೇಗನೆದ್ದು ತನ್ನ ತೋಳುಗಳಿಂದ ಆ ಸುಗ್ರೀವನನ್ನು ಹಿಡಿದು ಭೂಮಿಯಲ್ಲಿ ಕೆಡವಿದನು. ಆ ಸುಗ್ರೀವನು ಸ್ಮೃತಿತಿಳಿದೆದ್ದು ಆ ರಾವಣನನ್ನು ತೋಳುಗಳಿಂದ ಹಿಡಿದು ಆ ಗೋಪುರಸ್ಥಳದಲ್ಲಿ ಪುಟಚಂಡಿನಂತೆ ಎತ್ತಿ ಒಗೆದನು. ಆಗಲಾ ರಾವಣಸುಗ್ರೀವರಿಬ್ಬರೂ, ಬೆವರಿನಿಂದ ವ್ಯಾಪ್ತವಾದ ದೇಹವುಳ್ಳವರಾಗಿ ರಕ್ತಸಿಕ್ತರಾದರು. ಇಷ್ಟೆಯಲ್ಲದೆ

ಕಿಂಶುಕೌ ಯಥಾ ॥ ೧೪ ॥ ಮುಷ್ಟಿಪ್ರಹಾರೈಶ್ಚ ತಲಪ್ರಹಾರೈರರತ್ನಿಘಾತೈಶ್ಚ ಕರಾಗ್ರಘಾತೈಃ । ತೌ ಚಕ್ರತುರ್ಯುದ್ಧಮಸಹ್ಯರೂಪಂ ಮಹಾಬಲೌ ವಾನರರಾಕ್ಷಸೇಂದ್ರೌ ॥೧೫॥ ಕೃತ್ವಾ ನಿಯುದ್ಧಂ ಭೃಶಮುಗ್ರವೇಗೌ ಕಾಲಂ ಚಿರಂ ಗೋಪುರವೇದಿಮಧ್ಯೇ । ಉತ್ಕ್ಷಿಪ್ಯ ಚಾಕ್ಷಿಪ್ಯ ವಿನಮ್ಯ ದೇಹೌ ಪಾದಕ್ರಮಾದ್ಗೋಪುರವೇದಿಲಗ್ನೌ ॥ ೧೬ ॥ ಅನ್ಯೋನ್ಯಮಾವಿಧ್ಯ ವಿಲಗ್ನದೇಹೌ ತೌ ಪೇತತುಸ್ಸಾಲಶಿಖಾತಮಧ್ಯೇ । ಉತ್ಪೇತತುರ್ಭೂತಲಮಸ್ಪೃಶಂತೌ ಸ್ಥಿತ್ವಾ ಮುಹೂರ್ತಂ ತ್ವಭಿನಿಶ್ವಸಂತೌ ॥೧೭॥ ಆಲಿಂಗ್ಯ

ಶ್ಲಿಷ್ಟ....ಷ್ಟೌ - ಅನ್ಯೋನ್ಯವಾಗಿ ಅಪ್ಪಿಕೊಳ್ಳುವುದರಿಂದ ತಡೆಯಲ್ಪಟ್ಟ ಚೇಷ್ಟೆಗಳುಳ್ಳವರಾಗಿ, ಮಹಾಬಲೌ - ಬಹು ಬಲಿಷ್ಠರಾದ, ತೌವಾನರರಾಕ್ಷಸೇಂದ್ರೌ - ಆ ಸುಗ್ರೀವ ರಾವಣರು, ಮುಷ್ಟಿಪ್ರಹಾರೈಶ್ಚ ಮುಷ್ಟಿಪ್ರಹಾರಗಳಿಂದಲೂ, ತಲಪ್ರಹಾರೈಃ-ಅಂಗೈ ಹೊಡೆತಗಳಿಂದಲೂ, ಅರತ್ನಿಘಾತೈಃ-ಕಿರಿಬೆರಳು ಹೊರತು ಹಿಡಿದ ಮುಷ್ಟಿಯ ಪ್ರಹಾರಗಳಿಂದಲೂ, ಕರಾಗ್ರಘಾತೈಶ್ಚ - ಅಂಗುಳಿಪ್ರಹಾರಗಳಿಂದಲೂ, ಅಸಹ್ಯರೂಪಂ - ಸಹಿಸಲಸಾಧ್ಯವಾದ, ಯುದ್ಧಂ - ಕಾಳಗವನ್ನು, ಚಕ್ರತುಃ - ಮಾಡಿದರು. ॥ ೧೪-೧೫ ॥ ಉಗ್ರವೇಗೌ - ಭಯಂಕರವಾದ ವೇಗವುಳ್ಳ, ತೌ - ಆ ಸುಗ್ರೀವ ರಾವಣರು, ಗೋಪುರವೇದಿಮಧ್ಯೇ - ಗೋಪುರವೇದಿಕೆಯ ಮಧ್ಯದಲ್ಲಿ ಚಿರಕಾಲಂ - ಬಹುಕಾಲ, ನಿಯುದ್ಧಂ - ಯುದ್ಧವನ್ನು, ಕೃತ್ವಾ - ಮಾಡಿ, ದೇಹೌ - ಶರೀರಗಳನ್ನು, ಉತ್ಕ್ಷಿಪ್ಯ - ಕೆಳಗೆಹಾಕಿ, ವಿನಮ್ಯಚ-ಬೊಗ್ಗಿಸಿ, ಪಾದಕ್ರಮಾತ್ - ಪಾದವಿನ್ಯಾಸದಿಂದ, ಗೋಪುರವೇದಿಲಗ್ನೌ - ಗೋಪುರದ ವೇದಿಕೆಯಲ್ಲಿ ಸಂಬಂಧಿಸಿದವರಾಗಿ, ಅನ್ಯೋನ್ಯಂ - ಪರಸ್ಪರವಾಗಿ, ಆವಿಧ್ಯ - ಹೊಡೆದು, ವಿಲಗ್ನದೇಹೌ - ಸಂಬಂಧಿಸದ ಶರೀರಗಳುಳ್ಳವರಾಗಿ, ಸಾಲ....ಧ್ಯೇ - ಕೋಟೆಯ ಗೋಡೆಗೂ ಅಗಳ್ತೆಗೂ ಮಧ್ಯದಲ್ಲಿ, ಪೇತತುಃ - ಬಿದ್ದರು. ॥೧೬॥ ಆಹವೇ - ಕಾಳಗದಲ್ಲಿ, ತೌ - ಆ ಸುಗ್ರೀವ ರಾವಣರು, ಉತ್ಪೇತತುಃ-ಹಾರಿದರು, ಭೂತಲಂ - ನೆಲವನ್ನು, ಅಸ್ಪೃಶಂತೌ - ಸ್ಪರ್ಶಿಸದೆ, ಮುಹೂರ್ತಂ - ಮುಹೂರ್ತಕಾಲ, ಸ್ಥಿತ್ವಾ - ನಿಂತು, ಅಭಿನಿಶ್ವಸಂತೌ - ಎದುರಾಗಿ ನಿಟ್ಟುಸಿರು ಬಿಡುವವರಾಗಿ, ಆಲಿಂಗ್ಯ - ಅಪ್ಪಿಕೊಂಡು, ಅವಲ್ಗ್ಯಚ-ಹಾರಿ, ಬಾಹುಯೋಕ್ತ್ರೈಃ-ಭುಜಪಾಶಗಳಿಂದ, ಸಂಯೋಜಯಾಮಾಸತುಃ-ಹಿಡಿದುಕೊಂಡರು. ॥೧೭॥ ಸಂರಂ:....ಕ್ತೌ - ಆಗ್ರಹದಿಂದಲೂ ಕಾಳೆಗದ ಶಿಕ್ಷಾಬಲದಿಂದಲೂ ಕೂಡಿ

ಅವರಿಬ್ಬರೂ ಪರಸ್ಪರವಾಗಿ ಅಮರುತ್ತಲೂ, ಶಾಲ್ಮಲೀ ವೃಕ್ಷಗಳಂತೆಯೂ, ಮುತ್ತುಗದ ಮರಗಳಂತೆಯೂ ಶೋಭಿಸುತ್ತಿದ್ದರು. ಆ ರಾವಣಸುಗ್ರೀವರಿಬ್ಬರೂ, ಮುಷ್ಟಿಗಳಿಂದಲೂ, ಪಾದತಲಪ್ರಹಾರಗಳಿಂದಲೂ, ಮೊಣಕೈ ಹೊಡೆತಗಳಿಂದಲೂ, ಹಸ್ತಾಗ್ರಘಾತಗಳಿಂದಲೂ ಅತಿ ಘೋರವಾದ ಯುದ್ಧವನ್ನು ಮಾಡಿದರು. ॥ ೧೧–೧೫ ॥ ಇಷ್ಟೆಯಲ್ಲದೆ ಆ ರಾವಣಸುಗ್ರೀವರೀರ್ವರೂ ಅತ್ಯಧಿಕ ವೇಗವುಳ್ಳವರಾಗಿ ಆ ಗೋಪುರ ವೇದಿಕೆಯ ಮಧ್ಯಪ್ರದೇಶದಲ್ಲಿ ಮಹೋಗ್ರವಾದ ಬಾಹುಯುದ್ಧವನ್ನು ಮಾಡಿ, ಚಿತ್ರ ಯುದ್ಧವನ್ನೂ ಮಾಡುತ್ತ ಬಹಳವಾಗಿ ನಿಟ್ಟುಸಿರುಗಳನ್ನು ಬಿಡುತ್ತ ಕ್ಷಣಮಾತ್ರ ಸುಮ್ಮನಿದ್ದು ಆಮೇಲೆ ಅಂತರಿಕ್ಷಕ್ಕೆ ಹಾರಿದರು. ಹೀಗೆ ಅಂತರಿಕ್ಷಕ್ಕೆ ಹಾರಿ ನಿಂತು ಅಲ್ಲಿಯೂ ಸ್ವಲ್ಪಕಾಲ ಯುದ್ಧಮಾಡಿ ಅಗಳ್ತೆ ಮತ್ತು ಪ್ರಾಕಾರಗಳ ಮಧ್ಯಭೂಮಿಗಿಳಿದು ಬಿದ್ದು ಕೂಡಲೇ ಎದ್ದು ಅಲ್ಲಿಯೂ ಪುನಃ ಯುದ್ಧಕ್ಕಾರಂಭಿಸಿ ಪರಸ್ಪರ ಬಾಹುಪಾಶಗಳಿಂದ ಬಂಧಿಸುತ್ತ ಅತ್ಯದ್ಭುತವಾಗಿ ಯುದ್ಧ ಮಾಡಿದರು. ಆ ಸಮಯದಲ್ಲಿ ಮಹಾ ಶೂರರಾದ ಆ ರಾವಣಸುಗ್ರೀವರಿಬ್ಬರೂ ಪರಸ್ಪರವಾದ

ಚಾವಲ್ಗ್ಯ ಚ ಬಾಹುಯೋಕ್ತ್ರೈ ಸ್ಸಂಯೋಜಯಾಮಾಸತುರಾಹವೇ ತೌ । ಸಂರಂಭ ಶಿಕ್ಷಾಬಲಸಂಪ್ರಯುಕ್ತೌ ಸಂಚೇರತುಸ್ಸಂಪ್ರತಿ ಯುದ್ಧಮಾರ್ಗೈಃ ॥೧೮॥ ಶಾರ್ದೂಲ ಸಿಂಹಾವಿವ ಜಾತದರ್ಪೌ ಗಜೇಂದ್ರಪೋತಾವಿವ ಸಂಪ್ರಯುಕ್ತೌ । ಸಂಹತ್ಯ ಚಾಪೀ ಡ್ಯ ಚ ತಾವುರೋಭ್ಯಾಂ ನಿಪೇತತುರ್ವೈ ಯುಗಪದ್ಧರಣ್ಯಾಂ ॥ ೧೯ ॥ ಉದ್ಯಮ್ಯ ಚಾನ್ಯೋನ್ಯಮಧಿಕ್ಷಿಪಂತೌ ಸಂಚಕ್ರಮಾತೇ ಬಹುಯುದ್ಧಮಾರ್ಗೈಃ । ವ್ಯಾಯಾಮ ಶಿಕ್ಷಾಬಲಸಂಪ್ರಯುಕ್ತೌ ಕ್ಲಮಂ ನತೌ ಜಗ್ಮತುರಾಶುವೀರೌ ॥೨೦॥ ಬಾಹೂತ್ತಮೈ ರ್ವಾರಣವಾರಣಾಭೈರ್ನಿವಾರಯಂತೌ ವರವಾರಣಾಭೌ । ಚಿರೇಣ ಕಾಲೇನತು ಸಂಪ್ರ

---

ದವರಾಗಿ, ಶಾ...ಲ...ಪ - ವ್ಯಾಘ್ರ ಸಿಂಹಗಳಂತೆ, ಜಾತದರ್ಪೌ - ಹುಟ್ಟಿದ ದರ್ಪವುಳ್ಳವರಾಗಿ, ಗಜೇಂದ್ರಪೋತಾವಿವ - ಉತ್ತಮವಾದ ಆನೆಯ ಮರಿಗಳಂತೆ, ಸಂಪ್ರಯುಕ್ತೌ - ಸೇರಿ, ಯುದ್ಧ ಮಾರ್ಗೈಃ - ಕಾಳಗದ ಪದ್ಧತಿಗಳಿಂದ, ಸಂಪ್ರತಿ - ಈಗಲೂ, ಸಂಚೇರತುಃ - ಸಂಚರಿಸಿದರು. ॥೧೮॥ ತೌ - ಆ ಸುಗ್ರೀವ ರಾವಣರು, ಉರೋಭ್ಯಾಂ - ವಕ್ಷಸ್ಥಳಗಳಿಂದ, ಅನ್ಯೋನ್ಯಂ - ಪರಸ್ಪರವಾಗಿ, ಸಂಹತ್ಯ - ಹೊಡೆದು, ಆಪೀಡ್ಯಚ - ಪೀಡಿಸಿ, ಯುಗಪತ್ - ಏಕಕಾಲದಲ್ಲಿ, ಧರಣ್ಯಾಂ - ಭೂಮಿ ಯಲ್ಲಿ, ಪೇತತುಃ - ಬಿದ್ದರು, ಅನ್ಯೋನ್ಯಂ - ಪರಸ್ಪರವಾಗಿ, ಉದ್ಯಮ್ಯ - ಎತ್ತಿ, ಅಧಿಕ್ಷಿಪಂತೌ - ಕೆಳಗೆ ಬೀಳಿಸುತ್ತ, ಬಹು......ರ್ಗೈಃ - ಬಹಳವಾದ ಕಾಳಗದ ಸಾಹಸಗಳಿಂದ, ಸಂಚಕ್ರಮಾತೇ - ತಿರುಗುತ್ತಾ ಬಂದರು ॥ ೧೯ ॥ ವೀರೌ - ಶೂರರಾದ, ವರವಾರಣಾಭೌ - ಉತ್ತಮವಾದ ಲತೆಗಳಂ ತಿರುವ, ತೌ - ಆ ರಾವಣ ಸುಗ್ರೀವರು, ವ್ಯಾಯಾ....ಕ್ತೌ - ಜಟ್ಟೀಕಾಳಗದ ಶಿಕ್ಷೆಯ ಅತಿಶಯದಿಂದ, ಸಂಪ್ರಯುಕ್ತೌ - ಕೂಡಿ, ವಾರಣವಾರಣಾಭೈಃ - ಗಜನಿವಾರಣ ಸ್ತಂಭಗಳಂತೆ ಹೊಳೆಯುತ್ತಿರುವ, ಬಾಹೂತ್ತಮೈಃ-ಉತ್ತಮವಾದ ಭುಜಗಳಿಂದ, ಆಶು-ಜಾಗ್ರತೆಯಾಗಿ, ನಿವಾರಯಂತೌ-ತಡೆಯುತ್ತ, ಕ್ಲಮಂ-ಆಯಾಸವನ್ನು, ನಜಗ್ಮತುಃ-ಹೊಂದಲಿಲ್ಲವು. ॥ ೨೦ ॥ ಚಿರೇಣಕಾಲೇನ-ಬಹುಕಾಲದಿಂದ, ಸಂಪ್ರಯುಕ್ತೌ - ಸೇರಿದವರಾಗಿ, ಆಶು - ಜಾಗ್ರತೆಯಾಗಿ, ಮಂಡಲಮಾರ್ಗಾನ್ - ಸುತ್ತ ತಿರುಗುವ

---

ಕೋಪಾಟೋಪವನ್ನೂ, ರಣಶಿಕ್ಷಾಕೌಶಲವನ್ನೂ ತೋರುತ್ತ ಬಹು ರಭಸವಾಗಿ ಸೆಣಸಿ ಯುದ್ಧಮಾಡಿದರು. ಈ ರೀತಿ ಯುದ್ಧಮಾಡುತ್ತಿದ್ದ ಅವರಿಬ್ಬರೂ ಮಹಾ ವ್ಯಾಘ್ರ ಗಳಂತೆಯೂ, ಸಿಂಹಗಳಂತೆಯೂ ಮಹಾ ಕೋಪವುಳ್ಳವರಾಗಿ ಕಾದಿದರು. ಇಬ್ಬರೂ ಆನೆಯ ಮರಿಗಳಂತೆ ಗುದ್ದಾಡಿದರು. ಹೀಗೆ ಸ್ವಲ್ಪಹೊತ್ತು ಯುದ್ಧಮಾಡಿ ಒಬ್ಬರನ್ನೊಬ್ಬರು ಕಟ್ಟಿಕೊಳ್ಳುತ್ತ ಬಹಳವಾಗಿ ಪೀಡಿಸಲ್ಪಟ್ಟವರಾಗಿ ಯುದ್ಧಭೂಮಿಯಲ್ಲಿ ಬಿದ್ದು ಪುನಃ ಮೇಲಕ್ಕೆದ್ದು ಯುದ್ಧೋದ್ಯೋಗಿಗಳಾಗಿ ನಿಂತು ಒಬ್ಬರನ್ನೊಬ್ಬರು ಬಯ್ದಾಡುತ್ತ ನಾನಾವಿಧ ಯುದ್ಧಮಾರ್ಗಗಳಲ್ಲಿ ಪ್ರವರ್ತಿಸಿದರು. ಬಾಲ್ಯದಲ್ಲಿ ಮಾಡಿದ ಸಾಧನೆಯಿಂದಲೂ, ಬಾಲ್ಯ ಶಿಕ್ಷೆಯಿಂದಲೂ, ಅತಿಶಯ ಬಲದಿಂದಲೂ ಕೂಡಿ ಅತ್ಯಧಿಕ ಬಲಪರಾಕ್ರಮಗಳುಳ್ಳ ಆ ರಾವಣಸುಗ್ರೀವರೀರ್ವರೂ ಹೀಗೆ ಯುದ್ಧಮಾಡುತ್ತಿದ್ದರೂ ಸ್ವಲ್ಪವಾದರೂ ಶ್ರಮವನ್ನು ಹೊಂದಲಿಲ್ಲವು. ಆನೆಗಳನ್ನು ಹಿಡಿದು ಬಂಧಿಸಲು ತಕ್ಕುದಾದ ಸರಪಣಿಗಳಿಗೆ ಸರಿಹೋಲುವ ಬಾಹುಗಳಿಂದ ಅವರಿಬ್ಬರೂ ಪ್ರಬಲಯುದ್ಧ ಮಾಡಿದರು. ॥೧೬-೨೦॥ ಬಹಳಹೊತ್ತು ಒಬ್ಬ ರೊಡನೊಬ್ಬರು ಕೂಡಿದವರಾಗಿ ಮಂಡಲಗತಿಗಳನ್ನು ಹೊಂದುತ್ತ ಒಬ್ಬರನ್ನೊಬ್ಬರು

ಯುಕ್ತೌ ಸಂಚೇರತುರ್ಮಂಡಲಮಾರ್ಗಮಾಶು || ೨೧ || ತೌ ಪರಸ್ಪರಮಾಸಾದ್ಯ ಯತ್ತಾವನ್ಯೋನ್ಯಸೂದನೇ | ಮಾರ್ಜಾರಾವಿವ ಭಕ್ಷಾರ್ಥೇ ವಿತಸ್ಥಾತೇ ಮುಹುರ್ಮುಹುಃ ||೨೨|| ¶ ಮಂಡಲಾನಿ ವಿಚಿತ್ರಾಣಿ ಸ್ಥಾನಾನಿ ವಿವಿಧಾನಿಚ | ಗೋಮೂತ್ರಿಕಾಣಿ ಚಿತ್ರಾಣಿ ಗತಪ್ರತ್ಯಾಗತಾನಿಚ || ೨೩ || ತಿರಶ್ಚೀನಗತಾನ್ಯೇವ ತಥಾವಕ್ರಗತಾನಿಚ | ಪರಿಮೋಕ್ಷಂ ಪ್ರಹಾರಾಣಾಂ ವರ್ಜನಂ ಪರಿಧಾವನಂ || ೨೪|| ಅಭಿದ್ರವಣ

---

ರೀತಿಯನ್ನು, ಸಂಚೇರತುಃ - ಮಾಡಿದರು. ||೨೧|| ತೌ - ಅವರು, ಅನ್ಯೋನ್ಯಸ್ಯ - ಪರಸ್ಪರವಾಗಿ, ಸೂದನೇ - ಸಂಹಾರದ ವಿಷಯದಲ್ಲಿ, ಪರಸ್ಪರಂ - ಅನ್ಯೋನ್ಯವಾಗಿ, ಆಸಾದ್ಯ - ಸೇರಿ, ಭಕ್ಷಾರ್ಥೇ-ಭಕ್ಷಣಾರ್ಥವಾಗಿ, ಮುಹುರ್ಮುಹುಃ-ಬಾರಿಬಾರಿಗೂ, ಮಾರ್ಜಾರಾವಿವ-ಬೆಕ್ಕುಗಳಂತೆ, ವಿತಸ್ಥಾತೇ-ನಿಂತರು. || ೨೨ || ಕಿಂಚ - ಇಷ್ಟುಮಾತ್ರವಲ್ಲದೆ, ಯುದ್ಧ......ಧೌ - ಯುದ್ಧರೀತಿಯನ್ನು ತಿಳಿದಿರುವ, ವಾನರೇಂದ್ರಃ - ಸುಗ್ರೀವನೂ, ರಾವಣಶ್ಚ - ರಾವಣನೂ, ತೌ - ಇಬ್ಬರೂ, ವಿಚಿತ್ರಾಣಿ - ವಿಚಿತ್ರವಾದ, ಸವ್ಯ-ಅಪಸವ್ಯ, ಸವ್ಯಾಪಸವ್ಯ-ಅರ್ಧಭ್ರಮಣ ಎಂಬಿವೇ ಮೊದಲಾದ ನಾನಾಭೇದಗಳುಳ್ಳ, ಮಂಡಲಾನಿ - ಏಕಪಾದ ಸಂಚಾರ ದ್ವಿಪಾದ ಸಂಚಾರಗಳೆಂಬ ಮಂಡಲ ಗತಿಗಳನ್ನು, ಗೋಮೂತ್ರಿಕಾಣಿ - ಗೋಮೂತ್ರಾಕಾರದಂತಿರುವ ವಕ್ರ ಗಮನಗಳನ್ನು, ಚಿತ್ರಾಣಿ - ಆಶ್ಚರ್ಯಕರವಾದ, ಗತ....ಚ - ಗಮನಾಗಮನಗಳನ್ನು, ತಿರಶ್ಚೀನಗತಾನಿಚ-ಅಡ್ಡವಾಗಿ ಹೋಗುವಿಕೆಯನ್ನು, ತಥಾ - ಹಾಗೆಯೇ, ವಕ್ರಗತಾನಿಚ ಸವ್ಯಾಪಸವ್ಯ ಸಂಚಾರಗಳನ್ನು, ಪ್ರಹಾರಾಣಾಂ - ಹೊಡತೆಗಳ, ಪರಿಮೋಕ್ಷಂ - ಬಿಡಿಸಿಕೊಳ್ಳುವಿಕೆಯನ್ನು, ವರ್ಜನಂ - ತಾನು ಹೊಡೆಯದಿರುವಿಕೆಯನ್ನು, ಪರಿಧಾವನಂ-

---

ವಂಚಿಸಬೇಕೆಂಬ ಬಯಕೆಯಿಂದ ಅವರೀರ್ವರೂ ಭಕ್ಷ್ಯಕ್ಕೆ ಕಾದಾಡುವ ಬೆಕ್ಕುಗಳಂತೆ ನಿಂತರು. ಅವರು ಮಂಡಲಗತಿಗಳಿಂದಲೂ, ವಿಚಿತ್ರಗಳಾದ ವಿವಿಧ ಗತಿಗಳಿಂದಲೂ, ಗೋಮೂತ್ರಿಕಾಗತಿಗಳಿಂದಲೂ ಹೋಗುತ್ತಲೂ ಮುಂದೆ ಬರುತ್ತಲೂ ಬಹು ವಿಚಿತ್ರವಾದ ಯುದ್ಧವನ್ನು ಮಾಡಿದರು. ಅಡ್ಡವಾಗಿ ತಿರುಗುವುದು, ವಕ್ರಗತಿಗಳನ್ನು ಹಿಡಿಯುವುದು ಇವೇ ಮೊದಲಾದ ಚಮತ್ಕಾರಗಳಿಂದ ಆ ರಾವಣಸುಗ್ರೀವರೀರ್ವರೂ ಒಬ್ಬರನ್ನೊಬ್ಬರು ಸಮೀಪಿಸಿ ನೋಕುತ್ತ ಯುದ್ಧಮಾಡಿದರು. ಒಮ್ಮೊಮ್ಮೆ ಒಬ್ಬರನ್ನೊಬ್ಬರು ಬಿಟ್ಟು ದೂರ ಸರಿಯುತ್ತಲೂ, ಒಮ್ಮೊಮ್ಮೆ ಅಭಿಮುಖರಾಗುತ್ತಲೂ ಸ್ವಲ್ಪಹೊತ್ತು ಮೆಲ್ಲಮೆಲ್ಲಗೆ ನಡೆಯುತ್ತಲೂ ಬಹು ವಿನೋದಕರವಾಗಿ ಯುದ್ಧಮಾಡಿದರು. ಒಬ್ಬರನ್ನೊಬ್ಬರು ಜಯಿಸ

---

¶ ಮಂಡಲಾದಿಗಳ ಲಕ್ಷಣಗಳು ಮಹಾಭಾರತದಲ್ಲಿ ಹೀಗೆ ಪ್ರತಿಪಾದಿತವಾಗಿವೆ:—

ಏಕಪಾದಪ್ರಚಾರೇಣ ಚಾರೀಸಂಜ್ಞಂತು ಮಂಡಲಂ |
ದ್ವಿಪಾದಕ್ರಮಣಂ ಯತ್ರ ಕರಣಾಖ್ಯಂತು ಮಂಡಲಂ ||
ಕರಣಾನಾಂ ಸಮಾಯೋಗಾತ್ ಖಂಡಮಂಡಲಮೀರಿತಂ |
ಖಂಡೈಸ್ತ್ರಿಭಿಶ್ಚತುರ್ಭಿರ್ವಾ ಮಹಾಮಂಡಲಮೀರಿತಂ ||

ಧನುರ್ವೇದದಲ್ಲಿ ವಿವಿಧ ಸ್ಥಾನಗಳೆಂದರೆ,

ವೈಷ್ಣವಂ ಸಮಪಾದಂಚ ವೈಶಾಖಂ ಮಂಡಲಂ ತಥಾ |
ಪ್ರತ್ಯಾಲೀಢಮನಾಲೀಢಂ ಸ್ಥಾನಾನ್ಯೇತಾನಿ ಷಣ್ನೃಣಾಂ || ಎಂಬುವುಗಳು.

(ತಿ-ಗೋ)

ಮಾಪ್ಲಾವಮಾಸ್ಥಾನಂಚ ಸವಿಗ್ರಹಂ । ಪರಾವೃತಮಪಾವೃತ್ತಮವದ್ರುತಮವಪ್ಲುತಂ
|| ೨೫ || ಉಪನ್ಯಸ್ತಮಪನ್ಯಸ್ತಂ ಯುದ್ಧಮಾರ್ಗವಿಶಾರದೌ । ತೌ ಸಂಚೇರತು
ರನ್ಯೋನ್ಯಂ ವಾನರೇಂದ್ರಶ್ಚ ರಾವಣಃ || ೨೬ || ಏತಸ್ಮಿನ್ನಂತರೇ ರಕ್ಷೋ ಮಾಯಾ
ಬಲಮಥಾತ್ಮನಃ । ಆರಬ್ಧುಮುಪಸಂಪೇದೇ ಜ್ಞಾತ್ವಾ ತಂ ವಾನರಾಧಿಪಃ || ೨೭ ||
ಉತ್ಪಪಾತ ತದಾಕಾಶಂ ಜಿತಕಾಶೀ ಜಿತಕ್ಲಮಃ । ರಾವಣಸ್ಥಿತ ಏವಾತ್ರ ಹರಿರಾಜೇನ
ವಂಚಿತಃ ||೨೮|| ಅಥ ಹರಿಪರನಾಥಃ ಪ್ರಾಪ್ಯ ಸಂಗ್ರಾಮಕೀರ್ತಿಂ ನಿಶಿಚರಪತಿಮಾಜೌ

---

ಓಡಿಹೋಗುವಿಕೆಯನ್ನೂ, ಅಭಿದ್ರವಣಂ - ಅಟ್ಟಿಹೋಗುವುದನ್ನೂ, ಆಪ್ಲಾವಂ - ನಿಂತುಹೋಗುವಿಕೆಯನ್ನೂ, ಸವಿಗ್ರಹಂ - ಕಾಳೆಗದಿಂದ ಕೂಡಿದ, ಆಸ್ಥಾನಂಚ - ಹಿಂತಿರುಗಿ ನಿಲ್ಲುವಿಕೆಯನ್ನೂ, ಪರಾವೃತ್ತಂ - ಪರಾಙ್ಮುಖ ಗಮನವನ್ನೂ, ಅಪಾವೃತ್ತಂ - ಪಾರ್ಶ್ವದಲ್ಲಿ ನಿಲ್ಲುವಿಕೆಯನ್ನೂ, ಅವದ್ರುತಂ - ಹಿಡಿಯಲಿಚ್ಛೆಯಿಂದ ಮೈಬೊಗ್ಗಿಸುವಿಕೆಯನ್ನು, ಅವಪ್ಲುತಂ - ಕಾಲುಗಳಮೇಲೆ ಹೊಡೆಯುವುದಕ್ಕಾಗಿ ಅಧೋಮುಖಗಮನವನ್ನು, ಉಪನ್ಯಸ್ತಂ - ಶತ್ರುವಿನ ಭುಜಗ್ರಹಣಾರ್ಥವಾಗಿ ತನ್ನ ಭುಜಪ್ರಸಾರನನ್ನು, ಅಪನ್ಯಸ್ತಂ - ಪ್ರತಿಭಟನನ್ನು ಹಿಡಿದು ವಂಚಿಸುವುದಕ್ಕಾಗಿ ಭುಜಗಳನ್ನು ಹಿಂತೆಗೆಯುವಿಕೆಯನ್ನು, ಅನ್ಯೋನ್ಯಂ-ಪರಸ್ಪರವಾಗಿ, ಸಂಚೇರತುಃ-ಮಾಡುತಲಿದ್ದರು. ||೨೩-೨೬|| ಏತಸ್ಮಿನ್ನಂತರೇ - ಈ ಮಧ್ಯದಲ್ಲಿ, ರಕ್ಷಃ - ರಾವಣನು, ಆತ್ಮನಃ - ತನ್ನ, ಮಾಯಾಬಲಂ - ಮಾಯಾಶಕ್ತಿಯನ್ನು, ಆರಬ್ಧುಂ - ಮೊದಲುಮಾಡುವದಕ್ಕಾಗಿ, ಉಪಸಂಪೇದೆ - ಉದ್ಯುಕ್ತನಾದನು, ವಾನರಾಧಿಪಃ - ಸುಗ್ರೀವನ, ತಂ - ಅದನ್ನು, ಜ್ಞಾತ್ವಾ - ತಿಳಿದು, ತದಾ - ಆಗ, ಜಿತಕಾಶೀ - ಜಯದಿಂದ ಪ್ರಕಾಶಿಸುವವನಾಗಿ, ಜಿತಕ್ಲಮಃ - ಜಯಿಸಲ್ಪಟ್ಟ ಆಯಾಸವುಳ್ಳವನಾಗಿ, ಆಕಾಶಂ - ಅಂತರಿಕ್ಷಮಾರ್ಗವನ್ನು ಕುರಿತು, ಉತ್ಪಪಾತ - ಹಾರಿದನು, ರಾವಣಃ - ರಾವಣನು, ಹರಿರಾಜೇನ - ಸುಗ್ರೀವನಿಂದ, ವಂಚಿತಃ - ವಂಚಿಸಲ್ಪಟ್ಟವನಾಗಿ, ಅತ್ರೈವ - ಈ ಗೋಪುರದ್ವಾರದ ವೇದಿಕೆಯಲ್ಲಿಯೇ, ಸ್ಥಿತಃ - ನಿಂತನು. || ೨೭ ೨೮ || ಅಥ - ಅನಂತರದಲ್ಲಿ, ಹರಿವರನಾಥಃ - ವಾನರಶ್ರೇಷ್ಠರಿಗೆ ಅಧಿಪತಿಯಾದ, ಅರ್ಕಸೂನುಃ - ಸೂರ್ಯಪುತ್ರನಾದ ಸುಗ್ರೀವನು, ಸಂಗ್ರಾಮಕೀರ್ತಿಂ - ಯುದ್ಧದಲ್ಲಿ ಯಶಸ್ಸನ್ನು, ಪ್ರಾಪ್ಯ - ಹೊಂದಿ, ಆಜೌ - ಕಾಳೆಗದಲ್ಲಿ, ನಿಶಿಚರಪತಿಂ - ರಾವಣನನ್ನು, ಶ್ರಮೇಣ - ಆಯಾಸದಿಂದ, ಯೋಜಯಿತ್ವಾ - ಸೇರಿಸಿ, ಅತಿವಿಶಾಲಂ - ಬಹಳ ವಿಸ್ತಾರವಾದ,

---

ಬೇಕೆಂಬ ಕೋರಿಕೆಯುಳ್ಳವರಾಗಿ ಇಬ್ಬರೂ ಬೊಗ್ಗಿ ಬೊಗ್ಗಿ ನಡೆಯುತ್ತಲೂ, ಒಮ್ಮೊಮ್ಮೆ ಹಿಂದೆ ಹಿಂದಕ್ಕೆ ಹೋಗುತ್ತಲೂ, ಕಾಲುಗಳಿಂದೊಬ್ಬರನ್ನೊಬ್ಬರು ಒದೆಯಬೇಕೆಂಬ ಬಯಕೆಯಿಂದ ಒಮ್ಮೊಮ್ಮೆ ಅಧೋಮುಖವಾಗಿ ಹಾರುತ್ತಲೂ, ಬಾಹುಗಳಿಂದ ಒಬ್ಬರನ್ನೊಬ್ಬರು ಹಿಡಿಯಬೇಕೆಂದು ಒಮ್ಮೊಮ್ಮೆ ಪರಸ್ಪರವಾಗಿ ಬಳಿಸಾರುತ್ತಲೂ ಮಹಾದ್ಭುತವಾಗಿ ಯುದ್ಧಮಾಡುತ್ತಿದ್ದರು. || ೨೧–೨೬ || ಈ ಮಧ್ಯದಲ್ಲಿ ರಾವಣಾಸುರನು ತನ್ನ ಮಾಯಾಬಲವನ್ನು ಪ್ರದರ್ಶಿಸಬೇಕೆಂಬ ಕೋರಿಕೆಯುಳ್ಳವನಾದನು. ಆಗಲಾ ವಿಷಯವು ಮಹಾಬುದ್ಧಿಶಾಲಿಯಾದ ಸುಗ್ರೀವನಿಗೆ ತಿಳಿಯಿತು. ಅವನು ಕೂಡಲೇ ಅಂತರಿಕ್ಷಕ್ಕೆ ಹಾರಿದನು. ಹೀಗೆ ಆ ರಾವಣಾಸುರನು ಜಯಶಾಲಿಯಾಗಿ, ಶ್ರಮವಿಲ್ಲದವನಾದ ಆ ಸುಗ್ರೀವನಿಂದ ವಂಚಿತನಾಗಲು ಅಲ್ಲಿಯೇ ನಿಂತುಬಿಟ್ಟನು. ಮಹಾ ಶೂರನಾದ ಸುಗ್ರೀವನು ಯುದ್ಧದಲ್ಲಿ ರಾವಣನಿಗೆ ಶ್ರಮವನ್ನುಂಟುಮಾಡಿ ಕೂಡಲೇ ಅಲ್ಲಿಂದ ಹಾರಿ ಅಂತರಿಕ್ಷಮಾರ್ಗವಾಗಿ

ಯೋಜಯಿತ್ವಾ ಶ್ರಮೇಣ । ಗಗನಮತಿವಿಶಾಲಂ ಲಂಘಯಿತ್ವಾಽರ್ಕಸೂನುರ್ಹರಿವರಗಣಮಧ್ಯೇ ರಾಮಪಾರ್ಶ್ವಂ ಜಗಾಮ ॥ ೨೯ ॥

¶ ಇತಿ ಸ ಸವಿತೃಸೂನುಸ್ತತ್ರ ತತ್ಕರ್ಮ ಕೃತ್ವಾ
ಪವನಗತಿರನೀಕಂ ಪ್ರಾವಿಶತ್ ಸಂಪ್ರಹೃಷ್ಟಃ ।
ರಘುವರನೃಪಸೂನೋರ್ವರ್ಧಯನ್ ಯುದ್ಧಹರ್ಷಂ
ತರುಮೃಗಗಣಮುಖ್ಯೈಃ ಪೂಜ್ಯಮಾನೋ ಹರೀಂದ್ರಃ ॥ ೩೦ ॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಚತ್ವಾರಿಂಶಸ್ಸರ್ಗಃ



ಗಗನಂ - ಅಂತರಿಕ್ಷದಲ್ಲಿ, ಲಂಘಯಿತ್ವಾ - ಹಾರಿ, ಹರಿ....ಧ್ಯೇ - ವಾನರೋತ್ತಮರ ಸಮೂಹದ ಮಧ್ಯದಲ್ಲಿ, ರಾಮಪಾರ್ಶ್ವಂ - ಶ್ರೀರಾಮನ ಬಳಿಯನ್ನು, ಜಗಾಮ - ಹೊಂದಿದನು. ॥ ೨೯ ॥ ಸವಿತೃಸೂನುಃ - ಸೂರ್ಯಪುತ್ರನಾದ, ಸಃಹರೀಂದ್ರಃ - ಆ ಸುಗ್ರೀವನು, ಇತಿ - ಈ ರೀತಿಯಾಗಿ, ತತ್ರ - ಆ ಗೋಪುರದ್ವಾರದಲ್ಲಿ, ತತ್ಕರ್ಮ - ಆ ರಾವಣನ ಕಿರೀಟಾಪಹಾರರೂಪವಾದ ಕಾರ್ಯವನ್ನು, ಕೃತ್ವಾ - ಮಾಡಿ, ಪವನಗತಿಃ - ವಾಯುವೇಗವುಳ್ಳವನಾಗಿ, ಸಂಪ್ರಹೃಷ್ಟಃ - ಸಂತೋಷಗೊಂಡವನಾಗಿ, ರಘು....ನೋಃ - ಶ್ರೀರಾಮನಿಗೆ, ಯುದ್ಧಹರ್ಷಂ - ಕಾಳಗದಲ್ಲಿ ಸಂತೋಷವನ್ನು, ವರ್ಧಯನ್-ವೃದ್ಧಿಗೊಳಿಸಿದವನಾಗಿ, ತರು....ಖ್ಯೈಃ - ವಾನರಯೂಥಪತಿಗಳಲ್ಲಿ ಮುಖ್ಯರಿಂದ, ಪೂಜ್ಯಮಾನಃ - ಪೂಜಿಸಲ್ಪಟ್ಟವನಾಗಿ, ಅನೀಕಂ - ವಾನರಸೈನ್ಯವನ್ನು, ಪ್ರಾವಿಶತ್ - ಹೊಕ್ಕನು. ॥ ೩೦ ॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಚತ್ವಾರಿಂಶಸ್ಸರ್ಗಃ.



ಸುವೇಲಾಚಲದಮೇಲೆ ವಾನರಸಮೂಹ ಮಧ್ಯದಲ್ಲಿರುವ ಶ್ರೀರಾಮನ ಸಮೀಪವನ್ನೈದಿದನು. ಹೀಗೆ ಸೂರ್ಯಪುತ್ರನಾದ ಆ ಸುಗ್ರೀವನು ಆ ರಾವಣನೊಡನೆ ಮಹದಾಶ್ಚರ್ಯಕರವಾಗಿ ಯುದ್ಧಮಾಡಿ ಅಧಿಕ ಸಂತೋಷವುಳ್ಳವನಾಗಿ,ರಘುಕುಲೋದ್ಭವನಾದ ಶ್ರೀರಾಮಮೂರ್ತಿಗೂ ಸಂತೋಷವನ್ನುಂಟುಮಾಡಿ ವಾನರಶ್ರೇಷ್ಠರೆಲ್ಲರೂ ತನ್ನನ್ನು ಹೊಗಳುತ್ತಿರಲು ಆ ವಾನರಸೇನೆಯನ್ನು ಪ್ರವೇಶಿಸಿದನು. ॥ ೨೭-೩೦ ॥

ಇಂತಿದು ರಾವಣ ಸುಗ್ರೀವಯುದ್ಧ ವೃತ್ತಾಂತವೆಂಬ ನಲವತ್ತನೆಯ
ಸರ್ಗವು ಸಮಾಪ್ತವಾದುದು.



¶ ವಿಶೇಷಾರ್ಥಃ—ಸುಗ್ರೀವನು ತನ್ನ ಸ್ವಾಮಿಯಾದ ಶ್ರೀರಾಮನಲ್ಲಿದ್ದ ನಿರತಿಶಯವಾದ ಭಕ್ತಿಯಿಂದ ಪ್ರೇರಿತನಾಗಿ ಆತನಿಗೆ ರಾವಣನೊಡನೆ ಸಂಭವಿಸುವ ಯುದ್ಧದಲ್ಲಿ ದೊರಕುವ ಕೀರ್ತಿಯನ್ನು ತಾನೇ ಮೊದಲು ಸಂಪಾದಿಸಿದನು. ಆದರೆ ಅವನು ರಾವಣನನ್ನು ಸಂಹರಿಸದೆ ಬಂದಿದ್ದುದರಿಂದ ಶ್ರೀರಾಮನ ಮುಂದೆ ನಿಲ್ಲಲು ನಾಚಿ ಪಾರ್ಶ್ವದಲ್ಲಿ ನಿಂತನು. ತಾನು ಸೂರ್ಯಪುತ್ರನೆಂಬುದನ್ನು ಸೂಚಿಸುವುದಕ್ಕಾಗಿಯೇ ಅತಿ ವಿಶಾಲವಾದ ಅಂತರಿಕ್ಷಕ್ಕೆ ಹಾರಿದನು. ಅವನ ಗಮನವೇಗವು ಯಾರಿಗೂ ವೇದ್ಯವಾದುದಲ್ಲವು. ಸುಗ್ರೀವನು ರಾವಣ ಸಂಹಾರವನ್ನು ಮಾಡಬಲ್ಲ ಸಮರ್ಥನೇ ಆಗಿದ್ದರೂ ಶ್ರೀರಾಮನು ಮಾಡಿದ್ದ ರಾವಣವಧಪ್ರತಿಜ್ಞೆಗೆ ಭಂಗ ಬಾರದಿರಲೆಂದು ಆ ರಾವಣನನ್ನು ಸಂಹರಿಸದೇ ಬಂದುಬಿಟ್ಟನು. (ಗೋವಿಂದರಾಜರು)

# ಯುದ್ಧಕಾಂಡೇ ಏಕಚತ್ವಾರಿಂಶಸ್ಸರ್ಗಃ

ಅಥ ತಸ್ಮಿನ್ನಿಮಿತ್ತಾನಿ ದೃಷ್ಟ್ವಾ ಲಕ್ಷ್ಮಣಪೂರ್ವಜಃ । ಸುಗ್ರೀವಂ ಸಂಪರಿಷ್ವಜ್ಯ ತದಾ ವಚನಮಬ್ರವೀತ್ ॥ ೧ ॥ "ಅಸಮ್ಮಂತ್ರ್ಯ ಮಯಾಸಾರ್ಧಂ ತದಿದಂ ಸಾಹಸಂ ಕೃತಂ । ಏವಂ ಸಾಹಸಕರ್ಮಾಣಿ ನಕುರ್ವಂತಿ ಜನೇಶ್ವರಾಃ ॥ ೨ ॥ ಸಂಶಯೇ ಸ್ಥಾಪ್ಯ ಮಾಂ ಚೇದಂ ಬಲಂಚ ಸವಿಭೀಷಣಂ । ಕಷ್ಟಂ ಕೃತಮಿದಂ ವೀರ! ಸಾಹಸಂ ಸಾಹಸಪ್ರಿಯ! ॥ ೩ ॥ ಇದಾನೀಂ ಮಾ ಕೃಥಾ ವೀರ! ಏವಂ ವಿಧಮಚಿಂತಿತಂ । ತ್ವಯಿ ಕಿಂಚಿತ್ಸಮಾಪನ್ನೇ ಕಿಂ ಕಾರ್ಯಂ ಸೀತಯಾ ಮಮ ॥ ೪ ॥

---

ಅಥ - ಬಳಿಕ, ಲಕ್ಷ್ಮಣಪೂರ್ವಜಃ - ಶ್ರೀರಾಮನು, ತಸ್ಮಿನ್ - ಆ ಸುಗ್ರೀವನಲ್ಲಿ, ನಿಮಿತ್ತಾನಿ-ಯುದ್ಧಚಿಹ್ನೆಗಳನ್ನು, (ಗಾಯಗಳನ್ನು) ದೃಷ್ಟ್ವಾ - ನೋಡಿ, ತದಾ - ತಕ್ಷಣದಲ್ಲಿ, ಪರಿಷ್ವಜ್ಯ - ಅಪ್ಪಿ, ವಚನಂ - ಮಾತನ್ನು, ಅಬ್ರವೀತ್ - ನುಡಿದನು. ॥ ೧ ॥ ಮಯಾಸಾರ್ಧಂ - ನನ್ನೊಡನೆ, ಅಸಂಮಂತ್ರ್ಯ - ಆಲೋಚಿಸದೆ, ತದಿದಂಸಾಹಸಂ - ಈ ಪ್ರಯಾಸಕಾರ್ಯವು, ಕೃತಂ - ಮಾಡಲ್ಪಟ್ಟಿತು, ಜನೇಶ್ವರಾಃ - ಧೊರೆಗಳು, ಏವಂ - ಈ ಪರಿಯಾಗಿ, ಸಾಹ.....ಣಿ - ಸಾಹಸಕಾರ್ಯಗಳನ್ನು, ನಕುರ್ವಂತಿ - ಮಾಡುವುದಿಲ್ಲ, ಹೇ ವೀರ - ಎಲೈ ಶೂರನೇ, ಹೇ ಸಾಹಸಪ್ರಿಯ - ಮಹತ್ಕಾರ್ಯದಲ್ಲಿ ಇಷ್ಟವುಳ್ಳವನೇ, ಮಾಂ - ನನ್ನನ್ನು, ಸವಿಭೀಷಣಂ - ವಿಭೀಷಣಸಹಿತವಾದ, ಇದಂಬಲಂಚ - ಈ ಬಲವನ್ನು, ಸಂಶಯೇ - ಸಂಶಯದಲ್ಲಿ, ಸ್ಥಾಪ್ಯ - ಇರಿಸಿ, ಕಷ್ಟಂ - ಕಷ್ಟಕರವಾದ, ಇದಂಸಾಹಸಂ - ಈ ದೊಡ್ಡಕಾರ್ಯವು, ಕೃತಂ - ಮಾಡಲ್ಪಟ್ಟಿತು. ॥ ೨-೩ ॥ ಹೇ ವೀರ - ಎಲೈ ಶೂರನೇ, ಅಚಿಂತಿತಂ - ಆಲೋಚಿಸದೆ, ಏವಂವಿಧಂ - ಇಂಥಾ ಕಾರ್ಯವನ್ನು, ಇದಾನೀಂ - ಇತಃಪರ, ಮಾಕೃಥಾಃ - ಮಾಡಬೇಡ, ಹೇ ಮಹಾಬಾಹೋ - ಎಲೈ ಮಹಾಭುಜಪರಾಕ್ರಮಿಯೇ, ಹೇ ಶತ್ರುಘ್ನ - ಎಲೈ ಶತ್ರುಸಂಹಾರಕನೇ, ಮಹೇಂ....ಮ - ಇಂದ್ರವರುಣರಿಗೆ ಸಮಾನನೇ, ತ್ವಯಿ - ನೀನು, ಕಿಂಚಿತ್ - ಸ್ವಲ್ಪ, ಸಮಾಪನ್ನೇ - ಆಪತ್ತನ್ನು ಹೊಂದಿದರು, ಮಮ - ನನಗೆ, ಸೀತಯಾ - ಸೀತಾದೇವಿಯಿಂದ, ಕಿಂಕಾರ್ಯಂ - ಏನು ಪ್ರಯೋಜನವು, ಭರತೇನ - ಭರತ

---

ಆ ತರುವಾಯ ಲಕ್ಷ್ಮಣಾಗ್ರಜನಾದ ಶ್ರೀರಾಮನು ಸುಗ್ರೀವನಲ್ಲಿದ್ದ ಯುದ್ಧಚಿಹ್ನೆಗಳನ್ನು ನೋಡಿ ಅವನನ್ನು ಬಿಗಿಯಾಗಿ ಅಪ್ಪಿಕೊಂಡು ಅವನನ್ನು ಕುರಿತು, "ಸುಗ್ರೀವಾ! ನೀನು ನನ್ನೊಡನೆ ಆಲೋಚಿಸದೆ ಈ ಸಾಹಸಕಾರ್ಯವನ್ನು ಮಾಡಿದೆ. ಪ್ರಭುಗಳಾದವರು ಈ ರೀತಿ ಸಾಹಸಕಾರ್ಯಗಳನ್ನು ಮಾಡುವರೇ? ಎಲೈ ಸಾಹಸಪ್ರಿಯನಾದ ಸುಗ್ರೀವನೇ! ನೀನು ನನ್ನೊಡನೆ ಆಲೋಚಿಸದೆ, ನನ್ನನ್ನೂ, ಈ ನಿನ್ನ ಸೇನೆಯನ್ನೂ, ಈ ವಿಭೀಷಣನನ್ನೂ ಸಂಶಯಕ್ಕೆ ತುತ್ತಾಗಿಸಿ ದೊಡ್ಡ ಸಾಹಸವನ್ನು ಮಾಡಿಬಿಟ್ಟೆ. ಇನ್ನುಮೇಲೆ ಈ ರೀತಿ ಯಾವ ಆಲೋಚನೆಯನ್ನೂ ಮಾಡದೆ ದುಡುಕಿ ಇಂತಹ ಸಾಹಸಕಾರ್ಯವನ್ನು ಮಾಡಬೇಡ. ಅಯ್ಯಾ! ಒಂದುವೇಳೆ ನಿನಗೇನಾದರೂ ಅಪಾಯವುಂಟಾಗಿದ್ದರೆ ನನಗೆ ಸೀತೆಯಿಂದೇನಾಗಬೇಕು? ಎಲೈ ಮಹಾನುಭಾವನೇ! ನೀನಿಲ್ಲದಿದ್ದಮೇಲೆ ನನ್ನ ತಮ್ಮಂದಿರಾದ ಭರತ,

ಭರತೇನ ಮಹಾಬಾಹೋ! ಲಕ್ಷ್ಮಣೇನ ಯವೀಯಸಾ । ಶತ್ರುಘ್ನೇನ ಚ ಶತ್ರುಘ್ನ! ಸ್ವಶರೀರೇಣ ವಾ ಪುನಃ ॥ ೫ ॥ ತ್ವಯಿ ಚಾಽನಾಗತೇ ಪೂರ್ವಮಿತಿ ಮೇ ನಿಶ್ಚಿತಾ ಮತಿಃ । ಜಾನತಶ್ಚಾಪಿ ತೇ ವೀರ್ಯಂ ಮಹೇಂದ್ರವರುಣೋಪಮ! ॥ ೬ ॥ ಹತ್ವಾಽಹಂ ರಾವಣಂ ಯುದ್ಧೇ ಸಪುತ್ರಬಲವಾಹನಂ । ಅಭಿಷಿಚ್ಯ ಚ ಲಂಕಾಯಾಂ ವಿಭೀಷಣಮಥಾಪಿಚ ॥೭॥ ಭರತೇ ರಾಜ್ಯಮಾವೇಶ್ಯ ತ್ಯಕ್ಷ್ಯೇ ದೇಹಂ ಮಹಾಬಲ!" । ತಮೇವಂ ವಾದಿನಂ ರಾಮಂ ಸುಗ್ರೀವಃ ಪ್ರತ್ಯಭಾಷ್ಯತ ॥ ೮ ॥ "ತವಭಾರ್ಯಾಪಹರ್ತಾರಂ ದೃಷ್ಟ್ವಾ ರಾಘವ! ರಾವಣಂ । ಮರ್ಷಯಾಮಿ ಕಥಂ ವೀರ ಜಾನನ್

ನಿಂದಲೂ, ಯವೀಯಸಾ - ತಮ್ಮನಾದ, ಲಕ್ಷ್ಮಣೇನಚ - ಲಕ್ಷ್ಮಣನಿಂದಲೂ, ಶತ್ರುಘ್ನೇನಚ - ಶತ್ರುಘ್ನನಿಂದಲೂ, ಸ್ವಶರೀರೇಣವಾಪುನಃ - ನನ್ನ ಶರೀರದಿಂದತಾನೇ, ತೇ - ನಿನ್ನ, ವೀರ್ಯಂ - ಪರಾಕ್ರಮವನ್ನು, ಜಾನತಶ್ಚಾಪಿ - ತಿಳಿದವನಾದರೂ, ಮೇ - ನನ್ನಿಂದ, ಕಿಂಕಾರ್ಯಂ - ಏನು ಪ್ರಯೋಜನವು, ತ್ವಯಿ - ನೀನು, ಅನಾಗತೇ - ಬಾರದಿರಲು, ಹೇ ಮಹಾಬಲ - ಎಲೈ ಮಹಾ ಬಲ ಶಾಲಿಯೇ, ಅಹಂ-ನಾನು, ಯುದ್ಧೇ-ಕಾಳಗದಲ್ಲಿ, ಸಪು....ನಂ-ಮಕ್ಕಳಿಂದಲೂ ಸೈನ್ಯದಿಂದಲೂ, ವಾಹನಗಳಿಂದಲೂ ಕೂಡಿದ, ರಾವಣಂ - ರಾವಣನನ್ನು, ಹತ್ವಾ - ಕೊಂದು, ಅಥ - ಬಳಿಕ, ವಿಭೀಷಣಂಚಾಪಿ - ವಿಭೀಷಣನನ್ನೂ ಕೂಡ, ಲಂಕಾಯಾಂ - ಲಂಕಾಪಟ್ಟಣದಲ್ಲಿ, ಅಭಿಷಿಚ್ಯ - ಪಟ್ಟಾಭಿಷೇಕಮಾಡಿ, ಭರತೇ - ಭರತನಲ್ಲಿ, ರಾಜ್ಯಂ - ರಾಜ್ಯವನ್ನು, ಆವೇಶ್ಯ - ಇರಿಸಿ, ದೇಹಂ - ಶರೀರವನ್ನು, ತ್ಯಕ್ಷ್ಯೇ - ಬಿಡುವೆನು, ಇತಿ - ಇಂತೆಂದು, ಮತಿಃ - ಬುದ್ಧಿಯು, ಪೂರ್ವಂ - ನೀನು ಬರುವದಕ್ಕೆ ಮೊದಲು, ನಿಶ್ಚಿತಾ - ನಿಶ್ಚಯಿಸಲ್ಪಟ್ಟಿತು. ॥೪-೭॥ ಏವಂ - ಈ ಪರಿಯಾಗಿ, ವಾದಿನಂ-ಮಾತಾಡುವ, ರಾಮಂ - ಶ್ರೀರಾಮನನ್ನು ಕುರಿತು, ಸುಗ್ರೀವಃ - ಸುಗ್ರೀವನು, ಹೇ ರಾಘವ - ಎಲೈ ಶ್ರೀರಾಮನೇ, ಹೇ ವೀರ - ಎಲೈ ಶೂರನೇ, ತವ - ನಿನ್ನ, ಭಾರ್ಯಾಪಹರ್ತಾರಂ - ಹೆಂಡತಿಯನ್ನು ಅಪಹರಿಸಿದ, ರಾವಣಂ - ರಾವಣನನ್ನು, ದೃಷ್ಟ್ವಾ - ಕಂಡು, ಆತ್ಮನಃ - ನನ್ನ, ಪೌರುಷಂ-ಪರಾಕ್ರಮವನ್ನು, ಜಾನನ್ - ತಿಳಿದೂ, ಕಥಂಮರ್ಷಯಾಮಿ - ಹೇಗೆ ಸಹಿಸಲಿ, ಇತ್ಯೇವಂ - ಈ ಪರಿ

ಲಕ್ಷ್ಮಣ, ಶತ್ರುಘ್ನರು ನನಗೇಕೆ? ಈ ನನ್ನ ದೇಹದಿಂದ ತಾನೇ ನನಗೇನು ಪ್ರಯೋಜನ? ಸುಗ್ರೀವಾ! ನೀನಿಲ್ಲಿಗೆ ಬರುವುದಕ್ಕೆ ಮೊದಲು ಇನ್ನು ನಾನು ಬದುಕಿ ಪ್ರಯೋಜನವೇನೆಂದು ಯೋಚಿಸುತ್ತಿದ್ದೆನು. ವರುಣನಿಗೆ ಸಮಾನವಾದ ಪರಾಕ್ರಮವುಳ್ಳ ಸುಗ್ರೀವನೇ! ನೀನು ಅತುಲ ಪರಾಕ್ರಮಿಯಾದರೂ, ಅದು ನನಗೆ ಗೊತ್ತಿದ್ದರೂ ನಾನು ನಿನ್ನ ಪರಾಕ್ರಮದಲ್ಲಿ ಸಂದೇಹ ಪಡುತ್ತಿದ್ದೆನು. ಎಲೈ ಮಹಾಬಲನೇ! ನಾನು ರಾವಣಾಸುರನನ್ನು ಪುತ್ರಮಿತ್ರಕಳತ್ರಾದಿಗಳೊಡನೆ ಸಂಹರಿಸಿ, ವಿಭೀಷಣನನ್ನು ಲಂಕಾನಗರಾಧಿಪತಿಯನ್ನಾಗಿ ಮಾಡಿ, ಭರತಕುಮಾರನಿಗೆ ಕೋಸಲರಾಜ್ಯಾಧಿಕಾರವನ್ನು ವಹಿಸಿ ಈ ದೇಹವನ್ನು ತೊರೆಯಬೇಕೆಂದು ನೀನು ಬರುವುದಕ್ಕೆ ಮುಂಚೆ ಯೋಚಿಸುತ್ತಿದ್ದೆನು" ಎಂದು ಹೇಳಿದನು. ॥೧-೭॥ ಶ್ರೀರಾಮನಿಂತೆನಲು ಸುಗ್ರೀವನು ಆತನನ್ನು ಕುರಿತು, "ಎಲೈ ವೀರನೇ! ರಘುಕುಲೋದ್ಭವನಾದ ಶ್ರೀರಾಮನೇ! ನಿನ್ನ ಭಾರ್ಯೆಯನ್ನಪಹರಿಸಿದವನೂ, ಕೇವಲ ದುರಾತ್ಮನೂ, ದುರ್ಮಾರ್ಗನೂ ಆದ ಆ ರಾವಣಾಸುರನನ್ನು ಕಂಡೊಡನೆಯೇ ನನ್ನ ಪರಾಕ್ರಮವನ್ನು ನಾನರಿತೂ ಸುಮ್ಮನಿರುವುದೆಂತು?" ಎಂದು ಹೇಳಿದನು. ಈ ರೀತಿ ನುಡಿದ ಸುಗ್ರೀವನ ಮಾತುಗಳನ್ನುಕೇಳಿ ಶ್ರೀರಾಮ

ಪೌರುಷಮಾತ್ಮನಃ " ॥ ೯ ॥ ಇತ್ಯೇವಂ ವಾದಿನಂ ವೀರಮಭಿನಂದ್ಯ ಸ ರಾಘವಃ । ಲಕ್ಷ್ಮಣಂ ಲಕ್ಷ್ಮಿಸಂಪನ್ನಮಿದಂ ವಚನಮಬ್ರವೀತ್ ॥ ೧೦ ॥ " ಪರಿಗೃಹ್ಯೋದಕಂ ಶೀತಂ ವನಾನಿ ಫಲವಂತಿಚ । ಬಲೌಘಂ ಸಂವಿಭಜ್ಯೇಮಂ ವ್ಯೂಹ್ಯ ತಿಷ್ಠೇಮ ಲಕ್ಷ್ಮಣ! ॥ ೧೧ ॥ ಲೋಕಕ್ಷಯಕರಂ ಭೀಮಂ ಭಯಂ ಪಶ್ಯಾಮ್ಯುಪಸ್ಥಿತಂ । ನಿಬರ್ಹಣಂ ಪ್ರವೀರಾಣಾಮೃಕ್ಷವಾನರರಕ್ಷಸಾಂ ॥ ೧೨ ॥ ವಾತಾಶ್ಚ ಪರುಷಾ ವಾಂತಿ ಕಂಪತೇಚ ವಸುಂಧರಾ । ಪರ್ವತಾಗ್ರಾಣಿ ವೇಪಂತೇ ಪತಂತಿ ಧರಣೀರುಹಾಃ ॥೧೩॥ ಮೇಘಾಃ ಕ್ರವ್ಯಾದಸಂಕಾಶಾಃ ಪರುಷಾಃ ಪರುಷಸ್ವನಾಃ । ಕ್ರೂರಾಃ ಕ್ರೂರಂ ಪ್ರವರ್ಷಂತಿ

---

ಯಾಗಿ, ವಾದಿನಂ - ಹೇಳುತ್ತಿರುವ, ವೀರ್ಯಂ - ಶೂರನಾದ ಸುಗ್ರೀವನನ್ನು, ಅಭಿನಂದ್ಯ - ಸಂತೋಷಗೊಳಿಸಿ, ಸರಾಘವಃ - ಆ ಶ್ರೀರಾಮನು, ಲಕ್ಷ್ಮಿಸಂಪನ್ನಂ - ಭ್ರಾತೃಸೌಹಾರ್ದವೆಂಬ ಸಂಪತ್ತಿನಿಂದ ಕೂಡಿದ, ಲಕ್ಷ್ಮಣಂ - ಲಕ್ಷ್ಮಣನನ್ನು ಕುರಿತು, ಇದಂವಚನಂ - ಈ ಮಾತನ್ನು ಅಬ್ರವೀತ್ - ನುಡಿದನು. ॥ ೮-೧೦ ॥ ಹೇ ಲಕ್ಷ್ಮಣ - ಎಲೈ ಲಕ್ಷ್ಮಣನೇ, ಶೀತಂ - ತಣ್ಣಗಿರುವ, ಉದಕಂ - ನೀರನ್ನು, ಫಲವಂತಿ - ಫಲಿತವಾದ, ವನಾನಿಚ - ವನಗಳನ್ನೂ, ಪರಿಗೃಹ್ಯ - ಹಿಡಿದು, ಇಮಂಬಲೌಘಂ - ಈ ಸೇನಾಸಮೂಹಗಳನ್ನು, ವ್ಯೂಹ್ಯ - ಗರುಡವ್ಯೂಹವಾಗಿ ನಿಲ್ಲಿಸಿ, ವಿಭಜ್ಯ - ವಿಭಾಗಮಾಡಿ, ತಿಷ್ಠೇಮ - ಇರೋಣ. ॥ ೧೧ ॥ ಲೋಕಕ್ಷಯಕರಂ - ಕ್ಷುದ್ರರಾಜರಿಗೆ ಕ್ಷಯವನ್ನುಂಟುಮಾಡುವ, ಪ್ರವೀರಾಣಾಂ - ಮಹಾ ಶೂರರಾದ, ಋಕ್ಷವಾನರರಕ್ಷಸಾಂ - ಕರಡಿಗಳು, ಕಪಿಗಳು, ರಾಕ್ಷಸರು ಎಂಬಿವರಿಗೆ, ನಿಬರ್ಹಣಂ - ವಿನಾಶಕವಾದ, ಭೀಮಂ - ಮಹಾತ್ತರವಾದ, ಭಯಂ - ಯುದ್ಧವು, ಉಪಸ್ಥಿತಂ - ಪ್ರಾಪ್ತವಾದದ್ದನ್ನಾಗಿ, ಪಶ್ಯಾಮಿ - ತಿಳಿಯುತ್ತೇನೆ. ॥ ೧೨ ॥ ವಾತಃ - ಗಾಳಿಗಳು, ಕಲುಷಾಃ - ಧೂಳಿನಿಂದ ವ್ಯಾಪ್ತಗಳಾಗಿ, ವಾಂತಿ-ಬೀಸುತ್ತವೆ, ವಸುಂಧರಾಚ-ಭೂಮಿಯೂ ಕೂಡ, ಕಂಪತೇ - ಚಲಿಸುವದು, ಪರ್ವತಾಗ್ರಾಣಿ - ಪರ್ವತಶಿಖರಗಳು, ವೇಪಂತೇ - ಕದಲುತ್ತವೆ, ಮಹೀರುಹಾಶ್ಚ-ವೃಕ್ಷಗಳೂಕೂಡ, ಪತಂತಿ-ಬೀಳುತ್ತವೆ. ॥ ೧೩ ॥ ಕ್ರವ್ಯಾದಸಂಕಾಶಃ-ಗೃಧ್ರಶ್ಯೇನಾದಿಗಳ ವರ್ಣಕ್ಕೆ ಸಮಾನವಾದ ವರ್ಣವುಳ್ಳ, ಪರುಷಾಃ - ನೋಡಲಸಾಧ್ಯವಾದ, ಪರುಷಸ್ವನಾಃ - ಕೇಳಲಶಕ್ಯವಾದ ಶಬ್ದವುಳ್ಳವಾದಕಾರಣ, ಕ್ರೂರಾಃ - ಭಯಂಕರವಾದ, ಮೇಘಾಃ-ಮೇಘಗಳು, ಶೋಣಿತಬಿಂದುಭಿಃ - ಜಲಬಿಂದುಗಳಿಂದ, ಮಿಶ್ರಂ - ಸೇರಿರುವ, ಕ್ರೂರಂ - ಭಯಂ

---

ಮೂರ್ತಿಯು ಅವನನ್ನುಗೌರವಿಸಿ, ಮಹಾ ತೇಜಸ್ವಿಯಾದ ಲಕ್ಷ್ಮಣನನ್ನುಕುರಿತು, "ಅಯ್ಯಾ ಲಕ್ಷ್ಮಣನೇ! ಶೀತಳೋದಕವನ್ನೊಳಗೊಂಡು, ಫಲಭರಿತಗಳಾದ ವನಗಳಲ್ಲಿ ನಮ್ಮ ಸೈನ್ಯವೆಲ್ಲವನ್ನೂ ಗರುಡ ವ್ಯೂಹದಿಂದ ವಿಭಾಗಮಾಡಿ ನಿಲ್ಲಿಸಿ ನಾವು ಈ ಪರ್ವತದಲ್ಲಿಯೇ ಇರೋಣ. ಎಲೈ ಅನುಜನೇ! ಲೋಕಕ್ಷಯಕರವಾಗಿ ಮಹಾ ವೀರರಾದ ರಾಕ್ಷಸರಿಗೂ, ವಾನರರಿಗೂ ವಿನಾಶವನ್ನುಂಟುಮಾಡುವ ಕಾಲವು ಒದಗಿದೆಯೆಂದು ನನಗೆ ತೋರುತ್ತಿರುವುದು. ಮಹೋಗ್ರವಾದ ಗಾಳಿಯು ಬೀಸುತ್ತಿದೆ. ಮೇಘಗಳೆಲ್ಲವೂ ಅತಿ ನೀಚವಾದ ಪಕ್ಷಿಗಳ ಆಕಾರಗಳನ್ನು ತಾಳುತ್ತಿರುವುವು. ಭೂಮಿಯೆಲ್ಲವೂ ಗಡಗಡನೆ ನಡುಗುತ್ತಿರುವುದು. ಪರ್ವತಾಗ್ರಗಳೆಲ್ಲವೂ ಅಲುಗಾಡುತ್ತಿರುವುವು. ವೃಕ್ಷಗಳೆಲ್ಲವೂ ಮುರಿದು ಬೀಳುತ್ತಿರುವುವು. ಬಹಳ ಕಠಿನವಾದುವೂ, ಕಠೋರ ಧ್ವನಿಗಳುಳ್ಳುವೂ ಆದ ಮೇಘಗಳಿದ್ದಿವೆ. ಲಕ್ಷ್ಮಣಾ! ಮಹಾ ಕ್ರೂರಗಳಾದ ಆಕಾರಗಳುಳ್ಳ ಈ ಮೇಘಗಳು ರಕ್ತವರ್ಷವನ್ನು

ಕಾಲೇ ಮಹಾಬಾಹುರ್ಬಲೇನ ಮಹತಾ ವೃತಃ । ಪ್ರಸ್ಥಿತಃ ಪುರತೋ ಧನ್ವೀ ಲಂಕಾಮಭಿಮುಖಃ ಪುರೀಂ ||೨೫|| ತಂ ವಿಭೀಷಣಸುಗ್ರೀವೌ ಹನುಮಾನ್ ಜಾಂಬವಾನ್ನಳಃ| ಋಕ್ಷರಾಜಸ್ತಥಾ ನೀಲೋ ಲಕ್ಷ್ಮಣಶ್ಚಾನ್ವಯುಸ್ತದಾ || ೨೬ || ತತಃ ಪಶ್ಚಾತ್ಸುಮಹತೀ ಪೃತನರ್ಕ್ಷವನೌಕಸಾಂ । ಪ್ರಚ್ಛಾದ್ಯ ಮಹತೀಂ ಭೂಮಿಮನುಯಾತಿಸ್ಮ ರಾಘವಂ ||೨೭|| ಶೈಲಶೃಂಗಾಣಿ ಶತಶಃ ಪ್ರವೃದ್ಧಾಂಶ್ಚ ಮಹೀರುಹಾನ್ । ಜಗೃಹುಃ ಕುಂಜರಪ್ರಖ್ಯಾ ವಾನರಾಃ ಪರವಾರಣಾಃ || ೨೮ || ತೌತು ದೀರ್ಘೇಣ ಕಾಲೇನ ಭ್ರಾತರೌ ರಾಮಲಕ್ಷ್ಮಣೌ । ರಾವಣಸ್ಯ ಪುರೀಂ ಲಂಕಾಮಾಸೇದತುರರಿಂದಮೌ||೨೯||

---

ಮಹಾಬಾಹುಃ - ಮಹಾ ಭುಜನಾದ, ಧನ್ವೀ - ಧನುರ್ಧಾರಿಯಾದ ಶ್ರೀರಾಮನು, ಮಹತಾ - ಮಹತ್ತರವಾದ, ಬಲೇನ - ಸೈನ್ಯದಿಂದ, ವೃತಃ - ಸುತ್ತುವರೆದವನಾಗಿ, ಕಾಲೇ - ಸ್ವರಶಾಸ್ತ್ರೋಕ್ತ ಯುದ್ಧಕಾಲದಲ್ಲಿ, ಲಂಕಾಂಪುರೀಂ - ಲಂಕಾಪಟ್ಟಣವನ್ನು ಕುರಿತು, ಅಭಿಮುಖಃ - ಎದುರಾದವನಾಗಿ, ಪುರತಃ - ಮುಂದುಗಡೆಯಲ್ಲಿ, ಪ್ರಸ್ಥಿತಃ - ಹೊರಟನು. || ೨೫ || ತದಾ - ಆ ಕಾಲದಲ್ಲಿ, ವಿಭೀಷಣಸುಗ್ರೀವೌ - ವಿಭೀಷಣಸುಗ್ರೀವರು, ಹನೂಮಾನ್ - ಆಂಜನೇಯನು, ಋಕ್ಷರಾಜಃ - ಕರಡಿಗಳಿಗೆ ಧೊರೆಯಾದ, ಜಾಂಬವಾನ್ - ಜಾಂಬವಂತನು, ನಳಃ - ನಳನು, ತಥಾ - ಹಾಗೆಯೇ, ನೀಲಃ - ನೀಲನು, ಲಕ್ಷ್ಮಣಶ್ಚ - ಲಕ್ಷ್ಮಣನೂ, ತಂ - ಆ ಶ್ರೀರಾಮನನ್ನು, ಅನ್ವಯುಃ - ಅನುಸರಿಸಿ ಹೋದರು. || ೨೬ || ತತಃ - ಬಳಿಕ, ಪಶ್ಚಾತ್ - ಹಿಂದುಗಡೆಯಲ್ಲಿ, ಮಹತಿ - ದೊಡ್ಡದಾದ, ಋಕ್ಷವನೌಕಸಾಂ - ಕರಡಿಗಳ ಕಪಿಗಳ, ಪೃತನಾ - ಸೈನ್ಯವು, ಮಹತೀಂ - ದೊಡ್ಡದಾದ, ಭೂಮಿಂ- ಭೂಮಿಯನ್ನು, ಪ್ರಚ್ಛಾದ್ಯ - ಆಚ್ಛಾದನೆಮಾಡಿ, ಅನುಯಾತಿಸ್ಮ - ಅನುಸರಿಸಿಹೋಯಿತು. || ೨೭ || ಕುಂಜರಪ್ರಖ್ಯಾಃ - ಆನೆಗಳಿಗೆ ಸಮಾನರಾದ, ಪರವಾರಣಾಃ - ಶತ್ರುನಿವಾರಕರಾದ, ವಾನರಾಃ - ಕಪಿಗಳು, ಶತಶಃ - ನೂರಾರಾದ, ಶೈಲಶೃಂಗಾಣಿ - ಪರ್ವತಶಿಖರಗಳನ್ನು, ಪ್ರವೃದ್ಧಾಂಶ್ಚ - ಪ್ರಬಲವಾದ ಮಹೀರುಹಾಂಶ್ಚ - ಗಿಡಗಳನ್ನೂ, ಜಗೃಹುಃ - ತೆಗೆದುಕೊಂಡರು. ||೨೮|| ಅರಿಂದಮೌ- ಶತ್ರುಸಂಹಾರಕರಾದ, ಭ್ರಾತರೌ - ಅಣ್ಣತಮ್ಮಂದಿರಾದ, ತೌರಾಮಲಕ್ಷ್ಮಣೌ - ಆ ರಾಮಲಕ್ಷ್ಮಣರು, ದೀರ್ಘೇಣಕಾಲೇನ - ಬಹಳ ಕಾಲದಿಂದ, ರಾವಣಸ್ಯ - ರಾವಣನ, ಲಂಕಾಪುರೀಂ - ಲಂಕಾಪುರವನ್ನು, ಆಸೇದತುಃ - ಹೊಂದಿದರು. || ೨೯ || ಪತಾಕಮಾಲಿನೀಂ - ಧ್ವಜಪಟಗಳ ಬಂತಿಗಳುಳ್ಳ, ರಮ್ಯಾಂ -

---

ವನ್ನೂ ಸಿದ್ಧಗೊಳಿಸಿ ಇದೇ ಸಮಯವೆಂದು ಹೇಳುತ್ತ ಯುದ್ಧಕ್ಕಾಗಿ ಪ್ರೇರೇಪಿಸಿದನು. ಆ ಸಮಯದಲ್ಲಿ ಮಹಾ ಬಲನಾದ ಶ್ರೀರಾಮನು ಮಹೋನ್ನತವಾದ ಧನುಸ್ಸನ್ನು ಧರಿಸಿ, ಆ ಮಹಾ ವಾನರಸೇನೆಯೊಡನೆ ಲಂಕಾನಗರಾಭಿಮುಖವಾಗಿ ಪ್ರವೇಶಿಸಿದನು. ಆತನೊಡನೆಯೇ ವಿಭೀಷಣಸುಗ್ರೀವರೂ, ಜಾಂಬವಂತನೂ, ನಳನೂ, ಋಕ್ಷೇಶ್ವರನಾದ ನೀಲನೂ, ಲಕ್ಷ್ಮಣಸ್ವಾಮಿಯೂ ಹಿಂಬಾಲಿಸಿ ಹೊರಟರು. ಅವರ ಹಿಂದೆ ಕಪಿ, ಭಲ್ಲೂಕ, ಋಕ್ಷಸೇನೆಗಳೆಲ್ಲವೂ ಬಹಳವಾದ ಭೂಮಿಯನ್ನು ಆಕ್ರಮಿಸಿ ಹೊರಟವು. ಗಜಗಳಿಗೆ ಸಮಾನರೂ, ಶತ್ರುಗಳನ್ನು ನಿವಾರಿಸುವವರೂ ಆದ ಆ ವಾನರರೆಲ್ಲರೂ, ಅನೇಕ ಬೆಟ್ಟದ ಕೋಡುಗಲ್ಲುಗಳನ್ನೂ, ದೊಡ್ಡದೊಡ್ಡ ಮರಗಳನ್ನೂ, ಆಯುಧಗಳನ್ನಾಗಿ ಗ್ರಹಿಸಿ ಹೊರಟರು. ಆಗ ಅಣ್ಣತಮ್ಮಂದಿರೂ, ಶತ್ರುನಾಶಕರೂ ಆದ ಶ್ರೀರಾಮಲಕ್ಷ್ಮಣರು ಬಹುಕಾಲದಿಂದಲೂ ರಾವಣಾಸುರನಿಂದ ಪರಿಪಾಲಿತವಾಗಿದ್ದ ಲಂಕಾಪಟ್ಟಣವನ್ನು ಬಳಿ ಸಾರಿದರು. ||೨೫-೨೯||

ಪತಾಕಮಾಲಿನೀಂ ರಮ್ಯಾಮುದ್ಯಾನವರಶೋಭಿತಾಂ । ಚಿತ್ರವಪ್ರಾಂ ಸುದುಷ್ಪ್ರಾಪಾಮುಚ್ಚೈಃಪ್ರಾಕಾರತೋರಣಾಂ ॥ ೩೦ ॥ ತಾಂ ಸುರೈರಪಿ ದುರ್ಧರ್ಷಾಂ ರಾಮವಾಕ್ಯಪ್ರಚೋದಿತಾಃ । ಯಥಾ ನಿವೇಶಂ ಸಂಪೀಡ್ಯ ನ್ಯವಿಶಂತ ವನೌಕಸಃ ॥ ೩೧ ॥ ಲಂಕಾಯಾಸ್ತೂತ್ತರದ್ವಾರಂ ಶೈಲಶೃಂಗಮಿವೋನ್ನತಂ । ರಾಮಸ್ಸಹಾನುಜೋ ಧನ್ವೀ ಜುಗೋಪಚ ರುರೋಧಚ ॥೩೨॥ ಲಂಕಾಮುಪನಿವಿಷ್ಟಶ್ಚ ರಾಮೋ ದಶರಥಾತ್ಮಜಃ । ಲಕ್ಷ್ಮಣಾನುಚರೋ ವೀರಃ ಪುರೀಂ ರಾವಣಪಾಲಿತಾಂ । ಉತ್ತರದ್ವಾರಮಾಸಾದ್ಯ ಯತ್ರ ತಿಷ್ಠತಿ ರಾವಣಃ ॥ ೩೩ ॥ ನಾನ್ಯೋ ರಾಮಾದ್ಧಿ ತದ್ದ್ವಾರಂ ಸಮರ್ಥಃ ಪರಿ

ಮನೋಹರವಾದ, ಉದ್ಯಾ....ನೀಂ - ಉತ್ತಮವಾದ ತೋಟಗಳಿಂದೆಸೆವ, ಚಿತ್ರವಪ್ರಾಂ - ಆಶ್ಚರ್ಯಕರವಾದ ಕೋಟೆಯುಳ್ಳ, ಸುದುಷ್ಪ್ರಾಪಾಂ - ಹೊಂದಲಸಾಧ್ಯವಾದ, ಉಚ್ಚೈಃ....ಣಾಂ - ಉನ್ನತವಾದ ಪ್ರಾಕಾರವೂ, ಊರುಬಾಗಿಲುಗಳೂ ಉಳ್ಳ, ಸುರೈರಪಿ - ದೇವತೆಗಳಿಂದಲೂ, ದುರ್ಧರ್ಷಾಂ - ತಿರಸ್ಕರಿಸಲಸಾಧ್ಯವಾದ, ತಾಂ - ಆ ಲಂಕಾಪಟ್ಟಣವನ್ನು, ವನೌಕಸಃ - ವಾನರರು, ರಾಮ....ತಾಃ- ಶ್ರೀರಾಮನ ವಚನದಿಂದ ಪ್ರೇರಿಸಲ್ಪಟ್ಟವರಾಗಿ, ಸಂಪೀಡ್ಯ - ನಿರೋಧಿಸಿ, ಯಥಾನಿವೇಶಂ-ಸ್ಥಾನಾನುಸಾರವಾಗಿ, ನ್ಯವಿಶಂತ-ಇಳಿದರು. ॥ ೩೦-೩೧ ॥ ಧನ್ವೀ ಧನುರ್ಧಾರಿಯಾದ, ರಾಮಃ-ಶ್ರೀರಾಮನು, ಸಹಾನುಜಃ - ತಮ್ಮನೊಡಗೂಡಿ, ಶೈಲಶೃಂಗಮಿವ - ಪರ್ವತಶಿಖರದಂತೆ, ಉನ್ನತಂ - ಉನ್ನತವಾದ, ಲಂಕಾಯಾಃ - ಲಂಕಾಪಟ್ಟಣದ, ಉತ್ತರದ್ವಾರಂತು - ಉತ್ತರದ್ವಾರವನ್ನಾದರೆ, ಜುಗೋಪಚ - ರಕ್ಷಿಸಿದನು, ರುರೋಧಚ - ತಡೆಮಾಡಿದನು. ॥ ೩೨ ॥ ವೀರಃ - ಶೂರನಾದ, ದಶರಥಾತ್ಮಜಃ - ದಶರಥಪುತ್ರನಾದ, ರಾಮಃ - ಶ್ರೀರಾಮನು, ಯತ್ರ - ಯಾವ ಬಾಗಿಲಲ್ಲಿ, ರಾವಣಃ- ರಾವಣನು, ತಿಷ್ಠತಿ - ಇರುತ್ತಾನೆಯೋ, ತದುತ್ತರದ್ವಾರಂ - ಆ ಉತ್ತರಬಾಗಿಲನ್ನು, ಆಸಾದ್ಯ - ಹೊಂದಿ, ರಾವಣಪಾಲಿತಾಂ - ರಾವಣನಿಂದ ಪರಿಪಾಲಿತವಾದ, ಲಂಕಾಂಪುರೀಂ - ಲಂಕಾಪಟ್ಟಣದ, ಉಪನಿವಿಷ್ಟಃ-ಸಮೀಪದಲ್ಲಿ ಕುಳಿತುಕೊಂಡನು. ॥ ೩೩ ॥ ಸಾಯುಧೈಃ-ಆಯುಧಗಳಿಂದ ಕೂಡಿರುವ, ಭೀಮೈಃ - ಭಯಂಕರರಾದ, ರಾಕ್ಷಸೈಃ - ರಕ್ಕಸರಿಂದ, ಸಮಂತತಃ - ಎಲ್ಲಾ ಕಡೆಯಲ್ಲಿಯೂ, ಅಭಿರಕ್ಷಿತಂ - ರಕ್ಷಿಸಲ್ಪಟ್ಟ, ದಾನವೈಃ - ರಾಕ್ಷಸರಿಂದ, ಪಾತಾಳಮಿವ - ಪಾತಾಳಲೋಕದಂತೆ,

ಆ ಲಂಕಾನಗರವಾದರೋ, ಪತಾಕಮಾಲಿಕೆಗಳುಳ್ಳುದಾಗಿ ರಮ್ಯವೂ, ಶ್ರೇಷ್ಠವೂ ಆದ ಉದ್ಯಾನಗಳಿಂದ ಪ್ರಕಾಶಿಸುತ್ತ, ಚಿತ್ರಪ್ರಾಕಾರಗಳುಳ್ಳುದಾಗಿ ಶತ್ರುಗಳಿಂದ ಪ್ರವೇಶಿಸಲ ಸದಳವಾಗಿದ್ದಿತು. ಮಹೋನ್ನತವಾದ ಪ್ರಾಕಾರತೋರಣಗಳುಳ್ಳುದೂ, ದೇವತೆಗಳಿಂದಲೂ ಪ್ರವೇಶಿಸಲಶಕ್ಯವಾದುದೂ ಆಗಿರುವ ಆ ಲಂಕಾಪಟ್ಟದಲ್ಲಿ ಆ ವಾನರವೀರರೆಲ್ಲರೂ ರಾಮವಾಕ್ಯದಿಂದ ಪ್ರೇರೇಪಿತರಾಗಿ ಯುದ್ಧಮಾಡಲಪೇಕ್ಷೆಯುಳ್ಳವರಾಗಿ ಪ್ರವೇಶಿಸಿದರು. ಆ ಸಮಯದಲ್ಲಿ ಶ್ರೀರಾಮನು ಧನುರ್ಧಾರಿಯಾಗಿ ತಮ್ಮನಾದ ಲಕ್ಷ್ಮಣನೊಡಗೂಡಿ ಪರ್ವತ ಶಿಖರದಂತೆ ಮಹೋನ್ನತವಾಗಿರುವ ಆ ಲಂಕಾಪಟ್ಟಣದ ಉತ್ತರದ್ವಾರವನ್ನು ಅಡ್ಡಗಿಸಿದನು; ತನ್ನೊಡನಿರುವ ವಾನರಸೇನೆಯನ್ನೂ ಸಂರಕ್ಷಿಸಿದನು. ರಾವಣಾಸುರನಿರುವ ಆ ಉತ್ತರ ದ್ವಾರವನ್ನಾಕ್ರಮಿಸಲು, ಮಹಾ ವೀರನೂ, ಲಕ್ಷ್ಮಣಾಗ್ರಜನೂ, ದಶರಥಪುತ್ರನೂ ಆದ ಶ್ರೀರಾಮನೇ ಪ್ರವೇಶಿಸಿದನು. ರಾವಣಪಾಲಿತವಾದ ಆ ಉತ್ತರದ್ವಾರವನ್ನು ಮುತ್ತಲು ಶ್ರೀರಾಮನನ್ನುಳಿದು ಮತ್ತಾವನೂ ಸಮರ್ಥನಾಗಿರಲಿಲ್ಲವು. ಆ ಉತ್ತರದ್ವಾರವು ರಾವಣನ

ರಕ್ಷಿತುಂ । ರಾವಣಾಧಿಷ್ಠಿತಂ ಭೀಮಂ ವರುಣೇನೇವ ಸಾಗರಂ ॥ ೩೪ ॥ ಸಾಯುಧೈ ರಾಕ್ಷಸೈರ್ಭೀಮೈರಭಿಗುಪ್ತಂ ಸಮಂತತಃ । ಲಘೂನಾಂ ತ್ರಾಸಜನನಂ ಪಾತಾಳಮಿವ ದಾನವೈಃ ॥ ೩೫ ॥ ವಿನ್ಯಸ್ತಾನಿಚ ಯೋಧಾನಾಂ ಬಹೂನಿ ವಿವಿಧಾನಿಚ । ದದರ್ಶಾಽಽಯುಧಜಾಲಾನಿ ತತ್ರೈವ ಕವಚಾನಿಚ ॥೩೬॥ ಪೂರ್ವಂತು ದ್ವಾರಮಾಸಾದ್ಯ ನೀಲೋ ಹರಿಚಮೂಪತಿಃ । ಅತಿಷ್ಠತ್ಸಹ ಮೈಂದೇನ ದ್ವಿವಿದೇನ ಚ ವೀರ್ಯವಾನ್ ॥ ೩೭ ॥ ಅಂಗದೋ ದಕ್ಷಿಣದ್ವಾರಂ ಜಗ್ರಾಹ ಸುಮಹಾಬಲಃ । ಋಷಭೇಣ ಗವಾಕ್ಷೇಣ ಗಜೇನ ಗವಯೇನಚ ॥ ೩೮ ॥ ಹನುಮಾನ್ ಪಶ್ಚಿಮದ್ವಾರಂ ರರಕ್ಷ ಬಲವಾನ್ ಕಪಿಃ । ಪ್ರಮಾಥಿಪ್ರಘಸಾಭ್ಯಾಂಚ ವೀರೈರನ್ಯೈಶ್ಚ ಸಂಗತಃ ॥ ೩೯ ॥ ಮಧ್ಯಮೇಚ ಸ್ವಯಂ

---

ಲಘೂನಾಂ - ಸ್ವಲ್ಪಜನರಿಗೆ, ತ್ರಾಸಜನನಂ - ಭಯಂಕರವಾದ, ವರುಣೇನ - ವರುಣನಿಂದ, ಸಾಗರಮಿವ - ಸಮುದ್ರದಂತೆ, ಭೀಮಂ - ಭಯಂಕರವಾದ, ರಾವ....ತಂ - ರಾವಣನಿಂದ ಅಧಿಷ್ಠಿಸಲ್ಪಟ್ಟ, ತದ್ವಾರಂ - ಆ ಉತ್ತರದ್ವಾರವನ್ನು, ರಾಮಾತ್ - ಶ್ರೀರಾಮನಿಗಿಂತಲೂ, ಅನ್ಯಃ - ಮತ್ತೊಬ್ಬನು, ಪರಿರಕ್ಷಿತುಂ ಸಂರಕ್ಷಿಸುವದಕ್ಕಾಗಿ, ನಸಮರ್ಥಃ - ಶಕ್ತನಲ್ಲಷ್ಟೆ. ॥೩೫॥ ತತ್ರೈವ- ಆ ಲಂಕಾಪಟ್ಟಣದಲ್ಲಿಯೇ, ವಿನ್ಯಸ್ತಾನಿ - ಇರಿಸಲ್ಪಟ್ಟ, ಬಹೂನಿ - ಅನೇಕವಾದ, ವಿವಿಧಾನಿ - ನಾನಾಬಗೆಗಳಾದ, ಯೋಧಾನಾಂ - ಭಟರ, ಆಯುಧಜಾಲಾನಿ - ಆಯುಧಸಮೂಹಗಳನ್ನೂ, ಕವಚಾನಿ - ಕವಚಗಳನ್ನೂ, ದದರ್ಶ - ಕಂಡನು. ॥ ೩೬ ॥ ವೀರ್ಯವಾನ್ - ಪರಾಕ್ರಮಶಾಲಿಯಾದ, ಹರಿಚಮೂಪತಿಃ-ವಾನರಸೇನಾನಾಯಕನಾದ, ನೀಲಃ-ನೀಲನು, ಮೈಂದೇನ-ಮೈಂದನೊಡನೆಯೂ, ದ್ವಿವಿದೇನಸಹ - ದ್ವಿವಿದನೊಡನೆಯೂ, ಪೂರ್ವಂದ್ವಾರಂತು - ಪೂರ್ವದ್ವಾರವನ್ನಾದರೆ, ಆಸಾದ್ಯ - ಹೊಂದಿ, ಅತಿಷ್ಠತ್-ನಿಂತನು. ॥ ೩೭ ॥ ಸುಮಹಾಬಲಃ-ಬಹು ಬಲಿಷ್ಠನಾದ, ಅಂಗದಃ-ಅಂಗದನು, ಋಷಭೇಣ - ಋಷಭನಿಂದಲೂ, ಗವಾಕ್ಷೇಣ - ಗವಾಕ್ಷನಿಂದಲೂ, ಗಜೇನ - ಗಜನಿಂದಲೂ, ಗವಯೇನಚ - ಗವಯನಿಂದಲೂ (ಒಡಗೂಡಿ), ದಕ್ಷಿಣದ್ವಾರಂ - ದಕ್ಷಿಣದ್ವಾರವನ್ನು, ಜಗ್ರಾಹ - ಗ್ರಹಿಸಿದನು. ॥ ೩೮ ॥ ಬಲವಾನ್-ಬಲಿಷ್ಠನಾದ, ಕಪಿಃ-ವಾನರನಾದ, ಹನುಮಾನ್ ಆಂಜನೇಯನು, ಪ್ರಮಾ....ಭ್ಯಾಂ - ಪ್ರಮಾಥಿಪ್ರಘಸರಿಂದ, ಅನ್ಯೈಃ - ಮತ್ತು ಕೆಲವರಾದ, ವೀರೈಃ - ಶೂರ

---

ಪಾಲನೆಯಲ್ಲಿದ್ದುದರಿಂದಲೇ ಅದು, ವರುಣಪಾಲಿತವಾದ ಸಮುದ್ರದಂತೆ ಯಾರಿಂದಲೂ ಪ್ರವೇಶಿಸಲಸಾಧ್ಯವಾಗಿದ್ದಿತು. ಮಹಾ ಭಯಂಕರವಾಗಿಯೂ, ಭಯಂಕರರಾದ ನಾನಾವಿಧಗಳಾದ ಆಯುಧಗಳನ್ನು ಧರಿಸಿರುವ ರಾಕ್ಷಸವೀರರಿಂದ ತುಂಬಿರುವುದಾಗಿಯೂ, ಅಲ್ಪಬಲವುಳ್ಳವರಿಗೆ ಭಯಾವಹವಾಗಿಯೂ, ಪಾತಾಳಲೋಕದಂತೆ ದುಷ್ಪ್ರವೇಶ್ಯವಾಗಿಯೂ, ಅನೇಕವಿಧಗಳಾದ ಆಯುಧಗಳಿಂದ ತುಂಬಿ, ವಿಚಿತ್ರಕವಚನಗಳಿಂದ ಭಯಂಕರವಾಗಿಯೂ ಇರುವ ಆ ಉತ್ತರದ್ವಾರವನ್ನು ಶ್ರೀರಾಮನಡ್ಡಗಿಸಿದನು. ॥೩೦-೩೬॥ ಮಹಾ ವೀರ್ಯಸಂಪನ್ನನಾದ ನೀಲನೆಂಬ ಯೂಥಪತಿಯು ಮೈಂದ, ದ್ವಿವಿದರೆಂಬ ವಾನರೋತ್ತಮರೊಡಗೂಡಿ, ಲಂಕಾಪಟ್ಟಣದ ಪೂರ್ವದ್ವಾರವನ್ನು ತಡೆಗಟ್ಟಿದನು. ಮಹಾ ಬಲನಾದ ಅಂಗದಕುಮಾರನು, ಋಷಭ, ಗವಾಕ್ಷ, ಗಜ, ಗವಯ ಇವರೊಡಗೂಡಿ ಲಂಕೆಯ ದಕ್ಷಿಣದ್ವಾರವನ್ನಾಕ್ರಮಿಸಿದನು. ಮಹಾ ಬಲಾಢ್ಯನಾದ ಹನುಮಂತನು, ಮಹಾ ಪರಾಕ್ರಮಶಾಲಿಗಳೆಂದು ಪ್ರಸಿದ್ಧರಾದ ಪ್ರಮಾಥಿ ಮತ್ತು ಪ್ರಘಸರೊಡನೆಯೂ ಇತರ ವಾನರರೊಡನೆಯೂ ಕೂಡಿದವನಾಗಿ

ಗುಲ್ಮೇ ಸುಗ್ರೀವಸ್ಸಮತಿಷ್ಠತ । ಸಹ ಸರ್ವೈರ್ಹರಿಶ್ರೇಷ್ಠೈಃ ಸುಪರ್ಣಶ್ವಸನೋಪಮೈಃ ॥೪೦॥ ವಾನರಾಣಾಂ ತು ಷಟ್ತ್ರಿಂಶತ್ಕೋಟ್ಯಃ ಪ್ರಖ್ಯಾತಯೂಥಪಾಃ । ನಿಪೀಡ್ಯೋಪನಿವಿಷ್ಟಾಶ್ಚ ಸುಗ್ರೀವೋ ಯತ್ರ ವಾನರಃ ॥೪೧॥ ಶಾಸನೇನತು ರಾಮಸ್ಯ ಲಕ್ಷ್ಮಣಸ್ಸವಿಭೀಷಣಃ । ದ್ವಾರೇ ದ್ವಾರೇ ಹರೀಣಾಂತು ಕೋಟಿಂ ಕೋಟಿಂನ್ಯವೇಶಯತ್ ॥ ೪೨ ॥ ಪಶ್ಚಿಮೇನತು ರಾಮಸ್ಯ ಸುಗ್ರೀವಸ್ಸಹಜಾಂಬವಾನ್ । ಅದೂರಾನ್ಮಧ್ಯಮೇ ಗುಲ್ಮೇ ತಸ್ಥೌ ಬಹುಬಲಾನುಗಃ ॥೪೩॥ ತೇ ತು ವಾನರಶಾರ್ದೂಲಾಃ ಶಾರ್ದೂಲಾಇವ ದಂಷ್ಟ್ರಿಣಃ । ಗೃಹೀತ್ವಾ ದ್ರುಮಶೈಲಾಗ್ರಾನ್ ಹೃಷ್ಟಾ ಯುದ್ಧಾಯ

---

ರಿಂದಲೂ, ಸಂಗತಃ - ಸೇರಿ, ಪಶ್ಚಿಮದ್ವಾರಂ - ಪಶ್ಚಿಮದ್ವಾರವನ್ನು, ರರಕ್ಷ - ಪಾಲಿಸಿದನು. ॥೩೯॥ ಸುಗ್ರೀವಃ - ಸುಗ್ರೀವನು, ಸುಪ....ಮೈಃ - ಗರುಡವಾಯುಗಳಿಗೆ ಸಮಾನರಾದ, ಸರ್ವೈಃ - ಸಮಸ್ತರಾದ, ಹರಿಶ್ರೇಷ್ಠೈಃ - ವಾನರೋತ್ತಮರೊಡಗೂಡಿ, ಮಧ್ಯಮೇಗುಲ್ಮೇ - ಮಧ್ಯಮ ಕಕ್ಷದಲ್ಲಿ, ಸ್ವಯಂ - ತಾನೇ, ಸಮತಿಷ್ಠತ - ನಿಂತನು. ॥೪೦॥ ಕಿಂತು - ಮತ್ತೇನೆಂದರೆ, ವಾನರಃಸುಗ್ರೀವಃ - ಕಪಿಯಾದ ಸುಗ್ರೀವನು, ಯತ್ರ-ಯಾವ ಸ್ಥಳದಲ್ಲಿ, ಅಸ್ತಿ-ಇದ್ದಾನೆಯೋ, ತತ್ರ-ಅಲ್ಲಿ, ವಾನರಾಣಾಂ-ಕಪಿಗಳ, ಷಟ್ತ್ರಿಂಶತ್ಕೋಟ್ಯಃ - ಮುವ್ವತ್ತಾರುಕೋಟಿ ಸಂಖ್ಯೆಯುಳ್ಳ, ಪ್ರಖ್ಯಾ...ಪಾಃ - ಪ್ರಸಿದ್ಧರಾದ ಯೂಥಪತಿಗಳು, ನಿಪೀಡ್ಯ - ತಡೆದು, ಉಪನಿವಿಷ್ಟಾಃ - ನಿಂತರು. ॥೪೧॥ ಲಕ್ಷ್ಮಣಃ - ಲಕ್ಷ್ಮಣನು, ಸವಿಭೀಷಣಃ - ವಿಭೀಷಣನೊಡನೆ, ರಾಮಸ್ಯ - ಶ್ರೀರಾಮನ, ಶಾಸನೇನ - ಆಜ್ಞೆಯಿಂದ, ದ್ವಾರೇ ದ್ವಾರೇ - ಬಾಗಿಲು ಬಾಗಿಲಲ್ಲಿಯೂ, ಹರೀಣಾಂ - ವಾನರರ, ಕೋಟಿಂಕೋಟಿಂ - ಒಂದೊಂದು ಕೋಟಿಯನ್ನು, ನ್ಯವೇಶಯತ್ - ಇರಿಸಿದನು. ॥ ೪೨ ॥ ರಾಮಸ್ಯ - ಶ್ರೀರಾಮನ, ಪಶ್ಚಿಮೇನತು - ಪೃಷ್ಠಭಾಗದಲ್ಲಾದರೆ, ಮಧ್ಯಮೇಗುಲ್ಮೇ - ಸೇನಾ ಮಧ್ಯಭಾಗದಲ್ಲಿ, ಅದೂರಾತ್ - ಹತ್ತಿರದಲ್ಲೇ, ಸುಗ್ರೀವಃ - ಸುಗ್ರೀವನು, ಸಹಜಾಂಬವಾನ್ - ಜಾಂಬವಂತನೊಡಗೂಡಿ, ಬಹುಬಲಾನುಗಃ - ಬಹು ಸೇನೆಯನ್ನು ಹಿಂದಿಟ್ಟುಕೊಂಡು, ತಸ್ಥೌ - ನಿಂತನು. ॥೪೩॥ ತೇವಾನರಶಾರ್ದೂಲಾಸ್ತು - ಆ ವಾನರ ಮುಖ್ಯರಾದರೆ, ಶಾರ್ದೂಲಾಇವ - ವ್ಯಾಘ್ರಗಳಂತೆ, ದಂಷ್ಟ್ರಿಣಃ - ಕೋರೆದಾಡೆಗಳುಳ್ಳವರಾಗಿ, ಹೃಷ್ಟಾಃ - ಸಂತೋಷಗೊಂಡವರಾಗಿ, ದ್ರುಮಶೈಲಾಗ್ರಾನ್ - ಗಿಡಗಳನ್ನೂ ಪರ್ವತಶಿಖರಗಳನ್ನೂ, ಗೃಹೀತ್ವಾ - ತೆಗೆದುಕೊಂಡು, ಯುದ್ಧಾಯ - ಕಾಳೆಗಕ್ಕಾಗಿ, ತಸ್ಥಿರೇ - ನಿಂತರು. ॥ ೪೪ ॥ ಸರ್ವೇ -

---

ಪಶ್ಚಿಮದ್ವಾರವನ್ನಾಕ್ರಮಿಸಿದನು. ವಾನರ ಪ್ರಭುವಾದ ಸುಗ್ರೀವನು, ಗರುತ್ಮಂತನಿಗೂ, ವಾಯುದೇವನಿಗೂ ಸಮಾನರಾಗಿ ಮಹಾ ಬಲಪರಾಕ್ರಮಗಳುಳ್ಳ ಸಮಸ್ತ ವಾನರವೀರರೊಡಗೂಡಿ ಆ ಲಂಕಾಪಟ್ಟಣದ ಮಧ್ಯಮ ಗುಲ್ಮವನ್ನಾಕ್ರಮಿಸಿ ನಿಂತನು. ಸುಗ್ರೀವನೀರೀತಿ ನಿಂತ ಪ್ರದೇಶದಲ್ಲಿ ವಾನರಯೂಥಪತಿಗಳಲ್ಲಿ ಮಹಾ ಪ್ರಸಿದ್ಧರಾದ ಮೂವತ್ತಾರು ಕೋಟಿ ವಾನರರಿದ್ದರು. ॥ ೩೭–೪೨ ॥ ಶ್ರೀರಾಮನ ಅಪ್ಪಣೆಯನ್ನು ಪಡೆದು ಲಕ್ಷ್ಮಣ ವಿಭೀಷಣರು ಪ್ರತಿ ದ್ವಾರದಲ್ಲಿಯೂ ಒಂದೊಂದುಕೋಟಿ ವಾನರರನ್ನು ನಿಲ್ಲಿಸಿದರು. ಶ್ರೀರಾಮನಿಗೆ ಪಶ್ಚಿಮಭಾಗದ ಸಮೀಪದಲ್ಲಿ ಅತ್ಯಧಿಕ ಸಂಖ್ಯೆಯುಳ್ಳ ವಾನರವೀರರೊಡನೆಯೂ, ಜಾಂಬವಂತನೊಡನೆಯೂ ಕೂಡಿದವನಾದ ಸುಗ್ರೀವನು ನಿಂತಿದ್ದನು. ಹೆಬ್ಬುಲಿಗಳನ್ನು ಸರಿಹೋಲುವವರೂ, ಮಹಾ ಭಯಂಕರರಾದವರೂ, ಕೋರೆದಾಡೆಗಳುಳ್ಳವರೂ ಆದ ವಾನರೋತ್ತಮರೆಲ್ಲರೂ ವೃಕ್ಷಾಗ್ರಗಳನ್ನೂ, ಪರ್ವತಾಗ್ರಗಳನ್ನೂ ಆಯುಧಗಳನ್ನಾಗಿ ಧರಿಸಿ ಮಹಾ

ತಸ್ಥಿರೇ ||೪೪|| ಸರ್ವೇವಿಕೃತಲಾಂಗೂಲಾ ಸ್ಸರ್ವೇ ದಂಷ್ಟ್ರಾನಖಾಯುಧಾಃ | ಸರ್ವೇ ವಿಕೃತಚಿತ್ರಾಂಗಾಸ್ಸರ್ವೇಚ ವಿಕೃತಾನನಾಃ || ೪೫ || ದಶನಾಗಬಲಾಃ ಕೇಚಿತ್ಕೇಚಿದ್ದಶಗುಣೋತ್ತರಾಃ | ಕೇಚಿನ್ನಾಗಸಹಸ್ರಸ್ಯ ಬಭೂವುಸ್ತುಲ್ಯವಿಕ್ರಮಾಃ || ೪೬ || ಸಂತಿ ಚೌಘಬಲಾಃ ಕೇಚಿತ್ಕೇಚಿಚ್ಛತಗುಣೋತ್ತರಾಃ | ಅಪ್ರಮೇಯಬಲಾಶ್ಚಾನ್ಯೇ ತತ್ರಾಸರ್ಹರಿಯೂಥಪಾಃ || ೪೭ || ಅದ್ಭುತಶ್ಚ ವಿಚಿತ್ರಶ್ಚ ತೇಷಾಮಾಸೀತ್ಸಮಾಗಮಃ | ತತ್ರ ವಾನರಸೈನ್ಯಾನಾಂ ಶಲಭಾನಾಮಿವೋದ್ಯಮಃ || ೪೮ || ಪರಿಪೂರ್ಣಮಿವಾಕಾಶಂ ಸಂಛನ್ನೇವಚ ಮೇದಿನೀ | ಲಂಕಾಮುಪನಿವಿಷ್ಟೈಶ್ಚ ಸಂಪತದ್ಭಿಶ್ಚ

---

ಎಲ್ಲರೂ, ವಿಕೃ....ಲಾಃ - ವಿಕಾರವಾದ ಪುಚ್ಛಗಳುಳ್ಳವರು, ಸರ್ವೇ - ಸಮಸ್ತರೂ, ದಂಷ್ಟ್ರಾ....ಧಾಃ - ಕೋರೆದಾಡೆಗಳೂ, ಉಗುರುಗಳೂ ಆಯುಧವಾಗಿ ಉಳ್ಳವರು, ಸರ್ವೇ-ಸಮಸ್ತರೂ, ವಿಕೃತಚಿತ್ರಾಂಗಾಃ- ವಿಕಾರವೂ ಆಶ್ಚರ್ಯಕರವೂ ಶರೀರಗಳುಳ್ಳವರು, ಸರ್ವೇಚ - ಸಮಸ್ತರೂ, ವಿಕೃತಾನನಾಃ- ವಿಕಾರವಾದ ಮುಖಗಳುಳ್ಳವರು. || ೪೫ || ಕೇಚಿತ್ - ಕೆಲವರು, ದಶನಾಗಬಲಾಃ - ಹತ್ತಾನೆಗಳ ಬಲವುಳ್ಳವರು, ಕೇಚಿತ್-ಕೆಲವರು, ದಶಗುಣೋತ್ತರಾಃ-ನೂರಾನೆ ಬಲವುಳ್ಳವರು, ಕೇಚಿತ್-ಕೆಲವರು, ನಾಗಸಹಸ್ರಸ್ಯ-ಸಾವಿರಾನೆಗಳಿಗೆ, ತುಲ್ಯವಿಕ್ರಮಾಃ-ಸಮಾನವಾದ ಪರಾಕ್ರಮವುಳ್ಳವರು, ಬಭೂವುಃ- ಆಗಿದ್ದರು. ||೪೬|| ಕೇಚಿತ್ - ಕೆಲವರು, ಓಘಬಲಾಃ - ಓಘಸಂಖ್ಯೆಯ ಬಲವುಳ್ಳವರು, ಕೇಚಿತ್ - ಕೆಲವರು, ಶತಗುಣೋತ್ತರಾಃ-ನೂರು ಓಘಬಲಗಳಿಂದ ಉತ್ಕೃಷ್ಟರು, ಅನ್ಯೇ-ಮತ್ತು ಕೆಲವರಾದ, ಹರಿಯೂಥಪಾಃ - ವಾನರಯೂಥಪತಿಗಳು, ತತ್ರ - ಆ ಕಪಿಸೈನ್ಯದಲ್ಲಿ, ಅಪ್ರಮೇಯಬಲಾಶ್ಚ - ಅಪರಿಮಿತವಾದ ಬಲವುಳ್ಳವರು, ಆಸನ್-ಆಗಿದ್ದರು. || ೪೭ || ತತ್ರ - ಆ ಲಂಕಾಪಟ್ಟಣದಲ್ಲಿ, ತೇಷಾಂ ವಾನರಸೈನ್ಯಾನಾಂ - ಆ ಕಪಿಸೇನೆಗಳ, ವಿಚಿತ್ರಃ - ಆಶ್ಚರ್ಯಕರವಾದ, ಸಮಾಗಮಃ - ಆಗಮನವು, ಶಲಭಾನಾಂ - ಈಚಲು ಹುಳಗಳ, ಉದ್ಯಮಃಇವ - ಉದ್ಯೋಗದಂತೆ, ಅದ್ಭುತಶ್ಚ - ಆಶ್ಚರ್ಯಕರವಾದದ್ದು, ಆಸೀತ್ - ಆಯಿತು. || ೪೮ || ಲಂಕಾಂ - ಲಂಕೆಯು, ಉಪನಿವಿಷ್ಟೈಃ - ಸಮೀಪದಲ್ಲಿ ಕುಳಿತಿರುವ, ಸಂಪತದ್ಭಿಃ - ಬರುತ್ತಲಿರುವ, ವಾನರೈಶ್ಚ - ಕಪಿಗಳಿಂದಲೂ, ಆಕಾಶಂ - ಅಂತರಿಕ್ಷವು, ಪ್ರಪೂರ್ಣಮಿವ - ತುಂಬಿದ, ಮೇದಿನೀ - ಭೂಮಿಯು, ಸಂಛನ್ನೇವ - ಆಚ್ಛಾದಿತವಾದಂತಾಯಿತು.

---

ಸಂತೋಷದಿಂದ ಯುದ್ಧವನ್ನೆದುರುನೋಡುತ್ತಿದ್ದರು. ಆ ವಾನರರೆಲ್ಲರೂ ವಿಕಾರ ಲಾಂಗೂಲಗಳುಳ್ಳವರಾಗಿಯೂ, ವಿಕಾರಗಳೂ, ವಿಚಿತ್ರಗಳೂ ಆದ ಅವಯವಗಳುಳ್ಳವರಾಗಿಯೂ, ವಿಕಾರವಾದ ಮುಖಗಳುಳ್ಳವರಾಗಿಯೂ ಇದ್ದರು. ಅವರಲ್ಲಿ ಕೆಲವರು ಹತ್ತು ಆನೆಗಳ ಬಲವುಳ್ಳವರಾಗಿಯೂ, ಕೆಲವರು ನೂರಾನೆಗಳ ಬಲವುಳ್ಳವರಾಗಿಯೂ, ಕೆಲವರು ಸಾವಿರಾನೆಗಳ ಬಲವುಳ್ಳವರಾಗಿಯೂ, ಕೆಲವರು ಓಘ ಸಂಖ್ಯೆಯ ಆನೆಗಳ ಬಲವುಳ್ಳವರಾಗಿಯೂ, ಕೆಲವರು ಅದಕ್ಕೂ ನೂರರಷ್ಟು ಹೆಚ್ಚಿನ ಬಲವುಳ್ಳವರಾಗಿಯೂ ಇದ್ದರು. ಕೆಲವರು ಅಪರಿಮಿತ ಬಲಪರಾಕ್ರಮಗಳುಳ್ಳವರಾಗಿದ್ದರು. ಇವರೆಲ್ಲರೂ ಒಟ್ಟಿಗೂಡಿದ್ದುದು ಮಹದಾಶ್ಚರ್ಯವನ್ನುಂಟುಮಾಡುತ್ತಿದ್ದಿತು. ಆ ವಾನರಸೇನೆಯು ಶಲಭಗಳಂತೆ ಭೂಮ್ಯಂತರಿಕ್ಷಗಳನ್ನೆಲ್ಲವನ್ನೂ ವ್ಯಾಪಿಸಿದ್ದಿತು. || ೪೩—೪೮ || ಕೆಲವರು ವಾನರವೀರರು ಆ ಸಮಯದಲ್ಲಿ ಅಂತರಿಕ್ಷದಲ್ಲಿ ಹಾರಿ ಲಂಕೆಯೆಲ್ಲವನ್ನೂ ಆವರಿಸಿದರು. ಅನೇಕ ವಾನರರು ಹೀಗೆಯೇ ಹಾರಿ ಯುದ್ಧಮಾಡಲೋಸುಗ ಆ ಪಟ್ಟಣದ ದ್ವಾರಗಳೆಲ್ಲವನ್ನೂ ಆಕ್ರಮಿಸಿದರು. ಹೀಗೆ

ವಾನರೈಃ ॥ ೪೯ ॥ ಶತಂ ಶತಸಹಸ್ರಾಣಾಂ ಪೃಥಗೃಕ್ಷವನೌಕಸಾಂ । ಲಂಕಾದ್ವಾರಾ
ಣ್ಯುಪಾಜಗ್ಮುರನ್ಯೇ ಯೋದ್ಧುಂ ಸಮಂತತಃ ॥ ೫೦ ॥ ಆವೃತಸ್ಸಗಿರಿಸ್ಸರ್ವೈ
ಸ್ಸಮಂತಾತ್ ಪ್ಲವಂಗಮೈಃ । ಅಯುತಾನಾಂ ಸಹಸ್ರಂಚ ಪುರೀಂ ತಾಮಭ್ಯವರ್ತತ
॥ ೫೧ ॥ ವಾನರೈರ್ಬಲವದ್ಭಿಶ್ಚ ಬಭೂವ ದ್ರುಮಪಾಣಿಭಿಃ ॥ ಸಂವೃತಾ ಸರ್ವತೋ
ಲಂಕಾ ದುಷ್ಪ್ರವೇಶಾಪಿ ವಾಯುನಾ ॥ ೫೨ ॥ ರಾಕ್ಷಸಾ ವಿಸ್ಮಯಂ ಜಗ್ಮುಸ್ಸಹಸಾಽ
ಭಿನಿಪೀಡಿತಾಃ । ವಾನರೈರ್ಮೇಘಸಂಕಾಶೈಶ್ಶಕ್ರತುಲ್ಯಪರಾಕ್ರಮೈಃ ॥೫೩॥ ಮಹಾನ್
ಶಬ್ದೋಽಭವತ್ತತ್ರ ಬಲೌಘಸ್ಯಾಭಿವರ್ತತಃ । ಸಾಗರಸ್ಯೇವ ಭಿನ್ನಸ್ಯ ಯಥಾ
ಸ್ಯಾತ್ಸಲಿಲಸ್ವನಃ ॥ ೫೪ ॥ ತೇನ ಶಬ್ದೇನ ಮಹತಾ ಸಪ್ರಾಕಾರಾ ಸತೋರಣಾ ।

---

॥ ೪೯ ॥ ಶತಸಹಸ್ರಾಣಾಂ - ನೂರುಸಾವಿರಸಂಖ್ಯೆಯುಳ್ಳ, ಋಕ್ಷವನೌಕಸಾಂ - ಕರಡಿಗಳ, ವಾನರರ, ಶತಂ - ನೂರು, ಪೃಥಕ್ - ಪ್ರತ್ಯೇಕವಾಗಿ, ಲಂಕಾದ್ವಾರಾಣಿ - ಲಂಕಾಪಟ್ಟಣದ ಬಾಗಿಲುಗಳನ್ನು ಕುರಿತು, (ಉಪಾಜಗಾಮ - ಬಂದಿತು), ಅನ್ಯೇ - ಇತರರು, ಯೋದ್ಧುಂ-ಯುದ್ಧಮಾಡುವದಕ್ಕಾಗಿ, ಸಮಂತತಃ - ಎಲ್ಲಾ ಕಡೆಯಲ್ಲಿಯೂ, ಉಪಾಜಗ್ಮುಃ - ಬಂದರು. ॥ ೫೦ ॥ ಸಗಿರಿಃ - ಆ ಸುವೇಲ ಪರ್ವತವು, ಸರ್ವೈಃ - ಸಮಸ್ತರಾದ, ತೈಃಪ್ಲವಂಗಮೈಃ - ಆ ವಾನರರಿಂದ, ಸಮಂತಾತ್ - ಎಲ್ಲಾ ಕಡೆಯಲ್ಲಿಯೂ, ಆವೃತಃ - ಸುತ್ತುವರೆಯಲ್ಪಟ್ಟಿತು, ಕಿಂಚ - ಇಷ್ಟುಮಾತ್ರವಲ್ಲ, ಅಯುತಾನಾಂ - ಹತ್ತುಸಾವಿರಗಳ, ಸಹಸ್ರಂ - ಸಾವಿರವು, ತಾಂಪುರೀಂ - ಆ ಪಟ್ಟಣದ, ಅಭ್ಯವರ್ತತ - ಎದುರಿಗೆ ಬಂದಿತು. ॥ ೫೧ ॥ ವಾಯುನಾ - ವಾಯುವಿನಿಂದ, ದುಷ್ಪ್ರವೇಶಾಪಿ - ಪ್ರವೇಶಿಸಲಸಾಧ್ಯವಾದರೂ, ಲಂಕಾಚ - ಲಂಕೆಯು, ದ್ರುಮಪಾಣಿಭಿಃ - ವೃಕ್ಷಗಳನ್ನು ಹಿಡಿದಿರುವ, ಬಲವದ್ಭಿಃ - ಬಲವಂತರಾದ, ವಾನರೈಃ - ಕಪಿಗಳಿಂದ, ಸರ್ವತಃ - ಎಲ್ಲಾಕಡೆಯಲ್ಲಿಯೂ, ಸಂವೃತಾ - ಆಚ್ಛಾದಿಸಲ್ಪಟ್ಟಕಾರಣ, ದುಷ್ಪ್ರವೇಶಾ - ಇತರರಿಂದ ಪ್ರವೇಶಿಸಲಸಾಧ್ಯವಾದದ್ದು, ಬಭೂವ - ಆಯಿತು. ॥ ೫೨ ॥ ಮೇಘಸಂಕಾಶೈಃ - ಮೇಘಸದೃಶರಾದ, ಶಕ್ರ....ಮೈಃ - ಇಂದ್ರಸದೃಶವಾದ ಪರಾಕ್ರಮವುಳ್ಳ, ವಾನರೈಃ - ಕಪಿಗಳಿಂದ, ಸಹಸಾ - ಜಾಗ್ರತೆಯಾಗಿ, ಅಭಿನಿಪೀಡಿತಾಃ - ಬಾಧಿತರಾದ, ರಾಕ್ಷಸಾಃ - ಅಸುರರು, ವಿಸ್ಮಯಂ - ಆಶ್ಚರ್ಯವನ್ನು, ಜಗ್ಮುಃ - ಹೊಂದಿದರು. ॥ ೫೩ ॥ ತತ್ರ - ಆ ತ್ರಿಕೂಟ ಪರ್ವತದಲ್ಲಿ, ಭಿನ್ನಸ್ಯ - ಮಿತಿಮೀರಿದ, ಸಾಗರಸ್ಯೇವ - ಸಮುದ್ರದಂತೆ, ಅಭಿವರ್ತತಃ - ಇರುತ್ತಲಿರುವ, ಬಲೌಘಸ್ಯ - ಸೇನೆಯ ಗುಂಪುಗಳ, ಮಹಾನ್ - ಮಹತ್ತರವಾದ, ಶಬ್ದಃ - ಘೋಷವು, ಸಲಿಲಸ್ವನಃ - ಉದಕದ ಶಬ್ದವು, ಯಥಾ - ಹೇಗೋ, (ತಥಾ - ಹಾಗೆ) ಅಭವತ್ - ಆಯಿತು. ॥ ೫೪ ॥ ಸಪ್ರಾಕಾರಾ - ಕೋಟೆಗೋಡೆಯಿಂದೊಡಗೂಡಿದ, ಸತೋರಣಾ - ಊರುಬಾಗಿಲುಗಳಿಂದ ಕೂಡಿದ,

---

ಆ ಲಂಕಾಪಟ್ಟಣವು ವೃಕ್ಷಗಳನ್ನು ಕೈಯಲ್ಲಿ ಹಿಡಿದಿರುವ ಮಹಾ ಬಲಾಢ್ಯರಾದ ವಾನರರಿಂದ, ವಾಯುವಿನಿಂದ ಆಕ್ರಮಿಸಲ್ಪಟ್ಟಂತೆ ಎಲ್ಲ ಪ್ರದೇಶಗಳಲ್ಲಿಯೂ ಆಕ್ರಮಿಸಲ್ಪಟ್ಟಿತು. ಮುಗಿಲುಗಳಿಗೆ ಸಮಾನರಾದವರೂ, ದೇವೇಂದ್ರನಿಗೆ ಸಮಾನವಾದ ಪರಾಕ್ರಮವುಳ್ಳವರೂ ಆದ ವಾನರರಿಂದ ಪೀಡಿತರಾದ ರಾಕ್ಷಸರೆಲ್ಲರೂ ಮಹದಾಶ್ಚರ್ಯಭರಿತರಾದರು. ಸಮುದ್ರವು ಇಬ್ಭಾಗವಾಗಿ ಒಡೆಯು(ದಡಮೀರು)ವಾಗಣ ಧ್ವನಿಯಂತೆ ಭಯಂಕರ ಧ್ವನಿಗಳನ್ನು ಮಾಡುತ್ತಿರುವ ಯುದ್ಧಸನ್ನದ್ಧರಾದ ಆ ವಾನರರ ಧ್ವನಿಗಳು ಸರ್ವಲೋಕ ಭಯಂಕರವಾಯಿತು. ಆ ಮಹಾ ಧ್ವನಿಯಿಂದ ಪ್ರಾಕಾರ ತೋರಣಗಳಿಂದ

ಲಂಕಾ ಪ್ರಚಲಿತಾ ಸರ್ವಾ ಸಶೈಲವನಕಾನನಾ || ೫೫ || ರಾಮಲಕ್ಷ್ಮಣಗುಪ್ತಾ ಸಾ ಸುಗ್ರೀವೇಣ ಚ ವಾಹಿನೀ | ಬಭೂವ ದುರ್ಧರ್ಷತರಾ ಸರ್ವೈರಪಿ ಸುರಾಸುರೈಃ || ೫೬ || ರಾಘವಸ್ಸನ್ನಿವೇಶ್ಯೈವ ಸೈನ್ಯಂ ಸ್ವಂ ರಕ್ಷಸಾಂ ವಧೇ | ಸಮ್ಮಂತ್ರ್ಯ ಮಂತ್ರಿಭಿಸ್ಸಾರ್ಧಂ ನಿಶ್ಚಿತ್ಯ ಚ ಪುನಃಪುನಃ || ೫೭ || ಆನಂತರ್ಯಮಭಿಪ್ರೇಪ್ಸುಃ ಕ್ರಮಯೋಗಾರ್ಥತತ್ತ್ವವಿತ್ | ವಿಭೀಷಣಸ್ಯಾನುಮತೇ ರಾಜಧರ್ಮಮನುಸ್ಮರನ್ | ಅಂಗದಂ ವಾಲಿತನಯಂ ಸಮಾಹೂಯೇದಮಬ್ರವೀತ್ || ೫೮-೫೯ || "ಗತ್ವಾ

---

ಸಶೈ... ನಾ - ಪರ್ವತಗಳಿಂದಲೂ, ತೋಟಗಳಿಂದಲೂ, ಕಾಡುಗಳಿಂದಲೂ ಕೂಡಿದ, ಸರ್ವಾ - ಸಮಸ್ತವಾದ, ಲಂಕಾ-ಲಂಕೆಯು, ಮಹತಾ-ಮಹತ್ತರವಾದ, ತೇನಶಬ್ದೇನ ಆ ಘೋಷದಿಂದ, ಪ್ರಚಲಿತಾ-ಕದಲಿಸಲ್ಪಟ್ಟಿತು. || ೫೫ || ರಾಮ....ಪ್ತಾ - ರಾಮಲಕ್ಷ್ಮಣರಿಂದ ಸಂರಕ್ಷಿಸಲ್ಪಟ್ಟ, ಸುಗ್ರೀವೇಣಚ-ಸುಗ್ರೀವನಿಂದಲೂ ರಕ್ಷಿಸಲ್ಪಟ್ಟ, ಸಾವಾಹಿನೀ - ಆ ಸೈನ್ಯವು, ಸರ್ವೈಃ - ಸಮಸ್ತರಾದ, ಸುರಾಸುರೈರಪಿ - ದೇವರಾಕ್ಷಸರಿಂದಲೂ ಕೂಡ, ದುರ್ಧರ್ಷತರಾ - ಮನಸ್ಸಿನಿಂದಲೂ, ವ್ಯಾಪಾರದಿಂದಲೂ ತಿರಸ್ಕರಿಸಲಸಾಧ್ಯವಾದದ್ದು, ಬಭೂವ - ಆಯಿತು || ೫೬ || ಕ್ರಮ....ತ್ - ಕ್ರಮಯುಕ್ತವಾದ ಸಾಮಾದ್ಯುಪಾಯಗಳ ಫಲರೂಪವಾದ ಯಾಥಾರ್ಥ್ಯವನ್ನು ತಿಳಿದಿರುವ, ರಾಘವಃ - ಶ್ರೀರಾಮನು, ಸ್ವಂ - ಸ್ವಕೀಯವಾದ, ಸೈನ್ಯಂ - ಸೇನೆಯನ್ನು, ಸನ್ನಿವೇಶ್ಯ - ಚನ್ನಾಗಿರಿಸಿ, ರಕ್ಷಸಾಂ - ರಕ್ಕಸರ, ವಧೇ - ಸಂಹಾರದ ವಿಷಯದಲ್ಲಿ, ಮಂತ್ರಿಭಿಸ್ಸಾರ್ಧಂ - ಮಂತ್ರಿಗಳೊಡನೆ, ಸಂಮಂತ್ರ್ಯೈವ - ಆಲೋಚಿಸಿಯೇ, ಪುನಃ ಪುನಃ-ಬಾರಿಬಾರಿಗೂ, ನಿಶ್ಚಿತ್ಯಚ-ನಿಶ್ಚಯಿಸಿಯೂ, ಆನಂತರ್ಯಂ-ಅನಂತರದಲ್ಲಿ ಮಾಡತಕ್ಕ ಕಾರ್ಯವನ್ನು, ಅಭಿಪ್ರೇಪ್ಸುಃ - ಹೊಂದಲಿಚ್ಛೆಯುಳ್ಳವನಾಗಿ, ರಾಜಧರ್ಮಂ - (ದೂತಪ್ರೇಷಣಾದಿ ರೂಪವಾದ) ರಾಜಧರ್ಮವನ್ನು, ಅನುಸ್ಮರನ್ - ಜ್ಞಾಪಿಸಿಕೊಂಡು, ವಿಭೀಷಣಸ್ಯ-ವಿಭೀಷಣನ, ಅನುಮತೇ - ಸಮ್ಮತಿ ದೊರೆಯಲು, ವಾಲಿತನಯಂ - ವಾಲಿಪುತ್ರನಾದ, ಅಂಗದಂ - ಅಂಗದನನ್ನು, ಸಮಾಹೂಯ-ಕರೆದು, ಇದಂ-ಈ ಮಾತನ್ನು, ಅಬ್ರವೀತ್-ನುಡಿದನು. || ೫೭ ೫೯ ||

---

ಕೂಡಿದ ಆ ಲಂಕಾಪಟ್ಟಣವು ಪರ್ವತಗಳೊಡನೆಯೂ, ವನಗಳೊಡನೆಯೂ ಗಡಗಡನೆ ನಡುಗಿಹೋಯಿತು. || ೫೦–೫೫ || ಶ್ರೀರಾಮಲಕ್ಷ್ಮಣರಿಂದಲೂ, ಸುಗ್ರೀವರಾಜನಿಂದಲೂ ಸುರಕ್ಷಿತವಾದ ಆ ವಾನರಸೇನೆಯು ದೇವದಾನವರಿಗೂ ದುಷ್ಪ್ರವೇಶ್ಯವಾಗಿದ್ದಿತು. ಈ ಪ್ರಕಾರವಾಗಿ ರಾಕ್ಷಸವಧ ನಿಮಿತ್ತವಾಗಿ ವಾನರಸೈನ್ಯವೆಲ್ಲವನ್ನೂ ಪ್ರವೇಶಗೊಳಿಸಿದ ಬಳಿಕ ಶ್ರೀರಾಮಮೂರ್ತಿಯು ಮಂತ್ರಿಗಳೊಡನೆ ಆಲೋಚಿಸಿ ಆ ಕಾಲಕ್ಕೆ ಉಚಿತವಾದ ಕಾರ್ಯಗಳನ್ನು ನಿಶ್ಚಯಿಸಿದನು. ಆ ತರುವಾಯ ಆತನು ಆ ಕಾಲಕ್ಕೆ ಮಾಡಬೇಕಾದ ಕಾರ್ಯವನ್ನು ತಿಳಿಯಬೇಕೆಂಬ ಕೋರಿಕೆಯುಳ್ಳವನಾಗಿ, ನ್ಯಾಯ ಮತ್ತು ಸಾಮಾದ್ಯುಪಾಯಗಳನ್ನು ಯಥಾರ್ಥವಾಗಿ ತಿಳಿದವನಾದುದರಿಂದ ವಿಭೀಷಣನ ಅನುಮತಿಯನ್ನು ಪಡೆದು ರಾಜಧರ್ಮವನ್ನವಲಂಬಿಸಿದನು. ಆ ಸಮಯದಲ್ಲಿ ವಿಭೀಷಣನು ಶ್ರೀರಾಮನನ್ನು ಕುರಿತು, "ರಘುಕುಲೋತ್ತಮಾ; ಶ್ರೀರಾಮಾ!! ಈ ಯುದ್ಧಸಮಯದಲ್ಲಿಯೂ ರಾವಣಾಸುರನು ನಿನಗೆ ಶರಣಾಗತನಾದರೆ ಅವನಿಗೆ ಈ ಲಂಕಾರಾಜ್ಯವನ್ನು ಕೊಡುವವನಾಗು" ಎಂದು ಹೇಳಿದನು. ಆ ಮಾತನ್ನು ಕೇಳಿ ಶ್ರೀರಾಮನು ಪರಮ ಸಂತುಷ್ಟನಾಗಿ ವಾಲಿಪುತ್ರನಾದ

ಸೌಮ್ಯ! ದಶಗ್ರೀವಂ ಬ್ರೂಹಿ ಮದ್ವಚನಾತ್ಕಪೇ! । ಲಂಘಯಿತ್ವಾ ಪುರೀಂ ಲಂಕಾಂ ಭಯಂ ತ್ಯಕ್ತ್ವಾ ಗತವ್ಯಥಃ॥೬೦॥ಭ್ರಷ್ಟಶ್ರೀಕ! ಗತೈಶ್ವರ್ಯ! ಮುಮೂರ್ಷೋ! ನಷ್ಟಚೇತನ! । ಋಷೀಣಾಂ ದೇವತಾನಾಂಚ ಗಂಧರ್ವಾಪ್ಸರಸಾಂ ತಥಾ ॥ ೬೧ ॥ ನಾಗಾನಾಮಥ ಯಕ್ಷಾಣಾಂ ರಾಜ್ಞಾಂ ಚ ರಜನೀಚರ! । ಯಚ್ಚ ಪಾಪಂ ಕೃತಂ ಮೋಹಾದವಲಿಪ್ತೇನ ರಾಕ್ಷಸ! ॥ ೬೨ ॥ ನೂನಮದ್ಯ ಗತೋ ದರ್ಪಃ ಸ್ವಯಂಭು ವರದಾನಜಃ । ಯಸ್ಯ ದಂಡಧರಸ್ತೇಽಹಂ ದಾರಾಹರಣಕರ್ಶಿತಃ । ದಂಡಂ ಧಾರಯ ಮಾಣಸ್ತು ಲಂಕಾದ್ವಾರೇ ವ್ಯವಸ್ಥಿತಃ ॥ ೬೩ ॥ ಪದವೀಂ ದೇವತಾನಾಂಚ ಮಹರ್ಷೀ

---

ಹೇ ಸೌಮ್ಯ - ಎಲೈ ಕೋಪರಹಿತನೇ, ಹೇ ಕಪೇ - ಎಲೈ ವಾನರನೇ, ಲಂಕಾಂಪುರೀಂ - ಲಂಕಾ ಪಟ್ಟಣವನ್ನು, ಲಂಘಯಿತ್ವಾ - ದಾಟಿ, ಗತ್ವಾ - ಹೋಗಿ, ಭಯಂ - ಭೀತಿಯನ್ನು, ತ್ಯಕ್ತ್ವಾ ಬಿಟ್ಟು, ಗತವ್ಯಥಃ - ಕಳೆದ ಶ್ರಮವುಳ್ಳವನಾಗಿ, ಮದ್ವಚನಾತ್ - ನನ್ನ ಮಾತಿನಿಂದ, ದಶಗ್ರೀವಂ - ರಾವಣ ನನ್ನು ಕುರಿತು, ಬ್ರೂಹಿ - ಹೇಳು. ॥ ೬೦ ॥ ಭ್ರಷ್ಟಶ್ರೀಕ - ಭ್ರಷ್ಟತೇಜನೇ, ಗತೈಶ್ವರ್ಯ - ಗತ ವಾದ ಸ್ವಾಮಿತ್ವವುಳ್ಳವನೇ, ಹೇ ಮುಮೂರ್ಷೋ - ಎಲೈ ಸಾಯಲಿಚ್ಛೆಯುಳ್ಳವನೇ, ಹೇ ನಷ್ಟಚೇತನ- ಶಿಥಿಲವಾದ ಪ್ರಜ್ಞೆಯುಳ್ಳವನೇ, ಹೇ ರಜನೀಚರ - ಎಲೈ ರಕ್ಕಸನೇ, ಋಷೀಣಾಂ - ಮುನಿಗಳಿಗೂ, ದೇವತಾನಾಂಚ - ದೇವತೆಗಳಿಗೂ, ತಥಾ - ಹಾಗೆಯೇ, ಗಂಧರ್ವಾಪ್ಸರಸಾಂ - ಗಂಧರ್ವರಿಗೂ ಅಪ್ಸರ ಸ್ತ್ರೀಯರುಗಳಿಗೂ, ನಾಗಾನಾಂ - ನಾಗರಿಗೂ, ಅಥ-ಬಳಿಕ, ಯಕ್ಷಾಣಾಂ - ಯಕ್ಷರಿಗೂ, ರಾಜ್ಞಾಂಚ- ರಾಜರಿಗೂ, ಮೋಹಾತ್ - ಅಜ್ಞಾನದಿಂದ, ಅವಲಿಪ್ತೇನ - ಗರ್ವಿತನಾದ ನಿನ್ನಿಂದ, ಯಚ್ಚಪಾಪಂ - ಯಾವ ಪಾಪವು, ಕೃತಂ - ಮಾಡಲ್ಪಟ್ಟಿತೋ, ಯಸ್ಯ - ಯಾವ, ತೇ - ನಿನಗೆ, ದಂಡಧರಃ - ಶಿಕ್ಷಾ ಕರ್ತನಾಗಿ, ದಾರಾ....ತಃ - ಭಾರ್ಯಾಪಹಾರದಿಂದ ಕೃಶೀಭೂತನಾದ, ಅಹಂ - ನಾನು, ದಂಡಂ - ದಂಡವನ್ನು, ಧಾರಯಾಮಾಣಸ್ತು - ಧರಿಸುವವನಾಗಿ, ಲಂಕಾದ್ವಾರೇ - ಲಂಕಾಪಟ್ಟಣದ ಬಾಗಿಲಲ್ಲಿ, ವ್ಯವಸ್ಥಿತಃ - ನಿಂತಿದ್ದೇನೆ, ತೇ - ಅಂಥಾ ನಿನ್ನ, ಸ್ವಯಂ......ಜಃ - ಬ್ರಹ್ಮವರದಿಂದ ಹುಟ್ಟಿದ, ದರ್ಪಃ- ಗರ್ವವು, ಅದ್ಯ - ಈಗ, ಗತಃ - ಹೋಯಿತು, ನೂನಂ - ನಿಶ್ಚಯವು. ॥ ೬೧-೬೩ ॥ ಹೇ ರಾಕ್ಷಸ - ಎಲೈ ರಾಕ್ಷಸನೇ, ಮಯಾ - ನನ್ನಿಂದ, ಹತಃ - ಹೊಡೆಯಲ್ಪಟ್ಟವನಾಗಿ, ದೇವತಾನಾಂಚ - ದೇವತೆ

---

ಅಂಗದಕುಮಾರನನ್ನು ಕರೆದು, "ವತ್ಸ ಅಂಗದಾ! ನೀನು ರಾವಣಾಸುರನ ಬಳಿಗೆ ಹೋಗಿ ನನ್ನ ಮಾತುಗಳಿಂದ ಹೀಗೆ ಹೇಳು. ಮನೋವ್ಯಥೆಯನ್ನೂ, ಭಯವನ್ನೂ ತೊರೆದು ಲಂಕೆಗೆ ಹಾರಿಹೋಗಿ ನಾನು ಹೇಳಿದೆನೆಂದೇ ಆ ರಾವಣನಿಗೆ ಈ ಮಾತುಗಳನ್ನು ಹೇಳು:—ಎಲೈ ನಷ್ಟೈಶ್ವರ್ಯವುಳ್ಳವನೇ, ಮರಣಹೊಂದಲು ಸಿದ್ಧವಾಗಿರುವವನೇ, ಬುದ್ಧಿಹೀನನಾದ ರಾವಣನೇ! ನೀನು ಗರ್ವಾತಿರೇಕದಿಂದ ಋಷಿಗಳಿಗೂ, ದೇವತೆಗಳಿಗೂ, ಗಂಧರ್ವರಿಗೂ, ಅಪ್ಸರರಿಗೂ, ನಾಗಯಕ್ಷರಿಗೂ, ರಾಜರಿಗೂ ಮತ್ತೂ ಇತರರಿಗೂ ನಾನಾವಿಧಗಳಾದ ಕೇಡುಗಳನ್ನುಂಟುಮಾಡಿರುವೆ. ಅಂತಹ ಪಾಪಕೃತ್ಯಗಳಿಗೆ ಕಾರಣವಾದುದೂ, ಬ್ರಹ್ಮ ದೇವನ ವರದಿಂದ ಹುಟ್ಟಿದುದೂ ಆದ ನಿನ್ನ ಮದವೆಲ್ಲವೂ ನಶಿಸಿಹೋಯಿತೆಂದು ತಿಳಿ. ನನ್ನ ಭಾರ್ಯೆಯಾದ ಸೀತೆಯನ್ನು ಅಪಹರಿಸಿದುದರಿಂದ ನಾನೀಗ ಮಹಾ ಕೋಪಸಮನ್ವಿತ ನಾಗಿ ನಿನ್ನನ್ನು ದಂಡಿಸಲೋಸುಗ ದಂಡಧರನಾಗಿ ಲಂಕಾದ್ವಾರದಲ್ಲಿ ಬಂದು ನಿಂತಿರುವೆನು. ಎಲೈ ರಾವಣನೇ! ನೀನು ನನ್ನಿಂದ ಸಂಹೃತನಾಗುವುದರಿಂದ ನಿನ್ನ ಪಾಪಗಳೆಲ್ಲವೂ

ಣಾಂಚ ರಾಕ್ಷಸ! । ರಾಜರ್ಷೀಣಾಂಚ ಸರ್ವೇಷಾಂ ಗಮಿಷ್ಯಸಿ ಮಯಾ ಹತಃ ॥ ೬೪ ॥ ಬಲೇನ ಯೇನ ವೈ ಸೀತಾಂ ಮಾಯಯಾ ರಾಕ್ಷಸಾಧಮ! । ಮಾಮತಿಕ್ರಾಮಯಿತ್ವಾ ತ್ವಂ ಹೃತವಾಂಸ್ತದ್ವಿದರ್ಶಯ ॥ ೬೫ ॥ ಅರಾಕ್ಷಸಮಿಮಂ ಲೋಕಂ ಕರ್ತಾಸ್ಮಿ ನಿಶಿತೈಶ್ಶರೈಃ । ನಚೇಚ್ಛರಣಮಭ್ಯೇಷಿ ಮಾಮುಪಾದಾಯ ಮೈಥಿಲೀಂ॥೬೬॥ ಧರ್ಮಾತ್ಮಾ ರಕ್ಷಸಾಂ ಶ್ರೇಷ್ಠಸ್ಸಂಪ್ರಾಪ್ತೋಽಯಂ ವಿಭೀಷಣಃ । ಲಂಕೈಶ್ವರ್ಯಂ ಧ್ರುವಂ ಶ್ರೀಮಾನಯಂ ಪ್ರಾಪ್ನೋತ್ಯಕಂಟಕಂ ॥ ೬೭ ॥ ನಹಿ ರಾಜ್ಯಮಧರ್ಮೇಣ ಭೋಕ್ತುಂ ಕ್ಷಣಮಪಿ ತ್ವಯಾ । ಶಕ್ಯಂ ಮೂರ್ಖಸಹಾಯೇನ ಪಾಪೇನಾಽವಿದಿತಾ

---

ಗಳ, ಮಹರ್ಷೀಣಾಂಚ - ಬ್ರಹ್ಮರ್ಷಿಗಳ, ಸರ್ವೇಷಾಂ - ಸಮಸ್ತರಾದ, ರಾಜರ್ಷೀಣಾಂಚ - ರಾಜರ್ಷಿಗಳ, ಪದವೀಂ - ಸ್ಥಾನವನ್ನು, ಗಮಿಷ್ಯಸಿ - ಹೊಂದುವೆ. ॥ ೬೪ ॥ ಹೇ ರಾಕ್ಷಸಾಧಮ - ಎಲೈ ನೀಚ ರಾಕ್ಷಸನೇ, ಯೇನಬಲೇನ - ಯಾವ ಬಲದಿಂದ, ಮಾಯಯಾ - ಕಪಟದಿಂದ, ಮಾಂ - ನನ್ನನ್ನು, ಅತಿಕ್ರಾಮಯಿತ್ವಾ - ವಂಚಿಸಿ, ತ್ವಂ - ನೀನು, ಸೀತಾಂ - ಸೀತಾದೇವಿಯನ್ನು, ಹೃತವಾನ್ - ಅಪಹರಿಸಿದೆಯೋ, ತತ್ - ಅದನ್ನು, ವಿದರ್ಶಯ - ತೋರಿಸು. ॥ ೬೫ ॥ ಮಾಂ - ನನ್ನನ್ನು ಕುರಿತು, ಮೈಥಿಲೀಂ - ಸೀತಾದೇವಿಯನ್ನು, ಉಪಾದಾಯ - ಕರೆದುತಂದು, ಶರಣಂ - ಶರಣವನ್ನು, ನಾಭ್ಯೇಷಿಚೇತ್ - ಹೊಂದದೇ ಇರುವೆಯಾದರೆ, ನಿಶಿತೈಃ - ತೀಕ್ಷ್ಣವಾದ, ಶರೈಃ - ಬಾಣಗಳಿಂದ, ಇಮಂ ಲೋಕಂ - ಈ ಲೋಕವನ್ನು, ಅರಾಕ್ಷಸಂ - ರಾಕ್ಷಸರಹಿತನನ್ನಾಗಿ, ಕರ್ತಾಸ್ಮಿ - ಮಾಡುವೆನು. ॥೬೬॥ ಧರ್ಮಾತ್ಮಾ - ಧರ್ಮದಲ್ಲಿಯೇ ಮನಸ್ಸುಳ್ಳ, ರಕ್ಷಸಾಂ - ರಕ್ಕಸರಲ್ಲಿ, ಶ್ರೇಷ್ಠಃ - ಉತ್ತಮನಾದ, ಅಯಂವಿಭೀಷಣಃ - ಈ ವಿಭೀಷಣನು, ಸಂಪ್ರಾಪ್ತಃ - ಬಂದಿದ್ದಾನೆ, ಶ್ರೀಮಾನ್ - ಸಂಪದ್ಯುಕ್ತನಾದ, ಅಯಂ - ಈತನು, ಲಂಕೈಶ್ವರ್ಯಂ - ಲಂಕಾರಾಜತ್ವವನ್ನು, ಅಕಂಟಕಂ - ನಿಷ್ಕಂಟಕವಾಗಿ, ಪ್ರಾಪ್ನೋತಿ-ಹೊಂದಿದನಷ್ಟೆ, ಧ್ರುವಂ-ಇದು ನಿಶ್ಚಯವು. ॥೬೭॥ ಮೂರ್ಖಸಹಾಯೇನ-ಮೂರ್ಖರೇ ಸಹಾಯವಾಗುಳ್ಳ, ಪಾಪೇನ - ಪಾಪಿಷ್ಠನಾದ, ಅವಿದಿತಾತ್ಮನಾ - ತಿಳಿಯಲ್ಪಡದಿರುವ ಸ್ವಭಾವವುಳ್ಳ, ಅಧರ್ಮೇಣ - ಧರ್ಮಶೂನ್ಯನಾದ, ತ್ವಯಾ - ನಿನ್ನಿಂದ, ಕ್ಷಣಮಪಿ-ಕ್ಷಣಮಾತ್ರವಾದರೂ, ರಾಜ್ಯಂ-

---

ಕಳೆದು ಪೂತನಾಗುವುದರಿಂದ ನೀನು ದೇವತೆಗಳ, ಮಹರ್ಷಿಗಳ, ರಾಜರ್ಷಿಗಳ ಮತ್ತೂ ಇತರರ ಪದವಿಯನ್ನು ಪಡೆಯುವೆ. ಆದುದರಿಂದ ಜಾಗ್ರತೆಯಾಗಿ ಯುದ್ಧಸನ್ನದ್ಧನಾಗಿ ಬರುವವನಾಗು. ॥ ೫೬–೬೪ ॥ ಎಲಾ ರಾವಣನೇ! ನೀನು ನಿನ್ನ ಬಲದಿಂದಲೂ, ಮಾಯೆಯಿಂದಲೂ, ನನ್ನನ್ನು ಅತಿಕ್ರಮಿಸಿ, ನನ್ನ ಭಾರ್ಯೆಯಾದ ಸೀತೆಯನ್ನು ಕದ್ದು ತಂದೆಯಲ್ಲವೆ? ಈಗ ಆ ಸೀತೆಯನ್ನು ನನಗೆ ತಂದೊಪ್ಪಿಸು. ನೀನು ಹಾಗೆ ಮಾಡದಿದ್ದಲ್ಲಿ ನಾನು ಮಹಾ ತೀಕ್ಷ್ಣವಾದ ಬಾಣಗಳಿಂದ ನಿನ್ನ ಲೋಕವೆಲ್ಲವನ್ನೂ ರಾಕ್ಷಸರಹಿತವಾಗಿ ಮಾಡುವೆನು. ಆದುದರಿಂದ ನೀನು ಇನ್ನು ಮುಂದೆಯಾದರೂ ದುರ್ಮಾರ್ಗವನ್ನು ತೊರೆದು ರಾಕ್ಷಸರಲ್ಲಿ ಶ್ರೇಷ್ಠನಾದ ವಿಭೀಷಣನು ನನ್ನಲ್ಲಿ ಶರಣಾಗತನಾಗಿ ಬಂದಂತೆ ಶರಣಾಗತನಾಗು. ಧರ್ಮಾತ್ಮನೂ, ರಾಕ್ಷಸೋತ್ತಮನೂ ಆದ ವಿಭೀಷಣನು ನನ್ನನ್ನು ಕುರಿತು ಶರಣೆಂದನು. ಆದುದರಿಂದ ಮಹಾನುಭಾವನಾದ ಈ ವಿಭೀಷಣನು ಲಂಕಾರಾಜ್ಯವೆಲ್ಲವನ್ನೂ ನಿಷ್ಕಂಟಕವಾಗಿ ಹೊಂದಬಲ್ಲನು. ಧರ್ಮವಾಗಿ ಸಂಚರಿಸುವ ನೀನು ಇನ್ನುಮೇಲೆ ಒಂದು ಕ್ಷಣಕಾಲವಾದರೂ ಲಂಕಾರಾಜ್ಯವನ್ನನುಭವಿಸಲಾರೆಯೆಂದರಿತುಕೋ. ನೀನು ಅವಿವೇಕವುಳ್ಳವನೂ,

ತ್ಮನಾ ‖ ೬೮ ‖ ಯುಧ್ಯಸ್ವ ವಾ ಧೃತಿಂ ಕೃತ್ವಾ ಶೌರ್ಯಮಾಲಂಬ್ಯ ರಾಕ್ಷಸ! । ಮಚ್ಛರೈಸ್ತ್ವಂ ರಣೇ ಶಾಂತಸ್ತತಃ ಪೂತೋ ಭವಿಷ್ಯಸಿ ‖ ೬೯ ‖ ಯದ್ಯಾವಿಶಸಿ ಲೋಕಾಂಸ್ತ್ರೀನ್ ಪಕ್ಷಿಭೂತೋ ಮನೋಜವಃ । ಮಮ ಚಕ್ಷುಷ್ಪಥಂ ಪ್ರಾಪ್ಯ ನಜೀವನ್ ಪ್ರತಿಯಾಸ್ಯಸಿ ‖ ೭೦ ‖ ಬ್ರವೀಮಿ ತ್ವಾಂ ಹಿತಂ ವಾಕ್ಯಂ ಕ್ರಿಯತಾಮೌರ್ಧ್ವದೈಹಿಕಂ । ಸುದೃಷ್ಟಾ ಕ್ರಿಯತಾಂ ಲಂಕಾ ಜೀವಿತಂ ತೇ ಮಯಿ ಸ್ಥಿತಂ" ‖ ೭೧ ‖ ಇತ್ಯುಕ್ತಸ್ಸತು ತಾರೇಯೋ ರಾಮೇಣಾಕ್ಲಿಷ್ಟಕರ್ಮಣಾ । ಜಗಾಮಾಕಾಶ

---

ರಾಜ್ಯವನ್ನು, ಭೋಕ್ತುಂ - ಅನುಭವಿಸಲು, ನಶಕ್ಯಂಹಿ - ಆಗಲಾರದಷ್ಟೆ. ‖೬೮‖ ಹೇ ರಾಕ್ಷಸ - ಎಲೈ ರಕ್ಕಸನೇ, ಧೃತಿಂ - ಧೈರ್ಯವನ್ನು, ಕೃತ್ವಾ - ಮಾಡಿ, ಶೌರ್ಯಂ - ಶೂರತ್ವವನ್ನು, ಆಲಂಬ್ಯ - ಆಶ್ರಯಿಸಿ, ಯುಧ್ಯಸ್ವ - ಯುದ್ಧಮಾಡು, ತ್ವಂ - ನೀನು, ರಣೇ - ಕಾಳಗದಲ್ಲಿ, ಮಚ್ಛರೈಃ - ನನ್ನ ಬಾಣಗಳಿಂದ, ಶಾಂತಃ - ಮೃತನಾಗಿ, ತತಃ - ಬಳಿಕ, ಪೂತಃ - ಪರಿಶುದ್ಧನು. ಭವಿಷ್ಯಸಿ - ಆಗುವೆ. ‖ ೬೯ ‖ ಯದ್ಯಾ - ಹಾಗಲ್ಲದಿದ್ದರೆ, ಮನೋಜವಃ - ಮನಸ್ಸಿಗಿಂತಲೂ ವೇಗವುಳ್ಳವನಾಗಿ, ಪಕ್ಷಿಭೂತಃ - ಪಕ್ಷಿಪ್ರಾಯನಾಗಿ, ತ್ರೀನ್‌ಲೋಕಾನ್ - ಮೂರು ಲೋಕಗಳನ್ನು, ವಿಶಸಿ - ಪ್ರವೇಶಿಸಿದರೂ, ಮಮ - ನನ್ನ, ಚಕ್ಷುಷ್ಪಥಂ - ದೃಷ್ಟಿಗೋಚರತ್ವವನ್ನು, ಪ್ರಾಪ್ಯ - ಹೊಂದಿ, ಜೀವನ್ - ಬದುಕಿದವನಾಗಿ, ನಪ್ರತಿಯಾಸ್ಯಸಿ - ಹಿಂದಕ್ಕೆ ಹೋಗಲಾರೆ. ‖ ೬೯-೭೦ ‖ ತ್ವಾಂ - ನಿನ್ನನ್ನು ಕುರಿತು, ಹಿತಂ-ಇಷ್ಟವಾದ, ವಾಕ್ಯಂ - ಮಾತನ್ನು, ಬ್ರವೀಮಿ - ಹೇಳುತ್ತೇನೆ, ಔರ್ಧ್ವದೈಹಿಕಂ - ಪಾರಲೌಕಿಕ ಕರ್ಮವು, ಕ್ರಿಯತಾಂ - ಮಾಡಿಕೊಳ್ಳಲ್ಪಡಲಿ, ಲಂಕಾ - ಲಂಕಾಪಟ್ಟಣವು, ಸುದೃಷ್ಟಾ - ಚನ್ನಾಗಿ ನೋಡಲ್ಪಟ್ಟದ್ದಾಗಿ, ಕ್ರಿಯತಾಂ - ಮಾಡಲ್ಪಡಲಿ, ತೇ - ನಿನ್ನ, ಜೀವಿತಂ - ಪ್ರಾಣವು, ಮಯಿ - ನನ್ನಲ್ಲಿ, ಸ್ಥಿತಂ - ನಿಂತಿದೆ. ‖ ೭೧ ‖ ಸತಾರೇಯಸ್ತು - ಆ ಅಂಗದನಾದರೆ, ಅಕ್ಲಿ....ಣಾ - ಕ್ಲೇಶವಿಲ್ಲದೆ ಕಾರ್ಯಗಳನ್ನು ಮಾಡುವುದು, ರಾಮೇಣ-ಶ್ರೀರಾಮನಿಂದ, ಇತ್ಯುಕ್ತಃ-ಈ ಪರಿ ಹೇಳಲ್ಪಟ್ಟವ

---

ಪಾಪಾತ್ಮನೂ, ಮೂರ್ಖರೇ ಸಹಾಯಕರಾಗುಳ್ಳವನೂ ಆಗಿರುವೆ. ಎಲೈ ಮೂಢನೇ! ರಾವಣಾಸುರನೇ! ನೀನಿನ್ನುಮೇಲೆ ರಾಜ್ಯವನ್ನಾಳಲು ಅರ್ಹನಲ್ಲವು. ಆದುದರಿಂದಲೇ ಸೀತೆಯನ್ನು ನನಗೆ ಸಮರ್ಪಿಸುವುದಕ್ಕೆ ನಿನಗೆ ಮನಸ್ಸು ಬಾರದಿರುವುದು. ಆದುದರಿಂದ ನೀನೀಗ ಧೈರ್ಯವನ್ನವಲಂಬಿಸಿ ಶೌರ್ಯವುಳ್ಳವನಾಗಿ ನನ್ನೊಡನೆ ಯುದ್ಧಮಾಡು. ಯುದ್ಧದಲ್ಲಿ ನನ್ನ ಬಾಣಗಳಿಂದ ಮರಣ ಹೊಂದಿದರೆ ನೀನು ಪವಿತ್ರನಾಗುವೆ. ನಿನ್ನ ಪಾಪಗಳೆಲ್ಲವೂ ಕಳೆದು ಹೋಗುವುವು. ನನ್ನ ಕಣ್ಣಿಗೆ ಬಿದ್ದ ನೀನು ಮನೋವೇಗವುಳ್ಳ ಪಕ್ಷಿರೂಪವನ್ನು ತಾಳಿ ಮೂರು ಲೋಕಗಳಿಗೆ ಹೋಗಿ ಸೇರಿಕೊಂಡರೂ ಜೀವಿಸಲಾರೆ. ‖೬೭–೭೦‖ ಎಲೈರಾವಣನೇ! ಈಗ ನಾನು ನಿನಗೆ ಹಿತವನ್ನು ಹೇಳುತ್ತಿರುವೆನು. ನನ್ನ ಮಾತುಗಳನ್ನು ಕೇಳು. ಹಾಗೆ ನೀನು ನನ್ನ ಹಿತಬೋಧನೆಯನ್ನು ಕೇಳದಿದ್ದಲ್ಲಿ ಲೋಕದಲ್ಲಿರುವ ರಾಕ್ಷಸರೆಲ್ಲರನ್ನೂ ವಧಿಸುತ್ತೇನೆಂದು ತಿಳಿ. ರಾಕ್ಷಸರೆಲ್ಲರೂ ಮಡಿದ ಬಳಿಕ ನಿನಗೆ ಶ್ರಾದ್ಧಾದಿ ಕ್ರಿಯೆಗಳನ್ನು ಮಾಡುವವರು ಯಾರೂ ಇರುವುದಿಲ್ಲವಾದುದರಿಂದ ನೀನೇ ಮೊದಲು ನಿನ್ನ ಶ್ರಾದ್ಧಾದಿ ಕ್ರಿಯೆಗಳನ್ನು ಮಾಡಿಕೊಂಡಿರು. ನೀನಿನ್ನುಮೇಲೆ ಲಂಕಾಪಟ್ಟಣವನ್ನು ನೋಡಲಾರೆ ಯಾದುದರಿಂದ ಈಗಲೇ ಅದೆಲ್ಲವನ್ನೂ ಒಂದು ಬಾರಿ ಚೆನ್ನಾಗಿ ನೋಡಿಬಿಡು. ನಿನ್ನ ಪ್ರಾಣಗಳು ಈಗ ನನ್ನ ಅಧೀನಗಳಾಗಿವೆ.—ಅಂಗದಾ! ನೀನು ಈ ಮಾತುಗಳನ್ನೇ ಆ ರಾವಣನಿಗೆ

ಮಾವಿಶ್ಯ ಮೂರ್ತಿಮಾನಿವ ಹವ್ಯವಾಟ್ || ೭೨ || ಸೋಽತಿಪತ್ಯ ಮುಹೂರ್ತೇನ ಶ್ರೀಮಾನ್ ರಾವಣಮಂದಿರಂ | ದದರ್ಶಾಸೀನಮವ್ಯಗ್ರಂ ರಾವಣಂ ಸಚಿವೈಸ್ಸಹ || ೭೩ || ತತಸ್ತಸ್ಯಾವಿದೂರೇ ಸ ನಿಪತ್ಯ ಹರಿಪುಂಗವಃ | ದೀಪ್ತಾಗ್ನಿಸದೃಶಸ್ತಸ್ಥಾವಂಗದಃ ಕನಕಾಂಗದಃ ||೭೪|| ತದ್ರಾಮವಚನಂ ಸರ್ವಮನ್ಯೂನಾಧಿಕಮುತ್ತಮಂ | ಸಾಮಾತ್ಯಂ ಶ್ರಾವಯಾಮಾಸ ನಿವೇದ್ಯಾತ್ಮಾನಮಾತ್ಮನಾ || ೭೫ || “ ದೂತೋಽಹಂ ಕೋಸಲೇಂದ್ರಸ್ಯ ರಾಮಸ್ಯಾಽಕ್ಲಿಷ್ಟಕರ್ಮಣಃ | ವಾಲಿಪುತ್ರೋಽಂಗದೋ ನಾಮ ಯದಿ ತೇ ಶ್ರೋತ್ರಮಾಗತಃ || ೭೬ || ಆಹ ತ್ವಾಂ ರಾಘವೋ ರಾಮಃ ಕೌಸಲ್ಯಾ

---

ನಾಗಿ, ಮೂರ್ತಿಮಾನ್ - ದೇಹಧಾರಿಯಾದ, ಹವ್ಯವಾಡಿವ - ಅಗ್ನಿಯಂತೆ, ಆಕಾಶಂ - ಅಂತರಿಕ್ಷವನ್ನು, ಪ್ರವಿಶ್ಯ - ಪ್ರವೇಶಿಸಿ, ಜಗಾಮ - ತೆರಳಿದನು. || ೭೨ || ಶ್ರೀಮಾನ್ - ಕಾಂತಿಯುಕ್ತನಾದ, ಸಃ - ಆ ಅಂಗದನು, ಮುಹೂರ್ತೇನ - ಕ್ಷಣದಲ್ಲಿ, ಮಾರ್ಗಂ - ಮಾರ್ಗವನ್ನು, ಅತಿಪತ್ಯ - ದಾಟಿ, ರಾವಣ ಮಂದಿರಂ - ರಾವಣನ ಮನೆಯನ್ನು, ಅವ್ಯಗ್ರಂ-ಸ್ವಸ್ಥಚಿತ್ತನಾಗಿ, (ಪ್ರವೇಶಿಸಿ) ಸಚಿವೈಸ್ಸಹ-ಮಂತ್ರಿಗಳೊಡನೆ, ಆಸೀನಂ-ಕುಳಿತಿರುವ, ರಾವಣಂ-ರಾವಣನನ್ನು, ದದರ್ಶ-ಕಂಡನು. || ೭೩ || ತತಃ-ಬಳಿಕ, ಹರಿಪುಂಗವಃ - ವಾನರಶ್ರೇಷ್ಠನಾದ, ಕನಕಾಂಗದಃ - ಭಂಗಾರದ ಬಾಹುಬಿಗೆಗಳುಳ್ಳ, ಸೋಽಂಗದಃ - ಆ ಅಂಗದನು, ತಸ್ಯ - ಆ ರಾವಣನಿಗೆ, ಅವಿದೂರೇ - ಸಮೀಪದಲ್ಲಿ, ನಿಪತ್ಯ - ಕುಪ್ಪಳಿಸಿ, ದೀಪ್ತಾ....ಶಃ - ಪ್ರಜ್ವಲಿಸುವ ಅಗ್ನಿಗೆ ಸಮಾನನಾಗಿ, ತಸ್ಥೌ - ನಿಂತನು. || ೭೪ || ಸಾಮಾತ್ಯಂ - ಮಂತ್ರಿಯುಕ್ತನಾದ ರಾವಣನನ್ನು ಕುರಿತು, ಆತ್ಮನಾ - ತನ್ನಿಂದ, ಆತ್ಮಾನಂ - ತನ್ನನ್ನು, ನಿವೇದ್ಯ - ತಿಳಿಸಿ, ಸರ್ವಂ - ಸಮಸ್ತವಾದ, ಉತ್ತಮಂ - ಶ್ರೇಷ್ಠವಾದ, ತದ್ರಾಮವಚನಂ - ಆ ಶ್ರೀರಾಮನ ಮಾತನ್ನು, ಅನ್ಯೂನಾಧಿಕಂ - ಹೆಚ್ಚುಕಮ್ಮಿಯಿಲ್ಲದಂತೆ, ಶ್ರಾವಯಾಮಾಸ - ಕೇಳಿಸಿದನು. || ೭೫ || ಅಕ್ಲಿ....ಣಃ - ಕ್ಲೇಶವಿಲ್ಲದೆ ಕಾರ್ಯಗಳನ್ನು ಮಾಡುವ, ಕೋಸಲೇಂದ್ರಸ್ಯ - ಕೋಸಲ ದೇಶಾಧಿಪತಿಯಾದ, ರಾಮಸ್ಯ - ಶ್ರೀರಾಮನಿಗೆ, ದೂತಃ - ದೂತನಾದ, ಅಹಂ - ನಾನು, ಅಂಗದೋನಾಮ - ಅಂಗದನೆಂದು ಪ್ರಸಿದ್ಧನಾದ, ವಾಲಿಪುತ್ರಃ - ವಾಲಿಯ ಮಗನು, ತೇ - ನಿನ್ನ, ಶ್ರೋತ್ರಂ - ಕಿವಿಯನ್ನು. ಆಗತೋಽಯದಿನಾಮ - ಬಂದವನೇ ಆಗಿರಬಹುದು. || ೭೬ || ಹೇ ನೃಶಂಸ - ಎಲೈ

---

ತಿಳಿಸಿ ಬಾ” ಎಂದನು. ಅನಾಯಾಸವಾಗಿ ಸಕಲ ಕಾರ್ಯಗಳನ್ನೂ ನೆರವೇರಿಸುವ ಶ್ರೀರಾಮನು ಈ ರೀತಿ ನುಡಿಯಲು ಕೂಡಲೇ ಆ ಅಂಗದನು ಮೂರ್ತೀಭವಿಸಿದ ಅಗ್ನಿಯಂತೆ ಆಕಾಶಕ್ಕೆ ಹಾರಿ ಒಂದು ಕ್ಷಣಮಾತ್ರದಲ್ಲಿಯೇ ಸಂಪದ್ಯುಕ್ತನಾದ ಆ ರಾವಣನರಮನೆಗೆ ಹೋದನು. ಆಮೇಲೆ ಮಂತ್ರಿಗಳೊಡಗೂಡಿ ಸ್ವಲ್ಪವಾದರೂ ತಳಮಳವಿಲ್ಲದೆ ಕುಳಿತಿರುವ ಆ ರಾವಣಾಸುರನನ್ನು ನೋಡಿ ಆ ಕೂಡಲೇ ವಾನರೋತ್ತಮನೂ, ಸ್ವರ್ಣಾಂಗದಗಳುಳ್ಳವನೂ, ಪ್ರಜ್ವಲಿಸುತ್ತಿರುವ ಅಗ್ನಿದೇವನಿಗೆ ಸಮಾನನಾಗಿರುವವನೂ ಆದ ಆ ಅಂಗದನು ರಾವಣನ ಸಮೀಪಕ್ಕೆ ಹೋಗಿ ಎದುರು ನಿಂತು ತನ್ನನ್ನು ತಾನೇ ತಿಳಿಸಿದವನಾಗಿ ಶ್ರೀರಾಮನು ಹೇಳಿದ ಮಾತುಗಳಲ್ಲಿ ಒಂದನ್ನಾದರೂ ಬಿಡದೆ ಹೆಚ್ಚು ಕಡಿಮೆಯನ್ನೂ ಮಾಡದೆ ಎಲ್ಲವನ್ನೂ ಆ ರಾವಣನಿಗೆ ಹೇಳಿದನು. || ೭೧–೭೫ || ಮತ್ತೂ ಆತನನ್ನು ಕುರಿತು “ಎಲಾ ರಾವಣನೇ ! ರಾಕ್ಷಸಾಧಮನೇ ! ನಾನು ಅನಾಯಾಸವಾಗಿ ಸಮಸ್ತ ಕಾರ್ಯಗಳನ್ನೂ ಮಾಡುವ ಕೋಸಲದೇಶಾಧೀಶ್ವರನಾದ ಶ್ರೀರಾಮನಿಗೆ ದೂತನು ;

**ನಂದವರ್ಧನಃ । ನಿಷ್ಪತ್ಯ ಪ್ರತಿಯುಧ್ಯಸ್ವ ನೃಶಂಸ! ಪುರುಷೋ ಭವ ॥ ೭೭ ॥ ಹಂತಾಸ್ಮಿ ತ್ವಾಂ ಸಹಾಮಾತ್ಯಂ ಸಪುತ್ರಜ್ಞಾತಿಬಾಂಧವಂ । ನಿರುದ್ವಿಗ್ನಾಸ್ತ್ರಯೋ ಲೋಕಾ ಭವಿಷ್ಯಂತಿ ಹತೇ ತ್ವಯಿ ॥ ೭೮ ॥ ದೇವದಾನವಯಕ್ಷಾಣಾಂ ಗಂಧರ್ವೋರಗರಕ್ಷಸಾಂ । ಶತ್ರುಮದ್ಯೋದ್ಧರಿಷ್ಯಾಮಿ ತ್ವಾಮೃಷೀಣಾಂಚ ಕಂಟಕಂ ॥ ೭೯ ॥ ವಿಭೀಷಣಸ್ಯ ಚೈಶ್ವರ್ಯಂ ಭವಿಷ್ಯತಿ ಹತೇ ತ್ವಯಿ । ನಚೇತ್ಸತ್ಕೃತ್ಯ ವೈದೇಹೀಂ ಪ್ರಣಿಪತ್ಯ ಪ್ರದಾಸ್ಯಸಿ" ॥ ೮೦ ॥ ಇತ್ಯೇವಂ ಪರುಷಂ ವಾಕ್ಯಂ ಬ್ರುವಾಣೋ ಹರಿ**

ಘಾತಕನೇ, ಕೌಸ....ನಃ - ಕೌಸಲ್ಯಾದೇವಿಗೆ ಆನಂದಕರನಾದ, ರಾಘವಃ - ರಘುಕುಲೋತ್ಪನ್ನನಾದ, ರಾಮಃ - ಶ್ರೀರಾಮನು, ತ್ವಾಂ - ನಿನ್ನನ್ನು ಕುರಿತು, ಆಹ - ಹೇಳಿದನು, ನಿಷ್ಪತ್ಯ - ಊರಿಂದ ಹೊರಗೆ ಬಂದು, ಪ್ರತಿಯುಧ್ಯಸ್ವ-ಯುದ್ಧಮಾಡು, ಪುರುಷೋಭವ-ಪುರುಷನಾಗು. ॥ ೭೭ ॥ ಸಪು....ವಂ-ಮಕ್ಕಳು, ಜ್ಞಾತಿಗಳು, ಬಂಧುಗಳು ಎಂಬಿವರಿಂದೊಡಗೂಡಿದ, ಸಹಾಮಾತ್ಯಂ-ಮಂತ್ರಿಯುಕ್ತನಾದ, ತ್ವಾಂ - ನಿನ್ನನ್ನು, ಹಂತಾಸ್ಮಿ - ಕೊಲ್ಲುವನಾಗುವೆನು, ತ್ವಯಿ - ನೀನು, ಹತೇ - ಮೃತನಾಗಲು, ತ್ರಯೋಲೋಕಾಃ - ಮೂರುಲೋಕಗಳೂ, ನಿರುದ್ವಿಗ್ನಾಃ - ಭಯರಹಿತಗಳು, ಭವಿಷ್ಯಂತಿ - ಆಗುವುವು. ॥ ೭೮ ॥ ದೇವ....ಣಾಂ - ದೇವ, ದಾನವ, ಯಕ್ಷರು ಎಂಬಿವರಿಗೂ, ಗಂಧ....ಸಾಂ - ಗಂಧರ್ವರಿಗೂ, ಸರ್ಪಗಳಿಗೂ, ರಾಕ್ಷಸರಿಗೂ, ಶತ್ರುಂ - ವೈರಿಯಾದ, ಋಷೀಣಾಂಚ - ಮುನಿಗಳಿಗೂ, ಕಂಟಕಂ - ಬಾಧಕನಾದ, ತ್ವಾಂ - ನಿನ್ನನ್ನು, ಅದ್ಯ - ಈಗ, ಉದ್ಧರಿಷ್ಯಾಮಿ - ಮೂಲೋತ್ಪಾಟನ ಮಾಡುವೆನು. ॥ ೭೯ ॥ ವೈದೇಹೀಂ - ಸೀತಾದೇವಿಯನ್ನು, ಸತ್ಕೃತ್ಯ - ಪೂಜಿಸಿ, ಪ್ರಣಿಪತ್ಯ - ನಮಸ್ಕರಿಸಿ, ನಪ್ರದಾಸ್ಯಸಿಚೇತ್ - ಕೊಡದಿದ್ದರೆ, ತ್ವಯಿ - ನೀನು, ಹತೇಸ - ಸಂಹೃತನಾಗಲು, ವಿಭೀಷಣಸ್ಯ - ವಿಭೀಷಣನಿಗೆ, ಐಶ್ವರ್ಯಂ - ಪ್ರಭುತ್ವವು, ಭವಿಷ್ಯತಿ - ಆಗುವುದು. ॥ ೮೦ ॥ ಹರಿಪುಂಗವೇ - ವಾನರೋತ್ತಮನಾದ ಅಂಗದನು, ಇತ್ಯೇವಂ - ಈ ಪರಿಯಾಗಿ, ಪರುಷಂ - ಕ್ರೂರವಾದ, ವಾಕ್ಯಂ -

ವಾಲಿಯ ಮಗನು. ನನ್ನ ಹೆಸರು ಅಂಗದನೆಂದು. ನನ್ನ ಹೆಸರು ಇದುವರೆಗೆ ನಿನ್ನ ಕಿವಿಗೆ ಬಿದ್ದಿರಲಾರದು. ಆದರೂ ಚಿಂತೆಯಿಲ್ಲ. ಈಗಲಾದರೂ ಕೇಳಿ ತಿಳಿದುಕೊ. ಎಲೈರಾಕ್ಷಸನೇ ! ಕೌಸಲ್ಯಾನಂದಕರನಾಗಿ ರಘುಕುಲದಲ್ಲಿ ಜನಿಸಿದ ನನ್ನ ಪ್ರಭುವಾದ ಶ್ರೀರಾಮನು ನಿನಗೆ ಹೇಳಿ ಕಳುಹಿಸಿರುವ ಮಾತುಗಳನ್ನು ಹೇಳುವೆನು. ಸಾವಧಾನವಾಗಿ ಕೇಳಿ ತಿಳಿದುಕೊ. "ನೀನು ಗಂಡಸೇ ಆದರೆ ಪಟ್ಟಣವನ್ನು ಬಿಟ್ಟು ಹೊರಕ್ಕೆ ಬಂದು ನನ್ನೊಡನೆ ಯುದ್ಧಮಾಡು. ನಾನು ಪುತ್ರಮಿತ್ರಕಳತ್ರಜ್ಞಾತಿಬಂಧುಜನರೊಡಗೂಡಿದ ನಿನ್ನನ್ನು ಕೊಲ್ಲಲೋಸುಗ ಬಂದಿದ್ದೇನೆ. ನೀನೊಬ್ಬನು ಸಂಹೃತನಾದ ಬಳಿಕ ಮೂರುಲೋಕಗಳೂ ಭಯರಹಿತಗಳಾಗುವುವು. ದೇವತೆಗಳಿಗೂ, ದಾನವರಿಗೂ, ಯಕ್ಷಗಂಧರ್ವನಾಗರಿಗೂ, ರಾಕ್ಷಸರಿಗೂ, ಋಷಿಗಳಿಗೂ ಶತ್ರುವಾದ ನಿನ್ನನ್ನು ಕೊಂದು ಲೋಕಗಳಿಗೆಲ್ಲಾ ಮೇಲನ್ನುಂಟುಮಾಡುವೆನು. ಎಲವೋ ರಾವಣನೇ ! ನೀನು ಈಗಲಾದರೂ ಸದ್ಬುದ್ಧಿಯನ್ನವಲಂಬಿಸಿ ಸತ್ಕಾರಪೂರ್ವಕವಾಗಿ ಸೀತೆಯನ್ನು ನನಗೆ ಸಮರ್ಪಿಸದೇಹೋದರೆ ನಿನ್ನನ್ನು ಖಂಡಿತವಾಗಿಯೂ ಸಂಹರಿಸಿ, ಲಂಕಾ ರಾಜ್ಯೈಶ್ವರ್ಯವೆಲ್ಲವನ್ನೂ ನಿನ್ನ ತಮ್ಮನೂ, ಧರ್ಮಾತ್ಮನೂ ಆದ ವಿಭೀಷಣನಿಗೆ ಕೊಡುವೆನು.—ನಮ್ಮ ಪ್ರಭುವಾದ ಶ್ರೀರಾಮನು ನಿನಗೆ ಈ ರೀತಿ ಹೇಳಿಕಳುಹಿಸಿರುವನು" ಎಂದು ಹೇಳಿದನು. ॥ ೭೭—೮೦ ॥ ವಾನರೋತ್ತಮನಾದ ಅಂಗದನು ಈ ರೀತಿ ನುಡಿ

ಪುಂಗವೇ । ಅಮರ್ಷವಶಮಾಪನ್ನೋ ನಿಶಾಚರಗಣೇಶ್ವರಃ ॥ ೮೧ ॥ ತತಸ್ಸರೋಷ ತಾಮ್ರಾಕ್ಷಶ್ಶಶಾಸ ಸಚಿವಾಂಸ್ತದಾ । "ಗೃಹ್ಯತಾಮೇಷ ದುರ್ಮೇಧಾ" "ವಧ್ಯತಾ"ಮಿತಿ ಚಾಸಕೃತ್ ॥೮೨॥ ರಾವಣಸ್ಯ ವಚಶ್ಶ್ರುತ್ವಾ ದೀಪ್ತಾಗ್ನಿಸಮತೇಜಸಃ । ಜಗೃಹುಸ್ತಂ ತತೋ ಘೋರಾಶ್ಚತ್ವಾರೋ ರಜನೀಚರಾಃ ॥ ೮೩ ॥ ಗ್ರಾಹಯಾಮಾಸ ತಾರೇಯ ಸ್ಸ್ವಯಮಾತ್ಮಾನಮಾತ್ಮವಾನ್ । ಬಲಂ ದರ್ಶಯಿತುಂ ವೀರೋ ಯಾತುಧಾನಗಣೇ ತದಾ ॥ ೮೪ ॥ ಸತಾನ್ ಬಾಹುದ್ವಯೇ ಸಕ್ತಾನಾದಾಯ ಪತಗಾನಿವ । ಪ್ರಾಸಾದಂ ಶೈಲಸಂಕಾಶಮುತ್ಪಪಾತಾಽಂಗದಸ್ತದಾ ॥ ೮೫ ॥ ತೇಽಂತರಿಕ್ಷಾದ್ವಿನಿರ್ಧೂತಾಸ್ತಸ್ಯ

ಮಾತನ್ನು, ಬ್ರುವಾಣೇ - ಹೇಳಿದವನಾಗಲು, ನಿಶಾ....ರಃ - ರಾಕ್ಷಸ ಸಮೂಹಗಳಿಗೆ ಅಧಿಪತಿಯಾದ ರಾವಣನು, ಅಮರ್ಷವಶಂ - ಕೋಪದ ಅಧೀನವನ್ನು, ಆಪನ್ನಃ - ಹೊಂದಿದನು. ॥ ೮೧ ॥ ತತಃ - ಬಳಿಕ, ರೋಷತಾಮ್ರಾಕ್ಷಃ - ರೋಷದಿಂದ ಕೆಂಗಣ್ಣುಗಳುಳ್ಳ, ಸಃ - ಆ ರಾವಣನು, ತದಾ - ಆ ಕಾಲ ದಲ್ಲಿ, ಸಚಿವಾನ್ - ಮಂತ್ರಿಗಳನ್ನು ಕುರಿತು, ದುರ್ಮೇಧಾಃ - ದುರ್ಬುದ್ಧಿಯುಳ್ಳ, ಏಷಃ - ಇವನು, ಗೃಹ್ಯತಾಂ - ಗ್ರಹಿಸಲ್ಪಡಲಿ, ವಧ್ಯತಾಮಿತಿಚ - ಸಂಹರಿಸಲೂ ಪಡಲಿ, (ಎಂದು) ಅಸಕೃತ್ - ಬಾರಿ ಬಾರಿಗೂ, ಶಶಾಸ - ಆಜ್ಞಾಪಿಸಿದನು. ॥ ೮೨ ॥ ದೀಪ್ತಾ....ಸಃ - ಹೊಳೆಯುತ್ತಿರುವ ಅಗ್ನಿಸಮಾನ ವಾದ ತೇಜಸ್ಸುಳ್ಳ, ಘೋರಾಃ-ಭಯಂಕರರಾದ, ಚತ್ವಾ....ರಾಃ-ನಾಲ್ಕುಮಂದಿ ರಕ್ಕಸರು, ರಾವಣಸ್ಯ-ರಾವಣನ, ವಚಃ - ಮಾತನ್ನು, ಶ್ರುತ್ವಾ-ಕೇಳಿ, ತತಃ - ಬಳಿಕ, ತಂ - ಆ ಅಂಗದನನ್ನು, ಜಗೃಹುಃ - ಹಿಡಿದುಕೊಂಡರು. ॥ ೮೩ ॥ ಆತ್ಮವಾನ್ - ಧೈರ್ಯಶಾಲಿಯಾದ, ವೀರಃ - ಶೂರನಾದ, ತಾರೇಯಃ - ಅಂಗದನು, ತದಾ - ಆ ಕಾಲದಲ್ಲಿ, ಯಾತುಧಾನಗಣೇ - ರಕ್ಕಸರ ಗುಂಪಿನಲ್ಲಿ, ಬಲಂ - ತನ್ನ ಬಲ ವನ್ನು, ದರ್ಶಯಿತುಂ-ತೋರಿಸುವುದಕ್ಕಾಗಿ, ಸ್ವಂ-ತಾನೇ, ಆತ್ಮಾನಂ ತನ್ನನ್ನು, ಗ್ರಾಹಯಾಮಾಸ-ಹಿಡಿದುಕೊಳ್ಳುವಂತೆ ಮಾಡಿದನು. ॥ ೮೪ ॥ ಸಃಅಂಗದಃ - ಆ ಅಂಗದನು, ಬಾಹುದ್ವಯೇ - ಎರಡು ಭುಜಗಳಲ್ಲಿ, ಸಕ್ತಾನ್ - ಸಿಲುಕಿದ, ತಾನ್ - ಆ ರಾಕ್ಷಸನನ್ನು, ಪತಗಾನಿವ - ಪಕ್ಷಿಗಳಂತೆ, ಆದಾಯ - ತೆಗೆದುಕೊಂಡು, ತದಾ-ತಕ್ಷಣದಲ್ಲಿಯೇ, ಶೈಲಸಂಕಾಶಂ-ಪರ್ವತ ಸದೃಶವಾದ, ಪ್ರಾಸಾದಂ-ಉಪ್ಪರಿಗೆ ಯನ್ನು ಕುರಿತು, ಉತ್ಪಪಾತ - ಹಾರಿದನು. ॥ ೮೫ ॥ ಸರ್ವೇ - ಸಮಸ್ತರಾದ, ತೇರಾಕ್ಷಸಾಃ - ಆ ರಕ್ಕಸರು, ತಸ್ಯ - ಆ ಅಂಗದನ, ವೇಗೇನ - ವೇಗದಿಂದ, ವಿನಿರ್ಧೂತಾಃ - ಕೊಡಹಲ್ಪಟ್ಟವರಾಗಿ,

ಯುತ್ತಿರಲು ರಾಕ್ಷಸಾಧಿಪತಿಯಾದ ಆ ರಾವಣಾಸುರನು ಮಹಾ ಕೋಪಾಟೋಪವುಳ್ಳವ ನಾಗಿ ಕಣ್ಣುಗಳನ್ನು ಕೆಂಪಗೆ ಮಾಡಿಕೊಂಡು ತನ್ನ ಮಂತ್ರಿಗಳನ್ನು ಕುರಿತು, "ಎಲೈ ಮಂತ್ರಿ ಶ್ರೇಷ್ಠರೇ! ದುರ್ಬುದ್ಧಿಯುಳ್ಳವರಲ್ಲಿ ಅಗ್ಗಳೆಯನಾದ ಈ ಅಂಗದನನ್ನು ಹಿಡಿದು ಚೆನ್ನಾಗಿ ವಧಿಸಿರಿ" ಎಂದನು. ಉರಿಯುತ್ತಿರುವ ಬೆಂಕಿಯ ಕಾಂತಿಯಂತೆ ಕಾಂತಿಯುಳ್ಳ ಆ ರಾವಣಾಸುರನ ಮಾತುಗಳನ್ನು ಕೇಳಿದೊಡನೆಯೇ ನಾಲ್ವರು ಭಟರು ಆ ಅಂಗದನನ್ನು ಹಿಡಿದುಕೊಂಡರು. ಆಗ ಮಹಾ ವೀರನಾದ ಅಂಗದನು ತನ್ನ ಪರಾಕ್ರಮವನ್ನು ಪ್ರದರ್ಶಿಸ ಬಯಸಿ ಆ ರಾಕ್ಷಸರಿಗೆ ಒಳಗಾದನು. ಆ ಕೂಡಲೇ ತನ್ನನ್ನು ಹಿಡಿದಿದ್ದ ಆ ನಾಲ್ವರು ಮಂತ್ರಿಗಳನ್ನೂ ತನ್ನ ತೋಳ್ತೆಕ್ಕೆಗಳಿಂದ ಹಿಡಿದು ಪರ್ವತೋಪಮವಾದ ಉಪ್ಪರಿಗೆಯ ಮೇಲೇರಿ ಅಲ್ಲಿಂದ ಅವರನ್ನು ಕೆಳಕ್ಕೆ ಕೆಡವಿದನು. ॥ ೮೧-೮೫ ॥ ರಾವಣಾಸುರನು ನೋಡುತ್ತಿದ್ದಂತೆಯೇ ಅವರು ನಾಲ್ವರೂ ನೆಲಕ್ಕೆ ಬಿದ್ದರು. ಆಮೇಲೆ ಅತ್ಯಧಿಕ ಬಲಶಾಲಿಯೂ,

ವೇಗೇನ ರಾಕ್ಷಸಾಃ । ಭೂಮೌ ನಿಪತಿತಾಸ್ಸರ್ವೇ ರಾಕ್ಷಸೇಂದ್ರಸ್ಯ ಪಶ್ಯತಃ ॥ ೮೬ ॥ ತತಃ ಪ್ರಾಸಾದಶಿಖರಂ ಶೈಲಶೃಂಗಮಿವೋನ್ನತಂ । ದದರ್ಶ ರಾಕ್ಷಸೇಂದ್ರಸ್ಯ ವಾಲಿಪುತ್ರಃ ಪ್ರತಾಪವಾನ್ ॥ ೮೭ ॥ ತತ್ಪಫಾಲ ಪದಾಕ್ರಾಂತಂ ದಶಗ್ರೀವಸ್ಯ ಪಶ್ಯತಃ । ಪುರಾ ಹಿಮವತಃ ಶೃಗಂ ವಜ್ರಿಣೇವ ವಿದಾರಿತಂ ॥ ೮೮ ॥ ಭಙ್ತ್ವಾ ಪ್ರಾಸಾದಶಿಖರಂ ನಾಮ ವಿಶ್ರಾವ್ಯ ಚಾತ್ಮನಃ । ವಿನದ್ಯ ಸುಮಹಾನಾದಮುತ್ಪಪಾತ ವಿಹಾಯಸಂ ॥ ೮೯ ॥ ವ್ಯಥಯನ್ ರಾಕ್ಷಸಾನ್ ಸರ್ವಾನ್ ಹರ್ಷಯಂಶ್ಚಾಪಿ ವಾನರಾನ್ । ಸ ವಾನರಾಣಾಂ ಮಧ್ಯೇತು ರಾಮಪಾರ್ಶ್ವಮುಪಾಗತಃ ॥ ೯೦ ॥ ರಾವಣಸ್ತು ಪರಂ ಚಕ್ರೇ ಕ್ರೋಧಂ ಪ್ರಾಸಾದಧರ್ಷಣಾತ್ । ವಿನಾಶಂ ಚಾತ್ಮನಃ ಪಶ್ಯನ್ನಿಶ್ವಾಸ

---

ರಾಕ್ಷಸೇಂದ್ರಸ್ಯ - ರಾವಣನು, ಪಶ್ಯತಃ - ನೋಡುತ್ತಿರಲು, ಅಂತರಿಕ್ಷಾತ್ - ಅಂತರಿಕ್ಷದಿಂದ, ಭೂಮೌ - ನೆಲದಲ್ಲಿ, ನಿಪತಿತಾಃ - ಬಿದ್ದರು. ॥ ೮೬ ॥ ತತಃ - ಬಳಿಕ, ಪ್ರತಾಪವಾನ್ - ಪರಾಕ್ರಮಿಯಾದ, ವಾಲಿಪುತ್ರಃ - ವಾಲಿಯ ಮಗನಾದ ಅಂಗದನು, ಶೈಲಶೃಂಗಮಿವ - ಪರ್ವತಶಿಖರದಂತೆ, ಉನ್ನತಂ - ಎತ್ತರವಾದ, ರಾಕ್ಷಸೇಂದ್ರಸ್ಯ - ರಾವಣನ, ಪ್ರಾಸಾದಂ - ಉಪ್ಪರಿಗೆಯನ್ನು, ದದರ್ಶ - ಕಂಡನು. ॥ ೮೭ ॥ ದಶಗ್ರೀವಸ್ಯ - ರಾವಣನು, ಪಶ್ಯತಃ - ನೋಡುತ್ತಿರುವಂತೆಯೇ, ಪದಾ - ಕಾಲಿನಿಂದ ಒಡೆಯಲ್ಪಟ್ಟ, ತತ್ - ಆ ಪ್ರಾಸಾದವು, ಪುರಾ - ಪೂರ್ವದಲ್ಲಿ, ವಜ್ರಿಣಾ - ದೇವೇಂದ್ರನಿಂದ, ವಿದಾರಿತಂ - ಶೀಳಲ್ಪಟ್ಟ, ಹಿಮವತಃ - ಹಿಮವತ್ಪರ್ವತದ, ಶೃಂಗಮಿವ - ಶಿಖರದಂತೆ, ಪಫಾಲ - ಶೀಳಿತು. ॥ ೮೮ ॥ ಪ್ರಾಸಾದಶಿಖರಂ - ಉಪ್ಪರಿಗೆಯ ಶಿಖರವನ್ನು, ಭಙ್ತ್ವಾ - ಮುರಿದು, ಆತ್ಮನಃ - ತನ್ನ, ನಾಮ - ಹೆಸರನ್ನು, ವಿಶ್ರಾವ್ಯ - ಕೇಳಿಸಿ, ಸುಮಹಾನಾದಂ - ಮಹಾ ಘೋಷವನ್ನು, ವಿನದ್ಯ - ಮಾಡಿ, ವಿಹಾಯಸಂ - ಅಂತರಿಕ್ಷವನ್ನು ಕುರಿತು, ಉತ್ಪಪಾತ - ಹಾರಿದನು. ॥ ೮೯ ॥ ಸರ್ವಾನ್ - ಸಮಸ್ತರಾದ, ರಾಕ್ಷಸಾನ್ - ರಾಕ್ಷಸರನ್ನು, ವ್ಯಥಯನ್ - ವ್ಯಸನಗೊಳಿಸುವವನಾಗಿ, ವಾನರಾಂಶ್ಚಾಪಿ - ಕಪಿಗಳನ್ನು, ಹರ್ಷಯನ್ - ಸಂತೋಷಗೊಳಿಸುವವನಾಗಿ, ಸಃ - ಆ ಅಂಗದನು, ವಾನರಾಣಾಂಮಧ್ಯೇ - ಕಪಿಗಳ ಮಧ್ಯದಲ್ಲಿ, ರಾಮಪಾರ್ಶ್ವಂ - ಶ್ರೀರಾಮನ ಪಾರ್ಶ್ವವನ್ನು, ಉಪಾಗತಃ - ಹೊಂದಿದನು. ॥ ೯೦ ॥ ರಾವಣಸ್ತು - ರಾವಣನಾದರೆ, ಪ್ರಾಸಾ....ತ್ - ಉಪ್ಪರಿಗೆಯ ಮುರಿತದಿಂದ, ಪರಂಕ್ರೋಧಂ - ಬಹು ಕೋಪವನ್ನು, ಚಕ್ರೇ - ಮಾಡಿದನು, ಆತ್ಮನಃ - ತನ್ನ,

---

ವಾಲಿಪುತ್ರನೂ ಆದ ಆ ಅಂಗದನು ಪರ್ವತಶಿಖರದಂತಿರುವ ರಾವಣಾಸುರನ ಅರಮನೆಯ ಪ್ರಾಸಾದವನ್ನು ನೋಡಿ ಅದನ್ನು ಆಕ್ರಮಿಸಿದನು. ರಾವಣಾಸುರನು ನೋಡುತ್ತಿದ್ದಂತೆಯೇ ಆ ಪ್ರಾಸಾದವು ಒಡೆದುಹೋಯಿತು. ಆ ಪ್ರಾಸಾದವು ಹಿಮವತ್ಪರ್ವತಶಿಖರವು ವಜ್ರಾಯುಧದಿಂದ ಒಡೆದುಹೋದಂತೆ ಒಡೆದುಹೋಯಿತು. ಆ ರೀತಿ ಅಂಗದನು ಪ್ರಾಸಾದವನ್ನುಮುರಿದು ಅಲ್ಲಿದ್ದವರೆಲ್ಲರಿಗೂ ತನ್ನ ಹೆಸರನ್ನು ಸಾರಿ ಹೇಳಿ, ಮಹಾ ಸಿಂಹನಾದವನ್ನು ಮಾಡಿ, ಆಗಲೇ ಆಕಾಶಕ್ಕೆ ಹಾರಿದನು. ಹೀಗೆ ಅವನು ರಾಕ್ಷಸರೆಲ್ಲರಿಗೂ ಭಯವನ್ನೂ, ವಾನರರೆಲ್ಲರಿಗೂ ಆನಂದವನ್ನೂ ಏಕಕಾಲದಲ್ಲಿಯೇ ಉಂಟುಮಾಡಿ, ಅಂತರಿಕ್ಷಮಾರ್ಗದಲ್ಲಿ ಹೋಗಿ, ಮೊದಲು ವಾನರರ ನಡುವೆ ಇಳಿದು, ಆಮೇಲೆಶ್ರೀರಾಮನ ಬಳಿಗೈದಿದನು. ॥೮೬-೯೦॥ ಈ ರೀತಿ ಅಂಗದನು ಪ್ರಾಸಾದವನ್ನು ಮುರಿದುಹಾಕುತ್ತಲೇ ರಾವಣಾಸುರನಿಗೆ ಬಹಳ ಕೋಪವುಂಟಾಯಿತು ; ಅದರೊಡನೆಯೇ ತನ್ನ ನಾಶಸೂಚಯು ಅರಿವು ಆಯಿತು. ಅದಕ್ಕಾಗಿ ಅವನು

ಪರಮೋಽಭವತ್ ||೯೧|| ರಾಮಸ್ತು ಬಹುಭಿರ್ಹೃಷ್ಟೈರ್ನಿನದದ್ಭಿಃ ಪ್ಲವಂಗಮೈಃ | ವೃತೋ ರಿಪುವಧಾಕಾಂಕ್ಷೀ ಯುದ್ಧಾಯೈವಾಭ್ಯವರ್ತತ || ೯೨ || ಸುಷೇಣಸ್ತು ಮಹಾವೀರ್ಯೋ ಗಿರಿಕೂಟೋಪಮೋ ಹರಿಃ | ಬಹುಭಿಸ್ಸಂವೃತಸ್ತತ್ರ ವಾನರೈಃ ಕಾಮರೂಪಿಭಿಃ || ೯೩ || ಚತುರ್ದ್ವಾರಾಣಿ ಸರ್ವಾಣಿ ಸುಗ್ರೀವವಚನಾತ್ಕಪಿಃ | ಪರ್ಯಾಕ್ರಾಮತ ದುರ್ಧರ್ಷೋ ನಕ್ಷತ್ರಾಣೀವ ಚಂದ್ರಮಾಃ || ೯೪ || ತೇಷಾಮಕ್ಷೌಹಿಣಿಶತಂ ಸಮವೇಕ್ಷ್ಯ ವನೌಕಸಾಂ | ಲಂಕಾಮುಪನಿವಿಷ್ಟಾನಾಂ ಸಾಗರಂಚಾತಿವರ್ತತಾಂ || ೯೫ || ರಾಕ್ಷಸಾ ವಿಸ್ಮಯಂ ಜಗ್ಮುಸ್ತ್ರಾಸಂ ಜಗ್ಮುಸ್ತಥಾಽಪರೇ | ಅಪರೇ ಸಮರೋದ್ಧರ್ಷಾದ್ಧರ್ಷಮೇವ ಪ್ರಪೇದಿರೇ || ೯೬ || ಕೃತ್ಸ್ನಂಹಿ ಕಪಿಭಿ

---

ವಿನಾಶಂ - ನಾಶವನ್ನು, ಪಶ್ಯ - ಊಹಿಸಿ, ನಿಶ್ವಾಸಪರಮಃ - ದೀರ್ಘವಾಗಿ ನಿಟ್ಟುಸಿರುಗಳನ್ನು ಬಿಟ್ಟವನು, ಅಭವತ್ - ಆದನು. || ೯೧ || ರಾಮಸ್ತು - ಶ್ರೀರಾಮನಾದರೆ, ಹೃಷ್ಟೈಃ - ಸಂತುಷ್ಟರಾದ, ಬಹುಭಿಃ - ಅನೇಕರಾದ, ನಿನದದ್ಭಿಃ - ಕೂಗುವ, ಪ್ಲವಂಗಮೈಃ - ವಾನರರಿಂದ, ವೃತಃ - ಪರಿವೃತನಾಗಿ, ರಿಪು....ಕ್ಷೀ ಶತ್ರುಸಂಹಾರವನ್ನು ಕೋರುವವನಾಗಿ, ಯುದ್ಧಾಯೇವ-ಯುದ್ಧಕ್ಕಾಗಿಯೇ, ಅಭ್ಯವರ್ತತ - ಎದುರಾಗಿ ನಿಂತನು. || ೯೨ || ಮಹಾವೀರ್ಯಃ - ಮಹಾ ಪರಾಕ್ರಮಿಯಾದ, ಗಿರಿಕೂಟೋಪಮಃ - ಪರ್ವತಶಿಖರಕ್ಕೆ ಸಮಾನನಾದ, ಸುಷೇಣಃ - ಸುಷೇಣನೆಂಬ, ಹರಿಸ್ತು - ವಾನರರಾದವೆ, ತತ್ರ - ಆ ಸೈನ್ಯದಲ್ಲಿ, ಕಾಮರೂಪಿಭೀಃ - ಕಾಮರೂಪಿಗಳಾದ, ಬಹುಭಿಃ - ಅನೇಕರಾದ, ವಾನರೈಃ - ಕಪಿಗಳಿಂದ, ಸಂವೃತಃ - ಪರಿವೃತನಾಗಿ. || ೯೩ || ದುರ್ಧರ್ಷಃ - ತಿರಸ್ಕರಿಸಲಸಾಧ್ಯನಾದ, ಕಪಿಃ - ವಾನರನಾದ ಸುಷೇಣನು, ಸುಗ್ರೀ....ತ್ - ಸುಗ್ರೀವನ ಮಾತಿನಿಂದ, ಸರ್ವಾಣಿ - ಸಮಸ್ತವಾದ, ಚತುರ್ದ್ವಾರಾಣಿ-ನಾಲ್ಕು ಬಾಗಿಲುಗಳನ್ನು, ಚಂದ್ರಮಾಃ-ಚಂದ್ರನು, ನಕ್ಷತ್ರಾಣೀವ-ನಕ್ಷತ್ರಗಳಂತೆ, ಪರ್ಯಕ್ರಾಮತ - ಮುತ್ತಿಗೆ ಹಾಕಿದನು. || ೯೪ || ಲಂಕಾಂ - ಲಂಕಾಪಟ್ಟಣದ, ಉಪನಿವಿಷ್ಟಾನಾಂ - ಸಮೀಪದಲ್ಲಿ ಕುಳಿತಿರುವ, ಸಾಗರಂಚ - ಕಡಲನ್ನೂ ಸಹಾ, ಅತಿವರ್ತತಾಂ - ದಾಟಿಬರುವ, ತೇಷಾಂ - ಆ ವಾನರರ, ಅಕ್ಷೌಹಿಣಿಶತಂ - ನೂರಕ್ಷೌಹಿಣಿಗಳನ್ನು, ಸಮವೇಕ್ಷ್ಯ - ಕಂಡು, ವಿಸ್ಮಯಂ - ಆಶ್ಚರ್ಯವನ್ನು, ಜಗ್ಮುಃ - ಹೊಂದಿದರು, ತಥಾ - ಹಾಗೆ, ಅಪರೇ - ಮತ್ತೆ ಕೆಲವರು, ತ್ರಾಸಂ - ಭೀತಿಯನ್ನು, ಜಗ್ಮುಃ - ಹೊಂದಿದರು, ಅಪರೇ - ಇನ್ನು ಕೆಲವರು, ಸಮರೋದ್ಧರ್ಷಾತ್ - ಯುದ್ಧದಲ್ಲಿ ಗರ್ವದಿಂದ, ಹರ್ಷಮೇವ - ಸಂತೋಷವನ್ನೇ, ಪ್ರಪೇದಿರೆ - ಹೊಂದಿದರು. || ೯೫-೯೬ || ರಾಕ್ಷಸಾಃ - ರಕ್ಕಸರು, ದೀನಾಃ - ದೀನರಾಗಿ, ಕಪಿಭಿಃ - ವಾನರರಿಂದ, ವ್ಯಾಪ್ತಂ -

---

ಬಹಳವಾಗಿ ನಿಟ್ಟುಸಿರುಗಳನ್ನು ಬಿಟ್ಟನು. ಇತ್ತ ವಾನರವೀರರಾದರೋ, ಸಂತೋಷಾಧಿಕ್ಯದಿಂದ ಓಡಿಸುತ್ತಲೂ, ಕೂಗುತ್ತಲೂ ಇದ್ದರು. ಶ್ರೀರಾಮನು ಇಂತಹ ಅನೇಕ ವಾನರವೀರರೊಡನೆ ಶತ್ರುಮರ್ದನಕ್ಕಾಗಿ ಯುದ್ಧಮಾಡಲು ಪ್ರವರ್ತಿಸಿದನು. ಮಹಾ ವೀರ್ಯನೂ, ಪರ್ವತಶಿಖರ ಸಮಾನನೂ ಆದ ಸುಷೇಣನು ಕಾಮರೂಪರಾದ ಅನೇಕ ವಾನರವೀರರೊಡನೆ ಸುಗ್ರೀವ ವಚನಾನುಸಾರವಾಗಿ ಚಂದ್ರನನ್ನಾಕ್ರಮಿಸುವ ತಾರೆಗಳಂತೆ ಆ ಲಂಕಾಪಟ್ಟಣದ ನಾಲ್ಕು ಮಹಾದ್ವಾರಗಳನ್ನೂ ಆಕ್ರಮಿಸಲು ಮೊದಲುಮಾಡಿದನು. ನೂರು ಅಕ್ಷೌಹಿಣೀ ಸೇನೆಯು ಲಂಕೆಯನ್ನು ಪ್ರವೇಶಿಸಿ ಸಮುದ್ರವನ್ನೂ ಅತಿಕ್ರಮಿಸಿರುವುದನ್ನು ನೋಡಿ ರಾಕ್ಷಸರೆಲ್ಲರೂ ಬಹಳ ಆಶ್ಚರ್ಯಚಕಿತರಾದರು. ಕೆಲವರು ಯುದ್ಧಮಾಡಬೇಕೆಂಬ ಕುತೂಹಲ

ವಾರ್ಣ್ಯಸ್ತಂ ಪ್ರಾಕಾರಪರಿಘಾಂತರಂ । ದದೃಶೂ ರಾಕ್ಷಸಾ ದೀನಾಃ ಪ್ರಾಕಾರಂ ವಾನರೀ ಕೃತಂ । ಹಾಹಾಕಾರಂ ಪ್ರಕುರ್ವಂತಿ ರಾಕ್ಷಸಾ ಭಯಮೋಹಿತಾಃ ॥ ೯೭-೯೮ ॥

ತಸ್ಮಿನ್ ಮಹಾಭೀಷಣಕೇ ಪ್ರವೃತ್ತೇ
ಕೋಲಾಹಲೇ ರಾಕ್ಷಸರಾಜಧಾನ್ಯಾಂ ।
ಪ್ರಗೃಹ್ಯ ರಕ್ಷಾಂಸಿ ಮಹಾಯುಧಾನಿ
ಯುಗಾಂತವಾತಾಇವ ಸಂವಿಚೇರುಃ ॥ ೯೯ ॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಏಕಚತ್ವಾರಿಂಶಸ್ಸರ್ಗಃ.



ವ್ಯಾಪಿಸಲ್ಪಟ್ಟ, ಕೃತ್ಸ್ನಂ - ಸಮಸ್ತವಾದ, ಪ್ರಾಕಾ....ರಂ - ಕೋಟೆಯ ಅಗಳ್ತೆಯ ಮಧ್ಯಪ್ರದೇಶ ವನ್ನು, ಪ್ರಾಕಾರಂ - ಕೋಟೆಯನ್ನು, ವಾನರೀಕೃತಂ - ವಾನರರಿಂದ ಪ್ರಚುರವಾಗಿ ಮಾಡಲ್ಪಟ್ಟದ್ದ ನ್ನಾಗಿ, ದದೃಶುಃ - ಕಂಡರು. ॥ ೯೭ ॥ ರಾಕ್ಷಸಾಃ - ರಕ್ಕಸರು, ಭಯಮೋಹಿತಾಃ - ಭೀತಿಯಿಂದ ಮೋಹಿತರಾಗಿ, ಹಾಹಾಕಾರಂ - ಹಾಹಾಕಾರವನ್ನು, ಕುರ್ವಂತಿ - ಮಾಡುತ್ತಿದ್ದರು. ॥ ೯೮ ॥ ರಾಕ್ಷ....ನ್ಯಾಂ-ರಾಕ್ಷಸರಾಜಧಾನಿಯಾ ದಲಂಕೆಯಲ್ಲಿ, ಮಹಾಭೀಷಣಕೇ - ಮಹಾ ಭಯಂಕರವಾದ, ತಸ್ಮಿನ್ಕೋಲಾಹಲೇ-ಆ ಕಲಕಲಶಬ್ದವು, ಪ್ರವೃತ್ತೇ ಹುಟ್ಟಲು, ರಕ್ಷಾಂಸಿ-ರಕ್ಕಸರು, ಮಹಾಯುಧಾನಿ- ದೊಡ್ಡ ಆಯುಧಗಳನ್ನು, ಪ್ರಗೃಹ್ಯ - ತೆಗೆದುಕೊಂಡು, ಯುಗಾಂತವಾತಾಇವ - ಪ್ರಳಯಕಾಲದ ಚಂಡಮಾರುತಗಳಂತೆ, ಸಂವಿಚೇರುಃ - ಸಂಚರಿಸಿದರು. ॥ ೯೯ ॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಏಕಚತ್ವಾರಿಂಶಸ್ಸರ್ಗಃ.



ವುಳ್ಳವರಾಗಿ ಅಧಿಕ ಸಂತೋಷವಿಂದಿದ್ದರು. ವಾನರಸಮುದಾಯದಿಂದ ದಟ್ಟವಾಗಿ ಆಕ್ರಮಿಸ ಲ್ಪಟ್ಟು, ಪ್ರಾಕಾರದ ಅಗಳ್ತೆಗಳೂ, ಮಧ್ಯಪ್ರದೇಶಗಳೂ ವಾನರರಿಂದ ತುಂಬಿರುವುದನ್ನು ನೋಡಿ ರಾಕ್ಷಸರೆಲ್ಲರೂ ಬಹಳ ದೈನ್ಯವನ್ನು ಹೊಂದಿದರು. ಆ ರಾಕ್ಷಸರು ಭಯಮೋಹಿತರಾಗಿ ಹಾಹಾಕಾರಗಳನ್ನು ಮಾಡಿದರು. ಆಗ ಭಯಂಕರವಾದ ಆ ಕೋಲಾಹಲ ಧ್ವನಿಯು ಆ ಪಟ್ಟಣವೆಲ್ಲವನ್ನೂ ವ್ಯಾಪಿಸಿತು. ಅದೇ ಸಮಯದಲ್ಲಿ ರಾಕ್ಷಸರೆಲ್ಲರೂ ವಿವಿಧಾಯುಧ ಗಳನ್ನು ಧರಿಸಿ ಪ್ರಳಯಕಾಲದಲ್ಲಿ ಹೊರಡುವ ಗಾಳಿಗಳಂತೆ ಸಂಚರಿಸಿದರು. ॥ ೯೧ ೯೯ ॥

ಇಂತಿದು ಅಂಗದ ರಾಯಭಾರ ಮತ್ತು ಪ್ರಾಸಾದ ಭಂಜನ ಎಂಬ
ನಲವತ್ತೊಂದನೆಯ ಸರ್ಗವು ಸಮಾಪ್ತವಾದುದು.



# ಯುದ್ಧಕಾಂಡೇ ದ್ವಿಚತ್ವಾರಿಂಶಸ್ಸರ್ಗಃ

ತತಸ್ತೇ ರಾಕ್ಷಸಾಸ್ತತ್ರ ಗತ್ವಾ ರಾವಣಮಂದಿರಂ । ನ್ಯವೇದಯನ್ ಪುರೀಂ ರುದ್ಧಾಂ ರಾಮೇಣ ಸಹವಾನರೈಃ ॥ ೧ ॥ ರುದ್ಧಾಂತು ನಗರೀಂ ಶ್ರುತ್ವಾ ಜಾತಕ್ರೋಧೋ ನಿಶಾಚರಃ । ವಿಧಾನಂ ದ್ವಿಗುಣಂ ಕೃತ್ವಾ ಪ್ರಾಸಾದಂ ಸಾಧ್ಯರೋಹತ ॥ ೨ ॥ ಸದದರ್ಶಾವೃತಾಂ ಲಂಕಾಂ ಸಶೈಲವನಕಾನನಾಂ । ಅಸಂಖ್ಯೇಯೈರ್ಹರಿಗಣೈಸ್ಸರ್ವತೋ ಯುದ್ಧಕಾಂಕ್ಷಿಭಿಃ ॥ ೩ ॥ ಸದೃಷ್ಟ್ವಾ ವಾನರೈಸ್ಸರ್ವಾಂ ವಸುಧಾಂ ಕಬಳೀಕೃತಾಂ । ಕಥಂ ಕ್ಷಪಯಿತವ್ಯಾಸ್ಸ್ಯುರಿತಿ ಚಿಂತಾಪರೋಽಭವತ್ ॥ ೪ ॥ ಸಂಚಿಂತಯಿತ್ವಾ ಸುಚಿರಂ ಧೈರ್ಯಮಾಲಂಬ್ಯ ರಾವಣಃ । ರಾಘವಂ ಹರಿಯೂ

---

ತತಃ - ಬಳಿಕ, ತೇರಾಕ್ಷಸಾಃ - ಆ ರಕ್ಕಸರು, ತತ್ರ - ಅಲ್ಲಿ, ರಾವಣಮಂದಿರಂ - ರಾವಣಾಸುರನ ಮನೆಯನ್ನು ಕುರಿತು, ಗತ್ವಾ - ಹೋಗಿ, ರಾಮೇಣ - ಶ್ರೀರಾಮನಿಂದ, ವಾನರೈಸ್ಸಹ - ಕಪಿಗಳೊಡಗೂಡಿ, ರುದ್ಧಾಂ - ತಡೆಮಾಡಲ್ಪಟ್ಟದನ್ನಾಗಿ, ಪುರೀಂ - ಲಂಕಾಪಟ್ಟಣವನ್ನು, ನ್ಯವೇದಯನ್-ತಿಳಿದರು.॥೧॥ ರುದ್ಧಾಂ-ತಡೆಮಾಡಲ್ಪಟ್ಟ, ನಗರೀಂ-ಪಟ್ಟಣದ ವಿಷಯವನ್ನು, ಶ್ರುತ್ವಾ-ಕೇಳಿ, ಜಾತಕ್ರೋಧಃ - ಹುಟ್ಟಿದ ಆಗ್ರಹವುಳ್ಳ, ನಿಶಾಚರಃ - ರಾತ್ರಿ ಸಂಚಾರಶೀಲನಾದ, ಸಃ - ಆ ರಾವಣನು, ವಿಧಾನಂ - ದುರ್ಗಸಂರಕ್ಷಣೆಯನ್ನು, ದ್ವಿಗುಣಂ - ಮೊದಲಿರುವದಕ್ಕಿಂತಲೂ ಎರಡರಷ್ಟು, ಕೃತ್ವಾ - ಮಾಡಿ, ಪ್ರಾಸಾದಂ - ಉಪ್ಪರಿಗೆಯನ್ನು, ಅಧ್ಯರೋಹತ - ಆರೋಹಣ ಮಾಡಿದನು. ॥ ೨ ॥ ಸಃ - ರಾವಣನು, ಸರ್ವತಃ - ಎಲ್ಲಾ ಕಡೆಯಲ್ಲಿಯೂ, ಯುದ್ಧಕಾಂಕ್ಷಿಭಿಃ - ಕಾಳಗವನ್ನಪೇಕ್ಷಿಸುತ್ತಿರುವ, ಅಸಂಖ್ಯೇಯೈಃ - ಅಪರಿಮಿತವಾದ, ಹರಿಗಣೈಃ - ವಾನರರ ತಂಡಗಳಿಂದ, ಆವೃತಾಂ - ಸುತ್ತುವರೆಯಲ್ಪಟ್ಟ, ಸಶೈ....ನಾಂ - ಬೆಟ್ಟಗಳು, ವನಗಳು, ಅರಣ್ಯಗಳು ಇವುಗಳಿಂದೊಡಗೂಡಿದ, ಲಂಕಾಂ - ಲಂಕಾಪಟ್ಟಣವನ್ನು, ದದರ್ಶ - ಕಂಡನು. ॥ ೩ ॥ ಸಃ - ಆ ರಾವಣನು, ಸರ್ವಾಂವಸುಧಾಂ - ಸಮಸ್ತ ಭೂಮಿಯನ್ನೂ, ವಾನರೈಃ - ಕಪಿಗಳಿಂದ, ಕಬಳೀಕೃತಾಂ - ಆಕ್ರಾಂತವಾದುದನ್ನಾಗಿ, ದೃಷ್ಟ್ವಾ - ಕಂಡು, ಕಥಂ-ಹೇಗೆ, ಕ್ಷಪಯಿತವ್ಯಾಃ - ನಾಶಗೊಳಿಸಲ್ಪಡತಕ್ಕವರು, ಸ್ಯುಃ - ಆಗುವರು, ಇತಿ - ಇಂತೆಂದು, ಚಿಂತಾಪರಃ - ಆಲೋಚಿದವನು, ಅಭವತ್ - ಆದನು. ॥೪॥ ಸರಾವಣಃ - ಆ ರಾವಣನು, ಸುಚಿರಂ - ಬಹಳ ಕಾಲ, ಚಿಂತಯಿತ್ವಾ - ಆಲೋಚಿಸಿ,

---

ಆಮೇಲೆ ರಾಕ್ಷಸರೆಲ್ಲರೂ ರಾವಣಾಸುರನ ಅರಮನೆಗೆ ಹೋಗಿ ವಾನರರು ಲಂಕಾಪಟ್ಟಣವೆಲ್ಲವನ್ನೂ ಆಕ್ರಮಿಸಿರುವ ವೃತ್ತಾಂತವನ್ನು ತಿಳಿಸಿದರು. ಅದನ್ನು ಕೇಳಿದೊಡನೆಯೇ ಆ ರಾವಣನು ಮಹಾ ಕುಪಿತನಾಗಿ ಮೊದಲಿಗಿಂತ ಲಂಕೆಯ ರಕ್ಷಣೆಯನ್ನು ಇಮ್ಮಡಿಗೊಳಿಸಿ ತಾನು ವಾನರಸೇನೆಗಳನ್ನು ನೋಡಲು ಉಪ್ಪರಿಗೆಯನ್ನೇರಿದನು. ಉಪ್ಪರಿಗೆಯನ್ನೇರಿ ಸುತ್ತಲೂ ನೋಡಿ ಎತ್ತತ್ತಲೂ ವಾನರರೇ ಆಕ್ರಮಿಸಿರುವುದನ್ನು ಕಂಡು ಭಯಚಕಿತನಾಗಿ, ಈ ವಾನರರೆಲ್ಲರನ್ನೂ ಯಾವ ರೀತಿ ಓಡಿಸುವುದೆಂದು ಬಹಳವಾಗಿ ಚಿಂತಿಸಿ ಸ್ವಲ್ಪ ಹೊತ್ತಿನಮೇಲೆ ಧೈರ್ಯವನ್ನವಲಂಬಿಸಿ ನಿಂತು ವಿಶಾಲನೇತ್ರನಾಗಿ ರಘುಕುಲೋದ್ಭವನಾದ

ಥಾಂಶ್ಚ ದದರ್ಶಾಯತಲೋಚನಃ ॥ ೫ ॥ ರಾಘವಸ್ಸಹಸೈನ್ಯೇನ ಮುದಿತೋ ನಾಮ ಪುಪ್ಲುವೇ । ಲಂಕಾಂ ದದರ್ಶ ಗುಪ್ತಾಂ ವೈ ಸರ್ವತೋ ರಾಕ್ಷಸೈರ್ವೃತಾಂ ॥ ೬ ॥ ದೃಷ್ಟ್ವಾ ದಾಶರಥಿರ್ಲಂಕಾಂ ಚಿತ್ರಧ್ವಜಪತಾಕಿನೀಂ । ಜಗಾಮ ಸಹಸಾ ಸೀತಾಂ ದೂಯಮಾನೇನ ಚೇತಸಾ ॥ ೭ ॥ "ಅತ್ರ ಸಾ ಮೃಗಶಾಬಾಕ್ಷೀ ಮತ್ಕೃತೇ ಜನಕಾತ್ಮಜಾ । ಪೀಡ್ಯತೇ ಶೋಕಸಂತಪ್ತಾ ಕೃಶಾ ಸ್ಥಂಡಿಲಶಾಯಿನೀ" ॥ ೮ ॥ ಪೀಡ್ಯಮಾನಾಂ ಸ ಧರ್ಮಾತ್ಮಾ ವೈದೇಹೀಮನುಚಿಂತಯನ್ । ಕ್ಷಿಪ್ರಮಾಜ್ಞಾಪಯಾಮಾಸ ವಾನರಾನ್ ದ್ವಿಷತಾಂ ವಧೇ ॥ ೯ ॥ ಏವಮುಕ್ತೇತು ವಚನೇ ರಾಮೇಣಾಕ್ಲಿಷ್ಟ

ಧೈರ್ಯಂ - ಧೀರತೆಯನ್ನು, ಅವಲಂಬ್ಯ - ಹೊಂದಿ, ಆಯತಲೋಚನಃ - ವಿಸ್ತಾರ ನೇತ್ರಗಳುಳ್ಳವನಾಗಿ, ರಾಘವಂ - ಶ್ರೀರಾಮನನ್ನು, ಹರಿಯೂಥಾಂಶ್ಚ - ಕಪಿಯೂಥಪತಿಗಳನ್ನೂ, ದದರ್ಶ - ಕಂಡನು. ॥೫॥ ರಾಘವಃ - ಶ್ರೀರಾಮನು, ಮುದಿತಃ - ಸಂತೋಷಗೊಂಡವನಾಗಿ, ಸೈನ್ಯೇನಸಹ - ಸೈನ್ಯದೊಡನೆ, ಪುಪ್ಲುವೇನಾಮ ಮುಂದುವರಿದನಷ್ಟೆ. ॥೬॥ ದಾಶರಥಿಃ-ಶ್ರೀರಾಮನು, ಚಿತ್ರ....ನೀಂ- ಚಿತ್ರಬಣ್ಣವುಳ್ಳ ಧ್ವಜಗಳೂ, ಸಣ್ಣ ನಿಶಾನಿಗಳೂ ಉಳ್ಳ, ಲಂಕಾಂ - ಲಂಕಾಪಟ್ಟಣವನ್ನು, ದೃಷ್ಟ್ವಾ - ಕಂಡು, ದೂಯಮಾನೇನ - ಪರಿತಪಿಸುತ್ತಿರುವ, ಚೇತಸಾ - ಮನಸ್ಸಿನಿಂದ, ಸಹಸಾ - ಜಾಗ್ರತೆಯಾಗಿ, ಸೀತಾಂ - ಸೀತಾದೇವಿಯನ್ನು ಕುರಿತು, ಜಗಾಮ - ತೆರಳಿದನು ॥೭॥ ಅತ್ರ - ಈ ಪಟ್ಟಣದಲ್ಲಿ, ಮೃಗಶಾಬಾಕ್ಷೀ - ಎಳೇ ಚಿಗರೆಯ ನೇತ್ರಗಳಂತೆ ನೇತ್ರಗಳುಳ್ಳ, ಸಾಜನಕಾತ್ಮಜಾ - ಆ ಸೀತಾದೇವಿಯು, ಮತ್ಕೃತೇ - ನನ್ನ ನಿಮಿತ್ತವಾಗಿ, ಶೋಕಸಂತಪ್ತಾ - ವ್ಯಸನದಿಂದ ಬೆಂದವಳಾಗಿ, ಪೀಡ್ಯತೇ - ಬಾಧೆಪಡಿಸಲ್ಪಡುತ್ತಾಳೆ. ॥೮॥ ಧರ್ಮಾತ್ಮಾ - ಧರ್ಮಿಷ್ಠನಾದ, ಸಃ - ಆ ಶ್ರೀರಾಮನು, ಪೀಡ್ಯಮಾನಾಂ - ಬಾಧೆಗೊಳಿಸಲ್ಪಡುತ್ತಿರುವ, ವೈದೇಹೀಂ - ಸೀತಾದೇವಿಯನ್ನು, ಅನುಚಿಂತಯನ್- ಆಲೋಚಿಸಿದವನಾಗಿ, ದ್ವಿಷತಾಂ - ಶತ್ರುಗಳ, ವಧೇ - ಸಂಹಾರ ವಿಷಯದಲ್ಲಿ, ವಾನರಾನ್ - ಕಪಿಗಳನ್ನು, ಕ್ಷಿಪ್ರಂ - ಜಾಗ್ರತೆಯಾಗಿ, ಆಜ್ಞಾಪಯಾಮಾಸ - ಆಜ್ಞಾಪಿಸಿದನು. ॥ ೯ ॥ ಅಕ್ಲಿ....ಣಾ - ಕ್ಲೇಶರಹಿತವಾದ ವ್ಯಾಪಾರವುಳ್ಳ, ರಾಮೇಣ - ಶ್ರೀರಾಮನ, ವಚನೇ - ವಾಕ್ಯವು, ಏವಂ - ಈ ಪರಿ

ಶ್ರೀರಾಮನನ್ನೂ, ಅಪಾರವಾದ ವಾನರಸೇನೆಯನ್ನೂ ದೃಷ್ಟಿಸಿ ನೋಡಿದನು. ॥ ೧-೫ ॥ ಆ ಸಮಯದಲ್ಲಿ ರಘುಕುಲಸಂಭವನಾದ ಶ್ರೀರಾಮನು ವಾನರಸೈನ್ಯದೊಡನೆ ಮಹಾ ಸಂತೋಷದಿಂದಲೂ ಮಹಾ ವೇಗದಿಂದಲೂ ನುಗ್ಗಿಬಂದು ಸರ್ವ ಸ್ಥಳಗಳಲ್ಲಿಯೂ ರಾಕ್ಷಸರು ದಟ್ಟವಾಗಿ ಆಕ್ರಮಿಸಿ ಕಾಪಾಡುತ್ತಿದ್ದ ಲಂಕಾಪಟ್ಟಣದ ಬಳಿ ಸಾರಿದನು. ಆ ಬಳಿಕ ಆತನು, ಚಿತ್ರಧ್ವಜಗಳಿಂದಲೂ, ಪತಾಕೆಗಳಿಂದಲೂ ಅಲಂಕೃತವಾದ ಲಂಕಾಪಟ್ಟಣವನ್ನು ನೋಡಿ ಸೀತಾದೇವಿಯನ್ನು ಕುರಿತು ವ್ಯಸನಾಕ್ರಾಂತವಾದ ಮನಸ್ಸುಳ್ಳವನಾಗಿ, "ಅಕಟ! ಮೃಗಶಾಬನಿಭೇಕ್ಷಣೆಯೂ, ಜನಕರಾಜಕುವರಿಯೂ ಆದ ಸೀತಾದೇವಿಯು ಇಲ್ಲಿಯೇ ಅಲ್ಲವೆ ನನ್ನ ನಿಮಿತ್ತವಾಗಿ ಭೂಶಾಯಿನಿಯಾಗಿ, ಕೃಶಳಾಗಿ, ದುಃಖಪೀಡಿತಳಾಗಿ, ಪರಿತಪಿಸುತ್ತಿರುವುದು" ಎಂದು ಕೆಲವುಕಾಲ ದುಃಖಿಸಿ ಕೂಡಲೇ ಶತ್ರುಗಳನ್ನು ಶೀಘ್ರವಾಗಿ ವಧಿಸಿರೆಂದು ವಾನರರೆಲ್ಲರಿಗೂ ಅಪ್ಪಣೆ ಮಾಡಿದನು. ಅನಾಯಾಸವಾಗಿ ಸಮಸ್ತ ಕಾರ್ಯಗಳನ್ನೂ ಮಾಡುವ ಶ್ರೀರಾಮನು ಈ ರೀತಿ ಆಜ್ಞಾಪಿಸುತ್ತಲೇ ಆ ವಾನರರೆಲ್ಲರೂ ಸಮ್ಮರ್ದದಿಂದ ಮುಂದೆ

ಕರ್ಮಣಾ । ಸಂಘರ್ಷಮಾಣಾಃ ಪ್ಲವಗಾಸ್ಸಿಂಹನಾದೈರನಾದಯನ್ ॥ ೧೦ ॥ " ಶಿಖರೈರ್ವಿಕಿರಾಮೈನಾಂ ಲಂಕಾಂ ಮುಷ್ಟಿಭಿರೇವವಾ " । ಇತಿ ಸ್ಮ ದಧಿರೇ ಸರ್ವೇ ಮನಾಂಸಿ ಹರಿಯೂಥಪಾಃ ॥ ೧೧ ॥ ಉದ್ಯಮ್ಯ ಗಿರಿಶೃಂಗಾಣಿ ಶಿಖರಾಣಿ ಮಹಾಂತಿಚ । ತರೂಂಶ್ಚೋತ್ಪಾಟ್ಯ ವಿವಿಧಾಂಸ್ತಿಷ್ಠಂತಿ ಹರಿಯೂಥಪಾಃ ॥೧೨॥ ಪ್ರೇಕ್ಷತೋ ರಾಕ್ಷಸೇಂದ್ರಸ್ಯ ತಾನ್ಯನೀಕಾನಿ ಭಾಗಶಃ । ರಾಘವಪ್ರಿಯಕಾಮಾರ್ಥಂ ಲಂಕಾಮಾರುರುಹುಸ್ತದಾ ॥ ೧೩ ॥ ತೇ ತಾಮ್ರವಕ್ತ್ರಾ ಹೇಮಾಭಾ ರಾಮಾರ್ಥೇ ತ್ಯಕ್ತಜೀವಿತಾಃ । ಲಂಕಾಮೇವಾಭಿವರ್ತಂತ ಸಾಲತಾಲಶಿಲಾಯುಧಾಃ ॥ ೧೪ ॥ ತೇ ದ್ರುಮೈಃ ಪರ್ವತಾ

---

ಯಾಗಿ, ಉಕ್ತೇ - ಹೇಳಲ್ಪಟ್ಟದ್ದಾಗಲೂ, ಸಂಘರ್ಷಮಾಣಾಃ - ಸ್ಪರ್ಧೆ ಮಾಡುತ್ತಿರುವ, ಪ್ಲವಗಾಃ- ಕಪಿಗಳು, ಸಿಂಹನಾದೈಃ - ಕೋಲಾಹಲ ಧ್ವನಿಗಳಿಂದ, ಅನಾದಯನ್ - ಘೋಷಮಾಡಿದರು. ॥೧೦॥ ಏನಾಂಲಂಕಾಂ - ಈ ಲಂಕಾಪಟ್ಟಣವನ್ನು, ಶಿಖರೈಃ - ಬೆಟ್ಟದ ಶಿಖರಗಳಿಂದ, ವಿಕಿರಾಮ - ಎರಚಿಬಿಡೋಣ, ಮುಷ್ಟಿಭಿರೇವವಾ - ಕೈಹಿಡಿಗಳಿಂದಲಾದರೂ, ವಿಕಿರಾಮ - ಪುಡಿಪುಡಿ ಮಾಡೋಣ, ಇತಿ - ಇಂತೆಂದು, ಸರ್ವೇ - ಸಮಸ್ತರಾದ, ಹರಿಯೂಥಪಾಃ - ವಾನರಯೂಥಪತಿಗಳು, ಮನಾಂಸಿ-ಮನಗಳನ್ನು, ದಧಿರೇ - ದೃಢಮಾಡಿಕೊಂಡರು. ॥೧೧॥ ಹರಿಯೂಥಪಾಃ - ವಾನರಯೂಥಪತಿಗಳು, ಗಿರಿಶೃಂಗಾಣಿ - ಬೆಟ್ಟದ ಶೃಂಗಗಳನ್ನೂ, ಮಹಾಂತಿ - ದೊಡ್ಡವುವಾದ, ಶಿಖರಾಣಿ - ಬೆಟ್ಟದ ತುದಿಗಳನ್ನೂ, ಉದ್ಯಮ್ಯ - ಮೇಲಕ್ಕೆತ್ತಿಕೊಂಡು, ವಿವಿಧಾನ್ - ನಾನಾಬಗೆಗಳಾದ, ತರೂಂಶ್ಚ - ಮರಗಳನ್ನೂ, ಉತ್ಪಾಟ್ಯ - ಕಿತ್ತುಹಿಡಿದು, ತಿಷ್ಠಂತಿಸ್ಮ - ನಿಂತರಷ್ಟೆ. ॥೧೨॥ ರಾಕ್ಷಸೇಂದ್ರಸ್ಯ - ರಾವಣನು, ಪ್ರೇಕ್ಷತಃ - ನೋಡುತ್ತಿರಲು, ತಾನ್ಯನೀಕಾನಿ - ಆ ಕಪಿಸೈನ್ಯಗಳು, ಭಾಗಶಃ - ಗುಂಪುಗುಂಪುಗಳಾಗಿ, ರಾಘ....ರ್ಥಂ-ಶ್ರೀರಾಮನಿಗೆ ಪ್ರಿಯವನ್ನು ಮಾಡುವದಕ್ಕೋಸುಗ, ತದಾ-ತತ್ಕ್ಷಣದಲ್ಲಿ, ಲಂಕಾಂ-ಲಂಕಾಪಟ್ಟಣವನ್ನು, ಆರುರುಹುಃ - ಏರಿದರು. ॥ ೧೩ ॥ ತಾಮ್ರವಕ್ತ್ರಾಃ - ಕೆಂಪಾದ ಮುಖಗಳುಳ್ಳ, ಹೇಮಾಭಾಃ - ಚಿನ್ನದಂತೆ ಪ್ರಕಾಶವುಳ್ಳ, ತೇ - ಆ ಕಪಿಗಳು, ರಾಮಾರ್ಥೇ - ಶ್ರೀರಾಮನ ನಿಮಿತ್ತವಾಗಿ, ತ್ಯಕ್ತಜೀವಿತಾಃ - ತ್ಯಜಿಸಲ್ಪಟ್ಟ ಪ್ರಾಣಗಳುಳ್ಳವರಾಗಿ, ಸಾಲ....ಧಾಃ - ಮದ್ದೀಗಿಡಗಳೂ, ತಾಳೇಗಿಡಗಳೂ ಆಯುಧಗಳಾಗಿ, ಲಂಕಾಮೇವ - ಲಂಕಾಪಟ್ಟಣವನ್ನು ಕುರಿತೇ, ಅಭ್ಯವರ್ತಂತ -

---

ನುಗ್ಗಿ ಮಹಾ ಭಯಂಕರವಾದ ಸಿಂಹನಾದವನ್ನು ಮಾಡಿದರು. ॥ ೬–೧೦ ॥ ಅದೂ ಅಲ್ಲದೆ ಆ ಸಮಯದಲ್ಲಿ ಆ ವಾನರವೀರರೆಲ್ಲರೂ, " ಈ ಲಂಕಾಪಟ್ಟಣವೆಲ್ಲವನ್ನೂ ಬೆಟ್ಟದ ಕೋಡುಗಲ್ಲುಗಳಿಂದ ಪುಡಿಗುಟ್ಟೋಣ. ಮುಷ್ಟಿಗಳಿಂದಾದರೂ ಕೆಡಹೋಣ " ಎಂದು ಅತ್ಯುತ್ಸಾಹದಿಂದ ಒಬ್ಬರಿಗೊಬ್ಬರು ವೀರಾಲಾಪಗಳನ್ನು ಮಾಡುತ್ತಿದ್ದರು. ಆಗಲಾ ವಾನರವೀರರೆಲ್ಲರೂ ಮಹಾ ಪ್ರಯತ್ನಪೂರ್ವಕವಾಗಿ ದೊಡ್ಡದೊಡ್ಡ ಪರ್ವತಶಿಖರಗಳನ್ನೂ, ನಾನಾವಿಧಗಳಾದ ವೃಕ್ಷಗಳನ್ನೂ ಪೆಳಗಿಸಿ ಆಯುಧಗಳನ್ನಾಗಿ ಹೊತ್ತು ನಿಂತರು. ರಾವಣಾಸುರನು ನಿಂತು ನೋಡುತ್ತಿರುವಂತೆಯೇ ವಾನರಸೈನ್ಯವೆಲ್ಲವೂ ಶ್ರೀರಾಮಚಂದ್ರನಿಗೆ ಪ್ರಿಯವನ್ನುಂಟುಮಾಡುವುದಕ್ಕೋಸ್ಕರ ಅತ್ಯುತ್ಸಾಹಪೂರಿತರಾಗಿ ಲಂಕಾಪಟ್ಟಣದಮೇಲೆ ಬರುತ್ತಿದ್ದರು. ಇಷ್ಟೆಯಲ್ಲದೆ ಸ್ವರ್ಣಚ್ಛಾಯೆಯುಳ್ಳವರೂ, ಕೆಂಪು ಮುಖಗಳುಳ್ಳವರೂ ಆದ ಆ ವಾನರರೆಲ್ಲರೂ ಶ್ರೀರಾಮನಿಗಾಗಿ ಪ್ರಾಣಗಳಮೇಲಣ ಆಶೆಯನ್ನೂ ತೊರೆದವರಾಗಿ ಸಾಲತಾಲಗಳನ್ನೂ, ಶಿಲೆಗಳನ್ನೂ ಆಯುಧಗಳನ್ನಾಗಿ ಧರಿಸಿ ಲಂಕಾಪಟ್ಟಣದ ಎಲ್ಲೆಡೆಗಳಲ್ಲಿಯೂ

ಪ್ರೈಶ್ಚ ಮುಷ್ಟಿಭಿಶ್ಚ ಪ್ಲವಂಗಮಾಃ। ಪ್ರಾಕಾರಾಗ್ರಾಣ್ಯರಣ್ಯಾನಿ ಮಮಂಥುಸ್ತೋರಣಾನಿಚ ॥೧೫॥ ಪರಿಘಾಃ ಪೂರಯಂತಿಸ್ಮ ಪ್ರಸನ್ನಸಲಿಲಾಯುತಾಃ । ಪಾಂಸುಭಿಃ ಪರ್ವತಾಗ್ರೈಶ್ಚ ತೃಣೈಃ ಕಾಷ್ಠೈಶ್ಚ ವಾನರಾಃ ॥೧೬॥ ತತಸ್ಸಹಸ್ರಯೂಥಾಶ್ಚ ಕೋಟಿಯೂಥಾಶ್ಚ ವಾನರಾಃ । ಕೋಟೀಶತಯುತಾಶ್ಚಾನ್ಯೇ ಲಂಕಾಮಾರುರುಹುಸ್ತದಾ ॥೧೭॥ ಕಾಂಚನಾನಿ ಪ್ರಮೃಧ್ನಂತಸ್ತೋರಣಾನಿ ಪ್ಲವಂಗಮಾಃ । ಕೈಲಾಸಶಿಖರಾಭಾಣಿ ಗೋಪುರಾಣಿ ಪ್ರಮಥ್ಯಚ ॥೧೮॥ ಆಪ್ಲವಂತಃ ಪ್ಲವಂತಶ್ಚ ಗರ್ಜಂತಶ್ಚ ಪ್ಲವಂಗಮಾಃ । ಲಂಕಾಂ ತಾಮಭಿಧಾವಂತಿ ಮಹಾವಾರಣಸನ್ನಿಭಾಃ ॥೧೯॥

---

ಎದುರಾಗಿ ನಿಂತರು. ॥೧೪॥ ತೇಪ್ಲವಂಗಮಾಃ - ಆ ವಾನರರು, ದ್ರುಮೈಃ - ಗಿಡಗಳಿಂದಲೂ, ಪರ್ವತಾಗ್ರೈಶ್ಚ - ಬೆಟ್ಟದ ತುದಿಗಳಿಂದಲೂ, ಮುಷ್ಟಿಭಿಶ್ಚ - ಹಿಡಿಗಳಿಂದಲೂ, ಪ್ರಾಕಾರಾಗ್ರಾಣಿ - ಕೋಟೆಯ ಗೋಡೆಯ ತುದಿಗಳನ್ನೂ, ಅರಣ್ಯಾನಿ - ಅರಣ್ಯಗಳನ್ನೂ, ತೋರಣಾನಿಚ ಊರುಬಾಗಿಲುಗಳನ್ನೂ, ಮಮಂಥುಃ - ಮುರಿದರು. ॥೧೫॥ ವಾನರಾಃ - ಕಪಿಗಳು, ಪ್ರಸ......ತಾಃ - ನಿರ್ಮಲವಾದ ಉದಕಗಳಿಂದ ತುಂಬಿರುವ, ಪರಿಘಾಃ - ಅಗಳ್ತೆಗಳನ್ನು, ಪಾಂಸುಭಿಃ - ಧೂಳಿಗಳಿಂದಲೂ, ಪರ್ವತಾಗ್ರೈಶ್ಚ - ಬೆಟ್ಟದ ತುದಿಗಳಿಂದಲೂ, ತೃಣೈಃ - ಹುಲ್ಲುಗಳಿಂದಲೂ, ಕಾಷ್ಠೈಶ್ಚ - ಸೌದೆಗಳಿಂದಲೂ, ಪೂರಯಂತಿಸ್ಮ - ತುಂಬಿಸಿದರು. ॥೧೬॥ ತತಃ - ಬಳಿಕ, ಸಹಸ್ರಯೂಥಾಶ್ಚ - ಸಹಸ್ರಾರು ಗುಂಪುಗಳುಳ್ಳ, ಕೋಟಿಯೂಥಾಶ್ಚ - ಕೋಟ್ಯಂತರ ಗುಂಪುಗಳುಳ್ಳ, ವಾನರಾಃ - ಕಪಿಗಳು, ಕೋಟೀಶತಯುತಾಶ್ಚ - ನೂರು ಕೋಟಿ ಸಂಖ್ಯೆಯಿಂದ ಕೂಡಿರುವ, ಅನ್ಯೇ - ಮತ್ತೆ ಕೆಲವರೂ, ತದಾ - ಆ ಕಾಲದಲ್ಲಿ, ಲಂಕಾಂ - ಲಂಕಾಪಟ್ಟಣವನ್ನು, ಆರುರುಹುಃ - ಏರಿದರು. ॥೧೭॥ ಪ್ಲವಂಗಮಾಃ - ಕಪಿಗಳು, ಕಾಂಚನಾನಿ - ಸುವರ್ಣವಿಕಾರಗಳಾದ, ತೋರಣಾನಿ - ಊರುಬಾಗಿಲುಗಳನ್ನು, ಪ್ರಮೃಧ್ನಂತಃ - ಮುರಿದುಹಾಕುತ್ತಿರುವವರಾಗಿ, ಕೈಲಾ....ಣಿ - ಕೈಲಾಸಪರ್ವತದ ಶೃಂಗಗಳಂತೆ ಹೊಳೆಯುತ್ತಿರುವ, ಗೋಪುರಾಣಿ - ಊರುಬಾಗಿಲುಗಳನ್ನು, ಪ್ರಮಥ್ಯಚ - ಮುರಿದು, ಮಹಾ....ಭಾಃ - ದೊಡ್ಡಆನೆಗಳಂತಿರುವ, ಪ್ಲವಂಗಮಾಃ - ವಾನರರು, ಆಪ್ಲವಂತಃ - ಕುಪ್ಪಳಿಸುತ್ತ, ಪ್ಲವಂತಶ್ಚ - ಹಾರಿಹೋಗುತ್ತ, ಗರ್ಜಂತಶ್ಚ - ಕೂಗುತ್ತ, ತಾಂಲಂಕಾಂ - ಆ ಲಂಕಾಪಟ್ಟಣವನ್ನು ಕುರಿತು, ಅಭಿಧಾವಂತಿ-ಓಡಿಬಂದರು. ॥೧೮-೧೯॥ ಅತಿಬಲಃ-ಮಹಾ ಬಲಶಾಲಿಯಾದ, ರಾಮಃ -

---

ವ್ಯಾಪಿಸಿಬಿಟ್ಟರು. ಆಮೇಲೆ ಆ ವೀರವಾನರಶ್ರೇಷ್ಠರೆಲ್ಲರೂ ಪರ್ವತಾಗ್ರಗಳಿಂದಲೂ, ಮುಷ್ಟಿಗಳಿಂದಲೂ, ಪ್ರಾಕಾರಾಗ್ರಗಳನ್ನೂ, ಅರಣ್ಯಗಳನ್ನೂ ಮುರಿದು ಪುಡಿಗುಟ್ಟಿದರು. ಇಷ್ಟೆಯಲ್ಲದೆ ಅವರು ನಿರ್ಮಲೋದಕವುಳ್ಳ ಅಗಳ್ತೆಗಳನ್ನೆಲ್ಲ ಧೂಳಿನಿಂದಲೂ, ಸೌದೆಗಳಿಂದಲೂ ತುಂಬಿಸಿದರು. ॥೧೧-೧೬॥ ಆಮೇಲೆ ಸಾವಿರಸಾವಿರ ವಾನರರ ಪಡೆಗಳಿಗೆ ಅಧಿಪತಿಗಳಾದ ವಾನರರೂ, ಕೋಟಿಸಂಖ್ಯೆಯ ಸೇನೆಗೆ ಅಧಿಪತಿಗಳಾದ ವಾನರರೂ ಲಂಕಾಪಟ್ಟಣವನ್ನಾಕ್ರಮಿಸಿಕೊಂಡರು. ಆ ವಾನರೋತ್ತಮರೆಲ್ಲರೂ ಸುವರ್ಣಮಯವಾದ ತೋರಣಗಳೆಲ್ಲವನ್ನೂ ಕಿತ್ತೆಸೆದು ಕೈಲಾಸಶಿಖರೋಪಮವಾದ ಆ ಪಟ್ಟಣದ ಗೋಪುರಪ್ರದೇಶವನ್ನು ಮುರಿದಿಕ್ಕಿದರು, ಹೀಗೆ ಕೋಲಾಹಲದಿಂದ ಮಹತ್ತರವೂ, ಮದಿಸಿರುವುದೂ ಆದ ತಮ್ಮ ಸೇನೆಗಳೊಡಗೂಡಿ ತಮ್ಮ ಇಷ್ಟಾನುಸಾರವಾಗಿ ಹಾರುತ್ತಲೂ, ಸಿಂಹನಾದಗಳನ್ನು ಮಾಡುತ್ತಲೂ ಇದ್ದರು; ಲಂಕಾಪಟ್ಟಣದಲ್ಲೆಲ್ಲಾ ನಿರಾತಂಕವಾಗಿ ಓಡಾಡುತ್ತಿದ್ದರು.

"ಜಯತ್ಯತಿಬಲೋ ರಾಮೋ ಲಕ್ಷ್ಮಣಶ್ಚ ಮಹಾಬಲಃ । ರಾಜಾ ಜಯತಿ ಸುಗ್ರೀವೋ ರಾಘವೇಣಾಭಿಪಾಲಿತಃ" ॥ ೨೦ ॥ ಇತ್ಯೇವಂ ಘೋಷಯಂತಶ್ಚ ಗರ್ಜಂತಶ್ಚ ಪ್ಲವಂಗಮಾಃ । ಅಭ್ಯಧಾವಂತ ಲಂಕಾಯಾಃ ಪ್ರಾಕಾರಂ ಕಾಮರೂಪಿಣಃ ॥ ೨೧ ॥ ವೀರಬಾಹುಸ್ಸುಬಾಹುಶ್ಚ ನಳಶ್ಚ ವನಗೋಚರಃ । ನಿಪೀಡ್ಯೋಪನಿವಿಷ್ಟಾಸ್ತೇ ಪ್ರಾಕಾರಂ ಹರಿಯೂಥಪಾಃ । ಏತಸ್ಮಿನ್ನಂತರೇ ಚಕ್ರುಃ ಸ್ಕಂಧಾವಾರನಿವೇಶನಂ ॥೨೨॥ ಪೂರ್ವದ್ವಾರಂತು ಕುಮುದಃ ಕೋಟಿಭಿರ್ದಶಭಿರ್ವೃತಃ । ಆವೃತ್ಯ ಬಲವಾಂಸ್ತಸ್ಥೌ ಹರಿಭಿರ್ಜಿತಕಾಶಿಭಿಃ ॥ ೨೩ ॥ ಸಾಹಾಯಾರ್ಥಂತು ತಸ್ಯೈವ ನಿವಿಷ್ಟಃ ಪ್ರಘಸೋ ಹರಿಃ ।

---

ಶ್ರೀರಾಮನು, ಮಹಾಬಲಃ - ಬಹಳ ಬಲವಂತನಾದ, ಲಕ್ಷ್ಮಣಶ್ಚ - ಲಕ್ಷ್ಮಣನೂ, ಜಯತಿ - ಸರ್ವೋತ್ಕೃಷ್ಟರಾಗಿದ್ದಾರೆ, ರಾಜಾ - ಅರಸನಾದ, ಸುಗ್ರೀವಃ - ಸುಗ್ರೀವನು, ರಾಘವೇಣ - ಶ್ರೀರಾಮನಿಂದ, ಅಭಿಪಾಲಿತಃ - ಸಂರಕ್ಷಿಸಲ್ಪಟ್ಟವನಾಗಿ, ಜಯತಿ - ಸರ್ವೋತ್ಕೃಷ್ಟನಾಗಿದ್ದಾನೆ. ॥ ೨೦ ॥ ಇತ್ಯೇವಂ - ಈ ಪರಿಯಾಗಿ, ಘೋಷಯಂತಶ್ಚ - ಕೂಗುತ್ತಿರುವ, ಕಾಮರೂಪಿಣಃ - ಬೇಕಾದ ರೂಪವನ್ನು ಧರಿಸಿರುವ ಸಾಮರ್ಥ್ಯವುಳ್ಳ, ಗರ್ಜಂತಃ - ಗರ್ಜನೆ ಮಾಡುತ್ತಿರುವ, ಪ್ಲವಂಗಮಾಃ - ಕಪಿಗಳು, ಲಂಕಾಯಾಃ - ಲಂಕಾಪಟ್ಟಣದ, ಪ್ರಾಕಾರಂ - ಕೋಟೆಗಳನ್ನು ಕುರಿತು, ಅಭ್ಯಧಾವಂತ - ಓಡಿಬಂದರು. ॥ ೨೧ ॥ ವೀರಬಾಹುಃ - ವೀರಬಾಹೂ ಎಂಬವನೂ, ಸುಬಾಹುಶ್ಚ - ಸುಬಾಹೂ ಎಂಬವನೂ, ವನಗೋಚರಃ - ವನವಾಸಿಯಾದ, ನಳಶ್ಚ - ನಳನೂ, ತೇಹರಿಯೂಥಪಾಃ - ಆ ವಾನರ ಯೂಥಪತಿಗಳು, ಪ್ರಾಕಾರಂ - ಪ್ರಾಕಾರವನ್ನು, ನಿಪೀಡ್ಯ - ನಿರೋಧಿಸಿ, ಉಪನಿವಿಷ್ಟಾಃ - ನಿಂತರು, ಏತಸ್ಮಿನ್ನಂತರೇ - ಈ ಮಧ್ಯದಲ್ಲಿ, ಸ್ಕಂಧಾ....ನಂ - ಸೇನಾನಿವೇಶದ, ವ್ಯೂಹಾಕಾರದಿಂದ ಸ್ಥಾಪನವನ್ನು, ಚಕ್ರುಃ - ಮಾಡಿದರು, ಬಲವಾನ್ - ಬಲವಂತನಾದ, ಕುಮುದಃ - ಕುಮುದನು, ಜಿತಕಾಶಿಭಿಃ - ಜಯಶೀಲರಾದ, ದಶಭಿಃಕೋಟಿಭಿಃ - ಹತ್ತುಕೋಟಿಗಳಾದ, ಹರಿಭಿಃ - ಕಪಿಗಳಿಂದ, ಪೂರ್ವದ್ವಾರಂತು - ಪೂರ್ವದ ಬಾಗಿಲನ್ನಾದರೆ, ಆವೃತ್ಯ - ತಡೆದು, ತಸ್ಥೌ - ನಿಂತನು. ॥ ೨೨-೨೩ ॥ ಮಹಾಬಾಹುಃ - ಬಹಳ ಬಾಹುಬಲಶಾಲಿಯಾದ, ಪನಸಃ - ಪನಸನೂ, ಬಹುಭಿಃ - ಅನೇಕ ಮಂದಿ, ವಾನರೈಃ - ಕಪಿಗಳಿಂದ, ವೃತಃ - ಸುತ್ತುವರೆಯಲ್ಪಟ್ಟವನಾಗಿ, ಪ್ರಘಸಶ್ಚ - ಪ್ರಘಸನೂ ಎಂಬ, ಹರಿಃ - ವಾನರನು, ತಸ್ಯೈವ - ಆ ಕುಮುದನಿಗೇನೆ, ಸಾಹಾಯಾರ್ಥಂ - ಸಹಾಯಾರ್ಥ

---

ಆ ಸಮಯದಲ್ಲಿ ಆ ವೀರವಾನರರೆಲ್ಲರೂ "ಮಹಾ ಪರಾಕ್ರಮಶಾಲಿಗಳಾದ ಶ್ರೀರಾಮಲಕ್ಷ್ಮಣರು ರಾಕ್ಷಸರೆಲ್ಲರನ್ನೂ ಜಯಶೀಲನಾಗಿರುವನು" ಎಂದೂ, "ಶ್ರೀರಾಮನಿಂದ ಸುರಕ್ಷಿತನಾದ ಸುಗ್ರೀವರಾಜನು ಸರ್ವೋತ್ಕೃಷ್ಟನಾಗಿರುವನು" ಎಂದೂ ಕೂಗಿಡುತ್ತಿದ್ದರು. ॥ ೧೬-೨೦ ॥ ಕಾಮರೂಪರಾದ ವಾನರರು ಈ ರೀತಿಯಾಗಿ ಸಿಂಹನಾದಗಳನ್ನು ಮಾಡುತ್ತ ಲಂಕಾಪಟ್ಟಣದ ಪ್ರಾಕಾರಗಳಲ್ಲೆಲ್ಲಾ ಸಂಚರಿಸುತ್ತಿದ್ದರು. ಹೀಗೆ ಇವರೆಲ್ಲರೂ ಪಟ್ಟಣದಲ್ಲಿ ಉಲ್ಲಕಲ್ಲೋಲ ಮಾಡುತ್ತಿದ್ದ ಸಮಯದಲ್ಲಿ ವೀರಬಾಹು, ಸುಬಾಹು, ನಳ ಇವರೇ ಮೊದಲಾದ ಯೂಥಪತಿಗಳು ತಮ್ಮ ಸೇನೆಗಳೆಲ್ಲವನ್ನೂ ಸರ್ವಸನ್ನದ್ಧಮಾಡಿಕೊಂಡು ಪ್ರಾಕಾರವನ್ನು ಪೀಡಿಸುತ್ತ ವ್ಯೂಹವನ್ನಾರಚಿಸಿದರು. ಲಂಕಾಪಟ್ಟಣದ ಪೂರ್ವದ್ವಾರದಲ್ಲಿ ಕುಮುದನೆಂಬ ಯೂಥಪತಿಯು ಜಯಸಾಮರ್ಥ್ಯವುಳ್ಳ ಹತ್ತುಕೋಟಿ ವಾನರರೊಡಗೂಡಿ ನಿಂತನು. ಆ ಕುಮುದನಿಗೆ ಸಹಾಯಾರ್ಥವಾಗಿ ಪ್ರಘಸನೆಂಬ ವಾನರನಾಯಕನು ಹಿಂಬಾಲಿಸಿ ನಿಂತನು. ಮಹಾ ಬಾಹುವಾದ ಪನಸನೆಂಬವನೂ, ವೀರಶ್ರೇಷ್ಠನಾದ ಶತ

ಪನಸಶ್ಚ ಮಹಾಬಾಹುರ್ವಾನರೈರ್ಬಹುಭಿರ್ವೃತಃ ॥ ೨೪ ॥ ದಕ್ಷಿಣಂ ದ್ವಾರವಾಗಮ್ಯ ವೀರಃ ಶತವಲಿಃ ಕಪಿಃ । ಆವೃತ್ಯ ಬಲವಾಂಸ್ತಸ್ಥೌ ವಿಂಶತ್ಯಾ ಕೋಟಿಭಿರ್ವೃತಃ॥೨೫॥ ಸುಷೇಣಃ ಪಶ್ಚಿಮದ್ವಾರಂ ಗತಸ್ತಾರಾಪಿತಾ ಹರಿಃ । ಆವೃತ್ಯ ಬಲವಾಂಸ್ತಸ್ಥೌ ಷಷ್ಟಿಕೋಟಿಭಿರಾವೃತಃ ॥ ೨೬ ॥ ಉತ್ತರಂ ದ್ವಾರಮಾಸಾದ್ಯ ರಾಮಸ್ಸೌಮಿತ್ರಿಣಾಸಹ । ಆವೃತ್ಯ ಬಲವಾಂಸ್ತಸ್ಥೌ ಸುಗ್ರೀವಶ್ಚ ಹರೀಶ್ವರಃ ॥ ೨೭ ॥ ಗೋಲಾಂಗೂಲೋ ಮಹಾಕಾಯೋ ಗವಾಕ್ಷೋ ಭೀಮದರ್ಶನಃ । ವೃತಃ ಕೋಟ್ಯಾ ಮಹಾವೀರ್ಯಸ್ತಸ್ಥೌ ರಾಮಸ್ಯ ಪಾರ್ಶ್ವತಃ ॥ ೨೮ ॥ ಋಕ್ಷಾಣಾಂ ಭೀಮವೇಗಾನಾಂ ಧೂಮ್ರಃ

ವಾಗಿ, ನಿವಿಷ್ಟಃ-ನಿಂತನು. ॥ ೨೪ ॥ ಬಲವಾನ್-ಬಲಶಾಲಿಯಾದ, ವೀರಃ-ವೀರನಾದ, ಶತವಲಿಃಕಪಿಃ-ಶತವಲಿ ಎಂಬ ವಾನರನು, ವಿಂಶತ್ಯಾಕೋಟಿಭಿಃ - ಇಪ್ಪತ್ತುಕೋಟಿ ವಾನರರಿಂದ, ವೃತಃ - ಸುತ್ತುವರೆಯಲ್ಪಟ್ಟವನಾಗಿ, ದಕ್ಷಿಣಂದ್ವಾರಂ - ದಕ್ಷಿಣದ ಬಾಗಿಲನ್ನು ಕುರಿತು, ಆಗಮ್ಯ - ಬಂದು, ಆವೃತ್ಯ - ತಡೆಮಾಡಿ, ತಸ್ಥೌ - ನಿಂತನು. ॥ ೨೫ ॥ ಬಲವಾನ್ - ಬಲವಂತನಾದ, ತಾರಾಪಿತಾ - ತಾರಾದೇವಿಗೆ ತಂದೆಯಾದ, ಸುಷೇಣಃ - ಸುಷೇಣನೆಂಬ, ಹರಿಃ - ವಾನರನು, ಷಷ್ಟಿಕೋಟಿಭಿಃ - ಅರುವತ್ತುಕೋಟಿ ವಾನರರಿಂದ, ಆವೃತಃ - ಸುತ್ತುವರೆಯಲ್ಪಟ್ಟವನಾಗಿ, ಪಶ್ಚಿಮದ್ವಾರಂ - ಪಶ್ಚಿಮದ ಊರುಬಾಗಿಲನನ್ನು, ಗತಃ - ಹೊಂದಿ, ಆವೃತ್ಯ - ತಡೆದು, ತಸ್ಥೌ - ನಿಂತನು. ॥೨೬॥ ಬಲವಾನ್ - ಬಲವಂತನಾದ, ರಾಮಃ - ಶ್ರೀರಾಮನು, ಸೌಮಿತ್ರಿಣಾಸಹ - ಲಕ್ಷ್ಮಣನೊಡನೆ, ಬಲವಾನ್ - ಬಲವಂತನಾದ, ಹರೀಶ್ವರಃ - ವಾನರರಾಜನಾದ, ಸುಗ್ರೀವಶ್ಚ - ಸುಗ್ರೀವನೂ, ಉತ್ತರದ್ವಾರಂ - ಉತ್ತರದ ಬಾಗಿಲಿನನ್ನು, ಆಸಾದ್ಯ - ಹೊಂದಿ, ಆವೃತ್ಯ - ತಡೆದು, ತಸ್ಥೌ - ನಿಂತನು. ॥ ೨೭ ॥ ಗೋಲಾಂಗೂಲಃ - ಗೋಲಾಂಗೂಲನಾದ, ಮಹಾಕಾಯಃ - ದೊಡ್ಡಶರೀರವುಳ್ಳ, ಭೀಮದರ್ಶನಃ - ಭಯಂಕರವಾದ ದೃಷ್ಟಿಯುಳ್ಳ, ಮಹಾವೀರ್ಯಃ - ಮಹಾ ಸಾಮರ್ಥ್ಯವಂತನಾದ, ಗವಾಕ್ಷಃ - ಗವಾಕ್ಷನು, ಕೋಟ್ಯಾ-ಕೋಟಿ ವಾನರಸೈನ್ಯದಿಂದ, ವೃತಃ-ಸುತ್ತುವರೆಯಲ್ಪಟ್ಟವನಾಗಿ, ರಾಮಸ್ಯ - ಶ್ರೀರಾಮನ, ಪಾರ್ಶ್ವತಃ - ಪಾರ್ಶ್ವಭಾಗದಲ್ಲಿ, ತಸ್ಥೌ - ನಿಂತನು. ॥೨೮॥ ಶತ್ರುನಿಬರ್ಹಣಃ - ಶತ್ರುಸಂಹಾರಕನಾದ, ಮಹಾವೀರ್ಯಃ - ಬಹಳ ಸಾಮರ್ಥ್ಯವಂತನಾದ, ಧೂಮ್ರಃ - ಧೂಮ್ರನು, ಭೀಮವೇಗಾನಾಂ - ಭಯಂಕರ ವೇಗವುಳ್ಳ, ಋಕ್ಷಾಣಾಂ - ಕರಡಿಗಳ, ಕೋಟ್ಯಾ - ಕೋಟಿಸಂಖ್ಯೆ

ವಲಿಯೆಂಬವನೂ ಅನೇಕ ಸಹಸ್ರ ವಾನರರೊಡಗೂಡಿದವರಾಗಿ ದಕ್ಷಿಣ ದ್ವಾರದಲ್ಲಿ ನಿಂತವರಾದರು. ॥ ೨೧–೨೫ ॥ ಮಹಾ ಬಲಿಷ್ಠನೂ, ತಾರೆಯ ತಂದೆಯೂ ಆದ ಸುಷೇಣನು ಇಪ್ಪತ್ತುಕೋಟಿ ವಾನರವೀರರೊಡಗೂಡಿದವನಾಗಿ ಲಂಕಾನಗರದ ಪಶ್ಚಿಮ ದ್ವಾರವನ್ನಾಕ್ರಮಿಸಿದನು. ಮಹಾ ಬಲಾಢ್ಯನಾದ ಶ್ರೀರಾಮಮೂರ್ತಿಯು ಲಕ್ಷ್ಮಣನೊಡಗೂಡಿ ಇಪ್ಪತ್ತುಕೋಟಿ ವಾನರವೀರರೊಡನೆ ಉತ್ತರ ದ್ವಾರವನ್ನಾಕ್ರಮಿಸಿ ನಿಂತನು. ಮಹಾ ಬಲಾಢ್ಯನೂ ವಾನರಾಧೀಶ್ವರನೂ ಆದ ಸುಗ್ರೀವನು ಶ್ರೀರಾಮನನ್ನು ಹಿಂಬಾಲಿಸಿ ನಿಂತನು. ಗೋಲಾಂಗೂಲಗಳಿಗೆ ಪ್ರಭುವೂ ಮಹಾ ಶರೀರಿಯೂ, ನೋಡಲು ಮಹಾ ಭಯಂಕರನೂ ಆಗಿರುವ ಮಹಾ ವೀರನಾದ ಗವಾಕ್ಷನು ಒಂದು ಕೋಟಿ ವಾನರವೀರರೊಡಗೂಡಿದವನಾಗಿ ಶ್ರೀರಾಮನ ಸಮೀಪದಲ್ಲಿಯೇ ನಿಂತನು. ಭಯಂಕರ ವೇಗವುಳ್ಳವನೂ, ಭಲ್ಲೂಕೋತ್ತಮನೂ, ಶತ್ರುಮರ್ದಕನೂ, ಮಹಾ ಪರಾಕ್ರಮವಂತನೂ ಆದ ಧೂಮ್ರನೆಂಬ ವಾನರ

ಶತ್ರುನಿಬರ್ಹಣಃ । ವೃತಃ ಕೋಟ್ಯಾ ಮಹಾವೀರ್ಯಸ್ತಸ್ಥೌ ರಾಮಸ್ಯ ಪಾರ್ಶ್ವತಃ ॥ ೨೯ ॥ ಸನ್ನದ್ಧಸ್ತು ಮಹಾವೀರ್ಯೋ ಗದಾಪಾಣಿರ್ವಿಭೀಷಣಃ । ವೃತೋ ಯುತ್ತೈಸ್ತು ಸಚಿವೈಸ್ತಸ್ಥೌ ತತ್ರ ಮಹಾಬಲಃ ॥ ೩೦ ॥ ಗಜೋ ಗವಾಕ್ಷೋ ಗವಯಃ ಶರಭೋ ಗಂಧಮಾದನಃ । ಸಮಂತಾತ್ಪರಿಧಾವಂತೋ ರರಕ್ಷುರ್ಹರಿ ವಾಹಿನೀಂ ॥ ೩೧ ॥ ತತಃ ಕೋಪಪರೀತಾತ್ಮಾ ರಾವಣೋ ರಾಕ್ಷಸೇಶ್ವರಃ । ನಿರ್ಯಾಣಂ ಸರ್ವಸೈನ್ಯಾನಾಂ ದ್ರುತಮಾಜ್ಞಾಪಯತ್ತದಾ ॥ ೩೨ ॥ ಏತಚ್ಛ್ರುತ್ವಾ ತತೋ ವಾಕ್ಯಂ ರಾವಣಸ್ಯ ಮುಖೋದ್ಗತಂ । ಸಹಸಾ ಭೀಮನಿರ್ಘೋಷಮುದ್ಘುಷ್ಟಂ ರಜನೀಚರೈಃ ॥ ೩೩ ॥ ತತಃ ಪ್ರಚೋದಿತಾ ಭೇರ್ಯಶ್ಚಂದ್ರಪಾಂಡುರಪುಷ್ಕರಾಃ ।

ಯಿಂದ, ವೃತಃ - ಸುತ್ತುವರೆಯಲ್ಪಟ್ಟವನಾಗಿ, ರಾಮಸ್ಯ - ಶ್ರೀರಾಮನ, ಪಾರ್ಶ್ವತಃ - ಹಿಂಭಾಗದಲ್ಲಿ, ತಸ್ಥೌ - ನಿಂತನು. ॥೨೯॥ ಮಹಾವೀರ್ಯಃ - ಮಹಾ ಸಾಮರ್ಥ್ಯವಂತನಾದ, ಗದಾಪಾಣಿಃ - ಗದಾಯುಧವೇ ಹಸ್ತದಲ್ಲುಳ್ಳ, ಮಹಾಬಲಃ - ಬಹಳ ದೇಹತ್ರಾಣವುಳ್ಳ, ವಿಭೀಷಣಃ - ವಿಭೀಷಣನು, ಸನ್ನದ್ಧಃ - ಯುದ್ಧಸನ್ನದ್ಧನಾಗಿ, ಯುಕ್ತೈಃ - ಆಸಕ್ತರಾದ, ಸಚಿವೈಃ - ಮಂತ್ರಿಗಳಿಂದ, ವೃತಃ - ಸುತ್ತುವರೆಯಲ್ಪಟ್ಟವನಾಗಿ, ತತ್ರ ಆ ಶ್ರೀರಾಮನ ಬಳಿಯಲ್ಲಿ, ತಸ್ಥೌ - ನಿಂತನು. ॥೩೦॥ ಗಜಃ - ಗಜನು, ಗವಾಕ್ಷಃ - ಗವಾಕ್ಷನು, ಗವಯಃ - ಗವಯನು, ಶರಭಃ - ಶರಭನು, ಗಂಧಮಾದನಃ - ಗಂಧಮಾದನನು, ಸಮಂತಾತ್ - ಎಲ್ಲಾ ಕಡೆಯಲ್ಲಿಯೂ, ಪರಿಧಾವಂತಃ - ತಿರುಗುತ್ತಿರುವವರಾಗಿ, ಹರಿವಾಹಿನೀಂ - ವಾನರಸೈನ್ಯವನ್ನು, ರರಕ್ಷುಃ - ಸಂರಕ್ಷಿಸಿದರು. ॥ ೩೧ ॥ ತತಃ - ಬಳಿಕ, ಕೋಪಪರೀತಾತ್ಮಾ - ಕೋಪದಿಂದ ವ್ಯಾಪ್ತವಾದ ಮನವುಳ್ಳ, ರಾಕ್ಷಸೇಶ್ವರಃ-ರಕ್ಕಸರೊಡೆಯನಾದ, ರಾವಣಃ-ರಾವಣನು, ದ್ರುತಂ - ಜಾಗ್ರತೆಯಾಗಿ, ತದಾ - ಆ ಕಾಲದಲ್ಲಿ, ಸರ್ವಸೈನ್ಯಾನಾಂ - ಸಮಸ್ತ ಸೈನ್ಯಗಳ, ನಿರ್ಯಾಣಂ - ಯುದ್ಧಾರ್ಥವಾಗಿ ಪ್ರಯಾಣವನ್ನು, ಆಜ್ಞಾಪಯತ್ - ಆಜ್ಞಾಪಿಸಿದನು. ॥ ೩೨ ॥ ತತಃ - ಬಳಿಕ, ರಾವಣಸ್ಯ - ರಾವಣನ, ಮುಖೋದ್ಗತಂ - ಮುಖದಿಂದ ಹೊರಟ, ಏತದ್ವಾಕ್ಯಂ - ಈ ಮಾತನ್ನು, ಶ್ರುತ್ವಾ - ಕೇಳಿ, ರಜನೀಚರೈಃ - ರಕ್ಕಸರಿಂದ, ಸಹಸಾ - ಶೀಘ್ರವಾಗಿ, ಭೀಮನಿರ್ಘೋಷಂ - ಭಯಂಕರ ಕೋಲಾಹಲಧ್ವನಿಯುಳ್ಳಂತೆ, ಉದ್ಘುಷ್ಟಂ - ಘೋಷ ಮಾಡಲ್ಪಟ್ಟಿತು. ॥೩೩॥ ತತಃ - ಬಳಿಕ, ಚಂದ್ರ....ರಾಃ - ಚಂದ್ರನಂತೆ ಬೆಳ್ಳಗಿರುವ ಮುಖಪ್ರದೇಶಗಳುಳ್ಳ, ಭೀಮಾಃ - ಭಯಂಕರವಾದ, ಭೇರ್ಯಃ - ಭೇರಿಗಳು, ರಾಕ್ಷಸಾನಾಂ - ರಕ್ಕಸರಿಂದ,

ಯೂಥನಾಥನು ಒಂದು ಕೋಟಿ ವಾನರರೊಡನೆ ಶ್ರೀರಾಮನ ಪಾರ್ಶ್ವದಲ್ಲಿಯೇ ನಿಂತನು. ಆ ಸಮಯದಲ್ಲಿ ಗದಾಪಾಣಿಯಾದ ವಿಭೀಷಣನೂ ಸಹ ತನ್ನ ನಾಲ್ವರು ನಂಬುಗೆಯ ಮಂತ್ರಿಗಳಿಂದ ರಾಮಪಾರ್ಶ್ವದಲ್ಲಿಯೇ ನಿಂತನು. ॥೨೯–೩೦॥ ಗಜ, ಗವಯ, ಶರಭ, ಗಂಧಮಾದನರು, ಸಮಸ್ತ ದಿಕ್ಕುಗಳಲ್ಲಿಯೂ ಸಂಚರಿಸುತ್ತಿದ್ದ ವಾನರಸೇನೆಯನ್ನು ಸಂರಕ್ಷಿಸುತ್ತಿದ್ದರು. ಆ ಸಮಯದಲ್ಲಿ ರಾಕ್ಷಸಾಧಿಪತಿಯಾದ ರಾವಣಾಸುರನು ಮಹಾ ಕೋಪದಿಂದ ವ್ಯಾಪ್ತವಾದ ಮನಸ್ಸುಳ್ಳವನಾಗಿ ಕೂಡಲೇ ಯುದ್ಧಕ್ಕೆ ಹೊರಡಿರೆಂದು ತನ್ನ ಸಮಸ್ತ ಸೇನೆಯವರಿಗೂ ಅಪ್ಪಣೆ ಮಾಡಿದನು. ರಾವಣನ ಮುಖದಿಂದ ಈ ಆಜ್ಞೆಯು ಹೊರಬಿದ್ದೊಡನೆಯೇ ಅದನ್ನು ಕೇಳಿ ರಾಕ್ಷಸರೆಲ್ಲರೂ ಮಹಾ ಭಯವಾಗುವಂತೆ ಸಿಂಹನಾದಗಳನ್ನು ಮಾಡುತ್ತ ಲಂಕಾನಗರದಲ್ಲೆಲ್ಲಾ ಸಂಚರಿಸಲುಪಕ್ರಮಿಸಿದರು. ಆಮೇಲೆ ಚಂದ್ರನಂತೆ ಬಹಳ ಬೆಳ್ಳ

ಹೇಮಕೋಣಾಹತಾ ಭೀಮಾ ರಾಕ್ಷಸಾನಾಂ ಸಮಂತತಃ || ೩೪ || ವಿನೇದುಶ್ಚ ಮಹಾಘೋಷಾಃ ಶಂಖಾಃ ಶತಸಹಸ್ರಶಃ | ರಾಕ್ಷಸಾನಾಂ ಸುಘೋರಾಣಾಂ ಮುಖಮಾರುತಪೂರಿತಾಃ || ೩೫ || ತೇ ಬಭುಃ ಶುಭನೀಲಾಂಗಾಸ್ಸಶಂಖಾ ರಜನೀಚರಾಃ | ವಿದ್ಯುನ್ಮಂಡಲಸನ್ನದ್ಧಾಸ್ಸಬಲಾಕಾ ಇವಾಂಬುದಾಃ || ೩೬ || ನಿಷ್ಪೇತಂತಿ ತತಸ್ಸೈನ್ಯಾ ಹೃಷ್ಟಾ ರಾವಣಚೋದಿತಾಃ | ಸಮಯೇ ಪೂರ್ಯಮಾಣಸ್ಯ ವೇಗಾ ಇವ ಮಹೋದಧೇಃ || ೩೭ || ತತೋ ವಾನರಸೈನ್ಯೇನ ಮುಕ್ತೋ ನಾದಸ್ಸಮಂತತಃ | ಮಲಯಃ ಪೂರಿತೋ ಯೇನ ಸಸಾನುಪ್ರಸ್ಥಕಂದರಃ || ೩೮ || ಶಂಖದುಂದುಭಿಸಂಘುಷ್ಟಸಿಂಹ

---

ಹೇಮಕೋಣಾಹತಾಃ - ಬಂಗಾರದ ತುಂಡುಗಳಿಂದ ಹೊಡೆಯಲ್ಪಟ್ಟವುಗಳಾಗಿ, ಸಮಂತತಃ - ಎಲ್ಲಾ ಕಡೆಯಲ್ಲಿಯೂ, ಪ್ರಚೋದಿತಾಃ - ಪ್ರೇರೇಪಿಸಲ್ಪಟ್ಟವುಗಳಾಗಿ, ವಿನೇದುಃ - ಧ್ವನಿಗೊಂಡವು. || ೩೪ || ಸುಘೋರಾಣಾಂ - ಬಹಳ ಭಯಂಕರರಾದ, ರಾಕ್ಷಸಾನಾಂ - ರಕ್ಕಸರ, ಮುಖ....ತಾಃ - ಮುಖದ ಉಸಿರುಗಳಿಂದ ತುಂಬಿಸಲ್ಪಟ್ಟವುಗಳಾಗಿ, ಮಹಾಘೋಷಾಃ - ಮಹಾ ಧ್ವನಿಗಳುಳ್ಳ, ಶತಸಹಸ್ರಶಃ - ನೂರುಸಾವಿರಗಳ, ಶಂಖಾಶ್ಚ ಶಂಖಗಳೂ, ವಿನೇದುಃ ಧ್ವನಿಗೊಂಡವು. || ೩೫ || ಶುಭನೀಲಾಂಗಾಃ- ಒಳ್ಳೇ ಕಪ್ಪಾದ ಶರೀರಗಳುಳ್ಳ, ಸಶಂಖಾಃ - ಶಂಖಗಳಿಂದೊಡಗೂಡಿದ, ತೇರಜನೀಚರಾಃ - ಆ ರಕ್ಕಸರು, ವಿದ್ಯು....ದ್ಧಾಃ - ಮಿಂಚುಗಳ ತಂಡಗಳಿಂದ ಕೂಡಿರುವ, ಸಬಲಾಕಾಃ - ನೀರುಕೋಳಿಗಳಿಂದ ಕೂಡಿರುವ, ಅಂಬುದಾ ಇವ - ಮೇಘಗಳಂತೆ, ಬಭುಃ - ಹೊಳೆಯುತ್ತಿದ್ದರು. || ೩೬ || ತತಃ - ಬಳಿಕ, ರಾವಣಚೋದಿತಾಃ - ರಾವಣಾಸುರನಿಂದ ಆಜ್ಞಪ್ತರಾದ, ಹೃಷ್ಟಾಃ - ಸಂತೋಷಗೊಂಡವರಾದ, ಸೈನ್ಯಾಃ - ಸೇನಾಜನರು, ಸಮಯೇ ಚಂದ್ರೋದಯ ಕಾಲದಲ್ಲಿ, ಪೂರ್ಯಮಾಣಸ್ಯ ತುಂಬಿಸಲ್ಪಡುತ್ತಿರುವ, ಮಹೋದಧೇಃ - ಕಡಲಿನ, ವೇಗಾ ಇವ - ವೇಗಗಳಂತೆ, ನಿಷ್ಪೇತಂತಿ-ಹೊರಟುಬಂದರು. ||೩೭|| ತತಃ - ಬಳಿಕ, ಯೇನ - ಯಾವ ಧ್ವನಿಯಿಂದ, ಸಸಾ....ರಃ - ದೊಡ್ಡ ಜರಿಗಳೂ ಚಿಕ್ಕ ಪ್ರದೇಶಗಳೂ ಗುಹೆಗಳಿಂದೊಡಗೂಡಿದ, ಮಲಯಃ - ಮಲಯಪರ್ವತವೂ, ಪೂರಿತಃ - ತುಂಬಿಸಲ್ಪಟ್ಟಿತೋ, ಸಃನಾದಃ ಅಂಥಾ ಕೋಲಾಹಲಧ್ವನಿಯು, ವಾನರಸೈನ್ಯೇನ - ಕಪಿಸೈನ್ಯದಿಂದ, ಸಮಂತತಃ - ಎಲ್ಲಾ ಕಡೆಯಲ್ಲಿಯೂ, ಮುಕ್ತಃ-ಬಿಡಲ್ಪಟ್ಟಿತು. ||೩೮|| ಶಂಖ....ಷ್ಟಃ-ಶಂಖಗಳ ಧ್ವನಿಗಳಿಂದಲೂ, ದುಂದುಭಿಗಳ ಧ್ವನಿಗಳಿಂದಲೂ ಕೂಡಿರುವ, ತರಸ್ವಿನಾಂ - ಬಲವಂತರ, ಸಿಂಹನಾದಃ - ಸಿಂಹನಾದವು,

---

ಗಿರುವ ರಣಭೇರಿಗಳು ಸುವರ್ಣದಂಡತಾಡಿತಗಳಾಗಿ ಭಯಂಕರವಾಗಿ ಮೊಳಗಲಾರಂಭಿಸಿದುವು. ರಣಭೇರೀತಾಡನವಾದೊಡನೆಯೇ ಮಹಾ ಭಯಂಕರರಾದ ರಾಕ್ಷಸರ ಮುಖವಾಯುವಿನಿಂದ ಪೂರಿತವಾದ ಅನೇಕ ಸಹಸ್ರ ಶಂಖಗಳ ಭೀಕರನಾದವು ಹೊರಟಿತು. ||೩೧-೩೫|| ಅದೇ ಸಮಯದಲ್ಲಿಯೇ ಆಭರಣಕಾಂತಿಗಳಿಂದ ವ್ಯಾಪ್ತವಾದ ಶರೀರಗಳುಳ್ಳವರೂ, ಶಂಖಗಳೊಡಗೂಡಿದವರೂ ಆದ ರಾಕ್ಷಸರು ಮಿಂಚಿನಿಂದಲೂ, ಸಾರಸಗಳಿಂದಲೂ ಕೂಡಿದ ಮೇಘಗಳಂತೆ ಪ್ರಕಾಶಿಸುತ್ತ ಹೊರಟುಬಂದರು. ರಾವಣಾಸುರನಿಂದ ಪ್ರೇರೇಪಿತವಾದ ಆ ರಾಕ್ಷಸಸೇನೆಯೆಲ್ಲವೂ ಪ್ರಳಯಕಾಲದಲ್ಲಿಯ ಸಮುದ್ರದ ವೇಗದಿಂದ ಮುಂದೆ ನುಗ್ಗಿತು. ಆ ಸಮಯದಲ್ಲಿಯೇ ವಾನರಸೇನೆಯಿಂದ ಹೊರಟ ಸಿಂಹನಾದವಾದರೋ ಮಲಯಪರ್ವತದಲ್ಲಿರುವ ಸಮಸ್ತ ಜರಿಗಳಲ್ಲಿಯೂ ವ್ಯಾಪಿಸಿತು. ಮಹಾ ಬಲಶಾಲಿಗಳಾದ ರಾಕ್ಷಸರ ಶಂಖಧ್ವನಿಗೂ, ಸಿಂಹನಾದಗಳೂ, ಭೂಮ್ಯಂತರಿಕ್ಷಗಳನ್ನೂ, ಸಮುದ್ರಗಳನ್ನೂ

ನಾದಸ್ತ್ವರಸ್ವಿನಾಂ । ಪೃಥಿವೀಂಚಾಂತರಿಕ್ಷಂಚ ಸಾಗರಂಚೈವ ನಾದಯನ್ ॥ ೩೯ ॥ ಗಜಾನಾಂ ಬೃಂಹಿತೈಸ್ಸಾರ್ಧಂ ಹಯಾನಾಂ ಹೇಷಿತೈರಪಿ । ರಥಾನಾಂ ನೇಮಿ ಘೋಷೈಶ್ಚ ರಕ್ಷಸಾಂ ವದನಸ್ವನಃ ॥ ೪೦ ॥ ಏತಸ್ಮಿನ್ನಂತರೇ ಘೋರಸ್ಸಂಗ್ರಾಮ ಸ್ಸಮವರ್ತತ । ರಕ್ಷಸಾಂ ವಾನರಾಣಾಂಚ ಯಥಾ ದೇವಾಸುರೇ ಪುರಾ ॥ ೪೧ ॥ ತೇ ಗದಾಭಿಃ ಪ್ರದೀಪ್ತಾಭಿಃ ಶಕ್ತಿಶೂಲಪರಶ್ವಥೈಃ । ನಿಜಘ್ನುರ್ವಾನರಾನ್ ಘೋರಾಃ ಕಥಯಂತಸ್ಸ್ವವಿಕ್ರಮಾನ್ ॥ ೪೨ ॥ ವಾನರಾಶ್ಚ ಮಹಾವೀರ್ಯಾ ರಾಕ್ಷಸಾನ್ ಜಘ್ನು ರಾಹವೇ । "ಜಯತ್ಯತಿಬಲೋ ರಾಮೋ ಲಕ್ಷ್ಮಣಶ್ಚ ಮಹಾಬಲಃ । ರಾಜಾ ಜಯತಿ ಸುಗ್ರೀವ" ಇತಿಶಬ್ದೋ ಮಹಾನಭೂತ್ ॥ ೪೩ ॥ "ರಾಜನ್! ಜಯ

---

ಪೃಥಿವೀಂಚ - ನೆಲವನ್ನೂ, ಅಂತರಿಕ್ಷಂಚ - ಆಕಾಶವನ್ನೂ, ಸಾಗರಂಚೈವ - ಕಡಲನ್ನೂ, ನಾದಯನ್- ಧ್ವನಿಗೊಳಿಸುತ್ತ, ಗಜಾನಾಂ - ಆನೆಗಳ, ಬೃಂಹಿತೈಸ್ಸಾರ್ಧಂ - ಬೃಂಹಿತ ಧ್ವನಿಗಳೊಡನೆಯೂ, ಹಯಾನಾಂ-ಕುದುರೆಗಳ, ಹೇಷಿತೈರಪಿ-ಧ್ವನಿಗಳೊಡನೆಯೂ, ರಥಾನಾಂ-ತೇರುಗಳ, ನೇಮಿಘೋಷೈಶ್ಚ- ಭಂಡಿಗಳ ಚಕ್ರಧ್ವನಿಗಳೊಡನೆಯೂ, ರಕ್ಷಸಾಂಚ - ರಕ್ಕಸರ, ವದನಸ್ವನಃ - ಮುಖಧ್ವನಿಯು, ಏತೇ - ಈ ಧ್ವನಿಗಳು, ಅನಾದಯನ್ - ಘೋಷಮಾಡಿದವು. ॥ ೩೯-೪೦ ॥ ಏತಸ್ಮಿನ್ನಂತರೇ - ಈ ಮಧ್ಯಕಾಲದಲ್ಲಿ, ರಕ್ಷಸಾಂ - ರಾಕ್ಷಸರಿಗೂ, ವಾನರಾಣಾಂಚ - ಕಪಿಗಳಿಗೂ, ಪುರಾ - ಪೂರ್ವದಲ್ಲಿ, ದೇವಾಸುರೇಯಥಾ-ದೇವರಾಕ್ಷಸಯುದ್ಧದಲ್ಲಿ ಎಂತೋ ಅಂತು, ಘೋರಃ-ಭಯಂಕರವಾದ, ಸಂಗ್ರಾಮಃ- ಕಾಳೆಗವು, ಸಮವರ್ತತ-ಪ್ರಾರಂಭವಾಯಿತು. ॥೪೧॥ ಘೋರಾಃ-ಭಯಂಕರರಾದ, ತೇ-ಆ ರಕ್ಕಸರು, ಪ್ರದೀಪ್ತಾಭಿಃ - ಹೊಳೆಯುತ್ತಿರುವ, ಗದಾಭಿಃ - ಗದಾಯುಧಗಳಿಂದ, ಶಕ್ತಿ....ಥೈಃ - ಶಕ್ತ್ಯಾಯುಧ ಗಳಿಂದಲೂ, ತ್ರಿಶೂಲಗಳಿಂದಲೂ, ಗಂಡುಗೊಡಲಿಗಳಿಂದಲೂ, ಸ್ವವಿಕ್ರಮಾನ್-ತಮ್ಮ ತಮ್ಮ ಪರಾಕ್ರಮ ಗಳನ್ನು, ಕಥಯಂತಃ-ಹೇಳುತ್ತ, ವಾನರಾನ್-ಕಪಿಗಳನ್ನು, ನಿಜಘ್ನುಃ-ಹೊಡೆದರು. ॥೪೨॥ ರಾಜಾ- ಅರಸಾದ, ಸುಗ್ರೀವಃ - ಸುಗ್ರೀವನು, ಜಯತೀತಿ - ಜಯಿಸುವನೆಂದು, ಮಹಾನ್ - ದೊಡ್ಡದಾದ, ಶಬ್ದಃ - ಧ್ವನಿಯು, ಅಭೂತ್ - ಆಯಿತು. ॥ ೪೩ ॥ ಹೇ ರಾಜನ್ - ಎಲೈ ಅರಸೇ, ಜಯಜಯೇತಿ - ಜಯಿಸು ಜಯಿಸೆಂದು, ಉಕ್ತ್ವಾ - ಹೇಳಿ, ತತಃ - ಬಳಿಕ, ಸ್ವಸ್ವನಾಮಕಥಾಂ - ತಮ್ಮ ತಮ್ಮ,

---

ವ್ಯಾಪಿಸಿ ಪ್ರತಿಧ್ವನಿತವಾಗುತ್ತಿದ್ದುವು. ಆ ಸಮಯದಲ್ಲಿಯೇ ಆನೆಗಳ ಘೀಂಕಾರ ಧ್ವನಿಯೂ, ಕುದುರೆಗಳ ಹೇಷಾರವವೂ, ರಥಗಳ ನೇಮಿಘೋಷವೂ ಅಪರಿಮಿತವಾಗಿ ಹೊರ ಹೊರಟವು. ॥ ೩೯—೪೦ ॥ ಆಗ ಮಹಾ ಭಯಂಕರವಾದ ಯುದ್ಧವು ಎಲ್ಲೆಡೆಗಳಲ್ಲಿಯೂ ಮೊದಲಾಯಿತು. ಆ ಯುದ್ಧವು ಪೂರ್ವದಲ್ಲಿ ದೇವದಾನವರಿಗೆ ಸಂಭವಿಸಿದ ಮಹಾ ಯುದ್ಧದಂತೆ ಮಹಾ ಭಯಂಕರವಾಗಿದ್ದಿತು. ಆ ಯುದ್ಧಸಮಯದಲ್ಲಿ ಭಯಂಕರರಾದ ಆ ರಾಕ್ಷಸರು ತಮ್ಮ ತಮ್ಮ ಪರಾಕ್ರಮಗಳನ್ನು ಹೇಳಿಕೊಂಡು ಮಹಾ ಪ್ರಕಾಶಮಾನವಾ ಗಿರುವ ಗದೆಗಳಿಂದಲೂ, ಶಕ್ತ್ಯಾಯುಧಗಳಿಂದಲೂ, ಗಂಡುಗೊಡಲಿಗಳಿಂದಲೂ ಮುಂದೆ ನುಗ್ಗಿ ವಾನರರೆಲ್ಲರನ್ನೂ ಬಗೆಬಗೆಯಾಗಿ ಪ್ರಹರಿಸಿದರು. ವಾನರರೂ ಸಹ ವಾನರರಾಜ ನಾದ ಸುಗ್ರೀವನೂ, ಶ್ರೀರಾಮಲಕ್ಷ್ಮಣರೂ ಜಯಶೀಲರಾಗಲೆಂಬ ಮಹತ್ತರ ಸಿಂಹನಾದ ಗಳನ್ನು ಮಾಡಿ, "ವಾನರೇಶ್ವರ! ಸುಗ್ರೀವ! ಜಯಶೀಲನಾಗು" ಎಂದು ಕೂಗಿಡುತ್ತ ತಮ್ಮ ತಮ್ಮ ಹೆಸರುಗಳನ್ನೂ ಪರಾಕ್ರಮಗಳನ್ನೂ ಸಾರುತ್ತ ವೃಕ್ಷಗಳಿಂದಲೂ, ಪರ್ವತಾಗ್ರ

ಜಯೇ" ತ್ಯುಕ್ತ್ವಾ ಸ್ವ ಸ್ವ ನಾಮಕಥಾಂ ತತಃ । ತಥಾ ವೃಕ್ಷೈರ್ಮಹಾಕಾಯಾಃ ಪರ್ವತಾಗ್ರೈಶ್ಚ ವಾನರಾಃ । ನಿಜಘ್ನುಸ್ತಾನಿ ರಕ್ಷಾಂಸಿ ನಖೈರ್ದಂತೈಶ್ಚ ವೇಗಿತಾಃ ॥ ೪೪ ॥ ರಾಕ್ಷಸಾಸ್ತ್ವಪರೇ ಭೀಮಾಃ ಪ್ರಾಕಾರಸ್ಥಾ ಮಹೀಗತಾನ್ । ಭಿಂಡಿಪಾಲೈಶ್ಚ ಖಡ್ಗೈಶ್ಚ ಶೂಲೈಶ್ಚೈವ ವ್ಯದಾರಯನ್ ॥ ೪೫ ॥ ವಾನರಾಶ್ಚಾಪಿ ಸಂಕ್ರುದ್ಧಾಃ ಪ್ರಾಕಾರಸ್ಥಾನ್ ಮಹೀಗತಾಃ । ರಾಕ್ಷಸಾನ್ ಪಾತಯಾಮಾಸುಸ್ಸಮಾಪ್ಲುತ್ಯ ಪ್ಲವಂಗಮಾಃ ॥

ಸ ಸಂಪ್ರಹಾರಸ್ತುಮುಲೋ ಮಾಂಸಶೋಣಿತಕರ್ದಮಃ ।
ರಕ್ಷಸಾಂ ವಾನರಾಣಾಂಚ ಸಂಬಭೂವಾದ್ಭುತೋಪಮಃ ॥ ೪೭ ॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ದ್ವಿಚತ್ವಾರಿಂಶಸ್ಸರ್ಗಃ

---

ಹೆಸರುಗಳ ಉಚ್ಚಾರಣವನ್ನು, ಉಕ್ತ್ವಾ - ಹೇಳಿ, ತಥಾ - ಹಾಗೆಯೇ, ಮಹಾಕಾಯಾಃ - ಮಹಾ ಶರೀರಗಳುಳ್ಳ, ವಾನರಾಃ - ಕಪಿಗಳು, ವೇಗಿತಾಃ - ವೇಗವುಳ್ಳವರಾಗಿ, ವೃಕ್ಷೈಃ - ಗಿಡಗಳಿಂದಲೂ, ಪರ್ವತಾಗ್ರೈಶ್ಚ - ಬೆಟ್ಟದ ಶಿಖರಗಳಿಂದಲೂ, ನಖೈಃ - ಉಗುರುಗಳಿಂದಲೂ, ದಂತೈಶ್ಚ - ಹಲ್ಲುಗಳಿಂದಲೂ, ತಾನಿರಕ್ಷಾಂಸಿ - ಆ ರಕ್ಕಸರನ್ನು, ನಿಜಘ್ನುಃ - ಹೊಡೆದರು. ॥ ೪೪ ॥ ಭೀಮಾಃ - ಭಯಂಕರರಾದ, ಅಪರೇರಾಕ್ಷಸಾಃ - ಮತ್ತೂ ಕೆಲರಾಕ್ಷಸರು, ಪ್ರಾಕಾರಸ್ಥಾಃ - ಕೋಟೆಯ ಮೇಲ್ಗಡೆ ನಿಂತು, ಮಹೀಗತಾನ್ - ನೆಲದಲ್ಲಿರುವ ಕಪಿಗಳನ್ನು, ಭಿಂಡಿಪಾಲೈಶ್ಚ - ಭಿಂಡಿಪಾಲಾಯುಧಗಳಿಂದಲೂ, ಖಡ್ಗೈಶ್ಚ - ಕತ್ತಿಗಳಿಂದಲೂ, ಶೂಲೈಶ್ಚ - ಶೂಲಗಳಿಂದಲೂ, ವ್ಯದಾರಯನ್ - ಶೀಳಿದರು. ॥ ೪೫ ॥ ಮಹೀಗತಾಃ - ಭೂಮಿಯಮೇಲೆ ನಿಂತಿರುವ, ವಾನರಾಶ್ಚಾಪಿ - ಕಪಿಗಳೂ, ಸಂಕ್ರುದ್ಧಾಃ - ಕೋಪಿಸ್ಥರಾಗಿ, ಸಮಾಪ್ಲುತ್ಯ - ಹಾರಿ, ಪ್ರಾಕಾರಸ್ಥಾನ್ - ಕೋಟೆಯ ಮೇಲಿರುವ, ರಾಕ್ಷಸಾನ್ - ರಕ್ಕಸರನ್ನು, ಪಾತಯಾಮಾಸುಃ - ಕೆಡುಹಿದರು. ॥ ೪೬ ॥ ರಾಕ್ಷಸಾಂ-ರಾಕ್ಷಸರಿಗೂ, ವಾನರಾಣಾಂಚ - ಕಪಿಗಳಿಗೂ, ತುಮುಲಃ - ಸಂಕುಲವಾದ, ಮಾಂಸ....ಮಃ - ಮಾಂಸವೂ, ರಕ್ತವೂ ಕೆಸರಾಗುಳ್ಳ, ಸಸಂಪ್ರಹಾರಃ - ಆ ಕಾಳಗವು, ಅದ್ಭುತೋಪಮಃ - ದುರ್ಲಭವಾದ ಸಾಮ್ಯವುಳ್ಳದ್ದು, ಸಂಬಭೂವ - ಆಯಿತು. ॥ ೪೭ ॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ದ್ವಿಚತ್ವಾರಿಂಶಸ್ಸರ್ಗಃ.

---

ಗಳಿಂದಲೂ, ಉಗುರುಗಳಿಂದಲೂ, ದಂತಗಳಿಂದಲೂ ಮಹಾ ವೇಗದಿಂದ ಮುಂದೆ ನುಗ್ಗಿ ರಾಕ್ಷಸರೆಲ್ಲರನ್ನೂ ಬಲವಾಗಿ ಪ್ರಹರಿಸಿದರು. ಕೆಳಭಾಗದಲ್ಲಿ ಸಂಚರಿಸುತ್ತಿದ್ದ ಆ ವಾನರರು ಬಹಳ ಕೋಪಾಟೋಪವುಳ್ಳವರಾಗಿ ಪ್ರಾಕಾರಗಳ ಮೇಲೆ ಹಾರಿ ಅಲ್ಲಿದ್ದ ರಾಕ್ಷಸರೆಲ್ಲರನ್ನೂ ಕೆಳಕ್ಕೆ ಕೆಡವಿದರು. ಅಂತೆಯೇ ಪ್ರಾಕಾರಗಳಮೇಲೆ ಸಂಚರಿಸುತ್ತಿದ್ದ ರಾಕ್ಷಸರೂ ಸಹ, ಭಿಂಡಿಪಾಲಗಳಿಂದಲೂ, ಖಡ್ಗಗಳಿಂದಲೂ, ಶೂಲಗಳಿಂದಲೂ ಕೆಳಗಿದ್ದ ವಾನರರನ್ನು ಬಲವಾಗಿ ಪ್ರಹರಿಸಿದರು. ಹೀಗೆ ರಾಕ್ಷಸರಿಗೂ, ವಾನರರಿಗೂ ಮಹದಾಶ್ಚರ್ಯಕರವಾದುದೂ, ಮಾಂಸರಕ್ತಗಳಿಂದ ವ್ಯಾಪ್ತವಾದುದೂ ಅದ್ಭುತೋಪಮವಾದುದೂ ಆದ ಸಂಕುಲಯುದ್ಧವು ನಡೆಯಲು ಮೊದಲಾಯಿತು. ॥ ೪೧–೪೭ ॥

ಇಂತಿದು ರಾಮರಾವಣ ಯುದ್ಧಾರಂಭವೆಂಬ ನಲವತ್ತೆರಡನೆಯ ಸರ್ಗವು
ಸಮಾಪ್ತವಾದುದು.

# ಯುದ್ಧಕಾಂಡೇ ತ್ರಿಚತ್ವಾರಿಂಶಸ್ಸರ್ಗಃ

---

**ಯುಧ್ಯತಾಂ ತು ತತಸ್ತೇಷಾಂ ವಾನರಾಣಾಂ ಮಹಾತ್ಮನಾಂ । ರಕ್ಷಸಾಂ ಸಂಬಭೂವಾಽಥ ಬಲಕೋಪಸ್ಸುದಾರುಣಃ ॥ ೧ ॥ ತೇ ಹಯೈಃ ಕಾಂಚನಾಪೀಡೈರ್ಧ್ವಜೈಶ್ಚಾಗ್ನಿಶಿಖೋಪಮೈಃ । ರಥೈಶ್ಚಾದಿತ್ಯಸಂಕಾಶೈಃ ಕವಚೈಶ್ಚ ಮನೋರಮೈಃ ॥ ೨ ॥ ನಿರ್ಯಯೂ ರಾಕ್ಷಸವ್ಯಾಘ್ರಾ ನಾದಯಂತೋ ದಿಶೋದಶ । ರಾಕ್ಷಸಾ ಭೀಮಕರ್ಮಾಣೋ ರಾವಣಸ್ಯ ಜಯೈಷಿಣಃ ॥ ೩ ॥ ವಾನರಾಣಾಮಪಿ ಚಮೂಃ ಬೃಹತೀ ಜಯಮಿಚ್ಛತಾಂ । ಅಭ್ಯಧಾವತ ತಾಂ ಸೇನಾಂ ರಕ್ಷಸಾಂ ಕಾಮರೂಪಿಣಾಂ**

---

ತತಃ - ಬಳಿಕ, ಯುಧ್ಯತಾಂ - ಯುದ್ಧಮಾಡುತ್ತಿರುವ, ಮಹಾತ್ಮನಾಂ - ಮಹಾ ಧೈರ್ಯಶಾಲಿಗಳಾದ, ತೇಷಾಂವಾನರಾಣಾಂ - ಆ ಕಪಿಗಳಿಗೂ, ಅಥ - ಬಳಿಕ, ರಕ್ಷಸಾಂ - ರಾಕ್ಷಸರಿಗೂ, ಸುದಾರುಣಃ - ಬಹಳ ಕ್ರೂರವಾದ, ಬಲಕೋಪಃ - ಪರಸ್ಪರ ಸೈನ್ಯಗಳಲ್ಲಿ ಆಗ್ರಹವು, ಸಂಬಭೂವ - ಆಯಿತು. ॥ ೧ ॥ ತೇರಾಕ್ಷಸವ್ಯಾಘ್ರಾಃ - ಆ ರಾಕ್ಷಸಶ್ರೇಷ್ಠರು, ಕಾಂಚನಾಪೀಡೈಃ - ಚಿನ್ನದ ಒಡವೆಗಳುಳ್ಳ, ಹಯೈಃ - ಕುದುರೆಗಳಿಂದಲೂ, ಅಗ್ನಿಶಿಖೋಪಮೈಃ - ಬೆಂಕಿಯ ಜ್ವಾಲೆಗಳಿಗೆ ಸಮಾನವಾದ, ಧ್ವಜೈಶ್ಚ - ಪತಾಕೆಗಳಿಂದಲೂ, ಆದಿತ್ಯಸಂಕಾಶೈಃ - ಸೂರ್ಯನಿಗೆ ಸಮಾನ ಪ್ರಕಾಶವುಳ್ಳ, ರಥೈಶ್ಚ - ರಥಗಳಿಂದಲೂ, ಮನೋರಮೈಃ - ಮನೋಹರಗಳಾದ, ಕವಚೈಶ್ಚ - ಕವಚಗಳಿಂದಲೂ, ದಶದಿಶಃ - ಹತ್ತುದಿಕ್ಕುಗಳನ್ನೂ, ನಾದಯಂತಃ - ಧ್ವನಿಗೊಳಿಸುತ್ತಿರುವರಾಗಿ, ಭೀಮಕರ್ಮಾಣಃ - ಭಯಂಕರ ವ್ಯಾಪಾರವುಳ್ಳವರಾಗಿ, ರಾಕ್ಷಸಾಃ-ಸಾಧಾರಣ ರಕ್ಕಸರೂ, ರಾವಣಸ್ಯ-ರಾವಣಾಸುರನಿಗೆ, ಜಯೈಷಿಣಃ-ಜಯವನ್ನು ಅಪೇಕ್ಷಿಸುತ್ತಿರುವವರಾಗಿ, ನಿರ್ಯಯುಃ - ಹೊರಟರು. ॥ ೨-೩ ॥ ಜಯಂ - ರಾಮ ಜಯವನ್ನು, ಇಚ್ಛತಾಂ - ಇಚ್ಛಿಸುತ್ತಿರುವ, ವಾನರಾಣಾಂ - ಕಪಿಗಳ, ಬೃಹತೀ - ದೊಡ್ಡದಾದ, ಚಮೂರಪಿ-ಸೈನ್ಯವೂ, ಕಾಮರೂಪಿಣಾಂ-ಕಾಮರೂಪಿಗಳಾದ, ರಕ್ಷಸಾಂ ರಕ್ಕಸರ, ತಾಂಸೇನಾಂ-ಆ ಸೈನ್ಯವನ್ನು ಕುರಿತು, ಅಭ್ಯಧಾವತ - ಅಭಿಮುಖವಾಗಿ ಬಂದಿತು. ॥ ೪ ॥ ಏತಸ್ಮಿನ್ನಂತರೇ - ಈ ಮಧ್ಯಕಾಲದಲ್ಲಿ, ಅನ್ಯೋನ್ಯಂ-ಪರಸ್ಪರವಾಗಿ, ಅಭಿಧಾವತಾಂ-ಓಡಿ ಮೇಲೆಬರುತ್ತಿರುವ, ತೇಷಾಂ

---

ಹೀಗೆ ಪರಸ್ಪರವಾಗಿ ಯುದ್ಧಮಾಡುತ್ತಿರುವ ಮಹಾ ಬಲಪರಾಕ್ರಮಶಾಲಿಗಳಾದ ರಾಕ್ಷಸರಿಗೂ, ವಾನರರಿಗೂ ಅತಿ ಭಯಂಕರವಾದ ಬಲೋದ್ರೇಕವುಂಟಾಯಿತು. ಆಗಲಾ ರಾಕ್ಷಸಶ್ರೇಷ್ಠರು, ಕಾಂಚನಭೂಷಣಭೂಷಿತವಾದ ಕುದುರೆಗಳಿಂದಲೂ, ಅಗ್ನಿಜ್ವಾಲೆಗಳಿಗೆ ಸಮಾನಗಳಾದ ನಿಶಾನಿಗಳಿಂದಲೂ, ಸೂರ್ಯಸಮಾನ ಪ್ರಕಾಶಮಾನಗಳಾದ ರಥಗಳಿಂದಲೂ, ಮನೋಹರವಾದ ಕವಚಗಳಿಂದಲೂ ನುಗ್ಗಿಬಂದರು. ಇವರೆಲ್ಲರೂ ತಮ್ಮ ಪ್ರಭುವಾದ ರಾವಣನಿಗೆ ಜಯವನ್ನು ಕೋರಿ ಮಹಾ ಸಿಂಹನಾದಗಳನ್ನು ಮಾಡುತ್ತಿದ್ದರು. ಇವರಲ್ಲಿ ಒಬ್ಬೊಬ್ಬರೂ ಮಹಾ ಭಯಂಕರ ಪರಾಕ್ರಮಿಗಳಾದವರು. ಶ್ರೀರಾಮಮೂರ್ತಿಗೆ ಜಯವನ್ನು ಕೋರುತ್ತಿರುವ ಮಹಾ ವಾನರಸೇನೆಯೂ, ಕಾಮರೂಪರಾದ ಆ ರಾಕ್ಷಸರ ಸೇನೆಯ

||೪|| ಏತಸ್ಮಿನ್ನಂತರೇ ತೇಷಾಮನ್ಯೋನ್ಯಮಭಿಧಾವತಾಂ । ರಕ್ಷಸಾಂ ವಾನರಾಣಾಂಚ ದ್ವಂದ್ವಯುದ್ಧಮವರ್ತತ ||೫|| ಅಂಗದೇನೇಂದ್ರಜಿತ್ಸಾರ್ಧಂ ವಾಲಿಪುತ್ರೇಣ ರಾಕ್ಷಸಃ। ಅಯುಧ್ಯತ ಮಹಾತೇಜಾಸ್ತ್ರ್ಯಂಬಕೇಣ ಯಥಾಂತಕಃ ||೬|| ಪ್ರಜಂಘೇನ ಚ ಸಂಪಾತಿರ್ನಿತ್ಯಂ ದುರ್ಮರ್ಷಣೋ ರಣೇ । ಜಂಬುಮಾಲಿನಮಾರಬ್ಧೋ ಹನುಮಾನಪಿ ವಾನರಃ ||೭|| ಸಂಗತಸ್ತು ಮಹಾಕ್ರೋಧೋ ರಾಕ್ಷಸೋ ರಾವಣಾನುಜಃ । ಸಮರೇ ತೀಕ್ಷ್ಣವೇಗೇನ ಮಿತ್ರಘ್ನೇನ ವಿಭೀಷಣಃ ||೮|| ತಪನೇನ ಗಜಸ್ಸಾರ್ಧಂ ರಾಕ್ಷಸೇನ ಮಹಾಬಲಃ । ನಿಕುಂಭೇನ ಮಹಾತೇಜಾ ನೀಲೋಽಪಿ ಸಮಯುಧ್ಯತ

---

ರಕ್ಷಸಾಂ-ಆ ರಕ್ಕಸರಿಗೂ, ವಾನರಾಣಾಂಚ-ವಾನರರಿಗೂ, ದ್ವಂದ್ವಯುದ್ಧಂ-ದ್ವಂದ್ವಯುದ್ಧವು, ಅವರ್ತತ - ಪ್ರವರ್ತಿಸಿತು. || ೫ || ಮಹಾತೇಜಾಃ - ಮಹಾ ಪರಾಕ್ರಮಶಾಲಿಯಾದ, ಇಂದ್ರಜಿತ್ - ಇಂದ್ರಜಿತ್ತೆಂಬ, ರಾಕ್ಷಸಃ - ರಕ್ಕಸನು, ತ್ರ್ಯಂಬಕೇಣ - ಈಶ್ವರನೊಡನೆ, ಅಂತಕೋಯಥಾ - ಯಮನಂತೆ, ವಾಲಿಪುತ್ರೇಣ - ವಾಲಿಯ ಮಗನಾದ, ಅಂಗದೇನಸಾರ್ಧಂ - ಅಂಗದನೊಡನೆ, ಅಯುಧ್ಯತ-ಕಾಳೆಗ ಮಾಡಿದನು. || ೬ || ರಣೇ-ಕಾಳೆಗದಲ್ಲಿ, ನಿತ್ಯಂ-ನಿರಂತರವೂ, ದುರ್ಮರ್ಷಣಃ - ಸಹಿಸಲಸಾಧ್ಯನಾದ, ಸಂಪಾತಿಃ - ಸಂಪಾತಿಯೆಂಬ ವಿಭೀಷಣನ ಮಂತ್ರಿಯು, ಪ್ರಜಂಘೇನಚ - ಪ್ರಜಂಘನೊಡನೆ, ಅಯುಧ್ಯತ - ಯುದ್ಧ ಮಾಡಿದನು, ಹನೂಮಾ್ - ಆಂಜನೇಯನೆಂಬ, ವಾನರಃ- ಕಪಿಯು, ಜಂಬುಮಾಲಿನಂ - ಜಂಬುಮಾಲಿ ಎಂಬ ರಕ್ಕಸನನ್ನು, ಹಂತುಂ - ಹೊಡೆಯಲು, ಆರಬ್ಧಃ - ಆರಂಭಿಸಿದನು. ||೭|| ಸಮರೇ - ಕಾಳೆಗದಲ್ಲಿ, ಸುಮಹಾಕ್ರೋಧಃ - ಬಹಳ ಕೋಪವುಳ್ಳ, ರಾವಣಾನುಜಃ - ರಾವಣನಿಗೆ ತಮ್ಮನಾದ, ರಾಕ್ಷಸಃ - ರಕ್ಕಸನಾದ, ವಿಭೀಷಣಃ - ವಿಭೀಷಣನು, ತೀಕ್ಷ್ಣವೇಗೇನ - ತೀಕ್ಷ್ಣವೇಗವುಳ್ಳ, ಮಿತ್ರಘ್ನೇನಸಹ - ಮಿತ್ರಘ್ನನೆಂಬವನೊಡನೆ, ಸಂಗತಃ - ಸೇರಿದನು. ||೮|| ಮಹಾಬಲಃ - ಬಹಳ ಬಲಿಷ್ಠನಾದ, ಗಜಃ - ಗಜನು, ರಾಕ್ಷಸೇನ - ರಾಕ್ಷಸನಾದ, ತಪನೇನಸಾರ್ಧಂ-ತಪನನೆಂಬವನೊಡನೆ, ಮಹಾತೇಜಾಃ-ಬಹಳ ಸಾಮರ್ಥ್ಯವಂತನಾದ, ನೀಲೋಽಪಿ- ನೀಲನೂ, ನಿಕುಂಭೇನ - ನಿಕುಂಭನೊಡನೆ, ಸಮಯುಧ್ಯತ - ಯುದ್ಧ ಮಾಡಿದನು. || ೯ || ವಾನ

---

ರ್ಮೇಲೆ ನುಗ್ಗಿ ಬಂದರು.||೧–೪|| ಹೀಗೆ ಪರಸ್ಪರ ಜಯಾಪೇಕ್ಷೆಯುಳ್ಳವರಾಗಿ ಒಬ್ಬರಮೇಲೊಬ್ಬರು ಅಟ್ಟಿ ಬರುತ್ತಿರುವ ಆ ರಾಕ್ಷಸರಿಗೂ, ವಾನರರಿಗೂ ಸ್ವಲ್ಪಕಾಲದಲ್ಲಿಯೇ ಮಹಾ ಭಯಂಕರ ವಾದ ಸಂಕುಲಯುದ್ಧವು ನಡೆಯಿತು. ಆ ಸಮಯದಲ್ಲಿ ವಾಲಿ ಪುತ್ರನಾದ ಅಂಗದನೊಡನೆ ಇಂದ್ರಜಿತ್ತುವೆಂಬ ರಾಕ್ಷಸೋತ್ತಮನು ಮಹಾ ತೇಜಸ್ವಿಯಾದ ಯಮನು ಪರಮೇಶ್ವರ ನೊಡನೆ ಎಂತೋ ಅಂತು ಯುದ್ಧಮಾಡಿದನು. ವಿಭೀಷಣನ ಮಂತ್ರಿಯೂ, ಶತ್ರುಗಳಿಂದ ಅಜೇಯನೂ ಆದ ಸಂಪಾತಿಯು ಪ್ರಜಂಘನೊಡನೆ ಯುದ್ಧ ಮಾಡಿದನು. ಜಂಬುಮಾಲಿ ಯೆಂಬ ರಾಕ್ಷಸನು ವಾನರೋತ್ತಮನಾದ ಹನುಮಂತನೊಡನೆ ಕಾಳೆಗ ಮಾಡಿದನು. ರಾವಣಾನುಜನೂ, ಮಹಾ ಭಯಂಕರ ಕೋಪವುಳ್ಳವನೂ, ಮಹಾ ವೇಗವುಳ್ಳವನೂ ಆದ ವಿಭೀಷಣನು ರಾಕ್ಷಸೋತ್ತಮನಾದ ಮಿತ್ರಘ್ನನೆಂಬವನೊಡನೆ ಕಾಳೆಗ ಮಾಡಿದನು. ಮಹಾ ಬಲನಾದ ಜವನೆಂಬ ವಾನರಶ್ರೇಷ್ಠನು ತಪನನೆಂಬ ರಾಕ್ಷಸನೊಡನೆಯೂ, ಮಹಾ ತೇಜಸ್ವಿ ಯಾದ ನೀಲನು ನಿಕುಂಭನೊಡನೆಯೂ, ವಾನರೇಶ್ವರನಾದ ಸುಗ್ರೀವನು ಪ್ರಘಸ

॥ ೯ ॥ ವಾನರೇಂದ್ರಸ್ತು ಸುಗ್ರೀವಃ ಪ್ರಘಸೇನ ಸಮಾಗತಃ । ಸಂಗತಸ್ಸಮರೇ ಶ್ರೀಮಾನ್ ವಿರೂಪಾಕ್ಷೇಣ ಲಕ್ಷ್ಮಣಃ ॥ ೧೦ ॥ ಅಗ್ನಿಕೇತುಶ್ಚ ದುರ್ಧರ್ಷೋ ರಶ್ಮಿಕೇತುಶ್ಚ ರಾಕ್ಷಸಃ । ಸುಪ್ತಘ್ನೋ ಯಜ್ಞಕೋಪಶ್ಚ ರಾಮೇಣ ಸಹಸಂಗತಾಃ ॥೧೧॥ ವಜ್ರಮುಷ್ಟಿಸ್ತು ಮೈಂದೇನ ದ್ವಿವಿದೇನಾಶನಿಪ್ರಭಃ । ರಾಕ್ಷಸಾಭ್ಯಾಂ ಸುಘೋರಾಭ್ಯಾಂ ಕಪಿಮುಖ್ಯೌ ಸಮಾಗತೌ ॥ ೧೨ ॥ ವೀರಃ ಪ್ರತಪನೋ ಘೋರೋ ರಾಕ್ಷಸೋ ರಣದುರ್ಧರಃ । ಸಮರೇ ತೀಕ್ಷ್ಣವೇಗೇನ ನಳೇನ ಸಮಯುಧ್ಯತ॥೧೩॥ಧರ್ಮಸ್ಯ ಪುತ್ರೋ ಬಲವಾನ್ಸುಷೇಣ ಇತಿ ವಿಶ್ರುತಃ । ಸವಿದ್ಯುನ್ಮಾಲಿನಾ ಸಾರ್ಧಮಯುಧ್ಯತ ಮಹಾಕಪಿಃ

ರೇಂದ್ರಃ - ವಾನರಾಧಿಪತಿಯಾದ, ಸುಗ್ರೀವಃ - ಸುಗ್ರೀವನು, ಪ್ರಘಸೇನ - ಪ್ರಘಸನೆಂಬವನೊಡನೆ, ಸಮಾಗತಃ - ಸೇರಿದನು, ಸಮರೇ - ಕಾಳಗದಲ್ಲಿ, ಶ್ರೀಮಾನ್ - ಸಂಪದ್ಯುಕ್ತನಾದ, ಲಕ್ಷ್ಮಣಃ - ಲಕ್ಷ್ಮಣನು, ವಿರೂಪಾಕ್ಷೇಣ - ವಿರೂಪಾಕ್ಷನೊಡನೆ, ಸಂಗತಃ - ಸೇರಿದನು. ॥೧೦॥ ದುರ್ಧರ್ಷಃ - ತಿರಸ್ಕರಿಸಲಸಾಧ್ಯನಾದ, ಅಗ್ನಿಕೇತುಃ - ಅಗ್ನಿಕೇತುವು, ರಶ್ಮಿಕೇತುಃ-ರಶ್ಮಿಕೇತುವು ಎಂಬ, ರಾಕ್ಷಸಃ - ರಾಕ್ಷಸನು, ಸುಪ್ತಘ್ನಃ - ಸುಪ್ತಘ್ನನು, ಯಜ್ಞಕೋಪಶ್ಚ - ಯಜ್ಞಕೋಪನೂ ಈ ನಾಲ್ವರೂ, ರಾಮೇಣಸಹ - ಶ್ರೀರಾಮನೊಡನೆ, ಸಂಗತಾಃ - ಸೇರಿದರು. ॥೧೧॥ ವಜ್ರಮುಷ್ಟಿಸ್ತು - ವಜ್ರಮುಷ್ಟಿ ಎಂಬವನೂ, ಮೈಂದೇನ - ಮೈಂದನೊಡನೆಯೂ, ಅಶನಿಪ್ರಭಃ - ಅಶನಿಪ್ರಭನು, ದ್ವಿವಿದೇನ - ದ್ವಿವಿದನೊಡನೆಯೂ, ಸುಘೋರಾಭ್ಯಾಂ - ಬಹಳ ಭಯಂಕರರಾದ, ರಾಕ್ಷಸಾಭ್ಯಾಂ - ವಜ್ರಮುಷ್ಟಿ ಅಶನಿಪ್ರಭರೆಂಬ ರಾಕ್ಷಸರೊಡನೆ, ಕಪಿಮುಖ್ಯೌ - ಮೈಂದನೂ, ದ್ವಿವಿದನೂ ಎಂಬ ವಾನರಮುಖ್ಯರು, ಸಮಾಗತೌ - ಸೇರಿದರು. ॥೧೨॥ ವೀರಃ - ಶೂರನಾದ, ಘೋರಃ - ಭಯಂಕರನಾದ, ರಣದುರ್ಧರಃ - ಕಾಳಗದಲ್ಲಿ ಉದ್ಧತನಾದ, ಪ್ರತಪನಃ - ಪ್ರತಪನನೆಂಬ, ರಾಕ್ಷಸಃ - ರಕ್ಕಸನು, ಸಮರೇ - ಕಾಳಗದಲ್ಲಿ, ತೀಕ್ಷ್ಣವೇಗೇನ - ಬಹಳ ವೇಗವುಳ್ಳ, ನಳೇನ - ನಳನೆಂಬ ವಾನರನೊಡನೆ, ಸಮಯುಧ್ಯತ - ಯುದ್ಧ ಮಾಡಿದನು. ॥೧೩॥ ಧರ್ಮಸ್ಯ-ಯಮಧರ್ಮರಾಯನಿಗೆ, ಪುತ್ರಃ-ಮಗನಾದ, ಬಲವಾನ್ - ಬಲವಂತನಾದ, ಸುಷೇಣ ಇತಿ - ಸುಷೇಣನೆಂದು, ವಿಶ್ರುತಃ - ಪ್ರಸಿದ್ಧನಾದ, ಸಮಹಾಕಪಿಃ - ಆ ಮಹಾವಾನರನು, ವಿದ್ಯುನ್ಮಾಲಿನಾಸಾರ್ಧಂ - ವಿದ್ಯುನ್ಮಾಲಿಯೊಡನೆ, ಅಯುಧ್ಯತ - ಯುದ್ಧ ಮಾಡಿದನು.

ನೆಂಬ ರಾಕ್ಷಸನೊಡನೆಯೂ, ಶ್ರೀಮಂತನಾದ ಲಕ್ಷ್ಮಣಸ್ವಾಮಿಯು ವಿರೂಪಾಕ್ಷನೆಂಬ ರಾಕ್ಷಸನೊಡನೆಯೂ ಯುದ್ಧ ಮಾಡಲುದ್ಯಮಿಸಿದರು. ॥೫-೧೦॥ ಶತ್ರುಗಳಿಂದ ಜಯಿಸಲಸದಳನಾದ ಅಗ್ನಿಕೇತು, ರಶ್ಮಿಕೇತು, ಸುಪ್ತಘ್ನ ಮತ್ತು ಯಜ್ಞಕೋಪ ಎಂಬ ನಾಲ್ವರು ರಾಕ್ಷಸರೂ ಶ್ರೀರಾಮಮೂರ್ತಿಯೊಡನೆ ಯುದ್ಧ ಮಾಡಲುದ್ಯಮಿಸಿದರು. ವಜ್ರಮುಷ್ಟಿಯೆಂಬ ರಾಕ್ಷಸನು ಮೈಂದನೆಂಬ ವಾನರನೊಡನೆಯೂ, ಅಶನಿಪ್ರಭನೆಂಬವನು, ದ್ವಿವಿದನೆಂಬ ವಾನರನೊಡನೆಯೂ ಯುದ್ಧ ಮಾಡಿದರು. ಮೈಂದ ದ್ವಿವಿದರಿಬ್ಬರೂ ಆ ಇಬ್ಬರು ರಾಕ್ಷಸರೊಡನೆ ಬಹು ಭಯಂಕರವಾದ ಯುದ್ಧವನ್ನು ಮಾಡಿದರು. ವೀರನೂ, ಭಯಂಕರನೂ, ಯುದ್ಧಗಳಲ್ಲಿ ಜಯಿಸಲಸಾಧ್ಯನೂ ಆದ ಪ್ರತಪನನೆಂಬ ರಾಕ್ಷಸೋತ್ತಮನು ಅಧಿಕ ವೇಗವುಳ್ಳವನಾಗಿ ನಳನೆಂಬ ವಾನರೋತ್ತಮನೊಡನೆ ಸೆಣಸಿ ಯುದ್ಧಮಾಡಲು ಬಂದನು. ಧರ್ಮಪುತ್ರನೂ, ಮಹಾ ಬಲಾಢ್ಯನೂ, ಮಹಾ ಪ್ರಸಿದ್ಧನೂ ಆದ ಸುಷೇಣನೆಂಬ ವಾನರನು ವಿದ್ಯುನ್ಮಾಲಿಯೆಂಬ ರಾಕ್ಷಸನೊಡನೆ ಘೋರ ಯುದ್ಧವನ್ನು ಮಾಡಿದನು. ಇತರ ವಾನರರೂ,

||೧೪||ವಾನರಾಶ್ಚಾಪರೇ ಭೀಮಾ ರಾಕ್ಷಸೈರಪರೈಸ್ಸಹ|ದ್ವಂದ್ವಂ ಸಮಾಯಯುರ್ಬಹುಧಾ ಯುದ್ಧಾಯ ಬಹುಭಿಸ್ಸಹ ||೧೫|| ತತ್ರಾಸೀತ್ಸುಮಹದ್ಯುದ್ಧಂ ತುಮುಲಂ ರೋಮ ಹರ್ಷಣಂ | ರಕ್ಷಸಾಂ ವಾನರಾಣಾಂಚ ವೀರಾಣಾಂ ಜಯಮಿಚ್ಛತಾಂ ||೧೬|| ಹರಿ ರಾಕ್ಷಸದೇಹೇಭ್ಯಃ ಪ್ರಭೂತಾಃ ಕೇಶಶಾಡ್ವಲಾಃ | ಶರೀರಸಂಘಾಟವಹಾಃ ಪ್ರಸುಸ್ರು ಶ್ಶೋಣಿತಾಪಗಾಃ ||೧೭|| ಆಜಘಾನೇಂದ್ರಜಿತ್ಕ್ರುದ್ಧೋ ವಜ್ರೇಣೇವ ಶತಕ್ರತುಃ | ಅಂಗದಂ ಗದಯಾ ವೀರಂ ಶತ್ರುಸೈನ್ಯವಿದಾರಣಂ ||೧೮|| ತಸ್ಯ ಕಾಂಚನಚಿತ್ರಾಂಗಂ ರಥಂ ಸಾಶ್ವಂ ಸ ಸಾರಥಿಂ | ಜಘಾನ ಸಮರೇ ಶ್ರೀಮಾನಂಗದೋ ವೇಗವಾನ್ ಕಪಿಃ

---

|| ೧೪ || ಅಪರೇ - ಮತ್ತೆ ಕೆಲವರಾದ, ಭೀಮಾಃ - ಭಯಂಕರರಾದ, ವಾನರಾಶ್ಚ - ಕಪಿಗಳೂ, ಅಪರೈಃ - ಮತ್ತೆ ಕೆಲವರಾದ, ಬಹುಭಿಃ - ಅನೇಕ ಮಂದಿಯಾದ, ರಾಕ್ಷಸೈಸ್ಸಹ - ರಕ್ಕಸರೊಡನೆ, ಬಹುಧಾ-ಬಹಳವಾಗಿ, ಯುದ್ಧಾಯ-ಯುದ್ಧಕ್ಕಾಗಿ, ದ್ವಂದ್ವಂ-ಯುಗ್ಮಯುಗ್ಮವಾಗಿ, ಸಮಾಯಯುಃ-ಸೇರಿದರು. || ೧೫ || ತತ್ರ - ಆ ರಣರಂಗದಲ್ಲಿ, ಜಯಂ - ಜಯವನ್ನು, ಇಚ್ಛತಾಂ - ಅಪೇಕ್ಷಿಸುತ್ತಿರುವ, ವೀರಾಣಾಂ - ಶೂರರಾದ, ರಕ್ಷಸಾಂ - ರಕ್ಕಸರಿಗೂ, ವಾನರಾಣಾಂಚ - ಕಪಿಗಳಿಗೂ, ತುಮುಲಂ - ಸಂಕುಲವಾದ, ರೋಮಹರ್ಷಣಂ - ರೋಮಾಂಚನವನ್ನುಂಟುಮಾಡುವ, ಸುಮಹತ್-ಬಹಳವಾದ, ಯುದ್ಧಂ - ಕಾಳೆಗವು, ಆಸೀತ್ - ಆಯಿತು. || ೧೬ || ಹರಿ....ಭ್ಯಃ - ಕಪಿರಾಕ್ಷಸರ ಶರೀರಗಳಿಂದ, ಪ್ರಭೂತಾಃ - ಹುಟ್ಟಿರುವ, ಕೇಶಶಾಡ್ವಲಾಃ - ಕೂದಲುಗಳೆಂಬ ಹುಲ್ಲುಗಳುಳ್ಳ, ಶರೀ....ಹಾಃ - ದೇಹಗಳೇ ಒಣಗಿದ ಕಾಷ್ಟಗಳನ್ನು ವಹಿಸುತ್ತಿರುವ, ಶೋಣಿತಾಪಗಾಃ - ರಕ್ತವೆಂಬ ನದಿಗಳು, ಪ್ರಸಸ್ರುಃ - ಪ್ರವಹಿಸಿದವು. || ೧೭ || ಕ್ರುದ್ಧಃ - ಕೋಪಿಷ್ಠನಾದ, ಇಂದ್ರಜಿತ್ - ಇಂದ್ರಜಿತ್ತುವು, ಗದಯಾ - ಗದಾಯುಧದಿಂದ, ವಜ್ರೇಣ - ವಜ್ರಾಯುಧದಿಂದ, ಶತಕ್ರತುರಿವ - ದೇವೇಂದ್ರನಂತೆ, ಶತ್ರು....ಣಂ - ಶತ್ರುಗಳ ಸೈನ್ಯವನ್ನು ಸೀಳುತ್ತಿರುವ, ವೀರಂ - ಶೂರನಾದ, ಅಂಗದಂ - ಅಂಗದನನ್ನು, ಆಜಘಾನ - ಹೊಡೆದನು. ||೧೮|| ಸಮರೇ - ಕಾಳೆಗದಲ್ಲಿ, ಶ್ರೀಮಾನ್ - ಸಂಪದ್ಯುಕ್ತನಾದ, ಅಂಗದಃ - ಅಂಗದನೆಂಬ, ಕಪಿಃ - ವಾನರನು, ತಸ್ಯ - ಆ ಇಂದ್ರಜಿತ್ತಿನ, ಕಾಂಚ....ಗಂ - ಚಿನ್ನದಿಂದ ವಿಚಿತ್ರತರವಾದ ಶರೀರವುಳ್ಳ, ಸಾಶ್ವಂ - ಕುದುರೆಗಳಿಂದಲೂ, ಸಸಾರಥಿಂ-ಸಾರಥಿಯಿಂದಲೂ ಕೂಡಿದ, ರಥಂ - ರಥವನ್ನು, ಜಘಾನ - ಹೊಡೆದನು. || ೧೯ || ಸಂಪಾತಿಸ್ತು -

---

ಇತರ ರಾಕ್ಷಸರೊಡನೆ ನಾನಾ ವಿಧಗಳಾದ ದ್ವಂದ್ವ ಯುದ್ಧಗಳನ್ನುಪಕ್ರಮಿಸಿದರು. ಆಗ ವಾನರರಿಗೂ, ರಾಕ್ಷಸರಿಗೂ, ಸಂಕುಲವೂ, ದಿಗ್ಭ್ರಾಂತಿಕರವೂ ಆದ ಯುದ್ಧವು ಮೊದಲಾಯಿತು. ಪರಸ್ಪರ ಜಯಾಪೇಕ್ಷೆಯುಳ್ಳ ಆ ವಾನರ ರಾಕ್ಷಸರಿಗೆ ಮಹತ್ತರವಾದ ದ್ವಂದ್ವ ಯುದ್ಧವೇ ನಡೆಯಿತು. ||೧೧—೧೬|| ಆ ಸಮಯದಲ್ಲಿ ವಾನರ ರಾಕ್ಷಸರ ದೇಹಗಳಿಂದ ತಲೆಗೂದಲೆಂಬ ಪಾಚಿಯಿಂದಲೂ, ಶರೀರಗಳೆಂಬ ಕಾಷ್ಟಗಳಿಂದಲೂ ಕೂಡಿದ ರಕ್ತ ನದಿಗಳು ಬಹಳವಾಗಿ ಪ್ರವಹಿಸಿದುವು. ಆಗ ಶತ್ರುಸೈನ್ಯಗಳನ್ನು ಭೇದಿಸುವವನೂ ವೀರನೂ ಆದ ಅಂಗದಕುಮಾರನನ್ನು ಇಂದ್ರಜಿತ್ತುವು ಮಹಾ ಕೋಪೋದ್ದೀಪಿತನಾಗಿ, ದೇವೇಂದ್ರನು ವಜ್ರಾಯುಧದಿಂದ ಎಂತೋ ಅಂತು ತನ್ನ ಗದೆಯಿಂದ ಬಲವಾಗಿ ಹೊಡೆದನು. ಶ್ರೀಮಂತನಾದ ಅಂಗದನಾದರೋ ಕೂಡಲೇ ಕೋಪದಿಂದ ಕೆರಳಿ ಮಹಾ ವೇಗದಿಂದ ಕೂಡಿದವನಾಗಿ, ಚಿನ್ನದಿಂದ ಚಿತ್ರವಿಚಿತ್ರವಾಗಿ ಅಲಂಕರಿಸಿದ ಅವಯವಗಳುಳ್ಳದೂ, ಕುದುರೆಗಳಿಂದಲೂ, ಸಾರಥಿ

||೧೯||ಸಂಪಾತಿಸ್ತು ತ್ರಿಭಿರ್ಬಾಣೈಃ ಪ್ರಜಂಘೇನ ಸಮಾಹತಃ | ನಿಜಘಾನಾಶ್ವಕರ್ಣೇನ ಪ್ರಜಂಘಂ ರಣಮೂರ್ಧನಿ || ೨೦ || ಜಂಬುಮಾಲೀ ರಥಸ್ಥಸ್ತು ರಥಶಕ್ತ್ಯಾ ಮಹಾಬಲಃ | ಬಿಭೇದ ಸಮರೇ ಕ್ರುದ್ಧೋ ಹನೂಮಂತಂ ಸ್ತನಾಂತರೇ || ೨೧ || ತಸ್ಯ ತಂ ರಥಮಾಸ್ಥಾಯ ಹನೂಮಾನ್ಮಾರುತಾತ್ಮಜಃ | ಪ್ರಮಮಾಥ ತಲೇನಾಶು ಸಹ ತೇನೈವ ರಕ್ಷಸಾ || ೨೨ || ನರ್ದನ್ ಪ್ರತಪನೋ ಘೋರೋ ನಳಂ ಸೋಽಪ್ಯಭ್ಯಧಾವತ | ನಳಃ ಪ್ರತಪನಸ್ಯಾಶು ಪಾತಯಾಮಾಸ ಚಕ್ಷುಷೀ | ಭಿನ್ನಗಾತ್ರಃ ಶರೈಸ್ತೀಕ್ಷ್ಣೈಃ ಕ್ಷಿಪ್ರಹಸ್ತೇನ ರಕ್ಷಸಾ ||೨೩|| ಗ್ರಸಂತಮಿವ ಸೈನ್ಯಾನಿ ಪ್ರಘಸಂ ವಾನರಾಧಿಪಃ | ಸುಗ್ರೀವ

---

ಸಂಪಾತಿ ಎಂಬವನಾದರೆ, ತ್ರಿಭಿಃ - ಮೂರಾದ, ಬಾಣೈಃ - ಬಾಣಗಳಿಂದ, ಪ್ರಜಂಘೇನ - ಪ್ರಜಂಘನಿಂದ, ಸಮಾಹತಃ - ಹೊಡೆಯಲ್ಪಟ್ಟವನಾಗಿ, ಅಶ್ವಕರ್ಣೇನ - ಅಶ್ವಕರ್ಣವೆಂಬ ಆಯುಧದಿಂದ, ರಣಮೂರ್ಧನಿ - ಕಾಳಗದಲ್ಲಿ, ಪ್ರಜಂಘಂ - ಪ್ರಜಂಘನನ್ನು, ನಿಜಘಾನ - ಹೊಡೆದನು. || ೨೦ || ರಥಸ್ಥಃ - ರಥದಲ್ಲಿ ಕುಳಿತುಕೊಂಡಿರುವ, ಮಹಾಬಲಃ - ಬಹಳ ಬಲವಂತನಾದ, ಜಂಬುಮಾಲೀ - ಜಂಬುಮಾಲಿಯು, ಸಮರೇ - ಕಾಳಗದಲ್ಲಿ, ಕ್ರುದ್ಧಃ - ಕೋಪಿಷ್ಠನಾಗಿ, ರಥಶಕ್ತ್ಯಾ - ರಥದಲ್ಲಿರುವ ಶಕ್ತ್ಯಾಯುಧದಿಂದ, ಹನುಮಂತಂ - ಆಂಜನೇಯನನ್ನು, ಸ್ತನಾಂತರೇ - ವಕ್ಷಸ್ಥಲದಲ್ಲಿ, ಬಿಭೇದ - ಭೇದಿಸಿದನು. || ೨೧ || ಮಾರುತಾತ್ಮಜಃ - ವಾಯುಪುತ್ರನಾದ, ಹನೂಮಾನ್ - ಆಂಜನೇಯನು, ತಸ್ಯ - ಆ ಜಂಬುಮಾಲಿಯ, ತಂರಥಂ - ಆ ರಥವನ್ನು, ಆಸ್ಥಾಯ - ಏರಿ, ತಲೇನ - ಅಂಗೈಯಿಂದ, ತೇನೈವರಕ್ಷಸಾಹಸ - ಆ ರಕ್ಕಸನೊಡಗೂಡಿಯೇ, ಆಶು - ಜಾಗ್ರತೆಯಾಗಿ, ರಥಂ-ರಥವನ್ನು, ಪ್ರಮಮಾಥ - ಹೊಡೆದನು, ಘೋರಃ - ಭಯಂಕರನಾದ, ಪ್ರತಪನಃ - ಪ್ರತಪನನೂ ಎಂಬ, ಸೋಽಪಿ - ಆ ರಾಕ್ಷಸನು, ನರ್ದನ್ - ಕೂಗುತ್ತ, ನಳಂ - ನಳನನ್ನು ಕುರಿತು, ಅಭ್ಯಧಾವತ - ಓಡಿಬಂದನು. ||೨೨|| ಕ್ಷಿಪ್ರಹಸ್ತೇನ - ವೇಗವಾದ ಹಸ್ತವುಳ್ಳ, ರಕ್ಷಸಾ ಪ್ರತಪನನಿಂದ, ತೀಕ್ಷ್ಣೈಃ- ಹದವುಳ್ಳ, ಶರೈಃ - ಬಾಣಗಳಿಂದ, ಭಿನ್ನಗಾತ್ರಃ - ಭೇದಿಸಲ್ಪಟ್ಟ ಶರೀರವುಳ್ಳ, ನಳಃ - ನಳನು, ಆಶು - ಜಾಗ್ರತೆಯಾಗಿ, ಪ್ರತಪನಸ್ಯ - ಪ್ರತಪನನ, ಚಕ್ಷುಷೀ - ನೇತ್ರಗಳನ್ನು, ಪಾತಯಾಮಾಸ - ಕೆಳಕ್ಕೆ ಬೀಳಿಸಿದನು. || ೨೩ || ಸೈನ್ಯಾನಿ - ಸೇನೆಗಳನ್ನು, ಗ್ರಸಂತಮಿವ - ನುಂಗುವಂತಿರುವ, ಪ್ರಘಸಂ - ಪ್ರಘಸನನ್ನು, ವಾನರಾಧಿಪಃ - ವಾನರಾಧಿಪತಿಯಾದ, ಸುಗ್ರೀವಃ - ಸುಗ್ರೀವನು,

---

ಯಿಂದಲೂ ಕೂಡಿದುದೂ ಆದ ಆ ಇಂದ್ರಜಿತ್ತುವಿನ ರಥವನ್ನು ಮುರಿದಿಕ್ಕಿದನು. ಪ್ರಜಂಘನೆಂಬ ರಾಕ್ಷಸನು ವಿಭೀಷಣನ ಮಂತ್ರಿಯಾದ ಸಂಪಾತಿಯನ್ನು ತೀಕ್ಷ್ಣಗಳಾದ ಮೂರು ಬಾಣಗಳಿಂದ ಘಾತಿಸಲು ಅವನು ಅಶ್ವಕರ್ಣಾಯುಧದಿಂದ ಆ ಪ್ರಜಂಘನನ್ನು ಬಲವಾಗಿ ಹೊಡೆದನು. || ೧೭–೨೦ || ಮಹಾ ಬಲಾಢ್ಯನೂ, ರಥಾರೂಢನೂ ಆದ ಜಂಬುಮಾಲಿಯು ತನ್ನ ರಥಸಾಮರ್ಥ್ಯದಿಂದ ಕೊಬ್ಬಿ ಮಹಾಕ್ರೋಧಾವಿಷ್ಟನಾಗಿ ಹನುಮಂತನನ್ನು ಹೃದಯವೇ ಭೇದಿಸಿ ಹೋಗುವಂತೆ ಬಲವಾಗಿ ಪ್ರಹರಿಸಿದನು. ಆಗ ವಾಯುಪುತ್ರನಾದ ಹನುಮಂತನು ಆ ಜಂಬುಮಾಲಿಯೊಡಗೂಡಿದ ಆ ರಥವನ್ನು ಹಿಡಿದು ಅಂಗೈಯಿಂದ ಅಪ್ಪಳಿಸಿ ಹೊಡೆದನು. ಕೂಡಲೇ ಆ ರಥವು ಪುಡಿಪುಡಿಯಾಗಿ ಹೋಯಿತು. ಪ್ರತಪನನೆಂಬ ರಾಕ್ಷಸನು ನಳನನ್ನು ಮರ್ದಿಸಲು, ಮಹಾ ಭಯಂಕರನಾದ ಆ ನಳನು ಕೋಪೋದ್ದೀಪಿತನಾಗಿ ಆ ಪ್ರತಪನನ ಕಣ್ಣುಗುಡ್ಡೆಗಳನ್ನು ಕಿತ್ತು ಕೆಳಕ್ಕುರುಳಿಸಿದನು. ಅದೇ ಸಮಯದಲ್ಲಿಯೇ ಆ ರಾಕ್ಷಸನು

ಸ್ಸಪ್ತಪರ್ಣೇನ ನಿರ್ಬಿಭೇದ ಜಘಾನಚ || ೨೪ || ಅಗ್ನಿಕೇತುಶ್ಚ ದುರ್ಧರ್ಷೋ ರಶ್ಮಿಕೇತುಶ್ಚ ರಾಕ್ಷಸಃ | ಸುಪ್ತಘ್ನೋ ಯಜ್ಞಕೋಪಶ್ಚ ರಾಮಂ ನಿರ್ಬಿಭಿದುಶ್ಶರೈಃ||೨೫|| ತೇಷಾಂ ಚತುರ್ಣಾಂ ರಾಮಸ್ತು ಶಿರಾಂಸಿ ನಿಶಿತೈಶ್ಶರೈಃ | ಕ್ರುದ್ಧಶ್ಚತುರ್ಭಿಶ್ಚಿಚ್ಛೇದ ಘೋರೈರಗ್ನಿಶಿಖೋಪಮೈಃ ||೨೬|| ವಜ್ರಮುಷ್ಟಿಸ್ತು ಮೈಂದೇನ ಮುಷ್ಟಿನಾ ನಿಹತೋ ರಣೇ | ಪಪಾತ ಸರಥಸ್ಸಾಶ್ವಃ ಪುರಾಟ್ಟ ಇವ ಭೂತಲೇ || ೨೭ || ನಿಕುಂಭಸ್ತು ರಣೇ ನೀಲಂ ನೀಲಾಂಜನಚಯಪ್ರಭಂ || ನಿರ್ಬಿಭೇದ ಶರೈಸ್ತೀಕ್ಷ್ಣೈಃ ಕರೈರ್ಮೇಘಮಿವಾಂ

---

ಸಪ್ತಪರ್ಣೇನ - ಏಳೆಲೆ ಬಾಳೆಯಗಿಡದಿಂದ, ನಿರ್ಬಿಭೇದ - ಭೇದಿಸಿದನು, ಜಘಾನಚ - ಹೊಡೆದನು || ೨೪ || ದುರ್ಧರ್ಷಃ - ತಿರಸ್ಕರಿಸಲಸಾಧ್ಯನಾದ, ಅಗ್ನಿಕೇತುಶ್ಚ - ಅಗ್ನಿಕೇತುವೂ, ರಶ್ಮಿಕೇತುಶ್ಚ - ರಶ್ಮಿಕೇತುವೆಂಬ, ರಾಕ್ಷಸಃ - ರಕ್ಕಸನು, ಸುಪ್ತಘ್ನಃ - ಸುಪ್ತಘ್ನನೆಂಬವನು, ಯಜ್ಞಕೋಪಶ್ಚ - ಯಜ್ಞಕೋಪನೆಂಬವನೂ ಈ ನಾಲ್ವರೂ, ರಾಮಂ - ಶ್ರೀರಾಮನನ್ನು, ಶರೈಃ - ಬಾಣಗಳಿಂದ, ಬಿಭಿದುಃ - ಭೇದಿಸಿದರು. || ೨೫ || ರಾಮಸ್ತು - ಶ್ರೀರಾಮನಾದರೆ, ಕ್ರುದ್ಧಃ - ಕೋಪಿಷ್ಠನಾಗಿ, ಅಗ್ನಿಶಿಖೋಪಮೈಃ - ಅಗ್ನಿಜ್ವಾಲೆಗಳಿಗೆ ಸಮಾನವಾದ, ಘೋರೈಃ - ಭಯಂಕರಗಳಾದ, ಚತುರ್ಭಿಃ - ನಾಲ್ಕಾದ, ನಿಶಿತೈಃ - ತೀಕ್ಷ್ಣಗಳಾದ, ಶರೈಃ - ಬಾಣಗಳಿಂದ, ತೇಷಾಂಚತುರ್ಣಾಂ - ಆ ನಾಲ್ವರ, ಶಿರಾಂಸಿ - ತಲೆಗಳನ್ನು, ಚಿಚ್ಛೇದ - ಕತ್ತರಿಸಿದನು. || ೨೬ || ವಜ್ರಮುಷ್ಟಿಸ್ತು - ವಜ್ರಮುಷ್ಟಿ ಎಂಬವನಾದರೆ, ಮೈಂದೇನ - ಮೈಂದನೆಂಬವನಿಂದ, ಮುಷ್ಟಿನಾ - ಹಿಡಿಯಿಂದ, ರಣೇ - ಕಾಳೆಗದಲ್ಲಿ, ನಿಹತಃ - ಹೊಡೆಯಲ್ಪಟ್ಟವನಾಗಿ, ಸರಥಃ - ರಥದೊಡನೆಯೂ, ಸಾಶ್ವಃ - ಕುದುರೆಗಳೊಡನೆಯೂ, ಪುರಾಟ್ಟಇವ - ಊರಕೊತ್ತಲದಂತೆ, ಭೂತಲೇ - ನೆಲದಲ್ಲಿ, ಪಪಾತ - ಬಿದ್ದನು. || ೨೭ || ನಿಕುಂಭಸ್ತು - ನಿಕುಂಭನಾದರೆ, ರಣೇ - ಕಾಳೆಗದಲ್ಲಿ, ನೀಲಾಂ....ಭಂ-ಕಾಡಿಗೆಯ ರಾಶಿಗೆ ಸಮವಾದ ಕಾಂತಿಯುಳ್ಳ, ನೀಲಂ - ನೀಲನನ್ನು, ಅಂಶುಮಾನ್ - ಸೂರ್ಯನು, ಕರೈಃ - ಕಿರಣಗಳಿಂದ, ಮೇಘಮಿವ - ಮೇಘವನ್ನಂತೆ, ತೀಕ್ಷ್ಣೈಃ - ಹದವುಳ್ಳ, ಶರೈಃ-ಬಾಣಗಳಿಂದ, ನಿರ್ಬಿಭೇದ-

---

ಪ್ರಯೋಗಿಸಿದ ಕೂರಂಬುಗಳಿಂದ ಭಿನ್ನವಾದ ಗಾತ್ರವುಳ್ಳ ಸುಗ್ರೀವನು ತನ್ನ ಸೇನೆಯೆಲ್ಲವನ್ನೂ ನುಂಗುತ್ತಿದ್ದ ಆ ಪ್ರಘಸನೆಂಬವನನ್ನೂ ಸಪ್ತಪರ್ಣವೃಕ್ಷದಿಂದ ಭೇದಿಸಿ ಹೋಗುವಂತೆ ಹೊಡೆದನು. ಅದೇ ಸಮಯದಲ್ಲಿಯೇ ದುರ್ಧರ್ಷ, ರಶ್ಮಿಕೇತು, ಸುಪ್ತಘ್ನ, ಯಜ್ಞಕೋಪರೆಂಬ ನಾಲ್ವರು ರಾಕ್ಷಸರೂ ತೀಕ್ಷ್ಣಗಳಾದ ಬಾಣಗಳಿಂದ ಶ್ರೀರಾಮನನ್ನು ಹೊಡೆದರು. ಆಗ ಶ್ರೀರಾಮನು ಮಹಾ ಕುಪಿತನಾಗಿ ಭಯಂಕರಗಳೂ, ಅಗ್ನಿಜ್ವಾಲೆಗಳಿಗೆ ಸಮಾನಗಳಾದವುಗಳೂ, ಬಹು ತೀಕ್ಷ್ಣಗಳೂ ಆದ ಬಾಣಗಳಿಂದ ಆ ನಾಲ್ವರು ರಾಕ್ಷಸರ ಶಿರಸ್ಸುಗಳನ್ನೂ ಭೇದಿಸಿಬಿಟ್ಟನು. || ೨೧–೨೬ || ಇದೂ ಅಲ್ಲದೆ ಆ ಯುದ್ಧಸಮಯದಲ್ಲಿ ಮೈಂದನು ವಜ್ರಮುಷ್ಟಿಯೆಂಬ ರಾಕ್ಷಸನನ್ನು ಮುಷ್ಟಿಯಿಂದ ಹೊಡೆದನು. ಆಗ ವಜ್ರಮುಷ್ಟಿ ರಾಕ್ಷಸನು ಕುದುರೆಗಳು ಹೂಡಿದ ರಥದೊಡನೆ ಪಟ್ಟಣದ ಅಟ್ಟಾಲಕದಂತೆ ನೆಲಕ್ಕುರುಳಿದನು. ನಿಕುಂಭನೆಂಬ ರಾಕ್ಷಸನು ಕಾಡಿಗೆಯ ಬೆಟ್ಟಕ್ಕೆ ಸಮಾನವಾದ ದೇಹವುಳ್ಳ ನೀಲನೆಂಬ ವಾನರನನ್ನು ತೀಕ್ಷ್ಣಗಳಾದ ಬಾಣಗಳಿಂದ ಸೂರ್ಯನು ಕಿರಣಗಳಿಂದ ಮೇಘಗಳನ್ನು ಹೊಡೆವಂತೆ ಬಲವಾಗಿ ಹೊಡೆದನು. ಇದೂ ಅಲ್ಲದೆ ಕೈಚಳಕದಿಂದಲೇ ಸಮಸ್ತ ಕಾರ್ಯ

ಶುವರ್ಮಾ ||೨೮|| ಪುನಶ್ಚರಶತೇನಾಥ ಕ್ಷಿಪ್ರಹಸ್ತೋ ನಿಶಾಚರಃ | ಬಿಭೇದ ಸಮರೇ ನೀಲಂ ನಿಕುಂಭಃ ಪ್ರಜಹಾಸಚ ||೨೯|| ತಸ್ಯೈವ ರಥಚಕ್ರೇಣ ನೀಲೋ ವಿಷ್ಣುರಿವಾಹವೇ | ಶಿರಶ್ಚಿಚ್ಛೇದ ಸಮರೇ ನಿಕುಂಭಸ್ಯ ಚ ಸಾರಥೇಃ || ೩೦ || ವಜ್ರಾಶನಿಸಮಸ್ಪರ್ಶೋ ದ್ವಿವಿದೋಪ್ಯಶನಿಪ್ರಭಂ | ಜಘಾನ ಗಿರಿಶೃಂಗೇಣ ಮಿಷತಾಂ ಸರ್ವರಕ್ಷಸಾಂ || ೩೧ || ದ್ವಿವಿದಂ ವಾನರೇಂದ್ರಂತು ನಗಯೋಧಿನಮಾಹವೇ | ಶರೈರಶನಿಸಂಕಾಶೈಸ್ಸವಿವ್ಯಾಧಾಶನಿಪ್ರಭಃ ||೩೨|| ಸಶರೈರತಿವಿದ್ಧಾಂಗೋ ದ್ವಿವಿದಃ ಕ್ರೋಧಮೂರ್ಛಿತಃ|

---

ಭೇದಿಸಿದನು. || ೨೮ || ಅಥ - ಬಳಿಕ, ಸಮರೇ - ಕಾಳಗದಲ್ಲಿ, ಕ್ಷಿಪ್ರಹಸ್ತಃ - ವೇಗದಿಂದ ಕೂಡಿದ ಹಸ್ತವುಳ್ಳ, ನಿಕುಂಭಃ - ನಿಕುಂಭನೆಂಬ, ನಿಶಾಚರಃ - ರಕ್ಕಸನು, ಪುನಃ - ಮತ್ತು, ಶರಶತೇನ - ನೂರು ಬಾಣಗಳಿಂದ, ನೀಲಂ - ನೀಲನನ್ನು, ಬಿಭೇದ - ಭೇದಿಸಿದನು, ಪ್ರಜಹಾಸಚ - ಪರಿಹಾಸ್ಯವನ್ನೂ ಮಾಡಿದನು. || ೨೯ || ನೀಲಃ - ನೀಲನು, ತಸ್ಯ - ಆ ನಿಕುಂಭನ, ರಥಚಕ್ರೇಣೈವ - ರಥದ ಚಕ್ರದಿಂದಲೇ, ಆಹವೇ - ಕಾಳಗದಲ್ಲಿ, ವಿಷ್ಣುರಿವ - ಶ್ರೀ ಮಹಾ ವಿಷ್ಣುವಿನಂತೆ, ಸಮರೇ - ಕಾಳಗದಲ್ಲಿ, ನಿಕುಂಭಸ್ಯ - ನಿಕುಂಭನ, ಸಾರಥೇಃ - ಸಾರಥಿಯ, ಶಿರಃ - ಮಂಡೆಯನ್ನು, ಚಿಚ್ಛೇದ - ಕತ್ತರಿಸಿದನು, ವಜ್ರ....ರ್ಶಃ - ವಜ್ರಾಯುಧಕ್ಕೂ ಸಿಡಲಿಗೂ ಸಮವಾದ ಸ್ಪರ್ಶವುಳ್ಳ, ದ್ವಿವಿದೋಪಿ- ದ್ವಿವಿದನೂ, ಸರ್ವರಕ್ಷಸಾಂ-ಸಮಸ್ತ ರಕ್ಕಸರೂ, ಮಿಷತಾಂಸತಾಂ-ನೋಡುತ್ತಿರಲು, ಗಿರಿಶೃಂಗೇಣ- ಬೆಟ್ಟದ ಶಿಖರದಿಂದ, ಅಶನಿಪ್ರಭಂ - ಅಶನಿಪ್ರಭನೆಂಬವನನ್ನು, ಜಘಾನ - ಹೊಡೆದನು. ||೩೦-೩೧|| ಸಃಅಶನಿಪ್ರಭಃ - ಆ ಅಶನಿಪ್ರಭನು, ಆಹವೇ - ಕಾಳಗದಲ್ಲಿ, ಅಶನಿಸಂಕಾಶೈಃ - ಸಿಡಲಿಗೆ ಸಮಾನಗಳಾದ, ಶರೈಃ-ಬಾಣಗಳಿಂದ, ನಗಯೋಧಿನಂ-ಬೆಟ್ಟದಿಂದ ಯುದ್ಧ ಮಾಡುತ್ತಿರುವ, ವಾನರೇಂದ್ರಂ- ಕಪಿಶ್ರೇಷ್ಠನಾದ, ದ್ವಿವಿದಂ - ದ್ವಿವಿದನನ್ನು, ವಿವ್ಯಾಧ - ವ್ಯಥೆಗೊಳಿಸಿದನು. || ೩೨ || ಸಃದ್ವಿವಿದಃ - ಆ ದ್ವಿವಿದನು, ಶರೈಃ - ಬಾಣಗಳಿಂದ, ಅತಿವಿದ್ಧಾಂಗಃ - ಬಹಳವಾಗಿ ಹೊಡೆಯಲ್ಪಟ್ಟ ಶರೀರವುಳ್ಳವನಾಗಿ, ಕ್ರೋಧಮೂರ್ಛಿತಃ - ಕೋಪದಿಂದ ವ್ಯಾಪ್ತನಾಗಿ, ಸಾಲೇನ - ಸಾಲವೃಕ್ಷದಿಂದ, ಸರಥಂ-ರಥದಿಂದೊಡಗೂಡಿದ, ಸಾಶ್ವಂ-ಕುದುರೆಗಳಿಂದೊಡಗೂಡಿದ, ಅಶನಿಪ್ರಭಂ-ಅಶನಿಪ್ರಭನನ್ನು,

---

ಗಳನ್ನೂ ಮಾಡಬಲ್ಲ ಆ ನಿಕುಂಭನು ನೂರು ಬಾಣಗಳನ್ನು ಮತ್ತೆ ಪ್ರಯೋಗಿಸಿ ಆ ನೀಲನ ಶರೀರವನ್ನು ಭೇದಿಸಿ ಹೋಗುವಂತೆ ಮಾಡಿ ವಿಧವಿಧವಾಗಿ ಬಾಧಿಸಿದನು. ಆಗ ನೀಲನು ಆ ನಿಕುಂಭನ ರಥದ ಚಕ್ರವನ್ನು ಕಸೆದುಕೊಂಡು, ರಣರಂಗದಲ್ಲಿ ಮಹಾವಿಷ್ಣುವು ಚಕ್ರವನ್ನು ಧರಿಸಿದಂತೆ ಆದನ್ನು ಧರಿಸಿ ಆ ನಿಕುಂಭನ ಸಾರಥಿಯ ಶಿರಸ್ಸನ್ನು ಅದರಿಂದಲೇ ತರಿದು ಹಾಕಿದನು. || ೨೭–೩೦ || ವಜ್ರಾಯುಧಕ್ಕೂ ಸಿಡಿಲಿಗೂ ಸಮಾನನಾದ ದ್ವಿವಿದನು ಅಶನಿಪ್ರಭನೆಂಬ ರಾಕ್ಷಸೋತ್ತಮನನ್ನು, ಎಲ್ಲ ರಾಕ್ಷಸರೂ ನೋಡಿ ವ್ಯಥಿಸುತ್ತಿರಲು ಒಂದು ಪರ್ವತಶಿಖರದಿಂದ ಬಲವಾಗಿ ಪ್ರಹರಿಸಿದನು. ಆ ಅಶನಿಪ್ರಭನಾದರೋ ಮಹಾ ಕುಪಿತನಾಗಿ ಪರ್ವತಶಿಖರವನ್ನೇ ಆಯುಧವನ್ನಾಗಿ ಧರಿಸಿರುವವನೂ, ವಾನರೋತ್ತಮನೂ ಆದ ಆ ದ್ವಿವಿದನನ್ನು ವಜ್ರಾಯುಧಗಳಿಗೆ ಸಮಾನಗಳಾದ ತೀಕ್ಷ್ಣ ಬಾಣಗಳಿಂದ ಹೊಡೆದು ಘಾತಿಸಿದನು. ಆಗ ದ್ವಿವಿದನು ಕ್ರೋಧದಿಂದ ಸುತ್ತಿದ ಕಣ್ಣಾಲಿಗಳುಳ್ಳವನಾಗಿ ಒಂದು ಸಾಲವೃಕ್ಷದಿಂದ ರಥ ಸಾರಥಿ ಮತ್ತು ಅಶ್ವಗಳೊಡಗೂಡಿದ ಆ ಅಶನಿಪ್ರಭನನ್ನು ಚೆನ್ನಾಗಿ ಮರ್ದಿಸಿ

ಸಾಲೇನ ಸರಥಂ ಸಾಶ್ವಂ ನಿಜಘಾನಾಶನಿಪ್ರಭಃ ॥ ೩೩ ॥ ವಿದ್ಯುನ್ಮಾಲೀ ರಥಸ್ಥಸ್ತು ಶರೈಃ ಕಾಂಚನಭೂಷಣೈಃ। ಸುಷೇಣಂ ತಾಡಯಾಮಾಸ ನನಾದ ಚ ಮುಹುರ್ಮುಹುಃ ॥೩೪॥ ತಂ ರಥಸ್ಥಮಥೋ ದೃಷ್ಟ್ವಾ ಸುಷೇಣೋ ವಾನರೋತ್ತಮಃ । ಗಿರಿಶೃಂಗೇಣ ಮಹತಾ ರಥಮಾಶು ನ್ಯಪಾತಯತ್ ॥ ೩೫ ॥ ಲಾಘವೇನ ತು ಸಂಯುಕ್ತೋ ವಿದ್ಯುನ್ಮಾಲೀ ನಿಶಾಚರಃ । ಅಪಕ್ರಮ್ಯ ರಥಾತ್ತೂರ್ಣಂ ಗದಾಪಾಣಿಃ ಕ್ಷಿತೌ ಸ್ಥಿತಃ ॥೩೬॥ ತತಃ ಕ್ರೋಧಸಮಾವಿಷ್ಟಸ್ಸುಷೇಣೋ ಹರಿಪುಂಗವಃ । ಶಿಲಾಂ ಸುಮಹತೀಂ ಗೃಹ್ಯ ನಿಶಾಚರಮಭಿದ್ರವತ್ ॥೩೭॥ ತಮಾಪತಂತಂ ಗದಯಾ ವಿದ್ಯುನ್ಮಾಲೀ ನಿಶಾಚರಃ । ವಕ್ಷಸ್ಯಭಿಜಘಾನಾಶು ಸುಷೇಣಂ ಹರಿಸತ್ತಮಂ ॥೩೮॥ ಗದಾಪ್ರಹಾರಂ ತಂ ಘೋರ

---

ನಿಜಘಾನ - ಹೊಡೆದನು. ॥ ೩೩ ॥ ರಥಸ್ಥಃ - ರಥದಲ್ಲಿರುವ ವಿದ್ಯುನ್ಮಾಲೀ - ವಿದ್ಯುನ್ಮಾಲಿಯು, ಕಾಂಚ....ಣೈಃ - ಭಂಗಾರದ ಒಡವೆಗಳುಳ್ಳ, ಶರೈಃ - ಬಾಣಗಳಿಂದ, ಸುಷೇಣಂ - ಸುಷೇಣನನ್ನು, ತಾಡಯಾಮಾಸ - ಹೊಡೆದನು, ಮುಹ-ರ್ಮುಹುಃ - ಬಾರಿಬಾರಿಗೂ, ನನಾದಚ - ಕೋಲಾಹಲ ಧ್ವನಿಯನ್ನು ಮಾಡಿದನು. ॥೩೪॥ ವಾನರೋತ್ತಮಃ - ಕಪಿಶ್ರೇಷ್ಠನಾದ, ಸುಷೇಣಃ - ಸುಷೇಣನು, ರಥಸ್ಥಂ - ರಥದಲ್ಲಿರುವ, ತಂ - ಆ ವಿದ್ಯುನ್ಮಾಲಿಯನ್ನು, ದೃಷ್ಟ್ವಾ - ಕಂಡು, ಮಹತಾ - ದೊಡ್ಡದಾದ, ಗಿರಿಶೃಂಗೇಣ - ಬೆಟ್ಟದ ಶಿಖರದಿಂದ, ರಥಂ - ರಥವನ್ನು, ಆಶು - ಜಾಗ್ರತೆಯಾಗಿ, ಅಧಃ - ಕೆಳಕ್ಕೆ, ನ್ಯಪಾತಯತ್ - ಕೆಡುಹಿದನು. ॥೩೫॥ ಲಾಘವೇನ - ಶರೀರದ ಲಘುತ್ವದಿಂದ, ಸಂಯುಕ್ತಃ- ಕೂಡಿ, ವಿದ್ಯುನ್ಮಾಲೀ - ವಿದ್ಯುನ್ಮಾಲಿ ಎಂಬ, ನಿಶಾಚರಃ - ರಕ್ಕಸನು, ರಥಾತ್ - ರಥದಿಂದ, ತೂರ್ಣಂ - ಜಾಗ್ರತೆಯಾಗಿ, ಅಪಕ್ರಮ್ಯ - ಹಾರಿ, ಗದಾಪಾಣಿಃ - ಗದಾಯುಧವೇ ಕೈಯಲ್ಲುಳ್ಳವನಾಗಿ, ಕ್ಷಿತೌ - ನೆಲದಲ್ಲಿ, ಸ್ಥಿತಃ - ನಿಂತನು. ॥೩೬॥ ತತಃ - ಬಳಿಕ, ಕ್ರೋಧಸಮಾವಿಷ್ಟಃ - ಕೋಪಾವಿಷ್ಟನಾದ, ಹರಿಪುಂಗವಃ - ವಾನರಶ್ರೇಷ್ಠನಾದ, ಸುಷೇಣಃ - ಸುಷೇಣನು, ಸುಮಹತೀಂ - ಬಹಳ ದೊಡ್ಡದಾದ, ಶಿಲಾಂ - ಕಲ್ಲನ್ನು, ಗೃಹ್ಯ - ತೆಗೆದುಕೊಂಡು, ನಿಶಾಚರಂ - ರಕ್ಕಸನನ್ನು ಕುರಿತು, ಅಭಿದ್ರವತ್-ಅಟ್ಟಿ ಓಡಿದನು. ॥ ೩೭ ॥ ವಿದ್ಯುನ್ಮಾಲೀ-ವಿದ್ಯುನ್ಮಾಲಿಯೆಂಬ, ನಿಶಾಚರಃ-ರಕ್ಕಸನು, ಆಪತಂತಂ - ಬರುತ್ತಿರುವ, ಹರಿಸತ್ತಮಂ - ವಾನರೋತ್ತಮನಾದ, ತಂಸುಷೇಣಂ - ಆ ಸುಷೇಣನನ್ನು, ಗದಯಾ - ಗದಾಯುಧದಿಂದ, ಆಶು - ಜಾಗ್ರತೆಯಾಗಿ, ವಕ್ಷಸಿ - ಎದೆಯಲ್ಲಿ, ಅಭಿಜಘಾನ- ಹೊಡೆದನು. ॥೩೮॥ ಪ್ಲವಗೋತ್ತಮಃ - ವಾನರೋತ್ತಮನಾದ ಸುಷೇಣನು, ಘೋರಂ - ಭಯಂಕರ

---

ದನು. ಅದೇ ಸಮಯದಲ್ಲಿ ಮತ್ತೊಂದುಕಡೆಯಲ್ಲಿ ಯುದ್ಧ ಮಾಡುತ್ತಿದ್ದ ವಿದ್ಯುನ್ಮಾಲಿಯೆಂಬ ರಾಕ್ಷಸೋತ್ತಮನು ಸ್ವರ್ಣಪುಂಖಗಳಾದ ಬಾಣಪ್ರಯೋಗಗಳಿಂದ ಸಿಂಹನಾದ ಮಾಡುತ್ತಿರಲು ಸುಷೇಣನೆಂಬ ವಾನರೋತ್ತಮನು ರಥದಲ್ಲಿ ಕುಳಿತಿದ್ದ ಆ ವಿದ್ಯುನ್ಮಾಲಿಯನ್ನು ನೋಡಿ ಕೋಪದಿಂದ ಕೆರಳಿ ಕೆಂಪಡರಿದ ಕಣ್ಣುಗಳುಳ್ಳವನಾಗಿ ಬಹು ದೊಡ್ಡದಾದ ಒಂದು ಪರ್ವತಶಿಖರದಿಂದ ಅವನ ರಥವನ್ನು ಪುಡಿಗುಟ್ಟಿದನು. ॥೩೧–೩೫॥ ಆ ಕೂಡಲೇ ವಿದ್ಯುನ್ಮಾಲಿಯು ಲಾಘವದಿಂದ ಭೂಮಿಗೆ ಧುಮ್ಮಿಕ್ಕಿ ಗದಾಪಾಣಿಯಾಗಿ ನಿಂತಿರಲು, ಸುಷೇಣನು ಮತ್ತಷ್ಟು ಕುಪಿತನಾಗಿ ಬಹು ದೊಡ್ಡದಾದ ಒಂದು ಬಂಡೆಯನ್ನು ನೋಡಿ ಅದನ್ನೆತ್ತಿ ಆ ರಾಕ್ಷಸನನ್ನು ಅಟ್ಟಿಬಂದನು. ವಿದ್ಯುನ್ಮಾಲಿಯು ಕೂಡಲೇ ತನ್ನ ಗದೆಯಿಂದ ಆ ದ್ವಿವಿದನ ಎದೆಯನ್ನು ಭೇದಿಸಿದನು. ದ್ವಿವಿದನಾದರೋ ಆ ಪ್ರಹಾರವನ್ನು ಲಕ್ಷ್ಯಕ್ಕೆ

ಮಚಿಂತ್ಯಪ್ಲವಗೋತ್ತಮಃ । ತಾಂ ಶಿಲಾಂ ಪಾತಯಾಮಾಸ ತಸ್ಯೋರಸಿ ಮಹಾಮೃಧೇ ॥ ೩೯ ॥ ಶಿಲಾಪ್ರಹಾರಾಭಿಹತೋ ವಿದ್ಯುನ್ಮಾಲೀ ನಿಶಾಚರಃ । ನಿಷ್ಪಿಷ್ಟಹೃದಯೋ ಭೂಮೌ ಗತಾಸುರ್ನಿಪಪಾತಹ ॥ ೪೦ ॥ ಏವಂ ತೈರ್ವಾನರೈಶ್ಶೂರೈಶ್ಶೂರಾಸ್ತೇ ರಜನೀಚರಾಃ । ದ್ವಂದ್ವೇ ವಿಮೃದಿತಾಸ್ತತ್ರ ದೈತ್ಯಾ ಇವ ದಿವೌಕಸೈಃ ॥ ೪೧ ॥ ಭಗ್ನೈಃ ಖಡ್ಗೈರ್ಗದಾಭಿಶ್ಚ ಶಕ್ತಿತೋಮರಪಟ್ಟಸೈಃ । ಅಪವಿದ್ಧೈಶ್ಚ ಭಿನ್ನೈಶ್ಚ ರಥೈಸ್ಸಾಂಗ್ರಾಮಿಕೈರ್ಹಯೈಃ । ನಿಹತೈಃ ಕುಂಜರೈರ್ಮತ್ತೈಸ್ತಥಾ ವಾನರರಾಕ್ಷಸೈಃ ॥೪೨॥ ಚಕ್ರಾಕ್ಷಯುಗದಂಡೈಶ್ಚ ಭಗ್ನೈರ್ಧರಣಿಸಂಶ್ರಿತೈಃ । ಬಭೂವಾಯೋಧನಂ ಘೋರಂ ಗೋಮಾಯುಗಣಸಂಕುಲಂ ॥ ೪೩ ॥ ಕಬಂಧಾನಿ ಸಮುತ್ಪೇತು

---

ವಾದ, ತಂಗದಾಪ್ರಹಾರಂ - ಆ ಗದೆಯ ಹೊಡೆತವನ್ನು, ಅಚಿಂತ್ಯ - ಲಕ್ಷ್ಯಮಾಡದೆ, ಮಹಾಮೃಧೇ- ದೊಡ್ಡ ಕಾಳಗದಲ್ಲಿ, ತಸ್ಯ - ಆ ವಿದ್ಯುನ್ಮಾಲಿಯ, ಉರಸಿ - ವಕ್ಷಸ್ಥಲದಲ್ಲಿ, ತಾಂಶಿಲಾಂ - ಆ ದೊಡ್ಡ ಬಂಡೆಯನ್ನು, ಪಾತಯಾಮಾಸ - ಕೆಡಹಿದನು. ॥ ೩೯ ॥ ಶಿಲಾ....ತಃ - ಪಾಷಾಣ ಪ್ರಹಾರದಿಂದ, ವಿದ್ಯುನ್ಮಾಲೀ - ವಿದ್ಯುನ್ಮಾಲಿಯೆಂಬ, ನಿಶಾಚರಃ - ರಕ್ಕಸನು, ನಿಷ್ಪಿ....ಯಃ - ಚೂರ್ಣ ಮಾಡಲ್ಪಟ್ಟ ಎದೆಯುಳ್ಳವನಾಗಿ, ಗತಾಸುಃ - ಹೋದ ಪ್ರಾಣಗಳುಳ್ಳವನಾಗಿ, ಭೂಮೌ - ನೆಲದಲ್ಲಿ, ನಿಪಪಾತಹ - ಬಿದ್ದನಷ್ಟೆ. ॥ ೪೦ ॥ ಏವಂ - ಈ ಪರಿಯಾಗಿ, ತತ್ರದ್ವಂದ್ವೇ - ಆ ದ್ವಂದ್ವಯುದ್ಧದಲ್ಲಿ, ಶೂರಃ - ಶೌರ್ಯವಂತರಾದ, ತೇರಜನೀಚರಾಃ - ಆ ರಾಕ್ಷಸರು, ದಿವೌಕಸೈಃ-ದೇವತೆಗಳಿಂದ, ದೈತ್ಯಾ ಇವ - ರಾಕ್ಷಸರಂತೆ, ಶೂರೈಃ - ಶೂರರಾದ, ತೈರ್ವಾನರೈಃ - ಆ ಕಪಿಗಳಿಂದ, ವಿಮೃದಿತಾಃ - ಮರ್ದಿಸಲ್ಪಟ್ಟರು. ॥ ೪೧ ॥ ಭಗ್ನೈಃ - ಮುರಿದುಹೋದ, ಖಡ್ಗೈಃ - ಕತ್ತಿಗಳಿಂದಲೂ, ಗದಾಭಿಶ್ಚ - ಗದಾಯುಧಗಳಿಂದಲೂ, ಶಕ್ತಿ....ಸೈಃ - ಶಕ್ತ್ಯಾಯುಧಗಳಿಂದಲೂ, ತೋಮರಾಯುಧಗಳಿಂದಲೂ, ಪಟ್ಟಾಕತ್ತಿಗಳಿಂದಲೂ, ಅಪವಿದ್ಧೈಃ-ಹೊಡೆಯಲ್ಪಟ್ಟ, ಭಿನ್ನೈಶ್ಚ-ಭೇಧಿಸಲ್ಪಟ್ಟ, ರಥೈಃ - ರಥಗಳಿಂದಲೂ, ಸಾಂಗ್ರಾಮಿಕೈಃ - ಯುದ್ಧಾರ್ಹಗಳಾದ, ಹಯೈಃ - ಕುದುರೆಗಳಿಂದಲೂ, ಮತ್ತೈಃ - ಮದವೇರಿದ, ನಿಹತೈಃ - ಹೊಡೆಯಲ್ಪಟ್ಟ, ಕುಂಜರೈಃ - ಆನೆಗಳಿಂದಲೂ, ತಥಾ - ಹಾಗೆಯೇ, ವಾನರರಾಕ್ಷಸೈಃ - ಕಪಿಗಳಿಂದಲೂ, ರಕ್ಕಸರಿಂದಲೂ, ಭಗ್ನೈಃ - ಮುರಿದು, ಧರ....ತೈಃ - ನೆಲದಲ್ಲಿ ಬಿದ್ದಿರುವ, ಚಕ್ರಾ....ಶ್ಚ - ಚಕ್ರಗಳಿಂದಲೂ, ಚಕ್ರದ ಏರುಕಾಲುಗಳಿಂದಲೂ,

---

ತಂದುಕೊಳ್ಳದೆ ತನ್ನ ಕೈಲಿ ಹಿಡಿದಿದ್ದ ಬಂಡೆಯಿಂದ, ರಣರಂಗದಲ್ಲಿದ್ದ ಸಮಸ್ತ ವಾನರರೂ ನೋಡುತ್ತಿರುವಂತೆಯೇ ಆ ರಾಕ್ಷಸನ ವಕ್ಷಸ್ಥಳಕ್ಕೆ ಹೊಡೆದನು. ಕೂಡಲೇ ಆ ವಿದ್ಯುನ್ಮಾಲಿಯು ಪುಡಿಗುಟ್ಟಿದ ವಕ್ಷಸ್ಥಳವುಳ್ಳವನಾಗಿ ನೆಲಕ್ಕುರುಳಿ ಪ್ರಾಣಗಳನ್ನು ತೊರೆದನು. ॥ ೩೬–೪೦ ॥ ಈ ಪ್ರಕಾರವಾಗಿ ಆ ರಣರಂಗದಲ್ಲಿ ಮಹಾ ಶೂರರಾದ ರಾಕ್ಷಸಶ್ರೇಷ್ಠರು ಹಿಂದಣ ದೇವಾಸುರ ಯುದ್ಧದಲ್ಲಿ ಎಂತೋ ಅಂತು ವೀರವಾನರರಿಂದ ಕೊಲ್ಲಲಾದರು. ಆಗಲಾ ಯುದ್ಧಭೂಮಿಯಾದರೋ ಭಗ್ನಗಳಾದ ಖಡ್ಗಗಳಿಂದಲೂ, ಗದೆಗಳಿಂದಲೂ, ಶಕ್ತ್ಯಾಯುಧಗಳಿಂದಲೂ, ತೋಮರಗಳಿಂದಲೂ, ಪಟ್ಟಿಶಗಳಿಂದಲೂ, ಮುರಿದ ರಥಗಳಿಂದಲೂ, ಭೇದಿಸಲಾದ ಕುದುರೆಗಳಿಂದಲೂ, ಕೊಂದುರುಳಿದ ಮದ್ದಾನೆಗಳಿಂದಲೂ, ಮೃತರಾದ ವಾನರರಿಂದಲೂ, ರಾಕ್ಷಸರಿಂದಲೂ, ರಥಚಕ್ರಗಳಿಂದಲೂ, ಏರುಕಾಲುಗಳಿಂದಲೂ ದಂಡಗಳಿಂದಲೂ ಕೂಡಿ ಬಹು ಭಯಂಕರವಾಗಿದ್ದಿತು. ಆ ರಣಭೂಮಿಯಲ್ಲಿ ಎಲ್ಲೆಲ್ಲಿಯೂ

ದಿಕ್ಷು ವಾನರರಕ್ಷಸಾಂ । ವಿಮರ್ದೇ ತುಮುಲೇ ತಸ್ಮಿನ್ ದೇವಾಸುರರಣೋಪಮೇ ॥ ೪೪-೪೫ ॥

ವಿದಾರ್ಯಮಾಣಾ ಹರಿಪುಂಗವೈಸ್ತದಾ
ನಿಶಾಚರಾಶ್ಯೋಣಿತದಿಗ್ಧಗಾತ್ರಾಃ ।
ಪುನಸ್ಸುಯುದ್ಧಂ ತರಸಾ ಸಮಾಸ್ಥಿತಾ
ದಿವಾಕರಸ್ಯಾಸ್ತಮಯಾಭಿಕಾಂಕ್ಷಿಣಃ ॥ ೪೬ ॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ತ್ರಿಚತ್ವಾರಿಂಶಸ್ಸರ್ಗಃ



---

ಕಾಡೀಮರಗಳಿಂದಲೂ, ಘೋರಂ-ಭಯಂಕರವಾದ, ಆಯೋಧನಂ-ಯುದ್ಧರಂಗವು, ಗೋಮಾ.....ಲಂ- ನರಿಗಳ ಗುಂಪುಗಳಿಂದ ವ್ಯಾಪ್ತವಾದುದು, ಬಭೂವ - ಆಯಿತು. ||೪೨-೪೪|| ದೇವಾ.....ಮೇ - ದೇವ ರಾಕ್ಷಸರ ಕಾಳೆಗಕ್ಕೆ ಸದೃಶವಾದ, ತುಮುಲೇ - ಸಂಕುಲವಾದ, ತಸ್ಮಿನ್ವಿಮರ್ದೇ - ಆ ಕಾಳೆಗದಲ್ಲಿ, ವಾನರರಕ್ಷಸಾಂ - ಕಪಿ ರಾಕ್ಷಸರ, ಕಬಂಧಾನಿ - ತಲೆಯಿಲ್ಲದ ಮುಂಡಗಳು, ದಿಕ್ಷು - ದಿಕ್ಕುಗಳಲ್ಲಿ, ಸಮುತ್ಪೇತುಃ - ಹಾರಿದವು. || ೪೫ || ತದಾ - ಆ ಕಾಲದಲ್ಲಿ, ಹರಿಪುಂಗವೈಃ - ಕಪಿಶ್ರೇಷ್ಠರಿಂದ, ವಿದಾರ್ಯಮಾಣಾಂ - ಶೀಳಿದ, ನಿಶಾಚರಾಃ - ರಕ್ಕಸರು, ಶೋಣಿ....ತ್ರಾಃ - ರಕ್ತದಿಂದ ವ್ಯಾಪಿಸಿದ ಶರೀರಗಳುಳ್ಳವರಾಗಿ, ದಿವಾಕರಸ್ಯ - ಸೂರ್ಯನ, ಅಸ್ತ....ಣಃ - ಅಸ್ತಮಾನವನ್ನು ಅಪೇಕ್ಷಿಸುತ್ತಿರುವವರಾಗಿ, ಪುನಃ - ಮತ್ತು, ತರಸಾ - ಜಾಗ್ರತೆಯಾಗಿ, ಸುಯುದ್ಧಂ-ಮಹಾ ಯುದ್ಧವನ್ನು ಕುರಿತು, ಸಮಾಸ್ಥಿತಾಃ - ಬಂದರು. || ೪೬ ||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಚತ್ವಾರಿಂಶಸ್ಸರ್ಗಃ



---

ಮಾಂಸಭಕ್ಷಕಗಳಾದ ನರಿಗಳು ತುಂಬಿದ್ದವು. ಆ ಯುದ್ಧವಾದರೋ ದೇವದಾನವ ಯುದ್ಧಕ್ಕೆ ಸಮಾನವಾಗಿ, ಸಂಕುಲವೂ ಸಂಮರ್ದವೂ ಆಗಿದ್ದಿತು. ಆ ಯುದ್ಧದಲ್ಲಿ ವಾನರರ ಮತ್ತು ರಾಕ್ಷಸರ ಮುಂಡಗಳು ಹಾರಿ ಬೀಳುತ್ತಿದ್ದುವು. ಆ ಸಮಯದಲ್ಲಿ ವಾನರೋತ್ತಮರಿಂದ ಭೇದಿಸಲ್ಪಟ್ಟ ಶರೀರಗಳುಳ್ಳವರಾಗಿ ರಕ್ತವನ್ನು ಕಾರುತ್ತಿರುವ ಕೆಲವರು ರಾಕ್ಷಸರು ಮರಣ ಹೊಂದಿದರು. ಮತ್ತೆ ಕೆಲವರು ರಾಕ್ಷಸರು ಮೊದಲಿಗಿಂತಲೂ ಬಲವಾದ ಯುದ್ಧವನ್ನು ಮಾಡಬೇಕೆಂಬ ಬಯಕೆಯಿಂದ ಸೂರ್ಯಾಸ್ತಮಯವನ್ನೇ ನಿರೀಕ್ಷಿಸುತ್ತಿದ್ದರು. ||೪೧-೪೬||

ಇಂತಿದು ವಾನರರಾಕ್ಷಸ ಯುದ್ಧವರ್ಣನವೆಂಬ ನಲವತ್ತಮೂರನೆಯ ಸರ್ಗವು
ಸಮಾಪ್ತವಾದುದು.



# ಯುದ್ಧಕಾಂಡೇ ಚತುಶ್ಚತ್ವಾರಿಂಶಸ್ಸರ್ಗಃ

**ಯುಧ್ಯತಾಮೇವ ತೇಷಾಂತು ತದಾ ವಾನರರಕ್ಷಸಾಂ । ರವಿರಸ್ತಂಗತೋ ರಾತ್ರಿಃ ಪ್ರವೃತ್ತಾ ಪ್ರಾಣಹಾರಿಣೀ ॥೧॥ ಅನ್ಯೋಽನ್ಯಂ ಬದ್ಧವೈರಾಣಾಂ ಘೋರಾಣಾಂ ಜಯಮಿಚ್ಛತಾಂ । ಸಂಪ್ರವೃತ್ತಂ ನಿಶಾಯುದ್ಧಂ ತದಾ ವಾನರರಕ್ಷಸಾಂ ॥ ೨ ॥ ರಾಕ್ಷಸೋಽಸೀತಿ ಹರಯೋ ಹರಿಶ್ಚಾಸೀತಿರಾಕ್ಷಸಾಃ । ಅನ್ಯೋಽನ್ಯಂ ಸಮರೇ ಜಘ್ನು ಸ್ತಸ್ಮಿಂಸ್ತಮಸಿ ದಾರುಣೇ ॥೩॥ 'ಜಹಿ ದಾರಯ ಚೈಹೀತಿ' 'ಕಥಂ ವಿದ್ರವಸೀ' ತಿಚ । ಏವಂ ಸುತುಮುಲಶ್ಶಬ್ದಸ್ತಸ್ಮಿಂಸ್ತಮಸಿ ಶುಶ್ರುವೇ ॥೪॥ ಕಾಳಾಃ ಕಾಂಚನಸನ್ನಾಹಾ**

---

ತದಾ- ಆ ಕಾಲದಲ್ಲಿ, ತೇಷಾಂವಾನರರಕ್ಷಸಾಂ- ಆ ಕಪಿಗಳೂ ರಾಕ್ಷಸರೂ, ಯುದ್ಧತಾಮೇವ- ಕಾಳೆಗ ಮಾಡುತ್ತಿರಲು, ರವಿಃ - ಸೂರ್ಯನು, ಅಸ್ತಂ - ಅಸ್ತಮಯವನ್ನು, ಗತಃ - ಹೊಂದಿದನು, ಪ್ರಾಣಹಾರಿಣೀ - ಪ್ರಾಣಗಳನ್ನು ಅಪಹರಿಸುತ್ತಿರುವ, ರಾತ್ರಿಃ - ರಾತ್ರಿಯು, ಪ್ರವೃತ್ತಾ - ಪ್ರಾಪ್ತ ವಾಯಿತು. ॥ ೧ ॥ ತದಾ - ಆ ರಾತ್ರಿಯಲ್ಲಿ, ಅನ್ಯೋನ್ಯಂ - ಪರಸ್ಪರವಾಗಿ, ಬದ್ಧವೈರಾಣಾಂ - ಕಟ್ಟಲ್ಪಟ್ಟ ದ್ವೇಷವುಳ್ಳ, ಘೋರಾಣಾಂ - ಭಯಂಕರರಾದ, ಜಯಂ - ಜಯವನ್ನು, ಇಚ್ಛತಾಂ - ಅಪೇಕ್ಷಿಸುತ್ತಿರುವ, ವಾನರರಕ್ಷಸಾಂ - ಕಪಿರಾಕ್ಷಸರಿಗೆ, ನಿಶಾಯುದ್ಧಂ - ರಾತ್ರಿಯುದ್ಧವು, ಸಂಪ್ರವೃತ್ತಂ - ಆರಂಭವಾಯಿತು. ॥೨॥ ದಾರುಣೇ - ಭಯಂಕರವಾದ, ತಸ್ಮಿಂತಮಸಿ - ಆ ಕತ್ತಲಿನಲ್ಲಿ, ರಾಕ್ಷಸೋಽಸೀತಿ-ರಾಕ್ಷಸನಾಗಿದ್ದೀ ಎಂದು, ಹರಯಃ-ಕಪಿಗಳು, ಹರಿಶ್ಚಾಸೀತಿ-ಕಪಿಯಾಗಿದ್ದೀಯೆಂದು, ರಾಕ್ಷಸಾಃ-ರಕ್ಕಸರು, ಸಮರೇ-ಕಾಳೆಗದಲ್ಲಿ, (ತಂತಮ್ಮಲ್ಲಿಯೇ) ಅನ್ಯೋನ್ಯಂ - ಒಬ್ಬರನ್ನೊಬ್ಬರು, ಜಘ್ನುಃ-ಹೊಡೆದರು, ತಸ್ಮಿಂತಮಸಿ-ಆ ಗಾಢಾಂಧಕಾರದಲ್ಲಿ, ಜಹಿ-ಹೊಡಿ, ದಾರಯ-ಶೀಳು, ಯೇಹೀತಿ-ಬಾರೆಂದೂ, ಕಥಂವಿದ್ರವಸೀತಿಚ - ಓಡಿಹೋಗುತ್ತೀಯೆಂದೂ, ಸುತುಮುಲಃ-ಬಹಳ ಸಂಕುಲವಾದ, ಶಬ್ದಃ - ಧ್ವನಿಯು, ಏವಂ - ಈ ಪರಿಯಾಗಿ, ಶುಶ್ರುವೇ - ಕೇಳಿಸಿತು. ॥ ೪ ॥ ತಸ್ಮಿಂತಮಸಿ - ಆ

---

ಈ ರೀತಿ ವಾನರರಿಗೂ, ರಾಕ್ಷಸರಿಗೂ ಯುದ್ಧವು ನಡೆಯುತ್ತಿರುವಾಗಲೇ ಸೂರ್ಯನು ಅಸ್ತಮಿಸಿದನು. ಆ ಸಮಯದಲ್ಲಿ ವಾನರರೆಲ್ಲರ ಪ್ರಾಣಗಳನ್ನಪಹರಿಸುವ ಕಾಳರಾತ್ರಿಯು ಪ್ರಾಪ್ತವಾಯಿತು. ಆಗ ಒಬ್ಬರನ್ನೊಬ್ಬರು ಸ್ಪರ್ಧಿಸಿ ಯುದ್ಧ ಮಾಡುತ್ತಿರುವವರೂ ಒಬ್ಬರೊಡನೊಬ್ಬರು ಸೆಣಸುತ್ತಿರುವವರೂ, ಒಬ್ಬರನ್ನೊಬ್ಬರು ಜಯಿಸಬೇಕೆಂದು ಕೋರುತ್ತಿರುವವರೂ ಆದ ವಾನರರಿಗೂ, ರಾಕ್ಷಸರಿಗೂ ರಾತ್ರಿಯುದ್ಧವು ಮೊದಲಾಯಿತು. ಆ ರಾತ್ರಿಯಲ್ಲಿ ರಾಕ್ಷಸರೂ, ವಾನರರೂ ಒಬ್ಬರನ್ನೊಬ್ಬರು ಗುರ್ತರಿಯದೆ ತಮ್ಮ ತಮ್ಮವರನ್ನೇ, ಅವರಲ್ಲಿಕಪಿಗಳು 'ನೀನು ರಾಕ್ಷಸನಾಗಿರುವೆ' ಎಂದೂ, ರಾಕ್ಷಸರು ತಮ್ಮವರನ್ನೇ, 'ನೀನು ವಾನರನಾಗಿರುವೆ' ಎಂದೂ ಹೊಡೆದಾಡಲಾರಂಭಿಸಿದರು. ಆ ಉಭಯ ಪಕ್ಷಗಳಲ್ಲಿಯೂ, 'ಹೊಡಿ, ಬಡಿ, ಸೀಳು, ಎಲ್ಲಿಗೆ ಓಡುವೆ' ಎಂಬಿವೇ ಮೊದಲಾದ ಮಾತುಗಳು ಕೇಳಿಸುತ್ತಿದ್ದುವು. ಆ ಕಾಳರಾತ್ರಿಯ ಸಮಯದಲ್ಲಿ ಬಹು ಕಪ್ಪಾದ ಶರೀರಗಳುಳ್ಳವರೂ, ಸ್ವರ್ಣ ಕವಚಗಳುಳ್ಳ

ಸ್ತಸ್ಮಿಂಸ್ತಮಸಿ ರಾಕ್ಷಸಾಃ । ಸಂಪ್ರಾದೃಶ್ಯಂತ ಶೈಲೇಂದ್ರಾ ದೀಪ್ತೌಷಧಿವನಾ ಇವ ॥೫॥ ತಸ್ಮಿಂಸ್ತಮಸಿ ದುಷ್ಪಾರೇ ರಾಕ್ಷಸಾಃ ಕ್ರೋಧಮೂರ್ಛಿತಾಃ । ಪರಿಪೇತುರ್ಮಹಾವೇಗಾ ಭಕ್ಷಯಂತಃ ಪ್ಲವಂಗಮಾನ್ ॥೬॥ ತೇ ಹಯಾನ್ ಕಾಂಚನಾಪೀಡಾನ್ ಧ್ವಜಾಂಶ್ಚಾಗ್ನಿಶಿಖೋಪಮಾನ್ । ಆಪ್ಲುತ್ಯ ದಶನೈಸ್ತೀಕ್ಷ್ಣೈರ್ಭೀಮಕೋಪಾ ವ್ಯದಾರಯನ್ ॥೭॥ ವಾನರಾ ಬಲಿನೋ ಯುದ್ಧೇ ಕ್ಷೋಭಯನ್ ರಾಕ್ಷಸೀಂ ಚಮೂಂ । ಕುಂಜರಾನ್ ಕುಂಜರಾರೋಹಾನ್ಪತಾಕಾಧ್ವಜಿನೋ ರಥಾನ್ । ಚಕರ್ಷುಶ್ಚ ದದಂಶುಶ್ಚ ದಶನೈಃ ಕ್ರೋಧಮೂರ್ಛಿತಾಃ ॥ ೮ ॥ ಲಕ್ಷ್ಮಣಶ್ಚಾಪಿ ರಾಮಶ್ಚ ಶರೈರಾಶೀವಿಷೋಪಮೈಃ ।

---

ಅಂಧಕಾರದಲ್ಲಿ, ಕಾಳಾಃ - ಕಪ್ಪಗಿರುವ, ಕಾಂಚನಸನ್ನಾಹಾಃ - ಭಂಗಾರದ ಕವಚಗಳುಳ್ಳ, ರಾಕ್ಷಸಾಃ - ರಕ್ಕಸರು, ದೀಪ್ತೌಷಧಿವನಾಃ - ಹೊಳೆಯುತ್ತಿರುವ ಜ್ಯೋತಿರ್ಲತೆಗಳ ವನಗಳುಳ್ಳ, ಶೈಲೇಂದ್ರಾಇವ - ದೊಡ್ಡ ಬೆಟ್ಟಗಳಂತೆ, ಸಂಪ್ರಾದೃಶ್ಯಂತ - ಕಾಣಿಸಿದರು. ॥ ೫ ॥ ದುಷ್ಪಾರೇ - ಅಪಾರವಾದ, ತಸ್ಮಿಂತಮಸಿ - ಆ ಕತ್ತಲಿನಲ್ಲಿ, ರಾಕ್ಷಸಾಃ - ರಕ್ಕಸರು, ಮಹಾವೇಗಾಃ - ಬಹಳ ವೇಗವುಳ್ಳವರಾಗಿ, ಪ್ಲವಂಗಮಾನ್ - ಕಪಿಗಳನ್ನು, ಭಕ್ಷಯಂತಃ - ತಿನ್ನುತ್ತ, ಯದಾ - ಯಾವ ಕಾಲದಲ್ಲಿ, ಪರಿಪೇತುಃ - ಸಂಚರಿಸಿದರೋ. ॥ ೬ ॥ ಭೀಮಕೋಪಾಃ - ಭಯಂಕರ ಕೋಪವುಳ್ಳ, ತೇ - ಆ ಕಪಿಗಳು, ಕಾಂಚನಾಪೀಡಾನ್ - ಭಂಗಾರದ ಅಲಂಕಾರಗಳುಳ್ಳ, ಹಯಾನ್ - ಕುದುರೆಗಳನ್ನು, ಅಗ್ನಿಶಿಖೋಪಮಾನ್ - ಅಗ್ನಿಜ್ವಾಲೆಗೆ ಸಮಾನಗಳಾದ, ಧ್ವಜಾಂಶ್ಚ - ನಿಶಾನಿಗಳನ್ನು, ಆಪ್ಲುತ್ಯ - ಹಾರಿ, ತೀಕ್ಷ್ಣೈಃ - ಹದವಾಗುಳ್ಳ, ದಶನೈಃ - ದಂತಗಳಿಂದ, ವ್ಯದಾರಯನ್ - ಶೀಳಿದರು. ॥ ೭ ॥ ಬಲಿನಃ - ಬಲವಂತರಾದ, ವಾನರಾಃ - ಕಪಿಗಳು, ರಾಕ್ಷಸೀಂ - ರಾಕ್ಷಸ ಸಂಬಂಧವಾದ, ಚಮೂಂ - ಸೈನ್ಯವನ್ನು, ಯುದ್ಧೇ - ಕಾಳೆಗದಲ್ಲಿ, ಕ್ಷೋಭಯನ್ - ಕ್ಷೋಭೆಗೊಳಿಸಿದರು, ಕ್ರೋಧಮೂರ್ಛಿತಾಃ - ಕ್ರೋಧಾವಿಷ್ಟರಾಗಿ, ಕುಂಜರಾನ್ - ಆನೆಗಳನ್ನು, ಕುಂಜರಾರೋಹಾನ್ - ಮಾವಟಿಗರನ್ನೂ, ಪತಾಕಾಧ್ವಜಿನಃ - ಧ್ವಜಪಟಗಳೂ ನಿಶಾನಿಗಳೂ ಉಳ್ಳ, ರಥಾನ್ - ತೇರುಗಳನ್ನೂ, ದಶನೈಃ - ದಂತಗಳಿಂದ, ದದಂಶುಶ್ಚ - ಕಡಿದುಹಾಕಿದರು, ಚಕರ್ಷುಶ್ಚ - ಕೆಳಕ್ಕೆ ಸೆಳೆದರು. ॥ ೮ ॥ ಲಕ್ಷ್ಮಣಶ್ಚಾಪಿ - ಲಕ್ಷ್ಮಣನೂ, ರಾಮಶ್ಚ - ಶ್ರೀರಾಮನೂ, ಆಶೀವಿಷೋಪಮೈಃ - ಸರ್ಪಗಳಿಗೆ ಸಮಾನವಾದ, ಶರೈಃ-

---

ವರೂ ಆದ ರಾಕ್ಷಸರು ಪ್ರಜ್ವಲಿಸುತ್ತಿರುವ ತೃಣ ಜ್ಯೋತಿಗಳೊಡಗೂಡಿದ ಪರ್ವತಗಳಂತೆ ಬೆಳಗುತ್ತಲಿದ್ದರು. ॥ ೧-೫ ॥ ಆ ಕಾಳರಾತ್ರಿಯ ಸಮಯದಲ್ಲಿ ಮಹಾ ಕೋಪಾವಿಷ್ಟರಾದ ಆ ರಾಕ್ಷಸರೆಲ್ಲರೂ ಕೈಗೆ ಸಿಕ್ಕಿದ ವಾನರರೆಲ್ಲರನ್ನೂ ಬಿಡದೆ ಭಕ್ಷಿಸುತ್ತಿದ್ದರು. ಅತಿಕ್ರಮಿಸಲಸದಳವಾದ ಆ ಭಯಂಕರ ರಾತ್ರಿಯಲ್ಲಿ ಆ ವಾನರರೆಲ್ಲರೂ ಮಹಾ ಕುಪಿತರಾಗಿ, ಸ್ವರ್ಣಭೂಷಣಗಳನ್ನು ಧರಿಸಿದ ಕುದುರೆಗಳನ್ನೂ, ಅಗ್ನಿಜ್ವಾಲೆಗಳಿಗೆ ಸಮಾನಗಳಾದ ಧ್ವಜಗಳನ್ನೂ, ಮಹಾ ತೀಕ್ಷ್ಣಗಳಾದ ತಮ್ಮ ದಂತನಖಾಯುಧಗಳಿಂದ ಸಿಗಿದುಹಾಕಿದರು. ಇಷ್ಟೆಯಲ್ಲದೆ ಮಹಾ ಬಲಸಂಪನ್ನರಾದ ಆ ವೀರ ವಾನರರು ಆ ರಣರಂಗದಲ್ಲಿ ರಾಕ್ಷಸಸೇನೆಯೆಲ್ಲವನ್ನೂ ವಿಧವಿಧವಾಗಿ ಪೀಡಿಸಿದರು; ಮಹಾ ಕುಪಿತರಾಗಿ ಆನೆಗಳನ್ನೇರಿ ಯುದ್ಧಮಾಡುತ್ತಿದ್ದ ರಾಕ್ಷಸವೀರರನ್ನೂ, ಪತಾಕೆಗಳೊಡಗೂಡಿದ ರಥಗಳನ್ನೂ ಮೇಲಕ್ಕೆ ಹಾರಿ ಕೋರೆದಾಡೆಗಳಿಂದಲೇ ಮುರಿದು ಧ್ವಂಸ ಮಾಡಿದರು. ಆ ಸಮಯದಲ್ಲಿ ಅವರು ಆ ರಾಕ್ಷಸಸೇನೆ

ದೃಶ್ಯಾದೃಶ್ಯಾನಿ ರಕ್ಷಾಂಸಿ ಪ್ರವರಾಣಿ ನಿಜಘ್ನತುಃ ॥ ೯ ॥ ತುರಂಗಖುರವಿಧ್ವಸ್ತಂ ರಥನೇಮಿ ಸಮುತ್ಥಿತಂ । ರುರೋಧ ಕರ್ಣನೇತ್ರಾಣಿ ಯುಧ್ಯತಾಂ ಧರಣೀರಜಃ॥೧೦॥ ವರ್ತಮಾನೇ ಮಹಾಘೋರೇ ಸಂಗ್ರಾಮೇ ರೋಮಹರ್ಷಣೇ । ರುಧಿರೋದಾ ಮಹಾಘೋರಾ ನದ್ಯಸ್ತತ್ರ ಪ್ರಸುಸ್ರುವುಃ ॥ ೧೧ ॥ ತತೋ ಭೇರೀ ಮೃದಂಗಾನಾಂ ಪಣವಾನಾಂಚ ನಿಸ್ವನಃ । ಶಂಖವೇಣುಸ್ವನೋನ್ಮಿಶ್ರಸ್ಸಂಬಭೂವಾದ್ಭುತೋಪಮಃ ॥ ೧೨ ॥ ಹತಾನಾಂ ಸ್ತನಮಾನಾನಾಂ ರಾಕ್ಷಸಾನಾಂಚ ನಿಸ್ವನಃ । ಶಸ್ತಾನಾಂ ವಾನರಾಣಾಂಚ

ಬಾಣಗಳಿಂದ, ದೃಶ್ಯಾದೃಶ್ಯಾನಿ-ಕಂಡೂ ಕಾಣದಿರುವವರನ್ನು, ಪ್ರವರಾಣಿ-ದೊಡ್ಡವರಾದ, ರಕ್ಷಾಂಸಿ-ರಕ್ಕಸರನ್ನೂ, ನಿಜಘ್ನತುಃ - ಹೊಡೆದರು. ॥ ೯ ॥ ತುರಂಗಖುರವಿಧ್ವಸ್ತಂ - ಕುದುರೆಗಳ ಗೊರಸುಗಳಿಂದ ಚೂರ್ಣಮಾಡಲ್ಪಟ್ಟ, ರಥ....ತಂ - ರಥಚಕ್ರಗಳ ತುದಿಗಳಿಂದ ಹುಟ್ಟಿದ, ಧರಣೀರಜಃ - ಭೂಮಿಯ ಧೂಳಿಯು, ಯುಧ್ಯತಾಂ - ಕಾಳೆಗ ಮಾಡುತ್ತಿರುವರ, ಕರ್ಣನೇತ್ರಾಣಿ - ಶ್ರೋತ್ರಗಳನ್ನೂ ನೇತ್ರಗಳನ್ನೂ, ರುರೋಧ - ತಡೆಮಾಡಿತು. ॥ ೧೦ ॥ ಮಹಾಘೋರೇ - ಬಹಳ ಭಯಂಕರವಾದ, ರೋಮಹರ್ಷಣೇ - ರೋಮಾಂಚವನ್ನುಂಟುಮಾಡುತ್ತಿರುವ, ಸಂಗ್ರಾಮೇ - ಕಾಳೆಗವು, ವರ್ತಮಾನೇ - ನಡೆಯುತ್ತಿರಲು, ತತ್ರ - ಆ ರಣರಂಗದಲ್ಲಿ, ರುಧಿರೋದಾಃ - ರಕ್ತವೇ ಉದಕವಾಗುಳ್ಳ, ಮಹಾಘೋರಾಃ - ಬಹಳ ಭಯಂಕರಗಳಾದ, ನದ್ಯಃ - ಹೊಳೆಗಳು, ಪ್ರಸುಸ್ರುವುಃ - ಪ್ರವಹಿಸಿದವು. ॥೧೧॥ ತತಃ-ಬಳಿಕ, ಭೇರೀ....ನಾಂ-ಭೇರಿಗಳ ಮತ್ತು ಮದ್ದಳೆಗಳ, ಪಣವಾನಾಂಚ-ತಮ್ಮಟೆಗಳ, ನಿಸ್ವನಃ - ಧ್ವನಿಯು, ಶಂಖ....ಶ್ರಃ - ಶಂಖನಾದಗಳಿಂದಲೂ, ವೇಣುಧ್ವನಿಯಿಂದಲೂ ಕೂಡಿ, ಅದ್ಭುತೋಪಮಃ-ಆಶ್ಚರ್ಯಕರವಾದದ್ದಾಗಿ, ಸಂಬಭೂವ-ಆಯಿತು. ॥ ೧೨ ॥ ಹತಾನಾಂ-ಹೊಡೆಯಲ್ಪಡುವ, ಸ್ತನಮಾನಾನಾಂ - ಕೂಗುತ್ತಿರುವ, ರಾಕ್ಷಸಾನಾಂಚ - ರಕ್ಕಸರ, ಶಸ್ತಾನಾಂ - ಹಿಂಸಿಸಲ್ಪಡುತ್ತಿರುವ, ವಾನರಾಣಾಂಚ-ಕಪಿಗಳ, ನಿಸ್ವನಃ-ಕೋಲಾಹಲಧ್ವನಿಯು, ಅತಿದಾರುಣಃ-ಬಹಳ ಕ್ರೂರವಾದದ್ದು, ಸಂಬಭೂವ - ಆಯಿತು. ॥೧೩॥ ಶಕ್ತಿ....ಧೈಃ - ಶಕ್ತ್ಯಾಯುಧಗಳಿಂದಲೂ

ಯೆಲ್ಲವನ್ನೂ ಬಹಳವಾಗಿ ಕ್ಷೋಭೆಗೊಳಿಸಿ ಬಿಟ್ಟರು. ಅದೇ ಸಮಯದಲ್ಲಿ ಶ್ರೀರಾಮಲಕ್ಷ್ಮಣರು ಮಹಾ ಕಾಳಸರ್ಪಗಳಿಗೆ ಸಮಾನಗಳಾದ ಬಾಣಜಾಲಗಳಿಂದ ಕಣ್ಣಿಗೆ ಕಾಣಿಸುವ, ಕಾಣಿಸದಿರುವ ರಾಕ್ಷಸರೆಲ್ಲರನ್ನೂ ಹೊಡೆದು ಕೆಡಹುತ್ತಿದ್ದರು. ಕುದುರೆಗಳ ಗೊರಸುಗಳಿಂದಲೂ, ರಥಗಳ ಚಕ್ರಗಳಿಂದಲೂ ಮೇಲೆದ್ದ ಧೂಳಿಯು ಆ ಯುದ್ಧ ಸಮಯದಲ್ಲಿ ಯುದ್ಧ ಮಾಡುತ್ತಿದ್ದವರ ಕಣ್ಣು ಕಿವಿಗಳನ್ನೇ ಮುಚ್ಚಿಬಿಟ್ಟಿತು. ॥೯–೧೦॥ ಇದರಿಂದ ಅವರಿಗೆ ಮಾರ್ಗವೇ ತಿಳಿಯದೆ ಹೋಯಿತು. ಹೀಗೆ ಬಹು ಭಯಂಕರವಾದುದೂ, ದಿಗ್ಭ್ರಾಂತಿಯನ್ನುಂಟುಮಾಡುವುದೂ ಆದ ಆ ರಣಭೂಮಿಯಲ್ಲಿ ಬಹು ಭೀಕರವಾದುದೂ, ರಕ್ತವೆಂಬ ಉದಕವುಳ್ಳುದೂ ಆದ ನದಿಗಳು ಪ್ರವಹಿಸಲಾರಂಭಿಸಿದುವು. ಆ ಸಮಯದಲ್ಲಿ ರಣಭೇರಿಗಳ, ಮದ್ದಳೆಗಳ, ಶಂಖಗಳ, ಕೊಳಲುಗಳ ಧ್ವನಿಗಳು ಪರಮಾದ್ಭುತಕರಗಳಾಗಿ ಹೊರಹೊರಡುತ್ತಿದ್ದುವು. ಆ ಧ್ವನಿಗಳು ಭೂಮ್ಯಾಕಾಶಗಳ ಮಧ್ಯಪ್ರದೇಶವನ್ನೆಲ್ಲಾ ವ್ಯಾಪಿಸಿದ್ದುವು. ಮೃತಿಯೊಂದುತ್ತಿರುವವರೂ, ಭೀಕರ ನಾದಗಳನ್ನು ಮಾಡುತ್ತಿರುವವರೂ ಆದ ರಾಕ್ಷಸರ ಮತ್ತು ರಾಕ್ಷಸರಿಂದ ಪೀಡಿತರಾದ ವಾನರರ ಆರ್ತಧ್ವನಿಗಳೂ ಭಯಂಕರ

ಸಂಬಭೂವಾತಿದಾರುಣಃ || ೧೩ || ಹತ್ಯೆರ್ವಾನರವೀರೈಶ್ಚ ಶಕ್ತಿಶೂಲಪರಶ್ವಧೈಃ | ನಿಹತೈಃ ಪರ್ವತಾಗ್ರೈಶ್ಚ ರಾಕ್ಷಸೈಃ ಕಾಮರೂಪಿಭಿಃ ||೧೪|| ಶಸ್ತ್ರಪುಷ್ಪೋಪಹಾರಾಚ ತತ್ರಾಸೀದ್ಯುದ್ಧಮೇದಿನೀ | ದುರ್ಜ್ಞೇಯಾ ದುರ್ನಿವೇಶಾಚ ಶೋಣಿತಾಸ್ರಾವಕರ್ದಮಾ || ೧೫ || ಸಾ ಬಭೂವ ನಿಶಾ ಘೋರಾ ಹರಿರಾಕ್ಷಸಹಾರಿಣೀ | ಕಾಳರಾತ್ರೀವ ಭೂತಾನಾಂ ಸರ್ವೇಷಾಂ ದುರತಿಕ್ರಮಾ ||೧೬|| ತತಸ್ತೇ ರಾಕ್ಷಸಾಸ್ತತ್ರ ತಸ್ಮಿಂಸ್ತಮಸಿ ದಾರುಣೇ | ರಾಮಮೇವಾಭ್ಯವರ್ತಂತ ಸಂಸೃಷ್ಟಾಶ್ಶರವೃಷ್ಟಿಭಿಃ || ೧೭ || ತೇಷಾ ಮಾಪತತಾಂ ಶಬ್ದಃ ಕ್ರುದ್ಧಾನಾಮಪಿ ಗರ್ಜತಾಂ | ಉದ್ವರ್ತ ಇವ ಸಪ್ತಾನಾಂ ಸಮು

---

ತ್ರಿಶೂಲಾಯುಧಗಳಿಂದಲೂ, ಹತ್ಯೈಃ - ಹೊಡೆಯಲ್ಪಟ್ಟ, ವಾನರವೀರೈಶ್ಚ - ಶೂರರಾದ ವಾನರವೀರ ರಿಂದಲೂ, ಪರ್ವತಾಗ್ರೈಃ - ಪರ್ವತ ಶಿಖರಗಳಿಂದ, ನಿಹತೈಃ - ಹೊಡೆಯಲ್ಪಟ್ಟ, ಕಾಮರೂಪಿಭಿಃ - ಕಾಮರೂಪರಾದ, ರಾಕ್ಷಸೈಃ - ರಕ್ಕಸರಿಂದ, ಶಸ್ತ್ರ....ರಾಃ - ಶಸ್ತ್ರವೆಂಬ ಹುವ್ವುಗಳ ಪೂಜೆಯುಳ್ಳ, ಯುದ್ಧಮೇದಿನೀ - ಯುದ್ಧಭೂಮಿಯು, ತತ್ರ - ಆ ಕಾಲದಲ್ಲಿ, ಶೋಣಿ....ಮಾ - ರಕ್ತಸ್ರಾವದಿಂದ ಕೆಸರುಳ್ಳುದಾಗಿ, ದುರ್ಜ್ಞೇಯಾ - ತಿಳಿಯಲಸಾಧ್ಯವಾದದ್ದಾಗಿಯೂ, ದುರ್ನಿವೇಶ್ಯಾಚ - ದುಷ್ಪ್ರವೇಶ್ಯ ವಾಗಿಯೂ, ಬಭೂವ - ಆಯಿತು. || ೧೪-೧೫ || ಹರಿ....ಣಿ - ಕಪಿ ರಾಕ್ಷಸರೆಲ್ಲರಿಗೂ ನಾಶಕರವಾದ, ಸಾನಿಶಾ - ಆ ರಾತ್ರಿಯು, ಕಾಳರಾತ್ರೀವ - ಪ್ರಳಯಕಾಲದ ರಾತ್ರಿಯಂತೆ, ಸರ್ವೇಷಾಂ - ಸಮಸ್ತ ವಾದ, ಭೂತಾನಾಂ - ಪ್ರಾಣಿಗಳಿಗೆ, ದುರತಿಕ್ರಮಾ - ಕಳೆಯಲಸಾಧ್ಯವು, ಅಭವತ್ - ಆಯಿತು. || ೧೬ || ತತಃ - ಬಳಿಕ, ದಾರುಣೇ - ಭಯಂಕರವಾದ, ತತ್ರ - ಆ ರಾತ್ರಿಯಲ್ಲಿ, ತಸ್ಮಿಂತಮಸಿ - ಆ ಅಂಧಕಾರದಲ್ಲಿ, ತೇರಾಕ್ಷಸಾಃ - ಆ ರಕ್ಕಸರು, ಶರವೃಷ್ಟಿಭಿಃ - ಬಾಣವರ್ಷಗಳಿಂದ, ಸಂಸೃಷ್ಟಾಃ - ಸೇರಿದವರಾಗಿ, ರಾಮಮೇವ - ಶ್ರೀರಾಮನನ್ನೇ ಕುರಿತು, ಅಭ್ಯವರ್ತಂತ - ಅಭಿಮುಖವಾಗಿ ಬಂದರು. ||೧೭|| ಕ್ರುದ್ಧಾನಾಂ - ಕೋಪಿಷ್ಠರಾದ, ಗರ್ಜತಾಮಪಿ - ಗರ್ಜನೆ ಮಾಡುತ್ತ, ಆಪತತಾಂ - ಬರುತ್ತಿರುವ, ತೇಷಾಂ-ಆ ರಕ್ಕಸರ, ಶಬ್ದಃ-ಧ್ವನಿಯು, ಸಪ್ತಾನಾಂ-ಏಳಾದ, ಸಮುದ್ರಾಣಾಂ-ಕಡಲು ಗಳ, ಉದ್ವರ್ತೇ-ಪ್ರಳಯಕಾಲದಲ್ಲಿ ಸೇರಿದಾಗಣ, ಶಬ್ದ ಇವ-ಘೋಷದಂತೆ, ಪ್ರಶುಶ್ರುವೇ-ಕೇಳಿಸಿತು.

---

ವಾಗಿದ್ದುವು. ಆಗಲಾ ಯುದ್ಧಭೂಮಿಯಾದರೋ ಕೊಲ್ಲಲ್ಪಟ್ಟು ಕೆಳಕ್ಕೆ ಬಿದ್ದ ವಾನರವೀರ ರಿಂದಲೂ, ಶಕ್ತಿ, ಶೂಲ, ಪರಶುವೇ ಮೊದಲಾದ ಆಯುಧಗಳೊಡನೆಯೂ, ಪರ್ವತೋಪಮ ಗಾತ್ರಗಳೊಡನೆಯೂ ಕೂಡಿ ಕಾಮರೂಪರೂ, ಕೆಳಗೆ ಬಿದ್ದಿರುವವರೂ ಆದ ರಾಕ್ಷಸವೀರ ರಿಂದಲೂ ತುಂಬಿ ಶಸ್ತ್ರಗಳೆಂಬ ಪುಷ್ಪಗಳಿಂದ ಅಲಂಕೃತವಾಗಿದ್ದಿತು. ಆ ರಾತ್ರಿಯಾದರೋ ತಿಳಿಯಲಸಾಧ್ಯವಾಗಿಯೂ, ಪ್ರವೇಶಿಸಲಶಕ್ಯವಾಗಿಯೂ, ರಕ್ತಪ್ರವಾಹಗಳಿಂದಲೂ, ಮಾಂಸ ಕರ್ದಮದಿಂದಲೂ ಕೂಡಿ ರಾಕ್ಷಸಸಂಹಾರಿಣಿಯಾಗಿಯೂ ಆಗಿ ಬಹು ಭಯಂಕರವಾಗಿ ದ್ದಿತು. ||೧೧-೧೬|| ಆ ರಾತ್ರಿಯ ಭಯಂಕರವಾದ ಕಗ್ಗತ್ತಲಲ್ಲಿ ರಾಕ್ಷಸರೆಲ್ಲರೂ ಶ್ರೀರಾಮನ ಮೇಲೆ ಅಂಬಿನ ಮಳೆಯನ್ನೇ ಸುರಿಸಿದರು. ಸಮಸ್ತ ಭೂತಗಳಿಗೂ ವಿನಾಶಕರವಾದ ಆ ರಾತ್ರಿಯಲ್ಲಿ ಪರಸ್ಪರವಾಗಿ ಯುದ್ಧಮಾಡುತ್ತಿರುವವರೂ, ಮಹಾ ಕೋಪಸಮನ್ವಿತರೂ ಆದ ಆ ವಾನರ ರಾಕ್ಷಸರ ಸಂಕುಲಸಮರನಾದವು ಪ್ರಳಯಕಾಲದಲ್ಲಿ ಸಪ್ತಸಮುದ್ರಗಳೂ ಒಂದಾಗಿ ಉಂಟಾಗುವ ಮಹಾ ಧ್ವನಿಯನ್ನನುಕರಿಸುತ್ತಿದ್ದಿತು. ಆಗ ಶ್ರೀರಾಮನು ತನ್ನ

ದ್ರಾಣಾಂ ಪ್ರಶುಶ್ರುವೇ ॥ ೧೮ ॥ ತೇಷಾಂ ರಾಮಃ ಶರೈಃ ಷಡ್ಭಿಃ ಷಡ್ಜಗಾನ ನಿಶಾಚರಾನ್ । ನಿಮೇಷಾಂತರಮಾತ್ರೇಣ ಶಿತೈರಗ್ನಿಶಿಖೋಪಮೈಃ ॥೧೯॥ ಯಜ್ಞಶತ್ರುಶ್ಚ ದುರ್ಧರ್ಷೋ ಮಹಾಪಾರ್ಶ್ವಮಹೋದರೌ । ವಜ್ರದಂಷ್ಟ್ರೋ ಮಹಾಕಾಯಸ್ತೌ ಚೋಭೌ ಶುಕಸಾರಣೌ ॥ ೨೦ ॥ ತೇತು ರಾಮೇಣ ಬಾಣೌಘೈಸ್ಸರ್ವೇ ಮರ್ಮಸು ತಾಡಿತಾಃ । ಯುದ್ಧಾದಪಸೃತಾಸ್ತತ್ರ ಸಾವಶೇಷಾಯುಷೋಽಭವನ್ ॥ ೨೧ ॥ ತತ್ರ ಕಾಂಚನಚಿತ್ರಾಂಗೈಃ ಶರೈರಗ್ನಿಶಿಖೋಪಮೈಃ । ದಿಶಶ್ಚಕಾರ ವಿಮಲಾಃ ಪ್ರದಿಶಶ್ಚ ಮಹಾಬಲಾಃ (ಪ್ರ ರಾಮನಾಮಾಂಕಿತೈರ್ಬಾಣೈರ್ವ್ಯಾಪ್ತಂ ತದ್ರಣಮಂಡಲಂ?) ॥೨೨॥ ಯೇತ್ವನ್ಯೇ ರಾಕ್ಷಸಾ ಭೀಮಾ ರಾಮಸ್ಯಾಭಿಮುಖೇಸ್ಥಿತಾಃ । ತೇಽಪಿ ನಷ್ಟಾಸ್ಸಮಾ

---

॥೧೮॥ ತೇಷಾಂ - ಆ ರಕ್ಕಸರ ಮಧ್ಯದಲ್ಲಿ, ಷಟ್ ನಿಶಾಚರಾನ್ - ಆರುಮಂದಿ ರಾಕ್ಷಸರನ್ನು, ರಾಮಃ- ಶ್ರೀರಾಮನು, ನಿಮೇ....ಣ - ಅಂದರೆ ನಿಮಿಷಮಾತ್ರದಲ್ಲಿಯೇ, ಅಗ್ನಿಶಿಖೋಪಮೈಃ - ಅಗ್ನಿಜ್ವಾಲೆಗೆ ಸಮಾನಗಳಾದ, ಶಿತೈಃ - ತೀಕ್ಷ್ಣಗಳಾದ, ಷಡ್ಭಿಃಶರೈಃ - ಆರು ಬಾಣಗಳಿಂದ, ಜಗಾಮ - ಹೊಡೆದನು. ॥ ೧೯ ॥ ದುರ್ಧರ್ಷಃ - ತಿರಸ್ಕಾರ ಮಾಡಲಸಾಧ್ಯನಾದ, ಯಮಶತ್ರುಶ್ಚ - ಯಮಶತ್ರುವೆಂಬವನು, ಮಹಾ...ರೌ - ಮಹಾಪಾರ್ಶ್ವ, ಮಹೋದರ ಎಂಬೀರ್ವರೂ, ಮಹಾಕಾಯಃ - ಮಹಾ ಶರೀರವುಳ್ಳ, ವಜ್ರದಂಷ್ಟ್ರಃ-ವಜ್ರದಂಷ್ಟ್ರನೆಂಬವನೂ, ತೌ- ಆ ಪೂರ್ವೋಕ್ತರಾದ, ಶುಕಸಾರಣೌ- ಶುಕಸಾರಣರೀರ್ವರೂ, ಸರ್ವೇ - ಸಮಸ್ತರಾದ, ತೇ - ಆ ಆರುಜನ ರಕ್ಕಸರೂ, ರಾಮೇಣ - ಶ್ರೀರಾಮನಿಂದ, ಬಾಣೌಘೈಃ - ಬಾಣವರ್ಷಗಳಿಂದ, ಮರ್ಮಸು - ಮರ್ಮಸ್ಥಾನಗಳಲ್ಲಿ, ತಾಡಿತಾಃ- ಹೊಡೆಯಲ್ಪಟ್ಟವರಾಗಿ, ಯುದ್ಧಾತ್ - ಕಾಳೆಗದಿಂದ, ಅಪಸೃತಾಃ - ಓಡಿ, ತತ್ರ - ಆ ರಾತ್ರಿಯಲ್ಲಿ, ಸಾವಶೇಷಾಯುಷಃ - ಮಿಕ್ಕ ಆಯುಸ್ಸುಳ್ಳವರು, ಅಭವನ್ - ಆದರು. ॥ ೨೦-೨೧ ॥ ಮಹಾಬಲಃ - ಬಹಳ ಪರಾಕ್ರಮಿಯಾದ ಶ್ರೀರಾಮನು, ತತ್ರ - ಆ ರಾತ್ರಿಯಲ್ಲಿ, ಕಾಂಚ....ಗೈಃ - ಸುವರ್ಣರೇಖೆಗಳ ಅವಯವಗಳುಳ್ಳ, ಅಗ್ನಿಶಿಖೋಪಮೈಃ - ಬೆಂಕಿಯ ಉರಿಗೆ ಸಮಾನಗಳಾದ, ಶರೈಃ - ಬಾಣಗಳಿಂದ, ದಿಶಃ - ದಿಕ್ಕುಗಳನ್ನು, ಪ್ರದಿಶಶ್ಚ - ವಿದಿಕ್ಕುಗಳನ್ನೂ, ವಿಮಲಾಃ - ನಿರ್ಮಲಗಳನ್ನಾಗಿ, ಚಕಾರ - ಮಾಡಿದನು. ॥ ೨೨ ॥ ಅನ್ಯೇ - ಮತ್ತೆ ಕೆಲಬರಾದ, ಭೀಮಾಃ - ಭಯಂಕರರಾದ, ಯೇರಾಕ್ಷಸಾಃ - ಯಾವ ರಕ್ಕಸರು, ರಾಮಸ್ಯ - ಶ್ರೀರಾಮನಿಗೆ, ಅಭಿಮುಖೇ - ಎದುರಾಗಿ, ಸ್ಥಿತಾಃ-

---

ಮೇಲೆ ಯುದ್ಧಕ್ಕೆ ಬಂದ ನಾಲ್ವರು ರಾಕ್ಷಸರನ್ನು ತೀಕ್ಷ್ಣಗಳಾದ ಬಾಣಗಳಿಂದ ಮರ್ದಿಸಿದನು. ಇಷ್ಟೆಯಲ್ಲದೆ ಆತನು ಅಗ್ನಿಜ್ವಾಲೆಗಳಿಗೆ ಸಮಾನವಾದುವೂ, ಬಹು ಮೊನಚಾಗಿರುವುವೂ ಆದ ಬಾಣಸಮುದಾಯಗಳಿಂದ ಕ್ಷಣಮಾತ್ರದಲ್ಲಿಯೇ ಯಮಶತ್ರು, ದುರ್ಧರ್ಷ, ಮಹಾಪಾರ್ಶ್ವ, ಮಹೋದರ, ವಜ್ರದಂಷ್ಟ್ರ, ಮಹಾಕಾಯ, ಶುಕ, ಸಾರಣ ಇವರೇ ಮೊದಲಾದವರ ಮರ್ಮಸ್ಥಾನಗಳನ್ನು ಬಲವಾಗಿ ಘಾತಿಸಿದನು. ಕೂಡಲೇ ಅವರೆಲ್ಲರೂ ಕ್ಷತವಿಕ್ಷತಗಾತ್ರರಾದವರಾಗಿ ಪ್ರಾಣಮಾತ್ರಾವಶಿಷ್ಟರಾದರು. ॥ ೧೭-೨೦ ॥ ಇಂತಹ ಭಯಂಕರ ಯುದ್ಧರಂಗದಲ್ಲಿ ಮಹಾ ಪರಾಕ್ರಮಿಯಾದ ಶ್ರೀರಾಮಮೂರ್ತಿಯು, ಸ್ವರ್ಣಪುಂಖಗಳಿಂದ ಕೂಡಿದುವೂ, ಅಗ್ನಿಜ್ವಾಲೆಗಳಿಗೆ ಸಮಾನವಾದುವೂ ಆದ ಬಾಣಗಳಿಂದ ದಶದಿಶೆಗಳನ್ನೂ ಜಾಜ್ವಲ್ಯಮಾನಗಳನ್ನು ಮಾಡಿದನು. ಆಗ ಆ ಶ್ರೀರಾಮಮೂರ್ತಿಯ

ಸಾದ್ಯ ಪತಂಗಾಇವ ಪಾವಕಂ ||೨೩|| ಸುವರ್ಣಪುಂಖೈರ್ವಿಶಿಖೈಸ್ಸಂಪತದ್ಭಿಸ್ಸಹಸ್ರಶಃ| ಬಭೂವ ರಜನೀ ಚಿತ್ರಾ ಖದ್ಯೋತೈರಿವ ಶಾರದೀ || ೨೪ || ರಾಕ್ಷಸಾನಾಂಚ ನಿನದೈರ್ಹರೀಣಾಂಚಾಪಿ ನಿಸ್ವನೈಃ | ಸಾ ಬಭೂವ ನಿಶಾ ಘೋರಾ ಭೂಯೋ ಘೋರತರಾ ತದಾ ||೨೫|| ತೇನ ಶಬ್ದೇನ ಮಹತಾ ಪ್ರವೃದ್ಧೇನ ಸಮಂತತಃ | ತ್ರಿಕೂಟಃ ಕಂದರಾಕೀರ್ಣಃ ಪ್ರವ್ಯಾಹರದಿವಾಚಲಃ || ೨೬ || ಗೋಲಾಂಗೂಲಾ ಮಹಾಕಾಯಾಸ್ತಮಸಾ ತುಲ್ಯವರ್ಚಸಃ | ಸಂಪರಿಷ್ವಜ್ಯ ಬಾಹುಭ್ಯಾಂ ಭಕ್ಷಯನ್ ರಜನೀಚರಾನ್ ||೨೭|| ಅಂಗದಸ್ತು ರಣೇ ಶತ್ರುಂ ನಿಹಂತುಂ ಸಮುಪಸ್ಥಿತಃ | ರಾವಣಿಂ ನಿಜಘಾನಾಶು ಸಾರಥಿಂಚ

---

ಇರುತ್ತಿದ್ದರೋ, ತೇಪಿ - ಅವರೂ, ಪಾವಕಂ-ಅಗ್ನಿಯನ್ನು, ಸಮಾಸಾದ್ಯ - ಹೊಂದಿ, ಪತಂಗಾಇವ-ಈಚಲು ಹುಳಗಳಂತೆ, ನಷ್ಟಾಃ - ನಾಶವಾದರು. || ೨೩ || ಸುವರ್ಣಪುಂಖೈಃ - ಬಂಗಾರದ ಕೊಂಕಿಗಳುಳ್ಳ, ಸಹಸ್ರಶಃ - ಸಾವಿರಾರು ಬಗೆಗಳಾಗಿ, ಸಂಪತದ್ಭಿಃ - ಬೀಳುತ್ತಿರುವ, ವಿಶಿಖೈಃ - ಬಾಣಗಳಿಂದ, ರಜನೀ - ರಾತ್ರಿಯು, ಖದ್ಯೋತೈಃ - ಜ್ಯೋತಿರಿಂಗಣ ಹುಳುಗಳಿಂದ, ಶಾರದೀ - ಶರತ್ಕಾಲದ, ರಜನೀವ - ರಾತ್ರಿಯಂತೆ, ಚಿತ್ರಾ - ಆಶ್ಚರ್ಯಕರವಾದದ್ದು, ಬಭೂವ - ಆಯಿತು. ||೨೪|| ರಾಕ್ಷಸಾನಾಂ - ರಕ್ಕಸರ, ನಿನದೈಶ್ಚ - ಧ್ವನಿಗಳಿಂದಲೂ, ಹರೀಣಾಂ-ಕಪಿಗಳ, ನಿಸ್ವನೈಶ್ಚಾಪಿ-ಧ್ವನಿಗಳಿಂದಲೂ, ಘೋರಾ-ಭಯಂಕರವಾದ, ಸಾನಿಶಾ-ಆ ರಾತ್ರಿಯು, ತದಾ - ಆ ಕಾಲದಲ್ಲಿ, ಭೂಯಃ - ಮತ್ತೂ, ಘೋರತರಾ - ಭಯಂಕರವಾದದ್ದು, ಬಭೂವ - ಆಯಿತು. || ೨೫ || ಸಮಂತತಃ - ಎಲ್ಲಾ ಕಡೆಯಲ್ಲಿಯೂ, ಪ್ರವೃದ್ಧೇನ - ವೃದ್ಧಿಗೊಳ್ಳುತ್ತಿರುವ, ಮಹತಾ - ಬಹಳವಾದ, ತೇನಶಬ್ದೇನ - ಆ ಧ್ವನಿಯಿಂದ, ಕಂದರಾಕೀರ್ಣಃ - ಗುಹೆಗಳಿಂದ ವ್ಯಾಪ್ತವಾದ, ತ್ರಿಕೂಟಃ - ತ್ರಿಕೂಟವೆಂಬ, ಅಚಲಃ - ಪರ್ವತವು, ಪ್ರವ್ಯಾಹರದಿವ - ಮಾತನಾಡುತ್ತಿದೆಯೋ ಎಂಬಂತಿತ್ತು. ||೨೬|| ಮಹಾಕಾಯಾಃ - ದೊಡ್ಡ ಶರೀರಗಳುಳ್ಳ, ತಮಸಾ - ಅಂಧಕಾರದೊಡನೆ, ತುಲ್ಯವರ್ಚಸಃ - ಸಮಾನವಾದ ಕಾಂತಿಯುಳ್ಳ, ಗೋಲಾಂಗೂಲಾಃ - ಗೋಲಾಂಗೂಲಗಳು, ಬಾಹುಭ್ಯಾಂ - ಭುಜಗಳಿಂದ, ರಜನೀಚರಾನ್ - ರಕ್ಕಸರನ್ನು, ಸಂಪರಿಷ್ವಜ್ಯ - ಅಪ್ಪಿ, ಭಕ್ಷಯನ್ತಿಸ್ಮ - ತಿನ್ನುತ್ತಿದ್ದರು. || ೨೭ || ಅಂಗದಸ್ತು - ಅಂಗದನಾದರೆ, ರಣೇ - ಕಾಳಗದಲ್ಲಿ, ಶತ್ರುಂ - ಶತ್ರುವಾದ ಇಂದ್ರಜಿತ್ತುವನ್ನು, ನಿಹಂತುಂ - ಹೊಡೆಯಲು, ಸಮುಪಸ್ಥಿತಃ - ಎದುರು ನಿಂತು, ರಾವಣಿಂ - ಆ ಇಂದ್ರಜಿತ್ತುವನ್ನು, ಸಾರಥಿಂಚ - ಸಾರಥಿಯನ್ನು, ಹಯಾನಪಿ - ಕುದುರೆಗಳನ್ನೂ, ಆಶು-ಜಾಗ್ರತೆ

---

ಮೇಲೆ ಬೀಳುತ್ತಿದ್ದರಾಕ್ಷಸರೆಲ್ಲರೂ, ಅಗ್ನಿಯಲ್ಲಿ ಬೀಳುವ ಶಲಭಗಳಂತೆ ಸತ್ತುಬಿದ್ದರು. ಸಹಸ್ರಸಹಸ್ರಗಳಾಗಿ ಪ್ರಯೋಗಿಸಲ್ಪಡುತ್ತಿದ್ದ ಆ ರಾಘವನ ಸ್ವರ್ಣಪುಂಖಿತಗಳಾದ ಬಾಣಪರಂಪರೆಗಳಿಂದ ಆ ರಾತ್ರಿಯು ಮಿಡಗುಹೂಗಳಿಂದ ಕೂಡಿದ ಅಂತರಿಕ್ಷವುಳ್ಳದಾಗಿ ಪ್ರಕಾಶಿಸುತ್ತಿದ್ದಿತು. ಆ ಸಮಯದಲ್ಲಿ ಆ ರಾತ್ರಿಯೂ, ವಾನರ ರಾಕ್ಷಸರ ಮಹಾ ಸಿಂಹನಾದಗಳಿಂದ ಬಹು ಭಯಂಕರವಾಗಿದ್ದಿತು. ಈ ನಾದಪರಂಪರೆಗಳಿಂದ ಆ ತ್ರಿಕೂಟಾಚಲವು ಪ್ರತಿಧ್ವನಿತವಾಗಿ ಹೋಯಿತು. || ೨೧–೨೬ || ಬಹು ದೊಡ್ಡ ಶರೀರಗಳುಳ್ಳವರೂ, ಕತ್ತಲಿಗೆ ಸಮಾನವಾದ ದೇಹಕಾಂತಿಯುಳ್ಳವರೂ ಆದ ಗೋಲಾಂಗೂಲಗಳು ರಾಕ್ಷಸರೆಲ್ಲರನ್ನೂ ಹಿಡಿದು ಹಿಡಿದು ನುಂಗುತ್ತಿದ್ದರು. ಆ ಸಮಯದಲ್ಲಿ ಅಂಗದಕುಮಾರನು ಆ ರಣರಂಗದಲ್ಲಿ ಹಗೆಯನಾದ ಇಂದ್ರಜಿತ್ತುವನ್ನು ಸಂಹರಿಸಲು ಬಯಸಿದವನಾಗಿ, ಅವನ

ಹಯಾನಪಿ ॥ ೨೮ ॥ ವರ್ತಮಾನೇ ತದಾ ಘೋರೇ ಸಂಗ್ರಾಮೇ ಭೃಶದಾರುಣೇ । ಇಂದ್ರಜಿತ್ತು ರಥಂ ತ್ಯಕ್ತ್ವಾ ಹತಾಶ್ವೋ ಹತಸಾರಥಿಃ । ಅಂಗದೇನ ಮಹಾಕಾಯಃ ಸ್ತತ್ರೈ ವಾಂತರಧೀಯತ ॥ ೨೯-೩೦ ॥ ತತ್ಕರ್ಮ ವಾಲಿಪುತ್ರಸ್ಯ ಸರ್ವೇ ದೇವಾಸ್ಸಹ ರ್ಷಿಭಿಃ । ತುಷ್ಟುವುಃ ಪೂಜನಾರ್ಹಸ್ಯ ತೌ ಚೋಭೌ ರಾಮಲಕ್ಷ್ಮಣೌ ॥ ೩೧ ॥ ಪ್ರಭಾವಂ ಸರ್ವಭೂತಾನಿ ವಿದುರಿಂದ್ರಜಿತೋ ಯುಧಿ । (ಪ್ರ ಅದೃಶ್ಯಸ್ಸರ್ವಭೂತಾನಾಂ ಯೋಽಭವದ್ಯುಧಿ ದುರ್ಜಯಃ?) । ತೇನ ತೇ ತಂ ಮಹಾತ್ಮಾನಂ ತುಷ್ಟಾಃ ದೃಷ್ಟ್ವಾ ಪ್ರಧರ್ಷಿತಂ ॥೩೨॥ ತತಃ ಪ್ರಹೃಷ್ಟಾಃ ಕಪಯಸ್ಸಸುಗ್ರೀವವಿಭೀಷಣಾಃ । "ಸಾಧು ಸಾಧ್ವಿ"ತಿ ನೇದುಶ್ಚ ದೃಷ್ಟ್ವಾ ಶತ್ರುಂ ಪ್ರಧರ್ಷಿತಂ ॥೩೩॥ ಇಂದ್ರಜಿತ್ತು ತದಾ ತೇನ

---

ಯಾಗಿ, ನಿಜಘಾನ - ಹೊಡೆದನು. ॥ ೨೮ ॥ ತದಾ - ಆ ಕಾಲದಲ್ಲಿ, ಘೋರೇ - ಭಯಂಕರವಾದ, ಭೃಶದಾರುಣೇ - ಬಹಳ ಕ್ರೂರವಾದ, ಸಂಗ್ರಾಮೇ - ಕಾಳಗವು, ವರ್ತಮಾನೇ - ನಡೆಯುತ್ತಿರಲು, ಮಹಾಕಾಯಃ - ದೊಡ್ಡ ಶರೀರವುಳ್ಳ, ಇಂದ್ರಜಿತ್ತು - ಇಂದ್ರಜಿತ್ತುವಾದರೆ, ಅಂಗದೇನ - ಅಂಗದನಿಂದ, ಹತಾಶ್ವಃ - ಹೊಡೆಯಲ್ಪಟ್ಟ ಕುದುರೆಗಳುಳ್ಳವನಾಗಿಯೂ, ಹತಸಾರಥಿಃ - ಹೊಡೆಯಲ್ಪಟ್ಟ ಸಾರಥಿಯುಳ್ಳವನಾಗಿಯೂ, ತತ್ರೈವ - ಆ ರಣರಂಗದಲ್ಲಿಯೇ, ಅಂತರಧೀಯತ - ಅಂತರ್ಧಾನವಾದನು. ॥೨೯॥ ಸರ್ವೇ - ಸಮಸ್ತರಾದ, ದೇವಾಃ - ದೇವತೆಗಳು, ಋಷಿಭಿಸ್ಸಹ - ಋಷಿಗಳೊಡನೆ, ಪೂಜನಾರ್ಹಸ್ಯ - ಪೂಜಾಯೋಗ್ಯನಾದ, ವಾಲಿಪುತ್ರಸ್ಯ - ಅಂಗದನ, ತತ್ಕರ್ಮ-ಆ ವ್ಯಾಪಾರವನ್ನು (ನೋಡಿ), ತುಷ್ಟುವುಃ - ಸ್ತುತಿಸಿದರು, ತೌರಾ....ಭೌ - ಆ ರಾಮಲಕ್ಷ್ಮಣರೀರ್ವರು, ತುಷ್ಟುವತುಃ- ಸ್ತುತಿಸಿದರು. ॥೩೦॥ ಸರ್ವಭೂತಾನಿ - ಸಮಸ್ತ ಪ್ರಾಣಿಗಳಿಗೂ, ಯುಧಿ - ಕಾಳಗದಲ್ಲಿ, ಇಂದ್ರಜಿತಃ- ಇಂದ್ರಜಿತ್ತುವಿನ, ಪ್ರಭಾವಂ - ಸಾಮರ್ಥ್ಯವನ್ನು, ವಿದುಃ - ತಿಳಿದಿದ್ದಾರೆ, ಮಹಾತ್ಮನಾ - ಮಹಾಧೈರ್ಯಶಾಲಿಯಾದ, ತಂ - ಆ ಇಂದ್ರಜಿತ್ತುವನ್ನು, ತೇನ - ಆ ಅಂಗದನಿಂದ, ಪ್ರಧರ್ಷಿತಂ - ತಿರಸ್ಕೃತನನ್ನಾಗಿ, ದೃಷ್ಟ್ವಾ - ಕಂಡು, ತೇ - ಅವರೆಲ್ಲರೂ, ತುಷ್ಟಾಃ - ಸಂತೋಷಗೊಂಡರು. ॥ ೩೧-೩೨ ॥ ತತಃ - ಬಳಿಕ, ಸಸು....ಣಾಃ - ಸುಗ್ರೀವವಿಭೀಷಣರಿಂದೊಡಗೂಡಿದ, ಕಪಯಃ - ಕಪಿಗಳು, ಶತ್ರುಂ - ಶತ್ರುವಾದ ಇಂದ್ರಜಿತ್ತುವನ್ನು, ಪ್ರದರ್ಷಿತಂ - ತಿರಸ್ಕೃತನನ್ನಾಗಿ, ದೃಷ್ಟ್ವಾ - ಕಂಡು, ಪ್ರಹೃಷ್ಟಾಃ - ಸಂತೋಷಗೊಂಡವರಾಗಿ, ಸಾಧುಸಾಧ್ವಿತಿ - ಭಲೇ ಭಲೇ ಎಂದು, ನೇದುಃ- ಕೂಗಿದರು. ॥ ೩೩ ॥ ತದಾ - ಆ ಕಾಲದಲ್ಲಿ, ಭೀಮಕರ್ಮಣಾ - ಭಯಂಕರ ವ್ಯಾಪಾರವುಳ್ಳ, ತೇನ

---

ಸಾರಥಿಯನ್ನೂ, ರಥವನ್ನೂ ಮರ್ದಿಸಿದನು. ಆ ಇಂದ್ರಜಿತ್ತುವಾದರೋ ಆ ಭಯಂಕರ ಯುದ್ಧದಲ್ಲಿ ಅಂಗದನಿಂದ ಮುರಿದುಬಿದ್ದ ರಥವುಳ್ಳವನಾಗಿ ಕುದುರೆಗಳೂ, ಸಾರಥಿಯೂ ಕೆಳಕ್ಕುರುಳಲು ಅದೃಶ್ಯನಾಗಿ ಹೋದನು. ಈ ರೀತಿ ಅದ್ಭುತ ಕಾರ್ಯವನ್ನು ಮಾಡಿದ ಅಂಗದನನ್ನು ನೋಡಿ ದೇವತೆಗಳೂ, ದೇವರ್ಷಿಗಳೂ, ಶ್ರೀರಾಮಲಕ್ಷ್ಮಣರೂ ಬಹಳ ಸಂತೋಷವನ್ನು ಹೊಂದಿದರು. ಇದೂ ಅಲ್ಲದೆ ಸಮಸ್ತ ಭೂತಗಳೂ ಯುದ್ಧದಲ್ಲಿ ಇಂದ್ರಜಿತ್ತುವಿನ ಶಕ್ತಿಸಾಮರ್ಥ್ಯಗಳನ್ನು ಅರಿತಿದ್ದುದರಿಂದ ಆ ಅಂಗದನ ಪರಾಕ್ರಮಕ್ಕೆ ಬಹಳವಾಗಿ ಆನಂದಿಸಿದರು. ಆ ಸಮಯದಲ್ಲಿ ವಾನರರೆಲ್ಲರೂ, ಅಂಗದಕುಮಾರನು ಮಾಡಿದ ಮಹಾದ್ಭುತ ಕಾರ್ಯವನ್ನು ನೋಡಿ ಅವನನ್ನು "ಭಲೇ ಭಲೇ !!" ಎಂದು ಪ್ರಶಂಸೆ ಮಾಡಿದರು. ॥ ೨೭-೩೩ ॥ ಇಷ್ಟೆಯಲ್ಲದೆ ಮಹಾ ಭಯಂಕರವಾಗಿ ಯುದ್ಧವನ್ನು ಮಾಡುವ ಆ

**ನಿರ್ಜಿತೋ ಭೀಮಕರ್ಮಣಾ । ಸಂಯುಗೇ ವಾಲಿಪುತ್ರೇಣ ಕ್ರೋಧಂ ಚಕ್ರೇ ಸುದಾರುಣಂ ॥೩೪॥ ಏತಸ್ಮಿನ್ನಂತರೇ ರಾಮೋ ವಾನರಾನ್ ವಾಕ್ಯಮಬ್ರವೀತ್ । "ಸರ್ವೇ ಭವಂತಸ್ತಿಷ್ಠಂತು ಕಪಿರಾಜೇನ ಸಂಗತಾಃ ॥೩೫॥ ಸಬ್ರಹ್ಮಣಾ ದತ್ತವರಸ್ತ್ರೈಲೋಕ್ಯಂ ಬಾಧತೇ ಭೃಶಂ । ಭವತಾಮರ್ಥಸಿದ್ಧ್ಯರ್ಥಂ ಕಾಲೇನ ಸ ಸಮಾಗತಃ ॥ ೩೬ ॥ ಅದ್ಯೈವ ಕ್ಷಮಿತವ್ಯಂ ಮೇ ಭವಂತೋ ವಿಗತಜ್ವರಾಃ" । ಸೋಽಂತರ್ಧಾನಗತಃ ಪಾಪೋ ರಾವಣೀ ರಣಕರ್ಕಶಃ ॥೩೭॥ ಅದೃಶ್ಯೋ ನಿಶಿತಾನ್ ಬಾಣಾನ್ ಮುಮೋಚಾಶ**

ವಾಲಿಪುತ್ರೇಣ - ಆ ಅಂಗದನಿಂದ, ಸಂಯುಗೇ - ಕಾಳಗದಲ್ಲಿ, ನಿರ್ಜಿತಃ - ಜಯಿಸಲ್ಪಟ್ಟ, ಇಂದ್ರಜಿತ್ತು - ಇಂದ್ರಜಿತ್ತುವಾದರೆ, ಸುದಾರುಣಂ - ಬಹಳ ಕ್ರೂರವಾದ, ಕ್ರೋಧಂ - ಕೋಪವನ್ನು, ಚಕ್ರೇ ಮಾಡಿದನು, ಏತಸ್ಮಿನ್ನಂತರೇ- ಈ ಮಧ್ಯದಲ್ಲಿ, ರಾಮಃ-ಶ್ರೀರಾಮನು, ವಾನರಾನ್-ಕಪಿಗಳನ್ನು ಕುರಿತು, ವಾಕ್ಯಂ - ಮಾತನ್ನು, ಅಬ್ರವೀತ್ - ನುಡಿದನು. ॥ ೩೪ ॥ ಸರ್ವೇ - ಸಮಸ್ತರಾದ, ಭವಂತಃ - ನೀವುಗಳು, ಕಪಿರಾಜೇನ - ಸುಗ್ರೀವನೊಡನೆ, ಸಂಗತಾಃ - ಸೇರಿ, ತಿಷ್ಠಂತು - ಇರಿ, ಬ್ರಹ್ಮಣಾ - ಬ್ರಹ್ಮದೇವರಿಂದ, ದತ್ತವರಃ - ಕೊಡಲ್ಪಟ್ಟ ವರವುಳ್ಳ, ಸಃ - ಆ ಇಂದ್ರಜಿತ್ತುವು, ತ್ರೈಲೋಕ್ಯಂ - ಲೋಕತ್ರಯವನ್ನೂ, ಭೃಶಂ - ಬಹಳವಾಗಿ, ಬಾಧತೇ - ಬಾಧೆಗೊಳಿಸುತ್ತಾನೆ, ಸಃ- ಅವನು, ಭವತಾಂ - ನಿಮ್ಮ, ಅರ್ಥಸಿದ್ಧ್ಯರ್ಥಂ - ಕಾರ್ಯಸಿದ್ಧಿಗಾಗಿ, ಕಾಲೇನ - ಕಾಲಬಲದಿಂದ, ಸಮಾಗತಃ - ಬಂದನು, ಅದ್ಯೈವ - ಈಗಲೇ, ಮೇ - ನನ್ನಿಂದ, ಕ್ಷಮಿತವ್ಯಂ - ಸಹಿಸತಕ್ಕದ್ದು, ಭವಂತಃ - ನೀವು, ವಿಗತಜ್ವರಾಃ - ಅನುತಾಪವಿಲ್ಲದವರಾಗಿರಿ. ॥ ೩೫-೩೬ ॥ ರಣಕರ್ಕಶಃ - ರಣರಂಗದಲ್ಲಿ ಕಠೋರನಾದ, ಪಾಪಃ - ಪಾಪಿಷ್ಠನಾದ, ಅಂತ....ತಃ - ಅಂತರ್ಧಾನಶಕ್ತಿಯನ್ನು ಪಡೆದಿರುವ, ಸರಾವಣಿಃ - ಆ ಇಂದ್ರಜಿತ್ತುವು, ಅದೃಶ್ಯಃ - ಕಾಣದಿರುವವನಾಗಿ, ಅಶನಿವರ್ಚಸಃ - ಸಿಡಿಲಿಗೆ ಸಮಾನವಾದ ಕಾಂತಿಯುಳ್ಳ, ನಿಶಿತಾನ್ - ತೀಕ್ಷ್ಣಗಳಾದ, ಬಾಣಾನ್ - ಬಾಣಗಳನ್ನು, ಮುಮೋಚ - ಬಿಟ್ಟನು. ॥ ೩೭ ॥ ಸರಾಕ್ಷಸಃ - ಆ ರಾಕ್ಷಸನು, ಸಮರೇ - ಕಾಳಗದಲ್ಲಿ,

ಅಂಗದಕುಮಾರನಿಂದ ಅಪಜಯವನ್ನು ಹೊಂದಿದ ಇಂದ್ರಜಿತ್ತುವು ಮಹಾ ಕುಪಿತನಾಗಿ ಹೋದನು. ಆಗ ಮಹಾನುಭಾವನಾದ ಶ್ರೀರಾಮನು ವಾನರರೆಲ್ಲರನ್ನೂ ಕುರಿತು, "ಎಲೈ ವಾನರವೀರರೇ! ನೀವೆಲ್ಲರೂ ನಿಮ್ಮ ಪ್ರಭುವಾದ ಸುಗ್ರೀವನೊಡಗೂಡಿ ಒಂದುಕಡೆ ಇರುವವರಾಗಿರಿ. ಈ ಇಂದ್ರಜಿತ್ತುವು ಚತುರ್ಮುಖನಿಂದ ವರವನ್ನು ಪಡೆದಿರುವವನಾದುದರಿಂದ ಮೂರು ಲೋಕಗಳನ್ನೂ ಬಹಳವಾಗಿ ಬಾಧಿಸುತ್ತಿರುವನು. ಇದು ನಮ್ಮೆಲ್ಲರಿಗೂ ಮೇಲನ್ನುಂಟುಮಾಡುವ ಕಾಲವಾದುದರಿಂದ ನಮ್ಮ ಕಾರ್ಯವು ಸಿದ್ಧಿಸುವುದಕ್ಕಾಗಿಯೇ ಇಂದ್ರಜಿತ್ತುವು ಅಂಗದಕುಮಾರನಿಂದ ಪರಾಜಿತನಾಗಿರುವನು. ಆದರೂ ಆತನು ಭಯಪಟ್ಟು ಹೊರಟುಹೋದನೆಂದು ತಿಳಿಯಬೇಡಿರಿ. ಎಲೈ ವೀರರೇ! ನಾನು ಆತನನ್ನು ಸಂಹರಿಸುತ್ತೇನೆ. ಪ್ರಕೃತದಲ್ಲಿ ನೀವೆಲ್ಲರೂ ನಿಶ್ಚಿಂತರಾಗಿರಿ" ಎಂದು ಹೇಳಿದನು. ॥ ೩೪-೩೬ ॥ ಶ್ರೀರಾಮನಿಂತು ನುಡಿಯುತ್ತಿರುವಾಗಲೇ ಅಂತರ್ಧಾನವನ್ನು ಹೊಂದಿರುವವನೂ, ಯುದ್ಧಗಳಲ್ಲಿ ಬಹಳ ಕಠಿನವಾಗಿ ಪ್ರವರ್ತಿಸುವವನೂ, ಪಾಪಿಷ್ಠನೂ, ರಾವಣನ ಮಗನೂ ಆದ ಆ ಇಂದ್ರಜಿತ್ತುವು ವಜ್ರಾಯುಧಕ್ಕೆ ಸಮಾನಗಳಾಗಿ ಮಹಾತೀಕ್ಷ್ಣಗಳೂ ಆದ ಬಾಣ

ನಿವರ್ತಸಃ । ಸರಾಮಂ ಲಕ್ಷ್ಮಣಂ ಚೈವ ಘೋರೈರ್ನಾಗಮಯೈಶ್ಶರೈಃ ॥ ೩೮ ॥ ಬಿಭೇದ ಸಮರೇ ಕ್ರುದ್ಧಸ್ಸರ್ವಗಾತ್ರೇಷು ರಾಕ್ಷಸಃ । ಮಾಯಯಾ ಸಂವೃತಸ್ತತ್ರ ಮೋಹಯನ್ ರಾಘವೌ ಯುಧಿ ॥ ೩೯ ॥ ಅದೃಶ್ಯಸ್ಸರ್ವಭೂತಾನಾಂ ಕೂಟಯೋಧೀ ನಿಶಾಚರಃ । ಬಬಂಧ ಶರಬಂಧೇನ ಭ್ರಾತರೌ ರಾಮಲಕ್ಷ್ಮಣೌ ॥ ೪೦ ॥ ತೌ ತೇನ ಪುರುಷವ್ಯಾಘ್ರೌ ಕ್ರುದ್ಧೇನಾಶೀವಿಷೈಃ ಶರೈಃ । ಸಹಸಾ ನಿಹತೌ ವೀರೌ ತದಾ ಪ್ರೈಕ್ಷಂತ ವಾನರಾಃ ॥ ೪೧ ॥

---

ಕ್ರುದ್ಧಃ - ಕೋಪಿಷ್ಠನಾಗಿ, ರಾಮಂ - ಶ್ರೀರಾಮನನ್ನೂ, ಲಕ್ಷ್ಮಣಂಚೈವ - ಲಕ್ಷ್ಮಣನನ್ನೂ ಕುರಿತು, ಸರ್ವಗಾತ್ರೇಷು - ಸಮಸ್ತಾವಯವಗಳಲ್ಲಿಯೂ, ಘೋರೈಃ - ಭಯಂಕರಗಳಾದ, ನಾಗಮಯೈಃ - ಸರ್ಪವಿಕಾರಗಳಾದ, ಶರೈಃ - ಬಾಣಗಳಿಂದ, ಬಿಭೇದ - ಭೇದಿಸಿದನು. ॥ ೩೮ ॥ ತತ್ರಯುಧಿ - ಆ ಕಾಳಗದಲ್ಲಿ, ಸರ್ವಭೂತಾನಾಂ - ಸರ್ವ ಪ್ರಾಣಿಗಳಿಗೂ, ಅದೃಶ್ಯಃ - ಕಾಣಿಸದಿರುವ, ಕೂಟಯೋಧೀ- ಕಪಟ ಯುದ್ಧ ಮಾಡುತ್ತಿರುವ, ನಿಶಾಚರಃ - ರಾಕ್ಷಸನಾದ ಇಂದ್ರಜಿತ್ತುವು, ಮಾಯಯಾ - ಮಾಯೆಯಿಂದ, ಸಂವೃತಃ - ಆಚ್ಛಾದಿತನಾಗಿ, ರಾಘವೌ - ರಘುಕುಲೋತ್ಪನ್ನರಾದ, ಭ್ರಾತರೌ - ಅಣ್ಣತಮ್ಮಂದಿರಾದ, ರಾಮಲಕ್ಷ್ಮಣೌ - ರಾಮಲಕ್ಷ್ಮಣರನ್ನು, ಮೋಹಯನ್ - ಭ್ರಾಂತಿಗೊಳಿಸುತ್ತ, ಶರಬಂಧೇನ - ಬಾಣರೂಪವಾದ ಬಂಧದಿಂದ, ಬಬಂಧ - ಕಟ್ಟಿದನು. ॥ ೩೯-೪೦ ॥ ವೀರೌ - ಶೂರರಾದ, ಪುರುಷವ್ಯಾಘ್ರೌ - ಪುರುಷಶ್ರೇಷ್ಠರಾದ, ತೌ - ಆ ರಾಮಲಕ್ಷ್ಮಣರು, ಕ್ರುದ್ಧೇನ - ಕೋಪಿಷ್ಠನಾದ, ತೇನ - ಆ ಇಂದ್ರಜಿತ್ತುವಿನಿಂದ, ಆಶೀವಿಷೈಃ - ಸರ್ಪರೂಪಗಳಾದ, ಶರೈಃ - ಬಾಣಗಳಿಂದ, ನಿಹತೌ - ಹೊಡೆಯಲ್ಪಟ್ಟವರಾದರು, ತದಾ - ಆಗ, ವಾನರಾಃ - ಕಪಿಗಳು, ಪ್ರೇಕ್ಷ್ಯಂತ - ನೋಡುತ್ತಿದ್ದರು. ॥ ೪೧ ॥ ಯದಾ - ಯಾವಾಗ, ಪ್ರಕಾಶರೂಪಃ - ಪ್ರಕಾಶರೂಪನಾಗಿ, ರಾಕ್ಷ....ತ್ರಃ - ಇಂದ್ರಜಿತ್ತುವು, ತೌ - ಆ ರಾಮಲಕ್ಷ್ಮಣರನ್ನು, ಬಾಧಿತುಂ - ಬಾಧೆಗೊಳಿಸಲು, ನಶಕ್ತಃ - ಸಮರ್ಥನಾಗದೇ ಹೋದನೋ, ತದಾ - ಆ ಕಾಲದಲ್ಲಿ, ಮಹಾತ್ಮಾ - ಮಹಾ ಧೈರ್ಯಶಾಲಿಯಾದ ಇಂದ್ರಜಿತ್ತುವು, ರಾಜಸುತೌ - ರಾಜಪುತ್ರರಾದ, ತೌ - ಆ ರಾಮಲಕ್ಷ್ಮಣರನ್ನು ಕುರಿತು, ಮಾಯಾಂ-

---

ಗಳನ್ನು ಆ ಶ್ರೀರಾಮಲಕ್ಷ್ಮಣರ ಮೇಲೆ ಪ್ರಯೋಗಿಸಿದನು. ಇದೂ ಅಲ್ಲದೆ ಅವನು ನಾಗಮಯಗಳಾದ ಬಾಣಗಳನ್ನು ಬಿಲ್ಲಿನಲ್ಲಿ ಹೂಡಿ ಆ ಶ್ರೀರಾಮಲಕ್ಷ್ಮಣರ ಮೇಲೆ ಪ್ರಯೋಗಿಸಿ ಅವರ ಸರ್ವಾವಯವಗಳನ್ನೂ ನೋಯಿಸಿದನು. ಸಮಸ್ತ ಭೂತಗಳಿಗೂ ಅದೃಶ್ಯನಾಗಿ ಕಪಟಯುದ್ಧ ಮಾಡುತ್ತಿರುವ ಆ ಇಂದ್ರಜಿತ್ತುವು ಅಣ್ಣತಮ್ಮಂದಿರಾದ ಶ್ರೀರಾಮಲಕ್ಷ್ಮಣರನ್ನು ಶರಬಂಧದಿಂದ ಬಂಧಿಸಿದನು. ಮಹಾ ಕುಪಿತನಾದ ಅವನು ಅಲ್ಲಿಗೂ ಬಿಡದೆ ಮತ್ತಷ್ಟು ಬಾಣಗಳಿಂದ ಅವರನ್ನು ಬಹಳವಾಗಿ ನೋಯಿಸಿದನು. ಆ ಸಮಯದಲ್ಲಿ ವಾನರವೀರರೆಲ್ಲರೂ ಪರಮ ಭೀತರಾಗಿ ಆ ಶ್ರೀರಾಮಲಕ್ಷ್ಮಣರನ್ನೇ ನೋಡುತ್ತಿದ್ದರು. ಹೀಗೆ ಆ ರಾಕ್ಷಸರಾಜಪುತ್ರನಾದ ಇಂದ್ರಜಿತ್ತುವು ಪುರುಷೋತ್ತಮರಾದ ಶ್ರೀರಾಮ

¶ ಪ್ರಕಾಶರೂಪಸ್ತು ಯದಾ ನಶಕ್ತ
ಸ್ತೌ ಬಾಧಿತುಂ ರಾಕ್ಷಸರಾಜಪುತ್ರಃ ।
ಮಾಯಾಂ ಪ್ರಯೋಕ್ತುಂ ಸಮುಪಾಜಗಾಮ
ಬಬಂಧ ತೌ ರಾಜಸುತೌ ಮಹಾತ್ಮಾ ॥ ೪೨ ॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಚತುಶ್ಚತ್ವಾರಿಂಶಸ್ಸರ್ಗಃ



---

ಮಾಯೆಯನ್ನು, ಪ್ರಯೋಕ್ತುಂ-ಪ್ರಯೋಗಿಸಲು, ಸಮುಪಾಜಗಾಮ-ಬಂದು, (ಸರ್ಪಾಸ್ತ್ರದಿಂದ) ಬಬಂಧ-ಕಟ್ಟಿದನು. ॥ ೪೨ ॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಚತುಶ್ಚತ್ವಾರಿಂಶಸ್ಸರ್ಗಃ.



---

ನೊಡನೆ ಪ್ರತ್ಯಕ್ಷವಾಗಿ ಯುದ್ಧಮಾಡಿ ಜಯಿಸಲಾರದೆ ಮಾಯಾ ಯುದ್ಧವನ್ನು ಮಾಡಲುಪಕ್ರಮಿಸಿ ಅವರನ್ನು ಆ ನಾಗಪಾಶದಿಂದ ಬಂಧಿಸಿದನು. ॥ ೩೩–೪೨ ॥

ಇಂತಿದು ಇಂದ್ರಜಿತ್ಕೃತ ಮಾಯಾಯುದ್ಧ ನಿರೂಪಣವೆಂಬ ನಲವತ್ತ
ನಾಲ್ಕನೆಯ ಸರ್ಗವು ಸಮಾಪ್ತವಾದುದು.



---

¶ ಇಲ್ಲಿ ಶ್ರೀರಾಮಮೂರ್ತಿಯು ಕೇವಲ ಭ್ರೂಭಂಗ ಮಾತ್ರದಿಂದಲೇ ಲೋಕತ್ರಯವನ್ನೂ ಸಂಹರಿಸಬಲ್ಲ ಸರ್ವಶಕ್ತನೂ, ಸರ್ವೇಶ್ವರನೂ ಆಗಿದ್ದರೂ ಇಂದ್ರಜಿತ್ತುವು ಪ್ರಯೋಗಿಸಿದ ಸರ್ಪಾಸ್ತ್ರಕ್ಕೆ ಕಟ್ಟುಬಿದ್ದುದೆಂತೆಂದು ಸಂಶಯಪಡಬಹುದು. ಆದರೆ ಇಲ್ಲಿ ಶ್ರೀರಾಮನು, ಬ್ರಹ್ಮದೇವನು ಇಂದ್ರಜಿತ್ತುವಿಗಿತ್ತ ವರದಾನವನ್ನು ಗೌರವಿಸಿ ಈ ರೀತಿ ಆಚರಿಸಿರುವನೆಂದು ಗ್ರಹಿಸಿದರೆ ಆ ಸಂಶಯಕ್ಕೆ ಕಾರಣವಿರುವುದಿಲ್ಲ. (ಗೋವಿಂದರಾಜರು)

ಸ ತಸ್ಯ ಗತಿಮನ್ವಿಚ್ಛನ್ ರಾಜಪುತ್ರಃ ಪ್ರತಾಪವಾನ್ । ದಿದೇಶಾತಿಬಲೋ ರಾಮೋ ದಶ ವಾನರಯೂಥಪಾನ್ ॥ ೧ ॥ ದ್ವೌ ಸುಷೇಣಸ್ಯ ದಾಯಾದೌ ನೀಲಂ ಚ ಪ್ಲವಗರ್ಷಭಂ । ಅಂಗದಂ ವಾಲಿಪುತ್ರಂಚ ಶರಭಂಚ ತರಸ್ವಿನಂ ॥ ೨ ॥ ವಿನತಂ ಜಾಂಬವಂತಂಚ ಸಾನುಪ್ರಸ್ಥಂ ಮಹಾಬಲಂ । ಋಷಭಂಚರ್ಷಭಸ್ಕಂಧಮಾದಿದೇಶ ಪರಂತಪಃ ॥ ೩ ॥ ತೇ ಸಂಪ್ರಹೃಷ್ಟಾ ಹರಯೋ ಭೀಮಾನುದ್ಯಮ್ಯ ಪಾದಪಾನ್ । ಆಕಾಶಂ ವಿವಿಶುಸ್ಸರ್ವೇ ಮಾರ್ಗಮಾಣಾ ದಿಶೋ ದಶ ॥ ೪ ॥ ತೇಷಾಂ ವೇಗವತಾಂ ವೇಗಮಿಷುಭಿರ್ವೇಗವತ್ತರೈಃ । ಅಸ್ತ್ರವಿತ್ಪರಮಾಸ್ತ್ರೈಸ್ತು ವಾರಯಾಮಾಸ ರಾವಣಿಃ

---

ಪ್ರತಾಪವಾನ್-ಪರಾಕ್ರಮಶಾಲಿಯಾದ, ಅತಿಬಲಃ-ಮಹಾ ಬಲಶಾಲಿಯಾದ, ರಾಜಪುತ್ರಃ-ಅರಸುಮಗನಾದ, ಸರಾಮಃ - ಆ ಶ್ರೀರಾಮನು, ತಸ್ಯ - ಆ ಇಂದ್ರಜಿತ್ತುವಿನ, ಗತಿಂ - ಇರತಕ್ಕ ಸ್ಥಳವನ್ನು, ಅನ್ವಿಚ್ಛನ್ - ಹುಡುಕುವನಾಗಿ, ದಶ....ಪಾನ್ - ಹತ್ತುಜನ ವಾನರಯೂಥಪತಿಗಳನ್ನು ಕುರಿತು, ದಿದೇಶ - ಆಜ್ಞಾಪಿಸಿದನು. ||೧|| ಸುಷೇಣಶ್ಚ - ಸುಷೇಣನ, ದ್ವೌದಯಾದೌ - ಇಬ್ಬರು ಮಕ್ಕಳನ್ನೂ, ಪ್ಲವಗರ್ಷಭಂ - ವಾನರಶ್ರೇಷ್ಠನಾದ, ನೀಲಂಚ - ನೀಲನನ್ನೂ, ವಾಲಿಪುತ್ರಂ - ವಾಲಿಗೆ ಮಗನಾದ, ಅಂಗದಂ - ಅಂಗದನನ್ನೂ, ತರಸ್ವಿನಂ - ವೇಗವಂತನಾದ, ಶರಭಂಚ - ಶರಭನನ್ನೂ, ವಿನತಂ - ವಿನತನನ್ನೂ, ಜಾಂಬವಂತಂ-ಜಾಂಬವಂತನನ್ನೂ, ಮಹಾಬಲಂ-ಮಹಾಬಲನಾದ, ಸಾನುಪ್ರಸ್ಥಂ-ಸಾನುಪ್ರಸ್ಥನೆಂಬವನನ್ನೂ, ಋಷಭಂಚ - ಋಷಭನನ್ನೂ, ಋಷಭಸ್ಕಂಧಂ - ಋಷಭಸ್ಕಂಧನೆಂಬವನನ್ನೂ, ಪರಂತಪಃ - ಶತ್ರುಸಂಹಾರಕನಾದ ಶ್ರೀರಾಮನು, ಆದಿದೇಶ - ಆಜ್ಞಾಪಿಸಿದನು. || ೨-೩ || ತೇಹರಯಃ - ಆ ಕಪಿಗಳು, ಸಂಪ್ರಹೃಷ್ಟಾಃ - ಸಂತೋಷಗೊಂಡವರಾಗಿ, ಭೀಮಾನ್ - ಭಯಂಕರಗಳಾದ, ಪಾದಪಾನ್ - ಗಿಡಗಳನ್ನು, ಉದ್ಯಮ್ಯ - ಎತ್ತಿಕೊಂಡು, ಸರ್ವೇ - ಸಮಸ್ತರೂ, ದಶದಿಶಃ - ಹತ್ತು ದಿಕ್ಕುಗಳನ್ನೂ, ಮಾರ್ಗಮಾಣಾಃ - ಹುಡುಕುವವರಾಗಿ, ಆಕಾಶಂ - ಅಂತರಿಕ್ಷವನ್ನು, ವಿವಿಶುಃ - ಪ್ರವೇಶಿಸಿದರು, ಅಸ್ತ್ರವಿತ್ - ಪ್ರಾಜ್ಞನಾದ, ರಾವಣಿಃ - ಇಂದ್ರಜಿತ್ತುವು, ವೇಗವತಾಂ - ವೇಗಶಾಲಿಗಳಾದ, ತೇಷಾಂ - ಆ ಹತ್ತುಜನ ವಾನರರ, ವೇಗಂ - ವೇಗವನ್ನು, ವೇಗವತ್ತರೈಃ - ಅತಿ ವೇಗವುಳ್ಳ, ಇಷುಭಿಃ - ಬಾಣಗಳಿಂದ, ಪರಮಾಸ್ತ್ರೈಸ್ತು - ಶ್ರೇಷ್ಠವಾದ ಅಸ್ತ್ರಗಳಿಂದಲೂ,

---

ಆಮೇಲೆ ರಾಜಪುತ್ರನೂ, ಮಹಾ ಪ್ರತಾಪವಂತನೂ, ಮಹಾ ಬಲಾಢ್ಯನೂ ಆದ ಶ್ರೀರಾಮನು ಇಂದ್ರಜಿತ್ತುವು ನಿಂತು ಯುದ್ಧ ಮಾಡುತ್ತಿರುವ ಸ್ಥಳವನ್ನು ತಿಳಿದು ಬರಲು ವಾನರಯೂಥಪತಿಗಳಾದ ಸುಷೇಣನ ಪುತ್ರರಿಬ್ಬರನ್ನೂ, ನೀಲ, ಪ್ಲವಗರ್ಷಭನಾದ ಅಂಗದ, ಮಹಾ ಬಲಾಢ್ಯನಾದ ಶರಭ, ಮಹಾ ವಿನಯಸಂಪನ್ನನಾದ ಜಾಂಬವಂತ ವೃಷಭಸ್ಕಂಧನಾದ ಋಷಭ ಮೊದಲಾದವರನ್ನು ನಿಯಮಿಸಿದನು. ಆಗಲಾವಾನರವೀರರೆಲ್ಲರೂ ಮಹಾ ಭಯಂಕರವಾದ ವೃಕ್ಷಗಳನ್ನು ಕೈಯಲ್ಲಿ ಹಿಡಿದು ದಶದಿಶೆಗಳನ್ನೂ ಹುಡುಕುತ್ತ ಆಕಾಶವನ್ನು ಪ್ರವೇಶಿಸಿದರು. ಆ ಸಮಯದಲ್ಲಿ ದಿವ್ಯಾಸ್ತ್ರವಿದನಾದ ಆ ಇಂದ್ರಜಿತ್ತುವು ಮಹಾ ವೇಗಗಾಮಿಗಳಾದ ಬಾಣಗಳಿಂದ ಆ ವಾನರರ ಗಮನವೇಗವನ್ನು ನಿವಾರಿಸಿದನು.

||೫|| ತಂ ಭೀಮವೇಗಾ ಹರಯೋ ನಾರಾಚೈಃ ಕ್ಷತವಿಗ್ರಹಾಃ । ಅಂಧಕಾರೇಣ ದದೃಶು ರ್ಮೇಘೈಸ್ಸೂರ್ಯಮಿವಾವೃತಂ ॥ ೬ ॥ ರಾಮಲಕ್ಷ್ಮಣಯೋರೇವ ಸರ್ವದೇಹಭಿದಶ್ಶರಾನ್ । ಭೃಶಮಾವೇಶಯಾಮಾಸ ರಾವಣಿಸ್ಸಮಿತಿಂಜಯಃ ॥ ೭ ॥ ¶ ನಿರಂತರಶರೀರೌ ತೌ ಭ್ರಾತರೌ ರಾಮಲಕ್ಷ್ಮಣೌ । ಕ್ರುದ್ಧೇನೇಂದ್ರಜಿತಾ ವೀರೌ ಪನ್ನಗೈಃ

---

ವಾರಯಾಮಾಸ - ತಡೆದನು. || ೪-೫ || ಭೀಮವೇಗಾಃ - ಭಯಂಕರ ವೇಗವುಳ್ಳ, ಹರಯಃ - ಕಪಿಗಳು, ನಾರಾಚೈಃ-ಬಾಣಗಳಿಂದ, ಕ್ಷತವಿಗ್ರಹಾಃ-ಹೊಡೆಯಲ್ಪಟ್ಟ ಶರೀರಗಳುಳ್ಳವರಾಗಿ, ಮೇಘೈಃ-ಮೇಘಗಳಿಂದ, ಆವೃತಂ - ಸುತ್ತುವರೆದ, ಸೂರ್ಯಮಿವ - ಸೂರ್ಯನನ್ನಂತೆ, ಅಂಧಕಾರೇ - ಕತ್ತಲಿನಲ್ಲಿ, ತಂ - ಆ ಇಂದ್ರಜಿತ್ತುವನ್ನು, ನದದೃಶುಃ - ಕಾಣಲಿಲ್ಲವು. || ೬ || ಸಮಿತಿಂಜಯಃ - ಯುದ್ಧದಲ್ಲಿ ಜಯಶೀಲನಾದ, ರಾವಣಿಃ - ಇಂದ್ರಜಿತ್ತುವು, ರಾಮಲಕ್ಷ್ಮಣಯೋರೇವ - ರಾಮಲಕ್ಷ್ಮಣರ, ಸರ್ವದೇಹಭಿದಃ - ಸಮುಸ್ತ ಶರೀರವನ್ನೂ ಭೇದಿಸುತ್ತಿರುವ, ಶರಾನ್ - ಬಾಣಗಳನ್ನು, ಭೃಶಂ - ಬಹಳವಾಗಿ, ಆವೇಶಯಾಮಾಸ - ಪ್ರವೇಶಗೊಳಿಸಿದನು. || ೭ || ಕ್ರುದ್ಧೇನ - ಕೋಪಿಷ್ಠನಾದ, ಇಂದ್ರಜಿತಾ-ಇಂದ್ರಜಿತ್ತುವಿನಿಂದ, ಶರತಾಂ-ಬಾಣಗಳ ಆಕಾರವನ್ನು, ಗತೈಃ-ಹೊಂದಿರುವ, ಪನ್ನಗೈಃ - ಸರ್ಪಗಳಿಂದ, ಭ್ರಾತರೌ - ಅಣ್ಣತಮ್ಮಂದಿರಾದ, ತೌರಾಮಲಕ್ಷ್ಮಣೌ - ಆ ರಾಮಲಕ್ಷ್ಮ

---

||೧-೫|| ಅನೇಕ ಬಾಣಗಳನ್ನೂ ಅವರ ಮೇಲೆ ಪ್ರಯೋಗಿಸಿದನು. ಭಯಂಕರ ವೇಗವುಳ್ಳ ವಾನರವೀರರು ಆ ಇಂದ್ರಜಿತ್ತುವು ಪ್ರಯೋಗಿಸಿದ ಬಾಣಗಳಿಂದ ಬಹಳವಾಗಿ ಭೇದಿಸಲ್ಪಟ್ಟ ದೇಹವುಳ್ಳವರಾಗಿ ಮೇಘಾವೃತನಾದ ಸೂರ್ಯನಂತೆ ಅಂಧಕಾರದಿಂದಾವೃತನಾಗಿದ್ದ ಆ ಇಂದ್ರಜಿತ್ತುವನ್ನು ಕಾಣದೇಹೋದರು. ಆ ಸಮಯದಲ್ಲಿ ಯಾವಾಗಲೂ ವಿಜಯವನ್ನೇ ಪಡೆಯುತ್ತಿದ್ದ ಆ ಇಂದ್ರಜಿತ್ತುವು ಶ್ರೀರಾಮಲಕ್ಷ್ಮಣರ ಶರೀರವೇ ಭೇದಿಸಿ ಹೋಗುವಂತಹ ಬಾಣಗಳನ್ನು ಪ್ರಯೋಗಿಸಲುಪಕ್ರಮಿಸಿದನು. ಮಹಾ ಕ್ರುದ್ಧನಾದ ಅವನು, ಸರ್ಪಾಕಾರಗಳಾಗಿ, ಮಹಾ ತೀಕ್ಷ್ಣಗಳಾಗಿರುವ ಬಾಣಗಳಿಂದ ಅಣ್ಣತಮ್ಮಂದಿರೂ, ಮಹಾ

---

¶ ಇಲ್ಲಿ ಈ ವಿಷಯವು ಗ್ರಾಹ್ಯವು:—"ನಭೂತಸಂಘಸಂಸ್ಥಾನೋ ದೇಹೋಽಸ್ಯ ಪರಮಾತ್ಮನಃ । ನ ತಸ್ಯ ಪ್ರಾಕೃತಾಮೂರ್ತಿರ್ಮಾಂಸಮೇದೋಸ್ಥಿ ಸಂಭವಃ ॥" ಎಂಬಂತೆ ಆ ಶ್ರೀರಾಮ ಲಕ್ಷ್ಮಣರ ದೇಹಗಳು ದಿವ್ಯಗಳಾಗಿದ್ದೂ ಅವರ ದೇಹಗಳಿಂದ ರುಧಿರೋದ್ಗಮವಾದುದೆಂತು ? ಎಂಬ ಸಂಶಯವು ಉದಿಸುತ್ತದೆ. ವಾಸ್ತವವಾಗಿ ಅವರಲ್ಲಿ ರುಧಿರಸ್ರಾವವಿಲ್ಲದಿದ್ದರೂ, ಮನುಷ್ಯಭಾವವನ್ನು ಪ್ರಕಟಗೊಳಿಸಲೋಸುಗ ನಟರಂತೆ ರುಧಿರಸ್ರಾವವನ್ನು ಪ್ರದರ್ಶಿಸುತ್ತಿದ್ದರು. ಹೀಗೆ ದ್ರಾವಿಡ ಪ್ರಾಣಾಯಾಮದಿಂದ ಅವರಲ್ಲಿ ಮನುಷ್ಯತ್ವವನ್ನು ಆರೋಪಿಸುವುದರಿಂದೇನುಪ್ರಯೋಜನ ? ಎಂದರೆ— ಇವನು ಮರ್ತ್ಯನಲ್ಲ ; ದೇವನು. ಆದುದರಿಂದಲೇ ಇವನಂತೆ ನಾವು ಅನುಷ್ಠಾನ ಮಾಡಲು ಸಾಧ್ಯವಾಗುವುದಿಲ್ಲವೆಂದು ಮಾನವರು ಉದಾಸೀನ ಮಾಡುವರಲ್ಲವೆ ? ಅವನಲ್ಲಿ ಸಮಸ್ತರಿಗೂ ಮನುಷ್ಯಭಾವನೆಯೇ ಇದ್ದರೆ, ಮಹಾಜನಾನುಷ್ಠಾನವನ್ನೇ ಅವನು ಲೋಕಕ್ಕೆ ತೋರುತ್ತಿದ್ದರೆ ಲೋಕವೂ ಅವನಂತೆಯೇ ನಡೆಯುವುದು. ಇದರಿಂದ ಶ್ರೀರಾಮನು ಸರ್ವಶಕ್ತನೂ, ಸರ್ವೇಶ್ವರನೂ ಆಗಿ ಅವನ ದೇಹವು ದಿವ್ಯವಾಗಿದ್ದರೂ ಲೋಕಶಿಕ್ಷಾರ್ಥವಾಗಿ ಹೀಗೆ ಆಚರಿಸಿರುವನೆಂಬುದು ರಹಸ್ಯವು ಇದೂ ಅಲ್ಲದೆ ರಾವಣನು ಮನುಷ್ಯೇತರನಿಂದ ಮಡಿಯಬಾರದೆಂಬ ವರವನ್ನು ಪಡೆದಿದ್ದನಾದುದರಿಂದ ಶ್ರೀರಾಮಮೂರ್ತಿಯು ಮೊದಲಿಂದ ಕಡೆಯುವರೆಗೂ ಮಾನುಷತ್ವವನ್ನೇ ಪ್ರಕಟಗೊಳಿಸುತ್ತಲಿರುವನು. "ಆತ್ಮಾನಂ ಮಾನುಷಂ ಮನ್ಯೇ" ಎಂದೂ ಹೇಳಿರುವನು. ಇದೂ ಅಲ್ಲದೆ ಅಂಥ ರಾಮಮೂರ್ತಿಯೇ ನಾಗಾಸ್ತ್ರಬಂಧನಕ್ಕೊಳಪಟ್ಟುದರಿಂದ ಎಂಥ ಮಹಾತ್ಮರಿಗೂ ಒಂದೊಂದುವೇಳೆ ಮಹದಾಪತ್ತುಗಳು ಸಂಭವಿಸುವುದುಂಟೆಂದು ಗ್ರಹಿಸಬೇಕು.

(ಗೋವಿಂದರಾಜರು.)

ಶರತಾಂಗತ್ರೈಃ ||೮|| ತಯೋಃ ಕ್ಷತಜಮಾರ್ಗೇಣ ಸುಸ್ರಾವ ರುಧಿರಂ ಬಹು । ತಾವುಭೌ ಚ ಪ್ರಕಾಶೇತೇ ಪುಷ್ಪಿತಾವಿವ ಕಿಂಶುಕೌ ||೯|| ತತಃ ಪರ್ಯಂತರಕ್ತಾಕ್ಷೋ ಭಿನ್ನಾಂಜನಚಯೋಪಮಃ । ರಾವಣಿರ್ಭ್ರಾತರೌ ವಾಕ್ಯಮಂತರ್ಧಾನಗತೋಽಬ್ರವೀತ್ ||೧೦|| "ಯುಧ್ಯಮಾನಮನಾಲಕ್ಷ್ಯಂ ಶಕ್ರೋಽಪಿ ತ್ರಿದಶೇಶ್ವರಃ । ದ್ರಷ್ಟುಮಾಸಾದಿತುಂ ವಾಪಿ ನಶಕ್ತಃ ಕಿಂಪುನರ್ಯುವಾಂ ||೧೧|| ಪ್ರಾವೃತಾವಿಷುಜಾಲೇನ ರಾಘವೌ ಕಂಕಪತ್ರಿಣಾ । ಏಷ ರೋಷಪರೀತಾತ್ಮಾ ನಯಾಮಿ ಯಮಸಾದನಂ" ||೧೨|| ಏವಮುಕ್ತ್ವಾ ತು ಧರ್ಮಜ್ಞೌ ಭ್ರಾತರೌ ರಾಮಲಕ್ಷ್ಮಣೌ । ನಿರ್ಬಿಭೇದ ಶಿತೈರ್ಬಾಣೈಃ ಪ್ರಜಹರ್ಷ

ಣರು, ನಿರಂತರಶರೀರೌ - ತುಂಬಿದ ಶರೀರವುಳ್ಳವರಾದರು. ||೮|| ತಯೋಃ - ಅವರೀರ್ವರ, ಕ್ಷತಜಮಾರ್ಗೇಣ - ವ್ರಣಗಳಿಂದ ಹುಟ್ಟಿದ ಮಾರ್ಗದಿಂದ, ಬಹು - ಬಹಳವಾದ, ರುಧಿರಂ - ರಕ್ತವು, ಸುಸ್ರಾವ - ಸೋರಿತು, ತಾವುಭೌ - ಆ ರಾಮಲಕ್ಷ್ಮಣರಿಬ್ಬರೂ, ಪುಷ್ಪಿತೌ - ಹೂವು ಬಿಟ್ಟಿರುವ, ಕಿಂಶುಕಾವಿವ - ಮುತ್ತುಗದ ಗಿಡಗಳಂತೆ, ಪ್ರಕಾಶೇತೇ - ಹೊಳೆಯುತ್ತಿದ್ದರು. ||೯|| ತತಃ - ಬಳಿಕ, ಪರ್ಯಂತರಕ್ತಾಕ್ಷಃ - ತುದಿಗಳಲ್ಲಿ ಕೆಂಪಾದ ನೇತ್ರಗಳುಳ್ಳ, ಭಿನ್ನಾಂ....ಮಃ - ಕಾಡಿಗೆಯ ರಾಶಿಗೆ ಸಮಾನವಾದ, ರಾವಣಿಃ - ಇಂದ್ರಜಿತ್ತುವು, ಅಂತ....ತಃ - ಅಂತರ್ಧಾನ ಹೊಂದಿ, ಭ್ರಾತರೌ - ಅಣ್ಣತಮ್ಮಂದಿರಾದ ರಾಮಲಕ್ಷ್ಮಣರನ್ನು ಕುರಿತು, ವಾಕ್ಯಂ-ಮಾತನ್ನು, ಅಬ್ರವೀತ್-ನುಡಿದನು. ||೧೦|| ಅನಾಲಕ್ಷ್ಯ-ಕಾಣಿಸದೆ, ಯುಧ್ಯಮಾನಂ-ಯುದ್ಧ ಮಾಡುತ್ತಿರುವ ನನ್ನನ್ನು, ತ್ರಿದಶೇಶ್ವರಃ-ದೇವರಾಜನಾದ, ಶಕ್ರೋಽಪಿ - ದೇವೇಂದ್ರನೂ, ದ್ರಷ್ಟುಂ - ನೋಡಲು, ಆಸಾದಿತುಂವಾಪಿ - ಹೊಂದಲೂ, ಶಕ್ತಃ - ಸಮರ್ಥನು, ನ - ಅಲ್ಲವು, ಯುವಾಂ - ನೀವುಗಳು, ಕಿಂಪುನಃ - ಏನು ಹೇಳತಕ್ಕುದು. ||೧೧|| ಕಂಕಪತ್ರಿಣಾ - ಗೃಧ್ರಪಕ್ಷಿಗಳುಳ್ಳ, ಶರಜಾತೇನ - ಬಾಣಗಳ ತಂಡಗಳಿಂದ, ಪ್ರಾವೃತೌ - ಆಚ್ಛಾದನ ಮಾಡಲ್ಪಟ್ಟ, ರಾಘವೌ - ರಾಮಲಕ್ಷ್ಮಣರನ್ನು, ರೋಷಪರೀತಾತ್ಮಾ - ಕ್ರೋಧದಿಂದ ವ್ಯಾಪ್ತವಾದ ಮನವುಳ್ಳ, ಏಷಃ-ಈ ನಾನು, ಯಮಸಾದನಂ-ಯಮನ ಮನೆಯನ್ನು, ನಯಾಮಿ - ಹೊಂದಿಸುತ್ತೇನೆ. ||೧೨|| ಏವಂ - ಹೀಗೆ, ಉಕ್ತ್ವಾತು - ಹೇಳಿ, ಧರ್ಮಜ್ಞೌ - ಧರ್ಮವನ್ನರಿತ, ಭ್ರಾತರೌ - ಅಣ್ಣತಮ್ಮಂದಿರಾದ, ರಾಮಲಕ್ಷ್ಮಣೌ - ರಾಮಲಕ್ಷ್ಮಣರನ್ನು, ಶಿತೈಃ-ತೀಕ್ಷ್ಣಗಳಾದ, ಬಾಣೈಃ - ಬಾಣಗಳಿಂದ, ನಿರ್ಬಿಭೇದ - ಭೇದಿಸಿದನು, ಪ್ರಜಹರ್ಷ - ಸಂತೋಷ

ವೀರರೂ ಆದ ಶ್ರೀರಾಮಲಕ್ಷ್ಮಣರ ಸರ್ವಾಯವಗಳನ್ನೂ ಘಾತಿಸಿದನು. ಆಗ ತಮ್ಮ ಶರೀರದಿಂದ ಹೊರಹೊರಟ ರಕ್ತಪ್ರವಾಹದಿಂದ ಕೂಡಿದ ಆ ರಾಜಪುತ್ರರಿಬ್ಬರೂ ಹೂಮೊಳೆತ ಮುತ್ತುಗದ ಗಿಡಗಳಂತೆ ಶೋಭಿಸುತ್ತಿದ್ದರು. ||೭-೯|| ಆಮೇಲೆ ರಕ್ತಿಮವಾಗಿರುವ ನೇತ್ರಾಂತಗಳುಳ್ಳವನೂ, ಕಾಡಿಗೆಯ ಬೆಟ್ಟಕ್ಕೆ ಸಮಾನವಾದ ದೇಹಕಾಂತಿಯುಳ್ಳವನೂ, ರಾವಣಾಸುರನ ಕುಮಾರನೂ ಆದ ಆ ಇಂದ್ರಜಿತ್ತುವು ಪ್ರಚ್ಛನ್ನನಾಗಿದ್ದುಕೊಂಡೇ ಅಣ್ಣತಮ್ಮಂದಿರಾದ ಆ ಶ್ರೀರಾಮಲಕ್ಷ್ಮಣರನ್ನು ಕುರಿತು, "ಎಲೈ ರಾಮಲಕ್ಷ್ಮಣರಿರಾ! ಅಂತರ್ಹಿತನಾಗಿ ಯುದ್ಧ ಮಾಡುತ್ತಿರುವ ನನ್ನನ್ನು ದೇವೇಂದ್ರನೂ ಜಯಿಸಲಾರನು. ಇನ್ನು ನೀವು ನನ್ನನ್ನು ಜಯಿಸುವಿರಾ! ಅಣ್ಣತಮ್ಮಂದಿರಾದ ನಿಮ್ಮನ್ನು ಕಂಕಪತ್ರಗಳುಳ್ಳ ಬಾಣಗಳಿಂದ ಬಾಧಿಸಿ ಯಮಪುರಿಗೆ ಕಳುಹುತ್ತೇನೆ" ಎಂದು ಹೇಳಿದನು. ಹೀಗೆ ಹೇಳಿದ ತರುವಾಯ ಅವನು ಧರ್ಮಜ್ಞರೂ, ಸಹೋದರರೂ ಆದ ಆ ಶ್ರೀರಾಮ

ನನಾದಚ ||೧೩|| ಭಿನ್ನಾಂಜನಚಯಶ್ಯಾಮೋ ವಿಷ್ಫಾರ್ಯವಿಪುಲಂ ಧನುಃ|ಭೂಯೋ ಭೂಯಃ ಶರಾನ್ ಘೋರಾನ್ ವಿಸಸರ್ಜ ಮಹಾಮೃಧೇ ||೧೪|| ತತೋ ಮರ್ಮಸು ಮರ್ಮಜ್ಞೋ ಮಜ್ಜಯನ್ನಿಶಿತಾನ್ ಶರಾನ್|ರಾಮಲಕ್ಷ್ಮಣಯೋರ್ವೀರೋ ನನಾದಚ ಮುಹುರ್ಮುಹುಃ ||೧೫|| ಬದ್ಧೌತು ಶರಬಂಧೇನ ತಾವುಭೌ ರಣಮೂರ್ಧನಿ | ನಿಮೇಷಾಂತರಮಾತ್ರೇಣ ನಶೇಕತುರುದೀಕ್ಷಿತುಂ ||೧೬|| ತತೋ ವಿಭಿನ್ನಸರ್ವಾಂಗೌ ಶರಶಲ್ಯಾಚಿತಾವುಭೌ | ಧ್ವಜಾವಿವ ಮಹೇಂದ್ರಸ್ಯ ರಜ್ಜುಮುಕ್ತೌ ಪ್ರಕಂಪಿತೌ||೧೭||

---

ಗೊಂಡನು, ನನಾದಚ-ಕೋಲಾಹಲಧ್ವನಿಯನ್ನು ಮಾಡಿದನು. ||೧೩|| ಭಿನ್ನಾಂ....ಮಃ-ಸೇರಿಸಲ್ಪಟ್ಟ ಕಾಡಿಗೆಯ ರಾಶಿಯಂತೆ ಕಪ್ಪಾಗಿರುವ ಇಂದ್ರಜಿತ್ತುವು, ವಿಪುಲಂ-ವಿಸ್ತಾರವಾದ, ಧನುಃ-ಧನುಸ್ಸನ್ನು, ವಿಷ್ಫಾರ್ಯ - ಟಂಕಾರಮಾಡಿ, ಮಹಾಮೃಧೇ - ಮಹಾ ಯುದ್ಧದಲ್ಲಿ, ಘೋರಾನ್ - ಭಯಂಕರಗಳಾದ, ಶರಾನ್ - ಬಾಣಗಳನ್ನು, ಭೂಯೋಭೂಯಃ - ಅಡಿಗಡಿಗೂ, ವಿಸಸರ್ಜ - ಬಿಡುತ್ತಲಿದ್ದನು. ||೧೪|| ತತಃ - ಬಳಿಕ, ಮರ್ಮಜ್ಞಃ - ರಹಸ್ಯವನ್ನು ತಿಳಿದಿರುವ, ವೀರಃ - ಶೂರನಾದ ಇಂದ್ರಜಿತ್ತುವು, ರಾಮಲಕ್ಷ್ಮಣಯೋಃ - ರಾಮಲಕ್ಷ್ಮಣರ, ಮರ್ಮಸು - ಮರ್ಮಸ್ಥಾನಗಳಲ್ಲಿ, ನಿಶಿತಾನ್ - ತೀಕ್ಷ್ಣಗಳಾದ, ಶರಾನ್ - ಬಾಣಗಳನ್ನು, ಮಜ್ಜಯನ್ - ಮುಳುಗಿಸಿ, ಮುಹುರ್ಮುಹುಃ - ಬಾರಿಬಾರಿಗೂ, ನನಾದಚ - ಕೋಲಾಹಲಧ್ವನಿ ಮಾಡಿದನು, ರಣಮೂರ್ಧನಿ - ಯುದ್ಧಪ್ರದೇಶದಲ್ಲಿ, ಶರಬಂಧೇನ - ನಾಗಪಾಶಬಂಧನದಿಂದ, ಬದ್ಧೌ-ಕಟ್ಟಲ್ಪಟ್ಟ, ತಾವುಭೌ-ಆ ರಾಮಲಕ್ಷ್ಮಣರಿಬ್ಬರೂ, ನಿಮೇ....ಣ-ರೆಪ್ಪೆಹಾಕುವುದರೊಳಗಾಗಿ, ಉದೀಕ್ಷಿತುಂ - ನೋಡಲು, ನಶೇಕತುಃ - ಸಮರ್ಥರಾಗದೇಹೋದರು. ||೧೫-೧೬|| ತತಃ - ಬಳಿಕ, ವಿಭಿ.....ಗೌ - ಭೇದಿಸಲ್ಪಟ್ಟ ಸರ್ವಾವಯವಗಳುಳ್ಳ, ಶರ....ತೌ - ಬಾಣಗಳಿಂದ ತುಂಬಿಸಲ್ಪಟ್ಟ, ವೀರೌ-ಶೂರರಾದ, ತಾವುಭೌ-ಆ ರಾಮಲಕ್ಷ್ಮಣರಿಬ್ಬರೂ, ರಜ್ಜುಮುಕ್ತೌ-ಹಗ್ಗದಿಂದ ಬಿಡಲ್ಪಟ್ಟ, ಮಹೇಂದ್ರಸ್ಯ - ದೇವೇಂದ್ರನ, ಧ್ವಜಾವಿವ - ಧ್ವಜಗಳಂತೆ, ಪ್ರಕಂಪಿತೌ - ನಡುಗಿಸಲ್ಪಟ್ಟವರಾಗಿ, ಸಂಪ್ರಚಲಿತೌ - ಇದ್ದ ಕಡೆಯಿಂದ ಕದಲಿಸಲ್ಪಟ್ಟವರಾಗಿ, ಮರ್ಮಭೇದೇನ - ಮರ್ಮಸ್ಥಾನ ಭೇದನದಿಂದ, ಕರ್ಶಿತೌ - ಪೀಡಿತರಾಗಿ, ಜಗತೀಪತೀ - ಭೂಪತಿಗಳಾದರೂ,

---

ಲಕ್ಷ್ಮಣರನ್ನು ತೀಕ್ಷ್ಣಗಳಾದ ಬಾಣಗಳಿಂದ ಬಹಳವಾಗಿ ಬಾಧಿಸಿ ಮಹದಾನಂದಭರಿತನಾಗಿ ಸಿಂಹನಾದವನ್ನು ಮಾಡಿದನು. ಕಾಡಿಗೆಯ ಬೆಟ್ಟಕ್ಕೆ ಸಮಾನವಾದ ದೇಹಕಾಂತಿಯುಳ್ಳ ಆ ಇಂದ್ರಜಿತ್ತುವು ಅಷ್ಟಕ್ಕೇ ಬಿಡದೆ ಮತ್ತೆ ಮತ್ತೆ ತನ್ನ ಧನುಸ್ಸನ್ನು ಬಲವಾಗಿ ಆಕರ್ಷಿಸಿ ಮಹಾ ತೀಕ್ಷ್ಣಗಳಾದ ಬಾಣಗಳನ್ನು ಆ ರಾಜಪುತ್ರರಮೇಲೆ ಪ್ರಯೋಗಿಸಿದನು. ಹೀಗೆ ಮಹಾ ವೀರನಾದ ಆ ಇಂದ್ರಜಿತ್ತುವು ತೀಕ್ಷ್ಣಗಳಾದ ಬಾಣಗಳನ್ನು ಪ್ರಯೋಗಿಸಿ ಆ ರಾಮಲಕ್ಷ್ಮಣರ ಮರ್ಮಸ್ಥಾನಗಳನ್ನು ಭೇದಿಸಿ ಮತ್ತೆ ಮಹಾಸಿಂಹನಾದವನ್ನು ಮಾಡಿದನು. ||೧೦-೧೫|| ಆ ಭಯಂಕರ ಯುದ್ಧದಲ್ಲಿ ಒಂದು ಕ್ಷಣಮಾತ್ರದಲ್ಲಿಯೇ ಶರಬಂಧದಿಂದ ಬಂಧಿತರಾದ ಆ ಶ್ರೀರಾಮುಲಕ್ಷ್ಮಣರು ಅತ್ತಿತ್ತ ನೋಡಲೂ, ಚಲಿಸಲೂ ಅಸಮರ್ಥರಾಗಿಹೋದರು. ಇದೂ ಅಲ್ಲದೆ ಆ ಇಂದ್ರಜಿತ್ತುವಿನ ಬಾಣಗಳಿಂದ ಭೇದಿಸಲಾದ ಸರ್ವಾವಯುವಗಳುಳ್ಳವರಾಗಿ ಹಗ್ಗವಿಲ್ಲದೆ ನೆಲಕ್ಕುರುಳಿದ ಇಂದ್ರಧ್ವಜದಂತೆ ಪ್ರಕಾಶಿಸುತ್ತಿದ್ದರು. ಮರ್ಮಸ್ಥಾನಗಳಲ್ಲಿ ಘಾಯಗಳಾದುದರಿಂದ ಗಡಗಡನೆ ನಡುಗುತ್ತಿದ್ದ

ತೌ ಸಂಪ್ರಚಲಿತೌ ವೀರೌ ಮರ್ಮಭೇದೇನ ಕರ್ಶಿತೌ । ನಿಪೇತತುರ್ಮಹೇಷ್ವಾಸೌ ಜಗತ್ಯಾಂ ಜಗತೀಪತೀ ॥ ೧೮ ॥ ತೌ ವೀರಶಯನೇ ವೀರೌ ಶಯಾನೌ ರುಧಿರೋಕ್ಷಿತೌ । ಶರವೇಷ್ಟಿತಸರ್ವಾಂಗಾವಾರ್ತೌ ಪರಮಪೀಡಿತೌ ॥ ೧೯ ॥ ನಹ್ಯವಿದ್ಧಂ ತಯೋರ್ಗಾತ್ರೇ ಬಭೂವಾಂಗುಳಮಂತರಂ । ನಾನಿರ್ಭಿಣ್ಣಂ ನಚಾಸ್ತಬ್ಧಮಾಕರಾಗ್ರಾದಜಿಹ್ಮಗೈಃ ॥ ೨೦ ॥ ತೌತು ಕ್ರೂರೇಣ ನಿಹತೌ ರಕ್ಷಸಾ ಕಾಮರೂಪಿಣಾ । ಅಸೃಕ್ ಸುಸ್ರುವತುಸ್ತೀವ್ರಂ ಜಲಂ ಪ್ರಸ್ರವಣಾವಿವ ॥ ೨೧ ॥ ಪಪಾತ ಪ್ರಥಮಂ ರಾಮೋ ವಿದ್ಧೋ ಮರ್ಮಸು ಮಾರ್ಗಣೈಃ । ಕ್ರೋಧಾದಿಂದ್ರಜಿತಾ ಯೇನ ಪುರಾ

---

ಮಹೇಷ್ವಾಸೌ - ದೊಡ್ಡ ಧನುಸ್ಸುಗಳನ್ನು ಧರಿಸಿದವರಾದರೂ, ಜಗತ್ಯಾಂ - ನೆಲದಲ್ಲಿ, ನಿಪೇತತುಃ- ಬಿದ್ದರು. ॥ ೧೭-೧೮ ॥ ವೀರಶಯನೇ - ವೀರಶಯನದಲ್ಲಿ, ಶಯಾನೌ - ಮಲಗಿರುವ, ವೀರೌ - ಶೂರರಾದ, ರುಧಿರೋಕ್ಷಿತೌ - ರಕ್ತದಿಂದ ತೋಯಿಸಲ್ಪಟ್ಟ, ತೌ - ಆ ರಾಮಲಕ್ಷ್ಮಣರು, ಶರ....ಗೌ - ಬಾಣಗಳಿಂದ ವ್ಯಾಪ್ತವಾದ ಸರ್ವಾವಯವಗಳುಳ್ಳವರಾಗಿ, ಆರ್ತೌ - ದೀನರಾಗಿ, ಪರಮಪೀಡಿತೌ - ಬಹಳ ಬಾಧೆಯನ್ನು ಹೊಂದಿದವರು, ಬಭೂವತುಃ - ಆದರು. ॥೧೯॥ ತಯೋಃ- ಆ ರಾಮಲಕ್ಷ್ಮಣರ, ಗಾತ್ರೇ - ಶರೀರದಲ್ಲಿ, ಅಂಗುಳಂ - ಬೆರಳುಪ್ರಮಾಣವುಳ್ಳ, ಅಂತರಂ- ಅಂತರವಾದರೂ, ಅವಿದ್ಧಂ - ಹೊಡೆಯಲ್ಪಡದಿರುವುದಾಗಿ, ನಬಭೂವ - ಇರಲಿಲ್ಲವು, ಆಕರಾಗ್ರಾತ್ - ಹಸ್ತಾಗ್ರಪರ್ಯಂತವೂ, ಅಜಿಹ್ಮಗೈಃ - ಬಾಣಗಳಿಂದ, ಅನಿರ್ಭಿಣ್ಣಂ - ಭೇದಿಸಲ್ಪಡದಿರುವ ಸ್ಥಳವು, ನ - ಇರಲಿಲ್ಲ, ಅಸ್ತಬ್ಧಂ - ಅನಿಶ್ಚಲವಾದದ್ದು, ನಬಭೂವ - ಆಗದೇಹೋಯಿತು. ॥ ೨೦ ॥ ಕಾಮರೂಪಿಣಾ - ಕಾಮರೂಪಿಯಾದ, ಕ್ರೂರೇಣ - ಕಠೋರಚಿತ್ತನಾದ, ತೇನರಕ್ಷಸಾ - ಆ ಇಂದ್ರಜಿತ್ತುವಿನಿಂದ, ನಿಹತೌ - ಹೊಡೆಯಲ್ಪಟ್ಟ, ತೌ- ಆ ರಾಮಲಕ್ಷ್ಮಣರು, ಪ್ರಸ್ರವಣಾವಿವ - ಪ್ರಸ್ರವಣ ಗಿರಿಗಳಂತೆ, ತೀವ್ರಂ - ತೀಕ್ಷ್ಣವಾದ, ಅಸೃಕ್ - ರಕ್ತವನ್ನು, ಸುಸ್ರುವತುಃ - ಸುರಿಸುತ್ತಿದ್ದರು. ॥ ೨೧ ॥ ಯೇನೇಂದ್ರಜಿತಾ - ಯಾವ ಇಂದ್ರಜಿತ್ತುವಿನಿಂದ, ಕ್ರೋಧಾತ್ - ಕೋಪದಿಂದ, ಪುರಾ - ಪೂರ್ವದಲ್ಲಿ, ಶಕ್ರಃ - ದೇವೇಂದ್ರನು, ವಿನಿರ್ಜಿತಃ - ಜಯಿಸಲ್ಪಟ್ಟನೋ, ತೇನ - ಆ ಇಂದ್ರಜಿತ್ತುವಿನಿಂದ, ಮಾರ್ಗಣೈಃ - ಬಾಣಗಳಿಂದ, ಮರ್ಮಸು - ಮರ್ಮಸ್ಥಾನಗಳಲ್ಲಿ, ವಿದ್ಧಃ - ಹೊಡೆಯಲ್ಪಟ್ಟವನಾಗಿ, ರಾಮಃ - ಶ್ರೀರಾಮನು, ಪ್ರಥಮಂ - ಮೊದಲು, ಪಪಾತ - ಬಿದ್ದನು. ॥ ೨೨ ॥

---

ಅವಯವಗಳುಳ್ಳವರೂ, ಮರ್ಮಸ್ಥಾನಗಳು ಭೇದಿಸಿ ಹೋಗಿದ್ದುದರಿಂದ ಬಹಳ ಬಾಧೆಗೊಂಡಿರುವವರೂ, ಮಹಾ ಧನುಷ್ಕರೂ, ಭೂಪತಿಗಳೂ ಆದರೂ ಆ ಶ್ರೀರಾಮಲಕ್ಷ್ಮಣರಿಬ್ಬರೂ ನೆಲಕ್ಕೆ ಬಿದ್ದುಹೋದರು. ಮಹಾ ವೀರರಾದ ಅವರೀರ್ವರೂ ವೀರಶಯ್ಯೆಯಲ್ಲಿ ರಕ್ತದಿಂದ ವ್ಯಾಪ್ತವಾದ ಸರ್ವಾವಯವಗಳುಳ್ಳವರಾಗಿ ಪರಮ ದುಃಖಿತರಾಗಿ ಮಲಗಿದ್ದರು. ಅವರ ಶರೀರದಲ್ಲಿ ಒಂದು ಬೆರಳಿನಷ್ಟು ಸ್ಥಳವೂ ಇಲ್ಲದೆ ಘಾಯಗಳಾಗಿ ಹೋಗಿದ್ದುವು. ಪಾದಾದಿಕೇಶಾಂತದವರೆಗೂ ಬಾಣಘಾತಗಳಿಲ್ಲದ ಸ್ವಲ್ಪ ಭಾಗವೂ ಇರಲಿಲ್ಲವು. ॥ ೧೬–೨೦ ॥ ಕ್ರೂರನೂ ಕಾಮರೂಪನೂ ಆದ ಆ ಇಂದ್ರಜಿತ್ತುವಿನಿಂದ ಘಾತಿಸಲಾದ ದೇಹಗಳುಳ್ಳ ಆ ರಾಮಲಕ್ಷ್ಮಣರು ಪ್ರಸ್ರವಣಾದ್ರಿಯು ಉದಕಪ್ರವಾಹಗಳನ್ನು ಸುರಿಸುವಂತೆ ರಕ್ತವನ್ನು ಕಾರುತ್ತಿದ್ದರು. ಮರ್ಮಸ್ಥಾನಗಳಲ್ಲಿ ಬಾಣಗಳಿಂದ ಘಾಯಗೊಂಡಿದ್ದ ಶ್ರೀರಾಮನು ಮೊದಲು ಮೂರ್ಛಾಕ್ರಾಂತನಾಗಿ

ಶಕ್ರೋ ವಿನಿರ್ಜಿತಃ ॥ ೨೨ ॥ ರುಕ್ಮಪುಂಖೈಃ ಪ್ರಸನ್ನಾಗ್ರೈರಧೋಗತಿಭಿರಾಶುಗೈಃ । ನಾರಾಚೈರರ್ಧನಾರಾಚೈರ್ಭಲ್ಲೈರಂಜಲಿಕೈರಪಿ । ವಿವ್ಯಾಧ ವತ್ಸದಂತೈಶ್ಚ ಸಿಂಹದಂಷ್ಟ್ರೈಃ ಕ್ಷುರೈಸ್ತಥಾ ॥ ೨೩ ॥ ಸ ವೀರಶಯನೇ ಶಿಶ್ಯೇ ವಿಜ್ಯಮಾದಾಯ ಕಾರ್ಮುಕಂ । ಭಿನ್ನಮುಷ್ಟಿಪರೀಣಾಹಂ ತ್ರಿಣತಂ ರತ್ನಭೂಷಿತಂ ॥ ೨೪ ॥ ಬಾಣಪಾತಾಂತರೇ ರಾಮಂ ಪತಿತಂ ಪುರುಷರ್ಷಭಂ । ಸ ತತ್ರ ಲಕ್ಷ್ಮಣೋ ದೃಷ್ಟ್ವಾ ನಿರಾಶೋ ಜೀವಿತೇಽಭವತ್ ॥ ೨೫ ॥ ರಾಮಂ ಕಮಲಪತ್ರಾಕ್ಷಂ ಶರಬಂಧಪರಿಕ್ಷತಂ । ಶುಶೋಚ ಭ್ರಾತರಂ ದೃಷ್ಟ್ವಾ ಪತಿತಂ ಧರಣೀತಲೇ । ಹರಯಶ್ಚಾಪಿ ತಂ ದೃಷ್ಟ್ವಾ ಸಂತಾಪಂ ಪರಮಂ ಗತಾಃ ॥ ೨೬-೨೭ ॥

---

ರುಕ್ಮಪುಂಖೈಃ - ಚಿನ್ನದ ಕೊಂಕಿಗಳುಳ್ಳ, ಪ್ರಸನ್ನಾಗ್ರೈಃ - ಸಾಣೆಹಿಡಿದ ತುದಿಗಳುಳ್ಳ, ಅಧೋಗತಿಭಿಃ- ಅಧೋಗಮನಶೀಲಗಳಾದ, ಆಶುಗೈಃ - ಬಾಣಗಳಿಂದಲೂ, ನಾರಾಚೈಃ - ಗುಂಡಾಗಿರುವ ಅಗ್ರಗಳುಳ್ಳ ಬಾಣವಿಶೇಷಗಳಿಂದಲೂ, ಅರ್ಧನಾರಾಚೈಃ ಅರ್ಧನಾರಾಚಗಳೆಂಬ ಬಾಣವಿಶೇಷಗಳಿಂದಲೂ, ಭಲ್ಲೈಃ- ಭಲ್ಲಾಯುಧಗಳಿಂದಲೂ, ಅಂಜಲಿಕೈರಪಿ - ಅಂಜಲಿಗೆ ಸಮಾನವಾದ ಅಗ್ರಗಳುಳ್ಳ ಬಾಣಗಳಿಂದಲೂ, ವತ್ಸದಂತೈಃ - ಕರುಗಳ ಕೊಂಬುಗಳಂತೆ ಆಕಾರವುಳ್ಳ ಬಾಣವಿಶೇಷಗಳಿಂದಲೂ, ಸಿಂಹದಂಷ್ಟ್ರೈಃ - ಸಿಂಹದ ಕೋರೆಹಲ್ಲುಗಳಂತೆ ಆಕಾರವುಳ್ಳ ಬಾಣವಿಶೇಷಗಳಿಂದಲೂ, ತಥಾ - ಹಾಗೆಯೇ, ಕ್ಷುರೈಃ - ಕಿರುಗತ್ತಿಗಳ ಆಕಾರದ ಬಾಣಗಳಿಂದಲೂ, ವಿದ್ಧಃ-ಹೊಡೆಯಲ್ಪಟ್ಟವನಾಗಿ, ಸಃ ಆ ಶ್ರೀರಾಮನು, ಭಿನ್ನ....ಹಂ - ಶಿಥಿಲವಾದ ಮುಷ್ಟಿಬಂಧವುಳ್ಳ, ತ್ರಿಣತಂ - ಮೂರು ಸ್ಥಾನಗಳಲ್ಲಿ ಬೊಗ್ಗಿರುವ, ರತ್ನಭೂಷಿತಂ - ರತ್ನಗಳಿಂದ ಕೆತ್ತಲ್ಪಟ್ಟ, ವಿಜ್ಯಂ - ಬಿಚ್ಚಿಹೋದ ಹೆದೆಯುಳ್ಳ, ಕಾರ್ಮುಕಂ - ಬಿಲ್ಲನ್ನು, ಆದಾಯ - ಹಿಡಿದು, ವೀರಶಯನೇ - ರಣಭೂಮಿಯಲ್ಲಿ, ಶಿಶ್ಯೇ - ಮಲಗಿದನು. ॥೨೩-೨೪॥ ತತ್ರ - ಆ ರಣರಂಗದಲ್ಲಿ, ಸಲಕ್ಷ್ಮಣಃ - ಆ ಲಕ್ಷ್ಮಣನು, ಬಾಣ....ರ - ಬಾಣಗಳ ಹಾಸಿಗೆಯಲ್ಲಿ, ಪತಿತಂ - ಬಿದ್ದಿರುವ, ಪುರುಷರ್ಷಭಂ - ಪುರುಷಶ್ರೇಷ್ಠನಾದ, ರಾಮಂ - ಶ್ರೀರಾಮನನ್ನು, ದೃಷ್ಟ್ವಾ - ಕಂಡು, ಜೀವಿತೇ - ಪ್ರಾಣದಲ್ಲಿ, ನಿರಾಶಃ - ಆಶಾರಹಿತನು, ಅಭವತ್ - ಆದನು. ॥ ೨೫ ॥ ಕಮಲಪತ್ರಾಕ್ಷಂ - ಕಮಲದೆಲೆಗಳಿಗೆ ಸಮಾನವಾದ ನೇತ್ರಗಳುಳ್ಳ, ಶರ... ತಂ - ಬಾಣಗಳಿಂದ ಗಾಯಗೊಳಿಸಲ್ಪಟ್ಟ, ಧರಣೀತಲೇ - ನೆಲದಲ್ಲಿ, ಪತಿತಂ - ಬಿದ್ದಿರುವ, ಭ್ರಾತರಂ - ಅಣ್ಣನಾದ, ರಾಮಂ - ಶ್ರೀರಾಮನನ್ನು, ದೃಷ್ಟ್ವಾ - ಕಂಡು, ಶಶೋಚ - ದುಃಖಿಸಿದನು. ॥ ೨೬ ॥ ಹರಯಶ್ಚಾಪಿ - ಕಪಿಗಳೂ

---

ನೆಲಕ್ಕುರುಳಿದನು. ಇದೂ ಅಲ್ಲದೆ ಬಂಗಾರದ ಹಿಡಿಗಳುಳ್ಳವೂ, ಬಹು ತೀಕ್ಷ್ಣವಾದ ಅಗ್ರಭಾಗಗಳುಳ್ಳವೂ, ಗಾಳಿಯಿಂದ ಹಾರಿಸಲ್ಪಟ್ಟ ಧೂಳಿನಂತೆ ವ್ಯಾಪಿಸುವ ಸ್ವಭಾವವುಳ್ಳವೂ, ಬೊಗಸೆಗಳಂತಿರುವುವೂ ಆದ ವಿವಿಧ ಬಾಣಗಳಿಂದ ಘಾತಿಸಲ್ಪಟ್ಟ ಶರೀರವುಳ್ಳ ಶ್ರೀರಾಮನು ಧನುಸ್ಸನ್ನು ಹಿಡಿದು ವೀರಶಯ್ಯೆಯಲ್ಲಿ ಪವಳಿಸಿದನು. ಭಿನ್ನವಾದ ಮುಷ್ಟಿಪ್ರದೇಶವುಳ್ಳವನಾಗಿ, ಮುರಿದುಹೋದ ನಾರಿಯುಳ್ಳ ಬಿಲ್ಲನ್ನು ಹಿಡಿದು ವೀರಶಯ್ಯೆಯಲ್ಲಿರುವ ಆ ಶ್ರೀರಾಮನನ್ನು ನೋಡಿ ಲಕ್ಷ್ಮಣಸ್ವಾಮಿಯು ಆತನಿನ್ನು ಬದುಕಲಾರನೆಂದು ದುಃಖದಿಂದ ತತ್ತಳಿಸಿಹೋದನು. ॥೨೧ ೨೫॥ ಪದ್ಮಪತ್ರದಂತೆ ವಿಶಾಲವಾದ ನೇತ್ರಗಳುಳ್ಳವನೂ, ಶರಬಂಧದಿಂದ ಘಾತಿಸಲ್ಪಟ್ಟ ಶರೀರವುಳ್ಳವನೂ, ಭೂಮಿಯಲ್ಲಿ ಬಿದ್ದಿರುವವನೂ ಆದ ಶ್ರೀರಾಮನನ್ನು ಕುರಿತು ಆ ಲಕ್ಷ್ಮಣಸ್ವಾಮಿಯು ಬಹಳವಾಗಿ ದುಃಖಿಸಿದನು. ಆಗ ವಾನರರೂ ಸಹ

ಬದ್ಧೌ ತು ವೀರೌ ಪತಿತೌ ಶಯಾನೌ
ತೌ ವಾನರಾಸ್ಸಂಪರಿವಾರ್ಯತಸ್ಥುಃ ।
ಸಮಾಗತೌ ವಾಯುಸುತಪ್ರಮುಖ್ಯಾ
ವಿಷಾದಮಾರ್ತಾಃ ಪರಮಂ ಚ ಜಗ್ಮುಃ ॥ ೨೮ ॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಪಂಚಚತ್ವಾರಿಂಶಸ್ಸರ್ಗಃ



ಕೂಡ, ತಂ - ಆ ಶ್ರೀರಾಮನನ್ನು, ದೃಷ್ಟ್ವಾ - ಕಂಡು, ಪರಮಸಂತಾಪಂ - ಬಹಳ ದುಃಖವನ್ನು, ಗತಾಃ - ಹೊಂದಿದರು. ॥ ೨೭ ॥ ಬದ್ಧೌ - ಕಟ್ಟಲ್ಪಟ್ಟ, ವೀರೌ - ಶೂರರಾದ, ಪತಿತೌ - ನೆಲದಲ್ಲಿ ಬಿದ್ದಿರುವ, ಶಯಾನೌ - ಮಲಗಿರುವ, ತೌ - ಆ ರಾಮಲಕ್ಷ್ಮಣರನ್ನು ಕುರಿತು, ಸಮಾಗತಾಃ - ಬಂದಿರುವ, ವಾಯು....ಖ್ಯಾಃ-ಆಂಜನೇಯನೇ ಮೊದಲಾದ, ವಾನರಾಃ-ಕಪಿಗಳು, ಸಂಪರಿವಾರ್ಯ-ಸುತ್ತುವರೆದು, ತಸ್ಥುಃ - ನಿಂತರು, ಆರ್ತಾಃ - ದೀನರಾಗಿ, ಪರಮಂ - ಬಹಳವಾದ, ವಿಷಾದಂ - ವ್ಯಸನವನ್ನು, ಜಗ್ಮುಃ - ಹೊಂದಿದರು. ॥ ೨೮ ॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಪಂಚಚತ್ವಾರಿಂಶಸ್ಸರ್ಗಃ.



ತಮ್ಮ ಪ್ರಭುವಾದ ಶ್ರೀರಾಮನಿಗೆ ಸಂಭವಿಸಿದ ದುರವಸ್ಥೆಗಾಗಿ ಬಹಳವಾಗಿ ದುಃಖಿಸಿದರು. ವೀರರಾದ ಆ ರಾಮಲಕ್ಷ್ಮಣರು ಅಪರಿಮಿತವಾದ ಬಾಣಗಳಿಂದ ಘಾತಿಸಲ್ಪಟ್ಟ ಶರೀರಗಳುಳ್ಳವರಾಗಿ ವೀರಶಯನದಲ್ಲಿ ಪವಳಿಸಿರುವುದನ್ನು ಕಂಡು ವಾಯುಪುತ್ರನಾದ ಹನುಮಂತನೇ ಮೊದಲಾದ ವಾನರಯೂಥನಾಥರೂ ಬಹಳವಾಗಿ ಸಂತಪಿಸಿದರು. ॥ ೨೬-೨೮ ॥

ಇಂತಿದು ಇಂದ್ರಜಿತ್ಕೃತ ಸರ್ಪಾಸ್ತ್ರಪ್ರಯೋಗಜನಿತ ಶ್ರೀರಾಮಲಕ್ಷ್ಮಣ ಮೂರ್ಛಾ
ವೃತ್ತಾಂತವೆಂಬ ನಲವತ್ತೈದನೆಯ ಸರ್ಗವು ಸಮಾಪ್ತವಾದುದು.



# ಯುದ್ಧಕಾಂಡೇ ಷಟ್ಚತ್ವಾರಿಂಶಸ್ಸರ್ಗಃ

**ತತೋ ದ್ಯಾಂ ಪೃಥಿವೀಂಚೈವ ವೀಕ್ಷಮಾಣಾ ವನೌಕಸಃ । ದದೃಶುಸ್ಸಂತತೌ ಬಾಣೈರ್ಭ್ರಾತರೌ ರಾಮಲಕ್ಷ್ಮಣೌ ॥ ೧ ॥ ವೃಷ್ಟ್ವೇವೋಪರತೇ ದೇವೇ ಕೃತಕರ್ಮಣಿ ರಾಕ್ಷಸೇ । ಆಜಗಾಮಾಽಥ ತಂ ದೇಶಂ ಸಸುಗ್ರೀವೋ ವಿಭೀಷಣಃ ॥ ೨ ॥ ನೀಲದ್ವಿವಿದ ಮೈಂದಾಶ್ಚ ಸುಷೇಣಕುಮುದಾಂಗದಾಃ । ತೂರ್ಣಂ ಹನುಮತಾ ಸಾರ್ಧಮನ್ವಶೋಚಂತ ರಾಘವೌ ॥ ೩ ॥ ಅಚೇಷ್ಟೌ ಮಂದನಿಶ್ವಾಸೌ ಶೋಣಿತೌಘಪರಿಪ್ಲುತೌ । ಶರಜಾಲಾಚಿತೌ ಸ್ತಬ್ಧೌ ಶಯಾನೌ ಶರತಲ್ಪಯೋಃ ॥ ೪ ॥ ನಿಶ್ವಸಂತೌ ಯಥಾ**

---

ತತಃ - ಅನಂತರದಲ್ಲಿ, ವನೌಕಸಃ - ವಾನರರು, ದ್ಯಾಂ - ಆಕಾಶವನ್ನೂ, ಪೃಥಿವೀಂಚೈವ - ಭೂಮಿಯನ್ನೂ, ವೀಕ್ಷಮಾಣಾಃ - ನೋಡುವವರಾಗಿ, ಬಾಣೈಃ - ಬಾಣಗಳಿಂದ, ಸಂತತೌ - ವ್ಯಾಪ್ತರಾಗಿರುವ, ಭ್ರಾತರೌ - ಅಣ್ಣತಮ್ಮಂದಿರಾದ, ರಾಮಲಕ್ಷ್ಮಣೌ - ಆ ರಾಮಲಕ್ಷ್ಮಣರನ್ನು, ದದೃಶುಃ- ಕಂಡರು. ॥೧॥ ವೃಷ್ಟ್ವಾ - ವರ್ಷಿಸಿ, ಉಪರತೇ - ನಿಂತ, ದೇವಇವಸ್ಥಿತೇ - ಪರ್ಜನ್ಯನಂತಿರುವ, ರಾಕ್ಷಸೇ - ಇಂದ್ರಜಿತ್ತುವು, ಕೃತಕರ್ಮಣಿ - ಮಾಡಲ್ಪಟ್ಟ ಕಾರ್ಯವುಳ್ಳವನಾಗಲು, ಅಥ - ಬಳಿಕ, ವಿಭೀಷಣಃ - ವಿಭೀಷಣನು, ಸಸುಗ್ರೀವಃ - ಸುಗ್ರೀವನಿಂದೊಡಗೂಡಿ, ತಂದೇಶಂ - ಆ ಪ್ರದೇಶವನ್ನು ಕುರಿತು, ಆಜಗಾಮ - ಬಂದನು. ॥೨॥ ನೀಲ....ಶ್ಚ - ನೀಲ, ದ್ವಿವಿದ, ಮೈಂದರು, ಸುಷೇ......ದಾಃ - ಸುಷೇಣ, ಕುಮುದ, ಅಂಗದ ಎಂಬವರೂ, ರಾಘವೌ - ರಾಮಲಕ್ಷ್ಮಣರನ್ನು ಕುರಿತು, ಹನುಮತಾ ಸಾರ್ಧಂ - ಹನುಮಂತನೊಡಗೂಡಿ, ತೂರ್ಣಂ - ಬಹಳವಾಗಿ, ಅನ್ವಶೋಚಂತ - ದುಃಖಿಸಿದರು. ॥ ೩ ॥ ಸವಿಭೀಷಣಾಃ - ವಿಭೀಷಣನೊಡಗೂಡಿದ, ಸರ್ವೇ - ಸಮಸ್ತರಾದ, ವಾನರಾಃ - ಕಪಿಗಳು, ಅಚೇಷ್ಟೌ - ಚೇಷ್ಟಾರಹಿತರಾದಕಾರಣ, ಸ್ತಬ್ಧೌ - ನಿಶ್ಚಲವಾಗಿರುವ, ಮಂದನಿಶ್ವಾಸೌ - ನಡುನಡುವೆ ಕುಗ್ಗಿದ ನಿಟ್ಟುಸುರುಗಳುಳ್ಳ, ಶೋಣಿ....ತೌ- ರಕ್ತಪ್ರವಾಹದಿಂದ ತೊಯಿಸಲ್ಪಟ್ಟ, ಶರ......ತೌ- ಬಾಣಸಮೂಹಗಳಿಂದ ವ್ಯಾಪ್ತರಾದ, ಶರತಲ್ಪಯೋಃ - ಬಾಣಗಳೆಂಬ ಹಾಸಿಗೆಗಳಲ್ಲಿ, ಶಯಾನೌ - ಮಲಗಿರುವ, ಸರ್ಪೌಯಥಾ - ಸರ್ಪಗಳಂತೆ, ನಿಶ್ವಸಂತೌ - ನಿಟ್ಟುಸಿರು ಬಿಡುತ್ತ, ನಿಶ್ಚೇಷ್ಟೌ -

---

ಆಮೇಲೆ ವಾನರರೆಲ್ಲರೂ ಭಯಭ್ರಾಂತರಾಗಿ ಭೂಮ್ಯಂತರಿಕ್ಷಗಳನ್ನು ನೋಡುತ್ತ ಬಾಣಗಳಿಂದ ವ್ಯಾಪ್ತವಾದ ಶರೀರಗಳುಳ್ಳವರೂ, ಸಹೋದರರೂ ಆದ ಆ ಶ್ರೀರಾಮಲಕ್ಷ್ಮಣರನ್ನು ಕಂಡರು. ಆ ಸಮಯದಲ್ಲಿ ಮಹಾ ಭಯಂಕರ ವ್ಯಾಪಾರಗಳುಳ್ಳ ಇಂದ್ರಜಿತ್ತುವು ಆ ರಾಜಕುಮಾರರೀರ್ವರನ್ನೂ ಸರ್ಪಾಸ್ತ್ರದಿಂದ ಬಂಧಿಸಿದ ತರುವಾಯ ಮಳೆ ಸುರಿಸಿ ಸುಮ್ಮನಾದ ಪರ್ಜನ್ಯನಂತೆ ಯುದ್ಧರಂಗದಲ್ಲಿ ಯಾವ ಕಾರ್ಯವನ್ನೂ ಮಾಡದೆ ಸುಮ್ಮನಾದನು. ಆಗ ವಿಭೀಷಣನು ಸುಗ್ರೀವನೊಡನೆ ಅಲ್ಲಿಗೆ ಬಂದನು. ಅದೇ ಸಮಯದಲ್ಲಿ ನೀಲದ್ವಿವಿದ ಮೈಂದರೂ, ಸುಷೇಣಕುಮುದಾಂಗದರೂ ಹನುಮಂತನೊಡನೆ ಶ್ರೀರಾಮಲಕ್ಷ್ಮಣರನ್ನು ಕುರಿತು ಬಹಳವಾಗಿ ದುಃಖಿಸುತ್ತಿದ್ದರು. ॥ ೧-೪ ॥ ಚೇಷ್ಟಾರಹಿತರಾಗಿ, ಮೆಲ್ಲಮೆಲ್ಲಗೆ ನಿಟ್ಟುಸಿರುಗಳನ್ನು ಬಿಡುತ್ತ ರಕ್ತಪ್ರವಾಹದಿಂದ ವ್ಯಾಪ್ತವಾದ ಶರೀರಗಳುಳ್ಳವ

ಸಸರ್ಪೌ ನಿಶ್ಚೇಷ್ಟೌ ಮಂದವಿಕ್ರಮೌ । ರುಧಿರಸ್ರಾವದಿಗ್ಧಾಂಗೌ ತಾಪನೀಯಾವಿವ ಧ್ವಜೌ ॥ ೫ ॥ ತೌ ವೀರಶಯನೇ ವೀರೌ ಶಯಾನೌ ಮಂದಚೇಷ್ಟಿತೌ । ಯೂಥಪೈಸ್ತೈಃ ಪರಿವೃತೌ ಬಾಷ್ಪವ್ಯಾಕುಲಲೋಚನೈಃ ॥ ೬ ॥ ರಾಘವೌ ಪತಿತೌ ದೃಷ್ಟ್ವಾ ಶರಜಾಲಸಮಾವೃತೌ । ಬಭೂವುರ್ವ್ಯಥಿತಾಸ್ಸರ್ವೇ ವಾನರಾಸ್ಸವಿಭೀಷಣಾಃ ॥ ೭ ॥ ಅಂತರಿಕ್ಷಂ ನಿರೀಕ್ಷಂತೋ ದಿಶಸ್ಸರ್ವಾಶ್ಚ ವಾನರಾಃ । ನಚೈನಂ ಮಾಯಯಾ ಚ್ಛನ್ನಂ ದದೃಶೂ ರಾವಣಿಂ ರಣೇ ॥ ೮ ॥ ತಂತು ಮಾಯಾಪ್ರತಿಚ್ಛನ್ನಂ ಮಾಯಯೈವ ವಿಭೀಷಣಃ । ವೀಕ್ಷಮಾಣೋ ದದರ್ಶಾಽಥ ಭ್ರಾತುಃ ಪುತ್ರಮವಸ್ಥಿತಂ ॥೯॥ ತಮ

ಒಂದೊಂದುಸಲ ಚೇಷ್ಟಾರಹಿತರಾಗಿರುವ, ಮಂದವಿಕ್ರಮೌ - ಮಂದವಾದ ಪರಾಕ್ರಮವುಳ್ಳ, ರುಧಿ......ಗೌ - ರಕ್ತವು ಸ್ರವಿಸುವುದರಿಂದ ಲೇಪನ ಮಾಡಲ್ಪಟ್ಟ ಶರೀರವುಳ್ಳ, ತಾಪನೀಯೌ - ಸುವರ್ಣ ವಿಕಾರವಾದ, ಧ್ವಜಾವಿವಸ್ಥಿತೌ - ಧ್ವಜಗಳಂತಿರುವ, ವೀರಶಯನೇ - ವೀರಶಯ್ಯೆಯಲ್ಲಿ ಶಯಾನೌ- ಮಲಗಿರುವ, ವೀರೌ - ಶೂರರಾದರೂ, ಮಂದಚೇಷ್ಟಿತೌ - ಮಂದವಾದ ಚೇಷ್ಟಾವಿಶೇಷಗಳುಳ್ಳ, ಬಾಷ್ಪ......ನೈಃ - ಕಂಬನಿಗಳಿಂದ ಕದಡಿದ ಕಣ್ಣುಗಳುಳ್ಳ, ತೈಃಯೂಥಪೈಃ - ಆ ಯೂಥಪತಿಗಳಿಂದ, ಪರಿವೃತೌ - ಸುತ್ತುವರೆಯಲ್ಪಟ್ಟ, ಶರ......ತೌ - ಬಾಣಸಮೂಹಗಳಿಂದ ವ್ಯಾಪ್ತರಾಗಿ, ಪತಿತೌ - ಕೆಳಗೆ ಬಿದ್ದಿರುವ, ತೌರಾಘವೌ - ಆ ರಾಮಲಕ್ಷ್ಮಣರನ್ನು, ದೃಷ್ಟ್ವಾ - ಕಂಡು, ವ್ಯಥಿತಾಃ - ದುಃಖಿತರು, ಬಭೂವುಃ - ಆದರು. ॥೪-೭॥ ವಾನರಾಃ - ಕಪಿಗಳು, ಅಂತರಿಕ್ಷಂ - ಅಂತರಿಕ್ಷವನ್ನೂ, ಸರ್ವಾಃ - ಸಮಸ್ತವಾದ, ದಿಶಶ್ಚ - ದಿಕ್ಕುಗಳನ್ನೂ, ನಿರೀಕ್ಷಂತಃ - ನೋಡುವವರಾದರೂ, ರಣೇ - ಯುದ್ಧದಲ್ಲಿ, ಮಾಯಯಾ - ಮಾಯೆಯಿಂದ, ಛನ್ನಂ - ಕವಿದಿರುವ, ರಾವಣಿಂ - ಇಂದ್ರಜಿತ್ತುವನ್ನು, ನದದೃಶುಶ್ಚೈವ - ನೋಡಲೇ ಇಲ್ಲವು. ॥ ೮ ॥ ಅಥ - ಅನಂತರದಲ್ಲಿ, ವಿಭೀಷಣಸ್ತು - ವಿಭೀಷಣನಾದರೆ, ಮಾಯಯಾ - ಮಾಯೆಯಿಂದ, ಪ್ರತಿಚ್ಛನ್ನಂ - ಆಚ್ಛಾದಿತನಾಗಿ, ಅವಸ್ಥಿತಂ-ನಿಂತಿರುವ, ಭ್ರಾತುಃಪುತ್ರಂ - ಅಣ್ಣನ ಮಗನನ್ನು, ಮಾಯಯಾ - ಮಾಯೆಯಿಂದ, ವೀಕ್ಷಮಾಣಃ - ಸುತ್ತುಮುತ್ತಲೂ ನೋಡುವವನಾಗಿ, ತಂ-ಅವನನ್ನು, ದದರ್ಶ-ಕಂಡನು. ॥೯॥ ವಿಭೀಷಣಃ-ವಿಭೀಷಣನು, ಅಪ್ರ......ಣಂ-ಅಸದೃಶಕಾರ್ಯವನ್ನುಮಾಡುವ, ಆಹವೇ-ಕಾಳಗದಲ್ಲಿ, ಅಪ್ರತಿದ್ವಂದ್ವಂ-ಅಸದೃಶನಾದ,

ರಾಗಿ, ಬಾಣಪರಂಪರೆಗಳಿಂದ ವ್ಯಾಪ್ತರಾಗಿ ವೀರಶಯನದಲ್ಲಿ ಸ್ತಬ್ಧರಾಗಿ ಮಲಗಿ ಸರ್ಪಗಳಂತೆ ಅಡಿಗಡಿಗೂ ಬಿಸಿಯುಸಿರ್ಗರೆಯುತ್ತ ಮಂದಪರಾಕ್ರಮವುಳ್ಳವರಾಗಿರುವ ಶ್ರೀರಾಮಲಕ್ಷ್ಮಣರನ್ನು ಆ ಕಪಿನಾಯಕರೆಲ್ಲರೂ ಕಂಡರು. ಅವರು ರಕ್ತದಿಂದ ತೊಯ್ದ ಸರ್ವಾವಯವಗಳುಳ್ಳವರಾಗಿ ತಾಪನೀಯ (ಚಿನ್ನದ) ಧ್ವಜದಂತೆ ತೋರುತ್ತ ಬಾಣಜಾಲದಿಂದ ತುಂಬಿದ ಕಾಯಗಳುಳ್ಳವರಾಗಿದ್ದರು. ಅವರನ್ನು ಕಂಡೊಡನೆಯೇ ಅಲ್ಲಿದ್ದ ವಾನರರೆಲ್ಲರೂ ವಿಭೀಷಣನೊಡಗೂಡಿ ಬಹಳವಾಗಿ ದುಃಖಸಂತಪ್ತರಾದರು. ಆಗಲಾ ವಾನರರು ಆಕಾಶವನ್ನೂ, ದಿಕ್ಕುವಿದಿಕ್ಕುಗಳನ್ನೂ ನೋಡಿದರೂ ಮಾಯೆಯಿಂದ ಅಂತರ್ಹಿತನಾಗಿ ಮಹಾ ಸಮರ್ಥನಾಗಿ ಯುದ್ಧ ಮಾಡುತ್ತಿದ್ದ ಆ ಇಂದ್ರಜಿತ್ತುವನ್ನು ಕಾಣದೇಹೋದರು. ಆಗ ಸಕಲ ಮಾಯಾತಂತ್ರನಿಪುಣನಾದ ವಿಭೀಷಣನುಮಾತ್ರ, ಮಾಯೆಯಿಂದ ಅಂತರ್ಹಿತನಾಗಿ ನಿಂತಿದ್ದ ತನ್ನ ಅಣ್ಣನ ಮಗ ಆ ಇಂದ್ರಜಿತ್ತುವನ್ನು ಕಂಡನು. ॥ ೫-೯ ॥ ಆ ವಿಭೀಷಣನು ವರದಾನ ಮಹಿಮೆಯಿಂದ ಅಸಮ ಪರಾಕ್ರಮವುಳ್ಳವನೂ, ರಣದಲ್ಲಿ ಅನುಪಮನೂ, ಮಾಯಾಚ್ಛಾದಿತ

ಪ್ರತಿಮುಕಮರ್ಗಣಮುಪ್ರತಿದ್ವಂದ್ವಮಾಹವೇ । ದದರ್ಶಾಂತರ್ಹಿತಂ ವೀರಂ ವರದಾನಾದ್ವಿಭೀಷಣಃ । ತೇಜಸಾ ಯಶಸಾಚೈವ ವಿಕ್ರಮೇಣಚ ಸಂಯುತಂ ॥ ೧೦ ॥ ಇಂದ್ರಜಿತ್ತ್ವಾತ್ಮನಃ ಕರ್ಮ ತೌ ಶಯಾನೌ ಸಮೀಕ್ಷ್ಯಚ । ಉವಾಚ ಪರಮಪ್ರೀತೋ ಹರ್ಷಯನ್ ಸರ್ವನೈರ್ಋತಾನ್ ॥೧೧॥ "ದೂಷಣಸ್ಯಚ ಹಂತಾರೌ ಖರಸ್ಯಚ ಮಹಾಬಲೌ । ಸಾದಿತೌ ಮಾಮಕೈರ್ಬಾಣೈರ್ಭ್ರಾತರೌ ರಾಮಲಕ್ಷ್ಮಣೌ ॥೧೨॥ ನೇಮೌ ಮೋಕ್ಷಯಿತುಂ ಶಕ್ಯಾವೇತಸ್ಮಾದಿಷುಬಂಧನಾತ್ । ಸರ್ವೈರಪಿ ಸಮಾಗಮ್ಯ ಸರ್ಷಿಸಂಘೈ ಸ್ಸುರಾಸುರೈಃ ॥ ೧೩ ॥ ಯತ್ಕೃತೇ ಚಿಂತಯಾನಸ್ಯ ಶೋಕಾರ್ತಸ್ಯ ಪಿತುರ್ಮಮ । ಅಸ್ಪೃಷ್ಟ್ವಾ ಶಯನಂ ಗಾತ್ರೈಸ್ತ್ರಿಯಾಮಾ ಯಾತಿ ಶರ್ವರೀ ॥ ೧೪ ॥

---

ವರದಾನಾತ್ - ವರಪ್ರದಾನದಿಂದ, ಅಂತರ್ಹಿತಂ - ಅಡಗಿರುವ, ವೀರಂ - ಶೂರನಾದ, ತೇಜಸಾ - ತೇಜಸ್ಸಿನಿಂದಲೂ, ಯಶಸಾಚೈವ - ಯಶಸ್ಸಿನಿಂದಲೂ, ವಿಕ್ರಮೇಣಚ - ಪರಾಕ್ರಮದಿಂದಲೂ, ಸಂಯುತಂ - ಕೂಡಿರುವ, ತಂ - ಆ ಇಂದ್ರಜಿತ್ತುವನ್ನು, ದದರ್ಶ - ಕಂಡನು. ॥೧೦॥ ಇಂದ್ರಜಿತ್ - ಇಂದ್ರಜಿತ್ತುವು, ಆತ್ಮನಃ - ತನ್ನ, ಕರ್ಮ - ವ್ಯಾಪಾರವನ್ನು, ಶಯಾನೌ - ಮಲಗಿರುವ, ತೌಚ - ಅವರನ್ನೂ, ಸಮೀಕ್ಷ್ಯ - ಕಂಡು, ಪರಮಪ್ರೀತಃ - ಮಹಾ ಸಂತೋಷಚಿತ್ತನಾಗಿ, ಸರ್ವನೈರ್ಋತಾನ್ - ಸಮಸ್ತ ರಾಕ್ಷಸರನ್ನೂ, ಹರ್ಷಯನ್ - ಸಂತೋಷಗೊಳಿಸುವವನಾಗಿ, ಉವಾಚ - ಹೇಳಿದನು. ॥೧೧॥ ದೂಷಣಸ್ಯಚ - ದೂಷಣನಿಗೂ, ಖರಸ್ಯಚ - ಖರನಿಗೂ, ಹಂತಾರೌ - ಸಂಹಾರಕರಾದ, ಮಹಾಬಲೌ - ಬಹು ಬಲಾಢ್ಯರಾದ, ಭ್ರಾತರೌ - ಅಣ್ಣತಮ್ಮಂದಿರಾದ, ರಾಮಲಕ್ಷ್ಮಣೌ - ರಾಮಲಕ್ಷ್ಮಣರು, ಮಾಮಕೈಃ - ನನ್ನ ಸಂಬಂಧವಾದ, ಬಾಣೈಃ - ಬಾಣಗಳಿಂದ, ಸಾದಿತಾ - ಹೊಡೆಯಲ್ಪಟ್ಟರು, (ಪಶ್ಯತ - ನೋಡಿರಿ). ॥ ೧೨ ॥ ಸರ್ವೈಃ - ಸಮಸ್ತರಾದ, ಸರ್ಷಿಸಂಘೈಃ - ಋಷಿಸಮೂಹಗಳಿಂದೊಡಗೂಡಿದ, ಸುರಾಸುರೈರಪಿ - ದೇವರಾಕ್ಷಸರಿಂದಲೂ ಕೂಡ ಸಮಾಗಮ್ಯ - ಗುಂಪುಸೇರಿ, ಏತಸ್ಮಾತ್ ಇಷುಬಂಧನಾತ್ - ಈ ಶರಬಂಧನದಿಂದ, ಇಮೌ - ಇವರೀರ್ವರನ್ನೂ, ಮೋಕ್ಷಯಿತುಂ - ಬಿಡಿಸುವದಕ್ಕೆ, ನಶಕ್ಯೌ - ಆಗುವುದಿಲ್ಲ. ॥ ೧೩ ॥ ಯತ್ಕೃತೇ - ಯಾರ ನಿಮಿತ್ತವಾಗಿ, ಗಾತ್ರೈಃ - ಅವಯವಗಳಿಂದ, ಶಯನಂ - ಹಾಸಿಗೆಯನ್ನು, ಅಸಂಸ್ಪೃಷ್ಟ್ವಾ - ಸ್ಪರ್ಶಿಸದೆ, ಚಿಂತಯಾನಸ್ಯ - ಆಲೋಚಿಸುತ್ತಲಿರುವಕಾರಣ, ಶೋಕಾರ್ತಸ್ಯ - ವ್ಯಸನಾರ್ತನಾದ, ಮಮಪಿತುಃ - ನನ್ನ ತಂದೆಗೆ, ತ್ರಿಯಾಮಾ-

---

ಕಾಯನೂ, ಮಹಾ ವೀರನೂ, ತೇಜೋವಿಕ್ರಮಕೀರ್ತಿಸಹಿತನೂ ಆದ ಆ ಇಂದ್ರಜಿತ್ತುವನ್ನು ನೋಡಿ ಮಹದಾಶ್ಚರ್ಯಭರಿತನಾಗಿ ಹೋದನು. ಆಗಲಾ ಇಂದ್ರಜಿತ್ತುವಾದರೋ ತನ್ನ ಬಾಣಪ್ರಯೋಗದಿಂದ ವೀರಶಯನದಲ್ಲಿ ಪವಳಿಸಿದ್ದ ಶ್ರೀರಾಮಲಕ್ಷ್ಮಣರನ್ನು ಕಂಡು ಮಹದಾನಂದಭರಿತನಾಗಿ ತನ್ನ ಬಳಿಯಿದ್ದ ರಾಕ್ಷಸರೆಲ್ಲರನ್ನೂ ಕುರಿತು, "ಎಲೈ ರಾಕ್ಷಸೋತ್ತಮರೇ! ಖರದೂಷಣಾದಿಗಳನ್ನು ಸಂಹರಿಸಿದವರೂ, ಮಹಾ ಬಲಾಢ್ಯರೂ ಆದ ಈ ರಾಮಲಕ್ಷ್ಮಣರು ನನ್ನ ಬಾಣಬಂಧನದಿಂದ ನೆಲಕ್ಕುರುಳಿರುವರು. ಇವರನ್ನು ಯಾರೂ ಈ ಬಂಧನದಿಂದ ಬಿಡಿಸಲಾರರು. ದೇವದಾನವರೂ, ಮಹರ್ಷಿಗಳೂ ಅಲ್ಲದೆ ಮೂರು ಲೋಕದವರೂ ಒಂದಾಗಿ ಸೇರಿ ಪ್ರಯತ್ನಿಸಿದರೂ ಇವರನ್ನು ಈ ಶರಬಂಧನದಿಂದ ಬಿಡಿಸಲು ಸಮರ್ಥರಾಗಲಾರರು. ಈ ರಾಮಲಕ್ಷ್ಮಣರ ಪರಾಕ್ರಮವನ್ನು ಕುರಿತು ಬಹಳವಾಗಿ ವ್ಯಸನಪಡುವುದರಿಂದ ಶಯ್ಯೆಯಲ್ಲಿಯೂ ಸುಖವಾಗಿ ಮಲಗಿ ನಿದ್ರಿಸಲಾರದೆ ದುಃಖಿಸು

ಕೃತ್ಸ್ನೇಯಂ ಯತ್ಕೃತೇ ಲಂಕಾ ನದೀ ವರ್ಷಾಸ್ವಿವಾಕುಲಾ । ಸೋಽಯಂ ಮೂಲಹರೋಽನರ್ಥಸ್ಸರ್ವೇಷಾಂ ನಿಹತೋ ಮಯಾ ॥ ೧೫ ॥ ರಾಮಸ್ಯ ಲಕ್ಷ್ಮಣಸ್ಯಾಪಿ ಸರ್ವೇಷಾಂಚ ವನೌಕಸಾಂ । ವಿಕ್ರಮಾ ನಿಷ್ಫಲಾಸ್ಸರ್ವೇ ಯಥಾ ಶರದಿ ತೋಯದಾಃ" ॥ ೧೬ ॥ ಏವಮುಕ್ತ್ವಾತು ತಾನ್ ಸರ್ವಾನ್ ರಾಕ್ಷಸಾನ್ ಪರಿಪಾರ್ಶ್ವತಃ । ಯೂಥಪಾನಪಿ ತಾನ್ ಸರ್ವಾಂಸ್ತಾಡಯಾಮಾಸ ರಾವಣಿಃ ॥ ೧೭ ॥ ನೀಲಂ ನವಭಿರಾಹತ್ಯ ಮೈಂದಂಚ ದ್ವಿವಿದಂ ತಥಾ । ತ್ರಿಭಿಸ್ತ್ರಿಭಿರಮಿತ್ರಘ್ನಸ್ತತಾಪ ಪ್ರವರೇಷುಭಿಃ ॥ ೧೮ ॥ ಜಾಂಬವಂತಂ ಮಹೇಷ್ವಾಸೋ ವಿಧ್ವಾ ಬಾಣೇನ ವಕ್ಷಸಿ । ಹನೂಮತೋ ವೇಗ

ರಾತ್ರಿಯು, ಯಾತಿ - ಕಳೆಯುತ್ತಿದೆಯೋ. ॥೧೪॥ ಯತ್ಕೃತೇ - ಯಾರ ನಿಮಿತ್ತವಾಗಿ, ಕೃತ್ಸ್ನಾ - ಸಮಸ್ತವಾದ, ಇಯಂಲಂಕಾ - ಈ ಲಂಕಾಪಟ್ಟಣದಲ್ಲಿರುವ ಜನವು, ವರ್ಷಾಸು - ವರ್ಷಾಕಾಲದಲ್ಲಿ, ಆಕುಲಾ - ಒಂದಾದ, ನದೀವ - ನದಿಯಂತೆ, ಆಕುಲಾ - ಸ್ವಸ್ಥವಾಗಿಲ್ಲವೋ, ಸರ್ವೇಷಾಂ - ನಮ್ಮೆಲ್ಲರ, ಮೂಲಹರಃ - ಮೂಲವನ್ನು ಅಪಹರಿಸುವ, ಅನರ್ಥಃ - ಅನರ್ಥಕರನಾದ, ಅಯಂ - ಈ ರಾಮನು, ಮಯಾ - ನನ್ನಿಂದ, ನಿಹತಃ - ಹೊಡೆಯಲ್ಪಟ್ಟನು. ॥೧೫॥ ಶರದಿ - ಶರತ್ಕಾಲದಲ್ಲಿ, ತೋಯದಾ ಯಥಾ - ಮೇಘಗಳಂತೆ, ರಾಮಸ್ಯ - ಶ್ರೀರಾಮನ, ಲಕ್ಷ್ಮಣಸ್ಯಾಪಿ - ಲಕ್ಷ್ಮಣನ, ಸರ್ವೇಷಾಂ - ಸಮಸ್ತರಾದ, ವನೌಕಸಾಂಚ - ಕಪಿಗಳ, ಸರ್ವೇ - ಸಮಸ್ತವಾದ, ವಿಕ್ರಮಾಃ - ಪರಾಕ್ರಮಗಳು, ನಿಷ್ಫಲಾಃ - ವಿಫಲವಾದವುಗಳು. ॥೧೬॥ ರಾವಣಿಃ - ಇಂದ್ರಜಿತ್ತುವು, ಪಾರ್ಶ್ವತಃ - ಸಮೀಪದಲ್ಲಿರುವ, ಸರ್ವಾನ್ - ಸಮಸ್ತರಾದ, ತಾನ್ರಾಕ್ಷಸಾಂಸ್ತು - ಆ ರಾಕ್ಷಸರನ್ನು ಕುರಿತಾದರೆ, ಏವಂ - ಈ ಪರಿಯಾಗಿ, ಉಕ್ತ್ವಾ - ಹೇಳಿ, ಪರಿಪಾರ್ಶ್ವತಃ - ಶ್ರೀರಾಮನ ಸಮೀಪದಲ್ಲಿರುವ, ಸರ್ವಾನ್ ಸಮಸ್ತರಾದ, ತಾನ್ ಯೂಥಪಾನಪಿ - ಆ ವಾನರಯೂಥಪತಿಗಳನ್ನೂ ಕೂಡ, ತಾಡಯಾಮಾಸ - ಹೊಡೆದನು. ॥೧೭॥ ಅಥ - ಅನಂತರದಲ್ಲಿ, ಮಹೇಷ್ವಾಸಃ - ದೊಡ್ಡ ಬಿಲ್ಲುಳ್ಳ, ಅಮಿತ್ರಘ್ನಃ - ಶತ್ರುಸಂಹಾರಕನಾದ, ರಾವಣಿಃ - ಇಂದ್ರಜಿತ್ತುವು, ನೀಲಂ - ನೀಲನನ್ನು, ನವಭಿಃ - ಒಂಬತ್ತು ಬಾಣಗಳಿಂದಲೂ, ಮೈಂದಂಚ - ಮೈಂದನನ್ನೂ, ತಥಾ - ಹಾಗೆಯೇ, ದ್ವಿವಿದಂ - ದ್ವಿವಿದನನ್ನೂ, ತ್ರಿಭಿಸ್ತ್ರಿಭಿಃ - ಮೂರುಮೂರು, ಪ್ರವರೇಷುಭಿಃ - ಉತ್ತಮ ಬಾಣಗಳಿಂದಲೂ, ಆಹತ್ಯ - ಹೊಡೆದು, ಜಾಂಬವಂತಂ - ಜಾಂಬವಂತನನ್ನು, ಬಾಣೇನ - ಒಂದು ಬಾಣದಿಂದ, ವಕ್ಷಸಿ - ಎದೆಯಲ್ಲಿ, ವಿಧ್ವಾ - ಹೊಡೆದು,

ತ್ತಿರುವ ನನ್ನ ತಂದೆಯಾದ ರಾವಣಾಸುರನಿಗೆ ರಾತ್ರಿಯೆಲ್ಲವೂ ಬಹು ಕಠಿನವಾಗಿ ಕಳೆಯುತ್ತಿದ್ದಿತು. ಇಷ್ಟೆಯಲ್ಲದೆ ಈ ರಾಮಲಕ್ಷ್ಮಣರ ನಿಮಿತ್ತವಾಗಿ ಲಂಕಾನಗರವೆಲ್ಲವೂ ವರ್ಷಾಕಾಲದಲ್ಲಿ ನದಿಯಂತೋ ಅಂತು ಬಹಳ ವ್ಯಾಕುಲವಾಗಿದ್ದಿತು. ಈಗ ಇವರೀರ್ವರನ್ನೂ ಸಂಹರಿಸಿ ಸಮಸ್ತ ರಾಕ್ಷಸರಿಗೂ ಉಂಟಾಗಿದ್ದ ಕಷ್ಟಪರಂಪರೆಗಳನ್ನು ತೊಲಗಿಸಿದೆನು. ಎಲೈ ರಾಕ್ಷಸರೇ ! ರಾಮಲಕ್ಷ್ಮಣರ ಮತ್ತು ಸಮಸ್ತವಾನರರ ಪರಾಕ್ರಮವೆಲ್ಲವೂ ಶರತ್ಕಾಲದಲ್ಲಿನ ಮೇಘಗಳಂತೆ ನಿಷ್ಫಲವಾಯಿತು" ಎಂದು ಹೇಳಿದನು. ॥೧೧–೧೬॥ ಆ ಇಂದ್ರಜಿತ್ತುವು ಗಗನದಲ್ಲಿ ಸಂಚರಿಸುತ್ತಿದ್ದ ರಾಕ್ಷಸರೆಲ್ಲರಿಗೂ ಈ ರೀತಿ ಹೇಳಿ ಭೂಮಿಯಮೇಲಿದ್ದ ವಾನರಯೂಥಪತಿಗಳೆಲ್ಲರನ್ನೂ ನಾನಾವಿಧವಾಗಿ ಬಾಧಿಸತೊಡಗಿದನು. ಅವನು ನೀಲ, ಮೈಂದ, ದ್ವಿವಿದರನ್ನು ಒಂಬತ್ತು ಬಾಣಗಳಿಂದ ಮೊದಲು ಘಾತಿಸಿ ಮತ್ತೆ ಮೈಂದದ್ವಿವಿದರನ್ನು ಮೂರು ಮೂರು ಬಾಣಗಳಿಂದ ಬಾಧೆಗೊಳಿಸಿದನು. ಇದಾದ ತರುವಾಯ ಮಹಾ ಧನುರ್ಧಾರಿಯಾದ

ವತೋ ವಿಸಸರ್ಜ ಶರಾನ್ ದಶ ||೧೯|| ಗವಾಕ್ಷಂ ಶರಭಂಚೈವ ದ್ವಾವಪ್ಯಮಿತತೇಜಸೌ| ದ್ವಾಭ್ಯಾಂ ದ್ವಾಭ್ಯಾಂ ಮಹಾವೇಗೋ ವಿವ್ಯಾಧ ಯುಧಿ ರಾವಣಿಃ ||೨೦|| ಗೋಲಾಂಗೂಲೇಶ್ವರಂಚೈವ ವಾಲಿಪುತ್ರಮಥಾಂಗದಂ| ವಿವ್ಯಾಧ ಬಹುಭಿರ್ಬಾಣೈಸ್ತ್ವರಮಾಣೋಽಥ ರಾವಣಿಃ ||೨೧|| ತಾನ್ ವಾನರವರಾನ್ಭಿತ್ವಾ ಶರೈರಗ್ನಿಶಿಖೋಪಮೈಃ | ನನಾದ ಬಲವಾಂಸ್ತತ್ರ ಮಹಾಸತ್ವಸ್ಸರಾವಣಿಃ || ೨೨ || ತಾನರ್ದಯಿತ್ವಾ ಬಾಣೌಘೈಸ್ತ್ರಾಸಯಿತ್ವಾ ಚ ವಾನರಾನ್ | ಪ್ರಜಹಾಸ ಮಹಾಬಾಹುರ್ವಚನಂ ಚೇದಮಬ್ರವೀತ್ ||೨೩|| "ಶರಬಂಧೇನ ಘೋರೇಣ ಮಯಾ ಬದ್ಧೌ ಚಮೂಮುಖೇ | ಸಹಿತೌ

---

ತತಾಪ - ನೋಯಿಸಿದನು, ಹನೂಮತಃ - ಹನುಮಂತನ ನಿಮಿತ್ತವಾಗಿ, ವೇಗವತಃ - ವೇಗವುಳ್ಳ, ದಶಶರಾನ್ - ಹತ್ತುಬಾಣಗಳನ್ನು, ವಿಸಸರ್ಜ - ಬಿಟ್ಟನು, ಅಥ - ಅನಂತರದಲ್ಲಿ, ಮಹಾವೇಗಃ - ಬಹು ವೇಗವುಳ್ಳ, ರಾವಣಿಃ - ಇಂದ್ರಜಿತ್ತುವು, ಯುಧಿ - ಕಾಳೆಗದಲ್ಲಿ, ತ್ವರಮಾಣಃ - ತ್ವರೆಮಾಡುವವನಾಗಿ, ಅಮಿತತೇಜಸೌ - ಮಹಾ ತೇಜಸ್ಸುಳ್ಳ, ಗವಾಕ್ಷಂ - ಗವಾಕ್ಷನನ್ನೂ, ಶರಭಂಚೈವ - ಶರಭನನ್ನೂ, ದ್ವಾವಪಿ - ಇಬ್ಬರನ್ನೂ, ದ್ವಾಭ್ಯಾಂದ್ವಾಭ್ಯಾಂ - ಎರಡೆರಡು ಬಾಣಗಳಿಂದ, ವಿವ್ಯಾಧ - ಹೊಡೆದನು. ||೧೯-೨೧|| ತತ್ರ - ಆ ಯುದ್ಧರಂಗದಲ್ಲಿ, ಮಹಾಸತ್ವಃ - ಮಹಾ ಧೈರ್ಯಶಾಲಿಯಾದ, ಬಲವಾನ್ - ಬಲಿಷ್ಠನಾದ, ರಾವಣಿಃ - ಇಂದ್ರಜಿತ್ತುವು, ತಾನ್ವಾನರವರಾನ್ - ಆ ಕಪಿಶ್ರೇಷ್ಠರನ್ನು, ಅಗ್ನಿಶಿಖೋಪಮೈಃ - ಅಗ್ನಿಜ್ವಾಲೆಗೆ ಸಮಾನವಾದ, ಶರೈಃ - ಬಾಣಗಳಿಂದ, ಭಿತ್ವಾ - ಭೇದಿಸಿ, ನನಾದ-ಕೂಗಿದನು. ||೨೨|| ಮಹಾಬಾಹುಃ - ಮಹಾ ಭುಜಬಲಪರಾಕ್ರಮಿಯಾದ ಇಂದ್ರಜಿತ್ತುವು, ತಾನ್ - ಆ ವಾನರಯೂಥಪತಿಗಳನ್ನು, ಬಾಣೌಘೈಃ - ಬಾಣಸಮೂಹಗಳಿಂದ, ಅರ್ದಯಿತ್ವಾ-ಹೊಡೆದು, ವಾನರಾಂಶ್ಚ-ಇತರ ಕಪಿಗಳನ್ನೂ, ತ್ರಾಸಯಿತ್ವಾ-ಹೆದರಿಸಿ, ಪ್ರಜಹಾಸ-ನಕ್ಕನು, ಇದಂವಚನಂಚ-ಈ ಮಾತನ್ನೂ ಕೂಡ, ಅಬ್ರವೀತ್-ನುಡಿದನು. ||೨೩|| ಹೇ ರಾಕ್ಷಸಾಃ-ಎಲೈ ಅಸುರರೇ, ಸಹಿತೌ - ಒಂದಿಗಿರುವ, ಭ್ರಾತರೌ - ಅಣ್ಣತಮ್ಮಂದಿರಾದ, ಏತೌ - ಈ ರಾಮಲಕ್ಷ್ಮಣರು, ಚಮೂಮುಖೇ-ಸೇನೆಯ ಮುಂಭಾಗದಲ್ಲಿ, ಘೋರೇಣ-ಭಯಂಕರವಾದ, ಶರಬಂಧೇನ

---

ಆ ಇಂದ್ರಜಿತ್ತುವು ಮಹಾ ತೀಕ್ಷ್ಣವಾದೊಂದು ಬಾಣದಿಂದ ಜಾಂಬವಂತನನ್ನು ವಕ್ಷಸ್ಥಳಕ್ಕೆ ಹೊಡೆದು ಭೇದಿಸಿ ಬಿಟ್ಟನು. ಆಮೇಲೆ ಅವನು ಮಹಾ ವೇಗವಂತನಾದ ಹನುಮಂತನಿಗಾಗಿ ಹತ್ತು ಬಾಣಗಳನ್ನು ಪ್ರಯೋಗಿಸಿದನು. ಅಪರಿಮಿತ ತೇಜಸ್ಸಂಪನ್ನನಾದ ಆ ಇಂದ್ರಜಿತ್ತುವು ಮತ್ತೆರಡು ಬಾಣಗಳಿಂದ ಗವಾಕ್ಷ ಶರಭರನ್ನು ಘಾತಿಸಿದನು. ಮಹಾ ವೇಗಶೀಲನಾದ ಅವನು ಆ ಬಳಿಕ ಗೋಲಾಂಗೂಲಗಳೊಡೆಯನೂ, ವಾಲಿಯ ಮಗನೂ ಆದ ಅಂಗದಕುಮಾರನನ್ನು ಅನೇಕ ಅಸ್ತ್ರಗಳನ್ನು ಪ್ರಯೋಗಿಸಿ ಬಾಧಿಸಿದನು. || ೧೭-೨೧ || ಈ ರೀತಿ ಆ ಇಂದ್ರಜಿತ್ತುವು ಅಗ್ನಿಜ್ವಾಲೆಗಳಿಗೆ ಸಮಾನಗಳಾದ ಬಾಣಜಾಲಗಳಿಂದ ವಾನರರೆಲ್ಲರನ್ನೂ ಬಾಧಿಸಿ ಮಹಾ ಭಯವನ್ನು ಹುಟ್ಟಿಸಿ ಬಹು ಭೀಕರವಾದ ಸಿಂಹನಾದವನ್ನು ಮಾಡಿದನು. ಈ ರೀತಿ ಮಹಾ ತೀಕ್ಷ್ಣಗಳಾದ ಬಾಣಗಳಿಂದ ಸಮಸ್ತ ವಾನರರನ್ನೂ ಬಹಳವಾಗಿ ಪೀಡಿಸಿ ಅವರೆಲ್ಲರಿಗೂ ಮಹಾ ಭಯವನ್ನುಂಟುಮಾಡಿದ ಬಳಿಕ ಆ ಇಂದ್ರಜಿತ್ತುವು ತನ್ನ ಕಡೆಯ ರಾಕ್ಷಸವೀರರನ್ನು ಕುರಿತು, "ಎಲೈರಾಕ್ಷಸವೀರರೇ! ನಾನು ಈ ಯುದ್ಧರಂಗದಲ್ಲಿ ಈ ರಾಮಲಕ್ಷ್ಮಣರನ್ನು ಶರಬಂಧನದಿಂದ ಬಂಧಿಸಿರುವೆನು; ನೋಡಿರಿ; ನೋಡಿ ಆನಂದಿಸಿರಿ"

ಭ್ರಾತರಾವೇತೌ ನಿಶಾಮಯತ ರಾಕ್ಷಸಾಃ ! ” ॥ ೨೪ ॥ ಏವಮುಕ್ತಾಸ್ತು ತೇ ಸರ್ವೇ ರಾಕ್ಷಸಾ ಕೂಟಯೋಧಿನಃ । ಪರಂ ವಿಸ್ಮಯಮಾಜಗ್ಮುಃ ಕರ್ಮಣಾ ತೇನ ಹರ್ಷಿತಾಃ ॥ ೨೫ ॥ ವಿನೇದುಶ್ಚ ಮಹಾನಾದಾನ್ ಸರ್ವತೋ ಜಲದೋಪಮಾಃ । 'ಹತೋ ರಾಮ' ಇತಿ ಜ್ಞಾತ್ವಾ ರಾವಣಿಂ ಸಮಪೂಜಯನ್ ॥ ೨೬ ॥ ನಿಷ್ಪಂದೌ ತು ತದಾ ದೃಷ್ಟ್ವಾ ತಾವುಭೌ ರಾಮಲಕ್ಷ್ಮಣೌ । ವಸುಧಾಯಾಂ ನಿರುಚ್ಛ್ವಾಸೌ ಹತಾವಿತ್ಯನ್ವಮನ್ಯತ ॥ ೨೭ ॥ ಹರ್ಷೇಣತು ಸಮಾವಿಷ್ಟ ಇಂದ್ರಜಿತ್ಸಮಿತಿಂಜಯಃ । ಪ್ರವಿವೇಶ ಪುರೀಂ ಲಂಕಾಂ ಹರ್ಷಯನ್ ಸರ್ವರಾಕ್ಷಸಾನ್ ॥೨೮॥ ರಾಮಲಕ್ಷ್ಮಣಯೋರ್ದೃಷ್ಟ್ವಾ ಶರೀರೇ ಸಾಯಕೈಶ್ಚಿತೇ । ಸರ್ವಾಣಿ ಚಾಂಗೋಪಾಂಗಾನಿ ಸುಗ್ರೀವಂ ಭಯಮಾ

---

ಬಾಣಬಂಧನದಿಂದ, ಮಯಾ - ನನ್ನಿಂದ, ಬದ್ಧೌ - ಕಟ್ಟಲ್ಪಟ್ಟಿದ್ದಾರೆ, ನಿಶಾಮಯತ - ನೋಡಿರಿ. ॥೨೪॥ ಏವಂ - ಈ ಪರಿಯಾಗಿ, ಉಕ್ತಾಃ - ಹೇಳಲ್ಪಟ್ಟ, ಸರ್ವೇ - ಸಮಸ್ತರಾದ, ಕೂಟಯೋಧಿನಃ- ಕಪಟಯುದ್ಧಮಾಡುವ, ತೇರಾಕ್ಷಸಾಸ್ತು - ಆ ರಾಕ್ಷಸರಾದರೆ, ತೇನಕರ್ಮಣಾ - ಆ ವ್ಯಾಪಾರದಿಂದ, ಹರ್ಷಿತಾಃ - ಸಂತೋಷಗೊಂಡವರಾಗಿ, ಪರಂ - ವಿಶೇಷವಾಗಿ, ಆಶ್ಚರ್ಯಂ - ಆಶ್ಚರ್ಯವನ್ನು, ಜಗ್ಮುಃ - ಹೊಂದಿದರು. ॥ ೨೫ ॥ ಜಲದೋಪಮಾಃ - ಮೇಘಸದೃಶರಾದ ಆ ರಾಕ್ಷಸರು, ರಾಮಃ - ಶ್ರೀರಾಮನು, ಹತಇತಿ - ಮೃತನಾದನೆಂದು, ಜ್ಞಾತ್ವಾ - ತಿಳಿದು, ಸರ್ವತಃ - ಸುತ್ತುಮುತ್ತಲೂ, ಮಹಾನಾದಾನ್ - ಮಹಾ ಘೋಷಗಳನ್ನೂ, ವಿನೇದುಃ - ಕೂಗಿದರು, ರಾವಣಿಂಚ - ಇಂದ್ರಜಿತ್ತುವನ್ನೂ ಸಹಾ, ಸಮಪೂಜಯನ್ - ಪೂಜಿಸಿದರು. ॥ ೨೬ ॥ ತದಾ ಆ ಕಾಲದಲ್ಲಿ, ವಸುಧಾಯಾಂ - ಭೂಮಿಯಲ್ಲಿ, ನಿರುಚ್ಛ್ವಾಸೌ - ಉಸುರುಬಿಡದೆ, ನಿಷ್ಪಂದೌ - ಚಲಿಸದೆ ಇರುವ, ಉಭೌ - ಈರ್ವರಾದ, ತೌರಾಮಲಕ್ಷ್ಮಣೌತು - ಆ ರಾಮಲಕ್ಷ್ಮಣರನ್ನಾದರೆ, ದೃಷ್ಟ್ವಾ-ಕಂಡು, ಹತಾವಿತಿ-ಹತರಾದರೆಂದು, ಅನ್ವಮನ್ಯತ - ತಿಳಿದುಕೊಂಡರು. ॥ ೨೭ ॥ ಸಮಿತಿಂಜಯಃ - ಯುದ್ಧದಲ್ಲಿ ಜಯಶಾಲಿಯಾದ, ಇಂದ್ರಜಿತ್ತು - ಇಂದ್ರಜಿತ್ತುವಾದರೆ, ಹರ್ಷೇಣ - ಸಂತೋಷದಿಂದ, ಸಮಾವಿಷ್ಟಃ ಕೂಡಿ, ಸರ್ವ ರಾಕ್ಷಸಾನ್ - ಸಮಸ್ತ ರಾಕ್ಷಸರನ್ನೂ, ಹರ್ಷಯನ್ - ಸಂತೋಷಗೊಳಿಸುತ್ತ, ಲಂಕಾಂಪುರೀಂ - ಲಂಕಾಪಟ್ಟಣವನ್ನು, ಪ್ರವಿವೇಶ - ಪ್ರವೇಶಿಸಿದನು. ॥ ೨೮ ॥ ಸಾಯಕೈಃ - ಬಾಣಗಳಿಂದ, ಚಿತೇ - ವ್ಯಾಪ್ತವಾದ, ರಾಮಲಕ್ಷ್ಮಣಯೋಃ - ರಾಮಲಕ್ಷ್ಮಣರ, ಶರೀರೇ - ಶರೀರದಲ್ಲಿ, ಸಾಯಕಚಿತಾನಿ -

---

ಎಂದು ಹೇಳಿದನು. ಈ ರೀತಿ ನುಡಿದ ಇಂದ್ರಜಿತ್ತುವಿನ ಮಾತುಗಳನ್ನು ಕೇಳಿ ಕಪಟ ಯುದ್ಧವನ್ನು ಮಾಡುತ್ತಿದ್ದ ರಾಕ್ಷಸರೆಲ್ಲರೂ ಅವನ ಮಹಾ ಕಾರ್ಯದಿಂದ ಅತ್ಯಧಿಕ ಸಂತೋಷವುಳ್ಳವರಾಗಿ ಆಶ್ಚರ್ಯಪಟ್ಟು ಮಹಾ ಕಾಲಮೇಘಸಮಾನರಾದ ಆ ರಾಕ್ಷಸರೆಲ್ಲರೂ ಮಹದಾನಂದಭರಿತರಾಗಿ ಸಿಂಹನಾದಗಳನ್ನು ಮಾಡಿದರು. ॥ ೨೨–೨೫ ॥ ಇಂದ್ರಜಿತ್ತುವು ಶ್ರೀರಾಮಮೂರ್ತಿಯನ್ನು ಸಂಹರಿಸಿದನೆಂದು ಅವರೆಲ್ಲರೂ ಅವನನ್ನು ಬಹಳವಾಗಿ ಗೌರವಿಸಿ ಪೂಜಿಸಿದರು. ಉಸಿರೂ ಇಲ್ಲದೆ ನಿಶ್ಚೇಷ್ಟಿತರಾಗಿ ಭೂಮಿಯಮೇಲೆ ಬಿದ್ದಿದ್ದ ಆ ಶ್ರೀರಾಮಲಕ್ಷ್ಮಣರನ್ನು ನೋಡಿ ಅವರೆಲ್ಲರೂ ಆಶ್ಚರ್ಯಭರಿತರಾದರು. ಆ ಸಮಯದಲ್ಲಿ ಇಂದ್ರಜಿತ್ತುವು ಯುದ್ಧದಲ್ಲಿ ವಿಜಯಿಯಾಗಿದ್ದುದರಿಂದ ಪರಮ ಸಂತುಷ್ಟನಾಗಿ, ರಾಕ್ಷಸರೆಲ್ಲರಿಗೂ ಸಂತೋಷವನ್ನುಂಟುಮಾಡಿ ಲಂಕಾಪಟ್ಟಣವನ್ನು ಪ್ರವೇಶಿಸಿದನು. ಇತ್ತ ಬಾಣಗಳಿಂದ ವ್ಯಾಪ್ತವಾದ ಸರ್ವಾವಯವಗಳುಳ್ಳವರಾಗಿದ್ದ ಶ್ರೀರಾಮಲಕ್ಷ್ಮಣರನ್ನು

ವಿಶತ್ ॥ ೨೯ ॥ ತಮುವಾಚ ಪರಿತ್ರಸ್ತಂ ವಾನರೇಂದ್ರಂ ವಿಭೀಷಣಃ । ಸಬಾಷ್ಪ ವದನಂ ದೀನಂ ಶೋಕವ್ಯಾಕುಲಲೋಚನಂ ॥ ೩೦ ॥ "ಅಲಂ ತ್ರಾಸೇನ ಸುಗ್ರೀವ ! ಬಾಷ್ಪವೇಗೋ ನಿಗೃಹ್ಯತಾಂ । ಏವಂ ಪ್ರಾಯಾಣಿ ಯುದ್ಧಾನಿ ವಿಜಯೋ ನಾಸ್ತಿ ನೈಷ್ಠಿಕಃ ॥ ೩೧ ॥ ಸಶೇಷಭಾಗ್ಯತಾಽಸ್ಮಾಕಂ ಯದಿ ವೀರ ! ಭವಿಷ್ಯತಿ । ಮೋಹ ಮೇತೌ ಪ್ರಹಾಸ್ಯೇತೇ ಮಹಾತ್ಮಾನೌ ಮಹಾಬಲೌ ॥ ೩೨ ॥ ಪರ್ಯವಸ್ಥಾಪ ಯಾತ್ಮಾನಮನಾಥಂ ಮಾಂಚ ವಾನರ ! । ಸತ್ಯಧರ್ಮಾಭಿರಕ್ತಾನಾಂ ನಾಸ್ತಿ ಮೃತ್ಯು ಕೃತಂ ಭಯಂ" ॥೩೩॥ ಏವಮುಕ್ತ್ವಾ ತತಸ್ತಸ್ಯ ಜಲಕ್ಲಿನ್ನೇನ ಪಾಣಿನಾ । ಸುಗ್ರೀ

---

ಬಾಣಗಳಿಂದ ವ್ಯಾಪ್ತವಾದ, ಸರ್ವಾಣಿ - ಸಮಸ್ತವಾದ, ಅಂಗೋಪಾಂಗಾನಿಚ - ಅವಯವಗಳನ್ನೂ ಉಪಾಂಗಗಳನ್ನೂ ಸಹಾ, ದೃಷ್ಟ್ವಾ - ಕಂಡು, ಸುಗ್ರೀವಂ - ಸುಗ್ರೀವನನ್ನು, ಭಯಂ - ಭೀತಿಯು, ಆವಿಶತ್ - ಹೊಕ್ಕಿತು. ॥ ೨೯ ॥ ಪರಿತ್ರಸ್ತಂ - ಹೆದರಿ, ಸಬಾಷ್ಪಂ - ಕಂಬನಿಗಳಿಂದ ಕೂಡಿದ, ದೀನವದನಂ - ದೈನ್ಯವಾದ ಮುಖವುಳ್ಳ, ಶೋಕ....ನಂ - ವ್ಯಸನದಿಂದ ವ್ಯಾಕುಲವಾದ ನೇತ್ರಗಳುಳ್ಳ, ತಂವಾನರೇಂದ್ರಂ - ಆ ಸುಗ್ರೀವನನ್ನು ಕುರಿತು, ವಿಭೀಷಣಃ - ವಿಭೀಷಣನು, ಉವಾಚ - ಹೇಳಿದನು. ॥ ೩೦ ॥ ಹೇ ಸುಗ್ರೀವ - ಎಲೈ ಸುಗ್ರೀವನೇ, ತ್ರಾಸೇನ - ಹೆದರಿಕೆಯಿಂದ, ಅಲಂ - ಸಾಕು, ಬಾಷ್ಪವೇಗಃ - ಕಂಬನಿಗಳ ವೇಗವು, ನಿಗೃಹ್ಯತಾಂ - ನಿಗ್ರಹಿಸಲ್ಪಡಲಿ, ಯುದ್ಧಾನಿ-ಕಾಳಗಗಳು, ಏವಂಪ್ರಾಯಾಣಿ - ಈ ರೀತಿಯಾದುವುಗಳೇ, ನೈಷ್ಠಿಕಃ - ನಿಯತವಾದ, ಜಯಃ - ವಿಜಯವು, ನಾಸ್ತಿ - ಇಲ್ಲ. ॥ ೩೧ ॥ ಹೇ ವೀರ - ಎಲೈ ಶೂರನೇ, ಅಸ್ಮಾಕಂ - ನಮಗೆ, ಸಶೇಷ ಭಾಗ್ಯತಾ - ಭಾಗ್ಯಶೇಷವು, ಭವಿಷ್ಯತಿಯದಿ - ಇದ್ದರೆ, ಮಹಾತ್ಮಾನೌ - ಮಹಾ ಬುದ್ಧಿವಂತರಾದ, ಬಹಾಬಲೌ - ಬಹು ಬಲಿಷ್ಠರಾದ, ಏತೌ - ಇವರೀರ್ವರೂ, ಮೋಹಂ - ಮೂರ್ಛೆಯನ್ನು, ಪ್ರಹಾಸ್ಯೇತೇ-ಬಿಟ್ಟೇಳುತ್ತಾರೆ. ॥ ೩೨ ॥ ಹೇ ವಾನರ-ಎಲೈ ವಾನರನೇ, ಆತ್ಮಾನಂ-ಮನಸ್ಸನ್ನು, ಅನಾಥಂ-ದಿಕ್ಕಿಲ್ಲದಿರುವ, ಮಾಂಚ-ನನ್ನನ್ನೂ, ಪರ್ಯವಸ್ಥಾಪಯ-ನೆಲೆಗೊಳಿಸು, ಸತ್ಯ....ನಾಂ-ಸತ್ಯದಲ್ಲಿಯೂ, ಧರ್ಮದಲ್ಲಿಯೂ ಅನುರಕ್ತರಾದವರಿಗೆ, ಮೃತ್ಯುಕೃತಂ-ಅಪಮೃತ್ಯುವಿನಿಂದ, ಭಯಂ-ಭೀತಿಯು, ನಾಸ್ತಿ-ಇಲ್ಲ. ॥೩೩॥ ಏವಂ-ಈ ಪ್ರಕಾರವಾಗಿ, ವಿಭೀಷಣಃ-ವಿಭೀಷಣನು, ಉಕ್ತ್ವಾ-ಹೇಳಿ, ತತಃ-ಬಳಿಕ, ತಸ್ಯಸುಗ್ರೀವಸ್ಯ - ಆ ಸುಗ್ರೀವನ, ಶುಭೇ - ಶುಭಕರವಾದ, ನೇತ್ರೇ - ಕಣ್ಣುಗಳನ್ನು, ಜಲಕ್ಲಿನ್ನೇನ-

---

ಕಂಡು ವಾನರೇಶ್ವರನಾದ ಸುಗ್ರೀವನು ಭಯಭ್ರಾಂತನಾದನು. ॥ ೨೬–೩೦ ॥ ಆಗ ವಿಭೀಷಣನು ಆತನನ್ನು ಕುರಿತು, "ವಾನರೋತ್ತಮಾ! ಸುಗ್ರೀವ! ಇದೇಕೆ. ಕಣ್ಣೀರಿಡುತ್ತಿರುವೆ ? ದೀನವೂ, ವ್ಯಾಕುಲವೂ ಆದ ನೇತ್ರಗಳುಳ್ಳವನಾಗಿ ವ್ಯಸನಪಡುವುದರಿಂದೇನುಪ್ರಯೋಜನವು ? ವಾನರೇಶ್ವರ ! ಈ ವ್ಯಸನವನ್ನು ತೊರೆ. ಯುದ್ಧಗಳಲ್ಲಿ ಜಯಾಪಜಯಗಳು ಸ್ಥಿರವಾದವುಗಳಲ್ಲ. ಎಲೈ ವೀರನೇ ! (ಇಂದ್ರಜಿತ್ತುವು ಇಷ್ಟಕ್ಕೆ ರಣರಂಗವನ್ನು ತೊರೆದು ಹಿಂತಿರುಗಿದುದು ನಮ್ಮ ಅದೃಷ್ಟವೇ ಸರಿ.) ಮಹಾತ್ಮರೂ, ಮಹಾನುಭಾವರೂ ಆದ ಈ ಶ್ರೀರಾಮಲಕ್ಷ್ಮಣರು ಮೂರ್ಛಾಕ್ರಾಂತರಾಗಿರುವರು. ಇವರು ಬಹು ಜಾಗ್ರತೆಯಾಗಿಯೇ ಮೂರ್ಛೆ ತಿಳಿದೇಳುವರು ; ಧೈರ್ಯವಾಗಿರು ; ಮನಸ್ಸನ್ನು ಸ್ಥಿರಗೊಳಿಸಿಕೊ. ಅಯ್ಯಾ ವಾನರೋತ್ತಮನೇ ! ದಿಕ್ಕಿಲ್ಲದಿರುವ ನನ್ನನ್ನು ಕಾಪಾಡು. ಸತ್ಯದಲ್ಲಿಯೂ, ಧರ್ಮದಲ್ಲಿಯೂ ಆಸಕ್ತಿಯುಳ್ಳವರಿಗೆ ದುರ್ಮರಣ ಭೀತಿಯಿರುವುದಿಲ್ಲವು" ಎಂದು ಹೇಳಿ ಮಹಾ

ವಸ್ಯ ಶುಭೇ ನೇತ್ರೇಪ್ರಮಮಾರ್ಜ ವಿಭೀಷಣಃ || ೩೪ || ತತಸ್ಸಲಿಲಮಾದಾಯ
ವಿದ್ಯಯಾ ಪರಿಜಪ್ಯಚ | ಸುಗ್ರೀವನೇತ್ರೇ ಧರ್ಮಾತ್ಮಾ ಸ ಮಮಾರ್ಜ ವಿಭೀಷಣಃ
||೩೫|| ಪ್ರಮೃಜ್ಯ ವದನಂ ತಸ್ಯ ಕಪಿರಾಜಸ್ಯ ಧೀಮತಃ | ಅಬ್ರವೀತ್ಕಾಲಸಂಪ್ರಾಪ್ತಮ
ಸಂಭ್ರಮಮಿದಂ ವಚಃ || ೩೬ || "ನಕಾಲಃ ಕಪಿರಾಜೇಂದ್ರ ವೈಕ್ಲಬ್ಯಮನು
ವರ್ತಿತುಂ | ಅತಿಸ್ನೇಹೋಪ್ಯಕಾಲೇಽಸ್ಮಿನ್ ಮರಣಾಯೋಪಕಲ್ಪತೇ || ೩೭ || ತಸ್ಮಾ
ದುತ್ಸೃಜ್ಯ ವೈಕ್ಲಬ್ಯಂ ಸರ್ವಕಾರ್ಯವಿನಾಶನಂ | ಹಿತಂ ರಾಮಪುರೋಗಾಣಾಂ
ಸೈನ್ಯಾನಾಮನುಚಿಂತ್ಯತಾಂ || ೩೮ || ಅಥವಾ ರಕ್ಷ್ಯತಾಂ ರಾಮೋ ಯಾವತ್ಸಂಜ್ಞಾ

ಉದಕದಿಂದ ತೊಯಿಸಲ್ಪಟ್ಟ, ಪಾಣಿನಾ - ಹಸ್ತದಿಂದ, ಪ್ರಮಮಾರ್ಜ - ಒರಿಸಿದನು. ||೩೪|| ತತಃ- ಅನಂತರದಲ್ಲಿ, ಧರ್ಮಾತ್ಮಾ - ಧರ್ಮಸ್ವಭಾವವುಳ್ಳ, ಸವಿಭೀಷಣಃ - ಆ ವಿಭೀಷಣನು, ಸಲಿಲಂ - ಉದಕವನ್ನು, ಆದಾಯ - ತೆಗೆದುಕೊಂಡು, ವಿದ್ಯಯಾ - ಶೋಕನಿವಾರಕವಾದ ವಿದ್ಯೆಯಿಂದ, ಪರಿಜಪ್ಯಚ - ಜಪವನ್ನೂಮಾಡಿ, ಸುಗ್ರೀವನೇತ್ರೇ - ಸುಗ್ರೀವನ ಕಣ್ಣುಗಳನ್ನು, ಮಮಾರ್ಜ - ಒರಿಸಿದನು, ||೩೫|| ಧೀಮತಃ - ಬುದ್ಧಿಶಾಲಿಯಾದ, ತಸ್ಯಕಪಿರಾಜಸ್ಯ - ಆ ಸುಗ್ರೀವನ, ವದನಂ - ಮುಖವನ್ನು, ಪ್ರಮೃಜ್ಯ - ಒರಿಸಿ, ಕಾಲಸಂಪ್ರಾಪ್ತಂ - ಕಾಲೋಚಿತವಾದ, ವಚಃ - ಮಾತನ್ನು, ಅಸಂಭ್ರಮಂ - ವ್ಯಾಕುಲವಿಲ್ಲದಂತೆ, ಅಬ್ರವೀತ್ - ನುಡಿದನು. ||೩೬|| ಹೇ ಕಪಿರಾಜೇಂದ್ರ - ಎಲೈ ವಾನರಯೂಥಾಧಿಪತಿಯೇ, ವೈಕ್ಲಬ್ಯಂ - ವಿಕ್ಲಬತ್ವವನ್ನು, ಅನುವರ್ತಿತುಂ - ಅನುಸರಿಸುವದಕ್ಕೆ, ನಕಾಲಃ-ಸಮಯುವಲ್ಲ, ಅಸ್ಮಿನ್‌ಅಕಾಲೇ- ಈ ವಿಷಮಕಾಲದಲ್ಲಿ, ಅತಿಸ್ನೇಹೋಪಿ-ವಿಶೇಷ ಸ್ನೇಹವೂ ಕೂಡ, ಮರಣಾಯ - ಮರಣಕ್ಕಾಗಿ, ಉಪಕಲ್ಪತೇ - ಕಲ್ಪಿಸಲ್ಪಡುವದು. || ೩೭ || ತತ್ - ಆದುದರಿಂದ, ಸರ್ವ.....ನಂ - ಸಮಸ್ತ ಕಾರ್ಯವನ್ನು ನಾಶಗೊಳಿಸುತ್ತಿರುವ, ವೈಕ್ಲಬ್ಯಂ - ಅಧೈರ್ಯವನ್ನು, ಉತ್ಸೃಜ್ಯ - ಬಿಟ್ಟು, ರಾಮ....ಣಾಂ - ರಾಮಾನುವರ್ತಿಗಳಾದ, ಸೈನ್ಯಾನಾಂ - ಸೇನೆಗಳಿಗೆ, ಹಿತಂ - ಹಿತವಾದದ್ದು, ಅನುಚಿಂತ್ಯತಾಂ - ಊಹಿಸಲ್ಪಡಲಿ. ||೩೮|| ಅಥವಾ - ಹಾಗಲ್ಲ ದಿದ್ದರೆ, ಯಾವತ್ - ಎದುವರೆಗೂ, ಸಂಜ್ಞಾವಿಪರ್ಯಯಃ - ಪ್ರಜ್ಞೆಯಿಲ್ಲದಿರುವದೋ, ತಾವತ್ - ಅದುವರೆಗೂ, ರಾಮಃ-ಶ್ರೀರಾಮನು, ರಕ್ಷ್ಯತಾಂ-ಸಂರಕ್ಷಿಸಲ್ಪಡಲಿ, ಹಿ-ಏಕಂದರೆ, ಕಾಕುತ್‌ಸ್ಥೌ -

ವ್ಯಸನಸಂತಪ್ತನಾಗಿ ಕಣ್ಣೀರುದುಂಬಿದ ಆ ಸುಗ್ರೀವನ ಮುಖವನ್ನು ಉದಕದಿಂದ ಒರಸಿದನು. ಧರ್ಮಾತ್ಮನಾದ ಆ ವಿಭೀಷಣನು ಜಲವನ್ನು ಬೊಗಸೆಯಲ್ಲಿ ಹಿಡಿದು ಮಾಯಾನಿವಾರಕ ಮಂತ್ರವನ್ನು ಜಪಿಸಿ ಮತ್ತೊಮ್ಮೆ ಆ ಸುಗ್ರೀವನ ಮುಖವನ್ನು ಒರಸಿದನು. ||೩೧-೩೫|| ಹೀಗೆ ಅವನನ್ನು ಸಮಾಧಾನಗೊಳಿಸಿದ ತರುವಾಯ ಅವನನ್ನು ಕುರಿತು, "ಎಲೈ ವಾನರೋತ್ತಮ ನಾದ ಸುಗ್ರೀವನೇ! ಈ ಕಾಲವು ದುಃಖಿಸಲು ಉಚಿತವಾಗಿಲ್ಲವು. ಅಧಿಕ ಸ್ನೇಹವು ಅಕಾಲದಲ್ಲಿ ಮರಣವನ್ನು ಮಾಡುವುದೇನೋ ಎಂಬ ಭಯವನ್ನು ಹುಟ್ಟಿಸುತ್ತದೆ. ಆದುದರಿಂದ ನೀನು ಸಮಸ್ತ ಕಾರ್ಯಗಳನ್ನೂ ನಾಶಗೊಳಿಸುವ ಈ ವ್ಯಸನವನ್ನು ತೊರೆಯುವವನಾಗು. ಶ್ರೀರಾಮ ನಿಗೆ ಸಹಾಯಕರಾಗಿ ಮುನ್ನಡೆಯುವ ವಾನರರೆಲ್ಲರಿಗೂ ಶ್ರೇಯಸ್ಸುಂಟಾಗುವ ಮಾರ್ಗವನ್ನು ಚೆನ್ನಾಗಿ ಯೋಚಿಸುವವನಾಗು. ಸುಗ್ರೀವರಾಜಾ ! ಶ್ರೀರಾಮಮೂರ್ತಿಗೆ ತಿಳಿವು ಬರುವ ವರೆಗೂ ಈ ವಾನರ ಸೇನೆಯನ್ನು ಕಾಪಾಡು. ಶ್ರೀರಾಮಲಕ್ಷ್ಮಣರು ಮೂರ್ಛೆ ತಿಳಿದೇಳು ತ್ತಲೇ ನಮ್ಮೆಲ್ಲರನ್ನೂ ಕಾಪಾಡುವರು. ಇವರೀರ್ವರೂ ಲಬ್ಧಸಂಜ್ಞರಾಗಿಯೇ ಇರುವರೆಂದು

ವಿಪರ್ಯಯಃ । ಲಬ್ಧಸಂಜ್ಞಾಹಿ ಕಾಕುತ್ಸ್ಥೌ ಭಯಂ ನೋ ವ್ಯಪನೇಷ್ಯತಃ ||೩೯|| ನೈತತ್ ಕಿಂಚನ ರಾಮಸ್ಯ ನಚ ರಾಮೋ ಮುಮೂರ್ಷತಿ । ನಹ್ಯೇನಂ ಹಾಸ್ಯತೇ ಲಕ್ಷ್ಮೀರ್ದುರ್ಲಭಾ ಯಾ ಗತಾಯುಷಾಂ || ೪೦ || ತಸ್ಮಾದಶ್ವಾಸಯಾತ್ಮಾನಂ ಬಲಂ ಚಾಶ್ವಾಸಯ ಸ್ವಕಂ । ಯಾವತ್ಕಾರ್ಯಾಣಿ ಸರ್ವಾಣಿ ಪುನಸ್ಸಂಸ್ಥಾಪಯಾಮ್ಯಹಂ ||೪೧|| ಏತೇಹಿ ಫುಲ್ಲನಯನಾ ಸ್ತ್ರಾಸಾದಾಗತಸಾಧ್ವಸಾಃ । ಕರ್ಣೇಕರ್ಣೇ ಪ್ರಕಥಿತಾ ಹರಯೋ ಹರಿಸತ್ತಮ! || ೪೨ || ಮಾಂತು ದೃಷ್ಟ್ವಾ ಪ್ರಧಾವಂತಮನೀಕಂ ಸಂಪ್ರಹರ್ಷಿತುಂ । ತ್ಯಜಂತು ಹರಯಸ್ತ್ರಾಸಂ ಭುಕ್ತಪೂರ್ವಾಮಿವಸ್ರಜಂ" ||೪೩|| ಸಮಾ

---

ರಾಮಲಕ್ಷ್ಮಣರು, ಲಬ್ಧಸಂಜ್ಞೌ - ಹೊಂದಲ್ಪಟ್ಟ ಪ್ರಜ್ಞೆಯುಳ್ಳವರಾಗಿ, ನಃ - ನಮ್ಮ, ಭಯಂ - ಭೀತಿಯನ್ನು, ವ್ಯಪನೇಷ್ಯತಃ - ಹೋಗಲಾಡಿಸುವರು. ||೩೯|| ರಾಮಸ್ಯ - ಶ್ರೀರಾಮನಿಗೆ, ಏತತ್ - ಈ ಶರಬಂಧನವು, ಕಿಂಚನ - ನಿರ್ಲಕ್ಷ್ಯವಾದದ್ದು, ರಾಮಃ - ಶ್ರೀರಾಮನು, ನಮುಮೂರ್ಷತಿಚ - ಸಾಯುವುದೇ ಇಲ್ಲ, ಗತಾಯುಷಾಂ - ಮೃತರಾದವರಿಗೆ, ಯಾಲಕ್ಷ್ಮೀಃ - ಯಾವ ಮುಖಕಾಂತಿಯು, ದುರ್ಲಭಾ- ಇರುವುದಸಾಧ್ಯವೋ, ಸಾ- ಆ ಕಾಂತಿಯು, ಏವಂ- ಈ ಶ್ರೀರಾಮನನ್ನು, ನಹಾಸ್ಯತೇಹಿ- ಬಿಡಲಿಲ್ಲವಷ್ಟೆ. || ೪೦ || ತಸ್ಮಾತ್ - ಆ ಕಾರಣದಿಂದ, ಆತ್ಮಾನಂ - ಮನಸ್ಸನ್ನು, ಆಶ್ವಾಸಯ - ಸಮಾಧಾನ ಮಾಡಿಕೋ, ಸ್ವಕಂ - ನಿನ್ನ, ಬಲಂಚ - ಸೈನ್ಯವನ್ನೂ, ಆಶ್ವಾಸಯ - ಸಮಾಧಾನ ಮಾಡು, ಅಹಂ - ನಾನು, ಯಾವತ್ಕಾರ್ಯಾಣಿ - ಎಷ್ಟು ಕಾರ್ಯಗಳನ್ನು ಮಾಡಬೇಕಾಗಿರುವುದೋ, ಸರ್ವಾಣಿ - ಆ ಸಮಸ್ತ ಕಾರ್ಯಗಳನ್ನು, ಪುನಃ - ಮತ್ತು, ಸಂಸ್ಥಾಪಯಾಮಿ - ಕ್ರಮಪಡಿಸುವೆನು. ||೪೧|| ಅನೀಕಂ - ಸೈನ್ಯವನ್ನು, ಸಂಪ್ರಹರ್ಷಿತುಂ - ಸಮಾಧಾನಗೊಳಿಸುವುದಕ್ಕೆ, ಪ್ರಧಾವಂತಂ - ಓಡುತ್ತಲಿರುವ, ಮಾಂತುಂ - ನನ್ನನಾದರೆ, ದೃಷ್ಟ್ವಾ - ಕಂಡು, ತ್ರಾಸಾತ್ - ಭೀತಿಯಿಂದ, ಆಗತಸಾಧ್ವಸಾಃ - ಹೊಂದಿದ ಭಯವುಳ್ಳವರಾದಕಾರಣ, ಫುಲ್ಲನಯನಾಃ ವಿಕಸಿತವಾದ ನೇತ್ರಗಳುಳ್ಳ, ಏತೇಹರಯಃ- ಈ ವಾನರರು, ಕರ್ಣೇಕರ್ಣೇ-ಕಿವಿಕಿವಿಗಳಲ್ಲಿ, ಪ್ರಕಥಿತಾಹಿ- ಪಲಾಯನಾರ್ಥವಾಗಿ ಪ್ರವೃತ್ತವಾದ ಕಥೆಗಳುಳ್ಳವರಾಗಿದ್ದಾರಷ್ಟೆ, ಹರಯಃ - ವಾನರರು, ಭುಕ್ತಪೂರ್ವಾಂ - ಪೂರ್ವದಲ್ಲಿ ಅನುಭವಿಸಿದ, ಸ್ರಜಮಿವ - ಹೂಮಾಲೆಯನ್ನಂತೆ, ತ್ರಾಸಂ - ಭೀತಿಯನ್ನು, ತ್ಯಜಂತು - ಬಿಡಲಿ.

---

ತಿಳಿ. ಆದುದರಿಂದ ನಾವು ವ್ಯಸನಪಡಬಾರದು. ಅದಕ್ಕಿದು ತಕ್ಕ ಕಾಲವೂ ಅಲ್ಲವು. ಶ್ರೀರಾಮನು ನಿಜವಾಗಿಯೂ ಮೃತಿಯೊಂದಿಲ್ಲ. ಈತನ ಮುಖದಲ್ಲಿ ಅಯುರ್ಹೀನರಾದವರ ಮುಖದಲ್ಲಿಯಂತೆ ಕಾಂತಿಯು ಸ್ವಲ್ಪವೂ ಕಂದಿರುವುದಿಲ್ಲವು. ||೩೬-೪೦|| ಆದುದರಿಂದ ನಿನ್ನ ವ್ಯಸನವನ್ನು ಕಳೆದು ಸಮಾಧಾನವನ್ನು ತಂದುಕೊ; ಸ್ಥಿರಚಿತ್ತನಾಗು; ಪುನಃ ನಮ್ಮ ಕಾರ್ಯಗಳೆಲ್ಲವನ್ನೂ ಚರಿಪಡಿಸಿಕೊಳ್ಳಬೇಕು. ಅಯ್ಯಾ ವಾನರಪ್ರಭುವೇ! ಇದೋ ನೋಡು; ಆಶ್ಚರ್ಯಾತಿರೇಕದಿಂದಲೂ, ಮಹಾ ಭಯದಿಂದಲೂ ವಿಕಸಿತನೇತ್ರರಾಗಿರುವ ಈ ವಾನರರೆಲ್ಲರೂ ಬಹಳ ವೇಗವಾಗಿ ಬರುತ್ತಿದ್ದ ನನ್ನನ್ನು ನೋಡಿ ಮತ್ತೂ ಭಯಚಕಿತರಾಗಿ ಪಲಾಯನವಾಗೋಣವೆಂದು ರಹಸ್ಯವಾಗಿ ಒಬ್ಬರೊಡನೊಬ್ಬರು ಮಾತನಾಡಿಕೊಳ್ಳುತ್ತಿರುವರು. ನಮ್ಮ ಸೇನೆಯೆಲ್ಲವು ಹಾಗೊಂದುವೇಳೆ ಓಡಿಹೋದರೆ ಆಮೇಲೆ ನಾವು ಮಾಡುವುದುತಾನೆ ಏನಿರುವುದು. ನಾವೇನನ್ನೂ ಮಾಡಲಾರೆವು. ಆದುದರಿಂದೆಲೈ ವಾನರೇಶ್ವರನಾದ ಸುಗ್ರೀವನೇ! ನೀನೀಗ ಧೈರ್ಯವನ್ನವಲಂಬಿಸಿ ಈ ಸೇನೆಯೆಲ್ಲವನ್ನೂ ಸಮಾಧಾನಗೊಳಿಸುವವ

ಶ್ವಾಸ್ಯ ತು ಸುಗ್ರೀವಂ ರಾಕ್ಷಸೇಂದ್ರೋ ವಿಭೀಷಣಃ । ವಿದ್ರುತಂ ವಾನರಾನೀಕಂ ತತ್ಸಮಾಶ್ವಾಸಯತ್ಪುನಃ ॥೪೪॥ ಇಂದ್ರಜಿತ್ತು ಮಹಾಮಾಯ ಸ್ಸರ್ವಸೈನ್ಯಸಮಾವೃತಃ । ವಿವೇಶ ನಗರೀಂ ಲಂಕಾಂ ಪಿತರಂ ಚಾಭ್ಯುಪಾಗಮತ್ ॥೪೫॥ ತತ್ರ ರಾವಣಮಾಸೀನಮಭಿವಾದ್ಯ ಕೃತಾಂಜಲಿಃ । ಆಚಚಕ್ಷೇ ಪ್ರಿಯಂ ಪಿತ್ರೇ ನಿಹತೌ ರಾಮಲಕ್ಷ್ಮಣೌ ॥೪೬॥ ಉತ್ಪಪಾತ ತತೋ ಹೃಷ್ಟಃ ಪುತ್ರಂ ಚ ಪರಿಷಸ್ವಜೇ । ರಾವಣೋ ರಕ್ಷಸಾಂ ಮಧ್ಯೇ ಶ್ರುತ್ವಾ ಶತ್ರೂ ನಿಪಾತಿತೌ । ಉಪಾಘ್ರಾಯ ಸಮೂರ್ಧ್ನ್ಯೇನಂ

---

॥೪೨-೪೩॥ ರಾಕ್ಷಸೇಂದ್ರಃ - ರಾಕ್ಷಸಶ್ರೇಷ್ಠನಾದ, ವಿಭೀಷಣಸ್ತು - ವಿಭೀಷಣನಾದರೆ, ಸುಗ್ರೀವಂ - ಸುಗ್ರೀವನನ್ನು, ಸಮಾಶ್ವಾಸ್ಯ-ಸಮಾಧಾನಗೊಳಿಸಿ, ವಿದ್ರುತಂ-ಓಡಿಹೋಗುತ್ತಲಿರುವ, ತದ್ವಾನರಾನೀಕಂ - ಆ ವಾನರಸೈನ್ಯವನ್ನು, ಪುನಃ - ಮತ್ತೆ, ಸಮಾಶ್ವಾಸಯತ್ - ಸಮಾಧಾನಗೊಳಿಸಿದನು. ॥೪೪॥ ಮಹಾಮಾಯಃ - ಬಹು ಮಾಯೆಗಳುಳ್ಳ, ಇಂದ್ರಜಿತ್ತು-ಇಂದ್ರಜಿತ್ತುವಾದರೆ, ಸರ್ವ....ತಃ- ಸಮಸ್ತ ಸೇನೆಗಳಿಂದಲೂ ಪರಿವೃತನಾಗಿ, ಲಂಕಾನಗರೀಂ - ಲಂಕಾಪಟ್ಟಣವನ್ನು, ವಿವೇಶ - ಪ್ರವೇಶಿಸಿದನು, ಪಿತರಂಚ - ತಂದೆಯನ್ನೂ ಕುರಿತು, ಅಭ್ಯವಾದಯತ್ - ನಮಸ್ಕರಿಸಿದನು. ॥೪೫॥ ತತ್ರ - ಅಲ್ಲಿ, ಆಸೀನಂ - ಕುಳಿತಿರುವ, ರಾವಣಂ - ರಾವಣನನ್ನು ಕುರಿತು, ಅಭಿವಾದ್ಯ - ನಮಸ್ಕರಿಸಿ, ಕೃತಾಂಜಲಿಃ - ಅಂಜಲೀಬದ್ಧನಾಗಿ, ರಾಮಲಕ್ಷ್ಮಣೌ - ರಾಮಲಕ್ಷ್ಮಣರು, ನಿಹತಾವಿತಿ - ಹೊಡೆಯಲ್ಪಟ್ಟರೆಂದು, ಪ್ರಿಯಂ - ಇಷ್ಟವಾದ ಮಾತನ್ನು, ಪಿತ್ರೇ - ತಂದೆಗಾಗಿ, ಆಚಚಕ್ಷೇ - ಹೇಳಿದನು. ॥೪೬॥ ಶತ್ರೂ - ವೈರಿಗಳು, ನಿಪಾತಿತೌ - ಬೀಳಿಸಲ್ಪಟ್ಟರೆಂದು, ರಾವಣಃ - ರಾವಣನು, ರಕ್ಷಸಾಂ - ರಾಕ್ಷಸರ, ಮಧ್ಯೇ - ಮಧ್ಯದಲ್ಲಿ, ಶ್ರುತ್ವಾ - ಕೇಳಿ, ತತಃ - ಬಳಿಕ, ಉತ್ಪಪಾತ - ಮೇಲಕ್ಕೆ ಹಾರಿ, (ಬಂದು) ಪುತ್ರಂ - ಮಗನನ್ನೂ ಕೂಡ, ಪರಿಷಸ್ವಜೇ - ಅಪ್ಪಿಕೊಂಡನು, ಸಃ - ಆ ರಾವಣನು, ಪ್ರೀತಮಾನಸಃ - ಸಂತುಷ್ಟವಾದ ಮನಸ್ಸುಳ್ಳವನಾಗಿ, ಮೂರ್ಧ್ನಿ - ಶಿರಸ್ಸಿನಲ್ಲಿ, ಉಪಾಘ್ರಾಯ - ಆಘ್ರಾಣಮಾಡಿ, ಏನಂ - ಈ ಇಂದ್ರಜಿತ್ತುವನ್ನು, ಪಪ್ರಚ್ಛ - ಕೇಳಿದನು. ॥೪೭ ೪೮॥

---

ನಾಗು" ಎಂದು ಹೇಳಿದನು. ರಾಕ್ಷಸೋತ್ತಮನಾದ ವಿಭೀಷಣನು ಈ ರೀತಿ ಹೇಳಿ ಸುಗ್ರೀವನನ್ನು ಸಮಾಧಾನಗೊಳಿಸಿದನು ಆ ತರುವಾಯ ಸಮಾಧಾನಗೊಂಡ ಸುಗ್ರೀವನು ಭಯಚಕಿತರಾಗಿ ಪಲಾಯನವಾಗುತ್ತಿದ್ದ ಸಮಸ್ತ ವಾನರರನ್ನೂ ಸಮಾಧಾನಗೊಳಿಸಿದನು. ಆ ಸಮಯದಲ್ಲಿ ಮಹಾ ಮಾಯೆಗಳುಳ್ಳವನೂ, ಸಕಲವಿಧ ಸೇನೆಗಳುಳ್ಳವನೂ ಆದ ಇಂದ್ರಜಿತ್ತುವು ಲಂಕಾಪಟ್ಟಣವನ್ನು ಪ್ರವೇಶಿಸಿ ತನ್ನ ತಂದೆಯಾದ ರಾವಣನ ಬಳಿಗೈದಿದನು. ॥೪೧-೪೫॥ ಆಗ ರಾವಣಾಸುರನು ಸಿಂಹಾಸನದಲ್ಲಿ ಕುಳಿತ್ತಿದ್ದನು. ಇಂದ್ರಜಿತ್ತುವು ಆತನಿಗೆ ಮಣಿದು ರಾಮಲಕ್ಷ್ಮಣರು ಮರಣ ಹೊಂದಿದರೆಂದು ಪ್ರಿಯೋದಂತವನ್ನು ಅರಿಕೆ ಮಾಡಿದನು. ಅದನ್ನು ಕೇಳಿದೊಡನೆಯೇ ಆ ರಾವಣಾಸುರನು ಪರಮಾನಂದಭರಿತನಾಗಿ ಮೇಲಕ್ಕೆ ಹಾರಿ ಒಮ್ಮೆಲೇ ತನ್ನ ಕುಮಾರಕನನ್ನು ಬರಸೆಳೆದಾಲಿಂಗಿಸಿ "ಕುಮಾರ, ಇಂದ್ರಜಿತ್ತುವೇ! ನಮಗೆ ಶತ್ರುಗಳಾದ ಆ ರಾಮಲಕ್ಷ್ಮಣರನ್ನು ಕೊಂದು ನನಗೆ ಮಹದಾನಂದವನ್ನುಂಟುಮಾಡಿದೆ" ಎಂದು ಹೇಳಿ ಬಹಳ ಪ್ರೀತಿಯಿಂದ ಅವನ ಶಿರಸ್ಸನ್ನಾಘ್ರಾಣಿಸಿ ನಡೆದುದೆಲ್ಲವನ್ನೂ ಸವಿಸ್ತರವಾಗಿ ಹೇಳಬೇಕೆಂದು ಕೇಳಿದನು. ಆಗ ಇಂದ್ರಜಿತ್ತುವು ರಣರಂಗದಲ್ಲಿ

ಪ್ರಪ್ರಚ್ಛ ಪ್ರೀತಮಾನಸಃ || ೪೭-೪೮ || ಪೃಚ್ಛತೇಚ ಯಥಾವೃತ್ತಂ ಪಿತ್ರೇ ಸರ್ವಂ ನ್ಯವೇದಯತ್ । ಯಥಾ ತೌ ಶರಬಂಧೇನ ನಿಶ್ಚೇಷ್ಟೌ ನಿಷ್ಪ್ರಭೌ ಕೃತೌ || ೪೯ ||

¶ ಸಹರ್ಷವೇಗಾನುಗತಾಂತರಾತ್ಮಾ
ಶ್ರುತ್ವಾ ವಚಸ್ತಸ್ಯ ಮಹಾರಥಸ್ಯ ।
ಜಹೌ ಜ್ವರಂ ದಾಶರಥೇಸ್ಸಮುತ್ಥಿತಂ
ಪ್ರಹೃಷ್ಯ ವಾಚಾಽಭಿನನಂದ ಪುತ್ರಂ || ೫೦ ||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಷಟ್ಚತ್ವಾರಿಂಶಸ್ಸರ್ಗಃ.

---

ಯಥಾ - ಹ್ಯಾಗೆ, ತೌ - ಆ ರಾಮಲಕ್ಷ್ಮಣರು, ಶರಬಂಧೇನ - ಬಾಣರೂಪವಾದ ನಾಗಬಂಧನದಿಂದ, ನಿಶ್ಚೇಷ್ಟೌ-ಚೇಷ್ಟಾರಹಿತರಾಗಿ, ನಿಷ್ಪ್ರಭೌ ಕಾಂತಿಗುಂದಿದವರಾಗಿ, ಕೃತೌ-ಮಾಡಲ್ಪಟ್ಟರೋ, (ಸಃ - ಆ ಇಂದ್ರಜಿತ್ತುವು), ಪೃಚ್ಛತೇ - ಪ್ರಶ್ನೆಮಾಡುತ್ತಿರುವ, ಪಿತ್ರೇ - ತಂದೆಗೆ, ಯಥಾವೃತ್ತಂ - ನಡದಂತೆ, ಸರ್ವಂ - ಸಮಸ್ತವನ್ನೂ, ನ್ಯವೇದಯತ್ - ತಿಳುಹಿದನು. || ೪೯ || ಮಹಾರಥಸ್ಯ - ಮಹಾ ರಥಿಕನಾದ, ತಸ್ಯ - ಆ ಇಂದ್ರಜಿತ್ತುವಿನ, ವಚಃ - ಮಾತನ್ನು, ಶ್ರುತ್ವಾ - ಕೇಳಿ, ಸಃ - ಆ ರಾವಣನು, ಹರ್ಷ....ತ್ಮಾ - ಸಂತೋಷಾತಿಶಯದಿಂದ ವ್ಯಾಪ್ತವಾದ ಮನಸ್ಸುಳ್ಳವನಾಗಿ, ದಾಶ ರಥೇಃ - ಶ್ರೀರಾಮನ ನಿಮಿತ್ತದಿಂದ, ಸಮುತ್ಥಿತಂ - ಹುಟ್ಟಿದ, ಜ್ವರಂ - ಸಂತಾಪವನ್ನು, ಜಹೌ - ಬಿಟ್ಟನು, ಪ್ರಹೃಷ್ಯ - ಸಂತೋಷಿಸಿ, ವಾಚಾ - ಮಾತಿನಿಂದ, ಪುತ್ರಂ - ಮಗನನ್ನು, ಅಭಿನನಂದ - ಸಂತೋಷಗೊಳಿಸಿದನು. || ೫೦ ||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಷಟ್ಚತ್ವಾರಿಂಶಸ್ಸರ್ಗಃ.

---

ನಡೆದ ವೃತ್ತಾಂತವೆಲ್ಲವನ್ನೂ ತಂದೆಗೆ ಅರಿಕೆಮಾಡಿ ಶ್ರೀರಾಮಲಕ್ಷ್ಮಣರು ಶರಬಂಧನದಿಂದ ತೇಜೋಹೀನರಾಗಿ ಭೂಮಿಯಲ್ಲಿ ಬಿದ್ದಿರುವರೆಂದು ಹೇಳಿದನು. ಹೀಗೆ ಮಹಾ ರಥನಾದ ಇಂದ್ರಜಿತ್ತುವು ಹೇಳಿದ ಮಾತುಗಳನ್ನು ಕೇಳಿ ಆ ರಾವಣಾಸುರನು ಹರ್ಷವೇಗಗಳಿಂದ ಕೂಡಿದವನಾಗಿ ಶಾಂತಚಿತ್ತವನ್ನೈದಿ ದಶರಥರಾಜಪುತ್ರನಾದ ರಾಮನಿಂದ ತನಗುಂಟಾದ ಪರಿತಾಪವನ್ನು ತೊರೆದು ತನ್ನ ಮಗನನ್ನು ಬಹಳವಾಗಿ ಶ್ಲಾಘಿಸಿದನು. || ೪೬–೫೦ ||

ಇಂತಿದು ಇಂದ್ರಜಿತ್ಕಥಿತ ಶ್ರೀರಾಮ ಪರಾಭವ ವೃತ್ತಾಂತವೆಂಬ
ನಲವತ್ತಾರನೆಯ ಸರ್ಗವು ಸಮಾಪ್ತವಾದುದು.

---

¶ ಈ ಶ್ಲೋಕದ ಪ್ರಸಿದ್ಧಾರ್ಥವು ಸ್ಪಷ್ಟವಾಗಿಯೇ ಇದೆ. ವಾಸ್ತವಿಕವಾಗಿ ರಾವಣನು, ಇಂದ್ರಜಿತ್ತುವು ಶ್ರೀರಾಮನನ್ನು ನಾಗಾಸ್ತ್ರದಿಂದ ಬಂಧಿಸಿದ್ದಕ್ಕಾಗಿ ಹೊರಗೆ ನೋಡುವವರಿಗೆ ಮಾತ್ರ ಸಂತೋಷವನ್ನು ಪ್ರಕಟಗೊಳಿಸಿದನಾಗಲಿ, ಅಂತತಃ ಸಂತೋಷಿಸಲಿಲ್ಲ ಎಂದು ಭಾವವು.

"ಕಾಲಜ್ಞೋ ರಾಘವಃ ಕಾಲೇ" ಎಂಬ ಶ್ಲೋಕದಿಂದ ಹಿಡಿದು, "ಇಂದ್ರಜಿತ್ತು ಮಹಾಮಾಯ ಸ್ಸರ್ವಸೈನ್ಯ ಸಮಾವೃತಃ । ವಿವೇಶ ನಗರೀಂ ಲಂಕಾಂ ||" ಎಂಬುದರವರೆಗೂ ಪ್ರತಿಪದ್ಯುದ್ಧವು ನಡೆದುದೆಂದು ತಿಳಿಯಬೇಕು.

(ಮಹೇಶ್ವರ ತೀರ್ಥರು.)

# ಯುದ್ಧಕಾಂಡೇ ಸಪ್ತಚತ್ವಾರಿಂಶಸ್ಸರ್ಗಃ

ಪ್ರತಿಪ್ರವಿಷ್ಟೇ ಲಂಕಾಂತು ಕೃತಾರ್ಥೇ ರಾವಣಾತ್ಮಜೇ । ರಾಘವಂ ಪರಿವಾರ್ಯಾರ್ತಾ ರರಕ್ಷುರ್ವಾನರರ್ಷಭಾಃ ॥೧॥ ಹನುಮಾನಂಗದೋ ನೀಲಸ್ಸುಷೇಣಃ ಕುಮುದೋನಳಃ । ಗಜೋಗವಾಕ್ಷೋ ಗವಯಃ ಶರಭೋ ಗಂಧಮಾದನಃ ॥ ೨ ॥ ಜಾಂಬವಾನ್ನೃಷಭಸ್ಕಂಧೋ ರಂಭಃ ಶತವಲಿಃ ಪೃಥುಃ । ವ್ಯೂಢಾನೀಕಾಶ್ಚ ಯತ್ತಾಶ್ಚ ದ್ರುಮಾನಾದಾಯ ಸರ್ವತಃ ॥ ೩ ॥ ವೀಕ್ಷಮಾಣಾ ದಿಶಸ್ಸರ್ವಾಸ್ತಿರ್ಯಗೂರ್ಧ್ವಂಚ ವಾನರಾಃ । ತೃಣೇಷ್ವಪಿಚ ಚೇಷ್ಟತ್ಸು ರಾಕ್ಷಸಾ ಇತಿ ಮೇನಿರೇ ॥ ೪ ॥ ರಾವಣ

---

ಕೃತಾರ್ಥೇ - ಕೃತಕಾರ್ಯನಾದ, ರಾವಣಾತ್ಮಜೇ - ಇಂದ್ರಜಿತ್ತುವು, ಲಂಕಾಂ - ಲಂಕಾ ಪಟ್ಟಣವನ್ನು ಕುರಿತು, ಪ್ರತಿಪ್ರವಿಷ್ಟೇ - ಪ್ರವೇಶ ಮಾಡಲು, ವಾನರರ್ಷಭಾಃ - ವಾನರಶ್ರೇಷ್ಠರಾದ, ಹನೂಮಾ್ - ಆಂಜನೇಯನು, ಅಂಗದ, ನೀಲ, ಸುಷೇಣ, ಕುಮುದ, ನಳ, ಗಜ, ಗವಾಕ್ಷ, ಗದಯ, ಶರಭ, ಗಂಧಮಾದನ, ಜಾಂಬವಂತ, ಋಷಭಸ್ಕಂಧ, ರಂಭ, ಶತವಲಿ, ಪೃಥು ಎಂಬ, ಏತೇ - ಈ ಕಪಿಗಳು, ಆರ್ತಾಃ - ದೀನರಾಗಿ, ರಾಘವಂ - ಶ್ರೀರಾಮುನನ್ನು, ಪರಿವಾರ್ಯ - ಸುತ್ತಿಕೊಂಡು, ರರಕ್ಷುಃ-ಸಂರಕ್ಷಿಸಿದರು. ॥ ೧-೨ ॥ ವ್ಯೂಢಾನಿಕಾಃ-ವ್ಯೂಹವಾಗಿ ನಿಲ್ಲಿಸಲ್ಪಟ್ಟ ಸೈನ್ಯವುಳ್ಳ, ವಾನರಾಃ-ಕಪಿಗಳು, ಯತ್ತಾಃ - ಜಾಗರೂಕರಾಗಿ, ದ್ರುಮಾ್ - ಗಿಡಗಳನ್ನು, ಆದಾಯ - ತೆಗೆದುಕೊಂಡು, ಸರ್ವತಃ - ಸರ್ವ ಪ್ರದೇಶಗಳಲ್ಲಿಯೂ, ಸರ್ವಾಃ - ಸಮುಸ್ತವಾದ, ದಿಶಃ - ದಿಕ್ಕುಗಳನ್ನೂ, ತಿರ್ಯಕ್-ಅಡ್ಡವಾಗಿಯೂ, ಊರ್ಧ್ವಂಚ - ಮೇಲುಗಡೇಲೂ, ನಿರೀಕ್ಷಮಾಣಾಃ - ನೋಡುತ್ತಿರುವವರಾಗಿ, ತೃಣೇಷ್ವಪಿ - ಹುಲ್ಲುಗಳೂ ಕೂಡಾ, ಚೇಷ್ಟತ್ಸು - ಕದಲಲು, ರಾಕ್ಷಸಾಇತಿ - ರಾಕ್ಷಸರೆಂದು, ಮೇನಿರೇ-ತಿಳಿದರು. ॥ ೩-೪ ॥ ರಾವಣಶ್ಚಾಪಿ-ರಾವಣನೂ ಕೂಡ, ಸಂಹೃಷ್ಟಃ ಸಂತೋಷಗೊಂಡವನಾಗಿ, ಇಂದ್ರಜಿತಂ - ಇಂದ್ರಜಿತ್ತುವೆಂಬ, ಸುತಂ - ಕುವರನನ್ನು, ವಿಸೃಜ್ಯ - ಕಳುಹಿಸಿಕೊಟ್ಟು,

---

ಈ ರೀತಿ ಆ ಇಂದ್ರಜಿತ್ತುವು ರಣಾಂಗಣದಲ್ಲಿ ಮಹಾದ್ಭುತ ಕಾರ್ಯವನ್ನು ಮಾಡಿ ಲಂಕಾಪಟ್ಟಣಕ್ಕೆ ಹಿಂತಿರುಗಿದ ತರುವಾಯ ವಾನರವೀರರೆಲ್ಲರೂ ಶ್ರೀರಾಮುಮೂರ್ತಿಯನ್ನು ಸುತ್ತುವರೆದು ಕುಳಿತವರಾಗಿ ಬಹಳವಾಗಿ ದುಃಖಿಸಿದರು. ಆ ಸಮುಯದಲ್ಲಿ ಹನುಮಂತ, ಅಂಗದ, ನಳ, ಸುಷೇಣ, ಕುಮುದ, ಗಜ, ಗವಾಕ್ಷ, ಗವಯ, ಗಂಧಮಾದನ, ಜಾಂಬವಂತ, ವೃಷಭಸ್ಕಂಧನಾದ ಋಷಭ, ರಂಭ, ಶತವಲಿ, ಪೃಥು ಮೊದಲಾದ ವಾನರಯೂಥನಾಥರೂ, ಇತರರೂ ವಾನರಸೇನೆಯವರೂ ಮಹಾ ವೃಕ್ಷಗಳನ್ನು ಕೈಯಲ್ಲಿ ಹಿಡಿದು ಎಲ್ಲ ದಿಕ್ಕುಗಳನ್ನೂ ದೃಷ್ಟಿಸಿ ನೋಡಿದರು. ಊರ್ಧ್ವದಿಶೆಗಳೆಲ್ಲವನ್ನೂ ಕಣ್ಣಿಟ್ಟು ನೋಡಿದರು. ಅವರೆಲ್ಲರಿಗೂ ಮಹತ್ತರವಾದ ಭಯವೇ ಆವರಿಸಿಬಿಟ್ಟಿದ್ದಿತು. ಎಲ್ಲಿಯಾದರೂ ಒಂದು ಹುಲ್ಲುಕಡ್ಡಿಯು ಕದಲಿದರೂ ರಾಕ್ಷಸರು ಬಂದರೆಂದು ಅವರು ಭಯಭ್ರಾಂತರಾಗಿ ಬಿಡುತ್ತಿದ್ದರು. ಅದೇ ಸಮುಯದಲ್ಲಿ ಅತ್ತ ರಾಕ್ಷಸೇಶ್ವರನಾದ ರಾವಣಾ

ಶ್ಚಾಪಿ ಸಂಹೃಷ್ಟೋ ವಿಸೃಜ್ಯೇಂದ್ರಜಿತಂ ಸುತಂ । ಆಜುಹಾವ ತತಸ್ಸೀತಾ ರಕ್ಷಿಣೀ ರಾಕ್ಷಸೀಸ್ತದಾ ॥ ೫ ॥ ರಾಕ್ಷಸ್ಯ ಸ್ತ್ರಿಜಟಾಚೈವ ಶಾಸನಾತ್ಸಮುಪಸ್ಥಿತಾಃ । ತಾ ಉವಾಚ ತತೋ ಹೃಷ್ಟೋ ರಾಕ್ಷಸೀ ರಾಕ್ಷಸಾಧಿಪಃ ॥ ೬ ॥ "ಹತಾವಿಂದ್ರಜಿತಾಽಖ್ಯಾತ ವೈದೇಹ್ಯಾ ರಾಮಲಕ್ಷ್ಮಣೌ । ಪುಷ್ಪಕಂಚ ಸಮಾರೋಪ್ಯ ದರ್ಶಯಧ್ವಂ ಹತೌ ರಣೇ ॥ ೭ ॥ ಯದಾಶ್ರಯಾದವಷ್ಟಬ್ಧಾ ನೇಯಂ ಮಾಮುಪತಿಷ್ಠತಿ । ಸೋಽಸ್ಯಾ ಭರ್ತಾ ಸಹಭ್ರಾತ್ರಾ ನಿರಸ್ತೋ ರಣಮೂರ್ಧನಿ ॥ ೮ ॥ ನಿರ್ವಿಶಂಕಾ ನಿರುದ್ವಿಗ್ನಾ ನಿರಪೇಕ್ಷಾಚ ಮೈಥಿಲೀ । ಮಾಮುಪಸ್ಥಾಸ್ಯತೇ ಸೀತಾ ಸರ್ವಾಭರಣ

ತತಃ - ಬಳಿಕ, ಸೀತಾರಕ್ಷಣೀಃ - ಸೀತಾದೇವಿಯ ರಕ್ಷಕರಾದ, ರಾಕ್ಷಸೀಃ - ರಕ್ಕಸಿಯರನ್ನು, ತದಾ - ಆ ಕಾಲದಲ್ಲಿ, ಆಜುಹಾವ - ಕರೆಯಿಸಿದನು. ॥ ೫ ॥ ರಾಕ್ಷಸ್ಯಃ - ರಕ್ಕಸಿಯರು, ತ್ರಿಜಟಾಚೈವ - ತ್ರಿಜಟೆಯೂ, ಶಾಸನಾತ್ - ರಾವಣನ ಆಜ್ಞೆಯಿಂದ ಸಮುಪಸ್ಥಿತಾಃ - ಬಂದರು, ತತಃ - ಬಳಿಕ, ಹೃಷ್ಟಃ - ಸಂತೋಷಗೊಂಡ, ರಾಕ್ಷಸಾಧಿಪಃ - ರಾವಣನು, ತಾಃರಾಕ್ಷಸೀಃ - ಆ ರಕ್ಕಸಿಯರನ್ನು ಕುರಿತು, ಉವಾಚ - ಹೇಳಿದನು. ॥ ೬ ॥ ವೈದೇಹ್ಯಾಃ - ಸೀತಾದೇವಿಗೆ, ರಾಮಲಕ್ಷ್ಮಣೌ - ರಾಮಲಕ್ಷ್ಮಣರನ್ನು, ಇಂದ್ರಜಿತಾ - ಇಂದ್ರಜಿತ್ತುವಿನಿಂದ, ಹತೌ - ಹೊಡೆಯಲ್ಪಟ್ಟವರನ್ನಾಗಿ, ಆಖ್ಯಾತ - ಹೇಳಿ, ಪುಷ್ಪಕಂ - ಪುಷ್ಪಕವಿಮಾನವನ್ನು, ಆರೋಪ್ಯ - ಹತ್ತಿಸಿ, ರಣೇ - ಕಾಳಗದಲ್ಲಿ, ಹತೌ - ಹೊಡೆಯಲ್ಪಟ್ಟ ಅವರನ್ನು, ದರ್ಶಯಧ್ವಂ - ತೋರಿಸಿರಿ. ॥೭॥ ಯದಾಶ್ರಯಾತ್ - ಯಾವ ರಾಮನ ಆಶ್ರಯದಿಂದ, ಇಯಂ - ಈ ಸೀತಾದೇವಿಯು, ಅವಷ್ಟಬ್ಧಾ - ಗರ್ವಿತಳಾಗಿ, ಮಾಂ - ನನ್ನನ್ನು, ನೋಪತಿಷ್ಠತಿ - ಹೊಂದುವುದಿಲ್ಲವೋ, ಅಸ್ಯಾಃ - ಇಂಥಾ ಸೀತಾದೇವಿಯ, ಸ ಭರ್ತಾ - ಗಂಡನಾದ ಆ ರಾಮನು, ಭ್ರಾತ್ರಾಸಹ - ತಮ್ಮನೊಡನೆ, ರಣಮೂರ್ಧನಿ - ಕಾಳಗದಲ್ಲಿ, ನಿರಸ್ತಃ - ಹೋಗಲಾಡಿಸಲ್ಪಟ್ಟನು. ॥ ೮ ॥ ನಿರ್ವಿಶಂಕಾ - ಸಂಶಯರಹಿತಳಾದ, ನಿರುದ್ವಿಗ್ನಾ - ಭಯವಿಲ್ಲದಿರುವ, ನಿರಪೇಕ್ಷಾ - ನಿರಾಶಳಾದ, ಮೈಥಿಲೀ - ಜನಕರಾಯನ ಮಗಳಾದ, ಸೀತಾ - ಸೀತಾದೇವಿಯು, ಸರ್ವಾ....ತಾ - ಸಮಸ್ತಾಭರಣಗಳಿಂದಲಂಕೃತಳಾಗಿ, ಮಾಂ - ನನ್ನನ್ನು ಕುರಿತು, ಉಪಸ್ಥಾಸ್ಯತೇ - ಹೊಂದುವಳು. ॥ ೯ ॥ ಅದ್ಯ - ಈಗ, ರಣೇ - ಕಾಳಗದಲ್ಲಿ, ಕಾಲವಶಂ - ಯಮನ ವಶವನ್ನು,

ಸುರನು ಲಂಕಾನಗರದಲ್ಲಿ ಮಹಾ ಸಂತುಷ್ಟಚಿತ್ತನಾಗಿ ತನ್ನ ಕುಮಾರಕನಾದ ಇಂದ್ರಜಿತ್ತುವನ್ನು ಬೀಳ್ಕೊಟ್ಟು ಸೀತಾದೇವಿಗೆ ಕಾವಲಾಗಿಟ್ಟಿರುವ ರಾಕ್ಷಸಿಯರನ್ನೆಲ್ಲಾ ಕರೆಯಿಸಿದನು. ॥೧-೫॥ ತ್ರಿಜಟೆ ಮೊದಲಾದ ಆ ರಾಕ್ಷಸಿಯರೆಲ್ಲರೂ ಅಲ್ಲಿಗೆ ಬಂದಕೂಡಲೇ ರಾವಣಾಸುರನು ಪರಮಾನಂದಭರಿತನಾಗಿ ಅವರೆಲ್ಲರನ್ನೂ ಕುರಿತು, "ಎಲೌ ರಾಕ್ಷಸಿಯರೇ! ಆ ಸೀತಾದೇವಿಯು ಯಾರ ಆಶ್ರಯವನ್ನು ನೆಚ್ಚಿ ನನ್ನನ್ನು ಹೊಂದದಿರುವಳೊ ಅಂತಹ ರಾಮಲಕ್ಷ್ಮಣರು ನಮ್ಮ ಇಂದ್ರಜಿತ್ತುವಿನಿಂದ ಸಂಹೃತರಾಗಿರುವರು. ಅವರಿಬ್ಬರ ಕಳೇಬರಗಳನ್ನೂ ಅವಳಿಗೆ ತೋರಿಸಿರಿ. ಅವಳನ್ನು ನಮ್ಮ ಪುಷ್ಪಕವಿಮಾನದಲ್ಲಿ ಕುಳ್ಳಿರಿಸಿಕೊಂಡು ಹೋಗಿರಿ. ಆ ಸೀತೆಯು ಯಾರ ಸಹಾಯದಿಂದ ಇನ್ನೂ ಗರ್ವಿಸಿರುವಳೋ ಕಾಣೆ; ಇನಲಿ. ಆಕೆಯ ಭರ್ತನಾದ ಆ ರಾಮನು ತಮ್ಮನಾದ ಲಕ್ಷ್ಮಣಸ್ವಾಮಿಯೊಡನೆ ಸಂಹೃತನಾದನಲ್ಲವೆ? ಆದುದರಿಂದ ಇನ್ನು ಆ ಸೀತೆಯು ಏನೊಂದೂ ಶಂಕೆಯೂ, ಉದ್ವೇಗವೂ ಇಲ್ಲದೆ, ಯಾರೊಬ್ಬರ ಅವಲಂಬನವನ್ನೂ ಅಪೇಕ್ಷಿಸದೆ ಸರ್ವಾಭರಣಭೂಷಿತೆಯಾಗಿ ನನ್ನನ್ನು ಹೊಂದ

ಭೂಷಿತಾ ||೯|| ¶ ಅದ್ಯ ಕಾಲವಶಂ ಪ್ರಾಪ್ತಂ ರಣೇ ರಾಮಂ ಸಲಕ್ಷ್ಮಣಂ | ಅವೇಕ್ಷ್ಯ ವಿನಿವೃತ್ತಾಶಾ ನಾನ್ಯಾಂ ಗತಿಮಪಶ್ಯತೀ | ನಿರಪೇಕ್ಷಾ ವಿಶಾಲಾಕ್ಷೀ ಮಾಮುಪಸ್ಥಾಸ್ಯತೇ ಸ್ವಯಂ" || ೧೦ || ತಸ್ಯ ತದ್ವಚನಂ ಶ್ರುತ್ವಾ ರಾವಣಸ್ಯ ದುರಾತ್ಮನಃ | ರಾಕ್ಷಸ್ಯಸ್ತಾಸ್ತಥೇತ್ಯುಕ್ತ್ವಾ ಜಗ್ಮುರ್ಯತ್ರ ಪುಷ್ಪಕಂ ||೧೧|| ತತಃ ಪುಷ್ಪಕಮಾದಾಯ

---

ಪ್ರಾಪ್ತಂ - ಹೊಂದಿರುವ, ಸಲಕ್ಷ್ಮಣಂ - ಲಕ್ಷ್ಮಣನೊಡಗೂಡಿದ, ರಾಮಂ - ಶ್ರೀರಾಮನನ್ನು, ಅವೇಕ್ಷ್ಯ - ಕಂಡು, ವಿಶಾಲಾಕ್ಷೀ - ವಿಸ್ತಾರವಾದ ಕಣ್ಣುಗಳುಳ್ಳ ಸೀತಾದೇವಿಯು, ವಿನಿವೃತ್ತಾಶಾ - ನಿವೃತ್ತವಾದ ಆಶೆಯುಳ್ಳವಳಾಗಿ, ಅನ್ಯಾಂಗತಿಂ - ಮತ್ತೊಂದು ಪ್ರಾಪ್ಯಸ್ಥಾನವನ್ನು, ಅಪಶ್ಯತೀ - ಕಾಣದೆ, ನಿರಪೇಕ್ಷಾ-ಅಪೇಕ್ಷೆಯಿಲ್ಲದೆ, ಮಾಂ-ನನ್ನನ್ನು, ಸ್ವಯಂ-ತಾನಾಗಿಯೇ, ಉಪಸ್ಥಾಸ್ಯತೇ - ಹೊಂದುವಳು. || ೧೦ || ದುರಾತ್ಮನಃ - ದುಷ್ಟನಾದ, ತಸ್ಯರಾವಣಸ್ಯ - ಆ ರಾವಣನ, ತದ್ವಚನಂ - ಆ ಮಾತನ್ನು, ಶ್ರುತ್ವಾ - ಕೇಳಿ, ತಾಃರಾಕ್ಷಸ್ಯಃ - ಆ ರಕ್ಕಸಿಯರು, ತಥೇತಿ - ಹಾಗೆಯೇ ಆಗಲೆಂದು, ಉಕ್ತ್ವಾ - ಹೇಳಿ, ಯತ್ರ - ಎಲ್ಲಿ, ಪುಷ್ಪಕಂ - ಪುಷ್ಪಕವಿಮಾನವು, ಅಸ್ತಿ - ಇದೆಯೋ, ತತ್ರ - ಅಲ್ಲಿ, ಜಗ್ಮುರ್ಯೆ - ತೆರಳಿದರಷ್ಟೆ. || ೧೧ || ತತಃ - ಬಳಿಕ, ರಾಕ್ಷಸ್ಯಃ - ಆ ರಾಕ್ಷಸಿಯರು, ಪುಷ್ಪಕಂ - ಪುಷ್ಪಕವಿಮಾನವನ್ನು, ಆದಾಯ - ಕೊಂಡುಬಂದು, ರಾವಣಾಜ್ಞಯಾ - ರಾವಣಾಸುರನ

---

ಲುಳ್ಳವಳು. ಪ್ರಕೃತದಲ್ಲಿ ಆ ಸೀತೆಯು ರಣರಂಗದಲ್ಲಿ ಕಾಲವಶವನ್ನೈದಿ ತಮ್ಮನೊಡನೆ ನೆಲದಮೇಲೆ ಬಿದ್ದಿರುವವನೂ ಆದ ಆ ರಾಮನನ್ನು ನೋಡಿ ಇತರ ವಿಷಯಗಳಲ್ಲಿ ನಿರಾಶಳಾಗಿ, ಬೇರೊಂದು ಗತಿಯಿಲ್ಲದವಳಾಗುವಳಲ್ಲದೆ ಇತರಾಪೇಕ್ಷಾರಹಿತಳಾಗಿ ತಾನಾಗಿಯೇ ನನ್ನನ್ನು ಹೊಂದುತ್ತಾಳೆ" ಎಂದು ಹೇಳಿದನು. || ೬-೧೦ || ದುರಾತ್ಮನಾದ ಆ ರಾವಣಾಸುರನು ಈ ರೀತಿ ಆಜ್ಞಾಪಿಸುತ್ತಲೇ ಆ ರಾಕ್ಷಸಸ್ತ್ರೀಯರೆಲ್ಲರೂ ಪುಷ್ಪಕವಿಮಾನವಿದ್ದೆಡೆಗೈದಿ ಅದನ್ನು ತೆಗೆದುಕೊಂಡು ಅಶೋಕವನಕ್ಕೆ ಹೋಗಿ ಅಲ್ಲಿ ಭರ್ತೃಶೋಕಾಕುಲೆಯಾಗಿ

---

¶ "ತಾ ಉವಾಚ ತತೋ ಹೃಷ್ಟೋ ರಾಕ್ಷಸೀ" ಎಂಬ ಶ್ಲೋಕವು ಮೊದಲಾಗಿ, "ಅನಪೇಕ್ಷಾ ವಿಶಾಲಾಕ್ಷೀ ಮಾಮುಪಸ್ಥಾಸ್ಯತಿ" ಎಂಬ ಶ್ಲೋಕದವರೆಗೂ ವಾಸ್ತವಿಕಾರ್ಥವು.

ವೈದೇಹಿಗೆ ಶ್ರೀರಾಮಲಕ್ಷ್ಮಣರ ವೃತ್ತಾಂತವನ್ನು, "ಅವರೀರ್ವರೂ ಇಂದ್ರಜಿತ್ತುವಿನೊಡನೆ ಯುದ್ಧಕ್ಕಾಗಿ ಸೇರಿದರು" ಎಂದು ತಿಳಿಯಹೇಳಿರಿ; ಆಕೆಯು ಅವರನ್ನು ನೋಡಬಯಸಿದರೆ ಪುಷ್ಪಕವಿಮಾನದಲ್ಲಿ ಆಕೆಯನ್ನು ಕುಳ್ಳಿರಿಸಿಕೊಂಡು ರಣರಂಗದಲ್ಲಿ ಅವರೀರ್ವರನ್ನೂ ತೋರಿಸಿರಿ. ಹೀಗೆ ಆ ಸೀತಾದೇವಿಗೆ ಅವರೀರ್ವರನ್ನೂ ತೋರುವುದರಿಂದ ಪ್ರಯೋಜನವೇನೆಂದು ಸಂಶಯಪಟ್ಟಾರೆಂದು ಭಾವಿಸಿ, "ಎಲೈ ಗರ್ವಿತೆಯರೇ! ಕೇಳಿರಿ. ಆಕೆಯು ಇದುವರೆಗೂ ಯಾವ ಶ್ರೀರಾಮನನ್ನೇ ನಿರೀಕ್ಷಿಸುತ್ತಿದ್ದು ನಾನು ಸಮರ್ಪಿಸಿದ ಸಂಪತ್ತನ್ನು ನಿರಾಕರಿಸುತ್ತಿದ್ದಳೋ ಆ ಶ್ರೀರಾಮನನ್ನು ಈಗ ಪ್ರತ್ಯಕ್ಷವಾಗಿ ಕಂಡು ನಿಶ್ಶಂಕಿತೆಯಾಗಿ ನನ್ನ ಕಾಣಿಕೆಯನ್ನು ಒಪ್ಪಿಸಿಕೊಂಡು ನನ್ನನ್ನು ಅನುಗ್ರಹಿಸುವಳು." "ಆ ದೇವಿಯು ಮಹಾ ಪತಿವ್ರತೆ. ಮೇಲಾಗಿ ಶ್ರೀರಾಮನೇ ಸರ್ವಸ್ವವೆಂದು ಭಾವಿಸಿರುವಳು. ಇಂತಹಳು ಆತನನ್ನು ಕಂಡ ಮೇಲೆ ನೀನೀಯುವ ಅತುಲೈಶ್ವರ್ಯದಿಂದ ಆಕೆಗೆ ಆಗಬೇಕಾದುದೇನು ?" ಎಂದು ಕೇಳಿಯಾರೆಂದು ಶಂಕಿಸಿ, "ಹಾಗಲ್ಲ ಕಾಲವೆಂಬುದೇ ಯಾವನ ವಶದಲ್ಲಿರುವುದೋ ಆ ಶ್ರೀರಾಮನನ್ನು ಸೀತೆಯು, ರಣಮುಖದಲ್ಲಿ ಕಂಡು ಇತರೈಶ್ವರ್ಯದಲ್ಲಿ ಅಪೇಕ್ಷೆಯೇ ಇಲ್ಲದಿದ್ದರೂ ಭಕ್ತನಾದ ನಾನು ಭಕ್ತಿಯಿಂದ ಸಮರ್ಪಿಸುವ ಐಶ್ವರ್ಯವನ್ನು ಸ್ವೀಕರಿಸದಿರುವಳೇ! ಖಂಡಿತವಾಗಿಯೂ ಸ್ವೀಕರಿಸುವಳು" ಎಂದು ಹೇಳುವನು; "ಅದ್ಯ ಕಾಲವಶಂ ಪ್ರಾಪ್ತ" ಎಂಬ ಶ್ಲೋಕದಿಂದ.

(ಮಹೇಶ್ವರ ತೀರ್ಥರು.)

**ರಾಕ್ಷಸ್ಯೋ ರಾವಣಾಜ್ಞಯಾ । ಅಶೋಕವನಿಕಾಸ್ಥಾಂ ತಾಂ ಮೈಥಿಲೀಂ ಸಮುಪಾನಯನ್ ॥ ೧೨ ॥ ತಾಮಾದಾಯತು ರಾಕ್ಷಸ್ಯೋ ಭರ್ತೃಶೋಕಪರಾಜಿತಾಂ । ಸೀತಾಮಾರೋಪಯಾಮಾಸುರ್ವಿಮಾನಂ ಪುಷ್ಪಕಂ ತದಾ ॥ ೧೩ ॥ ತತಃ ಪುಷ್ಪಕಮಾರೋಪ್ಯ ಸೀತಾಂ ತ್ರಿಜಟಯಾ ಸಹ । ಜಗ್ಮುರ್ದರ್ಶಯಿತುಂ ತಸ್ಯೈ ರಾಕ್ಷಸ್ಯೋ ರಾಮಲಕ್ಷ್ಮಣೌ ॥ ೧೪ ॥ ರಾವಣೋಽಕಾರಯಲ್ಲಂಕಾಂ ಪತಾಕಾಧ್ವಜಮಾಲಿನೀಂ । ಪ್ರಾಘೋಷಯತ ಹೃಷ್ಟಶ್ಚ ಲಂಕಾಯಾಂ ರಾಕ್ಷಸೇಶ್ವರಃ । ರಾಘವೋ ಲಕ್ಷ್ಮಣಶ್ಚೈವ ಹತಾವಿಂದ್ರಜಿತಾ ರಣೇ ॥೧೫॥ ವಿಮಾನೇನಾಪಿ ಸೀತಾತು ಗತ್ವಾ ತ್ರಿಜಟಯಾಸಹ । ದದರ್ಶ ವಾನರಾಣಾಂತು ಸರ್ವಂ ಸೈನ್ಯಂ ನಿಪಾತಿತಂ ॥ ೧೬ ॥ ಪ್ರಹೃಷ್ಟಮನಸಶ್ಚಾಪಿ**

ಆಜ್ಞೆಯಿಂದ, ಅಶೋಕವನಿಕಾಸ್ಥಾಂ - ಅಶೋಕವನದಲ್ಲಿರುವ, ತಾಂಮೈಥಿಲೀಂ - ಆ ಸೀತಾದೇವಿಯನ್ನು, ಸಮುಪಾನಯನ್ - ಕರೆತಂದರು. ॥ ೧೨ ॥ ರಾಕ್ಷಸ್ಯಃ-ರಾಕ್ಷಸಸ್ತ್ರೀಯರು, ಭರ್ತೃ....ತಾಂ-ಪತಿವಿರಹ ದುಃಖದಿಂದ ಸೋತಿರುವ, ತಾಂಸೀತಾಂ - ಆ ಸೀತಾದೇವಿಯನ್ನು, ಆದಾಯ - ಕರೆದುತಂದು, ತದಾ - ಆ ಕ್ಷಣದಲ್ಲಿ, ಪುಷ್ಪಕಂವಿಮಾನಂ - ಪುಷ್ಪಕವಿಮಾನವನ್ನು, ಆರೋಪಯಾಮಾಸುಃ-ಏರಿಸಿದರು. ॥ ೧೩ ॥ ತತಃ-ಬಳಿಕ, ಪುಷ್ಪಕಂ-ಪುಷ್ಪಕವಿಮಾನವನ್ನು, ತ್ರಿಜಟಯಾಸಹ-ತ್ರಿಜಟೆಯೊಡನೆ, ಸೀತಾಂ - ಸೀತಾದೇವಿಯನ್ನು, ಆರೋಪ್ಯ - ಏರಿಸಿ, ರಾಕ್ಷಸ್ಯಃ - ರಕ್ಕಸಿಯರು, ತಸ್ಯೈ - ಆ ಸೀತಾದೇವಿಗೆ, ರಾಮಲಕ್ಷ್ಮಣೌ - ಶ್ರೀರಾಮಲಕ್ಷ್ಮಣರನ್ನು, ದರ್ಶಯಿತುಂ - ತೋರಿಸುವುದಕ್ಕೆ, ಜಗ್ಮುಃ - ತೆರಳಿದರು. ॥೧೪॥ ರಾಕ್ಷಸೇಶ್ವರಃ - ರಾಕ್ಷಸಾಧಿಪತಿಯಾದ, ರಾವಣಃ-ರಾವಣನು, ಹೃಷ್ಟಃ - ಸಂತೋಷಗೊಂಡವನಾಗಿ, ಲಂಕಾಂ - ಲಂಕಾಪಟ್ಟಣವನ್ನು, ಪತಾ....ನೀಂ - ನಿಶಾನಿಗಳ ದೊಡ್ಡ ಧ್ವಜಗಳ ಪಙ್ಕ್ತಿಗಳುಳ್ಳುದನ್ನಾಗಿ, ಅಕಾರಯತ್ - ಮಾಡಿಸಿದನು, ರಾಘವಃ - ಶ್ರೀರಾಮನು, ಲಕ್ಷ್ಮಣಶ್ಚೈವ - ಲಕ್ಷ್ಮಣನೂ, ರಣೇ - ಕಾಳೆಗದಲ್ಲಿ, ಇಂದ್ರಜಿತಾ - ಇಂದ್ರಜಿತ್ತುವಿನಿಂದ, ಹತಾವಿತಿ - ಹತರಾದರೆಂದು, ಲಂಕಾಯಾಂ - ಲಂಕಾಪಟ್ಟಣದಲ್ಲಿ, ಪ್ರಾಘೋಷಯತ - ಸಾರಿಡಿಸಿದನು. ॥ ೧೪-೧೫ ॥ ವಿಮಾನೇನ - ವಿಮಾನದಿಂದ, ಸೀತಾತು - ಸೀತಾದೇವಿಯಾದರೆ, ತ್ರಿಜಟಯಾಸಹ - ತ್ರಿಜಟೆಯೊಡನೆ, ಗತ್ವಾ - ಹೋಗಿ, ವಾನರಾಣಾಂ - ಕಪಿಗಳ, ಸರ್ವಂ - ಸಮಸ್ತವಾದ, ಸೈನ್ಯಂ - ಸೈನ್ಯವನ್ನು, ನಿಪಾತಿತಂ - ಕೆಳಕ್ಕೆ ಬೀಳಿಸಲ್ಪಟ್ಟುದನ್ನಾಗಿ, ದದರ್ಶ - ಕಂಡಳು. ॥ ೧೬ ॥ ಪಿಶಿತಾಶನಾನ್ - ರಕ್ಕಸರನ್ನು, ಪ್ರಹೃ....ಪಿ - ಸಂತೋಷಗೊಂಡ ಮನವುಳ್ಳವ

ಪರಿತಪಿಸುತ್ತಿದ್ದ ಸೀತಾದೇವಿಯನ್ನು ಆ ಪುಷ್ಪಕವಿಮಾನದಲ್ಲಿ ಕುಳ್ಳಿರಿಸಿಕೊಂಡು ಹೊರಟರು. ಈ ರೀತಿ ಆ ರಾಕ್ಷಸಿಯರೆಲ್ಲರೂ ಆಕೆಯನ್ನು ತ್ರಿಜಟೆಯೊಡನೆ ಆ ವಿಮಾನದಲ್ಲಿ ಕುಳ್ಳಿರಿಸಿಕೊಂಡು ರಾಮಲಕ್ಷ್ಮಣರು ಬಿದ್ದಿದ್ದ ಸ್ಥಳಕ್ಕೆ ಕರೆದೊಯ್ದರು. ಅದೇ ಸಮಯದಲ್ಲಿಯೇ ರಾವಣಾಸುರನು ಲಂಕಾನಗರವೆಲ್ಲವನ್ನೂ ಪತಾಕೆಗಳಿಂದ ಶೃಂಗಾರ ಮಾಡಿಸಿದನು. ಅತ್ಯಾನಂದಭರಿತನಾಗಿ ಲಂಕಾನಗರದಲ್ಲೆಲ್ಲಾ, ಇಂದ್ರಜಿತ್ತುವು ರಾಮನನ್ನು ವಧಿಸಿದನೆಂದು ಸಾರಿಡುವಂತೆ ಆಜ್ಞಾಪಿಸಿದನು. ॥೧೧-೧೬॥ ಇತ್ತ ವಿಮಾನಾರೂಢಳಾದ ಸೀತಾದೇವಿಯು ತ್ರಿಜಟೆಯೊಡನೆ ಮುಂದುವರಿಯುತ್ತ ಇಂದ್ರಜಿತ್ತುವಿನಿಂದ ಸಂಹೃತವಾಗಿದ್ದ ವಾನರಸೇನೆಯೆಲ್ಲವನ್ನೂ ನೋಡಿದಳು. ಆಗ ಅಲ್ಲಿದ್ದ ಮಾಂಸಾಶನರಾದ ರಾಕ್ಷಸರೆಲ್ಲರೂ ಮಹದಾನಂದಭರಿತರಾಗಿದ್ದರು. ಸೀತಾದೇವಿಯು ಅವರನ್ನೂ ಕಂಡಳು. ಹಾಗೆಯೇ ಆ ರಣಭೂಮಿ

ಪದದರ್ಶ ಪಿಶಿತಾಶನಾನ್ । ವಾನರಾಂಶ್ಚಾಪಿ ದುಃಖಾರ್ತಾನ್ ರಾಮಲಕ್ಷ್ಮಣಪಾರ್ಶ್ವತಃ ॥ ೧೮ ॥ ತತಸ್ಸೀತಾ ದದರ್ಶೋಭೌ ಶಯಾನೌ ಶರತಲ್ಪಯೋಃ । ಲಕ್ಷ್ಮಣಂಚಾಪಿ ರಾಮಂಚ ವಿಸಂಜ್ಞೌ ಶರಪೀಡಿತೌ ॥ ೧೯ ॥ ವಿಧ್ವಸ್ತಕವಚೌ ವೀರೌ ವಿಪ್ರವಿದ್ಧಶರಾಸನೌ । ಸಾಯಕೈಶ್ಛಿನ್ನಸರ್ವಾಂಗೌ ಶರಸ್ತಂಬಮಯೌ ಕ್ಷಿತೌ ॥ ೨೦ ॥ ತೌ ದೃಷ್ಟ್ವಾ ಭ್ರಾತರೌ ತತ್ರ ವೀರೌ ಸಾ ಪುರುಷರ್ಷಭೌ । ಶಯಾನೌ ಪುಂಡರೀಕಾಕ್ಷೌ ಕುಮಾರಾವಿವ ಪಾವಕೀ ॥೨೧॥ ಶರತಲ್ಪಗತೌ ವೀರೌ ತಥಾಭೂತೌ ನರರ್ಷಭೌ । ದುಃಖಾರ್ತಾ ಸುಭೃಶಂ ಸೀತಾ ಸುಚಿರಂ ವಿಲಲಾಪಹ ॥೨೨॥ ಭರ್ತಾರಮನವದ್ಯಾಂಗೀ ಲಕ್ಷ್ಮಣಂ ಚಾಸಿತೇಕ್ಷಣಾ । ಪ್ರೇಕ್ಷ್ಯ ಪಾಂಸುಷು ಚೇಷ್ಟಂತೌ ರುರೋದ ಜನಕಾತ್ಮಜಾ ॥೨೩॥

---

ರನ್ನಾಗಿ, ದದರ್ಶ - ಕಂಡಳು, ವಾನರಾಂಶ್ಚಾಪಿ - ಕಪಿಗಳನ್ನೂ ಕೂಡ, ರಾಮ....ತಃ - ರಾಮಲಕ್ಷ್ಮಣರ ಪಾರ್ಶ್ವದಲ್ಲಿ, ದುಃಖಾರ್ತಾನ್ - ದುಃಖಿತರನ್ನಾಗಿ, ದದರ್ಶ - ಕಂಡಳು. ॥ ೧೮ ॥ ತತಃ - ಬಳಿಕ, ಸೀತಾ-ಸೀತಾದೇವಿಯು, ಶರತಲ್ಪಯೋಃ-ಬಾಣಗಳ ಹಾಸಿಗೆಗಳಲ್ಲಿ, ಶಯಾನೌ-ಮಲಗಿರುವ, ಲಕ್ಷ್ಮಣಂಚ - ಲಕ್ಷ್ಮಣನನ್ನೂ, ರಾಮಂಚ - ಶ್ರೀರಾಮನನ್ನು, ಉಭೌ - ಇಬ್ಬರನ್ನೂ, ವಿಸಂಜ್ಞೌ- ಪ್ರಜ್ಞೆ ತಪ್ಪಿದವರನ್ನಾಗಿಯೂ, ಶರಪೀಡಿತೌ - ಬಾಣಗಳಿಂದ ಪೀಡಿತರನ್ನಾಗಿಯೂ, ವಿಧ್ವಸ್ತಕವಚೌ- ಧ್ವಂಸ ಮಾಡಲ್ಪಟ್ಟ ಕವಚಗಳುಳ್ಳವರನ್ನಾಗಿಯೂ, ವೀರೌ - ಶೂರರಾದರೂ, ವಿಪ್ರ....ನೌ - ಜಾರಿಹೋದ ಧನುಸ್ಸುಗಳುಳ್ಳವರನ್ನಾಗಿಯೂ, ಸಾಯಕೈಃ - ಬಾಣಗಳಿಂದ, ಛಿನ್ನ....ಗೌ - ಭೇದಿಸಲ್ಪಟ್ಟ ಸಮಸ್ತಾವಯವಗಳುಳ್ಳವರನ್ನಾಗಿಯೂ, ಕ್ಷಿತೌ-ನೆಲದಲ್ಲಿ, ಶರಸ್ತಂಬಮಯೌ-ಬಾಣಗಳ ಸಮೂಹದಿಂದಾವೃತರಾಗಿರುವರನ್ನಾಗಿ, ದದರ್ಶ - ಕಂಡಳು. ॥ ೧೯-೨೦ ॥ ತತ್ರ - ಆ ರಣರಂಗದಲ್ಲಿ, ಸಾಸೀತಾ-ಆ ಸೀತಾದೇವಿಯು, ಶಯಾನೌ-ಮಲಗಿರುವ, ವೀರೌ - ಶೂರರಾದ, ಪಾವಕೀಕುಮಾರಾವಿವ- ಅಗ್ನಿಕುಮಾರರಂತಿರುವ, ಪುಂಡರೀಕಾಕ್ಷೌ - ಬಿಳೀ ಕಮಲದೆಲೆಗಳಂತೆ ವಿಸ್ತಾರವಾದ ನೇತ್ರಗಳುಳ್ಳ, ಶರತಲ್ಪಗತೌ - ಬಾಣಗಳ ಹಾಸಿಗೆಯನ್ನು ಹೊಂದಿರುವ, ಪುರುಷರ್ಷಭೌ - ಪುರುಷಶ್ರೇಷ್ಠರಾದ, ತಥಾಭೂತೌ - ಅಂಥಾ ಅವಸ್ಥೆಯನ್ನು ಪಡೆದಿರುವ, ನರರ್ಷಭೌ - ಮನುಷ್ಯಶ್ರೇಷ್ಠರಾದ, ಭ್ರಾತರೌ - ಅಣ್ಣತಮ್ಮಂದಿರಾದ, ವೀರೌ - ಶೂರರಾದ, ತೌ - ಆ ರಾಮಲಕ್ಷ್ಮಣರನ್ನು, ದೃಷ್ಟ್ವಾ - ಕಂಡು, ಸುಭೃಶಂ - ಬಹಳವಾಗಿ, ದುಃಖಾರ್ತಾ - ವ್ಯಸನಗೊಂಡವಳಾಗಿ, ಸುಚಿರಂ - ಬಹಳಕಾಲ, ವಿಲಲಾಪಹ-ವಿಲಪಿಸಿದಳು. ॥೨೧ ೨೨॥ ಅಸಿತೇಕ್ಷಣಾ-ಕಪ್ಪಾಗಿರುವ ನೇತ್ರಗಳುಳ್ಳ, ಅನವದ್ಯಾಂಗೀ- ನಿರ್ದೋಷವಾಗಿರುವ ಅವಯವಗಳುಳ್ಳ, ಜನಕಾತ್ಮಜಾ - ಸೀತಾದೇವಿಯು, ಪಾಂಸುಷು - ಧೂಳಿ

---

ಯಲ್ಲಿ ಶ್ರೀರಾಮಲಕ್ಷ್ಮಣರ ಪಾರ್ಶ್ವಭಾಗದಲ್ಲಿ ದುಃಖಾರ್ತರಾಗಿ ಕುಳಿತಿದ್ದ ವಾನರವೀರರನ್ನು ಕಂಡಳು. ಇದಾದ ತರುವಾಯ ಶರತಲ್ಪದಲ್ಲಿ ಪವಳಿಸಿ ಸ್ಪೃಹೆಯೇ ಇಲ್ಲದೆ ಬಾಣಗಳಿಂದ ಪೀಡಿತರಾಗಿದ್ದ ಶ್ರೀರಾಮಲಕ್ಷ್ಮಣರನ್ನೂ ಕಂಡಳು. ಅವರು ಭಿನ್ನವಾದ ಕವಚಗಳುಳ್ಳವರೂ, ಬಾಣಗಳಿಂದ ಭೇದಿಸಲಾದ ಸರ್ವಾವಯವಗಳುಳ್ಳವರೂ, ಶರಸ್ತಂಬಮಯರೂ ಆಗಿ ಭೂಮಿಯಲ್ಲಿ ಪವಳಿಸಿದ್ದರು. ॥ ೧೭–೨೦ ॥ ಹೀಗೆ ಅಣ್ಣತಮ್ಮಂದಿರಾದ ಪುಂಡರೀಕಾಕ್ಷರಾದ ಆ ಶ್ರೀರಾಮಲಕ್ಷ್ಮಣರು ಅಗ್ನಿಕುಮಾರರಂತೆ ಶರತಲ್ಪದಲ್ಲಿ ಪವಳಿಸಿರುವುದನ್ನು ಕಂಡು ಜನಕರಾಜ ಕುಮಾರಿಯಾದ ಆ ಸೀತಾದೇವಿಯು ಬಹಳವಾಗಿ ದುಃಖಿಸಿ ಬಹುವಾಗಿ ರೋದಿಸಿದಳು. ಅಸಿತೇಕ್ಷಣೆಯೂ, ಅನವದ್ಯಾಂಗಿಯೂ ಆದ ಆ ಜನಕಾತ್ಮ

ಸಾಬಾಷ್ಪಶೋಕಾಭಿಹತಾ ಸಮೀಕ್ಷ್ಯ
ತೌ ಭ್ರಾತರೌ ದೇವಸಮಪ್ರಭಾವೌ ।
ವಿತರ್ಕಯಂತೀ ನಿಧನಂ ತಯೋಸ್ಸಾ
ದುಃಖಾನ್ವಿತಾ ವಾಕ್ಯಮಿದಂ ಜಗಾದ ॥ ೨೪ ॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಸಪ್ತಚತ್ವಾರಿಂಶಸ್ಸರ್ಗಃ.



ಗಳಲ್ಲಿ, ವೈಷ್ಟಂತೌ - ಹೊರಳಾಡುತ್ತಿರುವ, ಭರ್ತಾರಂ - ಗಂಡನಾದ ಶ್ರೀರಾಮನನ್ನು, ಲಕ್ಷ್ಮಣಂಚ-ಲಕ್ಷ್ಮಣನನ್ನೂ, ಉಭೌ - ಈರ್ವರನ್ನೂ, ಪ್ರೇಕ್ಷ್ಯ - ಕಂಡು, ರುರೋದ - ರೋದನ ಮಾಡಿದಳು. ॥ ೨೩ ॥ ಸಾ - ಆ ಸೀತಾದೇವಿಯು, ದೇವ....ವೌ - ದೇವತೆಗಳಿಗೆ ಸಮಾನವಾದ ಮಾಹಾತ್ಮ್ಯವುಳ್ಳ, ಭ್ರಾತರೌ-ಅಣ್ಣತಮ್ಮಂದಿರಾದ, ತೌ-ಆ ರಾಮಲಕ್ಷ್ಮಣರನ್ನು, ಸಮೀಕ್ಷ್ಯ-ಕಂಡು, ಬಾಷ್ಪ....ತಾ-ಕಂಬನಿಯಿಂದಲೂ ಶೋಕದಿಂದಲೂ ಹೊಡೆಯಲ್ಪಟ್ಟವಳಾಗಿ, ತಯೋಃ - ಆ ರಾಮಲಕ್ಷ್ಮಣರ, ನಿಧನಂ - ಸಂಹಾರವನ್ನು, ವಿತರ್ಕಯಂತೀ - ಊಹಿಸುತ್ತಿರುವವಳಾಗಿ, ಸಾ - ಆ ಸೀತಾದೇವಿಯು, ದುಃಖಾನ್ವಿತಾ-ದುಃಖಗೊಂಡವಳಾಗಿ, ಇದಂವಾಕ್ಯಂ-ಈ ಮಾತನ್ನು, ಜಗಾದ-ನುಡಿದಳು. ॥೨೪॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಸಪ್ತಚತ್ವಾರಿಂಶಸ್ಸರ್ಗಃ.



ಜೆಯು ಧೂಳಿಯಲ್ಲಿ ಹೊರಳಾಡುತ್ತಿರುವ ತನ್ನ ಭರ್ತನಾದ ಶ್ರೀರಾಮಮೂರ್ತಿಯನ್ನೂ ಮೈದುನನಾದ ಲಕ್ಷ್ಮಣನನ್ನೂ ಕಂಡು ಕಂಬನಿಯಿಡುತ್ತ ಬಹಳವಾಗಿ ರೋದಿಸಿ ಅವರು ಮಡಿದರೆಂದೇ ಶಂಕಿಸಿ ಈ ಮಾತನ್ನು ಹೇಳಿದಳು. ॥ ೨೧-೨೪ ॥

ಇಂತಿದು ಸೀತಾಕೃತ ವೀರಶಯನಸ್ಥಿತ ಶ್ರೀರಾಮಲಕ್ಷ್ಮಣ ದರ್ಶನ ವೃತ್ತಾಂತವೆಂಬ
ನಲವತ್ತೇಳನೆಯ ಸರ್ಗವು ಸಮಾಪ್ತವಾದುದು.



# ಯುದ್ಧಕಾಂಡೇ ಅಷ್ಟಚತ್ವಾರಿಂಶಸ್ಸರ್ಗಃ

**ಭರ್ತಾರಂ ನಿಹತಂ ದೃಷ್ಟ್ವಾ ಲಕ್ಷ್ಮಣಂಚ ಮಹಾಬಲಂ । ವಿಲಲಾಪ ಭೃಶಂ ಸೀತಾ ಕರುಣಂ ಶೋಕಕರ್ಶಿತಾ ॥೧॥ ¶ ಊಚುರ್ಲಕ್ಷಣಿನೋ ಯೇ ಮಾಂ ಪುತ್ರಿಣ್ಯ ವಿಧವೇತಿಚ । ತೇಽದ್ಯ ಸರ್ವೇ ಹತೇ ರಾಮೇ ಜ್ಞಾನಿನೋಽನೃತವಾದಿನಃ ॥ ೨ ॥**

---

ಸೀತಾ - ಸೀತಾದೇವಿಯು, ಭರ್ತಾರಂ - ಗಂಡನಾದ ಶ್ರೀರಾಮನನ್ನು, ಮಹಾಬಲಂ - ಮಹಾ ಬಲಿಷ್ಠನಾದ, ಲಕ್ಷ್ಮಣಂಚ - ಲಕ್ಷ್ಮಣನನ್ನೂ, ನಿಹತಂ - ಹೊಡೆಯಲ್ಪಟ್ಟವರನ್ನಾಗಿ, ದೃಷ್ಟ್ವಾ - ಕಂಡು, ಶೋಕಕರ್ಶಿತಾ - ದುಃಖದಿಂದ ಕೃಶಳಾಗಿ, ಕರುಣಂ - ದೈನ್ಯವಾಗಿ, ಭೃಶಂ - ಬಹಳವಾಗಿ, ವಿಲಲಾಪ - ಪ್ರಲಾಪಿಸಿದಳು. ॥ ೧ ॥ ಲಕ್ಷಣಿನಃ - ಲಕ್ಷಣವನ್ನು ತಿಳಿದಿರುವವರು, ಯೇ - ಯಾರು, ಮಾಂ - ನನ್ನನ್ನು, ಪುತ್ರಿಣೀ - ಪುತ್ರವಂತಳು, ಅವಿಧವೇತಿಚ - ವೈಧವ್ಯರಹಿತಳೆಂದು, ಊಚುಃ - ಹೇಳಿದ್ದರೋ, ಜ್ಞಾನಿನಃ - ಜ್ಞಾನವಂತರಾದ, ತೇಸರ್ವೇ - ಅವರೆಲ್ಲರೂ, ಅದ್ಯ- ಈಗ, ರಾಮೇ - ಶ್ರೀರಾಮನು, ಹತೇ - ಸಂಹೃತನಾಗಲೂ, ಅನೃ....ನಃ - ಸುಳ್ಳು ಮಾತಿನವರು, ಬಭೂವುಃ - ಆದರು. ॥ ೨ ॥ ಸತ್ರಿಣಃ - ಸೋಮಯಾಜಿಗಳಾದ, ಯೇ - ಯಾರು, ಯಜ್ವಿನಃ -

---

ಆ ಸಮಯದಲ್ಲಿ, ಯುದ್ಧರಂಗದಲ್ಲಿ ಹತರಾಗಿ ವೀರಶಯ್ಯೆಯಲ್ಲಿ ಪವಳಿಸಿರುವ ತನ್ನ ಪತಿಯಾದ ಶ್ರೀರಾಮಮೂರ್ತಿಯನ್ನೂ, ಮೈದುನನಾದ ಲಕ್ಷ್ಮಣಸ್ವಾಮಿಯನ್ನೂ ಕಂಡು ಜನಕರಾಜಕುಮಾರಿಯಾದ ಆ ಸೀತಾದೇವಿಯು ಪರಮ ದುಃಖಿಪೀಡಿತೆಯಾಗಿ ಈ ರೀತಿ ವಿಲಪಿಸಿದಳು. "ಅಕ್ಕಟ! ಲಕ್ಷಣಶಾಸ್ತ್ರವನ್ನು ಚನ್ನಾಗಿ ತಿಳಿದಿರುವ ಪಂಡಿತೋತ್ತಮರು ನಾನು ಪುತ್ರವತಿಯಾಗುವೆನೆಂದೂ, ಎಂದಿಗೂ ವೈಧವ್ಯವನ್ನು ಹೊಂದನೆಂದೂ ದೃಢವಾಗಿ ತಿಳಿಸಿ

---

¶ ಅಂಗನೆಯರ ಅಂಗಲಕ್ಷಣಗಳು ೬೬ ಎಂದು ಸಾಮುದ್ರಿಕ ಶಾಸ್ತ್ರದಲ್ಲಿ ಹೇಳಿದೆ.

"ಷಷ್ಟಿಷಡುತ್ತರಾಯೋಷಿದಂಗಲಕ್ಷಣಮಿರಿತವಾ್ ।"

ಅವಿಧವಾ ಲಕ್ಷಣ:—

"ನಿರ್ಲೋಮಹೃದಯಂ ಯಸ್ಯಾಸ್ಸಮಂ ನಿಮ್ನತ್ವವರ್ಜಿತಂ ।
ಐಶ್ವರ್ಯಂ ಚಾಪ್ಯವೈಧವ್ಯಂ ಪ್ರಿಯಪ್ರೇಮಚ ಸಾಲಭೇತ್ ॥"

ಕೂದಲುಗಳಿಲ್ಲದೆಯೂ, ಆಳವಾಗಿಲ್ಲದೆ ಸಮವಾಗಿಯೂ ಇರುವ ಎದೆಯುಳ್ಳ ಹೆಂಗಸು ಐಶ್ವರ್ಯವನ್ನೂ, ಸೌಮಂಗಲ್ಯವನ್ನೂ, ಪತಿಪ್ರೇಮವನ್ನೂ ಪಡೆಯುತ್ತಾಳೆ.

ಪುತ್ರಿಣೀಲಕ್ಷಣ:—

"ದೀರ್ಘಾಂಗುಳಿಶ್ಚ ಯಾ ನಾರೀ ದೀರ್ಘಕೇಶೀಚ ಯಾ ಭವೇತ್ ।
ದೀರ್ಘಮಾಯುರವಾಪ್ನೋತಿ ಪುತ್ರೈಶ್ಚ ಸಹವರ್ತತೇ ॥"

ಉದ್ದವಾದ ಬೆರಳುಗಳಿರುವವಳೂ, ದೀರ್ಘವಾದ ಕೇಶರಾಶಿಯುಳ್ಳವಳೂ ದೀರ್ಘಾಯುಷ್ಮತಿಯಾಗಿ ಪುತ್ರರೊಡನೆ ಸುಖವಾಗಿರುತ್ತಾಳೆ.

ಯಜ್ವನೋ ಮಹಿಷೀಂ ಯೇ ಮಾಮೂಚುಃ ಪತ್ನೀಂ ಚ ಸತ್ರಿಣಃ । ತೇಽದ್ಯ ಸರ್ವೇ ಹತೇ ರಾಮೇ ಜ್ಞಾನಿನೋಽನೃತವಾದಿನಃ ॥ ೩ ॥ ಊಚುಸ್ಸಂಶ್ರವಣೇ ಯೇ ಮಾಂ ದ್ವಿಜಾಃ ಕಾರ್ತಾಂತಿಕಾಶ್ಶುಭಾಂ । ತೇಽದ್ಯ ಸರ್ವೇ ಹತೇ ರಾಮೇ ಜ್ಞಾನಿನೋಽನೃತವಾದಿನಃ ॥ ೪ ॥ ವೀರಪಾರ್ಥಿವಪತ್ನೀತ್ವಂ ಯೇ ಧನ್ಯೇತಿಚ ಮಾಂ ವಿದುಃ । ತೇಽದ್ಯ ಸರ್ವೇ ಹತೇ ರಾಮೇ ಜ್ಞಾನಿನೋಽನೃತವಾದಿನಃ ॥ ೫ ॥ ಇಮಾನಿ ಖಲು ಪದ್ಮಾನಿ

---

ಯಜ್ಞಶೀಲನಾದವನ, ಪತ್ನೀಂ - ಹೆಂಡತಿಯನ್ನಾಗಿಯೂ, ಮಾಂ - ನನ್ನನ್ನು, ಮಹಿಷೀಂ - ಪಟ್ಟದ ರಾಣಿಯನ್ನಾಗಿಯೂ, ಊಚುಃ - ಹೇಳಿದ್ದರೋ, ಅದ್ಯ - ಈಗ, ರಾಮೇ - ಶ್ರೀರಾಮನು, ಹತೇ - ಹತನಾಗಲು, ಜ್ಞಾನಿನಃ - ತಿಳಿವಳಿಕೆಯುಳ್ಳ, ತೇಸರ್ವೇ - ಅವರೆಲ್ಲರೂ, ಅನೃ.... ನಃ - ಸಟೆಮಾತು ಗಳುಳ್ಳವರಾದರು. ॥ ೩ ॥ ಕಾರ್ತಾಂತಿಕಾಃ - ಕಾಲಜ್ಞರಾದ, ಯೇದ್ವಿಜಾಃ - ಯಾವ ಬ್ರಾಹ್ಮಣರು, ಸಂಶ್ರವಣೇ - ನಾನು ಕೇಳಲು, ಮಾಂ - ನನ್ನನ್ನು, ಶುಭಾಂ - ಶುಭಕರಳಾದ ಸುವಾಸಿನಿಯನ್ನಾಗಿ, (ಗೋ) ಲಕ್ಷಣೈಃ - ಲಕ್ಷಣಗಳಿಂದ, ಶುಭಾಂ - ಮಂಗಳಸ್ವರೂಪಳನ್ನಾಗಿ, ಊಚುಃ - ಹೇಳಿದರೋ, ರಾಮೇ - ಶ್ರೀರಾಮನು, ಹತೇ - ಹತನಾಗಲು, ಜ್ಞಾನಿನಃ - ಭವಿಷ್ಯದರ್ಥ ಜ್ಞಾನಿಗಳಾದ, ತೇಸರ್ವೇ- ಅವರೆಲ್ಲರೂ, ಅನೃತವಾದಿನಃ - ಸುಳ್ಳು ಮಾತುಗಳನ್ನು ಹೇಳಿದವರು, ಬಭೂವುಃ - ಆದರು. ॥ ೪ ॥ ಯೇ - ಯಾರು, ಮಾಂ - ನನ್ನನ್ನು ಕುರಿತು, ತ್ವಂ - ನೀನು, ವೀರ....ತ್ನೀ - ಶೂರನಾದ ಅರಸಿಗೆ ಹೆಂಡತಿಯಾಗಿರುವೆ, ಧನ್ಯೇತಿಚ - ಧನ್ಯಳಾಗಿರುವೆಯೆಂದು, ವಿದುಃ - ತಿಳಿದರೋ, ಜ್ಞಾನಿನಃ - ಜ್ಞಾನವಂತರಾದ, ತೇಸರ್ವೇ - ಅವರೆಲ್ಲರೂ, ರಾಮೇ - ಶ್ರೀರಾಮನು, ಹತೇ - ಸಂಹೃತನಾಗಲೂ, ಅದ್ಯ - ಈಗ, ಅನೃತವಾದಿನಃ - ಸುಳ್ಳಾಡುವರಾದರು. ॥ ೫ ॥ ಯೈಃ - (ಗೋ+ಮ) ಯಾವ ಪದ್ಮ ರೇಖೆಗಳಿಂದ, ಸ್ತ್ರೀಯಃ - ಹೆಂಗುಸರು, ಪತಿಭಿಃ - ಗಂಡಂದರಾದ, ನರೇಂದ್ರೈಸ್ಸಹ - ಅರಸು

---

ದರು. ಆದರೆ ಇದೀಗ ರಣರಂಗದಲ್ಲಿ ನನ್ನ ಪತಿಯಾದ ಶ್ರೀರಾಮನು ಹತನಾದುದರಿಂದ ಅವರಾಡಿದ ಆ ಮಾತುಗಳೆಲ್ಲವೂ ಅಸತ್ಯವಾದುವು. ಸೋಮಯಾಜಿಗಳೂ, ಸತ್ರಾದಿ ಮಹಾ ಯಾಗಗಳನ್ನು ಮಾಡಿದವರೂ ಆದ ಮಹಾತ್ಮರು ನನ್ನನ್ನು ರಾಜಪತ್ನಿಯೆಂದೂ, ಸೋಮಪಾನ ಮಾಡುವವಳೆಂದೂ ಹೇಳಿದರು. ಈಗ ಅವರ ಮಾತುಗಳೆಲ್ಲವೂ ಸುಳ್ಳಾಗಿ ಹೋಯಿತು. ಅನೇಕ ಜೋತಿಷ್ಕರೂ ಸಹ ನನ್ನಲ್ಲಿ ಶುಭಲಕ್ಷಣಗಳು ಅನೇಕವಾಗಿರುವುದ ರಿಂದ ನಾನು ಎಲ್ಲಕಾಲಗಳಲ್ಲಿಯೂ ಮಂಗಳಾಂಗಿಯಾಗಿಯೇ ಇರುವೆನೆಂದು ಹೇಳಿದರು. ಶ್ರೀರಾಮನೀಗ ಯುದ್ಧರಂಗದಲ್ಲಿ ಮಡಿದುದರಿಂದ ಅವರ ಮಾತುಗಳೆಲ್ಲವೂ ಅನೃತಗಳಾಗಿ ಹೋದುವು. ॥ ೧–೫ ॥ ಪಾದಗಳಲ್ಲಿ ಪದ್ಮಾಕಾರದ ರೇಖೆಗಳುಳ್ಳ ಸ್ತ್ರೀಯರು ತಮ್ಮ ಪತಿ ಗಳೊಡನೆ ರಾಜ್ಯಾಭಿಷಿಕ್ತರಾಗುವರೆಂದು ಹೇಳುವರು. ನನ್ನ ಪಾದಗಳಲ್ಲಿ ಅಂಥ ಪದ್ಮಾ

---

ನಿತ್ಯಮಂಗಳಾಲಕ್ಷಣ:—

"ಸ್ಮಿತಂ ಪ್ರಶಸ್ತಂ ಸುದೃಶಾಮನಿಮೀಲಿತಲೋಚನಂ ।
ಸಮವೃತ್ತಪುಟಾ ನಾಸಾ ಲಘುಚ್ಛಿದ್ರಾ ಶುಭಾವಹಾ ॥"

ತುಟಿಗಳಲ್ಲಿ ಒಳ್ಳೆಯ ನಸುನಗೆಯೂ ಅಗಲವಾದ ಕಣ್ಣುಗಳೂ, ಅಗಲವಾದ ಹೊಳ್ಳೆಗಳಿಲ್ಲದ ಮೂಗೂ ಇರುವ ಹೆಣ್ಣು ನಿತ್ಯಮಂಗಳೆಯಾಗಿರುತ್ತಾಳೆ.

ಪಾದಯೋರ್ಯಾಃ ಕಿಲ ಸ್ತ್ರಿಯಃ । ಅಧಿರಾಜ್ಯೇಽಭಿಷಿಚ್ಯಂತೇ ನರೇಂದ್ರೈಃ ಪತಿಭಿಸ್ಸಹ ॥ ೬ ॥ $ ವೈಧವ್ಯಂ ಯಾಂತಿ ಯೈರ್ನಾರ್ಯೋ ಲಕ್ಷಣೈರ್ಭಾಗ್ಯದುರ್ಲಭಾಃ । ನಾತ್ಮನಸ್ತಾನಿ ಪಶ್ಯಾಮಿ ಪಶ್ಯಂತೀ ಹತಲಕ್ಷಣಾ ॥ ೭ ॥ § ಸತ್ಯನಾಮಾನಿ ಪದ್ಮಾನಿ ಸ್ತ್ರೀಣಾಮುಕ್ತಾನಿ ಲಕ್ಷಣೈಃ । ತಾನ್ಯದ್ಯ ನಿಹತೇ ರಾಮೇ ವಿತಥಾನಿ ಭವಂತಿ ಮೇ ॥ ೮ ॥

ಗಳೊಡನೆ, ಅಧಿರಾಜ್ಯೇ - ಯೌವರಾಜ್ಯದಲ್ಲಿ, ಅಭಿಷಿಚ್ಯಂತೇ - ಅಭಿಷೇಕ ಮಾಡಲ್ಪಡುತ್ತಾರೆಯೋ, ಇಮಾನಿಪದ್ಮಾನಿ - ಈ ಕಮಲರೇಖೆಗಳು, ಪಾದಯೋಃ - ಕಾಲುಗಳಲ್ಲಿ, ವರ್ತಂತೇ - ಇರುತ್ತವೆ. ॥೬॥ ಭಾಗ್ಯದುರ್ಲಭಾಃ - ಭಾಗ್ಯಹೀನರಾದ, ನಾರ್ಯಃ - ಹೆಂಗುಸರು, ಯೈರ್ಲಕ್ಷಣೈಃ - ಯಾವ ದುರ್ಲಕ್ಷಣಗಳಿಂದ, ವೈಧವ್ಯಂ - ವೈಧವ್ಯವನ್ನು, ಯಾಂತಿ - ಹೊಂದುತ್ತಾರೆಯೋ, ಹತಲಕ್ಷಣಾ - ಹತವಾದ ಲಕ್ಷಣಗಳುಳ್ಳ, ಅಹಂ - ನಾನು, ಪಶ್ಯಂತೀ - ನೋಡುತ್ತಿರುವವಳಾಗಿ, ಇಹ - ಈಗ, ಆತ್ಮನಃ - ತನಗೆ, ತಾನಿ - ಅಂಥಾ ವೈಧವ್ಯ ಲಕ್ಷಣಗಳನ್ನು, ನಪಶ್ಯಾಮಿ - ಕಾಣೆನು. ॥೭॥ ಸ್ತ್ರೀಣಾಂ- ಹೆಂಗುಸರಿಗೆ, ಲಕ್ಷಣೈಃ - ಲಕ್ಷಣಶಾಸ್ತ್ರಗಳಿಂದ, ಯಾನಿಪದ್ಮಾನಿ - ಯಾವ ಪದ್ಮರೇಖೆಗಳು, ಸತ್ಯನಾಮಾನಿ - ಅನ್ವರ್ಥನಾಮಧೇಯಗಳಾಗಿ, ಉಕ್ತಾನಿ - ಹೇಳಲ್ಪಟ್ಟುವೋ, ತಾನಿ - ಆ ಕಮಲರೇಖೆ

ಕಾರಗಳುಳ್ಳ ರೇಖೆಗಳು ಅನೇಕವಾಗಿರುವುವು. ಇಂಥ ನನಗೂ ದುಸ್ಸಹಸೀಯವಾದ ಈ ದುಃಖವೊದಗಬೇಕಾದರೆ ಕಾರಣವೇನೋ ತಿಳಿಯದಾಗಿರುವುದು. ಇದೂ ಅಲ್ಲದೆ ವೈಧವ್ಯವನ್ನು ಹೊಂದುವ ಸ್ತ್ರೀಯರಲ್ಲಿರುವ ಯಾವ ವಿಧವಾದ ದುರ್ಲಕ್ಷಣಗಳೂ ನನ್ನಲ್ಲಿರುವುದಿಲ್ಲವು. ಅಕಟಕಟ !! ಇಂಥ ನನಗೆ ಈ ದುರ್ದಶೆಯು ಬರಲು ಕಾರಣವೇನು ! ಇಷ್ಟುಮಾತ್ರವಲ್ಲದೆ ಶುಭಾಶುಭ ಲಕ್ಷಣಗಳನ್ನು ಬೋಧಿಸುವ ಸಮಸ್ತ ಶಾಸ್ತ್ರಗಳೂ ಪದ್ಮರೇಖೆಗಳು ಪಾದ

$ ವೈಧವ್ಯಲಕ್ಷಣ:—

"ಯಸ್ಯಾಃ ಕನಿಷ್ಠಿಕಾಭೂಮಿಂ ನ ಗಚ್ಛಂತ್ಯಾಃ ಪರಿಸ್ಪೃಶೇತ್ ।
ಪತಿದ್ವಯಂ ನಿಹಂತ್ಯಾದ್ಯಾ ದ್ವಿತೀಯಂಚ ಪತಿತ್ರಯಂ ॥
ಏಕರೋಮಾ ರಾಜಪತ್ನೀ ದ್ವಿರೋಮಾಽತಿಸುಖಾನ್ವಿತಾ ।
ತ್ರಿರೋಮಾ ರೋಮಕೋಪೇಷು ಭವೇದ್ವೈಧವ್ಯ ದುಃಖಭಾಕ್ ॥"

ಯಾವಳ ಕನಿಷ್ಠಿಕೆಯು ನಡೆಯುವಾಗ ಭೂಮಿಯನ್ನು ಸ್ಪರ್ಶಿಸುವುದಿಲ್ಲವೊ ಅವಳು ಇಬ್ಬರು ಗಂಡಂದಿರನ್ನು ಕೊಲ್ಲುತ್ತಾಳೆ. ಎರಡನೆಯದು ಭೂಮಿಯನ್ನು ಸ್ಪರ್ಶಿಸದಿದ್ದರೆ ಅಂಥ ಹೆಂಗುಸು ಮೂವರು ಪತಿಗಳನ್ನು ಕೊಲ್ಲುವಳು. ಎಂದರೆ ವಿಧವೆಯಾಗುವಳು ಎಂದರ್ಥವು. ರೋಮಕೂಪಗಳಲ್ಲಿ ಒಂದೊಂದೇ ರೋಮವಿರುವವಳು ರಾಜಾಂಗನೆಯೂ, ಎರಡು ರೋಮಗಳಿರುವವಳು ನಿತ್ಯ ಸುಖಿನಿಯೂ, ಮೂರು ರೋಮಗಳಿರುವವಳು ವಿಧವೆಯಾಗಿ ನಿತ್ಯ ದುಃಖಿನಿಯೂ ಆಗುತ್ತಾಳೆ.

§ ಪದ್ಮಿನೀ ಶಬ್ದಾರ್ಥ:—

"ಪದಿ ಮಾ ಯಸ್ಯಾಸ್ಸಾ" ಕಾಲಿನಲ್ಲಿ ಪದ್ಮಾಕಾರವುಳ್ಳ ರೇಖೆಗಳುಳ್ಳವಳು.

ಸ್ಕಾಂದದಲ್ಲಿ:—"ರೋಮಹೀನೇ ಶುಭೇಸ್ನಿಗ್ಧೇ ಯಜ್ಜಂಘೇ ಕ್ರಮವರ್ತುಲೇ ।
ಸಾ ರಾಜಪತ್ನೀ ಭವತಿ ವಿಸಿರೇ ಸುಮನೋಹರೇ ।
ಸ್ನಿಗ್ಧಾಸ್ಸಮುನ್ನತಾ ಸ್ತಾಮ್ರಾ ವೃತ್ತಾಃ ಪಾದನಖಾಃ ಶುಭಾಃ ॥

ರೋಮಹೀನವೂ, ಮೃದುವೂ, ಮಂಗಳಕರವೂ, ವರ್ತುಲವೂ ಆದ ಜಂಘೆಗಳುಳ್ಳವಳಾಗಿಯೂ, ಮನೋಹರವಾದ ವಿಸಿರವುಳ್ಳವಳಾಗಿಯೂ ಇರುವ ಸ್ತ್ರೀಯು ರಾಜಪತ್ನಿಯಾಗುವಳು. ಮೃದುವಾಗಿಯೂ ಸಮುನ್ನತವಾಗಿಯೂ ಇರುವ ಪಾದನಖಗಳುಳ್ಳವಳು ಮಂಗಳಕರಳು" ಎಂದು ಹೇಳಿದೆ

ಕೇಶಾಸ್ಸೂಕ್ಷ್ಮಾಸ್ಸಮಾ ನೀಲಾ ಭ್ರುವೌಚಾಽಸಂಗತೇ ಮಮ| ವೃತ್ತೇಚಾಽರೋಮಶೇ ಜಂಘೇ ದಂತಾಶ್ಚಾಽವಿರಳಾ ಮಮ || ೯ || ಶಂಖೇ ನೇತ್ರೇ ಕರೌ ಪಾದೌ ಗುಲ್ಫಾವೂರೂಚ ಮೇ ಚಿತೌ | ಅನುವೃತ್ತನಖಾಸ್ಸ್ನಿಗ್ಧಾ ಸಮಾಶ್ಚಾಂಗುಳಯೋ ಮಮ ||೧೦|| ಸ್ತನೌಚಾಽವಿರಳೌ ಪೀನೌ ಮಮೇಮೌ ಮಗ್ನಚೂಚುಕೌ | ಮಗ್ನಾ ಚೋತ್ಸಂಗಿನೀ ನಾಭಿಃ ಪಾರ್ಶ್ವೋರಸ್ಕಾಶ್ಚ ಮೇ ಚಿತಾಃ ||೧೧|| ಮಮ ವರ್ಣೋ ಮಣಿನಿಭೋ

---

ಗಳು, ಅದ್ಯ - ಈಗ, ರಾಮೇ - ಶ್ರೀರಾಮನು, ನಿಹತೇ - ಹತನಾಗಲೂ, ಮೇ - ನನಗೆ, ವಿತಥಾನಿ - ವ್ಯರ್ಥಗಳಾಗಿ, ಭವಂತಿ - ಆದವು. || ೮ || ಮಮ - ನನ್ನ, ಕೇಶಾಃ - ಕುರುಳು, ಸೂಕ್ಷ್ಮಾಃ - ಮೃದುಗಳಾಗಿರುವವು, ಸಮಾಃ - ಸಮಗಳಾಗಿರುವವು, ನೀಲಾಃ - ಕಪ್ಪಾಗಿರುವ, ಭ್ರುವೌ - ಕಣ್ಣುಬ್ಬುಗಳು, ಅಸಂಗತೇ - ಒಂದಕ್ಕೊಂದು ಸೇರಿದುವುವಲ್ಲ, ಮಮ - ನನ್ನ, ಜಂಘೇ - ಜಂಘೆಗಳು, ಅರೋಮಶೇ - ರೋಮಗಳುಳ್ಳವುಗಳಲ್ಲ, ವೃತ್ತೇ - ಗುಂಡಗಿವೆ, ದಂತಾಶ್ಚ - ಹಲ್ಲುಗಳೂ, ಅವಿರಳಾಃ- ಒಂದಕ್ಕೊಂದು ಸೇರಿದವುಗಳಾಗಿವೆ, ನೇತ್ರೇ - ಕಣ್ಣುಗಳೂ, ಶಂಖೇ - ನೇತ್ರೋಪಾಂತಪಾರ್ಶ್ವಭಾಗಗಳೂ, ಕರೌ - ಹಸ್ತಗಳೂ, ಪಾದೌ - ಪಾದಗಳೂ, ಗುಲ್ಫೌ - ಗುಲ್ಫಗಳೂ, ಊರೂಚ - ತೊಡೆಗಳೂ, ಮೇ - ನನಗೆ, ಚಿತೌ - ವೃದ್ಧಿಹೊಂದಿವೆ, ಮಮ - ನನ್ನ, ಅಂಗುಳಯಃ - ಬೆರಳುಗಳು, ಅನುವೃತ್ತನಖಾಃ - ವರ್ತುಲಾಕಾರವಾದ ಉಗುರುಗಳುಳ್ಳವುಗಳು, ಸ್ನಿಗ್ಧಾಃ - ನುಣ್ಣಗಿರುವವುಗಳು, ಸಮಾಶ್ಚ - ವ್ಯತ್ಯಾಸವಿಲ್ಲದಿರುವವು, ಮಮ - ನನ್ನ, ಪೀನೌ - ಬಲಿತಿರುವ, ಇಮೌಸ್ತನೌ - ಈ ಕುಚಗಳು, ಅವಿರಳೌ - ಒಂದಕ್ಕೊಂದು ಸೇರಿರುವವು, ಮಗ್ನಚೂಚುಕೌ - ಒಳಗೆ ಸೇರಿರುವ ಸ್ತನಾಗ್ರಗಳುಳ್ಳವುಗಳು, ನಾಭಿಃ - ನಾಭಿಪ್ರದೇಶವು, ಮಗ್ನಾಚ | ಆಳವಾಗಿರುವದು, ಉತ್ಸಂಗಿನೀ - ಉನ್ನತವಾದ ಪಾರ್ಶ್ವಭಾಗವುಳ್ಳದು, ಪಾರ್ಶ್ವೋರಸ್ಕಾಃ - ಪಾರ್ಶ್ವಭಾಗಗಳೂ, ವಕ್ಷಸ್ಥಲಪ್ರದೇಶಗಳೂ, ಮೇ - ನನಗೆ, ಚಿತಾಃ - ಉನ್ನತಗಳಾಗಿವೆ, ಮಮ - ನನ್ನ, ವರ್ಣಃ - ದೇಹಕಾಂತಿಯು, ಮಣಿನಿಭಃ- ಮಣಿಕಾಂತಿಯುಳ್ಳದಾಗಿದೆ, ಅಂಗರುಹಾಣಿ - ರೋಮಗಳು, ಮೃದೂನಿ - ಮೃದುವಾಗಿವೆ,

---

ಗಳಲ್ಲಿರುವ ಹೆಂಗುಸರು ಸುಖಸಂಪದಗಳನ್ನೂ ಸೌಮಂಗಲ್ಯವನ್ನು ತಪ್ಪದೆ ಹೊಂದುತ್ತಾರೆಂದು ಸಾರುವುವು. ಅಯ್ಯೋ ! ಆ ಶಾಸ್ತ್ರಗಳೆಲ್ಲವೂ ಅಸತ್ಯಗಳಾಗಿ ಹೋದುವೆ ? ಹಾಗಾಗಲು ಕಾರಣವೇನು ? ನನ್ನ ತಲೆಗೂದಲುಗಳೆಲ್ಲವೂ ಸೂಕ್ಷ್ಮಗಳಾಗಿಯೂ, ಮೃದುವಾಗಿಯೂ, ಒಂದೇ ಸಮನಾಗಿಯೂ, ಕಪ್ಪಗೂ ಇರುವುವು. ನನ್ನ ಕಣ್ರೆಪ್ಪೆಗಳು ವಿರಳವಾಗಿವೆ. ನನ್ನ ಜಂಘೆಗಳು ಗುಂಡಾಗಿಯೂ, ರೋಮರಹಿತಗಳಾಗಿಯೂ ಇರುವುವು. ನನ್ನ ದಂತಗಳು ಗುಂಡಾಗಿಯೂ ಸುಂದರವಾಗಿಯೂ ಇರುವುವು. ನನ್ನ ನೇತ್ರೋಪಾಂತಪ್ರದೇಶಗಳೂ, ನೇತ್ರಗಳೂ, ಹಸ್ತಗಳೂ, ಪಾದಗಳೂ, ಊರುಪ್ರದೇಶಗಳೂ ಶುಭಲಕ್ಷಣಗಳುಳ್ಳವಾಗಿರುವುವು. ನನ್ನ ಉಗುರುಗಳು ಗುಂಡಾಗಿಯೂ ಮೃದುವಾಗಿಯೂ ಇರುವುವು. ನನ್ನ ಬೆರಳುಗಳೂ ಸಹ ಸಮಪ್ರಮಾಣಗಳುಳ್ಳವುಗಳಾಗಿವೆ. ನನ್ನ ಸ್ತನಗಳು ಬಲಿತು ದಟ್ಟವಾಗಿರುವುವು. ಸ್ತನಚೂಚಕಗಳು ಅಡಕವಾಗಿರುವುವು. ನನ್ನ ಪಾರ್ಶ್ವೋರಸ್ಕಗಳು ಬಹಳ ಉನ್ನತಗಳಾಗಿವೆ ; ನಾಭಿಪ್ರದೇಶವು ಗಂಭೀರವಾಗಿದೆ. ನನ್ನ ದೇಹಕಾಂತಿಯಾದರೋ ಮಣಿಕಾಂತಿಯನ್ನೊಳಗೊಂಡಿರುವುದು. ಅಂಗರುಹಗಳೆಲ್ಲವೂ ಮೃದುವಾಗಿವೆ. ನನ್ನ ಪದ

ನ್ಯದೂನ್ಯಂಗರುಹಾಣಿಚ । ಪ್ರತಿಷ್ಠಿತಾಂ ದ್ವಾದಶಭಿರ್ಮಾಮೂಚುಃ ಶುಭಲಕ್ಷಣಾಂ ॥ ೧೨ ॥ ಸಮಗ್ರಯವಮಚ್ಛಿದ್ರಂ ಪಾಣಿಪಾದಂಚ ವರ್ಣವತ್ । ಮಂದಸ್ಮಿತೇತ್ಯೇವಚ ಮಾಂ ಕನ್ಯಾಲಕ್ಷಣಿನೋ ದ್ವಿಜಾಃ ॥ ೧೩ ॥ ಅಧಿರಾಜ್ಯೇಽಭಿಷೇಕೋ ಮೇ ಬ್ರಾಹ್ಮಣೈಃ ಪತಿನಾಸಹ । ಕೃತಾಂತಕುಶಲೈರ್ಯುಕ್ತಂ ತತ್ಸರ್ವಂ ವಿತಥೀಕೃತಂ ॥ ೧೪ ॥ ಶೋಧಯಿತ್ವಾ ಜನಸ್ಥಾನಂ ಪ್ರವೃತ್ತಿಮುಪಲಭ್ಯಚ । ತೀರ್ತ್ವಾ ಸಾಗರಮಕ್ಷೋಭ್ಯಂ ಭ್ರಾತರೌ ಗೋಷ್ಪದೇ ಹತೌ ॥ ೧೫ ॥ ನನು ವಾರುಣಮಾಗ್ನೇಯಮೈಂದ್ರಂ ವಾಯವ್ಯಮೇವಚ । ಅಸ್ತ್ರಂ ಬ್ರಹ್ಮಶಿರಶ್ಚೈವ ರಾಘವೇ ಪ್ರತ್ಯಪದ್ಯತಾಂ.

---

ಶುಭಲಕ್ಷಣಾಂ - ಮಂಗಳಕರವಾದ ಲಕ್ಷಣಗಳುಳ್ಳ, ಮಾಂ - ನನ್ನನ್ನು, (ಲಕ್ಷಣಜ್ಞರು) ದ್ವಾದಶಭಿಃ-ಹನ್ನೆರಡು ಲಕ್ಷಣಗಳಿಂದ, ಪ್ರತಿಷ್ಠಿತಾಂ ಕೂಡಿರುವಳನ್ನಾಗಿ, ಊಚುಃ - ಹೇಳಿದರು. ॥ ೯-೧೨ ॥ ಸಮಗ್ರಯವಂ - ಸಂಪೂರ್ಣ ಯವಾಕಾರವಾದ ರೇಖೆಯುಳ್ಳದ್ದನ್ನಾಗಿ, ಅಚ್ಛಿದ್ರಂ - ದೊಡ್ಡ ಬೆರಳಿನ ಮಧ್ಯಪ್ರದೇಶವನ್ನೂ, ಪಾಣಿಪಾದಂಚ - ಹಸ್ತಪಾದಗಳನ್ನೂ, ವರ್ಣವತ್ - ವರ್ಣವುಳ್ಳವುಗಳನ್ನಾಗಿಯೂ, ಮಾಂ-ನನ್ನನ್ನು, ಮಂದಸ್ಮಿತೇತ್ಯೇವ-ಮುಗುಳ್ನಗೆಯುಳ್ಳವಳೆಂದು, ಕನ್ಯಾ....ಣಃ-ಸ್ತ್ರೀಲಕ್ಷಣಗಳನ್ನು ತಿಳಿದಿರುವ, ದ್ವಿಜಾಃ - ಬ್ರಾಹ್ಮಣರು, ಊಚುಃ - ಹೇಳಿದರು. ॥ ೧೩ ॥ ಮೇ - ನನಗೆ, ಪತಿನಾಸಹ - ಗಂಡನೊಡನೆ, ಅಧಿರಾಜ್ಯೇ - ಯೌವರಾಜ್ಯದಲ್ಲಿ, ಅಭಿಷೇಕಃ - ಪಟ್ಟಾಭಿಷೇಕವು, ಭವತಿ - ಆಗುತ್ತದೆಂದು, ಕೃತಾಂ....ಲೈಃ - ಜ್ಯೋತಿಶ್ಶಾಸ್ತ್ರದಲ್ಲಿ ಪಂಡಿತರಾದ, ಬ್ರಾಹ್ಮಣೈಃ - ಬ್ರಾಹ್ಮಣರಿಂದ, ಉಕ್ತಂ - ಹೇಳಲ್ಪಟ್ಟಿತು, ತತ್ಸರ್ವಂ - ಅದೆಲ್ಲವೂ, ವಿತಥೀಕೃತಂ - ವ್ಯರ್ಥವಾಗಿ ಮಾಡಲ್ಪಟ್ಟಿತು. ॥ ೧೪ ॥ ಜನಸ್ಥಾನಂ - ಪಂಚವಟೀತೀರವನ್ನು, ಶೋಧಯಿತ್ವಾ - ಶುದ್ಧಿಮಾಡಿ, ಪ್ರವೃತ್ತಿಂ - ವೃತ್ತಾಂತವನ್ನು, ಉಪಲಭ್ಯಚ - ತಿಳಿದು, ಅಕ್ಷೋಭ್ಯಂ - ಪ್ರವೇಶಿಸಲಸಾಧ್ಯವಾದ, ಸಾಗರಂ - ಕಡಲನ್ನು, ತೀರ್ತ್ವಾ - ದಾಟಿ, ಭ್ರಾತರೌ - ಅಣ್ಣತಮ್ಮಂದಿರೀರ್ವರೂ, ಗೋಷ್ಪದೇ - ಗೋವಿನ ಪಾದದಷ್ಟರಲ್ಲಿ, ಹತೌ - ಕೊಡೆಯಲ್ಪಟ್ಟರು ॥ ೧೫ ॥ ವಾರುಣಂ - ವಾರುಣಾಸ್ತ್ರವೂ, ಆಗ್ನೇಯಂ-ಆಗ್ನೇಯಾಸ್ತ್ರವೂ, ಐಂದ್ರಂ ಐಂದ್ರಾಸ್ತ್ರವೂ, ವಾಯವ್ಯಮೇವಚ-ವಾಯವ್ಯಾಸ್ತ್ರವೂ, ಬ್ರಹ್ಮಶಿರಶ್ಚೈವ - ಬ್ರಹ್ಮಶೀರ್ಷವೆಂಬ, ಅಸ್ತ್ರಂಚ - ಅಸ್ತ್ರವೂ, ರಾಘವೇ - ಶ್ರೀರಾಮನಲ್ಲಿ,

---

ತಲಗಳೂ, ಅಂಗುಳಗಳೂ ಭೂಪ್ರದೇಶವನ್ನು ಸರಿಯಾಗಿ ಸೋಕುವುವು. ಹೀಗೆ ನನ್ನ ದೇಹದಲ್ಲಿ ಅನೇಕ ಶುಭಲಕ್ಷಣಗಳಿರುವುವು. ॥೬-೧೨॥ ನನ್ನ ಪದತಲದಲ್ಲಿ ಯವಾಕಾರವಾದ ರೇಖೆಗಳೂ ಇರುವುವಲ್ಲದೆ, ಪಾಣಿಪಾದಗಳು ಅಚ್ಛಿದ್ರಗಳಾಗಿವೆ. ನನ್ನ ವದನದಲ್ಲಿ ಮಂದಸ್ಮಿತವಿರುವುದು. ಈ ವಿಚಾರಗಳೆಲ್ಲವನ್ನೂ ಕನ್ಯಾಲಕ್ಷಣಜ್ಞರಾದ ಬ್ರಾಹ್ಮಣೋತ್ತಮರು ನನಗೆ ಹೇಳಿದರು. ಜ್ಯೋತಿಶ್ಶಾಸ್ತ್ರವೇತ್ತರಲ್ಲಿ ಅಗ್ರಣಿಯರಾದವರನೇಕರು ನಾನು ನನ್ನ ಪತಿಯೊಡನೆ ಯೌವರಾಜ್ಯದಲ್ಲಿ ಅಭಿಷಿಕ್ತಳಾಗುವೆನೆಂದು ಹೇಳಿದರು. ಈಗ ಅವರೆಲ್ಲರ ಮಾತುಗಳೂ ವ್ಯರ್ಥವಾಗಿ ಹೋದುವು. ಅಯ್ಯಯೋ! ಶ್ರೀರಾಮಲಕ್ಷ್ಮಣರು ಜನಸ್ಥಾನವೆಲ್ಲವನ್ನೂ ತಿರುಗಿ, ಸಕಲ ದೇಶಗಳಲ್ಲಿಯೂ ನನ್ನನ್ನು ಹುಡುಕಿದರು; ದಾಟಲಶಕ್ಯವಾದ ಮಹಾಸಾಗರವನ್ನು ದಾಟಿ ಕಡೆಗೆ ಗೋಷ್ಪದದಲ್ಲಿ ಹತರಾಗಿ ಹೋದರೇ! ಅಕ್ಕಟ! ವಾರುಣ, ಆಗ್ನೇಯ, ಐಂದ್ರ, ವಾಯವ್ಯ, ಬ್ರಹ್ಮಶಿರ ಮೊದಲಾದ ಮಹಾಸ್ತ್ರಗಳು ಈ ಶ್ರೀರಾಮಲಕ್ಷ್ಮಣರಿಗೆ ಸ್ಮರಣೆಗೆ ಬಾರದೆ ಹೋಗಲಿಲ್ಲವೇನೋ! ಅಯ್ಯೋ! ಅದೃಶ್ಯನಾಗಿ

|| ೧೬ || ಅದೃಶ್ಯಮಾನೇನ ರಣೇ ಮಾಯಯಾ ವಾಸವೋಪಮೌ । ಮಮ
ನಾಥಾವನಾಥಾಯಾ ನಿಹತೌ ರಾಮಲಕ್ಷ್ಮಣೌ || ೧೭ || ನಹಿ ದೃಷ್ಟಿಪಥಂ
ಪ್ರಾಪ್ಯ ರಾಘವಸ್ಯ ರಣೇ ರಿಪುಃ । ಜೀವನ್ ಪ್ರತಿನಿವರ್ತೇತ ಯದ್ಯಪಿ ಸ್ಯಾನ್ಮನೋ
ಜವಃ || ೧೮ || ನಕಾಲಸ್ಯಾತಿಭಾರೋಽಸ್ತಿ ಕೃತಾಂತಶ್ಚ ಸುದುರ್ಜಯಃ । ಯತ್ರ
ರಾಮ ಸ್ಸಹಭ್ರಾತ್ರಾ ಶೇತೇ ಯುಧಿ ನಿಪಾತಿತಃ || ೧೯ || ನ ಶೋಚಾಮಿ ತಥಾ
ರಾಮಂ ಲಕ್ಷ್ಮಣಂಚ ಮಹಾಬಲಂ । ನಾತ್ಮಾನಂ ಜನನೀಂ ವಾಪಿ ಯಥಾ
ಶ್ವಶ್ರೂಂ ತಪಸ್ವಿನೀಂ || ೨೦ || ಸಾಽನುಚಿಂತಯತೇ ನಿತ್ಯಂ ಸಮಾಪ್ತವ್ರತಮಾ

---

ಪ್ರತ್ಯ .. ನು - ಪ್ರತಿಪತ್ತಿಯನ್ನು ಹೊಂದಿದ್ದವಷ್ಟೆ. || ೧೬ || ಮಾಯಯಾ - ಮಾಯಾಶಕ್ತಿಯಿಂದ, ರಣೇ - ಕಾಳಗದಲ್ಲಿ, ಅದೃಶ್ಯಮಾನೇನ - ಕಾಣಿಸಲ್ಪಡದಿರುವ ಇಂದ್ರಜಿತ್ತುವಿನಿಂದ, ವಾಸವೋಪಮೌ - ದೇವೇಂದ್ರನಿಗೆ ಸಮಾನರಾದ, ಅನಾಥಾಯಾಃ - ನಾಥರಹಿತಳಾದ, ಮಮ - ನನಗೆ, ನಾಥೌ - ಪೋಷಕರಾದ, ರಾಮಲಕ್ಷ್ಮಣೌ - ರಾಮಲಕ್ಷ್ಮಣರೀರ್ವರೂ, ನಿಹತೌ - ಹೊಡೆಯಲ್ಪಟ್ಟರು. ||೧೭|| ರಿಪುಃ - ಶತ್ರುವು, ಮನೋಜವೋಪಿ - ಮನಸ್ಸಿನಂತೆ ವೇಗವುಳ್ಳವನು, ಸ್ಯಾದ್ಯದಿ-ಆಗಿದ್ದರೂ, ರಣೇ - ಕಾಳಗದಲ್ಲಿ, ರಾಘವಸ್ಯ - ಶ್ರೀರಾಮನ, ದೃಷ್ಟಿಪಥಂ - ದೃಷ್ಟಿಗೆ ಗೋಚರತ್ವವನ್ನು, ಪ್ರಾಪ್ಯ - ಹೊಂದಿ, ಜೀವನ್ - ಬದುಕಿ, ನಪ್ರ....ತ - ಹಿಂದಕ್ಕೆ ತಿರುಗಲಾರನು. || ೧೮ || ಕಾಲಸ್ಯ - ಯಮನಿಗೆ, ಅತಿಭಾರಃ - ಅಶಕ್ಯಾರ್ಥವು, ನಾಸ್ತಿ - ಇಲ್ಲವು, ಕೃತಾಂತಃ - ಯಮನು, ಸುದುರ್ಜಯಃ - ಜಯಿಸಲ ಸಾಧ್ಯನು, ಯತ್ರ - ಯಾವ ಕಾಲದಲ್ಲಿ, ರಾಮಃ - ಶ್ರೀರಾಮನು, ಭ್ರಾತ್ರಾಸಹ - ತಮ್ಮನೊಡನೆ, ಯುಧಿ - ಕಾಳಗದಲ್ಲಿ, ನಿಪಾತಿತಃ - ಬೀಳಿಸಲ್ಪಟ್ಟವನಾಗಿ, ಶೇತೇ - ಮಲಗಿದ್ದಾನೆಯೋ. || ೧೯ || ತಪಸ್ವಿನೀಂ - ಸಂಕಟಗೊಂಡಿರುವ, ಶ್ವಶ್ರೂಂ - ನಮ್ಮ ಅತ್ತೆಯನ್ನು ಕುರಿತು, ಯಥಾ - ಹೇಗೆ, ಶೋಚಾಮಿ - ದುಃಖಿಸುತ್ತೇನೆಯೋ, ತಥಾ - ಹಾಗೆ, ರಾಮಂ - ಶ್ರೀರಾಮನನ್ನು ಕುರಿತು, ನಶೋಚಾಮಿ - ದುಃಖಿಸಲಾರೆನು, ಮಹಾಬಲಂ - ಬಹಳ ಬಲವಂತನಾದ, ಲಕ್ಷ್ಮಣಂಚ - ಲಕ್ಷ್ಮಣನನ್ನು, ಕುರಿತು, ನಶೋಚಾಮಿ - ದುಃಖಿಸಲಾರೆನು, ಆತ್ಮಾನಂ - ನನ್ನನ್ನು ಕುರಿತು, ಜನನೀಂವಾಪಿ - ನಮ್ಮ ತಾಯಿಯನ್ನು ಕುರಿತಾಗಲಿ, ನಶೋಚಾಮಿ - ದುಃಖಿಸಲಾರೆನು. || ೨೦ || ಸಾ - ನಮ್ಮ

---

ಯುದ್ಧಮಾಡುತ್ತಿರುವ ಇಂದ್ರಜಿತ್ತುವಿನ ಮಾಯೆಯಿಂದ ಮಹೇಂದ್ರನಿಗೆ ಸಮಾನವಾದ ಪರಾಕ್ರಮವುಳ್ಳ ಶ್ರೀರಾಮಲಕ್ಷ್ಮಣರು ಸಂಹೃತರಾಗಿ ಹೋದರು. ಯುದ್ಧದಲ್ಲಿ ರಘುಕುಲೋದ್ಭವನಾದ ಶ್ರೀರಾಮನ ದೃಷ್ಟಿಪಥವನ್ನು ಹೊಂದಿದ ಶತ್ರುವಾವನೂ ಜೀವಸಹಿತವಾಗಿ ಹಿಂತಿರುಗಲಾರನು. ಶ್ರೀರಾಮನಿಗೆ ಮನೋಜಯವಿದ್ದಲ್ಲಿ ಅವನನ್ನೆದುರಿಸಿದ ಶತ್ರುವಾವನೂ ಬದುಕಲಾರನು. || ೧೭ ೧೮ || ಪ್ರಕೃತದಲ್ಲಿ ಶ್ರೀರಾಮಲಕ್ಷ್ಮಣರು ರಣರಂಗದಲ್ಲಿ ಸಂಹೃತರಾಗಿರುವುದನ್ನು ನೋಡಿದರೆ ದೈವಕ್ಕೆ ಶಕ್ಯವಿಲ್ಲದ ಮಹತ್ಕಾರ್ಯವಾವುದೂ ಇಲ್ಲವೆಂದು ತೋರುವುದು. ನಾನು ಶ್ರೀರಾಮಲಕ್ಷ್ಮಣರನ್ನು ಕುರಿತಾಗಲಿ, ನನ್ನ ತಾಯಿಯನ್ನು ಕುರಿತಾಗಲಿ ವ್ಯಸನಪಡುತ್ತಿಲ್ಲ. ನಾನು ನನ್ನನ್ನೂ, ನನ್ನ ಅತ್ತೆಯಾದ ಕೌಸಲ್ಯಾದೇವಿಯನ್ನು ಕುರಿತೂ ಇಷ್ಟು ವ್ಯಸನಪಡುತ್ತಿರುವೆನು. ಪೂಜ್ಯಳಾದ ಕೌಸಲ್ಯಾದೇವಿಯು ಎಲ್ಲಕಾಲಗಳಲ್ಲಿಯೂ, ವನವಾಸವ್ರತವನ್ನು ಮುಗಿಸಿ, ನನ್ನೊಡನೆಯೂ, ಲಕ್ಷ್ಮಣಸ್ವಾಮಿಯೊಡನೆಯೂ ಅಯೋಧ್ಯೆಗೆ ಹಿಂತಿರುಗುವ ಶ್ರೀರಾಮನನ್ನು ಎಂದಿಗೆ ಕಾಣುವೆನೋ ಎಂದು ತಹತಹಪಡುತ್ತಿರುವಳು. ಆದುದರಿಂದ ನಾನು ಆಕೆಯನ್ನು ಕುರಿತೇ ವ್ಯಸನಪಡುತ್ತಿರುವೆನು.'' || ೧೯–೨೦ || ಈ ರೀತಿ ಮಹಾ ವ್ಯಸನಸಂತಪ್ತಳಾಗಿ ವಿಲಪಿಸುತ್ತಿರುವ ಸೀತಾ

ಗತಂ । ಕದಾ ದ್ರಕ್ಷ್ಯಾಮಿ ಸೀತಾಂಚ ಲಕ್ಷ್ಮಣಂಚ ಸರಾಘವಂ ॥ ೨೧ ॥ ಪರಿದೇವಯಮಾನಾಂ ತಾಂ ರಾಕ್ಷಸೀ ತ್ರಿಜಟಾಽಬ್ರವೀತ್ । "ಮಾ ವಿಷಾದಂ ಕೃಥಾ ದೇವಿ! ಭರ್ತಾಽಯಂ ತವ ಜೀವತಿ ॥೨೨॥ ಕಾರಣಾನಿಚ ಪಶ್ಯಾಮಿ ಮಹಾಂತಿ ಸದೃಶಾನಿಚ। ಯಥೇಮೌ ಜೀವತೋ ದೇವಿ! ಭ್ರಾತರೌ ರಾಮಲಕ್ಷ್ಮಣೌ ॥ ೨೩ ॥ ನಹಿ ಕೋಪಪರೀತಾನಿ ಹರ್ಷಪರ್ಯುತ್ಸುಕಾನಿಚ । ಭವಂತಿ ಯುಧಿ ಯೋಧಾನಾಂ ಮುಖಾನಿ ನಿಹತೇ ಪತೌ ॥ ೨೪ ॥ ಇದಂ ವಿಮಾನಂ ವೈದೇಹಿ! ಪುಷ್ಪಕಂ ನಾಮ ನಾಮತಃ । ದಿವ್ಯಂ ತ್ವಾಂ ಧಾರಯೇನ್ನೈವಂ ಯದ್ಯೇತೌ ಗತಜೀವಿತೌ ॥೨೫॥ ಹತವೀರಪ್ರಧಾನಾ

ಅತ್ತೆಯಾದ ಕೌಸಲ್ಯಾದೇವಿಯು, ಸಮಾಪ್ತವ್ರತಂ - ಮುಗಿಸಲ್ಪಟ್ಟ ಹದಿನಾಲ್ಕು ವರುಷಗಳ ವನವಾಸ ನಿಯಮವುಳ್ಳ, ಆಗತಂ ಬಂದಿರುವ, ಸರಾಘವಂ-ಶ್ರೀರಾಮನೊಡಗೂಡಿದ, ಲಕ್ಷ್ಮಣಂಚ - ಲಕ್ಷ್ಮಣನನ್ನೂ, ಸೀತಾಂಚ - ಸೀತಾದೇವಿಯನ್ನೂ, ಕದಾ - ಯಾವ ಕಾಲದಲ್ಲಿ, ದ್ರಕ್ಷ್ಯಾಮಿ - ನೋಡುವೆನೋ, ಇತಿ - ಇಂತೆಂದು, ನಿತ್ಯಂ - ನಿರಂತರವೂ, ಅನುಚಿಂತಯತೇ - ಆಲೋಚಿಸುತ್ತಿದ್ದಾಳೆ. ॥ ೨೧ ॥ ಇತಿ - ಇಂತೆಂದು, ಪರಿ....ನಾಂ - ಪರಿತಪಿಸುತ್ತಿರುವ, ತಾಂ - ಆ ಸೀತಾದೇವಿಯನ್ನು ಕುರಿತು, ತ್ರಿಜಟಾರಾಕ್ಷಸೀ - ತ್ರಿಜಟೆಯೆಂಬ ರಕ್ಕಸಿಯು, ಅಬ್ರವೀತ್ - ನುಡಿದಳು, ಹೇ ದೇವೀ - ಎಲೌ ಸೀತಾದೇವಿಯೇ, ಭ್ರಾತರೌ - ಅಣ್ಣತಮ್ಮಂದಿರಾದ, ಇಮೌರಾಮಲಕ್ಷ್ಮಣೌ - ಈ ರಾಮಲಕ್ಷ್ಮಣರು, ಯಥಾ - ಹೇಗೆ, ಜೀವತಃ - ಬದುಕಿರುವರೋ, ತಥಾ - ಹಾಗೆಯೇ, ಮಹಾಂತಿ - ದೊಡ್ಡದಾದ, ಸದೃಶಾನಿ - ಯೋಗ್ಯಗಳಾದ, ಕಾರಣಾನಿ - ಕಾರಣಗಳನ್ನು, ಪಶ್ಯಾಮಿ - ಕಾಣುತ್ತೇನೆ. ॥ ೨೩ ॥ ಯುಧಿ - ಕಾಳೆಗದಲ್ಲಿ, ಪತೌ - ಗಂಡನು, ನಿಹತೇ - ಹೊಡೆಯಲ್ಪಡಲು, ಯೋಧಾನಾಂ - ಭಟರ, ಮುಖಾನಿ - ಮುಖಗಳು, ಕೋಪಪರೀತಾನಿ - ಕೋಪದಿಂದ ವ್ಯಾಪ್ತಗಳು, ನಹಿ - ಆಗುವದಿಲ್ಲವಷ್ಟೆ, ಹರ್ಷ....ಚ - ಸಂತೋಷದಿಂದ ಪ್ರಸನ್ನಗಳಾದುವು, ನಹಿ - ಆಗುವದಿಲ್ಲವಷ್ಟೆ. ॥ ೨೪ ॥ ಹೇ ವೈದೇಹೀ - ಎಲೌ ಸೀತಾದೇವಿಯೇ, ಏತೌ - ಈ ಶ್ರೀರಾಮಲಕ್ಷ್ಮಣರು, ಗತ ...ಟಿ-ಪ್ರಾಣಗಳಿಲ್ಲದವರಾದರೆ, ನಾಮತಃ - ಹೆಸರಿನಿಂದ, ಪುಷ್ಪಕಂನಾಮ - ಪುಷ್ಪಕವೆಂದ ಪ್ರಸಿದ್ಧವಾದ, ದಿವ್ಯಂ - ದೇವತಾಸಂಬಂಧವಾದ, ಇದಂವಿಮಾನಂ - ಈ ವಿಮಾನವು, ತ್ವಾಂ - ನಿನ್ನನ್ನು, ಏವಂ - ಈ ಪರಿಯಾಗಿ, ನಧಾರಯೇತ್ - ಧರಿಸಲಾರದು. ॥ ೨೫ ॥ ಸಂಖ್ಯೇಷು - ಕಾಳೆಗಗಳಲ್ಲಿ, ಹತ....ನಾ - ಹೊಡೆಯಲ್ಪಟ್ಟ ಪ್ರಧಾನನಾಯಕನುಳ್ಳ, ಸೇನಾ - ಸೈನ್ಯವು, ಹತೋತ್ಸಾಹಾ - ಹತವಾದ ಉತ್ಸಾಹ

ದೇವಿಯನ್ನು ನೋಡಿ ಆಕೆಯನ್ನು ಸಮಾಧಾನಗೊಳಿಸುತ್ತ ತ್ರಿಜಟೆಯೆಂಬ ರಾಕ್ಷಸಾಂಗನೆಯು, "ಅಮ್ಮಾ ಜಾನಕಿಯೇ! ನೀನು ದುಃಖಿಸಬಾರದು. ನಿನ್ನ ಭರ್ತನಾದ ಶ್ರೀರಾಮಮೂರ್ತಿಯು ನಿಜವಾಗಿಯೂ ಜೀವಂತನಾಗಿರುವನು. ಅವನು ಮೃತನಾಗಿಲ್ಲ. ಆತನು ಬದುಕಿರುವನೆಂಬುದಕ್ಕೆ ಅನೇಕ ಕಾರಣಗಳಿರುವುವು. ಸೀತೇ! ಶ್ರೀರಾಮಲಕ್ಷ್ಮಣರು ನಿಜವಾಗಿಯೂ ಬದುಕಿರುವರು. ನಿನ್ನ ಭರ್ತನಾದ ಶ್ರೀರಾಮಚಂದ್ರನು ರಣಭೂಮಿಯಲ್ಲಿ ಪವಳಿಸಿರುವುದರಿಂದ ವಾನರಯೂಥನಾಥರೆಲ್ಲರೂ ಕ್ರೋಧೋದ್ವೇಗವುಳ್ಳವರಾಗಿರುವರು. ಅವರ ಮುಖಗಳು ಉತ್ಸಾಹಸೂಚಕಗಳಾಗಿರುವುದನ್ನು ನೋಡಿದೆಯಾ? ಇದೂ ಅಲ್ಲದೆ ಈ ಶ್ರೀರಾಮಲಕ್ಷ್ಮಣರು ನಿಜವಾಗಿಯೂ ಈ ರಣಭೂಮಿಯಲ್ಲಿ ಮೃತರಾಗಿದ್ದರೆ ದಿವ್ಯವಾದ ಈ ಪುಷ್ಪಕವಿಮಾನವು ನಿನ್ನನ್ನು ಭರಿಸುತ್ತಿರಲಿಲ್ಲ. ॥ ೨೧-೨೫ ॥ ಎಲೌ ದೇವೀ! ಈ ವಾನರಸೈನ್ಯವೆಲ್ಲವೂ ಈಗ ಸಾಗರದಲ್ಲಿ ಧ್ವಜಪಟವಿಲ್ಲದ ನಾವೆಯಂತೆ, ಉತ್ಸಾಹಹೀನವಾಗಿಯೂ,

ಹತೋತ್ಸಾಹಾ ನಿರುದ್ಯಮಾ । ಸೇನಾ ಭ್ರಮತಿ ಸಂಖ್ಯೇಷು ಹತಕರ್ಣೇವ ನೌರ್ಜಲೇ ॥ ೨೬ ॥ ಇಯಂ ಪುನರಸಂಭ್ರಾಂತಾ ನಿರುದ್ವಿಗ್ನಾ ತರಸ್ವಿನೀ । ಸೇನಾ ರಕ್ಷತಿ ಕಾಕುತ್ಸ್ಥೌ ಮಯಾ ಪ್ರೀತ್ಯಾ ನಿವೇದಿತೌ ॥೨೭॥ ಸಾತ್ವಂ ಭವ ಸುವಿಸ್ರಬ್ಧಾ ಅನುಮಾನೈಸ್ಸುಖೋದಯೈಃ । ಅಹತೌ ಪಶ್ಯ ಕಾಕುತ್ಸ್ಥೌ ಸ್ನೇಹಾದೇತದ್ಬ್ರವೀಮಿ ತೇ ॥ ೨೮ ॥ ಅನೃತಂ ನೋಕ್ತಪೂರ್ವಂ ಮೇ ನಚ ವಕ್ಷ್ಯೇ ಕದಾಚನ । ಚಾರಿತ್ರ ಸುಖಶೀಲತ್ವಾತ್ಪ್ರವಿಷ್ಟಾಸಿ ಮನೋ ಮಮ ॥ ೨೯ ॥ ನೇಮೌ ಶಕ್ಯೌ ರಣೇ ಜೇತುಂ ಸೇಂದ್ರೈರಪಿ ಸುರಾಸುರೈಃ । ತಾದೃಶಂ ದರ್ಶನಂ ದೃಷ್ಟ್ವಾ ಮಯಾಚಾವೇದಿತಂ

---

ವುಳ್ಳುದಾಗಿಯೂ, ನಿರುದ್ಯಮಾ - ಉದ್ಯೋಗರಹಿತವಾಗಿಯೂ, ಜಲೇ - ನೀರಿನಲ್ಲಿ, ಹತಕರ್ಣಾ - ಹೊಡೆಯಲ್ಪಟ್ಟ ನಾವಿಕನುಳ್ಳ, ನೌರಿವ - ನಾವೆಯಂತೆ, ಭ್ರಮತಿ - ಭ್ರಾಂತವಾಗುತ್ತದೆ. ॥ ೨೬ ॥ ಇಯಂ ಸೇನಾ ಪುನಃ - ಈ ಕಪಿಸೈನ್ಯವು, ಅಸಂಭ್ರಾಂತಾ - ಭ್ರಾಂತಿಯಿಲ್ಲದುದಾಗಿಯೂ, ನಿರುದ್ವಿಗ್ನಾ - ಭಯರಹಿತವಾಗಿಯೂ, ತರಸ್ವಿನೀ - ವೇಗವುಳ್ಳುದಾಗಿಯೂ ಆಗಿ, ಪ್ರೀತ್ಯಾ - ವಿಶ್ವಾಸದಿಂದ, ಮಯಾ - ನನ್ನಿಂದ, ನಿವೇದಿತೌ - ಪ್ರಾಣದಿಂದ ಯುಕ್ತರಾಗಿ ತಿಳಿಸಲ್ಪಟ್ಟ, ಕಾಕುತ್ಸ್ಥೌ - ರಾಮಲಕ್ಷ್ಮಣರನ್ನು, ರಕ್ಷತಿ - ಸಂರಕ್ಷಣೆ ಮಾಡುತ್ತದೆ. ॥ ೨೭ ॥ ಸಾತ್ವಂ - ಆ ಈ ನೀನು, ಸುಖೋದಯೈಃ-ಸುಖಸೂಚಕಗಳಾದ, ಅನುಮಾನೈಃ-ಅನುಮಾನಗಳಿಂದ, ಸುವಿಸ್ರಬ್ಧಾ-ಚನ್ನಾಗಿ ನಂಬಿಕೆಯುಳ್ಳವಳು, ಭವ - ಆಗು, ಕಾಕುತ್ಸ್ಥೌ - ರಾಮಲಕ್ಷ್ಮಣರನ್ನು, ಅಹತೌ - ಹೊಡೆಯಲ್ಪಟ್ಟವರಲ್ಲದವರನ್ನಾಗಿ, ಪಶ್ಯ - ತಿಳಿದುಕೋ, ಸ್ನೇಹಾತ್ - ಮೈತ್ರೀಭಾವದಿಂದ, ಏತತ್ - ಈ ರಹಸ್ಯವನ್ನು, ತೇ - ನಿನಗೆ, ಬ್ರವೀಮಿ - ಹೇಳುತ್ತೇನೆ, ಮೇ - ನನ್ನಿಂದ, ಅನೃತಂ - ಸಟೆಮಾತು, ನೋಕ್ತಪೂರ್ವಂ - ಪೂರ್ವದಲ್ಲಿ ಎಂದಿಗೂ ಹೇಳಲ್ಪಡಲಿಲ್ಲ, ಕದಾಚನ - ಎಂದಿಗೂ, ನವಕ್ಷ್ಯೇ - ಹೇಳಲಾರೆನು, ಚಾರಿ....ತ್ - ಪಾತಿವ್ರತ್ಯವೇ ಸುಖಕರವಾದ ಸ್ವಭಾವವುಳ್ಳವಳಾದಕಾರಣ, ಮಮ - ನನ್ನ, ಮನಃ - ಮನಸ್ಸನ್ನು, ಪ್ರವಿಷ್ಟಾ - ಹೊಕ್ಕಿದವಳು, ಅಸಿ - ಆಗಿರುವೆ. ॥ ೨೯ ॥ ಇಮೌ - ಈ ರಾಮಲಕ್ಷ್ಮಣರು, ರಣೇ - ಕಾಳಗದಲ್ಲಿ, ಸೇಂದ್ರೈಃ - ದೇವೇಂದ್ರನಿಂದೊಡಗೂಡಿದ, ಸುರಾಸುರೈರಪಿ - ದೇವರಾಕ್ಷಸರಿಂದಲೂ, ಜೇತುಂ - ಜಯಿಸುವುದಕ್ಕೆ, ನಶಕ್ಯೌ - ಸಾಧ್ಯರಲ್ಲವು, ತಾದೃಶಂ - ಅಂತಹುದಾದ, ದರ್ಶನಂ - ಸೈನ್ಯದ ಮುಖಪ್ರಸಾದವನ್ನು, ದೃಷ್ಟ್ವಾ - ಕಂಡು, ಮಯಾ - ನನ್ನಿಂದ,

---

ಉದ್ಯೋಗರಹಿತವಾಗಿಯೂ, ಮಡಿದುಹೋದ ವೀರನಾಯಕರುಳ್ಳುದಾಗಿಯೂ ಆಗಿ ರಣರಂಗದಲ್ಲಿ ಅಲ್ಲಲ್ಲಿ ಚದುರಿ ಸಂಚರಿಸುತ್ತಿರುವಂತೆ ಕಾಣುವುದು. ಆದರೂ ಈ ಸೇನೆಯೆಲ್ಲವೂ ಉದ್ವೇಗವಿಲ್ಲದ್ದಾಗಿ ಕಾಕುತ್ಸ್ಥನನ್ನು ಸುತ್ತುವರೆದು ಸಂರಕ್ಷಿಸುತ್ತಿರುವುದು. ದೇವೀ! ಈ ವಿಷಯಗಳೆಲ್ಲವನ್ನೂ ನಾನು ನಿನ್ನಲ್ಲಿನ ಪ್ರೇಮದಿಂದ ಅರಿಕೆ ಮಾಡಿರುವೆನು. ನೀನೀ ಶುಭನಿಮಿತ್ತಗಳೆಲ್ಲವನ್ನೂ ಮನಸ್ಸಿಗೆ ತಂದುಕೊಂಡು ಧೈರ್ಯವನ್ನವಲಂಬಿಸು. ಶ್ರೀರಾಮಲಕ್ಷ್ಮಣರು ಈ ಯುದ್ಧದಲ್ಲಿ ಖಂಡಿತವಾಗಿಯೂ ಸಂಹೃತರಾಗಿಲ್ಲ. ನಿನ್ನಲ್ಲಿ ನನಗಿರುವ ಸ್ನೇಹದಿಂದ ನಾನು ತಥ್ಯವಾದ ಈ ವಿಚಾರವನ್ನು ತಿಳಿಸಿರುವೆನು. ನಾನಿದುವರೆಗೂ ನಿನಗೆ ಯಾವ ಅಬದ್ಧ ವಚನವನ್ನೂ ನುಡಿದಿಲ್ಲವು. ಅದನ್ನು ನೀನು ಅರಿತಿರುವೆ. ದೇವೀ!! ನೀನು ಅತ್ಯಂತ ಶುಭಚರಿತ್ರೆಯುವಳಾದುದರಿಂದ ನನಗೆ ನಿನ್ನಲ್ಲಿ ಅತ್ಯಧಿಕ ಪ್ರೇಮವಿರುವುದು. ಎಲೌ ಮಂಗಳಾಂಗಿಯೇ! ಶ್ರೀರಾಮಲಕ್ಷ್ಮಣರನ್ನು ದೇವದಾನವರೆಲ್ಲರೂ ಒಂದಾಗಿ ಸೇರಿ

ತವ ||೩೦|| ಇದಂಚ ಸುಮಹಚ್ಚಿಹ್ನಂ ಶನೈಃ ಪಶ್ಯಸ್ವ ಮೈಥಿಲಿ ! | ನಿಸ್ಸಂಜ್ಞಾವಪ್ಯುಭಾವೇತೌ ನೈವ ಲಕ್ಷ್ಮೀರ್ವಿಯುಜ್ಯತೇ || ೩೦ || ಪ್ರಾಯೇಣ ಗತಸತ್ವಾನಾಂ ಪುರುಷಾಣಾಂ ಗತಾಯುಷಾಂ | ದೃಶ್ಯಮಾನೇಷು ವಕ್ತ್ರೇಷು ಪರಂ ಭವತಿ ವೈಕೃತಂ ||೩೨|| ತ್ಯಜ ಶೋಕಂಚ ಮೋಹಂಚ ದುಃಖಂಚ ಜನಕಾತ್ಮಜೇ ! | ರಾಮಲಕ್ಷ್ಮಣಯೋರರ್ಥೇ ನಾಽದ್ಯ ಶಕ್ಯಮಜೀವಿತುಂ" ||೩೩|| ಶ್ರುತ್ವಾತು ವಚನಂ ತಸ್ಯಾಸ್ಸೀತಾ ಸುರಸುತೋಪಮಾ | ಕೃತಾಂಜಲಿರುವಾಚೇದಮೇವಮಸ್ತ್ವಿತಿ ಮೈಥಿಲೀ || ೩೪ || ವಿಮಾನಂ ಪುಷ್ಪಕಂ ತತ್ತು ಸನ್ನಿವರ್ತ್ಯ ಮನೋಜವಂ | ದೀನಾ ತ್ರಿಜಟಯಾ ಸೀತಾ

ತವ - ನಿನಗೆ, ಆವೇದಿತಂ - ತಿಳಿಸಲ್ಪಟ್ಟಿತು, ಹೇ ಮೈಥಿಲೀ - ಎಲೌ ಸೀತಾದೇವಿಯೇ, ಸುಮಹತ್ - ಬಹಳ ದೊಡ್ಡದಾದ, ಇದಂಚಿಹ್ನಂಚ - ಈ ಗುರುತನ್ನೂ, ಶನೈಃ - ಮೆಲ್ಲನೆ, ಪಶ್ಯಸ್ವ - ನೋಡು. || ೩೦ || ನಿಸ್ಸಂಜ್ಞಾವಪಿ - ಪ್ರಜ್ಞೆಯಿಲ್ಲದವರಾದರೂ, ಏತೌವುಭೌ - ಈ ರಾಮಲಕ್ಷ್ಮಣರಿಬ್ಬರನ್ನೂ, ಲಕ್ಷ್ಮೀಃ - ಲಕ್ಷ್ಮಿಯು, (ಅಂದರೆ ಮುಖಕಾಂತಿಯು) ನವಿಯುಜ್ಯತೇ - ಬಿಡಲಿಲ್ಲವು, ಪ್ರಾಯೇಣ - ಬಹುತರವಾಗಿ, ಗತಸತ್ವಾನಾಂ - ಹೋದ ಪ್ರಾಣಗಳುಳ್ಳ, ಗತಾಯುಷಾಂ - ಕಳೆದುಹೋದ ಆಯುಸ್ಸುಳ್ಳ, ಪುರುಷಾಣಾಂ - ಮನುಷ್ಯರ, ದೃಶ್ಯಮಾನೇಷು - ಕಾಣಲ್ಪಡುತ್ತಿರುವ, ವಕ್ತ್ರೇಷು - ಮುಖಗಳಲ್ಲಿ, ವೈಕೃತಂ - ವಿಕಾರವು, ಪರಂ - ಬಹಳವಾಗಿ. ಭವತಿ - ಆಗುತ್ತದೆ. || ೩೧-೩೨ || ಹೇ ಜನಕಾತ್ಮಜೇ - ಎಲೌ ಜನಕರಾಯನ ಮಗಳೇ, ರಾಮ....ರ್ಥೇ - ರಾಮಲಕ್ಷ್ಮಣರ ನಿಮಿತ್ತವಾಗಿ, ಅದ್ಯ - ಈಗ, ಜೀವಿತುಂ - ಬದುಕುವುದಿಲ್ಲೆಂದು ಹೇಳುವುದಕ್ಕಾಗಿ, ನಶಕ್ಯಂ - ಅರ್ಹವಲ್ಲವು, ಶೋಕಂ - ಮನೋವ್ಯಥೆಯನ್ನೂ, ಮೋಹಂಚ - ಮೋಹವನ್ನೂ, ದುಃಖಂಚ - ಅಳುವಿಕೆಯನ್ನೂ, ತ್ಯಜ - ಬಿಡು. || ೩೩ || ಸುರ....ಮಾ - ದೇವಕನ್ನಿಕೆಗೆ ಸಮಾನಳಾದ, ಮೈಥಿಲೀ - ಜನಕರಾಯನ ಮಗಳಾದ, ಸೀತಾ - ಸೀತಾದೇವಿಯು, ತಸ್ಯಾಃ - ಆ ತ್ರಿಜಟೆಯು, ವಚನಂ - ಮಾತನ್ನು, ಶ್ರುತ್ವಾತು - ಕೇಳಿ, ಕೃತಾಂಜಲಿಃ - ಅಂಜಲಿಬದ್ಧಳಾಗಿ, ಏವಮಸ್ತ್ವಿತಿ - ಹಾಗೆಯೇ ಆಗಲೆಂದು, ಇದಂ - ಈ ಮಾತನ್ನು, ಉವಾಚ - ಹೇಳಿದಳು. || ೩೪ || ತ್ರಿಜಟಯಾ - ತ್ರಿಜಟೆಯಿಂದ, ಮನೋಜವಂ - ಮನೋವೇಗವುಳ್ಳ, ತತ್ಪು....ನಂ - ಆ ಪುಷ್ಪಕವಿಮಾನವನ್ನು, ಸಂನಿವರ್ತ್ಯ - ಹಿಂದಕ್ಕೆ ತಿರುಗಿಸಿ, ದೀನಾ - ದೀನಳಾದ, ಸೀತಾ - ಸೀತಾದೇವಿಯು, ಲಂಕಾಮೇವ - ಲಂಕಾಪಟ್ಟಣವನ್ನೇ,

ದರೂ ಸಂಹರಿಸಲಾರರೆಂದು ನನ್ನ ಬುದ್ಧಿಗೆ ತೋರುತ್ತದೆ. ಜಾನಕಿ ! ನಿನಗೆ ಇನ್ನೊಂದು ಗುರ್ತನ್ನು ಹೇಳುತ್ತೇನೆ ; ಕೇಳು : || ೨೬-೩೦ || ಈ ರಾಜಕುಮಾರರೀರ್ವರೂ ಮೂರ್ಛಾಕ್ರಾಂತರಾಗಿರುವರು. ಇವರಲ್ಲಿ ಕಾಂತಿಲಕ್ಷ್ಮಿಯು ಆಗಲಿ ಹೊರಟು ಹೋಗಿಲ್ಲ. ಈ ಲೋಕದಲ್ಲಿ ಮೃತಿಯೊಂದಿದವರಲ್ಲಿಯೂ ಮೃತಿಯೊಂದುವವರಲ್ಲಿಯೂ ಈ ಮುಖಕಾಂತಿಯಿರುವದಿಲ್ಲವು. ಅಂತಹ ಅಶುಭಕರವಾದ ಕಾಂತಿಯು ಇವರೀರ್ವರ ಮುಖಗಳಲ್ಲಿಯೂ ಇರುವುದಿಲ್ಲವು. ಓ ಜಾನಕಿ! ಇನ್ನು ನೀನು ಈ ಶೋಕಮೋಹಗಳನ್ನುತೊರೆದು ಶಾಂತಳಾಗು, ರಾಮಲಕ್ಷ್ಮಣರು ಮೂರ್ಛಾಕ್ರಾಂತರಾಗಿರುವರಾಗಲಿ ಮೃತರಾಗಿಲ್ಲವೆಂದು ತಿಳಿಯುವವಳಾಗು" ಎಂದು ಹೇಳಿದಳು. ತ್ರಿಜಟೆಯಾಡಿದ ಈ ಮಾತುಗಳನ್ನು ಕೇಳಿ, ದೇವಕನ್ನಿಕೆಗೆ ಸಮಾನಳಾದ ಜಾನಕಿಯು ಕೈಗಳನ್ನು ಮುಗಿದು, "ಅಮ್ಮಾ ತ್ರಿಜಟೆ! ನೀನೀಗ ನುಡಿದ ನುಡಿಗಳೆಲ್ಲ ನಿಜವಾಗಲಿ. ನನ್ನ ಅಭೀಷ್ಟವು ನೆರವೇರಲಿ !!" ಎಂದಳು ಆಮೇಲೆ ಮನೋ

ಲಂಕಾಮೇವ ಪ್ರವೇಶಿತಾ ॥ ೩೫ ॥ ತತಸ್ತ್ರಿಜಟಯಾಸಾರ್ಧಂ ಪುಷ್ಪಕಾದವರುಹ್ಯ ಸಾ । ಅಶೋಕವನಿಕಾಮೇವ ರಾಕ್ಷಸೀಭಿಃ ಪ್ರವೇಶಿತಾ ॥ ೩೬ ॥

ಪ್ರವಿಶ್ಯ ಸೀತಾ ಬಹುವೃಕ್ಷಷಂಡಾಂ
ತಾಂ ರಾಕ್ಷಸೇಂದ್ರಸ್ಯ ವಿಹಾರಭೂಮಿಂ ।
ಸಂಪ್ರೇಕ್ಷ್ಯ ಸಂಚಿಂತ್ಯ ಚ ರಾಜಪುತ್ರೌ
ಪರಂ ವಿಷಾದಂ ಸಮುಪಾಜಗಾಮ ॥ ೩೭ ॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಅಷ್ಟಚತ್ವಾರಿಂಶಸ್ಸರ್ಗಃ



ಪ್ರವೇಶಿತಾ - ಪ್ರವೇಶ ಮಾಡಿಸಲ್ಪಟ್ಟಳು. ॥ ೩೫ ॥ ತತಃ - ಬಳಿಕ, ಸಾ - ಆ ಸೀತಾದೇವಿಯು, ತ್ರಿಜ....ರ್ಧಂ - ತ್ರಿಜಟೆಯೊಡನೆ, ಪುಷ್ಪಕಾತ್ - ವಿಮಾನದಿಂದ, ಅವರುಹ್ಯ - ಕೆಳಕ್ಕೆ ಇಳಿದು, ರಾಕ್ಷಸೀಭಿಃ - ರಕ್ಕಸಿಯರಿಂದ, ಅಶೋ....ವ - ಅಶೋಕವನವನ್ನೇ, ಪ್ರವೇಶಿತಾ - ಪ್ರವೇಶ ಮಾಡಿಸಲ್ಪಟ್ಟಳು. ॥ ೩೬ ॥ ಸೀತಾ - ಸೀತಾದೇವಿಯು, ಬಹು....ಡಾಂ - ಬಹಳವಾದ ಗಿಡಗಳ ಷಂಡಗಳುಳ್ಳ, ರಾಕ್ಷಸೇಂದ್ರಸ್ಯ - ರಾವಣನಿಗೆ, ವಿಹಾರಭೂಮಿಂ - ವಿಹಾರಸ್ಥಾನವಾದ, ತಾಂ - ಆ ಅಶೋಕವನವನ್ನು, ಪ್ರವಿಶ್ಯ - ಹೊಕ್ಕು, ರಾಜಪುತ್ರೌ - ರಾಮಲಕ್ಷ್ಮಣರನ್ನು, ಸಂಪ್ರೇಕ್ಷ್ಯ - ಕಂಡು, ಸಂಚಿಂತ್ಯಚ-ಆಲೋಚಿಸಿ, ಪರಂವಿಷಾದಂ-ಬಹಳ ವ್ಯಸನವನ್ನು, ಸಮುಪಾಜಗಾಮ-ಹೊಂದಿದಳು. ॥೩೭॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಅಷ್ಟಚತ್ವಾರಿಂಶಸ್ಸರ್ಗಃ.



ವೇಗವುಳ್ಳ ಆ ಪುಷ್ಪಕವಿಮಾನವು ಹಿಂತಿರುಗಿತು. ಆಗಲಾ ಜಾನಕಿಯಾದರೊ ತ್ರಿಜಟೆಯೊಡನೆ ಮತ್ತೆ ಅಶೋಕವನವನ್ನು ಪ್ರವೇಶಿಸಿದಳು. ಆ ಬಳಿಕ ರಾಕ್ಷಸಕನ್ನೆಯರೊಡನೆ ಪುಷ್ಪಕದಿಂದ ಇಳಿದು ರಾವಣಾಸುರನ ವಿಹಾರಭೂಮಿಯಾಗಿಯೂ, ವಿವಿಧ ವೃಕ್ಷಷಂಡಗಳಿಂದ ತುಂಬಿ ಮನೋಹರವಾಗಿಯೂ ಇರುವ ಆ ಅಶೋಕವನವನ್ನು ಪ್ರವೇಶಿಸಿದಳು. ಆಗಲಾ ದೇವಿಯು ಶ್ರೀರಾಮಲಕ್ಷ್ಮಣರ ಅವಸ್ಥೆಯನ್ನು ನೋಡಿಬಂದುದರಿಂದ ಮತ್ತೆ ಮತ್ತೆ ಅವರನ್ನೇ ಸ್ಮರಿಸಿಕೊಂಡು ಪರಮ ದುಃಖಿತೆಯಾದಳು. ॥ ೩೧–೩೭ ॥

ಇಂತಿದು ಶ್ರೀರಾಮಲಕ್ಷ್ಮಣ ಮೂರ್ಛಾದರ್ಶನಜನಿತ ಸೀತಾವಿಲಾಪವೃತ್ತಾಂತವೆಂಬ ನಲವತ್ತೆಂಟನೆಯ ಸರ್ಗವು ಸಮಾಪ್ತವಾದುದು.



# ಯುದ್ಧಕಾಂಡೇ ಏಕೋನಚತ್ವಾರಿಂಶಸ್ಸರ್ಗಃ

ಘೋರೇಣ ಶರಬಂಧೇನ ಬದ್ಧೌ ದಶರಥಾತ್ಮಜೌ । ನಿಶ್ವಸಂತೌ ಯಥಾ
ನಾಗೌ ಶಯಾನೌ ರುಧಿರೋಕ್ಷಿತೌ ॥ ೧ ॥ ಸರ್ವೇ ತೇ ವಾನರಶ್ರೇಷ್ಠಾಸ್ಸಸುಗ್ರೀವಾ
ಮಹಾಬಲಾಃ । ಪರಿವಾರ್ಯ ಮಹಾತ್ಮಾನೌ ತಸ್ಥುಶ್ಶೋಕಪರಿಪ್ಲುತಾಃ ॥೨॥ ಏತಸ್ಮಿನ್ನಂ
ತರೇ ರಾಮಃ ಪ್ರತ್ಯಬುಧ್ಯತ ವೀರ್ಯವಾನ್ । ಸ್ಥಿರತ್ವಾತ್ಸತ್ವಯೋಗಾಚ್ಚ ಶರೈಸ್ಸಂಧಾನಿ
ತೋಽಪಿ ಸನ್ ॥೩॥ ತತೋ ದೃಷ್ಟ್ವಾ ಸರುಧಿರಂ ವಿಷಣ್ಣಂ ಗಾಢಮರ್ಪಿತಂ । ಭ್ರಾತರಂ
ದೀನವದನಂ ಪರ್ಯದೇವಯದಾತುರಃ ॥ ೪ ॥ "ಕಿಂನು ಮೇ ಸೀತಯಾ ಕಾರ್ಯಂ

---

ಘೋರೇಣ - ಭಯಂಕರವಾದ, ಶರಬಂಧೇನ - ಬಾಣರೂಪವಾದ ನಾಗಬಂಧದಿಂದ, ಬದ್ಧೌ - ಕಟ್ಟಲ್ಪಟ್ಟ, ನಾಗೌ ಯಥಾ - ಆನೆಗಳಂತೆ, ನಿಶ್ವಸಂತೌ - ನಿಟ್ಟುಸಿರನ್ನು ಬಿಡುತ್ತ, ಶಯಾನೌ - ಮಲಗಿರುವ, ರುಧಿರೋಕ್ಷಿತೌ - ರಕ್ತದಿಂದ ನೆನೆಸಲ್ಪಟ್ಟ, ಮಹಾತ್ಮಾನೌ - ಮಹಾ ಧೈರ್ಯವಂತರಾದ, ದಶರಥಾತ್ಮಜೌ - ರಾಮಲಕ್ಷ್ಮಣರನ್ನು, ಸಸುಗ್ರೀವಾಃ - ಸುಗ್ರೀವಸಹಿತವಾದ, ಮಹಾಬಲಾಃ - ಮಹಾ ಬಲಿಷ್ಠರಾದ, ಸರ್ವೇ - ಸಮಸ್ತರಾದ, ತೇ ವಾನರಶ್ರೇಷ್ಠಾಃ - ಆ ವಾನರೋತ್ತಮರು, ಪರಿವಾರ್ಯ - ಸುತ್ತಿಕೊಂಡು, ಶೋಕ....ತಾಃ - ವ್ಯಸನದಿಂದ ಬಳಲಿ, ತಸ್ಥುಃ - ನಿಂತರು. ॥ ೧ ೨ ॥ ಏತಸ್ಮಿನ್ನಂತರೇ - ಈ ಮಧ್ಯದಲ್ಲಿ, ವೀರ್ಯವಾನ್ - ಸಾಮರ್ಥ್ಯವಂತನಾದ, ರಾಮಃ - ಶ್ರೀರಾಮನು, ಸ್ಥಿರತ್ವಾತ್ - ಧೈರ್ಯದಿಂದಲೂ, ಸತ್ವಯೋಗಾಚ್ಚ - ಬಲಾಧಿಕ್ಯದಿಂದಲೂ, ಶರೈಃ - ಬಾಣಗಳಿಂದ, ಸಂಧಾನಿತೋಽಪಿಸನ್ - ಕಟ್ಟಲ್ಪಟ್ಟವನಾದರೂ, ಪ್ರತ್ಯಬುಧ್ಯತ - ಎಚ್ಚರಗೊಂಡನು. ॥೩॥ ತತಃ - ಬಳಿಕ, ಸರುಧಿರಂ - ರಕ್ತದಿಂದ ಕೂಡಿ, ವಿಷಣ್ಣಂ - ಬಳಲಿದ, ಗಾಢಂ - ದೃಢವಾಗಿ, ಅರ್ಪಿತಂ - ಬಾಣಗಳಿಂದ ಹೊಡೆಯಲ್ಪಟ್ಟ, ದೀನವದನಂ - ದೀನಮುಖನಾದ, ಭ್ರಾತರಂ - ತಮ್ಮನಾದ ಲಕ್ಷ್ಮಣನನ್ನು, ದೃಷ್ಟ್ವಾ - ಕಂಡು, ಆತುರಸ್ಸನ್ - ಆತುರನಾಗಿ, ಪರ್ಯದೇವಯತ್ - ವಿಲಪಿಸಿದನು. ॥೪॥ ಯಃ - ಯಾವ ನಾನು, ಅದ್ಯ - ಈಗ, ಭ್ರಾತರಂ - ತಮ್ಮನಾದ ಲಕ್ಷ್ಮಣನನ್ನು,

---

ಇತ್ತ ರಣಭೂಮಿಯಲ್ಲಿ ಶರಬಂಧಬಂಧಿತರಾದ ಶ್ರೀರಾಮಲಕ್ಷ್ಮಣರಿರ್ವರೂ ಮಹಾ ಗಜಗಳಂತೆ ನಿಟ್ಟುಸಿರುಗಳನ್ನು ಬಿಡುತ್ತ, ರಕ್ತದಿಂದ ವ್ಯಾಪ್ತವಾದ ಶರೀರಗಳುಳ್ಳವರಾಗಿ ವೀರಶಯನದಲ್ಲಿ ಪವಳಿಸಿದ್ದರಷ್ಟೆ. ಆ ಸಮಯದಲ್ಲಿ ಮಹಾ ಬಲಾಢ್ಯರೂ, ವಾನರೋತ್ತಮರೂ ಆದ ಸುಗ್ರೀವಾದಿಗಳು ಮಹಾತ್ಮರಾದ ಶ್ರೀರಾಮಲಕ್ಷ್ಮಣರನ್ನು ಸುತ್ತುವರಿದುಕೊಂಡು ದುಃಖಿಸುತ್ತಿದ್ದರು. ಇಷ್ಟರಲ್ಲಿಯೇ ಮಹಾ ವೀರನಾದ ಶ್ರೀರಾಮಮೂರ್ತಿಯು ಧೈರ್ಯಶಾಲಿಯೂ, ಮಹಾ ಬಲಶಾಲಿಯೂ ಆದುದರಿಂದ ಶರಬಂಧಬಂಧಿತನಾಗಿದ್ದರೂ ಮೂರ್ಛೆ ತಿಳಿದೆದ್ದನು. ಕೂಡಲೇ ರಕ್ತದಿಂದ ವ್ಯಾಪ್ತವಾದ ಶರೀರವುಳ್ಳವನಾಗಿಯೂ, ದೀನವದನನಾಗಿ ವ್ಯಸನಗೊಳ್ಳುತ್ತಿರುವವನೂ ತನ್ನ ತಮ್ಮನೂ ಆದ ಲಕ್ಷ್ಮಣಸ್ವಾಮಿಯನ್ನು ಕಂಡು ಬಹಳವಾಗಿ ದುಃಖಿಸಿ ಆ ದುಃಖಭರದಲ್ಲಿಯೇ ಹೀಗೆಂದನು. ॥ ೧-೪ ॥ "ಅಕಟಕಟಾ ! ರಣರಂಗದಲ್ಲಿ ಮಡಿದು ಬಿದ್ದಿರುವ ನನ್ನ ತಮ್ಮ ಈ

ಕಿಂ ಕಾರ್ಯಂ ಜೀವಿತೇನ ವಾ! । ಶಯಾನಂ ಯೋಽದ್ಯ ಪಶ್ಯಾಮಿ ಭ್ರಾತರಂ ಯುಧಿ ನಿರ್ಜಿತಂ ॥ ೫ ॥ ಶಕ್ಯಾ ಸೀತಾ ಸಮಾ ನಾರೀ ಮರ್ತ್ಯಲೋಕೇ ವಿಚಿನ್ವತಾ । ನ ಲಕ್ಷ್ಮಣಸಮೋ ಭ್ರಾತಾ ಸಚಿವಸ್ಸಾಂಪರಾಯಿಕಃ ॥೬॥ ಪರಿತ್ಯಕ್ಷ್ಯಾಮ್ಯಹಂ ಪ್ರಾಣಂ ವಾನರಾಣಾಂತು ಪಶ್ಯತಾಂ । ಯದಿ ಪಂಚತ್ವಮಾಪನ್ನ ಸುಮಿತ್ರಾನಂದವರ್ಧನಃ ॥೭॥ ಕಿನ್ನು ವಕ್ಷ್ಯಾಮಿ ಕೌಸಲ್ಯಾಂ ಮಾತರಂ ಕಿನ್ನು ಕೈಕಯೀಂ! । ಕಥಮಂಬಾಂ ಸುಮಿತ್ರಾಂಚ ಪುತ್ರದರ್ಶನಲಾಲಸಾಂ ॥ ೮ ॥ ವಿವತ್ಸಾಂ ವೇಪಮಾನಾಂಚ ಕ್ರೋಶಂತೀಂ

ಯುಧಿ - ಕಾಳಗದಲ್ಲಿ, ನಿರ್ಜಿತಂ - ಜಯಿಸಲ್ಪಟ್ಟವನನ್ನಾಗಿ, ಪಶ್ಯಾಮಿ - ಕಾಣುವೆನೋ, ತಸ್ಯ ಮೇ- ಅಂಥಾ ನನಗೆ, ಸೀತಯಾ - ಸೀತಾದೇವಿಯಿಂದ, ಕಾರ್ಯಂ - ಪ್ರಯೋಜನವು, ಕಿನ್ನು - ಏನು, ಜೀವಿತೇನವಾ - ಪ್ರಾಣದಿಂದಲಾಗಲಿ, ಕಿಂಕಾರ್ಯಂ - ಏನು ಪ್ರಯೋಜನವು. ॥೫॥ ಮರ್ತ್ಯಲೋಕೇ- ಮನುಷ್ಯಲೋಕದಲ್ಲಿ, ವಿಚಿನ್ವತಾ - ಹುಡುಕುವ ಮನುಷ್ಯನಿಂದ, ಸೀತಾಸಮಾ - ಸೀತಾದೇವಿಗೆ ಸಮಾನಳಾದ, ನಾರೀ - ಹೆಂಗಸು, ಶಕ್ಯಾ - ಸಾಧ್ಯಳು, ಲಕ್ಷ್ಮಣಸಮಃ - ಲಕ್ಷ್ಮಣನಿಗೆ ಸಮಾನನಾದ, ಭ್ರಾತಾ-ತಮ್ಮನಾದ, ಸಾಂಪರಾಯಿಕಃ ಯುದ್ಧದಲ್ಲಿ ಸಮರ್ಥನಾದ, ಸಚಿವಃ-ಮಂತ್ರಿಯು, ನಶಕ್ಯಃ - ಸಾಧ್ಯನಲ್ಲ. ॥ ೬ ॥ ಸುಮಿ....ನಃ - ಸುಮಿತ್ರಾ ದೇವಿಗೆ ಆನಂದಕರನಾದ ಲಕ್ಷ್ಮಣನು, ಪಂಚತ್ವಂ - ಮರಣವನ್ನು, ಆಪನ್ನೋಯದಿ - ಹೊಂದಿದರೆ, ವಾನರಾಣಾಂ - ಕಪಿಗಳು, ಪಶ್ಯತಾಂ - ನೋಡುತ್ತಿರುವಂತೆಯೇ, ಅಹಂ ನಾನು, ಪ್ರಾಣಂ - ಪ್ರಾಣವನ್ನು, ಪರಿತ್ಯಕ್ಷ್ಯಾಮಿ - ಬಿಡುವೆನು. ॥೭॥ ಮಾತರಂ - ತಾಯಿಯಾದ, ಕೌಸಲ್ಯಾಂ - ಕೌಸಲ್ಯಾದೇವಿಯನ್ನು ಕುರಿತು, ಕಿನ್ನುವಕ್ಷ್ಯಾಮಿ- ಏನು ಹೇಳಲಿ, ಕೈಕಯೀಂ - ಕೈಕಯೀದೇವಿಯನ್ನು ಕುರಿತು, ಕಿನ್ನುವಕ್ಷ್ಯಾಮಿ - ಏನು ಹೇಳಲಿ, ತಂವಿನಾ - ಆ ಲಕ್ಷ್ಮಣನನ್ನು ಹೊರತು, ಯಾಸ್ಯಾಮಿಯದಿ - ಊರಿಗೆ ಹೋದರೆ, ಪುತ್ರ....ಸಾಂ - ಮಗನನ್ನು ನೋಡುವುದರಲ್ಲಿ ಆಸಕ್ತಳಾದ, ವಿವತ್ಸಾಂ - ಪುತ್ರಹೀನಳಾಗಿ, ವೇಪಮಾನಾಂ - ನಡುಗುತ್ತಿರುವ, ಅಂಬಾಂ-ತಾಯಿಯಾದ, ಸುಮಿತ್ರಾಂ-ಸುಮಿತ್ರಾದೇವಿಯನ್ನು ಕುರಿತು, ಕಥಂವಕ್ಷ್ಯಾಮಿ-

ಲಕ್ಷ್ಮಣಸ್ವಾಮಿಯನ್ನು ಕಂಡಮೇಲೆ, ಇನ್ನು ನನಗೆ ಸೀತೆಯಿಂದಾಗಲಿ, ಜೀವಿತದಿಂದಾಗಲಿ ಪ್ರಯೋಜನವೇನು? ಇನ್ನು ನಾನು ಜೀವಿಸಿ ಪ್ರಯೋಜನವೇನು. ಒಂದುವೇಳೆ ಜೀವಿಸಿದರೂ ನಿರರ್ಥಕವಾದ ಜೀವವುಳ್ಳವನಾಗುವೆನಲ್ಲವೆ! ಆದುದರಿಂದ ನಾನು ಪ್ರಾಣಗಳನ್ನು ತೊರೆಯುವೆನು ಈ ಜಗತ್ತಿನಲ್ಲಿ ಹುಡುಕಿ ನೋಡಿದರೆ ಸೀತೆಯಂತಹ ಸ್ತ್ರೀಯು ದೊರಕಿದರೂ ದೊರಕುವಳಾಗಲಿ ಲಕ್ಷ್ಮಣನಂತಹ ತಮ್ಮನು ದೊರಕಿಯಾನೇ! ದೊರಕುವದಿಲ್ಲ! ನನ್ನ ತಮ್ಮನಾದ ಈ ಲಕ್ಷ್ಮಣಸ್ವಾಮಿಯು ನನಗೆ ಮಂತ್ರಿಯಾಗಿದ್ದುಕೊಂಡು ನನ್ನೊಡನೆ ರಣರಂಗದಲ್ಲಿ ನಿಂತು ನನಗೆ ಸಮುಸಮವಾಗಿ ಶತ್ರುವಧೆಯನ್ನು ಮಾಡುವವನಾಗಿದ್ದನು. ಅಯ್ಯೋ! ಇಂತಹನು ಮಡಿದಮೇಲೆ ನಾನೆಂತು ಜೀವಿಸಿರಲಿ! ಇಲ್ಲ; ಜೀವಿಸಲಾರೆನು. ಈ ವಾನರರೆಲ್ಲರೂ ನೋಡುತ್ತಿರುವಂತೆಯೇ ನಾನು ಪ್ರಾಣಗಳನ್ನು ತೊರೆಯಲುಳ್ಳವನು. ಅಕಟಾ! ಪುತ್ರನನ್ನು ನೋಡಬೇಕೆಂಬ ಕೋರಿಕೆಯುಳ್ಳ ನನ್ನ ತಾಯಿಯಾದ, ಕೌಸಲ್ಯಾದೇವಿಗೂ, ಸುಮಿತ್ರಾದೇವಿಗೂ, ಕೈಕೇಯೀದೇವಿಗೂ ಅಯೋಧ್ಯೆಗೆ ಹಿಂತಿರುಗಿದ ಬಳಿಕ ಏನೆಂದು ಹೇಳಲಿ! ॥ ೫-೮ ॥ ನಿಜವಾಗಿಯೂ ಈ ಲಕ್ಷ್ಮಣನು ಮೃತಿಯೊಂದಿದರೆ

ಕುರರೀಮಿವ । ಕಥಮಾಶ್ವಾಸಯಿಷ್ಯಾಮಿ ಯದಿ ಯಾಸ್ಯಾಮಿ ತಂ ವಿನಾ ॥ ೯ ॥ ಕಥಂ ವಕ್ಷ್ಯಾಮಿ ಶತ್ರುಘ್ನಂ ಭರತಂಚ ಯಶಸ್ವಿನಂ । ಮಯಾ ಸಹ ವನಂ ಯಾತೋ ವಿನಾಽನೇನ ಗತಃ ಪುನಃ ॥ ೧೦ ॥ ಉಪಾಲಂಭಂ ನಶಕ್ಷ್ಯಾಮಿ ಸೋಢುಂ ಬತ ಸುಮಿತ್ರಯಾ । ಇಹೈವ ದೇಹಂ ತ್ಯಕ್ಷ್ಯಾಮಿ ನಹಿ ಜೀವಿತುಮುತ್ಸಹೇ ॥ ೧೧ ॥ ಧಿಙ್ಮಾಂ ! ದುಷ್ಕೃತಕರ್ಮಾಣಮನಾರ್ಯಂ ಯತ್ಕೃತೇ ಹ್ಯಸೌ । ಲಕ್ಷ್ಮಣಃ ಪತಿತಶ್ಶೇತೇ ಶರತಲ್ಪೇ ಗತಾಸುವತ್ ॥೧೨॥ ತ್ವಂ ನಿತ್ಯಂ ಸವಿಷಣ್ಣಂ ಮಾಮಾಶ್ವಾಸಯಸಿ ಲಕ್ಷ್ಮಣ ! । ಗತಾಸುರ್ನಾದ್ಯ ಶಕ್ನೋಷಿ ಮಾಮಾರ್ತಮಭಿಭಾಷಿತುಂ ॥೧೩॥ ಯೇನಾಽದ್ಯ ನಿಹತಾ

---

ಹೇಗೆ ಹೇಳಲಿ, ಕಥಂ - ಹೇಗೆ, ಆಶ್ವಾಸಯಿಷ್ಯಾಮಿ - ಸಮಾಧಾನಗೊಳಿಸಲಿ, ಮಯಾಸಹ - ವನಂ - ವನವನ್ನು ಕುರಿತು, ಯಃ - ಯಾವನು, ಯಾತಃ - ಬಂದನೋ, ತೇನವಿನಾ - ಅವನನ್ನು ಬಿಟ್ಟು, ಪುನಃ - ಮತ್ತು, ಗತಃ - ಹೋಗಿ, ಯಶಸ್ವಿನಂ - ಕೀರ್ತಿವಂತನಾದ, ಭರತಂಚ - ಭರತನನ್ನೂ, ಶತ್ರುಘ್ನಂಚ ಶತ್ರುಘ್ನನನ್ನು ಕುರಿತು, ಕಥಂವಕ್ಷ್ಯಾಮಿ-ಹೇಗೆತಾನೇ ಹೇಳಲಿ, ಸುಮಿತ್ರಯಾ-ಸುಮಿತ್ರಾದೇವಿಯಿಂದ, ಉಪಾಲಂಭಂ - ನಿಂದೆಯನ್ನು, ಸೋಢುಂ - ಸಹಿಸುವದಕ್ಕೆ, ನಶಕ್ಷ್ಯಾಮಿ - ಸಮರ್ಥನಾಗಲಾರೆ. ॥ ೮-೧೦ ॥ ಇಹೈವ-ಇಲ್ಲಿಯೇ, ದೇಹಂ-ಶರೀರವನ್ನು, ತ್ಯಕ್ಷ್ಯಾಮಿ-ಬಿಡುವೆನು, ಜೀವಿತುಂ - ಬದುಕುವದಕ್ಕೆ, ನೋತ್ಸಹೇಹಿ - ಉದ್ಯುಕ್ತನಾಗಲಾರೆನಷ್ಟೆ, ಯತ್ಕೃತೇ - ಯಾವ ನನ್ನ ನಿಮಿತ್ತವಾಗಿ, ಅಸೌಲಕ್ಷ್ಮಣಃ - ಈ ಲಕ್ಷ್ಮಣನು, ಶರತಲ್ಪೇ - ಬಾಣಗಳ ಹಾಸಿಗೆಯಲ್ಲಿ, ಗತಾಸುವತ್ - ಮೃತನಾದವನಂತೆ, ಪತಿತಃ - ಬಿದ್ದವನಾಗಿ, ಶೇತೇ - ಮಲಗಿದ್ದಾನೆಯೋ. ॥ ೧೧ ॥ ದುಷ್ಕೃ....ಣಂ - ಪಾಪಕರ್ಮವುಳ್ಳ, ಅನಾರ್ಯಂ - ಅಪೂಜ್ಯನಾದ, ತಂಮಾಂ - ಅಂಥಾ ನನ್ನನ್ನು, ಧಿಕ್ - ನಿಂದಿಸು. ॥೧೨॥ ಹೇ ಲಕ್ಷ್ಮಣ - ಎಲೈ ಲಕ್ಷ್ಮಣನೇ, ಸತ್ವಂ ಆ ಈ ನೀನು, ವಿಷಣ್ಣಂ - ದುಃಖಿತನಾದ, ಮಾಂ - ನನ್ನನ್ನು, ನಿತ್ಯಂ - ನಿರಂತರವೂ, ಆಶ್ವಾಸಯಸಿ - ಸಮಾಧಾನಗೊಳಿಸುವವನಾಗಿದ್ದು, ಅದ್ಯ - ಈಗ, ಗತಾಸುಃ - ಗತಪ್ರಾಣನಾಗಿ, ಆರ್ತಂ - ದೀನನಾದ, ಮಾಂ - ನನ್ನನ್ನು ಕುರಿತು, ಅಭಿಭಾಷಿತುಂ - ಮಾತನಾಡುವದಕ್ಕೆ, ನಶಕ್ನೋಷಿ - ಸಮರ್ಥನಾಗದಿರುವೆಯಾ.

---

ನಾನು ನನ್ನ ತಾಯಂದಿರಗೆ ಯಾವ ಸಮಾಧಾನೋಕ್ತಿಗಳನ್ನೂ ಹೇಳಲು ಸಮರ್ಥನಲ್ಲದುದರಿಂದ ಈಗಲೇ ಪ್ರಾಣಗಳನ್ನು ತೊರೆದು ಬಿಡುವೆನು. ಲಕ್ಷ್ಮಣನಿಲ್ಲದೆ ನಾನೊಂದುವೇಳೆ ಅಯೋಧ್ಯೆಗೆ ಹಿಂತಿರುಗಿದರೆ, ಮರಿಯನ್ನು ಕಾಣದ ಹೆಣ್ಣು ಜಿಂಕೆಯಂತೆ ಸಂತಪಿಸಿ ಕುರರಿಯಂತೆ ರೋದನ ಮಾಡುತ್ತ ಬರುವ ಸುಮಿತ್ರಾದೇವಿಯನ್ನು ಸಮಾಧಾನಪಡಿಸುವುದೆಂತು! ನಾನು ಲಕ್ಷ್ಮಣನೊಡನೆ ಕಾಡಿಗೆ ಬಂದೆನಲ್ಲವೆ! ಈಗ ನಾನು ಅವನನ್ನು ಕಳೆದುಕೊಂಡು ಅಯೋಧ್ಯೆಗೆ ಹೋದರೆ, ಕೀರ್ತಿವಂತರಾದ ಭರತಶತ್ರುಘ್ನರು ಲಕ್ಷ್ಮಣನೆಲ್ಲಿಂದು ನನ್ನನ್ನು ಪ್ರಶ್ನಿಸಿದರೆ ಅವರಿಗೆ ನಾನಾವ ಉತ್ತರವನ್ನು ಕೊಡಲಿ! ಅಯ್ಯಯೋ! ಸುಮಿತ್ರಾದೇವಿಯ ಉಪಾಲಂಭವನ್ನೆಂತು ಸಹಿಸಲಿ! ಆಕೆಗೆ ಏನು ಹೇಳಲಿ! ಆಗದು; ಆಗದು. ನಾನು ಲಕ್ಷ್ಮಣನನ್ನುಳಿದು ಅಯೋಧ್ಯೆಗೆ ಹಿಂತಿರುಗುವುದಿಲ್ಲ; ಇಲ್ಲಿಯೇ ಪ್ರಾಣಗಳನ್ನು ತೊರೆಯುವೆನು. ಛೀ! ಛೀ! ನಾನೆಂತಹ ಪಾಪಾತ್ಮನು! ನನಗಾಗಿ ಪೂಜ್ಯನಾದ ಈ ಲಕ್ಷ್ಮಣನು ಯುದ್ಧರಂಗದಲ್ಲಿ ಮಡಿದು ಬಿದ್ದನಲ್ಲವೇ!" ॥ ೯-೧೨ ॥ ತಮ್ಮ ಲಕ್ಷ್ಮಣನೇ!

ಯುದ್ಧೇ ರಾಕ್ಷಸಾ ವಿನಿಪಾತಿತಾಃ । ತಸ್ಯಾಮೇವ ಕ್ಷಿತೌ ವೀರಸ್ಸಶೇತೇ ನಿಹತಃ ಪರೈಃ ॥ ೧೪ ॥ ಶಯಾನೋ ಶರತಲ್ಪೇಽಸ್ಮಿನ್ ಸ್ವಶೋಣಿತಪರಿಪ್ಲುತಃ । ಶರಜಾಲೈಶ್ಚಿತೋ ಭಾತಿ ಭಾಸ್ಕರೋಸ್ತಮಿವ ವ್ರಜನ್ ॥೧೫॥ ಬಾಣಾಭಿಹತ ಮರ್ಮತ್ವಾನ್ನಶಕ್ನೋತ್ಯಭಿಭಾಷಿತುಂ। ರುಜಾ ಚಾಬ್ರುವತೋಽಪ್ಯಸ್ಯ ದೃಷ್ಟಿರಾಗೇಣ ಸೂಚ್ಯತೇ ॥೧೬॥ ಯಥೈವ ಮಾಂ ವನಂ ಯಾಂತಮನುಯಾತೋ ಮಹಾದ್ಯುತಿಃ । ಅಹಮಪ್ಯನುಯಾಸ್ಯಾಮಿ ತಥೈವೈನಂ ಯಮಕ್ಷಯಂ ॥೧೭॥ ಇಷ್ಟಬಂಧುಜನೋ ನಿತ್ಯಂ ಮಾಂಚ ನಿತ್ಯಮನು

॥ ೧೩ ॥ ಯೇನ - ಯಾವ ಲಕ್ಷ್ಮಣನಿಂದ, ಅದ್ಯ - ಈಗ, ಯುದ್ಧೇ - ಕಾಳಗದಲ್ಲಿ, ರಾಕ್ಷಸಾಃ - ರಕ್ಕಸರು, ನಿಹತಾಃ ಹೊಡೆಯಲ್ಪಟ್ಟು, ವಿನಿಪಾತಿತಾಃ - ಕೆಡುಹಲ್ಪಟ್ಟರೋ, ತಸ್ಯಾಂಕ್ಷಿತಾವೇವ - ಅದೇ ನೆಲದಲ್ಲಿಯೇ, ವೀರಃ - ಶೂರನಾದ, ಸಃ - ಆ ಲಕ್ಷ್ಮಣನು, ಪರೈಃ - ಶತ್ರುಗಳಿಂದ, ನಿಹತಃ - ಹೊಡೆಯಲ್ಪಟ್ಟವನಾಗಿ, ಶೇತೇ - ಮಲಗಿದ್ದಾನೆ. ॥ ೧೪ ॥ ಅಸ್ಮಿಂಛರತಲ್ಪೇ - ಈ ಬಾಣಗಳ ಹಾಸಿಗೆಯಲ್ಲಿ, ಶಯಾನಃ - ಮಲಗಿರುವ, ಸ್ವಶೋ....ತಃ - ತನ್ನ ರಕ್ತದಿಂದಲೇ ನೆಸಿಸಲ್ಪಟ್ಟವನಾಗಿ, ಶರಜಾಲೈಃ - ಬಾಣಗಳ ತಂಡಗಳಿಂದ, ಚಿತಃ - ತುಂಬಿಸಲ್ಪಟ್ಟವನಾಗಿ, ಅಸ್ತಂ - ಅಸ್ತಮಯವನ್ನು, ವ್ರಜನ್ - ಹೊಂದಿರುವ, ಭಾಸ್ಕರಇವ - ಸೂರ್ಯನಂತೆ, ಭಾತಿ - ಹೊಳೆಯುತ್ತಿದ್ದಾನೆ. ॥ ೧೫ ॥ ಬಾಣಾ ...ತ್ - ಬಾಣಗಳಿಂದ ಹೊಡೆಯಲ್ಪಟ್ಟ ಮರ್ಮಸ್ಥಾನಗಳುಳ್ಳವನಾದಕಾರಣ, ಅಭಿಭಾಷಿತುಂ - ಮಾತನಾಡುವುದಕ್ಕೆ, ನಶಕ್ನೋತಿ - ಸಮರ್ಥನಾಗದಿರುವನು, ಅಬ್ರುವತೋಽಪಿ - ಮಾತನಾಡದಿದ್ದರೂ, ಅಸ್ಯ - ಈ ಲಕ್ಷ್ಮಣನ, ರುಜಾ - ವ್ಯಥೆಯು, ದೃಷ್ಟಿರಾಗೇಣ - ನೋಟದ ವಿಶ್ವಾಸದಿಂದ, ಸೂಚ್ಯತೇ - ಸೂಚಿಸಲ್ಪಡುತ್ತಿದೆ. ॥೧೬॥ ವನಂ - ಅರಣ್ಯವನ್ನು ಕುರಿತು, ಯಾಂತಂ - ಬರುತ್ತಿರುವ, ಮಾಂ - ನನ್ನನ್ನು ಕುರಿತು, ಮಹಾದ್ಯುತಿಃ - ಬಹಳ ತೇಜೋವಂತನಾದ, ಯಃ - ಯಾವ ಲಕ್ಷ್ಮಣನು, ಯಥೈವ - ಹೇಗೆ, ಅನುಯಾತಃ - ಅನುಸರಿಸಿ ಬಂದನೋ, ಅಹಮಪಿ - ನಾನೂ, ತಥೈವ - ಹಾಗೆಯೇ, ಯಮಕ್ಷಯಂ - ಯಮನಮನೆಯನ್ನು ಕುರಿತು, ಯಾಂತಂ - ಹೋಗುತ್ತಿರುವ, ಏನಂ - ಈ ಲಕ್ಷ್ಮಣನನ್ನು, ಅನುಯಾಸ್ಯಾಮಿ - ಅನುಸರಿಸಿ ಹೋಗುವೆನು. ॥ ೧೭ ॥ ನಿತ್ಯಂ - ನಿರಂತರವೂ,

ದುಃಖದಿಂದ ಪರಿತಪಿಸುತ್ತಿದ್ದ ನನ್ನನ್ನು ನೀನೇ ಎಲ್ಲ ಕಾಲಗಳಲ್ಲಿಯೂ ಸಮಾಧಾನಪಡಿಸುವವನಾಗಿದ್ದು ಈಗ ನೀನು ಮೃತಿಯೊಂದಿ ನನ್ನೊಡನೆ ಮಾತನಾಡಲೂ ಶಕ್ತಿಯಿಲ್ಲದವನಾಗಿರುವೆಯಲ್ಲವೆ! ಎಲೈ ವೀರನೇ! ಈ ಮುಂಚೆ ನೀನು ಇದೇ ಸ್ಥಳದಲ್ಲಿ ಘೋರಯುದ್ಧವನ್ನು ಮಾಡಿ ಸಹಸ್ರಾರುಮಂದಿ ರಾಕ್ಷಸರನ್ನು ಸಂಹರಿಸಿ ಈಗ ಇದೇ ರಣಭೂಮಿಯಲ್ಲಿ ಶತ್ರುಗಳಿಂದ ಸಂಹೃತನಾದೆಯಾ! ಲಕ್ಷ್ಮಣ! ನೀನು ಈ ಶರತಲ್ಪದಲ್ಲಿ ಸ್ವರಕ್ತದಿಂದಲೇ ವ್ಯಾಪ್ತವಾದ ಮೈಯುಳ್ಳವನಾಗಿ ಬಾಣಗಳಿಂದ ತುಂಬಿ ಅಸ್ತಮಯಕಾಲದಲ್ಲಿಯ ಸೂರ್ಯನಂತೆ ಪ್ರಕಾಶಿಸುತ್ತಿರುವೆ. ॥ ೧೩-೧೫ ॥ ನೀನು ಮೃತಿಯೊಂದಿರುವುದಿಲ್ಲವು. ಬಾಣಗಳಿಂದ ಘಾತಿಸಲ್ಪಟ್ಟ ಮರ್ಮಸ್ಥಾನಗಳುಳ್ಳವನಾದುದರಿಂದ ಮಾತನಾಡಲು ಶಕ್ತಿಯಿಲ್ಲದವನಾಗಿರುವೆಯೆಂದು ತೋರುವುದು. ತಮ್ಮ! ನೀನು ಮಾತನಾಡದಿದ್ದರೂ ನಿನ್ನ ಮುಖವೇ ನಿನಗುಂಟಾಗಿರುವ ಬಾಧೆಯನ್ನು ಸೂಚಿಸುತ್ತಿರುವುದು. ಲಕ್ಷ್ಮಣ! ನಾನೆಂದಿಗೂ ನಿನ್ನನ್ನು ಬಿಟ್ಟಿರುವುದಿಲ್ಲ. ನೀನು ನನ್ನೊಡನೆ ವನವಾಸಕ್ಕೆ ಬಂದಂತೆಯೇ ನಾನೂ ಸಹ ನಿನ್ನೊಡನೆಯೇ ಯಮಪುರಿಗೆ ಬರುವೆನು. ಅಕಟಾ! ಲಕ್ಷ್ಮಣನೇ, ಬಂಧುಪ್ರಿಯನೂ, ಎಲ್ಲ ಕಾಲ

ವ್ರತಃ । ಇಮಾಮದ್ಯ ಗತೋಽವಸ್ಥಾಂ ಮಮಾನಾರ್ಯಸ್ಯ ದುರ್ಣಯೈಃ ॥ ೧೮ ॥ ಸುರುಷ್ಟೇನಾಪಿ ವೀರೇಣ ಲಕ್ಷ್ಮಣೇನ ನಸಂಸ್ಮರೇ । ಪರುಷಂ ವಿಪ್ರಿಯಂ ವಾಪಿ ಶ್ರಾವಿತಂ ನಕದಾಚನ ॥ ೧೯ ॥ ವಿಸಸರ್ಜೈಕವೇಗೇನ ಪಂಚಬಾಣಶತಾನಿ ಯಃ । ಇಷ್ವಸ್ತ್ರೇಷ್ವಧಿಕಸ್ತಸ್ಮಾತ್ಕಾರ್ತವೀರ್ಯಾಚ್ಚ ಲಕ್ಷ್ಮಣಃ ॥೨೦॥ ಅಸ್ತ್ರೈರಸ್ತ್ರಾಣಿ ಯೋ ಹನ್ಯಾಚ್ಛಕ್ರಸ್ಯಾಪಿ ಮಹಾತ್ಮನಃ । ಸೋಽಯಮುರ್ವ್ಯಾಂ ಹತಶ್ಶೇತೇ ಮಹಾರ್ಹಶಯನೋಚಿತಃ ॥೨೧॥ ಯನ್ಮಯಾ ನಕ್ರತೋ ರಾಜಾ ರಾಕ್ಷಸಾನಾಂ ವಿಭೀಷಣಃ ।

ಇಷ್ಟ....ನಃ - ಪ್ರೀತಿಪಾತ್ರನಾಗಿಯೂ, ಬಂಧುವಾಗಿಯೂ ಇರುವ, ನಿತ್ಯಂ - ನಿರಂತರವೂ, ಮಾಂಚ ನನ್ನನ್ನೂ, ಅನುವ್ರತಃ - ಅನುಸರಿಸಿಕೊಂಡಿರುವ ಈ ಲಕ್ಷ್ಮಣನು, ಅನಾರ್ಯಸ್ಯ - ಅಪೂಜ್ಯನಾದ, ಮಮ - ನನ್ನ, ದುರ್ಣಯೈಃ - ದುಷ್ಕರ್ಮಗಳಿಂದ, ಅದ್ಯ - ಈಗ, ಇಮಾಮವಸ್ಥಾಂ - ಇಂಥಾ ಅವಸ್ಥೆಯನ್ನು, ಗತಃ - ಹೊಂದಿದನು. ॥ ೧೮ ॥ ಸುರುಷ್ಟೇನಾಪಿ - ಬಹಳ ಕೋಪಿಷ್ಠನಾದರೂ, ವೀರೇಣ - ಶೂರನಾದ, ಲಕ್ಷ್ಮಣೇನ - ಲಕ್ಷ್ಮಣನಿಂದ, ಪರುಷಂ - ಕ್ರೂರವಾದ, ವಿಪ್ರಿಯಂ - ಅಹಿತವಾದ ಮಾತು, ಕದಾಚನ - ಎಂದಿಗೂ, ನಶ್ರಾವಿತಂ - ಕೇಳಿಸಲ್ಪಟ್ಟದನ್ನು, ನಸಂಸ್ಮರೇ - ಸ್ಮರಿಸಲಾರೆನು. ॥೧೯॥ ಯಃ - ಯಾವ ಕಾರ್ತವೀರ್ಯನು, ಏಕವೇಗೇನ - ಒಂದು ಪ್ರಯತ್ನದಿಂದ, ಪಂಚ....ಚ - ಐದುನೂರು ಬಾಣಗಳನ್ನು, ವಿಸಸರ್ಜ - ಬಿಟ್ಟನೋ, ಲಕ್ಷ್ಮಣಶ್ಚ - ಲಕ್ಷ್ಮಣನಾದರೆ, ಇಷ್ವಸ್ತ್ರೇಷು - ಬಾಣಗಳಲ್ಲಿಯೂ, ಅಸ್ತ್ರಗಳಲ್ಲಿಯೂ, ತಸ್ಮಾತ್ಕಾರ್ತವೀರ್ಯಾಚ್ಚ - ಆ ಕಾರ್ತವೀರ್ಯನಿಗಿಂತಲೂ, ಅಧಿಕಃ - ಹೆಚ್ಚಾದವನು. ॥೨೦॥ ಯಃ - ಯಾವನು, ಅಸ್ತ್ರೈಃ - ಅಸ್ತ್ರಗಳಿಂದ, ಮಹಾತ್ಮನಃ - ಮಹಾನುಭಾವನಾದ, ಶಕ್ರಸ್ಯ - ಇಂದ್ರನ, ಅಸ್ತ್ರಾಣ್ಯಪಿ - ಅಸ್ತ್ರಗಳನ್ನೂ ಕೂಡ. ಹನ್ಯಾತ್ - ಹೊಡೆವನೋ, ಮಹಾ....ತಃ - ಅಮೂಲ್ಯವಾದ ಹಾಸಿಗೆಯಲ್ಲಿ ಮಲಗುವದಕ್ಕೆ ಅರ್ಹನಾದ, ಸೋಽಯಂ - ಅಂಥಾ ಈ ಲಕ್ಷ್ಮಣನು, ಹತಃ - ಮೃತನಾಗಿ, ಉರ್ವ್ಯಾಂ - ಭೂಮಿಯಲ್ಲಿ ಶೇತೇ - ಮಲಗಿದ್ದಾನೆ. ॥ ೨೧ ॥ ಕಿಂಚ - ಇಷ್ಟುಮಾತ್ರವಲ್ಲದೆ, ಯತ್ - ಯಾವ ಕಾರಣದಿಂದ, ವಿಭೀಷಣಃ - ವಿಭೀಷಣನು, ರಾಕ್ಷಸಾನಾಂ - ರಾಕ್ಷಸರಿಗೆ, ರಾಜಾ - ಅರಸಾಗಿ, ನಕ್ರತಃ - ಮಾಡ

ಗಳಲ್ಲಿಯೂ ನನಗೆ ಪರಿಚರ್ಯೆಗಳನ್ನು ಮಾಡುತ್ತಿದ್ದವನೂ ಆದ ನೀನು ನನ್ನ ದುರ್ನಯದಿಂದಲೇ ಈ ದುರವಸ್ಥೆಗೊಳಗಾದೆಯಲ್ಲವೆ! ಎಲೈ ವೀರಶ್ರೇಷ್ಠನೇ, ಲಕ್ಷ್ಮಣಾ! ನೀನು ಕೋಪಬಂದಾಗಲೂ ಕಠಿನವಾಕ್ಕುಗಳನ್ನು ನುಡಿಯುವವನಲ್ಲ; ನಾನು ನಿನ್ನ ಬಾಯಿಂದ ಯಾವಾಗಲೂ ಕಠಿನವಾಕ್ಕುಗಳನ್ನೇ ಕೇಳಿದವನಲ್ಲ. ಇಂಥ ನೀನು ನನ್ನನ್ನು ತೊರೆದೆಯಾ!', ಎಂದು ವಿಲಪಿಸಿ (ತನ್ನ ಸಮೀಪದಲ್ಲಿಯೇ ಇದ್ದ ವಾನರೇಶ್ವರನಾದ ಸುಗ್ರೀವನನ್ನು ಕುರಿತು ಹೀಗೆಂದನು: "ಎಲೈ ಸುಗ್ರೀವನೇ!) ಕಾರ್ತವೀರ್ಯಾರ್ಜುನನು ಸಹಸ್ರಭುಜಗಳುಳ್ಳವನಾಗಿ ಒಮ್ಮೆ ಐದುನೂರು ಬಾಣಗಳನ್ನು ಏಕಕಾಲದಲ್ಲಿಯೇ ಪ್ರಯೋಗಿಸಿದನು. ಆದರೆ ನನ್ನ ತಮ್ಮನಾದ ಲಕ್ಷ್ಮಣನು ಎರಡೇ ಭುಜಗಳಿಂದ ಆ ಕಾರ್ತವೀರ್ಯಾರ್ಜುನನಿಗಿಂತಲೂ ಬಾಣಸಂಧಾನದಲ್ಲಿ ಶ್ರೇಷ್ಠನೆನಿಸಿದವನು. ॥ ೧೬-೨೦ ॥ ವಾನರೇಶ್ವರ! ನಮ್ಮ ಲಕ್ಷ್ಮಣನು ವಿವಿಧಾಸ್ತ್ರಗಳನ್ನು ಪ್ರಯೋಗಿಸಿ ಮಹಾ ವೀರನಾದ ದೇವೇಂದ್ರನನ್ನೂ ಜಯಿಸಬಲ್ಲ ಸಾಮರ್ಥ್ಯವುಳ್ಳವನು. ಅಂತಹ ಮಹಾನುಭಾವನಾದ ಈತನು ಈಗ ಅಮೂಲ್ಯವಾದ ಈ ವೀರಶಯನದಲ್ಲಿ ಪವಳಿಸಿರುವನು. ಇನ್ನು ನನ್ನ ಬಯಕೆಗಳೆಲ್ಲವೂ ಬಯಲಾದುವು.

ತಚ್ಚ ಮಿಥ್ಯಾಪ್ರಲಪ್ತಂ ಮಾಂ ಪ್ರಧಕ್ಷ್ಯತಿ ನಸಂಶಯಃ ||೨೨|| ಅಸ್ಮಿನ್ ಮುಹೂರ್ತೇ ಸುಗ್ರೀವ ! ಪ್ರತಿಯಾತುಮಿತೋಽರ್ಹಸಿ | ಮತ್ವಾ ಹೀನಂ ಮಯಾ ರಾಜನ್ ರಾವಣೋಽಭಿದ್ರವೇದ್ಬಲೀ ||೨೩|| ಅಂಗದಂ ತು ಪುರಸ್ಕೃತ್ಯ ಸಸೈನ್ಯಸ್ಸಸುಹೃಜ್ಜನಃ | ಸಾಗರಂ ತರ ಸುಗ್ರೀವ ! ನೀಲೇನ ಚ ನಲೇನಚ ||೨೪|| ಕೃತಂ ಹನುಮತಾ ಕಾರ್ಯಂ ಯದನ್ಯೈರ್ದುಷ್ಕರಂ ರಣೇ | ಋಕ್ಷರಾಜೇನ ತುಷ್ಯಾಮಿ ಗೋಲಾಂಗೂಲಾಧಿಪೇನಚ ||೨೫|| ಅಂಗದೇನ ಕೃತಂ ಕರ್ಮ ಮೈಂದೇನ ದ್ವಿವಿದೇನಚ | ಯುದ್ಧಂ ಕೇಸರಿಣಾ

ಲ್ಪಡಲಿಲ್ಲವೋ, ತತ್ - ಆಕಾರಣದದಿಂದ, ಮಿಥ್ಯಾಪ್ರಲಪ್ತಂ - ನಿನ್ನನ್ನು ರಾಜನನ್ನಾಗಿ ಮಾಡುವೆನೆಂದು ಸುಳ್ಳು ಹೇಳಿದ್ದ, ಮಾಂ - ನನ್ನನ್ನು, ಪ್ರಧಕ್ಷ್ಯತಿ - ದಹಿಸುತ್ತಲಿರುವದು, ನಸಂಶಯಃ - ಸಂದೇಹವಿಲ್ಲ. ||೨೨|| ಹೇ ಸುಗ್ರೀವ - ಎಲೈ ಸುಗ್ರೀವನೇ, ಅಸ್ಮಿನ್ಮುಹೂರ್ತೇ - ಈ ಕ್ಷಣದಲ್ಲಿಯೆ, ಇತಃ - ಇಲ್ಲಿಂದ, ಪ್ರತಿಯಾತುಂ - (ಕಿಷ್ಕಿಂಧಾಪಟ್ಟಣಕ್ಕೆ) ಹಿಂತಿರುಗಿ ಹೋಗುವದಕ್ಕಾಗಿ, ಅರ್ಹಸಿ - ಯೋಗ್ಯನಾಗು, ಹೇ ರಾಜನ್ - ಎಲೈ ಅರಸೇ, ಮಯಾ - ನನ್ನಿಂದ, ಹೀನಂ - ರಹಿತನನ್ನಾಗಿ, (ತ್ವಾಂ - ನಿನ್ನನ್ನು), ಮತ್ವಾ - ತಿಳಿದುಕೊಂಡು, ಬಲೀ - ಬಲವಂತನಾದ, ರಾವಣಃ - ರಾವಣನು, ಅಭಿದ್ರವೇತ್ - ಅಟ್ಟಿಬಂದಾನು. ||೨೩|| ಹೇ ಸುಗ್ರೀವ - ಎಲೈ ಸುಗ್ರೀವನೇ, ಅಂಗದಂತು - ಅಂಗದನನ್ನಾದರೆ, ಪುರಸ್ಕೃತ್ಯ - ಮುಂದುಮಾಡಿಕೊಂಡು, ಸಸೈನ್ಯಃ - ಸೇನೆಯಿಂದಲೂ, ಸಸುಹೃಜ್ಜನಃ - ಸ್ನೇಹಿತರಿಂದಲೂ ಕೂಡಿದವನಾಗಿ, ನೀಲೇನಚ - ನೀಲನಿಂದಲೂ, ನಲೇನಚಸಹ - ನಳನಿಂದಲೂ ಕೂಡಿ, ಸಾಗರಂ - ಸಮುದ್ರವನ್ನು, ತರ - ದಾಟುವವನಾಗು. ||೨೪|| ಹೇ ಸುಗ್ರೀವ - ಎಲೈ ಸುಗ್ರೀವನೇ, ಅನ್ಯೈಃ - ಇತರರಿಂದ, ದುಷ್ಕರಂ - ಮಾಡಲಸಾಧ್ಯವಾದ, ಕಾರ್ಯಂ - ಕಾರ್ಯವು, ರಣೇ - ರಣರಂಗದಲ್ಲಿ, ಹನೂಮತಾ - ಆಂಜನೇಯನಿಂದ, ಕೃತಂ - ಮಾಡಲ್ಪಟ್ಟಿತು, ತುಷ್ಯಾಮಿ - ಸಂತೋಷಿಸುತ್ತೇನೆ, ಋಕ್ಷರಾಜೇನ - ಜಾಂಬವಂತನಿಂದಲೂ, ಗೋಲಾಂ....ಚ - ಶಿವಂಗಿಗಳ ಯೂಥಕ್ಕೆ ಅಧಿಪತಿಯಾದ ಗವಾಕ್ಷನಿಂದಲೂ, ಅಂಗದೇವ - ಅಂಗದನಿಂದಲೂ, ಮೈಂದೇನ - ಮೈಂದನಿಂದಲೂ, ದ್ವಿವಿದೇನಚ - ದ್ವಿವಿದನಿಂದಲೂ, ಕರ್ಮ - ಮಹತ್ಕಾರ್ಯವು, ಕೃತಂ - ಮಾಡ

ಅಯ್ಯಾ ; ನಾನು ವಿಭೀಷಣನಿಗೆ ಲಂಕಾರಾಜ್ಯವನ್ನು ಕೊಡುತ್ತೇನೆಂದು ವಾಗ್ದಾನ ಮಾಡಿದೆ. ಆದರೆ ಈಗ ನಾನು ಕೊಟ್ಟ ಮಾತು ಅಸತ್ಯವಾಗಿಹೋಯಿತು. ಆದುದರಿಂದ ಅವನನ್ನು ತನ್ನ ವಾಸಸ್ಥಳಕ್ಕೆ ಹೋಗೆಂದು ತಿಳಿಸು. ಸುಗ್ರೀವರಾಜ! ಇದೆಲ್ಲವೂ ನನ್ನ ದುರದೃಷ್ಟದಿಂದಲೇ ಸಂಭವಿಸಿದುದು. ಈ ವಿಷಯವನ್ನೂ ವಿಭೀಷಣನಿಗೆ ತಿಳಿಸು. ನೀನೂ ಸಹ ನಿನ್ನ ಸೇನೆಗಳೊಡನೆ ಕಿಷ್ಕಿಂಧೆಗೆ ಹೊರಟುಹೋಗು. ನಾನು ಇಲ್ಲವೆಂದು ತಿಳಿದೊಡನೆಯೇ ಮಹಾ ಬಲಾಢ್ಯನಾದ ಆ ರಾವಣನು ನಿನ್ನನ್ನು ಅಟ್ಟಿಬರುವನು. ಆದುದರಿಂದ ನೀನಿಲ್ಲಿರುವುದು ಉಚಿತವಲ್ಲವು. ಇದೂ ಅಲ್ಲದೆ ಎಲೈ ಸುಗ್ರೀವನೇ ! ನೀನು ಅಂಗದನನ್ನು ಮುಂದುಮಾಡಿಕೊಂಡು ಸೇನಾಸಮೇತನಾಗಿ ನಳ ನೀಲಾದಿ ವಾನರಯೂಥಪತಿಗಳೊಡನೆ ಜಾಗ್ರತೆಯಾಗಿ ಸಮುದ್ರವನ್ನು ದಾಟಿ ಹೊರಟುಹೋಗು. ||೨೧—೨೪|| ಎಲೈ ವಾನರೇಶ್ವರನೇ ! ಯಾರಿಂದಲೂ ಮಾಡಲಶಕ್ಯವಾದ ಕಾರ್ಯವನ್ನು ಮಾಡಿ ಹನುಮಂತನು ಬಹಳ ಪ್ರಯಾಸಪಟ್ಟನು. ಗೋಲಾಂಗೂಲಗಳಿಗಧಿಪತಿಯೂ, ಋಕ್ಷಾಧಿಪತಿಯಾದ ಜಾಂಬವಂತನೂ ಬಹಳಘೋರವಾದ ಯುದ್ಧವನ್ನು ಮಾಡಿದರು. ಅಂಗದನೂ, ಸಂಪಾತಿಯೂ ಮೈದನೂ, ದ್ವಿವಿದನೂ, ಕೇಸ

ಸಂಖ್ಯೇ ಘೋರಂ ಸಂಪಾತಿನಾ ಕೃತಂ ||೨೬|| ಗವಯೇನ ಗವಾಕ್ಷೇಣ ಶರಭೇಣ ಗಜೇನಚ | ಅನ್ಯೈಶ್ಚ ಹರಿಭಿರ್ಯುದ್ಧಂ ಮದರ್ಥೇ ತ್ಯಕ್ತಜೀವಿತೈಃ | ನಚಾತಿಕ್ರಮಿತುಂ ಶಕ್ಯಂ ದೈವಂ ಸುಗ್ರೀವ! ಮಾನುಷೈಃ||೨೭|| ಯತ್ತು ಶಕ್ಯಂ ವಯಸ್ಯೇನ ಸುಹೃದಾ ಚ ಪರಂತಪ! | ಕೃತಂ ಸುಗ್ರೀವ! ತತ್ಸರ್ವಂ ಭವತಾಽಧರ್ಮಭೀರುಣಾ ||೨೮|| ಮಿತ್ರಕಾರ್ಯಂ ಕೃತಮಿದಂ ಭವದ್ಭಿರ್ವಾನರರ್ಷಭಾಃ! | ಅನುಜ್ಞಾತಾ ಮಯಾ ಸರ್ವೇ ಯಥೇಷ್ಟಂ ಗಂತುಮರ್ಹಥ" || ೨೯ || ಶುಶ್ರುವುಸ್ತಸ್ಯ ತೇ ಸರ್ವೇ ವಾನರಾಃ ಪರಿದೇವನಂ | ವರ್ತಯಾಂಚಕ್ರುರಶ್ರೂಣಿ ನೇತ್ರೈಃ ಕೃಷ್ಣೇತರೇಕ್ಷಣಾಃ || ೩೦ || ತತ

ಲ್ಪಟ್ಟಿತು, ಸಂಖ್ಯೇ - ಕಾಳಿಗದಲ್ಲಿ, ಘೋರಂ - ಭಯಂಕರವಾದ, ಯುದ್ಧಂ - ಯುದ್ಧವು, ಕೇಸರಿಣಾ-ಕೇಸರಿಯಿಂದಲೂ, ಸಂಪಾತಿನಾ-ಸಂಪಾತಿಯೆಂಬ ವಾನರನಿಂದಲೂ, ಗವಯೇನ-ಗವಯನಿಂದಲೂ, ಗವಾಕ್ಷೇಣ - ಗವಾಕ್ಷನಿಂದಲೂ, ಶರಭೇಣ - ಶರಭನಿಂದಲೂ, ಗಜೇನಚ ಗಜನಿಂದಲೂ, ಕೃತಂ-ಮಾಡಲ್ಪಟ್ಟಿತು, ಮದರ್ಥೇ - ನನ್ನ ನಿಮಿತ್ತವಾಗಿ, ತ್ಯಕ್ತಜೀವಿತೈಃ - ಬಿಡಲ್ಪಟ್ಟ ಪ್ರಾಣಗಳುಳ್ಳ, ಅನ್ಯೈಃ - ಇತರರಾದ, ಹರಿಭಿಶ್ಚ - ವಾನರರಿಂದಲೂ, ಯುದ್ಧಂ - ಕಾಳಿಗವು, ಕೃತಂ - ಮಾಡಲ್ಪಟ್ಟಿತು, ಹೇ ಸುಗ್ರೀವ - ಎಲೈ ಸುಗ್ರೀವನೇ, ದೈವಂ - ದೈವವನ್ನು, ಅತಿಕ್ರಮಿತುಂ - ಮೀರುವದಕ್ಕೆ, ಮಾನುಷೈಃ - ಮನುಷ್ಯರಿಂದ, ನಚಶಕ್ಯಂ - ಆಗುವದೇ ಇಲ್ಲವು. ||೨೬-೨೭|| ಹೇ ಪರಂತಪ - ಎಲೈ ಶತ್ರುಸಂಹಾರಕನೇ, ಯತ್ತು - ಯಾವ ಕಾರ್ಯವಾದರೆ, ವಯಸ್ಯೇನ - ಮಿತ್ರನಿಂದಲಾಗಲಿ, ಸುಹೃದಾಚ - ಒಳ್ಳೆಯ ಮನಸ್ಸಿನಿಂದಲಾಗಲೀ, (ಕರ್ತುಂ - ಮಾಡುವದಕ್ಕೆ, ಶಕ್ಯಂ - ಸಾಧ್ಯವೊ), ಹೇ ಸುಗ್ರೀವ - ಎಲೈ ಸುಗ್ರೀವನೇ, ತತ್ಸರ್ವಂ - ಅದೆಲ್ಲವೂ, ಅಧರ್ಮಭೀರುಣಾ - ಅಧರ್ಮಕ್ಕೆ ಹೆದರಿದ, ಭವತಾ - ನಿನ್ನಿಂದ, ಕೃತಂ - ಮಾಡಲ್ಪಟ್ಟಿತು. ||೨೮|| ಹೇ ವಾನರರ್ಷಭಾಃ - ಎಲೈ ವಾನರ ಶ್ರೇಷ್ಠರೆ, ಇದಂಮಿತ್ರಕಾರ್ಯಂ - ಈ ಸ್ನೇಹಿತನ ಕಾರ್ಯವು, ಭವದ್ಭಿಃ - ನಿಮ್ಮಿಂದ, ಕೃತಂ - ಮಾಡಲ್ಪಟ್ಟಿತು, ಸರ್ವೇ - ಎಲ್ಲರೂ, ಮಯಾ - ನನ್ನಿಂದ, ಅನುಜ್ಞಾತಾಃ - ಆಜ್ಞಾಪಿಸಲ್ಪಟ್ಟವರಾಗಿ, ಯಥೇಷ್ಟಂ - ಇಷ್ಟವಿದ್ದಂತೆ, ಗಂತುಂ - ಹೋಗಲು, ಅರ್ಹಥ - ಯೋಗ್ಯರಾಗಿರಿ. ||೨೯|| ಕೃಷ್ಣೇತರೇಕ್ಷಣಾಃ - ಕೆಂಪಾದ ನೇತ್ರಗಳುಳ್ಳ, ಸರ್ವೇ - ಸಮಸ್ತರಾದ, ತೇವಾನರಾಃ - ಆ ಕಪಿಗಳು, ತಸ್ಯ - ಆ ಶ್ರೀರಾಮನ, ಪರಿದೇವನಂ - ವಿಲಾಪವನ್ನು, ಶುಶ್ರುವುಃ - ಕೇಳಿದರು, ನೇತ್ರೈಃ - ಕಣ್ಣುಗಳಿಂದ,

ರಿಯೂ ಯುದ್ಧದಲ್ಲಿ ಅಮಿತ ಪರಾಕ್ರಮವನ್ನು ಮೆರೆದರು. ಗಜ, ಗವಯ, ಶರಭ, ಗವಾಕ್ಷನೇ ಮೊದಲಾದ ವಾನರೋತ್ತಮರೆಲ್ಲರೂ ಭಯಂಕರವಾದ ಯುದ್ಧವನ್ನು ಮಾಡಿದರು. ಯಾರೆಷ್ಟು ಕಷ್ಟಪಟ್ಟರೂ ಸಾರ್ಥಕವಾಗಲಿಲ್ಲವು. ಆದುದರಿಂದ ಮಾನವರೆಷ್ಟೇ ಪ್ರಯಾಸಪಟ್ಟರೂ ದೈವ ಯತ್ನವನ್ನು ಮೀರಲಾರರು. ||೨೬-೨೭|| ಅಯ್ಯಾ ವಾನರೋತ್ತಮನಾದ ಸುಗ್ರೀವನೇ! ಪರಮ ಮಿತ್ರನೂ, ಸಹೃದಯನೂ, ಅಧರ್ಮಭೀರುವೂ ಆದ ನೀನು ನನಗಾಗಿ ಮಾಡಬೇಕಾದ ಕಾರ್ಯಗಳೆಲ್ಲವನ್ನೂ ಶ್ರದ್ಧೆಯಿಂದಲೂ, ಪರಮೋತ್ಸಾಹದಿಂದಲೂ ಮಾಡಿದೆ. ನೀನು ಮಿತ್ರಕಾರ್ಯವನ್ನು ನಿರ್ವಹಿಸಿದೆ. ಇದರಿಂದ ನಾನು ಆನಂದಿತನಾಗಿರುವೆನು. ಆದರೆ ಪ್ರಕೃತದಲ್ಲಿ ನಾನು ನಿಮ್ಮೆಲ್ಲರಿಗೂ ಆಜ್ಞೆಯಿತ್ತಿರುವೆನು. ನೀವೆಲ್ಲರೂ ಮನಬಂದಂತೆ ಹೊರಟುಹೋಗಿರಿ.'' ಎಂದು ಹೇಳಿದನು. ಶ್ರೀರಾಮಮೂರ್ತಿಯಿಂತೆನಲು ವಾನರವೀರರೆಲ್ಲರೂ ಪರಮದುಃಖಿತರಾಗಿ ಕಣ್ಣೀರು ಸುರಿಸಿದರು. ಆಗ ವಿಭೀಷಣನು ವಾನರಸೈನ್ಯ

ಸ್ಸರ್ವಾಣ್ಯನೀಕಾನಿ ಸ್ಥಾಪಯಿತ್ವಾ ವಿಭೀಷಣಃ । ಆಜಗಾಮ ಗದಾಪಾಣಿಸ್ತ್ವರಿತೋ ಯತ್ರ ರಾಘವಃ ॥ ೩೧ ॥ ತಂ ದೃಷ್ಟ್ವಾ ತ್ವರಿತಂ ಯಾಂತಂ ನೀಲಾಂಜನಚಯೋಪಮಂ । ವಾನರಾ ದುದ್ರುವುಸ್ಸರ್ವೇ ಮನ್ಯಮಾನಾಸ್ತು ರಾವಣಿಂ ॥ ೩೨ ॥

*(ನಿಶ್ಚೇಷ್ಟೌ ವಿಗತಜ್ಞಾನೌ ರಣರೇಣುಸಮುತ್ಕ್ಷಿತೌ ।
ಶಯಾನೌ ಶರತಲ್ಪಸ್ಥೌ ದೃಷ್ಟ್ವಾಮಾಯಾದ್ವಿಭೀಷಣಃ ॥ ೩೩ ॥

ತಂ ರಾಕ್ಷಸೇಂದ್ರಾತ್ಮಜಶಂಕಯಾ
ತೇ ನಿಪಾತಿತೌ ರಾಜಸುತೌ ಚ ದೃಷ್ಟ್ವಾ ।
ವಿಭೀಷಣಂ ವಿವ್ಯಥಿರೇಚ ದೃಷ್ಟ್ವಾ
ನೇಶುರ್ಯಥಾ ವಾಯುಹತಾಃ ಪ್ಲವಂಗಾಃ) ॥ ೩೪ ॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಏಕೋನಪಂಚಾಶಸ್ಸರ್ಗಃ



ಅಶ್ರೂಣಿ - ಕಂಬನಿಗಳನ್ನು, ವರ್ತಯಾಂಚಕ್ರುಃ - ಸುರಿಸಿದರು. ॥ ೩೦ ॥ ತತಃ - ಅನಂತರದಲ್ಲಿ, ವಿಭೀಷಣಃ - ವಿಭೀಷಣನು, ಸರ್ವಾಣಿ - ಸಮಸ್ತವಾದ, ಅನೀಕಾನಿ - ಸೈನ್ಯಗಳನ್ನು, ಸ್ಥಾಪಯಿತ್ವಾ- ನಿಲ್ಲಿಸಿ, ಗದಾಪಾಣಿಃ - ಗದಾಯುಧವೇ ಹಸ್ತದಲ್ಲುಳ್ಳವನಾಗಿ, ಯತ್ರ - ಯಾವ ಸ್ಥಳದಲ್ಲಿ, ರಾಘವಃ- ಶ್ರೀರಾಮನಿರುವನೋ, ತತ್ರ - ಆ ಸ್ಥಳದಲ್ಲಿ, ತ್ವರಿತಃ - ತ್ವರೆಯುಳ್ಳವನಾಗಿ, ಆಜಗಾಮ - ಬಂದನು. ॥೩೧॥ ತ್ವರಿತಂ - ತ್ವರೆಯುಳ್ಳವನಾಗಿ, ಯಾಂತಂ - ಹೋಗುತ್ತಿರುವ, ನೀಲಾಂ....ಮಂ - ಕಾಡಿಗೆಯ ರಾಶಿಗೆ ಸಮಾನವಾಗಿರುವ, ತಂ - ಆ ವಿಭೀಷಣನನ್ನು, ದೃಷ್ಟ್ವಾ - ಕಂಡು, ಸರ್ವೇ - ಸಮಸ್ತರಾದ, ವಾನರಾಸ್ತು - ಕಪಿಗಳಾದರೆ, ರಾವಣಿಂ - ಇಂದ್ರಜಿತ್ತುವನ್ನಾಗಿ, ಮನ್ಯಮಾನಾಃ - ತಿಳಿದು, ದುದ್ರುವುಃ - ಓಡಿಹೋದರು. ॥ ೩೨ ॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಏಕೋನಪಂಚಾಶಸ್ಸರ್ಗಃ



ಗಳೆಲ್ಲವನ್ನೂ ಉಚಿತ ಸ್ಥಾನಗಳಲ್ಲಿ ನಿಲ್ಲಿಸಿ ಬಹು ಜಾಗ್ರತೆಯಾಗಿ ಶ್ರೀರಾಮನಿದ್ದೆಡೆಗೈತಂದನು. ಕಾಡಿಗೆಯ ಬೆಟ್ಟಕ್ಕೆ ಸಮಾನವಾದ ದೇಹಚ್ಛಾಯೆಯುಳ್ಳವನೂ ಬಹು ಬೇಗನೆ ಬರುತ್ತಿರುವವನೂ ಆದ ಆ ವಿಭೀಷಣನನ್ನು ನೋಡಿ ಅಲ್ಲಿದ್ದ ವಾನರರೆಲ್ಲರೂ ಇಂದ್ರಜಿತ್ತುವೇ ಬಂದನೆಂದು ಭಯಚಕಿತರಾಗಿ ಚದುರಿ ಓಡಿಹೋದರು. ॥ ೨೮-೩೨ ॥

ಇಂತಿದು ಶ್ರೀರಾಮಪ್ರಬೋಧನ ವೃತ್ತಾಂತವೆಂಬ ನಲವತ್ತೊಂಬತ್ತನೆಯ
ಸರ್ಗವು ಸಮಾಪ್ತವಾದುದು.



* ಈ ಎರಡು ಶ್ಲೋಕಗಳೂ ಅಧಿಕ ಪಾಠಕ್ಕೆ ಸೇರಿದವು.

# ಯುದ್ಧಕಾಂಡೇ ಪಂಚಾಶಸ್ಸರ್ಗಃ

ಅಥೋವಾಚ ಮಹಾತೇಜಾ ಹರಿರಾಜೋ ಮಹಾಬಲಃ । "ಕಿಮಿಯಂ ವ್ಯಥಿತಾ ಸೇನಾ ಮೂಢವಾತೇವ ನೌಜಲೇ ?" ॥೧॥ ಸುಗ್ರೀವಸ್ಯ ವಚಃ ಶ್ರುತ್ವಾ ವಾಲಿಪುತ್ರೋಽಂಗದೋಽಬ್ರವೀತ್ । "ನತ್ವಂ ಪಶ್ಯಸಿ ರಾಮಂಚ ಲಕ್ಷ್ಮಣಂಚ ಮಹಾಬಲಂ ॥ ೨ ॥ ಶರಜಾಲಾಚಿತೌ ವೀರಾವುಭೌ ದಶರಥಾತ್ಮಜೌ । ಶರತಲ್ಪೇ ಮಹಾತ್ಮಾನೌ ಶಯಾನೌ ರುಧಿರೋಕ್ಷಿತೌ ?" ॥ ೩ ॥ ಅಥಾಽಬ್ರವೀದ್ವಾನರೇಂದ್ರಸ್ಸುಗ್ರೀವಃ ಪುತ್ರಮಂಗದಂ । "ನಾನಿಮಿತ್ತಮಿದಂ ಮನ್ಯೇ ಭವಿತವ್ಯಂ ಭಯೇನ ತು ॥ ೪ ॥

---

ಅಥ - ಅನಂತರದಲ್ಲಿ, ಮಹಾತೇಜಾಃ - ಬಹು ತೇಜೋವಂತನಾದ, ಮಹಾಬಲಃ - ಬಹು ಬಲಾಢ್ಯನಾದ, ಹರಿರಾಜಃ - ವಾನರರಾಜನಾದ ಸುಗ್ರೀವನು, ಜಲೇ - ಉದಕದಲ್ಲಿ, ಮೂಢವಾತಾ - ವಾಯುವಿನಿಂದ ಹೊಡೆಯಲ್ಪಟ್ಟ, ನೌರಿವ - ಹಡಗಿನಂತೆ, ಇಯಂಸೇನಾ - ಈ ಕಪಿಸೇನೆಯು, ಕಿಂ - ಏತಕ್ಕಾಗಿ, ವ್ಯಥಿತಾ - ವ್ಯಥೆಯುಳ್ಳದಾಗಿದೆ, (ಇತಿ - ಇತೆಂದು, ವಾನರಾನ್ - ಕಪಿಗಳನ್ನು ಕುರಿತು), ಉವಾಚ-ಹೇಳಿದನು. ॥ ೧ ॥ ವಾಲಿಪುತ್ರಃ-ವಾಲಿಯ ಮಗನಾದ, ಅಂಗದಃ-ಅಂಗದನು, ಸುಗ್ರೀವಸ್ಯ - ಸುಗ್ರೀವನ, ವಚಃ - ಮಾತನ್ನು, ಶ್ರುತ್ವಾ - ಕೇಳಿ, ಅಬ್ರವೀತ್ - ನುಡಿದನು, ತ್ವಂ - ನೀನು, ರಾಮಂಚ - ಶ್ರೀರಾಮನನ್ನೂ, ಮಹಾಬಲಂ - ಬಹು ಬಲಿಷ್ಠನಾದ, ಲಕ್ಷ್ಮಣಂಚ - ಲಕ್ಷ್ಮಣನು ಎಂಬ, ಮಹಾತ್ಮಾನೌ - ಮಹಾ ಮನಸ್ವಿಗಳಾದ, ವೀರೌ - ಶೂರರಾದ, ಉಭೌ - ಈರ್ವರಾದ, ದಶರಥಾತ್ಮಜೌ - ದಶರಥಪುತ್ರರನ್ನು, ಶರ....ತೌ - ಬಾಣಸಮೂಹಗಳಿಂದ ವ್ಯಾಪ್ತರಾಗಿ, ಶರತಲ್ಪೇ - ಬಾಣವಿಕಾರವಾದ ಹಾಸಿಗೆಯಲ್ಲಿ, ಶಯಾನೌ - ಮಲಗಿ, ರುಧಿರೋಕ್ಷಿತೌ - ರಕ್ತವನ್ನು ಸ್ರವಿಸುತ್ತಿರುವರೆಂದು, ನಪಶ್ಯಸಿ - ನೋಡಲಿಲ್ಲವೇ. ॥ ೨-೩ ॥ ಅಥ - ಅನಂತರದಲ್ಲಿ, ವಾನರೇಂದ್ರಃ - ಕಪೀಶ್ವರನಾದ, ಸುಗ್ರೀವಃ - ಸುಗ್ರೀವನು, ಇದಂ - ರಾಮಲಕ್ಷ್ಮಣರು ಶರತಲ್ಪದಲ್ಲಿ ಮಲಗಿರೋಣವು, ಅನಿಮಿತ್ತಂ - ಕಾರಣವಿಲ್ಲದ್ದು, ನಭವತೀತಿ - ಆಗಲಾರದೆಂದು, ಮನ್ಯೇ - ಎಣಿಸುತ್ತೇನೆ, ಕಿಂತು - ಮತ್ತೇನಂದರೆ, ಭಯೇನ - ಮತ್ತೊಂದು ಭಯದಿಂದ, ಭವಿತವ್ಯಂ -

---

ಆಮೇಲೆ ಮಹಾ ತೇಜಸ್ವಿಯೂ, ಬಲಶಾಲಿಯೂ ಆದ ಸುಗ್ರೀವನು ಓಡಿಹೋಗುತ್ತಿದ್ದ ಆ ವಾನರರೆಲ್ಲರನ್ನೂ ನೋಡಿ, "ಏನಿದು! ಈ ವಾನರಸೇನೆಯೆಲ್ಲವೂ ವಾತಾಹತವಾದ ನಾವೆಯಂತೆ ಚದುರುತ್ತಿದೆ" ಎಂದನು. ಆಗ ವಾಲಿಪುತ್ರನಾದ ಅಂಗದಕುಮಾರನು "ಅಯ್ಯಾ ವಾನರೇಶ್ವರನೇ! ಬಹು ಬಲಸಂಪನ್ನರಾದ ಶ್ರೀರಾಮಲಕ್ಷ್ಮಣರು ವೀರಶಯನದಲ್ಲಿ ಶಯನಿಸಿರುವುದನ್ನು ಕಂಡೂ ನೀನಿಂತು ಕೇಳುವೆಯೇಕೆ? ಮಹಾ ವೀರರೂ, ದಶರಥರಾಜ ಕುಮಾರರೂ ಆದ ಈ ಶ್ರೀರಾಮಲಕ್ಷ್ಮಣರೀರ್ವರೂ ಬಾಣಗಳಿಂದ ವ್ಯಾಪ್ತವಾದ ಗಾತ್ರಗಳುಳ್ಳವರಾಗಿರುವರಲ್ಲವೆ? ಈ ಮಹಾನುಭಾವರು ರಕ್ತದಿಂದ ತೊಯ್ದ ಶರೀರಗಳುಳ್ಳವರಾಗಿ ಈ ಶರತಲ್ಪದಲ್ಲಿ ಪವಳಿಸಿರುವುದನ್ನು ನೋಡಿದೆಯಾ! ಆದುದರಿಂದಲೇ ನಮ್ಮ ವಾನರರೆಲ್ಲರೂ ವ್ಯಸನಸಂತಪ್ತರಾಗಿ ಹೊರಟುಹೋಗಲು ಯತ್ನಿಸುತ್ತಿದ್ದಾರೆ."

ವಿಷಣ್ಣವದನಾಹ್ಯೇತೇ ತ್ಯಕ್ತಪ್ರಹರಣಾ ದಿಶಃ । ಪ್ರಪಲಾಯಂತಿ ಹರಯಸ್ತ್ರಾಸಾದುತ್ಫುಲ್ಲಲೋಚನಾಃ ॥ ೫ ॥ ಅನ್ಯೋನ್ಯಸ್ಯ ನಲಜ್ಜಂತೇ ನನಿರೀಕ್ಷಂತಿ ಪೃಷ್ಠತಃ । ವಿಪ್ರಕರ್ಷಂತಿಚಾನ್ಯೋನ್ಯಂ ಪತಿತಂ ಲಂಘಯಂತಿಚ" ॥ ೬ ॥ ಏತಸ್ಮಿನ್ನಂತರೇ ವೀರೋ ಗದಾಪಾಣಿರ್ವಿಭೀಷಣಃ । ಸುಗ್ರೀವಂ ವರ್ಧಯಾಮಾಸ ರಾಘವಂಚ ನಿರೈಕ್ಷತ ॥೭॥ ವಿಭೀಷಣಂತಂ ಸುಗ್ರೀವೋ ದೃಷ್ಟ್ವಾ ವಾನರಭೀಷಣಂ । ಋಕ್ಷರಾಜಂ ಸಮೀಪಸ್ಥಂ ಜಾಂಬವಂತಮುವಾಚಹ ॥ ೮॥ ವಿಭೀಷಣೋಽಯಂ ಸಂಪ್ರಾಪ್ತೋ ಯಂ ದೃಷ್ಟ್ವಾ

---

ಆಗತಕ್ಕದು, (ಅಥವಾ ಇದಂ - ಈ ಕಪಿಗಳ ಓಡಿಹೋಗೋಣವು,) ಅನಿಮಿತ್ತಂ - ಕಾರಣವಿಲ್ಲದ್ದನ್ನಾಗಿ, ನಮನ್ಯೇ - ತಿಳಿಯಲಾರೆನು, ಭಯೇನ - ನುತ್ತೊಂದು ಭಯದಿಂದ, ಭವಿತವ್ಯಂ - ಆಗಿರಬಹುದು), ತ್ರಾಸಾತ್ - ಭಯದಿಂದ, ಉತ್ಫು....ನಾಃ - ವಿಕಸಿತವಾದ ನೇತ್ರಗಳುಳ್ಳವರಾದ ಕಾರಣ, ತ್ಯಕ್ತಪ್ರಹರಣಾಃ - ಬಿಡಲ್ಪಟ್ಟ ಆಯುಧಗಳುಳ್ಳ, ಏತೇಹರಯಃ - ಈ ಕಪಿಗಳು, ವಿಷಣ್ಣವದನಾಃ - ವ್ಯಾಕುಲವಾದ ಮುಖಗಳುಳ್ಳವರಾಗಿ, ದಿಶಃ - ದಿಕ್ಕುದಿಕ್ಕುಗಳಿಗೂ, ಪ್ರಪಲಾಯಂತಿ - ಓಡಿಹೋಗುತ್ತಾರೆ. ॥ ೪-೫ ॥ ಅನ್ಯೋನ್ಯಸ್ಯ-ಒಬ್ಬರಿಗೊಬ್ಬರು, ನಲಜ್ಜಂತೇ-ನಾಚಿಕೆಗೊಳ್ಳುವದಿಲ್ಲವು, ಪೃಷ್ಠತಃ - ಹಿಂದುಗಡೆ, ನನಿರೀಕ್ಷಂತಿ - ನೋಡುವದಿಲ್ಲವು, ಅನ್ಯೋನ್ಯಂ - ಒಬ್ಬರನ್ನೊಬ್ಬರು, ವಿಪ್ರಕರ್ಷಂತಿ - ಬೇಗ ಹೋಗುವದಕ್ಕೆ ಸೆಳೆಯುತ್ತಾರೆ, ಪತಿತಂಚ - ಬಿದ್ದು, ಲಂಘಯಂತಿ - ದಾಟುವರೆಂದು, ಪುತ್ರಂ - ಮಗನಾದ, ಅಂಗದಂ - ಅಂಗದನನ್ನು ಕುರಿತು, ಅಬ್ರವೀತ್ - ನುಡಿದನು. ॥೬॥ ಏತಸ್ಮಿನ್ನಂತರೇ - ಈ ಮಧ್ಯದಲ್ಲಿ, ವೀರಃ - ಶೂರನಾದ, ವಿಭೀಷಣಃ - ವಿಭೀಷಣನು, ಗದಾಪಾಣಿಃ - ಗದೆಯೇ ಕೈಯಲ್ಲುಳ್ಳವನಾಗಿ, ಸುಗ್ರೀವಂ - ಸುಗ್ರೀವನನ್ನು, ವರ್ಧಯಾಮಾಸ - ವೃದ್ಧಿ ಹೊಂದಿಸಿದನು, ರಾಘವಂಚ - ಶ್ರೀರಾಮನನ್ನೂ ಕೂಡ, ನಿರೈಕ್ಷತ - ನೋಡಿದನು. ॥ ೭ ॥ ವಾನರಭೀಷಣಂ - ವಾನರರಿಗೆ ಭಯಂಕರನಾದ, ತಂವಿಭೀಷಣಂ - ಆ ವಿಭೀಷಣನನ್ನು, ಸುಗ್ರೀವಃ- ಸುಗ್ರೀವನು, ದೃಷ್ಟ್ವಾ - ಕಂಡು, ಸಮೀಪಸ್ಥಂ - ಸಮೀಪದಲ್ಲಿರುವ, ಋಕ್ಷರಾಜಂ - ಕರಡಿಗಳಿಗೆ ಅಧಿಪತಿಯಾದ, ಜಾಂಬವಂತಂ - ಜಾಂಬವಂತನನ್ನು ಕುರಿತು, ಉವಾಚಹ - ಹೇಳಿದನಷ್ಟೆ. ॥ ೮ ॥

---

ಎಂದನು. ಆಗ ಸುಗ್ರೀವನು ಅಂಗದನನ್ನು ಕುರಿತು, "ವತ್ಸ! ಅಂಗದ! ಈ ವಾನರರೆಲ್ಲರೂ ಓಡಿಹೋಗುವುದಕ್ಕೆ ಶ್ರೀರಾಮಲಕ್ಷ್ಮಣರು ವೀರಶಯನದಲ್ಲಿ ಶಯನಿಸಿರುವುದೇ ಕಾರಣವೆಂದು ನನಗೆ ತೋರುವುದಿಲ್ಲ. ಹೀಗೆ ಓಡಿಹೋಗಲು ಮತ್ತಾವುದೋ ಒಂದು ಭಯವು ಕಾರಣವಾಗಿರಬೇಕು. ನೋಡು, ನೋಡು, ಈ ವಾನರರೆಲ್ಲರೂ, ವ್ಯಸನಯುಕ್ತವಾದ ವದನಗಳುಳ್ಳವರೂ, ಆಯುಧಗಳನ್ನು ತೊರೆದವರೂ, ಭಯವಿಸ್ಮಯಗಳಿಂದ ಅರಳಿದ ಕಣ್ಣುಗಳುಳ್ಳವರೂ ಆಗಿ ಲಜ್ಜೆಯನ್ನು ತೊರೆದು ಪಲಾಯನವಾಗುತ್ತಿದ್ದಾರೆ. ಅಯ್ಯಾ ಅಂಗದಕುಮಾರನೇ! ಕೆಲವರು ಹಾರಿ ಹಾರಿ ಬೀಳುತ್ತಿದ್ದಾರೆ. ನೋಡಿದೆಯ?" ಎಂದು ಹೇಳಿದನು. ॥ ೧-೬ ॥ ಇಷ್ಟರಲ್ಲಿಯೇ ವಿಭೀಷಣನು ಗದಾಪಾಣಿಯಾಗಿ ಆ ಸ್ಥಳಕ್ಕೆ ಬಂದು ಸುಗ್ರೀವನಿಗೆ ಉತ್ಸಾಹವನ್ನು ವೃದ್ಧಿಗೊಳಿಸುತ್ತ ರಘುಕುಲೋದ್ಭವನಾದ ಶ್ರೀರಾಮನನ್ನು ನೋಡಿದನು. ಆ ಸಮಯದಲ್ಲಿ ಸುಗ್ರೀವನು ವಾನರಭಲ್ಲೂಕಾಧಿಪತಿಯಾದ ಜಾಂಬವಂತನನ್ನು ಕುರಿತು, "ಅಯ್ಯಾ ಜಾಂಬವಂತನೇ! ನೋಡು; ಈಗ ಬಂದಿರುವವನು ವಿಭೀಷಣನು. ಇವನನ್ನು ನೋಡಿ ನಮ್ಮ ವಾನರರೆಲ್ಲರೂ ಇಂದ್ರ

ವಾನರರ್ಷಭಾಃ । ವಿದ್ರವಂತಿ ಪರಿತ್ರಸ್ತಾ ರಾವಣಾತ್ಮಜಶಂಕಯಾ ॥ ೯ ॥ ಶೀಘ್ರ ಮೇತಾನ್ ಸುಸಂತ್ರಸ್ತಾನ್ ಬಹುಧಾ ವಿಪ್ರಧಾವಿತಾನ್ । ಪರ್ಯವಸ್ಥಾಪಯಾಖ್ಯಾಹಿ ವಿಭೀಷಣಮುಪಸ್ಥಿತಂ ॥೧೦॥ ಸುಗ್ರೀವೇಣೈವಮುಕ್ತಸ್ತು ಜಾಂಬವಾನೃಕ್ಷಪಾರ್ಥಿವಃ। ವಾನರಾನ್ ಸಾಂತ್ವಯಾಮಾಸ ಸನ್ನಿರುಧ್ಯ ಪ್ರಧಾವತಃ ॥ ೧೧ ॥ ತೇ ನಿವೃತ್ತಾಃ ಪುನ ಸ್ಸರ್ವೇ ವಾನರಾಸ್ತ್ಯಕ್ತಸಂಭ್ರಮಾಃ । ಋಕ್ಷರಾಜವಚಃ ಶ್ರುತ್ವಾ ತಂಚ ದೃಷ್ಟ್ವಾ ವಿಭೀಷಣಂ ॥೧೨॥ ವಿಭೀಷಣಸ್ತು ರಾಮಸ್ಯ ದೃಷ್ಟ್ವಾ ಗಾತ್ರಂ ಶರೈಶ್ಚಿತಂ । ಲಕ್ಷ್ಮಣ ಸ್ಯಚ ಧರ್ಮಾತ್ಮಾ ಬಭೂವ ವ್ಯಥಿತೇಂದ್ರಿಯಃ ॥ ೩॥ ಜಲಕ್ಲಿನ್ನೇನ ಹಸ್ತೇನ ತಯೋ

ಯಂ - ಯಾನವನನ್ನು, ದೃಷ್ಟ್ವಾ - ಕಂಡು, ವಾನರರ್ಷಭಾಃ - ಕಪಿಶ್ರೇಷ್ಠರು, ರಾವ....ಯಾ - ರಾವಣನ ಕುವರನಾದ ಇಂದ್ರಜಿತ್ತುವೆಂಬ ಶಂಕೆಯಿಂದ, ಪರಿತ್ರಸ್ತಾಃ - ಹೆದರಿ, ವಿದ್ರವಂತಿ - ಓಡಿ ಹೋಗುವರೋ, ಸುಸಂತ್ರಸ್ತಾನ್ - ಹೆದರಿ, ಬಹುಧಾ - ಬಹು ಪ್ರಕಾರವಾಗಿ, ವಿಪ್ರಧಾವಿತಾನ್ - ಓಡಿಸಲ್ಪಟ್ಟ, ಏತಾನ್ - ಇವರನ್ನು, ಶೀಘ್ರಂ - ಜಾಗ್ರತೆಯಾಗಿ, ಪರ್ಯವಸ್ಥಾಪಯ - ನಿಲ್ಲಿಸು, ವಿಭೀಷಣಂ - ವಿಭೀಷಣನನ್ನು, ಉಪಸ್ಥಿತಂ - ಬಂದವನನ್ನಾಗಿ, ಆಖ್ಯಾಹಿ - ಹೇಳು, ಅಯಂ - ಇವನು, ವಿಭೀಷಣಃ - ವಿಭೀಷಣನು, ಸಂಪ್ರಾಪ್ತಃ - ಬಂದಿದ್ದಾನೆ. ॥ ೯-೧೦ ॥ ಸುಗ್ರೀವೇಣ - ಸುಗ್ರೀವನಿಂದ, ಏವಂ - ಈ ಪ್ರಕಾರವಾಗಿ, ಉಕ್ತಃ - ಹೇಳಲ್ಪಟ್ಟ, ಋಕ್ಷಪಾರ್ಥಿವಃ - ಕರಡಿಗಳಿಗೆ ರಾಜನಾದ, ಜಾಂಬವಾಂಸ್ತು - ಜಾಂಬವಂತನಾದರೆ, ಪ್ರಧಾವತಃ - ಓಡಿಹೋಗುತ್ತಿರುವ, ವಾನರಾನ್ - ಕಪಿಗಳನ್ನು, ಸನ್ನಿರುಧ್ಯ - ತಡೆದು, ಸಾಂತ್ವಯಾಮಾಸ - ಸಮಾಧಾನಗೊಳಿಸಿದನು. ॥೧೧ ಸರ್ವೇ- ಸಮಸ್ತರಾದ, ತೇವಾನರಾಃ - ಆ ಕಪಿಗಳು, ಋಕ್ಷ....ಚಃ - ಜಾಂಬವಂತನ ಮಾತನ್ನು, ಶ್ರುತ್ವಾ - ಕೇಳಿ, ತಂವಿಭೀಷಣಂಚ - ಆ ವಿಭೀಷಣನನ್ನೂ ಸಹ, ದೃಷ್ಟ್ವಾ - ಕಂಡು, ಪುನಃ - ಮತ್ತೆ, ನಿವೃತ್ತಾಃ - ಹಿಂತಿರುಗಿದರು. ॥ ೧೨ ॥ ಧರ್ಮಾತ್ಮಾ - ಧರ್ಮಸ್ವಭಾವವುಳ್ಳ, ವಿಭೀಷಣಸ್ತು - ವಿಭೀಷಣನಾದರೆ, ಶರೈಃ ಬಾಣಗಳಿಂದ, ಚಿತಂ - ವ್ಯಾಪ್ತವಾದ, ರಾಮಸ್ಯ - ಶ್ರೀರಾಮನ, ಗಾತ್ರಂ- ಶರೀರವನ್ನು, ಲಕ್ಷ್ಮಣಸ್ಯಚ - ಲಕ್ಷ್ಮಣನ, ಗಾತ್ರಂ - ಶರೀರವನ್ನು, ದೃಷ್ಟ್ವಾ - ಕಂಡು, ವ್ಯಥಿತೇಂದ್ರಿಯಃ - ಕಲುಷವಾದ, ಇಂದ್ರಿಯಗಳುಳ್ಳವನು, ಬಭೂವ - ಆದನು. ॥ ೧೩ ॥ ಜಲಕ್ಲಿನ್ನೇನ - ಉದಕದಿಂದ ತೋಯಿಸಲ್ಪಟ್ಟ, ಹಸ್ತೇನ - ಕೈಯಿಂದ, ತಯೋಃ - ಆ ರಾಮಲಕ್ಷ್ಮಣರ, ನೇತ್ರೇ -

ಜಿತುವೇ ಬಂದನೆಂಬ ಭ್ರಾಂತಿಯಿಂದ ಭಯಪಟ್ಟು ಓಡಿಹೋಗುತ್ತಿರುವರು. ಆದುದ ರಿಂದ ನೀನೀಗ ವಾನರರೆಲ್ಲರನ್ನೂ ಸಂಬೋಧಿಸಿ, ಈತನು ವಿಭೀಷಣನೇ ಎಂದೂ, ಭಯ ಪಡಲು ಕಾರಣವೇ ಇಲ್ಲವೆಂದೂ ಹೇಳಿ ಸಮಾಧಾನಪಡಿಸುವವನಾಗು ” ಎಂದನು. ॥ ೭-೧೦ ॥ ಆ ಕೂಡಲೇ ಜಾಂಬವಂತನು ಓಡಿಹೋಗುತ್ತಿದ್ದ ವಾನರರೆಲ್ಲರನ್ನೂ ತಡೆದು ಅವರೆಲ್ಲರನ್ನೂ ಸಮಾಧಾನಪಡಿಸಿದನು. ಆಗ ಜಾಂಬವಂತನ ಮಾತುಗಳನ್ನು ಕೇಳಿದ ಆ ವಾನರರೆಲ್ಲರೂ ಭಯುವನ್ನು ತೊರೆದು ಬಂದಿರುವವನು ವಿಭೀಷಣನೇ ಎಂದು ತಿಳಿದು ಓಡುತ್ತಿರುವುದನ್ನು ನಿಲ್ಲಿಸಿದರು. ಆಮೇಲೆ ವಿಭೀಷಣನು ಶ್ರೀರಾಮನ ಸಮೀಪ ಪಕ್ಕೆ ಬಂದು, ಬಾಣಗಳಿಂದ ವ್ಯಾಪ್ತವಾದ ಆತನ ಶರೀರವನ್ನು ನೋಡಿದನು. ಆಮೇಲೆ ಅದೇ ಸ್ಥಿತಿಯಲ್ಲಿಯೇ ಇದ್ದ ಲಕ್ಷ್ಮಣಸ್ವಾಮಿಯನ್ನೂ ನೋಡಿ ಆ ವಿಭೀಷಣನು ದುಃಖದಿಂದ ವ್ಯಾಕುಲವಾದ ಮನಸ್ಸುಳ್ಳವನಾದನು. ಆ ತರುವಾಯ ಆತನು ಶ್ರೀರಾಮಲಕ್ಷ್ಮಣರ

ನೇತ್ರೇ ಪ್ರಮೃಜ್ಯ ಚ । ಶೋಕಸಂಪೀಡಿತಮನಾ ರುರೋದ ವಿಲಲಾಪ ಚ ॥ ೧೪ ॥ " ಇಮೌ ತು ಸತ್ವಸಂಪನ್ನೌ ವಿಕ್ರಾಂತೌ ಪ್ರಿಯಸಂಯುಗೌ । ಇಮಾಮವಸ್ಥಾಂ ಗಮಿತೌ ರಾಕ್ಷಸೈಃ ಕೂಟಯೋಧಿಭಿಃ ॥ ೧೫ ॥ ಭ್ರಾತುಃ ಪುತ್ರೇಣ ಮೇ ತೇನ ದುಷ್ಪುತ್ರೇಣ ದುರಾತ್ಮನಾ । ರಾಕ್ಷಸ್ಯಾ ಜಿಹ್ಮಯಾ ಬುದ್ಧ್ಯಾ ಛಾಲಿತಾವೃಜುವಿಕ್ರಮೌ ॥೧೬॥ ಶರೈರಿಮಾವಿಲಂ ವಿದ್ಧೌ ರುಧಿರೇಣ ಸಮುಕ್ಷಿತೌ । ವಸುಧಾಯಾಮಿಮೌ ಸುಪ್ತೌ ದೃಶ್ಯೇತೇ ಶಲ್ಯಕಾವಿವ ॥೧೭॥ ಯಯೋರ್ವೀರ್ಯಮುಪಾಶ್ರಿತ್ಯ ಪ್ರತಿಷ್ಠಾ ಕಾಂಕ್ಷಿತಾ ಮಯಾ । ತಾವುಭೌ ದೇಹನಾಶಾಯ ಪ್ರಸುಪ್ತೌ ಪುರುಷರ್ಷಭೌ ॥೧೮॥ ಜೀವನ್ನದ್ಯ

ಕಣ್ಣುಗಳನ್ನು, ಪ್ರಮೃಜ್ಯ ಚ - ಒರೆಸಿ, ಶೋಕ....ನಾಃ - ವ್ಯಸನದಿಂದ ಪೀಡಿಸಲ್ಪಟ್ಟ ಮನವುಳ್ಳವನಾಗಿ, ರುರೋದ - ಅತ್ತನು, ವಿಲಲಾಪ ಚ ಪ್ರಲಾಪವನ್ನೂ ಮಾಡಿದನು. ॥೧೪॥ ಸತ್ವಸಂಪನ್ನೌ-ಧೈರ್ಯಸಂಪನ್ನರಿಂದ, ವಿಕ್ರಾಂತೌ - ಪರಾಕ್ರಮಿಗಳಾದ, ಪ್ರಿಯಸಂಯುಗೌ - ಯುದ್ಧಾಪೇಕ್ಷೆಯುಳ್ಳ, ತೌ - ಆ, ಇಮೌ - ಈ ರಾಮಲಕ್ಷ್ಮಣರು, ಕೂಟಯೋಧಿಭಿಃ - ಕಪಟ ಯುದ್ಧಮಾಡುವ, ರಾಕ್ಷಸೈಃ - ರಕ್ಕಸರಿಂದ, ಇಮಾಮವಸ್ಥಾಂ - ಈ ಅವಸ್ಥೆಯನ್ನು, ಗಮಿತೌ - ಹೊಂದಿಸಲ್ಪಟ್ಟರು. ॥ ೧೫ ॥ ದುರಾತ್ಮನಾ - ದುಷ್ಟನಾದ, ದುಷ್ಪುತ್ರೇಣ - ಕಪಟ ಯುದ್ಧಮಾಡುವವರಿಂದ ತಂದೆಗೆ ಅವಮಾನವನ್ನು ತರುವ, ಮೇ - ನನ್ನ, ಭ್ರಾತುಃ - ಅಣ್ಣನಾದ ರಾವಣನ, ಪುತ್ರೇಣ - ಮಗನಾದ, ತೇನ - ಇಂದ್ರಜಿತ್ತುವಿನಿಂದ, ರಾಕ್ಷಸ್ಯಾ - ರಾಕ್ಷಸ ಸಂಬಂಧವಾದ, ಜಿಹ್ಮಯಾ - ವಕ್ರವಾದ, ಬುಧ್ಯಾ-ಮತಿಯಿಂದ, ಋಜುವಿಕ್ರಮೌ-ಸರಿಯಾದ ಪರಾಕ್ರಮವುಳ್ಳ ರಾಮಲಕ್ಷ್ಮಣರು, ಛಾಲಿತೌ-ಚಲಿಸಲ್ಪಟ್ಟವರಾದರು. ॥೧೬॥ ಶರೈಃ - ಬಾಣಗಳಿಂದ, ಅವಿಲಂ - ವಿಶೇಷವಾಗಿ, ವಿದ್ಧೌ - ಹೊಡೆಯಲ್ಪಟ್ಟು, ರುಧಿರೇಣ - ರಕ್ತದಿಂದ, ಸಮುಕ್ಷಿತೌ - ವ್ಯಾಪ್ತರಾಗಿ, ವಸುಧಾಯಾಂ - ನೆಲದಲ್ಲಿ, ಸುಪ್ತೌ - ಮಲಗಿರುವ, ಇಮೌ - ಇವರೀರ್ವರೂ, ಶಲ್ಯಕಾವಿವ - ಮುಳ್ಳುಹಂದಿಗಳಂತೆ, ದೃಶ್ಯೇತೇ-ಕಾಣುತ್ತಿದ್ದಾರೆ. ॥ ೧೭ ॥ ಯಯೋಃ - ಯಾವ ರಾಮಲಕ್ಷ್ಮಣರ, ವೀರ್ಯಂ - ಪರಾಕ್ರಮವನ್ನು, ಉಪಾಶ್ರಿತ್ಯ - ಆಶ್ರಯಿಸಿ, ಪ್ರತಿಷ್ಠಾ - ಸ್ಥಿತಿಯು, ಮಯಾ - ನನ್ನಿಂದ, ಕಾಂಕ್ಷಿತೌ - ಅಪೇಕ್ಷಿಸಲ್ಪಟ್ಟಿತೋ, ಪುರುಷರ್ಷಭೌ - ಪುರುಷಶ್ರೇಷ್ಠರಾದ, ತಾವುಭೌ - ಅವರೀರ್ವರೂ, ದೇಹನಾಶಾಯ -

ನೇತ್ರಗಳನ್ನು ಉದಕದಿಂದ ಒರೆಸಿ ದುಃಖಪೀಡಿತನಾಗಿ, "ಅಯ್ಯೋ ! ಅಧಿಕಬಲ ಸಮನ್ವಿತರೂ, ಯುದ್ಧಪ್ರಿಯರೂ, ಮಹಾ ಪರಾಕ್ರಮವಂತರೂ ಆದ ಈ ಶ್ರೀರಾಮಲಕ್ಷ್ಮಣರಿಬ್ಬರೂ ಕಪಟಯುದ್ಧ ಮಾಡುವಂತಹ ರಾಕ್ಷಸರಿಂದ ಇಂತಹ ದುರವಸ್ಥೆಯನ್ನು ಹೊಂದಿದರಲ್ಲವೆ. ॥ ೧೧–೧೫ ॥ ದುರ್ಮಾರ್ಗನೂ, ನನ್ನ ಅಗ್ರಜನಾದ ರಾವಣಾಸುರನ ಮಗನೂ ಆದ ಇಂದ್ರಜಿತ್ತುವು ಕಪಟಯುದ್ಧವನ್ನು ಮಾಡಿ ಸರಳ ಪರಾಕ್ರಮಿಗಳಾದ ಶ್ರೀರಾಮಲಕ್ಷ್ಮಣರೀರ್ವರನ್ನೂ ಎಂತಹ ದುರವಸ್ಥೆಗೊಳಗಾಗಿಸಿದನು! ಅಕ್ಕಟಾ! ಈಗ ಇವರೀರ್ವರೂ ಬಾಣಪರಂಪರೆಗಳಿಂದ ಬಹಳವಾಗಿ ಪೀಡಿಸಲ್ಪಟ್ಟು ರಕ್ತಸಿಕ್ತವಾದ ಗಾತ್ರಗಳುಳ್ಳವರಾಗಿ ಮುಳ್ಳುಹಂದಿಗಳಂತೆ ನಿದ್ರಿಸುತ್ತಿರುವರೊ ಎಂಬಂತೆ ಭೂಮಿಯಮೇಲೆ ಬಿದ್ದಿರುವರು; ಅಯ್ಯೋ ! ನಾನು ಈ ಶ್ರೀರಾಮಲಕ್ಷ್ಮಣರ ಪರಾಕ್ರಮವನ್ನಾಶ್ರಯಿಸಿ ಮಹೋನ್ನತ ಪದವಿಯನ್ನು ಪಡೆಯಬೇಕೆಂದು ಬಯಸಿದ್ದೆನು. ಇವರೀರ್ವರೂ ಮರಣಕ್ಕಾಗಿ ಭೂಮಿಯಲ್ಲಿ ಪವಳಿಸಿದರಲ್ಲವೆ ! ಇನ್ನು ನನ್ನ ಮನೋರಥಗಳೆಲ್ಲವೂ ಮುರಿದುಹೋದುವು. ಈಗ ಹಗೆಯು

ವಿಪನ್ನೋಽಸ್ಮಿ ನಷ್ಟರಾಜ್ಯಮನೋರಥಃ । ಪ್ರಾಪ್ತಪ್ರತಿಜ್ಞಶ್ಚ ರಿಪುಸ್ಸಕಾಮೋ ರಾವಣಃ ಕೃತಃ" ॥ ೧೯ ॥ ಏವಂ ವಿಲಪಮಾನಂ ತಂ ಪರಿಷ್ವಜ್ಯ ವಿಭೀಷಣಂ । ಸುಗ್ರೀವಸ್ಸತ್ತ್ವ ಸಂಪನ್ನೋ ಹರಿರಾಜೋಽಬ್ರವೀದಿದಂ ॥೨೦॥ "ರಾಜ್ಯಂ ಪ್ರಾಪ್ಸ್ಯಸಿ ಧರ್ಮಜ್ಞ ! ಲಂಕಾಯಾಂ ನಾಽತ್ರ ಸಂಶಯಃ । ರಾವಣಸ್ಸಹಪುತ್ರೇಣ ಸಕಾಮಂ ನೇಹ ಲಪ್ಸ್ಯತೇ ॥ ೨೧ ॥ ನರುಜಾ ಪೀಡಿತಾವೇತಾವುಭೌ ರಾಘವಲಕ್ಷ್ಮಣೌ । ತ್ಯಕ್ತ್ವಾ ಮೋಹಂ ವಧಿಷ್ಯೇತೇ ಸಗಣಂ ರಾವಣಂ ರಣೇ" ॥ ೨೨ ॥ ತಮೇವಂ ಸಾಂತ್ವಯಿತ್ವಾತು ಸಮಾ

---

ಶರೀರ ನಾಶಕ್ಕಾಗಿ, ಪ್ರಸುಪ್ತೌ - ಮಲಗಿರುವರು. ॥ ೧೮ ॥ ಅದ್ಯ - ಈಗ, ಜೀವ - ಬದುಕಿದವ ನಾದರೂ, ನಷ್ಟ....ಥಃ-ನಷ್ಟವಾದ ರಾಜ್ಯವೂ, ಇಷ್ಟಾರ್ಥವೂ ಉಳ್ಳವನಾಗಿ, ಅದ್ಯ-ಈಗ, ವಿಪನ್ನಃ-ನಾಶವನ್ನೈದಿದವನು, ಅಸ್ಮಿ - ಆದೆನು, ರಿಪುಃ - ಶತ್ರುವಾದ, ರಾವಣಃ - ರಾವಣನು, ಪ್ರಾಪ್ತ....ಶ್ಚ-ಹೊಂದಲ್ಪಟ್ಟ ಪ್ರತಿಜ್ಞೆಯುಳ್ಳವನಾಗಿಯೂ, ಸಕಾಮಃ-ಇಷ್ಟಾರ್ಥದಿಂದ ಕೂಡಿದವನಾಗಿಯೂ, ಕೃತಃ-ಮಾಡಲ್ಪಟ್ಟನು. ॥೧೯॥ ಏವಂ-ಈ ಪರಿಯಾಗಿ, ವಿಲಪಮಾನಂ-ವಿಲಾಪ ಮಾಡುತ್ತಿರುವ, ತಂವಿಭೀಷಣಂ-ಆ ವಿಭೀಷಣನನ್ನು, ಪರಿಷ್ವಜ್ಯ-ಅಪ್ಪಿಕೊಂಡು, ಸತ್ತ್ವಸಂಪನ್ನಃ-ಧೈರ್ಯಯುಕ್ತನಾದ, ಹರಿರಾಜಃ-ವಾನರರಾಜನಾದ, ಸುಗ್ರೀವಃ - ಸುಗ್ರೀವನು, ಇದಂ - ಈ ಮಾತನ್ನು, ಅಬ್ರವೀತ್ - ನುಡಿದನು. ॥೨೦॥ ಹೇ ಧರ್ಮಜ್ಞ - ಎಲೈ ಧರ್ಮವನ್ನರಿತವನೇ, ಲಂಕಾಯಾಂ - ಲಂಕಾಪಟ್ಟಣದಲ್ಲಿ, ರಾಜ್ಯಂ-ರಾಜ್ಯವನ್ನು, ಪ್ರಾಪ್ಸ್ಯಸಿ - ಹೊಂದುವೆ, ಅತ್ರ - ಈ ವಿಷಯದಲ್ಲಿ, ನಸಂಶಯಃ - ಸಂದೇಹವಿಲ್ಲ, ಸ ರಾವಣಃ - ಆ ರಾವಣನು, ಸಹಪುತ್ರೇಣ - ಮಗನಿಂದೊಡಗೂಡಿ, ಇಹ - ಈಗ, ಕಾಮಂ - ಇಷ್ಟವನ್ನು, ನಲಪ್ಸ್ಯತೇ - ಹೊಂದುವುದಿಲ್ಲ. ॥ ೨೧ ॥ ಉಭೌ - ಈರ್ವರಾದ, ಏತೌರಾಘವಲಕ್ಷ್ಮಣೌ - ಈ ರಾಮಲಕ್ಷ್ಮಣರು, ಋಜಾ - ಮರಣವನ್ನುಂಟುಮಾಡುವ ರೋಗದಿಂದ, ಪೀಡಿತೌ - ಬಾಧಿತರಾದವರು, ನ-ಅಲ್ಲವು, ಮೋಹಂ-ಅಜ್ಞಾನವನ್ನು, ತ್ಯಕ್ತ್ವಾ-ಬಿಟ್ಟು, ಸಗಣಂ-ಬಂಧುಬಳಗದವರಿಂದ ಕೂಡಿದ, ರಾವಣಂ - ರಾವಣನನ್ನು, ರಣೇ - ಕಾಳಗದಲ್ಲಿ, ವಧಿಷ್ಯೇತೇ - ಸಂಹರಿಸುವರು. ॥೨೨॥ ರಾಕ್ಷಸಂ - ರಕ್ಕಸನಾದ, ತಂ - ಆ ವಿಭೀಷಣನನ್ನು, ಏವಂ - ಈ ಪ್ರಕಾರವಾಗಿ, ಸಾಂತ್ವಯಿತ್ವಾತು - ಸಮಾಧಾನಗೊಳಿಸಿ, ಸಮಾಶ್ವಾಸ್ಯ - ಆದರಿಸಿ, ಪಾರ್ಶ್ವೇ - ಪಕ್ಕದಲ್ಲಿರುವ,

---

ನಾದ ರಾವಣಾಸುರನು ತನ್ನ ಪ್ರತಿಜ್ಞೆಯನ್ನು ಸುಲಭವಾಗಿ ನೆರವೇರಿಸಿಕೊಳ್ಳುವನು. ಅವನ ಮನೋರಥಗಳೆಲ್ಲವೂ ಸಫಲಗಳಾಗುವುವು" ಎಂದು ವಿಲಪಿಸಿದನು. ॥ ೧೬–೧೯ ॥ ಮಹಾ ಬಲನೂ, ವಾನರೇಶ್ವರನೂ ಆದ ಸುಗ್ರೀವನು, ಹೀಗೆ ಪರಮ ದುಃಖಸಮನ್ವಿತನಾಗಿ ವಿಲಪಿಸುತ್ತಿರುವ ವಿಭೀಷಣನನ್ನು ಆಲಿಂಗಿಸಿಕೊಂಡು "ಧರ್ಮಜ್ಞನಾದ ವಿಭೀಷಣನೇ ! ನೀನೀರೀತಿ ದುಃಖಿಸಬೇಡ. ನೀನು ಖಂಡಿತವಾಗಿಯೂ ಲಂಕಾಧಿಪತಿಯಾಗುವೆ. ಈ ವಿಷಯದಲ್ಲಿ ಸ್ವಲ್ಪವೂ ಸಂದೇಹವಿಲ್ಲವು. ರಾವಣನು ಪುತ್ರಮಿತ್ರ ಕಳತ್ರಾದಿಗಳೊಡನೆ ಯಮಸದನವನ್ನೈದುವನಲ್ಲದೆ ಎಂದಿಗೂ ಸಫಲ ಮನೋರಥನಾಗುವುದಿಲ್ಲವು. ಈ ರಾಮಲಕ್ಷ್ಮಣರೀರ್ವರೂ, ನೀನು ಶಂಕಿಸುವ ಮರಣವ್ಯಾಧಿಯಿಂದ ಪೀಡಿತರಾಗುವುದಿಲ್ಲವು. ನೀನು ಭಯಪಡಬೇಡ. ಇವರು ಇನ್ನು ಸ್ವಲ್ಪಕಾಲದಲ್ಲಿಯೇ ಮೂರ್ಛೆತಿಳಿದೆದ್ದು ರಾವಣಾಸುರನೊಡನೆ ಯುದ್ಧ ಮಾಡಿ ಅವನನ್ನು ಪುತ್ರಮಿತ್ರ ಕಳತ್ರಾದಿಗಳೊಡನೆ ಯಮಪುರಿಗಟ್ಟಿಬಿಡುವನು. ಇದನ್ನು ದೃಢವಾಗಿ ನಂಬು." ಎಂದು ಹೇಳಿದನು. ಸುಗ್ರೀವರಾಜನು ಈ ರೀತಿ ರಾಕ್ಷಸೋತ್ತಮ

ಶ್ಚಾಸ್ಯಚ ರಾಕ್ಷಸಂ । ಸುಷೇಣಂ ಶ್ವಶುರಂ ಪಾರ್ಶ್ವೇ ಸುಗ್ರೀವಸ್ತಮುವಾಚಹ ॥೨೩॥ "ಸಹಶೂರೈರ್ಹರಿಗಣೈರ್ಲಬ್ಧಸಂಜ್ಞಾವರಿಂದಮೌ । ಗಚ್ಛತ್ವಂ ಭ್ರಾತರೌ ಗೃಹ್ಯ ಕಿಷ್ಕಿಂಧಾಂ ರಾಮಲಕ್ಷ್ಮಣೌ ॥ ೨೪ ॥ ಅಹಂತು ರಾವಣಂ ಹತ್ವಾ ಸಪುತ್ರಂ ಸಹ ಬಾಂಧವಂ । ಮೈಥಿಲೀಮಾನಯಿಷ್ಯಾಮಿ ಶಕ್ರೋ ನಷ್ಟಾಮಿವ ಶ್ರಿಯಂ" ॥ ೨೫ ॥ ಶ್ರುತ್ವೈತದ್ವಾನರೇಂದ್ರಸ್ಯ ಸುಷೇಣೋ ವಾಕ್ಯಮಬ್ರವೀತ್ । "ದೈವಾಸುರಂ ಮಹ ದ್ಯುದ್ಧಮನುಭೂತಂ ಸುದಾರುಣಂ ॥ ೨೬ ॥ ತದಾಸ್ಮ ದಾನವಾ ದೇವಾನ್ ಶರಸಂಸ್ಪರ್ಶ ಕೋವಿದಾಃ । ನಿಜಘ್ನುಃ ಶಸ್ತ್ರವಿದುಷಶ್ಛಾದಯಂತೋ ಮುಹುರ್ಮುಹುಃ ॥ ೨೭ ॥ ತಾನಾರ್ತಾನ್ನಷ್ಟಸಂಜ್ಞಾಂಶ್ಚ ಪರಾಸೂಂಶ್ಚ ಬೃಹಸ್ಪತಿಃ । ವಿದ್ಯಾಭಿರ್ಮಂತ್ರಯುಕ್ತಾ

---

ಶ್ವಶುರಂ - ಮಾವನಾದ, ತಂಸುಷೇಣಂ - ಆ ಸುಷೇಣನನ್ನು ಕುರಿತು, ಉವಾಚಹ - ಹೇಳಿದನಷ್ಟೆ. ॥೨೩॥ ಶೂರೈಃ - ವೀರರಾದ, ಹರಿಗಣೈಸ್ಸಹ - ವಾನರ ಸಮೂಹಗಳೊಡನೆ, ಲಬ್ಧಸಂಜ್ಞೌ - ಹೊಂದ ಲ್ಪಟ್ಟ ಪ್ರಜ್ಞೆಯುಳ್ಳ, ಅರಿಂದಮೌ - ಶತ್ರುಸಂಹಾರಕರಾದ, ಭ್ರಾತರೌ - ಅಣ್ಣತಮ್ಮಂದಿರಾದ, ರಾಮಲಕ್ಷ್ಮಣೌ - ರಾಮಲಕ್ಷ್ಮಣರನ್ನು, ಗೃಹ್ಯ - ತೆಗೆದುಕೊಂಡು, ತ್ವಂ - ನೀನು, ಕಿಷ್ಕಿಂಧಾಂ - ಕಿಷ್ಕಿಂಧಾಪಟ್ಟಣವನ್ನು ಕುರಿತು, ಗಚ್ಛ - ತೆರಳು. ॥ ೨೪ ॥ ಅಹಂತು - ನಾನಾದರೆ, ಸಪುತ್ರಂ - ಮಗನಿಂದ ಕೂಡಿದ, ಸಹಬಾಂಧವಂ - ಬಂಧುಸಹಿತನಾದ, ರಾವಣಂ - ರಾವಣನನ್ನು, ಹತ್ವಾ - ಕೊಂದು, ಶಕ್ರಃ - ದೇವೇಂದ್ರನು, ನಷ್ಟಾಂ - ಕಳೆದುಹೋದ, ಶ್ರಿಯಮಿವ - ರಾಜ್ಯಲಕ್ಷ್ಮಿಯನ್ನಂತೆ, ಮೈಥಿಲೀಂ - ಸೀತಾದೇವಿಯನ್ನು, ಆನಯಿಷ್ಯಾಮಿ - ಕರೆತರುವೆನು, ವಾನರೇಂದ್ರಸ್ಯ - ಸುಗ್ರೀವನ, ಏತತ್ - ಈ ಮಾತನ್ನು, ಶ್ರುತ್ವಾ - ಕೇಳಿ, ಸುಷೇಣಃ - ಸುಷೇಣನು, ವಾಕ್ಯಂ - ಮಾತನ್ನು, ಅಬ್ರವೀತ್ - ನುಡಿದನು. ॥೨೫॥ ದೈವಾಸುರಂ - ದೇವರಾಕ್ಷಸ ಸಂಬಂಧವಾದ, ಸುದಾರುಣಂ - ಮಹಾ ಭಯಂಕರವಾದ, ಮಹತ್ - ಮಹತ್ತರವಾದ, ಯುದ್ಧಂ - ಕಾಳಗವು, ಅನುಭೂತಂ - ನನ್ನಿಂದ ತಿಳಿಯಲ್ಪಟ್ಟಿದೆ, ತದಾ - ಆ ಕಾಲದಲ್ಲಿ, ಶರ....ದಾಃ - ಬಾಣಸಂಧಾನದಲ್ಲಿ ಸಮರ್ಥರಾದ, ಶಸ್ತ್ರ ವಿದುಷಃ - ಶಸ್ತ್ರಗಳನ್ನು ತಿಳಿದಿರುವ, ದಾನವಾಃ - ರಕ್ಕಸರು, ದೇವಾನ್ - ದೇವತೆಗಳನ್ನು, ಮುಹು ರ್ಮುಹುಃ - ಬಾರಿಬಾರಿಗೂ, ಛಾದಯಂತಃ - ಮುಚ್ಚಿ, ನಿಜಘ್ನುಃ - ಹೊಡೆದರಷ್ಟೆ. ॥ ೨೬-೨೭ ॥ ಆರ್ತಾನ್ - ಬಾಧಿತರಾದ, ನಷ್ಟಸಂಜ್ಞಾಂಶ್ಚ - ಪ್ರಜ್ಞೆತಪ್ಪಿರುವ, ಪರಾಸೂಂಶ್ಚ - ನಷ್ಟಪ್ರಾಯರಾದ,

---

ನಾದ ವಿಭೀಷಣನನ್ನು ಸಮಾಧಾನಪಡಿಸಿ, ತನ್ನ ಪಾರ್ಶ್ವದಲ್ಲಿದ್ದ ತನ್ನ ಮಾವನಾದ ಸುಷೇಣ ನನ್ನು ಕುರಿತು, "ಎಲೈ ಮಾವನೇ! ಶತ್ರುಮರ್ದನರಾದ ಈ ರಾಜಪುತ್ರರೀರ್ವರೂ ಮೂರ್ಛೆ ತಿಳಿದೆದ್ದಮೇಲೆ ನೀನು ಇವರನ್ನು ಕರೆದುಕೊಂಡು ವಾನರಯೂಥಪತಿಗಳೊಡನೆ ಅಯೋಧ್ಯಾ ನಗರಕ್ಕೆ ಹೊರಡು. ನಾನು ರಾವಣಾಸುರನನ್ನು ಪುತ್ರಮಿತ್ರ, ಕಳತ್ರಾದಿಗಳೊಡನೆ ರಣ ರಂಗದಲ್ಲಿ ಸಂಹರಿಸಿ, ದೇವೇಂದ್ರನು ಜಯಲಕ್ಷ್ಮಿಯನ್ನು ಕರೆತಂದಂತೆ ಶ್ರೀರಾಮಪತ್ನಿ ಯಾದ ಸೀತಾದೇವಿಯನ್ನು ಕರೆತರುವೆನು. ಎಂದನು. ॥ ೨೦-೨೫ ॥ ಆಗ ಸುಷೇಣನು ಸುಗ್ರೀವನನ್ನು ಕುರಿತು, "ಅಯ್ಯಾ ಸುಗ್ರೀವನೇ! ಹಿಂದೆ ದೇವದಾನವರಿಗೆ ಭಯಂಕರ ವಾದ ಯುದ್ಧವಾಯಿತು. ಆಗ ಶರಸಂಸ್ಪರ್ಶದಿಂದ ಶಸ್ತ್ರವೇತ್ತರಾದ ದಾನವರು ದೇವತೆ ಗಳನ್ನು ಬಹಳವಾಗಿ ಪೀಡಿಸಿದರು. ಆ ಸಮಯದಲ್ಲಿ ಬಾಣಪೀಡಿತರಾಗಿ ಮೂರ್ಛೆಗೊಂಡಿ ರುವ ದೇವತೆಗಳಿಗೆ ಬೃಹಸ್ಪತಿಯು ಮಂತ್ರಗಳಿಂದಲೂ, ಓಷಧಿಗಳಿಂದಲೂ ಚಿಕಿತ್ಸೆ ಮಾಡಿ

ಭಿರೋಷಧೀಭಿಶ್ಚಿಕಿತ್ಸತಿ ||೨೮|| ತಾನ್ಯೌಷಧಾನ್ಯಾನಯಿತುಂ ಕ್ಷೀರೋದಂ ಯಾಂತು ಸಾಗರಂ | ಜವೇನ ವಾನರಾಃ ಶೀಘ್ರಂ ಸಂಪಾತಿಪನಸಾದಯಃ ||೨೯|| ಹರಯಸ್ತು ವಿಜಾನಂತಿ ಪಾರ್ವತೀಸ್ತಾ ಮಹೌಷಧೀಃ | ಸಂಜೀವಕರಣೀಂ ದಿವ್ಯಾಂ ವಿಶಲ್ಯಾಂ ದೇವನಿರ್ಮಿತಾಂ || ೩೦ || ಚಂದ್ರಶ್ಚ ನಾಮ ದ್ರೋಣಶ್ಚ ಕ್ಷೀರೋದೇ ಸಾಗರೋತ್ತಮೇ | ಅಮೃತಂ ಯತ್ರ ಮಥಿತಂ ತತ್ರ ತೇ ಪರಮೌಷಧೀ || ೩೧ || ತೇ ತತ್ರ ನಿಹಿತೇ ದೇವೈಃ ಪರ್ವತೇ ಪರಮೌಷಧೀ | ಅಯಂ ವಾಯುಸುತೋ ರಾಜನ್!

---

ತಾನ್ - ಆ ದೇವತೆಗಳನ್ನು, ಬೃಹಸ್ಪತಿಃ - ದೇವಗುರುವು, ಮಂತ್ರಯುಕ್ತಾಭಿಃ - ಮಂತ್ರಪ್ರಚುರವಾಗಿರುವ, ವಿದ್ಯಾಭಿಃ - ಮೃತಸಂಜೀವಿನಿಯೇ ಮೊದಲಾದ ವಿದ್ಯೆಗಳಿಂದಲೂ, ಓಷಧೀಭಿಃ - ಮೂಲಿಕೆಗಳಿಂದಲೂ, ಚಿಕಿತ್ಸತಿ - ಚಿಕಿತ್ಸೆ ಮಾಡಿದನು. || ೨೮ || ತಾನ್ಯೌಷಧಾನಿ - ಆ ಔಷಧಗಳನ್ನು, ಶೀಘ್ರಂ - ಜಾಗ್ರತೆಯಾಗಿ, ಆನಯಿತುಂ - ತರುವದಕ್ಕಾಗಿ, ಸಂಪಾ....ಯಃ - ಸಂಪಾತಿಪನಸನೇ ಮೊದಲಾದ, ವಾನರಾಃ - ಕಪಿಗಳು, ಜವೇನ - ವೇಗದಿಂದ, ಕ್ಷೀರೋದಂಸಾಗರಂ - ಪಾಲ್ಗಡಲನ್ನು ಕುರಿತು, ಯಾಂತು - ಹೋಗಲಿ, ಹರಯಸ್ತು - ಕಪಿಗಳಾದರೆ, ಪಾರ್ವತೀಃ - ಪರ್ವತದಲ್ಲಿರುವ, ತಾಮಹೌಷಧೀಃ - ಆ ಮಹೌಷಧಿಗಳನ್ನು, ವಿಜಾನಂತ - ತಿಳಿದಿದ್ದಾರೆ. ||೨೯|| ದಿವ್ಯಾಂ - ದೇವತಾಸಂಬಂಧವಾದ, ಸಂಜೀವಕರಣೀಂ - ಸಂಜೀವಕರಣಿಯೆಂಬ ಲತೆಯನ್ನೂ, ದೇವನಿರ್ಮಿತಾಂ - ದೇವತೆಗಳಿಂದ ನಿರ್ಮಿತವಾದ, ವಿಶಲ್ಯಾಂ - ವಿಶಲ್ಯಕರಣೀ ಎಂಬ ಲತೆಯನ್ನೂ, (ಆನಯಿತುಂ - ತರುವದಕ್ಕೆ), ಯಾಂತು ಹೋಗಲಿ. || ೩೦ || ಸಾಗರೋತ್ತಮೇ - ಸಮುದ್ರಶ್ರೇಷ್ಠವಾದ, ಯತ್ರ ಕ್ಷೀರೋದೇ - ಯಾವ ಪಾಲ್ಗಡಲಿನಲ್ಲಿ, ಅಮೃತಂ - ಅಮೃತವು, ಮಥಿತಂ - ಕಡೆಯಲ್ಪಟ್ಟಿತೋ, ತತ್ರ - ಅಲ್ಲಿ, ಚಂದ್ರಶ್ಚ - ಚಂದ್ರವೆಂಬ ಪರ್ವತವೂ, ದ್ರೋಣಶ್ಚನಾಮ - ದ್ರೋಣಪರ್ವತವೆಂದು ಹೆಸರುಳ್ಳವುಗಳೂ, ಸ್ತಃ - ಇರುವುವು, ತಯೋಃ ಆ ಎರಡು ಪರ್ವತಗಳಲ್ಲಿಯೂ, ತೇಪರಮೌಷಧೀ - ಆ ಉತ್ತಮವಾದ ಓಷಧಿಗಳಿವೆ, ತತ್ರಪರ್ವತೇ - ಆ ಪರ್ವತಗಳಲ್ಲಿ, ತೇಪರಮೌಷಧೀ - ಉತ್ತಮವಾದ ಆ ಓಷದಿಗಳು, ದೇವೈಃ ದೇವತೆಗಳಿಂದ, ನಿಹಿತೇ - ಇಡಲ್ಪಟ್ಟವೆ. ||೩೧|| ಹೇ ರಾಜನ್ - ಎಲೈ ಅರಸನೇ, ವಾಯುಸುತಃ - ವಾಯುಪುತ್ರನಾದ, ಅಯಂಹನುಮಾನ್ - ಈ ಹನುಮಂತನು, ತತ್ರ -

---

ದನು. ಆ ಓಷಧಿಗಳೆಲ್ಲವೂ ಈಗ ಕ್ಷೀರಸಮುದ್ರತೀರದಲ್ಲಿರುವುವು. ಅವುಗಳನ್ನು ತೆಗೆದುಕೊಂಡು ಬರುವುದಕ್ಕೋಸ್ಕರ ವಾನರರನ್ನು ಜಾಗ್ರತೆಯಾಗಿ ಕಳುಹಿಸು. ಅವರು ಕ್ಷೀರಸಾಗರದ ಬಳಿಗೆ ಹೋಗಿ ಜಾಗ್ರತೆಯಾಗಿ ಆ ಔಷಧಿಗಳನ್ನು ತರಲಿ. ಸಂಪಾತಿ ಪನಸನೇ ಮೊದಲಾದ ವಾನರವೀರರು ಅವುಗಳನ್ನು ತರಲು ಈಗಲೇ ಪ್ರಯಾಣ ಮಾಡಲಿ. ವಾನರರೆಲ್ಲರೂ ಆ ಕ್ಷೀರಸಾಗರದ ಸಮೀಪದಲ್ಲಿರುವ ಪರ್ವತಗಳಲ್ಲಿಯ ಮೂಲಿಕೆಗಳೆಲ್ಲವನ್ನೂ ಚೆನ್ನಾಗಿ ಗುರ್ತರಿತಿರುವರು. || ೨೮-೩೦ || ಅಲ್ಲಿ ಚಂದ್ರವೆಂದೂ, ದ್ರೋಣವೆಂದೂ ಎರಡು ಪರ್ವತಗಳಿರುವುವು. ಅವುಗಳಲ್ಲಿ ದೇವನಿರ್ಮಿತವಾದ ಸಂಜೀವಕರಣಿ, ವಿಶಲ್ಯಕರಣಿ ಎಂಬ ಹೆಸರುಳ್ಳ ಎರಡು ಮೂಲಿಕೆಗಳಿರುವುವು. ಆ ಪರ್ವತ ಸಮೀಪದಲ್ಲಿಯೇ ಹಿಂದೆ ದೇವತೆಗಳು ಅಮೃತಮಂಥನವನ್ನು ಮಾಡಿದರು. ಆದುದರಿಂದ ಆ ಔಷಧ ಮೂಲಿಕೆಗಳನ್ನು ಆ ಪರ್ವತ ಸಮೀಪದಲ್ಲಿಯೇ ಇರಿಸಿದರು.” ಎಂದು ಹೇಳಿ ಮತ್ತೂ ಅವನನ್ನು ಕುರಿತು, “ವಾನರರಾಜೋತ್ತಮನಾದ ಸುಗ್ರೀವನೇ! ವಾಯುಪುತ್ರನಾದ ಈ ಹನುಮಂತನು ಅಲ್ಲಿಗೆ ಹೋಗಲು

ಹನುಮಾಂಸ್ತತ್ರ ಗಚ್ಛತು" || ೩೨ || ಏತಸ್ಮಿನ್ನಂತರೇ ವಾಯುರ್ಮೇಘಾಂಶ್ಚಾಪಿ ಸವಿದ್ಯುತಃ । ಪರ್ಯಸ್ಯನ್ ಸಾಗರೇ ತೋಯಂ ಕಂಪಯನ್ನಿವ ಮೇದಿನೀಂ || ೩೩ || ಮಹತಾ ಪಕ್ಷವಾತೇನ ಸರ್ವದ್ವೀಪಮಹಾದ್ರುಮಾಃ । ನಿಪೇತುರ್ಭಗ್ನವಿಟಪಾಸ್ಸಮೂಲಾ ಲವಣಾಂಭಸಿ ||೩೪|| ಅಭವನ್ ಪನ್ನಗಾಸ್ತ್ರಸ್ತಾ ಭೋಗಿನಸ್ತತ್ರ ವಾಸಿನಃ । ಶೀಘ್ರಂ ಸರ್ವಾಣಿ ಯಾದಾಂಸಿ ಜಗ್ಮುಶ್ಚ ಲವಣಾರ್ಣವಂ || ೩೫ || ತತೋ ಮುಹೂರ್ತಾದ್ಗರುಡಂ ವೈನತೇಯಂ ಮಹಾಬಲಂ । ವಾನರಾ ದದೃಶುಸ್ಸರ್ವೇ ಜ್ವಲಂತಮಿವ ಪಾವಕಂ || ೩೬ || ತಮಾಗತಮಭಿಪ್ರೇಕ್ಷ್ಯ ನಾಗಾಸ್ತೇ ವಿಪ್ರದುದ್ರುವುಃ । ಯೈಸ್ತೌ

---

ಅಲ್ಲಿಗೆ, ಗಚ್ಛತು - ಹೋಗಲಿ. || ೩೨ || ಏತಸ್ಮಿನಂತರೇ - ಈ ಸಮಯದಲ್ಲಿ, ಸವಿದ್ಯುತಃ - ಮಿಂಚುಗಳಿಂದೊಡಗೂಡಿದ, ಮೇಘಾಂಶ್ಚಾಪಿ - ಮೇಘಗಳನ್ನೂ, ಸಾಗರೇ - ಸಮುದ್ರದಲ್ಲಿರುವ, ತೋಯಂ ಚಾಪಿ - ಉದಕವನ್ನೂ ಕೂಡ, ಪರ್ಯಸ್ಯನ್ - ಸುತ್ತುಮುತ್ತಲೂ ಎರಚಿ, ಮೇದಿನೀಂ - ಭೂಮಿಯನ್ನು, ಕಂಪಯನ್ನಿವಸ್ಥಿತಃ-ಕಂಪಿಸುವಂತಿರುವ, ವಾಯುಃ-ಗರುಡನ, ಪಕ್ಷವಾಯುವು, ಅಭೂತ್-ಉಂಟಾಯಿತು, ಮಹತಾ - ಮಹತ್ತರವಾದ, ಪಕ್ಷವಾತೇನ - ಗರಿಗಳ ಗಾಳಿಯಿಂದ, ಸರ್ವ....ಮಾಃ - ಸಮಸ್ತವಾದ ಲಂಕಾದ್ವೀಪದಲ್ಲಿರುವ ದೊಡ್ಡ ವೃಕ್ಷಗಳೂ, ಭಗ್ನವಿಟಪಾಃ - ಮುರಿದ ರೆಂಬೆಗಳುಳ್ಳವುಗಳಾಗಿ, ಸಮೂಲಾಃ - ಬುಡಗಳಿಂದ ಕೂಡಾ, ಲವಣಾಂಭಸಿ - ಲವಣಸಮುದ್ರದಲ್ಲಿ, ನಿಪೇತುಃ - ಬಿದ್ದುವು. || ೩೩-೩೪ || ತ್ರಸ್ತಾಃ - ಹೆದರಿದವುಗಳು, ಅಭವನ್ - ಆದವು, ಭೋಗಿನಃ - ದೊಡ್ಡ ಹೆಡೆಗಳುಳ್ಳ, ಪನ್ನಗಾಃ - ಸರ್ಪಗಳೂ, ತತ್ರವಾಸಿನಃ - ಆ ಸಮುದ್ರದಲ್ಲಿರುವ, ಸರ್ವಾಣಿ - ಸಮಸ್ತವಾದ, ಯಾದಾಂಸಿ - ಜಲಜಂತುಗಳೂ, ತ್ರಸ್ತಾಃ - ಹೆದರಿದವುಗಳು, ಅಭವನ್ - ಆದವು, ಶೀಘ್ರಂ - ಜಾಗ್ರತೆಯಾಗಿ, ಲವಣಾರ್ಣವಂಚ - ಲವಣ ಸಮುದ್ರವನ್ನೂ ಕೂಡ, ಜಗ್ಮುಃ - ಹೊಂದಿದವು.||೩೫|| ತತಃ - ಅನಂತರಲ್ಲಿ, ಮುಹೂರ್ತಾತ್ - ಕ್ಷಣಮಾತ್ರದಲ್ಲಿ, ಸರ್ವೇ - ಸಮಸ್ತರಾದ, ವಾನರಾಃ - ಕಪಿಗಳು, ಪಾವಕಮಿವ - ಅಗ್ನಿಯಂತೆ, ಜ್ವಲಂತಂ - ಹೊಳೆಯುತ್ತಿರುವ, ವೈನತೇಯಂ - ವಿನತಾಪುತ್ರನಾದ, ಮಹಾಬಲಂ - ಬಹು ಬಲವಂತನಾದ, ಗರುಡಂ - ಗರುಡನನ್ನು, ದದೃಶುಃ - ಕಂಡರು. || ೩೬ || ಮಹಾಬಲೌ - ಬಹು ಬಲವಂತರಾದ, ಸತ್ಪುರುಷೌ - ಸಜ್ಜನರಾದ, ತೌ - ಆ ರಾಮಲಕ್ಷ್ಮಣರು, ಶರಭೂತೈಃ - ಬಾಣಗಳ ರೂಪವಾಗಿರುವ, ಯೈಃ - ಯಾವ ಸರ್ಪಗಳಿಂದ, ಬದ್ಧೌ -

---

ಯೋಗ್ಯನಾದವನು. ಇತರರಾರೂ ಅಲ್ಲಿಗೆ ಹೋಗಲಾರರು" ಎಂದು ಹೇಳಿದನು. ಇಷ್ಟರಲ್ಲಿಯೇ ಮಿಂಚಿನ ಬಳ್ಳಿಗಳೊಡಗೂಡಿದ ಮೇಘಪಙ್ಕ್ತಿಗಳನ್ನು ಅತ್ತಿತ್ತ ಚದುರಿಸುತ್ತ, ಸಮುದ್ರೋದಕವನ್ನು ಅಲ್ಲಕಲ್ಲೋಲಗೊಳಿಸುತ್ತ, ಭೂಭಾಗವೆಲ್ಲವನ್ನೂ ನಡುಗಿಸುತ್ತ ಆಕಸ್ಮತ್ತಾಗಿ ಒಂದು ಮಹಾ ವಾಯುವು ಉದಿಸಿತು. ಆ ಮಹಾ ವಾಯುವಿನಿಂದ ಲಂಕಾದ್ವೀಪದಲ್ಲಿರುವ ಮಹಾ ವೃಕ್ಷಗಳೆಲ್ಲವೂ ಆ ಮಹಾ ವಾಯುವಿನೊಡನೆಯೇ ಬಂದು ಲವಣ ಸಮುದ್ರದಲ್ಲಿ ಬಿದ್ದುವು. || ೩೧—೩೫ || ಸ್ವಲ್ಪ ಹೊತ್ತಿನಮೇಲೆ ಆ ದ್ವೀಪಗಳಲ್ಲಿರುವ ದೊಡ್ಡ ದೊಡ್ಡ ಹೆಡೆಗಳುಳ್ಳ ಸರ್ಪಗಳೂ, ಇತರ ಮೃಗಗಳೂ ಆ ವಾಯುವಿನೊಡನೆಯೇ ಬಂದು ಲವಣಸಮುದ್ರದಲ್ಲಿ ಬಿದ್ದುವು. ಆಮೇಲೆ ಅಲ್ಲಿದ್ದ ಸಮಸ್ತ ವಾನರರೂ, ಮಹಾ ಬಲಾಢ್ಯನೂ, ಯಜ್ಞೇಶ್ವರನಂತೆ ದಿವ್ಯಕಾಂತಿಯಿಂದ ವಿರಾಜಿಸುತ್ತಿರುವವನೂ ಆದ ಗರುತ್ಮಂತನನ್ನು ಕಂಡರು. ಆತನು ಬಂದೊಡನೆಯೇ ಶ್ರೀರಾಮಲಕ್ಷ್ಮಣರನ್ನು ಬಂಧಿಸಿದ್ದ ಸರ್ಪ

ಸತ್ಪುರುಷೌ ಬದ್ಧೌ ಶರಭೂತೈರ್ಮಹಾಬಲೌ ||೩೭|| ತತಃ ಸುಪರ್ಣಃ ಕಾಕುತ್ಸ್ಥೌ ದೃಷ್ಟ್ವಾ ಪ್ರತ್ಯಭಿನಂದಿತಃ । ವಿಮಮರ್ಶ ಚ ಪಾಣಿಭ್ಯಾಂ ಮುಖೇ ಚಂದ್ರಸಮಪ್ರಭೇ ||೩೮|| ವೈನತೇಯೇನ ಸಂಸ್ಪೃಷ್ಟಾಸ್ತಯೋಸ್ಸಂರುರುಹುರ್ವ್ರಣಾಃ । ಸುವರ್ಣೇ ಚ ತನೂ ಸ್ನಿಗ್ಧೇ ತಯೋರಾಶು ಬಭೂವತುಃ || ೩೯ || ತೇಜೋ ವೀರ್ಯಂ ಬಲಂ ಚೌಜ ಉತ್ಸಾಹಶ್ಚ ಮಹಾಗುಣಃ । ✻ಪ್ರದರ್ಶನಂ ಚ ಬುದ್ಧಿಶ್ಚ ಸ್ಮೃತಿಶ್ಚ ದ್ವಿಗುಣಂ ತಯೋಃ || ೪೦ || ತಾವುತ್ಥಾಪ್ಯ ಮಹಾವೀರ್ಯೌ ಗರುಡೋ ವಾಸವೋಪಮೌ । ಉಭೌ ತೌ ಸಸ್ವಜೇ ಹೃಷ್ಟೋ ರಾಮಶ್ಚೈನಮುವಾಚ ಹ || ೪೧ || "ಭವತ್ಪ್ರಸಾದಾ

ಕಟ್ಟಲ್ಪಟ್ಟರೋ, ತೇ ನಾಗಾಃ-ಆ ಸರ್ಪಗಳು, ಆಗತಂ-ಬಂದ, ತಂ-ಆ ಗರುಡನನ್ನು, ಅಭಿಪ್ರೇಕ್ಷ್ಯ-ಕಂಡು, ವಿಪ್ರದುದ್ರುವುಃ - ಓಡಿಹೋದವು. ||೩೭|| ತತಃ - ಅನಂತರದಲ್ಲಿ, ಸುಪರ್ಣಃ - ಗರುಡನು, ಕಾಕುತ್ಸ್ಥೌ - ಶ್ರೀರಾಮಲಕ್ಷ್ಮಣರನ್ನು, ದೃಷ್ಟ್ವಾ - ಕಂಡು, ಪ್ರತ್ಯಭಿನಂದಿತಃ - ಸಂತೋಷಗೊಳಿಸಲ್ಪಟ್ಟವನಾಗಿ, ಚಂದ್ರಸಮಪ್ರಭೇ - ಚಂದ್ರಸದೃಶವಾದ ಕಾಂತಿಯುಳ್ಳ, ಮುಖೇ - ಮುಖಗಳನ್ನು, ಪಾಣಿಭ್ಯಾಂ ಚ - ಹಸ್ತಗಳಿಂದ, ವಿಮಮರ್ಶ - ಸ್ಪರ್ಶಿಸಿದನು. || ೩೮ || ವೈನತೇಯೇನ - ಗರುಡನಿಂದ, ಸಂಸ್ಪೃಷ್ಟಾಃ - ಸ್ಪರ್ಶಿಸಲ್ಪಟ್ಟ, ತಯೋಃ - ಆ ರಾಮಲಕ್ಷ್ಮಣರು, ವ್ರಣಾಃ - ಗಾಯಗಳು, ಸಂರುರುಹುಃ - ವಾಸಿಯಾದವು, ತಯೋಃ - ಅವರ, ತನೂ ಚ - ಶರೀರಗಳೂ ಕೂಡ, ಆಶು - ಜಾಗ್ರತೆಯಾಗಿ, ಸುವರ್ಣೇ - ಒಳ್ಳೇ ಬಣ್ಣವುಳ್ಳವುಗಳೂ, ಸ್ನಿಗ್ಧೇ - ನುಣುಪಾದವುಗಳೂ ಸಹಾ, ಬಭೂವತುಃ-ಆದವು. || ೩೯ || ತಯೋಃ - ಆ ರಾಮಲಕ್ಷ್ಮಣರಿಗೆ, ತೇಜಃ - ಶತ್ರುತಿರಸ್ಕಾರದಲ್ಲಿ ಸಾಮರ್ಥ್ಯವೂ, ವೀರ್ಯಂ - ಪರಾಕ್ರಮವೂ, ಬಲಂ - ದೇಹತ್ರಾಣವೂ, ಓಜಶ್ಚ - ಕಾಂತಿಯೂ, ಉತ್ಸಾಹಶ್ಚ - ಲೋಕೋತ್ತರ ಕಾರ್ಯಗಳಲ್ಲಿ ಸ್ಥಿರ ಪ್ರಯತ್ನವೆಂಬ, ಮಹಾಗುಣಃ - ದೊಡ್ಡ ಗುಣವೂ, ಪ್ರದರ್ಶನಂ - ಸೂಕ್ಷ್ಮಾರ್ಥಪರಿಜ್ಞಾನವೂ, ಬುದ್ಧಿಃ - ವಿವೇಕವೂ, ಸ್ಮೃತಿಶ್ಚ - ಸ್ಮರಣೆಯೂ, ದ್ವಿಗುಣಂ - ಎರಡರಷ್ಟು, ಬಭೂವ - ಉಂಟಾಯಿತು. || ೪೦ || ಗರುಡಃ - ಗರುಡನು, ಮಹಾವೀರ್ಯೌ - ಬಹಳ ಸಾಮರ್ಥ್ಯವುಳ್ಳ, ವಾಸವೋಪಮೌ - ದೇವೇಂದ್ರನಿಗೆ ಸಮಾನರಾದ, ಹೃಷ್ಟೌ - ಸಂತೋಷಗೊಂಡ, ತಾವುಭೌ - ಆ ರಾಮಲಕ್ಷ್ಮಣರಿಬ್ಬರನ್ನೂ, ಉತ್ಥಾಪ್ಯ - ಎಬ್ಬಿಸಿ, ಸಸ್ವಜೇ - ಅಪ್ಪಿ

ಗಳೆಲ್ಲವೂ ಭಯದಿಂದ ತತ್ತಳಿಸಿದವುಗಳಾಗಿ ಬಿಟ್ಟು ಹೊರಟುಹೋದುವು. ಆ ಬಳಿಕ ಮಹಾತ್ಮನಾದ ಗರುತ್ಮಂತನು ಆ ರಾಮಲಕ್ಷ್ಮಣರೀರ್ವರನ್ನೂ ಕಂಡು ಮಹದಾನಂದಭರಿತನಾಗಿ ಚಂದ್ರಸಮಾನವಾದ ಅವರ ಮುಖಗಳನ್ನು ತನ್ನ ಕೈಯಿಂದ ಒರಿಸಿದನು. ಗರುತ್ಮಂತನ ಹಸ್ತಸ್ಪರ್ಶವಾದೊಡನೆಯೇ ಆ ರಾಮಲಕ್ಷ್ಮಣರ ಸರ್ವಾವಯಗಳಲ್ಲಿಯೂ ಇದ್ದ ವ್ರಣಗಳೆಲ್ಲವೂ ವಾಸಿಹೋಗಿ ಹಿಂದಿನಂತೆಯೇ ಅವ್ರಣವಾದುವು. ಆ ತರುವಾಯ ಸ್ವಲ್ಪಹೊತ್ತಿನಮೇಲೆ ಆ ಶ್ರೀರಾಮಲಕ್ಷ್ಮಣರೀರ್ವರಿಗೂ ಬಲವೂ, ವೀರ್ಯವೂ, ಉತ್ಸಾಹವೂ, ಓಜಸ್ಸೂ, ನೋಟವೂ, ಬುದ್ಧಿಯೂ ಮೊದಲಿನಂತೆಯೇ ಉಂಟಾದುವು. ||೩೭–೪೦|| ಹೀಗೆ ಮಹೇಂದ್ರಸಮಾನರೂ, ಮಹಾ ಪರಾಕ್ರಮಿಗಳೂ ಆದ ಶ್ರೀರಾಮಲಕ್ಷ್ಮಣರು ಪೂರ್ವದಂತೆಯೇ ಬಲವೀರ್ಯಸಂಪನ್ನರಾಗಲು ಆ ಗರುತ್ಮಂತನು ಅವರೀರ್ವರನ್ನೂ

✻ ಈ ಪಾದದ ಏಳನೆಯ ಅಕ್ಷರವಾದ "ಧಿ" ಕಾರವು ಗಾಯತ್ರಿಯ ಸಪ್ತದಶಾ (ಹದಿನೇಳನೆಯ) ಅಕ್ಷರವು.

ದ್ವ್ಯಸನಂ ರಾವಣಿಪ್ರಭವಂ ಮಹತ್ । ಆವಾಮಿಹವ್ಯತಿಕ್ರಾಂತೌ ಪೂರ್ವವದ್ಬಲಿನೌ ಕೃತೌ ॥ ೪೨ ॥ ಯಥಾ ತಾತಂ ದಶರಥಂ ಯಥಾಽಜಂಚ ಪಿತಾಮಹಂ । ತಥಾ ಭವಂತಮಾಸಾದ್ಯ ಹೃದಯಂ ಮೇ ಪ್ರಸೀದತಿ॥೪೩॥ ಕೋ ಭವಾನ್ ರೂಪಸಂಪನ್ನೋ ದಿವ್ಯಸ್ರಗನುಲೇಪನಃ । ವಸಾನೋ ವಿರಜೇ ವಸ್ತ್ರೇ ದಿವ್ಯಾಭರಣಭೂಷಿತಃ ?" ॥೪೪॥ ತಮುವಾಚ ಮಹಾತೇಜಾ ವೈನತೇಯೋ ಮಹಾಬಲಃ । ಪತತ್ರಿರಾಜಃ ಪ್ರೀತಾತ್ಮಾ ಹರ್ಷಪರ್ಯಾಕುಲೇಕ್ಷಣಃ ॥ ೪೫ ॥ "ಅಹಂ ಸಖಾ ತೇ ಕಾಕುತ್ಸ್ಥ! ಪ್ರಿಯಃ

ಕೊಂಡನು, ರಾಮಶ್ಚ - ಶ್ರೀರಾಮನೂ, ಏನಂ - ಈ ಗರುಡನನ್ನು ಕುರಿತು, ಉವಾಚಹ - ಹೇಳಿದನಷ್ಟೆ. ॥೪೧॥ ಭವತ್ಪ್ರಸಾದಾತ್ - ನಿನ್ನ ಅನುಗ್ರಹದಿಂದ, ರಾವಣಿಪ್ರಭವಂ - ಇಂದ್ರಜಿತ್ತುವಿನಿಂದ ಹುಟ್ಟಿದ, ಮಹತ್ - ದೊಡ್ಡದಾದ, ವ್ಯಸನಂ - ದುಃಖವನ್ನು, ಆವಾಂ - ನಾವು, ಇಹ - ಈಗ, ವ್ಯತಿಕ್ರಾಂತೌ - ಕಳೆದುಕೊಂಡೆವು, ಪೂರ್ವವತ್ - ಮೊದಲಿನಂತೆ, ಬಲಿನೌ - ಬಲಿಷ್ಠರಾಗಿ, ಕೃತೌ - ಮಾಡಲ್ಪಟ್ಟೆವು. ॥೪೨॥ ತಾತಂ - ತಂದೆಯಾದ, ದಶರಥಂ - ದಶರಥ ಮಹಾರಾಯನನ್ನು, ಆಸಾದ್ಯ- ಹೊಂದಿ, ಯಥಾ - ಹೇಗೆಯೋ, ಪಿತಾಮಹಂ - ತಾತನಾದ, ಅಜಂಚ - ಅಜಮಹಾರಾಯನನ್ನು, ಆಸಾದ್ಯ - ಹೊಂದಿ, ಯಥಾ - ಹೇಗೆಯೋ, ತಥಾ - ಹಾಗೆ, ಭವಂತಂ ನಿನ್ನನ್ನು, ಆಸಾದ್ಯ - ಹೊಂದಿ, ಮೇ - ನನ್ನ, ಹೃದಯಂ - ಮನವು, ಪ್ರಸೀದತಿ - ಪ್ರಸನ್ನವಾಗುತ್ತಿದೆ. ॥೪೩॥ ಭವಾನ್ - ನೀನು, ರೂಪಸಂಪನ್ನಃ - ಸೌಂದರ್ಯದಿಂದ ಕೂಡಿಕೊಂಡಿದ್ದೀಯೆ, ದಿವ್ಯಸ್ರಗನುಲೇಪನಃ - ದೇವತಾ ಸಂಬಂಧವಾದ ಪುಷ್ಪಮಾಲಿಕೆಗಳೂ ಗಂಧಲೇಪನವೂ ಉಳ್ಳವನಾಗಿದ್ದೀಯೆ, ವಿರಜೇ - ಮಲಿನವಲ್ಲದಿರುವ, ವಸ್ತ್ರೇ - ವಸ್ತ್ರಗಳನ್ನು, ವಸಾನಃ - ಉಟ್ಟಿರುವ, ದಿವ್ಯಾ.....ತಃ - ದೇವತಾಸಂಬಂಧವಾದ ಒಡವೆಗಳಿಂದಲಂಕೃತನಾಗಿರುವ ನೀನು, ಕಃ - ಯಾರು, ॥೪೪॥ ಮಹಾತೇಜಾಃ - ಬಹಳ ಪರಾಕ್ರಮಶಾಲಿಯಾದ, ಮಹಾಬಲಃ - ಮಹಾ ಸಾಮರ್ಥ್ಯವಂತನಾದ, ಪತತ್ರಿರಾಜಃ - ಪಕ್ಷಿ ರಾಜನಾದ, ವೈನತೇಯಃ - ಗರುಡನು, ಪ್ರೀತಾತ್ಮಾ - ಸಂತುಷ್ಟವಾದ ಮನವುಳ್ಳವನೂ, ಹರ್ಷ....ಣಃ- ಸಂತೋಷದಿಂದ ಅರಳಿದ ನೇತ್ರಗಳುಳ್ಳವನೂ ಆಗಿ, ತಂ - ಆ ಶ್ರೀರಾಮನನ್ನು ಕುರಿತು, ಉವಾಚ - ಹೇಳಿದನು. ॥೪೫॥ ಹೇ ಕಾಕುತ್ಸ್ಥ - ಎಲೈ ಶ್ರೀರಾಮನೇ, ಅಹಂ - ನಾನು, ಸಖಾ - ಸ್ನೇಹಿತನು,

ಆಲಿಂಗಿಸಿಕೊಂಡನು. ಆಗ ಪರಮಾನಂದಭರಿತನಾದ ಶ್ರೀರಾಮಮೂರ್ತಿಯು ಆ ಗರುತ್ಮಂತನನ್ನು ಕುರಿತು, "ಎಲೈ ದಿವ್ಯ ಪುರುಷನೇ! ನಿನ್ನ ಅನುಗ್ರಹದಿಂದ ನಾವಿಬರೂ ನಿನ್ನ ಅನುಗ್ರಹದಿಂದ ರಾವಣಾಸುರನ ಮಗನಾದ ಇಂದ್ರಜಿತ್ತುವಿನ ಮೂಲಕ ಉಂಟಾಗಿದ್ದ ಮಹದಾಪತ್ತಿನಿಂದ ಪಾರಾದೆವು. ಇಷ್ಟೆಯುಲ್ಲದೆ ನಾವಿಬ್ಬರೂ ಮೊದಲಿನಂತೆ ಬಲವೀರ್ಯ ಸಂಪನ್ನರಾದೆವು. ನಮ್ಮ ತಂದೆಯಾದ ದಶರಥರಾಯನನ್ನೂ, ತಾತನಾದ ಅಜರಾಯನನ್ನೂ ನೋಡಿದಾಗ ನಮಗುಂಟಾಗುವ ಆನಂದವೂ, ಪ್ರೀತಿಯೂ ಮಹಾತ್ಮನಾದ ನಿನ್ನನ್ನು ನೋಡಿದುದರಿಂದುಂಟಾಗಿರುವುದು. ಅತಿಶಯ ರೂಪಸಂಪನ್ನನೂ ದಿವ್ಯತರವಾದ ಪುಷ್ಪಮಾಲಿಕೆಗಳನ್ನು ಧರಿಸಿರುವವನೂ, ದಿವ್ಯಗಂಧಾನುಲಿಪ್ತನೂ, ದಿವ್ಯವಸ್ತ್ರಾಲಂಕೃತನೂ, ದಿವ್ಯಾಭರಣ ಭೂಷಿತನೂ ಆಗಿರುವ ನೀನಾರು? ನಿನ್ನ ವೃತ್ತಾಂತವೇ ನಮಗೆ ತಿಳಿಯದಾಗಿರುವುದು. ಆದುದರಿಂದ ಈ ರೀತಿ ಕೇಳುತ್ತಿರುವೆನು. ದಯವಿಟ್ಟು ಹೇಳುವವನಾಗು" ಎಂದು ಕೇಳಿದನು. ॥೪೧-೪೫॥ ಆಗ ಮಹಾ ತೇಜಸ್ಸಂಪನ್ನನಾದ ಗರುತ್ಮಂತನು ಸುಪ್ರೀತ

ಪ್ರಾಣೋ ಬಹಿಶ್ಚರಃ । ಗರುತ್ಮಾನಿಹ ಸಂಪ್ರಾಪ್ತೋ ಯುವಾಭ್ಯಾಂ ಸಾಹ್ಯಕಾರಣಾತ್ ॥ ೪೬ ॥ ಅಸುರಾ ವಾ ಮಹಾವೀರ್ಯಾ ದಾನವಾ ವಾ ಮಹಾಬಲಾಃ । ಸುರಾಶ್ಚಾಪಿ ಸಗಂಧರ್ವಾಃ ಪುರಸ್ಕೃತ್ಯ ಶತಕ್ರತುಂ ॥ ೪೭ ॥ ನೇಮಂ ಮೋಕ್ಷಯಿತುಂ ಶಕ್ತಾ ಶ್ಶರಬಂಧಂ ಸುದಾರುಣಂ । ಮಾಯಾಬಲಾದಿಂದ್ರಜಿತಾ ನಿರ್ಮಿತಂ ಕ್ರೂರಕರ್ಮಣಾ ॥ ೪೮ ॥ ಏತೇ ನಾಗಾಃ ಕಾದ್ರವೇಯಾ ಸ್ತೀಕ್ಷ್ಣದಂಷ್ಟ್ರಾ ವಿಷೋಲ್ಬಣಾಃ । ರಕ್ಷೋಮಾಯಾಪ್ರಭಾವೇನ ಶರಾ ಭೂತ್ವಾ ತ್ವದಾಶ್ರಿತಾಃ ॥೪೯॥ ಸಭಾಗ್ಯಶ್ಚಾಸಿ ಧರ್ಮಜ್ಞ ! ರಾಮ ! ಸತ್ಯಪರಾಕ್ರಮ ! । ಲಕ್ಷ್ಮಣೇನ ಸಹಭ್ರಾತ್ರಾ ಸಮರೇ ರಿಪುಘಾತಿನಾ" ॥೫೦॥

---

ಪ್ರಿಯಃ - ಇಷ್ಟನಾದ, ಬಹಿಶ್ಚರಃಪ್ರಾಣಃ - ಹೊರಗೆ ಸಂಚಾರಮಾಡುವ ಪ್ರಾಣಪ್ರಾಯನಾದ, ಗರುತ್ಮಾನ್ - ಗರುತ್ಮಂತನೆಂಬವನು, ಯುವಾಭ್ಯಾಂ - ನಿಮಗೋಸುಗ, ಸಾಹ್ಯಕಾರಣಾತ್ - ಸಹಾಯವನ್ನು ಮಾಡುವ ನಿಮಿತ್ತವಾಗಿ, ಇಹ - ಇಲ್ಲಿಗೆ, ಸಂಪ್ರಾಪ್ತಃ - ಬಂದವನಾದೆನು. ॥ ೪೬ ॥ ಮಹಾವೀರ್ಯಾಃ - ಮಹಾ ಪರಾಕ್ರಮಶಾಲಿಗಳಾದ, ಅಸುರಾವಾ - ರಾಕ್ಷಸರೇ ಆಗಲಿ, ಮಹಾಬಲಾಃ - ಬಹಳ ಬಲವಂತರಾದ, ದಾನವಾವಾ - ದಾನವರೇ ಆಗಲೀ, ಶತಕ್ರತುಃ - ದೇವೇಂದ್ರನನ್ನು, ಪುರಸ್ಕೃತ್ಯ - ಮುಂದುಮಾಡಿಕೊಂಡು, ಸಗಂಧರ್ವಾಃ - ಗಂಧರ್ವರಿಂದೊಡಗೂಡಿದ, ಸುರಾಶ್ಚಾಪಿ-ದೇವತೆಗಳೇ ಆಗಲಿ, ಕ್ರೂರಕರ್ಮಣಾ-ಕ್ರೂರವಾದ ವ್ಯಾಪಾರವುಳ್ಳ, ಇಂದ್ರಜಿತಾ-ಇಂದ್ರಜಿತ್ತುವಿನಿಂದ, ಮಾಯಾಬಲಾತ್-ಮಾಯಾಶಕ್ತಿಯಿಂದ, ನಿರ್ಮಿತಂ ಸೃಷ್ಟಿಮಾಡಲ್ಪಟ್ಟ, ಸುದಾರುಣಂ - ಭಯಂಕರವಾದ, ಇಮಂಶರಬಂಧಂ - ಈ ಬಾಣರೂಪವಾದ ನಾಗಬಂಧನವನ್ನು, ಮೋಕ್ಷಯಿತುಂ - ಬಿಡಿಸುವದಕ್ಕೆ ನಶಕ್ತಾಃ - ಶಕ್ತರಲ್ಲಪ್ಪ. ॥ ೪೮ ॥ ಏತೇನಾಗಾ - ಈ ಸರ್ಪಗಳು, ಕಾದ್ರವೇಯಾಃ - ಕದ್ರೂದೇವಿಯ ಮಕ್ಕಳು, ತೀಕ್ಷ್ಣದಂಷ್ಟ್ರಾ - ತೀಕ್ಷ್ಣವಾದ ಕೋರೆಹಲ್ಲುಗಳುಳ್ಳವುಗಳು, ವಿಷೋಲ್ಬಣಾಃ - ಮಹಾ ವಿಷದ, ರಕ್ಷೋ....ನ - ರಾಕ್ಷಸನ ಮಾಯಾಶಕ್ತಿಯಿಂದ, ಶರಾಃ - ಬಾಣಗಳು, ಭೂತ್ವಾ - ಆಗಿ, ತ್ವದಾಶ್ರಿತಾಃ - ನಿನ್ನನ್ನು ಆಶ್ರಯಿಸಿದವು. ॥ ೪೯ ॥ ಹೇ ಧರ್ಮಜ್ಞ - ಎಲೈ ಧರ್ಮವನ್ನರಿತವನೇ, ಹೇ ರಾಮ - ಎಲೈ ಶ್ರೀರಾಮನೇ, ಹೇ ಸತ್ಯಪರಾಕ್ರಮ-ಎಲೈ ಸಫಲವಾದ ಪರಾಕ್ರಮವುಳ್ಳವನೇ, ಸಮರೇ-ಕಾಳಗದಲ್ಲಿ, ರಿಪುಘಾತಿನಾ-ಶತ್ರುಸಂಹಾರಕನಾದ, ಭ್ರಾತ್ರಾ - ತಮ್ಮನಾದ, ಲಕ್ಷ್ಮಣೇನಸಹ ಲಕ್ಷ್ಮಣನೊಡನೆ, ಸಭಾಗಶ್ಚ -

---

ಮನಸ್ಕನಾಗಿ ಶ್ರೀರಾಮಮೂರ್ತಿಯನ್ನು ಕರಿತು, "ಎಲೈ ಕಾಕುತ್ಸ್ಥನೇ! ನಾನು ನಿನ್ನ ಸ್ನೇಹಿತನು ; ಬಹಿಃಪ್ರಾಣಗಳಿಗೆ ಸಮಾನನಾದವನು. ನನ್ನ ಹೆಸರು ಗರುತ್ಮಂತನು. ನಾನು ನಿಮ್ಮಿಬ್ಬರಿಗೂ ಸಹಾಯಮಾಡಲೋಸುಗವೇ ಇಲ್ಲಿಗೈತಂದೆನು. ಮಹಾ ವೀರ್ಯಸಂಪನ್ನರಾದ ಅಸುರರಾಗಲಿ, ಮಹಾ ಬಲಾಢ್ಯರಾದ ದಾನವರಾಗಲಿ, ದೇವಗಂಧರ್ವಸಿದ್ಧರೇ ಆಗಲಿ, ದುರ್ಮಾರ್ಗನಾದ ಇಂದ್ರಜಿತ್ತುವು ಪ್ರಯೋಗಿಸಿದ ಈ ಶರಬಂಧವನ್ನು ಬಿಡಿಸಲಾರರು. ಕದ್ರೂದೇವಿಯ ಮಕ್ಕಳೂ, ಮಹಾ ಬಲಶಾಲಿಗಳೂ, ಬಹು ತೀಕ್ಷ್ಣಗಳಾದ ಕೋರೆಹಲ್ಲುಗಳುಳ್ಳವುಗಳೂ, ಮಹಾ ವಿಷಗಳೂ ಆದ ಈ ಸರ್ಪಗಳೆಲ್ಲವೂ ಇಂದ್ರಜಿತ್ತುವಿನ ಮಾಯಾಬಲದಿಂದ ಬಾಣರೂಪವನ್ನು ಧರಿಸಿ ನಿಮ್ಮನ್ನು ಬಾಧಿಸಿದುವು. ಎಲೈ ಸತ್ಯಪರಾಕ್ರಮಿಯಾದ ಶ್ರೀರಾಮಮೂರ್ತಿಯೇ, ಧರ್ಮಜ್ಞನೇ! ಯುದ್ಧಭೂಮಿಯಲ್ಲಿ ಶತ್ರುಸಂಹಾರಕನಾದ ಲಕ್ಷ್ಮಣಸ್ವಾಮಿಯೊಡಗೂಡಿದವನಾಗಿ ನೀನು ಈ ಶರಬಂಧನದಿಂದ ವಿಮುಕ್ತನಾದೆಯಾದುದ

ಇಮಂ ಶ್ರುತ್ವಾತು ವೃತ್ತಾಂತಂ ತ್ವರಮಾಣೋಽಹಮಾಗತಃ । ಸಹಸಾ ಯುವಯೋಸ್ಸ್ನೇಹಾತ್ಸಖಿತ್ವಮನುಪಾಲಯನ್ ॥ ೫೧ ॥ ಮೋಕ್ಷಿತೌಚ ಮಹಾಘೋರಾದಸ್ಮಾತ್ಸಾಯಕಬಂಧನಾತ್ । ಅಪ್ರಮಾದಶ್ಚ ಕರ್ತವ್ಯೋ ಯುವಾಭ್ಯಾಂ ನಿತ್ಯಮೇವಹಿ ॥ ೫೨ ॥ ಪ್ರಕೃತ್ಯಾ ರಾಕ್ಷಸಾಸ್ಸರ್ವೇ ಸಂಗ್ರಾಮೇ ಕೂಟಯೋಧಿನಃ । ಶೂರಾಣಾಂ ಶುದ್ಧಭಾವಾನಾಂ ಭವತಾಮಾರ್ಜವಂ ಬಲಂ ॥೫೩॥ ತನ್ನವಿಶ್ವಸಿತವ್ಯಂ ವೋ ರಾಕ್ಷಸಾನಾಂ ರಣಾಜಿರೇ । ಏತೇನೈವೋಪಮಾನೇನ ನಿತ್ಯಂ ಜಿಹ್ಮಾಹಿ ರಾಕ್ಷಸಾಃ" ॥ ೫೪ ॥ ಏವಮುಕ್ತ್ವಾ ತತೋ ರಾಮಂ ಸುಪರ್ಣಸ್ಸುಮಹಾಬಲಃ । ಪರಿಷ್ವಜ್ಯ ಸುಹೃತ್ಸ್ನಿಗ್ಧಮಾಪ್ರಷ್ಟುಮುಪಚಕ್ರಮೇ ॥೫೫॥ "ಸಖೇ! ರಾಘವ! ಧರ್ಮಜ್ಞ!

---

ಪುಣ್ಯದಿಂದೊಡಗೂಡಿದವನು, ಅಸಿ - ಆಗಿದ್ದೀಯೆ. ॥ ೫೦ ॥ ಇಮಂವೃತ್ತಾಂತಂ - ಈ ವರ್ತಮಾನವನ್ನು, ಶ್ರುತ್ವಾ - ಕೇಳಿ, ಯುವಯೋಃ - ನಿಮ್ಮ, ಸ್ನೇಹಾತ್ - ಮಿತ್ರತ್ವದಿಂದ, ಸಖಿತ್ವಂ - ಮೈತ್ರೀಭಾವವನ್ನು, ಅನುಪಾಲಯನ್ - ಪರಿಪಾಲಿಸುವವನಾಗಿ, ಅಹಂ - ನಾನು, ತ್ವರಮಾಣಃ - ತ್ವರಿಯುಳ್ಳವನಾಗಿ, ಸಹಸಾ - ಶೀಘ್ರವಾಗಿ, ಆಗತಃ - ಬಂದೆನು. ॥೫೧॥ ಮಹಾಘೋರಾತ್ - ಬಹಳ ಭಯಂಕರವಾದ, ಅಸ್ಮಾ....ತ್ - ಈ ಬಾಣರೂಪವಾದ ನಾಗಪಾಶಬಂಧನದಿಂದ, ಮೋಕ್ಷಿತೌಚ-ಬಿಡಿಸಲ್ಪಟ್ಟರಿ, ಯುವಾಭ್ಯಾಂ - ನಿಮ್ಮಿಂದ, ನಿತ್ಯಮೇವ - ನಿರಂತರವೂ, ಅಪ್ರಮಾದಶ್ಚ - ಜಾಗರೂಕತೆಯು, ಕರ್ತವ್ಯಃ - ಮಾಡತಕ್ಕುದು. ॥೫೨॥ ಸರ್ವೇ - ಸಮಸ್ತರಾದ, ರಾಕ್ಷಸಾಃ - ರಾಕ್ಷಸರು, ಸಂಗ್ರಾಮೇ - ಕಾಳಗದಲ್ಲಿ, ಪ್ರಕೃತ್ಯಾ - ಸ್ವಭಾವದಿಂದಲೇ, ಕೂಟಯೋಧಿನಃ - ಮೋಸದಿಂದ ಯುದ್ಧಮಾಡುವವರು, ಶೂರಾಣಾಂ - ಶೂರರಾದ, ಶುದ್ಧಭಾವಾನಾಂ - ನಿರ್ಮಲಾಂತಃಕರಣರಾದ, ಭವತಾಂ - ನಿಮಗೆ, ಆರ್ಜವಂ - ಋಜುತ್ವವೇ, ಬಲಂ - ಬಲವು. ॥ ೫೩ ॥ ರಣಾಜಿರೇ - ಯುದ್ಧರಂಗದಲ್ಲಿ, ರಾಕ್ಷಸಾನಾಂ - ರಕ್ಕಸರ, ತತ್ - ಆ ಆರ್ಜವವು, ವಃ - ನಿಮ್ಮಿಂದ, ನವಿಶ್ವಸಿತವ್ಯಂ - ನಂಬತಕ್ಕುದಲ್ಲವು, ಹಿ - ಯಾವ ಕಾರಣದಿಂದ, ಏತೇನಉಪಮಾನೇನ - ಈ ನಿಮ್ಮ ದೃಷ್ಟಾಂತದಿಂದ, ರಾಕ್ಷಸಾಃ - ರಾಕ್ಷಸರು, ನಿತ್ಯಂ - ಯಾವಾಗಲೂ, ಜಿಹ್ಮಾಃ - ಕಾಪಟ್ಯವುಳ್ಳವರು. ॥೫೪॥ ಸುಮಹಾಬಲಃ - ಬಹಳ ಬಲಶಾಲಿಯಾದ, ಸುಪರ್ಣಃ - ಗರುಡನು, ಏವಂ - ಈ ಪರಿಯಾಗಿ, ಉಕ್ತ್ವಾ - ಹೇಳಿ, ತತಃ - ಬಳಿಕ, ಸುಹೃತ್ - ಸ್ನೇಹಿತನಾದ, ಸ್ನಿಗ್ಧಂ - ಸ್ನೇಹಿತನಾದ, ರಾಮಂ - ಶ್ರೀರಾಮನನ್ನು ಕುರಿತು, ಆಪ್ರಷ್ಟುಂ - ಅಪ್ಪಣೆ ತೆಗೆದುಕೊಳ್ಳುವದಕ್ಕೆ, ಉಪಚಕ್ರಮೇ - ಆರಂಭಿಸಿದನು

---

ರಿಂದ ಅದೃಷ್ಟಶಾಲಿಯಾದೆ. ನಿನಗೆ ಇಂತಹ ದುರವಸ್ಥೆಯುಂಟಾದುದನ್ನು ತಿಳಿದು ನಿನ್ನನ್ನು ಪಾರುಮಾಡಲೋಸುಗವೇ ನಾನು ಅತಿ ಜಾಗ್ರತೆಯಾಗಿ ಇಲ್ಲಿಗೆ ಬಂದೆನು. ॥ ೪೬–೫೦ ॥ ಇದೂ ಅಲ್ಲದೆ ನನಗೂ, ನಿಮಗೂ ಇರುವ ಮೈತ್ರಿಯಿಂದ ನಾನು ನಿಲ್ಲಲಾರದೆ ತ್ವರೆಯಿಂದ ಹೊರಟುಬಂದೆನು. ನಾನು ಬಂದುದರಿಂದ ಈ ಶರಬಂಧನವು ಬಿಟ್ಟುಹೋಯಿತು. ಇನ್ನು ನೀವು ಕಾತರಗೊಳ್ಳಬೇಡಿರಿ. ರಾಕ್ಷಸರು ಸಹಜವಾಗಿಯೇ ಕೂಟಯುದ್ಧ ಮಾಡುವ ಸ್ವಭಾವದವರು. ॥ ೫೧–೫೨ ॥ ನೀವಾದರೋ ಶೂರರೂ, ಪರಿಶುದ್ಧವಾದ ಅಭಿಪ್ರಾಯವುಳ್ಳವರೂ ಆದುದರಿಂದ ನಿಷ್ಕಪಟವಾಗಿ ಯುದ್ಧಮಾಡುವಿರಿ. ಇನ್ನು ಮುಂದೆ ಯಾವಾಗಲೂ ರಾಕ್ಷಸರೊಡನೆ ಬಹು ಜಾಗರೂಕರಾಗಿ ಯುದ್ಧಮಾಡಬೇಕು. ಈಗ ನಡೆದ ಅನಾಹುತದಿಂದಲೇ ರಾಕ್ಷಸರು ಕೂಟಯೋಧಿಗಳೆಂದು ತಿಳಿಯಬೇಕಲ್ಲವೆ?" ॥ ೫೩–೫೫ ॥ ಎಂದು ನುಡಿದು

ರಿಪೂಣಾಮಪಿ ವತ್ಸಲ! । ಅಭ್ಯನುಜ್ಞಾತುಮಿಚ್ಛಾಮಿ ಗಮಿಷ್ಯಾಮಿ ಯಥಾಗತಂ ॥ ೫೬ ॥ ನಚ ಕೌತೂಹಲಂ ಕಾರ್ಯಂ ಸಖಿತ್ವಂ ಪ್ರತಿ ರಾಘವ! । ಕೃತಕರ್ಮಾ ರಣೇ ವೀರ ಸಖಿತ್ವಮನುವೇತ್ಸ್ಯಸಿ ॥ ೫೭ ॥ ಬಾಲವೃದ್ಧಾವಶೇಷಾಂತಾಂ ಲಂಕಾಂ ಕೃತ್ವಾ ಶರೋರ್ಮಿಭಿಃ । ರಾವಣಂಚ ರಿಪುಂ ಹತ್ವಾ ಸೀತಾಂ ಸಮುಪಲಪ್ಸ್ಯಸೇ" ॥ ೫೮ ॥ ಇತ್ಯೇವಮುಕ್ತ್ವಾ ವಚನಂ ಸುಪರ್ಣಃ ಶೀಘ್ರವಿಕ್ರಮಃ । ರಾಮಂ ಚ ವಿರುಜಂ ಕೃತ್ವಾ ಮಧ್ಯೇ ತೇಷಾಂ ವನೌಕಸಾಂ ॥ ೫೯ ॥ ಪ್ರದಕ್ಷಿಣಂ ತತಃ ಕೃತ್ವಾ ಪರಿಷ್ವಜ್ಯಚ ವೀರ್ಯವಾನ್ । ಜಗಾಮಾಕಾಶಮಾವಿಶ್ಯ ಸುಪರ್ಣಃ ಪವನೋ ಯಥಾ

---

॥೫೫॥ ಹೇ ಸಖೇ - ಎಲೈ ಸ್ನೇಹಿತನೇ, ಹೇ ರಾಘವ - ಎಲೈ ಶ್ರೀರಾಮನೇ, ಹೇ ಧರ್ಮಜ್ಞ - ಎಲೈ ಧರ್ಮವನ್ನರಿತವನೇ, ಹೇ ರಿಪೂಣಾಮಪಿವತ್ಸಲ - ಎಲೈ ಶತ್ರುಜನಗಳಲ್ಲಿಯೂ ವಾತ್ಸಲ್ಯವುಳ್ಳವನೇ, ಅಭ್ಯನುಜ್ಞಾತುಂ - ಅನುಜ್ಞೆಯನ್ನು ಪಡೆಯುವದಕ್ಕೆ, ಇಚ್ಛಾಮಿ - ಅಪೇಕ್ಷಿಸುತ್ತೇನೆ, ಯಥಾಗತಂ- ಬಂದಂತೆ, ಗಮಿಷ್ಯಾಮಿ - ಹೋಗುವೆನು. ॥೫೬॥ ಹೇ ರಾಘವ - ಎಲೈ ಶ್ರೀರಾಮನೇ, ಸಖಿತ್ವಂಪ್ರತಿ- ಮೈತ್ರಿಯನ್ನು ಕುರಿತು, ಕೌತೂಹಲಂ - ಅಪೇಕ್ಷೆಯು, ನಕಾರ್ಯಂ - ಮಾಡತಕ್ಕುದಲ್ಲ, ಹೇ ವೀರ- ಎಲೈ ಶೂರನೇ, ರಣೇ ಕಾಳಗದಲ್ಲಿ, ಕೃತಕರ್ಮಾ - ಕೃತಕಾರ್ಯನಾಗಿ, ಸಖಿತ್ವಂ - ಸ್ನೇಹಭಾವ ವನ್ನು, ಅನುವೇತ್ಸ್ಯಸಿ - ತಿಳಿದುಕೊಳ್ಳುತ್ತೀಯೆ. ॥ ೫೭ ॥ ಶರೋರ್ಮಿಭಿಃ - ಬಾಣಪರಂಪರೆಯಿಂದ, ಲಂಕಾಂ - ಲಂಕಾಪಟ್ಟಣವನ್ನು, ಬಾಲ....ಷಾಂ.. ಬಾಲರೂ ವೃದ್ಧರೇ ಅವಶೇಷವನ್ನಾಗಿ, ಕೃತ್ವಾ - ಮಾಡಿ, ರಿಪುಂ - ಶತ್ರುವಾದ, ರಾವಣಂ - ರಾವಣನನ್ನು, ಹತ್ವಾ - ಕೊಂದು, ಸೀತಾಂ - ಸೀತಾ ದೇವಿಯನ್ನು, ಸಮುಪಲಪ್ಸ್ಯಸೇ - ಹೊಂದುತ್ತೀಯೆ. ॥ ೫೮ ॥ ಶೀಘ್ರವಿಕ್ರಮಃ - ವೇಗಯುಕ್ತವಾದ ಪರಾಕ್ರಮವುಳ್ಳ, ಸುಪರ್ಣಃ - ಗರುಡನು, ತೇಷಾಂವನೌಕಸಾಂ - ಆ ವಾನರರ, ಮಧ್ಯೇ - ಮಧ್ಯ ದಲ್ಲಿ, ಇತ್ಯೇವಂ - ಈ ಪರಿಯಾಗಿ, ವಚನಂ - ಮಾತನ್ನು, ಉಕ್ತ್ವಾ - ಹೇಳಿ, ರಾಮಂ - ಶ್ರೀರಾಮ ನನ್ನು, ವಿರುಜಂ - ಮೂರ್ಛಾರಹಿತನನ್ನಾಗಿ, ಕೃತ್ವಾ - ಮಾಡಿ, ತತಃ - ಬಳಿಕ, ವೀರ್ಯವಾನ್ - ಸಾಮರ್ಥ್ಯವಂತನಾದ, ಸುಪರ್ಣಃ - ಗರುಡನು, ಪ್ರದಕ್ಷಿಣಂ - ಪ್ರದಕ್ಷಿಣವನ್ನು, ಕೃತ್ವಾ - ಮಾಡಿ, ಪರಿಷ್ವಜ್ಯಚ - ಅಪ್ಪಿಕೊಂಡು, ಪವನೋಯಥಾ - ವಾಯುವಿನಂತೆ, ಆಕಾಶಂ - ಅಂತರಿಕ್ಷವನ್ನು

---

ಪರಮ ಸ್ನೇಹದಿಂದ ಶ್ರೀರಾಮಮೂರ್ತಿಯನ್ನಪ್ಪಿ, "ಎಲೈ ಮಿತ್ರನೇ! ರಾಘವನೇ! ಧರ್ಮಜ್ಞನೇ! ಶತ್ರುಗಳಲ್ಲಿಯೂ ದಯೆಯುಳ್ಳವನೇ! ನಾನಿನ್ನು ಹಿಂತಿರುಗಿ ಹೋಗಲು ಅಪ್ಪಣೆಯನ್ನು ಕೊಡುವವನಾಗು. ರಾಘವ! ನಮ್ಮಿಬ್ಬರಿಗೂ ಸ್ನೇಹವುಂಟಾದುದೆಂತೆಂದು ತಿಳಿಯಲು ನಿನಗೆ ಕುತೂಹಲವಿರಬಹುದು. ಈ ವಿಷಯದಲ್ಲಿ ಈಗ ನೀನಾವ ಅಪೇಕ್ಷೆಯನ್ನೂ ಇಟ್ಟುಕೊಳ್ಳಬೇಡ. ಎಲೈ ವೀರನೇ! ನೀನು ಯುದ್ಧದಲ್ಲಿ ಸಮಸ್ತ ಕಾರ್ಯಗಳನ್ನೂ ನೆರವೇರಿಸಿದ ಬಳಿಕ ನನ್ನ ನಿನ್ನ ಸ್ನೇಹವು ಯಾವ ರೀತಿಯಾದುದೆಂಬುದನ್ನರಿಯುವೆ. ನೀನು ಲಂಕಾನಗರದಲ್ಲಿ ಬಾಲವೃದ್ಧರನ್ನು ಬಿಟ್ಟು ಉಳಿದ ರಾಕ್ಷಸರೆಲ್ಲರನ್ನೂ ಸಂಹರಿಸಿ ಶತ್ರುವಾದ ರಾವಣಾಸುರನನ್ನು ವಧಿಸಿ ಸೀತಾದೇವಿಯನ್ನು ಹೊಂದುತ್ತೀಯೆ" ಎಂದು ಹೇಳಿದನು. ಆಮೇಲೆ ಅಮಿತಪರಾಕ್ರಮಿಯಾದ ಆ ಗರುತ್ಮಂತನು ಆ ವಾನರಸಮೂಹಮಧ್ಯದಲ್ಲಿ ಶ್ರೀರಾಮನಿಗುಂಟಾಗಿದ್ದ ಸಮಸ್ತ ಬಾಧೆಯನ್ನೂ ತೊಲಗಿಸಿ, ಅಲ್ಲಿದ್ದ ವಾನರರೆಲ್ಲರಿಗೂ ಪ್ರದಕ್ಷಿಣನಮಸ್ಕಾರವನ್ನು ಮಾಡಿ ವಾಯುವೇಗದಿಂದ ಹೊರಟುಹೋದನು. ॥ ೫೬-೬೦ ॥

|| ೬೦ || ವಿರುಜೌ ರಾಘವೌ ದೃಷ್ಟ್ವಾ ತತೋ ವಾನರಯೂಥಪಾಃ । ಸಿಂಹನಾದಾಂಸ್ತದಾ ನೇದುರ್ಲಾಂಗೂಲಾನ್ ದುಧುವುಸ್ತದಾ || ೬೧ || ತತೋ ಭೇರೀಸ್ಸಮಾಜಘ್ನುರ್ಮೃದಂಗಾಂಶ್ಚಾಪ್ಯನಾದಯನ್ । ದಧ್ಮುಃ ಶಂಖಾನ್ ಸಂಪ್ರಹೃಷ್ಟಾಃ ಕ್ಷ್ವೇಳಂತ್ಯಪಿ ಯಥಾ ಪುರಂ ||೬೨|| ಆಸ್ಫೋಟ್ಯಾಸ್ಫೋಟ್ಯ ವಿಕ್ರಾಂತಾ ವಾನರಾ ನಗಯೋಧಿನಃ । ದ್ರುಮಾನುತ್ಪಾಟ್ಯ ವಿವಿಧಾಂಸ್ತಸ್ಥುಶ್ಶತಸಹಸ್ರಶಃ || ೬೩ || ವಿಸೃಜಂತೋ ಮಹಾನಾದಾಂಸ್ತ್ರಾಸಯಂತೋ ನಿಶಾಚರಾನ್ । ಲಂಕಾದ್ವಾರಾಣ್ಯುಪಾಜಗ್ಮುರ್ಯೋದ್ಧುಕಾಮಾಃ ಪ್ಲವಂಗಮಾಃ || ೬೪ ||

---

ಕುರಿತು, ಆವಿಶ್ಯ - ಹಾರಿ, ಜಗಾಮ - ತೆರಳಿದನು. ||೫೯-೬೦|| ತತಃ - ಬಳಿಕ, ವಾನರಯೂಥಪಾಃ- ವಾನರಯೂಥಪತಿಗಳು, ರಾಘವೌ - ಶ್ರೀರಾಮಲಕ್ಷ್ಮಣರನ್ನು, ವಿರುಜೌ - ರೋಗರಹಿತರನ್ನಾಗಿ, ದೃಷ್ಟ್ವಾ - ಕಂಡು, ತದಾ - ಆ ಕಾಲದಲ್ಲಿ, ಸಿಂಹನಾದಾನ್ - ಕೋಲಾಹಲಧ್ವನಿಗಳನ್ನು, ನೇದುಃ - ಮಾಡಿದರು, ತದಾ - ತತ್‌ಕ್ಷಣದಲ್ಲಿಯೇ, ಲಾಂಗೂಲಾನ್ - ಬಾಲಗಳನ್ನು, ದುಧುವುಃ - ಕೊಡವಿದರು. ||೬೧|| ತತಃ - ಬಳಿಕ, ಭೇರೀಃ - ಭೇರಿಗಳನ್ನು, ಸಮಾಜಘ್ನುಃ - ಹೊಡೆದರು, ಮೃದಂಗಾಂಶ್ಚಾಪಿ - ಮೃದಂಗ ವಾದ್ಯಗಳನ್ನು, ಅನಾದಯನ್ - ಬಾರಿಸಿದರು, ಸಂಪ್ರಹೃಷ್ಟಾಃ - ಸಂತೋಷಗೊಂಡವರಾಗಿ, ಶಂಖಾನ್ - ಶಂಖಗಳನ್ನು, ದಧ್ಮುಃ - ಊದಿದರು, ಯಥಾಪುರಂ - ಪೂರ್ವದಂತೆಯೇ, ಕ್ಷ್ವೇಳಂತಿ - ಸಿಂಹನಾದವನ್ನು ಮಾಡಿದರು. || ೬೨ || ವಿಕ್ರಾಂತಾಃ-ಪರಾಕ್ರಮಶಾಲಿಗಳಾದ, ಸಹಸ್ರಶಃ-ಸಾವಿರಾರು ಸಂಖ್ಯೆಯುಳ್ಳ, ನಗಯೋಧಿನಃ - ಗಿಡಗಳಿಂದ ಕಾಳಗ ಮಾಡುವ, ವಾನರಾಃ - ಕಪಿಗಳು, ಆಸ್ಫೋಟ್ಯಾಸ್ಫೋಟ್ಯ - ಭುಜಾಸ್ಫಾಲನ ಮಾಡಿ ಮಾಡಿ, ವಿವಿಧಾನ್ - ನಾನಾಬಗೆಗಳಾದ, ದ್ರುಮಾನ್ - ಗಿಡಗಳನ್ನು, ಉತ್ಪಾಟ್ಯ - ಕಿತ್ತು, ತಸ್ಥುಃ - ನಿಂತರು. || ೬೩ || ಯೋದ್ಧುಕಾಮಾಃ - ಯುದ್ಧಾಪೇಕ್ಷೆಯುಳ್ಳ, ಪ್ಲವಂಗಮಾಃ - ಕಪಿಗಳು, ಮಹಾನಾದಾನ್ - ಸಿಂಹನಾದಗಳನ್ನು, ವಿಸೃಜಂತಃ - ಬಿಡುತ್ತ, ನಿಶಾಚರಾನ್ - ರಕ್ಕಸರನ್ನು, ತ್ರಾಸಯಂತಃ - ಹೆದರಿಸುತ್ತ, ಲಂಕಾದ್ವಾರಾಣಿ - ಲಂಕಾಪಟ್ಟಣದ ಬಾಗಿಲನ್ನು ಕುರಿತು, ಉಪಾಜಗ್ಮುಃ - ಬಂದರು. || ೬೪ || ತತಃ - ಬಳಿಕ, ಶಾಖಾ....ನಾಂ - ವಾನರ ಯೂಥಪತಿಗಳ ಸಂಬಂಧವಾದ, ತುಮುಲಃ - ಸಂಕುಲವಾದ, ಭೀಮಃ - ಭಯಂಕರವಾದ, ನಿನಾದಃ- ಧ್ವನಿಯು, ನಿದಾಘಸ್ಯ - ಗ್ರೀಷ್ಮಕಾಲದ, ಕ್ಷಯೇ - ಅಂತ್ಯದಲ್ಲಿ, ನಿಶೀಥೇ - ನಡುರಾತ್ರಿಯಲ್ಲಿ,

---

ಆ ತರುವಾಯ ವಾನರಾಧಿಪತಿಗಳೆಲ್ಲರೂ ರಘುಕುಲೋದ್ಭವರಾದ ಶ್ರೀರಾಮಲಕ್ಷ್ಮಣರೀರ್ವರೂ ಏನೊಂದೂ ಬಾಧೆಯಿಲ್ಲದಿರುವುದನ್ನು ಕಂಡು ಮಹದಾನಂದಭರಿತರಾಗಿ ಬಾಲಗಳನ್ನು ಝಾಡಿಸಿ ಮಹಾ ಸಿಂಹನಾದಗಳನ್ನು ಮಾಡಿದರು. ಆ ಸಮಯದಲ್ಲಿಯೇ ಆ ಮಹಾ ವಾನರಸೇನೆಯಲ್ಲಿ ರಣಭೇರಿಗಳನ್ನೂ, ಮೃದಂಗಗಳನ್ನೂ ಬಹಳವಾಗಿ ಮೊಳಗಿಸಿದರು; ಶಂಖಗಳನ್ನು ಪೂರಿಸಿದರು; ಅನೇಕ ವಿಧವಾದ ವಾದ್ಯಗಳನ್ನು ಧ್ವನಿಗೊಳಿಸಿದರು. ವಾನರವೀರರೆಲ್ಲರೂ ಭುಜಾಸ್ಫಾಲನವನ್ನು ಮಾಡುತ್ತ ವಿವಿಧ ವೃಕ್ಷಗಳನ್ನು ಬುಡಸಹಿತ ಪೆಳಗಿಸಿ ಅವುಗಳನ್ನೇ ಆಯುಧಗಳನ್ನಾಗಿ ಧರಿಸಿ ಅಲ್ಲಿದ್ದ ರಾಕ್ಷಸರೆಲ್ಲರನ್ನೂ ಭಯಗೊಳಿಸುತ್ತ ಮಹಾ ಸಿಂಹನಾದಗಳನ್ನು ಮಾಡಿದರು. ಎಲ್ಲರೂ ರಣೋತ್ಸಾಹಪೂರಿತರಾಗಿ ಬಹು ವೇಗದಿಂದ ಲಂಕಾನಗರದ ದ್ವಾರಪ್ರದೇಶಕ್ಕೆ ನುಗ್ಗಿ ಅದನ್ನು ಸಂಪೂರ್ಣವಾಗಿ ಮುತ್ತಿ ನಿಂತರು. ಇಷ್ಟೆಯಲ್ಲದೆ ಆ ವಾನರಾಧಿಪರೆಲ್ಲರೂ ವರ್ಷಾಕಾಲದಲ್ಲಿನ ಮೇಘಗಳಂತೆ

ತತಸ್ತು ಭೀಮಸ್ತುಮುಲೋ ನಿನಾದೋ
ಬಭೂವ ಶಾಖಾಮೃಗಯೂಥಪಾನಾಂ ।
ಕ್ಷಯೇ ನಿದಾಘಸ್ಯ ಯಥಾ ಘನಾನಾಂ
ನಾದಸ್ಸುಭೀಮೋ ನದತಾಂ ನಿಶೀಥೇ ॥ ೬೫ ॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಪಂಚಾಶಸ್ಸರ್ಗಃ.



ನರ್ದತಾಂ - ಗರ್ಜನೆ ಮಾಡುತ್ತಿರುವ, ಘನಾನಾಂ - ಮೇಘಗಳ, ಸುಭೀಮಃ - ಬಹಳ ಭಯಂಕರವಾದ, ನಾದೋಯಥಾ - ಧ್ವನಿಯಂತೆ, ಬಭೂವ - ಆಯಿತು. ॥ ೬೫ ॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಪಂಚಾಶಸ್ಸರ್ಗಃ.



ಮಹಾ ಭಯಂಕರ ಗರ್ಜನೆಗಳನ್ನು ಮಾಡಿ ತಮ್ಮ ಯುದ್ಧ ಕೌತೂಹಲವನ್ನು ವ್ಯಕ್ತಗೊಳಿಸಿದರು. ॥ ೬೧–೬೫ ॥

ಇಂತಿದು ನಾಗಪಾಶವಿಮೋಚನ ವೃತ್ತಾಂತವೆಂಬ ಐವತ್ತನೆಯ
ಸರ್ಗವು ಸಮಾಪ್ತವಾದುದು.



# ಯುದ್ಧಕಾಂಡೇ ಏಕಪಂಚಾಶಸ್ಸರ್ಗಃ

**ತೇಷಾಂ ಸುತುಮುಲಂ ಶಬ್ದಂ ವಾನರಾಣಾಂ ತರಸ್ವಿನಾಂ । ನರ್ದತಾಂ ರಾಕ್ಷಸೈಸ್ಸಾರ್ಧಂ ತದಾ ಶುಶ್ರಾವ ರಾವಣಃ ॥೧॥ ಸ್ನಿಗ್ಧಗಂಭೀರನಿರ್ಘೋಷಂ ಶ್ರುತ್ವಾ ಸನಿನದಂ ಭೃಶಂ । ಸಚಿವಾನಾಂ ತತಸ್ತೇಷಾಂ ಮಧ್ಯೇ ವಚನಮಬ್ರವೀತ್ ॥ ೨ ॥ ಯಥಾಸೌ ಸಂಪ್ರಹೃಷ್ಟಾನಾಂ ವಾನರಾಣಾಂ ಸಮುತ್ಥಿತಃ । ಬಹೂನಾಂ ಸುಮಹಾನಾದೋ ಮೇಘಾನಾಮಿವ ಗರ್ಜತಾಂ ॥ ೩ ॥ ವ್ಯಕ್ತಂ ಸುಮಹತೀ ಪ್ರೀತಿ ರೇತೇಷಾಂ ನಾಽತ್ರ ಸಂಶಯಃ । ತಥಾಹಿ ವಿಪುಲೈರ್ನಾದೈಶ್ಚುಕ್ಷುಭೇ ವರುಣಾಲಯಃ**

---

ತದಾ - ಆ ಕಾಲದಲ್ಲಿ, ನರ್ದತಾಂ - ಕೂಗುತ್ತಿರುವ, ತರಸ್ವಿನಾಂ - ವೇಗಶಾಲಿಗಳಾದ, ತೇಷಾಂವಾನರಾಣಾಂ - ಆ ಕಪಿಗಳ, ಸುತುಮುಲಂ - ಬಹಳ ಸಂಕುಲವಾದ, ಶಬ್ದಂ - ಧ್ವನಿಯನ್ನು, ರಾವಣಃ - ರಾವಣನು, ರಾಕ್ಷಸೈಸ್ಸಾರ್ಧಂ - ರಕ್ಕಸರೊಡಗೂಡಿ, ಶುಶ್ರಾವ - ಕೇಳಿದನು. ॥೧॥ ತತಃ- ಬಳಿಕ, ಸಃ - ಆ ರಾವಣನು, ಸ್ನಿಗ್ಧ.....ಷಂ - ಪ್ರಸಿದ್ಧವಾದ ಮತ್ತು ಗಂಭೀರವಾದ ಘೋಷವುಳ್ಳ, ನಿನದಂ-ವಾನರರ ಸಿಂಹಧ್ವನಿಯನ್ನು, ಭೃಶಂ-ಬಹಳವಾಗಿ, ಶ್ರುತ್ವಾ-ಕೇಳಿ, ತೇಷಾಂಸಚಿವಾನಾಂ - ಆ ಮಂತ್ರಿಗಳ, ಮಧ್ಯೇ - ಮಧ್ಯದಲ್ಲಿ, ವಚನಂ - ಮಾತನ್ನು, ಅಬ್ರವೀತ್ - ನುಡಿದನು. ॥ ೨ ॥ ಯಥಾ - ಹೇಗೆ, ಸಂಪ್ರಹೃಷ್ಟಾನಾಂ - ಸಂತೋಷಗೊಂಡಿರುವ, ಬಹೂನಾಂವಾನರಾಣಾಂ - ಬಹಳ ಮಂದಿ ಕಪಿಗಳ, ಅಸೌಸುಮಹಾನಾದಃ - ಈ ಮಹಾ ಧ್ವನಿಯು, ಗರ್ಜತಾಂ - ಗರ್ಜನೆಯನ್ನು, ಮಾಡುತ್ತಿರುವ, ಮೇಘಾನಾಂ-ಮೇಘಗಳ, ಸುಮಹಾನಾದಇವ-ಗುಡುಗಿನ ಧ್ವನಿಯಂತೆ, ಉತ್ಥಿತಃ- ಹುಟ್ಟಿತೋ, ತಥಾ - ಹಾಗೆಯೇ, ಏತೇಷಾಂ - ಈ ಕಪಿಗಳಿಗೆ, ಪ್ರೀತಿರಪಿ - ಸಂತೋಷವೂ, ಸುಮಹತೀ-ಬಹಳವಾಗಿದೆ, ವ್ಯಕ್ತಂ-ಸ್ಫುಟವು, ಅತ್ರ- ಈ ಅರ್ಥದಲ್ಲಿ, ಸಂಶಯಃ-ಸಂಶಯವು, ನ-ಇಲ್ಲ. ॥ ೩ ॥ ವರುಣಾಲಯಃ - ಕಡಲು, ವಿಪುಲೈಃ - ವಿಸ್ತಾರವಾದ, ನಾದೈಃ - ಧ್ವನಿಗಳಿಂದ, ತಥಾ - ಹಾಗೆಯೇ, ಚುಕ್ಷುಭೇ - ಕ್ಷೋಭೆಗೊಂಡಿತು. ॥ ೪ ॥ ಭ್ರಾತರೌ - ಅಣ್ಣತಮ್ಮಂದಿರಾದ, ತೌರಾಮ ಲಕ್ಷ್ಮಣೌ - ಆ ಶ್ರೀರಾಮಲಕ್ಷ್ಮಣರಾದರೆ, ತೀಕ್ಷ್ಣೈಃ - ಕ್ರೂರಗಳಾದ, ಶರೈಃ - ಬಾಣಗಳಿಂದ,

---

ಆ ತರುವಾಯ ಸಭೆಗೂಡಿ ಸುಖಾಸೀನನಾಗಿದ್ದ ರಾವಣಾಸುರನು, ಮಹಾ ಬಲಾಢ್ಯರಾದ ವಾನರಶ್ರೇಷ್ಠರ ಸಿಂಹನಾದಗಳೊಡಗೂಡಿದ ತುಮುಲಧ್ವನಿಯನ್ನು ಕೇಳಿ ಪರಮಾಶ್ಚರ್ಯಚಕಿತನಾಗಿ, ಮೇಘಗರ್ಜನೆಗೆ ಸಮಾನವಾದ ಆ ತುಮುಲನಾದಕ್ಕೆ ಕಾರಣ ವನ್ನರಿಯಲೋಸುಗ ತನ್ನ ಸಮೀಪದಲ್ಲಿದ್ದ ಮಂತ್ರಿಗಳನ್ನು ಕುರಿತು, " ಎಲೈ ರಾಕ್ಷಸೋ ತ್ತಮರೇ! ಇದೇನಿದು ; ಈ ತುಮುಲನಾದವು ವಾನರರ ಸಂತೋಷ ಸಂಭ್ರಮಗಳನ್ನು ಸೂಚಿಸುತ್ತಿರುವುವಲ್ಲವೆ? ಈ ಧ್ವನಿಯು ವರ್ಷಾಕಾಲದ ಮೇಘಗರ್ಜನೆಯನ್ನು ಹೋಲು ತ್ತಿದೆ. ಈ ಧ್ವನಿಯನ್ನು ಆಲಿಸಿ ಕೇಳಿದರೆ ವಾನರರೆಲ್ಲರೂ ನಿಜವಾಗಿಯೂ ಸಂತುಷ್ಟ ರಾಗಿರುವಂತೆಯೇ ತೋರುತ್ತದೆ. ಇದರಲ್ಲಿ ಸಂದೇಹವಿಲ್ಲವು. ಈ ವಾನರರ ಸಂಕುಲ ನಾದದಿಂದ ಸಾಗರವೇ ಉಲ್ಲಕಲ್ಲೋಲವಾಗುತ್ತಿದೆ. ॥ ೧-೪ ॥ ನಾಗಪಾಶಬಂಧಿತರಾದ

|| ೪ || ತೌತು ಬದ್ಧೌ ಶರೈಸ್ತೀಕ್ಷ್ಣೈರ್ಭ್ರಾತರೌ ರಾಮಲಕ್ಷ್ಮಣೌ । ಅಯಂಚ ಸುಮಹಾನ್ನಾದಃ ಶಂಕಾಂ ಜನಯತೀವ ಮೇ" || ೫ || ಏತತ್ತು ವಚನಂ ಚೋಕ್ತ್ವಾ ಮಂತ್ರಿಣೋ ರಾಕ್ಷಸೇಶ್ವರಃ । ಉವಾಚ ನೈರ್ಋತಾಂಸ್ತತ್ರ ಸಮೀಪಪರಿವರ್ತಿನಃ || ೬ || ಜ್ಞಾಯತಾಂ ತೂರ್ಣಮೇತೇಷಾಂ ಸರ್ವೇಷಾಂ ವನಚಾರಿಣಾಂ । ಶೋಕಕಾಲೇ ಸಮುತ್ಪನ್ನೇ ಹರ್ಷಕಾರಣಮುತ್ಥಿತಂ || ೭ || ತಥೋಕ್ತಾಸ್ತೇನ ಸಂಭ್ರಾಂತಾಃ ಪ್ರಾಕಾರಮಧಿರುಹ್ಯ ತೇ । ದದೃಶುಃ ಪಾಲಿತಾಂ ಸೇನಾಂ ಸುಗ್ರೀವೇಣ ಮಹಾತ್ಮನಾ || ೮ || ತೌಚ ಮುಕ್ತೌ ಸುಘೋರೇಣ ಶರಬಂಧೇನ ರಾಘವೌ । ಸಮುತ್ಥಿತೌ ಮಹಾವೇಗೌ ವಿಷೇದುಃ ಪ್ರೇಕ್ಷ್ಯ ರಾಕ್ಷಸಾಃ ||೯|| ಸಂತ್ರಸ್ತಹೃದಯಾಸ್ಸರ್ವೇ ಪ್ರಾಕಾರಾದ

---

ಬದ್ಧೌ - ಕಟ್ಟಲ್ಪಟ್ಟರು, ಸುಮಹಾನ್ - ಬಹಳ ದೊಡ್ಡದಾದ, ಅಯಂನಾದಃ - ಈ ಸಿಂಹನಾದವು, ಮೇ - ನನಗೆ, ಶಂಕಾಂ - ಶಂಕೆಯನ್ನು, ಜನಯತೀವ - ಹುಟ್ಟಿಸುವಂತಿದೆ. ||೫|| ರಾಕ್ಷಸೇಶ್ವರಃ - ರಾವಣನು, ಮಂತ್ರಿಣಃ - ಮಂತ್ರಿಗಳನ್ನು ಕುರಿತು, ಏತದ್ವಚನಂತು - ಈ ಮಾತನ್ನಾದರೆ, ಉಕ್ತ್ವಾ - ಹೇಳಿ, ತತ್ರ - ಅಲ್ಲಿ, ಸಮೀ....ತಃ - ಸಮೀಪದಲ್ಲಿ ಸಂಚರಿಸುತ್ತಿರುವ, ನೈರ್ಋತಾನ್ - ರಾಕ್ಷಸರನ್ನು ಕುರಿತು, ಉವಾಚ - ಹೇಳಿದನು. ||೬|| ಸರ್ವೇಷಾಂ - ಸಮಸ್ತರಾದ, ಏತೇಷಾಂವನಚಾರಿಣಾಂ - ಈ ಕಪಿಗಳ, ಸಮುತ್ಪನ್ನೇ - ಉತ್ಪನ್ನವಾದ, ಶೋಕಕಾಲೇ - ವ್ಯಸನಕಾಲದಲ್ಲಿ, ಉತ್ಥಿತಂ - ಹುಟ್ಟಿರುವ, ಹರ್ಷಕಾರಣಂ - ಸಂತೋಷಕಾರಣವು, ತೂರ್ಣಂ - ಜಾಗ್ರತೆಯಾಗಿ, ಜ್ಞಾಯತಾಂ - ತಿಳಿಯಲ್ಪಡಲಿ. ||೭|| ತೇನ - ಆ ರಾವಣನಿಂದ, ತಥಾ - ಆ ಪರಿಯಾಗಿ, ಉಕ್ತಾಃ - ಹೇಳಲ್ಪಟ್ಟ, ತೇ - ಆ ರಕ್ಕಸರು, ಸಂಭ್ರಾಂತಾಃ - ತ್ವರೆಯುಳ್ಳವರಾಗಿ, ಪ್ರಾಕಾರಂ - ಕೋಟೆಯನ್ನು, ಅಧಿರುಹ್ಯ - ಏರಿ, ಮಹಾತ್ಮನಾ - ಮಹಾತ್ಮನಾದ, ಸುಗ್ರೀವೇಣ - ಸುಗ್ರೀವನಿಂದ, ಪಾಲಿತಾಂ - ಸಂರಕ್ಷಿಸಲ್ಪಟ್ಟ, ಸೇನಾಂ - ಕಪಿಸೇನೆಯನ್ನು, ದದೃಶುಃ - ಕಂಡರು. || ೮ || ರಾಕ್ಷಸಾಃ - ರಕ್ಕಸರು, ಸುಘೋರೇಣ - ಬಹಳ ಭಯಂಕರವಾದ, ಶರಬಂಧೇನ - ನಾಗಬಂಧದಿಂದ, ಮುಕ್ತೌ - ಬಿಡಲ್ಪಟ್ಟು, ಸಮುತ್ಥಿತೌ - ಮೇಲಕ್ಕೆದ್ದಿರುವ, ಮಹಾಭಾಗೌ - ಬಹಳ ಪುಣ್ಯಶಾಲಿಗಳಾದ, ರಾಘವೌ - ಶ್ರೀರಾಮಲಕ್ಷ್ಮಣರನ್ನು, ಪ್ರೇಕ್ಷ್ಯ ಕಂಡು, ವಿಷೇದುಃ - ದುಃಖಗೊಂಡರು. ||೯|| ಸಂತ್ರ....ಯಾಃ-ಭಯಗೊಂಡ ಮನವುಳ್ಳ, ಘೋರಾಃ-ಭಯಂಕರರಾದ, ತೇಸರ್ವೇ-ಆ ರಾಕ್ಷಸರೆಲ್ಲರೂ, ಪ್ರಾಕಾರಾತ್-

---

ರಾಮಲಕ್ಷ್ಮಣರು ಈಗ ಅದರಿಂದ ವಿಮುಕ್ತರಾಗಿರುವಂತೆ ತೋರುತ್ತದೆ. ಇಲ್ಲವಾದರೆ ವಾನರರ ಸಂತೋಷಕ್ಕೆ ಕಾರಣವೇ ಇರುತ್ತಿರಲಿಲ್ಲವು" ಎಂದು ಹೇಳಿ ತನ್ನ ಬಳಿಯಿದ್ದ ರಾಕ್ಷಸಭಟರನ್ನು ಕುರಿತು, "ಎಲೈ ರಾಕ್ಷಸರೇ! ವಾನರರೆಲ್ಲರೂ ಅತ್ತು ಕಣ್ಣೀರು ಸುರಿಸಬೇಕಾದ ಈ ಸಮಯದಲ್ಲಿ ಸಂತೋಷಪಡಲು ಕಾರಣವೇನೋ ತಿಳಿಯದಾಗಿದೆ. ಆದುದರಿಂದ ನೀವೀಗಲೇ ಹೋಗಿ ವಿಚಾರವೇನೆಂಬುದನ್ನರಿತು ಬನ್ನಿರಿ" ಎಂದನು. ಕೂಡಲೇ ಆ ರಾಕ್ಷಸಭಟರು ಬಹು ಜಾಗ್ರತೆಯಾಗಿ ಹೊರಟು ಪ್ರಾಕಾರವನ್ನೇರಿ ಮಹಾತ್ಮನಾದ ಸುಗ್ರೀವರಾಜನಿಂದ ಸುರಕ್ಷಿತವಾಗಿದ್ದ ವಾನರಸೇನೆಯನ್ನು ಕಂಡರು. ಆ ಸಮಯದಲ್ಲಿ ರಘುಕುಲೋದ್ಭವರೂ, ಮಹಾತ್ಮರೂ ಆದ ಶ್ರೀರಾಮಲಕ್ಷ್ಮಣರು ಶರಬಂಧವಿಮುಕ್ತರಾಗಿ ಪರಮ ಸಂತೋಷದಿಂದ ಕುಳಿತಿದ್ದರು. || ೫-೮ || ಅವರೀರ್ವರನ್ನೂ ಕಂಡೊಡನೆಯೇ ಆ ರಾಕ್ಷಸಭಟರು ಬಹಳವಾಗಿ ಸಂತಪಿಸಿ ಕುಗ್ಗಿಹೋದರು. ಕೂಡಲೇ ಭಯವು ಅವರನ್ನಾ

ವರುಹ್ಯ ತೇ । ವಿಷಣ್ಣವದನಾ ಘೋರಾ ರಾಕ್ಷಸೇಂದ್ರಮುಪಸ್ಥಿತಾಃ ॥ ೧೦ ॥ ತದ
ಪ್ರಿಯಂ ದೀನಮುಖಾ ರಾವಣಸ್ಯ ನಿಶಾಚರಾಃ । ಕೃತ್ಸ್ನಂ ನಿವೇದಯಾಮಾಸುರ್ಯ
ಥಾವದ್ವಾಕ್ಯಕೋವಿದಾಃ ॥೧೧॥ "ಯೌ ತಾವಿಂದ್ರಜಿತಾ ಯುದ್ಧೇ ಭ್ರಾತರೌ ರಾಮ
ಲಕ್ಷ್ಮಣೌ । ನಿಬದ್ಧೌ ಶರಬಂಧೇನ ನಿಷ್ಪ್ರಕಂಪಭುಜೌ ಕೃತೌ ॥ ೧೨ ॥ ವಿಮುಕ್ತೌ
ಶರಬಂಧೇನ ತೌ ದೃಶ್ಯೇತೇ ರಣಾಜಿರೇ । ಪಾಶಾನಿವ ಗಜೌ ಛಿತ್ವಾ ಗಜೇಂದ್ರಸಮ
ವಿಕ್ರಮೌ" ॥ ೧೩ ॥ ತಚ್ಛ್ರುತ್ವಾ ವಚನಂ ತೇಷಾಂ ರಾಕ್ಷಸೇಂದ್ರೋ ಮಹಾಬಲಃ ।
ಚಿಂತಾಶೋಕಸಮಾಕ್ರಾಂತೋ ವಿಷಣ್ಣವದನೋಽಬ್ರವೀತ್ ॥ ೧೪ ॥ "ಘೋರೈ

---

ಕೋಟೆಯಿಂದ, ಅವರುಹ್ಯ - ಇಳಿದು, ವಿಷ....ತಃ - ದುಃಖದಿಂದ ಬಾಡಿದ ಮುಖಗಳುಳ್ಳವರಾಗಿ, ರಾಕ್ಷಸೇಂದ್ರಂ - ರಾವಣನನ್ನು ಕುರಿತು, ಉಪಸ್ಥಿತಾಃ - ಬಂದರು. ॥ ೧೦ ॥ ವಾಕ್ಯಕೋವಿದಾಃ - ಮಾತುಗಾರರಾದ, ನಿಶಾಚರಾಃ-ರಕ್ಕಸರು, ದೀನಮುಖಾಃ - ಬತ್ತಿದ ಮುಖಗಳುಳ್ಳವರಾಗಿ, ರಾವಣಸ್ಯ - ರಾವಣನಿಗೆ, ಅಪ್ರಿಯಂ - ಅಹಿತವಾದ, ತತ್ - ವಾನರರ ಹರ್ಷವೃತ್ತಾಂತವನ್ನು, ಕೃತ್ಸ್ನಂ - ಸಂಪೂರ್ಣವಾಗಿ, ಯಥಾವತ್ - ನಡೆದಂತೆ, ನಿವೇದಯಾಮಾಸುಃ - ತಿಳಿಸಿದರು. ॥೧೧॥ ಭ್ರಾತರೌ- ಅಣ್ಣತಮ್ಮಂದಿರಾದ, ಯೌರಾಮಲಕ್ಷ್ಮಣೌ - ಯಾವ ರಾಮಲಕ್ಷ್ಮಣರು, ಇಂದ್ರಜಿತಾ - ಇಂದ್ರಜಿತ್ತುವಿನಿಂದ, ಯುದ್ಧೇ - ಕಾಳಗದಲ್ಲಿ, ಶರಬಂಧೇನ - ನಾಗಪಾಶ ಬಂಧನದಿಂದ, ನಿಬದ್ಧೌ - ಕಟ್ಟಲ್ಪಟ್ಟವರಾಗಿ, ನಿಷ್ಪ್ರ....ಜೌ ಸ್ತಬ್ಧವಾದ ಭುಜಗಳುಳ್ಳವರಾಗಿ, ಕೃತೌ-ಮಾಡಲ್ಪಟ್ಟರೋ. ॥೧೨॥ ತೌ- ಅಂಥಾ, ತೌ - ಆ ರಾಮಲಕ್ಷ್ಮಣರು, ಶರಬಂಧೇನ - ನಾಗಬಂಧದಿಂದ, ವಿಮುಕ್ತೌ - ಬಿಡಲ್ಪಟ್ಟವರಾಗಿ, ಪಾಶಾನ್-ಹಗ್ಗಗಳನ್ನು, ಛಿತ್ವಾ-ಕಿತ್ತುಕೊಂಡ, ಗಜಾವಿವ-ಆನೆಗಳಂತೆ, ಗಜೇಂ....ಮೌ- ದೊಡ್ಡ ಆನೆಗಳಿಗೆ ಸಮಾನವಾದ ಸಂಚಾರವುಳ್ಳವರಾಗಿ, ರಣಾಜಿರೇ - ಯುದ್ಧರಂಗದಲ್ಲಿ, ದೃಶ್ಯೇತೇ - ಕಾಣುತ್ತಿರುವರು. ॥೧೩॥ ತೇಷಾಂ - ಈ ರಕ್ಕಸರ, ತದ್ವಚನಂ - ಆ ಮಾತನ್ನು, ಶ್ರುತ್ವಾ - ಕೇಳಿ, ಮಹಾಬಲಃ - ಬಹಳ ಸಾಮರ್ಥ್ಯವಂತನಾದ, ರಾಕ್ಷಸೇಂದ್ರಃ - ರಾವಣನು, ಚಿಂತಾ....ತಃ - ಚಿಂತೆಯಿಂದಲೂ, ದುಃಖದಿಂದಲೂ ಆಕ್ರಮಿಸಲ್ಪಟ್ಟವನಾಗಿ, ವಿಷಣ್ಣವದನಃ - ಬತ್ತಿದ ಮುಖವುಳ್ಳವನಾಗಿ, ಅಬ್ರವೀತ್ - ನುಡಿದನು. ॥ ೧೪ ॥ ಯುಧಿ - ಕಾಳಗದಲ್ಲಿ, ಇಂದ್ರಜಿತಾ - ಇಂದ್ರಜಿತ್ತುವಿನಿಂದ, ಪ್ರಸಹ್ಯ - ಪ್ರಯತ್ನಪೂರ್ವಕವಾಗಿ, ದತ್ತವರೈಃ - ಕೊಡಲ್ಪಟ್ಟ ವರವುಳ್ಳ, ಘೋರೈಃ - ಭಯಂಕರ

---

ವರಿಸಿತು. ಅವರು ಅದೇ ಭಯದಿಂದಲೇ ತತ್ತಳಿಸುತ್ತ ಬೇಗನೆಯೇ ಪ್ರಾಕಾರದಿಂದಿಳಿದು ಬಹು ಜಾಗ್ರತೆಯಾಗಿ ರಾವಣಾಸುರನ ಸನ್ನಿಧಿಗೈತಂದರು. ಮಾತನಾಡುವುದರಲ್ಲಿ ಮಹಾ ಚತುರರಾದ ಅವರೆಲ್ಲರೂ ದೀನಮುಖರಾಗಿ ತಮ್ಮೊಡೆಯನಿಗೆ ಆ ವೃತ್ತಾಂತವೆಲ್ಲವನ್ನೂ ಅರಿಕೆ ಮಾಡಬಯಸಿ ಆತನನ್ನು ಕುರಿತು, "ಪ್ರಭುವೇ! ಯುದ್ಧದಲ್ಲಿ ಇಂದ್ರಜಿತ್ತುವಿನಿಂದ ನಾಗ ಪಾಶಬಂಧಿತರಾಗಿ ಬಿದ್ದಿದ್ದ ರಾಮಲಕ್ಷ್ಮಣರೀರ್ವರೂ ಆ ಪಾಶದಿಂದ ವಿಮುಕ್ತರಾಗಿರುವರು. ಮಹಾ ಗಜಪರಾಕ್ರಮಿಗಳೂ, ನಾಗಪಾಶವಿಮುಕ್ತರೂ, ಭಯರಹಿತರೂ, ಬಂಧನಗಳನ್ನು ಕಿತ್ತೊಗೆದ ಮದಗಜಗಳಂತೆ ಶೋಭಿಸುತ್ತಿರುವವರೂ ಆದ ಆ ರಾಜಕುಮಾರರೀರ್ವರೂ ರಣರಂಗದಲ್ಲಿ ಅಪ್ರಮತ್ತರಾಗಿರುವರು" ಎಂದು ಹೇಳಿದರು. ॥ ೯-೧೩ ॥ ಮಹಾ ಬಲನೂ, ರಾಕ್ಷಸೇಂದ್ರನೂ ಆದ ರಾವಣಾಸುರನು ಆ ರಾಕ್ಷಸಭಟರ ವಾಕ್ಕುಗಳನ್ನು ಕೇಳಿ ಚಿಂತೆಗೆ ತುತ್ತಾದ ಚಿತ್ತವುಳ್ಳವನಾಗಿ, ವ್ಯಸನಾಕ್ರಾಂತವಾದ ಮುಖವುಳ್ಳವನೂ

ರ್ದತ್ತೈರ್ವರೈರ್ಬದ್ಧೌ ಶರೈರಾಶೀವಿಷೋಪಮೈಃ । ಅಮೋಘೈಸ್ಸೂರ್ಯಸಂಕಾಶೈಃ ಪ್ರಮಥ್ಯೇಂದ್ರಜಿತಾ ಯುಧಿ ॥ ೧೫ ॥ ತದಸ್ತ್ರಬಂಧಮಾಸಾದ್ಯ ಯದಿ ಮುಕ್ತೌ ರಿಪೂ ಮಮ । ಸಂಶಯಸ್ಥಮಿದಂ ಸರ್ವಮನುಪಶ್ಯಾಮ್ಯಹಂ ಬಲಂ ॥ ೧೬ ॥ ನಿಷ್ಫಲಾಃ ಖಲು ಸಂವೃತ್ತಾಃ ಶರಾ ವಾಸುಕಿತೇಜಸಃ । ಆದತ್ತಂ ಯೈಸ್ತು ಸಂಗ್ರಾಮೇ ರಿಪೂಣಾಂ ಮಮ ಜೀವಿತಂ" ॥ ೧೭ ॥ ಏವಮುಕ್ತ್ವಾತು ಸಂಕ್ರುದ್ಧೋ ನಿಶ್ವಸನ್ನುರಗೋ ಯಥಾ । ಅಬ್ರವೀದ್ರಕ್ಷಸಾಂ ಮಧ್ಯೇ ಧೂಮ್ರಾಕ್ಷಂ ನಾಮ ರಾಕ್ಷಸಂ ॥೧೮॥ "ಬಲೇನ ಮಹತಾ ಯುಕ್ತೋ ರಕ್ಷಸಾಂ ಭೀಮವಿಕ್ರಮ ! । ತ್ವಂ ವಧಾಯಾಽಭಿ

---

ಗಳಾದ, ಆಶೀ....ಮೈಃ-ಹಾವುಗಳಿಗೆ ಸಮಾನಗಳಾದ, ಅಮೋಘೈಃ-ಸಫಲಗಳಾದ, ಸೂರ್ಯಸಂಕಾಶೈಃ-ಸೂರ್ಯಪ್ರಕಾಶವುಳ್ಳ, ಶರೈಃ - ಬಾಣಗಳಿಂದ, ಬದ್ಧೌ - ಕಟ್ಟಲ್ಪಟ್ಟ, ಮೇ - ನನ್ನ, ರಿಪೂ - ಶತ್ರುಗಳು, ತದಸ್ತ್ರಬಂಧಂ - ಆ ನಾಗಾಸ್ತ್ರಬಂಧನವನ್ನು, ಆಸಾದ್ಯ - ಹೊಂದಿಯೂ, ಮುಕ್ತೌಯದಿ - ಬಿಡಲ್ಪಟ್ಟವರಾದರೆ, ಸರ್ವಂ - ಸಮಸ್ತವಾದ, ಇದಂಬಲಂ - ಈ ಅಸ್ತ್ರಬಲವನ್ನು, ಅಹಂ - ನಾನು, ಸಂಶಯಸ್ಥಂ - ಸಂಶಯಗ್ರಸ್ತವನ್ನಾಗಿ, ಅನುಪಶ್ಯಾಮಿ - ಕಾಣುತ್ತೇನೆ, ವಾಸುಕಿತೇಜಸಃ - ವಾಸುಕಿಯ ಪರಾಕ್ರಮದಂತೆ ಪರಾಕ್ರಮವುಳ್ಳ, ಶರಾಃ - ಬಾಣಗಳು, ನಿಷ್ಫಲಾಃ - ನಿಷ್ಪ್ರಯೋಜನಗಳು, ಸಂವೃತ್ತಾಃಖಲು - ಆದುವಷ್ಟೆ, ಯೈಃ - ಯಾವ ಬಾಣಗಳಿಂದ, ಸಂಗ್ರಾಮೇ - ಕಾಳಗದಲ್ಲಿ, ಮಮ - ನನ್ನ, ರಿಪೂಣಾಂ - ಶತ್ರುಗಳ, ಜೀವಿತಂ - ಬದುಕುವಿಕೆಯು, ಆದತ್ತಂ - ಗ್ರಹಿಸಲ್ಪಟ್ಟಿತೋ. ॥೧೫-೧೭॥ ಏವಂ - ಈ ಪರಿಯಾಗಿ, ಉಕ್ತ್ವಾತು - ಹೇಳಿಯಾದರೆ, ಸಂಕ್ರುದ್ಧಃ - ಕೋಪಿಸ್ಥನಾಗಿ, ಉರಗೋಯಥಾ-ಮಹಾ ಸರ್ಪದಂತೆ, ನಿಶ್ವಸನ್-ನಿಟ್ಟುಸಿರು ಬಿಡುತ್ತ, ರಕ್ಷಸಾಂ-ರಕ್ಕಸರ, ಮಧ್ಯೇ - ಮಧ್ಯದಲ್ಲಿ, ಧೂಮ್ರಾಕ್ಷಂನಾಮ - ಧೂಮ್ರಾಕ್ಷನೆಂದು ಪ್ರಸಿದ್ಧನಾದ, ರಾಕ್ಷಸಂ - ರಕ್ಕಸನನ್ನು ಕುರಿತು, ಅಬ್ರವೀತ್ - ನುಡಿದನು. ॥೧೮॥ ಹೇ ಭೀಮವಿಕ್ರಮ - ಎಲೈ ಭಯಂಕರ ಪರಾಕ್ರಮಿಯೇ, ಮಹತಾ - ಮಹತ್ತರವಾದ, ರಾಕ್ಷಸಾಂ - ರಕ್ಕಸರ, ಬಲೇನ - ಸೈನ್ಯದೊಡನೆ, ಯುಕ್ತಃ - ಕೂಡಿದವನಾಗಿ, ತ್ವಂ - ನೀನು, ವಾನರೈಸ್ಸಹ - ವಾನರರೊಡನೆ, ರಾಮಸ್ಯ - ಶ್ರೀರಾಮನ, ವಧಾಯ -

---

ಆಗಿ, "ಅಹಹ! ಅತ್ಯಂತ ಭಯಂಕರಗಳೂ, ವರದಿಂದಲೇ ಸಂಪಾದಿತಗಳಾದವುಗಳೂ, ಕ್ರೂರ ಸರ್ಪಗಳಿಗೆ ಸಮಾನವಾದವುಗಳೂ, ವ್ಯರ್ಥವಾಗದವುಗಳೂ, ಸೂರ್ಯನ ತೇಜಸ್ಸಿಗೆ ಸಮಾನವಾದ ತೇಜಸ್ಸುಳ್ಳವುಗಳೂ ಆದ ಬಾಣಗಳಿಂದ ನಮ್ಮ ಇಂದ್ರಜಿತ್ಕುಮಾರನು ಆ ರಾಮಲಕ್ಷ್ಮಣರೀರ್ವರನ್ನೂ ಬಂಧಿಸಿದನು. ಇಂಥ ಶರಗಳಿಂದ ಬಂಧಿತರಾದರೂ ನನ್ನ ಶತ್ರುಗಳಾದ ಅವರೀರ್ವರೂ ಇದೀಗ ವಿಮುಕ್ತರಾದರಲ್ಲವೆ! ಇದರಿಂದ ಇನ್ನು ಮುಂದೆ ನನ್ನ ಸೈನ್ಯವೆಲ್ಲವೂ ನಶಿಸುವುದೆಂದು ತೋರುತ್ತಿದೆ. ಆಹಾ !! ಆದಿಶೇಷನ ತೇಜಸ್ಸಿಗೆ ಸಮಾನವಾದ ತೇಜಸ್ಸುಳ್ಳ ಬಾಣಗಳೆಲ್ಲವೂ ವ್ಯರ್ಥವಾದುವೆ! ಇನ್ನು ಶತ್ರುಗಳಿಂದ ನನ್ನ ಆಯುಸ್ಸು ಕ್ಷೀಣಿಸುವುದೆಂದೇ ತೋರುವುದು !" ಎಂದು ಚಿಂತಿಸಿದನು. ॥ ೧೪–೧೭ ॥ ಹೀಗೆ ಸ್ವಲ್ಪ ಹೊತ್ತು ಚಿಂತಿಸಿ ಮಹಾ ಕ್ರೋಧೋದ್ದೀಪಿತನಾಗಿ ಮಹಾ ಸರ್ಪದಂತೆ ನಿಟ್ಟುಸಿರುಗಳನ್ನು ಬಿಡುತ್ತ ರಾಕ್ಷಸೋತ್ತಮನಾದ ಆ ರಾವಣಾಸುರನು ಧೂಮ್ರಾಕ್ಷನೆಂಬವನನ್ನು ಕುರಿತು, "ಎಲೈ ಭಯಂಕರ ಪರಾಕ್ರಮಿಯಾದ ಧೂಮ್ರಾಕ್ಷನೇ ! ನೀನೀಗಲೇ ಅಪರಿಮಿತವಾದ ಸೈನ್ಯದೊಡನೆ ಹೊರಟು ಯುದ್ಧಮಾಡಿ ಆ ರಾಮಲಕ್ಷ್ಮಣರನ್ನೂ, ವಾನರರನ್ನೂ

ನಿರ್ಯಾಹಿ ರಾಮಸ್ಯ ಸಹ ವಾನರೈಃ" ॥ ೧೯ ॥ ಏವಮುಕ್ತಸ್ತು ಧೂಮ್ರಾಕ್ಷೋ ರಾಕ್ಷಸೇಂದ್ರೇಣ ಧೀಮತಾ । ಕೃತ್ವಾ ಪ್ರಣಾಮಂ ಸಂಹೃಷ್ಟೋ ನಿರ್ಜಗಾಮ ನೃಪಾಲಯಾತ್ ॥ ೨೦ ॥ ಅಭಿನಿಷ್ಕ್ರಮ್ಯ ತದ್ವಾರಂ ಬಲಾಧ್ಯಕ್ಷಮುವಾಚಹ । "ತ್ವರಯಸ್ವ ಬಲಂ ತೂರ್ಣಂ ಕಿಂ ಚಿರೇಣ ಯುಯುತ್ಸತಃ" ॥೨೧॥ ಧೂಮ್ರಾಕ್ಷವಚನಂ ಶ್ರುತ್ವಾ ಬಲಾಧ್ಯಕ್ಷೋ ಬಲಾನುಗಃ । ಬಲಮುದ್ಯೋಜಯಾಮಾಸ ರಾವಣಸ್ಯಾಜ್ಞಯಾ ದ್ರುತಂ ॥ ೨೨ ॥ ತೇ ಬದ್ಧಘಂಟಾ ಬಲಿನೋ ಘೋರರೂಪಾ ನಿಶಾಚರಾಃ । ವಿಗರ್ಜಮಾನಾಸ್ಸಂಹೃಷ್ಟಾ ಧೂಮ್ರಾಕ್ಷಂ ಪರ್ಯವಾರಯನ್ ॥ ೨೩ ॥ ವಿವಿಧಾಯುಧಹಸ್ತಾಶ್ಚ

---

ಸಂಹಾರಕ್ಕಾಗಿ, ಅಭಿನಿರ್ಯಾಹಿ - ಹೊರಡು. ॥ ೧೯ ॥ ಧೂಮ್ರಾಕ್ಷಃ - ಧೂಮ್ರಾಕ್ಷನು, ಧೀಮತಾ - ಬುದ್ಧಿಶಾಲಿಯಾದ, ರಾಕ್ಷಸೇಂದ್ರೇಣ - ರಾವಣನಿಂದ, ಏವಂ - ಈ ಪರಿಯಾಗಿ, ಉಕ್ತಃ - ಹೇಳಲ್ಪಟ್ಟು, ಸಂಹೃಷ್ಟಃ - ಸಂತೋಷಗೊಂಡವನಾಗಿ, ಪ್ರಣಾಮಂ - ನಮಸ್ಕಾರವನ್ನು, ಕೃತ್ವಾ - ಮಾಡಿ, ನೃಪಾಲಯಾತ್ - ಅರಮನೆಯಿಂದ, ನಿರ್ಜಗಾಮ - ಹೊರಟನು. ॥ ೨೦ ॥ ತದ್ವಾರಂ - ಆ ರಾಜದ್ವಾರವನ್ನು, ಅಭಿನಿಷ್ಕ್ರಮ್ಯ - ದಾಟಿ, ಬಲಾಧ್ಯಕ್ಷಂ - ಸೈನ್ಯಾಧಿಪತಿಯನ್ನು ಕುರಿತು, ಬಲಂ - ಸೈನ್ಯವನ್ನು, ತೂರ್ಣಂ - ಜಾಗ್ರತೆಯಾಗಿ, ಯುಯುತ್ಸತಃ - ಕಾಳಗ ಮಾಡಲಿಚ್ಛೆಯುಳ್ಳ ನನಗಾಗಿ, ತ್ವರಯಸ್ವ - ತ್ವರೆಗೊಳಿಸು, ಚಿರೇಣ - ಸಾವಕಾಶದಿಂದ, ಕಿಂಪ್ರಯೋಜಂ ಏನುಪ್ರಯೋಜನ ಎಂದು, ಉವಾಚಹ-ಹೇಳಿದನಷ್ಟೆ. ॥೨೧॥ ಧೂಮ್ರಾಕ್ಷವಚನಂ- ಧೂಮ್ರಾಕ್ಷನ ಮಾತನ್ನು, ಶ್ರುತ್ವಾ - ಕೇಳಿ, ಬಲಾನುಗಃ - ಹಿಂದೆ ಬರುತ್ತಿರುವ ಸೈನ್ಯವುಳ್ಳ, ಬಲಾಧ್ಯಕ್ಷಃ - ಸೈನ್ಯಾಧಿಪತಿಯು, ರಾವಣಸ್ಯ - ರಾವಣನ, ಆಜ್ಞಯಾ - ಆಜ್ಞೆಯಿಂದ, ದ್ರುತಂ - ಜಾಗ್ರತೆಯಾಗಿ, ಬಲಂ - ಸೈನ್ಯವನ್ನು, ಉದ್ಯೋ....ಸ - ಪ್ರಯಾಣೋದ್ಯುಕ್ತವನ್ನಾಗಿ ಮಾಡಿದನು. ॥ ೨೨ ॥ ಬದ್ಧಘಂಟಾಃ - ಕಟ್ಟಲ್ಪಟ್ಟ ಘಂಟೆಗಳುಳ್ಳ, ಬಲಿನಃ - ಬಲವಂತರಾದ, ಘೋರರೂಪಾಃ - ಭಯಂಕರವಾದ ರೂಪವುಳ್ಳ, ತೇನಿಶಾಚರಾಃ - ಆ ರಾಕ್ಷಸರು, ವಿಗರ್ಜಮಾನಾಃ - ಗರ್ಜಿಸುತ್ತಿರುವವರಾಗಿ, ಸಂಹೃಷ್ಟಾಃ - ಸಂತೋಷಗೊಂಡವರಾಗಿ, ಧೂಮ್ರಾಕ್ಷಂ - ಧೂಮ್ರಾಕ್ಷನನ್ನು, ಪರ್ಯವಾರಯನ್ - ಸುತ್ತುವರೆದರು. ॥೨೩॥ ವಿವಿ....ಶ್ಚ - ನಾನಾಬಗೆಗಳಾದ ಆಯುಧಗಳೇ ಕೈಗಳಲ್ಲುಳ್ಳವರಾಗಿ, ಶೂಲ....ಯಃ-ತ್ರಿಶೂಲಗಳೂ, ಮುದ್ಗರಾಯುಧಗಳೂ ಹಸ್ತಗಳಲ್ಲುಳ್ಳವರಾಗಿ, ಪರ್ಯವಾರಯನ್-

---

ಕೊಂದು ಬರುವವನಾಗು ಹೊರಡು" ಎಂದು ಆಜ್ಞಾಪಿಸಿದನು. ರಾಕ್ಷಸೇಂದ್ರನಾದ ರಾವಣಾಸುರನಿಂತು ನುಡಿದೊಡನೆಯೇ ಧೂಮ್ರಾಕ್ಷನು ಪರಮ ಸಂತುಷ್ಟನಾಗಿ, ಆತನಿಗೆ ಪ್ರದಕ್ಷಿಣ ನಮಸ್ಕಾರವನ್ನು ಮಾಡಿ ಹೊರಹೊರಟನು. ಅವನು ದ್ವಾರಮಧ್ಯಪ್ರದೇಶಕ್ಕೆ ಬಂದು ಅಲ್ಲಿದ್ದ ಬಲಾಧ್ಯಕ್ಷನನ್ನು ಕುರಿತು, "ಅಯ್ಯಾ ಬಲಾಧ್ಯಕ್ಷನೇ! ನೀನೇಕೆ ಸಾವಕಾಶ ಮಾಡುತ್ತಿರುವೆ? ಜಾಗ್ರತೆಯಾಗಿ ಸೇನೆಯೆಲ್ಲವನ್ನೂ ಸಜ್ಜುಗೊಳಿಸು. ಹೋಗು; ಸಾವಕಾಶ ಮಾಡಬೇಡ" ಎಂದನು. ॥ ೧೮-೨೨ ॥ ಅಂತೆಯೇ ಆ ಬಲಾಧ್ಯಕ್ಷನು ರಾವಣಾಸುರನ ಅಪ್ಪಣೆಯನ್ನು ಪಡೆದು ರಾಕ್ಷಸಸೇನೆಯೆಲ್ಲವನ್ನೂ ಸಿದ್ಧಗೊಳಿಸಿದನು. ಆಗ ಘಂಟೆಗಳಿಂದ ಕೂಡಿ ಭಯಂಕರಾಕಾರಗಳುಳ್ಳ ರಾಕ್ಷಸರೆಲ್ಲರೂ ಮಹದಾನಂದದಿಂದ ಸಿಂಹನಾದಗಳನ್ನು ಮಾಡುತ್ತ ಹೊರಟು ಬಂದು ಧೂಮ್ರಾಕ್ಷನನ್ನು ಸುತ್ತುವರೆದು ನಿಂತರು. ಆ ರಾಕ್ಷಸವೀರರೆಲ್ಲರೂ ಬಗೆಬಗೆಯ ಆಯುಧಗಳನ್ನು ಕೈಗಳಲ್ಲಿ ಹಿಡಿದು, ಶೂಲ ಮುದ್ಗರ

ಶೂಲಮುದ್ಗರಪಾಣಯಃ । ಗದಾಭಿಃ ಪಟ್ಟಿಸೈರ್ದಂಡೈರಾಯಸೈರ್ಮುಸಲೈರ್ಭೃಶಂ
|| ೨೪ || ಪರಿಘೈರ್ಭಿಂಡಿವಾಲೈಶ್ಚ ಭಲ್ಲೈಃ ಪ್ರಾಸೈಃ ಪರಶ್ವಥೈಃ । ನಿರ್ಯಯೂ
ರಾಕ್ಷಸಾ ದಿಗ್ಭ್ಯೋ ನರ್ದಂತೋ ಜಲದಾ ಯಥಾ || ೨೫ || ರಥೈಃ ಕವಚಿನಸ್ತ್ವನ್ಯೇ
ಧ್ವಜೈಶ್ಚ ಸಮಲಂಕೃತೈಃ । ಸುವರ್ಣಜಾಲವಿಹಿತೈಶ್ಚ ಖರೈಶ್ಚ ವಿವಿಧಾನನೈಃ || ೨೬ ||
ಹಯೈಃ ಪರಮಶೀಘ್ರೈಶ್ಚ ಗಜೇಂದ್ರೈಶ್ಚ ಮದೋತ್ಕಟೈಃ । ನಿರ್ಯಯೂ ರಾಕ್ಷಸ
ವ್ಯಾಘ್ರಾ ವ್ಯಾಘ್ರಾ ಇವ ದುರಾಸದಾಃ || ೨೭ || ಕಪಿಸಿಂಹಮುಖೈರ್ಯುಕ್ತಂ ಖರೈಃ
ಕನಕಭೂಷಣೈಃ । ಆರುರೋಹ ರಥಂ ದಿವ್ಯಂ ಧೂಮ್ರಾಕ್ಷಃ ಖರನಿಸ್ವನಃ || ೨೮ ||

---

ಸುತ್ತಿಕೊಂಡರು, ಗದಾಭಿಃ - ಗದಾಯುಧಗಳಿಂದಲೂ, ಪಟ್ಟಿಸೈಃ - ಕತ್ತಿಗಳಿಂದಲೂ, ಆಯಸೈಃ - ಕಬ್ಬಿಣದ ವಿಕಾರವಾದ, ದಂಡೈಃ - ದೊಣ್ಣೆಗಳಿಂದಲೂ, ಭೃಶಂ - ಬಹಳವಾಗಿ, ಮುಸಲೈಃ - ಒನಕೆಗಳಿಂದಲೂ, ಪರಿಘೈಃ - ಕಬ್ಬಿಣದ ಕಟ್ಟುಹಾಕಿದ ದೊಣ್ಣೆಗಳಿಂದಲೂ, ಭಿಂಡಿವಾಲೈಶ್ಚ - ಉದ್ದವಾದ ದೊಣ್ಣೆಗಳಿಂದಲೂ, ಭಲ್ಲೈಃ - ಭಲ್ಲಾಯುಧಗಳಿಂದಲೂ, ಪ್ರಾಸೈಃ - ಈಟಿಗೋಲುಗಳಿಂದಲೂ, ಪರಶ್ವಥೈಃ - ಗಂಡುಗೊಡಲಿಗಳಿಂದಲೂ, ರಾಕ್ಷಸಾಃ - ರಕ್ಕಸರು, ಜಲದಾಃಯಥಾ - ಮೇಘಗಳಂತೆ, ನರ್ದತಃ - ಗರ್ಜಿಸುತ್ತ, ದಿಶಃ - ದಿಕ್ಕುದಿಕ್ಕುಗಳಿಂದಲೂ, ನಿರ್ಯಯುಃ - ಹೊರಟರು. || ೨೫ || ಅನ್ಯೇ - ಮತ್ತೆ ಕೆಲವರು, ಕವಚಿನಃ - ಕವಚಧಾರಿಗಳಾಗಿ, ಧ್ವಜೈಃ - ಧ್ವಜಗಳಿಂದ, ಸಮಲಂಕೃತೈಃ - ಅಲಂಕರಿಸಲ್ಪಟ್ಟ, ಸುವ......ತೈಃ - ಭಂಗಾರದ ಗವಾಕ್ಷಿಗಳುಳ್ಳ, ರಥೈಃ - ರಥಗಳಿಂದಲೂ, ವಿವಿಧಾನನೈಃ - ನಾನಾಬಗೆಗಳಾದ ಮುಖಗಳುಳ್ಳ, ಖರೈಶ್ಚ - ಕತ್ತೆಗಳಿಂದಲೂ, ನಿರ್ಯಯುಃ-ಹೊರಟರು. || ೨೬ || ರಾಕ್ಷಸವ್ಯಾಘ್ರಾಃ - ರಾಕ್ಷಸಶ್ರೇಷ್ಠರು, ವ್ಯಾಘ್ರಾ ಇವ - ಹುಲಿಗಳಂತೆ, ದುರಾಸದಾಃ - ಹೊಂದಲಸಾಧ್ಯರಾಗಿ, ಪರಮಶೀಘ್ರೈಃ - ಬಹಳ ವೇಗವುಳ್ಳ, ಹಯೈಃ - ಕುದುರೆಗಳಿಂದ, ಮದೋತ್ಕಟೈಃ - ಮದವೇರಿದ, ಗಜೇಂದ್ರೈಶ್ಚ - ಆನೆಗಳಿಂದಲೂ, ನಿರ್ಯಯುಃ - ಹೊರಟರು. || ೨೭ || ಖರನಿಸ್ವನಃ - ಕತ್ತೆಯಂತೆ ಕೂಗುತ್ತಿರುವ, ಧೂಮ್ರಾಕ್ಷಃ - ಧೂಮ್ರಾಕ್ಷನು, ಕಪಿ ... ಖೈಃ - ಕಪಿಗಳ ಮತ್ತು ಸಿಂಹಗಳ ಮುಖಗಳಂತೆ ಮುಖಗಳುಳ್ಳ, ಕನ.... ಣೈಃ-ಭಂಗಾರದ ಒಡವೆಗಳುಳ್ಳ, ಖರೈಃ-ಕತ್ತೆಗಳಿಂದ, ಯುಕ್ತಂ - ಕೂಡಿರುವ, ದಿವ್ಯಂ - ಮನೋಹರವಾದ, ರಥಂ - ತೇರನ್ನು, ಆರು

---

ಪಟ್ಟಿಸಾದಿ ಆಯುಧಗಳನ್ನು ಧರಿಸಿ ಬಹು ರಭಸದಿಂದ ಹೊರಹೊರಟರು. ಕೆಲವರು ರಾಕ್ಷಸರು ಗದೆಗಳನ್ನೂ, ಪಟ್ಟಿಸಗಳನ್ನೂ, ದಂಡಗಳನ್ನೂ, ಕಬ್ಬಿಣದ ಹಾರೆಗಳನ್ನೂ, ಪರಿಘಗಳನ್ನೂ, ಭಿಂಡಿವಾಲಗಳನ್ನೂ, ಭಲ್ಲೆಗಳನ್ನೂ, ಗಂಡುಗೊಡಲಿಗಳನ್ನೂ ಧರಿಸಿದವರಾಗಿ ಮುಗಿಲುಗಳಂತೆ ಗರ್ಜಿಸುತ್ತ ಹೊರಟು ಬಂದರು. ಇನ್ನು ಕೆಲವರು ರಾಕ್ಷಸರು ಸ್ವಲಂಕೃತವಾದ ಧ್ವಜಗಳಿಂದ ಕೂಡಿದ ರಥಗಳನ್ನೇರಿ ಹೊರಟರು. ಮತ್ತೆ ಕೆಲವರು ಸ್ವರ್ಣಾಭರಣಗಳಿಂದಲಂಕೃತವಾಗಿಯೂ, ನಾನಾವಿಧಗಳಾದ ಮುಖಗಳುಳ್ಳವುಗಳಾಗಿಯೂ ಇರುವ ಹೇಸರಕತ್ತೆಗಳನ್ನೂ, ಬಹು ವೇಗವಾಗಿ ಹೋಗುವ ಜಾತ್ಯಶ್ವಗಳನ್ನೂ, ಮದಿಸಿದ ಗಜಶ್ರೇಷ್ಠಗಳನ್ನೂ ಹತ್ತಿದವರಾಗಿ ಮದಿಸಿದ ವ್ಯಾಘ್ರಗಳಂತೆ ಮಹಾ ಭಯಂಕರರಾಗಿ ತೋರುತ್ತ ಹೊರಟು ಬಂದರು. || ೨೫–೨೭ || ಆ ಸಮಯದಲ್ಲಿ ಕತ್ತೆಯ ಕಂಠಧ್ವನಿಯುಳ್ಳ ಧೂಮ್ರಾಕ್ಷನು, ಕಪಿ ಮತ್ತು ಸಿಂಹಗಳ ಮುಖಗಳನ್ನು ಹೋಲುವ ಮುಖಗಳುಳ್ಳವುಗಳಾಗಿ, ಸ್ವರ್ಣಾಭರಣಗಳಿಂದಲಂಕೃತಗಳಾಗಿರುವ ಹೇಸರಕತ್ತೆಗಳು ಹೂಡಿದ

ಸನಿರ್ಯಾತೋ ಮಹಾವೀರ್ಯೋ ಧೂಮ್ರಾಕ್ಷೋ ರಾಕ್ಷಸೈರ್ವೃತಃ । ಪ್ರಹಸನ್
ಪಶ್ಚಿಮದ್ವಾರಂ ಹನುಮಾನ್ ಯತ್ರ ಯೂಥಪಃ ॥ ೨೯ ॥ ರಥಪ್ರವರಮಾಸ್ಥಾಯ
ಖರಯುಕ್ತಂ ಖರಸ್ವನಂ । ಪ್ರಯಾಂತಂ ತು ಮಹಾಘೋರಂ ರಾಕ್ಷಸಂ ಭೀಮ
ವಿಕ್ರಮಂ ॥ ೩೦ ॥ ಅಂತರಿಕ್ಷಗತಾ ಘೋರಾಃ ಶಕುನಾಃ ಪ್ರತ್ಯವಾರಯನ್ । ರಥ
ಶೀರ್ಷೇ ಮಹಾನ್ ಭೀಮೋ ಗೃಧ್ರಶ್ಚ ನಿಪಪಾತಹ । ಧ್ವಜಾಗ್ರೇ ಗ್ರಥಿತಾಶ್ಚೈವ
ನಿಪೇತುಃ ಕುಣಪಾಶನಾಃ ॥೩೧॥ ರುಧಿರಾರ್ದ್ರೋ ಮಹಾನ್ ಶ್ವೇತಃ ಕಬಂಧಃ ಪತಿತೋ
ಭುವಿ । ವಿಸ್ವರಂ ಚೋತ್ಸೃಜನ್ನಾದಂ ಧೂಮ್ರಾಕ್ಷಸ್ಯ ಸಮೀಪತಃ ॥ ೩೨ ॥ ವವರ್ಷ

---

ರೋಹ - ಏರಿದನು. ||೨೮|| ಯೂಥಪಃ - ಯೂಥಪತಿಯಾದ, ಮಹಾವೀರ್ಯಃ - ಮಹಾ ಸಾಮರ್ಥ್ಯವಂತನಾದ, ಸಧೂಮ್ರಾಕ್ಷಃ - ಆ ಧೂಮ್ರಾಕ್ಷನು, ರಾಕ್ಷಸೈಃ - ರಕ್ಕಸರಿಂದ, ವೃತಃ - ಆವೃತನಾಗಿ, ಪ್ರಹಸನ್ - ನಗುತ್ತ, ಯತ್ರ - ಯಾವ ಬಾಗಿಲಿನಲ್ಲಿ, ಯೂಥಪಃ - ಯೂಥಪತಿಯಾದ, ಹನುಮಾನ್ - ಆಂಜನೇಯನು, ಅಸ್ತಿ - ಇದ್ದಾನೆಯೋ, ತತ್ಪಶ್ಚಿಮದ್ವಾರಂ - ಅಂಥಾ ಪಶ್ಚಿಮದ ಬಾಗಿಲನ್ನು ಕುರಿತು, ನಿರ್ಯಾತಃ - ಹೊರಟುಬಂದನು. ॥ ೨೯ ॥ ಖರಯುಕ್ತಂ - ಕತ್ತೆಗಳಿಂದ ಕೂಡಿದ್ದ, ಖರಸ್ವನಂ - ಕ್ರೂರವಾದ ಧ್ವನಿಯುಳ್ಳ, ರಥಪ್ರವರಂ - ಶ್ರೇಷ್ಠವಾದ ರಥದಲ್ಲಿ, ಆಸ್ಥಾಯ - ಕುಳಿತು, ಪ್ರಯಾಂತಂ - ಹೊರಟುಬರುತ್ತಿರುವ, ಮಹಾಘೋರಂ - ಬಹಳ ಭಯಂಕರನಾದ ಧೂಮ್ರಾಕ್ಷನನ್ನು, ಅಂತರಿಕ್ಷಗತಾಃ - ಅಂತರಿಕ್ಷವನ್ನು ಹೊಂದಿರುವ, ಘೋರಾಃ - ಭಯಂಕರಗಳಾದ, ಶಕುನಾಃ - ಹದ್ದೇ ಮೊದಲಾದ ಪಕ್ಷಿಗಳು, ಪ್ರತ್ಯವಾರಯನ್-ಎದುರಾಗಿ ತಡೆದು ಬಂದುವು. ||೩೦|| ಮಹಾನ್-ದೊಡ್ಡದಾದ, ಭೀಮಃ - ಭಯಂಕರವಾದ, ಗೃಧ್ರಶ್ಚ - ಹದ್ದು, ರಥಶೀರ್ಷೇ - ತೇರಿನ ತುದಿಯಲ್ಲಿ, ನಿಪಪಾತಹ - ಬಿದ್ದಿತಷ್ಟೆ, ಧ್ವಜಾಗ್ರೇ - ನಿಶಾನಿಗಳ ತುದಿಯಲ್ಲಿ, ಕುಣಪಾಶನಾಃ - ಪಕ್ಷಿಗಳು, ಗ್ರಥಿತಾಃ - ಕಟ್ಟಲ್ಪಟ್ಟವುಗಳಾಗಿ, ನಿಪೇತುಶ್ಚೈವ - ಬಿದ್ದಿತು. ॥ ೩೧ ॥ ಧೂಮ್ರಾಕ್ಷಸ್ಯ - ಧೂಮ್ರಾಕ್ಷನ, ಸಮೀಪತಃ - ಸಮೀಪದಲ್ಲಿ, ರುಧಿರಾರ್ದ್ರಃ - ರಕ್ತದಿಂದ ತೋಯಿಸಲ್ಪಟ್ಟ, ಮಹಾನ್ - ದೊಡ್ಡದಾದ, ಶ್ವೇತಃ - ಬೆಳ್ಳಗಿರುವ, ಕಬಂಧಃ - ತಲೆಯಿಲ್ಲದ ಮುಂಡೆಯು, ವಿಸ್ವರಂ - ಅಪಸ್ವರವಾದ, ನಾದಂ - ಧ್ವನಿಯನ್ನು, ಉತ್ಸೃಜನ್ - ಬಿಡುತ್ತ, ಭುವಿ - ನೆಲದಲ್ಲಿ, ಪತಿತಃ - ಬಿದ್ದಿತು. ॥ ೩೨ ॥ ದೇವಃ - ಪರ್ಜನ್ಯನು, ರುಧಿರಂ - ರಕ್ತವನ್ನು, ವವರ್ಷ - ಸುರಿಸಿದನು, ಮೇದಿನೀಚ - ನೆಲವೂ ಕೂಡ, ಸಂಚ

---

ರಥವನ್ನೇರಿ ಹೊರಟನು. ಹೀಗೆ ಮಹಾ ಪರಾಕ್ರಮಿಯಾದ ಆ ಧೂಮ್ರಾಕ್ಷನು ಅನೇಕ ಲಕ್ಷ ಸಂಖ್ಯಾಕರಾದ ರಾಕ್ಷಸರೊಡಗೂಡಿ ಹೊರಟು ಹನುಮಂತನಮರಿದ್ದ ಲಂಕಾನಗರದ ಪಶ್ಚಿಮದ್ವಾರದ ಬಳಿಗೆ ಹೋದನು. ಆ ಸಮಯದಲ್ಲಿ ಹೇಸರಕತ್ತೆಗಳು ಹೂಡಿದ ರಥವನ್ನೇರಿ ಹೊರಟವನೂ, ಖರಸ್ವನನೂ, ಮಹಾ ಭಯಂಕರನೂ, ಭಯಂಕರವಾದ ಪರಾಕ್ರಮವುಳ್ಳವನೂ ಆದ ಆ ಧೂಮ್ರಾಕ್ಷನು ಮುಂದುವರಿಯುತ್ತ ಆಕಾಶದಲ್ಲಿ ಉದ್ಭವಿಸಿದ ಅಪಶಕುನಗಳಿಂದ ಸಂದೇಹಕ್ಕೀಡಾದನು. ||೨೮-೩೦|| ಅವನೇರಿದ್ದ ರಥ ಶಿಖರದ ಮೇಲೆ ಹದ್ದು ಬಿದ್ದಿತು. ಧ್ವಜಾಗ್ರಭಾಗದಲ್ಲಿ ಶವಭಕ್ಷಕಗಳಾದ ರಣಹದ್ದುಗಳು ಸಂಚರಿಸಲು ಮೊದಲು ಮಾಡಿದುವು. ರಕ್ತದಿಂದ ತೊಯ್ದು, ಮಹದದ್ಭುತಾಕಾರವಾದ ಬೆಳ್ಳನೆಯ ಕಬಂಧವೊಂದು ಬಹು ವ್ಯಸನಕರವಾದ ಕೂಗುಗಳನ್ನು ಕೂಗುತ್ತ ಆ ಧೂಮ್ರಾಕ್ಷನೆದುರಿನಲ್ಲಿಯೇ ಬಿದ್ದಿತು. ರಕ್ತದ ಮಳೆಯು ಬಹಳ ತೀವ್ರವಾಗಿ ಸುರಿಯಿತು. ಭೂಮಿಯು ಗಡಗಡನೆ

ರುಧಿರಂ ದೇವಸ್ಸಂಚಚಾಲ ಚ ಮೇದಿನೀ । ಪ್ರತಿಲೋಮಂ ವವೌ ವಾಯುರ್ನಿರ್ಘಾತ ಸಮನಿಸ್ಸ್ವನಃ । ತಿಮಿರೌಘಾವೃತಾಸ್ತತ್ರ ದಿಶಶ್ಚ ನಚಕಾಶಿರೇ ॥ ೩೩-೩೪ ॥ ಸತೂತ್ಪಾತಾಂಸ್ತದಾ ದೃಷ್ಟ್ವಾ ರಾಕ್ಷಸಾನಾಂ ಭಯಾವಹಾನ್ । ಪ್ರಾದುರ್ಭೂತಾನ್ ಸುಘೋರಾಂಶ್ಚ ಧೂಮ್ರಾಕ್ಷೋ ವ್ಯಥಿತೋಽಭವತ್ । ಮುಮುಹೂ ರಾಕ್ಷಸಾಸ್ಸರ್ವೇ ಧೂಮ್ರಾಕ್ಷಸ್ಯ ಪುರಸ್ಸರಾಃ ॥ ೩೫ ॥

ತತಸ್ಸುಭೀಮೋ ಬಹುಭಿರ್ನಿಶಾಚರೈ
ರ್ವೃತೋಽಭಿನಿಷ್ಕ್ರಮ್ಯ ರಣೋತ್ಸುಕೋ ಬಲೀ ।
ದದರ್ಶ ತಾಂ ರಾಘವಬಾಹುಪಾಲಿತಾಂ
ಮಹೌಘಕಲ್ಪಾಂ ಬಹುವಾನರೀಂ ಚಮೂಂ ॥ ೩೬ ॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಏಕಪಂಚಾಶಸ್ಸರ್ಗಃ.

---

ಚಾಲ - ನಡುಗಿತು, ವಾಯುಃ - ಗಾಳಿಯು, ನಿರ್ಘಾ....ನಃ - ಸಿಡಲಿಗೆ ಸಮಾನವಾದ ಧ್ವನಿಯುಳ್ಳುದಾಗಿ, ಪ್ರತಿಲೋಮಂ - ಪ್ರತಿಕೂಲವಾಗಿ, ವವೌ - ಬೀಸಿತು, ತತ್ರ - ಆ ಪ್ರಯಾಣ ಕಾಲದಲ್ಲಿ, ತಿಮಿ....ತಾಃ - ಕತ್ತಲೆಯ ಸಮೂಹದಿಂದ ಮುಚ್ಚಿದ, ದಿಶಶ್ಚ - ದಿಕ್ಕುಗಳೂ, ನಚಕಾಶಿರೇ - ಹೊಳೆಯಲಿಲ್ಲವು. ॥ ೩೪ ॥ ಸಧೂಮ್ರಾಕ್ಷಃ - ಆ ಧೂಮ್ರಾಕ್ಷನು, ಪ್ರಾದುರ್ಭೂತಾನ್ - ಆವಿರ್ಭವಿಸಿದ, ರಾಕ್ಷಸಾನಾಂ - ರಕ್ಕಸರಿಗೆ, ಭಯಾವಹಾನ್ - ಭಯಂಕರಗಳಾದ, ಸುಘೋರಾನ್ - ಅತಿ ಕ್ರೂರಗಳಾದ, ಉತ್ಪಾತಾನ್ - ಅಪಶಕುನಗಳನ್ನು, ದೃಷ್ಟ್ವಾ - ಕಂಡು, ತದಾ - ಆ ಕಾಲದಲ್ಲಿ, ವ್ಯಥಿತಃ - ವ್ಯಸನಗೊಂಡವನು, ಅಭವತ್ - ಆದನು. ॥ ೩೫ ॥ ಧೂಮ್ರಾಕ್ಷಸ್ಯ - ಧೂಮ್ರಾಕ್ಷನಿಗೆ, ಪುರಸ್ಸರಾಃ - ಮುಂದಾಗಿ ಹೋಗುತ್ತಿರುವ, ಸರ್ವೇರಾಕ್ಷಸಾಃ - ಸಮಸ್ತ ರಾಕ್ಷಸರೂ, ಮುಮುಹುಃ - ಮೂರ್ಛಾಕ್ರಾಂತರಾದರು, ತತಃ - ಬಳಿಕ, ಭೀಮಃ - ಭಯಂಕರನಾದ, ಬಲೀ - ಬಲವಂತನಾದ, ರಣೋತ್ಸುಕಃ- ಯುದ್ಧದಲ್ಲಿ ಆಸಕ್ತನಾದ, ಸಃ - ಆ ಧೂಮ್ರಾಕ್ಷನು, ಬಹುಭಿಃ - ಅನೇಕರಾದ, ನಿಶಾಚರೈಃ - ರಾಕ್ಷಸರಿಂದ, ವೃತಃ - ಸುತ್ತುವರೆಯಲ್ಪಟ್ಟವನಾಗಿ, ಅಭಿನಿಷ್ಕ್ರಮ್ಯ - ಹೊರಟುಬಂದು, ರಾಘ....ತಾಂ - ಶ್ರೀರಾಮನ ಭುಜಬಲಪರಾಕ್ರಮದಿಂದ ಸಂರಕ್ಷಿತವಾದ, ಮಹೌಘಕಲ್ಪಾಂ - ಮಹಾ ಪ್ರವಾಹಕ್ಕೆ ಸಮಾನವಾದ, ಬಹುವಾನರೀಂ - ಅನೇಕ ವಾನರರುಳ್ಳ, ತಾಂಚಮೂಂ - ಆ ಕಪಿಸೈನ್ಯವನ್ನು, ದದರ್ಶ - ಕಂಡನು. ॥ ೩೬ ॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಏಕಪಂಚಾಶಸ್ಸರ್ಗಃ.

---

ನಡುಗಲಾರಂಭಿಸಿತು. ಮಹಾ ಭಯಂಕರವಾದ ಧ್ವನಿಗಳನ್ನು ಮಾಡುತ್ತ ಮಹಾ ವಾತವು ಆ ಧೂಮ್ರಾಕ್ಷನಿಗೆ ಪ್ರತಿಕೂಲವಾಗಿ ಬೀಸತೊಡಗಿತು. ದಿಕ್ಕುಗಳೆಲ್ಲವೂ ಕತ್ತಲಿಂದ ವ್ಯಾಪ್ತವಾಗಿ ಪ್ರಕಾಶಹೀನವಾದುವು. ॥ ೩೧-೩೪ ॥ ರಾಕ್ಷಸರಿಗೆ ಭಯವನ್ನುಂಟುಮಾಡತಕ್ಕುವೂ, ಮಹಾ ಭಯಂಕರವಾದುವೂ ಆದ ಆ ದುಶ್ಶಕುನಗಳನ್ನು ನೋಡಿ ಆ ಧೂಮ್ರಾಕ್ಷನ ಮುಂಗಡೆ ಸಂಚರಿಸುತ್ತಿದ್ದ ರಾಕ್ಷಸಯೋಧರೆಲ್ಲರೂ ದಿಗ್ಭ್ರಾಂತರಾಗಿ ಹೋದರು. ಆ ಬಳಿಕ ಮಹಾ ಭಯಂಕರನೂ, ಅಪರಿಮಿತ ಪರಾಕ್ರಮವಂತನೂ, ಯುದ್ಧಮಾಡಬೇಕೆಂಬ ಕುತೂಹಲವುಳ್ಳವನೂ ಆದ ಆ ಧೂಮ್ರಾಕ್ಷನು ರಾಕ್ಷಸಸೇನೆಯೊಡನೆ ಮುಂದುವರಿದವನಾಗಿ, ಮಹಾ ಪ್ರವಾಹವನ್ನು ಹೋಲುತ್ತಿರುವುದೂ, ಶ್ರೀರಾಮಮೂರ್ತಿಯಿಂದ ಪರಿಪಾಲಿತವಾಗಿರುವುದೂ ಆದ ವಾನರಸೈನ್ಯವನ್ನು ಕಂಡನು. ॥ ೩೫-೩೬ ॥

ಇಂತಿದು ಧೂಮ್ರಾಕ್ಷಾಗಮನ ವೃತ್ತಾಂತವೆಂಬ ಐವತ್ತೊಂದನೆಯ
ಸರ್ಗವು ಸಮಾಪ್ತವಾದುದು.

# ಯುದ್ಧಕಾಂಡೇ ದ್ವಿಪಂಚಾಶಸ್ಸರ್ಗಃ

ಧೂಮ್ರಾಕ್ಷಂ ಪ್ರೇಕ್ಷ್ಯ ನಿರ್ಯಾಂತಂ ರಾಕ್ಷಸಂ ಭೀಮವಿಕ್ರಮಂ । ವಿನೇದು ರ್ವಾನರಾಸ್ಸರ್ವೇ ಪ್ರಹೃಷ್ಟಾ ಯುದ್ಧಕಾಂಕ್ಷಿಣಃ ॥ ೧ ॥ ತೇಷಾಂ ಸುತುಮುಲಂ ಯುದ್ಧಂ ಸಂಜಜ್ಞೇ ಹರಿರಕ್ಷಸಾಂ । ಅನ್ಯೋನ್ಯಂ ಪಾದಪೈರ್ಘೋರಂ ನಿಘ್ನತಾಂ ಶೂಲಮುದ್ಗರೈಃ ॥ ೨ ॥ ಘೋರೈಶ್ಚ ಪರಿಘೈಶ್ಚಿತ್ರೈಸ್ತ್ರಿಶೂಲೈಶ್ಚಾಪಿ ಸಂಹತೈಃ । ರಾಕ್ಷಸೈರ್ವಾನರಾ ಘೋರೈರ್ವಿನಿಕೃತ್ತಾಸ್ಸಮಂತತಃ ॥ ೩ ॥ ವಾನರೈ ರಾಕ್ಷಸಾಶ್ಚಾಪಿ ದ್ರುಮೈರ್ಭೂಮೌ ಸಮೀಕೃತಾಃ । ರಾಕ್ಷಸಾಶ್ಚಾಪಿ ಸಂಕ್ರುದ್ಧಾ ವಾನರಾನ್ನಿಶಿತೈಃ

ಯುದ್ಧಕಾಂಕ್ಷಿಣಃ - ಕಾಳಗದಲ್ಲಿ ಅಪೇಕ್ಷೆಯುಳ್ಳ, ಸರ್ವೇವಾನರಾಃ - ಸಮಸ್ತ ಕಪಿಗಳೂ, ನಿರ್ಯಾಂತಂ-ಹೊರಟುಬರುತ್ತಿರುವ, ಭೀಮವಿಕ್ರಮಂ-ಭಯಂಕರ ಪರಾಕ್ರಮವುಳ್ಳ, ಧೂಮ್ರಾಕ್ಷಂ - ಧೂಮ್ರಾಕ್ಷನೆಂಬ, ರಾಕ್ಷಸಂ - ರಕ್ಕಸನನ್ನು, ಪ್ರೇಕ್ಷ್ಯ - ಕಂಡು, ಪ್ರಹೃಷ್ಟಾಃ - ಸಂತೋಷಗೊಂಡವರಾಗಿ, ವಿನೇದುಃ - ಕೋಲಾಹಲಧ್ವನಿ ಮಾಡಿದರು. ॥ ೧ ॥ ಅನ್ಯೋನ್ಯಂ - ಪರಸ್ಪರವಾಗಿ, ಪಾದಪೈಃ - ಗಿಡಗಳಿಂದಲೂ, ಶೂಲಮುದ್ಗರೈಃ - ಭಲ್ಲಾಯುಧಗಳಿಂದಲೂ ಮುದ್ಗರಾಯುಧಗಳಿಂದಲೂ, ನಿಘ್ನತಾಂ - ಹೊಡೆಯುತ್ತಿರುವ, ತೇಷಾಂಹರಿರಕ್ಷಸಾಂ - ಆ ಕಪಿರಾಕ್ಷಸರಿಗೆ, ಘೋರಂ - ಭಯಂಕರವಾದ, ಸುತುಮುಲಂ - ಬಹಳ ಸಂಕುಲವಾದ, ಯುದ್ಧಂ - ಕಾಳಗವು, ಸಂಜಜ್ಞೇ - ಉಂಟಾಯಿತು. ॥೨॥ ಘೋರೈಃ - ಭಯಂಕರರಾದ, ರಾಕ್ಷಸೈಃ - ರಕ್ಕಸರಿಂದ, ವಾನರಾಃ - ಕಪಿಗಳು, ಘೋರೈಃ - ಕ್ರೂರಗಳಾದ, ಚಿತ್ರೈಃ - ನಾನಾಬಗೆಗಳಾದ, ಪರಿಘೈಃ - ಕಬ್ಬಿಣದ ಕಟ್ಟುಹಾಕಿದ ದೊಣ್ಣೆಗಳಿಂದಲೂ, ಸಂಹತೈಃ - ಒಂದುಗೂಡಿದ, ತ್ರಿಶೂಲೈಶ್ಚಾಪಿ - ತ್ರಿಶೂಲಗಳಿಂದಲೂ, ಸಮಂತತಃ - ಎಲ್ಲಾ ಕಡೆಯಲ್ಲಿಯೂ, ವಿನಿಕೃತ್ತಾಃ - ಕತ್ತರಿಸಲ್ಪಟ್ಟರು. ॥ ೩ ॥ ವಾನರೈಃ - ಕಪಿಗಳಿಂದಲೂ, ರಾಕ್ಷಸಾಶ್ಚಾಪಿ - ರಕ್ಕಸರೂ, ದ್ರುಮೈಃ - ಮರಗಳಿಂದ, ಭೂಮೌ - ಭೂಮಿಯಲ್ಲಿ, ಸಮೀಕೃತಾಃ - ಸಮವಾಗಿ ಮಾಡಲ್ಪಟ್ಟರು, ರಾಕ್ಷಸಾಶ್ಚಾಪಿ - ರಾಕ್ಷಸರೂ, ಸಂಕ್ರುದ್ಧಾಃ - ಕೋಪಗೊಂಡು, ಘೋರಸಂಕಾಶೈಃ - ಭಯಂಕರಗಳಾದ, ಅಜಿಹ್ಮಗೈಃ - ನೇರವಾಗಿ ಹೋಗುತ್ತಿರುವ, ಕಂಕಪತ್ರೈಃ - ಹದ್ದು

ಆಮೇಲೆ ಭಯಂಕರ ಪರಾಕ್ರಮವುಳ್ಳವನೂ, ಯುದ್ಧಾಪೇಕ್ಷೆಯಿಂದ ಹೊರಟು ಬಂದಿರುವವನೂ ಆದ ಆ ಧೂಮ್ರಾಕ್ಷನನ್ನು ನೋಡಿದೊಡನೆಯೇ ಅಲ್ಲಿದ್ದ ವಾನರರೆಲ್ಲರೂ ಅವನೊಡನೆ ಯುದ್ಧಮಾಡಬೇಕೆಂಬ ಉತ್ಸಾಹದಿಂದ ಸಿಂಹನಾದಗಳನ್ನು ಮಾಡಿದರು. ಆ ಸಮಯದಲ್ಲಿ ರಾಕ್ಷಸರಿಗೂ ವಾನರರಿಗೂ, ಬಹಳ ಘೋರವಾದ ಯುದ್ಧವು ನಡೆಯಿತು. ಆಗ ವಾನರರು ರಾಕ್ಷಸರನ್ನೂ, ರಾಕ್ಷಸರು ವಾನರರನ್ನೂ, ವೃಕ್ಷಗಳಿಂದಲೂ, ಶಲಮುದ್ಗರ ಪರಿಘ ತ್ರಿಶೂಲವೇ ಮೊದಲಾದ ಅನೇಕ ಆಯುಧಗಳಿಂದಲೂ, ಪ್ರಬಲವಾಗಿ ಪ್ರಹರಿಸಿದರು. ವಾನರರು ಕ್ರೋಧಾವಿಷ್ಟಚಿತ್ತರಾಗಿ ರಾಕ್ಷಸರನೇಕರನ್ನು ಹೊಡೆದು ನೆಲಕ್ಕೆ ಕೆಡವಿದರು. ರಾಕ್ಷಸರೂ ಸಹ ಮಹಾ ಕುಪಿತರಾಗಿ ಬಹು ತೀಕ್ಷ್ಣಗಳಾದ ಬಾಣಗಳಿಂದ ವಾನರರನೇಕರನ್ನು ಕೊಂದರು. ॥ ೧–೪ ॥ ಕೆಲವರು ವಾನರರು ಕೋಪೋದ್ದೀಪಿತರಾಗಿ ಭಯವನ್ನೇ

ಶರೈಃ ॥ ೪ ॥ ವಿವ್ಯಥುರ್ಘೋರಸಂಕಾಶೈಃ ಕಂಕಪತ್ರೈರಜಿಹ್ಮಗೈಃ । ತೇ ಗದಾಭಿಶ್ಚ ಭೀಮಾಭಿಃ ಪಟ್ಟಿಸೈಃ ಕೂಟಮುದ್ಗರೈಃ ॥೫॥ ವಿದಾರ್ಯಮಾಣಾ ರಕ್ಷೋಭಿರ್ವಾನರಾಸ್ತೇ ಮಹಾಬಲಾಃ । ಅಮರ್ಷಾಜ್ಜನಿತೋದ್ಧರ್ಷಾಶ್ಚಕ್ರುಃ ಕರ್ಮಾಣ್ಯಭೀತವತ್ ॥ ೬ ॥ ಶರನಿರ್ಭಿಣ್ಣಗಾತ್ರಾಸ್ತೇ ಶೂಲನಿರ್ಭಿಣ್ಣದೇಹಿನಃ । ಜಗೃಹುಸ್ತೇ ದ್ರುಮಾಂಸ್ತತ್ರ ಶಿಲಾಶ್ಚ ಹರಿಯೂಥಪಾಃ ॥ ೭ ॥ ತೇ ಭೀಮವೇಗಾ ಹರಯೋ ನರ್ದಮಾನಾಸ್ತತಸ್ತತಃ । ಮಮಂಥೂ ರಾಕ್ಷಸಾನ್ ಭೀಮಾನ್ನಾಮಾನಿಚ ಬಭಾಷಿರೇ ॥ ೮ ॥ ತದ್ಬಭೂವಾದ್ಭುತಂ ಘೋರಂ ಯುದ್ಧಂ ವಾನರರಕ್ಷಸಾಂ । ಶಿಲಾಭಿರ್ವಿವಿಧಾಭಿಶ್ಚ ಬಹುಭಿಶ್ಚೈವ ಪಾದಪೈಃ ॥೯॥ ರಾಕ್ಷಸಾ ಮಥಿತಾಃ ಕೇಚಿದ್ವಾನರೈರ್ಜಿತಕಾಶಿಭಿಃ । ವವಮೂ

---

ಗಳ ರೆಕ್ಕೆಗಳುಳ್ಳ, ನಿಶಿತೈಃ-ತೀಕ್ಷ್ಣಗಳಾದ, ಶರೈಃ-ಬಾಣಗಳಿಂದ, ವಾನರಾನ್-ಕಪಿಗಳನ್ನು, ವಿವ್ಯಥುಃ-ವ್ಯಥೆಗೊಳಿಸಿದರು. ॥ ೪ ॥ ತೇ - ಆ ಕಪಿಗಳು, ರಕ್ಷೋಭಿಃ - ರಾಕ್ಷಸರಿಂದ, ಭೀಮಾಭಿಃ - ಭಯಂಕರಗಳಾದ, ಗದಾಭಿಃ - ಗದಾಯುಧಗಳಿಂದಲೂ, ಪಟ್ಟಿಸೈಃ - ಪಟ್ಟಾಕತ್ತಿಗಳಿಂದಲೂ, ಕೂಟಮುದ್ಗರೈಃ - ಕಬ್ಬಿಣದ ಕೊಡಲಿಗಳಿಂದಲೂ, ವಿದಾರ್ಯಮಾಣಾಃ-ಸೀಳಿಸಲ್ಪಟ್ಟು, ವಿವ್ಯಥುಃ-ವ್ಯಥೆಗೊಂಡರು. ॥೫॥ ಮಹಾಬಲಾಃ-ಮಹಾ ಬಲಿಷ್ಠರಾದ, ತೇವಾನರಾಃ-ಆ ಕಪಿಗಳು, ಅಮರ್ಷಾತ್-ಕೋಪೋದ್ರೇಕದಿಂದ, ಜನಿತೋದ್ಧರ್ಷಾಃ - ಹುಟ್ಟಿದ ಉನ್ಮಾದವುಳ್ಳವರಾಗಿ, ಅಭೀತವತ್ - ಭಯವಿಲ್ಲದೆ, ಕರ್ಮಾಣಿ - ಯುದ್ಧ ವ್ಯಾಪಾರಗಳನ್ನು, ಚಕ್ರುಃ - ಮಾಡಿದರು. ॥ ೬ ॥ ತೇಹರಿಯೂಥಪಾಃ - ಆ ವಾನರೋತ್ತಮರು, ತತ್ರ - ಆ ರಣರಂಗದಲ್ಲಿ, ಶರ....ತ್ರಾಃ - ಬಾಣಗಳಿಂದ ಭೇದಿಸಲ್ಪಟ್ಟ ಶರೀರಗಳುಳ್ಳವರೂ, ಶೂಲ....ನಃ-ಭಲ್ಲಾಯುಧಗಳಿಂದ ಭೇದಿಸಲ್ಪಟ್ಟ ಶರೀರಗಳುಳ್ಳವರೂ ಆದರೂ, ದ್ರುಮಾನ್-ಗಿಡಗಳನ್ನು, ಜಗೃಹುಃ - ತೆಗೆದುಕೊಂಡರು, ತೇ - ಆ ಕಪಿಗಳು, ಶಿಲಾಶ್ಚ - ಪಾಷಾಣಗಳನ್ನೂ, ಜಗೃಹುಃ - ತೆಗೆದುಕೊಂಡರು. ॥ ೭ ॥ ಭೀಮವೇಗಾಃ - ಭಯಂಕರವಾದ ವೇಗವುಳ್ಳ, ತೇಹರಯಃ - ಆ ಕಪಿಗಳು, ತತಸ್ತತಃ - ಅಲ್ಲಲ್ಲಿ, ನರ್ದಮಾನಾಃ - ಕೂಗುತ್ತ, ಭೀಮಾನ್ - ಭಯಂಕರರಾದ, ರಾಕ್ಷಸಾನ್ - ರಕ್ಕಸರನ್ನು, ಮಮಂಥುಃ - ಪುಡಿಪುಡಿಮಾಡಿದರು, ನಾಮಾನಿಚ - ಹೆಸರುಗಳನ್ನೂ, ಬಭಾಷಿರೇ - ಹೇಳಿಕೊಂಡರು. ॥ ೮ ॥ ವಾನರರಕ್ಷಸಾಂ - ವಾನರರಿಗೂ ರಾಕ್ಷಸರಿಗೂ, ವಿವಿಧಾಭಿಃ - ನಾನಾಬಗೆಗಳಾದ, ಶಿಲಾಭಿಃ - ಪಾಷಾಣಗಳಿಂದಲೂ, ಬಹುಭಿಃ - ಅನೇಕಗಳಾದ, ಪಾದಪೈಶ್ಚೈವ - ಗಿಡಗಳಿಂದಲೂ, ಅದ್ಭುತಂ - ಆಶ್ಚರ್ಯಕರವಾದ, ಘೋರಂ - ಭಯಂಕರವಾದ, ತದ್ಯುದ್ಧಂ - ಆ ಕಾಳಗವು, ಬಭೂವ - ಆಯಿತು. ॥ ೯ ॥ ಕೇಚಿದ್ರಾಕ್ಷಸಾಃ - ಕೆಲವರು ರಾಕ್ಷಸರು, ಜಿತಕಾಶಿಭಿಃ - ಜಯಶೀಲ

---

ತೊರೆದು ವೇಗವಾಗಿ ಸಂಚರಿಸುತ್ತ ಭಯಂಕರ ವ್ಯಾಪಾರಗಳನ್ನು ಮಾಡತೊಡಗಿದರು. ಬಾಣಗಳಿಂದ ಭೇದಿಸಿ ಹೋದ ಶರೀರಗಳುಳ್ಳವರೂ, ಶೂಲಗಳಿಂದ ವ್ರಣಗೊಂಡವರೂ ಆದ ಆ ವಾನರರು ಮತ್ತಷ್ಟು ಕನಲಿ ಮಹಾ ಭಯಂಕರವಾದ ಮಹಾ ವೃಕ್ಷಗಳನ್ನೂ, ದೊಡ್ಡ ದೊಡ್ಡ ಬಂಡೆಗಳನ್ನೂ ಆಯುಧಗಳನ್ನಾಗಿ ಗ್ರಹಿಸಿ ಮಹೋಗ್ರಕರ್ಮಿಗಳಾದ ರಾಕ್ಷಸರೆಲ್ಲರನ್ನು ಬಗೆಬಗೆಯಾಗಿ ಮರ್ದಿಸಿದರು. ಹೀಗೆ ಮರ್ದಿಸುವಾಗ ಅವರೆಲ್ಲರೂ ಘಟ್ಟಿಯಾಗಿ ತಮ್ಮ ಹೆಸರುಗಳನ್ನು ಕೂಗಿ ಹೇಳಿಕೊಂಡರು. ಅದೇ ಸಮಯದಲ್ಲಿಯೇ ವಿಧವಿಧವಾದ ಶಿಲೆಗಳನ್ನೂ, ವೃಕ್ಷಗಳನ್ನೂ ಧರಿಸಿದ್ದ ವಾನರರಿಗೂ, ವಿವಿಧಾಯುಧಧಾರಿಗಳಾದ ರಾಕ್ಷಸರಿಗೂ ಸಂಕುಲಯುದ್ಧಕ್ಕೆ ಮೊದಲಾಯಿತು. ಆ ಯುದ್ಧದಲ್ಲಿ ಜಯಶಾಲಿಗಳಾದ ವಾನರರು

ರುಧಿರಂ ಕೇಚಿನ್ಮುಖೈ ರುಧಿರಭೋಜನಾಃ ||೧೦|| ಪಾರ್ಶ್ವೇಷು ದಾರಿತಾಃ ಕೇಚಿ
ತ್ಕೇಚಿದ್ರಾಶೀಕೃತಾ ದ್ರುಮೈಃ | ಶಿಲಾಭಿಶ್ಚೂರ್ಣಿತಾಃ ಕೇಚಿತ್ಕೇಚಿದ್ದಂತೈರ್ವಿ
ದಾರಿತಾಃ ||೧೧|| ಧ್ವಜೈರ್ವಿಮಥಿತೈರ್ಭಗ್ನೈಃ ಖರೈಶ್ಚ ವಿನಿಪಾತಿತೈಃ | ರಥೈರ್ವಿ
ಧ್ವಂಸಿತೈಶ್ಚಾಪಿ ಪತಿತೈ ರಜನೀಚರೈಃ ||೧೨|| ಗಜೇಂದ್ರೈಃ ಪರ್ವತಾಕಾರೈಃ ಪರ್ವತಾ
ಗ್ರೈರ್ವನೌಕಸಾಂ | ಮಥಿತೈ ರ್ವಾಜಿಭಿಃ ಕೀರ್ಣಂ ಸಾರೋಹೈರ್ವಸುಧಾತಲಂ ||೧೩||
ವಾನರೈರ್ಭೀಮವಿಕ್ರಾಂತೈರಾಪ್ಲುತ್ಯಾಪ್ಲುತ್ಯ ವೇಗಿತೈಃ | ರಾಕ್ಷಸಾಃ ಕರಜೈಸ್ತೀಕ್ಷ್ಣೈ

ರಾದ ವಾನರೈಃ - ಕಪಿಗಳಿಂದ, ಮಥಿತಾಃ - ಹೊಡೆಯಲ್ಪಟ್ಟರು, ರುಧಿರಭೋಜನಾಃ - ರಕ್ತವನ್ನು ಭೋಜನ ಮಾಡುತ್ತಿರುವ, ಕೇಚಿತ್-ಕೆಲವರು, ಮುಖೈಃ - ಮುಖಗಳಿಂದ, ರುಧಿರಂ - ರಕ್ತವನ್ನು, ವವಮುಃ - ಕಕ್ಕಿದರು. ||೧೦|| ಕೇಚಿತ್ - ಕೆಲರಾಕ್ಷಸರು, ಪಾರ್ಶ್ವೇಷು - ಪಾರ್ಶ್ವಭಾಗಗಳಲ್ಲಿ, ದಾರಿತಾಃ - ಸೀಳಲ್ಪಟ್ಟರು, ಕೇಚಿತ್ - ಕೆಲವರು, ದ್ರುಮೈಃ - ಗಿಡಗಳಿಂದ, ರಾಶೀಕೃತಾಃ - ಗುಂಪು ಗುಂಪಾಗಿ ಹೊಡೆಯಲ್ಪಟ್ಟರು, ಕೇಚಿತ್ - ಕೆಲವರು, ಶಿಲಾಭಿಃ - ಪಾಷಾಣಗಳಿಂದ, ಚೂರ್ಣಿತಾಃ - ಪುಡಿಮಾಡಲ್ಪಟ್ಟರು, ಕೇಚಿತ್ - ಕೆಲವರು, ದಂತೈಃ - ಹಲ್ಲುಗಳಿಂದ, ವಿದಾರಿತಾಃ - ಕಚ್ಚಲ್ಪಟ್ಟರು. ||೧೧|| ವನೌಕಸಾಂ - ಕಪಿಗಳು, ಪರ್ವತಾಗ್ರೈಶ್ಚ - ಬೆಟ್ಟಗಳ ತುದಿಗಳಿಂದ, ವಿಮಥಿತೈಃ - ಮುರಿಯಲ್ಪಟ್ಟ, ಧ್ವಜೈಃ - ನಿಶಾನಿಗಳಿಂದಲೂ, ಭಗ್ನೈಃ - ಮುರಿಯಲ್ಪಟ್ಟ, ವಿನಿಪಾತಿತೈಃ - ಕೆಳಕ್ಕೆ ಕೆಡುಹಲ್ಪಟ್ಟ, ಖರೈಶ್ಚ - ಕತ್ತೆಗಳಿಂದಲೂ, ವಿಧ್ವಂಸಿತೈಃ - ನಾಶಗೊಳಿಸಲ್ಪಟ್ಟ, ರಥೈಶ್ಚಾಪಿ - ರಥಗಳಿಂದಲೂ, ಪತಿತೈಃ - ಬಿದ್ದಿರುವ, ರಜನೀಚರೈಃ - ರಕ್ಕಸರಿಂದಲೂ, ಪರ್ವತಾಕಾರೈಃ - ಬೆಟ್ಟದ ಆಕಾರದಂತೆ ಆಕಾರವುಳ್ಳ, ಗಜೇಂದ್ರೈಃ - ದೊಡ್ಡ ಆನೆಗಳಿಂದಲೂ, ಮಥಿತೈಃ - ಸಂಹಾರ ಮಾಡಲ್ಪಟ್ಟ, ಸಾರೋಹೈಃ - ರಾವುತರಿಂದೊಡಗೂಡಿದ, ವಾಜಿಭಿಃ - ಕುದುರೆಗಳಿಂದಲೂ, ವಸುಧಾತಲಂ - ಭೂಮಂಡಲವು, ಕೀರ್ಣಂ - ತುಂಬಿಹೋಯಿತು ||೧೪|| ಭೀಮವಿಕ್ರಾಂತೈಃ - ಭಯಂಕರ ಪರಾಕ್ರಮವುಳ್ಳ, ವೇಗಿತೈಃ - ಸಂಜಾತ ವೇಗವುಳ್ಳ, ವಾನರೈಃ - ಕಪಿಗಳಿಂದ, ಆಪ್ಲುತ್ಯಾಪ್ಲುತ್ಯ - ಮೇಲಕ್ಕೆ ಹಾರಿ ಹಾರಿ, ತೀಕ್ಷ್ಣೈಃ - ಹದವುಳ್ಳ, ಕರಜೈಃ - ಉಗುರುಗಳಿಂದ, ರಾಕ್ಷಸಾಃ - ರಕ್ಕಸರು, ವಿನಿಕರ್ತಿತಾಃ - ಕತ್ತರಿಸಲ್ಪಟ್ಟರು. ||೧೫|| ಭೂಯಃ - ಮತ್ತೂ, ವಿವರ್ಣವದನಾಃ - ಮಲಿನ

ರಾಕ್ಷಸರೆಲ್ಲರನ್ನೂ ಮರ್ದಿಸಿದರು. ಆಗ ಕೆಲವರು ರಾಕ್ಷಸರು ಆ ವಾನರವೀರರ ಪ್ರಹಾರಗಳನ್ನು ತಾಳಲಾರದೆ ರಕ್ತವನ್ನು ಕಕ್ಕಿದರು. ||೫–೧೦|| ಅದೇ ಸಮಯದಲ್ಲಿಯೇ ಕೋಪೋದ್ದೀಪಿತರಾದ ಕೆಲವರು ವಾನರರು ಅನೇಕ ರಾಕ್ಷಸರ ಪಕ್ಕಗಳನ್ನು ಸಿಗಿದರು. ಕೆಲವರು ರಾಕ್ಷಸರು ಶಿಲಾಘಾತದಿಂದ ನುಚ್ಚುನುರಿಯಾಗಿ ಹೋದರು. ಕೆಲವರು ವಾನರರು ರಾಕ್ಷಸರನ್ನು ಕೋರೆಹಲ್ಲುಗಳಿಂದ ಸೀಳಿದರು. ಅಲ್ಲಿಗೂ ಸುಮ್ಮನಿರದೆ ಕೆಲವರು ವಾನರವೀರರು ರಾಕ್ಷಸರ ರಥಧ್ವಜಗಳನ್ನು ಮುರಿದಿಕ್ಕಿದರು. ಅವುಗಳಿಗೆ ಹೂಡಿದ್ದ ಹೇಸರಕತ್ತೆಗಳನ್ನು ಸಾಯಬಡಿದರು ; ರಥಗಳನ್ನೆಲ್ಲ ಪುಡಿಗುಟ್ಟಿದರು. ಆ ಸಮಯದಲ್ಲಿ ರಥಾರೂಢರಾಗಿದ್ದ ರಾಕ್ಷಸರನೇಕರು ನೆಲಕ್ಕುರುಳಿದರು. ಪರ್ವತೋಪಮವಾದ ಗಜಶ್ರೇಷ್ಠಗಳನೇಕವು ವಾನರವೀರರ ಹೊಡೆತಕ್ಕೆ ಸಿಕ್ಕಿ ಮರ್ದಿತವಾದುವು. ಆ ವೀರವಾನರರ ಹೊಡೆತದಿಂದ ಅನೇಕ ಕುದುರೆಗಳು ಜಜ್ಜುಗುಜ್ಜಾಗಿ ಹೋದುವು. ವಾನರರೆಲ್ಲರೂ ಮಹಾ ಕೋಪೋದ್ದಿಕ್ತರಾಗಿ ಉಗುರುಗಳಿಂದ ಅನೇಕ ರಾಕ್ಷಸವೀರರ ಮುಖಗಳನ್ನು ಪರಚಿ ಸಿಗಿದರು. ಆಗಲಾ ರಾಕ್ಷಸ

ಮುಖೇಷು ನಿನಿಕರ್ತಿತಾಃ ‖ ೧೪ ‖ ವಿವರ್ಣವದನಾ ಭೂಯೋ ವಿಪ್ರಕೀರ್ಣಶಿರೋ ರುಹಾಃ । ಮೂಢಾಶ್ಶೋಣಿತಗಂಧೇನ ನಿಪೇತುರ್ಧರಣೀತಲೇ ‖ ೧೫ ‖ ಅನ್ಯೇ ಪರಮಸಂಕ್ರುದ್ಧಾ ರಾಕ್ಷಸಾ ಭೀಮನಿಸ್ಸ್ವನಾಃ । ತಲೈರೇವಾಭಿಧಾವಂತಿ ವಜ್ರಸ್ಪರ್ಶ ಸಮೈರ್ಹರೀನ್ ‖ ೧೬ ‖ ವಾನರೈರಾಪತಂತಸ್ತೇ ವೇಗಿತಾವೇಗವತ್ತರೈಃ । ಮುಷ್ಟಿ ಭಿಶ್ಚರಣೈರ್ದಂತೈಃ ಪಾದಪೈಶ್ಚಾವಪೋಥಿತಾಃ ‖ ೭ ‖ ವಾನರೈರ್ಹನ್ಯಮಾನಾಸ್ತೇ ರಾಕ್ಷಸಾ ವಿಪ್ರದುದ್ರುವುಃ । ಸೈನ್ಯಂ ತು ವಿದ್ರುತಂ ದೃಷ್ಟ್ವಾ ಧೂಮ್ರಾಕ್ಷೋ ರಾಕ್ಷಸ ರ್ಷಭಃ । ಕ್ರೋಧೇನ ಕದನಂ ಚಕ್ರೇ ವಾನರಾಣಾಂ ಯುಯುತ್ಸತಾಂ ‖ ೧೮ ‖

ಮುಖಗಳುಳ್ಳವರಾಗಿ, ವಿಪ್ರ....ಹಾಃ - ಬಿಚ್ಚಿಹೋದ ತಲೆಗೂದಲುಗಳುಳ್ಳವರಾಗಿ, ಶೋಣಿತಗಂಧೇನ - ರಕ್ತಗಂಧದಿಂದ, ಮೂಢಾಃ - ಕೆಲಸದಲ್ಲಿ ಮೋಹಾಕ್ರಾಂತರಾಗಿ, ಧರಣೀತಲೇ - ರಣಭೂಮಿಯಲ್ಲಿ, ನಿಪೇತುಃ-ಬಿದ್ದರು. ‖೧೫‖ ಪರಮಸಂಕ್ರುದ್ಧಾಃ-ಬಹಳ ಕೋಪಿಷ್ಠರಾದ, ಭೀಮನಿಸ್ವನಾಃ-ಭಯಂಕರ ಧ್ವನಿಗಳುಳ್ಳ, ಅನ್ಯೇರಾಕ್ಷಸಾಃ - ಮತ್ತೆ ಕೆಲರಾಕ್ಷಸರು, ವಜ್ರಸ್ಪರ್ಶಸಮೈಃ - ವಜ್ರಾಯುಧದ ಪೆಟ್ಟಿಗೆ ಸಮಾನವಾದ, ತಲೈರೇವ - ಅಂಗೈಗಳಿಂದಲೇ, ಹರೀನ್ - ವಾನರರನ್ನು, ಅಭಿಧಾವಂತಿ - ಓಡಿಸಿದರು. ‖ ೧೬ ‖ ಆಪತಂತಃ - ಬರುತ್ತಿರುವ, ತೇ - ಆ ರಕ್ಕಸರು, ವೇಗವತ್ತರೈಃ - ಅತಿ ವೇಗಶಾಲಿಗಳಾದ, ವಾನರೈಃ - ಕಪಿಗಳಿಂದ, ಮುಷ್ಟಿಭಿಃ - ಹಿಡಿಗಳಿಂದಲೂ, ಚರಣೈಃ - ಕಾಲುಗಳಿಂದಲೂ, ದಂತೈಃ - ಹಲ್ಲುಗಳಿಂದಲೂ, ಪಾದಪೈಶ್ಚ - ಗಿಡಗಳಿಂದಲೂ, ಅವಪೋಥಿತಾಃ - ಹಿಂಸೆಮಾಡಲ್ಪಟ್ಟರು. ‖ ೧೭ ‖ ವಾನರೈಃ - ಕಪಿಗಳಿಂದ, ಹನ್ಯಮಾನಾಃ - ಹೊಡೆಯಲ್ಪಡುತ್ತಿರುವ, ತೇರಾಕ್ಷಸಾಃ - ಆ ರಾಕ್ಷಸರು, ವಿಪ್ರದುದ್ರುವುಃ - ಓಡಿದರು, ರಾಕ್ಷಸರ್ಷಭಃ - ರಾಕ್ಷಸಶ್ರೇಷ್ಠನಾದ, ಧೂಮ್ರಾಕ್ಷಃ - ಧೂಮ್ರಾಕ್ಷನು, ವಿದ್ರುತಂ - ಓಡಿಹೋಗುತ್ತಿರುವ, ಸೈನ್ಯಂ - ರಾಕ್ಷಸಸೈನ್ಯವನ್ನು, ದೃಷ್ಟ್ವಾ - ಕಂಡು, ಕ್ರೋಧೇನ - ಆಗ್ರಹದಿಂದ, ಯುಯುತ್ಸತಾಂ - ಕಾಳಗ ಮಾಡಲಿಚ್ಛೆಯುಳ್ಳ, ವಾನರಾಣಾಂ - ಕಪಿಗಳ, ಕದನಂ - ಹಿಂಸೆಯನ್ನು, ಚಕ್ರೇ - ಮಾಡಿದರು. ‖ ೧೮ ‖ ಕೇಚಿದ್ವಾನರಾಃ - ಕೆಲವಾನರರು, ಪ್ರಾಸೈಃ - ಈಟಿ ಗೋಲುಗಳಿಂದ, ಪ್ರಮಥಿತಾಃ - ಮರ್ದನಮಾಡಲ್ಪಟ್ಟವರಾಗಿ, ಶೋಣಿತಸ್ರವಾಃ - ರಕ್ತವನ್ನು

ರೆಲ್ಲರೂ ಸಿಗಿದ ಮುಖಗಳುಳ್ಳವರೂ, ಮೂರ್ಛಿತರಾಗಿ ರಕ್ತವನ್ನು ಕಕ್ಕುತ್ತಿರುವವರೂ ಆಗಿ ನೆಲಕ್ಕುರುಳಿದರು. ‖೧೧–೧೫‖ ಆ ಸಮಯದಲ್ಲಿ ರಾಕ್ಷಸಶ್ರೇಷ್ಠರೂ ಸಹ ಕೋಪಸಮನ್ವಿತ ರಾಗಿ ಭಯಂಕರ ಸಿಂಹನಾದಗಳನ್ನು ಮಾಡುತ್ತ ವಜ್ರಾಯುಧಕ್ಕೆ ಸಮಾನವಾದ ಪದತಲ ಗಳಿಂದ ವಾನರರನೇಕರನ್ನು ಮರ್ದಿಸಿ ಕೆಡವಿದರು. ವಾನರರು ಕೆರಳಿದಷ್ಟೂ ಆ ರಾಕ್ಷಸರೂ ಕೆರಳಿ ಮಹಾ ಘೋರತರವಾದ ಯುದ್ಧವನ್ನು ಮಾಡಿದರು. ಆ ಕೂಡಲೇ ಉಭಯ ಪಕ್ಷ ಗಳವರಿಗೂ ಮಹಾದ್ಭುತವಾದ ಯುದ್ಧವು ನಡೆಯಿತು. ಉಭಯಪಕ್ಷಗಳವರೂ, ಮುಷ್ಟಿ ಗಳಿಂದಲೂ, ಪಾದತಾಡನಗಳಿಂದಲೂ, ಹೊಡೆದಾಡಲುಪಕ್ರಮಿಸಿದರು. ಆಗ ರಾಕ್ಷಸ ರೆಲ್ಲರೂ ವಾನರವೀರರಿಂದ ಬಹಳವಾಗಿ ಘಾತಿಸಲ್ಪಟ್ಟು ದಿಕ್ಕುದಿಕ್ಕುಗಳಿಗೂ ಓಡಿಹೋಗ ಲಾರಂಭಿಸಿದರು. ಹೀಗೆ ಓಡಿಹೋಗುತ್ತಿದ್ದ ರಾಕ್ಷಸಸೇನೆಯನ್ನು ಕಂಡೊಡನೆಯೇ ರಾಕ್ಷಸಸೇನಾನಾಯಕನಾದ ಧೂಮ್ರಾಕ್ಷನು ಕ್ರೋಧೋದ್ದೀಪಿತನಾಗಿ ಭಯಂಕರವಾದ ಕದನವನ್ನು ಮಾಡಲುಪಕ್ರಮಿಸಿದನು. ‖ ೧೬–೧೮ ‖ ಮಹಾ ವೀರನಾದ ಆ ಧೂಮ್ರಾಕ್ಷನು ಪ್ರಾಸಾಯುಧವನ್ನು ತೆಗದುಕೊಂಡು ವಾನರರೆಲ್ಲರನ್ನೂ ಬಹಳವಾಗಿ ಮರ್ದಿಸಿದನು.

ಪ್ರಾಸೈಃ ಪ್ರಮಥಿತಾಃ ಕೇಚಿದ್ವಾನರಾಶ್ಶೋಣಿತಸ್ರವಾಃ । ಮುದ್ಗರೈರಾಹತಾಃ ಕೇಚಿತ್ಪತಿತಾ ಧರಣೀತಲೇ ॥೧೯॥ ಪರಿಘೈರ್ಮಥಿತಾಃ ಕೇಚಿದ್ಭಿಂಡಿಪಾಲೈರ್ವಿದಾರಿತಾಃ । ಪಟ್ಟಸೈರಾಹತಾಃ ಕೇಚಿದ್ವಿಹ್ವಲಂತೋ ಗತಾಸವಃ ॥೨೦॥ ಕೇಚಿದ್ವಿನಿಹತಾ ಶೂಲೈ ರುಧಿರಾರ್ದ್ರಾ ವನೌಕಸಃ । ಕೇಚಿದ್ವಿದ್ರಾವಿತಾ ನಷ್ಟಾ ಸ್ಸಬಲೈ ರಾಕ್ಷಸೈರ್ಯುಧಿ ॥೨೧॥ ವಿಭಿನ್ನಹೃದಯಾಃ ಕೇಚಿದೇಕಪಾರ್ಶ್ವೇನ ದಾರಿತಾಃ । ವಿದಾರಿತಾಸ್ತ್ರಿಶೂಲೈಶ್ಚ ಕೇಚಿದಾಂತ್ರೈರ್ವಿನಿಸ್ಸೃತಾಃ ॥ ೨೨ ॥ ತತ್ಸುಭೀಮಂ ಮಹಾಯುದ್ಧಂ ಹರಿರಾಕ್ಷಸ ಸಂಕುಲಂ । ಪ್ರಬಭೌ ಶಬ್ದಬಹುಳಂ ಶಿಲಾಪಾದಪಸಂಕುಲಂ ॥ ೨೩ ॥ ಧನುರ್ಜ್ಯಾ

ಸುರಿಸುತ್ತಿದ್ದರು, ಕೇಚಿತ್-ಕೆಲವರು, ಮುದ್ಗರೈಃ-ಮುದ್ಗರಾಯುಧಗಳಿಂದ, ಆಹತಾಃ-ಹೊಡೆಯಲ್ಪಟ್ಟವರಾಗಿ, ಧರಣೀತಲೇ - ನೆಲದಲ್ಲಿ, ಪತಿತಾಃ - ಬಿದ್ದರು, ಪರಿಘೈಃ - ಪರಿಘಾಯುಧಗಳಿಂದ, ಕೇಚಿತ್ - ಕೆಲವರು, ಮಥಿತಾಃ - ಹೊಡೆಯಲ್ಪಟ್ಟರು, ಕೇಚಿತ್ - ಕೆಲವರು, ಭಿಂಡಿಪಾಲೈಃ - ಕಬ್ಬಿಣದ ಈಟಿಗಳಿಂದ, ವಿದಾರಿತಾಃ - ಸೀಳಲ್ಪಟ್ಟರು, ಕೇಚಿತ್ - ಕೆಲವರು, ಪಟ್ಟಸೈಃ - ಪಟ್ಟಾಕತ್ತಿಗಳಿಂದ, ಆಹತಾಃ - ಹೊಡೆಯಲ್ಪಟ್ಟವರಾಗಿ, ವಿಹ್ವಲಂತಃ - ಮೂರ್ಛಿತರಾಗಿ, ಗತಾಸವಃ - ಹೋದಪ್ರಾಣಗಳುಳ್ಳವರಾದರು, ಕೇಚಿತ್ - ಕೆಲರು, ಶೂಲೈಃ - ಶೂಲಾಯುಧಗಳಿಂದ, ವಿನಿಹತಾಃ - ಹೊಡೆಯಲ್ಪಟ್ಟವರಾಗಿ, ರುಧಿರಾರ್ದ್ರಾಃ - ರಕ್ತದಿಂದ ತೋಯಿಸಲ್ಪಟ್ಟರು, ಕೇಚಿದ್ವನೌಕಸಃ - ಕೆಲವರು ವಾನರರು, ವಿದ್ರಾವಿತಾಃ-ಓಡಿಸಲ್ಪಟ್ಟರು, ಸಬಲೈಃ-ಸೈನ್ಯದಿಂದೊಡಗೂಡಿದ, ರಾಕ್ಷಸೈಃ-ರಕ್ಕಸರಿಂದ, ಯುಧಿ - ಕಾಳಗದಲ್ಲಿ, ನಷ್ಟಾಃ - ನಾಶಗೊಳಿಸಲ್ಪಟ್ಟರು, ಕೇಚಿತ್ - ಕೆಲವರು, ವಿಭಿ....ಯಾಃ - ಭೇದಿಸಲ್ಪಟ್ಟ ವಕ್ಷಸ್ಥಳಗಳುಳ್ಳವರಾದರು, ಕೇಚಿತ್ - ಕೆಲವರು, ಏಕಪಾರ್ಶ್ವೇನ - ಒಂದು ಪಕ್ಕದಿಂದ, ದಾರಿತಾಃ - ಸೀಳಲ್ಪಟ್ಟರು, ಕೇಚಿತ್ - ಕೆಲವರು, ತ್ರಿಶೂಲೈಃ - ತ್ರಿಶೂಲಗಳಿಂದ, ವಿದಾರಿತಾಃ - ಸೀಳಲ್ಪಟ್ಟವರಾಗಿ, ಆಂತ್ರೈಃ-ಕರುಳುಗಳಿಂದ, ವಿನಿಸ್ಸೃತಾಃ-ಬಿಡಲ್ಪಟ್ಟರು. ॥ ೧೯-೨೨ ॥ ಸುಭೀಮಂ-ಬಹಳ ಭಯಂಕರವಾದ, ಹರಿ......ಲಂ - ವಾನರರಿಂದಲೂ, ರಾಕ್ಷಸರಿಂದಲೂ ವ್ಯಾಪ್ತವಾದ, ತನ್ಮಹಾಯುದ್ಧಂ - ಆ ದೊಡ್ಡ ಯುದ್ಧವು, ಶಿಲಾ....ಲಂ - ಕಲ್ಲುಗಳಿಂದಲೂ ಮರಗಳಿಂದಲೂ ತುಂಬಿದುದಾಗಿ, ಶಬ್ದಬಹುಳಂ - ಕೋಲಾಹಲ ಶಬ್ದವೇ ಪ್ರಚುರವಾಗಿ, ಶಿಲಾ......ಲಂ - ಶಿಲೆಗಳಿಂದಲೂ ವೃಕ್ಷಗಳಿಂದಲೂ ವ್ಯಾಪ್ತವಾಗಿ, ಪ್ರಬಭೌ - ಹೊಳೆಯುತ್ತಿತ್ತು. ॥ ೨೩ ॥ ಧನು....ರಂ - ಬಿಲ್ಲಿನ ಹೆದೆಗಳೆಂಬ ತಂತ್ರೀ

ವಾನರರನೇಕರು ಆ ಪ್ರಾಸಾಯುಧದ ಹೊಡೆತವನ್ನು ತಾಳಲಾರದೆ ರಕ್ತವನ್ನು ಕಕ್ಕುತ್ತ ಕೆಳಕ್ಕೆ ಬಿದ್ದರು. ಕೆಲವು ವಾನರರು ಮುದ್ಗರಾಯುಧದ ಹೊಡೆತಗಳಿಂದ ಕೆಳಕ್ಕುರುಳಿದರು. ಕೆಲವರು ತ್ರಿಶೂಲಗಳಿಂದ ಬಾಧೆಗೊಂಡರು. ಕೆಲವರು ಆ ತ್ರಿಶೂಲಗಳ ಹೊಡೆತಗಳಿಂದ ರಕ್ತವನ್ನು ಕಾರುತ್ತ ಕೆಳಕ್ಕುರುಳಿದರು. ಕೆಲವರು ಧೂಮ್ರಾಕ್ಷನು ಪ್ರಯೋಗಿಸಿದ ಪಟ್ಟಿಸಾಯುಧದ ಹೊಡೆತಕ್ಕೆ ಸಿಕ್ಕಿ ನುಚ್ಚುನುರಿಯಾದರು. ಕೆಲವರ ಹೃದಯಗಳೆಲ್ಲವೂ ಭೇದಿಸಿ ಹೋದವು. ಕೆಲವರು ವಾನರರು ಸೀಳಿದ ಕಾಯಗಳುಳ್ಳವರಾಗಿ ತತ್ತಳಿಸಿದರು. ಕೆಲವರು ವಾನರರು ಕರಳುಗಳನ್ನು ಕಕ್ಕಿಕೊಂಡರು. ॥ ೧೯—೨೨ ॥ ಇಷ್ಟಾದರೂ ಅವರಾರೂ ಎದೆಗುಂದದೆ ಯುದ್ಧವನ್ನು ಮಾಡುತ್ತಲೇ ಇದ್ದರು. ವಾನರರೂ, ರಾಕ್ಷಸರೂ ವೃಕ್ಷಗಳಿಂದಲೂ, ಶಿಲೆಗಳಿಂದಲೂ ಸಂಕುಲವೂ, ಭಯಂಕರವೂ ಆದ ಮಹದ್ಯುದ್ಧವನ್ನು ಮಾಡಿದರು. ಆ ಸಮಯದಲ್ಲಿ ಧನುಸ್ಸಿನ ನಾರಿಯೆಂಬ ವೀಣಾತಂತ್ರಿಯ ನಾದದಿಂದ ಮಧುರವಾದುದೂ,

ತಂತ್ರೀಮಧುರಂ ಹಿಕ್ಕಾಕಾಳಸಮನ್ವಿತಂ । ಮಂದಸ್ತನಿತಸಂಗೀತಂ ಯುದ್ಧಗಾಂಧರ್ವಮಾಬಭೌ ॥೨೪॥ ಧೂಮ್ರಾಕ್ಷಸ್ತು ಧನುಷ್ಪಾಣಿರ್ವಾನರಾನ್ರಣಮೂರ್ಧನಿ । ಹಸನ್ವಿದ್ರಾವಯಾಮಾಸ ದಿಶಸ್ತು ಶರವೃಷ್ಟಿಭಿಃ ॥ ೨೫ ॥ ಧೂಮ್ರಾಕ್ಷೇಣಾರ್ದಿತಂ ಸೈನ್ಯಂ ವ್ಯಥಿತಂ ದೃಶ್ಯ ಮಾರುತಿಃ । ಅಭ್ಯವರ್ತತ ಸಂಕ್ರುದ್ಧಃ ಪ್ರಗೃಹ್ಯ ವಿಪುಲಾಂ ಶಿಲಾಂ ॥ ೨೬ ॥ ಕ್ರೋಧಾದ್ದ್ವಿಗುಣತಾಮ್ರಾಕ್ಷಃ ಪಿತೃತುಲ್ಯಪರಾಕ್ರಮಃ । ಶಿಲಾಂ ತಾಂ ಪಾತಯಾಮಾಸ ಧೂಮ್ರಾಕ್ಷಸ್ಯ ರಥಂ ಪ್ರತಿ ॥ ೨೭ ॥ ಆಪತಂತೀಂ ಶಿಲಾಂ ದೃಷ್ಟ್ವಾ ಗದಾಮುದ್ಯಮ್ಯ ಸಂಭ್ರಮಾತ್ । ರಥಾದಾಪ್ಲುತ್ಯ ವೇಗೇನ ವಸುಧಾಯಾಂ ವ್ಯತಿಷ್ಠತ

---

ಸ್ವರಗಳಿಂದ ಮನೋಹರವಾದ, ಹಿಕ್ಕಾ....ತಂ - ಗದ್ಗದಸ್ವರವೆಂಬ ತಾಳಧ್ವನಿಗಳಿಂದ ಕೂಡಿರುವ, ಯುದ್ಧಗಾಂಧರ್ವಂ - ಕಾಳಗವೆಂಬ ಗಾನವು, ಮಂದ....ತಂ - ದೀನಸ್ವರಗಳೆಂಬ ಸಂಗೀತವುಳ್ಳುದಾಗಿ, ಆಬಭೌ - ಹೊಳೆಯುತ್ತಿದ್ದಿತು. ॥೨೪॥ ಧನುಷ್ಪಾಣಿಃ - ಧನುರ್ಧಾರಿಯಾದ, ಧೂಮ್ರಾಕ್ಷಸ್ತು - ಧೂಮ್ರಾಕ್ಷನಾದರೆ, ರಣಮೂರ್ಧನಿ - ರಣರಂಗದಲ್ಲಿ, ಹಸನ್ - ನಗುತ್ತ, ಶರವೃಷ್ಟಿಭಿಃ - ಬಾಣವರ್ಷಗಳಿಂದ, ವಾನರಾನ್ - ಕಪಿಗಳನ್ನು, ದಿಶಸ್ತು - ದಿಕ್ಕುಗಳಿಗೆಲ್ಲ, ವಿದ್ರಾವಯಾಮಾಸ - ಓಡಿಸುತ್ತಿದ್ದನು. ॥ ೨೫ ॥ ಧೂಮ್ರಾಕ್ಷೇಣ - ಧೂಮ್ರಾಕ್ಷನಿಂದ, ಅರ್ದಿತಂ - ಹೊಡೆಯಲ್ಪಟ್ಟು, ವ್ಯಥಿತಂ - ವ್ಯಸನಾಕ್ರಾಂತವಾದ, ಸೈನ್ಯಂ - ಕಪಿಸೈನ್ಯವನ್ನು, ದೃಷ್ಟ್ವಾ - ಕಂಡು, ಮಾರುತಿಃ - ಆಂಜನೇಯನು, ಸಂಕ್ರುದ್ಧಃ-ಕೋಪಗೊಂಡು, ವಿಪುಲಾಂ-ವಿಸ್ತಾರವಾದ, ಶಿಲಾಂ-ಬಂಡೆಯನ್ನು, ಪ್ರಗೃಹ್ಯ-ಹಿಡಿದು, ಅಭ್ಯವರ್ತತ - ಎದುರಾಗಿ ನಿಂತನು. ॥೨೬॥ ಕ್ರೋಧಾತ್ - ಕೋಪದಿಂದ, ದ್ವಿಗು....ಕ್ಷಃ - ಇಮ್ಮಡಿಸಿದ ಕೋಪದಿಂದ ಕೆಂಗಣ್ಣುಗಳುಳ್ಳವನಾಗಿ, ಪಿತೃ....ಮಃ - ತಂದೆಯಾದ ವಾಯುವಿಗೆ ಸಮಾನವಾದ ಪರಾಕ್ರಮವುಳ್ಳ ಆ ಆಂಜನೇಯನು, ಧೂಮ್ರಾಕ್ಷಸ್ಯ-ಧೂಮ್ರಾಕ್ಷನ, ರಥಂಪ್ರತಿ-ರಥವನ್ನುದ್ದೇಶಿಸಿ, ತಾಂಶಿಲಾಂ - ಆ ಬಂಡೆಯನ್ನು, ಪಾತಯಾಮಾಸ - ಕೆಡುಹಿದನು. ॥೨೭॥ ಆಪತಂತೀಂ - ಬೀಳುತ್ತಲಿರುವ, ಶಿಲಾಂ - ಪಾಷಾಣವನ್ನು, ದೃಷ್ಟ್ವಾ - ಕಂಡು, ಸಂಭ್ರಮಾತ್ - ತ್ವರೆಯಿಂದ, ರಥಾತ್ - ತೇರಿನಿಂದ, ಆಪ್ಲುತ್ಯ - ಧುಮುಕಿ, ವೇಗೇನ - ಜವದಿಂದ, ಗದಾಂ - ಗದೆಯನ್ನು, ಉದ್ಯಮ್ಯ -

---

ಕುಗ್ಗಿಹೋದ ಯೋಧರ ಕಂಠಸ್ವರವೆಂಬ ಸಂಗೀತವುಳ್ಳುದೂ ಆದ ಯುದ್ಧಗಾಂಧರ್ವವು ಬಹು ರುದ್ರಮನೋಹರವಾಗಿ ಕೇಳಿಸುತ್ತಿದ್ದಿತು. ॥ ೨೩–೨೪ ॥ ಆಗ ಮಹಾ ವೀರನಾದ ಧೂಮ್ರಾಕ್ಷನು ಧನುರ್ಧಾರಿಯಾಗಿ ಯುದ್ಧರಂಗದಲ್ಲಿದ್ದ ವಾನರರೆಲ್ಲರನ್ನೂ ಹಾಸ್ಯಮಾಡಿ ಧಿಕ್ಕರಿಸುತ್ತ ಬಾಣಗಳ ಸುರಿಮಳೆಯನ್ನು ಸುರಿಸಿ ಪೀಡಿಸಿದನು. ಅವರೆಲ್ಲರೂ ದಿಕ್ಕುಗಾಣದೆ ಓಡಲಾರಂಭಿಸಿದರು. ಆ ಸಮಯದಲ್ಲಿ ಆ ವಾನರವಳಕ್ಕೆ ಅಧಿಪತಿಯಾದ ಹನುಮಂತನು, ದಿಕ್ಕೆಟ್ಟು ಓಡಿಹೋಗುತ್ತಿದ್ದ ತನ್ನ ಸೇನೆಯೆಲ್ಲವನ್ನೂ ನೋಡಿ ಮಹಾ ಕ್ರುದ್ಧನಾಗಿ ದೊಡ್ಡದೊಂದು ಶಿಲೆಯನ್ನು ಕೈಯಲ್ಲಿ ಹಿಡಿದು ಧೂಮ್ರಾಕ್ಷನ ರಥದಮೇಲೆ ಬಹು ವೇಗವಾಗೆಸೆಯಲೆಳಿಸಿದನು. ಪಿತೃತುಲ್ಯಪರಾಕ್ರಮಿಯಾದ ಆ ಹನುಮಂತನು ಇಮ್ಮಡಿಸಿದ ಕೋಪದಿಂದ ಕಣ್ಣುಗಳನ್ನು ಕೆಂಪಗೆ ಮಾಡಿಕೊಂಡು ಧೂಮ್ರಾಕ್ಷನ ರಥದಮೇಲೆ ಆ ಬಂಡೆಯನ್ನು ತೀವ್ರವಾಗೆಸೆದನು. ಹನುಮಂತನಿಂತು ಆ ಮಹಾ ಶಿಲೆಯನ್ನೆಸೆದಕೂಡಲೇ ಮಹಾ ಬುದ್ಧಿಶಾಲಿಯಾದ ಆ ಧೂಮ್ರಾಕ್ಷನು ಗದಾಪಾಣಿಯಾಗಿ ತಟಕ್ಕನೆ ರಥದಿಂದ ಕೆಳಕ್ಕೆ ಧುಮುಕಿ ಅದರ ಹೊಡೆತವನ್ನು ತಪ್ಪಿಸಿಕೊಂಡನು. ಅವನ ರಥವು ಸಾರಥಿಯೊಡನೆಯೂ, ಹೇಸರಕತ್ತೆಗಳೊಡನೆಯೂ

|| ೨೮ || ಸಾ ಪ್ರಮಥ್ಯ ರಥಂ ತಸ್ಯ ನಿಪಪಾತ ಶಿಲಾ ಭುವಿ | ಸಚಕ್ರಕೂಬರಂ ಸಾಶ್ವಂ ಸಧ್ವಜಂ ಸಶರಾಸನಂ ||೨೯|| ಸಭಜ್ಯ್ವಾ ತು ರಥಂ ತಸ್ಯ ಹನುಮಾನ್ಮಾರುತಾತ್ಮಜಃ | ರಕ್ಷಸಾಂ ಕದನಂ ಚಕ್ರೇ ಸಸ್ಕಂಧವಿಟಪೈರ್ದ್ರುಮೈಃ || ೩೦ || ವಿಭಿನ್ನಶಿರಸೋ ಭೂತ್ವಾ ರಾಕ್ಷಸಾಃ ಶೋಣಿತೋಕ್ಷಿತಾಃ | ದ್ರುಮೈಃ ಪ್ರವ್ಯಥಿತಾಶ್ಚಾನ್ಯೇ ನಿಪೇತು ರ್ಧರಣೀತಲೇ || ೩೧ || ವಿದ್ರಾವ್ಯ ರಾಕ್ಷಸಂ ಸೈನ್ಯಂ ಹನುಮಾನ್ಮಾರುತಾತ್ಮಜಃ | ಗಿರೇಃ ಶಿಖರಮಾದಾಯ ಧೂಮ್ರಾಕ್ಷಮಭಿದುದ್ರುವೇ || ೩೨ || ತಮಾಪತಂತಂ ಧೂಮ್ರಾಕ್ಷೋ ಗದಾಮುದ್ಯಮ್ಯ ವೀರ್ಯವಾನ್ | ವಿನರ್ದಮಾನಸ್ಸಹಸಾ ಹನೂ

ಎತ್ತಿಕೊಂಡು, ವಸುಧಾಯಾಂ - ಭೂಮಿಯಲ್ಲಿ, ವ್ಯತಿಷ್ಠತ - ನಿಂತನು. || ೨೮ || ಸಾಶಿಲಾ - ಆ ಪಾಷಾಣವು, ತಸ್ಯ - ಆ ಧೂಮ್ರಾಕ್ಷನ, ರಥಂ - ತೇರನ್ನು, ಪ್ರಮಥ್ಯ - ಧ್ವಂಸಿಸಿ, ಭುವಿ - ನೆಲದಲ್ಲಿ, ನಿಪಪಾತ - ಬಿತ್ತು. || ೨೯ || ಮಾರುತಾತ್ಮಜಃ - ವಾಯುಪುತ್ರನಾದ, ಸಹನುಮಾನ್ - ಆ ಆಂಜನೇಯನು, ಸಚಕ್ರಕೂಬರಂ - ಚಕ್ರಗಳಿಂದಲೂ, ನೊಗದಿಂದಲೂ ಕೂಡಿದ, ಸಾಶ್ವಂ - ಅಶ್ವಸಹಿತವಾದ, ಸಧ್ವಜಂ - ಧ್ವಜಪಟದಿಂದೊಡಗೂಡಿದ, ಸಶರಾಸನಂ - ಧನುಸ್ಸಿನಿಂದೊಡಗೂಡಿದ, ತಸ್ಯ - ಆ ಧೂಮ್ರಾಕ್ಷನ, ರಥಂ - ತೇರನ್ನು, ಭಜ್ಯ್ವಾ - ಮುರಿದು, ಸಸ್ಕಂಧವಿಟಪೈಃ - ರೆಂಬೆಗಳಿಂದಲೂ ಚಿಕ್ಕ ರೆಂಬೆಗಳಿಂದಲೂ ಕೂಡಿದ, ದ್ರುಮೈಃ - ಮರಗಳಿಂದ, ರಕ್ಷಸಾಂ - ರಕ್ಕಸರಿಗೆ, ಕದನಂ - ಹಿಂಸೆಯನ್ನು, ಚಕ್ರೇ - ಮಾಡಿದನು. ||೩೦|| ದ್ರುಮೈಃ - ವೃಕ್ಷಗಳಿಂದ, ಪ್ರವ್ಯಥಿತಾಃ - ವಿಶೇಷವಾಗಿ ಹೊಡೆಯಲ್ಪಟ್ಟ, ರಾಕ್ಷಸಾಃ - ರಕ್ಕಸರು, ವಿಭಿನ್ನಶಿರಸಃ - ಹೊಡೆಯಲ್ಪಟ್ಟ ಶಿರಸ್ಸುಗಳುಳ್ಳವರು, ಭೂತ್ವಾ - ಆಗಿ, ಶೋಣಿತೋಕ್ಷಿತಾಃ - ರಕ್ತದಿಂದ ತೋಯಿಸಲ್ಪಟ್ಟರು, ಅನ್ಯೇ - ಮತ್ತು ಕೆಲವರು, ಧರಣೀತಲೇ - ಭೂಮಿಯಲ್ಲಿ, ನಿಪೇತುಃ - ಬಿದ್ದರು. ||೩೧|| ಮಾರುತಾತ್ಮಜಃ - ವಾಯುಪುತ್ರನಾದ, ಹನುಮಾನ್ - ಆಂಜನೇಯನು, ರಾಕ್ಷಸಂ - ಅಸುರರ ಸಂಬಂಧವಾದ, ಸೈನ್ಯಂ - ಸೇನೆಯನ್ನು, ವಿದ್ರಾವ್ಯ - ಓಡಿಸಿ, ಗಿರೇಃ - ಪರ್ವತದ, ಶಿಖರಂ - ಶೃಂಗವನ್ನು, ಆದಾಯ - ತೆಗೆದುಕೊಂಡು, ಧೂಮ್ರಾಕ್ಷಂ - ಧೂಮ್ರಾಕ್ಷನನ್ನು ಕುರಿತು, ಅಭಿದುದ್ರಾವ - ಅಟ್ಟಿಬಂದನು. ||೩೨|| ವೀರ್ಯವಾನ್ - ಪರಾಕ್ರಮಿಯಾದ, ಧೂಮ್ರಾಕ್ಷಃ - ಧೂಮ್ರಾಕ್ಷನು, ವಿನರ್ದಮಾನಃ - ಗರ್ಜಿಸುವವನಾಗಿ, ಗದಾಂ -

ಪುಡಿಪುಡಿಯಾಗಿ ಹೋಯಿತು. ||೨೭-೨೮|| ಮಹಾ ವೀರನಾದ ಹನುಮಂತನು ಅಲ್ಲಿಗೆ ಸುಮ್ಮನಾಗದೆ ನಾನಾವಿಧಗಳಿಂದ ಆ ಧೂಮ್ರಾಕ್ಷನೊಡನೆ ಅತಿ ಭಯಂಕರವಾದ ಯುದ್ಧವನ್ನು ಮಾಡಿದನು. ಆ ಮಹಾ ಯುದ್ಧದಲ್ಲಿ ಅನೇಕ ರಾಕ್ಷಸರ ತಲೆಗಳು ಹಾರಿಹೋಗಿ ಅವರ ರುಂಡಗಳಿಂದ ರಕ್ತಪ್ರವಾಹ ಹೊರಡುತ್ತಿದ್ದಿತು. ಅವರೆಲ್ಲರೂ ಭೂಮಿಗೆ ಬಿದ್ದುಹೋದರು. ವಾಯುಪುತ್ರನಾದ ಹನುಮಂತನು ಈ ರೀತಿ ಘೋರ ಯುದ್ಧವನ್ನು ಮಾಡಿ ರಾಕ್ಷಸರೆಲ್ಲರನ್ನೂ ದಿಕ್ಕುದಿಕ್ಕುಗಳಿಗೂ ಓಡಿಸಿ ಆ ಬಳಿಕ ಪರ್ವತಶಿಖರವೊಂದನ್ನು ಹಿಡಿದು ಧೂಮ್ರಾಕ್ಷನಿಗಭಿಮುಖವಾಗಿ ಹೊರಟನು. ||೨೯-೩೨|| ಆಗ ಧೂಮ್ರಾಕ್ಷನು ಆ ರೀತಿ ಬರುತ್ತಿರುವ ಮಹಾ ವೀರನಾದ ಹನುಮಂತನನ್ನು ನೋಡಿ ತಾನೂ ಅವನಿಗಭಿಮುಖವಾಗಿ ಓಡಿ ಅನೇಕ ಮುಳ್ಳುಗಳುಳ್ಳ ತನ್ನ ಗದೆಯಿಂದ ಅವನ ವಕ್ಷಸ್ಥಳಕ್ಕೆ ಹೊಡೆದನು. ಆ ರೀತಿ ಗದೆಯಿಂದ ಘಾತಿಸ

ಮಂತಮಭಿದ್ರವತ್ ॥೩೩॥ ತತಃ ಕ್ರುದ್ಧಸ್ತು ವೇಗೇನ ಗದಾಂ ತಾಂ ಬಹುಕಂಟಕಾಂ। ಪಾತಯಾಮಾಸ ಧೂಮ್ರಾಕ್ಷೋ ಮಸ್ತಕೇತು ಹನೂಮತಃ । ತಾಡಿತಸ್ತು ತಯಾ ತತ್ರ ಗದಯಾ ಭೀಮರೂಪಯಾ ॥೩೪-೩೫॥ ಸಕಪಿರ್ಮಾರುತಬಲ ಸ್ತಂ ಪ್ರಹಾರ ಮಚಿಂತಯನ್ । ಧೂಮ್ರಾಕ್ಷಸ್ಯ ಶಿರೋ ಮಧ್ಯೇ ಗಿರಿಶೃಂಗಮಪಾತಯತ್ ॥ ೩೬ ॥ ಸವಿಹ್ವಲಿತಸರ್ವಾಂಗೋ ಗಿರೇಃ ಶೃಂಗೇಣ ತಾಡಿತಃ । ಪಪಾತ ಸಹಸಾ ಭೂಮೌ ವಿಕೀರ್ಣಇವ ಪರ್ವತಃ ॥ ೩೭ ॥ ಧೂಮ್ರಾಕ್ಷಂ ನಿಹತಂ ದೃಷ್ಟ್ವಾ ಹತಶೇಷಾ ನಿಶಾ ಚರಾಃ । ತ್ರಸ್ತಾಃ ಪ್ರವಿವಿಶುರ್ಲಂಕಾಂ ವಧ್ಯಮಾನಾಃ ಪ್ಲವಂಗಮೈಃ ॥ ೩೮ ॥

---

ಗದೆಯನ್ನು, ಉದ್ಯಮ್ಯ - ಎತ್ತಿ, ಆಪತಂತಂ - ಬರುತ್ತಿರುವ, ತಂಹನೂಮಂತಂ - ಆ ಆಂಜನೇಯ ನನ್ನು ಕುರಿತು, ಸಹಸಾ - ಜಾಗ್ರತೆಯಾಗಿ, ಅಭಿದ್ರವತ್ - ಅಟ್ಟಿಬಂದನು. ॥ ೩೩ ॥ ತತಃ - ಅನಂತರದಲ್ಲಿ, ಕ್ರುದ್ಧಃ-ಕೋಪಿಷ್ಠನಾದ, ಧೂಮ್ರಾಕ್ಷಃ-ಧೂಮ್ರಾಕ್ಷನು, ಹನೂಮತಃ-ಆಂಜನೇಯನ, ಮಸ್ತಕೇ - ಶಿರಸ್ಸಿನಲ್ಲಿ, ಬಹುಕಂಟಕಾಂ - ಅನೇಕ ಮುಳ್ಳುಗಳುಳ್ಳ, ತಾಂಗದಾಂ - ಆ ಗದೆಯನ್ನು, ಪಾತಯಾಮಾಸ - ಬೀಳಿಸಿದನು. ॥ ೩೪ ॥ ತತ್ರ - ಆ ಯುದ್ಧದಲ್ಲಿ, ಸಃ - ಆ ಹನುಮಂತನು, ಭೀಮರೂಪಯಾ - ಭಯಂಕರವಾದ ಆಕಾರವುಳ್ಳ, ತಯಾಗದಯಾ - ಆ ಗದೆಯಿಂದ, ತಾಡಿತಃ - ಹೊಡೆಯಲ್ಪಟ್ಟರು. ॥ ೩೫ ॥ ಮಾರುತಬಲಃ - ವಾಯುವಿನ ಬಲವುಳ್ಳ, ಸಕಪಿಃ - ಆ ವಾನರನು, ತಂಪ್ರಹಾರಂ-ಆ ಹೊಡೆತವನ್ನು, ಅಚಿಂತಯನ್-ಲಕ್ಷ್ಯಮಾಡದೆ, ಧೂಮ್ರಾಕ್ಷಸ್ಯ-ಧೂಮ್ರಾಕ್ಷನ, ಶಿರೋಮಧ್ಯೇ - ಶಿರಸ್ಸಿನ ಮಧ್ಯದಲ್ಲಿ, ಗಿರೇಃಶೃಂಗಂ - ಪರ್ವತದ ಶಿಖರವನ್ನು, ಅಪಾತಯತ್ - ಬೀಳಿಸಿದನು. ॥ ೩೬ ॥ ಗಿರಿಶೃಂಗೇಣ - ಪರ್ವತಶಿಖರದಿಂದ, ತಾಡಿತಃ - ಹೊಡೆಯಲ್ಪಟ್ಟ, ಸಃ - ಆ ರಾಕ್ಷಸನು, ವಿಹ್ವ....ಗಃ - ಶಿಥಿಲವಾದ ಸರ್ವಾವಯವಗಳುಳ್ಳವನಾಗಿ, ವಿಕೀರ್ಣಃ - ಬೀಸಲ್ಪಟ್ಟ, ಪರ್ವತಇವ - ಬೆಟ್ಟದಂತೆ, ಸಹಸಾ - ಜಾಗ್ರತೆಯಾಗಿ, ಭೂಮೌ - ನೆಲದಲ್ಲಿ, ಪಪಾತ - ಬಿದ್ದನು. ॥ ೩೭ ॥ ಧೂಮ್ರಾಕ್ಷಂ - ಧೂಮ್ರಾಕ್ಷನನ್ನು, ನಿಹತಂ - ಹತನನ್ನಾಗಿ, ದೃಷ್ಟ್ವಾ - ಕಂಡು, ಹತಶೇಷಾಃ - ಹತರಾದವರಲ್ಲಿ ಉಳಿದ, ನಿಶಾಚರಾಃ - ರಕ್ಕಸರು, ಪ್ಲವಂಗಮೈಃ - ವಾನರರಿಂದ, ವಧ್ಯಮಾನಾಃ - ವಧಿಸಲ್ಪಡುವವರಾಗಿ, ತ್ರಸ್ತಾಃ - ಹೆದರಿ, ಲಂಕಾಂ - ಲಂಕಾಪಟ್ಟಣವನ್ನು, ಪ್ರವಿವಿಶುಃ - ಹೊಕ್ಕರು. ॥ ೩೮ ॥ ಮಹಾತ್ಮಾ - ಮಹಾ ಧೈರ್ಯಶಾಲಿಯಾದ, ಪವನಸುತಃ - ವಾಯುಪುತ್ರನಾದ, ಸತು - ಹನುಮಂತನಾದರೆ, ಶತ್ರುಂ - ಧೂಮ್ರಾಕ್ಷನನ್ನು, ನಿಹತ್ಯ - ಹೊಡೆದು,

---

ಲ್ಪಟ್ಟವನಾದರೂ ಮಹಾ ಶೂರನಾದ ಆ ಹನುಮಂತನು ಅದನ್ನು ಲಕ್ಷ್ಯಕ್ಕೆ ತಂದುಕೊಳ್ಳದೆ ಆ ಪರ್ವತ ಶಿಖರವನ್ನು ಆ ಧೂಮ್ರಾಕ್ಷನ ಶಿರಸ್ಸಿನಮೇಲೆ ಬಲವಾಗಿ ಕುಕ್ಕರಿಸಿದನು. ॥ ೩೩–೩೬ ॥ ಆ ಕೂಡಲೇ ಆ ಧೂಮ್ರಾಕ್ಷರಾಕ್ಷಸನು ವಿಹ್ವಲಿತವಾದ ಸರ್ವಾವಯವ ಗಳುಳ್ಳವನಾಗಿ ಮಹಾ ಪರ್ವತದಂತೆ ಭೂಮಿಗೆ ಬಿದ್ದುಹೋದನು. ಈ ರೀತಿ ಮಡಿದು ಕೆಳಕ್ಕೆ ಬಿದ್ದ ಧೂಮ್ರಾಕ್ಷನನ್ನು ನೋಡಿ ಸತ್ತುಳಿದ ರಾಕ್ಷಸರೆಲ್ಲರೂ ಭಯಚಕಿತರಾಗಿ ವಾನರ ವೀರರಿಂದ ಅಟ್ಟಿವಧಿಸಲ್ಪಡುವವರಾಗಿ ಲಂಕಾನಗರಕ್ಕೆ ಓಡಿಹೋದರು. ಹೀಗೆ ಹನುಮಂತನು ಅತ್ಯಂತ ಭಯಂಕರವಾದ ಯುದ್ಧವನ್ನು ಮಾಡಿ ರಕ್ತಪ್ರವಾಹಗಳುಳ್ಳ ನದಿಗಳನ್ನೇ ಹರಿಯಿಸಿ

ಸತು ಪವನಸುತೋ ನಿಹತ್ಯ ಶತ್ರುಂ
ಕ್ಷತಜವಹಾಸ್ಸರಿತಶ್ಚ ಸನ್ನಿಕೀರ್ಯ ।
ರಿಪುವಧಜನಿತಶ್ರಮೋ ಮಹಾತ್ಮಾ
ಮುದಮಗಮತ್ಕಪಿಭಿಶ್ಚ ಪೂಜ್ಯಮಾನಃ ॥ ೩೯ ॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ದ್ವಿಪಂಚಾಶಸ್ಸರ್ಗಃ.



ಕ್ಷತಜವಹಾಃ - ರಕ್ತವನ್ನು ಪ್ರವಹಿಸುವ, ಸರಿತಶ್ಚ - ನದಿಗಳನ್ನು, ಸನ್ನಿಕೀರ್ಯ - ಹರಿಯಿಸಿ, ರಿಪು....ಮಃ - ಶತ್ರುಸಂಹಾರದಿಂದ ಹುಟ್ಟಿದ ಆಯಾಸವುಳ್ಳವನಾಗಿ, ಕಪಿಭಿಶ್ಚ - ವಾನರರಿಂದಲೂ, ಪೂಜ್ಯಮಾನಃ- ಪೂಜಿಸಲ್ಪಡುವವನಾಗಿ, ಮುದಂ- ಸಂತೋಷವನ್ನು, ಆಗಮತ್-ಹೊಂದಿದನು. ॥೩೯॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ದ್ವಿಪಂಚಾಶಸ್ಸರ್ಗಃ.



ಬಿಟ್ಟನು. ಆತನು ಶತ್ರುವಧೆಯಿಂದ ಆಯಾಸಗೊಂಡು, ಮಹದಾನಂದಭರಿತರಾದ ವಾನರ ವೀರರಿಂದ ಪೂಜಿತನಾಗಿ ಪರಮ ಸಂತುಷ್ಟನಾದನು. ॥ ೩೭–೩೯ ॥

ಇಂತಿದು ಹನುಮತ್ಕೃತ ಧೂಮ್ರಾಕ್ಷಹನನ ವೃತ್ತಾಂತವೆಂಬ ಐವತ್ತೆರಡನೆಯ
ಸರ್ಗವು ಸಮಾಪ್ತವಾದುದು.



# ಯುದ್ಧಕಾಂಡೇ ತ್ರಿಪಂಚಾಶಸ್ಸರ್ಗಃ

ಧೂಮ್ರಾಕ್ಷಂ ನಿಹತಂ ಶ್ರುತ್ವಾ ರಾವಣೋ ರಾಕ್ಷಸೇಶ್ವರಃ । ಕ್ರೋಧೇನ ಮಹತಾऽಽವಿಷ್ಟೋ ನಿಃಶ್ವಸನ್ನುರಗೋ ಯಥಾ ॥ ೧ ॥ ದೀರ್ಘಮುಷ್ಣಂ ವಿನಿಃಶ್ವಸ್ಯ ಕ್ರೋಧೇನ ಕಲುಷೀಕೃತಃ । ಅಬ್ರವೀದ್ರಾಕ್ಷಸಂ ಶೂರಂ ವಜ್ರದಂಷ್ಟ್ರಂ ಮಹಾಬಲಂ ॥ ೨ ॥ " ಗಚ್ಛ ತ್ವಂ ವೀರ! ನಿರ್ಯಾಹಿ ರಾಕ್ಷಸೈಃ ಪರಿವಾರಿತಃ । ಜಹಿ ದಾಶರಥಿಂ ರಾಮಂ ಸುಗ್ರೀವಂ ವಾನರೈಸ್ಸಹ " ॥ ೩ ॥ ತಥೇತ್ಯುಕ್ತ್ವಾ ದ್ರುತತರಂ ಮಾಯಾವೀ ರಾಕ್ಷಸೇಶ್ವರಂ । ನಿರ್ಜಗಾಮ ಬಲೈಸ್ಸಾರ್ಧಂ ಬಹುಭಿಃ ಪರಿವಾರಿತಃ ॥ ೪ ॥ ನಾಗೈ

---

ರಾಕ್ಷಸೇಶ್ವರಃ - ರಾಕ್ಷಸಾಧಿಪತಿಯಾದ, ರಾವಣಃ - ರಾವಣನು, ಧೂಮ್ರಾಕ್ಷಂ - ಧೂಮ್ರಾಕ್ಷನನ್ನು, ನಿಹತಂ - ಹೊಡೆಯಲ್ಪಟ್ಟವನನ್ನಾಗಿ, ಶ್ರುತ್ವಾ - ಕೇಳಿ, ಮಹತಾ - ಮಹತ್ತರವಾದ, ಕ್ರೋಧೇನ - ಕೋಪದಿಂದ, ಆವಿಷ್ಟಃ - ಆವೇಶಿಸಲ್ಪಟ್ಟವನಾಗಿ, ಉರಗೋ ಯಥಾ - ಸರ್ಪದಂತೆ, ದೀರ್ಘಂ - ಉದ್ದವಾಗಿಯೂ, ಉಷ್ಣಂ - ಬಿಸಿಯಾಗಿಯೂ, ನಿಶ್ವಸನ್ - ನಿಟ್ಟುಸಿರುಬಿಡುವವನು, (ಅಭೂತ್ - ಆದನು,) ಕ್ರೋಧೇನ - ಕೋಪದಿಂದ, ಕಲುಷೀಕೃತಃ - ವಿಹ್ವಲಚಿತ್ತನಾಗಿ, ಶೂರಂ - ಶೂರನಾದ, ಮಹಾಬಲಂ - ಬಹು ಬಲಾಢ್ಯನಾದ, ವಜ್ರದಂಷ್ಟ್ರಂ - ವಜ್ರದಂಷ್ಟ್ರನೆಂಬ, ರಾಕ್ಷಸಂ - ರಾಕ್ಷಸನನ್ನು ಕುರಿತು, ಹೇ ವೀರ - ಎಲೈ ಶೂರನೇ, ತ್ವಂ - ನೀನು, ರಾಕ್ಷಸೈಃ - ರಕ್ಕಸರಿಂದ, ಪರಿವಾರಿತಃ - ಸುತ್ತುವರೆದು, ಗಚ್ಛ - ಹೋಗು, ನಿರ್ಯಾಹಿ - ಹೊರಡು, ವಾನರೈಸ್ಸಹ - ಕಪಿಗಳೊಡಗೂಡಿದ, ಸುಗ್ರೀವಂ - ಸುಗ್ರೀವನನ್ನೂ, ದಾಶರಥಿಂ - ದಶರಥಪುತ್ರನಾದ, ರಾಮಂಚ - ಶ್ರೀರಾಮನನ್ನೂ, ಜಹಿ - ಹೊಡಿ, ಇತಿ - ಇಂತೆಂದು, ಅಬ್ರವೀತ್ - ನುಡಿದನು. ॥ ೨-೩ ॥ ಮಾಯಾವೀ - ಮಾಯಾವಂತನಾದ ವಜ್ರದಂಷ್ಟ್ರನು, ರಾಕ್ಷಸೇಶ್ವರಂ - ರಾವಣನನ್ನು ಕುರಿತು, ತಥೇತ್ಯುಕ್ತ್ವಾ - ಹಾಗೆಯೇ ಆಗಲೆಂದು ಹೇಳಿ, ಬಹುಭಿಃ - ಅನೇಕ ರಾಕ್ಷಸರಿಂದ, ಪರಿವಾರಿತಃ-ಸುತ್ತುವರೆದು, ಬಲೈಸ್ಸಾರ್ಧಂ-ಸೇನೆಗಳೊಡನೆ, ದ್ರುತತರಂ-ಅತಿ ಶೀಘ್ರವಾಗಿ, ನಿರ್ಜಗಾಮ - ಹೊರಟನು. ॥ ೪ ॥ ನಾಗೈಃ - ಆನೆಗಳಿಂದಲೂ, ಅಶ್ವೈಃ - ಕುದುರೆಗಳಿಂದಲೂ, ಖರೈಃ - ಹೇಸರಕತ್ತೆಗಳಿಂದಲೂ, ಉಷ್ಟ್ರೈಃ - ಒಂಟೆಗಳಿಂದಲೂ, ಸಂಯುಕ್ತಃ - ಕೂಡಿದವನಾಗಿ,

---

ಆ ಬಳಿಕ ರಾಕ್ಷಸಾಧಿಪತಿಯಾದ ರಾವಣಾಸುರನು, ಧೂಮ್ರಾಕ್ಷನು ರಣಾಂಗಣದಲ್ಲಿ ಮಡಿದನೆಂಬ ವಾರ್ತೆಯನ್ನು ಕೇಳಿ ಬಹಳವಾಗಿ ಕೋಪಗೊಂಡು ಮಹಾ ಸರ್ಪದಂತೆ ದೀರ್ಘವಾಗಿ ಬಿಸಿಯುಸಿರ್ಗರೆದು ಅದೇ ಚಿತ್ತಕಾಲುಷ್ಯದಿಂದ, ಶೂರನೂ, ರಾಕ್ಷಸೋತ್ತಮನೂ ಆದ ವಜ್ರದಂಷ್ಟ್ರನೆಂಬವನನ್ನು ಕುರಿತು, "ಅಯ್ಯಾ ವಜ್ರದಂಷ್ಟ್ರನೇ! ನೀನು ಈ ಕೂಡಲೇ ಅಸಂಖ್ಯಾತ ಮಂದಿ ರಾಕ್ಷಸರೊಡಗೂಡಿ ಯುದ್ಧಕ್ಕೆ ಹೊರಡು. ಎಲೈ ವೀರನೇ! ನೀನು ರಣಾಂಗಣಕ್ಕೆ ಹೋಗಿ ದಶರಥನಂದನರಾದ ರಾಮಲಕ್ಷ್ಮಣರನ್ನೂ, ಸಮಸ್ತ ವಾನರರನ್ನೂ, ವಾನರರಾಜನಾದ ಸುಗ್ರೀವನನ್ನೂ ಜಯಿಸಿ ಬರುವವನಾಗು" ಎಂದು ಹೇಳಿದನು. ಆಗ ಮಹಾ ಮಾಯಾವಿಯಾದ ಆ ವಜ್ರದಂಷ್ಟ್ರನು, " ಪ್ರಭುವೇ! ನಿನ್ನ ಅಪ್ಪಣೆಯಂತೆಯೇ ಸರಿ" ಎಂದು ಅಲ್ಲಿಂದ ಬೀಳ್ಕೊಂಡು ಅನೇಕ ರಾಕ್ಷಸರೊಡಗೂಡಿ ಹೊರಟನು. ॥೪॥ ಅವನ

ರಶ್ವೈಃ ಖರೈರುಷ್ಟ್ರೈಃ ಸಂಯುಕ್ತಸ್ಸುಸಮಾಹಿತಃ । ಪತಾಕಾಧ್ವಜಚಿತ್ರೈಶ್ಚ ರಥೈಶ್ಚ ಸಮಲಂಕೃತಃ ॥ ೫ ॥ ತತೋ ವಿಚಿತ್ರಕೇಯೂರಮುಕುಟೈಶ್ಚ ವಿಭೂಷಿತಃ । ತನುತ್ರಾಣೀಚ ಸಂರುಧ್ಯ ಸಧನುರ್ನಿರ್ಯಯೌ ದ್ರುತಂ ॥ ೬ ॥ ಪತಾಕಾಲಂಕೃತಂ ದೀಪ್ತಂ ತಪ್ತಕಾಂಚನಭೂಷಣಂ । ರಥಂ ಪ್ರದಕ್ಷಿಣಂ ಕೃತ್ವಾ ಸಮಾರೋಹಚ್ಚಮೂಪತಿಃ ॥೭॥ ಯಷ್ಟಿಭಿಸ್ತೋಮರೈಶ್ಚಿತ್ರೈಃ ಶೂಲೈಶ್ಚ ಮುಸಲೈರಪಿ । ಭಿಂಡಿವಾಲೈಶ್ಚ ಪಾಶೈಶ್ಚ ಶಕ್ತಿಭಿಃ ಪಟ್ಟಿಸೈರಪಿ ॥ ೮ ॥ ಖಡ್ಗೈಶ್ಚಕ್ರೈರ್ಗದಾಭಿಶ್ಚ ನಿಶಿತೈಶ್ಚ ಪರಶ್ವಧೈಃ ।

---

ಸುಸಮಾಹಿತಃ - ಸಮಾಧಾನಚಿತ್ತನಾಗಿ, ಪತಾ....ಶ್ಚ - ಚಿಕ್ಕ ಮತ್ತು ದೊಡ್ಡ ಧ್ವಜಗಳಿಂದಲೂ ಆಶ್ಚರ್ಯಗಳಾದ, ರಥೈಶ್ಚ - ತೇರುಗಳಿಂದಲೂ, ಸಮಲಂಕೃತಃ - ಅಲಂಕರಿಸಲ್ಪಟ್ಟವನಾಗಿ, ತತಃ - ಬಳಿಕ, ವಿಚಿ....ಶ್ಚ - ಆಶ್ಚರ್ಯಕರವಾದ ತೋಳುಬಂದಿಗಳಿಂದಲೂ ಕಿರೀಟದಿಂದಲೂ, ವಿಭೂಷಿತಃ - ಅಲಂಕೃತನಾಗಿ, ಸಧನುಃ - ಧನುಸ್ಸಿನಿಂದೊಡಗೂಡಿ, ತನುತ್ರಾಣೀಚ - ಕವಚಗಳನ್ನೂ, ಸಂರುಧ್ಯ - ತೊಟ್ಟು, ದ್ರುತಂ - ಶೀಘ್ರವಾಗಿ, ನಿರ್ಯಯೌ - ಹೊರಟನು. ॥ ೫-೬ ॥ ಚಮೂಪತಿಃ - ಸೇನಾಪತಿಯಾದ ವಜ್ರದಂಷ್ಟ್ರನು, ಪತ.....ತಂ - ಧ್ವಜಪಟದಿಂದಲಂಕೃತವಾಗಿ, ದೀಪ್ತಂ - ಹೊಳೆಯುತ್ತಿರುವ, ತಪ್ತ....ಣಂ - ಅಪರಂಜಿಯ ಒಡವೆಗಳುಳ್ಳ, ರಥಂ - ತೇರನ್ನು, ಪ್ರದಕ್ಷಿಣಂ - ಪ್ರದಕ್ಷಿಣವನ್ನು, ಕೃತ್ವಾ - ಮಾಡಿ, ಸಮಾರೋಹತ್ - ಏರಿದನು. ॥ ೭ ॥ ಯಷ್ಟಿಭಿಃ - ದೊಣ್ಣೆಗಳಿಂದಲೂ, ಚಿತ್ರೈಃ - ಆಶ್ಚರ್ಯಕರವಾದ, ತೋಮರೈಃ - ಕೊಡತಿಗಳಿಂದಲೂ, ಶೂಲೈಶ್ಚ - ಶೂಲಾಯುಧಗಳಿಂದಲೂ, ಮುಸಲೈಃ - ಒನಿಕೆಗಳಿಂದಲೂ, ಭಿಂಡಿವಾಲೈಶ್ಚ - ತಲೆ ದಪ್ಪವಾಗಿರುವ ಸಣ್ಣ ದೊಣ್ಣೆಗಳಿಂದಲೂ, ಪಾಶೈಶ್ಚ - ಹಗ್ಗಗಳಿಂದಲೂ, ಶಕ್ತಿಭಿಃ - ಶಕ್ತ್ಯಾಯುಧಗಳಿಂದಲೂ, ಪಟ್ಟಿಸೈರಪಿ - ಪಟ್ಟಾಕತ್ತಿಗಳಿಂದಲೂ, ಖಡ್ಗೈಶ್ಚ - ಕತ್ತಿಗಳಿಂದಲೂ, ಚಕ್ರೈಃ - ಚಕ್ರಾಯುಧಗಳಿಂದಲೂ, ಗದಾಭಿಶ್ಚ - ಗದೆಗಳಿಂದಲೂ, ನಿಶಿತೈಃ-ತೀಕ್ಷ್ಣವಾದ, ಪರಶ್ವಧೈಶ್ಚ-ಗಂಡುಗೊಡಲಿಗಳಿಂದಲೂ ಕೂಡಿರುವ, ವಿವಿಧಾಃ- ಅನೇಕವಿಧವಾದ, ಶಸ್ತ್ರಪಾಣಯಃ - ಶಸ್ತ್ರಗಳೇ ಹಸ್ತಗಳಲ್ಲುಳ್ಳ, ಪದಾತಯಶ್ಚ - ಕಾಲಾಳುಗಳೂ, ನಿರ್ಯಾಂತಿಸ್ಮ - ಹೊರಟರಷ್ಟೆ, ಸರ್ವೇ - ಸಮಸ್ತರಾದ ರಾಕ್ಷಸಶ್ರೇಷ್ಠರು, ವಿಚಿ....ಸಃ - ನಾನಾ

---

ಹಿಂದೆ ಆನೆಗಳೂ, ಕುದುರೆಗಳೂ, ಒಂಟೆಗಳೂ, ಹೇಸರಕತ್ತೆಗಳೂ, ಇವುಗಳನ್ನೇರಿದ ರಾಕ್ಷಸವೀರರೂ ಹೊರಟರು. ಆ ವಜ್ರದಂಷ್ಟ್ರನ ಸೇನೆಯಲ್ಲಿ ಪತಾಕೆಗಳಿಂದಲೂ, ಧ್ವಜಗಳಿಂದಲೂ ಚಿತ್ರತರವಾದ ರಥಗಳನೇಕವಾಗಿದ್ದುವು. ಆ ವಜ್ರದಂಷ್ಟ್ರನಾದರೋ ವಿಚಿತ್ರ ಭುಜಭೂಷಣಗಳಿಂದಲೂ, ಶಿರೋಭೂಷಣಗಳಿಂದಲೂ ಅಲಂಕೃತನಾಗಿದ್ದನು. ಅವನು ದೃಢವಾದ ಕವಚವನ್ನು ತೊಟ್ಟು ಧನುರ್ಧಾರಿಯಾಗಿಯೂ ಇದ್ದನು. ಸೇನಾಪತಿಯೂ, ರಣೋತ್ಸುಕನೂ ಆದ ಆ ವಜ್ರದಂಷ್ಟ್ರನು ಪತಾಕಾಲಂಕೃತವಾಗಿ ಥಳಥಳನೆ ಹೊಳೆಯುತ್ತಿರುವ ಚಿನ್ನದ ಒಡವೆಗಳಿಂದ ಸೊಗಸುಗೊಂಡೊಪ್ಪುತ್ತಿರುವ ರಥವನ್ನು ತನ್ನ ಸೈನ್ಯದೊಡನೆ ಪ್ರದಕ್ಷಿಣ ನಮಸ್ಕಾರಪೂರ್ವಕವಾಗಿ ಏರಿದನು. ॥೫-೭॥ ಆ ಸಮಯದಲ್ಲಿ ಶಕ್ತಿತೋಮರಗಳನ್ನೂ, ಚಿತ್ರತರವಾದ ಶೂಲಗಳನ್ನೂ, ಕಬ್ಬಿಣದ ಹಾರೆಗಳನ್ನೂ, ಭಿಂಡಿವಾಲಗಳನ್ನೂ, ಪಾಶ ಖಡ್ಗ ಪಟ್ಟಿಸಗಳನ್ನೂ ಧರಿಸಿದ ಪದಾತಿಗಳು ಆ ವಜ್ರದಂಷ್ಟ್ರನನ್ನು ಹಿಂಬಾಲಿಸಿದರು. ಆ ಪದಾತಿಗಳು ಖಡ್ಗಗಳನ್ನೂ, ಚಕ್ರಗಳನ್ನೂ, ಗದೆಗಳನ್ನೂ, ಬಹು ತೀಕ್ಷ್ಣವಾದ ಗಂಡುಗೊಡಲಿಗಳನ್ನೂ ಇನ್ನು ಅನೇಕವಿಧವಾದ ಆಯುಧಗಳನ್ನೂ ಕೈಗಳಲ್ಲಿ ಹಿಡಿದವರಾಗಿ ಹೊರಟರು. ಅವರೆಲ್ಲರೂ ಚಿತ್ರ

ಪದಾತಯಶ್ಚ ನಿರ್ಯಾಂತಿ ವಿವಿಧಾಃ ಶಸ್ತ್ರಪಾಣಯಃ ॥ ೯ ॥ ವಿಚಿತ್ರವಾಸಸಸ್ಸರ್ವೇ ದೀಪ್ತಾ ರಾಕ್ಷಸ ಪುಂಗವಾಃ । ಗಜಾ ಮದೋತ್ಕಟಾಃ ಶೂರಾಶ್ಚಲಂತ ಇವ ಪರ್ವತಾಃ ॥ ೧೦ ॥ ತೇ ಯುದ್ಧಕುಶಲೈ ರೂಢಾಸ್ತೋಮರಾಂಕುಶಪಾಣಿಭಿಃ । ಅನ್ಯೇ ಲಕ್ಷಣ ಸಂಯುಕ್ತಾಃ ಶೂರಾರೂಢಾ ಮಹಾಬಲಾಃ ॥ ೧೧ ॥ ತದ್ರಾಕ್ಷಸಬಲಂ ಘೋರಂ ವಿಪ್ರಸ್ಥಿತಮಶೋಭತ । ಪ್ರಾವೃಟ್ಕಾಲೇ ಯಥಾ ಮೇಘಾ ನರ್ದಮಾನಾ ಸ್ಸವಿದ್ಯುತಃ ॥೧೨॥ ನಿಸ್ಸೃತಾ ದಕ್ಷಿಣದ್ವಾರಾದಂಗದೋ ಯತ್ರ ಯೂಥಪಃ । ತೇಷಾಂ ನಿಷ್ಕ್ರಮಮಾಣಾನಾಮಶುಭಂ ಸಮಜಾಯತ ॥ ೧೩ ॥ ಆಕಾಶಾದ್ವಿಘನಾತ್ತೀವ್ರಾ ಉಲ್ಕಾಶ್ಚಾ

ಬಣ್ಣದ ವಸ್ತ್ರಗಳುಳ್ಳವರಾಗಿ, ದೀಪ್ತಾಃ - ಹೊಳೆಯುತ್ತಿದ್ದರು. ॥೮-೯॥ ಮದೋತ್ಕಟಾಃ - ಮದದಿಂದ ಕೊಬ್ಬಿದ, ಶೂರಾಃ - ಶೌರ್ಯವುಳ್ಳ, ಗಜಾಃ - ಆನೆಗಳು, ಪರ್ವತಾಇವ - ಪರ್ವತಗಳಂತೆ, ಚಲಂತಃ- ಕದಲುವವಾಗಿ, ತೇ - ಅವುಗಳು, ತೋಮ....ಭಿಃ - ದೊಣ್ಣೆಗಳೂ, ಅಂಕುಶಗಳೂ ಹಸ್ತಗಳಲ್ಲಿ ಉಳ್ಳ, ಯುದ್ಧಕುಶಲೈಃ - ಕಾಳಗದಲ್ಲಿ ಸಮರ್ಥರಾದವರಿಂದ, ಊಢಾಃ - ಏರಲ್ಪಟ್ಟಿದ್ದುವು. ॥ ೧೦ ॥ ಮಹಾ ಬಲಾಃ-ಬಹು ಬಲವುಳ್ಳ, ಅನ್ಯೇ-ಮತ್ತೆ ಕೆಲವಾನೆಗಳು, ಲಕ್ಷಣಸಂಯುಕ್ತಾಃ-ಶುಭಲಕ್ಷಣಗಳಿಂದ ಕೂಡಿದುವಾಗಿ, ಶೂರಾರೂಢಾಃ - ಶೂರರಿಂದ ಏರಲ್ಪಟ್ಟವು. ॥ ೧೧ ॥ ಘೋರಂ - ಭಯಂಕರವಾಗಿ, ವಿಪ್ರಸ್ಥಿತಂ - ಹೊರಟ, ತದ್ರಾಕ್ಷಸಬಲಂ - ಆ ರಾಕ್ಷಸಸೈನ್ಯವಾದರೆ, ಪ್ರಾವೃಟ್ಕಾಲೇ - ವರ್ಷಾಕಾಲದಲ್ಲಿ, ನರ್ದಮಾನಾಃ - ಗರ್ಜಿಸುತ್ತಲಿರುವ, ಸವಿದ್ಯುತಃ - ಮಿಂಚುಗಳೊಡಗೂಡಿದ, ಮೇಘಾಇವ - ಮೇಘ ಗಳಂತೆ, ಅಶೋಭತ - ಹೊಳೆಯುತ್ತಿತ್ತು. ॥ ೧೨ ॥ ಅಂಗದಃ - ಅಂಗದನು, ಯತ್ರ - ಯಾವ ಬಾಗಿಲಿನಲ್ಲಿ, ಯೂಥಪಃ - ಯೂಥಪತಿಯಾಗಿ, ಅಸ್ತಿ - ಇದ್ದಾನೆಯೋ, ತಸ್ಮಾದ್ದಕ್ಷಿಣದ್ವಾರಾತ್ - ಆ ದಕ್ಷಿಣದ ಬಾಗಿಲಿನ ದೆಸೆಯಿಂದ, (ರಾಕ್ಷಸಾಃ - ರಕ್ಕಸರು,) ನಿಸ್ಸೃತಾಃ - ಹೊರಟು ಬಂದರು, ನಿಷ್ಕ್ರ....ನಾಂ - ಹೊರಬರುತ್ತಲಿರುವ, ತೇಷಾಂ - ಆ ರಾಕ್ಷಸರಿಗೆ, ಅಶುಭಂ - ಅವಶಕುನವು, ಸಮಜಾಯತ - ಆಯಿತು. ॥ ೧೩ ॥ ತದಾ - ಆ ಕಾಲದಲ್ಲಿ, ವಿಘನಾತ್ - ಮೇಘಗಳಿಲ್ಲದ, ಆಕಾ ಶಾತ್ - ಅಂತರಿಕ್ಷದಿಂದ, ತೀವ್ರಾಃ - ತೀಕ್ಷ್ಣವಾದ, ಉಲ್ಕಾಶ್ಚ - ಕೊಳ್ಳಿಗಳು, ಅಭ್ಯಪತರ್ -

ವರ್ಣದ ವಸ್ತ್ರಗಳನ್ನು ಧರಿಸಿ ಬಹಳವಾಗಿ ಶೋಭಿಸುತ್ತಿದ್ದರು. ಆ ಸೇನೆಯೊಡನೆಯೇ, ಮಹಾ ಬಲಾಢ್ಯವಾದವುಗಳೂ, ಪರ್ವತಗಳನ್ನೇ ಹೋಲಿದವುಗಳೂ, ಮದಿಸಿದವುಗಳೂ ಆದ ಅನೇಕ ಆನೆಗಳು ಹೊರಟವು. ಆ ಆನೆಗಳ ಮೇಲೆ ಯುದ್ಧಚತುರರಾದ ರಾಕ್ಷಸ ವೀರರು ತೋಮರಗಳನ್ನೂ, ಅಂಕುಶಗಳನ್ನೂ ಇನ್ನೂ ಅನೇಕ ಆಯುಧಗಳನ್ನೂ ಧರಿಸಿದವ ರಾಗಿ ಬಹು ದರ್ಪದಿಂದ ಕುಳಿತಿದ್ದರು. ಮಹಾ ಬಲಶಾಲಿಗಳೂ, ಶೂರರೂ ಆದ ಅನೇಕ ಮಂದಿ ರಾಕ್ಷಸವೀರರೂ ಆ ಸೇನೆಯೊಡನೆಯೇ ಹೊರಟರು. ಈ ರೀತಿ ಹೊರಟ ಮಹಾ ಭಯಂಕರವಾದ ಆ ರಾಕ್ಷಸಸೇನೆಯು ಬಹು ಸೊಗಸಾಗಿದ್ದಿತು. ಆ ಸೈನ್ಯವು ವರ್ಷಾಕಾಲ ದಲ್ಲಿ ಮಿಂಚಿನ ಬಳ್ಳಿಯಿಂದ ಕೂಡಿದ ಮೇಘಸಮೂಹದಂತೆ ಶೋಭಿಸುತ್ತಿದ್ದಿತು. ॥೮-೧೨॥ ಮಹಾ ಪರಾಕ್ರಮಿಯಾದ ಆ ವಜ್ರದಂಷ್ಟ್ರಾಸುರನು ಈ ಸೇನೆಯೊಡನೆ ಯೂಥಪತಿ ಯಾದ ಅಂಗದಕುಮಾರನಮರಿದ್ದ ದಕ್ಷಿಣದ್ವಾರವನ್ನುಕುರಿತು ಹೊರಟುಬಂದನು. ಹೀಗೆ ಆ ವಜ್ರದಂಷ್ಟ್ರಾಸುರನು ಸೇನೆಯೊಡನೆ ಯುದ್ಧಕ್ಕಾಗಿ ಬಂದೊಡನೆಯೇ ಅನೇಕ ದುಶ್ಶಕುನ ಗಳು ತಲೆದೋರಿದುವು. ಆ ಸಮಯದಲ್ಲಿ ಆಕಾಶದಿಂದ ಅನೇಕ ಉಲ್ಕಗಳು ಉದುರಿದುವು.

ಭ್ಯಪತಂಸ್ತದಾ । ವಮಂತ್ಯಃ ಪಾವಕಜ್ವಾಲಾಃ ಶಿವಾ ಘೋರಂ ವವಾಶಿರೇ ॥ ೧೪ ॥
ವ್ಯಾಹರಂತಿ ಮೃಗಾ ಘೋರಾ ರಕ್ಷಸಾಂ ನಿಧನಂ ತದಾ । ಸಮಾಪತಂತೋ ಯೋಧಾಸ್ತು
ಪ್ರಾಸ್ಖಲನ್ ಭಯಮೋಹಿತಾಃ ॥ ೧೫ ॥ ಏತಾನೌತ್ಪಾತಿಕಾನ್ ದೃಷ್ಟ್ವಾ ವಜ್ರದಂಷ್ಟ್ರೋ
ಮಹಾಬಲಃ । ಧೈರ್ಯಮಾಲಂಬ್ಯ ತೇಜಸ್ವೀ ನಿರ್ಜಗಾಮ ರಣೋತ್ಸುಕಃ ॥ ೧೬ ॥
ತಾಂಸ್ತು ನಿಷ್ಕ್ರಮತೋ ದೃಷ್ಟ್ವಾ ವಾನರಾ ಜಿತಕಾಶಿನಃ । ಪ್ರಣೇದುಸ್ಸುಮಹಾ
ನಾದಾನ್ ಪೂರಯಂಶ್ಚ ದಿಶೋ ದಶ ॥ ೧೭ ॥ ತತಃ ಪ್ರವೃತ್ತಂ ತುಮುಲಂ ಹರೀಣಾಂ
ರಾಕ್ಷಸೈಸ್ಸಹ । ಘೋರಾಣಾಂ ಭೀಮರೂಪಾಣಾಮನ್ಯೋನ್ಯವಧಕಾಂಕ್ಷಿಣಾಂ ॥೧೮॥

---

ಬಿದ್ದುವು, ಪಾವಕಜ್ವಾಲಾಃ - ಅಗ್ನಿಜ್ವಾಲೆಗಳನ್ನು, ವಮಂತ್ಯಃ - ವಮನ ಮಾಡುತ್ತಿರುವ, ಶಿವಾಃ - ನರಿಗಳು, ಘೋರಂ - ಭಯಂಕರವಾಗಿ, ವವಾಶಿರೇ - ಕೂಗಿದವು, ತದಾ - ಆ ಕಾಲದಲ್ಲಿ, ಘೋರಾಃ - ಭಯಂಕರವಾದ, ಮೃಗಾಃ - ಜಿಂಕೆಯೇ ಮೊದಲಾದವುಗಳು, ರಕ್ಷಸಾಂ - ರಾಕ್ಷಸರ, ನಿಧನಂ - ಸಂಹಾರವನ್ನು, ವ್ಯಾಹರಂತಿ - ಹೇಳುತ್ತಿದ್ದವು, ಸಮಾಪತಂತಃ - ಬರುತ್ತಿರುವ, ಯೋಧಾಸ್ತು - ಭಟರಾದರೆ, ಭಯಮೋಹಿತಾಃ - ಭೀತಿಯಿಂದ ಮೋಹಿತರಾಗಿ, ಪ್ರಾಸ್ಖಲನ್ - ಜಾರಿದರು. ॥೧೪-೧೫॥ ಏತಾನೌತ್ಪಾತಿಕಾನ್ - ಈ ಉತ್ಪಾತಗಳನ್ನು, ದೃಷ್ಟ್ವಾ - ಕಂಡು, ತೇಜಸ್ವೀ - ತೇಜೋವಂತನಾದ, ಮಹಾಬಲಃ - ಬಹು ಸಾಮರ್ಥ್ಯವಂತನಾದ, ವಜ್ರದಂಷ್ಟ್ರಃ - ವಜ್ರದಂಷ್ಟ್ರನು, ರಣೋತ್ಸುಕಃ - ಕಾಳೆಗದಲ್ಲಿ ಕುತೂಹಲವುಳ್ಳವನಾಗಿ, ಧೈರ್ಯಂ - ಧೈರ್ಯವನ್ನು, ಆಲಂಬ್ಯ - ಆಶ್ರಯಿಸಿ, ನಿರ್ಜಗಾಮ - ಹೊರಟನು. ॥ ೧೬ ॥ ಜಿತಕಾಶಿನಃ - ಜಯಶೀಲರಾದ, ವಾನರಾಸ್ತು - ಕಪಿಗಳಾದರೆ, ನಿಷ್ಕ್ರಮತಃ - ಹೊರಬರುತ್ತಲಿರುವ, ತಾನ್ - ಅವರನ್ನು, ದೃಷ್ಟ್ವಾ - ಕಂಡು, ಸುಮಹಾನಾದಾನ್ - ಮಹಾ ಧ್ವನಿಗಳನ್ನು, ಪ್ರಣೇದುಃ - ಕೂಗಿದರು, ದಶದಿಶಃ - ಹತ್ತುದಿಕ್ಕುಗಳನ್ನೂ, ಪೂರಯಂಶ್ಚ - ತುಂಬಿಸಿದರು. ॥೧೭॥ ತತಃ - ಅನಂತರದಲ್ಲಿ, ಘೋರಾಣಾಂ - ಭಯಂಕರರಾದ, ಭೀಮರೂಪಾಣಾಂ- ಭಯಂಕರವಾದ ಆಕಾರಗಳುಳ್ಳ, ಅನ್ಯೋ....ಣಾಂ - ಪರಸ್ಪರ ಸಂಹಾರವನ್ನು ಅಪೇಕ್ಷಿಸುತ್ತಿರುವ, ಹರೀಣಾಂ - ವಾನರರಿಗೆ, ರಾಕ್ಷಸೈಸ್ಸಹ - ರಕ್ಕಸರೊಡನೆ, ತುಮುಲಂ - ಯುದ್ಧವು, ಪ್ರವೃತ್ತಂ - ಮೊದಲಾಯಿತು. ॥ ೧೮ ॥ ಮಹೋತ್ಸಾಹಾಃ - ಮಹಾ ಉತ್ಸಾಹವುಳ್ಳವರಾಗಿ, ನಿಷ್ಪತಂತಃ - ಹೊರಟು

---

ರಾಕ್ಷಸಯೋಧರೆಲ್ಲರೂ ಇದ್ದಕ್ಕಿದ್ದಂತೆಯೇ ಹಾರಿ ಕೆಳಕ್ಕೆ ಬಿದ್ದರು. ನರಿಗಳು ಅಗ್ನಿಜ್ವಾಲೆಗಳನ್ನು ಕಕ್ಕುತ್ತ ಭಯಂಕರವಾಗಿ ಅರಚತೊಡಗಿದುವು. ಅನೇಕ ಮೃಗಗಳು ರಾಕ್ಷಸರ ವಿನಾಶಸೂಚಕವಾದ ಧ್ವನಿಗಳನ್ನು ಮಾಡತೊಡಗಿದುವು. ಇಂತಹ ಅನೇಕ ಉತ್ಪಾತಗಳುಂಟಾದರೂ ಲಕ್ಷ್ಯಕ್ಕೆ ತಂದುಕೊಳ್ಳದೆ ಆ ವಜ್ರದಂಷ್ಟ್ರನು ನಿರ್ಭಯನಾಗಿ, ಮಹೋತ್ಸಾಹದಿಂದ, ಮುಂದುವರೆದನು. ॥ ೧೩-೧೬ ॥ ಆಗ ಮಹಾಟ್ಟಹಾಸದಿಂದ ರಣಾಂಗಣಕ್ಕೆ ನುಗ್ಗಿಬಂದ ರಾಕ್ಷಸರನ್ನು ನೋಡಿ ಮಹಾ ಜಯಶಾಲಿಗಳಾದ ವಾನರರೆಲ್ಲರೂ ದಶದಿಶೆಗಳನ್ನೂ ಸಿಂಹನಾದಗಳಿಂದ ತುಂಬಿಸಿ ಕೋಲಾಹಲಧ್ವನಿಯನ್ನು ಮಾಡಿದರು. ಆ ತರುವಾಯ ಬಹು ಭಯಂಕರರೂ, ಭಯಂಕರ ಪರಾಕ್ರಮವಂತರೂ, ಒಬ್ಬರನ್ನೊಬ್ಬರು ಸಂಹರಿಸಬೇಕೆಂಬ ಕೋರಿಕೆಯುಳ್ಳವರೂ ಆದ ಆ ವಾನರ ರಾಕ್ಷಸರಿಬ್ಬರಿಗೂ ಸಂಕುಲ ಯುದ್ಧವು ಮೊದಲಾಯತು. ಮಹೋತ್ಸಾಹಭರಿತರಾದ ರಾಕ್ಷಸರೆಲ್ಲರೂ ಸ್ವಲ್ಪ

ನಿಷ್ಪತಂತೋ ಮಹೋತ್ಸಾಹಾ ಭಿನ್ನದೇಹಶಿರೋಧರಾಃ । ರುಧಿರೋಕ್ಷಿತಸರ್ವಾಂಗಾ ನ್ಯಪತನ್ ಜಗತೀತಲೇ ॥೧೯॥ ಕೇಚಿದನ್ಯೋನ್ಯಮಾಸಾದ್ಯ ಶೂರಾಃ ಪರಿಘಪಾಣಯಃ । ಚಿಕ್ಷಿಪುರ್ವಿವಿಧಂ ಶಸ್ತ್ರಂ ಸಮರೇಷ್ವನಿವರ್ತಿನಃ ॥ ೨೦ ॥ ದ್ರುಮಾಣಾಂಚ ಶಿಲಾನಾಂಚ ಶಸ್ತ್ರಾಣಾಂಚಾಪಿ ನಿಸ್ವನಃ । ಶ್ರೂಯತೇ ಸುಮಹಾಂಸ್ತತ್ರ ಘೋರೋ ಹೃದಯಭೇದನಃ ॥೨೧॥ ರಥನೇಮಿಸ್ವನಸ್ತತ್ರ ಧನುಷಶ್ಚಾಪಿ ನಿಸ್ವನಃ । ಶಂಖಭೇರೀ ಮೃದಂಗಾನಾಂ ಬಭೂವ ತುಮುಲಸ್ವನಃ ॥ ೨೨ ॥ ಕೇಚಿದಸ್ತ್ರಾಣಿ ಸಂಸೃಜ್ಯ ಬಾಹುಯುದ್ಧಮಕುರ್ವತ । ತಲೈಶ್ಚ ಚರಣೈಶ್ಚಾಪಿ ಮುಷ್ಟಿಭಿಶ್ಚ ದ್ರುಮೈರಪಿ ॥ ೨೩ ॥

---

ಬರುವ ರಕ್ಕಸರು, ಭಿನ್ನ....ರಾಃ - ಭಿನ್ನವಾದ ಶರೀರಗಳೂ, ಕಂಠಗಳೂ ಉಳ್ಳವರಾಗಿ, ರುಧಿ....ಗಾಃ - ರಕ್ತದಿಂದ ತೋಯಿಸಲ್ಪಟ್ಟ ಸರ್ವಾವಯವಗಳುಳ್ಳವರೂ ಆಗಿ, ಜಗತೀತಲೇ - ಭೂಮಿಯಲ್ಲಿ, ನ್ಯಪತನ್ - ಬಿದ್ದರು. ॥ ೧೯ ॥ ಶೂರಾಃ - ಶೂರರಾದ, ಕೇಚಿತ್ - ಕೆಲವರು, ಪರಿ....ಯಃ - ಕಬ್ಬಿಣದ ದೊಣ್ಣೆಗಳೇ ಕೈಯಲ್ಲುಳ್ಳವರಾಗಿ, ಅನ್ಯೋನ್ಯಂ - ಪರಸ್ಪರವಾಗಿ, ಆಸಾದ್ಯ - ಹೊಂದಿ, ಸಮರೇಷು - ಕಾಳಗದಲ್ಲಿ, ಅನಿವರ್ತಿನಃ - ಹಿಂತಿರುಗದೆ, ವಿವಿಧಂ - ನಾನಾ ವಿಧವಾದ, ಶಸ್ತ್ರಂ - ಶಸ್ತ್ರಗಳನ್ನು, ಚಿಕ್ಷಿಪುಃ - ಎರಚಿದರು. ॥ ೨೦ ॥ ತತ್ರ - ಆ ರಣರಂಗದಲ್ಲಿ, ದ್ರುಮಾಣಾಂಚ - ವೃಕ್ಷಗಳ, ಶಿಲಾನಾಂಚ - ಪಾಷಾಣಗಳ, ಶಸ್ತ್ರಾಣಾಂಚಾಪಿ - ಶಸ್ತ್ರಗಳ, ಮಹಾನ್ - ಮಹತ್ತರವಾದ, ನಿಸ್ವನಃ - ಶಬ್ದವು, ಹೃದಯಭೇದನಃ - ಹೃದಯವನ್ನು ಭೇದಿಸುವುದಾಗಿ, ಶ್ರೂಯತೇ - ಕೇಳಲ್ಪಡುತ್ತಿತ್ತು. ॥ ೨೧ ॥ ತತ್ರ - ಅಲ್ಲಿ, ರಥನೇಮಿಸ್ವನಃ - ರಥಚಕ್ರಗಳ ತುದಿಗಳ ಧ್ವನಿಯೂ, ಧನುಷಃ - ಧನುಸ್ಸುಗಳ, ನಿಸ್ವನೋಪಿ - ಧ್ವನಿಯೂ, ಶಂಖ....ನಾಂ - ಶಂಖ ಭೇರಿ ಮದ್ದಲೆ ಇವುಗಳ, ತುಮುಲಸ್ವನಶ್ಚ - ಸಂಕುಲ ಧ್ವನಿಯೂ, ಬಭೂವ - ಉಂಟಾಯಿತು. ॥ ೨೨ ॥ ಕೇಚಿತ್ - ಕೆಲವರು, ಅಸ್ತ್ರಾಣಿ - ಅಸ್ತ್ರಗಳನ್ನು, ಸಂಸೃಜ್ಯ - ಬಿಸುಟು, ಬಾಹುಯುದ್ಧಂ - ಬಾಹುಯುದ್ಧವನ್ನು, ಅಕುರ್ವತ - ಮಾಡಿದರು, ಕೇಚಿದ್ರಾಕ್ಷಸಾಃ - ಕೆಲರಾಕ್ಷಸರು, ತಲೈಶ್ಚ - ಅಂಗೈಗಳಿಂದಲೂ, ಚರಣೈ

---

ಹೊತ್ತು ವಿಜೃಂಭಿಸಿ ಯುದ್ಧ ಮಾಡಿದರು. ಆಗಲವರು ಭೇದಿಸಿಹೋದ ಶರೀರವುಳ್ಳವರಾಗಿಯೂ, ಕೆದರಿಹೋದ ತಲೆಗೂದಲುಗಳುಳ್ಳವರಾಗಿಯೂ, ರಕ್ತಸಿಕ್ತವಾದ ಗಾತ್ರಗಳುಳ್ಳವರೂ ಭೂಮಿಯಲ್ಲಿ ಬಿದ್ದರು. ॥ ೧೩-೧೯ ॥ ಆಗ ಮಹಾ ಶೂರರಾದ ಕೆಲವರು ರಾಕ್ಷಸರು ಯುದ್ಧಭೂಮಿಯಿಂದ ಹಿಂತಿರುಗದೆ ಪರಾಕ್ರಮವನ್ನು ಮೆರೆಯಲಪೇಕ್ಷೆಯುಳ್ಳವರಾಗಿ ವಾನರರೊಡನೆ ದ್ವಂದ್ವಯುದ್ಧವನ್ನು ಮಾಡಲೋಸುಗ ತಮ್ಮ ಕೈಯಲ್ಲಿದ್ದ ವಿವಿಧಾಯುಧಗಳನ್ನು ಬಿಸುಟು ಅಲ್ಲಿದ್ದ ವಾನರವೀರರೊಡನೆ ಸೆಣಸಿ ನಿಂತರು. ಅದೇ ಸಮಯದಲ್ಲಿ ಆ ರಣಭೂಮಿಯಲ್ಲಿ ವೃಕ್ಷಗಳ, ಶಿಲೆಗಳ ಮತ್ತು ಶಸ್ತ್ರಗಳ ಮಹಾ ಧ್ವನಿಯು ಬಹು ಭಯಂಕರವಾಗಿ ಹೃದಯಭೇದಕವಾಗಿ ಕೇಳಿಸಿತು. ರಥಚಕ್ರಗಳ ಅಂಚುಗಳಿಂದ ಹುಟ್ಟಿದ ಧ್ವನಿಯೂ, ಧನುಸ್ಸಿನ ಟಂಕಾರಧ್ವನಿಯೂ, ಶಂಖಗಳ ಭೋಂಕಾರಧ್ವನಿಯೂ ರಣಭೇರಿಗಳ ಢಂಕಾರಧ್ವನಿಯೂ, ಮದ್ದಳೆಗಳ ಧ್ವನಿಯೂ ಬಹು ಸಂಕುಲವಾಗಿ ಹೊರಹೊರಟವು. ಆಗ ಕೆಲರಾಕ್ಷಸರು ಅಸ್ತ್ರಗಳನ್ನು ತೊರೆದು ವಾನರರೊಡನೆ ಬಲವತ್ತರವಾದ ಬಾಹುಯುದ್ಧವನ್ನು ಮಾಡಲು ಮೊದಲಿಟ್ಟರು. ಮತ್ತೆ ಕೆಲವರು ರಾಕ್ಷಸರು ಪದತಲಗಳಿಂದಲೂ,

ಜಾನುಭಿಶ್ಚ ಹತಾಃ ಕೇಚಿದ್ಭಿನ್ನದೇಹಾಶ್ಚ ರಾಕ್ಷಸಾಃ । ಶಿಲಾಭಿಶ್ಚೂರ್ಣಿತಾಃ ಕೇಚಿದ್ವಾನರೈರ್ಯುದ್ಧದುರ್ಮದೈಃ ॥ ೨೪ ॥ ವಜ್ರದಂಷ್ಟ್ರೋ ಭೃಶಂ ಬಾಣೈ ರಣೇ ವಿತ್ರಾಸಯನ್ ಹರೀನ್ । ಚಚಾಲ ಲೋಕಸಂಹಾರೇ ಪಾಶಹಸ್ತ ಇವಾಂತಕಃ ॥ ೨೫ ॥ ಬಲವಂತೋಽಸ್ತ್ರವಿದುಷೋ ನಾನಾಪ್ರಹರಣಾ ರಣೇ । ಜಘ್ನುರ್ವಾನರಸೈನ್ಯಾನಿ ರಾಕ್ಷಸಾಃ ಕ್ರೋಧಮೂರ್ಛಿತಾಃ ॥ ೨೬ ॥ ನಿಘ್ನತೋ ರಾಕ್ಷಸಾನ್ ದೃಷ್ಟ್ವಾ ಸರ್ವಾನ್ ವಾಲಿಸುತೋ ರಣೇ । ಕ್ರೋಧೇನ ದ್ವಿಗುಣಾವಿಷ್ಟಸ್ಸಂವರ್ತಕಇವಾಽನಲಃ ॥ ೨೭ ॥ ತಾನ್ ರಾಕ್ಷಸಗಣಾನ್ ಸರ್ವಾನ್ ವೃಕ್ಷಮುದ್ಯಮ್ಯ ವೀರ್ಯವಾನ್ । ಅಂಗದಃ ಕ್ರೋಧ

---

ಶ್ಚಾಪಿ - ಪಾದಗಳಿಂದಲೂ, ಮುಷ್ಟಿಭಿಶ್ಚಾಪಿ - ಮುಷ್ಟಿಗಳಿಂದಲೂ, ದ್ರುಮೈರಪಿ - ವೃಕ್ಷಗಳಿಂದಲೂ, ಜಾನುಭಿಶ್ಚ - ಮೊಣಕಾಲುಗಳಿಂದಲೂ, ಹತಾಃ - ಹೊಡೆಯಲ್ಪಟ್ಟವರಾಗಿ, ಭಗ್ನದೇಹಾಶ್ಚ - ಭಿನ್ನವಾದ ದೇಹವುಳ್ಳವರಾದರು, ಕೇಚಿದ್ರಾಕ್ಷಸಾಃ-ಕೆಲರಾಕ್ಷಸರು, ಯುದ್ಧದುರ್ಮದೈಃ-ಕಾಳೆಗದಲ್ಲಿ ಮದವೇರಿದ, ವಾನರೈಃ-ಕಪಿಗಳಿಂದ, ಶಿಲಾಭಿಃ-ಪಾಷಾಣಗಳಿಂದ, ಚೂರ್ಣಿತಾಃ-ಪುಡಿಮಾಡಲ್ಪಟ್ಟರು. ||೨೩-೨೪|| ವಜ್ರದಂಷ್ಟ್ರಃ - ವಜ್ರದಂಷ್ಟ್ರನು, ಬಾಣೈಃ - ಶರಗಳಿಂದ, ಭೃಶಂ - ಬಹಳವಾಗಿ, ಹರೀನ್ - ವಾನರರನ್ನು, ವಿತ್ರಾಸಯನ್ - ಹೆದರಿಸುತ್ತ, ಲೋಕಸಂಹಾರೇ - ಪ್ರಳಯಕಾಲದಲ್ಲಿ, ಪಾಶಹಸ್ತಃ - ಪಾಶವೇ ಹಸ್ತದಲ್ಲುಳ್ಳ, ಅಂತಕಇವ - ಯಮನಂತೆ, ಚಚಾರ - ಸಂಚರಿಸಿದನು. || ೨೫ || ಬಲವಂತಃ – ಬಲಶಾಲಿಗಳಾದ, ಅಸ್ತ್ರವಿದುಷಃ-ಅಸ್ತ್ರಜ್ಞರಾದ, ನಾನಾಪ್ರಹರಣಾಃ-ಅನೇಕ ಆಯುಧಗಳುಳ್ಳ, ರಾಕ್ಷಸಾಃ-ರಕ್ಕಸರು, ರಣೇ - ಯುದ್ಧದಲ್ಲಿ, ಕ್ರೋಧಮೂರ್ಛಿತಾಃ - ಕೋಪದಿಂದ ಮೈಮರೆತು, ವಾನರಸೈನ್ಯಾನಿ-ಕಪಿಸೇನೆಗಳನ್ನು, ಜಘ್ನುಃ - ಹೊಡೆದರು. ||೨೬|| ರಣೇ - ಕಾಳೆಗದಲ್ಲಿ, ನಿಘ್ನತಃ - ಹೊಡೆಯುತ್ತಿರುವ, ಸರ್ವಾನ್ - ಸಮಸ್ತರಾದ, ರಾಕ್ಷಸಾನ್ - ರಕ್ಕಸರನ್ನು, ದೃಷ್ಟ್ವಾ - ಕಂಡು, ವಾಲಿಸುತಃ - ಅಂಗದನು, ಸಂವರ್ತಕೇ - ಪ್ರಳಯಕಾಲದಲ್ಲಿ, ಅನಲಇವ - ಅಗ್ನಿಯಂತೆ, ಕ್ರೋಧೇನ - ಕೋಪದಿಂದ, ದ್ವಿಗುಣಾವಿಷ್ಟಃ - ಇಮ್ಮಡಿಯೊದ ಆವೇಶವುಳ್ಳವನಾದನು, ವೀರ್ಯವಾನ್ - ಪರಾಕ್ರಮಿಯಾದ, ಅಂಗದಃ -

---

ಮುಷ್ಟಿಗಳಿಂದಲೂ, ವೃಕ್ಷಗಳಿಂದಲೂ, ಮೊಣಕಾಲುಗಳಿಂದಲೂ ಬಹು ಭಯಂಕರವಾದ ಯುದ್ಧವನ್ನು ಮಾಡಿದರು. ಹೀಗೆ ನಡೆದ ಆ ಮಹಾ ಯುದ್ಧದಲ್ಲಿ ಅತಿ ಭಯಂಕರವಾದ ಪರಾಕ್ರಮವುಳ್ಳ ವಾನರರರಿಂದ ಕೆಲವರು ರಾಕ್ಷಸರು ಭೇದಿಸಿಹೋದ ಶರಿಗಳುಳ್ಳವರಾದರು. ಬಲಾಢ್ಯರಾದ ಕೆಲವರು ವಾನರರು ರಾಕ್ಷಸರನೇಕರನ್ನು ನಜ್ಜುಗುಜ್ಜು ಮಾಡಿದರು. ಆಗ ಮಹಾ ಪರಾಕ್ರಮಿಯಾದ ವಜ್ರದಂಷ್ಟ್ರಾಸುರನು ಬಹು ಭಯಂಕರವಾದ ಬಾಣಗಳನ್ನು ಪ್ರಯೋಗಿಸಿ ವಾನರರೆಲ್ಲರನ್ನೂ ಭಯಗೊಳಿಸುತ್ತ ಲೋಕಸಂಹಾರ ಕಾಲದಲ್ಲಿ ಪಾಶವನ್ನು ಕೈಯಲ್ಲಿಡಿದು ಸಂಚರಿಸುವ ಪ್ರತ್ಯಕ್ಷಯಮನಂತೆ ರಣಾಂಗಣದಲ್ಲೆಲ್ಲಾ ತೀವ್ರವಾಗಿ ಸಂಚರಿಸುತ್ತಿದ್ದನು. || ೨೦—೨೫ || ಅದೇ ಸಮಯದಲ್ಲಿಯೇ ಮಹಾ ವೀರರೂ, ಅಸ್ತ್ರವೇತ್ತರೂ, ನಾನಾವಿಧಗಳಾದ ಆಯುಧಗಳನ್ನು ಧರಿಸಿರುವವರೂ ಆದ ರಾಕ್ಷಸಶ್ರೇಷ್ಠರೂ ಕ್ರೋಧೋದ್ದೀಪಿತರಾಗಿ ವಾನರರೆಲ್ಲರನ್ನೂ ಮರ್ದಿಸಲುಪಕ್ರಮಿಸಿದರು. ಹೀಗೆ ಆ ರಾಕ್ಷಸರೆಲ್ಲರೂ ವಾನರರನ್ನು ಮರ್ದಿಸುತ್ತಿರುವುದನ್ನು ಕಂಡು ವಾಲಿಪುತ್ರನಾದ ಅಂಗದಕುಮಾರನು ಅತಿಯಾಗಿ ಕನಲಿ ಕಣ್ಣುಗಳನ್ನು ಕೆಂಪಗೆ ಕೆರಳಿಸಿಕೊಂಡು ದೊಡ್ಡಮರವೊಂದನ್ನು ಕೈಯಲ್ಲಿ

ತಾಮ್ರಾಕ್ಷಸ್ಸಿಂಹಃ ಕ್ಷುದ್ರಮೃಗಾನಿವ । ಚಕಾರ ಕದನಂ ಘೋರಂ ಶಕ್ರತುಲ್ಯ ಪರಾಕ್ರಮಃ ॥ ೨೮ ॥ ಅಂಗದಾಭಿಮುಖಾಸ್ತತ್ರ ರಾಕ್ಷಸಾ ಭೀಮವಿಕ್ರಮಾಃ । ವಿಭಿನ್ನ ಶಿರಸಃ ಪೇತುರ್ನಿಕೃತ್ತಾ ಇವ ಪಾದಪಾಃ ॥ ೨೯ ॥ ರಥೈರಶ್ವೈರ್ಧ್ವಜೈಶ್ಚಿತ್ರೈಃ ಶರೀರೈ ರ್ಹರಿರಕ್ಷಸಾಂ । ರುಧಿರೇಣ ಚ ಸಂಛನ್ನಾ ಭೂಮಿರ್ಭಯಂಕರೀ ತದಾ ॥ ೩೦ ॥ ಹಾರಕೇಯೂರವಸ್ತ್ರೈಶ್ಚ ಶಸ್ತ್ರೈಶ್ಚ ಸಮಲಂಕೃತಾ । ಭೂಮಿರ್ಭಾತಿ ರಣೇ ತತ್ರ ಶಾರದೀವ ಯಥಾ ನಿಶಾ ॥ ೩೧ ॥

ಅಂಗದನು, ಕ್ರೋಧತಾಮ್ರಾಕ್ಷಃ - ಕೋಪದಿಂದ ಕೆಂಗಣ್ಣುಗಳುಳ್ಳವನಾಗಿ, ಸಿಂಹಃ - ಸಿಂಹವು, ಕ್ಷುದ್ರಮೃಗಾನಿವ - ಕ್ಷುಲ್ಲಕ ಮೃಗಗಳನ್ನೋಪಾದಿಯಲ್ಲಿ, ವೃಕ್ಷಂ - ಗಿಡವನ್ನು, ಉದ್ಯಮ್ಯ - ಎತ್ತಿ, ಸರ್ವಾನ್ - ಸಮಸ್ತರಾದ, ತಾನ್ರಾಕ್ಷಸಗಣಾನ್ - ಆ ರಕ್ಕಸರ ತಂಡಗಳನ್ನು, ಜಘಾನ - ಹೊಡೆದನು. ||೨೭-೨೮|| ಶಕ್ರ....ಮಃ - ಇಂದ್ರನಿಗೆ ಸಮಾನವಾದ ಪರಾಕ್ರಮವುಳ್ಳವನಾಗಿ, ಘೋರಂ - ಭಯಂಕರ ವಾದ, ಕದನಂ - ಕಾಳೆಗವನ್ನು, ಚಕಾರ - ಮಾಡಿದನು, ತತ್ರ - ಅಲ್ಲಿ, ಭೀಮವಿಕ್ರಮಾಃ - ಭಯಂಕರ ಪರಾಕ್ರಮವುಳ್ಳ, ಅಂಗ....ಖಾಃ - ಅಂಗದನಿಗೆ ಅಭಿಮುಖವಾಗಿ ಬರುವ, ರಾಕ್ಷಸಾಃ - ರಕ್ಕಸರು, ವಿಭಿನ್ನಶಿರಸಃ - ಭೇದಿಸಲ್ಪಟ್ಟ ಶಿರಸ್ಸುಗಳುಳ್ಳವರಾಗಿ, ನಿಕೃತ್ತಾಃ - ಕತ್ತರಿಸಲ್ಪಟ್ಟ, ಪಾದಪಾಇವ - ವೃಕ್ಷಗಳಂತೆ, ಪೇತುಃ - ಬಿದ್ದರು. || ೨೯ || ತದಾ - ಆ ಕಾಲದಲ್ಲಿ, ಭೂಮಿಃ - ರಣಭೂಮಿಯು, ರಥೈಃ - ತೇರುಗಳಿಂದಲೂ, ಅಶ್ವೈಃ - ಕುದುರೆಗಳಿಂದಲೂ, ಚಿತ್ರೈಃ - ನಾನಾ ಬಣ್ಣಗಳ, ಧ್ವಜೈಃ - ಧ್ವಜಗಳಿಂದಲೂ, ಹರಿರಕ್ಷಸಾಂ - ವಾನರರಾಕ್ಷಸರ, ಶರೀರೈಶ್ಚ - ದೇಹಗಳಿಂದಲೂ, ರುಧಿರೇಣಚ - ರಕ್ತದಿಂದಲೂ, ಸಂಛನ್ನಾ - ಮುಚ್ಚಲ್ಪಟ್ಟುದಾಗಿ, ಭಯಕರೀ - ಭಯಂಕರವಾದದ್ದು, ಬಭೂವ - ಆಯಿತು. || ೩೦ || ತತ್ರರಣೇ - ಆ ಕಾಳೆಗದಲ್ಲಿ, ಭೂಮಿಃ - ನೆಲವು, ಹಾರ....ಶ್ಚ - ಹಾರಗಳಿಂದಲೂ, ತೋಳುಬಂದಿಗಳಿಂದಲೂ, ವಸ್ತ್ರಗಳಿಂದಲೂ, ಶಸ್ತ್ರೈಶ್ಚ - ಶಸ್ತ್ರಗಳಿಂದಲೂ, ಸಮಲಂಕೃತಾ - ಅಲಂಕಾರ ಮಾಡಲ್ಪಟ್ಟುದಾಗಿ, ಶಾರದೀ - ಶರತ್ಕಾಲಸಂಬಂಧವಾದ, ನಿಶೇವ - ರಾತ್ರಿಯಂತೆ, ಭಾತಿ - ಹೊಳೆಯುತ್ತಿತ್ತು. || ೩೧ || ತದಾ - ಆ ಕಾಲದಲ್ಲಿ, ತತ್ರ - ಆ ರಣರಂಗದಲ್ಲಿ, ಅಂಗ

ಹಿಡಿದು, ನುಗ್ಗಿ ಹೊರಟು, ಸಿಂಹವು ನೀಚ ಮೃಗಗಳನ್ನು ಅಟ್ಟುವಂತೆ ಅಲ್ಲಿದ್ದ ರಾಕ್ಷಸರೆಲ್ಲ ರನ್ನು ಅಟ್ಟಿ ಕಳುಹಿದನು. ಆ ತರುವಾಯ ಮಹೇಂದ್ರಪರಾಕ್ರಮಿಯಾದ ಅಂಗದನು ರಾಕ್ಷಸ ರೆಲ್ಲರೊಡನೆಯೂ ಬಹು ಘೋರವಾದ ಯುದ್ಧವನ್ನು ಮಾಡಿದನು. ಆಗ ಮಹಾ ಪರಾಕ್ರಮಿ ಗಳಾದ ರಾಕ್ಷಸರೂ ಕೂಡ ಅಂಗದನಿಗಭಿಮುಖರಾಗಿ ನಿಂತು ಕಾಳೆಗಮಾಡಿ ಅವನ ಹೊಡೆತ ಗಳಿಂದ ಭೇದಿಸಿಹೋದ ಶಿರಸ್ಸುಗಳುಳ್ಳವರಾಗಿ ಕೆಳಕ್ಕುರುಳಿದರು. ಆ ಸಮಯದಲ್ಲೆಲ್ಲ ಯುದ್ಧಭೂಮಿಯು ಮುರಿದ ರಥಗಳಿಂದಲೂ, ಮಡಿದ ಕುದುರೆಗಳಿಂದಲೂ, ಪುಡಿಪುಡಿ ಯಾದ ಚಿತ್ರಧ್ವಜಗಳಿಂದಲೂ, ಮೃತಿಯೊಂದಿದ ವಾನರರಾಕ್ಷಸರ ಶರೀರಗಳಿಂದಲೂ, ಅವು ಗಳಿಂದ ಹೊರಹೊರಟ ರಕ್ತಪ್ರವಾಹಗಳಿಂದಲೂ ತುಂಬಿ ಬಹು ಭಯಂಕರವಾಗಿ ಕಾಣುತ್ತಿದ್ದಿತು ಇಷ್ಟುಮಾತ್ರವಲ್ಲದೆ ಆ ರಣಭೂಮಿಯು ಹಾರಕೇಯೂರಾದ್ಯಾಭರಣ ಗಳಿಂದಲೂ, ವಿವಿಧ ವಸ್ತ್ರಗಳಿಂದಲೂ, ಶಸ್ತ್ರಗಳಿಂದಲೂ ಅಲಂಕೃತವಾಗಿ ಶರತ್ಕಾಲದ ರಾತ್ರಿಯಂತೆ ಪ್ರಕಾಶಿಸುತ್ತಿದ್ದಿತು. ಆಗ ಅಂಗದನ ಪರಾಕ್ರಮ ಪ್ರದರ್ಶನದಿಂದ

ಅಂಗದಸ್ಯಚ ವೇಗೇನ ತದ್ರಾಕ್ಷಸಬಲಂ ಮಹತ್ ।
ಪ್ರಾಕಂಪತ ತದಾ ತತ್ರ ಪವನೇನಾಂಬುದೋ ಯಥಾ ॥ ೩೨ ॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ತ್ರಿಪಂಚಾಶಸ್ಸರ್ಗಃ



ದಸ್ಯ - ಅಂಗದನ, ವೇಗೇನ - ಕರಲಾಘವದಿಂದ, ಮಹತ್ - ದೊಡ್ಡದಾದ, ತದ್ರಾಕ್ಷಸಬಲಂ - ಆ ರಾಕ್ಷಸಸೈನ್ಯವು, ಪವನೇನ - ವಾಯುವಿನಿಂದ, ಅಂಬುದೋಯಥಾ - ಮೇಘದಂತೆ, ಪ್ರಾಕಂಪತ - ನಡುಗುತ್ತಿದ್ದಿತು. ॥ ೩೨ ॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ತ್ರಿಪಂಚಾಶಸ್ಸರ್ಗಃ.



ಆ ರಣಾಂಗಣದಲ್ಲಿದ್ದ ರಾಕ್ಷಸಸೇನೆಯೆಲ್ಲವೂ ಗಾಳಿಯಿಂದಲುಗಿದ ಮೇಘಗಳಂತೆ ಅಲುಗಿ ಅಲ್ಲಾಡಿ ಹೋಯಿತು. ॥ ೨೬--೩೨ ॥

ಇಂತಿದು ಅಂಗದ ವಜ್ರದಂಷ್ಟ್ರಯುದ್ಧವಿತರಣವೆಂಬ ಐವತ್ಮೂರನೆಯ
ಸರ್ಗವು ಸಮಾಪ್ತವಾದುದು.



# ಯುದ್ಧಕಾಂಡೇ ಚತುಃಪಂಚಾಶಸ್ಸರ್ಗಃ

ಸ್ವಬಲಸ್ಯ ನಿಘಾತೇನ ಅಂಗದಸ್ಯ ಜಯೇನಚ । ರಾಕ್ಷಸಃ ಕ್ರೋಧಮಾವಿಷ್ಟೋ ವಜ್ರದಂಷ್ಟ್ರೋ ಮಹಾಬಲಃ ॥ ೧ ॥ ಸ ವಿಷ್ಫಾರ್ಯ ಧನುರ್ಘೋರಂ ಶಕ್ರಾಶನಿ ಸಮಸ್ವನಂ । ವಾನರಾಣಾಮನೀಕಾನಿ ಪ್ರಾಕಿರಚ್ಛರವೃಷ್ಟಿಭಿಃ ॥ ೨ ॥ ರಾಕ್ಷಸಾಶ್ಚಾಪಿ ಮುಖ್ಯಾಸ್ತೇ ರಥೇಷು ಸಮವಸ್ಥಿತಾಃ । ನಾನಾಪ್ರಹರಣಾಃ ಶೂರಾಃ ಪ್ರಾಯುಧ್ಯಂತ ತದಾ ರಣೇ ॥ ೩ ॥ ವಾನರಾಣಾಂ ತು ಶೂರಾ ಯೇ ಸರ್ವೇ ತೇ ಪ್ಲವಗರ್ಷಭಾಃ । ಅಯುಧ್ಯಂತ ಶಿಲಾಹಸ್ತಾಸ್ಸಮವೇತಾಸ್ಸಮಂತತಃ ॥ ೪ ॥ ತತ್ರಾಯುಧಸಹಸ್ರಾಣಿ

---

ಮಹಾಬಲಃ - ಬಹು ಬಲಿಷ್ಠನಾದ, ರಾಕ್ಷಸಃ - ರಾಕ್ಷಸನಾದ, ಸವಜ್ರದಂಷ್ಟ್ರಃ - ಆ ವಜ್ರ ದಂಷ್ಟ್ರನು, ಸ್ವಬಲಸ್ಯ - ತನ್ನ ಸೈನ್ಯದ, ನಿಘಾತೇನಚ - ಸಂಹಾರದಿಂದಲೂ, ಅಂಗದಸ್ಯ - ಅಂಗದನ, ಜಯೇನಚ - ಜಯದಿಂದಲೂ, ಕ್ರೋಧಂ - ಕೋಪವನ್ನು, ಆವಿಷ್ಟಃ - ಹೊಂದಿ, ಶಕ್ರಾ....ನಂ - ಇಂದ್ರನ ಧನುಸ್ಸಿಗೆ ಸಮಾನವಾದ ಶಬ್ದವುಳ್ಳ, ಘೋರಂ - ಭಯಂಕರವಾದ, ಧನುಃ - ಧನುಸ್ಸನ್ನು, ವಿಷ್ಫಾರ್ಯ - ಟಂಕಾರಮಾಡಿ, ಶರವೃಷ್ಟಿಭಿಃ - ಬಾಣವರ್ಷಗಳಿಂದ, ವಾನರಾಣಾಂ - ಕಪಿಗಳ, ಅನೀಕಾನಿ - ಸೇನೆಗಳನ್ನು ಕುರಿತು, ಪ್ರಾಕಿರತ್ - ಎರಚಿದನು. ॥ ೧-೨ ॥ ತದಾ - ಆ ಕಾಲದಲ್ಲಿ, ರಣೇ - ಯುದ್ಧದಲ್ಲಿ, ಮುಖ್ಯಾಃ - ಮುಖಂಡರಾದ, ನಾನಾ......ಣಾಃ - ಅನೇಕ ಆಯುಧಗಳುಳ್ಳ, ಶೂರಾಃ - ವೀರರಾದ, ತೇರಾಕ್ಷಸಾಶ್ಚಾಪಿ - ಆ ರಾಕ್ಷಸರೂ ಕೂಡ, ರಥೇಷು - ತೇರುಗಳಲ್ಲಿ, ಸಮವ ಸ್ಥಿತಾಃ - ನಿಂತು, ಪ್ರಾಯುಧ್ಯಂತ - ಯುದ್ಧ ಮಾಡಿದರು. ॥೩॥ ವಾನರಾಣಾಂ - ಕಪಿಗಳಲ್ಲಿ, ಯೇ- ಯಾರು, ಶೂರಾಃ-ವೀರರೋ, ಪ್ಲವಗರ್ಷಭಾಃ-ವಾನರಶ್ರೇಷ್ಠರಾದ, ತೇಸರ್ವೇತು-ಆ ಸಮಸ್ತರೂ, ಸಮಂತತಃ - ಎಲ್ಲೆಡೆಗಳಲ್ಲಿಯೂ, ಸಮವೇತಾಃ - ಗುಂಪುಸೇರಿ, ಶಿಲಾಹಸ್ತಾಃ - ಪಾಷಾಣಗಳೇ ಕೈಗಳಲ್ಲುಳ್ಳವರಾಗಿ, ಅಯುಧ್ಯಂತ - ಯುದ್ಧ ಮಾಡಿದರು. ॥ ೪ ॥ ತದಾ - ಆ ಕಾಲದಲ್ಲಿ, ತಸ್ಮಿನ್ ಅಯೋಧನೇ - ಆ ಕಾಳಗದಲ್ಲಿ, ರಾಕ್ಷಸಾಃ - ರಕ್ಕಸರು, ಆಯು....ಣಿ - ಅನೇಕ ಆಯುಧಗಳನ್ನು,

---

ಆ ಪ್ರಕಾರವಾಗಿ ರಾಕ್ಷಸಬಲವೆಲ್ಲವೂ ನಾಶವಾಗುತ್ತಿದ್ದುದರಿಂದಲೂ, ಅಂಗದ ನಿಗೆ ಅತ್ಯಧಿಕವಾಗಿ ಜಯವೇ ಆಗುತ್ತಿದ್ದುದರಿಂದಲೂ ಮಹಾ ಪರಾಕ್ರಮಿಯಾದ ವಜ್ರ ದಂಷ್ಟ್ರಾಸುರನು ಕ್ರೋಧಾವಿಷ್ಟನಾಗಿ ಗುಡುಗಿನಂತೆ ಗರ್ಜಿಸಿ, ಧನುಷ್ಟಂಕಾರ ಮಾಡಿ ವಾನರ ಸೈನ್ಯದಮೇಲೆ ಬಹು ಭಯಂಕರವಾದ ಬಾಣದ ಬಿರುಮಳೆಯನ್ನು ಸುರಿಸಿದನು. ಅದೇ ಸಮಯದಲ್ಲಿ ರಾಕ್ಷಸಮುಖ್ಯರೆಲ್ಲರೂ ನಾನಾವಿಧಗಳಾದ ಆಯುಧಗಳನ್ನು ಧರಿಸಿ ತಾವು ಕುಳಿತಿದ್ದ ರಥಗಳಿಂದಲೇ ಘೋರವಾದ ಯುದ್ಧವನ್ನು ಮಾಡಿದರು. ಅತ್ತ ವಾನರ ಸೇನೆಯಲ್ಲಿಯೂ ಮಹಾ ಶೂರರಾದ ಕೆಲವರು ವಾನರಶ್ರೇಷ್ಠರು ಗಿಡಗಳನ್ನೂ, ಬಂಡೆಗಳನ್ನೂ ಆಯುಧಗಳನ್ನಾಗಿ ಧರಿಸಿ ಗುಂಪುಗೂಡಿ ರಾಕ್ಷಸರೊಡನೆ ಭಯಂಕರವಾದ ಯುದ್ಧ ವನ್ನು ಮಾಡಿದರು. ಆ ಸಮಯದಲ್ಲಿ ರಾಕ್ಷಸರನೇಕರು ವಾನರರಮೇಲೆ ಅನೇಕ ವಿಧಗಳಾದ ಆಯುಧಗಳನ್ನೂ, ಅಸ್ತ್ರಗಳನ್ನೂ ಎಸೆದರು. ವಾನರವೀರರಾದರೋ ಮದ್ದಾನೆಗಳಿಗೆ

ತಸ್ಮಿನ್ನಾಯೋಧನೇ ಭೃಶಂ । ರಾಕ್ಷಸಾಃ ಕಪಿಮುಖ್ಯೇಷು ಪಾತಯಾಂಚಕ್ರಿರೇ ತದಾ ॥ ೫ ॥ ವಾನರಾಶ್ಚಾಪಿ ರಕ್ಷಸ್ಸು ಗಿರೀನ್ ವೃಕ್ಷಾನ್ ಮಹಾಶಿಲಾಃ । ಪ್ರವೀರಾಃ ಪಾತಯಾಮಾಸುರ್ಮತ್ತವಾರಣಸನ್ನಿಭಾಃ ॥ ೬ ॥ ಶೂರಾಣಾಂ ಯುಧ್ಯಮಾನಾನಾಂ ಸಮರೇಷ್ವನಿವರ್ತಿನಾಂ । ತದ್ರಾಕ್ಷಸಗಣಾನಾಂಚ ಸುಯುದ್ಧಂ ಸಮವರ್ತತ ॥ ೭ ॥ ಪ್ರಭಿನ್ನಶಿರಸಃ ಕೇಚಿಚ್ಛಿನ್ನೈಃ ಪಾದೈಶ್ಚ ಬಾಹುಭಿಃ । ಶಸ್ತ್ರೈರರ್ಪಿತದೇಹಾಸ್ತು ರುಧಿರೇಣ ಸಮುಕ್ಷಿತಾಃ ॥ ೮ ॥ ಹರಯೋ ರಾಕ್ಷಸಾಶ್ಚೈವ ಶೇರತೇ ಗಾಂ ಸಮಾಶ್ರಿತಾಃ । ಕಂಕಗೃಧ್ರವಳೈರಾಢ್ಯಾ ಗೋಮಾಯುಗಣಸಂಕುಲಾಃ । ಕಬಂಧಾನಿ ಸಮುತ್ಪೇತು ರ್ಭೀರೂಣಾಂ ಭೀಷಣಾನಿ ವೈ ॥೯॥ ಭುಜಪಾಣಿ ಶಿರಶ್ಛಿನ್ನಾ ಶ್ಛಿನ್ನಕಾಯಾಶ್ಚ ಭೂತಲೇ ।

---

ಭೃಶಂ - ವಿಶೇಷವಾಗಿ, ಕಪಿಮುಖ್ಯೇಷು - ವಾನರಮುಖ್ಯರಲ್ಲಿ, ಪಾತಯಾಂಚಕ್ರಿರೇ - ಬೀಳಿಸಿದರು. ॥ ೫ ॥ ಮತ್ತ....ಭಾಃ - ಮದವೇರಿದ ಆನೆಗಳಿಗೆ ಸಮಾನರಾದ, ಪ್ರವೀರಾಃ - ಬಹು ಶೂರರಾದ, ವಾನರಾಶ್ಚಾಪಿ - ಕಪಿಗಳೂ ಕೂಡ, ರಕ್ಷಸ್ಸು - ರಕ್ಕಸರಲ್ಲಿ, ಗಿರೀನ್ - ಪರ್ವತಗಳನ್ನೂ, ವೃಕ್ಷಾನ್ - ಮರಗಳನ್ನೂ, ಮಹಾಶಿಲಾಃ - ದೊಡ್ಡ ಬಂಡೆಗಳನ್ನೂ, ಪಾತಯಾಮಾಸುಃ - ಕೆಡವಿದರು. ॥ ೬ ॥ ಸಮರೇಷು - ಕಾಳೆಗಗಳಲ್ಲಿ, ಅನಿವರ್ತಿನಾಂ - ಹಿಂತಿರುಗದೆ, ಯುಧ್ಯಮಾನಾನಾಂ - ಯುದ್ಧ ಮಾಡುತ್ತಲಿರುವ, ಶೂರಾಣಾಂ - ವೀರರಾದ, ತದ್ರಾ....ಚ - ಆ ವಾನರರಾಕ್ಷಸರ ಗುಂಪುಗಳಿಗೆ, ಸುಯುದ್ಧಂ - ಮಹಾ ಯುದ್ಧವು, ಸಮವರ್ತತ - ಉಂಟಾಯಿತು. ॥ ೭ ॥ ಪ್ರಭಿನ್ನಶಿರಃ - ಕತ್ತರಿಸಲ್ಪಟ್ಟ ಶಿರಸ್ಸುಗಳುಳ್ಳವರಾಗಿ, ಛಿನ್ನೈಃ - ಕತ್ತರಿಸಲ್ಪಟ್ಟ, ಪಾದೈಃ - ಕಾಲುಗಳಿಂದಲೂ, ಬಾಹುಭಿಶ್ಚ- ಭುಜಗಳಿಂದಲೂ, ಶಸ್ತ್ರೈಃ - ಶಸ್ತ್ರಗಳಿಂದಲೂ, ಅರ್ಪಿತದೇಹಾಃ - ಆರೋಪಿಸಲ್ಪಟ್ಟ ಶರೀರವುಳ್ಳವರಾಗಿ, ರುಧಿರೇಣತು - ರಕ್ತದಿಂದ, ಸಮುಕ್ಷಿತಾಃ - ತೊಯಿಸಲ್ಪಟ್ಟವರಾಗಿ, ಗಾಂ - ಭೂಮಿಯನ್ನು, ಸಮಾಶ್ರಿತಾಃ - ಆಶ್ರಯಿಸಿರುವ, ಕೇಚಿತ್ - ಕೆಲವರು, ಹರಯಃ - ವಾನರರು, ರಾಕ್ಷಸಾಶ್ಚೈವ - ರಾಕ್ಷಸಸಮೂಹವು, ಕಂಕ......ಳೈಃ-ಹಟಗಳಿಂದಲೂ, ರಣಹದ್ದುಗಳಿಂದಲೂ, ಗಿಡಗಗಳಿಂದಲೂ (ಅಥವಾ ಕಾಗೆಗಳಿಂದಲೂ), ಆಢ್ಯಾಃ - ತುಂಬಿ, ಗೋಮಾ....ಲಾಃ - ನರಿಗಳ ಸಮೂಹಗಳಿಂದ ವ್ಯಾಪ್ತರಾಗಿ, ಶೇರತೇ - ಮಲಗಿದರು, ಭೀರೂಣಾಂ - ಭಯಶೀಲರಿಗೆ, ಭೀಷಣಾನಿ - ಭಯಂಕರವಾದ, ಕಬಂಧಾನಿವೈ - ರುಂಡಗಳಾದರೆ, ಸಮುತ್ಪೇತುಃ - ಮೇಲಕ್ಕೆ ಹಾರಿದವು. ॥೮-೯॥ ತತ್ರರಣೇ - ಆ ಯುದ್ಧ

---

ಸಮಾನವಾದ ಪರಾಕ್ರಮವುಳ್ಳವರಾಗಿ ರಾಕ್ಷಸರಮೇಲೆ ವೃಕ್ಷಗಳನ್ನೂ ಶಿಲೆಗಳನ್ನೂ ಪ್ರಯೋಗಿಸಿದರು. ॥ ೧–೫ ॥ ಹೀಗೆ ಯುದ್ಧಮಾಡುತ್ತಿರುವವರೂ, ಯುದ್ಧದಲ್ಲಿ ಬೆನ್ನನ್ನು ತೋರದವರೂ ಆದ ರಾಕ್ಷಸವೀರರಿಗೂ, ವಾನರವೀರರಿಗೂ ಯುದ್ಧವು ಬಹು ರಭಸವಾಯಿತು. ಆಗ ರಾಕ್ಷಸೋತ್ತಮರಲ್ಲಿ ಕೆಲವರು ವಾನರರಲ್ಲಿ ಕೆಲವರನ್ನು ಬಹಳವಾಗಿ ಬಾಧೆಗೊಳಿಸಿದರು. ಆಗ ವಾನರರು ಭಗ್ನವಾದ ಶಿರಸ್ಸುಗಳುಳ್ಳವರೂ, ಭಗ್ನವಾದ ಪಾದಪಾದಗಳುಳ್ಳವರೂ, ಭಗ್ನವಾದ ಇತರ ಅವಯವಗಳುಳ್ಳವರೂ ಆಗಿ ವೃಕ್ಷಗಳಿಂದಲೂ, ಶಿಲೆಗಳಿಂದಲೂ, ನಾನಾವಿಧಗಳಾದ ಆಯುಧಗಳಿಂದಲೂ ವ್ಯಾಪ್ತರಾಗಿ ನೆಲಕ್ಕುರುಳಿದರು. ಕೆಲವರು ವಾನರರು ರಾಕ್ಷಸರನೇಕರನ್ನು ರಕ್ತಸಿಕ್ತವಾದ ಗಾತ್ರಗಳುಳ್ಳವರನ್ನಾಗಿ ಮಾಡಿದರು. ಆ ರಣರಂಗದಲ್ಲಿ ಅನೇಕ ವಾನರರೂ, ರಾಕ್ಷಸರೂ ಮಡಿದುರುಳಿ ಅವರ ಶವಗಳನ್ನು ಕಂಕಗಳೂ, ಗೃಧ್ರಗಳೂ ನರಿಗಳೂ ಕಿತ್ತು ತಿನ್ನುತ್ತಿದ್ದುವು. ಆ ಸಮಯದಲ್ಲಿ ಭಯಗೊಳ್ಳುವ

ವಾನರಾ ರಾಕ್ಷಸಾಶ್ಚಾಪಿ ನಿಪೇತುಸ್ತತ್ರ ವೈ ರಣೇ ॥ ೧೦ ॥ ತತೋ ವಾನರಸೈನ್ಯೇನ ಹನ್ಯಮಾನಂ ನಿಶಾಚರಂ । ಪ್ರಾಭಜ್ಯತ ಬಲಂ ಸರ್ವಂ ವಜ್ರದಂಷ್ಟ್ರಸ್ಯ ಪಶ್ಯತಃ ॥೧೧॥ ರಾಕ್ಷಸಾನ್ ಭಯವಿತ್ರಸ್ತಾನ್ ಹನ್ಯಮಾನಾನ್ ಪ್ಲವಂಗಮೈಃ । ದೃಷ್ಟ್ವಾ ಸರೋಷ ತಾಮ್ರಾಕ್ಷೋ ವಜ್ರದಂಷ್ಟ್ರಃ ಪ್ರತಾಪವಾನ್ ॥೧೨॥ ಪ್ರವಿವೇಶ ಧನುಷ್ಪಾಣಿಸ್ತ್ರಾಸಯನ್ ಹರಿವಾಹಿನೀಂ । ಶರೈರ್ವಿದಾರಯಾಮಾಸ ಕಂಕಪತ್ರೈ ರಜಿಹ್ಮಗೈಃ ॥ ೧೩ ॥ ಬಿಭೇದ ವಾನರಾಂಸ್ತತ್ರ ಸಪ್ತಾಷ್ಟೌ ನವಪಂಚಚ । ವಿವ್ಯಾಧ ಪರಮಕ್ರುದ್ಧೋ ವಜ್ರ ದಂಷ್ಟ್ರಃ ಪ್ರತಾಪವಾನ್ ॥ ೧೪ ॥ ತ್ರಸ್ತಾಸ್ಸರ್ವೇ ಹರಿಗಣಾಃ ಶರೈಸ್ಸಂಕೃತ್ತಕಂಧರಾಃ ।

ದಲ್ಲಾದರೆ, ಭುಜ....ನ್ನಾಃ - ತೋಳು, ಕೈ ಮತ್ತು ಶಿರಸ್ಸುಗಳಲ್ಲಿ ಕತ್ತರಿಸಲ್ಪಟ್ಟ, ಛಿನ್ನಕಾಯಾಶ್ಚ - ಕತ್ತರಿಸಲ್ಪಟ್ಟ ಮಧ್ಯಶರೀರವೂ ಉಳ್ಳ, ವಾನರಾಃ - ಕಪಿಗಳೂ, ರಾಕ್ಷಸಾಶ್ಚಾಪಿ - ರಾಕ್ಷಸರೂ ಕೂಡ, ಭೂತಲೇ - ಭೂಮಿಯಲ್ಲಿ, ನಿಪೇತುಃ - ಬಿದ್ದರು. ॥ ೧೦ ॥ ವಜದಂಷ್ಟ್ರಸ್ಯ - ವಜ್ರದಂಷ್ಟ್ರನು, ಪಶ್ಯತಃ - ನೋಡುತ್ತಿರುವಂತೆಯೇ, ವಾನರಸೈನ್ಯೇನ - ಕಪಿಸೈನ್ಯದಿಂದ, ಹನ್ಯಮಾನಂ - ಹೊಡೆಯಲ್ಪಡುತ್ತಲಿರುವ, ನಿಶಾಚರಂ - ರಾಕ್ಷಸಸಂಬಂಧವಾದ, ಸರ್ವಂ - ಸಮಸ್ತವಾದ, ಬಲಂ - ಸೈನ್ಯವು, ಪ್ರಾಭಜ್ಯತ - ಭೇದಿಸಿಹೋಯಿತು. ॥ ೧೧ ॥ ಪ್ರತಾಪವಾನ್ - ಪರಾಕ್ರಮಿಯಾದ, ಸವಜ್ರದಂಷ್ಟ್ರಃ - ಆ ವಜ್ರದಂಷ್ಟ್ರನು, ಪ್ಲವಂಗಮೈಃ - ವಾನರರಿಂದ, ಹನ್ಯಮಾನಾನ್ - ಹೊಡೆಯಲ್ಪಟ್ಟು, ಭಯವಿತ್ರಸ್ತಾನ್ - ಭಯದಿಂದ ತತ್ತಳಿಸಿದ, ರಾಕ್ಷಸಾನ್ - ರಕ್ಕಸರನ್ನು, ದೃಷ್ಟ್ವಾ - ಕಂಡು, ರೋಷತಾಮ್ರಾಕ್ಷಃ-ಕೋಪದಿಂದ ಕೆಂಗಣ್ಣುಗಳುಳ್ಳವನಾಗಿ, ಧನುಷ್ಪಾಣಿಃ-ಧನುಸ್ಸನ್ನು ಕೈಯಲ್ಲಿ ಹಿಡಿದು, ಹರಿವಾಹಿನೀಂ - ವಾನರಸೈನ್ಯವನ್ನು, ವಿತ್ರಾಸಯನ್ - ಹೆದರಿಸುತ್ತ, ಪ್ರವಿವೇಶ - ಪ್ರವೇಶಿಸಿದನು, ಕಂಕಪತ್ರೈಃ - ಹದ್ದುಗಳ ಗರಿಗಳುಳ್ಳ, ಅಜಿಹ್ಮಗೈಃ - ಕುಟಿಲಗಮನವುಳ್ಳ, ಶರೈಃ - ಬಾಣಗಳಿಂದ, ವಿದಾರಯಾಮಾಸ - (ವಾನರರನ್ನು) ಶೀಳಿದನು. ॥೧೨-೧೩॥ ತತ್ರ - ಆ ಯುದ್ಧದಲ್ಲಿ, ಪ್ರತಾಪವಾನ್- ಪರಾಕ್ರಮಿಯಾದ, ವಜ್ರದಂಷ್ಟ್ರಃ - ವಜ್ರದಂಷ್ಟ್ರನು, ಪರಮಕ್ರುದ್ಧಃ - ಮಹಾ ಕೋಪವುಳ್ಳವನಾಗಿ, ಸಪ್ತ - ಏಳುಮಂದಿಯಾದ, ವಾನರಾನ್ - ಕಪಿಗಳನ್ನೂ, ಅಷ್ಟೌ - ಎಂಟುಮಂದಿಯನ್ನೂ, ನವ - ಒಂಭತ್ತುಮಂದಿಯನ್ನೂ, ಪಂಚಚ - ಐದುಮಂದಿಯನ್ನು, (ಏಕೇನ - ಒಂದೇ ಬಾಣದಿಂದ), ವಿವ್ಯಾಧ - ಹೊಡದು, ಬಿಭೇದ - ಭೇದಿಸಿದನು. ॥ ೧೪ ॥ ಶರೈಃ - ಬಾಣಗಳಿಂದ, ಸಂಕೃ....ರಾಃ - ಕತ್ತರಿಸಲ್ಪಟ್ಟ ಕಂಠಗಳುಳ್ಳ, ಸರ್ವೇ - ಸಮಸ್ತವಾದ, ಹರಿಗಣಾಃ - ವಾನರ ಸಮೂಹಗಳು,

ಸ್ವಭಾವವುಳ್ಳ ವಾನರರಾಕ್ಷಸರ ಕಬಂಧಗಳು ಬಹು ಭಯಂಕರವಾಗಿ ಹಾರಾಡುತ್ತಿದ್ದುವು. ॥೬–೧೦॥ ಆಗ ಕೆಲವರು ರಾಕ್ಷಸರು ಕೆಲ ವಾನರರ ಭುಜಗಳನ್ನೂ, ಹಸ್ತಗಳನ್ನೂ, ಶಿರಸ್ಸುಗಳನ್ನೂ ತರಿದುಹಾಕಿ ನೆಲಕ್ಕುರುಳಿಸಿದರು. ಮಹಾಬಲನಾದ ವಜ್ರದಂಷ್ಟ್ರಾಸುರನಾದರೊ ಆ ಸಮಯದಲ್ಲಿ ವಾನರಸೇನೆಯಿಂದ ಹತವಾಗುತ್ತಿದ್ದ ರಾಕ್ಷಸಸೇನೆಯನ್ನು ನೋಡಿ ಬಹಳವಾಗಿ ಕೆರಳಿ ಕಣ್ಣುಗಳನ್ನು ಕೆಂಪಗಾಗಿಸಿಕೊಂಡು ಕಂಕಪತ್ರಗಳುಳ್ಳುವೂ, ನೇರವಾಗಿ ಹೋಗುವುವೂ ಆದ ಬಾಣಗಳಿಂದ ಕೆಲವಾನರರನ್ನು ಸಿಗಿದುಹಾಕುತ್ತ ಸಂಚರಿಸಿದನು. ಅವನು ಒಂದೊಂದು ಬಾಣದಿಂದ ಏಳು ಅಥವಾ ಎಂಟು ಮಂದಿ ವಾನರವೀರರನ್ನು ಕೊಂದು ಕೆಡವುತ್ತ ಸಂಚರಿಸಿದನು. ಆಗ ವಾನರರೆಲ್ಲರೂ ಬಾಣಗಳಿಂದ ಮುರಿದ ಶಿರಸ್ಸುಗಳುಳ್ಳ ತಮ್ಮವರನ್ನು ನೋಡಿ ಭಯದಿಂದ ತತ್ತಳಿಸಿಹೋದರು. ಆಗಲವರು ಪ್ರಜೆಗಳೆಲ್ಲರೂ

ಅಂಗದಂ ಸಂಪ್ರಧಾವಂತಿ ಪ್ರಜಾಪತಿಮಿವ ಪ್ರಜಾಃ ॥ ೧೫ ॥ ತತೋ ಹರಿಗಣಾನ್
ಭಗ್ನಾನ್ ದೃಷ್ಟ್ವಾ ವಾಲಿಸುತಸ್ತದಾ । ಕ್ರೋಧೇನ ವಜ್ರದಂಷ್ಟ್ರಂ ತಮುದೀಕ್ಷಂತ
ಮುದೈಕ್ಷತ ॥ ೧೬ ॥ ವಜ್ರದಂಷ್ಟ್ರೋಽಂಗದಶ್ಚೋಭೌ ಸಂಗತೌ ಹರಿರಾಕ್ಷಸೌ ।
ಚೇರತುಃ ಪರಮಕ್ರುದ್ಧೌ ಹರಿಮತ್ತಗಜಾವಿವ ॥ ೧೭ ॥ ತತಃ ಶರಸಹಸ್ರೇಣ ವಾಲಿ
ಪುತ್ರಂ ಮಹಾಬಲಃ । ಜಘಾನ ಮರ್ಮದೇಶೇಷು ಮಾತಂಗಮಿವ ತೋಮರೈಃ
॥ ೧೮ ॥ ರುಧಿರೋಕ್ಷಿತಸರ್ವಾಂಗೋ ವಾಲಿಸೂನುರ್ಮಹಾಬಲಃ । ಚಿಕ್ಷೇಪ ವಜ್ರ
ದಂಷ್ಟ್ರಾಯ ವೃಕ್ಷಂ ಭೀಮಪರಾಕ್ರಮಃ ॥ ೧೯ ॥ ದೃಷ್ಟ್ವಾಽಪತಂತಂ ತಂ ವೃಕ್ಷಮ

ತ್ರಸ್ತಾಃ - ಹೆದರಿ, ಪ್ರಜಾಃ - ಜನಗಳು, ಪ್ರಜಾಪತಿಮಿವ - ಬ್ರಹ್ಮದೇವನನ್ನಂತೆ, ಅಂಗದಂ -
ಅಂಗದನನ್ನು ಕುರಿತು, ಸಂಪ್ರಧಾವಂತಿ-ಓಡಿಬಂದುವು. ॥ ೧೫ ॥ ತತಃ-ಅನಂತರದಲ್ಲಿ, ವಾಲಿಸುತಃ-
ಅಂಗದನು, ಭಗ್ನಾನ್ - ಭಗ್ನವಾದ, ಹರಿಗಣಾನ್ - ವಾನರರ ಗುಂಪುಗಳನ್ನು, ದೃಷ್ಟ್ವಾ - ಕಂಡು,
ತದಾ - ಆ ಕಾಲದಲ್ಲಿ, ಕ್ರೋಧೇನ - ಕೋಪದಿಂದ, ಉದೀಕ್ಷಂತಂ - ನೋಡುತ್ತಿರುವ, ತಂವಜ್ರ
ದಂಷ್ಟ್ರಂ - ಆ ವಜ್ರದಂಷ್ಟ್ರನನ್ನು, ಉದೈಕ್ಷತ - ನೋಡಿದನು. ॥ ೧೬ ॥ ವಜ್ರದಂಷ್ಟ್ರಃ - ವಜ್ರ
ದಂಷ್ಟ್ರನು, ಅಂಗದಶ್ಚ - ಅಂಗದನು ಎಂಬ, ಉಭೌ - ಈರ್ವರಾದ, ಹರಿರಾಕ್ಷಸೌ - ವಾನರ
ರಾಕ್ಷಸರು, ಹರಿ....ವ - ಸಿಂಹ ಮತ್ತು ಮದ್ದಾನೆಗಳಂತೆ, ಸಂಗತೌ - ಸೇರಿ, ಪರಮಕ್ರುದ್ಧೌ -
ಮಹಾ ಕೋಪವುಳ್ಳವರಾಗಿ, ಚೇರತುಃ - ತಿರುಗಿದರು. ॥೧೭॥ ತತಃ - ಅನಂತರದಲ್ಲಿ, ಮಹಾಬಲಃ -
ಬಹು ಬಲಿಷ್ಠನಾದ ವಜ್ರದಂಷ್ಟ್ರನು, ಶರಸಹಸ್ರೇಣ - ಸಾವಿರಬಾಣಗಳಿಂದ, ಅಂಗದಂ - ಅಂಗದ
ನನ್ನು, ಮಾತಂಗಂ - ಆನೆಯನ್ನು, ತೋಮರೈರಿವ - ತೋಮರಾಯುಧಗಳಿಂದ ಎಂತೋ ಅಂತು,
ಮರ್ಮದೇಶೇಷು - ಮರ್ಮಸ್ಥಳಗಳಲ್ಲಿ, ಜಘಾನ - ಹೊಡೆದನು. ॥ ೧೮ ॥ ಭೀಮಪರಾಕ್ರಮಃ -
ಭಯಂಕರ ಪರಾಕ್ರಮವುಳ್ಳ, ಮಹಾಬಲಃ - ಬಹು ಶಕ್ತಿಯುಳ್ಳ, ವಾಲಿಸೂನುಃ - ವಾಲಿಪುತ್ರನು,
ರುಧಿ......ಗಃ - ರಕ್ತದಿಂದ ತೊಯ್ದ ಸಮಸ್ತಾವಯವಗಳುಳ್ಳವನಾಗಿ, ವಜ್ರದಂಷ್ಟ್ರಾಯ - ವಜ್ರ
ದಂಷ್ಟ್ರನಿಗೋಸುಗ, ವೃಕ್ಷಂ - ಮರವನ್ನು, ಚಿಕ್ಷೇಪ - ಎಸೆದನು. ॥ ೧೯ ॥ ರಾಕ್ಷಸಶ್ಚ - ವಜ್ರ
ದಂಷ್ಟ್ರನೂ ಕೂಡ, ಅಸಂಭ್ರಾಂತಃ - ಗಾಬರಿಪಡದೆ, ಆಪತಂತಂ - ಬರುತ್ತಲಿರುವ, ತಂವೃಕ್ಷಂ -
ಆ ವೃಕ್ಷವನ್ನು, ಬಹುಧಾ - ಬಹು ಪ್ರಕಾರವಾಗಿ, ಚಿಚ್ಛೇದ - ಕತ್ತರಿಸಿದನು, ಸೋಪಿ - ಆ ವೃಕ್ಷವೂ

ಬ್ರಹ್ಮನನ್ನು ಮೊರೆಹೊಕ್ಕಂತೆ ಅಂಗದನನ್ನು ಮೊರೆಹೊಕ್ಕರು. ॥ ೧೧–೧೫ ॥ ವಾಲಿ
ಪುತ್ರನಾದ ಅಂಗದನು ವಜ್ರದಂಷ್ಟ್ರನಿಂದ ಹತರಾದ ವಾನರರನ್ನು ನೋಡಿ ಮಹಾ ಕುಪಿತನಾಗಿ
ಹೋದನು. ಕೂಡಲೇ ಆ ಅಂಗದನಿಗೂ, ವಜ್ರದಂಷ್ಟ್ರನಿಗೂ ಎರಡು ಮದ್ದಾನೆಗಳಿಗೆಂತೋ
ಅಂತು ಪ್ರಬಲಯುದ್ಧವು ಸನ್ನಿಹಿತವಾಯಿತು. ಅವರೀರ್ವರೂ ಯುದ್ಧಸನ್ನದ್ಧರಾಗಿ
ನಿಂತರು. ಆಗ ವಜ್ರದಂಷ್ಟ್ರನು ಆನೆಯನ್ನು ಅಂಕುಶದಿಂದ ಮರ್ಮಸ್ಥಾನಗಳಲ್ಲಿ ತಿವಿಯು
ವಂತೆ ಅಂಗದನ ಮರ್ಮಸ್ಥಾನಗಳಿಗೆ ತೋಮರಾಯುಧಗಳನ್ನು ಪ್ರಯೋಗಿಸಿ ನೋಯಿಸಿ
ದನು. ॥ ೧೬–೧೮ ॥ ಆಗ ವಾಲಿಸೂನುವಾದ ಅಂಗದನು ರಕ್ತಸಿಕ್ತವಾದ ಸರ್ವಾವಯವ
ಗಳುಳ್ಳವನಾದರೂ ಮಹಾ ಕ್ರೋಧಾವಿಷ್ಟನಾಗಿ ಅಪರಿಮಿತವಾದ ಪರಾಕ್ರಮವನ್ನವಲಂಬಿಸಿ
ಆ ವಜ್ರದಂಷ್ಟ್ರನಮೇಲೆ ಬಹು ಭಯಂಕರವಾದ ವೃಕ್ಷವೊಂದನ್ನು ಪ್ರಯೋಗಿಸಿದನು. ಹೀಗೆ
ಅವನು ಪ್ರಯೋಗಿಸಿದ ಮಹಾ ವೃಕ್ಷವು ಮಹಾ ವೇಗದಿಂದ ಬರುತ್ತಿರುವುದನ್ನು ನೋಡಿ ಆ

ಸಂಭ್ರಾಂತಶ್ಚ ರಾಕ್ಷಸಃ । ಚಿಚ್ಛೇದ ಬಹುಧಾ ಸೋಽಪಿ ನಿಕೃತ್ತಃ ಪತಿತೋ ಭುವಿ ॥೨೦॥ ತಂ ದೃಷ್ಟ್ವಾ ವಜ್ರದಂಷ್ಟ್ರಸ್ಯ ವಿಕ್ರಮಂ ಪ್ಲವಗರ್ಷಭಃ । ಪ್ರಗೃಹ್ಯ ವಿಪುಲಂ ಶೈಲಂ ಚಿಕ್ಷೇಪಚ ನನಾದಚ ॥ ೨೧ ॥ ಸಮಾಪತಂತಂ ತಂ ದೃಷ್ಟ್ವಾ ರಥಾದಾಪ್ಲುತ್ಯ ವೀರ್ಯವಾನ್ । ಗದಾಪಾಣಿರಸಂಭ್ರಾಂತಃ ಪೃಥಿವ್ಯಾಂ ಸಮತಿಷ್ಠತ ॥ ೨೨ ॥ ಸಾಽಂಗದೇನ ಗದಾ ಕ್ಷಿಪ್ತಾ ಗತ್ವಾತು ರಣಮೂರ್ಧನಿ । ಸಚಕ್ರಕೂಬರಂ ಸಾಶ್ವಂ ಪ್ರಮಮಾಥ ರಥಂ ತದಾ ॥ ೨೩ ॥ ತತೋಽನ್ಯಂ ಗಿರಿಮಾಕ್ಷಿಪ್ಯ ವಿಪುಲಂ ದ್ರುಮಭೂಷಿತಂ । ವಜ್ರದಂಷ್ಟ್ರಸ್ಯ ಶಿರಸಿ ಪಾತಯಾಮಾಸ ಸೋಽಂಗದಃ ॥ ೨೪ ॥ ಅಭವಚ್ಛೋಣಿತೋ

ಕೂಡ, ನಿಕೃತ್ತಃ-ಕತ್ತರಿಸಲ್ಪಟ್ಟದಾಗಿ, ಭುವಿ-ನೆಲದಲ್ಲಿ, ಪತಿತಃ-ಬಿದ್ದಿತು. ॥ ೨೦ ॥ ಪ್ಲವಗರ್ಷಭಃ-ವಾನರಶ್ರೇಷ್ಠನಾದ ಅಂಗದನು, ವಜ್ರದಂಷ್ಟ್ರಸ್ಯ - ವಜ್ರದಂಷ್ಟ್ರನ, ತಂವಿಕ್ರಮಂ - ಆ ಪರಾಕ್ರಮವನ್ನು, ದೃಷ್ಟ್ವಾ - ಕಂಡು, ವಿಪುಲಂ - ದೊಡ್ಡದಾಗಿರುವ, ಶೈಲಂ - ಪರ್ವತವನ್ನು, ಪ್ರಗೃಹ್ಯ - ತೆಗದುಕೊಂಡು, ಚಿಕ್ಷೇಪಚ - ಬೀರಿದನು, ನನಾದಚ - ಅಟ್ಟಹಾಸವನ್ನೂ ಮಾಡಿದನು. ॥ ೨೧ ॥ ವೀರ್ಯವಾನ್ - ಪರಾಕ್ರಮಿಯಾದ ವಜ್ರದಂಷ್ಟ್ರನು, ಸಮಾಪತಂತಂ - ಬರುತ್ತಿರುವ, ತಂ - ಅವನನ್ನು, ದೃಷ್ಟ್ವಾ - ಕಂಡು, ಗದಾಪಾಣಿಃ - ಗದೆಯು ಹಸ್ತದಲ್ಲಿ ಉಳ್ಳವನಾಗಿ, ಅಸಂಭ್ರಾಂತಃ - ಗಾಬರಿಬೀಳದೆ, ರಥಾತ್ - ರಥದಿಂದ, ಅವಪ್ಲುತ್ಯ - ಹಾರಿ, ಪೃಥಿವ್ಯಾಂ - ನೆಲದಲ್ಲಿ, ಸಮತಿಷ್ಠತ - ನಿಂತನು. ॥ ೨೨ ॥ ರಣಮೂರ್ಧನಿ – ರಣರಂಗದಲ್ಲಿ, ಗತ್ವಾ - ಹೋಗಿ, ಅಂಗದೇನ - ಅಂಗದನಿಂದ, ಸಾಗದಾ - ಆ ವಜ್ರದಂಷ್ಟ್ರನ ಗದೆಯು, ಕ್ಷಿಪ್ತಾ - ಅಪಹರಿಸಲ್ಪಟ್ಟಿತು, ತದಾ - ಆ ಕಾಲದಲ್ಲಿ, ಸಚಕ್ರಕೂಬರಂ - ಚಕ್ರಗಳಿಂದಲೂ, ಈಚೀಮರದಿಂದಲೂ ಕೂಡಿದ, ಸಾಶ್ವಂ - ಕುದುರೆಗಳಿಂದೊಡಗೂಡಿದ, ರಥಂ - ತೇರನ್ನು, ಪ್ರಮಮಾಥ - ಮಥಿಸಿತು. ॥ ೨೩ ॥ ತತಃ - ಅನಂತರದಲ್ಲಿ, ಸೋಽಂಗದಃ - ಆ ಅಂಗದನು, ದ್ರುಮಭೂಷಿತಂ - ವೃಕ್ಷಗಳಿಂದಲಂಕೃತವಾದ, ವಿಪುಲಂ - ದೊಡ್ಡದಾಗಿರುವ, ಅನ್ಯಂಗಿರಿಂ - ಮತ್ತೊಂದು ಪರ್ವತವನ್ನು, ಆಕ್ಷಿಪ್ಯ - ಎತ್ತಿ, ವಜ್ರದಂಷ್ಟ್ರಸ್ಯ - ವಜ್ರದಂಷ್ಟ್ರನ, ಶಿರಸಿ - ಶಿರಸ್ಸಿನಲ್ಲಿ, ಪಾತಯಾಮಾಸ - ಕೆಡವಿದನು. ॥ ೨೪ ॥ ಸವಜ್ರದಂಷ್ಟ್ರಃ - ಆ ವಜ್ರದಂಷ್ಟ್ರನು, ಮೂರ್ಛಿತಃ ಪ್ರಜ್ಞೆಯಿಲ್ಲದವನಾಗಿ, ಶೋಣಿತೋದ್ಗಾರೀ - ರಕ್ತವನ್ನು ವಮನಮಾಡುವವನು, ಅಭವತ್ - ಆದನು, ಗದಾಂ - ಗದೆಯನ್ನು, ಆಲಿಂಗ್ಯ -

ವಜ್ರದಂಷ್ಟ್ರನು ವಿಭ್ರಾಂತನಾಗದೆ ಅದನ್ನು ಮಧ್ಯಮಾರ್ಗದಲ್ಲಿಯೇ ಕೂರಂಬುಗಳಿಂದ ಕತ್ತರಿಸಿ ಹಾಕಿದನು. ಆಗ ವಾನರೋತ್ತಮನಾದ ಅಂಗದನು ಆ ರೀತಿಯಾದ ವಜ್ರದಂಷ್ಟ್ರಾಸುರನ ಪರಾಕ್ರಮವನ್ನು ನೋಡಿ ಮತ್ತೂ ಅಧಿಕವಾಗಿ ಕೆರಳಿ ಬಹು ದೊಡ್ಡದಾದ ಒಂದು ಪರ್ವತವನ್ನು ಆ ವಜ್ರದಂಷ್ಟ್ರನಮೇಲೆ ಪ್ರಯೋಗಿಸಿ ಅತಿ ಭಯಂಕರವಾದ ಸಿಂಹನಾದವನ್ನು ಮಾಡಿದನು. ಆ ಕೂಡಲೇ ವಜ್ರದಂಷ್ಟ್ರನು ರಥದಿಂದಿಳಿದು ಬಂದನು. ಆಗ ಅಂಗದನು ಗದಾಪಾಣಿಯಾಗಿ ಭೂಮಿಯಲ್ಲಿಯೇ ನಿಂತು ಆ ಗದೆಯನ್ನು ಆ ವಜ್ರದಂಷ್ಟ್ರನ ರಥದಮೇಲೆ ಪ್ರಯೋಗಿಸಿದನು. ಅದರಿಂದ ಆ ರಥವು ಕುದುರೆಗಳೊಡಗೂಡಿ ಪುಡಿಪುಡಿಯಾಗಿ ಹೋಯಿತು. ಆ ತರುವಾಯ ಮಹಾ ಪರಾಕ್ರಮಿಯಾದ ಅಂಗದನು ದೊಡ್ಡ ಮರಗಳಿಂದ ತುಂಬಿದ ಒಂದು ಪರ್ವತವನ್ನು ಕಿತ್ತು ಆ ವಜ್ರದಂಷ್ಟ್ರನ ಶಿರಸ್ಸಿನಮೇಲೆ ಬಲವಾಗಿ ಬಿಸುಟನು. ಆಗಲಾ ರಾಕ್ಷಸನು ರಕ್ತದಿಂದ ವ್ಯಾಪ್ತವಾದ ಶರೀರವುಳ್ಳವನಾಗಿ ಮೂರ್ಛೆಯೊಂದಿ ನೆಲಕ್ಕೆ

ದ್ಗಾರೀ ವಜ್ರದಂಷ್ಟ್ರಸ್ಸಮೂರ್ಛಿತಃ । ಮುಹೂರ್ತಮಭವನ್ಮೂಢೋ ಗದಾಮಾಲಿಂಗ್ಯ ನಿಶ್ವಸನ್ ॥ ೨೫ ॥ ಸಲಬ್ಧ ಸಂಜ್ಞೋ ಗದಯಾ ವಾಲಿಪುತ್ರಮುವಸ್ಥಿತಂ । ಜಘಾನ ಪರಮಕ್ರುದ್ಧೋ ವಕ್ಷೋದೇಶೇ ನಿಶಾಚರಃ ॥ ೨೬ ॥ ಗದಾಂ ತ್ಯಕ್ತ್ವಾ ತತಸ್ತತ್ರ ಮುಷ್ಟಿಯುದ್ಧಮವರ್ತತ । ಅನ್ಯೋನ್ಯಂ ಜಘ್ನತುಸ್ತತ್ರ ತಾವುಭೌ ಹರಿರಾಕ್ಷಸೌ ॥ ೨೭ ॥ ರುಧಿರೋದ್ಗಾರಿಣೌ ತೌತು ಪ್ರಹಾರೈರ್ಜನಿತಶ್ರಮೌ । ಬಭೂವತುಸ್ಸುವಿಕ್ರಾಂತಾವಂಗಾರಕಬುಧಾವಿವ ॥ ೨೮ ॥ ತತಃ ಪರಮತೇಜಸ್ವೀ ಅಂಗದಃ ಕಪಿಕುಂಜರಃ । ಉತ್ಪಾಟ್ಯ ವೃಕ್ಷಂ ಸ್ಥಿತವಾನ್ ಬಹುಪುಷ್ಪಫಲಾಂಚಿತಂ ॥ ೨೯ ॥ ಜಗ್ರಾಹ ಚಾರ್ಷಭಂ ಚರ್ಮಖಡ್ಗಂಚ ವಿಪುಲಂ ಶುಭಂ । ಕಿಂಕಿಣೀಜಾಲಸಂಛನ್ನಂ

---

ಅಪ್ಪಿಕೊಂಡು, ನಿಶ್ವಸನ್ - ನಿಟ್ಟುಸುರು ಬಿಡುತ್ತ, ಮುಹೂರ್ತಂ - ಮುಹೂರ್ತಕಾಲ, ಮೂಢಃ - ಜ್ಞಾನಶೂನ್ಯನು, ಅಭವತ್ - ಆದನು. ॥ ೨೫ ॥ ಸನಿಶಾಚರಃ - ಆ ರಾಕ್ಷಸನು, ಲಬ್ಧಸಂಜ್ಞಃ - ಹೊಂದಲ್ಪಟ್ಟ ಪ್ರಜ್ಞೆಯುಳ್ಳವನಾಗಿ, ಪರಮಕ್ರುದ್ಧಃ - ಕೋಪವುಳ್ಳವನಾಗಿ, ಅವಸ್ಥಿತಂ - ನಿಂತಿರುವ, ವಾಲಿಪುತ್ರಂ - ಅಂಗದನನ್ನು, ಗದಯಾ - ಗದಾಯುಧದಿಂದ, ವಕ್ಷೋದೇಶೇ - ವಕ್ಷಸ್ಥಲದಲ್ಲಿ, ಜಘಾನ - ಹೊಡೆದನು, ತತಃ - ಬಳಿಕ, ತತ್ರ - ಆ ಯುದ್ಧದಲ್ಲಿ, ಗದಾಂ - ಗದಾಯುಧವನ್ನು, ತ್ಯಕ್ತ್ವಾ - ಬಿಟ್ಟು, ಮುಷ್ಟಿಯುದ್ಧಂ - ಮುಷ್ಟಿಯುದ್ಧವನ್ನು, ಅವರ್ತತ - ಉಂಟುಮಾಡಿದನು. ॥ ೨೬-೨೭ ॥ ತತ್ರ - ಅಲ್ಲಿ, ಹರಿರಾಕ್ಷಸೌ - ವಾನರರಾಕ್ಷಸರಾದ, ತಾವುಭೌ - ಅವರೀರ್ವರೂ, ಅನ್ಯೋನ್ಯಂ - ಒಬ್ಬರನ್ನೊಬ್ಬರು, ಜಘ್ನತುಃ - ಹೊಡೆದರು, ರುಧಿರೋದ್ಗಾರಿಣೌ - ರಕ್ತವನ್ನು ಕಕ್ಕುವ, ತೌತು - ಅವರೀರ್ವರಾದರೆ, ಪ್ರಹಾರೈಃ - ಹೊಡೆತಗಳಿಂದ, ಜನಿತಶ್ರಮೌ - ಹುಟ್ಟಿದ ಆಯಾಸವುಳ್ಳವರಾಗಿ, ಸುವಿಕ್ರಾಂತೌ - ಮಹಾ ಶೂರರಾದ, ಅಂಗಾ....ವ - ಅಂಗಾರಕ ಬುಧರಂತೆ, ಬಭೂವತುಃ - ಆದರು. ॥೨೮॥ ತತಃ - ಬಳಿಕ, ಕಪಿಕುಂಜರಃ - ವಾನರಶ್ರೇಷ್ಠನಾದ, ಪರಮತೇಜಸ್ವೀ-ಮಹಾ ತೇಜೋವಂತನಾದ, ಅಂಗದಃ - ಅಂಗದನು, ಬಹು....ತಂ - ಅನೇಕ ಪುಷ್ಪಗಳಿಂದಲೂ, ಫಲಗಳಿಂದಲೂ ತುಂಬಿದ, ವೃಕ್ಷಂ - ಮರವನ್ನು, ಉತ್ಪಾಟ್ಯ - ಕಿತ್ತು, ಸ್ಥಿತವಾನ್ - ನಿಂತನು, ಕಿಂಕಿ....ನ್ನಂ-ಕಿರುಗೆಜ್ಜೆಗಳ ತಂಡಗಳಿಂದ ಕೂಡಿರುವ, ಚರ್ಮಣಾಚ-ಚರ್ಮದಿಂದಲೂ, ಪರಿಷ್ಕೃತಂ-ಅಲಂಕೃತವಾದ, ವಿಪುಲಂ - ದೊಡ್ಡದಾದ, ಶುಭಂ - ಶುಭಕರವಾದ, ಖಡ್ಗಂಚ - ಕತ್ತಿಯನ್ನೂ,

---

ಬಿದ್ದನು. ॥ ೧೯-೨೫ ॥ ಹೀಗೆ ಅವನು ಗದೆಯನ್ನಪ್ಪಿ ಸ್ವಲ್ಪಕಾಲ ಹಾಗೆಯೇ ಬಿದ್ದಿದ್ದು ಆಮೇಲೆ ಎಚ್ಚೆತ್ತುಕೊಂಡು ಅದೇ ಗದೆಯಿಂದಲೇ ಅಂಗದನ ಎದೆಗೆ ಬಲವಾಗಿ ಹೊಡೆದನು. ಆಗ ಅವರಿಬ್ಬರಿಗೂ ಮುಷ್ಟಿಯುದ್ಧಕ್ಕೆ ಮೊದಲಾಯಿತು. ಆ ಸಮಯದಲ್ಲಿ ಅವರಿಬ್ಬರೂ ರಕ್ತವ್ಯಾಪ್ತವಾದ ಶರೀರವುಳ್ಳವರಾಗಿಯೂ ಬಾಣಾಘಾತದಿಂದ ಹುಟ್ಟಿದ ಆಯಾಸವುಳ್ಳವರಾಗಿಯೂ ಇದ್ದರೂ ಒಬ್ಬರನ್ನೊಬ್ಬರು ಪರಿಹಾಸ್ಯ ಮಾಡುತ್ತ ಹೊಡೆದರು. ಅವರಿಬ್ಬರ ಯುದ್ಧವೂ ಬುಧಾಂಗಾರಕರ ಯುದ್ಧದಂತೆ ಬಹು ಭಯಂಕರವಾಗಿದ್ದಿತು. ಸ್ವಲ್ಪ ಹೊತ್ತಿನ ಮೇಲೆ ವಾನರೋತ್ತಮನೂ, ಅತ್ಯಧಿಕ ತೇಜಸ್ಸಂಪನ್ನನೂ ಆದ ಅಂಗದನು ಪುಷ್ಪಗಳಿಂದಲೂ, ಫಲಗಳಿಂದಲೂ ತುಂಬಿದ ವೃಕ್ಷವನ್ನು ಆಯುಧವನ್ನಾಗಿ ಧರಿಸಿ ನಿಂತನು. ಮಹಾ ಬಲನಾದ ವಜ್ರದಂಷ್ಟ್ರನೂ ಸಹ ಉತ್ತಮೋತ್ತಮವಾದುದೂ, ಕಿಂಕಿಣೀಜಾಲದಿಂದ ಸೊಗಸಾದುದೂ, ಚರ್ಮದಖೇಡ್ಯದಿಂದಲಂಕೃತವಾದುದೂ ಆದ ಖಡ್ಗವನ್ನು ಧರಿಸಿ ಎದ್ದು ನಿಂತನು. ॥೨೬-೩೦॥

ಚರ್ಮಣಾಚ ಪರಿಷ್ಕೃತಂ ॥ ೩೦ ॥ ವಿಚಿತ್ರಾಂಶ್ಚೇರತುರ್ಮಾರ್ಗಾನ್ ರುಷಿತೌ ಕಪಿ ರಾಕ್ಷಸೌ । ಜಘ್ನತುಶ್ಚ ತದಾಽನ್ಯೋನ್ಯಂ ನಿರ್ದಯಂ ಜಯಕಾಂಕ್ಷಿಣೌ ॥ ೩೧ ॥ ವ್ರಣೈಸ್ಸಾಸ್ರೈರಶೋಭೇತಾಂ ಪುಷ್ಪಿತಾವಿವ ಕಿಂಶುಕೌ। ಯುಧ್ಯಮಾನೌ ಪರಿಶ್ರಾಂತೌ ಜಾನುಭ್ಯಾಮವನೀಂ ಗತೌ ॥೩೨॥ ನಿಮೇಷಾಂತರಮಾತ್ರೇಣ ಅಂಗದಃ ಕಪಿಕುಂಜರಃ। ಉದತಿಷ್ಠತ ದೀಪ್ತಾಕ್ಷೋ ದಂಡಾಹತ ಇವೋರಗಃ ॥ ೩೩ ॥ ನಿರ್ಮಲೇನ ಸುಧೌತೇನ ಖಡ್ಗೇನಾಽಸ್ಯ ಮಹಚ್ಛಿರಃ । ಜಘಾನ ವಜ್ರದಂಷ್ಟ್ರಸ್ಯ ವಾಲಿಸೂನುರ್ಮಹಾಬಲಃ ॥ ೩೪ ॥ ರುಧಿರೋಕ್ಷಿತಗಾತ್ರಸ್ಯ ಬಭೂವ ಪತಿತಂ ದ್ವಿಧಾ । ಸರೋಷಪರಿ

---

ಆರ್ಷಭಂಚರ್ಮಚ - ಖೇಡ್ಯವನ್ನೂ ಸಹ, ಜಗ್ರಾಹ - ಗ್ರಹಿಸಿದನು. ‡ ॥ ೨೯-೩೦ ॥ ಕಿಂಚ - ಇಷ್ಟು ಮಾತ್ರವಲ್ಲದೆ, ರುಷಿತೌ-ಕೋಪಿಷ್ಠರಾದ, ಕಪಿರಾಕ್ಷಸೌ-ವಾನರ ರಾಕ್ಷಸರಿಬ್ಬರೂ, ಜಯಕಾಂಕ್ಷಿಣೌ-ಜಯಾಪೇಕ್ಷೆಯುಳ್ಳವರಾಗಿ, ತದಾ - ಆ ಕಾಲದಲ್ಲಿ, ನಿರ್ದಯಂ - ದಯೆಯಿಲ್ಲದೆ, ಅನ್ಯೋನ್ಯಂ - ಒಬ್ಬರನ್ನೊಬ್ಬರು, ಜಘ್ನತುಃ - ಹೊಡೆದರು, ವಿಚಿತ್ರಾನ್ - ಆಶ್ಚರ್ಯಕರವಾದ, ಮಾರ್ಗಾನ್ - ಮಂಡಲಾದಿ ಮಾರ್ಗಗಳಲ್ಲಿ, ಚೇರತುಃ - ಸಂಚರಿಸಿದರು. ॥೩೧॥ ಸಾಸ್ರೈಃ - ರಕ್ತವನ್ನು ಸ್ರವಿಸುವ, ವ್ರಣೈಃ - ಗಾಯಗಳಿಂದ, ಪುಷ್ಪಿತೌ - ಹುವ್ವುಬಿಟ್ಟಿರುವ, ಕಿಂಶುಕಾವಿವ - ಮುತ್ತುಗದ ಗಿಡಗಳಂತೆ, ಅಶೋಭೆತಾಂ - ಹೊಳೆಯುತ್ತಿದ್ದರು, ಯುಧ್ಯಮಾನೌ - ಯುದ್ಧ ಮಾಡುತ್ತಿರುವದರಿಂದಕಾರಣ, ಪರಿಶ್ರಾಂತೌ - ಬಳಲಿ, ಜಾನುಭ್ಯಾಂ - ಮೊಳಕಾಲುಗಳಿಂದ, ಅವನೀಂ - ಭೂಮಿಯನ್ನು, ಗತೌ - ಹೊಂದಿದರು. ॥೩೨॥ ಕಪಿಕುಂಜರಃ - ವಾನರಶ್ರೇಷ್ಠನಾದ, ಅಂಗದಃ - ಅಂಗದನು, ನಿಮೇ....ಣ-ಕ್ಷಣಕಾಲದಲ್ಲಿ, ದಂಡಾಹತಃ - ದಂಡದಿಂದ ಹೊಡೆಯಲ್ಪಟ್ಟ, ಉರಗಇವ - ಸರ್ಪದಂತೆ, ದೀಪ್ತಾಕ್ಷಃ-ಹೊಳೆಯುವ ನೇತ್ರಗಳುಳ್ಳವನಾಗಿ, ಉದತಿಷ್ಠತ - ಎದ್ದನು. ॥ ೩೩ ॥ ಮಹಾಬಲಃ - ಬಹು ಬಲಿಷ್ಠನಾದ, ವಾಲಿಸೂನುಃ - ವಾಲಿಪುತ್ರನು, ಸುಧೌತೇನ - ಸಾಣೆಹಿಡಿದು, ನಿರ್ಮಲೇನ - ಸ್ವಚ್ಛವಾಗಿರುವ, ಖಡ್ಗೇನ - ಕತ್ತಿಯಿಂದ, ಅಸ್ಯವಜ್ರದಂಷ್ಟ್ರಸ್ಯ - ಈ ವಜ್ರದಂಷ್ಟ್ರನ, ಮಹತ್ - ಮಹತ್ತರವಾದ, ಶಿರಃ - ಶಿರಸ್ಸನ್ನು, ಜಘಾನ - ಕತ್ತರಿಸಿದನು. ॥ ೩೪ ॥ ರುಧಿ....ಸ್ಯ - ರಕ್ತದಿಂದ ತೋಯಿಸಲ್ಪಟ್ಟ ಶರೀರವುಳ್ಳ ಆ ವಜ್ರದಂಷ್ಟ್ರನ, ಸರೇ..... ಕ್ಷಂ - ಕೋಪದಿಂದ ತಿರುಗಿದ ಕಣ್ಣುಗಳಿಂದ ಯುಕ್ತವಾದ,

---

ಆಮೇಲೆ ಅವರಿಬ್ಬರೂ ಬಹುವಾಗಿ ಕೆರಳಿ ಮಂಡಲಾದಿ ಚಿತ್ರಗತಿಗಳನ್ನು ಮೆರೆದು ಒಬ್ಬರನ್ನೊಬ್ಬರು ಜಯಿಸಬೇಕೆಂಬ ಬಯಕೆಯಿಂದ ನಿರ್ದಯರಾಗಿ ಒಬ್ಬರನ್ನೊಬ್ಬರು ಬಲವಾಗಿ ಪ್ರಹರಿಸತೊಡಗಿದರು. ಆ ಸಮಯದಲ್ಲಿ ಆ ವಾನರರಾಕ್ಷಸರಿಬ್ಬರೂ ಬಹು ವಿಚಿತ್ರವಾದ ಯುದ್ಧವನ್ನು ಮಾಡಿ ಹೂ ಮೊಳೆತ ಮುತ್ತುಗದ ಮರಗಳಂತೆ ಶೋಭಿಸುತ್ತ, ಆಯಾಸಗೊಂಡು ಸ್ವಲ್ಪಹೊತ್ತು ಮೊಣಕಾಲುಗಳನ್ನು ಭೂಮಿಯಮೇಲಿಟ್ಟು ಹೊಡೆದಾಡಿದರು. ಸ್ವಲ್ಪಹೊತ್ತಿನಮೇಲೆ ವಾನರೋತ್ತಮನಾದ ಅಂಗದನು ಕೆರಳಿ ಕಣ್ಣುಗಳನ್ನು ಕೆಂಪಗೆ ಮಾಡಿಕೊಂಡು, ದೊಣ್ಣೆಯಿಂದ ಹೊಡೆದೆಬ್ಬಿಸಿದ ಮಹಾ ಸರ್ಪದಂತೆ ಮೇಲಕ್ಕೆದ್ದು ಮೊನಚಾದ ಮತ್ತು ಶುಭ್ರವಾದ ಕತ್ತಿಯಿಂದ ಆ ವಜ್ರದಂಷ್ಟ್ರನ ತಲೆಗೆ ಬಲವಾದ ಪೆಟ್ಟನ್ನಿಟ್ಟನು. ಆಗ ರಕ್ತದಿಂದ ವ್ಯಾಪ್ತವಾದ ಶರೀರವುಳ್ಳ ಆ ವಜ್ರದಂಷ್ಟ್ರನು

---

‡ ಇಲ್ಲಿ ಅಂಗದನು ಯಾವ ಯಾವ ಆಯುಧಗಳನ್ನು ಗ್ರಹಿಸಿದನೋ, ಅವುಗಳನ್ನು ವಜ್ರದಂಷ್ಟ್ರನೂ ಸಹಾ ಗ್ರಹಿಸಿದನೆಂದು ಭಾವವು.

ವೃತ್ತಾಕ್ಷಂ ಶುಭಂ ಖಡ್ಗಹತಂ ಶಿರಃ ||೩೫|| ವಜ್ರದಂಷ್ಟ್ರಂ ಹತಂ ದೃಷ್ಟ್ವಾ ರಾಕ್ಷಸಾ ಭಯಮೋಹಿತಾಃ | ತ್ರಸ್ತಾಃ ಪ್ರತ್ಯಪತರ್ಲಂಕಾಂ ವಧ್ಯಮಾನಾಃ ಪ್ಲವಂಗಮೈಃ || ೩೬ || ವಿಷಣ್ಣವದನಾ ದೀನಾ ಹ್ರಿಯಾ ಕಿಂಚಿದವಾಙ್ಮುಖಾಃ || ೩೭ ||

ನಿಹತ್ಯ ತಂ ವಜ್ರಧರಪ್ರಭಾವ
ಸ್ಸವಾಲಿಸೂನುಃ ಕಪಿಸೈನ್ಯಮಧ್ಯೇ |
ಜಗಾಮ ಹರ್ಷಂ ಮಹಿತೋಮಹಾಬಲ
ಸ್ಸಹಸ್ರನೇತ್ರಸ್ತ್ರಿದಶೈರಿವಾವೃತಃ || ೩೮ ||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಚತುಃಪಂಚಾಶಸ್ಸರ್ಗಃ.

---

ಶುಭಂ - ಶುಭಕರವಾದ, ಶಿರಃ - ಶಿರಸ್ಸು, ಖಡ್ಗಹತಂ - ಕತ್ತಿಯಿಂದ ಹೊಡೆಯಲ್ಪಟ್ಟುದಾಗಿ, ದ್ವಿಧಾ - ಎರಡು ಭಾಗಗಳಾಗಿ, ಪತಿತಂ - ಬಿದ್ದದು, ಬಭೂವ - ಆಯಿತು. ||೩೫|| ವಜ್ರದಂಷ್ಟ್ರಂ - ವಜ್ರದಂಷ್ಟ್ರನನ್ನು, ಹತಂ - ಹತನನ್ನಾಗಿ, ದೃಷ್ಟ್ವಾ - ಕಂಡು, ಭಯಮೋಹಿತಾಃ - ಭೀತಿಯಿಂದ ಪ್ರಜ್ಞೆತಪ್ಪಿದ, ರಾಕ್ಷಸಾಃ - ರಕ್ಕಸರು, ಪ್ಲವಂಗಮೈಃ - ವಾನರರಿಂದ, ವಧ್ಯಮಾನಾಃ - ಹೊಡೆಯಲ್ಪಡುವವರಾಗಿ, ತ್ರಸ್ತಾಃ - ಹೆದರಿ, ವಿಷಣ್ಣವದನಾಃ - ಶುಷ್ಕವಾದ ಮುಖವುಳ್ಳವರಾಗಿ, ಹ್ರಿಯಾ - ನಾಚಿಕೆಯಿಂದ, ಕಿಂಚಿದವಾಙ್ಮುಖಾಃ - ಕೊಂಚ ತಲೆಬೊಗ್ಗಿಸಿಕೊಂಡು, ಲಂಕಾಂಪ್ರತಿ - ಲಂಕಾಪಟ್ಟಣವನ್ನು ಕುರಿತು, ಅಪತರ್ - ಬಿದ್ದರು. || ೩೬-೩೭ || ವಜ್ರ....ವಃ - ಇಂದ್ರನ ಪರಾಕ್ರಮವುಳ್ಳ, ಸವಾಲಿಸೂನುಃ - ಆ ವಾಲಿಪುತ್ರನು, ಕಪಿಸೈನ್ಯಮಧ್ಯೇ - ವಾನರಸೇನೆಯ ನಡುವೆ, ತಂ - ಆ ವಜ್ರದಂಷ್ಟ್ರನನ್ನು, ನಿಹತ್ಯ - ಹೊಡೆದು, ತ್ರಿದಶೈಃ - ದೇವತೆಗಳಿಂದ, ಆವೃತಃ - ಸುತ್ತುವರೆದ, ಮಹಾಬಲಃ - ಬಹು ಬಲವುಳ್ಳ, ಸಹಸ್ರನೇತ್ರಇವ - ಇಂದ್ರನಂತೆ, ಮಹಿತಃ - ಪೂಜಿತನಾಗಿ, ಹರ್ಷಂ - ಸಂತೋಷವನ್ನು, ಜಗಾಮ - ಹೊಂದಿದನು. || ೩೮ ||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಚತುಃಪಂಚಾಶಸ್ಸರ್ಗಃ.

---

ಖಡ್ಗಾಹತಿಯಿಂದ ಕತ್ತರಿಸಿ ಇಬ್ಭಾಗವಾದ ತಲೆಯುಳ್ಳವನೂ, ಕೋಪದಿಂದ ಕೆರಳಿ ಕೆಂಪಾದ ಕಣ್ಣುಗಳುಳ್ಳವನೂ, ತಿರುಗಿದ ಕಣ್ಣಾಲಿಗಳುಳ್ಳವನೂ ಆಗಿ ನೆಲಕ್ಕುರುಳಿದನು. ||೩೧–೩೫|| ಈ ರೀತಿ ಹತನಾಗಿ ಹೋದ ಅವನನ್ನು ಕಂಡೊಡನೆಯೇ ರಾಕ್ಷಸರೆಲ್ಲರೂ ಭಯದಿಂದ ಮೋಹಿತರಾಗಿ ಹೋದರು. ಅವರೆಲ್ಲರೂ ವಾನರವೀರರಿಂದ ಬಹಳವಾಗಿ ಪ್ರಹರಿಸಲ್ಪಟ್ಟು, ಹೆದರಿ ಲಂಕಾನಗರಕ್ಕೆ ಓಡಿದರು. ಹಾಗೆ ಓಡುವಾಗ ಅವರೆಲ್ಲರೂ ವಿಷಣ್ಣರಾಗಿ ನಾಚಿಕೆಯಿಂದ ತಲೆತಗ್ಗಿಸಿಕೊಂಡು ಹಿಂದೊಮ್ಮೆ ನೋಡಿ ವಾನರರಟ್ಟಿಬರುತ್ತಿರಲು ಮತ್ತಷ್ಟು ಹೆದರಿ ಇನ್ನೂ ವೇಗವಾಗಿ ಓಡಿಹೋದರು. ಆ ಸಮಯದಲ್ಲಿ ಮಹೇಂದ್ರನಿಗೆ ಸಮಾನವಾದ ಪರಾಕ್ರಮವುಳ್ಳ ಅಂಗದನು ಆ ವಜ್ರದಂಷ್ಟ್ರನನ್ನು ಸಂಹರಿಸಿ ವಾನರಸೈನ್ಯಮಧ್ಯದಲ್ಲಿ ಮಹಾಬಲನಾದ ಮಹೇಂದ್ರನು ದೇವತೆಗಳೊಡಗೂಡಿರುವಂತೆ ಸಂತುಷ್ಟಸ್ವಾಂತನಾಗಿದ್ದನು. ||೩೬–೩೮||

ಇಂತಿದು ಅಂಗದಕೃತ ವಜ್ರದಂಷ್ಟ್ರಹನನ ವೃತ್ತಾಂತವೆಂಬ ಐವತ್ತನಾಲ್ಕನೆಯ ಸರ್ಗವು ಸಮಾಪ್ತವಾದುದು.



# ಯುದ್ಧಕಾಂಡೇ ಪಂಚಪಂಚಾಶಸ್ಸರ್ಗಃ

ವಜ್ರದಂಷ್ಟ್ರಂ ಹತಂ ಶ್ರುತ್ವಾ ವಾಲಿಪುತ್ರೇಣ ರಾವಣಃ । ಬಲಾಧ್ಯಕ್ಷಮುವಾಚೇದಂ ಕೃತಾಂಜಲಿಮುಪಸ್ಥಿತಂ ॥ ೧ ॥ "ಶೀಘ್ರಂ ನಿರ್ಯಾಂತು ದುರ್ಧರ್ಷಾ ರಾಕ್ಷಸಾ ಭೀಮವಿಕ್ರಮಾಃ । ಅಕಂಪನಂ ಪುರಸ್ಕೃತ್ಯ ಸರ್ವಶಾಸ್ತ್ರಪ್ರಕೋವಿದಂ ॥ ೨ ॥ ಏಷ ಶಾಸ್ತಾ ಚ ಗೋಪ್ತಾ ಚ ನೇತಾ ಚ ಯುಧಿ ಸಮ್ಮತಃ । ಭೂತಿಕಾಮಶ್ಚ ಮೇ ನಿತ್ಯಂ ನಿತ್ಯಂಚ ಸಮರಪ್ರಿಯಃ ॥ ೩ ॥ ಏಷ ಜೇಷ್ಯತಿ ಕಾಕುತ್‌ಸ್ಥೌ ಸುಗ್ರೀವಂಚ ಮಹಾಬಲಂ । ವಾನರಾಂಶ್ಚಾಪರಾನ್ ಘೋರಾನ್ ಹನಿಷ್ಯತಿ ಪರಂತಪಃ ॥ ೪ ॥ ಪ್ರತಿಗೃಹ್ಯ

---

ರಾವಣಃ - ರಾವಣನು, ವಜ್ರದಂಷ್ಟ್ರಂ - ವಜ್ರದಂಷ್ಟ್ರನನ್ನು, ವಾಲಿಪುತ್ರೇಣ - ಅಂಗದನಿಂದ, ಹತಂ - ಹತನಾದವನನ್ನಾಗಿ, ಶ್ರುತ್ವಾ - ಕೇಳಿ, ಕೃತಾಂಜಲಿಂ - ಅಂಜಲಿಬದ್ಧನಾಗಿ, ಅವಸ್ಥಿತಂ - ನಿಂತಿರುವ, ಬಲಾಧ್ಯಕ್ಷಂ - ಸೇನಾನಾಯಕನಾದ ಪ್ರಹಸ್ತನನ್ನು ಕುರಿತು, ಇದಂ - ಈ ಮಾತನ್ನು, ಉವಾಚ - ಹೇಳಿದನು. ॥ ೧ ॥ ಭೀಮವಿಕ್ರಮಾಃ - ಭಯಂಕರ ಪರಾಕ್ರಮವುಳ್ಳ, ದುರ್ಧರ್ಷಾಃ - ತಿರಸ್ಕರಿಸಲಸಾಧ್ಯರಾದ, ರಾಕ್ಷಸಾಃ - ರಕ್ಕಸರು, ಸರ್ವ....ದಂ - ಸಮಸ್ತ ಶಸ್ತ್ರಾಸ್ತ್ರ ಶಾಸ್ತ್ರಗಳಲ್ಲಿಯೂ ಪಂಡಿತನಾದ, ಅಕಂಪನಂ - ಅಕಂಪನನನ್ನು, ಪುರಸ್ಕೃತ್ಯ - ಮುಂದು ಮಾಡಿಕೊಂಡು, ಶೀಘ್ರಂ - ಜಾಗ್ರತೆಯಾಗಿ, ನಿರ್ಯಾಂತು - ಹೊರಡಲಿ ॥ ೨ ॥ ಏಷಃ - ಇವನು, ಶಾಸ್ತಾ ಚ - ಶತ್ರುಸೇನೆಗಳನ್ನು ನಿಗ್ರಹಿಸುವವನು, ಗೋಪ್ತಾ ಚ - ತನ್ನ ಸೇನೆಯನ್ನು ರಕ್ಷಿಸುವವನು, ನೇತಾ ಚ - ಸೇನಾನಾಯಕನು, ಯುಧಿ - ಕಾಳಗದಲ್ಲಿ, ಸಮ್ಮತಃ - ಪ್ರಸಿದ್ಧನು, ನಿತ್ಯಂ - ನಿರಂತರವೂ, ಮೇ - ನನ್ನ, ಭೂತಿಕಾಮಶ್ಚ - ಅಭಿವೃದ್ಧಿಯನ್ನೂ ಬಯಸುವವನು, ನಿತ್ಯಂ - ಯಾವಾಗಲೂ, ಸಮರಪ್ರಿಯಶ್ಚ - ಯುದ್ಧದಲ್ಲಿ ವಿಶ್ವಾಸವುಳ್ಳವನು. ॥ ೩ ॥ ಏಷಃ - ಇವನು, ಕಾಕುತ್‌ಸ್ಥೌ - ರಾಮಲಕ್ಷ್ಮಣರನ್ನೂ, ಮಹಾಬಲಂ - ಬಹು ಬಲವುಳ್ಳ, ಸುಗ್ರೀವಂಚ - ಸುಗ್ರೀವನನ್ನೂ ಸಹ, ಜೇಷ್ಯತಿ - ಜಯಿಸುವನು, ಪರಂತಪಃ-ಶತ್ರುಸಂಹಾರಕನಾದ ಇವನು, ಘೋರಾನ್-ಭಯಂಕರರಾದ, ಅಪರಾನ್-

---

ಆ ಪ್ರಕಾರವಾಗಿ ವಾಲಿಪುತ್ರನಾದ ಅಂಗದನಿಂದ ವಜ್ರದಂಷ್ಟ್ರಾಸುರನು ಹತನಾದ ವೃತ್ತಾಂತವನ್ನು ಕೇಳಿದೊಡನೆಯೇ ರಾವಣಾಸುರನು ತನ್ನ ಸಮೀಪದಲ್ಲಿ ಬದ್ಧಾಂಜಲಿ ಪುಟನಾಗಿ ನಿಂತಿದ್ದ ಪ್ರಹಸ್ತನೆಂಬ ಬಲಾಧ್ಯಕ್ಷನನ್ನು ಕುರಿತು, "ಎಲೈ ರಾಕ್ಷಸೋತ್ತಮನಾದ ಪ್ರಹಸ್ತನೇ ! ಸಮಸ್ತ ಶಸ್ತ್ರಾಸ್ತ್ರಕೋವಿದನಾದ ಅಕಂಪನನನ್ನು ಮುಂದುಮಾಡಿಕೊಂಡು ಭಯಂಕರ ಪರಾಕ್ರಮಶಾಲಿಗಳಾದ ರಾಕ್ಷಸವೀರರೆಲ್ಲರೂ ಯುದ್ಧಕ್ಕೆ ಹೊರಡುವಂತೆ ಆಜ್ಞಾಪಿಸು. ಈ ಅಕಂಪನನು ಶತ್ರುಸೈನ್ಯವನ್ನು ನಿಗ್ರಹಿಸುವುದರಲ್ಲಿ ಬಹಳ ಸಮರ್ಥನಾಗಿರುವನು. ತನ್ನ ಸೈನ್ಯವನ್ನು ಸಂರಕ್ಷಿಸುವುದರಲ್ಲಿಯೂ ಈತನು ನಿಪುಣನಾದವನು. ಈತನು ಸೇನಾಧಿಪತಿಯಾದವನು ಮಾತ್ರವಲ್ಲದೆ ಯುದ್ಧಪ್ರಿಯನೂ ಆಗಿರುವನು. ಆದುದರಿಂದ ಈತನು ಶತ್ರುಗಳನ್ನು ತಾಪಗೊಳಿಸುವವರೂ, ಕಕುತ್ಸ್ಥಕುಲೋತ್ಪನ್ನರೂ ಆದ ರಾಮಲಕ್ಷ್ಮಣರನ್ನೂ, ಮಹಾಬಲನಾದ ಸುಗ್ರೀವನನ್ನೂ, ಮಹಾ ಭಯಂಕರರಾದ ವಾನರವೀರರನ್ನೂ

ಸ ತಾಮಾಜ್ಞಾಂ ರಾವಣಸ್ಯ ಮಹಾಬಲಃ । ಬಲಂ ಸಂತ್ವರಯಾಮಾಸ ತದಾ ಲಘು ಪರಾಕ್ರಮಃ ॥ ೫ ॥ ತತೋ ನಾನಾಪ್ರಹರಣಾ ಭೀಮಾಕ್ಷಾ ಭೀಮದರ್ಶನಾಃ । ನಿಷ್ಪೇತೂ ರಕ್ಷಸಾಂ ಮುಖ್ಯಾ ಬಲಾಧ್ಯಕ್ಷಪ್ರಚೋದಿತಾಃ ॥ ೬ ॥ ರಥಮಾಸ್ಥಾಯ ವಿಪುಲಂ ತಪ್ತಕಾಂಚನಕುಂಡಲಃ । ಮೇಘಾಭೋ ಮೇಘವರ್ಣಶ್ಚ ಮೇಘಸ್ವನ ಮಹಾಸ್ವನಃ । ರಾಕ್ಷಸೈಸ್ಸಂವೃತೋ ಭೀಮೈಸ್ತದಾ ನಿರ್ಯಾತ್ಯಕಂಪನಃ ॥ ೭ ॥ ನಹಿ ಕಂಪಯಿತುಂ ಶಕ್ಯಸ್ಸುರೈರಪಿ ಮಹಾಮೃಧೇ । ಅಕಂಪನಸ್ತತಸ್ತೇಷಾಮಾದಿತ್ಯ ಇವ ತೇಜಸಾ ॥ ೮ ॥ ತಸ್ಯ ನಿರ್ಧಾವಮಾನಸ್ಯ ಸಂರಬ್ಧಸ್ಯ ಯುಯುತ್ಸಯಾ । ಅಕಸ್ಮಾ

---

ಇತರ, ವಾನರಾಂಶ್ಚ - ಕಪಿಗಳನ್ನೂ ಕೂಡಾ, ಹನಿಷ್ಯತಿ - ಹೊಡೆವನು. ॥ ೪ ॥ ಲಘು....ಮಃ - ಚುರುಕಾದ ಪರಾಕ್ರಮವುಳ್ಳ, ಮಹಾಬಲಃ - ಬಹು ಬಲಿಷ್ಠನಾದ, ಸಃ - ಆ ಪ್ರಹಸ್ತನು, ರಾವಣಸ್ಯ-ರಾವಣನ, ತಾಮಾಜ್ಞಾಂ - ಆ ಅಪ್ಪಣೆಯನ್ನು, ಪರಿಗೃಹ್ಯ - ತೆಗದುಕೊಂಡು, ತದಾ - ಆಗ, ಬಲಂ - ಸೈನ್ಯವನ್ನು, ಸಂತ್ವರಯಾಮಾಸ - ತ್ವರೆಗೊಳಿಸಿದನು. ॥ ೫ ॥ ತತಃ - ಅನಂತರದಲ್ಲಿ, ನಾನಾಪ್ರಹರಣಾಃ - ಅನೇಕವಿಧವಾದ ಆಯುಧಗಳುಳ್ಳ, ಭೀಮಾಕ್ಷಾಃ - ಭಯಂಕರವಾದ ನೇತ್ರಗಳುಳ್ಳ, ರಕ್ಷಸಾಂಮುಖ್ಯಾಃ - ರಾಕ್ಷಸ ಮುಖ್ಯರಾದವರು, ಬಲಾ....ತಾಃ - ಸೇನಾನಾಯಕನಿಂದ ಪ್ರೇರಿಸಲ್ಪಟ್ಟವರಾಗಿ, ನಿಷ್ಪೇತುಃ - ಹೊರಟರು. ॥೬॥ ತದಾ - ಆ ಕಾಲದಲ್ಲಿ, ಮೇಘಾಭಃ - ಮೇಘದಂತೆ ಸ್ಥೂಲವಾದ ಶರೀರವುಳ್ಳ, ಮೇಘವರ್ಣಶ್ಚ - ಮುಗಿಲಿನ ಬಣ್ಣವುಳ್ಳ, ಮೇಘ....ನಃ - ಗುಡುಗಿನ ಧ್ವನಿಯಂತೆ ದೊಡ್ಡ ಧ್ವನಿಯುಳ್ಳ, ತಪ್ತ....ಲಃ - ಅಪರಂಜಿಯ ಕುಂಡಲಗಳುಳ್ಳ, ಅಕಂಪನಃ - ಅಕಂಪನು, ವಿಪುಲಂ - ದೊಡ್ಡದಾಗಿರುವ, ರಥಂ - ತೇರನ್ನು, ಆಸ್ಥಾಯ - ಏರಿ, ಭೀಮೈಃ - ಭಯಂಕರವಾದ, ರಾಕ್ಷಸೈಃ-ರಕ್ಕಸರಿಂದ, ಸಂವೃತಃ-ಸುತ್ತುವರೆದವನಾಗಿ, ನಿರ್ಯಾತಿ ಬಂದನಷ್ಟೆ. ॥ ೭ ॥ ಹಿ - ಯಾವ ಕಾರಣದಿಂದ, ಮಹಾಮೃಧೇ - ದೊಡ್ಡ ಕಾಳೆಗದಲ್ಲಿ, ಸುರೈರಪಿ - ದೇವತೆಗಳಿಂದಲೂ, ಕಂಪಯಿತುಂ - ಕಂಪಿಸುವಂತೆ ಮಾಡುವುದಕ್ಕೆ, ನಶಕ್ಯಃ - ಅಸಾಧ್ಯನೋ, ತತಃ - ಆ ಕಾರಣದಿಂದ, ಅಕಂಪನಃ - ಅಕಂಪನ ಶಬ್ದವಾಚ್ಯನಾದ ಅಂಥಾ ಅಕಂಪನನು, ತೇಷಾಂ-ಆ ರಾಕ್ಷಸರ ಮಧ್ಯದಲ್ಲಿ, ತೇಜಸಾ-ಬೆಳಕಿನಿಂದ, ಆದಿತ್ಯಇವಸ್ಥಿತಃ-ಸೂರ್ಯನಂತೆ ಇದ್ದನು. ॥೮॥ ಯುಯುತ್ಸಯಾ-ಯುದ್ಧೇಚ್ಛೆಯಿಂದ, ಸಂರಬ್ಧಸ್ಯ - ತ್ವರೆಯುಳ್ಳವನಾಗಿ, ನಿರ್ಧಾವಮಾನಸ್ಯ - ಬರುತ್ತಿರುವ, ತಸ್ಯ -

---

ಜಯಿಸಬಲ್ಲನೆಂಬುದರಲ್ಲಿ ಸಂದೇಹವಿಲ್ಲವು" ಎಂದು ಹೇಳಿದನು. ಆಗಲಾ ಪ್ರಹಸ್ತನು ಪ್ರಭುವಾದ ರಾವಣನ ಅಪ್ಪಣೆಯನ್ನು ಶಿರಸಾವಹಿಸಿ ರಾಕ್ಷಸಸೈನ್ಯವೆಲ್ಲವನ್ನೂ ಜಾಗ್ರತೆಯಾಗಿ ಯುದ್ಧಕ್ಕೆ ಹೊರಡಿಸಿದನು. ॥ ೧—೫ ॥ ಆಗ ನಾನಾವಿಧಗಳಾದ ಆಯುಧಗಳನ್ನು ಧರಿಸಿರುವವರೂ, ಭಯಂಕರಾಕಾರರೂ ಆದ ರಾಕ್ಷಸರನೇಕರು ಬಲಾಧ್ಯಕ್ಷನಾದ ಪ್ರಹಸ್ತನಿಂದ ಪ್ರೇರಿತರಾಗಿ ಮಹೋತ್ಸಾಹಪೂರಿತರಾಗಿ ಹೊರಹೊರಟರು. ಆಗಲೇ ಪುಟಪಾಕಶೋಧಿತವಾದ ಸುವರ್ಣದ ಕರ್ಣಕುಂಡಲಗಳನ್ನು ಧರಿಸಿದವನೂ, ಮೇಘಕಾಂತಿಯುಳ್ಳವನೂ, ಮಹಾಮೇಘಕ್ಕೆ ಸಮಾನನಾದವನೂ, ಮೇಘಧ್ವನಿಯನ್ನು ಹೋಲುವ ಕಂಠಸ್ವರ ಧ್ವನಿಯುಳ್ಳವನೂ ಆದ ಅಕಂಪನನು ಭಯಂಕರವಾದ ಅನೇಕ ರಾಕ್ಷಸರೊಡಗೂಡಿದವನಾಗಿ ರಥವೇರಿ ಹೊರಟನು. ಅವನು ಯುದ್ಧರಂಗದಲ್ಲಿ ದೇವತೆಗಳಿಂದ ಎದುರಿಸಲೂ, ತಿರಸ್ಕರಿಸಲೂ ಆಸಾಧ್ಯನಾದವನು; ಆದುದರಿಂದಲೇ ಇವನಿಗೆ ಅಕಂಪನನೆಂಬ ಹೆಸರು ಬಂದುದು. ಸೂರ್ಯ

ದ್ದೈನ್ಯಮಾಗಚ್ಛದ್ಧಯಾನಾಂ ರಥವಾಹಿನಾಂ ॥ ೯ ॥ ವ್ಯಸ್ಫುರನ್ನಯನಂ ಚಾಸ್ಯ ಸವ್ಯಂ ಯುದ್ಧಾಭಿನಂದಿನಃ । ವಿವರ್ಣೋ ಮುಖವರ್ಣಶ್ಚ ಗದ್ಗದಶ್ಚಾಭವತ್ಸ್ವನಃ । ಅಭವತ್ಸುದಿನೇಚಾಪಿ ದುರ್ದಿನಂ ರೂಕ್ಷಮಾರುತಂ ॥ ೧೦-೧೧ ॥ ಊಚುಃ ಖಗಾ ಮೃಗಾಸ್ಸರ್ವೇ ವಾಚಃ ಕ್ರೂರಾ ಭಯಾವಹಾಃ । ಸಸಿಂಹೋಪಚಿತಸ್ಕಂಧಃ ಶಾರ್ದೂಲಸಮವಿಕ್ರಮಃ । ತಾನುತ್ಪಾತಾನಚಿಂತ್ಯೈವ ನಿರ್ಜಗಾಮ ರಣಾಜಿರಂ ॥೧೨॥ ತದಾನಿರ್ಗಚ್ಛತಸ್ತಸ್ಯ ರಕ್ಷಸಸ್ಸಹರಾಕ್ಷಸೈಃ । ಬಭೂವ ಸುಮಹಾನ್ನಾದಃ ಕ್ಷೋಭ

---

ಆ ಅಕಂಪನನ, ರಥವಾಹಿನಾಂ - ರಥವನ್ನೆಳೆಯುವ, ಹಯಾನಾಂ - ಕುದುರೆಗಳ, (ಮನಃ - ಮನಸ್ಸು,) ಅಕಸ್ಮಾತ್ - ನಿಷ್ಕಾರಣವಾಗಿ, ದೈನ್ಯಂ - ದೀನತ್ವವನ್ನು, ಆಗಚ್ಛತ್ - ಹೊಂದಿತು. ॥೯॥ ಯುದ್ಧಾಭಿನಂದಿನಃ - ಯುದ್ಧದಿಂದ ಸಂತೋಷಿಸುತ್ತಲಿರುವ, ತಸ್ಯ - ಅವನ, ಸವ್ಯಂನಯನಂಚ - ಎಡಗಣ್ಣೂ, ವ್ಯಸ್ಫುರತ್ - ಚಲಿಸಿತು, ಮುಖವರ್ಣಶ್ಚ - ಮುಖದ ಬಣ್ಣವೂ ಕೂಡ, ವಿವರ್ಣಃ - ವಿಪರೀತ ವರ್ಣವುಳ್ಳದಾಯಿತು, ಸ್ವನಃ - ಕಂಠಧ್ವನಿಯು, ಗದ್ಗದಶ್ಚ - ಗದ್ಗದವಾದುದು, ಅಭವತ್ - ಆಯಿತು, ಸುದಿನೇಚಾಪಿ - ಮೇಘಾವರಣಕ್ಕೆ ಅಯೋಗ್ಯವಾದ ದಿವಸದಲ್ಲೂ ಕೂಡ, ರೂಕ್ಷಮಾರುತಂ - ಎದುರು ಗಾಳಿಯುಳ್ಳ, ದುರ್ದಿನಂ - ಮೇಘಾವರಣವು, ಅಭೂತ್ - ಆಯಿತು. ॥ ೧೦-೧೧ ॥ ಸರ್ವೇ - ಸಮಸ್ತವಾದ, ಖಗಾಃ - ಪಕ್ಷಿಗಳೂ, ಮೃಗಾಃ - ಮೃಗಗಳೂ, ಭಯಾವಹಾಃ - ಭಯವನ್ನುಂಟುಮಾಡುವ, ಕ್ರೂರಾಃ - ಕೇಳಲಸಾಧ್ಯವಾದ, ವಾಚಃ - ಮಾತುಗಳನ್ನು, ಊಚುಃ - ನುಡಿದುವು, ಸಿಂಹೋ....ಧಃ - ಸಿಂಹದಂತೆ ಎತ್ತರವಾದ ಸ್ಕಂಧಪ್ರದೇಶಗಳುಳ್ಳ, ಶಾರ್ದೂ....ಮಃ - ಹೆಬ್ಬುಲಿಗೆ ಸಮಾನವಾದ ಪರಾಕ್ರಮವುಳ್ಳ, ಸಃ - ಆ ಕಂಪನನು, ತಾನ್ಉತ್ಪಾತಾನ್ - ಆ ದುರ್ನಿಮಿತ್ತಗಳನ್ನು, ಅಚಿಂತ್ಯೈವ - ಆಲೋಚಿಸದೆಯೇ, ರಣಾಜಿರಂ - ಯುದ್ಧರಂಗವನ್ನು ಕುರಿತು, ನಿರ್ಜಗಾಮ - ಹೊರಟನು. ॥ ೧೨ ॥ ತದಾ - ಆ ಕಾಲದಲ್ಲಿ, ರಾಕ್ಷಸೈಸ್ಸಹ - ರಾಕ್ಷಸರೊಡನೆ, ನಿರ್ಗಚ್ಛತಃ - ಹೊರಟುಬರುವ, ತಸ್ಯರಕ್ಷಸಃ - ಆ ರಾಕ್ಷಸನ ಸಂಬಂಧವಾದ, ಸುಮಹಾನ್ - ಮಹತ್ತರವಾದ, ನಾದಃ - ಘೋಷವು, ಸಾಗರಂ - ಸಮುದ್ರವನ್ನು, ಕ್ಷೋಭಯನ್ನಿವ-ಕದಡುವಂತಿರುವುದು, ಬಭೂವ-ಆಯಿತು. ॥ ೧೩ ॥ ತೇನಶಬ್ದೇನ - ಆ ಶಬ್ದದಿಂದ, ವಾನರಾಣಾಂ - ಕಪಿಗಳ, ಮಹಾಚಮೂಃ -

---

ನಂತೆ ಮಹಾ ತೇಜಸ್ವಿಯಾದ ಅವನು ಅಂತಹನು ಯುದ್ಧಮಾಡಬೇಕೆಂಬ ಬಯಕೆಯಿಂದ ರಥದಲ್ಲಿ ಮುಂದುವರಿಯುತ್ತಿರಲು, ರಥಕ್ಕೆ ಹೂಡಿದ್ದ ಕುದುರೆಗಳಿಗೆ ಇದ್ದಕ್ಕಿದ್ದಂತೆಯೇ ದೈನ್ಯತೆಯುಂಟಾಯಿತು. ॥ ೬-೯ ॥ ಇದೂ ಅಲ್ಲದೆ ಯುದ್ಧಾಭಿಲಾಷಿಯಾದ ಅವನ ಎಡಗಣ್ಣು ಅದಿರಿತು. ಬಹು ಕಾಂತಿಯುಕ್ತವಾದ ಅವನ ಮುಖವು ವಿವರ್ಣವಾಯಿತು. ಕಂಠಧ್ವನಿಯು ಗದ್ಗದವಾಯಿತು. ಇಷ್ಟೆಯಲ್ಲದೆ ಆ ದಿನವು ಶುಭದಿನವಾದರೂ ಅಂತರಿಕ್ಷದಲ್ಲೆಲ್ಲಾ ಮುಗಿಲುಗಳಾವರಿಸಿ ದುರ್ದಿನವಾಗಿ ಪರಿಣಮಿಸಿತು. ಸಮಸ್ತ ಮೃಗಗಳೂ, ಪಕ್ಷಿಗಳೂ ಕ್ರೂರವೂ ಭಯಂಕರವೂ ಆದ ಕೂಗುಗಳನ್ನು ಕೂಗಿದುವು. ಹೆಬ್ಬುಲಿಯ ಪರಾಕ್ರಮಕ್ಕೆ ಸಾಟಿಯಾದ ಪರಾಕ್ರಮವುಳ್ಳವನೂ, ಸಿಂಹಸ್ಕಂಧನೂ ಆದ ಆ ಅಕಂಪನನು ಆ ದುಶ್ಶಕುನಗಳಾವುದನ್ನೂ ಗಮನಿಸದೆಯೇ ಯುದ್ಧಭೂಮಿಗೆ ಹೊರಟನು. ಹೀಗೆ ಅವನು ಸಮಸ್ತ ರಾಕ್ಷಸಸೈನ್ಯದೊಡಗೂಡಿ ಹೋಗುತ್ತಿದ್ದ ಸಮಯದಲ್ಲುಂಟಾದ ಸಂಕುಲನಾದವು ಸಾಗರವನ್ನೂ ಉಲ್ಲಕಲ್ಲೋಲ ಮಾಡಿತು. ಆ ಮಹಾ ಧ್ವನಿಯನ್ನು ಕೇಳು

ಯನ್ನಿವ ಸಾಗರಂ ||೧೩|| ತೇನ ಶಬ್ದೇನ ವಿತ್ರಸ್ತಾ ವಾನರಾಣಾಂ ಮಹಾಚಮೂಃ | ದ್ರುಮಶೈಲಪ್ರಹರಣಾ ಯೋದ್ಧುಂ ಸಮವತಿಷ್ಠತ ||೧೪|| ತೇಷಾಂ ಯುದ್ಧಂ ಮಹಾರೌದ್ರಂ ಸಂಜಜ್ಞೇ ಹರಿರಕ್ಷಸಾಂ | ರಾಮರಾವಣಯೋರರ್ಥೇ ಸಮಭಿತ್ಯಕ್ತಜೀವಿನಾಂ ||೧೫|| ಸರ್ವೇಽಹ್ಯತಿಬಲಾಃ ಶೂರಾಸ್ಸರ್ವೇ ಪರ್ವತಸನ್ನಿಭಾಃ | ಹರಯೋ ರಾಕ್ಷಸಾಶ್ಚೈವ ಪರಸ್ಪರಜಿಘಾಂಸವಃ || ೧೬ || ತೇಷಾಂ ವಿನರ್ದತಾಂ ಶಬ್ದಸ್ಸಂಯುಗೇಽತಿತರಸ್ವಿನಾಂ | ಶುಶ್ರುವೇ ಸುಮಹಾನ್ ಕ್ರೋಧಾದನ್ಯೋನ್ಯಮಭಿಗರ್ಜತಾಂ ||೧೭|| ರಜಶ್ಚಾರುಣವರ್ಣಾಭಂ ಸುಭೀಮಮಭವದ್ಭೃಶಂ | ಉದ್ಧೂತಂ ಹರಿರಕ್ಷೋಭಿಸ್ಸಂ

---

ಮಹತ್ತರವಾದ ಸೈನ್ಯವು, ವಿತ್ರಸ್ತಾ - ಹೆದರಿತು, ದ್ರುಮ....ಣಾ - ವೃಕ್ಷಗಳೂ, ಪರ್ವತಗಳೂ ಆಯುಧಗಳಾಗಿ ಉಳ್ಳ ಆ ವಾನರಸೇನೆಯು, ಯೋದ್ಧುಂ - ಯುದ್ಧಮಾಡುವುದಕ್ಕೆ, ಸಮವತಿಷ್ಠತ - ನಿಂತಿತು. ||೧೪|| ರಾಮರಾವಣಯೋಃ - ರಾಮರಾವಣರ, ಅರ್ಥೇ - ನಿಮಿತ್ತವಾಗಿ, ಸಮ....ನಾಂ - ಬಿಡಲ್ಪಟ್ಟ ಪ್ರಾಣಗಳುಳ್ಳ, ತೇಷಾಂಹರಿರಕ್ಷಸಾಂ - ಆ ವಾನರರಾಕ್ಷಸರಿಗೆ, ಮಹಾರೌದ್ರಂ - ಬಹು ಭಯಂಕರವಾದ, ಯುದ್ಧಂ - ಕಾಳಗವು ಸಂಜಜ್ಞೇ - ಹುಟ್ಟಿತು. || ೧೫ || ಹರಯಃ - ವಾನರರು, ರಾಕ್ಷಸಾಶ್ಚೈವ - ರಾಕ್ಷಸರು, ಸರ್ವೇ - ಎಲ್ಲರೂ, ಅತಿಬಲಾಃ - ಬಹು ಬಲವುಳ್ಳವರು, ಶೂರಾಃ - ವೀರರು, ಸರ್ವೇ - ಎಲ್ಲರೂ, ಪರ್ವತಸನ್ನಿಭಾಃ - ಪರ್ವತಸದೃಶರು, ಪರಸ್ಪ....ವಃ - ಒಬ್ಬರನ್ನೊಬ್ಬರು ಹೊಡೆಯಲಿಚ್ಛೆಯುಳ್ಳವರು. || ೧೬ || ಸಂಯುಗೇ - ಕಾಳೆಗದಲ್ಲಿ, ವಿನರ್ದತಾಂ - ಸಿಂಹನಾದವನ್ನು ಮಾಡುವ, ಕ್ರೋಧಾತ್ - ಕೋಪದಿಂದ, ಅನ್ಯೋನ್ಯಂ - ಪರಸ್ಪರವಾಗಿ, ಅಭಿಗರ್ಜತಾಂ - ಎದುರಿಸಿ ಗರ್ಜಿಸುವ, ಅತಿತರಸ್ವಿನಾಂ - ಬಹು ಬಲವಂತರಾದ, ತೇಷಾಂ - ಆ ವಾನರರಾಕ್ಷಸರ, ಮಹಾನ್ - ಮಹತ್ತರವಾದ, ಶಬ್ದಃ - ಕೂಗು, ಶುಶ್ರುವೇ - ಕೇಳಿಸಿತು. || ೧೭ || ಹರಿರಕ್ಷೋಭಿಃ - ವಾನರ ರಾಕ್ಷಸರಿಂದ, ಉದ್ಧೂತಂ - ಹುಟ್ಟಿದ, ಅರುಣವರ್ಣಾಭಂ - ರಕ್ತವರ್ಣದ ಪದಾರ್ಥದ ಕಾಂತಿಯುಳ್ಳ, ಸುಭೀಮಂ - ಬಹು ಭಯಂಕರವಾದ, ರಜಶ್ಚಾಪಿ - ಧೂಳಿಯೂ ಕೂಡು

---

ತ್ತಲೇ ವಾನರಸೈನ್ಯವೆಲ್ಲವೂ ಭಯಚಕಿತವಾಯಿತು. ಆ ತರುವಾಯ ವಾನರವೀರರೆಲ್ಲರೂ ವೃಕ್ಷಗಳನ್ನೂ, ಪರ್ವತಗಳನ್ನೂ ಇನ್ನೂ ಅನೇಕ ಆಯುಧಗಳನ್ನು ತೆಗೆದುಕೊಂಡು ಯುದ್ಧ ಸನ್ನದ್ಧರಾಗಿ ನಿಂತರು. ಆಗೂ ವಾನರರಿಗೂ, ರಾಕ್ಷಸರಿಗೂ ಬಹು ಭಯಂಕರವಾದ ಯುದ್ಧಕ್ಕೆ ಮೊದಲಾಯಿತು. ಉಭಯಪಕ್ಷದವರೂ ತಮ್ಮತಮ್ಮ ಪ್ರಭುಗಳಿಗೆ ಜಯವಾಗ ಬೇಕೆಂಬ ಬಯಕೆಯಿಂದ ಪ್ರಾಣಗಳ ಮೇಲಣ ಆಶೆಯನ್ನೇ ತೊರೆದು ಘೋರವಾದ ಯುದ್ಧವನ್ನು ಮಾಡಲುಪಕ್ರಮಿಸಿದರು. ||೧೦–೧೫|| ಉಭಯಪಕ್ಷಗಳವರೂ ಮಹಾ ಪರಾಕ್ರಮಶಾಲಿಗಳಾದವರು ; ಎಲ್ಲರೂ ಮಹಾ ಬಲಾಢ್ಯರಾಗಿ ಪರ್ವತಗಳನ್ನೇ ಹೋಲಿದವರು. ಇಂತಹ ವಾನರರೂ, ರಾಕ್ಷಸರೂ ಆ ಸಮಯದಲ್ಲಿ ಒಬ್ಬರನ್ನೊಬ್ಬರು ಕೊಲ್ಲಬಯಸಿ ರಣೋತ್ಸುಕರಾಗಿ ಹೊಡೆದಾಡಲುಪಕ್ರಮಿಸಿದರು. ರಣರಂಗದಲ್ಲಿ ಮಹಾ ವೇಗಶಾಲಿಗಳಾದ ವಾನರರಾದರೊ ಸಿಂಹನಾದಗಳನ್ನು ಮಾಡುತ್ತಲೂ, ಕ್ರೋಧಾವೇಶದಿಂದ ಪರುಷವಾಕ್ಯಗಳನ್ನಾಡುತ್ತಲೂ, ಮಹಾದ್ಭುತ ಗರ್ಜನೆಗಳನ್ನು ಮಾಡುತ್ತಿದ್ದ ರಾಕ್ಷಸರೊಡನೆ ಯುದ್ಧ ಮಾಡಿದರು. ಆಗಲಾ ಸೇನೆಗಳಲ್ಲಿ ಹುಟ್ಟಿದ ಧ್ವನಿಯು ಬಹು ಭಯಂಕರವಾಗಿದ್ದಿತು. ರಣಾಂಗಣದಲ್ಲಿ ಆ ವಾನರ

ರುರೋಧ ದಿಶೋದಶ ॥೧೮॥ ಅನ್ಯೋನ್ಯಂ ರಜಸಾ ತೇನ ಕೌಶೇಯೋದ್ಧೂತ ಪಾಂಡುನಾ । ಸಂವೃತಾನಿಚ ಭೂತಾನಿ ದದೃಶುರ್ನರಣಾಜಿರೇ ॥೧೯॥ ನಧ್ವಜಾ ನ ಪತಾಕಾ ವಾ ವರ್ಮ ವಾ ತುರಗೋಪಿ ವಾ । ಆಯುಧಂ ಸ್ಯಂದನಂ ವಾಪಿ ದದೃಶೇ ತೇನ ರೇಣುನಾ ॥೨೦॥ ಶಬ್ದಶ್ಚ ಸುಮಹಾಂಸ್ತೇಷಾಂ ನರ್ದತಾಮಭಿಧಾವತಾಂ । ಶ್ರೂಯತೇ ತುಮುಲೇ ಯುದ್ಧೇ ನರೂಪಾಣಿ ಚಕಾಶಿರೇ ॥೨೧॥ ಹರೀನೇವ ಸುಸಂಕ್ರುದ್ಧಾ ಹರಯೋ ಜಘ್ನುರಾಹವೇ । ರಾಕ್ಷಸಾಶ್ಚಾಪಿ ರಕ್ಷಾಂಸಿ ನಿಜಘ್ನುಸ್ತಿಮಿರೇ ತದಾ ॥೨೨॥ ಪರಾಂಶ್ಚೈವ ವಿನಿಘ್ನಂತಸ್ಸ್ವಾಂಶ್ಚ ವಾನರರಾಕ್ಷಸಾಃ । ರುಧಿ

---

ಭೃಶಂ - ಬಹಳವಾಗಿ, ಅಭವತ್ - ಹುಟ್ಟಿ, ದಶದಿಶಃ - ಹತ್ತುದಿಕ್ಕುಗಳನ್ನೂ, ಸಂರುರೋಧ - ಮುಚ್ಚಿತು. ॥೧೮॥ ರಣಾಜಿರೇ - ರಣರಂಗದಲ್ಲಿ, ಕೌಶೇ....ನಾ - ಒಗೆದ ರೇಷ್ಮೆಯಂತೆ ಬೆಳ್ಳಗಿರುವ, ತೇನರಜಸಾ - ಆ ಧೂಳಿಯಿಂದ, ಸಂವೃತಾನಿ - ಆಚ್ಛಾದಿತವಾದ, ಭೂತಾನಿ - ವಾನರರಾಕ್ಷಸಲಕ್ಷಣವಾದ ಪ್ರಾಣಿಗಳು, ಅನ್ಯೋನ್ಯಂ-ಒಬ್ಬರನ್ನೊಬ್ಬರು, ನದದೃಶುಃ-ಕಾಣಲಿಲ್ಲವು. ॥೧೯॥ ತೇನರೇಣುನಾ-ಆ ಧೂಳಿಯಿಂದ, ಧ್ವಜಾಃ - ರಥಗಳಿಗೆ ಕಟ್ಟಿರುವ ನಿಶಾನಿಗಳು, ನ - ಕಾಣಿಸಲಿಲ್ಲ, ಪತಾಕಾವಾ - ಚಿಕ್ಕ ನಿಶಾನಿಗಳಾಗಲಿ, ನ - ಕಾಣಿಸಲಿಲ್ಲ, ವರ್ಮವಾ - ಕವಚವಾಗಲಿ, ತುರಗೋಪಿವಾ - ಕುದುರೆಯಾಗಲಿ, ಆಯುಧಂ - ಆಯುಧವಾಗಲಿ, ಸ್ಯಂದನಂವಾಪಿ - ರಥವಾಗಲಿ, ನದದೃಶೇ - ಕಾಣಿಸಲಿಲ್ಲ ॥೨೦॥ ತುಮುಲೇ - ಸಂಕುಲವಾದ, ಯುದ್ಧೇ - ಕಾಳಗದಲ್ಲಿ, ನರ್ದತಾಂ - ಕೂಗುತ್ತ, ಅಭಿಧಾವತಾಂ - ತೇಷಾಂ - ಆ ಕಪಿರಾಕ್ಷಸರ, ಸುಮಹಾ‌ನ್ - ಮಹತ್ತರವಾದ, ಶಬ್ದಶ್ಚ - ಶಬ್ದವೂ ಕೂಡ, ಶ್ರೂಯತೇ-ಕೇಳಲ್ಪಡುತ್ತಿತ್ತು, ರೂಪಾಣಿ - ರೂಪಗಳುಮಾತ್ರ, ನಚಕಾಶಿರೇ - ಪ್ರಕಾಶಿಸಲಿಲ್ಲ. ॥೨೧॥ ತದಾ - ಆಗ, ತಿಮಿರೇ - ಗಾಢಾಂಧಕಾರದಲ್ಲಿ, ಆಹವೇ-ಯುದ್ಧದಲ್ಲಿ, ಹರಯಃ-ವಾನರರು, ಸುಸಂಕ್ರುದ್ಧಾಃ-ಮಹಾ ಕೋಪವುಳ್ಳವರಾಗಿ, ಹರೀನೇವ - ಕಪಿಗಳನ್ನೇ, ಜಘ್ನುಃ - ಹೊಡದರು, ರಾಕ್ಷಸಾಶ್ಚಾಪಿ - ರಾಕ್ಷಸರೂ ಕೂಡ, ರಕ್ಷಾಂಸಿ - ರಕ್ಕಸರನ್ನೇ ನಿಜಘ್ನುಃ - ಹೊಡೆದರು. ॥೨೨॥ ತದಾ - ಆ ಕಾಲದಲ್ಲಿ, ವಾನ....ಸಾಃ - ವಾನರರೂ, ರಾಕ್ಷಸರೂ, ಪರಾಂಶ್ಚೈವ - ಶತ್ರುಗಳನ್ನೂ, ಸ್ವಾಂಶ್ಚ - ಸ್ವಕೀಯರನ್ನೂ ಸಹ, ವಿನಿಘ್ನಂತಃ - ಹೊಡೆಯುವವರಾಗಿ, ಮಹೀಂ - ಭೂಮಿಯನ್ನು, ರುಧಿರಾದ್ರಾಂ - ರಕ್ತದಿಂದ ತೊಯಿಸಲ್ಪಟ್ಟುದನ್ನಾಗಿ, ಪಂಕಾ....ನಾಂ - ಕೇಸರಿನಿಂದ ಲೇಪನ ಮಾಡಲ್ಪಟ್ಟುದನ್ನಾಗಿ,

---

ರಾಕ್ಷಸರ ಪಾದಘಟ್ಟನಗಳಿಂದುಂಟಾದ ಭಯಂಕರವೂ, ರಕ್ತಿಮವೂ ಆದ ಧೂಳಿಯು ದಶದಿಶೆಗಳಲ್ಲಿಯೂ ಹರಡಿ ದಿಗ್ವಿಭಾಗಗಳೇ ಕಾಣದಾದುವು. ಇಷ್ಟೆಯಲ್ಲದೆ ಆ ಧೂಳಿಯು ದಟ್ಟವಾಗಿ ಎತ್ತೆತ್ತಲೂ ವ್ಯಾಪಿಸಿದ್ದುದರಿಂದ ಒಬ್ಬರನ್ನೊಬ್ಬರು ಗುರ್ತರಿಯದೆಯೂ ಹೋದರು. ಧ್ವಜಗಳು, ಪತಾಕೆಗಳು, ಕವಚಗಳು, ಕುದುರೆಗಳು, ಆಯುಧಗಳು, ರಥಗಳು ಎಲ್ಲವೂ ಆ ಧೂಳಿಯಿಂದ ಮುಚ್ಚಿಹೋದುವು. ॥೧೬–೨೦॥ ಆ ಸಂಕುಲ ಯುದ್ಧದಲ್ಲಿ ಅಟ್ಟಿ ಬರುತ್ತಿದ್ದ ವಾನರರ ಮತ್ತು ರಾಕ್ಷಸರ ಭಯಂಕರ ಧ್ವನಿಗಳು ಮಾತ್ರ ಕೇಳಿಸುತ್ತಿದ್ದುವಾಗಲಿ ಯಾರೊಬ್ಬರ ರೂಪವೂ ಕಾಣಿಸದೆ ಹೋಯಿತು. ಈ ಕಾರಣದಿಂದ ಮಹಾ ಕುಪಿತರಾದ ವಾನರರು ತಮ್ಮವರನ್ನೇ ಕೊಲ್ಲುತ್ತಿದ್ದರು. ರಾಕ್ಷಸರೂ ಅಂತೆಯೇ ತಂತಮ್ಮವರನ್ನೇ ಕೊಲ್ಲುತ್ತಿದ್ದರು. ಎಲ್ಲೆಲ್ಲಿಯೂ ಧೂಳಿತುಂಬಿ ಅಂಧಕಾರವೇ ಕವಿದಿದ್ದುದರಿಂದ ಈ ರೀತಿಯಾದ ಯುದ್ಧವು ಸ್ವಲ್ಪಕಾಲ ನಡೆಯಿತು. ಆ ಬಳಿಕ ಶಸ್ತ್ರಘಾತಗಳಿಂದ ಹೊರಹೊರಟ ರಕ್ತಪ್ರವಾಹವು

ರಾದ್ಯಾಂ ತದಾ ಚಕ್ರುರ್ಮಹೀಂ ಪಂಕಾನುಲೇಪನಾಂ || ೨೩ || ತತಸ್ತು ರುಧಿರೌಘೇಣ ಸಿಕ್ತಂ ವ್ಯಪಗತಂ ರಜಃ | ಶರೀರಶವಸಂಕೀರ್ಣಾ ಬಭೂವಚ ವಸುಂಧರಾ||೨೪|| ದ್ರುಮಶಕ್ತಿಶಿಲಾಪ್ರಾಸೈರ್ಗದಾಪರಿಘತೋಮರೈಃ | ಹರಯೋ ರಾಕ್ಷಸಾಶ್ಚೈವ ಜಘ್ನು ರನ್ಯೋನ್ಯಮೋಜಸಾ || ೨೫ || ಬಾಹುಭಿಃ ಪರಿಘಾಕಾರೈರ್ಯುಧ್ಯಂತಃ ಪರ್ವತೋಪಮಾಃ | ಹರಯೋ ಭೀಮಕರ್ಮಾಣೋ ರಾಕ್ಷಸಾನ್ ಜಘ್ನುರಾಹವೇ ||೨೬|| ರಾಕ್ಷಸಾಸ್ತ್ವಪಿ ಸಂಕ್ರುದ್ಧಾಃ ಪ್ರಾಸತೋಮರಪಾಣಯಃ | ಕಪೀನ್ನಿಜಘ್ನಿರೇ ತತ್ರ ಶಸ್ತ್ರೈಃ ಪರಮದಾರುಣೈಃ ||೨೭|| ಅಕಂಪನಸ್ತು ಸಂಕ್ರುದ್ಧೋ ರಾಕ್ಷಸಾನಾಂ ಚಮೂಪತಿಃ | ಸಂಹರ್ಷಯತಿ ತಾನ್ ಸರ್ವಾನ್ ರಾಕ್ಷಸಾನ್ ಭೀಮವಿಕ್ರಮಾನ್ ||೨೮|| ಹರಯಸ್ತ್ವಪಿ

ಚಕ್ರುಃ - ಮಾಡಿದರು. || ೨೩ || ತತಸ್ತು - ಆ ಬಳಿಕಲಾದರೆ, ರುಧಿರೌಘೇಣ - ರಕ್ತಪ್ರವಾಹದಿಂದ, ರಜಃ - ಧೂಳಿಯು, ಸಿಕ್ತಂ - ತೊಯಿಸಲ್ಪಟ್ಟುದಾಗಿ, ವ್ಯಪಗತಂ - ಹೋಗಲಾಡಿಸಲ್ಪಟ್ಟಿತು, ವಸುಂಧರಾಚ - ಭೂಮಿಯೂ ಕೂಡ, ಶರೀ....ರ್ಣಾ - ಶವಭೂತವಾದ ಶರೀರಗಳಿಂದ ತುಂಬಿದುದು, ಬಭೂವ - ಆಯಿತು. || ೨೪ || ಹರಯಃ - ಕಪಿಗಳೂ, ರಾಕ್ಷಸಾಶ್ಚೈವ - ರಕ್ಕಸರೂ, ಓಜಸಾ - ಪರಾಕ್ರಮದಿಂದ, ದ್ರುಮ....ಸೈಃ - ವೃಕ್ಷಗಳಿಂದಲೂ ಶಕ್ತ್ಯಾಯುಧಗಳಿಂದಲೂ ಶಿಲೆಗಳಿಂದಲೂ, ಗದಾ....ರೈಃ - ಗದೆಗಳಿಂದಲೂ, ಕಬ್ಬಿಣದ ದೊಣ್ಣೆಗಳಿಂದಲೂ, ತೋಮರಗಳಿಂದಲೂ, ಅನ್ಯೋನ್ಯಂ- ಒಬ್ಬರನೊಬ್ಬರು, ನಿಜಘ್ನುಃ - ಹೊಡೆದರು. ||೨೫|| ಪರ್ವತೋಪಮಾಃ - ಪರ್ವತಸದೃಶರಾದ, ಭೀಮ ಕರ್ಮಾಣಃ - ಭಯಂಕರ ವ್ಯಾಪಾರವುಳ್ಳ, ಹರಯಃ - ವಾನರರು, ಆಹವೇ - ಯುದ್ಧದಲ್ಲಿ, ಪರಿಘಾಕಾರೈಃ - ಪರಿಘಾಯುಧದ ಆಕಾರವುಳ್ಳ, ಭಾಹುಭಿಃ - ತೋಳುಗಳಿಂದ, ಯುಧ್ಯಂತಃ - ಯುದ್ಧಮಾಡುವವರಾಗಿ, ರಾಕ್ಷಸಾನ್ - ರಕ್ಕಸರನ್ನು, ಜಘ್ನುಃ - ಹೊಡೆದರು. || ೨೬ || ತತ್ರ - ಆ ಯುದ್ಧದಲ್ಲಿ, ಪ್ರಾಸ....ಯಃ- ಈಟಿಕೋಲುಗಳು ತೋಮರಗಳು ಹಸ್ತಗಳುಳ್ಳವರಾಗಿ, ರಾಕ್ಷಸಾಸ್ತ್ವಪಿ- ರಕ್ಕಸರೂ ಕೂಡ, ಸಂಕ್ರುದ್ಧಾಃ - ಕುಪಿತರಾಗಿ, ಪರಮದಾರುಣೈಃ - ಮಹಾ ಭಯಂಕರವಾದ, ಶಸ್ತ್ರೈಃ - ಶಸ್ತ್ರಗಳಿಂದ, ಕಪೀನ್ - ವಾನರರನ್ನು, ನಿಜಘ್ನಿರೇ - ಹೊಡೆದರು. ||೨೭|| ರಾಕ್ಷಸಾನಾಂ- ರಕ್ಕಸರ, ಚಮೂಪತಿಃ - ಸೇನಾನಾಯಕನಾದ, ಅಕಂಪನಃ - ಅಕಂಪನನು, ಸುಸಂಕ್ರುದ್ಧಃ - ಮಹಾ ಕುಪಿತನಾಗಿ, ಭೀಮವಿಕ್ರಮಃ - ಮಹಾ ಭಯಂಕರವಾದ ಪರಾಕ್ರಮವುಳ್ಳ, ಸರ್ವಾನ್ - ಸಮಸ್ತರಾದ, ತಾನ್‌ರಾಕ್ಷಸಾನ್ - ಆ ರಕ್ಕಸರನ್ನು, ಸಂಹರ್ಷಯತಿ - ಉತ್ಸಾಹಗೊಳಿಸಿದನು. ||೨೮|| ಹರಯಸ್ತ್ವಪಿ-

ಆ ಧೂಳನ್ನಡಗಿಸಿತು. ಆಗ ರಣಾಂಗಣದಲ್ಲೆಲ್ಲಾ ಶವಗಳೇ ತುಂಬಿಹೋದುವು. ಇಷ್ಟೆಯಲ್ಲದೆ ಆ ಯುದ್ಧದಲ್ಲಿ ರಾಕ್ಷಸರೂ, ವಾನರರೂ ಪರಸ್ಪರವಾಗಿ ಪರಾಕ್ರಮಿಸಿ ವೃಕ್ಷಗಳನ್ನೂ, ಶಕ್ತ್ಯಾಯುಧಗಳನ್ನೂ, ಶಿಲೆಗಳನ್ನೂ, ಪ್ರಾಸತೋಮರ ಪರಿಘ ಗದಾದ್ಯಾಯುಧಗಳನ್ನೂ ಪ್ರಯೋಗಿಸುತ್ತಿದ್ದರು. ಪರ್ವತಾಕಾರರಾದ ವಾನರರೂ, ರಾಕ್ಷಸರೂ ಪರಿಘಗಳಂತೆ ಉದ್ದವಾದ ಭುಜಗಳಿಂದ ಪರಸ್ಪರವಾಗಿ ಹೊಡೆದಾಡಿದರು. || ೨೧-೨೫ || ಆ ಸಮಯದಲ್ಲಿ ಭಯಂಕರರಾದ ವಾನರವೀರರು ರಾಕ್ಷಸರನ್ನು ಬಲವಾಗಿ ಪ್ರಹರಿಸಲು ಅವರೆಲ್ಲರೂ ಪ್ರಾಸ ತೋಮರಗಳೇ ಮೊದಲಾದ ಆಯುಧಗಳಿಂದ ಅವರೆಲ್ಲರನ್ನೂ ಬಹು ಕ್ರೂರವಾಗಿ ಹೊಡೆದರು. ಆಗ ರಾಕ್ಷಸಸೇನಾನಾಯಕನಾದ ಅಕಂಪನನೂ ಸಹ ಮಹಾ ಕ್ರುದ್ಧನಾಗಿ ಭಯಂಕರ ಪರಾಕ್ರಮಗಳುಳ್ಳ ರಾಕ್ಷಸವೀರರೆಲ್ಲರನ್ನೂ ತುಮುಲಯುದ್ಧಕ್ಕಾಗಿ ಪ್ರೋತ್ಸಾಹಿಸಿದನು.

ರಕ್ಷಾಂಸಿ ಮಹಾದ್ರುಮಮಹಾಶ್ಮಭಿಃ । ವಿದಾರಯಂತ್ಯಭಿಕ್ರಮ್ಯ ಶಸ್ತ್ರಾಣ್ಯಾಚ್ಛಿದ್ಯ ವೀರ್ಯತಃ ॥೨೯॥ ಏತಸ್ಮಿನ್ನಂತರೇ ವೀರಾ ಹರಯಃ ಕುಮುದೋ ನಳಃ । ಮೈಂದಶ್ಚ ದ್ವಿವಿದಃ ಕ್ರುದ್ಧಾಶ್ಚಕ್ರುರ್ವೇಗಮನುತ್ತಮಂ ॥ ೩೦ ॥

ತೇತು ವೃಕ್ಷೈರ್ಮಹಾವೇಗಾ ರಾಕ್ಷಸಾನಾಂ ಚಮೂಮುಖೇ ।
ಕದನಂ ಸುಮಹಚ್ಚಕ್ರುರ್ಲೀಲಯಾ ಹರಿಯೂಥಪಾಃ ।
ಮಮಂಥೂ ರಾಕ್ಷಸಾನ್ ಸರ್ವೇ ವಾನರಾ ಗಣಶೋ ಭೃಶಂ ॥ ೩೩ ॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಪಂಚಪಂಚಾಶಸ್ಸರ್ಗಃ



ವಾನರರೂ ಕೂಡ, ಮಹಾ... ಭಿಃ - ದೊಡ್ಡ ಮರಗಳಿಂದಲೂ ಬಂಡೆಗಳಿಂದಲೂ, ಅಭಿಕ್ರಮ್ಯ - ನುಗ್ಗಿಬಂದು, ವೀರ್ಯತಃ - ಸಾಮರ್ಥ್ಯದಿಂದ, ಶಸ್ತ್ರಾಣಿ - ಶಸ್ತ್ರಗಳನ್ನು, ಆಚ್ಛಿದ್ಯ - ಕತ್ತರಿಸಿ, ರಕ್ಷಾಂಸಿ - ರಕ್ಕಸರನ್ನು, ವಿದಾರಯಂತಿ - ಸೀಳುತ್ತಿದ್ದರು. ॥ ೨೯ ॥ ಏತಸ್ಮಿನ್ನಂತರೇ - ಇಷ್ಟರಲ್ಲಿ, ವೀರಾಃ - ಶೂರರಾದ, ಕುಮುದಃ - ಕುಮುದನು, ನಳಃ - ನಳನು, ಮೈಂದಶ್ಚ - ಮೈಂದನು, ದ್ವಿವಿದಃ- ದ್ವಿವಿದನು ಎಂಬ, ಹರಯಃ - ವಾನರರು, ಕ್ರುದ್ಧಾಃ - ಕೋಪಿಷ್ಠರಾಗಿ, ಅನುತ್ತಮಂ - ಸರ್ವೋತ್ತಮವಾದ, ವೇಗಂ - ವೇಗವನ್ನು, ಚಕ್ರುಃ - ಮಾಡಿದರು. ॥ ೩೦ ॥ ಮಹಾವೇಗಾಃ - ಬಹು ವೇಗವುಳ್ಳ, ತೇಹರಿಯೂಥಪಾಃ-ಆ ವಾನರಯೂಥಪತಿಗಳು, ವೃಕ್ಷೈಃ-ವೃಕ್ಷಗಳಿಂದ, ರಾಕ್ಷಸಾನಾಂ ರಕ್ಕಸರ, ಚಮೂಮುಖೇ - ಸೇನಾಮುಖದಲ್ಲಿ, ಲೀಲಯಾ - ವಿಲಾಸದಿಂದ, ಸುಮಹತ್-ಬಹಳವಾದ, ಕದನಂ-ಯುದ್ಧವನ್ನು, ಚಕ್ರುಃ - ಮಾಡಿದರು, ಸರ್ವೇ - ಸಮಸ್ತರಾದ, ವಾನರಾಃ - ಕಪಿಗಳು, ಗಣಶಃ - ಗುಂಪಾಗಿ, ರಾಕ್ಷಸಾನ್ - ರಕ್ಕಸರನ್ನು, ಭೃಶಂ - ಬಹಳವಾಗಿ, ಮಮಂಥುಃ - ಹೊಡೆದರು.॥೩೧-೩೩॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಪಂಚಪಂಚಾಶಸ್ಸರ್ಗಃ.



ಆಗ ವಾನರರೆಲ್ಲರೂ ದೊಡ್ಡದೊಡ್ಡ ವೃಕ್ಷಗಳಿಂದೂ, ಮಹಾ ಶಿಖರಗಳಿಂದಲೂ ರಾಕ್ಷಸರನ್ನು ಸಿಗಿಯುತ್ತ ಬಂದರು; ಶಸ್ತ್ರಗಳಿಂದಲೂ ಆ ರಾಕ್ಷಸರನೇಕರನ್ನು ಕತ್ತರಿಸಿದರು. ಅದೇ ಸಮಯದಲ್ಲಿ ವಾನರಯೂಥನಾಥರಾದ ಕುಮುದನೂ, ನಳನೂ, ಮೈಂದದ್ವಿವಿದರೂ ಕೋಪೋದ್ದೀಪಿತರಾಗಿ ರಣರಂಗಕ್ಕೆ ನುಗ್ಗಿದರು. ಆಗ ವಾನರರೆಲ್ಲರೂ ಗುಂಪುಗುಂಪುಗಳಾಗಿ ನುಗ್ಗಿ ರಾಕ್ಷಸರನ್ನು ವಿಧವಿಧವಾಗಿ ಬಾಧೆಗೊಳಿಸುತ್ತ ಯುದ್ಧ ಮಾಡುತ್ತಿದ್ದರು. ॥ ೨೬-೩೩ ॥

ಇಂತಿದು ಅಕಂಪನಾಗಮನ ವೃತ್ತಾಂತವೆಂಬ ಐವತ್ತೈದನೆಯ
ಸರ್ಗವು ಸಮಾಪ್ತವಾದುದು.



# ಯುದ್ಧಕಾಂಡೇ ಷಟ್ಪಂಚಾಶಸ್ಸರ್ಗಃ

**ತದ್ದೃಷ್ಟ್ವಾ ಸುಮಹತ್ಕರ್ಮ ಕೃತಂ ವಾನರಸತ್ತಮೈಃ । ಕ್ರೋಧಮಾಹಾರಯಾಮಾಸ ಯುಧಿ ತೀವ್ರಮಕಂಪನಃ ॥ ೧ ॥ ಕ್ರೋಧಮೂರ್ಛಿತರೂಪಸ್ತು ಧೂನ್ವನ್ ಪರಮಕಾರ್ಮುಕಂ । ದೃಷ್ಟ್ವಾತು ಕರ್ಮ ಶತ್ರೂಣಾಂ ಸಾರಥಿಂ ವಾಕ್ಯಮಬ್ರವೀತ್ ॥೨॥ "ತತ್ರೈವ ತಾವತ್ತ್ವರಿತಂ ರಥಂ ಪ್ರಾಪಯ ಸಾರಥೇ ! । ಯತ್ರೈತೇ ಬಹವೋ ಘ್ನಂತಿ ಸುಬಹೂನ್ ರಾಕ್ಷಸಾನ್ ರಣೇ ॥ ೩ ॥ ಏತೇಽತ್ರ ಬಲವಂತೋಹಿ ಭೀಮಕಾಯಾಶ್ಚ ವಾನರಾಃ । ದ್ರುಮಶೈಲಪ್ರಹರಣಾಸ್ತಿಷ್ಠಂತಿ ಪ್ರಮುಖೇ ಮಮ ॥ ೪ ॥**

---

ಅಕಂಪನಃ - ಅಕಂಪನನು, ಯುಧಿ - ಕಾಳೆಗದಲ್ಲಿ, ವಾನರಸತ್ತಮೈಃ - ವಾನರೋತ್ತಮರಿಂದ, ಕೃತಂ-ಮಾಡಲ್ಪಟ್ಟ, ಸುಮಹತ್-ಬಹು ದೊಡ್ಡದಾದ, ತತ್ಕರ್ಮ-ಆ ಕೆಲಸವನ್ನು, ದೃಷ್ಟ್ವಾ-ಕಂಡು, ತೀವ್ರಂ - ತೀಕ್ಷ್ಣವಾದ, ಕ್ರೋಧಂ - ಕೋಪವನ್ನು, ಆಹಾರಯಾಮಾಸ - ವಹಿಸಿದನು. ॥೧॥ ಕ್ರೋಧ.....ಪಃ - ಕ್ರೋಧವ್ಯಾಪ್ತವಾದ ಆಕಾರವುಳ್ಳವನಾಗಿ, ಶತ್ರೂಣಾಂ - ಶತ್ರುಗಳ, ಕರ್ಮ-ವ್ಯಾಪಾರವನ್ನು, ದೃಷ್ಟ್ವಾತು - ನೋಡಿಯಾದರೆ, ಪರ....ಕಂ - ಶ್ರೇಷ್ಠವಾದ ಬಿಲ್ಲನ್ನು, ಧೂನ್ವನ್ - ಟಂಕಾರ ಮಾಡುತ್ತ, ಸಾರಥಿಂ - ಸಾರಥಿಯನ್ನು ಕುರಿತು, ವಾಕ್ಯಂ - ಮಾತನ್ನು, ಅಬ್ರವೀತ್ - ನುಡಿದನು. ॥ ೨ ॥ ಹೇ ಸಾರಥೇ-ಎಲೈ ಸಾರಥಿಯೇ, ಯತ್ರ-ಯಾವ ಸ್ಥಳದಲ್ಲಿ, ರಣೇ-ಕಾಳೆಗದಲ್ಲಿ, ಬಹವಃ - ಅನೇಕ ಮಂದಿಯಾದ, ಏತೇ - ಈ ಕಪಿಗಳು, ಸುಬಹೂನ್ - ಬಹಳಮಂದಿ, ರಾಕ್ಷಸಾನ್ - ರಕ್ಕಸರನ್ನು, ಘ್ನಂತಿ - ಹೊಡೆಯುತ್ತಿದ್ದಾರೆಯೋ, ತತ್ರೈವ - ಅದೇ ಸ್ಥಲವನ್ನು ಕುರಿತೇ, ತ್ವರಿತಂ ತಾವತ್ - ಜಾಗ್ರತೆಯಾಗಿ, ರಥಂ - ತೇರನ್ನು, ಪ್ರಾಪಯ - ಹೊಂದಿಸು. ॥೩॥ ಅತ್ರ - ಈ ಸ್ಥಳದಲ್ಲಿ, ಬಲವಂತಃ - ಬಲಶಾಲಿಗಳಾದ, ಭೀಮಕಾಯಾಃ - ಭಯಂಕರ ಶರೀರಗಳುಳ್ಳ, ಏತೇವಾನರಾಃ - ಈ ಕಪಿಗಳು, ದ್ರುಮ....ಣಾಃ - ಮರಗಳೂ ಬೆಟ್ಟಗಳೇ ಆಯುಧಗಳಾಗುಳ್ಳವರಾಗಿ, ಮಮ - ನನ್ನ, ಪ್ರಮುಖೇ - ಎದುರಾಗಿ, ತಿಷ್ಠಂತಿ - ನಿಲ್ಲುವರಷ್ಟೆ. ॥೪॥ ಏತೈಃ - ಇವರುಗಳಿಂದ, ಸರ್ವಂ - ಸಮಸ್ತ

---

ಹೀಗೆ ವಾನರೋತ್ತಮರೆಸಗಿದ ಮಹಾ ಭಯಂಕರವಾದ ಕಾರ್ಯವನ್ನು ನೋಡಿದೊಡನೆಯೇ, ಆ ಅಕಂಪನಾಸುರನು ಮಹತ್ತರವಾದ ಕೋಪವನ್ನು ತಾಳಿ, ಅದೇ ಕೋಪದಿಂದಲೇ ವ್ಯಮರೆತವನಾಗಿ ಸರ್ವೋತ್ತಮವಾದ ತನ್ನ ಧನುಸ್ಸನ್ನು ಟಂಕಾರ ಮಾಡುತ್ತ ತನ್ನ ಸಾರಥಿಗೆ ಶತ್ರುಗಳು ಮೆರೆದ ಪರಾಕ್ರಮ ಕಾರ್ಯವನ್ನು ತೋರಿಸಿ, "ಸಾರಥಿ! ನೋಡಿದೆಯಾ! ಅದೋ, ಆ ಸ್ಥಳದಲ್ಲಿ ಅನೇಕ ವಾನರರು ಗುಂಪುಗೂಡಿ ನಮ್ಮ ರಾಕ್ಷಸರನೇಕರನ್ನು ಸದೆ ಬಡಿಯುತ್ತಿದ್ದಾರೆಯಲ್ಲವೆ. ಆದುದರಿಂದ ರಥವನ್ನು ಅತ್ತಕಡೆಗೇ ಓಡಿಸು. ಅಯ್ಯಾ ಸಾರಥಿಯೇ! ಮಹಾ ಬಲಾಢ್ಯರೂ, ಭಯಂಕರಾಕಾರರೂ ಆದ ಆ ವಾನರರು ವೃಕ್ಷಗಳನ್ನೂ, ಶಿಲೆಗಳನ್ನೂ ಆಯುಧಗಳನ್ನಾಗಿ ಧರಿಸಿ ನನಗೆದುರಾಗಿ ನಿಲ್ಲುವರಷ್ಟೆ. ಆದುದರಿಂದ ನಾನೂ ಸಹ ರಣಕುಶಲರಾದ ಈ ವಾನರೋತ್ತಮರನ್ನು ಸಂಹರಿಸಲು ಉತ್ಸುಕನಾಗಿಯೇ ಇದ್ದೇನೆ. ಇವರಿಂದ ಮಹಾ ಬಲಾಢ್ಯವಾದ ನಮ್ಮ ರಾಕ್ಷಸಸೇನೆಯೆಲ್ಲವೂ ನಾಶವಾಯಿ

ಏತಾನ್ನಿಹಂತುಮಿಚ್ಛಾಮಿ ಸಮರಶ್ಲಾಘಿನೋಽಹ್ಯಹಂ । ಏತೈಃ ಪ್ರಮಥಿತಂ ಸರ್ವಂ ದೃಶ್ಯತೇ ರಾಕ್ಷಸಂ ಬಲಂ" ॥ ೫ ॥ ತತಃ ಪ್ರಜವನಾಶ್ವೇನ ರಥೇನ ರಥಿನಾಂ ವರಃ । ಹರೀನಭ್ಯಹನತ್ಕ್ರೋಧಾಚ್ಛರಜಾಲೈರಕಂಪನಃ ॥ ೬ ॥ ನಸ್ಥಾತುಂ ವಾನರಾಃ ಶೇಕುಃ ಕಿಂಪುನರ್ಯೋದ್ಧುಮಾಹವೇ । ಅಕಂಪನಶರೈರ್ಭಗ್ನಾಸ್ಸರ್ವಏವ ವಿದುದ್ರುವುಃ ॥೭॥ ತಾನ್ ಮೃತ್ಯುವಶಮಾಪನ್ನಾನಕಂಪನವಶಂಗತಾನ್ । ಸಮೀಕ್ಷ್ಯ ಹನುಮಾನ್ ಜ್ಞಾತೀನುಪತಸ್ಥೇ ಮಹಾಬಲಃ ॥ ೮ ॥ ತಂ ಮಹಾಪ್ಲವಗಂ ದೃಷ್ಟ್ವಾ ಸರ್ವೇ ಪ್ಲವಗಯೂಥಪಾಃ । ಸಮೇತ್ಯ ಸಮರೇ ವೀರಾಸ್ಸಂಹೃಷ್ಟಾಃ ಪರ್ಯವಾರಯನ್ ॥ ೯ ॥

ವಾದ, ರಾಕ್ಷಸಬಲಂ - ರಕ್ಕಸರ ಸಂಬಂಧವಾದ ಸೈನ್ಯವು, ಪ್ರಮಥಿತಂ - ಹೊಡೆಯಲ್ಪಟ್ಟದಾಗಿ, ದೃಶ್ಯತೇ - ಕಾಣಲ್ಪಡುತ್ತದೆ, ಅಹಂ - ನಾನು, ಸಮ....ನಃ - ಕಾಳಗದಲ್ಲಿ ಸ್ತೋತ್ರವನ್ನು ಮಾಡಿಸಿಕೊಳ್ಳತಕ್ಕ, ಏತಾನ್ - ಈ ವಾನರರನ್ನು, ನಿಹಂತುಂ - ಹೊಡಿಯುವದಕ್ಕಾಗಿ, ಇಚ್ಛಾಮಿಹಿ - ಅಪೇಕ್ಷಿಸುತ್ತೇನೆ. ||೫|| ತತಃ - ಬಳಿಕ, ರಥಿನಾಂ - ರಥಿಕರಲ್ಲಿ, ವರಃ - ಶ್ರೇಷ್ಠನಾದ, ಅಕಂಪನಃ- ಅಕಂಪನನು, ಪ್ರಜವನಾಶ್ವೇನ-ವೇಗಯುಕ್ತವಾದ ಅಶ್ವಗಳುಳ್ಳ, ರಥೇನ-ರಥದಿಂದ, ಕ್ರೋಧಾತ್- ಕೋಪದದೆಶೆಯಿಂದ, ಹರೀನ್ - ವಾನರರನ್ನು, ಶರಜಾಲೈಃ - ಬಾಣಗಳ ತಂಡಗಳಿಂದ, ಹರೀನ್ - ಕಪಿಗಳನ್ನು, ಅಭ್ಯಹನತ್ - ಹೊಡೆದನು. || ೬ || ವಾನರಾಃ - ಕಪಿಗಳ, ಸರ್ವಏವ - ಸಮಸ್ತರೂ, ಅಕಂಪನಶರೈಃ-ಅಕಂಪನನ ಬಾಣಗಳಿಂದ, ಭಗ್ನಾಃ-ಹೊಡೆಯಲ್ಪಟ್ಟವರಾಗಿ, ಆಹವೇ-ಕಾಳಿಗದಲ್ಲಿ, ಸ್ಥಾತುಂ - ಇರುವದಕ್ಕೂ, ನಶೇಕುಃ - ಸಮರ್ಥರಾಗದೇಹೋದರು, ಯೋದ್ಧುಂ - ಯುದ್ಧ ಮಾಡುವುದಕ್ಕಾಗಿ, ಕಿಂಪುನಃ - ಏನು ಹೇಳತಕ್ಕದ್ದು, ವಿದುದ್ರುವುಃ - ಓಡಿಹೋದರು. || ೭ || ಮಹಾಬಲಃ - ಬಹಳ ಸಾಮರ್ಥ್ಯವಂತನಾದ, ಹನುಮಾನ್ - ಆಂಜನೇಯನು, ಅಕಂಪನವಶಂ-ಅಕಂಪನನ ಸ್ವಾಧೀನತೆಯನ್ನು, ಗತಾನ್ - ಹೊಂದಿ, ಮೃತ್ಯುವಶಂ - ಕಾಲನವಶವನ್ನು, ಆಪನ್ನಾನ್ - ಹೊಂದಿರುವ, ತಾನ್‌ಜ್ಞಾತೀನ್ - ಬಂಧುಗಳಾದ ಆ ವಾನರರನ್ನು, ಸಮೀಕ್ಷ್ಯ - ಕಂಡು, ಉಪತಸ್ಥೇ - ಹತ್ತಿರಕ್ಕೆ ಬಂದನು. || ೮ || ಸರ್ವೇ - ಸಮಸ್ತರಾದ, ವೀರಾಃ - ಶೂರರಾದ, ಪ್ಲವಗಯೂಥಪಾಃ - ವಾನರಯೂಥಪತಿಗಳು, ಮಹಾಪ್ಲವಗಂ - ಮಹಾ ವಾನರರಾದ, ತಂ - ಆ ಹನುಮಂತನನ್ನು, ದೃಷ್ಟ್ವಾ - ಕಂಡು, ಸಮರೇ - ಕಾಳಿಗದಲ್ಲಿ, ಸಮೇತ್ಯ - ಹಿಂತಿರುಗಿಬಂದು, ಸಂಹೃಷ್ಟಾಃ - ಸಂತೋಷಗೊಂಡವ

ತಲ್ಲವೆ. ಆದುದರಿಂದ ನಾನದಕ್ಕೆ ಸೇಡು ತೀರಿಸಿಕೊಳ್ಳುವೆನು. ಜಾಗ್ರತೆಯಾಗಿ ರಥವನ್ನತ್ತ ನಡೆಯಿಸು" ಎಂದು ಹೇಳಿದನು. ||೧-೫|| ಕೂಡಲೇ ಸಾರಥಿಯು ರಥವನ್ನತ್ತ ನಡೆಯಿಸಲು ಮಹಾ ರಥಿಕನಾದ ಆ ಅಕಂಪನನು ಮಹಾ ವೇಗಗಳಾದ ಬಾಣಗಳನ್ನು ಆ ವಾನರರಮೇಲೆ ಪ್ರಯೋಗಿಸಿದನು. ಆಗ ವಾನರರೆಲ್ಲರೂ ಯುದ್ಧ ಮಾಡಲಾರದೆಯೂ, ಆ ಅಕಂಪನನ ಮುಂಗಡೆ ನಿಲ್ಲಲಾರದೆಯೂ ಸ್ತಬ್ಧರಾಗಿ ಹೋದರು. ಇಷ್ಟೆಯಲ್ಲದೆ ಆ ಅಕಂಪನ ರಾಕ್ಷಸನು ಪ್ರಯೋಗಿಸಿದ ಕೂರಂಬುಗಳ ಹೊಡೆತಗಳನ್ನು ಸಹಿಸಲಾರದೆ ಆ ವಾನರರೆಲ್ಲರೂ ದಿಕ್ಕು ದಿಕ್ಕುಗಳಿಗೂ ಓಡಿಹೋದರು. ಆ ಸಮಯದಲ್ಲಿ ಅಕಂಪನನ ಬಲೆಗೆ ಸಿಕ್ಕಿ ಮೃತ್ಯುವಶವನ್ನೈದಿದ ವಾನರರೆಲ್ಲರನ್ನೂ ನೋಡಿದೊಡನೆಯೇ ಮಹಾ ಬಲಶಾಲಿಯಾದ ಹನುಮಂತನು ಬಹು ವೇಗವಾಗಿ ಮುಂದೆ ನುಗ್ಗಿ ಬಂದನು. ಹೀಗೆ ನುಗ್ಗಿಬಂದ ಹನುಮಂತನನ್ನು ನೋಡಿ ಯುದ್ಧದಲ್ಲಿ ಮಹಾ ಸಾಮರ್ಥ್ಯವುಳ್ಳವರೂ, ಮಹಾ ಶೂರರೂ ಆದ ವಾನರಯೂಥನಾಥ

ಅವಸ್ಥಿತಂ ಹನೂಮಂತಂ ತೇ ದೃಷ್ಟ್ವಾ ಹರಿಯೂಥಪಾಃ । ಬಭೂವುರ್ಬಲವಂತೋಹಿ ಬಲವಂತಂ ಸಮಾಶ್ರಿತಾಃ ॥೧೦॥ ಅಕಂಪನಸ್ತು ಶೈಲಾಭಂ ಹನೂಮಂತಮವಸ್ಥಿತಂ । ಮಹೇಂದ್ರ ಇವಧಾರಾಭಿಃ ಶರೈರಭಿವವರ್ಷಹ ॥ ೧೧ ॥ ಅಚಿಂತಯಿತ್ವಾ ಬಾಣೌಘಾನ್ ಶರೀರೇ ಪತಿತಾನ್ ಶಿತಾನ್ । ಅಕಂಪನವಧಾರ್ಥಾಯ ಮನೋ ದಧ್ರೇ ಮಹಾಬಲಃ ॥ ೧೨ ॥ ಸಪ್ರಸಹ್ಯ ಮಹಾತೇಜಾ ಹನೂಮಾನ್ ಮಾರುತಾತ್ಮಜಃ । ಅಭಿದುದ್ರಾವ ತದ್ರಕ್ಷಃ ಕಂಪಯನ್ನಿವ ಮೇದಿನೀಂ ॥ ೧೩ ॥ ತಸ್ಯಾಭಿನರ್ದಮಾನಸ್ಯ ದೀಪ್ಯಮಾನಸ್ಯ ತೇಜಸಾ । ಬಭೂವ ರೂಪಂ ದುರ್ಧರ್ಷಂ ದೀಪ್ತಸ್ಯೇವ ವಿಭಾವಸೋಃ ॥ ೧೪ ॥

ರಾಗಿ, ಪರ್ಯವಾರಯನ್ - ಸುತ್ತಿಕೊಂಡರು. ॥೯॥ ತೇಹರಿಯೂಥಪಾಃ - ಆ ವಾನರಯೂಥಪತಿಗಳು, ಅವಸ್ಥಿತಂ - ನಿಂತಿರುವ, ಬಲವಂತಂ - ಬಲಿಷ್ಠನಾದ, ಹನೂಮಂತಂ - ಆಂಜನೇಯನನ್ನು, ದೃಷ್ಟ್ವಾ - ಕಂಡು, ಸಮಾಶ್ರಿತಾಃ - ಅವನನ್ನು ಆಶ್ರಯಿಸಿ, ಬಲವಂತಃ - ಬಲಶಾಲಿಗಳು, ಬಭೂವುರ್ಹಿ - ಆದರಷ್ಟೆ. ॥ ೧೦ ॥ ಅಕಂಪನಸ್ತು - ಅಕಂಪನನಾದರೆ, ಅವಸ್ಥಿತಂ - ನಿಂತಿರುವ, ಶೈಲಾಭಂ - ಬೆಟ್ಟದಂತಿರುವ, ಹನೂಮಂತಂ - ಆಂಜನೇಯನನ್ನು ಕುರಿತು, ಮಹೇಂದ್ರಃ - ದೇವೇಂದ್ರನು, ಧಾರಾಭಿಃಇವ - ವರ್ಷಧಾರೆಗಳಿಂದ ಎಂತೋ ಅಂತು, ಶರೈಃ - ಬಾಣಗಳಿಂದ, ಅಭಿವವರ್ಷಹ - ಸುರಿದನು. ॥ ೧೧ ॥ ಮಹಾಬಲಃ - ಬಹಳ ಬಲಶಾಲಿಯಾದ ಆಂಜನೇಯನು, ಶರೀರೇ - ಅಂಗದಲ್ಲಿ, ಪತಿತಾನ್ - ಬೀಳುತ್ತಿರುವ, ಶಿತಾನ್ - ತೀಕ್ಷ್ಣಗಳಾದ, ಬಾಣೌಘಾನ್ - ಬಾಣಗಳ ತಂಡಗಳನ್ನು, ಅಚಿಂತಯಿತ್ವಾ - ಆಲೋಚಿಸದೆ, ಅಕಂ....ಯ - ಅಕಂಪನನ ಸಂಹಾರರೂಪವಾದ ಪ್ರಯೋಜನಕ್ಕಾಗಿ, ಮನಃ - ಮನವನ್ನು, ದಧ್ರೇ - ಧರಿಸಿದನು. ॥ ೧೨ ॥ ಮಹಾತೇಜಾಃ - ಮಹಾ ಪರಾಕ್ರಮಶಾಲಿಯಾದ, ಮಾರುತಾತ್ಮಜಃ - ವಾಯುಪುತ್ರನಾದ, ಸಹನೂಮಾನ್ - ಆ ಆಂಜನೇಯನನ್ನು, ಪ್ರಸಹ್ಯ - ಬಲಾತ್ಕರಿಸಿ, ಮೇದಿನೀಂ - ಭೂಮಿಯನ್ನು, ಕಂಪಯನ್ನಿವ - ನಡುಗಿಸುವಂತೆ, ತದ್ರಕ್ಷಃ- ಆ ಅಕಂಪನನ್ನು ಕುರಿತು, ಅಭಿದುದ್ರಾವ - ಓಡಿಬಂದನು. ॥೧೩॥ ಅಭಿ....ಸ್ಯ - ಎದುರಾಗಿ ಗರ್ಜಿಸುತ್ತಿರುವ, ತೇಜಸಾ - ಪ್ರತಾಪದಿಂದ, ದೀಪ್ಯಮಾನಸ್ಯ - ಹೊಳೆಯುತ್ತಿರುವ, ತಸ್ಯ - ಆ ಹನುಮಂತನ, ರೂಪಂ ರೂಪವು, ದೀಪ್ತಸ್ಯ-ಹೊಳೆಯುತ್ತಿರುವ, ವಿಭಾವಸೋಃ-ಅಗ್ನಿಯ, ರೂಪಮಿವ- ರೂಪದಂತೆ, ದುರ್ಧರ್ಷಂ - ತಿರಸ್ಕರಿಸಲಸಾಧ್ಯವಾದದ್ದು, ಬಭೂವ - ಆಯಿತು. ॥ ೧೪ ॥ ಕ್ರೋಧ

ರೆಲ್ಲರೂ ಅತ್ಯುತ್ಸಾಹದಿಂದ ಮುಂದೆ ಬಂದು ಅವನನ್ನು ಸುತ್ತುವರೆದರು. ಆ ಸಮಯದಲ್ಲಿ ವಾನರಾಧಿಪತಿಗಳೂ, ವಾನರರೂ ಮಹಾ ಬಲಾಢ್ಯನಾದ ಹನುಮಂತನನ್ನಾಶ್ರಯಿಸಿದುದರಿಂದ ಅಮಿತವಾದ ಬಲವುಳ್ಳವರಾದರು. ॥ ೬–೧೦ ॥ ಆಗ ಮಹಾ ಬಲವಂತನಾದ ಅಕಂಪನನು ತನಗಭಿಮುಖವಾಗಿ ಯುದ್ಧಸನ್ನದ್ಧನಾಗಿ ನಿಂತಿದ್ದ ಹನುಮಂತನನ್ನು ನೋಡಿ ಶಕ್ರನಂತೆ ಬಾಣಗಳ ಮಳೆಯನ್ನು ಸುರಿಸಿದನು. ಹೀಗೆ ಅಕಂಪನನು ಪ್ರಯೋಗಿಸಿದ ಬಹು ತೀಕ್ಷ್ಣಗಳಾದ ಬಾಣಗಳು ತನ್ನ ಶರೀರದಲ್ಲಿ ನಾಟಿದ್ದರೂ ಆ ಹನುಮಂತನವುಗಳನ್ನು ಲೆಕ್ಕಿಸದೆ ಅವನನ್ನು ವಧಿಸಬೇಕೆಂತಲೇ ನಿಶ್ಚಯಿಸಿದನು. ಆ ಕೂಡಲೇ ಮಹಾ ತೇಜಸ್ಸಂಪನ್ನನೂ, ವಾಯುಪುತ್ರನೂ ಆದ ವೀರ ಹನುಮಂತನು ತನ್ನ ವೇಗದಿಂದಲೇ ಭೂಮಿಯನ್ನೆಲ್ಲ ನಡುಗಿಸುತ್ತ ಆ ಅಕಂಪನನ್ನು ಅಟ್ಟಿ ಬಂದು ಮಹಾ ಸಿಂಹನಾದವನ್ನು ಮಾಡಿದನು. ಆ ಸಮಯದಲ್ಲಿ ಮಹಾ ತೇಜಸ್ವಿಯಾದ ಆ ಹನುಮಂತನ ರೂಪವು

ಆತ್ಮಾನಮಪ್ರಹರಣಂ ಜ್ಞಾತ್ವಾ ಕ್ರೋಧಸಮನ್ವಿತಃ । ಶೈಲಮುತ್ಪಾಟಯಾಮಾಸ ವೇಗೇನ ಹರಿಪುಂಗವಃ ||೧೫|| ತಂ ಗೃಹೀತ್ವಾ ಮಹಾಶೈಲಂ ಪಾಣಿನೈಕೇನ ಮಾರುತಿಃ । ಸವಿನದ್ಯ ಮಹಾನಾದಂ ಭ್ರಾಮಯಾಮಾಸ ವೀರ್ಯವಾನ್ ||೧೬|| ತತಸ್ತಮಭಿದುದ್ರಾವ ರಾಕ್ಷಸೇಂದ್ರಮಕಂಪನಂ । ಪುರಾಹಿ ನಮುಚಿಂ ಸಂಖ್ಯೇ ವಜ್ರೇಣೇವ ಪುರಂದರಃ ||೧೭|| ಅಕಂಪನಸ್ತು ತದ್ದೃಷ್ಟ್ವಾ ಗಿರಿಶೃಂಗಂ ಸಮುದ್ಯತಂ । ದೂರಾದೇವ ಮಹಾಬಾಣೈರರ್ಧಚಂದ್ರೈರ್ವ್ಯದಾರಯತ್ ||೧೮|| ತತ್ಪರ್ವತಾಗ್ರಮಾಕಾಶೇ ರಕ್ಷೋಬಾಣವಿದಾರಿತಂ । ವಿಶೀರ್ಣಂ ಪತಿತಂ ದೃಷ್ಟ್ವಾ ಹನುಮಾನ್ ಕ್ರೋಧ

---

ಸಮನ್ವಿತಃ - ಕ್ರೋಧದಿಂದ ಕೂಡಿರುವ, ಹರಿಪುಂಗವಃ - ಆಂಜನೇಯನು, ಆತ್ಮಾನಂ - ತನ್ನನ್ನು, ಅಪ್ರಹರಣಂ - ನಿರಾಯುಧನನ್ನಾಗಿ, ಜ್ಞಾತ್ವಾ - ಕಂಡು, ವೇಗೇನ - ಜವದಿಂದ, ಶೈಲಂ - ಬೆಟ್ಟವನ್ನು, ಉತ್ಪಾಟಯಾಮಾಸ - ಕಿತ್ತುಕೊಂಡನು. ||೧೫|| ವೀರ್ಯವಾನ್ - ಸಾಮರ್ಥ್ಯವಂತನಾದ, ಸಮಾರುತಿಃ - ಆ ಆಂಜನೇಯನು, ಮಹಾನಾದಂ - ದೊಡ್ಡ ಕೋಲಾಹಲ ಧ್ವನಿಯನ್ನು, ವಿನದ್ಯ - ಮಾಡಿ, ಏಕೇನಪಾಣಿನಾ - ಒಂದೇ ಕೈಯಿಂದಲೇ, ತಂಮಹಾಶೈಲಂ - ಆ ದೊಡ್ಡ ಬೆಟ್ಟವನ್ನು, ಗೃಹೀತ್ವಾ - ತೆಗದುಕೊಂಡು, ಭ್ರಾಮಯಾಮಾಸ - ತಿರುಗಿಸಿದನು. ||೧೬|| ತತಃ - ಬಳಿಕ, ರಾಕ್ಷಸೇಂದ್ರಂ - ರಕ್ಕಸಾಧಿಪತಿಯಾದ, ತಮಕಂಪನಂ - ಆ ಅಕಂಪನನ್ನು ಕುರಿತು, ಪುರಾಹಿ - ಪೂರ್ವದಲ್ಲಾದರೆ, ಸಂಖ್ಯೇ - ಕಾಳಗದಲ್ಲಿ, ಪುರಂದರಃ - ದೇವೇಂದ್ರನು, ವಜ್ರೇಣ - ವಜ್ರಾಯುಧದಿಂದ, ನಮುಚಿಮಿವ-ನಮುಚಿ ಎಂಬ ರಕ್ಕಸನನ್ನಂತೆ, ಅಭಿದುದ್ರಾವ-ಓಡಿಬಂದನು. ||೧೭|| ಅಕಂಪನಸ್ತು-ಅಕಂಪನನಾದರೆ, ಸಮುದ್ಯತಂ - ಎತ್ತಲ್ಪಟ್ಟ, ತದ್ಗಿರಿಶೃಂಗಂ - ಆ ಬೆಟ್ಟದ ಶಿಖರವನ್ನು, ದೃಷ್ಟ್ವಾ-ಕಂಡು, ದೂರಾದೇವ ದೂರದಿಂದಲೇ, ಅರ್ಧಚಂದ್ರೈಃ - ಅರ್ಧಚಂದ್ರಾಕಾರಗಳಾದ, ಮಹಾಬಾಣೈಃ-ದೊಡ್ಡ ಬಾಣಗಳಿಂದ, ವ್ಯದಾರಯತ್ - ಸೀಳಿದನು. ||೧೮|| ಹನುಮಾನ್ - ಆಂಜನೇಯನು, ತತ್ಪರ್ವತಾಗ್ರಂ - ಆ ಬೆಟ್ಟದ ಶಿಖರವನ್ನು, ಆಕಾಶೇ - ಅಂತರಿಕ್ಷದಲ್ಲಿಯೇ, ರಕ್ಷೋ....ತಂ - ಅಕಂಪನನ ಬಾಣಗಳಿಂದ ಹೊಡಿಯಲ್ಪಟ್ಟು, ವಿಶೀರ್ಣಂ - ಒಡೆದು, ಪತಿತಂ - ಕೆಳಕ್ಕೆ ಬಿದ್ದುದನ್ನಾಗಿ, ದೃಷ್ಟ್ವಾ - ಕಂಡು, ಕ್ರೋಧಮೂರ್ಛಿತಃ - ಕ್ರೋಧದಿಂದ ವ್ಯಾಪ್ತನಾದನು. ||೧೯|| ಸಹರಿಃ - ಆ ಆಂಜನೇಯನು,

---

ಯಜ್ಞೇಶ್ವರನ ರೂಪದಂತೆ ನೋಡಲಶಕ್ಯವಾಗಿದ್ದಿತು. ಆ ಬಳಿಕ ವಾನರೋತ್ತಮನಾದ ಆ ಹನುಮಂತನು ತನಗೆ ಪೆಟ್ಟು ತಗಲಿದ ರೋಷದಿಂದ ಕೆರಳಿ ಒಂದು ಪರ್ವತವನ್ನೇ ಪೆಳಗಿಸಿ ಅದನ್ನು ಒಂದೇ ಕೈಯಲ್ಲಿ ಹಿಡಿದು ಸಿಂಹನಾದವನ್ನು ಮಾಡುತ್ತ ಗಿರ್ರನೆ ತಿರುಗಿಸಿ ಪೂರ್ವದಲ್ಲಿ ದೇವೇಂದ್ರನು ವಜ್ರಾಯುಧದಿಂದ ನಮುಚಿಯನ್ನು ಅಟ್ಟಿಹೋದಂತೆ ಆ ಅಕಂಪನನನ್ನು ಅಟ್ಟಿಹೋದನು. || ೧೧–೧೭ || ಹೀಗೆ ಪರ್ವತವನ್ನು ಕೈಯಲ್ಲಿ ಹಿಡಿದು ಬರುತ್ತಲಿದ್ದ ಹನುಮಂತನನ್ನು ದೂರದಿಂದಲೇ ಕಣ್ಣಿಟ್ಟು ನೋಡಿದ ಅಕಂಪನನು ಕ್ರೋಧೋದ್ದೀಪಿತನಾಗಿ ಅರ್ಧಚಂದ್ರಾಕಾರವಾದ ಬಾಣಗಳಿಂದ ಆ ಪರ್ವತವನ್ನು ಪುಡಿಗುಟ್ಟಿದನು. ಹೀಗೆ ಆ ಅಕಂಪನನು ಪ್ರಯೋಗಿಸಿದ ಬಾಣಗಳಿಂದ ಅಂತರಿಕ್ಷದಲ್ಲಿಯೇ ಪುಡಿಪುಡಿಯಾದ ಆ ಪರ್ವತವನ್ನು ನೋಡಿ ಮಹಾ ವೀರನಾದ ಹನುಮಂತನು ಕ್ರೋಧಮೂರ್ಛಿತನಾಗಿ ಕೂಡಲೇ ಮದ್ದೀಮರಗಳಿಂದ ಕೂಡಿದ್ದ ಬಹು ಎತ್ತರವಾದ ಮತ್ತೊಂದು ಪರ್ವತವನ್ನು ಸೆಳಗಿಸಿದನು. ಮಹಾ ತೇಜಸ್ವಿಯಾದ ಆ ಹನುಮಂತನಂದು ಸಾಲಭರಿತವೂ, ಮಹಾ

ಮೂರ್ಛಿತಃ ||೧೯|| ಸೋಽಶ್ವಕರ್ಣಂ ಸಮಾದಾಯ ರೋಷದರ್ಪಾನ್ವಿತೋ ಹರಿಃ | ತೂರ್ಣಮುತ್ಪಾಟಯಾಮಾಸ ಮಹಾಗಿರಿಮಿವೋಚ್ಛ್ರಿತಂ || ೨೦ || ತಂ ಗೃಹೀತ್ವಾ ಮಹಾಸ್ಕಂಧಂ ಸೋಽಶ್ವಕರ್ಣಂ ಮಹಾದ್ಯುತಿಃ | ಪ್ರಹಸ್ಯ ಪರಯಾ ಪ್ರೀತ್ಯಾ ಭ್ರಾಮಯಾಮಾಸ ಸಂಯುಗೇ || ೨೧ || ಪ್ರಧಾವನ್ನೂರುವೇಗೇನ ಪ್ರಭಂಜಂಸ್ತರಸಾ ದ್ರುಮಾನ್ | ಹನುಮಾನ್ ಪರಮಕ್ರುದ್ಧಶ್ಚರಣೈರ್ದಾರಯನ್ ಕ್ಷಿತಿಂ || ೨೨ || ಗಜಾಂಶ್ಚ ಸಗಜಾರೋಹಾನ್ ಸರಥಾನ್ ರಥಿನಸ್ತಥಾ | ಜಘಾನ ಹನುಮಾನ್ ಧೀಮಾನ್ ರಾಕ್ಷಸಾಂಶ್ಚ ಪದಾತಿಗಾನ್ ||೨೩|| ತಮಂತಕಮಿವಕ್ರುದ್ಧಂ ಸಮರೇ ಪ್ರಾಣಹಾರಿಣಂ | ಹನುಮಂತಮಭಿಪ್ರೇಕ್ಷ್ಯ ರಾಕ್ಷಸಾಃ ವಿಪ್ರದುದ್ರುವುಃ || ೨೪ || ತಮಾಪತಂತಂ

---

ರೋಷ....ತಃ-ಕ್ರೋಧದಿಂದಲೂ, ರಣಮದದಿಂದಲೂ ಕೂಡಿ, ಮಹಾಗಿರಿಮಿವ-ದೊಡ್ಡ ಬೆಟ್ಟದಂತೆ, ಉಚ್ಛ್ರಿತಂ - ಉನ್ನತವಾದ, ಅಶ್ವಕರ್ಣಂ - ಅಶ್ವಕರ್ಣವೆಂಬ ಗಿಡವನ್ನು, ಸಮಾದಾಯ - ಹಿಡಿದು ತೂರ್ಣಂ - ಜಾಗ್ರತೆಯಾಗಿ, ಉತ್ಪಾಟಯಾಮಾಸ - ಪೆಳಗಿಸಿಕೊಂಡನು. || ೨೦ || ಮಹಾದ್ಯುತಿಃ - ಬಹಳ ತೇಜೋವಂತನಾದ, ಸಃ - ಆ ಆಂಜನೇಯನು, ಮಹಾಸ್ಕಂಧಂ - ಆ ದೊಡ್ಡ ರಂಬೆಗಳುಳ್ಳ, ತಂಅಶ್ವಕರ್ಣಂ - ಆ ಅಶ್ವಕರ್ಣವೆಂಬ ಗಿಡವನ್ನು, ಪರಯಾ - ಬಹಳವಾದ, ಪ್ರೀತ್ಯಾ - ಸಂತೋಷ ದಿಂದ, ಗೃಹೀತ್ವಾ - ಹಿಡಿದುಕೊಂಡು, ಪ್ರಹಸ್ಯ - ನಕ್ಕು, ಸಂಯುಗೇ - ಕಾಳಗದಲ್ಲಿ, ಭ್ರಾಮಯಾಮಾಸ - ತಿರುಗಿಸಿದನು. || ೨೧ || ಊರುವೇಗೇನ - ತೊಡೆಯ ವೇಗದಿಂದ, ಪ್ರಧಾವನ್ - ಓಡಿಬರುತ್ತಿರುವ, ತರಸಾ - ಬಲದಿಂದ, ದ್ರುಮಾನ್ - ಗಿಡಗಳನ್ನು, ಪ್ರಭಂಜನ್ - ಮುರಿಯುತ್ತಿರುವ, ಹನುಮಾನ್ - ಆಂಜನೇಯನು, ಪರಮಕ್ರುದ್ಧಃ - ಬಹಳ ಕೋಪಗೊಂಡು, ಚರಣೈಃ - ಕಾಲುಗಳಿಂದ, ಕ್ಷಿತಿಂ - ನೆಲವನ್ನು, ದಾರಯನ್ - ಸೀಳುತ್ತ. ||೨೨|| ಧೀಮಾನ್ - ಬುದ್ಧಿಶಾಲಿಯಾದ, ಹನುಮಾನ್ - ಆಂಜನೇಯನು, ಸಗಜಾರೋಹಾನ್ - ಗಜಸಾದಿಗಳೊಡಗೂಡಿದ, ಗಜಾನ್ - ಆನೆಗಳನ್ನು, ತಥಾ - ಹಾಗೆಯೇ, ಸರಥಾನ್ - ತೇರುಗಳಿಂದೊಡಗೂಡಿದ, ರಥಿನಃ - ರಥಿಕರನ್ನೂ, ಪದಾತಿಗಾನ್ - ಪಾದಚಾರಿಗಳಾದ, ರಾಕ್ಷಸಾಂಶ್ಚ - ರಕ್ಕಸರನ್ನೂ, ಜಘಾನ - ಹೊಡೆದನು. || ೨೩ || ಸಮರೇ - ಕಾಳೆಗದಲ್ಲಿ, ಕ್ರುದ್ಧಃ - ಕೋಪಗೊಂಡ, ಅಂತಕಮಿವ - ಯಮನಂತೆ, ಪ್ರಾಣಹಾರಿಣಂ - ಪ್ರಾಣಗಳನ್ನು ಅಪಹರಿಸುತ್ತಿರುವ, ತಂಹನೂಮಂತಂ - ಆ ಆಂಜನೇಯನನ್ನು, ಅಭಿಪ್ರೇಕ್ಷ್ಯ - ಕಂಡು, ರಾಕ್ಷಸಾಃ- ರಕ್ಕಸರು, ವಿಪ್ರದುದ್ರುವುಃ - ಓಡಿಹೋದರು. ||೨೪|| ಸಂಕ್ರುದ್ಧಂ - ಕೋಪಿಷ್ಠನಾಗಿ, ಆಪತಂತಂ -

---

ಸ್ಕಂಧವಂತವೂ ಆದ ಆ ಪರ್ವತವನ್ನು ಪೆಳಗಿಸಿ ಕೈಯಲ್ಲಿ ಹಿಡಿದು ಆ ಅಕಂಪನನನ್ನು ಹಾಸ್ಯ ಮಾಡಿ ನಕ್ಕು ಅದನ್ನು ಗಿರಗಿರನೆ ತಿರುಗಿಸಿ ಬಹು ವೇಗವಾಗಿ ಓಡುತ್ತ ತನ್ನ ಊರುವೇಗದಿಂದಲೇ ಮಾರ್ಗಮಧ್ಯದಲ್ಲಿರುವ ವೃಕ್ಷಗಳೆಲ್ಲವನ್ನೂ ಉರುಳಿಸಿ, ಪಾದಘಟ್ಟನದಿಂದ ಭೂಮಿಯನ್ನೇ ಭೇದಿಸುತ್ತ ಹೊರಟನು. || ೧೭-೨೨ || ಆ ಬಳಿಕ ಆತನು ಗಜಗಳನ್ನೂ, ಗಜಗಳನ್ನೇರಿ ಕುಳಿತಿದ್ದ ಮಾವುತರನ್ನೂ, ರಥಗಳನ್ನೂ, ರಥಗಳನ್ನೇರಿದ್ದ ರಥಿಕರನ್ನೂ, ಪದಾತಿಗಳನ್ನೂ, ರಾಕ್ಷಸವೀರರನ್ನೂ ಸಂಹರಿಸಿದನು. ಆ ರೀತಿ ಯುದ್ಧಭೂಮಿಯಲ್ಲಿ ಪ್ರಳಯಕಾಲದ ಯಮನಂತೆ ಪ್ರಾಣಾಪಹಾರವನ್ನು ಮಾಡಿ ಮುಂದುವರಿಯುತ್ತಿದ್ದ ಆ ಹನುಮಂತನನ್ನು ನೋಡಿ ಅಲ್ಲಿದ್ದ ರಾಕ್ಷಸರೆಲ್ಲರೂ ಭಯಪೀಡಿತರಾಗಿ ಪ್ರಾಣಗಳುಳಿದರೆ ಸಾಕೆಂದು ದಿಕ್ಕುದಿಕ್ಕುಗಳಿಗೂ ಓಡಿಹೋದರು. ಹೀಗೆ

ಸಂಕ್ರುದ್ಧಂ ರಾಕ್ಷಸಾನಾಂ ಭಯಾವಹಂ । ದದರ್ಶಾಽಕಂಪನೋ ವೀರಶ್ಚುಕ್ರೋಧಚ ನನಾದಚ ॥ ೨೫ ॥ ಸಚತುರ್ದಶಭಿರ್ಬಾಣೈಃ ಶಿತೈರ್ದೇಹವಿದಾರಣೈಃ । ನಿರ್ಬಿಭೇದ ಹನೂಮಂತಂ ಮಹಾವೀರ್ಯಮಕಂಪನಃ ॥೨೬॥ ಸ ತದಾ ಪ್ರತಿವಿದ್ಧಸ್ತು ಬಹ್ವೀಭಿಃ ಶರವೃಷ್ಟಿಭಿಃ । ಹನುಮಾನ್ ದದೃಶೇ ವೀರಃ ಪ್ರರೂಢಇವ ಸಾನುಮಾನ್ ॥ ೨೭ ॥ ವಿರರಾಜ ಮಹಾಕಾಯೋ ಮಹಾವೀರ್ಯೋ ಮಹಾಮನಾಃ । ಪುಷ್ಪಿತಾಶೋಕ ಸಂಕಾಶೋ ವಿಧೂಮಇವ ಪಾವಕಃ ॥ ೨೮ ॥ ತತೋಽನ್ಯಂ ವೃಕ್ಷಮುತ್ಪಾಟ್ಯ ಕೃತ್ವಾ ವೇಗಮನುತ್ತಮಂ । ಶಿರಸ್ಯಭಿಜಘಾನಾಶು ರಾಕ್ಷಸೇಂದ್ರಮಕಂಪನಂ ॥ ೨೯ ॥ ಸವೃಕ್ಷೇಣ ಹತಸ್ತೇನ ಸಕ್ರೋಧೇನ ಮಹಾತ್ಮನಾ । ರಾಕ್ಷಸೋ ವಾನರೇಂದ್ರೇಣ

ಬರುತ್ತಿರುವ, ರಾಕ್ಷಸಾನಾಂ - ರಕ್ಕಸರಿಗೆ, ಭಯಾವಹಂ - ಭಯಂಕರನಾದ, ತಂ - ಆ ಹನುಮಂತನನ್ನು, ಶೂರಃ - ಶೌರ್ಯವಂತನಾದ, ಅಕಂಪನಃ - ಅಕಂಪನನು, ದದರ್ಶ - ಕಂಡನು, ಚುಕ್ರೋಧಚ - ಕ್ರುದ್ಧನಾಗಿ, ನನಾದಚ - ಗರ್ಜಿಸಿದನು. ॥೨೫॥ ಸಃಅಕಂಪನಃ - ಆ ಅಕಂಪನನು, ದೇಹವಿದಾರಣೈಃ - ಶರೀರವನ್ನು ಭೇದಿಸುತ್ತಿರುವ, ಶಿತೈಃ - ತೀಕ್ಷ್ಣಗಳಾದ, ಚತುರ್ದಶಭಿಃ - ಹದಿನಾಲ್ಕಾದ, ಬಾಣೈಃ - ಬಾಣಗಳಿಂದ, ಮಹಾವೀರ್ಯಂ - ಮಹಾ ಸಾಮರ್ಥ್ಯವಂತನಾದ, ಹನೂಮಂತಂ - ಆಂಜನೇಯನನ್ನು, ನಿರ್ಬಿಭೇದ - ಭೇದಿಸಿದನು. ॥ ೨೬ ॥ ತದಾ - ಆಗ, ಬಹ್ವೀಭಿಃ - ಅನೇಕಗಳಾದ, ಶರವೃಷ್ಟಿಭಿಃ - ಬಾಣವರ್ಷಗಳಿಂದ, ಪ್ರತಿವಿದ್ಧಃ - ಹೊಡೆಯಲ್ಪಟ್ಟ, ವೀರಃ - ಶೂರನಾದ. ಸಹನುಮಾನ್ - ಆ ಆಂಜನೇಯನು, ಪ್ರರೂಢಃ - ಚಿಗುರಿದ ವೃಕ್ಷಗಳುಳ್ಳ, ಸಾನುಮಾನಿವ - ಬೆಟ್ಟದಂತೆ, ದದೃಶೇ-ಕಾಣಲ್ಪಟ್ಟನು. ॥ ೨೭ ॥ ಮಹಾಕಾಯಃ-ದೊಡ್ಡ ಶರೀರವುಳ್ಳ, ಮಹಾವೀರ್ಯಃ-ಮಹಾ ಪರಾಕ್ರಮಶಾಲಿಯಾದ, ಮಹಾಮನಾಃ-ಮಹಾ ಮನಸ್ವಿಯಾದ ಆಂಜನೇಯನು, ಪುಷ್ಪಿ....ಶಃ-ಹುವ್ವು ಬಿಟ್ಟಿರುವ ಅಶೋಕವೃಕ್ಷಕ್ಕೆ ಸಮಾನನಾದವನಾಗಿ, ವಿಧೂಮಃ - ಹೊಗೆಯಿಲ್ಲದಿರುವ, ಪಾವಕಇವ - ಅಗ್ನಿಯಂತೆ, ವಿರರಾಜ - ಹೊಳೆಯುತ್ತಿದ್ದನು. ॥ ೨೮ ॥ ತತಃ - ಬಳಿಕ, ಅನ್ಯಂ - ಮತ್ತೊಂದಾದ, ವೃಕ್ಷಂ - ಗಿಡವನ್ನು, ಉತ್ಪಾಟ್ಯ - ಕಿತ್ತು, ಅನುತ್ತಮಂ - ಸರ್ವೋತ್ತಮವಾದ, ವೇಗಂ - ವೇಗವನ್ನು, ಕೃತ್ವಾ - ಮಾಡಿ, ರಾಕ್ಷಸೇಂದ್ರಂ - ರಾಕ್ಷಸಾಧಿಪತಿಯಾದ, ಅಕಂಪನಂ - ಅಕಂಪನನ್ನು, ಶಿರಸಿ - ಮಂಡೆಯಲ್ಲಿ, ಆಶು - ಜಾಗ್ರತೆಯಾಗಿ, ಅಭಿಜಘಾನ - ಹೊಡದನು. ॥ ೨೯ ॥ ಸಕ್ರೋಧೇನ - ಕೋಪದಿಂದೊಡಗೂಡಿದ, ಮಹಾತ್ಮನಾ - ಮಹಾ ಧೀರನಾದ, ತೇನವಾನರೇಂದ್ರೇಣ-

ರಾಕ್ಷಸರೆಲ್ಲರಿಗೂ ಭಯವನ್ನುಂಟುಮಾಡಿ ಮಹಾ ಕ್ರೋಧಾವೇಶದಿಂದ ತನಗಭಿಮುಖವಾಗಿ ಬರುತ್ತಿರುವವನೂ ಆದ ಆ ವೀರ ಹನುಮಂತನನ್ನು ನೋಡಿ ಅಕಂಪನನು ಕೋಪೋದ್ದೀಪಿತನಾಗಿ ಬಹು ಭಯಂಕರವಾದ ಸಿಂಹನಾದವನ್ನುಮಾಡಿ ಅವನಮೇಲೆ ಬಹು ತೀಕ್ಷ್ಣಗಳಾದ ಹತ್ತು ಬಾಣಗಳನ್ನು ಪ್ರಯೋಗಿಸಿ ಬಾಧೆಗೊಳಿಸಿದನು. ॥ ೨೫–೨೬ ॥ ಹೀಗೆ ಅನೇಕ ಬಾಣಗಳಿಂದ ಘಾತಿಸಲ್ಪಟ್ಟ ಮಹಾ ವೀರನಾದ ಹನುಮಂತನು ವೃಕ್ಷಗಳಿಂದ ತುಂಬಿದ ಪರ್ವತದಂತೆ ಬೆಳಗುತ್ತಿದ್ದನು. ಇಷ್ಟೆಯಲ್ಲದೆ ಆ ವೀರ ಹನುಮಂತನು ಕುಸುಮಿತವಾದ ಅಶೋಕವೃಕ್ಷದಂತೆಯೂ, ಹೊಗೆಯಿಲ್ಲದ ಬೆಂಕಿಯಂತೆಯೂ ಬೆಳಗುತ್ತಿದ್ದನು. ಆ ಬಳಿಕ ಅವನು ಬಹಳವಾದ ವೇಗವನ್ನು ತಾಳಿ ಮತ್ತೊಂದು ವೃಕ್ಷವನ್ನು ಸೆಳಗಿಸಿ ಅದನ್ನು ಆ ಅಕಂಪನನ ಶಿರಸ್ಸಿನಮೇಲೆ ಬಲವಾಗಿ ಪ್ರಯೋಗಿಸಿದನು. ಮಹಾನುಭಾವನೂ, ಮಹಾ

ಪಪಾತಚ ಮಮಾರಚ || ೩೦ || ತಂ ದೃಷ್ಟ್ವಾ ನಿಹತಂ ಭೂಮೌ ರಾಕ್ಷಸೇಂದ್ರಮಕಂಪನಂ | ವ್ಯಥಿತಾ ರಾಕ್ಷಸಾಸ್ಸರ್ವೇ ಕ್ಷಿತಿಕಂಪ ಇವ ದ್ರುಮಾಃ || ೩೧ || ತ್ಯಕ್ತಪ್ರಹರಣಾಸ್ಸರ್ವೇ ರಾಕ್ಷಸಾಸ್ತೇ ಪರಾಜಿತಾಃ | ಲಂಕಾಮಭಿಯಯುಸ್ತ್ರಸ್ತಾ ವಾನರೈಸ್ತೈರಭಿದ್ರುತಾಃ ||೩೨|| ತೇ ಮುಕ್ತಕೇಶಾ ಸಂಭ್ರಾಂತಾ ಭಗ್ನಮಾನಾಃ ಪರಾಜಿತಾಃ | ಸ್ರವಚ್ಛ್ರಮಜಲೈರಂಗೈಃ ಶ್ವಸಂತೋ ವಿಪ್ರದುದ್ರುವುಃ || ೩೩ || ಅನ್ಯೋನ್ಯಂ ಪ್ರಮಮಂಥುಸ್ತೇ ವಿವಿಶುರ್ನಗರಂ ಭಯಾತ್ | ಪೃಷ್ಠತಸ್ತೇ ಸುಸಂಮೂಢಾಃ ಪ್ರೇಕ್ಷಮಾಣಾ ಮುಹುರ್ಮುಹುಃ || ೩೪ || ತೇಷು ಲಂಕಾಂ ಪ್ರವಿಷ್ಟೇಷು ರಾಕ್ಷಸೇಷು

ಆ ಕಪಿವೀರನಾದ ಆಂಜನೇಯನಿಂದ, ವೃಕ್ಷೇಣ - ಮರದಿಂದ, ಹತಃ - ಹೊಡೆಯಲ್ಪಟ್ಟ, ಸರಾಕ್ಷಸಃ- ಆ ಅಕಂಪನನೆಂಬ ರಾಕ್ಷಸನು, ಪಪಾತ - ನೆಲಕ್ಕೆ ಬಿದ್ದು, ಮಮಾರಚ - ಮೃತನೂ ಆದನು. ||೩೦|| ರಾಕ್ಷಸೇಂದ್ರಂ - ರಾಕ್ಷಸೋತ್ತಮನಾದ, ತಮಕಂಪನಂ - ಆ ಅಕಂಪನನ್ನು, ಭೂಮೌ - ನೆಲದಲ್ಲಿ, ನಿಹತಂ - ಹೊಡೆಯಲ್ಪಟ್ಟವನನ್ನಾಗಿ, ದೃಷ್ಟ್ವಾ - ಕಂಡು, ಸರ್ವೇರಾಕ್ಷಸಾಃ - ಸಮಸ್ತ ರಾಕ್ಷಸರೂ, ಕ್ಷಿತಿಕಂಪೇ - ಭೂಕಂಪದಲ್ಲಿ, ದ್ರುಮಾಇವ - ಮರಗಳಂತೆ, ವ್ಯಥಿತಾಃ - ವ್ಯಸನಗೊಂಡವರು, ಬಭೂವುಃ - ಆದರು. ||೩೧|| ತ್ಯಕ್ತ....ಣಾಃ - ಬಿಡಲ್ಪಟ್ಟ ಆಯುಧಗಳುಳ್ಳವರಾಗಿ, ಸರ್ವೇ - ಸಮಸ್ತರಾದ, ತೇರಾಕ್ಷಸಾಃ - ಆ ರಾಕ್ಷಸರೂ, ತೈರ್ವಾನರೈಃ - ಆ ಕಪಿಗಳಿಂದ, ಪರಾಜಿತಾಃ - ಜಯಿಸಲ್ಪಟ್ಟವರಾಗಿ, ತ್ರಸ್ತಾಃ - ಭಯಗೊಂಡು, ಲಂಕಾಂ - ಲಂಕಾಪಟ್ಟಣವನ್ನು ಕುರಿತು, ಅಭಿಯಯುಃ- ಓಡಿಹೋದರು. ||೩೨|| ಮುಕ್ತಕೇಶಾಃ - ಬಿಡಲ್ಪಟ್ಟ ಕೂದಲುಗಳುಳ್ಳ, ಪರಾಜಿತಾಃ - ಜಯಿಸಲ್ಪಟ್ಟ. ತೇ - ಆ ರಕ್ಕಸರು, ಭಗ್ನಮಾನಾಃ - ಮುರಿಯಲ್ಪಟ್ಟ ಗರ್ವವುಳ್ಳವರಾಗಿ, ಸಂಭ್ರಾಂತಾಃ - ಭ್ರಾಂತಿಗೊಂಡವರಾಗಿ, ಸ್ರವ....ಲೈಃ - ಆಯಾಸದಿಂದ ಸುರಿಯುತ್ತಿರುವ ಬೆವರುನೀರುಳ್ಳ, ಅಂಗೈಃ - ಶರೀರಗಳಿಂದ, ಶ್ವಸಂತಃ - ನಿಟ್ಟುಸಿರುಬಿಡುತ್ತ, ವಿಪ್ರದುದ್ರುವುಃ - ಓಡಿಹೋದರು. || ೩೩ || ತೇ - ಆ ರಕ್ಕಸರು, ಅನ್ಯೋನ್ಯಂ - ಒಬ್ಬರನ್ನೊಬ್ಬರು, ಪ್ರಮಮಂಥುಃ - ಹೊಡೆದರು, ತೇ - ಆ ರಕ್ಕಸರು, ಸುಸಂಮೂಢಾಃ-ಬಹಳ ಬುದ್ಧಿಹೀನನಾಗಿ, ಮುಹುರ್ಮುಃ-ಬಾರಿಬಾರಿಗೂ, ಪೃಷ್ಠತಃ-ಹಿಂದುಗಡೆ, ಪ್ರೇಕ್ಷಮಾಣಾಃ - ನೋಡುತ್ತಿರುವವರಾಗಿ, ಭಯಾತ್ - ಭೀತಿಯಿಂದ, ನಗರಂ - ಪಟ್ಟಣವನ್ನು, ವಿವಿಶುಃ - ಪ್ರವೇಶ ಮಾಡಿದರು. || ೩೪ || ತೇಷುರಾಕ್ಷಸೇಷು - ಆ ರಕ್ಕಸರು, ಲಂಕಾಂ - ಲಂಕಾ

ಕೋಪನನೂ ಆದ ಆ ಹನುಮಂತನು ಬಿಸುಟ ಆ ವೃಕ್ಷದ ಹೊಡೆತದಿಂದ ಆ ಅಕಂಪನ ರಾಕ್ಷಸನು ನೆಲಕ್ಕುರುಳಿ ಮಡಿದುಹೋದನು. || ೨೭–೩೦ || ಹೀಗೆ ಹನುಮಂತನು ಮಾಡಿದ ವೃಕ್ಷಪ್ರಯೋಗದಿಂದ ಮಡಿದುರುಳಿದ ಆ ಅಕಂಪನನನ್ನು ನೋಡಿ ರಣರಂಗದಲ್ಲಿದ್ದ ರಾಕ್ಷಸರೆಲ್ಲರೂ ಭೂಕಂಪ ಬಂದಂದು ಗಡಗಡನೆ ನಡುಗುವ ಮರಗಳಂತೆ ನಡುಗುತ್ತಿದ್ದರು. ಆ ಬಳಿಕ ಅಪಜಯಹೊಂದಿದ ಆ ರಾಕ್ಷಸರೆಲ್ಲರೂ ಭಯಮೋಹಿತರಾಗಿ, ವಾನರವೀರರು ಅಟ್ಟಿಬಂದು ಪ್ರಹರಿಸುತ್ತಿರಲು ದಿಕ್ಕುಗಾಣದೆ ಪಲಾಯನ ಸೂಕ್ತವನ್ನು ಪಠಿಸಿದರು. ಅವರು ಕೆದರಿದ ತಲೆಗೂದಲುಗಳುಳ್ಳವರೂ, ಬೆವರಿದ ಮೈಯುಳ್ಳವರೂ ಆಗಿ ಒಬ್ಬರಮೇಲೊಬ್ಬರು ಬಿದ್ದು ಲಂಕಾಪಟ್ಟಣಕ್ಕೆ ಓಡಿಹೋದರು. ಹಾಗೆ ಹೋಗುವಾಗ ವಾನರರು ತಮ್ಮನ್ನಟ್ಟಿ ಬರುವರೇನೋ ಎಂಬ ಭಯದಿಂದ ಅಡಿಗಡಿಗೂ ಹಿಂತಿರುಗಿ ನೋಡುತ್ತ ಓಡುತ್ತಿದ್ದರು.

ಮಹಾಬಲಾಃ । ಸಮೇತ್ಯ ಹರಯಸ್ಸರ್ವೇ ಹನುಮಂತಮಪೂಜಯನ್ ॥ ೩೫ ॥ ಸೋಽಪಿ ಪ್ರಹೃಷ್ಟಸ್ತಾನ್ ಸರ್ವಾನ್ ಹರೀನ್ ಪ್ರತ್ಯಭಿಪೂಜಯತ್ । ಹನುಮಾನ್ ಸತ್ವಸಂಪನ್ನೋ ಯಥಾರ್ಹಮನುಕೂಲತಃ ॥೩೬॥ ವಿನೇದುಶ್ಚ ಯಥಾಪ್ರಾಣಂ ಹರಯೋ ಜಿತಕಾಶಿನಃ । ಚಕರ್ಷುಶ್ಚ ಪುನಸ್ತತ್ರ ಸಪ್ರಾಣಾನಪಿ ರಾಕ್ಷಸಾನ್ ॥ ೩೭ ॥ ಸವೀರಶೋಭಾಮಭಜನ್ಮಹಾಕಪಿಸ್ಸಮೇತ್ಯ ರಕ್ಷಾಂಸಿ ನಿಹತ್ಯ ಮಾರುತಿಃ । ಮಹಾಸುರಂ ಭೀಮಮಮಿತ್ರನಾಶನಂ ಯಥೈವ ವಿಷ್ಣುರ್ಬಲಿನಂ ಚಮೂಮುಖೇ ॥ ೩೮ ॥

ಪಟ್ಟಣವನ್ನು, ಪ್ರವಿಷ್ಟೇಷು - ಪ್ರವೇಶ ಮಾಡಿದ ಬಳಿಕ, ಸರ್ವೇ - ಸಮಸ್ತರಾದ, ಹರಯಃ - ಕಪಿಗಳು, ಸಮೇತ್ಯ - ಬಂದು, ಹನೂಮಂತಂ - ಆಂಜನೇಯನನ್ನು, ಅಪೂಜಯನ್ - ಶ್ಲಾಘಿಸಿದರು. ||೩೫|| ಸತ್ವಸಂಪನ್ನಃ - ಸತ್ವಗುಣಸಂಪನ್ನನಾದ, ಸಹನುಮಾನಪಿ - ಆ ಆಂಜನೇಯನೂ ಕೂಡ, ಪ್ರಹೃಷ್ಟಃ - ಸಂತೋಷಗೊಂಡವನಾಗಿ, ಸರ್ವಾನ್ - ಸಮಸ್ತರಾದ, ತಾನ್‌ಹರೀನ್ - ಆ ವಾನರರನ್ನು, ಯಥಾರ್ಹಂ - ಯಥಾಯೋಗ್ಯವಾಗಿ, ಅನುಕೂಲತಃ - ಯೋಗ್ಯವಾದ ಮಾತುಗಳಿಂದ, ಪ್ರತ್ಯಭಿಪೂಜಯತ್ - ಬದಲಾಗಿ ಶ್ಲಾಘಿಸಿದನು. ||೩೬|| ಜಿತಕಾಶಿನಃ - ಜಯಶೀಲರಾದ, ಹರಯಶ್ಚ - ವಾನರರೂ, ಯಥಾಪ್ರಾಣಂ - ಬಲವಿದ್ದಷ್ಟು, ವಿನೇದುಶ್ಚ - ಗರ್ಜನೆ ಮಾಡಿದರು, ತತ್ರ - ಆ ರಣರಂಗದಲ್ಲಿ, ಸಪ್ರಾಣಾನಪಿ - ಪ್ರಾಣಗಳಿಂದೊಡಗೂಡಿದ, ರಾಕ್ಷಸಾನ್ - ರಕ್ಕಸರನ್ನು, ಪುನಃ - ಮತ್ತು, ಚಕರ್ಷುಶ್ಚ - ಸೆಳೆಯಲೂ ಸೆಳೆದರು. || ೩೭ || ಮಹಾಕಪಿಃ - ಮಹಾ ವಾನರನಾದ, ಸಮಾರುತಿಃ - ಆ ಆಂಜನೇಯನು, ಸಮೇತ್ಯ - ಬಂದು, ರಕ್ಷಾಂಸಿ - ರಕ್ಕಸರನ್ನು, ನಿಹತ್ಯ - ಕೊಂದು, ಅಮಿತ್ರನಾಶನಂ - ಶತ್ರುಸಂಹಾರಕನಾದ, ಭೀಮಂ - ಭಯಂಕರನಾದ, ಬಲಿನಂ - ಬಲವಂತನಾದ, ಮಹಾಸುರಂ - ದೊಡ್ಡ ರಾಕ್ಷಸನಾದ ಅಕಂಪನನ್ನೂ ಕೂಡ, ನಿಹತ್ಯ - ಹೊಡದು, ಚಮೂಮುಖೇ - ಸೈನ್ಯದಮುಂಗಡೆ, ವಿಷ್ಣುರ್ಯಥಾ - ಶ್ರೀಮಹಾ ವಿಷ್ಣುವಿನಂತೆ, ವೀರಶೋಭಾಂ - ಶೂರರಲ್ಲಿ ಪ್ರಕಾಶವನ್ನು, ಅಭಜತ್ - ಹೊಂದಿದನು. || ೩೮ || ತದಾ - ಆ ಕಾಲದಲ್ಲಿ, ದೇವಗಣಾಃ - ದೇವತೆಗಳ ತಂಡಗಳು, ಕಪಿಂ-ಆಂಜನೇಯನನ್ನು, ಅಪೂಜಯನ್-ಶ್ಲಾಘನೆ ಮಾಡಿದರು, ರಾಮಃ-ಶ್ರೀರಾಮನು, ಸ್ವಯಂ - ತಾನು, ಅತಿಬಲಃ - ಬಹಳ ಬಲಾಢ್ಯನಾದ, ಲಕ್ಷ್ಮಣಶ್ಚ - ಲಕ್ಷ್ಮಣನೂ, ಅಪೂಜಯನ್ - ಗೌರವಿಸಿದರು, ತಥೈವ - ಹಾಗೆಯೇ, ಸುಗ್ರೀವಮುಖಾಃ - ಸುಗ್ರೀವನೇ ಮೊದಲಾದ, ಪ್ಲವಂಗಮಾಃ-

ಹೀಗೆ ರಾಕ್ಷಸರೆಲ್ಲರೂ ಹೊರಟುಹೋದ ಬಳಿಕ ಮಹಾ ಬಲಾಢ್ಯರಾದ ವಾನರರೆಲ್ಲರೂ ಮಹಾ ಪರಾಕ್ರಮವಂತನಾದ ಹನುಮಂತನನ್ನು ಬಹುವಾಗಿ ಗೌರವಿಸಿ ಪೂಜಿಸಿದರು. || ೩೧–೩೫ || ಆಗ ಹನುಮಂತನೂ ಸಹ ಅವರನ್ನು ಪ್ರತಿಯಾಗಿ ಪೂಜಿಸಿದನು. ಇಷ್ಟೆಯಲ್ಲದೆ ಮಹಾ ಶೂರನಾದ ಆ ಹನುಮಂತನು ಆ ವಾನರರನ್ನೆಲ್ಲ ಯಥೋಚಿತವಾಗಿಯೂ, ಯಥಾನುಕೂಲವಾಗಿಯೂ ಪೂಜಿಸಿದನು. ಆ ಸಮಯದಲ್ಲಿ ಜಯಶೀಲರಾದ ಆ ವಾನರರೆಲ್ಲರೂ ತಮ್ಮ ತಮ್ಮ ಶಕ್ತಿಸಾಮರ್ಥ್ಯವಿದ್ದಷ್ಟೇ ಬಲವಾಗಿ ಕೂಗಿ ಕೋಲಾಹಲಮಾಡಿ ಅಳಿದುಳಿದಿದ್ದ ರಾಕ್ಷಸರೆಲ್ಲರ ಪ್ರಾಣಗಳನ್ನೂ ಸೆಳೆದರು. ಹೀಗೆ ವಾಯುಪುತ್ರನೂ, ವಾನರೋತ್ತಮನೂ, ಶತ್ರುನಾಶಕನೂ ಆದ ಆ ಹನುಮಂತನು ಬಲಿಯನ್ನು ವಿಷ್ಣುವು ನಿಗ್ರಹಿಸಿದಂತೆ ಆ ಅಕಂಪನ

ಅಪೂಜಯರ್ನ್ ದೇವಗಣಾಸ್ತದಾ ಕಪಿಂ
ಸ್ವಯಂಚ ರಾಮೋಽತಿ ಬಲಶ್ಚ ಲಕ್ಷ್ಮಣಃ ।
ತಥೈವ ಸುಗ್ರೀವಮುಖಾಃ ಪ್ಲವಂಗಮಾ
ವಿಭೀಷಣಶ್ಚೈವ ಮಹಾಬಲಸ್ತಥಾ ॥ ೩೯ ॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಷಟ್ಪಂಚಾಶಸ್ಸರ್ಗಃ.



ವಾನರರು, ಅಪೂಜರ್ನ್ - ಶ್ಲಾಘನೆ ಮಾಡಿದರು, ತಥಾ - ಹಾಗೆಯೇ, ಮಹಾಬ...ಃ - ಬಹಳ ಬಲಶಾಲಿ ಯಾದ, ವಿಭೀಷಣಶ್ಚೈವ - ವಿಭೀಷಣನೂ, ಅಪೂಜಯತ್ - ಶ್ಲಾಘಿಸಿದನು. ॥ ೩೯ ॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಷಟ್ಪಂಚಾಶಸ್ಸರ್ಗಃ.



ನನ್ನೂ ನಿಗ್ರಹಿಸಿ ದೇವತೆಗಳಿಂದಲೂ, ಶ್ರೀರಾಮ ಲಕ್ಷ್ಮಣರಿಂದಲೂ, ಸುಗ್ರೀವನಿಂದಲೂ, ರಾಕ್ಷಸಶ್ರೇಷ್ಠನಾದ ವಿಭೀಷಣನಿಂದಲೂ ಪೂಜಿತನಾದನು. ॥ ೩೬–೩೯ ॥

ಇಂತಿದು ಹನುಮತ್ಕೃತಾಕಂಪನ ಹನನವೆಂಬ ಐವತ್ತಾರನೆಯ
ಸರ್ಗವು ಸಮಾಪ್ತವಾದುದು.



# ಯುದ್ಧಕಾಂಡೇ ಸಪ್ತಪಂಚಾಶಸ್ಸರ್ಗಃ

ಅಕಂಪನವಧಂ ಶ್ರುತ್ವಾ ಕ್ರುದ್ಧೋ ವೈ ರಾಕ್ಷಸೇಶ್ವರಃ । ಕಿಂಚಿದ್ದೀನಮುಖ ಶ್ಚಾಪಿ ಸಚಿವಾಂಸ್ತಾನುದೈಕ್ಷತ ॥ ೧ ॥ ಸತು ಧ್ಯಾತ್ವಾ ಮುಹೂರ್ತಂತು ಮಂತ್ರಿಭಿ ಸ್ಸಂವಿಚಾರ್ಯಚ । ತತಸ್ತು ರಾವಣಃ ಪೂರ್ವದಿವಸೇ ರಾಕ್ಷಸಾಧಿಪಃ । ಪುರೀಂ ಪರಿಯಯೌ ಲಂಕಾಂ ಸರ್ವಾನ್ ಗುಲ್ಮಾನವೇಕ್ಷಿತುಂ ॥ ೨ ॥ ತಾಂ ರಾಕ್ಷಸಗಣೈ ರ್ಗುಪ್ತಾಂ ಗುಲ್ಮೈರ್ಬಹುಭಿರಾವೃತಾಂ । ದದರ್ಶ ನಗರೀಂ ಲಂಕಾಂ ಪತಾಕಾಧ್ವಜ ಮಾಲಿನೀಂ ॥ ೩ ॥ ರುದ್ಧಾಂತು ನಗರೀಂ ದೃಷ್ಟ್ವಾ ರಾವಣೋ ರಾಕ್ಷಸೇಶ್ವರಃ ।

---

ರಾಕ್ಷಸೇಶ್ವರಃ - ರಾವಣಾಸುರನು, ಅಕಂಪನವಧಂ - ಅಕಂಪನನ ಸಂಹಾರವನ್ನು, ಶ್ರುತ್ವಾ- ಕೇಳಿ, ಕ್ರುದ್ಧಃ - ಕೋಪಗೊಂಡು, ಕಿಂಚಿತ್ - ಸ್ವಲ್ಪ, ದೀನಮುಖಶ್ಚಾಪಿ - ವಿವರ್ಣಮುಖವುಳ್ಳ ವನೂ ಆಗಿ, ತಾನ್‌ಸಚಿವಾನ್ - ಆ ಮಂತ್ರಿಗಳನ್ನು, ಉದೈಕ್ಷತ - ನೋಡಿದನು. ॥೧॥ ರಾಕ್ಷಸಾಧಿಪಃ - ರಕ್ಕಸಾಧಿಪತಿಯಾದ, ಸರಾವಣಸ್ತು - ಆ ರಾವಣನಾದರೆ, ಮುಹೂರ್ತಂ - ಮುಹೂರ್ತಕಾಲ, ಧ್ಯಾತ್ವಾ-ಆಲೋಚಿಸಿ, ಮಂತ್ರಿಭಿಸ್ಸಹ-ಮಂತ್ರಿಗಳೊಡನೆ, ಸಂವಿಚಾರ್ಯಚ-ಚನ್ನಾಗಿ ವಿಮರ್ಶೆಯನ್ನೂ ಮಾಡಿ, ತತಃ - ಬಳಿಕ, ಪೂರ್ವದಿವಸೇ - ಆ ದಿವಸದ ಪೂರ್ವಾಹ್ನದಲ್ಲಿ, ಸರ್ವಾನ್ - ಸಮಸ್ತಗಳಾದ, ಗುಲ್ಮಾನ್ - ಸೇನಾನಿವೇಶಸ್ಥಾನಗಳನ್ನು, ಅವೇಕ್ಷಿತುಂ - ನೋಡುವುದಕ್ಕಾಗಿ, ಲಂಕಾಂಪುರೀಂ- ಲಂಕಾಪಟ್ಟಣವನ್ನು ಕುರಿತು, ಪರ್ಯಯೌ - ಹೊರಟನು. ॥ ೨ ॥ ರಾಕ್ಷಸಗಣೈಃ - ರಾಕ್ಷಸರ ತಂಡ ಗಳಿಂದ, ಗುಪ್ತಾಂ - ಸಂರಕ್ಷಿಸಲ್ಪಟ್ಟ, ಬಹುಭಿಃ - ಅನೇಕಗಳಾದ, ಗುಲ್ಮೈಃ - ರಾಕ್ಷಸವ್ಯೂಹಗಳಿಂದ, ಆವೃತಾಂ - ಸುತ್ತುವರೆದ, ಪತಾ......ನೀಂ - ಚಿಕ್ಕ ನಿಶಾನಿಗಳ ಮತ್ತು ಧ್ವಜಪಟಗಳ ಪಙ್ತಿಗಳುಳ್ಳ, ತಾಂಲಂಕಾಂನಗರೀಂ - ಆ ಲಂಕಾಪಟ್ಟಣವನ್ನು, ದದರ್ಶ - ಕಂಡನು. ॥ ೩ ॥ ರಾಕ್ಷಸೇಶ್ವರಃ - ರಾಕ್ಷ ಸಾಧಿಪತಿಯಾದ, ರಾವಣಃ - ರಾವಣನು, ನಗರೀಂ - ಪಟ್ಟಣವನ್ನು, ರುದ್ಧಾಂ - ತಡೆಮಾಡಲ್ಪಟ್ಟು ದನ್ನಾಗಿ, ದೃಷ್ಟ್ವಾ - ಕಂಡು, ಅಮರ್ಷಿತಃ - ಕೋಪಗೊಂಡವನಾಗಿ, ಕಾಲೇ - ಸಮಯದಲ್ಲಿ,

---

ಆ ತರುವಾಯ ರಾಕ್ಷಸೇಶ್ವರನಾದ ರಾವಣಾಸುರನು ಅಕಂಪನನ ವಧೆಯನ್ನು ಕೇಳಿ ಕೆಲಕಾಲ ಬತ್ತಿದ ಮುಖವುಳ್ಳವನಾಗಿದ್ದು ಆಮೇಲೆ ತನ್ನ ಬಳಿಯಲ್ಲಿದ್ದ ಮಂತ್ರಿಗಳೆಲ್ಲರನ್ನೂ ದೃಷ್ಟಿಸಿ ನೋಡಿದನು. ಅವನು ಮಂತ್ರಿಗಳೊಡನೆ ಇತಿಕರ್ತವ್ಯತೆಯ ವಿಚಾರದಲ್ಲಿ ಸ್ವಲ್ಪ ಹೊತ್ತು ಆಲೋಚಿಸಿ ಪೂರ್ವಾಹ್ನದಲ್ಲಿಯೇ ಅರಮನೆಯಿಂದ ಹೊರಹೊರಟು ಸಕಲ ಗುಲ್ಮ ಗಳನ್ನೂ ನೋಡಲಪೇಕ್ಷೆಯುಳ್ಳವನಾಗಿ ಲಂಕಾಪಟ್ಟಣವೆಲ್ಲವನ್ನೂ ನೋಡಿಬರಲು ಹೊರಟನು. ಆಮೇಲೆ ರಾಕ್ಷಸರ ಗುಂಪುಗಳಿಂದ ಸಂರಕ್ಷಿತವಾಗಿ ನಾನಾವಿಧಗಳಾದ ಗುಲ್ಮಗಳಿಂದಾವೃತ ವಾಗಿರುವುದೂ, ಪತಾಕೆಗಳ ಮತ್ತು ಧ್ವಜಗಳ ಸಾಲುಗಳಿಂದಲಂಕೃತವಾಗಿರುವುದೂ ಆದ ತನ್ನ ರಾಜಧಾನಿಯನ್ನು ಚೆನ್ನಾಗಿ ಕಣ್ಣಿಟ್ಟು ನೋಡಿದನು. ಆ ಸಮಯದಲ್ಲಿ ರಾಕ್ಷಸಾಧಿಪತಿಯಾದ ಆ ರಾವಣಾಸುರನು ಶತ್ರುಗಳಿಂದಾಕ್ರಮಿಸಲ್ಪಟ್ಟಿರುವ ತನ್ನ ರಾಜಧಾನಿಯೆಲ್ಲವನ್ನೂ ನೋಡಿ ಬಹಳವಾಗಿ ಕನಲಿ ರಣಪಂಡಿತನಾದ ಪ್ರಹಸ್ತನನ್ನು ಕುರಿತು, “ ಎಲೈ ಮಂತ್ರಿಶ್ರೇಷ್ಠನಾದ

ಉವಾಚಾಮರ್ಷಿತಃ ಕಾಲೇ ಪ್ರಹಸ್ತಂ ಯುದ್ಧಕೋವಿದಂ ॥ ೪ ॥ ಪುರಸ್ಯೋಪನಿವಿಷ್ಟಸ್ಯ ಸಹಸಾ ಪೀಡಿತಸ್ಯ ವಾ । ನಾನ್ಯಂ ಯುದ್ಧಾತ್ಪ್ರಪಶ್ಯಾಮಿ ಮೋಕ್ಷಂ ಯುದ್ಧವಿಶಾರದ! ॥೫॥ ಅಹಂ ವಾ ಕುಂಭಕರ್ಣೋ ವಾ ತ್ವಂವಾ ಸೇನಾಪತಿರ್ಮಮ। ಇಂದ್ರಜಿದ್ವಾ ನಿಕುಂಭೋವಾ ವಹೇಯುರ್ಭಾರಮೀದೃಶಂ ॥ ೬ ॥ ಸತ್ವಂ ಬಲಮತಃ ಶೀಘ್ರಮಾದಾಯ ಪರಿಗೃಹ್ಯಚ । ವಿಜಯಾಯಾಭಿನಿರ್ಯಾಹಿ ಯತ್ರ ಸರ್ವೇ ವನೌಕಸಃ ॥೭॥ ನಿರ್ಯಾಣಾದೇವ ತೇ ನೂನಂ ಚಪಲಾ ಹರಿವಾಹಿನೀ । ನರ್ದತಾಂ ರಾಕ್ಷಸೇಂದ್ರಾಣಾಂ ಶ್ರುತ್ವಾ ನಾದಂ ದ್ರವಿಷ್ಯತಿ ॥ ೮ ॥ ಚಪಲಾಹ್ಯವಿನೀತಾಶ್ಚ ಚಲಚಿತ್ತಾಶ್ಚ ವಾನರಾಃ । ನಸಹಿಷ್ಯಂತಿ ತೇ ನಾದಂ ಸಿಂಹನಾದಮಿವ ದ್ವಿಪಾಃ ॥ ೯ ॥

ಯುದ್ಧಕೋವಿದಂ - ಕಾಳಗದಲ್ಲಿ ಸಮರ್ಥನಾದ, ಪ್ರಹಸ್ತಂ - ಪ್ರಹಸ್ತನನ್ನು ಕುರಿತು, ಉವಾಚ - ಹೇಳಿದನು. ॥೪॥ ಹೇ ಯುದ್ಧವಿಶಾರದ - ಎಲೈ ಕಾಳಿಗದಲ್ಲಿ ಸಮರ್ಥನೇ, ಉಪನಿವಿಷ್ಟಸ್ಯ - ಸಮೀಪದಲ್ಲಿ ಶತ್ರುಸೈನ್ಯವುಳ್ಳ, ಸಹಸಾ - ಶೀಘ್ರವಾಗಿ, ಪೀಡಿತಸ್ಯವಾ - ಬಾಧೆಗೊಳಿಸಲ್ಪಟ್ಟ, ಪುರಸ್ಯ - ನಗರಕ್ಕೆ, ಯುದ್ಧಾತ್ - ಕಾಳಗದ ಹೊರತು, ಅನ್ಯಂ - ಮತ್ತೊಂದಾದ, ಮೋಕ್ಷಂ - ಬಿಡುಗಡೆಯ ಉಪಾಯನ್ನು, ನಪ್ರಪಶ್ಯಾಮಿ - ಕಾಣೆನು. ॥ ೫ ॥ ಅಹಂವಾ - ನಾನಾದರೂ, ಕುಂಭಕರ್ಣೋವಾ - ಕುಂಭಕರ್ಣನಾದರೂ, ಮಮ - ನನ್ನ, ಸೇನಾಪತಿಃ - ಸೈನ್ಯಾಧಿಪತಿಯಾದ, ತ್ವಂವಾ - ನೀನಾದರೂ, ಇಂದ್ರಜಿದ್ವಾ - ಇಂದ್ರಜಿತ್ತುವಾದರೂ, ನಿಕುಂಭೋವಾ - ನಿಕುಂಭನಾದರೂ, ಈದೃಶಂ - ಇಂಥಾದ್ದಾದ, ಭಾರಂ - ಈ ಭಾರವನ್ನು, ವಹೇಯುಃ - ವಹಿಸುವರಾಗಬೇಕು. ॥ ೬ ॥ ಅತಃ - ಈ ಕಾರಣದಿಂದ, ಸತ್ವಂ - ಅಂಥಾ ನೀನು, ಶೀಘ್ರಂ - ಜಾಗ್ರತೆಯಾಗಿ, ಬಲಂ - ಸೈನ್ಯವನ್ನು, ಆದಾಯ-ತೆಗದುಕೊಂಡು, ಪರಿಗೃಹ್ಯಚ-ಸ್ವೀಕಾರವನ್ನೂ ಮಾಡಿ, ಸರ್ವೇ-ಸಮಸ್ತರಾದ, ವನೌಕಸಃ - ಕಪಿಗಳು, ಯತ್ರ - ಎಲ್ಲಿ, ಸಂತಿ - ಇರುವರೋ, ತತ್ರ - ಅಲ್ಲಿ, ವಿಜಯಾಯ - ಜಯಕ್ಕಾಗಿ, ಅಭಿನಿರ್ಯಾಹಿ - ಹೊರಡು. ॥ ೭ ॥ ತೇ - ನಿನ್ನ, ನಿರ್ಯಾಣಾದೇವ - ಹೊರಡುವಿಕೆಯಿಂದಲೇ, ಚಪಲಾ - ಚಂಚಲವಾದ, ಹರಿವಾಹಿನೀ - ವಾನರಸೈನ್ಯವು, ನರ್ದತಾಂ - ಗರ್ಜಿಸುತ್ತಿರುವ, ರಾಕ್ಷಸೇಂದ್ರಾಣಾಂ - ರಾಕ್ಷಸಶ್ರೇಷ್ಠರ, ನಾದಂ - ಕೋಲಾಹಲಧ್ವನಿಯನ್ನು, ಶ್ರುತ್ವಾ - ಕೇಳಿ, ದ್ರವಿಷ್ಯತಿ - ಓಡಿಹೋಗುತ್ತದೆ, ನೂನಂ - ನಿಶ್ಚಯವು. ॥ ೮ ॥ ಚಪಲಾಃ - ಚಂಚಲರಾದ, ವಾನರಾಃ - ಕಪಿಗಳು, ಅವಿನೀತಾಃ - ದುರ್ವಿನೀತರೂ, ಚಪಲಚಿತ್ತಾಶ್ಚ - ಚಪಲಚಿತ್ತರೂ, ದ್ವಿಪಾಃ-

ಪ್ರಹಸ್ತನೇ! ಶತ್ರುಸೇನೆಗಳು ಬಳಿಯಲ್ಲಿಯೇ ಇದ್ದು, ಪಟ್ಟಣವೆಲ್ಲವೂ ಆ ಶತ್ರುಸೇನೆಗಳಿಂದ ಆಕ್ರಮಿಸಲ್ಪಟ್ಟಿರುವ ಈ ಸಮಯದಲ್ಲಿ ಯುದ್ಧದಿಂದಲ್ಲದೆ ಮತ್ತಾವ ವಿಧದಿಂದಲೂ ಶ್ರೇಯಸ್ಸುಂಟಾಗುವುದಿಲ್ಲವು. ॥೧–೫॥ ಆದುದರಿಂದೆಲೈ ಯುದ್ಧವಿಶಾರದನಾದ ಪ್ರಹಸ್ತನೇ! ನಾನು, ನೀನು, ನನ್ನ ತಮ್ಮನಾದ ಕುಂಭಕರ್ಣನು, ನನ್ನ ಮಗನಾದ ಇಂದ್ರಜಿತ್ತುವು, ನಿಕುಂಭನು ಇಷ್ಟು ಮಂದಿಯನ್ನುಳಿದು ಮತ್ತಾರೂ ಈ ನಗರ ಸಂರಕ್ಷಣೆಯ ಭಾರವನ್ನು ವಹಿಸಲಾರರು. ಈ ವಿಷಯದಲ್ಲಿ ಸಂದೇಹವೇ ಇಲ್ಲವು. ಎಲೈ ಸೇನಾಪತಿಯೇ! ಪ್ರಕೃತದಲ್ಲಿ ನೀನು ಸಮಸ್ತ ರಾಕ್ಷಸ ಸೇನೆಯನ್ನೂ ಹಿಂದಿಟ್ಟುಕೊಂಡು ವಾನರರಿಳಿದಿರುವ ಪ್ರದೇಶಕ್ಕೆ ಹೋಗು. ಅಯ್ಯಾ ಪ್ರಹಸ್ತನೇ! ನೀನು ರಾಕ್ಷಸ ಸೇನೆಯನ್ನು ಹಿಂದಿಟ್ಟುಕೊಂಡು ಹೋದೊಡನೆಯೇ, ನಮ್ಮ ರಾಕ್ಷಸವೀರರ ಸಿಂಹನಾದಗಳನ್ನು ಕೇಳಿ ಮೊದಲೇ ಚಪಲಚಿತ್ತರಾದ, ರೀತಿರಂಗವಿಲ್ಲದವ

ವಿದ್ರುತೇಚ ಬಲೇ ತಸ್ಮಿನ್ ರಾಮಸ್ಸೌಮಿತ್ರಿಣಾ ಸಹ । ಅವಶಸ್ತೇ ನಿರಾಲಂಬಃ ಪ್ರಹಸ್ತ ! ವಶಮೇಷ್ಯತಿ॥೧೦॥ಆಪತ್ಸಂಶಯಿತಾ ಶ್ರೇಯೋ ನತು ನಿಸ್ಸಂಶಯೀಕೃತಾ। ಪ್ರತಿಲೋಮಾನುಲೋಮಂವಾ ಯದ್ವಾ ನೋ ಮನ್ಯಸೇ ಹಿತಂ" ॥ ೧೧ ॥ ರಾವಣೇ ನೈವಮುಕ್ತಸ್ತು ಪ್ರಹಸ್ತೋ ವಾಹಿನೀಪತಿಃ । ರಾಕ್ಷಸೇಂದ್ರಮುವಾಚೇದಮಸುರೇಂದ್ರ ಮಿವೋಶನಾಃ ॥೧೨॥ "ರಾಜನ್ ! ಮಂತ್ರಿತಪೂರ್ವಂ ನಃ ಕುಶಲೈಸ್ಸಹಮಂತ್ರಿಭಿಃ । ವಿವಾದಶ್ಚಾಪಿ ನೋ ವೃತ್ತಸ್ಸಮವೇಕ್ಷ್ಯ ಪರಸ್ಪರಂ॥೧೩॥ ಪ್ರದಾನೇನ ತು ಸೀತಾಯಾಃ

---

ಆನೆಗಳು, ಸಿಂಹನಾದಮಿವ - ಸಿಂಹದ ಕೂಗಿನಂತೆ, ತೇ - ನಿನ್ನ (ಗರ್ಜನೆಯನ್ನು), ನಸಹಿಷ್ಯಂತಿ - ಸಹಿಸಲಾರರು. ॥೯॥ ಹೇ ಪ್ರಹಸ್ತ - ಎಲೈ ಪ್ರಹಸ್ತನೇ, ತಸ್ಮಿಂಬಲೇ - ಆ ವಾನರಸೈನ್ಯವು, ವಿದ್ರುತೇ - ಓಡಿಹೋಗಲು, ನಿರಾಲಂಬಃ - ನಿರಾಶ್ರಯನಾದ, ರಾಮಃ - ಶ್ರೀರಾಮನು, ಸೌಮಿತ್ರಿಣಾಸಹ - ಲಕ್ಷ್ಮಣನೊಡನೆ, ಅವಶಃ ಪರಾಧೀನನಾಗಿ, ತೇ - ನಿನಗೆ, ವಶಂ - ಸ್ವಾಧೀನವನ್ನು, ಏಷ್ಯತಿ - ಹೊಂದುವನು. ॥ ೧೦ ॥ ಸಂಶಯಿತಾ - ಸಂಶಯಗ್ರಸ್ತವಾದ, ಆಪತ್ - ಮರಣವು, ಶ್ರೇಯಃ - ಶ್ರೇಯಸ್ಕರವು, ನಿಸ್ಸಂಶಯೀಕೃತಾತು - ಯುದ್ಧಹೊರ್ತು ನಿಶ್ಚಿತವಾದ ಮರಣವಾದರೆ, ಶ್ರೇಯಃ - ಶ್ರೇಯಸ್ಕರವಾದದ್ದು, ನ - ಅಲ್ಲವು, ಪ್ರತಿ....ವಾ - ನಾನು ಹೇಳಿದ್ದಕ್ಕೆ ಅನುಕೂಲವೇ ಆಗಲಿ ಪ್ರತಿಕೂಲವೇ ಆಗಲೀ, ಯದ್ವಾ - ಹಾಗಲ್ಲದಿದ್ದರೆ, ನಃ - ನಮಗೆ, ಹಿತಂ - ಹಿತವನ್ನಾಗಿ, ಯತ್ - ಯಾವುದನ್ನು, ಮನ್ಯಸೇ - ತಿಳಿಯುವೆಯೋ, ತತ್ - ಅದನ್ನು, ವದ - ಹೇಳು. ॥೧೧॥ ರಾವಣೇನ - ರಾವಣನಿಂದ, ಏವಂ - ಈ ಪರಿಯಾಗಿ, ಉಕ್ತಃ - ಹೇಳಲ್ಪಟ್ಟ, ಪ್ರಹಸ್ತಃ - ಪ್ರಹಸ್ತನೆಂಬ, ವಾಹಿನೀಪತಿಃ - ಸೇನಾಧಿಪತಿಯು, ಉಶನಾಃ - ಶುಕ್ರಾಚಾರ್ಯನು, ಅಸುರೇಂದ್ರಮಿವ - ದೈತ್ಯೇಂದ್ರನನ್ನಂತೆ, ರಾಕ್ಷಸೇಂದ್ರಂ - ರಾವಣನನ್ನು ಕುರಿತು, ಇದಂ - ಈ ಮಾತನ್ನು, ಉವಾಚ - ಹೇಳಿದನು. ॥೧೨॥ ಹೇ ರಾಜನ್ - ಎಲೈ ಅರಸೇ, ಕುಶಲೈಃ - ವಿಚಕ್ಷಣರಾದ, ಮಂತ್ರಿಭಿಸ್ಸಹ - ಮಂತ್ರಿಗಳೊಡಗೂಡಿ, ನಃ - ನಮ್ಮಗಳಿಂದ, ಮಂತ್ರಿತಪೂರ್ವಂ - ಪೂರ್ವದಲ್ಲಿಯೇ ಆಲೋಚಿಸಲ್ಪಟ್ಟಿತಷ್ಟೆ, ನಃ - ನಮಗೆ, ಪರಸ್ಪರಂ - ಅನ್ಯೋನ್ಯವಾಗಿ, ಸಮವೇಕ್ಷ್ಯ - ಆಲೋಚನೆಯಲ್ಲಿ, ವಿವಾದಶ್ಚಾಪಿ - ವಿವಾದವೂ, ವೃತ್ತಃ - ಪ್ರವೃತ್ತವಾಯಿತು, ಸೀತಾಯಾಃ - ಸೀತಾದೇವಿಯ, ಪ್ರದಾನೇನತು - ಸಮರ್ಪಣದಿಂದ

---

ರಾದ (ಶಿಸ್ತಿಲ್ಲದ) ಆ ವಾನರರೆಲ್ಲರೂ ಆನೆಯು ಸಿಂಹನಾದವನ್ನು ಕೇಳಿ ಎಂತೋ ಅಂತು ಪಲಾಯನವಾಗಿ ಹೋಗುವರು. ॥ ೧೬–೧೦ ॥ ಹಾಗೆ ವಾನರಸೇನೆಯೆಲ್ಲವೂ ಓಡಿದೊಡನೆಯೇ ರಾಮನು ಲಕ್ಷ್ಮಣನೊಡಗೂಡಿ ದಿಕ್ಕುತೋಚದೆ ಅನಾಥನಾಗಿ ತಾನಾಗಿಯೇ ನಿನಗೆ ವಶನಾಗುತ್ತಾನೆ. ಎಲೈ ಪ್ರಹಸ್ತನೇ ! ರಣಾಂಗಣದಲ್ಲಿ ಮೃತಿಯೊಂದುವುದು ಉತ್ತಮವೇ ಹೊರ್ತು, ಹೇಡಿಯಂತೆ ಯುದ್ಧಮಾಡದಿರುವುದು ಉಚಿತವಲ್ಲವಷ್ಟೆ. ಆದುದರಿಂದ ಈ ಪ್ರಕೃತಸಂದರ್ಭದಲ್ಲಿ ಯುದ್ಧಮಾಡುವುದು ಉಚಿತವೆಂದು ನನಗೆ ತೋರುತ್ತಿರುವುದು. ಹಾಗಲ್ಲದಿದ್ದರೆ, ನನ್ನ ಶ್ರೇಯಸ್ಸನ್ನೇ ಕೋರುತ್ತಿರುವ ರಾಜ್ಯತಂತ್ರಕೋವಿದನಾದ ನಿನಗೇನು ತೋರುತ್ತದೆಯೋ ಅದನ್ನು ಹೇಳು" ಎಂದನು. ಈ ರೀತಿ ನುಡಿದ ರಾವಣಾಸುರನ ಮಾತುಗಳನ್ನು ಕೇಳಿ ಸೇನಾಪತಿಯಾದ ಪ್ರಹಸ್ತನು ರಾಕ್ಷಸೇಶ್ವರನಾದ ರಾವಣನನ್ನು ಕುರಿತು, ರಾಕ್ಷಸಗುರುವಾದ ಶುಕ್ರಾಚಾರ್ಯನಂತೆ, "ರಾಕ್ಷಸರಾಜೋತ್ತಮನಾದ ರಾವಣಾಸುರನೇ ! ನಾನು ಮಂತ್ರಿಗಳೊಡಗೂಡಿ ನಿನ್ನ ವಿಷಯದಲ್ಲಿ ಅನೇಕ ಬಗೆಯಾಗಿ ಆಲೋಚಿಸಿ ನೋಡಿದೆನು.

ಶ್ರೇಯೋ ವ್ಯವಸಿತಂ ಮಯಾ । ಅಪ್ರದಾನೇ ಪುನರ್ಯುದ್ಧಂ ದೃಷ್ಟಮೇತತ್ತಥೈವ ನಃ ||೧೪|| ಸೋಽಹಂ ದಾನೈಶ್ಚ ಮಾನೈಶ್ಚ ಸತತಂ ಪೂಜಿತಸ್ತ್ವಯಾ । ಸಾಂತ್ವೈಶ್ಚ ವಿವಿಧೈಃ ಕಾಲೇ ಕಿನ್ನ ಕುರ್ಯಾಂ ಪ್ರಿಯಂ ತವ ||೧೫|| ನಹಿ ಮೇ ಜೀವಿತಂ ರಕ್ಷ್ಯಂ ಪುತ್ರದಾರಧನಾನಿ ವಾ । ತ್ವಂ ಪಶ್ಯ ಮಾಂ ಜುಹೂಷಂತಂ ತ್ವದರ್ಥಂ ಜೀವಿತಂ ಯುಧಿ " || ೧೬ || ಏವಮುಕ್ತ್ವಾತು ಭರ್ತಾರಂ ರಾವಣಂ ವಾಹಿನೀಪತಿಃ । ಉವಾಚೇದಂ ಬಲಾಧ್ಯಕ್ಷಾನ್ ಪ್ರಹಸ್ತಃ ಪುರತಸ್ಸ್ಥಿತಾನ್ || ೧೭ || " ಸಮಾನಯತ ಮೇ

ಲಾದರೆ, ಶ್ರೇಯಃ - ಸುಖವು, ಅಪ್ರದಾನೇಪುನಃ - ಕೊಡದಿದ್ದರೆ, ಯುದ್ಧಂ - ಕಾಳಗವು, ಇತಿ - ಇಂತೆಂದು, ಮಯಾ - ನನ್ನಿಂದ, ವ್ಯವಸಿತಂ - ನಿಶ್ಚಯಿಸಲ್ಪಟ್ಟಿತು, ನಃ - ನಮ್ಮಿಂದ, ತದೇತತ್ - ಆ ಈ ಆಲೋಚಿಸಲ್ಪಟ್ಟ ಕಾರ್ಯವೇ, ತಥೈವ - ಹಾಗೆಯೇ, ದೃಷ್ಟಂ - ಕಾಣಲ್ಪಟ್ಟಿತು. ||೧೩-೧೪|| ಸೋಽಹಂ - ಅಂತಹ ಈ ನಾನು, ದಾನೈಶ್ಚ - ಭೂಷಣಾದಿ ಪ್ರದಾನಗಳಿಂದಲೂ, ಮಾನೈಶ್ಚ - ಬಹು ಮಾನಕರವಾದ ಮಾತುಗಳಿಂದಲೂ, ತ್ವಯಾ - ನಿನ್ನಿಂದ, ಸತತಂ - ನಿರಂತರವೂ, ವಿವಿಧೈಃ - ನಾನಾಬಗೆಯಾದ, ಸಾಂತ್ವೈಶ್ಚ - ಸಮಾಧಾನ ವಾಕ್ಯಗಳಿಂದಲೂ, ಪೂಜಿತಃ - ಪೂಜಿಸಲ್ಪಟ್ಟವನಾದ ಕಾರಣದಿಂದ, ಕಾಲೇ - ಯುದ್ಧಕಾಲದಲ್ಲಿ, ತವ - ನಿನಗೆ, ಪ್ರಿಯಂ - ಇಷ್ಟವನ್ನು, ನಕುರ್ಯಾಂಕಿಂ- ಮಾಡದಿರುವೆನೇ. || ೧೫ || ಮೇ - ನನ್ನ, ಜೀವಿತಂ - ಪ್ರಾಣವು, ನರಕ್ಷ್ಯಂ - ಸಂರಕ್ಷಿಸಿಕೊಳ್ಳ ತಕ್ಕುದಲ್ಲ, ಪುತ್ರ....ವಾ - ಮಕ್ಕಳಾಗಲಿ, ಹೆಂಡತಿಯಾಗಲಿ, ದ್ರವ್ಯವೇ ಆಗಲಿ, ನರಕ್ಷಾಣಿ - ಸಂರಕ್ಷಣೆ ಮಾಡತಕ್ಕವುಗಳಲ್ಲ, ತ್ವಂ - ನೀನು, ತ್ವದರ್ಥಂ - ನಿನ್ನ ನಿಮಿತ್ತವಾಗಿ, ಯುಧಿ - ಕಾಳಗ ದಲ್ಲಿ, ಜೀವಿತಂ - ಪ್ರಾಣವನ್ನು, ಜುಹೂಷಂತಂ - ಹೋಮಮಾಡಲಿಚ್ಛಿಸುವವನನ್ನಾಗಿ, ಮಾಂ - ನನ್ನನ್ನು, ಪಶ್ಯ - ನೋಡು. ||೧೬|| ವಾಹಿನೀಪತಿಃ - ಸೇನಾನಾಯಕನಾದ, ಪ್ರಹಸ್ತಃ - ಪ್ರಹಸ್ತನು, ಭರ್ತಾರಂ-ಪೋಷಕನಾದ, ರಾವಣಂ-ರಾವಣನನ್ನು ಕುರಿತು, ಏವಂ-ಈ ಪರಿಯಾಗಿ, ಉಕ್ತ್ವಾತು- ಹೇಳಿಯಾದರೆ, ಪುರತಃ - ಮುಂದುಗಡೆಯಲ್ಲಿ, ಸ್ಥಿತಾನ್ - ಇರುವ, ಬಲಾಧ್ಯಕ್ಷಾನ್ - ಸೇನಾಪತಿಗಳನ್ನು ಕುರಿತು, ಇದಂ - ಈ ಮಾತನ್ನು, ಉವಾಚ - ಹೇಳಿದನು. || ೧೭ || ಮೇ - ನನ್ನ ಸಂಬಂಧಿಗಳಾದ,

ಆಮೇಲೆ ಅನುಷ್ಠೇಯವಾದ ಕಾರ್ಯವನ್ನೂ ನಿಶ್ಚಯಿಸಿದೆನು. ಆ ವಿಷಯವನ್ನರಿಕೆ ಮಾಡು ವೆನು ; ಆಲಿಸಿ ಕೇಳು. ಪ್ರಕೃತದಲ್ಲಿ ಸೀತೆಯನ್ನು ರಾಮನಿಗೆ ಒಪ್ಪಿಸುವುದೇ ಉಚಿತ ವೆಂಮ ತೋರುವುದು. ಹಾಗೊಂದುವೇಳೆ ಮಾಡಲು ನೀನು ಸಮ್ಮತಿಸದೇ ಹೋದಲ್ಲಿ ನಮ್ಮೆಲ್ಲರಿಗೂ ಭಯಂಕರ ಯುದ್ಧವು ಸಂಭವಿಸುತ್ತದೆಯೆಂದು ನಾನಾಗಲೇ ನಿಶ್ಚಯಿಸಿರು ವೆನು. ಅಲ್ಲದೆ ಎಲೈ ಪ್ರಭುವೇ ! ನಾನು ದಾನಗಳಿಂದಲೂ, ಧನಗಳಿಂದಲೂ, ವಿವಿಧ ಸಾಂತ್ವ ಗಳಿಂದಲೂ ನಿನ್ನಿಂದ ಲಾಲನಪಾಲನಾದಿಗಳಿಂದ ಪೋಷಿಸಲ್ಪಟ್ಟವನು. ಈ ರೀತಿ ನಿನ್ನಿಂದ ಸನ್ಮಾನಿತನಾದ ನಾನು ನಿನಗಾಗಿ ಪ್ರಿಯವನ್ನುಮಾಡಲು ಸರ್ವಸಿದ್ಧನಾಗಿರುವೆನು. ಒಡೆಯಾ! ನಾನು ನಿನಗೋಸುಗ ಪುತ್ರದಾರಧನಾದಿಗಳೊಡಗೂಡಿ ಪ್ರಾಣಗಳನ್ನು ತೊರೆಯಲೂ ಸಿದ್ಧನಾಗಿರುವೆನು. ಆದರೂ ನೀನು ಚೆನ್ನಾಗಿ ಆಲೋಚಿಸಿ ನನಗೆ ಅಪ್ಪಣೆ ಕೊಡು " ಎಂದು ಹೇಳಿದನು. || ೧೧–೧೬ || (ಈ ಮಾತುಗಳಿಗೆ ರಾವಣಾಸುರನಾವ ಉತ್ತರವನ್ನೂ ಹೇಳದೆ ಸುಮ್ಮನಿರಲು) ಪ್ರಹಸ್ತನು ಬಲಾಧ್ಯಕ್ಷರನ್ನೂ, ತನ್ನ ಮುಂಗಡೆ ನಿಂತಿರುವ ಸಮಸ್ತ ರಾಕ್ಷಸ ನಾಯಕರನ್ನೂ ಕುರಿತು, " ಎಲೈ ರಾಕ್ಷಸಶ್ರೇಷ್ಠರೇ ! ನಮ್ಮ ರಾಕ್ಷಸ ಬಲವೆಲ್ಲವನ್ನೂ ಶೀಘ್ರ

ಶೀಘ್ರಂ ರಾಕ್ಷಸಾನಾಂ ಮಹದ್ಬಲಂ । ಮದ್ಬಾಣಾಶನಿವೇಗೇನ ಹತಾನಾಂ ಚ ರಣಾಜಿರೇ । ಅದ್ಯ ತೃಪ್ಯಂತಿ ಮಾಂಸಾದಾಃ ಪಕ್ಷಿಣಃ ಕಾನನೌಕಸಾಂ ” ॥ ೧೮-೧೯ ॥ ಇತ್ಯುಕ್ತಾಸ್ತೇ ಪ್ರಹಸ್ತೇನ ಬಲಾಧ್ಯಕ್ಷಾಃ ಕೃತತ್ವರಾಃ । ಬಲಮುದ್ಯೋಜಯಾಮಾಸುಸ್ತಸ್ಮಿನ್ ರಾಕ್ಷಸಮಂದಿರೇ ॥ ೨೦ ॥ ಸಾ ಬಭೂವ ಮುಹೂರ್ತೇನ ತಿಗ್ಮನಾನಾವಿಧಾಯುಧೈಃ । ಲಂಕಾ ರಾಕ್ಷಸವೀರೈಸ್ತೈರ್ಗಜೈರಿವ ಸಮಾಕುಲಾ ॥ ೨೧ ॥ ಹುತಾಶನಂ ತರ್ಪಯತಾಂ ಬ್ರಾಹ್ಮಣಾಂಶ್ಚ ನಮಸ್ಯತಾಂ । ಆಜ್ಯಗಂಧಪ್ರತಿವಹಸ್ಸುರಭಿರ್ಮಾರುತೋ ವವೌ ॥೨೨॥ ಸ್ರಜಶ್ಚ ವಿವಿಧಾಕಾರಾ ಜಗೃಹುಸ್ತ್ವಭಿಮಂತ್ರಿತಾಃ । ಸಂಗ್ರಾಮ

---

ರಾಕ್ಷಸಾನಾಂ - ರಕ್ಕಸರ, ಮಹತ್ - ದೊಡ್ಡದಾದ ಬಲಂ - ಸೈನ್ಯವನ್ನು, ಶೀಘ್ರಂ - ಜಾಗ್ರತೆಯಾಗಿ, ಸಮಾನಯತ - ಕರದುಕೊಂಡು ಬನ್ನಿರಿ, ಅದ್ಯ - ಈಗ, ಮಾಂಸಾದಾಃ - ಮಾಂಸಗಳನ್ನು ತಿನ್ನುವ, ಪಕ್ಷಿಣಃ - ಹಕ್ಕಿಗಳು, ರಣಾಜಿರೇ - ಯುದ್ಧರಂಗದಲ್ಲಿ, ಮದ್ಬಾ....ನ - ನನ್ನ ಬಾಣಗಳೆಂಬ ಸಿಡಿಲುಗಳ ವೇಗದಿಂದ, ಹತಾನಾಂ - ಹೊಡೆಯಲ್ಪಟ್ಟ, ಕಾನನೌಕಸಾಂ - ವಾನರರಿಂದ, ತೃಪ್ಯಂತಿ - ತೃಪ್ತಿ ಹೊಂದುತ್ತವೆ. ॥೧೯॥ ಇತಿ - ಈ ಪರಿ ಪ್ರಹಸ್ತೇನ - ಪ್ರಹಸ್ತನಿಂದ, ಉಕ್ತಾಃ- ಹೇಳಲ್ಪಟ್ಟ, ತೇ ಬಲಾಧ್ಯಕ್ಷಾಃ - ಆ ಯೂಥಪತಿಗಳು, ಕೃತತ್ವರಾಃ - ಮಾಡಲ್ಪಟ್ಟ ತ್ವರೆಯುಳ್ಳವರಾಗಿ, ತಸ್ಮಿನ್ರಾಕ್ಷಸಮಂದಿರೇ - ಆ ರಾವಣನ ಅರಮನೆಯಲ್ಲಿ, ಬಲಂ - ಸೈನ್ಯವನ್ನು, ಉದ್ಯೋಜಯಾಸತುಃ- ಸಿದ್ಧಗೊಳಿಸಿದರು. ॥೨ ॥ ಸಾಲಂಕಾ - ಆ ಲಂಕಾಪಟ್ಟಣವು, ತಿಗ್ಮ....ಧೈಃ - ತೀಕ್ಷ್ಣವಾದ ನಾನಾ ವಿಧಗಳಾದ ಆಯುಧಗಳುಳ್ಳ, ತೈಃರಾಕ್ಷಸವೀರೈಃ - ಆ ರಾಕ್ಷಸಶೂರರಿಂದ, ಮುಹೂರ್ತೇನ - ಮುಹೂರ್ತಕಾಲದಿಂದಲೇ, ಗಜೈರಿವ - ಆನೆಗಳಂತೆ, ಸಮಾಕುಲಾ - ವ್ಯಾಕುಲವಾದದ್ದು, ಬಭೂವ - ಆಯಿತು. ॥ ೨೧ ॥ ಹುತಾಶನಂ - ಅಗ್ನಿಯನ್ನು, ತರ್ಪಯತಾಂ - ತೃಪ್ತಿಗೊಳಿಸುತ್ತಿರುವ, ಬ್ರಾಹ್ಮಣಾಂಶ್ಚ - ಬ್ರಾಹ್ಮಣರನ್ನು ಕುರಿತು, ನಮಸ್ಯತಾಂ - ನಮಸ್ಕಾರ ಮಾಡುತ್ತಿರುವ ರಾಕ್ಷಸರ ಸಂಬಂಧವಾದ, ಆಜ್ಯ....ಹಃ - ಆಜ್ಯಗಂಧವನ್ನು ವಹಿಸುವ, ಸುರಭಿಃ - ಪರಿಮಳಯುಕ್ತವಾದ, ಮಾರುತಃ - ವಾಯುವು, ವವೌ - ಬೀಸಿತು. ॥೨೨॥ ತದಾ - ಆ ಕಾಲದಲ್ಲಿ, ಸಂಗ್ರಾಮಸಜ್ಜಾಃ - ಯುದ್ಧಸನ್ನದ್ಧರಾಗಿ, ಸಂಹೃಷ್ಟಾಃ - ಸಂತೋಷಗೊಂಡವರಾದ, ರಾಕ್ಷಸಾಃ - ರಕ್ಕಸರು, ಅಭಿಮಂತ್ರಿತಾಂ - ಮಂತ್ರಗಳಿಂದ ಅಭಿಮಂತ್ರಿಸಲ್ಪಟ್ಟ, ವಿವಿಧಾಕಾರಾಃ - ನಾನಾ ಆಕಾರಗಳುಳ್ಳ, ಸ್ರಜಃ - ಪುಷ್ಪ

---

ವಾಗಿ ಕರೆದುತನ್ನಿರಿ. ನಾನು ನನ್ನ ಕೂರಂಬುಗಳನ್ನೆಸೆದು ವಾನರರೆಲ್ಲರನ್ನೂ ಸಂಹರಿಸಿ ಅವರ ಮಾಂಸದಿಂದ ಗೃಧ್ರಾದಿಪಕ್ಷಿಗಳಿಗೂ, ಮಾಂಸಾಶನಗಳಾದ ಇತರ ಪ್ರಾಣಿಗಳಿಗೂ ತೃಪ್ತಿಯುಂಟುಮಾಡುವೆನು ” ಎಂದು ಹೇಳಿದನು. ಪ್ರಹಸ್ತನಿಂತು ನುಡಿದೊಡನೆಯೇ ರಾಕ್ಷಸಯೂಥನಾಥರೆಲ್ಲರೂ ಬಹಳ ತ್ವರೆಯುಳ್ಳವರಾಗಿ ರಾಕ್ಷಸ ಸೇನೆಗಳೆಲ್ಲವನ್ನೂ ಒಟ್ಟುಗೂಡಿಸಿದರು. ಆಗ ಬಹು ತೀಕ್ಷ್ಣಗಳಾದುವೂ, ನಾನಾವಿಧಗಳಾದುವೂ ಆದ ಆಯುಧಗಳೊಡಗೂಡಿ ಮದ್ದಾನೆಗಳಿಗೆ ಸಮಾನರಾದ ರಾಕ್ಷಸಯೋಧರಿಂದ ಲಂಕಾನಗರವೆಲ್ಲವೂ ನಿಬಿಡೀಕೃತವಾಯಿತು. ॥೧೭–೨೧॥ ಆ ಸಮಯದಲ್ಲಿ ಅಗ್ನಿಯನ್ನರ್ಚಿಸಿದ ಆಜ್ಯದಿಂದಲೂ, ಇತರ ಪೂಜಾದ್ರವ್ಯಗಳಿಂದಲೂ ಉದಿಸಿದ ಗಂಧವು ವಾಯುವಿನೊಡನೆ ಬೆರತು ಪಟ್ಟಣದಲ್ಲೆಲ್ಲ ಬೀಸುತ್ತಿದ್ದಿತು. ಆಗ ರಾಕ್ಷಸರೆಲ್ಲರೂ ಪರಮಸಂತುಷ್ಟರಾಗಿ ಅಭಿಮಂತ್ರಿತಗಳಾದ ಪುಷ್ಪಮಾಲಿಕೆಗಳನ್ನು ಧರಿಸಿದರು. ಅಲ್ಲದೆ ಧನುಸ್ಸುಗಳೇ ಮೊದಲಾದ ಆಯುಧಗಳನ್ನು ಧರಿಸಿ

ಸಜ್ಜಾಸ್ಸಂಹೃಷ್ಟಾ ಧಾರಯರ್ಯ ರಾಕ್ಷಸಾಸ್ತದಾ ॥ ೨೩ ॥ ಸಧನುಷ್ಕಾಃ ಕವಚಿನೋ ವೇಗಾದಾಪ್ಲುತ್ಯ ರಾಕ್ಷಸಾಃ । ರಾವಣಂ ಪ್ರೇಕ್ಷ್ಯ ರಾಜಾನಂ ಪ್ರಹಸ್ತಂ ಪರ್ಯವಾರಯರ್ಯ ॥ ೨೪ ॥ ಅಥಾಮಂತ್ರ್ಯ ಚ ರಾಜಾನಂ ಭೇರೀಮಾಹತ್ಯ ಭೈರವಾಂ । ಆರುರೋಹ ರಥಂ ದಿವ್ಯಂ ಪ್ರಹಸ್ತಸ್ಸಜ್ಜಕಲ್ಪಿತಂ ॥೨೫॥ ಹಯೈರ್ಮಹಾಜವೈರ್ಯುಕ್ತಂ ಸಮ್ಯಕ್ಸೂತಸುಸಂಯುತಂ । ಮಹಾಜಲದನಿರ್ಘೋಷಂ ಸಾಕ್ಷಾಚ್ಚಂದ್ರಾರ್ಕಭಾಸ್ವರಂ ॥ ೨೬ ॥ ಉರಗಧ್ವಜದುರ್ಧರ್ಷಂ ಸುವರೂಥಂ ಸ್ವಪಸ್ಕರಂ । ಸುವರ್ಣಜಾಲಸಂಯುಕ್ತಂ ಪ್ರಹಸಂತಮಿವ ಶ್ರಿಯಾ ॥ ೨೭ ॥ ತತಸ್ತಂ ರಥಮಾಸ್ಥಾಯ ರಾವಣಾರ್ಪಿತಶಾಸನಃ । ಲಂಕಾಯಾ ನಿರ್ಯಯೌ ತೂರ್ಣಂ ಬಲೇನ ಮಹತಾಽವೃತಃ ॥೨೮॥

---

ಮಾಲಿಕೆಗಳನ್ನು, ಧಾರಯರ್ಯ - ಧರಿಸಿದರು. ॥೨೩॥ ಸಧನುಷ್ಕಾಃ - ಧನುರ್ಧಾರಿಗಳಾದ, ಕವಚಿನಃ - ಕವಚಗಳುಳ್ಳ, ರಾಕ್ಷಸಾಃ - ರಕ್ಕಸರು, ವೇಗಾತ್ - ವೇಗದಿಂದ, ಆಪ್ಲುತ್ಯ - ಹಾರಿ, ರಾಜಾನಂ - ಒಡೆಯನಾದ, ರಾವಣಂ - ರಾವಣನನ್ನು, ಪ್ರೇಕ್ಷ್ಯ - ಕಂಡು, ಪ್ರಹಸ್ತಂ - ಪ್ರಹಸ್ತನನ್ನು, ಪರ್ಯವಾರಯರ್ಯ - ಸುತ್ತುವರೆದರು. ॥೨೪॥ ಅಥ - ಅನಂತರದಲ್ಲಿ, ಪ್ರಹಸ್ತಃ - ಪ್ರಹಸ್ತನು, ರಾಜಾನಂ - ರಾವಣನನ್ನು, ಅಮಂತ್ರ್ಯ - ಅಪ್ಪಣೆ ಕೇಳಿ, ಭೈರವಾಂ - ಭಯಂಕರವಾದ, ಭೇರೀಂ - ರಣಭೇರಿಯನ್ನು, ಆಹತ್ಯ - ಹೊಡದು, ಸಜ್ಜಕಲ್ಪಿತಂ - ಸನ್ನದ್ಧವಾಗಿಯೂ ಮಾಡಲ್ಪಟ್ಟ, ದಿವ್ಯಂ - ಮನೋಹರವಾದ, ಮಹಾಜವೈಃ - ಬಹು ವೇಗವುಳ್ಳ, ಹಯೈಃ - ಕುದುರೆಗಳಿಂದ, ಯುಕ್ತಂ - ಕೂಡಿರುವ, ಸಮ್ಯಕ್ - ಚನ್ನಾಗಿ, ಸೂತ....ತಂ - ಸಾರಥಿಯಿಂದ ಚನ್ನಾಗಿ ಕಟ್ಟಲ್ಪಟ್ಟ, ಮಹಾ......ಷಂ - ದೊಡ್ಡ ಮೇಘಧ್ವನಿಯಂತೆ ಧ್ವನಿಯುಳ್ಳ, ಸಾಕ್ಷಾತ್ - ಪ್ರತ್ಯಕ್ಷವಾಗಿ, ಚಂದ್ರಾ......ರಂ - ಚಂದ್ರಸೂರ್ಯರಿಗೆ ಸಮವಾಗಿ ಬೆಳಗುವ, ಉರ....ರ್ಷಂ-ಸರ್ಪಧ್ವಜದಿಂದ ತಿರಸ್ಕರಿಸಲಸಾಧ್ಯವಾದ ಸುವರೂಥಂ- ದೃಢವಾದ ರಥದ ಬುರುಕಿಯುಳ್ಳ, ಸ್ವಪಸ್ಕರಂ - ಸಮೀಚೀನವಾದ ರಥಾಂಗಗಳುಳ್ಳ, ಸುವ....ಕ್ತಂ - ಭಂಗಾರದ ಗವಾಕ್ಷಿಗಳಿಂದ ಕೂಡಿದ, ಪ್ರಹಸಂತಮಿವಸ್ಥಿತಂ - ನಗುವಂತಿರುವ, ರಥಂ - ತೇರನ್ನು, ಆರುರೋಹ ಏರಿದನು. ॥ ೨೫ ೨೭ ॥ ತತಃ - ಅನಂತರದಲ್ಲಿ, ರಾವ....ನಃ - ರಾವಣನಿಂದ ಸಮರ್ಪಿಸಲ್ಪಟ್ಟ ಆಜ್ಞೆಯುಳ್ಳವನಾಗಿ, ತಂರಥಂ - ಆ ತೇರಿನಲ್ಲಿ, ಆಸ್ಥಾಯ - ಕುಳಿತುಕೊಂಡು, ಮಹತಾ -

---

ಬಹು ಶೀಘ್ರವಾಗಿ ಬಂದು ರಾವಣಾಸುರನನ್ನು ನಮಸ್ಕರಿಸಿ ಪ್ರಹಸ್ತನನ್ನು ಸುತ್ತುವರೆದು ನಿಂತರು. ಆ ಸಮಯದಲ್ಲಿ ಪ್ರಹಸ್ತನೂ ಸಹ ಪರಮ ಸಂತುಷ್ಟನಾಗಿ ರಾವಣಾಸುರನ ಆಣತಿಯನ್ನು ಕೈಕೊಂಡು ರಣಭೇರಿಯನ್ನು ಮೊಳಗಿಸಿ ಸಕಲಾಯುಧಗಳಿಂದಲೂ ತುಂಬಿದ ತನ್ನ ರಥವನ್ನೇರಿದನು. ಬಹು ವೇಗವತ್ತುಗಳಾದ ಕುದುರೆಗಳು ಹೂಡಲ್ಪಟ್ಟು ಯೋಗ್ಯನಾದ ಸಾರಥಿಯನ್ನೊಳಗೊಂಡು, ಮಹಾ ಮೇಘಧ್ವನಿಯನ್ನು ಹೋಲುವ ಧ್ವನಿಯುಳ್ಳುದಾಗಿ, ಪ್ರತ್ಯಕ್ಷ ಸೂರ್ಯಚಂದ್ರರಿಗೆ ಸಮಾನವಾದುದೂ, ಸರ್ಪಧ್ವಜವಿರಾಜಿತವಾದುದೂ ಆಗಿ ಸುಸಜ್ಜಿತವಾದ ರಕ್ಷಕಸಾಮಗ್ರೀ ಸಮೀಕೃತವಾಗಿರುವುದೂ, ಸ್ವರ್ಣಾಭರಣಭೂಷಿತವಾದುದೂ, ಸಮಸ್ತ ಸಪತ್ಕಾಂತಿಯೊಡಗೂಡಿ ನಗುತ್ತಿರುವಂತಿರುವುದೂ ಆದ ಆ ಉತ್ತಮ ರಥವನ್ನೇರಿದ ಆ ಪ್ರಹಸ್ತನು ತನ್ನೊಡೆಯನಾದ ರಾವಣಾಸುರನ ಆಜ್ಞೆಯನ್ನು ಮತ್ತೊಮ್ಮೆ ಪಡೆದು ಹೊರಹೊರಟನು. ॥ ೨೨-೨೭ ॥ ಈ ರೀತಿ ಆ ಪ್ರಹಸ್ತನು ಅಪಾರವಾದ ರಾಕ್ಷಸ ಸೇನೆಯೊಡನೆ ಹೊರಹೊರಟೊಡನೆಯೇ ಮೇಘಧ್ವನಿಗೆ ಸಮಾನವಾದ ದುಂದುಭಿಧ್ವನಿಯೂ,

ತತೋ ದುಂದುಭಿನಿರ್ಘೋಷಃ ಪರ್ಜನ್ಯನಿನದೋಪಮಃ । ವಾದಿತ್ರಾಣಾಂ ಚ ನಿನದಃ ಪೂರಯನ್ನಿವ ಸಾಗರಂ । ಶುಶ್ರುವೇ ಶಂಖಶಬ್ದಶ್ಚ ಪ್ರಯಾತೇ ವಾಹಿನೀಪತೌ ॥೨೯॥ ನಿನದಂತಸ್ಸ್ವರಾನ್ ಘೋರಾನ್ ರಾಕ್ಷಸಾ ಜಗ್ಮುರಗ್ರತಃ । ಭೀಮರೂಪಾ ಮಹಾಕಾಯಾಃ ಪ್ರಹಸ್ತಸ್ಯ ಪುರಸ್ಸರಾಃ ॥ ೩೦ ॥ ನರಾಂತಕಃ ಕುಂಭಹನುರ್ಮಹಾನಾದಸ್ಸಮುನ್ನತಃ । ಪ್ರಹಸ್ತಸಚಿವಾಹ್ಯೇತೇ ನಿರ್ಯಯುಃ ಪರಿವಾರ್ಯತಂ ॥ ೩೧ ॥ ವ್ಯೂಢೇನೈವ ಸುಘೋರೇಣ ಪೂರ್ವದ್ವಾರಾತ್ಸನಿರ್ಯಯೌ । ಗಜಯೂಥನಿಕಾಶೇನ ಬಲೇನ ಮಹತಾವೃತಃ ॥ ೩೨ ॥ ಸಾಗರಪ್ರತಿಮೌಘೇನ ವೃತಸ್ತೇನ ಬಲೇನ ಸಃ । ಪ್ರಹಸ್ತೋ ನಿರ್ಯಯೌ ತೂರ್ಣಂ ಕಾಲಾಂತಕಯಮೋಪಮಃ ॥ ೩೩ ॥ ತಸ್ಯ

---

ಮಹತ್ತರವಾದ, ಬಲೇನ - ಸೈನ್ಯದಿಂದ, ವೃತಃ - ಸುತ್ತುವರೆದು, ಲಂಕಾಯಾಃ - ಲಂಕಾಪಟ್ಟಣದಿಂದ, ತೂರ್ಣಂ - ಜಾಗ್ರತೆಯಾಗಿ, ನಿರ್ಯಯೌ - ಹೊರಟನು. ॥೨೮॥ ತತಃ - ಬಳಿಕ, ವಾಹಿನೀಪತೌ - ಸೇನಾಪತಿಯಾದ ಪ್ರಹಸ್ತನು, ಪ್ರಯಾತೇ - ಹೊರಟವನಾಗಲೂ, ಪರ್ಜ....ಮಃ - ಮೇಘಗರ್ಜನೆಗೆ ಸಮವಾದ, ದುಂದು....ಷಃ - ಭೇರೀಧ್ವನಿಯು, ವಾದಿತ್ರಾಣಾಂ - ವಾದ್ಯವಿಶೇಷಗಳ, ನನಿದಶ್ಚ - ಧ್ವನಿಯೂ, ಶಂಖಶಬ್ದಶ್ಚ - ಶಂಖಗಳ ಶಬ್ದವೂ, ಸಾಗರಂ - ಕಡಲನ್ನು, ಪೂರಯನ್ನಿವ-ತುಂಬಿಸುವಂತೆ, ಶುಶ್ರುವೇ - ಕೇಳಿಸಿತು. ॥ ೨೯ ॥ ಭೀಮರೂಪಾಃ - ಭಯಂಕರವಾದ ಆಕಾರಗಳುಳ್ಳ, ಮಹಾಕಾಯಾಃ - ಮಹಾ ಶರೀರಗಳುಳ್ಳ, ರಾಕ್ಷಸಾಃ - ರಕ್ಕಸರು, ಘೋರಾನ್ - ಭಯಂಕರವಾದ, ಸ್ವರಾನ್ - ಧ್ವನಿಗಳನ್ನು, ನಿನದಂತಃ - ಕೂಗುವವರಾಗಿ, ಪ್ರಹಸ್ತಸ್ಯ - ಪ್ರಹಸ್ತನ, ಪುರಸ್ಸರಾಃ - ಮುಂದು ಹೋಗುವವರಾಗಿ, ಅಗ್ರತಃ - ಮುಂದೆ, ಜಗ್ಮುಃ - ತೆರಳಿದರು. ॥ ೩೦ ॥ ನರಾಂತಕಃ - ನರಾಂತಕಃ - ನರಾಂತಕನು, ಕುಂಭಹನುಃ - ಕುಂಭಹನುವು, ಮಹಾನಾದಃ - ಮಹಾನಾದನು, ಸಮುನ್ನತಃ-ಸಮುನ್ನತನು (ಎಂಬ), ಏತೇಪ್ರಹಸ್ತಸಚಿವಾಃ- ಈ ಪ್ರಹಸ್ತನ ಮಂತ್ರಿಗಳು, ತಂ - ಅವನನ್ನು, ಪರಿವಾರ್ಯ - ಸುತ್ತುವರಿದು, ನಿರ್ಯಯುಃ - ಹೊರಟರು, ವ್ಯೂಢೇನೈವ - ವ್ಯೂಹರೂಪವಾಗಿ ಮಾಡಲ್ಪಟ್ಟ, ಸುಘೋರೇಣ - ಬಹು ಭಯಂಕರವಾದ, ಗಜ....ನ - ಆನೆಗಳ ಗುಂಪಿಗೆ ಸಮಾನವಾದ, ಮಹತಾ - ದೊಡ್ಡದಾದ, ಬಲೇನ - ಸೈನ್ಯದಿಂದ, ವೃತಃ - ಪರಿವೃತನಾಗಿ, ಸಃ - ಆತನು, ಪೂರ್ವದ್ವಾರಾತ್ - ಮೂಡಲ ಬಾಗಿಲಿಂದ, ನಿರ್ಯಯೌ - ಹೊರಟರು. ॥ ೩೧-೩೨ ॥ ಸಾಗ....ನ - ಸಮುದ್ರಕ್ಕೆ ಸಮಾನವಾದ ಗುಂಪುಳ್ಳ, ತೇನಬಲೇನ - ಆ ಸೈನ್ಯದಿಂದ, ವೃತಃ - ಪರಿವೃತನಾದ, ಕಾಲಾಂ....ಮಃ - ಪ್ರಳಯಕಾಲದ ಅಂತಕನಾದ ಯಮನಿಗೆ ಸಮಾನನಾದ,

---

ಮಹಾ ಸಾಗರವನ್ನು ಉಲ್ಲಕಲ್ಲೋಲ ಮಾಡುವಂತಹ ವಾದಿತ್ರಧ್ವನಿಯೂ, ಶಂಖಧ್ವನಿಯೂ ಬಹು ಭಯಂಕರವಾಗಿ ಹೊರಹೊರಟಿತು. ಆಗ ಮಹಾ ಭಯಂಕರಗಳಾದ ಆಕಾರಗಳುಳ್ಳವರೂ, ಭಯಂಕರಗಳಾದ ರೂಪಗಳುಳ್ಳವರೂ ಆದ ರಾಕ್ಷಸವೀರರೆಲ್ಲರೂ ತಮ್ಮ ಅಧಿಪತಿಯಾದ ಪ್ರಹಸ್ತನ ಮುಂಗಡೆ ಹೊರಟರು. ಇಷ್ಟುಮಾತ್ರವಲ್ಲದೆ ಆ ಸಮಯದಲ್ಲಿ ನರಾಂತಕ, ಕುಂಭಹನು, ಮಹಾ ಕ್ರೂರನಾದ ಮಹಾನಾದ ಎಂಬ ಪ್ರಹಸ್ತನ ಮಂತ್ರಿಗಳು ಮೂವರೂ ತಮ್ಮ ಒಡೆಯನನ್ನು ಹಿಂಬಾಲಿಸಿದರು. ಈ ರೀತಿ ಆ ಪ್ರಹಸ್ತನು ಗಜಯೂಥ ಸಮಾನವಾದ ರಾಕ್ಷಸಯೂಥದೊಡನೆ ಲಂಕಾನಗರದ ಪೂರ್ವದ್ವಾರದಿಂದ ಹೊರಟುಬಂದನು. ಸಾಗರಪ್ರವಾಹೋಪಮವಾದ ಸೈನ್ಯದೊಡಗೂಡಿ, ಪ್ರಳಯಯಮನಿಗೆ ಸಮಾನನಾದ

ನಿರ್ಯಾಣ ಘೋಷೇಣ ರಾಕ್ಷಸಾನಾಂಚ ನರ್ದತಾಂ । ಲಂಕಾಯಾಂ ಸರ್ವಭೂತಾನಿ ವಿನೇದುರ್ವಿಕೃತೈಸ್ಸ್ವರೈಃ ॥ ೩೪ ॥ ವ್ಯಭ್ರಮಾಕಾಶಮಾವಿಶ್ಯ ಮಾಂಸಶೋಣಿತ ಭೋಜನಾಃ । ಮಂಡಲಾನ್ಯಪಸವ್ಯಾನಿ ಖಗಾಶ್ಚಕ್ರೂ ರಥಂ ಪ್ರತಿ ॥೩೫॥ ವಮಂತ್ಯಃ ಪಾವಕಜ್ವಾಲಾಃ ಶಿವಾ ಘೋರಂ ವವಾಶಿರೇ । ಅಂತರಿಕ್ಷಾತ್ ಪಪಾತೋಲ್ಕಾ ವಾಯುಶ್ಚ ಪರುಷೋ ವವೌ । ಅನ್ಯೋನ್ಯಮಭಿಸಂರಬ್ಧಾ ಗ್ರಹಾಶ್ಚ ನಚಕಾಶಿರೇ ॥೩೬-೩೭॥ ಮೇಘಾಶ್ಚ ಖರನಿರ್ಘೋಷಾ ರಥಸ್ಯೋಪರಿರಕ್ಷಸಃ । ವವೃಷೂ ರುಧಿರಂ ಚಾಸ್ಯ ಸಿಷಿಚುಶ್ಚ ಪುರಸ್ಸರಾನ್ ॥ ೩೮ ॥ ಕೇತುಮೂರ್ಧನಿ ಗೃಧ್ರೋಽಸ್ಯ ನಿಲೀನೋ

---

ಸಪ್ರಹಸ್ತ - ಆ ಪ್ರಹಸ್ತನು, ತೂರ್ಣಂ - ಜಾಗ್ರತೆಯಾಗಿ, ನಿರ್ಯಾಯೌ - ಹೊರಟನು. ॥ ೩೩ ॥ ತಸ್ಯ - ಆ ಪ್ರಹಸ್ತನ, ನರ್ದತಾಂ - ಕೂಗುವ, ರಾಕ್ಷಸಾನಾಂಚ - ರಕ್ಕಸನು, ನಿರ್ಯಾ....ಣ - ಪ್ರಯಾಣಕಾಲದಲ್ಲಿ ಹುಟ್ಟಿದ ಧ್ವನಿಯಿಂದ, ಲಂಕಾಯಾಂ - ಲಂಕಾಪಟ್ಟಣದಲ್ಲಿ, ಸರ್ವಭೂತಾನಿ - ಸಮಸ್ತ ಪ್ರಾಣಿಗಳನ್ನೂ, ವಿಕೃತೈಃ - ವಿಕಾರಗಳಾದ, ಸ್ವರೈಃ - ಧ್ವನಿಗಳಿಂದ, ವಿನೇದುಃ - ಧ್ವನಿಗೊಂಡವು. ॥ ೩೪ ॥ ಮಾಂಸ....ನಾಃ-ಮಾಂಸವೂ, ರಕ್ತವೂ ಭೋಜನವಾಗುಳ್ಳ, ಖಗಾಃ-ಪಕ್ಷಿಗಳು, ವ್ಯಭ್ರಂ - ಮೇಘವಿಲ್ಲದ, ಆಕಾಶಂ - ಅಂತರಿಕ್ಷವನ್ನು, ಆವಿಶ್ಯ - ಪ್ರವೇಶಿಸಿ, ರಥಂಪ್ರತಿ - ರಥವನ್ನು ಕುರಿತು, ಅಪಸವ್ಯಾನಿ - ಅಪ್ರದಕ್ಷಿಣಗಳಾದ, ಮಂಡಲಾನಿ - ಮಂಡಲಾಕಾರಗಳನ್ನು, ಚಕ್ರುಃ - ಮಾಡಿದವು. ॥ ೩೫ ॥ ಶಿವಾಃ - ನರಿಗಳು, ಪಾವಕಜ್ವಾಲಾಃ "- ಅಗ್ನಿಜ್ವಾಲೆಗಳನ್ನು, ವಮಂತ್ಯಃ - ಕಕ್ಕುತ್ತ, ಘೋರಂ - ಭಯಂಕರವಾಗಿ, ವವಾಶಿರೇ - ಕೂಗುತ್ತಿದ್ದವು, ಅಂತರಿಕ್ಷಾತ್- ಗಗನದಿಂದ, ಉಲ್ಕಾಃ - ಕೊಳ್ಳಿಗಳು, ಪಪಾತ - ಬಿದ್ದಿತು, ಪರುಷಾ - ಚಂಡವಾದ, ವಾಯುಶ್ಚ - ಗಾಳಿಯೂ, ವವೌ - ಬೀಸಿತು, ಅನ್ಯೋನ್ಯಂ - ಪರಸ್ಪರವಾಗಿ, ಅಭಿಸಂರಬ್ಧಾಃ - ಕೋಪಾಕ್ರಾಂತವಾಗಿ, ಗ್ರಹಾಃ-ನವಗ್ರಹಗಳು, ನಚಕಾಶಿರೇ-ಹೊಳೆಯಲಿಲ್ಲ. ॥ ೩೬-೩೭ ॥ ಮೇಘಾಶ್ಚ-ಮೇಘಗಳು, ಖರನಿರ್ಘೋಷಾಃ - ಕ್ರೂರವಾದ ಗರ್ಜಿತಗಳುಳ್ಳವುಗಳಾಗಿ, ರಕ್ಷಸಃ - ಪ್ರಹಸ್ತನ, ರಥಸ್ಯ - ತೇರಿನ, ಉಪರಿ - ಮೇಲ್ಭಾಗದಲ್ಲಿ, ರುಧಿರಂ - ರಕ್ತವನ್ನು, ವವೃಷುಃ - ಸುರಿಸಿದವು, ಅಸ್ಯ - ಈ ಪ್ರಹಸ್ತನ, ಪುರಸ್ಸರಾನ್ - ಮುಂದುಹೋಗುವವರನು, ಸಿಷಿಚುಃ - ತೋಯಿಸಿದವು. ॥ ೩೮ ॥ ಅಸ್ಯ - ಇವನ, ಕೇತುಮೂರ್ಧನಿ - ಧ್ವಜದ ಶಿಖರದಲ್ಲಿ, ನಿಲೀನಃ - ಅವಿತುಕೊಂಡಿರುವ, ದಕ್ಷಿಣಾಮುಖಃ - ದಕ್ಷಿಣ

---

ಆ ಪ್ರಹಸ್ತನು ಸರ್ವಸನ್ನದ್ಧನಾಗಿ ರಣಭೂಮಿಗೆ ಬರುತ್ತಿದ್ದ ಸಮಯದಲ್ಲಿ ಅತ್ಯಧಿಕವಾಗಿ ಕೂಗಿಡುತ್ತಿದ್ದ ರಾಕ್ಷಸರ ಭಯಂಕರ ಸಿಂಹನಾದಗಳಿಂದ ಲಂಕಾನಗರದಲ್ಲಿದ್ದ ಭೂತಗಳೆಲ್ಲವೂ ಭಯಗೊಂಡು ವಿಕಾರಸ್ವರದಿಂದ ಕೂಗಿಡುತ್ತಿದ್ದುವು. ಆ ಸಮಯದಲ್ಲಿ ಅನೇಕ ಅಪಶಕುನಗಳಾದುವು. ಮಾಂಸವನ್ನೂ, ರಕ್ತವನ್ನೂ ಭುಜಿಸಿ ಜೀವಿಸುವ ಪಕ್ಷಿಗಳು, ಮೇಘಶೂನ್ಯವಾದ ಅಂತರಿಕ್ಷದಲ್ಲಿ ಅಪಸವ್ಯವಾಗಿಯೂ, ಮಂಡಲಾಕಾರವಾಗಿಯೂ ಸಂಚರಿಸಲಾರಂಭಿಸಿದುವು. ॥ ೨೮-೩೫ ॥ ನರಿಗಳು ಬಹು ಭಯಂಕರಗಳಾದ ಅಗ್ನಿಜ್ವಾಲೆಗಳನ್ನುಗುಳುತ್ತ ಬಹು ಭಯಂಕರ ಧ್ವನಿಗಳನ್ನು ಮಾಡಿದುವು. ಅಂತರಿಕ್ಷದಿಂದ ಲೆಕ್ಕವಿಲ್ಲದಷ್ಟು ಕೊಳ್ಳಿಗಳುದುರಿದುವು. ವಾಯುವು ಬಿರುಸಾಗಿ ಬೀಸಿತು. ಗ್ರಹಗಳೆಲ್ಲವೂ ಒಂದರೊಡನೊಂದು ಬೆರೆತು ಕಾಂತಿಯಿಲ್ಲದವುಗಳಾದುವು. ಆ ಸಮಯದಲ್ಲಿಯೇ ಆ ಪ್ರಹಸ್ತನ ರಥದಮೇಲೆ ಮೇಘಗಳು ಬಹಳ ಕಠಿನವಾಗಿ ಗುಡುಗುತ್ತ ರಕ್ತವನ್ನು ಮಳೆಗರೆದುವು. ಆ ಪ್ರಹಸ್ತನೇರಿದ್ದ ಆ ರಥದ

ದಕ್ಷಿಣಾಮುಖಃ । ತುದನ್ನುಭಯತಃ ಪಾರ್ಶ್ವಂ ಸಮುಗ್ರಾಮಹರತ್ಪ್ರಭಾಂ ॥ ೩೯ ॥ ಸಾರಥೇರ್ಬಹುಶಶ್ಚಾಸ್ಯ ಸಂಗ್ರಾಮಮವಗಾಹತಃ । ಪ್ರತೋದೋ ನ್ಯಪತದ್ಧಸ್ತಾತ್ ಸೂತಸ್ಯ ಹಯಸಾದಿನಃ ॥ ೪೦ ॥ ನಿರ್ಯಾಣಶ್ರೀಶ್ಚ ಯಾಽಸ್ಯಾಸೀದ್ಭಾಸ್ವರಾ ವಸು ದುರ್ಲಭಾ । ಸಾ ನನಾಶ ಮುಹೂರ್ತೇನ ಸಮೇಚ ಸ್ಖಲಿತಾ ಹಯಾಃ ॥ ೪೧ ॥ ಪ್ರಹಸ್ತಂ ತ್ವಭಿನಿರ್ಯಾಂತಂ ಪ್ರಖ್ಯಾತಬಲಪೌರುಷಂ । ಯುಧಿ ನಾನಾಪ್ರಹರಣಾ ಕಪಿಸೇನಾಽಭ್ಯವರ್ತತ ॥ ೪೨ ॥ ಅಥ ಘೋಷಸ್ಸುತುಮುಲೋ ಹರೀಣಾಂ ಸಮುಜಾಯತ । ವೃಕ್ಷಾನಾರುಜತಾಂ ಚೈವ ಗುರ್ವೀರಾಗೃಹ್ಣತಾಂ ಶಿಲಾಃ ॥೪೩॥ ನದತಾಂ

---

ದಿಕ್ಕಿನಲ್ಲಿ ಮುಖವುಳ್ಳದ್ದಾಗಿ, ಗೃಧ್ರಃ-ಹದ್ದು, ಉಭಯತಃಪಾರ್ಶ್ವಂ-ಉಭಯಪಾರ್ಶ್ವಗಳಲ್ಲಿಯೂ, ತುದನ್ - ಕುಕ್ಕಿ, ಸಮುಗ್ರಾಂ - ಸಮಸ್ತವಾದ, ಪ್ರಭಾಂ - ಬೆಳಕನ್ನು, ಅಹರತ್ - ಅಪಹರಿಸಿತು. ||೩೯|| ಸಂಗ್ರಾಮಂ - ಕಾಳೆಗವನ್ನು ಕುರಿತು, ಬಹುಶಃ - ಅನೇಕಪ್ರಕಾರವಾಗಿ, ಅವಗಾಹತಃ-ಪ್ರವೇಶ ಮಾಡುತ್ತಿರುವ, ಸಾರಥೇಃ-ಸಾರಥಿಯಾದ, ಸೂತಸ್ಯ-ಸೂತವಂಶಸ್ಥನಾದ, ಹಯಸಾದಿನಃ-ಕುದುರೇಸವಾರನಾದವನ, ಹಸ್ತಾತ್ - ಕೈಯಿಂದ, ಪ್ರತೋದಃ - ಕೊರಡೆಯು, ನ್ಯಪತತ್ - ಬಿದ್ದುಹೋಯಿತು. ॥ ೪೦ ॥ ವಸುದುರ್ಲಭಾ - ಅಷ್ಟವಸುಗಳಿಗೆ ಲಭಿಸಲಸಾಧ್ಯವಾದ, ಭಾಸ್ವರಾ - ಹೊಳೆಯುತ್ತಿರುವ, ಅಸ್ಯ - ಈ ಪ್ರಹಸ್ತನ, ಯಾನಿರ್ಯಾಣಶ್ರೀಃ - ಯಾವ ಪ್ರಯಾಣಕಾಲದಲ್ಲಿನ ಬೆಳಕು, ಆಸೀತ್ - ಇದ್ದಿತೋ, ಸಾ - ಆ ಕಾಂತಿಯು, ಮುಹೂರ್ತೇನ - ಕ್ಷಣಕಾಲದಲ್ಲಿ, ನನಾಶ - ನಾಶವಾಯಿತು, ಹಯಾಃ - ಕುದುರೆಗಳು, ಸಮೇಚ - ಸಮವಾದ ನೆಲದಲ್ಲಿಯೂ, ಸ್ಖಲಿತಾಃ - ಜಾರಿಬಿದ್ದವು. ॥ ೪೧ ॥ ಅಭಿನಿರ್ಯಾಂತಂ - ಹೊರಟುಬರುತ್ತಲಿರುವ, ಪ್ರಖ್ಯಾ....ಷಂ - ಪ್ರಸಿದ್ಧವಾದ ದೇಹತ್ರಾಣೆಯೂ, ಪರಾಕ್ರಮವೂ ಉಳ್ಳ, ಪ್ರಹಸ್ತನನ್ನಾದರೆ, ಯುಧಿ - ಕಾಳೆಗದಲ್ಲಿ, ನಾನಾ....ಣಾ- ನಾನಾಬಗೆಗಳಾದ ಆಯುಧಗಳುಳ್ಳ, ಕಪಿಸೇನಾ - ವಾನರಸೈನ್ಯವು, ಅಭ್ಯವರ್ತತ - ಎದುರಾಗಿ ನಿಂತಿತು. ॥ ೪೨ ॥ ಅಥ - ಬಳಿಕ, ವೃಕ್ಷಾನ್ - ಮರಗಳನ್ನು, ಆರುಜತಾಂ - ಕೀಳುತ್ತಲಿರುವ, ಗುರ್ವೀಃ - ದೊಡ್ಡವಾದ, ಶಿಲಾಃ - ಪಾಷಾಣಗಳನ್ನು, ಆಗೃಹ್ಣತಾಂ - ತೆಗಿಯುವ, ಹರೀಣಾಂ - ವಾನರರ, ಸುತುಮುಲಃ - ಬಹು ಸಂಕುಲವಾದ, ಘೋಷಃ - ಶಬ್ದವು, ಸಮುಜಾಯತ - ಹುಟ್ಟಿತು, ನದತಾಂ - ಕೂಗುವ, ಗರ್ಜತಾಂ - ಗರ್ಜಿಸುವ, ರಕ್ಷಸಾಂ - ರಕ್ಕಸರ, ವಾನರಾಣಾಂ - ಕಪಿಗಳ,

---

ಟೆಕ್ಕೆಯಮೇಲೆ ಗೃಧ್ರವೊಂದು ದಕ್ಷಿಣಾಭಿಮುಖವಾಗಿ ಕುಳಿತುಕೊಂಡಿತು. ಆ ಹದ್ದು ತನ್ನ ಕೊಕ್ಕಿನಿಂದ ಎರಡೂ ಪಕ್ಕಗಳ ರೆಕ್ಕೆಗಳನ್ನೂ ಕೆರೆದುಕೊಳ್ಳುತ್ತ ಕುಕ್ಕಿ ಆ ರಥದ ಶೋಭೆಯೆಲ್ಲವನ್ನೂ ಅಪರಿಸಿತು. ಯುದ್ಧಭೂಮಿಯನ್ನು ಹೊಗುವವನೂ, ಕುದುರೆಗಳನ್ನು ತುರುಬುತ್ತಿರುವವನೂ ಆದ ಸೂತನ ಕೈಯಲ್ಲಿದ್ದ ಕೋರಡೆಯು ಇದ್ದಕ್ಕಿದ್ದಂತೆಯೇ ಜಾರಿಬಿದ್ದಿತು. ॥ ೩೬–೪೦ ॥ ಬಹು ಚೆನ್ನಾಗಿ ರಾಜಿಸುತ್ತಿದ್ದ ಪ್ರಯಾಣಕಾಲದ ಕಾಂತಿಯು ಅಳಿದುಹೋಯಿತು. ಆ ಪ್ರಹಸ್ತನ ರಥಾಶ್ವಗಳೂ ಸಹ ತಬ್ಬಿಬ್ಬಾಗಿ ಮುಗ್ಗರಿಸಿದುವು. ಹೀಗೆ ಯುದ್ಧಕ್ಕಾಗಿ ಹೊರಡುತ್ತಿದ್ದ ಪ್ರಸಿದ್ಧ ಬಲಪರಾಕ್ರಮವಂತನಾದ ಆ ಪ್ರಹಸ್ತನನ್ನು ನೋಡಿ ಅತ್ತಕಡೆಯಿದ್ದ ವಾನರವೀರರೆಲ್ಲರೂ ವಿವಿಧಾಯುಧಗಳನ್ನು ಧರಿಸಿ ಅಭಿಮುಖವಾಗಿ ಹೊರಟರು. ಆಗಲಾ ವಾನರರೂ ಯುದ್ಧಕ್ಕಾಗಿ ವೃಕ್ಷಗಳನ್ನೂ, ದೊಡ್ಡ ದೊಡ್ಡ ಬಂಡೆಗಳನ್ನೂ ಪೆಳಗಿಸುತ್ತಿದ್ದ ಧ್ವನಿಯು ಮಹಾದ್ಭುತವಾಗಿ ಕೇಳಿಸುತ್ತಿದ್ದಿತು. ಉಭಯಪಕ್ಷಗಳ ಸೇನೆ

ರಾಕ್ಷಸಾನಾಂಚ ವಾನರಾಣಾಂ ಚ ಗರ್ಜತಾಂ । ಉಭೇ ಪ್ರಮುದಿತೇ ಸೈನ್ಯೇ ರಕ್ಷೋ
ಗಣವನೌಕಸಾಂ ॥ ೪೪ ॥ ವೇಗಿತಾನಾಂ ಸಮರ್ಥಾನಾಮನ್ಯೋನ್ಯವಧಕಾಂಕ್ಷಿಣಾಂ ।
ಪರಸ್ಪರಂಚಾಹ್ವಯತಾಂ ನಿನಾದಃ ಶ್ರೂಯತೇ ಮಹಾನ್ ॥ ೪೫ ॥

ತತಃ ಪ್ರಹಸ್ತಃ ಕಪಿರಾಜವಾಹಿನೀ
ಮಭಿಪ್ರತಸ್ಥೇ ವಿಜಯಾಯ ದುರ್ಮತಿಃ ।
ವಿವೃದ್ಧವೇಗಾಂಚ ವಿವೇಶತಾಂ ಚಮೂಂ
ಯಥಾ ಮುಮೂರ್ಷುಃ ಶಲಭೋ ವಿಭಾವಸುಂ ॥ ೪೬ ॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಸಪ್ತಪಂಚಾಶಸ್ಸರ್ಗಃ.



ಉಭೇಸೈನ್ಯೇ - ಎರಡು ಸೈನ್ಯಗಳೂ, ಪ್ರಮುದಿತೇ - ಸಂತೋಷಗೊಂಡವು, ವೇಗಿತಾನಾಂ - ವೇಗವುಳ್ಳ, ಅನ್ಯೋ ... ಣಾಂ - ಪರಸ್ಪರವಾಗಿ ಸಂಹಾರವನ್ನು ಅಪೇಕ್ಷಿಸುವ, ಪರಸ್ಪರಂಚ - ಒಬ್ಬರನ್ನೊಬ್ಬರು, ಆಹ್ವಯತಾಂಚ - ಕರೆಯುತ್ತಲೂ ಇರುವ, ಸಮರ್ಥಾನಾಂ - ಕಾಳಗದಲ್ಲಿ ಸಮರ್ಥರಾದ, ರಕ್ಷೋ....ಸಾಂ - ರಾಕ್ಷಸರ ಗುಂಪುಗಳ ಮತ್ತು ಕಪಿಗಳ, ಮಹಾನ್ - ದೊಡ್ಡದಾದ, ನಿನಾದಃ - ಧ್ವನಿಯು, ಶ್ರೂಯತೇ - ಕೇಳಲ್ಪಡುತ್ತಲಿತ್ತು. ॥ ೪೪-೪೫ ॥ ತತಃ - ಅನಂತರದಲ್ಲಿ, ದುರ್ಮತಿಃ - ದುರ್ಬುದ್ಧಿಯುಳ್ಳ, ಪ್ರಹಸ್ತಃ - ಪ್ರಹಸ್ತನು, ವಿವೃದ್ಧವೇಗಾಂ - ವೃದ್ಧಿಹೊಂದಿದ ವೇಗವುಳ್ಳ, ಕಪಿ....ನೀಂ - ಸುಗ್ರೀವನ ಸೈನ್ಯವನ್ನು ಕುರಿತು, ವಿಜಯಾಯ - ಜಯಕ್ಕಾಗಿ, ಅಭಿಪ್ರತಸ್ಥೇ - ಅಭಿಮುಖವಾಗಿ ಬಂದನು, ಮುಮೂರ್ಷುಃ - ಮರಣೇಚ್ಛೆಯುಳ್ಳ, ಶಲಭಃ - ಈಚಲುಹುಳವು, ವಿಭಾವಸುಂಯಥಾ-ಅಗ್ನಿಯನ್ನಂತೆ, ತಾಂಚಮೂಂ - ಆ ಸೈನ್ಯವನ್ನು ಕುರಿತು, ವಿವೇಶ-ಹೊಕ್ಕನು. ॥೪೬॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಸಪ್ತಪಂಚಾಶಸ್ಸರ್ಗಃ.



ಗಳಲ್ಲಿಯೂ ಯುದ್ಧೋತ್ಸಾಹಿಗಳ ಸಿಂಹನಾದಗಳು ಬಹು ಭಯಂಕರವಾಗಿ ಹೊರಟಿತು. ಅಲ್ಲದೆ ಒಬ್ಬರನ್ನೊಬ್ಬರು ಸಂಹರಿಸಬೇಕೆಂಬ ಹುರುಡಿನಿಂದ ಕಾಳಗಕ್ಕೆ ಕರೆಯುತ್ತಿದ್ದ ರಾಕ್ಷಸವೀರರ ಕೂಗುಗಳು ಬಹು ಗಂಭೀರವಾಗಿ ಕೇಳಿಸುತ್ತಿದ್ದುವು. ಆಗ ಅಧಿಕ ವೇಗ ದಿಂದ ಕಾಳಗವಾಡಬೇಕೆಂಬ ಬಯಕೆಯಿಂದ ಬರುತ್ತಿದ್ದ ಆ ವಾನರಸೇನೆಯನ್ನು ನೋಡಿ ದುರ್ಬುದ್ಧಿಯುಳ್ಳ ಆ ಪ್ರಹಸ್ತನು ಶಲಭವು ಬೆಂಕಿಯಮೇಲೆ ಹೋಗುವಂತೆ ಅದರಮೇಲೆ ಅಟ್ಟಿಹೋದನು. ॥ ೪೧-೪೬ ॥

ಇಂತಿದು ಪ್ರಹಸ್ತಾಗಮನ ವೃತ್ತಾಂತವೆಂಬ ಐವತ್ತೇಳನೆಯ
ಸರ್ಗವು ಸಮಾಪ್ತವಾದುದು.



# ಯುದ್ಧಕಾಂಡೇ ಅಷ್ಟಪಂಚಾಶಸ್ಸರ್ಗಃ

ತತಃ ಪ್ರಹಸ್ತಂ ನಿರ್ಯಾಂತಂ ದೃಷ್ಟ್ವಾ ಭೀಮಪರಾಕ್ರಮಂ । ಉವಾಚ ಸಸ್ಮಿತಂ ರಾಮೋ ವಿಭೀಷಣಮರಿಂದಮಃ ॥ ೧ ॥ "ಕ ಏಷ ಸುಮಹಾಕಾಯೋ ಬಲೇನ ಮಹತಾವೃತಃ । ಆಚಕ್ಷ್ವ ಮೇ ಮಹಾಬಾಹೋ! ವೀರ್ಯವಂತಂ ನಿಶಾಚರಂ" ॥೨॥ ರಾಘವಸ್ಯ ವಚಃ ಶ್ರುತ್ವಾ ಪ್ರತ್ಯುವಾಚ ವಿಭೀಷಣಃ । "ಏಷ ಸೇನಾಪತಿಸ್ತಸ್ಯ ಪ್ರಹಸ್ತೋ ನಾಮ ರಾಕ್ಷಸಃ ॥೩॥ ಲಂಕಾಯಾಂ ರಾಕ್ಷಸೇಂದ್ರಸ್ಯ ತ್ರಿಭಾಗ ಬಲಸಂವೃತಃ । ವೀರ್ಯವಾನಸ್ತ್ರವಿಚ್ಛೂರಃ ಪ್ರಖ್ಯಾತಶ್ಚ ಪರಾಕ್ರಮೇ" ॥ ೪ ॥ ತತಃ ಪ್ರಹಸ್ತಂ ನಿರ್ಯಾಂತಂ ಭೀಮಂ ಭೀಮಪರಾಕ್ರಮಂ । ಗರ್ಜಂತಂ ಸುಮಹಾ

---

ತತಃ - ಬಳಿಕ, ನಿರ್ಯಾಂತಂ - ಹೊರಟುಬರುತ್ತಿರುವ, ಭೀಮಪರಾಕ್ರಮಂ - ಭಯಂಕರ ಪರಾಕ್ರಮವುಳ್ಳ, ತಂಪ್ರಹಸ್ತಂ - ಆ ಪ್ರಹಸ್ತನನ್ನು, ದೃಷ್ಟ್ವಾ - ಕಂಡು, ಅರಿಂದಮಃ - ಶತ್ರುಸಂಹಾರಕನಾದ, ರಾಮಃ - ಶ್ರೀರಾಮನು, ವಿಭೀಷಣಂಪ್ರತಿ - ವಿಭೀಷಣನನ್ನು ಕುರಿತು, ಸಸ್ಮಿತಂ - ಮಂದಸ್ಮಿತನಾಗಿ, ಉವಾಚ - ಹೇಳಿದನು. ॥ ೧ ॥ ಹೇ ಮಹಾಬಾಹೋ - ಎಲೈ ಮಹಾ ಭುಜಬಲ ಪರಾಕ್ರಮಿಯೇ, ಸುಮಹಾಕಾಯಃ - ದೊಡ್ಡ ಶರೀರವುಳ್ಳ, ಮಹತಾಬಲೇನ - ಮಹಾ ಸೈನ್ಯದಿಂದ, ವೃತಃ - ಪರಿವೃತನಾದ, ಏಷಃ - ಇವನು, ಕಃ - ಯಾವನು, ವೀರ್ಯವಂತಂ - ಪರಾಕ್ರಮಶಾಲಿಯಾದ, ನಿಶಾಚರಂ - ರಾಕ್ಷಸನನ್ನು, ಮೇ - ನನಗೆ, ಆಚಕ್ಷ್ವ - ಹೇಳು. ॥ ೨ ॥ ವಿಭೀಷಣಃ - ವಿಭೀಷಣನು, ರಾಘವಸ್ಯ - ಶ್ರೀರಾಮನ, ವಚಃ - ಮಾತನ್ನು, ಶ್ರುತ್ವಾ - ಕೇಳಿ, ಪ್ರತ್ಯುವಾಚ - ಪ್ರತ್ಯುತ್ತರಕೊಟ್ಟನು, ಏಷಃ - ಇವನು, ತಸ್ಯ - ಆ ರಾವಣನ, ಸೇನಾಪತಿಃ - ಸೇನಾನಾಯಕನು, ಪ್ರಹಸ್ತೋನಾಮ - ಪ್ರಹಸ್ತನೆಂದು ಪ್ರಸಿದ್ಧನಾದ, ರಾಕ್ಷಸಃ - ರಕ್ಕಸನು, ಲಂಕಾಯಾಂ - ಲಂಕಾಪಟ್ಟಣದಲ್ಲಿ, ರಾಕ್ಷಸೇಂದ್ರಸ್ಯ - ರಾವಣನ, ತ್ರಿಭಾ....ತಃ - ಮೂರನೆಯ ಒಂದು ಭಾಗದ ಸೇನೆಯಿಂದ ಕೂಡಿದವನು. ವೀರ್ಯವಾನ್ - ಸಾಮರ್ಥ್ಯವಂತನು, ಅಸ್ತ್ರವಿತ್ - ಅಸ್ತ್ರಜ್ಞನು, ಶೂರಃ - ಶೂರನಾದವನು, ಪರಾಕ್ರಮೇ - ಶತ್ರುಗಳ ನಿಗ್ರಹದಲ್ಲಿ, ಪ್ರಖ್ಯಾತಃ - ಪ್ರಸಿದ್ಧನು. ॥ ೩-೪ ॥ ತತಃ - ಬಳಿಕ, ನಿರ್ಯಾಂತಂ - ಹೊರಟುಬರುತ್ತಿರುವ, ಭೀಮಂ - ಭಯಂಕರವಾದ ಆಕಾರವುಳ್ಳ, ಭೀಮಪರಾ

---

ಆ ತರುವಾಯ ಭಯಂಕರ ಪರಾಕ್ರಮವುಳ್ಳ ಪ್ರಹಸ್ತನು ಹೊರಟುಬರುತ್ತಿರುವುದನ್ನು ಕಂಡು ಶ್ರೀರಾಮಮೂರ್ತಿಯು ಸಸ್ಮಿತವದನನಾಗಿ ತನ್ನ ಬಳಿಯಲ್ಲಿದ್ದ ವಿಭೀಷಣನನ್ನು ಕುರಿತು, "ಎಲೈ ಮಹಾ ಬಾಹುವೇ ! ಅಪಾರವಾದ ಸೇನೆಯೊಡಗೂಡಿ ಬರುತ್ತಿರುವ ಈ ದೊಡ್ಡ ದೇಹದ ರಾಕ್ಷಸನಾರು ? ಮಹಾ ಪರಾಕ್ರಮಿಯಾದ ಈ ರಾಕ್ಷಸನ ವೃತ್ತಾಂತವನ್ನು ನನಗೆ ತಿಳಿಸುವವನಾಗು" ಎಂದನು. ಆಗ ವಿಭೀಷಣನು, "ಪ್ರಭುವೇ ! ಇವನು ಪ್ರಹಸ್ತನೆಂಬ ಸೇನಾಪತಿಯು. ಲಂಕಾನಗರದಲ್ಲಿರುವ ರಾವಣನ ಸೈನ್ಯದಲ್ಲಿ ಮೂರನೆಯ ಒಂದು ಭಾಗದ ಸೇನೆಗೆ ಇವನು ನಾಯಕನಾಗಿರುವನು ; ವೀರ್ಯವಂತನಾದ ಇವನು ಶಸ್ತ್ರಾಸ್ತ್ರಗಳನ್ನು ಚೆನ್ನಾಗಿ ಬಲ್ಲವನು ; ಪರಾಕ್ರಮದಲ್ಲಿಯೂ ಇವನು ಪ್ರಸಿದ್ಧನಾದವನು. ॥ ೧-೪ ॥

ಪ್ರಹಸ್ತಂ ನಿರ್ಯಾಂತಂ ಭೀಮಂ ಭೀಮಪರಾಕ್ರಮಂ । ಗರ್ಜಂತಂ ಸುಮಹಾಕಾಯಂ ರಾಕ್ಷಸೈರಭಿಸಂವೃತಂ ॥ ೫ ॥ ದದರ್ಶ ಮಹತೀ ಸೇನಾ ವಾನರಾಣಾಂ ಬಲೀಯಸಾಂ । ಅತಿಸಂಜಾತರೋಷಾಣಾಂ ಪ್ರಹಸ್ತಮಭಿಗರ್ಜತಾಂ ॥ ೬ ॥ ಖಡ್ಗಶಕ್ತ್ಯಷ್ಟಿಬಾಣಾಶ್ಚ ಶೂಲಾನಿ ಮುಸಲಾನಿಚ । ಗದಾಶ್ಚ ಪರಿಘಾಃ ಪ್ರಾಸಾ ವಿವಿಧಾಶ್ಚ ಪರಶ್ವಥಾಃ ॥೭॥ ಧನೂಂಷಿಚ ವಿಚಿತ್ರಾಣಿ ರಾಕ್ಷಸಾನಾಂ ಜಯೈಷಿಣಾಂ । ಪ್ರಗೃಹೀತಾನ್ಯಶೋಭಂತ ವಾನರಾನಭಿಧಾವತಾಂ ॥೮॥ ಜಗೃಹುಃ ಪಾದಪಾಂಶ್ಚಾಪಿ ಪುಷ್ಪಿತಾನ್ ವಾನರರ್ಷಭಾಃ । ಶಿಲಾಶ್ಚ ವಿಪುಲಾ ದೀರ್ಘಾ ಯೋದ್ಧುಕಾಮಾಃ ಪ್ಲವಂಗಮಾಃ ॥೯॥ ತೇಷಾಮನ್ಯೋಽನ್ಯಮಾಸಾದ್ಯ ಸಂಗ್ರಾಮಸ್ಸುಮಹಾನಭೂತ್ । ಬಹೂನಾಮಶ್ಮ

ಕ್ರಮಂ - ಭಯಂಕರಪರಾಕ್ರಮವುಳ್ಳ, ಗರ್ಜಂತಂ - ಗರ್ಜಿಸುತ್ತಿರುವ, ಸುಮಹಾಕಾಯಂ - ಬಹು ದೀರ್ಘವಾದ ಶರೀರವುಳ್ಳ, ರಾಕ್ಷಸೈಃ - ರಕ್ಕಸರಿಂದ, ಅಭಿಸಂವೃತಂ - ಪರಿವೃತನಾದ, ಪ್ರಹಸ್ತಂ - ಪ್ರಹಸ್ತನನ್ನು, ಅತಿ....ಣಾಂ - ಬಹಳವಾಗಿ ಹುಟ್ಟಿದ ರೋಷವುಳ್ಳ, ರಾಕ್ಷಸೈಃ - ರಕ್ಕಸರಿಂದ, ಅಭಿಗರ್ಜತಾಂ - ಎದುರು ಗರ್ಜನೆ ಮಾಡುತ್ತಿರುವ, ಬಲೀಯಸಾಂ - ಬಲಿಷ್ಠರಾದ, ವಾನರಾಣಾಂ - ಕಪಿಗಳ, ಮಹತೀ - ದೊಡ್ಡದಾದ, ಸೇನಾ - ಸೈನ್ಯವು, ದದರ್ಶ - ಕಂಡನು. ॥ ೫-೬ ॥ ವಾನರಾನ್ - ಕಪಿಗಳನ್ನು ಕುರಿತು, ಅಭಿಧಾವತಾಂ - ಎದುರೋಡಿಬರುವ, ಜಯೈಷಿಣಾಂ - ಜಯವನ್ನು ಬಯಸುವ, ರಾಕ್ಷಸಾನಾಂ - ರಕ್ಕಸರ, ಖಡ್ಗ....ಶ್ಚ - ಕತ್ತಿಗಳೂ, ಶಕ್ತ್ಯಾಯುಧಗಳೂ, ದಂಡಗಳೂ, ಬಾಣಗಳೂ, ಶೂಲಾನಿ - ತ್ರಿಶೂಲಗಳೂ, ಮುಸಲಾನಿಚ - ಒನಿಕೆಗಳೂ, ಗದಾಶ್ಚ - ಗದಾಯುಧಗಳೂ, ಪರಿಘಾಃ - ಕಬ್ಬಿಣದ ದೊಣ್ಣೆಗಳೂ, ಪ್ರಾಸಾಃ - ಈಟೀಕೋಲುಗಳೂ, ವಿವಿಧಾಃ - ನಾನಾಬಗೆಗಳಾದ, ಪರಶ್ವಥಾಶ್ಚ - ಕೊಡಲಿಗಳು, ಪ್ರಗೃಹೀತಾನಿ - ಹಿಡಿಯಲ್ಪಟ್ಟ, ವಿಚಿತ್ರಾಣಿ - ನಾನಾಬಗೆಗಳಾದ, ಧನೂಂಷಿಚ - ಧನುಸ್ಸುಗಳೂ ಸಹ, ಅಶೋಭಂತ - ಹೊಳೆಯುತ್ತಿದ್ದುವು. ॥೭-೮॥ ವಾನರರ್ಷಭಾಃ - ಕಪಿಶ್ರೇಷ್ಠರಾದ, ಪ್ಲವಂಗಮಾಃ - ವಾನರರು, ಯೋದ್ಧುಕಾಮಾಃ - ಯುದ್ಧಮಾಡಲಿಚ್ಛೆಯುಳ್ಳವರಾಗಿ, ಪುಷ್ಪಿತಾನ್ - ಹೂಮೊಳೆತ, ಪಾದಪಾಂಶ್ಚಾಪಿ - ಮರಗಳನ್ನೂ, ವಿಪುಲಾಃ - ಅಗಲವಾದ, ದೀರ್ಘಾಃ - ಉದ್ದವಾದ, ಶಿಲಾಶ್ಚ - ಪಾಷಾಣಗಳನ್ನೂ, ಜಗೃಹುಃ - ತೆಗೆದುಕೊಂಡರು. ॥ ೯ ॥ ಅನ್ಯೋಽನ್ಯಂ - ಪರಸ್ಪರವಾಗಿ, ಆಸಾದ್ಯ - ಹೊಂದಿ, ಅಶ್ಮವೃಷ್ಟಿಂ - ಕಲ್ಲುಮಳೆಯನ್ನೂ, ಶರವೃಷ್ಟಿಂಚ - ಬಾಣವರ್ಷವನ್ನೂ, ವರ್ಷತಾಂ - ಸುರಿಸುತ್ತಿರುವ, ಬಹೂನಾಂ - ಅನೇಕರಾದ,

ಆ ಸಮಯದಲ್ಲಿ ಭಯಂಕರ ಪರಾಕ್ರಮವುಳ್ಳವನೂ, ಯುದ್ಧಕ್ಕಾಗಿ ಹೊರಟು ಬರುತ್ತಿರುವವನೂ, ಅತ್ಯಂತ ಭಯಂಕರವಾಗಿ ಗರ್ಜಿಸುತ್ತಿರುವವನೂ, ಬಹು ದೊಡ್ಡ ಶರೀರವುಳ್ಳವನೂ, ಅನೇಕಮಂದಿ ರಾಕ್ಷಸರೊಡಗೂಡಿರುವವನೂ ಆದ ಪ್ರಹಸ್ತನನ್ನೂ, ಬಹು ಬಲಿಷ್ಠವಾದ ರಾಕ್ಷಸಸೇನೆಯನ್ನೂ ಕಂಡನು. ಆಗ ರಾಕ್ಷಸರೆಲ್ಲರೂ ಅತಿ ಭಯಂಕರವಾದ ಸಿಂಹನಾದವನ್ನು ಮಾಡಿದರು ; ವಾನರರೆಲ್ಲರನ್ನೂ ಸಂಹರಿಸಲಪೇಕ್ಷೆಯುಳ್ಳ ರಾಕ್ಷಸರು ಗ್ರಹಿಸಿದ ಖಡ್ಗಗಳು, ಶಕ್ತಿ, ಪರಿಘ, ಪ್ರಾಸ, ಶೂಲ, ಮುಸಲಾದ್ಯಾಯುಧಗಳೂ ಚಿತ್ರವಿಚಿತ್ರಗಳಾದ ಧನುರ್ಬಾಣಗಳೂ ಬಹು ಮನೋಹರವಾಗಿ ಶೋಭಿಸುತ್ತಿದ್ದುವು. ಇತ್ತ ವಾನರೋತ್ತಮರೆಲ್ಲರೂ ಯುದ್ಧಾಪೇಕ್ಷಿಗಳಾಗಿ ಮಹಾ ವೃಕ್ಷಗಳನ್ನೂ, ದೊಡ್ಡ ದೊಡ್ಡ ಶಿಲೆಗಳನ್ನೂ ಗ್ರಹಿಸಿ ನಿಂತರು. ಆ ಬಳಿಕ ಇತ್ತಂಡದವರಿಗೂ ಬಹು ಭಯಂಕರವಾದ ಮಹಾ

ವೃಷ್ಟಿಂಚ ಶರವೃಷ್ಟಿಂಚ ವರ್ಷತಾಂ ॥ ೧೦ ॥ ಬಹವೋ ರಾಕ್ಷಸಾ ಯುದ್ಧೇ ಬಹೂನ್
ವಾನರಯೂಥಪಾನ್ । ವಾನರಾ ರಾಕ್ಷಸಾಂಶ್ಚಾಪಿ ನಿಜಘ್ನುರ್ಬಹವೋ ಬಹೂನ್ ॥ ೧೧॥
ಶೂಲೈಃ ಪ್ರಮಥಿತಾಃ ಕೇಚಿತ್ ಕೇಚಿಚ್ಚ ಪರಮಾಯುಧೈಃ । ಪರಿಘೈರಾಹತಾಃ
ಕೇಚಿತ್ ಕೇಚಿಚ್ಛಿನ್ನಾಃ ಪರಶ್ವಧೈಃ ॥೧೨॥ ನಿರುಚ್ಛ್ವಾಸಾಃ ಕೃತಾಃ ಕೇಚಿತ್ ಪತಿತಾ
ಧರಣೀತಲೇ । ವಿಭಿನ್ನಹೃದಯಾಃ ಕೇಚಿದಿಷುಸಂಧಾನಸಂದಿತಾಃ ॥೧೩॥ ಕೇಚಿದ್ದ್ವಿಧಾ
ಕೃತಾಃ ಖಡ್ಗೈಃ ಸ್ಫುರಂತಃ ಪತಿತಾ ಭುವಿ । ವಾನರಾ ರಾಕ್ಷಸೈಃ ಶೂಲೈಃ ಪಾರ್ಶ್ವ
ತಶ್ಚಾಪಿ ದಾರಿತಾಃ ॥ ೧೪ ॥ ವಾನರೈಶ್ಚಾಪಿ ಸಂಕ್ರುದ್ಧೈ ರಾಕ್ಷಸೌಘಾಸ್ಸಮಂತತಃ ।

ತೇಷಾಂ - ಆ ವಾನರರಾಕ್ಷಸರಿಗೆ, ಸುಮಹಾನ್ - ಬಹಳವಾದ, ಸಂಗ್ರಾಮಃ - ಕಾಳಗವು, ಅಭೂತ್ - ಆಯಿತು. ॥ ೧೦ ॥ ಬಹವಃ - ಅನೇಕರಾದ, ರಾಕ್ಷಸಾಃ - ರಕ್ಕಸರು, ಬಹೂನ್ - ಅನೇಕರಾದ, ವಾನರಯೂಥಪಾನ್ - ಕಪಿಯೂಥಪತಿಗಳನ್ನು, ಯುದ್ಧೇ - ಕಾಳಗದಲ್ಲಿ, ನಿಜಘ್ನುಃ - ಹೊಡೆದರು, ಬಹವಃ - ಅನೇಕಮಂದಿ, ವಾನರಾಃ - ಕಪಿಗಳು, ಬಹೂನ್ - ಅನೇಕರಾದ, ರಾಕ್ಷಸಾಂಶ್ಚಾಪಿ - ರಾಕ್ಷಸರನ್ನು, ನಿಜಘ್ನುಃ - ಹೊಡೆದರು. ॥ ೧೧ ॥ ಕೇಚಿತ್ - ಕೆಲವಾನರರು, ಶೂಲೈಃ - ಶೂಲಗಳಿಂದ, ಪ್ರಮಥಿತಾಃ - ತಿವಿಯಲ್ಪಟ್ಟರು, ಕೇಚಿಚ್ಚ - ಕೆಲವರು, ಪರಮಾಯುಧೈಃ - ಉತ್ತಮವಾದ ಆಯುಧಗಳಿಂದ ಹೊಡೆಯಲ್ಪಟ್ಟರು, ಕೇಚಿತ್ - ಕೆಲವರು, ಪರಿಘೈಃ - ಕಬ್ಬಿಣದ ಕಟ್ಟು ಹಾಕಿರುವ ದೊಣ್ಣೆಗಳಿಂದ, ಆಹತಾಃ - ಹೊಡೆಯಲ್ಪಟ್ಟರು, ಕೇಚಿತ್ - ಕೆಲವರು, ಪರಶ್ವಧೈಃ - ಕೊಡಲಿಗಳಿಂದ, ಛಿನ್ನಾಃ - ಕತ್ತರಿಸಲ್ಪಟ್ಟರು, ಕೇಚಿತ್ - ಕೆಲವರು, ನಿರುಚ್ಛ್ವಾಸಾಃ - ಉಚ್ಛ್ವಾಸನಿಶ್ವಾಸಗಳಿಲ್ಲದವರಾಗಿ, ಕೃತಾಃ - ಮಾಡಲ್ಪಟ್ಟು, ಧರಣೀತಲೇ - ಭೂಮಿಯಲ್ಲಿ, ಪತಿತಾಃ - ಬಿದ್ದನು, ಕೇಚಿತ್ - ಕೆಲವರು, ಇಷು....ತಾಃ - ಬಾಣಗಳನ್ನು ಸಂಧಾನಮಾಡುವ ಹಗ್ಗಗಳಿಂದ ಕಟ್ಟಲ್ಪಟ್ಟವರಾಗಿ, ವಿಭಿ....ಯಾಃ - ಒಡೆದ ಎದೆಯುಳ್ಳವರಾದರು, ಕೇಚಿದ್ವಾನರಾಃ - ಕೆಲ ವಾನರರು, ಖಡ್ಗೈಃ - ಕತ್ತಿಗಳಿಂದ, ದ್ವಿಧಾಕೃತಾಃ - ಎರಡು ಭಾಗಗಳಾಗಿ ಮಾಡಲ್ಪಟ್ಟು, ಭೂಮಿ - ನೆಲದಲ್ಲಿ, ಪತಿತಾಃ - ಬಿದ್ದರು, ರಾಕ್ಷಸೈಃ - ರಾಕ್ಷಸರಿಂದ, ಶೂಲೈಃ - ಶೂಲಗಳಿಂದ, ವಾನರಾಃ - ಕಪಿಗಳು, ಪಾರ್ಶ್ವತಶ್ಚ- ಉಭಯ ಪಾರ್ಶ್ವಗಳಲ್ಲಿಯೂ, ಅವದಾರಿತಾಃ - ಸೀಳಿಹಾಕಲ್ಪಟ್ಟರು. ॥ ೨-೧೪ ॥ ಸಂಕ್ರುದ್ಧೈಃ - ಕೋಪಿಷ್ಠರಾದ, ವಾನರೈಶ್ಚಾಪಿ - ಕಪಿಗಳಿಂದಲೂ, ರಾಕ್ಷಸೌಘಾಃ ರಾಕ್ಷಸಯೂಥಗಳು, ಸಮಂತತಃ - ಎಲ್ಲಾ ಕಡೆಯಲ್ಲಿಯೂ, ಪಾದಪೈಃ - ವೃಕ್ಷಗಳಿಂದಲೂ, ಗಿರಿಶೃಂಗೈಶ್ಚ - ಪರ್ವತದ ಶೃಂಗಗಳಿಂದಲೂ,

ಯುದ್ಧಕ್ಕೆ ಮೊದಲಾಯಿತು. ರಾಕ್ಷಸರೂ, ವಾನರರೂ ಬಾಣಶಿಲಾ ವರ್ಷಗಳನ್ನು ಸುರಿಸಿದರು. ॥ ೫–೧೦ ॥ ಆ ಯುದ್ಧದಲ್ಲನೇಕ ವಾನರಸೇನಾಪತಿಗಳು ರಾಕ್ಷಸರಿಂದ ಹತರಾಗಿ ಹೋದರು. ವಾನರರೂ ಸಹ ಅನೇಕ ಮಂದಿ ರಾಕ್ಷಸಯೂಥಪತಿಗಳನ್ನು ಸಂಹರಿಸಿದರು. ಇಷ್ಟೆಯಲ್ಲದೆ ಆ ಯುದ್ಧದಲ್ಲಿ ಕೆಲವರು ಶೂಲಾಯುಧಗಳಿಂದ ಮಡಿದು ಬಿದ್ದರು ; ಕೆಲವರು ಸರ್ವೋತ್ತಮವಾದ ಆಯುಧಗಳಿಂದ ಹತರಾದರು ; ಕೆಲವರು ವಾನರರು ಪರಿಘಾಯುಧಗಳಿಂದ ಮೃತಿಯೊಂದಿದರು ; ಗಂಡುಗೊಡಲಿಗಳಿಂದ ಕತ್ತರಿಸಲ್ಪಟ್ಟವರು ಕೆಲವರು ; ನಾನಾ ವಿಧವಾದ ಆಯುಧಗಳಿಂದ ಹೊಡೆಯಲ್ಪಟ್ಟು ಉಚ್ಛ್ವಾಸ ನಿಶ್ವಾಸಗಳೇ ಇಲ್ಲದೆ ಕೆಳಕ್ಕೆ ಬಿದ್ದವರು ಕೆಲವರು ; ಎದೆಗಳು ಭೇದಿಸಿ ಹೋಗಿ ಕೆಳಕ್ಕುರುಳಿದವರು ಕೆಲವರು. ಹೀಗೆ ಆ ರಾಕ್ಷಸರು ವಾನರರೆಲ್ಲರನ್ನೂ ಸಂಹರಿಸುತ್ತಿದ್ದರು. ರಾಕ್ಷಸರಿಂತು ಭಯಂಕರವಾದ ಯುದ್ಧವನ್ನು

ಪಾದಪೈರ್ಗಿರಿಶೃಂಗೈಶ್ಚ ಸಂಪಿಷ್ಟಾ ವಸುಧಾತಲೇ ॥ ೧೫ ॥ ವಜ್ರಸ್ಪರ್ಶತಲೈರ್ಹಸ್ತೈ
ರ್ಮುಷ್ಟಿಭಿಶ್ಚ ಹತಾ ಭೃಶಂ । ವೇಮುಃ ಶೋಣಿತಮಾಸ್ಯೇಭ್ಯೋ ವಿಶೀರ್ಣದಶನೇ
ಕ್ಷಣಾಃ ॥ ೧೬ ॥ ಆರ್ತಸ್ವನಂಚ ಸ್ವನತಾಂ ಸಿಂಹನಾದಂಚ ನರ್ದತಾಂ । ಬಭೂವ
ತುಮುಲಃ ಶಬ್ದೋ ಹರೀಣಾಂ ರಕ್ಷಸಾಂ ಯುಧಿ ॥ ೧೭ ॥ ವಾನರಾ ರಾಕ್ಷಸಾಃ
ಕ್ರುದ್ಧಾ ವೀರಮಾರ್ಗಮನುವ್ರತಾಃ । ವಿವೃತ್ತನಯನಾಃ ಕ್ರೂರಾಶ್ಚಕ್ರುಃ ಕರ್ಮಾಣ್ಯ
ಭೀತವತ್ ॥ ೧೮ ॥ ನರಾಂತಕಃ ಕುಂಭಹನುರ್ಮಹಾನಾದಸ್ಸಮುನ್ನತಃ । ಏತೇ
ಪ್ರಹಸ್ತಸಚಿವಾಸ್ಸರ್ವೇ ಜಘ್ನುರ್ವನೌಕಸಃ ॥ ೧೯ ॥ ತೇಷಾಮಾಪತತಾಂ ಶೀಘ್ರಂ

---

ವಸುಧಾತಲೇ - ನೆಲದಲ್ಲಿ, ಸಂಪಿಷ್ಟಾಃ - ಅರೆಯಲ್ಪಟ್ಟರು, ವಜ್ರಸ್ಪರ್ಶತಲೈಃ - ವಜ್ರಾಯುಧದ ಸ್ಪರ್ಶದಂತೆ ಸ್ಪರ್ಶವುಳ್ಳ, ಹಸ್ತೈಃ - ಕೈಗಳಿಂದಲೂ, ಮುಷ್ಟಿಭಿಶ್ಚ - ಹಿಡಿಗಳಿಂದಲೂ, ಭೃಶಂ - ಬಹಳವಾಗಿ, ಹತಾಃ - ಹೊಡೆಯಲ್ಪಟ್ಟವರಾಗಿ, ವಿಶೀ......ಣಾಃ - ಒಡದುಹೋದ ದಂತಗಳೂ, ನೇತ್ರ ಗಳೂ ಉಳ್ಳವರಾಗಿ, ಆಸ್ಯೇಭ್ಯಃ - ಮುಖಗಳಿಂದ, ಶೋಣಿತಂ - ರಕ್ತವನ್ನು, ವೇಮುಃ - ಕಕ್ಕಿ ಕೊಂಡರು, ಆರ್ತಸ್ವನಂ - ದೀನಧ್ವನಿಯನ್ನು, ಸ್ವನತಾಂ - ಮಾಡುತ್ತಿರುವ, ಸಿಂಹನಾದಂ - ಕೋಲಾಹಲಧ್ವನಿಯನ್ನು, ನರ್ದತಾಂ - ಮಾಡುತ್ತಿರುವ, ಹರೀಣಾಂ - ವಾನರರಿಗೂ, ರಕ್ಷಸಾಂ - ರಕ್ಕಸರಿಗೂ, ಯುಧಿ - ಕಾಳಗದಲ್ಲಿ, ತುಮುಲಃ - ಸಂಕುಲವಾದ, ಶಬ್ದಃ - ಶಬ್ದವು, ಬಭೂವ - ಆಯಿತು. ॥ ೧೫ ೧೬ ॥ ವಾನರಾಃ-ವಾನರರು, ರಾಕ್ಷಸಾಃ-ರಕ್ಕಸರೂ, ಕ್ರುದ್ಧಾಃ-ಕೋಪಗೊಂಡರು, ವೀರಮಾರ್ಗಂ - ಶೂರರ ಪದ್ಧತಿಯನ್ನು, ಅನುವ್ರತಾಃ - ಅನುಸರಿಸಿ, ವಿವೃತ್ತನಯನಾಃ - ತಿರುಗಿದ ನೇತ್ರಗಳುಳ್ಳವರಾಗಿ, ಕ್ರೂರಾಃ - ಕಠೋರರಾಗಿ, ಅಭೀತವತ್ - ಧೈರ್ಯವಾಗಿ, ಕರ್ಮಾಣಿ - ಯುದ್ಧವ್ಯಾಪಾರಗಳನ್ನು, ಚಕ್ರುಃ - ಚಕ್ರುಃ - ಮಾಡಿದರು. ॥ ೧೮ ॥ ನರಾಂತಕಃ - ನರಾಂತಕನೂ, ಕುಂಭಹನುಃ - ಕುಂಭಹನುವೂ, ಮಹಾನಾದಃ - ಮಹಾನಾದನೂ, ಸಮುನ್ನತಃ ಸಮುನ್ನತನೂ (ಎಂಬ), ಸರ್ವೇ - ಸಮಸ್ತರಾದ, ಏತೇಪ್ರಹಸ್ತಸಚಿವಾಃ - ಈ ಪ್ರಹಸ್ತನ ಮಂತ್ರಿಗಳು, ವನೌಕಸಃ- ವಾನರರನ್ನು, ಜಘ್ನುಃ - ಹೊಡೆದರು. ॥ ೧೯ ॥ ಶೀಘ್ರಂ - ಜಾಗ್ರತೆಯಾಗಿ, ಆಪತತಾಂ - ಬರು

---

ಮಾಡುತ್ತಿರುವುದನ್ನು ನೋಡಿ ವಾನರವೀರರೆಲ್ಲರೂ ಬಹಳವಾಗಿ ಕುಪಿತರಾಗಿ ವೃಕ್ಷ ಗಳಿಂದಲೂ, ಪರ್ವತಶಿಖರಗಳಿಂದಲೂ ಮರ್ದಿಸಿ ಕೆಲವರು ರಾಕ್ಷಸರನ್ನು ಕೊಂದರು. ಕೆಲ ವರು ರಾಕ್ಷಸರು ವಜ್ರಾಯುಧಗಳಂತೆ ಬಹು ದೃಢವಾದ ಆ ಕಪಿನಾಥರ ಮುಷ್ಟಿಘಾತಗಳಿಂದ ಮಡಿದು ಕೆಳಕ್ಕೆ ಬಿದ್ದರು. ಅವರಲ್ಲನೇಕರು ರಕ್ತವನ್ನು ಕಕ್ಕಿ ಭೂಮಿಗುರುಳಿದರು. ॥೧೧-೧೬॥ ಆ ಸಮಯದಲ್ಲಿ ಉಭಯಪಕ್ಷಗಳವರಲ್ಲಿಯೂ ಕೆಲವರು ದೀನಧ್ವನಿಯಿಂದ ರೋದನ ಮಾಡು ತ್ತಿದ್ದರು. ಕೆಲ ವಾನರವೀರರು ಸಿಂಹನಾದಗಳನ್ನು ಮಾಡುತ್ತಿದ್ದರು. ಆಗ ಉಭಯ ಪಕ್ಷ ಗಳವರಿಗೂ ಬಹು ಘೋರವಾದ ಯುದ್ಧವು ಮೊದಲಾಯಿತು. ವಾನರರೂ, ರಾಕ್ಷಸರೂ ಕೋಪೋದ್ದೀಪಿತರಾಗಿ ಮಹದದ್ಭುತಗಳಾದ ವೀರಕಾರ್ಯಗಳನ್ನು ಮಾಡುವವರಾಗಿ ಇತರ ರನ್ನು ಭಯಗೊಳಿಸಿದರು. ಅದೇ ಸಮಯದಲ್ಲಿ ಪ್ರಹಸ್ತ ರಾಕ್ಷಸನ ಮಂತ್ರಿಗಳಾದ ನರಾಂತ ಕನೂ, ಕುಂಭಹನುವೂ, ಮಹಾನಾದನೂ, ಸಮುನ್ನತನೂ ಸೆಡೆದುನಿಂತು ಪರಾಕ್ರಮಿಸಿ ಅನೇಕ ಮಂದಿ ವಾನರರನ್ನು ಕೊಂದರು. ಈ ನಾಲ್ವರು ಪ್ರಹಸ್ತಮಂತ್ರಿಗಳೂ ವಾನರ

ನಿಘ್ನತಾಂ ಚಾಪಿ ವಾನರಾನ್ | ದ್ವಿವಿದೋ ಗಿರಿಶೃಂಗೇಣ ಜಘಾನೈಕಂ ನರಾಂತಕಂ ||೨೦|| ದುರ್ಮುಖಃ ಪುನರುತ್ಥಾಯ ಕಪಿಸ್ಸವಿಪುಲದ್ರುಮಂ| ರಾಕ್ಷಸಂ ಕ್ಷಿಪ್ರಹಸ್ತಸ್ತು ಸಮುನ್ನತಮಪೋಥಯತ್ || ೨೧ || ಜಾಂಬವಾಂಸ್ತು ಸುಸಂಕ್ರುದ್ಧಃ ಪ್ರಗೃಹ್ಯ ಮಹತೀಂ ಶಿಲಾಂ | ಪಾತಯಾಮಾಸ ತೇಜಸ್ವೀ ಮಹಾನಾದಸ್ಯ ವಕ್ಷಸಿ ||೨೨|| ಅಥ ಕುಂಭಹನುಸ್ತತ್ರ ತಾರೇಣಾಸಾದ್ಯ ವೀರ್ಯವಾನ್ | ವೃಕ್ಷೇಣಾಭಿಹತೋ ಮೂರ್ಧ್ನಿ ಪ್ರಾಣಾನ್ ಸಂತ್ಯಾಜಯದ್ರಣೇ || ೨೩ || ಅಮೃಷ್ಯಮಾಣಸ್ತತ್ಕರ್ಮ ಪ್ರಹಸ್ತೋ ರಥ ಮಾಸ್ಥಿತಃ | ಚಕಾರ ಕದನಂ ಘೋರಂ ಧನುಷ್ಪಾಣಿರ್ವನೌಕಸಾಂ || ೨೪ || ಆವರ್ತ

ತ್ತಿರುವ, ತೇಷಾಂ - ಆ ರಕ್ಕಸರು, ವಾನರಾನ್ - ಕಪಿಗಳನ್ನು, ನಿಘ್ನತಾಂ - ಹೊಡೆಯುತ್ತಿರಲು, ದ್ವಿವಿದಃ - ದ್ವಿವಿದನು, ಗಿರಿಶೃಂಗೇಣ - ಪರ್ವತಶಿಖರದಿಂದ, ಏಕಂ - ಒಬ್ಬನಾದ, ನರಾಂತಕಂ - ನರಾಂತಕನನ್ನು, ಜಘಾನ - ಹೊಡೆದನು. || ೨೦ || ದುರ್ಮುಖಃ - ದುರ್ಮುಖನೆಂಬ, ಕಪಿಃ - ವಾನರನು, ಕ್ಷಿಪ್ರಹಸ್ತಃ - ವೇಗಯುಕ್ತನಾದ ಕೈಯುಳ್ಳವನಾಗಿ, ವಿಪುಲದ್ರುಮಂ - ವಿಸ್ತಾರವಾದ ವೃಕ್ಷದಿಂದ ಯುಕ್ತನಾದಂತೆ, ಉತ್ಥಾಯ - ಎದ್ದು, ಸಮುನ್ನತಂ - ಸಮುನ್ನತನೆಂಬ, ರಾಕ್ಷಸಂ - ರಕ್ಕಸನನ್ನು, ಅಪೋಥಯತ್ - ಹಿಂಸಿಸಿದನು. || ೨೧ || ತೇಜಸ್ವೀ - ತೇಜೋವಂತನಾದ, ಜಾಂಬವಾಂಸ್ತು - ಜಾಂಬವಂತನಾದರೆ, ಸುಸಂಕ್ರುದ್ಧಃ - ಬಹಳವಾಗಿ ಕೋಪಗೊಂಡು, ಮಹತೀಂ - ದೊಡ್ಡದಾದ, ಶಿಲಾಂ - ಪಾಷಾಣವನ್ನು, ಪ್ರಗೃಹ್ಯ - ತೆಗೆದುಕೊಂಡು, ಮಹಾನಾದಸ್ಯ - ಮಹಾನಾದನ, ವಕ್ಷಸಿ - ವಕ್ಷಸ್ಥಲದಲ್ಲಿ, ಪಾತಯಾಮಾಸ - ಬೀಳಿಸಿದನು. ||೨೨|| ಅಥ - ಬಳಿಕ, ತತ್ರ - ಆ ಯುದ್ಧರಂಗದಲ್ಲಿ, ವೀರ್ಯವಾನ್ - ಪರಾಕ್ರಮಶಾಲಿಯಾದ, ಕುಂಭಹನುಃ - ಕುಂಭಹನುವು, ತಾರೇಣ - ತಾರನಿಂದ, ಆಸಾದ್ಯ - ಹೊಂದಿ, ವೃಕ್ಷೇಣ - ಗಿಡದಿಂದ, ಮೂರ್ಧ್ನಿ - ಶಿರದಲ್ಲಿ, ಅಭಿಹತಃ - ಹೊಡೆಯಲ್ಪಟ್ಟವನಾಗಿ, ರಣೇ - ಕಾಳಗದಲ್ಲಿ, ಪ್ರಾಣಾನ್ - ಪ್ರಾಣಗಳನ್ನು, ಸಂತ್ಯಾಜಯತ್ - ಬಿಟ್ಟನು. || ೨೩ || ತತ್ಕರ್ಮ - ಆ ವ್ಯಾಪಾರವನ್ನು, ಅಮೃಷ್ಯಮಾಣಃ - ಸ್ಥೈರಿಸದಿರುವ, ಧನುಷ್ಪಾಣಿಃ - ಧನುರ್ಧಾರಿಯಾದ, ಪ್ರಹಸ್ತಃ - ಪ್ರಹಸ್ತನು, ರಥಂ - ರಥದಲ್ಲಿ, ಆಸ್ಥಿತಃ - ನಿಂತವನಾಗಿ, ಘೋರಂ - ಭಯಂಕರವಾದ, ವನೌಕಸಾಂ - ಕಪಿಗಳೊಡನೆ, ಕದನಂ ಯುದ್ಧವನ್ನು, ಚಕಾರ - ಮಾಡಿದನು. || ೨೪ || ತದಾ - ಆ ಕಾಲದಲ್ಲಿ, ಉಭಯೋಸ್ಸೇನಯೋಃ - ಎರಡು ಸೈನ್ಯಗಳಿಗೂ, ಕ್ಷುಭಿತಸ್ಯ - ಕ್ಷೋಭೆಗೊಳಿಸಲ್ಪಟ್ಟ, ಅಪ್ರಮೇಯಸ್ಯ - ಅಪರಿಮಿತವಾದ, ಸಾಗರಸ್ಯ -

ರನ್ನು ಸಂಹರಿಸುತ್ತಿರುವುದನ್ನು ನೋಡಿ ದ್ವಿವಿದನೆಂಬ ವಾನರೋತ್ತಮನು ನರಾಂತಕನೆಂಬವನನ್ನು ಒಂದು ಪರ್ವತಶಿಖರದಿಂದ ಸಂಹರಿಸಿದನು. ||೧೭-೨೦|| ಆಗ ದುರ್ಮುಖನೆಂಬ ವಾನರವೀರನು ದೊಡ್ಡದೊಂದು ವೃಕ್ಷವನ್ನು ಕೈಯಲ್ಲಿಡಿದುಬಂದು ಸಮುನ್ನತನನ್ನು ಬಡಿದು ನೆಲಕ್ಕುರುಳಿಸಿದನು. ಜಾಂಬವಂತನೂ ಸಹ ಅದೇ ಸಮಯದಲ್ಲಿ ಕ್ರೋಧಾವಿಷ್ಟನಾಗಿ ಮಹಾ ಶಿಲೆಯೊಂದನ್ನು ಮಹಾನಾದನಮೇಲೆ ಪ್ರಯೋಗಿಸಿ ಅವನೆದೆಯನ್ನು ಭೇದಿಸಿದನು. ಆಮೇಲೆ ತಾರನೆಂಬ ವಾನರಶ್ರೇಷ್ಠನು ಬಹು ಉದ್ದನಾದ ವೃಕ್ಷವೊಂದರಿಂದ ಕುಂಭಹನುವೆಂಬವನನ್ನು ಯಮಪುರಿಗಟ್ಟಿದನು. ಹೀಗೆ ತನ್ನ ನಾಲ್ವರು ಮಂತ್ರಿಗಳೂ ಮೃತಿಯೊಂದಿದುದನ್ನು ಕಂಡು ಆ ಪ್ರಹಸ್ತನು ಬಹಳವಾಗಿ ಕನಲಿ ಮಹಾ ಧನುರ್ಧಾರಿಯಾಗಿ ಬಹು ಭಯಂಕರವಾದ ಯುದ್ಧವನ್ನು ಮಾಡಲುಪಕ್ರಮಿಸಿದನು. ಇಷ್ಟೆಯಲ್ಲದೆ ಆ ಪ್ರಹಸ್ತ

ಇವ ಸಂಜಜ್ಞೇ ಉಭಯೋಸ್ಸೇನಯೋಸ್ತದಾ । ಕ್ಷುಭಿತಸ್ಯಾಪ್ರಮೇಯಸ್ಯ ಸಾಗರಸ್ಯೇವ ನಿಸ್ಸ್ವನಃ ॥ ೨೫ ॥ ಮಹತಾಹಿ ಶರೌಘೇಣ ಪ್ರಹಸ್ತೋ ಯುದ್ಧಕೋವಿದಃ । ಅರ್ದಯಾಮಾಸ ಸಂಕ್ರುದ್ಧೋ ವಾನರಾನ್ ಪರಮಾಹವೇ ॥ ೨೬ ॥ ವಾನರಾಣಾಂ ಶರೀರೈಶ್ಚ ರಾಕ್ಷಸಾನಾಂಚ ಮೇದಿನೀ । ಬಭೂವ ನಿಚಿತಾ ಘೋರಾ ಪತಿತೈರಿವ ಪರ್ವತೈಃ ॥೨೭॥ ಸಾ ಮಹೀ ರುಧಿರೌಘೇಣ ಪ್ರಚ್ಛನ್ನಾ ಸಂಪ್ರಕಾಶತೇ । ಸಂಛನ್ನಾ ಮಾಧವೇ ಮಾಸಿ ಪಲಾಶೈರಿವ ಪುಷ್ಪಿತೈಃ ॥ ೨೮ ॥ ಹತವೀರೌಘವಪ್ರಾಂತಾಂ ಭಗ್ನಾಯುಧಮಹಾದ್ರುಮಾಂ । ಶೋಣಿತೌಘಮಹಾತೋಯಾಂ ಯಮಸಾಗರಗಾಮಿನೀಂ

---

ಸಮುದ್ರದ, ಆವರ್ತಇವ - ಪ್ರಳಯದಂತಿರುವ, ತಸ್ಮಿನ್ - ಆ ಯುದ್ಧದಲ್ಲಿ, ನಿಸ್ಸ್ವನಇವ - ಕಡಲಿನ ಧ್ವನಿಯಂತೆ ಧ್ವನಿಯು, ಸಂಜಜ್ಞೇ - ಹುಟ್ಟಿತು. ॥೨೫॥ ಯುದ್ಧಕೋವಿದಃ - ಕಾಳಗದಲ್ಲಿ ಪಂಡಿತನಾದ, ಪ್ರಹಸ್ತಃ-ಪ್ರಹಸ್ತನು, ಸಂಕ್ರುದ್ಧಃ-ಕುಪಿತನಾಗಿ, ಮಹತಾ-ಮಹತ್ತರವಾದ, ಶರೌಘೇಣ-ಬಾಣಸಮೂಹದಿಂದ, ಪರಮಾಹವೇ - ಮಹಾ ಯುದ್ಧದಲ್ಲಿ, ವಾನರಾನ್ - ಕಪಿಗಳನ್ನು, ಅರ್ದಯಾಮಾಸ - ಹೊಡದಡೆನು. ॥೨೬॥ ಮೇದಿನೀಂ - ಭೂಮಿಯು, ಪರ್ವತೈರಿವ - ಪರ್ವತಗಳಂತೆ, ಪತಿತೈಃ-ಬಿದ್ದಿರುವ, ವಾನರಾಣಾಂ - ಕಪಿಗಳ, ಶರೀರೈಶ್ಚ - ದೇಹಗಳಿಂದಲೂ, ರಾಕ್ಷಸಾನಾಂಚ - ರಕ್ಕಸರ ಶರೀರಗಳಿಂದಲೂ, ಘೋರಾ - ಭಯಂಕರವಾಗಿ, ನಿಚಿತಾ - ತುಂಬಿದುದು, ಬಭೂವ - ಆಯಿತು. ॥ ೨೭ ॥ ರುಧಿರೌಘೇಣ ರಕ್ತಪ್ರವಾದದಿಂದ, ಪ್ರಚ್ಛನ್ನಾ-ಮುಚ್ಚಲ್ಪಟ್ಟ, ಸಾಮಹೀ-ಆ ಭೂಮಿಯು, ಮಾಧವೇಮಾಸಿ - ವೈಶಾಖಮಾಸದಲ್ಲಿ, ಪುಷ್ಪಿತೈಃ - ಹುವ್ವು ಬಿಟ್ಟಿರುವ, ಪಲಾಶೈಃ - ಮುತ್ತುಗದ ಗಿಡಗಳಿಂದ, ಸಂಛನ್ನೇವ ತುಂಬಿದಂತೆ, ಸಂಪ್ರಕಾಶತೇ-ಹೊಳೆಯುತ್ತಿದ್ದಿತು. ॥೨೮॥ ಹತ....ಪ್ರಾಂ-ಮೃತರಾದ ಶೂರರ ಸಮೂಹವೆಂಬ ತೀರಗಳುಳ್ಳ, ಭಗ್ನಾ....ಮಾಂ - ಮುರಿಯಲ್ಪಟ್ಟ ಆಯುಧಗಳೆಂಬ ದೊಡ್ಡ ಮರಗಳುಳ್ಳ, ಶೋಣಿ....ಯಾಂ - ರಕ್ತಪ್ರವಾಹವೆಂಬ ಬಹು ಜಲವುಳ್ಳ, ಯಮ....ನೀಂ - ಯಮನೆಂಬ ಸಮುದ್ರವನ್ನು ಕುರಿತು ಹೋಗುತ್ತಿರುವ, ಯಕೃ.....ಕಾಂ-ಎದೆಯ ಎಡಬಲಭಾಗದಲ್ಲಿರುವ

---

ರಾಕ್ಷಸನು ಉಭಯ ಸೇನೆಗಳಲ್ಲಿಯೂ ಉಲ್ಲಕಲ್ಲೋಲವಾದುದೂ, ಮಿತಿಯಿಲ್ಲದುದೂ ಆದ ಸಾಗರದ ಘೋಷದಂತೆ ಘೋಷವುಳ್ಳವನಾಗಿ ಮೂರ್ತೀಭವಿಸಿದ ಪ್ರಳಯಕಾಲದ ಯಮನಂತೆ ಸಂಚರಿಸತೊಡಗಿದನು. ॥ ೨೧–೨೫ ॥ ಈ ರೀತಿ ಸಂಚರಿಸುತ್ತಲಿರುವ ಯುದ್ಧಶಾಸ್ತ್ರ ವಿಶಾರದನಾದ ಆ ಪ್ರಹಸ್ತಾಸುರನು ಮಹಾದ್ಭುತವಾದ ಬಾಣಸಮುದಾಯದಿಂದ ಆ ರಣರಂಗದಲ್ಲಿ ವಾನರರೆಲ್ಲರನ್ನೂ ಬಹಳವಾಗಿ ಪೀಡಿಸತೊಡಗಿದನು. ಅಂತಹ ಯುದ್ಧದಲ್ಲಿ ಮಡಿದ ರಾಕ್ಷಸರ ಮತ್ತು ವಾನರರ ಕಳೇಬರಗಳು ಆ ಯುದ್ಧಭೂಮಿಯಲ್ಲಿ ಪರ್ವತಗಳಂತೆ ವ್ಯಾಪ್ತವಾಗಿದ್ದುವು. ಇಷ್ಟುಮಾತ್ರವಲ್ಲದೆ ಆ ರಣಭೂಮಿಯಲ್ಲಿ ರಕ್ತ ನದಿಗಳು ಹರಿದುವು. ಯುದ್ಧಭೂಮಿಯೆಲ್ಲವೂ ಹೂವೊಳೆತ ಮುತ್ತುಗದ ಗಿಡಗಳಿಂದ ಶೋಭಿಸುವ ವಸಂತಕಾಲವನ್ನು ಹೋಲುತ್ತಿದ್ದಿತು. ಆ ಸಮಯದಲ್ಲಿ ವಾನರರೂ, ರಾಕ್ಷಸರೂ ಬಹು ಭಯಂಕರವಾದ ಯುದ್ಧವನ್ನು ಮಾಡಿ ಮೃತರಾದ ವೀರರೆಂಬ ತೀರಗಳುಳ್ಳದೂ, ಮುರಿದು ಅಲ್ಲಲ್ಲಿ ಬಿದ್ದಿರುವ ಆಯುಧಗಳೆಂಬ ದೊಡ್ಡ ಮರಗಳುಳ್ಳದೂ, ರಕ್ತಪ್ರವಾಹವೆಂಬ ಉದಕಪ್ರವಾಹವುಳ್ಳದೂ, ಯಮನೆಂಬ ಸಮುದ್ರಕ್ಕೆ ಹೋಗುತ್ತಿರುವುದೂ, ಹೃದಯಗಳ ಎಡಬಲಭಾಗಗಳ

|| ೨೯ || ಯಕೃತ್ಪ್ಲೀಹಮಹಾಪಂಕಾಂ ವಿನಿಕೀರ್ಣಾಂತ್ರಶೈವಲಾಂ । ಭಿನ್ನಕಾಯ ಶಿರೋಮೀನಾಮಂಗಾವಯವಶಾಡ್ವಲಾಂ || ೩೦ || ಗೃಧ್ರಹಂಸಗಣಾಕೀರ್ಣಾಂ ಕಂಕ ಸಾರಸಸೇವಿತಾಂ । ಮೇದಃಫೇನಸಮಾಕೀರ್ಣಾ ಮಾರ್ತಸ್ತನಿತನಿಸ್ವನಾಂ || ೩೧ || ತಾಂ ಕಾಪುರುಷದುಸ್ತಾರಾಂ ಯುದ್ಧಭೂಮಿಮಯೀಂ ನದೀಂ । ನದೀಮಿವ ಘನಾ ಪಾಯೇ ಹಂಸಸಾರಸಸೇವಿತಾಂ || ೩೨ || ರಾಕ್ಷಸಾಃ ಕಪಿಮುಖ್ಯಾಶ್ಚ ತೇರುಸ್ತಾಂ ದುಸ್ತರಾಂ ನದೀಂ । ಯಥಾ ಪದ್ಮರಜೋಧ್ವಸ್ತಾಂ ನಳಿನೀಂ ಗಜಯೂಥಪಾಃ ||೩೩|| ತತಸ್ಸೃಜಂತಂ ಬಾಣೌಘಾನ್ ಪ್ರಹಸ್ತಂ ಸ್ಯಂದನೇ ಸ್ಥಿತಂ । ದದರ್ಶ ತರಸಾ ನೀಲೋ

---

ಮಾಂಸ ಎಂಬ ಬಹಳವಾದ ಕೆಸರುಳ್ಳ, ವಿನಿ....ಲಾಂ - ಎರಚಲ್ಪಟ್ಟ ಕರುಳುಗಳೆಂಬ ಹಾವಚೀ ಬಳ್ಳಿ ಗಳುಳ್ಳ, ಭಿನ್ನ....ನಾಂ - ಒಡೆದ ಶರೀರವೂ, ಶಿರಸ್ಸುಗಳೆಂಬ ಮೀನುಗಳುಳ್ಳ, ಅಂಗಾ....ಲಾಂ - ಕರ ಚರಣಾದ್ಯವಯವಗಳೆಂಬ (ಬೆರಳು ಮುಂತಾದವುಗಳು), ಹಸೀ ಹುಲ್ಲು ಬೆಳದ ಭೂಮಿಯುಳ್ಳ, ಗೃಧ್ರ....ರ್ಣಾಂ - ಹದ್ದುಗಳೆಂಬ ಹಂಸಪಕ್ಷಿಗಳ ತಂಡಗಳಿಂದ ತುಂಬಿ, ಕಂಕ....ತಾಂ - ಬಿಳೀಹದ್ದು ಗಳೆಂಬ ಸಾರಸಪಕ್ಷಿಗಳಿಂದ ಸೇವಿಸಲ್ಪಟ್ಟ, ಮೇದಃ....ರ್ಣಾಂ-ಮೇದಸ್ಸುಗಳೆಂಬ ನೊರೆಗಳಿಂದ ವ್ಯಾಪ್ತ ವಾದ, ಆರ್ತ....ನಾಂ - ದೀನಧ್ವನಿಗಳೆಂಬ ಧ್ವನಿಯುಳ್ಳ, ಕಾಪು.....ರಾಂ - ಭಯಶೀಲರಾದ ಪುರುಷ ರಿಂದ ದಾಟಲಸಾಧ್ಯವಾದ, ತಾಂ - ಆ, ಯುದ್ಧ....ಯೀಂ - ಆ ಯುದ್ಧಭೂಮಿಯೆಂಬ, ನದೀಂ - ನದಿಯನ್ನು, (ತೇರುಃ-ದಾಟಿದರು). || ೨೯-೩೧ || ಘನಾಪಾಯೇ-ಶರದೃತುವಿನಲ್ಲಿ, ಹಂಸ....ತಾಂ- ಹಂಸಪಕ್ಷಿಗಳಿಂದಲೂ, ಸಾರಸಪಕ್ಷಿಗಳಿಂದಲೂ ಸೇವಿಸಲ್ಪಟ್ಟ, ನದೀಮಿವ-ನದಿಯನ್ನಂತೆ, ದುಸ್ತರಾಂ- ದಾಟಲಸಾಧ್ಯವಾದ, ತಾಂನದೀಂ - ಆ ರಣರಂಗವೆಂಬ ನದಿಯನ್ನು, ರಾಕ್ಷಸಾಃ - ರಕ್ಕಸರೂ, ಕಪಿಮುಖ್ಯಾಶ್ಚ - ವಾನರಶ್ರೇಷ್ಠರೂ, ತೇರುಃ - ದಾಟಿದರು. || ೩೨ || ಪದ್ಮ....ಸ್ತಾಂ - ಕಮಲಗಳ ಧೂಳಿಗಳಿಂದ ವರ್ಣಾಂತರವನ್ನು ಹೊಂದಿದ, ನಳಿನೀಂ - ಕಮಲ ಸರೋವರವನ್ನು, ಗಜಯೂಥ ಪಾಯಥಾ - ಗಜಯೂಥಪತಿಗಳಂತೆ, ದುಸ್ತರಾಂ - ದಾಂಟಲಸಾಧ್ಯವಾದ, ನದೀಂ - ನದಿಯನ್ನು, ತೇರುಃ - ದಾಂಟಿದರು. || ೩೩ || ತತಃ - ಬಳಿಕ, ನೀಲಃ - ನೀಲನೆಂಬ ವಾನರಸೇನಾಧಿಪತಿಯು, ಬಾಣೌಘಾನ್ - ಬಾಣಸಮೂಹಗಳನ್ನು, ಸೃಜಂತಂ - ಬಿಡುತ್ತ, ಸ್ಯಂದನೇ - ತೇರಿನಲ್ಲಿ, ಸ್ಥಿತಂ - ಇರುವ, ತರಸಾ - ಬಲದಿಂದ, ಪ್ಲವಂಗಮಾನ್ - ವಾನರರನ್ನು, ವಿನಿಘ್ನಂತಂ - ಹೊಡೆಯುತ್ತಿರುವ, ಪ್ರಹಸ್ತಂ - ಪ್ರಹಸ್ತನನ್ನು, ದದರ್ಶ - ಕಂಡನು. || ೩೪ || ಖೇ - ಅಂತರಿಕ್ಷದಲ್ಲಿ, ಉದ್ಧೂತಃ -

---

ಮಾಂಸಗಳೆಂಬ ಕೆಸರುಳ್ಳದೂ, ಶಿರಸ್ಸುಗಳೆಂಬ ಮೀನುಗಳುಳ್ಳದೂ, ಕರಚರಣಾದ್ಯವಯವ ಗಳೆಂಬ ಪಾಚಿಯುಳ್ಳದೂ, ಗೃಧ್ರಗಳೆಂಬ ಹಂಸಪಕ್ಷಿಗಳುಳ್ಳದೂ, ಕಂಕಪಕ್ಷಿಗಳೆಂಬ ಸಾರಸಪಕ್ಷಿಗಳಿಂದ ತುಂಬಿದುದೂ, ಮೇದಸ್ಸುಗಳೆಂಬ ನೊರೆಯುಳ್ಳದೂ, ಬಿಲ್ಲಿನ ನಾರಿಯ ಟಂಕಾರ ಧ್ವನಿಯೆಂಬ ನಿಮ್ನೋನ್ನತಜಲಪತನ ಧ್ವನಿಯುಳ್ಳದೂ, ಕ್ರೂರಪುರುಷರೆಂಬ ಭಯಂಕರ ಜಂತುಗಳುಳ್ಳದೂ ಆದ ರಣನದಿಯನ್ನುಂಟುಮಾಡಿ ಅದನ್ನು ದಾಟುತ್ತಿದ್ದರು. ||೨೬--೩೨|| ಇಷ್ಟೆಯಲ್ಲದೆ ಆ ವಾನರ ರಾಕ್ಷಸರೀರ್ವರೂ ಆ ಭಯಂಕರ ರಣನದಿಯನ್ನು ಪದ್ಮ ಪರಾಗದಿಂದ ಕೆಂಪಾದ ಕೊಳವನ್ನು ಗಜಗಳೆಂತೋ ಅಂತು ರಕ್ತಸಿಕ್ತವಾದ ಶರೀರಗಳುಳ್ಳವ ರಾಗಿ ದಾಟಿದರು. ಆ ತರುವಾಯ ರಥದಲ್ಲಿ ಕುಳಿತು ಬಾಣದ ಮಳೆಯನ್ನು ಸುರಿಸುತ್ತಿರುವ ಪ್ರಹಸ್ತರಾಕ್ಷಸನನ್ನು ಕಂಡು ನೀಲನೆಂಬ ವಾನರಯೂಥಪತಿಯು ಮಹಾ ಕುಪಿತನಾದನು.

ವಿನಿಷ್ಕ್ರಾಂತಂ ಪ್ಲವಂಗವರ್ಷಾ ||೩೪|| ಉದ್ಧೂತ ಇವ ವಾಯುಃ ಖೇ ಮಹದಭ್ರಬಲಂ ಬಲಾತ್ | ಸಮೀಕ್ಷ್ಯಾಭಿದ್ರುತಂ ಯುದ್ಧೇ ಪ್ರಹಸ್ತೋ ವಾಹಿನೀಪತಿಃ | ರಥೇನಾದಿತ್ಯವರ್ಣೇನ ನೀಲಮೇವಾಭಿದುದ್ರುವೇ ||೩೫|| ಸಧನುರ್ಧನ್ವಿನಾಂ ಶ್ರೇಷ್ಠೋ ವಿಕೃಷ್ಯ ಪರಮಾಹವೇ | ನೀಲಾಯ ವ್ಯಸೃಜದ್ಬಾಣಾನ್ ಪ್ರಹಸ್ತೋ ವಾಹಿನೀಪತಿಃ ||೩೬|| ತೇ ಪ್ರಾಪ್ಯ ವಿಶಿಖಾ ನೀಲಂ ವಿನಿರ್ಭಿದ್ಯ ಸಮಾಹಿತಾಃ | ಮಹೀಂ ಜಗ್ಮುರ್ಮಹಾವೇಗಾ ರುಷಿತಾ ಇವ ಪನ್ನಗಾಃ ||೩೭|| ನೀಲಂ ಶರೈರಭಿಹತೋ ನಿಶಿತೈರ್ಜ್ವಲನೋಪಮೈಃ | ಸ ತಂ ಪರಮದುರ್ಧರ್ಷಮಾಪತಂತಂ ಮಹಾಕಪಿಃ ||೩೮|| ಪ್ರಹಸ್ತಂ ತಾಡಯಾಮಾಸ ವೃಕ್ಷಮುತ್ಪಾಟ್ಯ ವೀರ್ಯವಾನ್ | ಸತೇನಾಭಿಹತಃ ಕ್ರುದ್ಧೋ ನದರ್

---

ಎದ್ದ, ವಾಯುಃ - ಚಂಡಮಾರುತವು ಮಹತ್ - ದೊಡ್ಡದಾದ, ಅಭ್ರಬಲಮಿವ - ಮೇಘಸಮೂಹವನ್ನಂತೆ, ಅಭಿದ್ರುತಂ - ಓಡಿಬರುತ್ತಿರುವ, ನೀಲಂ - ನೀಲನನ್ನು, ವಾಹಿನೀಪತಿಃ - ಸೇನಾಪತಿಯಾದ, ಪ್ರಹಸ್ತಃ - ಪ್ರಹಸ್ತನು, ಯುದ್ಧೇ - ಕಾಳಗದಲ್ಲಿ, ಸಮೀಕ್ಷ್ಯ - ಕಂಡು, ಆದಿ....ಣ - ಸೂರ್ಯಕಾಂತಿಯುಳ್ಳ, ರಥೇನ ತೇರಿನಿಂದ, ಅಭಿದುದ್ರುವೇ ಎದುರುಬಂದನು. ||೩೫|| ವಾಹಿನೀಪತಿಃ- ಸೇನಾಪತಿಯಾದ, ಧನ್ವಿನಾಂ - ಧನುರ್ಧಾರಿಗಳಲ್ಲಿಗೆ, ಶ್ರೇಷ್ಠಃ - ಉತ್ತಮನಾದ, ಸಪ್ರಹಸ್ತಃ - ಆ ಪ್ರಹಸ್ತನು, ಪರಮಾಹವೇ - ಮಹಾ ಯುದ್ಧದಲ್ಲಿ, ಧನುಃ - ಧನುಸ್ಸನ್ನು, ವಿಕೃಷ್ಯ - ಸೆಳದು, ನೀಲಾಯ - ನೀಲನಿಗಾಗಿ, ಬಾಣಾನ್ - ಬಾಣಗಳನ್ನು, ವ್ಯಸೃಜತ್ - ಬಿಟ್ಟನು. ||೩೬|| ತೇವಿಶಿಖಾಃ- ಆ ಬಾಣಗಳು, ರುಷಿತಾಃ - ರೋಷವುಳ್ಳ, ಪನ್ನಗಾಇವ - ಸರ್ಪಗಳಂತೆ, ಮಹಾವೇಗಾಃ - ಬಹು ವೇಗವುಳ್ಳವುಗಳಾಗಿ, ನೀಲಂ-ನೀಲನನ್ನು, ಪ್ರಾಪ್ಯ-ಹೊಂದಿ, ವಿನಿರ್ಭಿದ್ಯ-ಭೇದಿಸಿ, ಸಮಾಹಿತಾಃ- ಶಾಂತವಾಗಿ, ಮಹೀಂ - ಭೂಮಿಯನ್ನು, ಜಗ್ಮುಃ - ಹೊಂದಿದವು. ||೩೭|| ವೀರ್ಯವಾನ್ - ಪರಾಕ್ರಮಿಯಾದ, ಮಹಾಕಪಿಃ - ಮಹಾ ವಾನರನಾದ, ಸನೀಲಃ - ಆ ನೀಲನು, ಜ್ವಲನೋಪಮೈಃ - ಅಗ್ನಿಸದೃಶವಾದ, ನಿಶಿತೈಃ - ತೀಕ್ಷ್ಣವಾದ, ಶರೈಃ - ಬಾಣಗಳಿಂದ, ಅಭಿಹತಃ - ಹೊಡೆಯಲ್ಪಟ್ಟವನಾಗಿ, ಆಪತಂತಂ - ಬರುತ್ತಿರುವ, ಪರ....ರ್ಷಂ - ನಿರಾಕರಿಸಲಸಾಧ್ಯನಾದ, ತಂಪ್ರಹಸ್ತಂ - ಆ

---

ಆ ಸಮಯದಲ್ಲಿ ಆ ಪ್ರಹಸ್ತನು ರಥದಲ್ಲಿ ಕುಳಿತು ವಾಯುವು ಆಕಾಶದಲ್ಲಿನ ಮೇಘಗಳನ್ನು ಚದುರಿಸುವಂತೆ ವಾನರರೆಲ್ಲರನ್ನೂ ಚದುರಿಸಿ ಓಡಿಸುತ್ತಿದ್ದನು. ಆಗ ನೀಲನು ಅವನೊಡನೆ ಯುದ್ಧಸನ್ನದ್ಧನಾಗಿ ನಿಂತನು. ಆಗ ಪ್ರಹಸ್ತನು ತನ್ನೊಡನೆ ಯುದ್ಧಕ್ಕೆ ಸಿದ್ಧನಾಗಿರುವ ನೀಲನೆಂಬ ವಾನರನನ್ನು ನೋಡಿ ಸೂರ್ಯಕಾಂತಿಯುತವಾಗಿರುವ ತನ್ನ ರಥವನ್ನು ಅವನಮೇಲೆ ಬಹು ವೇಗವಾಗಿ ತುರುಬಿದನು. ||೩೪-೩೫|| ಧನುರ್ಧಾರಿಗಳಲ್ಲಿ ಉತ್ತಮನಾದ ಆ ಪ್ರಹಸ್ತನು ಮಹಾದ್ಭುತವಾದ ಆ ಯುದ್ಧಭೂಮಿಯಲ್ಲಿ ಧನುಸ್ಸನ್ನಾಕರ್ಷಿಸಿ ನೀಲನಮೇಲೆ ಅನೇಕ ಬಾಣಗಳನ್ನು ಪ್ರಯೋಗಿಸಿದನು. ಆ ಬಾಣಗಳೆಲ್ಲವೂ ಬಹು ವೇಗವಾಗಿ ಆ ನೀಲನನ್ನು ತಾಕಿ ಮಹಾ ಸರ್ಪಗಳಂತೆ ಭೂಮಿಯನ್ನು ಪ್ರವೇಶಿಸಿದವು. ಆ ರೀತಿ ನೀಲನು ಬಹು ತೀಕ್ಷ್ಣಗಳಾದ ಆ ಬಾಣಗಳಿಂದ ಹೊಡೆಯಲ್ಪಟ್ಟುದರಿಂದ ಬಹಳವಾಗಿ ಕೆರಳಿ ಒಂದು ಹೆಮ್ಮರವನ್ನು ಪೆಳಗಿಸಿ ಕೈಗೆ ತೆಗೆದುಕೊಂಡು ನುಗ್ಗಿ ಬಂದನು. ಕೂಡಲೇ ಅವನು, ಶತ್ರುಗಳಿಂದ ಧರ್ಷಿಸಲಶಕ್ಯನೂ, ತನ್ನೊಡನೆ ಯುದ್ಧಮಾಡಲು ನಿಂತಿರುವವನೂ ಆದ ಆ ಪ್ರಹಸ್ತನಮೇಲೆ

ರಾಕ್ಷಸಪುಂಗವಃ ‖ ೩೯ ‖ ವವರ್ಷ ಶರವರ್ಷಾಣಿ ಪ್ಲವಂಗಾನಾಂ ಚಮೂಪತೌ । ತಸ್ಯ ಬಾಣಗಣಾನ್ ಘೋರಾನ್ ರಾಕ್ಷಸಸ್ಯ ಮಹಾಬಲಃ ‖ ೪೦ ‖ ಅಪಾರಯನ್ ವಾರಯಿತುಂ ಪ್ರತ್ಯಗೃಹ್ಣನ್ನಿಮೀಲಿತಃ । ಯಥೈವ ಗೋವೃಷೋ ವರ್ಷಂ ಶಾರದಂ ಶೀಘ್ರಮಾಗತಂ ‖ ೪೧ ‖ ಏವಮೇವ ಪ್ರಹಸ್ತಸ್ಯ ಶರವರ್ಷಂ ದುರಾಸದಂ । ನಿಮೀಲಿತಾಕ್ಷಸ್ಸಹಸಾ ನೀಲಸ್ಸೇಹೇ ಸುದಾರುಣಂ ‖ ೪೨ ‖ ರೋಷಿತಃ ಶರವರ್ಷೇಣ ಸಾಲೇನ ಮಹತಾ ಮಹಾನ್ । ಪ್ರಜಘಾನ ಹಯಾನ್ನೀಲಃ ಪ್ರಹಸ್ತಸ್ಯ ಮನೋಜವಾನ್ ‖೪೩‖ ತತಸ್ತಚ್ಚಾಪಮುದ್ಗೃಹ್ಯ ಪ್ರಹಸ್ತಸ್ಯ ಮಹಾಬಲಃ । ಬಭಂಜ ತರಸಾ ನೀಲೋ

---

ಪ್ರಹಸ್ತನನ್ನು ಕುರಿತು, ವೃಕ್ಷಂ - ವೃಕ್ಷವನ್ನು, ಉತ್ಪಾಟ್ಯ - ಕಿತ್ತು, ತಾಡಯಾಮಾಸ - ಹೊಡೆದನು, ‖೩೮-೩೯‖ ತೇನ - ಆ ವೃಕ್ಷದಿಂದ, ಅಭಿಹತಃ - ಹೊಡೆಯಲ್ಪಟ್ಟ, ಸರಾ....ವಃ - ಆ ರಾಕ್ಷಸಶ್ರೇಷ್ಠನಾದ ಪ್ರಹಸ್ತನು, ಕ್ರುದ್ಧಃ - ಕೋಪಿಷ್ಠನಾಗಿ, ನರ್ದನ್ - ಕೂಗುತ್ತ, ಪ್ಲವಂಗಾನಾಂ - ವಾನರರ, ಚಮೂಪತೌ - ಸೇನಾನಾಯಕನಾದ ನೀಲನಲ್ಲಿ, ಶರವರ್ಷಾಣಿ - ಬಾಣವೃಷ್ಟಿಗಳನ್ನು, ವವರ್ಷ - ಸುರಿಸಿದನು. ‖ ೪೦ ‖ ಮಹಾಬಲಃ-ಬಹು ಬಲಶಾಲಿಯಾದ ನೀಲನು, ತಸ್ಯರಾಕ್ಷಸಸ್ಯ-ಆ ಪ್ರಹಸ್ತನ, ಘೋರಾನ್ - ಭಯಂಕರವಾದ, ಬಾಣಗಣಾನ್ - ಬಾಣಸಮೂಹಗಳನ್ನು, ವಾರಯಿತುಂ - ನಿವಾರಿಸುವುದಕ್ಕಾಗಿ, ಅಪಾರಯನ್ - ಅಸಮರ್ಥನಾಗಿ, ನಿಮೀಲಿತಃ - ಕಣ್ಣುಮುಚ್ಚಿ, ಪ್ರತ್ಯಗೃಹ್ಣಾತ್ - ಪರಿಗ್ರಹಿಸಿದನು. ‖೪೧‖ ಗೋವೃಷಃ - ವೃಷಭವು, ಶಾರದಂ - ಶರತ್ಕಾಲದ ಸಂಬಂಧವಾದ, ಶೀಘ್ರಂ - ಜಾಗ್ರತೆಯಾಗಿ, ಆಗತಂ - ಬಂದ, ವರ್ಷಂ - ಮಳೆಯನ್ನು, ಯಥಾ - ಹೇಗೋ, ಏವಮೇವ - ಹಾಗೆಯೇ, ನಿಮೀಲಿತಾಕ್ಷಃ - ಕಣ್ಣುಮುಚಿಕೊಂಡಿರುವ, ನೀಲಃ - ನೀಲನು, ಪ್ರಹಸ್ತಸ್ಯ - ಪ್ರಹಸ್ತನ, ದುರಾಸದಂ - ಹೊಂದಲಶಕ್ಯವಾದ, ಸುದಾರುಣಂ - ಬಹು ಕ್ರೂರವಾದ, ಶರವರ್ಷಂ - ಬಾಣವೃಷ್ಟಿಯನ್ನು, ಸಹಸಾ - ಜಾಗ್ರತೆಯಾಗಿ, ಸೇಹೇ-ಸಹಿಸಿದನು. ‖ ೪೨ ‖ ಮಹಾನ್ - ಮಹಾತ್ಮನಾದ, ನೀಲಃ - ನೀಲನು, ಶರವರ್ಷೇಣ - ಬಾಣವೃಷ್ಟಿಯಿಂದ, ರೋಷಿತಃ - ಕೋಪಗೊಳಿಸಲ್ಪಟ್ಟವನಾಗಿ, ಮಹತಾ - ದೊಡ್ಡದಾದ, ಸಾಲೇನ - ಸಾಲವೃಕ್ಷದಿಂದ, ಪ್ರಹಸ್ತಸ್ಯ - ಪ್ರಹಸ್ತನ, ಮನೋಜವಾನ್ - ಮನೋವೇಗವುಳ್ಳ, ಹಯಾನ್ - ಕುದುರೆಗಳನ್ನು, ಪ್ರಜಘಾನ - ಹೊಡದನು. ‖೪೩‖ ತತಃ - ಬಳಿಕ, ಮಹಾಬಲಃ - ಬಹು ಬಲವುಳ್ಳ, ನೀಲಃ - ನೀಲನು, ಪ್ರಹಸ್ತಸ್ಯ - ಪ್ರಹಸ್ತನ, ತಚ್ಚಾಪಂ -

---

ಆ ಹೆಮ್ಮರವನ್ನು ಪ್ರಯೋಗಿಸಿದನು. ಹೀಗೆ ಆ ಮರದಿಂದ ಹೊಡೆಯಲ್ಪಟ್ಟ ಆ ರಾಕ್ಷಸನು ಕೂಡಲೇ ಕೋಪಾವಿಷ್ಟನಾಗಿ ವಾನರಸೇನಾಧಿಪತಿಯಾದ ಆ ನೀಲನಮೇಲೆ ಬಹು ಭಯಂಕರವಾಗಿ ಬಾಣದ ಮಳೆಯನ್ನು ಸುರಿಸಿದನು. ಆಗ ಮಹಾ ಬಲಾಢ್ಯನಾದ ನೀಲನೆಂಬ ವಾನರಶ್ರೇಷ್ಠನು ಪ್ರಹಸ್ತನು ಪ್ರಯೋಗಿಸಿದ ಭಯಂಕರವಾದ ಬಾಣಗಳನ್ನು ನಿವಾರಿಸಲಶಕ್ತನಾಗಿ ಗೋವುಗಳೂ, ವೃಷಭಗಳೂ ಬಹು ಬಿರುಸಾಗಿ ಸುರಿಯುತ್ತಿರುವ ಶರತ್ಕಾಲದ ಮಳೆಗಳಲ್ಲಿ ಎಂತೋ ಅಂತು ತಲೆಬಗ್ಗಿಸಿಕೊಂಡು ಆ ಬಾಣಗಳ ಹೊಡೆತಗಳೆಲ್ಲವನ್ನೂ ಸಹಿಸಿದನು. ‖ ೩೮–೪೨ ‖ ಸ್ವಲ್ಪ ಹೊತ್ತು ಆ ರೀತಿ ಕಣ್ಮುಚ್ಚಿಕೊಂಡು ಆ ಬಾಣವರ್ಷವನ್ನು ಸಹಿಸಿಕೊಂಡಿದ್ದು ಆ ತರುವಾಯ ಮಹಾ ಕ್ರೋಧಾವಿಷ್ಟನಾಗಿ ಒಂದು ದೊಡ್ಡ ಸಾಲವೃಕ್ಷವನ್ನು ತೆಗೆದುಕೊಂಡು ಮನೋವೇಗವುಳ್ಳ ಆ ಪ್ರಹಸ್ತರಾಕ್ಷಸನ ರಥಾಶ್ವಗಳನ್ನು ಹೊಡೆದು ಕೊಂದನು. ಇದೂ ಅಲ್ಲದೆ ಮಹಾ ಬಲನಾದ ಆ ನೀಲನು ಅಪಾರವಾದ

ನನಾದಚ ಪುನಃಪುನಃ ॥ ೪೪ ॥ ವಿಧನುಸ್ತು ಕೃತಸ್ತೇನ ಪ್ರಹಸ್ತೋ ವಾಹಿನೀಪತಿಃ ।
ಪ್ರಗೃಹ್ಯ ಮುಸಲಂ ಘೋರಂ ಸ್ಯಂದನಾದವಪುಪ್ಲುವೇ ॥ ೪೫ ॥ ತಾವುಭೌ ವಾಹಿನೀ
ಮುಖ್ಯೌ ಜಾತವೈರೌ ತರಸ್ವಿನೌ । ಸ್ಥಿತೌ ಕ್ಷತಜದಿಗ್ಧಾಂಗೌ ಪ್ರಭಿನ್ನಾವಿವ ಕುಂಜರೌ
॥ ೪೬ ॥ ಉಲ್ಲಿಖಂತೌ ಸುತೀಕ್ಷ್ಣಾಭಿರ್ದಂಷ್ಟ್ರಾಭಿರಿತರೇತರಂ । ಸಿಂಹಶಾರ್ದೂಲ
ಸದೃಶೌ ಸಿಂಹಶಾರ್ದೂಲಚೇಷ್ಟಿತೌ ॥ ೪೭ ॥ ವಿಕ್ರಾಂತವಿಜಯೌ ವೀರೌ ಸಮರೇಷ್ವ
ನಿವರ್ತಿನೌ । ಕಾಂಕ್ಷಮಾಣೌ ಯಶಃ ಪ್ರಾಪ್ತುಂ ವೃತ್ರವಾಸವಯೋಸ್ಸಮೌ ॥ ೪೮ ॥

ಆ ಧನುಸ್ಸನ್ನು, ಉದ್ಗೃಹ್ಯ - ಹಾರಿ ಹಿಡಿದು, ತರಸಾ - ಬಲಾತ್ಕಾರದಿಂದ, ಬಭಂಜ - ಮುರಿದನು, ಪುನಃಪುನಃ - ಬಾರಿಬಾರಿಗೂ, ನನಾದಚ - ಕೂಗಿಕೊಂಡನು. ॥೪೪॥ ತೇನ - ನೀಲನಿಂದ, ವಾಹಿನೀ ಪತಿಃ - ಸೇನಾಪತಿಯಾದ, ಪ್ರಹಸ್ತಃ - ಪ್ರಹಸ್ತನು, ವಿಧನುಃ - ಧನುರ್ಹೀನನಾಗಿ, ಕೃತಃ - ಮಾಡಲ್ಪಟ್ಟವನಾಗಿ, ಘೋರಂ - ಭಯಂಕರವಾದ, ಮುಸಲಂ - ಒನಕೆಯನ್ನು, ಪ್ರಗೃಹ್ಯ - ತೆಗೆದುಕೊಂಡು, ಸ್ಯಂದನಾತ್ - ರಥದಿಂದ, ಅವಪುಪ್ಲುವೇ - ಧುಮುಕಿದನು. ॥ ೪೫ ॥ ವಾಹಿನೀಮುಖ್ಯೌ - ಸೇನಾನಾಯಕರಾದ, ತಾವುಭೌ - ಆ ನೀಲಪ್ರಹಸ್ತರಿಬ್ಬರೂ, ಜಾತವೈರೌ - ಹುಟ್ಟಿದ ದ್ವೇಷವುಳ್ಳವರಾಗಿ, ತರಸ್ವಿನೌ - ವೇಗವಂತರಾಗಿ, ಪ್ರಭಿನ್ನೌ - ಮದವೇರಿದ, ಕುಂಜರಾವಿವ - ಆನೆಗಳಂತೆ, ಕ್ಷತ....ಗೌ - ರಕ್ತದಿಂದ ತೋಯಿಸಲ್ಪಟ್ಟ ಶರೀರಗಳುಳ್ಳವರಾಗಿ, ಸ್ಥಿತೌ - ನಿಂತರು. ॥ ೪೬ ॥ ಸಿಂಹ....ಶೌ - ಸಿಂಹಶಾರ್ದೂಲಗಳಿಗೆ ಸಮಾನರಾದ, ಸಿಂಹ....ತೌ - ಸಿಂಹವ್ಯಾಘ್ರಗಳ ನಡಿಗೆಯಂತೆ ನಡಗೆಯುಳ್ಳ, ಸುತೀಕ್ಷ್ಣಾಭಿಃ-ಬಹು ತೀಕ್ಷ್ಣವಾದ, ದಂಷ್ಟ್ರಾಭಿಃ-ಕೋರೆದಾಡೆಗಳಿಂದ, ಪರಸ್ಪರಂ-ಅನ್ಯೋನ್ಯವಾಗಿ, ಉಲ್ಲಿಖಂತೌ - ಚುಚ್ಚುವವರಾದ, ಸಮರೇಷು - ಕಾಳಗಗಳಲ್ಲಿ, ಅನಿವರ್ತಿನೌ - ಹಿಂಜರಿಯದ, ಯಶಃ - ಕೀರ್ತಿಯನ್ನು, ಪ್ರಾಪ್ತುಂ - ಹೊಂದುವದಕ್ಕಾಗಿ, ವೃತ್ರವಾಸವಯೋಃ - ವೃತ್ರಾಸುರ ದೇವೇಂದ್ರರಿಗೆ, ಸಮೌ - ಸಮಾನರಾದ, ವೀರೌ - ಶೂರರಾದ ಆ ನೀಲಪ್ರಹಸ್ತರು, ವಿಕ್ರಾ....ಯೌ - ಸರ್ವತ್ರ ಹೊಂದಲ್ಪಟ್ಟ ಜಯಗಳುಳ್ಳವರಾದಕಾರಣ, ಕಾಂಕ್ಷಮಾಣೌ - ವಿಜಯ

ವೇಗದಿಂದ ಮುಂದೆ ನುಗ್ಗಿ ಆ ಪ್ರಹಸ್ತನ ಕೈಲಿದ್ದ ಧನುಸ್ಸನ್ನು ಬಲಾತ್ಕಾರವಾಗಿ ಸೆಳೆದು ಅದನ್ನು ಮುರಿದಿಕ್ಕಿ ಎಲ್ಲರ ಎದೆಗಳೂ ನಡುಗುವಂತೆ ಭಯಂಕರವಾದ ಸಿಂಹ ನಾದವನ್ನು ಮಾಡಿದನು. ಆಗ ರಾಕ್ಷಸಸೇನಾನಾಯಕನಾದ ಪ್ರಹಸ್ತನು ನಿರ್ಧನುಷ್ಕನಾಗಿ ಕೂಡಲೇ ಭಯಂಕರವಾದ ಒಂದು ಮುಸಲಾಯುಧವನ್ನು ಧರಿಸಿ ಸಿಂಹಗರ್ಜನೆಯನ್ನು ಮಾಡುತ್ತ ಕೆಳಕ್ಕೆ ಧುಮುಕಿದನು. ಆ ತರುವಾಯ ಅವನಿಗೂ, ವಾನರಯೂಥಪತಿಯಾದ ನೀಲನಿಗೂ ಭಯಂಕರ ಯುದ್ಧಕ್ಕೆ ಮೊದಲಾಯಿತು. ಆ ಸಮಯದಲ್ಲಿ ಅವರೀರ್ವರೂ ರಕ್ತಸಿಕ್ತವಾದ ಶರೀರಗಳುಳ್ಳವರಾಗಿ ಮದದಾನೆಗಳಂತೆ ತೋರುತ್ತಿದ್ದರು. ಇಬ್ಬರೂ ಪರಸ್ಪರ ವೈರವುಳ್ಳವರಾಗಿ ಒಬ್ಬರನ್ನೊಬ್ಬರು ಕೋರೆದಾಡೆಗಳಿಂದ ಬಹು ತೀಕ್ಷ್ಣವಾಗಿ ಕಚ್ಚಾಡಿ ಗಾಯಗೊಳಿಸಿದರು ; ಇಬ್ಬರೂ ಸಿಂಹವ್ಯಾಘ್ರಗಳ ನಡಿಗೆಗಳುಳ್ಳವರಾಗಿ ನೋಡುವವರಿಗೆ ದಿಗ್ಭ್ರಾಂತಿಯನ್ನುಂಟುಮಾಡುತ್ತಿದ್ದರು ; ಅವರಿಬ್ಬರೂ ಯುದ್ಧರಂಗವನ್ನು ಬಿಟ್ಟು ಹಿಂತಿರುಗದವರೂ, ಅಧಿಕ ಪರಾಕ್ರಮವಂತರೂ, ಒಬ್ಬರನ್ನೊಬ್ಬರು ಜಯಿಸಬೇಕೆಂಬ ಕೋರಿಕೆಯುಳ್ಳವರೂ ಆಗಿದ್ದರು ; ವೃತ್ರಾಸುರನಿಗೂ, ಮಹೇಂದ್ರನಿಗೂ ಸಮಾನರಾದ

ಆಜಘಾನ ತತೋ ನೀಲಂ ಲಲಾಟೇ ಮುಸಲೇನ ಸಃ । ಪ್ರಹಸ್ತಃ ಪರಮಾಯತ್ತಸ್ತಸ್ಯ ಸುಸ್ರಾವ ಶೋಣಿತಂ ॥ ೪೯ ॥ ತತಃ ಶೋಣಿತದಿಗ್ಧಾಂಗಃ ಪ್ರಗೃಹ್ಯ ಸುಮಹಾತರುಂ । ಪ್ರಹಸ್ತಸ್ಯೋರಸಿ ಕ್ರುದ್ಧೋ ವಿಸಸರ್ಜ ಮಹಾಕಪಿಃ ॥ ೫೦ ॥ ತಮಚಿಂತ್ಯಪ್ರಹಾರಂ ಸ ಪ್ರಗೃಹ್ಯ ಮುಸಲಂ ಮಹತ್ । ಅಭಿದುದ್ರಾವ ಬಲಿನಂ ಬಲಾನ್ನೀಲಂ ಪ್ಲವಂಗಮಂ ॥೫೧॥ ತಮುಗ್ರವೇಗಂ ಸಂರಬ್ಧಮಾಪತಂತಂ ಮಹಾಕಪಿಃ । ತತಸ್ಸಂಪ್ರೇಕ್ಷ್ಯ ಜಗ್ರಾಹ ಮಹಾವೇಗೋ ಮಹಾಶಿಲಾಂ ॥ ೫೨ ॥ ತಸ್ಯ ಯುದ್ಧಾಭಿಕಾಮಸ್ಯ ಮೃಧೇ ಮುಸಲಯೋಧಿನಃ । ಪ್ರಹಸ್ತಸ್ಯ ಶಿಲಾಂ ನೀಲೋ ಮೂರ್ಧ್ನಿ ತೂರ್ಣಮ

ವನ್ನೇ ಅಪೇಕ್ಷಿಸುತ್ತಿದ್ದರು. ॥ ೪೮ ॥ ತದಾ - ಆ ಕಾಲದಲ್ಲಿ, ಸಪ್ರಹಸ್ತಃ - ಆ ಪ್ರಹಸ್ತನು, ಪರಮಾಯತ್ತಃ - ಬಹು ಜಾಗರೂಕನಾಗಿ, ಮುಸಲೇನ - ಒನಕೆಯಿಂದ, ನೀಲಂ - ನೀಲನನ್ನು, ಲಲಾಟೇ - ಫಾಲಪ್ರದೇಶದಲ್ಲಿ, ಆಜಘಾನ - ಹೊಡೆದನು, ತಸ್ಯ - ಆ ನೀಲನಿಗೆ, ಶೋಣಿತಂ - ರಕ್ತವು, ಸುಸ್ರಾವ- ಸುರಿಯುತ್ತಿತ್ತು, ತತಃ - ಬಳಿಕ, ಶೋಣಿ......ಗಃ - ರಕ್ತದಿಂದ ತೊಯಿಸಲ್ಪಟ್ಟ ಶರೀರವುಳ್ಳ, ಮಹಾಕಪಿಃ - ಮಹಾ ವಾನರನಾದ ನೀಲನು, ಕ್ರುದ್ಧಃ - ಕೋಪವುಳ್ಳವನಾಗಿ, ಮಹಾತರುಂ - ದೊಡ್ಡ ವೃಕ್ಷವನ್ನು, ಪ್ರಗೃಹ್ಯ - ತೆಗೆದುಕೊಂಡು, ಪ್ರಹಸ್ತಸ್ಯ - ಪ್ರಹಸ್ತನ, ಉರಸಿ - ವಕ್ಷಸ್ಥಲದಲ್ಲಿ, ವಿಸಸರ್ಜ - ಬಿಟ್ಟನು. ॥೪೯॥ ಸಃ - ಆ ಪ್ರಹಸ್ತನು, ತಂಪ್ರಹಾರಂ - ಆ ಹೊಡೆತವನ್ನು, ಅಚಿಂತ್ಯ- ಲಕ್ಷ್ಯಮಾಡದೆ, ಮಹತ್ - ಮಹತ್ತರವಾದ, ಮುಸಲಂ - ಒನಕೆಯನ್ನು, ಬಲಾತ್ - ಬಲದ ದೆಶೆಯಿಂದ, ಪ್ರಗೃಹ್ಯ - ತೆಗೆದುಕೊಂಡು, ಬಲಿನಂ - ಬಲವಂತನಾದ, ನೀಲಂ - ನೀಲನನ್ನು ಕುರಿತು, ಅಭಿದುದ್ರಾವ - ಓಡಿಬಂದನು. ॥ ೫೦ ॥ ತತಃ - ಬಳಿಕ, ಮಹಾವೇಗಃ - ಬಹು ವೇಗವುಳ್ಳ, ಮಹಾಕಪಿಃ - ನೀಲನು, ಆಪತಂತಂ - ಬರುತ್ತಿರುವ, ಸಂರಬ್ಧಂ - ಕೋಪಿಷ್ಠನಾದ, ಉಗ್ರವೇಗಂ - ಭಯಂಕರವಾದ ವೇಗವುಳ್ಳ, ತಂ - ಆ ಪ್ರಹಸ್ತನನ್ನು, ಸಂಪ್ರೇಕ್ಷ್ಯ - ಕಂಡು, ತತಃ - ಬಳಿಕ, ಮಹಾಶಿಲಾಂ ದೊಡ್ಡ ಕಲ್ಲನ್ನು, ಜಗ್ರಾಹ - ತೆಗೆದುಕೊಂಡನು. ॥ ೫೧ ೫೨ ॥ ನೀಲಃ - ನೀಲನು, ಯುದ್ಧಾ......ಸ್ಯ - ಕಾಳಗವನ್ನು ಕೋರುತ್ತಿರುವ, ಮುಸಲಯೋಧಿನಃ - ಒನಕೆಯಿಂದ ಯುದ್ಧ ಮಾಡುತ್ತಿರುವ, ತಸ್ಯಪ್ರಹಸ್ತಸ್ಯ - ಆ ಪ್ರಹಸ್ತನ, ಮೂರ್ಧ್ನಿ - ಶಿರಸ್ಸಿನಲ್ಲಿ, ತೂರ್ಣಂ - ಜಾಗ್ರತೆ

ಆ ಪ್ರಹಸ್ತ ನೀಲರು ಕೀರ್ತಿಯನ್ನು ಗಳಿಸಬೇಕೆಂಬ ಕೋರಿಕೆಯಿಂದ ಪ್ರಬಲವಾದ ಯುದ್ಧವನ್ನು ಮಾಡುತ್ತಿದ್ದರು. ॥೪೩-೪೮॥ ಆ ಸಮಯದಲ್ಲಿ ಪ್ರಹಸ್ತ ರಾಕ್ಷಸನು ಮುಸಲಾಯುಧದಿಂದ ನೀಲನ ಮುಖವೇ ಭೇದಿಸಿಹೋಗುವಂತೆ ಬಲವಾಗಿ ಹೊಡೆದನು. ಕೂಡಲೇ ಅವನ ಮುಖದಿಂದ ರಕ್ತಪ್ರವಾಹವೇ ಹೊರಹೊರಟಿತು. ಆಗಲಾ ವಾನರಶ್ರೇಷ್ಠನಾದ ನೀಲನು ಬಹಳವಾಗಿ ಕನಲಿ ಬಹು ದೊಡ್ಡದಾದ ಮರವನ್ನು ಪೆಳಗಿಸಿಕೊಂಡು ಅದರಿಂದ ಆ ಪ್ರಹಸ್ತನನ್ನು ಬಲವಾಗಿ ಪ್ರಹರಿಸಿದನು. ಪ್ರಹಸ್ತ ರಾಕ್ಷಸನಾದರೊ ಆ ಹೊಡೆತವನ್ನು ಲಕ್ಷ್ಯಕ್ಕೆ ತಂದುಕೊಳ್ಳದೆ ಮುಸಲಾಯುಧವನ್ನು ಗಿರ್ರನೆ ತಿರುಗಿಸುತ್ತ ಆ ನೀಲನಮೇಲೆ ಅಟ್ಟಿಬಂದನು. ಹೀಗೆ ಯುದ್ಧಸನ್ನದ್ಧನಾಗಿ ಬಹು ವೇಗದಿಂದೈತರುತ್ತಿರುವ ಪ್ರಹಸ್ತನನ್ನು ನೋಡಿದೊಡನೆಯೇ ವಾನರಶ್ರೇಷ್ಠನಾದ ನೀಲನು ಅವನಿಗಿಂತಲೂ ಅತ್ಯಧಿಕ ವೇಗವುಳ್ಳವನಾಗಿ ದೊಡ್ಡದೊಂದು ಶಿಲೆಯನ್ನು ಆಯುಧವನ್ನಾಗಿ ಗ್ರಹಿಸಿ ನಿಂತನು. ॥ ೪೯-೫೨ ॥ ಆಮೇಲೆ ಕಪಿವೀರನಾದ ಆ ನೀಲನು ಯುದ್ಧಾಪೇಕ್ಷಿಯಾಗಿ ಮುಸಲಾಯುಧವನ್ನು ಹಿಡಿದು ಯುದ್ಧ

ಪಾತಯತ್ ॥೫೩॥ ಸಾ ತೇನ ಕಪಿಮುಖ್ಯೇನ ವಿಮುಕ್ತಾ ಮಹತೀ ಶಿಲಾ । ಬಿಭೇದ ಬಹುಧಾ ಘೋರಾ ಪ್ರಹಸ್ತಸ್ಯ ಶಿರಸ್ತದಾ ॥ ೫೪ ॥ ಸ ಗತಾಸುರ್ಗತಶ್ರೀಕೋ ಗತಸತ್ತ್ವೋ ಗತೇಂದ್ರಿಯಃ । ಪಪಾತ ಸಹಸಾ ಭೂಮೌ ಛಿನ್ನಮೂಲ ಇವ ದ್ರುಮಃ ॥೫೫॥ ಪ್ರಭಿನ್ನಶಿರಸಸ್ತಸ್ಯ ಬಹುಸುಸ್ರಾವ ಶೋಣಿತಂ । ಶರೀರಾದಪಿ ಸುಸ್ರಾವ ಗಿರೇಃ ಪ್ರಸ್ರವಣಂ ಯಥಾ ॥ ೫೬ ॥ ಹತೇ ಪ್ರಹಸ್ತೇ ನೀಲೇನ ತದಕಂಪ್ಯಂ ಮಹದ್ಬಲಂ । ರಕ್ಷಸಾಮಪ್ರಹೃಷ್ಟಾನಾಂ ಲಂಕಾಮಭಿಜಗಾಮಹ ॥೫೭॥ ನಶೇಕುಸ್ಸಮರೇ ಸ್ಥಾತುಂ ನಿಹತೇ ವಾಹಿನೀಪತೌ । ಸೇತುಬಂಧಂ ಸಮಾಸಾದ್ಯ ವಿಕೀರ್ಣಂ ಸಲಿಲಂ ಯಥಾ

ಯಾಗಿ, ಮೃಧೇ - ಕಾಳಗದಲ್ಲಿ, ಶಿಲಾಂ - ಪಾಷಾಣವನ್ನು, ಅಪಾತಯತ್ - ಬೀಳಿಸಿದನು. ॥ ೫೩ ॥ ಕಪಿಮುಖ್ಯೇನ - ವಾನರೋತ್ತಮನಾದ, ತೇನ - ಆ ನೀಲನಿಂದ, ವಿಮುಕ್ತಾ - ಬಿಡಲ್ಪಟ್ಟ, ಮಹತೀ- ದೊಡ್ಡದಾದ, ಸಾಶಿಲಾ - ಆ ಕಲ್ಲು, ಘೋರಾ - ಭಯಂಕರವಾದದ್ದಾಗಿ, ತದಾ - ಆಗ, ಪ್ರಹಸ್ತಸ್ಯ- ಪ್ರಹಸ್ತನ, ಶಿರಃ - ಶಿರಸ್ಸನ್ನು, ಬಹುಧಾ - ಬಹು ಪ್ರಕಾರವಾಗಿ, ಬಿಭೇದ - ಭೇದಿಸಿತು. ॥೫೪॥ ಸಃ - ಅವನು, ಗತಾಸುಃ - ಹೋದ ಪ್ರಾಣಗಳುಳ್ಳವನಾಗಿ, ಗತಶ್ರೀಕಃ - ಗತವಾದ ತೇಜಸ್ಸುಳ್ಳವನಾಗಿ, ಗತಸತ್ತ್ವಃ - ಕುಗ್ಗಿದ ಬಲವುಳ್ಳವನಾಗಿ, ಗತೇಂದ್ರಿಯಃ - ದುರ್ಬಲವಾದ ಇಂದ್ರಿಯಗಳುಳ್ಳವನಾಗಿ, ಛಿನ್ನಮೂಲಃ - ಕತ್ತರಿಸಲ್ಪಟ್ಟ ಬುಡವುಳ್ಳ, ದ್ರುಮಇವ - ಮರದಂತೆ, ಸಹಸಾ - ಜಾಗ್ರತೆಯಾಗಿ, ಭೂಮೌ - ನೆಲದಲ್ಲಿ, ಪಪಾತ - ಬಿದ್ದನು. ॥ ೫೫ ॥ ತಸ್ಯ - ಆ ಪ್ರಹಸ್ತನ, ಪ್ರಭಿ....ಸಃ - ಭಿನ್ನವಾದ ಶಿರಸ್ಸಿನಿಂದ, ಬಹು - ವಿಶೇಷವಾಗಿ, ಶೋಣಿತಂ - ರಕ್ತವು, ಸುಸ್ರಾವ - ಸುರಿಯಿತು, ಶರೀರಾದಪಿ - ಶರೀರದಿಂದಲೂ ಕೂಡಾ, ಗಿರೇಃ - ಬೆಟ್ಟದಿಂದ, ಪ್ರಸ್ರವಣಂಯಥಾ - ಪ್ರವಾಹದಂತೆ, ಸುಸ್ರಾವ - ಸುರಿಯುತ್ತಿತ್ತು. ॥ ೫೬ ॥ ಪ್ರಹಸ್ತೇ - ಪ್ರಹಸ್ತನು, ನೀಲೇನ - ನೀಲನೆಂಬ ಸೇನಾನಾಯಕನಿಂದ, ಹತೇ - ಸಂಹೃತನಾಗಲು, ಅಕಂಪ್ಯಂ - ಕಂಪಿಸಲಸಾಧ್ಯವಾದ, ಅಪ್ರಹೃಷ್ಟಾನಾಂ - ಸಂತೋಷಶೂನ್ಯರಾದ, ರಕ್ಷಸಾಂ - ರಕ್ಕಸರ, ಮಹದ್ಬಲಂ - ದೊಡ್ಡದಾದ ಆ ಸೈನ್ಯವು, ಲಂಕಾಂ - ಲಂಕಾಪಟ್ಟಣವನ್ನು ಕುರಿತು, ಅಭಿಜಗಾಮಹ - ತೆರಳಿತು. ॥ ೫೭ ॥ ವಾಹಿನೀಪತೌ - ಸೇನಾನಾಯಕನು, ನಿಹತೇ - ಹತನಾಗಲು, ವಿಕೀರ್ಣಂ - ಭಗ್ನವಾದ, ಸೇತುಬಂಧಂ - ಸೇತುವಿನ ಕಟ್ಟಡವನ್ನು, ಸಮಾಸಾದ್ಯ - ಹೊಂದಿ, ಸಲಿಲಂಯಥಾ - ನೀರಿನಂತೆ, ಸಮರೇ - ಕಾಳಗದಲ್ಲಿ,

ಮಾಡುತ್ತಿರುವ ಆ ಪ್ರಹಸ್ತನ ಶಿರಸ್ಸನ್ನು ಆ ಶಿಲೆಯಿಂದ ಒಡೆದುಹಾಕಿದನು. ಹೀಗೆ ನೀಲನು ಪ್ರಯೋಗಿಸಿದ ಆ ಮಹಾ ಶಿಲೆಯು ಆ ರಾಕ್ಷಸನ ಶಿರಸ್ಸನ್ನು ಅನೇಕ ಹೋಳುಗಳನ್ನಾಗಿ ಮಾಡಿತು. ಆಗಲವನು ವಿಕಲವಾದ ಇಂದ್ರಿಯಗಳುಳ್ಳವನೂ, ಅಳಿದ ಪ್ರಾಣಗಳುಳ್ಳವನೂ, ನಿಸ್ತೇಜನೂ ಆಗಿ ಭೇದಿಸಲ್ಪಟ್ಟ ಮೂಲಸಹಿತವಾದ ವೃಕ್ಷದಂತೆ ನೆಲಕ್ಕುರುಳಿದನು. ಹೀಗೆ ಭೇದಿಸಿಹೋದ ಆ ಪ್ರಹಸ್ತನ ಶಿರಸ್ಸಿನಿಂದಲೂ, ಶರೀರದಿಂದಲೂ ಹೊರಟ ರಕ್ತ ಪ್ರವಾಹಗಳು ಪ್ರಸ್ರವಣಾಚಲದ ಜರಿಗಳನ್ನು ಹೋಲುತ್ತಿದ್ದುವು. ॥ ೫೩–೫೬ ॥ ಈ ರೀತಿ ರಾಕ್ಷಸಸೇನಾನಾಯಕನಾದ ಪ್ರಹಸ್ತನು ಕಪಿಸೇನಾನಾಯಕನಾದ ನೀಲನಿಂದ ಮೃತಿಯೊಂದಿದ ಕೂಡಲೇ ಆವರೆಗೂ ನಿಶ್ಚಲವಾಗಿದ್ದ ರಾಕ್ಷಸಸೇನೆಯೆಲ್ಲವೂ ಭಯಗ್ರಸ್ತವಾಗಿ ಲಂಕಾನಗರವನ್ನು ಕುರಿತೋಡಿತು. ಪ್ರಹಸ್ತಾಸುರನು ಮೃತಿಯೊಂದಿದೊಡನೆಯೇ ಕಟ್ಟೆಯೊಡೆದ ಕೆರೆಯ ನೀರಿನಂತೆ ಆ ರಾಕ್ಷಸಸೇನೆಯೆಲ್ಲವೂ ರಣರಂಗದಲ್ಲಿ ಒಂದು ಕ್ಷಣಮಾತ್ರವೂ

|| ೫೮ || ಹತೇ ತಸ್ಮಿಂಶ್ಚಮೂಮುಖ್ಯೇ ರಾಕ್ಷಸಾಸ್ತೇ ನಿರುದ್ಯಮಾಃ । ರಕ್ಷಃಪತಿಗೃಹಂ ಗತ್ವಾ ಧ್ಯಾನಮೂಕತ್ವಮಾಸ್ಥಿತಾಃ । ಪ್ರಾಪ್ತಾಃ ಶೋಕಾರ್ಣವಂ ತೀವ್ರಂ ನಿಸ್ಸಂಜ್ಞಾ ಇವ ತೇಽಭವನ್ ||೫೯-೬೦ ||

ತತಸ್ತು ನೀಲೋ ವಿಜಯೀ ಮಹಾಬಲಃ
ಪ್ರಶಸ್ಯಮಾನಸ್ಸ್ವಕೃತೇನ ಕರ್ಮಣಾ ।
ಸಮೇತ್ಯ ರಾಮೇಣ ಸಲಕ್ಷ್ಮಣೇನಚ
ಪ್ರಹೃಷ್ಟರೂಪಸ್ತು ಬಭೂವ ಯೂಥಪಃ || ೬೧ ||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಅಷ್ಟಪಂಚಾಶಸ್ಸರ್ಗಃ.



ಸ್ಥಾತುಂ - ನಿಲ್ಲುವುದಕ್ಕೆ, ನಶೇಕುಃ - ಸಮರ್ಥರಾಗಲಿಲ್ಲ. ||೫೮|| ಚಮೂಮುಖ್ಯೇ - ಸೇನಾನಾಯಕನಾದ, ತಸ್ಮಿನ್ - ಆ ಪ್ರಹಸ್ತನು, ಹತೇ - ಮಡಿಯಲು, ನಿರುದ್ಯಮಾಃ - ಉದ್ಯೋಗವಿಲ್ಲದ, ತೇರಾಕ್ಷಸಾಃ - ಆ ರಕ್ಕಸರು, ರಕ್ಷಃಪತಿಗೃಹಂ - ಲಂಕೆಯನ್ನು ಕುರಿತು, ಆಸ್ಥಿತಾಃ - ಹೊಂದಿ, ತೀವ್ರಂ - ವಿಶೇಷವಾದ, ಶೋಕಾರ್ಣವಂ - ವ್ಯಸನ ಸಮುದ್ರವನ್ನು, ಪ್ರಾಪ್ತಾಃ - ಹೊಂದಿ, ತೇ - ಆ ರಕ್ಕಸರು, ನಿಸ್ಸಂಜ್ಞಾ ಇವ - ಪ್ರಜ್ಞೆಯಿಲ್ಲದವರಂತೆ, ಅಭವನ್ - ಆದರು. || ೫೯-೬೦ || ತತಸ್ತು - ಬಳಿಕಾದರೆ, ಯೂಥಪಃ - ಯೂಥಪತಿಯಾದ, ಮಹಾಬಲಃ - ಬಹು ಬಲಾಢ್ಯನಾದ, ನೀಲಃ - ನೀಲನು, ವಿಜಯೀ - ಜಯಶೀಲನಾದ ಕಾರಣ, ಸ್ವಕೃತೇನ - ತನ್ನಿಂದ ಮಾಡಲ್ಪಟ್ಟ, ಕರ್ಮಣಾ - ಶತ್ರುಸಂಹಾರರೂಪ ವ್ಯಾಪಾರದಿಂದ, ಪ್ರಶಸ್ಯಮಾನಃ - ಶ್ಲಾಘಿಸಲ್ಪಟ್ಟವನಾಗಿ, ಸಲಕ್ಷ್ಮಣೇನ - ಲಕ್ಷ್ಮಣನೊಡಗೂಡಿದ, ರಾಮೇಣ - ಶ್ರೀರಾಮನೊಡನೆ, ಸಮೇತ್ಯ - ಸೇರಿ, ಪ್ರಹೃಷ್ಟರೂಪಃ - ಬಹಳ ಸಂತೋಷಗೊಂಡವನು, ಬಭೂವ - ಆದನು. || ೬೧ ||

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಅಷ್ಟಪಂಚಾಶಸ್ಸರ್ಗಃ.



ನಿಲ್ಲದೆ ಪಲಾಯನವಾಯಿತು. ರಾಕ್ಷಸರೆಲ್ಲರೂ ತಮ್ಮ ಸೇನಾಪತಿಯು ಮೃತಿಯೊಂದಿದ ಮೇಲೆ ಯುದ್ಧಮಾಡಬೇಕೆಂಬ ಕುತೂಹಲವೇ ಇಲ್ಲದವರಾಗಿ ಲಂಕಾನಗರವನ್ನು ಸೇರಿ ಮೂಕರಂತಾಗಿಬಿಟ್ಟರು. ಅವರೆಲ್ಲರೂ ಅತ್ಯಧಿಕವಾದ ಶೋಕಸಮುದ್ರದಲ್ಲಿ ಮುಳುಗಿ ಏನುಮಾಡಲೂ ತೋರದೆ ದಿಗ್ಭ್ರಾಂತರಾಗಿ ಹೋದರು. ಇತ್ತ ಮಹಾಬಲನೂ, ಜಯವನ್ನು ಪಡೆದವನೂ, ತಾನು ಮಾಡಿದ ಯುದ್ಧವನ್ನು ನೋಡಿದವರಿಂದ ಸಂಸ್ತುತನಾದವನೂ ಆದ ನೀಲನೆಂಬ ವಾನರಯೂಥನಾಥನು ಶ್ರೀರಾಮಲಕ್ಷ್ಮಣರೊಡಗೂಡಿ ಮಹಾನಂದಭರಿತನಾದನು. || ೫೭-೬೧ ||

ಇಂತಿದು ನೀಲಕೃತ ಪ್ರಹಸ್ತಹನನ ವೃತ್ತಾಂತವೆಂಬ ಐವತ್ತೆಂಟನೆಯ
ಸರ್ಗವು ಸಮಾಪ್ತವಾದುದು.



# ಯುದ್ಧಕಾಂಡೇ ಏಕೋನಷಷ್ಟಿತಮಸ್ಸರ್ಗಃ

ತಸ್ಮಿನ್ ಹತೇ ರಾಕ್ಷಸಸೈನ್ಯಪಾಲೇ ಪ್ಲವಂಗಮಾನಾಮೃಷಭೇಣ ಯುದ್ಧೇ । ಭೀಮಾಯುಧಂ ಸಾಗರತುಲ್ಯವೇಗಂ ವಿದುದ್ರುವೇ ರಾಕ್ಷಸರಾಜಸೈನ್ಯಂ ॥೧॥ ಗತ್ವಾಽಥ ರಕ್ಷೋಧಿಪತೇಃ ಶಶಂಸುಸ್ಸೇನಾಪತಿಂ ಪಾವಕಸೂನುಶಸ್ತಂ । ತಚ್ಚಾಪಿ ತೇಷಾಂ ವಚನಂ ನಿಶಮ್ಯ ರಕ್ಷೋಧಿಪಃ ಕ್ರೋಧವಶಂ ಜಗಾಮ ॥ ೨ ॥ ಸಂಖ್ಯೇ ಪ್ರಹಸ್ತಂ ನಿಹತಂ ನಿಶಮ್ಯ ಶೋಕಾರ್ದಿತಃ ಕ್ರೋಧಪರೀತಚೇತಾಃ । ಉವಾಚ ತಾನ್ನೈರ್ಋತ ಯೋಧಮುಖ್ಯಾನಿಂದ್ರೋ ಯಥಾ ಚಾಮರಯೋಧಮುಖ್ಯಾನ್ ॥೩॥ " ನಾವಜ್ಞಾ

ಯುದ್ಧೇ - ಕಾಳಗದಲ್ಲಿ, ಪ್ಲವಂಗಮಾನಾಂ - ವಾನರರಲ್ಲಿ, ಋಷಭೇಣ - ಶ್ರೇಷ್ಠನಾದ ನೀಲನಿಂದ, ರಾಕ್ಷ....ಲೇ - ರಾಕ್ಷಸಸೇನಾನಾಯಕನಾದ, ತಸ್ಮಿನ್ - ಆ ಪ್ರಹಸ್ತನು, ಹತೇ - ಮಡಿಯಲು, ಭೀಮಾಯುಧಂ - ಭಯಂಕರವಾದ ಆಯುಧಗಳುಳ್ಳ, ಸಾಗ.....ಗಂ - ಕಡಲಿಗೆ ಸಮಾನ ವಾದ ವೇಗವುಳ್ಳ, ರಾಕ್ಷ....ನ್ಯಂ - ರಾವಣನ ಸೈನ್ಯವು, ವಿದುದ್ರುವೇ - ಓಡಿಹೋಯಿತು. ॥ ೧ ॥ ಗತ್ವಾ - ಹೋಗಿ, ಅಥ - ಅನಂತರದಲ್ಲಿ, ರಕ್ಷೋಧಿಪತೇಃ - ರಾವಣನಿಗೆ, ಸೇನಾಪತಿಂ - ಸೈನ್ಯಾಧಿ ಪತಿಯಾದ ಪ್ರಹಸ್ತನನ್ನು, ಪಾವ....ಸ್ತಂ - ಅಗ್ನಿಪುತ್ರನಾದ ನೀಲನಿಂದ ಹೊಡೆಯಲ್ಪಟ್ಟವನನ್ನಾಗಿ, ಶಶಂಸುಃ - ಹೇಳಿದರು, ತೇಷಾಂ - ಅವರ, ತದ್ವಚನಂಚಾಪಿ - ಆ ಮಾತನ್ನೂ ಕೂಡ, ನಿಶಮ್ಯ - ಕೇಳಿ, ರಕ್ಷೋಧಿಪಃ - ರಾವಣನು, ಕ್ರೋಧವಶಂ - ಕೋಪಾಧೀನವನ್ನು, ಜಗಾಮ - ಹೊಂದಿದನು. ॥ ೨ ॥ ಸಂಖ್ಯೇ - ಕಾಳಗದಲ್ಲಿ, ಪ್ರಹಸ್ತಂ - ಪ್ರಹಸ್ತನನ್ನು, ನಿಹತಂ - ಹೊಡೆಯಲ್ಪಟ್ಟವನನ್ನಾಗಿ, ನಿಶಮ್ಯ - ಕೇಳಿ, ಶೋಕಾರ್ದಿತಃ - ಶೋಕಾಕ್ರಾಂತನಾಗಿ, ಕ್ರೋ....ತಾಃ - ರೋಷವ್ಯಾಪ್ತವಾದ ಮನಸ್ಸುಳ್ಳವನಾಗಿ, ಇಂದ್ರಃ - ಇಂದ್ರನು, ಅಮ....ಖ್ಯಾನ್ - ದೇವಭಟರಲ್ಲಿ ಮುಖ್ಯರನ್ನಂತೆ, ನೈಋ....ಖ್ಯಾನ್ - ರಾಕ್ಷಸ ಭಟರಲ್ಲಿ ಮುಖ್ಯರಾದ, ತಾನ್ - ಅವನನ್ನು ಕುರಿತು, ಉವಾಚ - ಹೇಳಿ ದನು. ॥೩॥ ಇಂದ್ರ....ನಃ - ಇಂದ್ರನ ಸಾಮರ್ಥ್ಯವನ್ನು ಹೊಡೆಯುತ್ತಿರುವ, ಮೇ - ನನ್ನ, ಸೈನ್ಯ

ಆ ಯುದ್ಧದಲ್ಲಿ ವಾನರೋತ್ತಮನಾದ ನೀಲನಿಂದ ಸೇನಾಪತಿಯಾದ ಪ್ರಹಸ್ತನು ಮೃತನಾದ ತರುವಾಯ ಭಯಂಕರವಾದ ಆಯುಧಗಳುಳ್ಳದೂ, ಸಮುದ್ರದ ವೇಗವನ್ನು ಹೋಲುತ್ತಿದುವುದೂ ಆದ ರಾಕ್ಷಸಸೇನೆಯೆಲ್ಲವೂ ಪಲಾಯನವಾಗಿ ಹೋಯಿತು. ಹಾಗೆ ಆ ಮಹಾ ರಾಕ್ಷಸಸೇನೆಯೆಲ್ಲವೂ ಓಡಿಹೋದ ಬಳಿಕ ಆ ಸೇನೆಯವರು, ಪ್ರಹಸ್ತನು ನೀಲ ನೆಂಬ ಕಪಿನಾಯಕನಿಂದ ಸಂಹೃತನಾದನೆಂಬ ವಾರ್ತೆಯನ್ನು ರಾವಣಾಸುರನಿಗೆ ತಿಳಿಸಿ ದರು. ಆಗ ರಾವಣಾಸುರನು ಈ ವರ್ತಮಾನವನ್ನು ಕೇಳಿದೊಡನೆಯೆ ಕೋಪದಿಂದ ಕಿಡಿಕಿಡಿಯಾಗಿ ಹೋದನು. ತನ್ನ ಸೇನಾಧಿಪತಿಯಾದ ಪ್ರಹಸ್ತನು ಮೃತಿಯೊಂದಿದ ವೃತ್ತಾಂತವು ಅವನನ್ನು ಸ್ವಲ್ಪಹೊತ್ತು ದುಃಖಕ್ಕೀಡುಮಾಡಿತು. ಆಮೇಲೆ ಅವನಿಗೆ ಮಿತಿಮೀರಿದ ಕ್ರೋಧಾವೇಶವೇ ಬಂದಿತು. ಕೂಡಲೇ ಅವನು, ದೇವೇಂದ್ರನು ದೇವತೆ ಗಳಿಗೆಂತೋ ಅಂತು ತನ್ನ ಬಳಿಯಲ್ಲಿದ್ದ ರಾಕ್ಷಸವೀರರನ್ನು ಕುರಿತು, "ಎಲೈ ರಾಕ್ಷಸ

ರಿಪವೇ ಕಾರ್ಯಾ ಯ್ಶೈರಿಂದ್ರಬಲಸೂದನಃ । ಸೂದಿತಸ್ಸೈನ್ಯಪಾಲೋ ಮೇ ಸಾನು ಯಾತ್ರಸ್ಸಕುಂಜರಃ॥೪॥ ಸೋಽಹಂ ರಿಪುವಿನಾಶಾಯ ವಿಜಯಾಯಾವಿಚಾರಯ್ಯ । ಸ್ವಯಮೇವ ಗಮಿಷ್ಯಾಮಿ ರಣಶೀರ್ಷಂ ತದದ್ಭುತಂ ॥ ೫ ॥ ಅದ್ಯ ತದ್ವಾನರಾನೀಕಂ ರಾಮಂಚ ಸಹಲಕ್ಷ್ಮಣಂ । ನಿರ್ದಹಿಷ್ಯಾಮಿ ಬಾಣೌಘೈರ್ವನಂ ದೀಪ್ತೈರಿವಾಗ್ನಿಭಿಃ (ಅದ್ಯ ಸಂತರ್ಪಯಿಷ್ಯಾಮಿ ಪೃಥಿವೀಂ ಕಪಿಶೋಣಿತೈಃ)" ॥ ೬ ॥ ಸ ಏವಮುಕ್ತ್ವಾ ಜ್ವಲನಪ್ರಕಾಶಂ ರಥಂ ತುರಂಗೋತ್ತಮರಾಜಯುಕ್ತಂ । ಪ್ರಕಾಶಮಾನಂ ವಪುಷಾ ಜ್ವಲಂತಂ ಸಮಾರುರೋಹಾಽಮರರಾಜಶತ್ರುಃ ॥ ೭ ॥ ಸಶಂಖಭೇರೀ ಪಣವ ಪ್ರಣಾದೈರಾಸ್ಫೋಟಿತ ಕ್ಷ್ವೇಳಿತಸಿಂಹನಾದೈಃ । ಪುಣ್ಯೈಸ್ಸ್ತವೈಶ್ಚಾಪ್ಯಭಿಪೂಜ್ಯಮಾನ

ಪಾಲಃ - ಸೇನಾಧಿಪತಿಯು, ಸಾನುಯಾತ್ರಃ - ಹಿಂದೆ ಬಂದವರೊಡಗೂಡಿ, ಸಕುಂಜರಂ - ಆನೆಗಳಿಂದೊಡಗೂಡಿದವನಾಗಿ, ಯ್ಶೈಃ - ಯಾವ ವಾನರರಿಂದ, ಸೂದಿತಃ - ಸಂಹಾರ ಮಾಡಲ್ಪಟ್ಟನೋ, ತಸ್ಮೈರಿಪವೇ - ಅಂಥಾ ಶತ್ರುವಿಗಾಗಿ, ಅವಜ್ಞಾ - ಉಪೇಕ್ಷೆಯು, ನಕಾರ್ಯಾ - ಮಾಡತಕ್ಕದಲ್ಲ. ॥೪॥ ಸೋಽಹಂ ಆ ಈ ನಾನು, ರಿಪುವಿನಾಶಾಯ - ಶತ್ರುವಿನಾಶಕ್ಕಾಗಿ, ವಿಜಯಾಯಚ - ವಿಜಯಕ್ಕಾಗಿಯೂ, ಅವಿಚಾರಯ್ಯ - ವಿಚಾರ ಮಾಡದೆಯೆ, ಸ್ವಯಮೇವ - ನಾನೇ, ಅದ್ಭುತಂ - ಆಶ್ಚರ್ಯಕರವಾದ, ತದ್ರಣಶೀರ್ಷಂ - ಆ ಯುದ್ಧಭೂಮಿಯನ್ನು ಕುರಿತು, ಗಮಿಷ್ಯಾಮಿ - ಹೋಗುವೆನು. ॥ ೫ ॥ ಅದ್ಯ - ಈಗ, ತದ್ವಾನರಾನೀಕಂ - ಆ ಕಪಿಸೈನ್ಯವನ್ನು, ಸಹಲಕ್ಷ್ಮಣಂ - ಲಕ್ಷ್ಮಣನಿಂದೊಡಗೂಡಿದ, ರಾಮಂಚ - ರಾಮನನ್ನೂ, ದೀಪ್ತೈಃ - ಪ್ರಜ್ವಲಿಸುತ್ತಿರುವ, ಅಗ್ನಿಭಿಃ - ಅಗ್ನಿಗಳಿಂದ, ವನಮಿವ - ವನವನ್ನಂತೆ, ಬಾಣೌಘೈಃ - ಬಾಣಜಾಲಗಳಿಂದ, ನಿರ್ದಹಿಷ್ಯಾಮಿ - ದಹಿಸುವೆನು. ॥ ೬ ॥ ಅಮ....ತ್ರುಃ - ದೇವೇಂದ್ರನಿಗೆ ಶತ್ರುವಾದ, ಸಃ - ಆ ರಾವಣನು, ಏವಂ - ಈ ಪರಿ, ಉಕ್ತ್ವಾ - ಹೇಳಿ, ಜ್ವಲನಪ್ರಕಾಶಂ - ಅಗ್ನಿಯಂತೆ ಪ್ರಕಾಶಮಾನವಾದ, ತುರಂ....ಕ್ತಂ - ಉತ್ತಮವಾದ ರಾಜಾರ್ಹವಾದ ಅಶ್ವಗಳಿಂದ ಅಶ್ವಗಳಿಂದ ಕೂಡಿರುವ, ವಪುಷಾ - ಆಕಾರದಿಂದ, ಪ್ರಕಾಶಮಾನಂ - ಹೊಳೆಯುತ್ತಿರುವ, ಜ್ವಲಂತಂ - ಥಳಥಳಿಸುತ್ತಿರುವ, ರಥಂ - ತೇರನ್ನು, ಸಮಾರುರೋಹ - ಏರಿದನು. ॥೭॥ ತದಾ - ಆಗ, ರಾಕ್ಷ....ಖ್ಯಃ - ರಾಕ್ಷಸರಾಜರಲ್ಲಿ ಮುಖ್ಯನಾದ, ಸಃ - ಆ ರಾವಣನು, ಶಂಖ....ದೈಃ - ಶಂಖ, ಭೇರೀ, ಪಣವ ಎಂಬಿವುಗಳ ಶಬ್ದದಿಂದಲೂ, ಆಸ್ಫೋ....ದೈಃ-ಭುಜಾಸ್ಫಾಲನ

ಶ್ರೇಷ್ಠರೇ? ನನ್ನ ಸೇನಾಪತಿಯಾದ ಪ್ರಹಸ್ತನು ಚತುರಂಗಬಲದೊಡನೆ ಯುದ್ಧಕ್ಕೆ ಹೊರಟೂ ಆ ರಾಮನ ಸೇನೆಯಿಂದ ಮಡಿದನಲ್ಲವೆ. ಆದುದರಿಂದ ಶತ್ರುವಾದ ಆ ರಾಮನು ಬಹಳ ಪ್ರಬಲನೆಂದೇ ಆಯಿತು. ಅವನನ್ನುಪೇಕ್ಷಿಸುವುದು ಯೋಗ್ಯವಲ್ಲವು. ಆದುದರಿಂದ ನಾನು ಯಾವ ವಿಚಾರವೂ ಇಲ್ಲದೆ ಶತ್ರುವನ್ನು ಜಯಿಸುವುದಕ್ಕಾಗಿ ಸರ್ವಪ್ರಯತ್ನವನ್ನೂ ಮಾಡುವೆನು. ಎಲೈ ರಾಕ್ಷಸವೀರರೇ! ಇದೋ ನಾನೇ ಯುದ್ಧಕ್ಕೆ ಹೊರಡುವೆನು. ಇದೀಗ ಅಗ್ನಿಯಂತೆ ಪ್ರಜ್ವಲಿಸುತ್ತಿರುವ ನನ್ನ ಬಾಣಜಾಲಗಳಿಂದ ಆ ರಾಮಲಕ್ಷ್ಮಣರೊಡಗೂಡಿದ ವಾನರಸೇನೆಯೆಲ್ಲವನ್ನೂ ನಾಶಗೊಳಿಸುವೆನು" ಎಂದು ಹೇಳಿದನು. ॥ ೧–೬ ॥ ಆಮೇಲೆ ಆ ರಾವಣಾಸುರನು ಜ್ವಲದಗ್ನಿಗೆ ಸಮಾನವಾದುದೂ, ಉತ್ತಮಾಶ್ವಗಳು ಹೂಡಿರುವುದೂ, ಬಹು ಶೋಭನಾಕಾರವಾಗಿರುವುದೂ ಆದ ರಥವನ್ನೇರಿದನು. ಹೀಗೆ ಮಹೇಂದ್ರಶತ್ರುವಾದ ಆ ರಾವಣಾಸುರನು ರಥವನ್ನೇರಿ ಶಂಖಗಳ, ರಣಭೇರಿಗಳ ಧ್ವನಿಗಳೊಡನೆಯೂ, ಸಿಂಹನಾದಗ

ಸ್ತದಾ ಯಯೌ ರಾಕ್ಷಸರಾಜಮುಖ್ಯಃ ॥೮॥ ಸಶ್ಶೈಲಜೀಮೂತನಿಕಾಶರೂಪೈ ರ್ಮಾಂಸಾದನೈಃ ಪಾವಕದೀಪ್ತನೇತ್ರೈಃ । ಬಭೌ ವೃತೋ ರಾಕ್ಷಸರಾಜಮುಖ್ಯೋ ಭೂತೈರ್ವೃತೋ †ರುದ್ರ ಇವಾಽಸುರೇಶಃ ॥೯॥ ತತೋ ನಗರ್ಯಾಸ್ಸಹಸಾ ಮಹೌಜಾ ನಿಷ್ಕ್ರಮ್ಯ ತದ್ವಾನರಸೈನ್ಯಮುಗ್ರಂ । ಮಹಾರ್ಣವಾಭ್ರಸ್ತನಿತಂ ದದರ್ಶ ಸಮುದ್ಯತಂ

ಗಳಿಂದಲೂ ತನ್ನ ಶೌರ್ಯವನ್ನು ಹೊಗಳುತ್ತಿರುವವರ ಸಿಂಹನಾದಗಳಿಂದಲೂ, ಪುಣ್ಯೈಃ - ಪುಣ್ಯಕರವಾದ, ಸ್ತವೈಃ - ಸ್ತೋತ್ರಗಳಿಂದಲೂ, ಅಭಿಪೂಜ್ಯಮಾನಃ - ಶ್ಲಾಘಿಸಲ್ಪಡುತ್ತ, ಯಯೌ - ಹೊರಟನು. ॥೮॥ ರಾಕ್ಷ....ಖ್ಯಃ - ರಾಕ್ಷಸರಾಜರಲ್ಲಿ ಮುಖ್ಯನಾದ, ಅಸುರೇಶಃ - ದೈತ್ಯಭೇದಗಳಿಗೂ ಸಹಾ ಅಧಿಪತಿಯಾದ, ಸಃ - ಆ ರಾವಣನು, ಶೈಲ....ಪೈಃ - ಪರ್ವತಗಳಿಗೂ, ಮೇಘಗಳಿಗೂ ಸಮಾನವಾದ ಆಕಾರಗಳುಳ್ಳ, ಮಾಂಸಾದನೈಃ - ಮಾಂಸಾಹಾರಿಗಳಾದ, ಪಾವ....ತ್ರೈಃ - ಅಗ್ನಿಯಂತೆ ಹೊಳೆವ ನೇತ್ರಗಳುಳ್ಳ, ಭೂತೈಃ - ಪ್ರಾಣಿಗಳಿಂದ, ವೃತಃ - ಸುತ್ತಿಕೊಳ್ಳಲ್ಪಟ್ಟವನಾಗಿ, ಭೂತೈಃ - ಭೂತಗಳಿಂದ, ವೃತಃ - ಸುತ್ತುವರೆಯಲ್ಪಟ್ಟ, ರುದ್ರ ಇವ - ರುದ್ರನಂತೆ, ಬಭೌ - ಹೊಳೆಯುತ್ತಿದ್ದನು. ತತಃ - ಬಳಿಕ, ಮಹೌಜಾಃ - ಮಹಾ ತೇಜೋವಂತನಾದ ರಾವಣನು, ಸಹಸಾ - ಜಾಗ್ರತೆಯಾಗಿ, ನಗರ್ಯಾಃ - ಪಟ್ಟಣದಿಂದ, ನಿಷ್ಕ್ರಮ್ಯ - ಹೊರಟು, ಮಹಾ....ತಂ - ಮಹಾ ಸಮುದ್ರದ ಮೇಘಗಳಿಗೆ ಸಮಾನವಾದ ಗರ್ಜನೆಯುಳ್ಳ, ಉಗ್ರಂ - ಭಯಂಕರವಾದ, ಸಮುದ್ಯತಂ - ಯುದ್ಧದಲ್ಲಿ ಆಸಕ್ತವಾದ, ಪಾದ....ಸ್ತಂ - ಗಿಡಗಳೂ ಬೆಟ್ಟಗಳೂ ಹಸ್ತಗಳಲ್ಲುಳ್ಳ, ಉಗ್ರಂ - ಭಯಂಕರವಾದ, ತದ್ವಾನರಸೈನ್ಯಂ - ಆ ಕಪಿಸೈನ್ಯವನ್ನು, ದದರ್ಶ - ಕಂಡನು. ॥೯ ೧೦॥ ಭುಜ....ಹಃ - ಆದಿಶೇಷ

ಳೊಡನೆಯೂ, ವಂದಿಮಾಗಧರ ಜಯಜಯಕಾರಗಳೊಡನೆಯೂ ಯುದ್ಧಕ್ಕಾಗಿ ಹೊರಟನು. ಆ ಸಮಯದಲ್ಲಿ ರಾಕ್ಷಸರಾಜೋತ್ತಮನಾದ ಆ ರಾವಣಾಸುರನು ಪರ್ವತಗಳಿಗೂ, ಮೇಘಗಳಿಗೂ ಸಮಾನರಾದವರೂ, ಅಗ್ನಿಹೋತ್ರನಂತೆ ಪ್ರಜ್ವಲಿಸುತ್ತಿರುವ ನೇತ್ರಗಳುಳ್ಳವರೂ, ಮಾಂಸಾಶನರಾದವರೂ ಆದ ರಾಕ್ಷಸಯೋಧರೊಡಗೂಡಿದವನಾಗಿ ಭೂತಗಣಗಳೊಡಗೂಡಿದ ರುದ್ರನಂತೆ ಬಹು ಭಯಂಕರವಾಗಿ ಮೆರೆಯುತ್ತ ಹೊರಟನು. ಆ ಸಮಯದಲ್ಲಿ ಮಹಾ ತೇಜಸ್ವಿಯಾದ ರಾವಣಾಸುರನು ಹೊರಹೊರಟು ಮಹಾ ಸಮುದ್ರದ ಮತ್ತು ಮಹಾ ಮೇಘಗಳ ಧ್ವನಿಯನ್ನನುಕರಿಸುತ್ತಿರುವುದೂ, ಯುದ್ಧಸನ್ನದ್ಧವಾಗಿ ವೃಕ್ಷಗಳನ್ನೂ ಪರ್ವತಗಳನ್ನೂ ಆಯುಧಗಳನ್ನಾಗಿ ಧರಿಸಿರುವುದೂ, ಬಹು ಭಯಂಕರವಾಗಿರುವುದೂ ಆದ ವಾನರಸೈನ್ಯವನ್ನು ಕಂಡವನಾದನು. ಹೀಗೆ ಹೊರಟುಬರುತ್ತಿರುವ ಮಹಾ ಭಯಂಕರವಾದ ಆ ರಾಕ್ಷಸ

† ಇಲ್ಲಿ "ರುದ್ರ" ಎಂದರೆ ಅಸುರೇಶ್ವರನೆಂದರ್ಥವು ; ತಾಮಸಪ್ರಕೃತಿಯುಳ್ಳವನಾದುದರಿಂದ. ಮೈತ್ರಾಯಣೀಯೋಪನಿಷತ್ತಿನಲ್ಲಿ "ರುದ್ರ" ಶಬ್ದಕ್ಕೆ ಈ ರೀತಿ ಉಪಲಕ್ಷಕ ವಾಕ್ಯವಿರುತ್ತದೆ:—"ಯೋಹವಾ ಅಸ್ಯ ತಾಮಸೋಂಽಶಸ್ಸೋಽಸೌ ರುದ್ರಃ" ಎಂದು. ಅಸುರಾಧಿಪನಾದ ಕಾರಣ ರಾವಣನಿಗೆ ಈ ರುದ್ರೋಪಮಾನವು ಕೊಟ್ಟಿರುತ್ತದೆಯೆಂದರಿಯಬೇಕು. (ಗೋವಿಂದರಾಜರು.)

ಆದರೆ ಇಲ್ಲಿಯ "ರುದ್ರ" ಶಬ್ದವು ಪ್ರಳಯರುದ್ರಪರವಾದುದೆಂದು ಕೆಲವರು ಹೇಳುತ್ತಾರೆ. ಅದು ಮಹೇಶ್ವರ ಪರವಾದುದಲ್ಲವೆಂದೂ ಹಾಗೆ ಅರ್ಥ ಮಾಡಕೂಡದೆಂದೂ ಅವರ ಮತವು. ಹಾಗಾದರೆ "ಭೂತೈರ್ವೃತಃ" ಎಂಬ ವಿಶೇಷಣಕ್ಕೆ ಸಾರ್ಥಕ್ಯವೆಲ್ಲಿಯದು ? ಎಂಬ ಸಂಶಯವು ಬಂದೀತು. ಅದಕ್ಕಿಷ್ಟೆ ಸಮಾಧಾನ:—ಪ್ರಳಯರುದ್ರನಿಗೆ ಭೂತಾನುವೃತ್ತಿತ್ವವು ಪುರಾಣಗಳಲ್ಲಿ ಪ್ರಸಿದ್ಧವಾಗಿಯೇ ಇರುವುದು. (ಶ್ರೀ)

ಪಾದಪಶೈಲಹಸ್ತಂ ||೧೦|| ತದ್ರಾಕ್ಷಸಾನೀಕಮತಿಪ್ರಚಂಡಮಾಲೋಕ್ಯ ರಾಮೋ ಭುಜಗೇಂದ್ರಬಾಹುಃ । ವಿಭೀಷಣಂ ಶಸ್ತ್ರಭೃತಾಂ ವರಿಷ್ಠಮುವಾಚ ಸೇನಾನುಗತಃ ಪೃಥುಶ್ರೀಃ ||೧೧|| "ನಾನಾಪತಾಕಾಧ್ವಜಶಸ್ತ್ರಜುಷ್ಟಂ ಪ್ರಾಸಾಸಿ ಶೂಲಾಯುಧಶಸ್ತ್ರಜುಷ್ಟಂ । ಸೈನ್ಯಂ ಗಜೇಂದ್ರೋಪಮನಾಗಜುಷ್ಟಂ ಕಸ್ಯೇದಮಕ್ಷೋಭ್ಯಮಭೀರುಜುಷ್ಟಂ ||೧೨|| ತತಸ್ತು ರಾಮಸ್ಯ ನಿಶಮ್ಯ ವಾಕ್ಯಂ ವಿಭೀಷಣಃ ಶಕ್ರಸಮಾನವೀರ್ಯಃ । ಶಶಂಸ ರಾಮಸ್ಯ ಬಲಪ್ರವೇಕಂ ಮಹಾತ್ಮನಾಂ ರಾಕ್ಷಸಪುಂಗವಾನಾಂ ||೧೩|| "ಯೋಽಸೌ ಗಜಸ್ಕಂಧಗತೋ ಮಹಾತ್ಮಾ ನವೋದಿತಾರ್ಕೋಪಮತಾಮ್ರ

ನಂತೆ ದೀರ್ಘವಾದ ಭುಜಗಳುಳ್ಳ, ಸೇನಾನುಗತಃ - ಕಪಿಸೈನ್ಯದಿಂದನುಸರಿಸಲ್ಪಟ್ಟ, ಪೃಥುಶ್ರೀಃ - ಯುದ್ಧೋತ್ಸಾಹದಿಂದ ಪ್ರವೃದ್ಧಮಾನವಾದ ಮುಖಪ್ರಕಾಶವುಳ್ಳ, ರಾಮಃ - ಶ್ರೀರಾಮನು, ಅತಿಪ್ರಚಂಡಂ - ಅತಿ ಕ್ರೂರವಾದ, ತದ್ರಾಕ್ಷಸಾನೀಕಂ - ಆ ರಾಕ್ಷಸಸೈನ್ಯವನ್ನು, ಆಲೋಕ್ಯ - ಕಂಡು, ಶಸ್ತ್ರಭೃತಾಂ - ಶಸ್ತ್ರಧಾರಿಗಳಲ್ಲಿ, ವರಿಷ್ಠಂ - ಶ್ರೇಷ್ಠನಾದ, ವಿಭೀಷಣಂ - ವಿಭೀಷಣನನ್ನು ಕುರಿತು, ಉವಾಚ - ಹೇಳಿದನು. ||೧೧|| ನಾನಾ....ಷ್ಟಂ - ಅನೇಕ ಬಣ್ಣಗಳುಳ್ಳ ಧ್ವಜಪಟಗಳಿಂದಲೂ, ನಿಶಾನಿಗಳಿಂದಲೂ, ಶಸ್ತ್ರಗಳಿಂದಲೂ ಕೂಡಿರುವ, ಪ್ರಾಸಾ....ಷ್ಟಂ - ಈಟಿಗೋಲುಗಳಿಂದಲೂ, ಕತ್ತಿಗಳಿಂದಲೂ, ಶೂಲಗಳಿಂದಲೂ, ಇತರ ಆಯುಧಗಳಿಂದಲೂ ವ್ಯಾಪ್ತವಾದ, ಅಕ್ಷೋಭ್ಯಂ - ಕ್ಷೋಭಿಸಲಸಾಧ್ಯವಾದ, ಅಭೀರುಜುಷ್ಟಂ - ಧೀರರಿಂದ ತುಂಬಿರುವ, ಇದಂಸೈನ್ಯಂ - ಈ ಸೈನ್ಯವು, ಕಸ್ಯ - ಯಾರದು, ಇತಿ- ಇಂತೆಂದು, ಉವಾಚ- ಹೇಳಿದನು. ||೧೨|| ತತಸ್ತು - ಬಳಿಕಾದರೆ, ಶಕ್ರ....ರ್ಯಃ- ಇಂದ್ರಸದೃಶವಾದ ಪರಾಕ್ರಮವುಳ್ಳ, ವಿಭೀಷಣಸ್ತು - ವಿಭೀಷಣನಾದರೆ, ರಾಮಸ್ಯ - ಶ್ರೀರಾಮನ, ವಾಕ್ಯಂ - ಮಾತನ್ನು, ನಿಶಮ್ಯ - ಕೇಳಿ, ರಾಮಸ್ಯ - ಶ್ರೀರಾಮನಿಗೆ, ಮಹಾತ್ಮನಾಂ - ಮಹಾಧೈರ್ಯವಂತನಾದ, ರಾಕ್ಷ....ನಾಂ - ರಾಕ್ಷಸಶ್ರೇಷ್ಠರ, ಬಲಪ್ರವೇಕಂ - ಉತ್ತಮವಾದ ಸೈನ್ಯವನ್ನು, ಶಶಂಸ - ಹೇಳಿದನು. ||೧೩|| ಹೇ ರಾಜನ್ - ಎಲೈ ಅರಸೇ, ಮಹಾತ್ಮಾ - ಮಹಾ ಶರೀರವುಳ್ಳ, ನವೋ....ತ್ರಃ - ಬಾಲಸೂರ್ಯನಿಗೆ ಸಮಾನವಾದ ಕೆಮ್ಮೊಗವುಳ್ಳ, ಗಜ....ತಃ - ಆನೆಯ ಶಿರಸ್ಸಿನಲ್ಲಿ ಕುಳಿತ, ಯೋಽಸೌ - ಯಾವ ಈ ಪುರುಷನು, ನಾಗಶಿರಃ - ಆನೆಯ ಶಿರಸ್ಸನ್ನು, ಪ್ರಕಂಪಯನ್ -

ಸೈನ್ಯವನ್ನು ನೋಡಿ ಆದಿಶೇಷನಂತೆ ದೀರ್ಘಬಾಹುವಾದ ಶ್ರೀರಾಮನು ವಾನರಸೈನ್ಯದೊಡನೆಯೂ, ಮನೋಹರವಾದ ಜಯಲಕ್ಷ್ಮಿಯೊಡನೆಯೂ ಕೂಡಿದವನಾಗಿ ಅಸ್ತ್ರಗಳನ್ನು ಧರಿಸಿರುವವರಲ್ಲಿ ಸರ್ವೋತ್ತಮನಾದ ವಿಭೀಷಣನನ್ನು ಕುರಿತು, "ಅಯ್ಯಾ ರಾಕ್ಷಸರಾಜೋತ್ತಮನೇ! ವಿಭೀಷಣಾ! ನಮಗೆದುರಾಗಿ ಬರುತ್ತಿರುವುದೂ, ನಾನಾವಿಧಗಳಾದ ಪತಾಕೆಗಳಿಂದಲೂ, ಧ್ವಜಗಳಿಂದಲೂ ಕೂಡಿರುವುದೂ, ಪ್ರಾಸ, ಖಡ್ಗ, ಶೂಲಗಳನ್ನೂ ಇತರ ಆಯುಧಗಳನ್ನೂ ಧರಿಸಿರುವುದೂ, ಐರಾವತಕ್ಕೆ ಸಮಾನಗಳಾದ ಗಜಶ್ರೇಷ್ಠಗಳೊಡಗೂಡಿರುವುದೂ ಆದ ಈ ರಾಕ್ಷಸಸೇನೆಯು ಯಾರದು?" ಎಂದು ಕೇಳಿದನು. ||೭–೧೨|| ಶ್ರೀರಾಮಮೂರ್ತಿಯು ಈ ರೀತಿ ನುಡಿಯಲು ದೇವೇಂದ್ರನಿಗೆ ಸಮಾನವಾದ ಪರಾಕ್ರಮವುಳ್ಳ ವಿಭೀಷಣನು ಮಹಾತ್ಮರಾದ ರಾಕ್ಷಸರ ಬಲಪ್ರವೇಕವನ್ನು ವರ್ಣಿಸಿ ಹೇಳಿದನು:—"ರಾಜೇಂದ್ರಾ; ರಾಮಚಂದ್ರಾ! ಗಜಸ್ಕಂಧವನ್ನೇರಿರುವವನೂ, ಮಹಾನುಭಾವನೂ, ಬಾಲಸೂರ್ಯನಂತೆ ಕೆಮ್ಮೊಗವುಳ್ಳವನೂ, ಗಜಶಿರಸ್ಸನ್ನು ನಡುಗಿಸುತ್ತಿರುವವನೂ ಆಗಿ ಇತ್ತಲಾಗಿ ಬರುತ್ತಿರುವ ಇವನು

ವಕ್ತ್ರಃ। ಪ್ರಕಂಪಯನ್ನಾಗಶಿರೋಽಭ್ಯುಪೈತಿ ಹ್ಯಕಂಪನಂ ತ್ವೇನಮವೇಹಿ ರಾಜನ್!॥೧೪॥
ಯೋಽಸೌ ರಥಸ್ಥೋ ಮೃಗರಾಜಕೇತುರ್ಧೂನ್ವನ್ ಧನುಃ ಶಕ್ರಧನುಃಪ್ರಕಾಶಂ ।
ಕರೀವ ಭಾತ್ಯುಗ್ರವಿವೃತ್ತದಂಷ್ಟ್ರಸ್ಸ ಇಂದ್ರಜಿನ್ನಾಮ ವರಪ್ರಧಾನಃ ॥೧೫॥ ಯಶ್ಚೈಷ
ವಿಂಧ್ಯಾಸ್ತಮಹೇಂದ್ರಕಲ್ಪೋ ಧನ್ವೀ ರಥಸ್ಥೋಽತಿರಥೋಽತಿವೀರಃ । ವಿಷ್ಫಾರ
ಯಂಶ್ಚಾಪಮತುಲ್ಯಮಾನಂ ನಾಮ್ನಾಽತಿಕಾಯೋಽತಿವಿವೃದ್ಧಕಾಯಃ ॥ ೧೬ ॥
ಯೋಽಸೌ ನವಾರ್ಕೋದಿತತಾಮ್ರಚಕ್ಷುರಾರುಹ್ಯ ಘಂಟಾನಿನದಪ್ರಣಾದಂ । ಗಜಂ
ಖರಂ ಗರ್ಜತಿ ವೈ ಮಹಾತ್ಮಾ ಮಹೋದರೋ ನಾಮ ಸಏಷವೀರಃ ॥ ೧೭ ॥

ಕಂಪಿಸುವಂತೆ ಮಾಡುವವನಾಗಿ, ಅಭ್ಯುಪೈತಿ - ಎದುರಾಗಿ ಬರುತ್ತಾನೆಯೋ, ಏನಂ - ಈತನನ್ನು, ಅಕಂಪನಂ - ಅಕಂಪನನೆಂಬವನನ್ನಾಗಿ, ಅವೇಹಿ - ತಿಳಿದುಕೊ. ॥ ೧೪ ॥ ಮೃಗ....ತುಃ - ಸಿಂಹಧ್ವಜನಾದ, ಶಕ್ರ....ಶಂ - ಇಂದ್ರಧನುಸ್ಸಿನಂತೆ ಹೊಳೆವ, ಧನುಃ - ಬಿಲ್ಲನ್ನು, ಧೂನ್ವನ್ - ಕೊಡಹುತ್ತ, ರಥಸ್ಥಃ - ರಥಾರೂಢನಾದ, ಉಗ್ರ....ಷ್ಟ್ರಃ - ಭಯಂಕರವಾಗಿಯೂ, ವರ್ತುಲಾಕಾರವಾಗಿಯೂ ಇರುವ, ಯೋಽಸೌ - ಯಾವ ಈತನು, ಕರೀವ - ಆನೆಯಂತೆ, ಭಾತಿ - ಹೊಳೆಯುತ್ತಿದ್ದಾನೆಯೋ, ಸಃ - ಅವನು, ಇಂದ್ರಜಿನ್ನಾಮ - ಇಂದ್ರಜಿತ್ತುವೆಂದು ಪ್ರಸಿದ್ಧನಾದ, ವರಪ್ರಧಾನಃ- ವರಲಾಭದಿಂದ ಶ್ರೇಷ್ಠನಾದವನು. ॥೧೫॥ ವಿಂಧ್ಯಾ....ಲ್ಪಃ-ವಿಂಧ್ಯಪರ್ವತಕ್ಕೂ, ಅಸ್ತಮಯಪರ್ವತಕ್ಕೂ, ಮಹೇಂದ್ರಪರ್ವತಕ್ಕೂ ಸಮಾನನಾದ, ಧನ್ವೀ - ಧನುಸ್ಸುಳ್ಳ, ರಥಸ್ಥಃ - ರಥದಲ್ಲಿ ಕುಳಿತ, ಅತಿರಥಃ- ಅತಿರಥನಾದ, ಅತಿವೀರಃ - ಅತಿ ಶೂರನಾದ, ಯೋಽಸೌ - ಯಾವ (ಇವನು), ಅತು....ನಂ - ಬಹು ಪ್ರಮಾಣವುಳ್ಳ, ಚಾಪಂ - ಕೋದಂಡವನ್ನು, ವಿಷ್ಫಾರಯನ್ - ಟಂಕಾರ ಮಾಡುತ್ತಿರುವನೋ, ಏಷಃ - ಇವನು, ಅತಿ....ಯಃ - ಬಹು ವೃದ್ಧಿಹೊಂದಿದ ಶರೀರವುಳ್ಳವನಾದಕಾರಣ, ನಾಮ್ನಾ - ಹೆಸರಿನಿಂದ, ಅತಿಕಾಯಃ - ಅತಿಕಾಯನೆಂಬವನು. ॥ ೧೬ ॥ ನವಾ....ಕ್ಷುಃ - ಬಾಲಸೂರ್ಯನಂತೆ ಕೆಂಬಣ್ಣವಾದ ನೇತ್ರಗಳುಳ್ಳ, ಯೋಽಸೌವೈ - ಯಾವ ಇವನಾದರೆ, ಘಂಟಾ....ದಂ - ಘಂಟೆಯ ಧ್ವನಿಯಿಂದ ಪ್ರಚುರವಾದ ಶಬ್ದವುಳ್ಳ, ಗಜಂ - ಆನೆಯನ್ನು, ಆರುಹ್ಯ - ಏರಿ, ಖರಂ - ಕ್ರೂರವಾಗಿ, ಗರ್ಜತಿ - ಗರ್ಜಿಸುವನೋ, ಮಹಾತ್ಮಾ - ಮಹಾ ಧೈರ್ಯಶಾಲಿಯಾದ, ಸಏಷವೀರಃ - ಆ ಈ ಶೂರನು, ಮಹೋದರೋನಾಮ - ಮಹೋದರನೆಂದು ಪ್ರಖ್ಯಾತನು. ॥ ೧೭ ॥ ಯೋಽಸೌ - ಯಾವ ಇವನು, ಸಂಧ್ಯಾ.....ಶಂ - ಸಂಧ್ಯಾಕಾಲದ ಮೇಘಗಗಳಿಂದ ಕೂಡಿರುವ ಬೆಟ್ಟದಂತೆ ಹೊಳೆವ,

ಅಕಂಪನನೆಂಬವನು. ಸಿಂಹಕೇತನನೂ, ದೇವೇಂದ್ರನ ಧನುಸ್ಸಿನಂತೆ ಪ್ರಕಾಶಮಾನವಾದ ಧನುಸ್ಸನ್ನು ಅಲುಗಾಡಿಸುತ್ತ ಬರುತ್ತಿರುವವನೂ, ಮಹಾ ಭಯಂಕರವಾದ ಕೋರೆದಾಡೆಗಳುಳ್ಳವನೂ ರಥವನ್ನೇರಿ ಬರುತ್ತಿರುವವನೂ ಆದ ಈ ರಾಕ್ಷಸನು ಸರ್ವೋತ್ತಮವಾದ ಪರಾಕ್ರಮವುಳ್ಳ ಇಂದ್ರಜಿತ್ತುವೆಂಬವನು. ಎಲೈ ರಾಮಮೂರ್ತಿಯೇ! ವಿಂಧ್ಯಪರ್ವತಕ್ಕೂ, ಅಸ್ತಾಚಲಕ್ಕೂ, ಮಹೇಂದ್ರಪರ್ವತಕ್ಕೂ ಸಮಾನವಾದ ದೇಹವುಳ್ಳವನೂ, ಪ್ರಶಸ್ತವಾದ ಧನುಸ್ಸನ್ನು ಹಿಡಿದಿರುವವನೂ, ನಿರುಪಮವಾದ ಆ ಧನುಸ್ಸನ್ನು ಕಂಪಿಸುತ್ತಿರುವವನೂ ಆದ ಈ ರಾಕ್ಷಸನು ಅತಿರಥನೆಂದು ಪ್ರಸಿದ್ಧನಾದ ಅತಿಕಾಯನು. ॥ ೧೩-೧೬ ॥ ಬಾಲಸೂರ್ಯನ ಕಾಂತಿಯನ್ನು ಹೋಲುವ ಕೆಂಗಣ್ಣುಗಳುಳ್ಳವನೂ ಕಿರುಗಂಟೆಗಳುಳ್ಳ ಆನೆಯನ್ನೇರಿರುವವನೂ ಆದ ಆ ರಾಕ್ಷಸನೇ ಮಹೋದರನೆಂಬವನು. ಅವನು ಮಹಾ ಸಾಮರ್ಥ್ಯವಂತನು. ಸ್ವರ್ಣ

ಯೋಽಸೌ ಹಯಂ ಕಾಂಚನಚಿತ್ರಭಾಂಡಮಾರುಹ್ಯ ಸಂಧ್ಯಾಭ್ರಗಿರಿಪ್ರಕಾಶಂ । ಪ್ರಾಸಂ ಸಮುದ್ಯಮ್ಯ ಮರೀಚಿನದ್ಧಂ ಪಿಶಾಚ ಏಷೋಽಶನಿತುಲ್ಯವೇಗಃ ॥ ೧೮ ॥ ಯಶ್ಚೈಷ ಶೂಲಂ ನಿಶಿತಂ ಪ್ರಗೃಹ್ಯ ವಿದ್ಯುತ್ಪ್ರಭಂ ಕಿಂಕರವಜ್ರವೇಗಂ । ವೃಷೇಂದ್ರಮಾಸ್ಥಾಯ ಗಿರಿಪ್ರಕಾಶಮಾಯಾತಿ ಯೋಽಸೌ ತ್ರಿಶಿರಾ ಯಶಸ್ವೀ ॥ ೧೯ ॥ ಅಸೌ ಚ ಜೀಮೂತನಿಕಾಶರೂಪಃ ಕುಂಭಃ ಪೃಥುವ್ಯೂಢಸುಜಾತವಕ್ಷಾಃ । ಸಮಾಹಿತಃ ಪನ್ನಗರಾಜಕೇತುರ್ವಿಸ್ಫಾರಯರ್ನ್ಭಾತಿ ಧನುರ್ವಿಧೂನ್ವರ್ನ್ ॥ ೨೦ ॥ ಯಶ್ಚೈಷ ಜಾಂಬೂನದವಜ್ರಜುಷ್ಟಂ ದೀಪ್ತಂ ಸಧೂಮಂ ಪರಿಘಂ ಪ್ರಗೃಹ್ಯ । ಆಯಾತಿ

ಕಾಂಚ.....ಡಂ - ಭಂಗಾರದಿಂದ ಆಶ್ಚರ್ಯವಾದ ಒಡವೆಗಳ ಸಮೂಹಗಳುಳ್ಳ, ಹಯಂ - ಕುದುರೆಯನ್ನು, ಆರುಹ್ಯ - ಏರಿ, ಮರೀಚಿನದ್ಧಂ - ಭಂಗಾರದ ಕಟ್ಟುಗಳುಳ್ಳ, ಪ್ರಾಸಂ - ಈಟಿಗೋಲನ್ನು, ಸಮುದ್ಯಮ್ಯ - ಎತ್ತಿ, (ಆಯಾತಿ - ಬರುವನೋ), ಏಷಃ - ಇವನು, ಅಶ....ಗಃ - ಸಿಡಿಲಿಗೆ ಸಮಾನ ವೇಗವುಳ್ಳ, ಪಿಶಾಚಃ - ಪಿಶಾಚನೆಂಬ ರಾಕ್ಷಸನು ॥೧೮॥ ಯಶ್ಚೈಷಃ - ಯಾವ ಇವನು, ನಿಶಿತಂ - ತೀಕ್ಷ್ಣವಾದ, ಕಿಂಕ....ಗಂ - ಯಮದೂತರಂತೆ ಹೇಳಿದ ಕೆಲಸವನ್ನು ಮಾಡತಕ್ಕವನೂ, ವಜ್ರಾಯುಧದ ವೇಗದಂತೆ ವೇಗವುಳ್ಳವನೂ, ನಿಶಿತಂ - ತೀಕ್ಷ್ಣವಾದ, ಶೂಲಂ - ಶೂಲವನ್ನು, ಪ್ರಗೃಹ್ಯ - ಕೊಂಡು, ಗಿರಿಪ್ರಕಾಶಂ - ಬೆಟ್ಟದಂತೆ ಹೊಳೆವ, ವೃಷೇಂದ್ರಂ - ಎತ್ತನ್ನು, ಆಸ್ಥಾಯ - ಏರಿ, ಆಯಾತಿ - ಬರುವನೋ, ಸೋಽಸೌ - ಆ ಇವನು, ಯಶಸ್ವೀ - ಕೀರ್ತಿವಂತನಾದ, ತ್ರಿಶಿರಾಃ - ತ್ರಿಶಿರಸನೆಂಬವನು. ॥ ೧೯ ॥ ಜೀಮೂ....ಪಃ - ಮೇಘಸದೃಶವಾದ ರೂಪವುಳ್ಳ, ಪೃಥು....ಕ್ಷಾಃ - ವಿಸ್ತಾರವಾಗಿಯೂ, ಬಲಿತು ಸುಂದರವಾಗಿಯೂ ಇರುವ ವಕ್ಷಸ್ಥಲವುಳ್ಳ, ಪನ್ನ....ತುಃ - ಸರ್ಪಶ್ರೇಷ್ಠವೇ ಧ್ವಜದಲ್ಲುಳ್ಳ, ಸಮಾಹಿತಃ - ಸಮಾಧಾನಚಿತ್ತನಾಗಿ, ಧನುಃ - ಧನುಸ್ಸನ್ನು, ವಿಸ್ಫಾರಯರ್ನ್ - ಟಂಕಾರಮಾಡುತ್ತಲಿರುವ, ಯೋಽಸೌ - ಯಾವ ಇವನು, ವಿಧೂನ್ವರ್ನ್ ಕೊಡುತ್ತಿರುವವನಾಗಿ, ಭಾತಿ - ಹೊಳೆಯುತ್ತಿರುವನೋ, ಏಷಃ - ಇವನು, ಕುಂಭಃ - ಕುಂಭನು. ॥ ೨೦ ॥ ಯಶ್ಚೈಷಃ - ಯಾವ ಇವನು, ಜಾಂಬ....ಷ್ಟಂ - ಭಂಗಾರದಿಂದಲೂ, ವಜ್ರಗಳಿಂದಲೂ ವ್ಯಾಪ್ತವಾದ, ದೀಪ್ತಂ - ಹೊಳೆಯುತ್ತಿರುವ, ಸಧೂಮಂ - ಹೊಗೆಯೊಡಗೂಡಿದ, ಪರಿಘಂ - ಪರಿಘಾಯುಧವನ್ನು, ಪ್ರಗೃಹ್ಯ - ಕೊಂಡು, ರಕ್ಷೋ....ಕಃ - ರಾಕ್ಷಸಸೈನ್ಯಕ್ಕೆ ಧ್ವಜಪ್ರಾಯನಾಗಿ, ಆಯಾತಿ - ಬರುತ್ತಿದ್ದಾನೆಯೋ,

ಖಚಿತವಾದ ಭಾಂಡಾಭರಣವಿರಾಜಿತವಾದ, ಸಂಧ್ಯಾಮೇಘದಂತೆ ಶೋಭಿಸುತ್ತಿರುವ ಕುದುರೆಯನ್ನೇರಿ ಬರುತ್ತಿರುವ ಈ ರಾಕ್ಷಸನು ಪಿಶಾಚನೆಂಬವನು. ಇವನು ಮಿಂಚಿನ ವೇಗವುಳ್ಳವನೂ, ಮಹಾ ಪರಾಕ್ರಮಿಯೂ ಆಗಿರುವನು. ಮಿಂಚಿನ ಬಳ್ಳಿಯಂತೆ ಥಳಥಳನೆ ಹೊಳೆಯುತ್ತ ವಜ್ರಾಯುಧದ ವೇಗವನ್ನು ಹೋಲಿ ಬಹು ತೀಕ್ಷ್ಣವೂ ಆದ ಶೂಲಾಯುಧವನ್ನು ಧರಿಸಿದವನಾಗಿ ವೃಷಭವನ್ನೇರಿ ಇತ್ತಲೈತರುತ್ತಿರುವ ಅದೋ, ಆ ರಾಕ್ಷಸನು ಮಹಾ ಕೀರ್ತಿಶಾಲಿಯಾದ ತ್ರಿಶಿರನೆಂಬವನು. ಮೇಘಕ್ಕೆ ಸಮಾನವಾದ ದೇಹಚ್ಛಾಯೆಯುಳ್ಳವನೂ, ವಿಶಾಲವಾದ ವಕ್ಷಸ್ಥಳವುಳ್ಳವನೂ, ಸರ್ಪಧ್ವಜವುಳ್ಳವನೂ, ಧನುಷ್ಟಂಕಾರವನ್ನು ಮಾಡುತ್ತಿರುವವನೂ ಆದ ಆ ರಾಕ್ಷಸನೇ ಕುಂಭನೆಂಬ ನಾಮಧೇಯವುಳ್ಳವನು. ಭಂಗಾರದಿಂದ ರಚಿತವಾಗಿ ವಜ್ರಗಳು ಅಡಕಿದ ಪ್ರಕಾಶಮಾನವಾದ ಪರಿಘವನ್ನು ಆಯುಧವನ್ನಾಗಿ ಹಿಡಿದು ಬರುತ್ತಿರುವ ಆ ರಾಕ್ಷಸೋತ್ತಮನು ರಾಕ್ಷಸಸೇನೆಗೆಲ್ಲಕ್ಕೂ ಧ್ವಜಪ್ರಾಯನೂ, ಮಹಾ

ರಕ್ಷೋಬಲಕೇತುಭೂತಸ್ತ್ವಸೌ ನಿಕುಂಭೋಽದ್ಭುತಘೋರಕರ್ಮಾ ||೨೦|| ಯಶ್ಚೈಷ ಚಾಪಾಸಿಶರೌಘಜುಷ್ಟಂ ಪತಾಕಿನಂ ಪಾವಕದೀಪ್ತರೂಪಂ | ರಥಂ ಸಮಾಸ್ಥಾಯ ವಿಭಾತ್ಯುದಗ್ರೋ ನರಾಂತಕೋಽಸೌ ನಗಶೃಂಗಯೋಧೀ || ೨೨ || ಯಶ್ಚೈಷ ನಾನಾವಿಧಘೋರರೂಪೈರ್ವ್ಯಾಘ್ರೋಷ್ಟ್ರನಾಗೇಂದ್ರಮೃಗಾಶ್ವವಕ್ತ್ರೈಃ | ಭೂತೈರ್ವೃತೋ ಭಾತಿ ವಿವೃತ್ತನೇತ್ರೈಸ್ಸೋಽಸೌ ಸುರಾಣಾಮಪಿ ದರ್ಪಹಂತಾ || ೨೩ || ಯತ್ರೈತದಿಂದುಪ್ರತಿಮಂ ವಿಭಾತಿ ಛತ್ರಂ ಸಿತಂ ಸೂಕ್ಷ್ಮಶಲಾಕಮಗ್ರ್ಯಂ | ಅತ್ರೈವ ರಕ್ಷೋಧಿಪತಿರ್ಮಹಾತ್ಮಾ ಭೂತೈರ್ವೃತೋ ರುದ್ರ ಇವಾಽವಭಾತಿ || ೨೪ || ಅಸೌ

ಅಸೌ - ಇವನು, ಅದ್ಭು....ರ್ಮಾ - ಆಶ್ಚರ್ಯಕರವಾದ ಭಯಂಕರ ವ್ಯಾಪಾರವುಳ್ಳ, ನಿಕುಂಭಃ - ನಿಕುಂಭನೆಂಬವನು. || ೨೧ || ಯಶ್ಚೈಷಃ - ಯಾವ ಈತನು, ಚಾಪಾ....ಷ್ಟಂ - ಧನುಸ್ಸಿನಿಂದಲೂ ಖಡ್ಗದಿಂದಲೂ, ಬಾಣತಂಡಗಳಿಂದಲೂ ವ್ಯಾಪ್ತವಾದ, ಪತಾಕಿನಂ-ಧ್ವಜಪಟಗಳುಳ್ಳ, ಪಾವ....ಪಂ- ಅಗ್ನಿಯಂತೆ ಪ್ರಜ್ವಲಿಸುತ್ತಿರುವ ಆಕಾರವುಳ್ಳ, ರಥಂ - ತೇರನ್ನು, ಸಮಾಸ್ಥಾಯ - ಏರಿ, ಉದಗ್ರಃ - ಉನ್ನತನಾಗಿ, ವಿಭಾತಿ - ಹೊಳೆಯುತ್ತಿದ್ದಾನೆಯೋ, ಅಸೌ - ಈತನು, ನಗ....ಧೀ - ಬೆಟ್ಟದ ಶಿಖರದಿಂದ ಯುದ್ಧಮಾಡತಕ್ಕ, ನರಾಂತಕಃ - ನರಾಂತಕನೆಂಬವನು. ||೨೨|| ಯಶ್ಚೈಷಃ - ಯಾವ ಇವನು, ನಾನಾ....ಪೈಃ - ಅನೇಕ ವಿಧವಾದ ಭಯಂಕರ ರೂಪಗಳುಳ್ಳ, ವ್ಯಾಘ್ರೋ....ಕ್ತ್ರೈಃ - ಹುಲಿ, ಒಂಟೆ, ಸರ್ಪ, ಮೃಗ, ಅಶ್ವ ಎಂಬಿವುಗಳ ಮುಖಗಳಂತೆ ಮುಖಗಳುಳ್ಳ, ವಿವೃ....ತ್ರೈಃ - ವರ್ತುಲಾಕಾರವಾದ ನೇತ್ರಗಳುಳ್ಳ, ಭೂತೈಃ - ಭೂತಗಳಿಂದ, ವೃತಃ - ಸುತ್ತುವರೆಯಲ್ಪಟ್ಟು, ಭಾತಿ- ಹೊಳೆಯುತ್ತಿದ್ದಾನೆಯೋ, ಸೋಽಸೌ - ಆ ಈತನು, ಸುರಾಣಾಮಪಿ - ದೇವತೆಗಳೂ ಕೂಡ, ದರ್ಪಹಂತಾ - ಗರ್ವಭಂಜಕನು. ||೨೩|| ಯತ್ರ - ಯಾವ ಸ್ಥಳದಲ್ಲಿ, ಸೂಕ್ಷ್ಮಶಲಾಕಂ - ಸೂಕ್ಷ್ಮವಾದ ಸಲಾಕಿಗಳುಳ್ಳ, ಇಂದುಪ್ರತಿಮಂ - ಚಂದ್ರಸಮಾನವಾದ, ಸಿತಂ - ಶುಭ್ರವಾದ, ಏತಚ್ಛತ್ರಂ- ಈ ಛತ್ರವು, ಅಸ್ತಿ - ಇದೆಯೋ, ಅತ್ರ - ಇಲ್ಲಿ, ಮಹಾತ್ಮಾ - ಮಹಾ ಪ್ರಭಾವವಂತನಾದ, ಏಷಃ ರಕ್ಷೋಧಿಪತಿಃ - ಈ ರಾಕ್ಷಸಾಧಿಪತಿಯಾದ ರಾವಣನು, ಭೂತೈಃ - ಭೂತಗಳಿಂದ, ವೃತಃ - ಪರಿವೃತನಾದ, ರುದ್ರ ಇವ - ಕಾಲಾಗ್ನಿರುದ್ರನಂತೆ, ಆಭಾತಿ - ಹೊಳೆಯುತ್ತಿದ್ದಾನೆ. || ೨೪ || ಕಿರೀಟ -

ಪರಾಕ್ರಮಶಾಲಿಯೂ ಆದ ನಿಕುಂಭರಾಕ್ಷಸನು. ||೧೭–೨೦|| ಎಲೈ ರಾಮಚಂದ್ರನೇ! ಅಗ್ನಿಜ್ವಾಲೆಗೆ ಸಮಾನವಾದ ಕಾಂತಿಯುಳ್ಳ ಪತಾಕೆಗಳಿಂದಲೂ, ಧನುಸ್ಸುಗಳಿಂದಲೂ, ಖಡ್ಗಗಳಿಂದಲೂ ಕೂಡಿರುವ ರಥವನ್ನೇರಿ ಪರ್ವತಶಿಖರವನ್ನೇ ಆಯುಧವನ್ನಾಗಿ ಧರಿಸಿ ಬರುತ್ತಿರುವ ಆ ರಾಕ್ಷಸಶ್ರೇಷ್ಠನು ನರಾಂತಕನೆಂಬ ಹೆಸರುಳ್ಳವನು. ಇಗೋ; ಈ ರಾಕ್ಷಸನನ್ನು ನೋಡು; ನಾನಾವಿಧಗಳೂ, ಭಯಂಕರಗಳೂ ಆದ ಅನೇಕ ರೂಪಗಳುಳ್ಳವರೂ, ಹೆಬ್ಬುಲಿಗಳು, ಒಂಟೆಗಳು, ಆನೆಗಳು, ಸಿಂಹಗಳು ಇವುಗಳ ಮುಖಗಳನ್ನು ಹೋಲುವ ಮುಖಗಳುಳ್ಳವರೂ, ಗಿರಗಿರನೆ ತಿರುಗಿಸುತ್ತಿರುವ ನೇತ್ರಗಳುಳ್ಳವರೂ ಆದ ರಾಕ್ಷಸರೊಡಗೂಡಿ ದೇವತೆಗಳ ಮದವನ್ನಡಗಿಸುವ, ಚಂದ್ರಸಮಾನಕಾಂತಿಯುಳ್ಳ, ಸೂಕ್ಷ್ಮಶಲಾಕಾಲಂಕೃತವೂ, ಬಹು ಶ್ರೇಷ್ಠವೂ ಆದ ಶ್ವೇತಚ್ಛತ್ರದಿಂದ ಶೋಭಿಸುತ್ತಿರುವ ಇವನೇ ಮಹಾನುಭಾವನಾದ ರಾವಣಾಸುರನು. ||೨೨–೨೪|| ರಾಮಚಂದ್ರ! ಕಿರೀಟವನ್ನು ಧರಿಸಿ, ಚಲಿಸುವ ಕುಂಡಲಗಳಿಂದ ಶೋಭಿಸುತ್ತಲಿರುವ ಮುಖವುಳ್ಳವನೂ, ವಿಂಧ್ಯಪರ್ವತೋಪಮವಾದ

ಕಿರೀಟೀ ಚಲಕುಂಡಲಾಸ್ಯೋ ನಗೇಂದ್ರವಿಂಧ್ಯೋಪಮಭೀಮಕಾಯಃ । ಮಹೇಂದ್ರ ವೈವಸ್ವತದರ್ಪಹಂತಾ ರಕ್ಷೋಧಿಪಸ್ಸೂರ್ಯಇವಾವಭಾತಿ ” ॥ ೨೫ ॥ ಪ್ರತ್ಯುವಾಚ ತತೋ ರಾಮೋ ವಿಭೀಷಣಮರಿಂದಮಂ । “ಅಹೋ! ದೀಪ್ತೋ ಮಹಾತೇಜಾ ರಾವಣೋ ರಾಕ್ಷಸೇಶ್ವರಃ ॥ ೨೬ ॥ ಆದಿತ್ಯ ಇವ ದುಷ್ಪ್ರೇಕ್ಷೋ ರಶ್ಮಿಭಿರ್ಭಾತಿ ರಾವಣಃ । ಸುವ್ಯಕ್ತಂ ಲಕ್ಷಯೇ ಹ್ಯಸ್ಯ ರೂಪಂ ತೇಜಸ್ಸಮಾವೃತಂ ॥ ೨೭ ॥ ದೇವ ದಾನವವೀರಾಣಾಂ ವಪುರ್ನೈವಂ ವಿಧಂ ಭವೇತ್ । ಯಾದೃಶಂ ರಾಕ್ಷಸೇಂದ್ರಸ್ಯ ವಪುರೇತತ್ಪ್ರಕಾಶತೇ ॥೨೮॥ ಸರ್ವೇ ಪರ್ವತಸಂಕಾಶಾ ಸ್ಸರ್ವೇಪರ್ವತಯೋಧಿನಃ। ಸರ್ವೇ ದೀಪ್ತಾಯುಧಧರಾ ಯೋಧಾಶ್ಚಾಽಸ್ಯ ಮಹೌಜಸಃ ॥ ೨೯ ॥ ಭಾತಿ ರಾಕ್ಷಸ

ಕಿರೀಟಧಾರಿಯಾದ, ಚಲ....ಸ್ಯಃ - ಚಲಿಸುತ್ತಿರುವ ಕುಂಡಲಗಳುಳ್ಳ ಮುಖವುಳ್ಳ, ನಗೇ....ಯಃ - ಸರ್ವೋತ್ತಮವಾದ ವಿಂಧ್ಯಪರ್ವತಕ್ಕೆ ಸಮಾನವಾದ ಭಯಂಕರ ಶರೀರವುಳ್ಳ, ಮಹೇಂ....ತಾ - ದೇವೇಂದ್ರನಿಗೂ, ಯಮನಿಗೂ ಗರ್ವಭಂಜಕನಾದ, ರಕ್ಷೋಧಿಪಃ - ರಾಕ್ಷಸಾಧಿಪತಿಯು, ಸೂರ್ಯ ಇವ - ಸೂರ್ಯನಂತೆ, ಆಭಾತಿ - ಹೊಳೆಯುತ್ತಿದಾನೆಯೋ, ತತಃ - ಬಳಿಕ, ರಾಮಃ - ಶ್ರೀರಾಮನು, ಅರಿಂದಮಂ - ಶತ್ರುಸಂಹಾರಕನಾದ, ವಿಭೀಷಣಂ - ವಿಭೀಷಣನನ್ನು ಕುರಿತು, ಪ್ರತ್ಯುವಾಚ - ಪ್ರತ್ಯುತ್ತರಕೊಟ್ಟನು. ॥ ೨೫ ॥ ರಾಕ್ಷಸೇಶ್ವರಃ - ರಾಕ್ಷಸಾಧಿಪತಿಯಾದ, ರಾವಣಃ - ರಾವಣನು, ಮಹಾತೇಜಾಃ - ಮಹಾ ತೇಜಸ್ಸುಳ್ಳವನಾಗಿ, ದೀಪ್ತಃ - ಹೊಳೆಯುತ್ತಿದ್ದಾನೆ, ಅಹೋ ಆಶ್ಚರ್ಯವು, ರಾವಣಃ - ರಾವಣನು, ರಶ್ಮಿಭಿಃ - ದೇಹಕಾಂತಿಯಿಂದ, ಆದಿತ್ಯ ಇವ - ಸೂರ್ಯನಂತೆ, ದುಷ್ಪ್ರೇಕ್ಷಃ - ನೋಡಲಸಾಧ್ಯನು. ॥ ೨೬ ॥ ಅಸ್ಯ - ಇವನ, ರೂಪಂ - ರೂಪವನ್ನು, ತೇಜಸ್ಸಮಾವೃತಂ - ತೇಜಸ್ಸಿನಿಂದ ವ್ಯಾಪ್ತವನ್ನಾಗಿ, ಲಕ್ಷಯೇ - ಕಾಣುತ್ತೇನೆ, ಸುವ್ಯಕ್ತಂ - ಸ್ಪಷ್ಟವು. ॥ ೨೭ ॥ ರಾಕ್ಷಸೇಂದ್ರಸ್ಯ - ರಾವಣನ, ಏತದ್ವಪುಃ - ಈ ಶರೀರವು, ಯಾದೃಶಂ - ಎಂತಹುದಾಗಿ, ಪ್ರಕಾಶತೇ- ಹೊಳೆಯುತ್ತಿದೆಯೋ, ದೇವ....ಣಾಂ - ದೇವದಾನವರಲ್ಲಿ ಶೂರರ, ವಪುಃ - ಶರೀರವು, ಏವಂವಿಧಂ - ಈ ರೀತಿಯುಳ್ಳದ್ದು, ನಭವೇತ್-ಆಗಲಾರದು. ॥ ೨೮ ॥ ಅಸ್ಯ-ಇವನ, ಯೋಧಾಶ್ಚ-ಭಟರೂ ಕೂಡ, ಸರ್ವೇ - ಸಮಸ್ತರೂ, ಪರ್ವ....ಶಾಃ - ಪರ್ವತಸದೃಶರು, ಸರ್ವೇ - ಎಲ್ಲರೂ, ಪರ್ವ.....ನಃ - ಬೆಟ್ಟಗಳಿಂದ ಯುದ್ಧಮಾಡುವವರು, ಸರ್ವೇ - ಎಲ್ಲರೂ, ದೀಪ್ತಾ....ರಾಃ - ಹೊಳೆವ ಆಯುಧಗಳನ್ನು

ಶರೀರವುಳ್ಳವನೂ, ದೇವೇಂದ್ರನ ಮತ್ತು ಯಮನ ಮದವನ್ನೂ ನಾಶಗೊಳಿಸುವ ಈ ರಾವಣಾಸುರನು ಸೂರ್ಯನಂತೆಯೇ ಪ್ರಕಾಶಿಸುತ್ತಿರುವನು, ನೋಡು ನೋಡು.” ವಿಭೀಷಣನ ನುಡಿಗಳನ್ನೆಲ್ಲ ಕೇಳಿದ ಬಳಿಕ ಶ್ರೀರಾಮಮೂರ್ತಿಯು ಶತ್ರುಮರ್ದನನಾದ ಅವನನ್ನು ಕುರಿತು ಈ ರೀತಿ ನುಡಿದನು. ॥ ೨೫ ॥ “ಮಿತ್ರ, ವಿಭೀಷಣ! ಆಹ; ಈ ರಾವಣಾಸುರನು ಅತ್ಯಧಿಕ ತೇಜಸ್ಸಂಪನ್ನನಾಗಿರುವನು. ಇವನು ನಿಜವಾಗಿಯೂ ಸೂರ್ಯನಂತೆಯೇ ಬೆಳಗುತ್ತಿರುವನು. ಇವನನ್ನು ನೋಡಲೂ ಆಸದಳವಾಗಿರುವುದು. ಇವನ ಆಕಾರವಾದರೋ ಬಹು ಸ್ಪಷ್ಟವಾಗಿರುವುದು. ಇವನ ಆಕಾರದಂತಹ ಆಕಾರವು ದೇವಾಸುರರಲ್ಲಾರಿಗೂ ಇರುವುದಿಲ್ಲವು. ಆಹ! ಇವನ ರೂಪವು ಬಹು ರಮ್ಯವಾಗಿರುವುದು. ರಾಕ್ಷಸೋತ್ತಮನೇ! ಮಹಾ ತೇಜಸ್ಸಂಪನ್ನನಾದ ಈ ರಾವಣಾಸುರನ ಯೋಧರೆಲ್ಲರೂ ಪರ್ವತಾಕಾರಗಳನ್ನುಳ್ಳವರಾಗಿರುವರು. ಎಲ್ಲರೂ ಪರ್ವತಗಳಿಂದಲೇ ಯುದ್ಧಮಾಡಲು ತಕ್ಕವ

ರಾಜೋಽಸೌ ಪ್ರದೀಪ್ತೈರ್ಭೀಮವಿಕ್ರಮೈಃ । ಭೂತೈಃ ಪರಿವೃತಸ್ತೀಕ್ಷ್ಣೈರ್ದೇಹವದ್ಭಿರಿವಾಂತಕಃ ॥ ೩೦ ॥ ದಿಷ್ಟ್ಯಾಽಯಮದ್ಯ ಪಾಪಾತ್ಮಾ ಮಮದೃಷ್ಟಿಪಥಂ ಗತಃ । ಅದ್ಯ ಕ್ರೋಧಂ ವಿಮೋಕ್ಷ್ಯಾಮಿ ಸೀತಾಹರಣಸಂಭವಂ" ॥ ೩೧ ॥ ಏವಮುಕ್ತ್ವಾ ತತೋ ರಾಮೋ ಧನುರಾದಾಯ ವೀರ್ಯವಾನ್ । ಲಕ್ಷ್ಮಣಾನುಚರಸ್ತಸ್ಥೌ ಸಮುದ್ಧೃತ್ಯ ಶರೋತ್ತಮಂ ॥ ೩೨ ॥ ತತಸ್ಸರಕ್ಷೋಧಿಪತಿರ್ಮಹಾತ್ಮಾ ರಕ್ಷಾಂಸಿ ತಾನ್ಯಾಹ ಮಹಾಬಲಾನಿ । "ದ್ವಾರೇಷು ಚರ್ಯಾಗೃಹಗೋಪುರೇಷು ಸುನಿರ್ವೃತಾಸ್ತಿಷ್ಠತ

ಧರಿಸುವವರು, ಮಹೌಜಸಃ - ಮಹಾ ತೇಜೋವಂತರು. ॥೨೯॥ ಅಸೌರಾಕ್ಷಸರಾಜಃ - ಈ ರಾಕ್ಷಸರಾಜನು, ಪ್ರದೀಪ್ತೈಃ - ಹೊಳೆಯುತ್ತಿರುವ, ಭೀಮವಿಕ್ರಮೈಃ - ಭಯಂಕರ ಪರಾಕ್ರಮವುಳ್ಳ, ಕ್ರೂರವಾದ, ದೇಹವದ್ಭಿಃ - ಶರೀರಧಾರಿಗಳಾದ, ಭೂತೈಃ - ಭೂತಗಳಿಂದ, ಪರಿವೃತಃ - ಸುತ್ತುವರೆದ, ಅಂತಕಇವ - ಯಮನಂತೆ, ಭಾತಿ - ಹೊಳೆಯುತ್ತಾನೆ. ॥ ೩೦ ॥ ದಿಷ್ಟ್ಯಾ - ದೈವಾಧೀನದಿಂದ, ಪಾಪಾತ್ಮ - ಪಾಪಿಷ್ಠನಾದ, ಅಯಂ - ಇವನು, ಮಮ - ನನ್ನ, ದೃಷ್ಟಿಪಥಂ - ದೃಷ್ಟಿಗೋಚರವನ್ನು, ಗತಃ - ಹೊಂದಿದನು, ಅದ್ಯ - ಈಗ, ಸೀತಾ....ವಂ - ಸೀತಾಪಹಾರದಿಂದ ಹುಟ್ಟಿದ, ಕ್ರೋಧಂ - ಕೋಪವನ್ನು, ವಿಮೋಕ್ಷ್ಯಾಮಿ - ಬಿಡುವೆನು. ॥ ೩೧ ॥ ಏವಂ - ಈ ಪರಿಯಾಗಿ, ಉಕ್ತ್ವಾ - ಹೇಳಿ, ತತಃ - ಬಳಿಕ, ವೀರ್ಯವಾನ್ - ಪರಾಕ್ರಮಿಯಾದ, ರಾಮಃ - ಶ್ರೀರಾಮನು, ಧನುಃ - ಬಿಲ್ಲನ್ನು, ಆದಾಯ - ತೆಗದುಕೊಂಡು, ಲಕ್ಷ್ಮಣಾನುಚರಃ - ಲಕ್ಷ್ಮಣನು ಹಿಂದಿರಲು, ಶರೋತ್ತಮಂ - ಉತ್ತಮವಾದ ಬಾಣವನ್ನು, ಸಮುದ್ಧೃತ್ಯ - ಎತ್ತಿ, ತಸ್ಥೌ - ನಿಂತನು. ॥ ೩೨ ॥ ತತಃ - ಬಳಿಕ, ಮಹಾತ್ಮಾ - ಮಹಾ ಧೈರ್ಯಶಾಲಿಯಾದ, ಸರಕ್ಷೋಧಿಪತಿಃ - ಆ ರಾವಣನು, ಬಹಾಬಲಾನಿ - ಬಹು ಸಾಮರ್ಥ್ಯವುಳ್ಳ, ತಾನಿರಕ್ಷಾಂಸಿ - ಆ ರಕ್ಕಸರನ್ನು ಕುರಿತು, ಚರ್ಯಾ....ಷು - ಪಹರೆ ಮನೆಗಳುಳ್ಳ ಊರುಬಾಗಿಲುಗಳಲ್ಲಿಯೂ, ದ್ವಾರೇಷು - ಒಳಬಾಗಿಲುಗಳಲ್ಲಿಯೂ, ಸುನಿರ್ವೃತಾಃ - ಬಹು ಜಾಗರೂಕರಾಗಿಯೂ, ನಿರ್ವಿಶಂಕಾಃ - ನಿರ್ಭೀಕ

ರಾಗಿದ್ದಾರೆ. ಎಲ್ಲರೂ ಪ್ರಜ್ವಲಿಸುತ್ತಿರುವ ಬಹು ಭಯಂಕರವಾದ ಆಯುಧಗಳನ್ನು ಧರಿಸಿದ್ದಾರೆ. ಎಲ್ಲರೂ ಅತ್ಯಧಿಕವಾದ ತೇಜಸ್ಸಿನಿಂದ ಕೂಡಿದವರಾಗಿದ್ದಾರೆ. ಇತಂಹ ರಾಕ್ಷಸವೀರರೊಡಗೂಡಿರುವ ಈ ರಾವಣಾಸುರನಾದರೋ, ಬಹಳವಾಗಿ ಪ್ರಜ್ವಲಿಸುತ್ತಿರುವ ತೀಕ್ಷ್ಣವಾದ ಭೂತದೇಹಗಳೊಡಗೂಡಿ ಮೂರ್ತಿಮಂತನಾಗಿ ಬಂದ ಯಮನಂತೆ ತೋರುತ್ತಿರುವನು. ॥ ೨೯–೩೦ ॥ ಆಹಹ! ಇಂದು ನನ್ನ ಅದೃಷ್ಟವಿಶೇಷದಿಂದ ಈ ರಾಕ್ಷಸನು ದೃಷ್ಟಿಪಥಕ್ಕೆ ಬಿದ್ದನು. ಇದೀಗ ನಾನು ಸೀತೆಯನ್ನಪಹರಿಸಿದುದರಿಂದ ನನಗುಂಟಾದ ತೀವ್ರತಮವಾದ ಕೋಪವನ್ನು ಈ ಪಾಪಾತ್ಮನಲ್ಲಿ ಪ್ರಯೋಗಿಸುವೆನು" ಎಂದು ಹೇಳಿದನು. ಆ ತರುವಾಯ ಮಹಾ ವೀರ್ಯವಂತನಾದ ಶ್ರೀರಾಮಮೂರ್ತಿಯು ಮಹೋತ್ತಮವಾದ ಧನುಸ್ಸನ್ನು ಕೈಯಲ್ಲಿಡಿದು ಬಾಣವನ್ನದರಲ್ಲಿ ಸಂಧಾನಮಾಡಿ ಲಕ್ಷ್ಮಣಸಹಾಯನಾಗಿ ನಿಂತಿದ್ದನು. ಆ ಸಮಯದಲ್ಲಿ ಮಹಾನುಭಾವನಾದ ಆ ರಾಕ್ಷಸೇಶ್ವರನಾದರೋ, ರಾಕ್ಷಸಭಟರನ್ನು ಕುರಿತು, "ಎಲೈ ರಾಕ್ಷಸಯೋಧರಿರಾ! ನೀವೆಲ್ಲರೂ ಈಗಲೇ ಇಲ್ಲಿಂದ ತೆರಳಿ ನಗರದ್ವಾರಗಳಲ್ಲಿಯೂ, ಗೃಹಗೋಪುರಗಳಲ್ಲಿಯೂ ನಿಂತು ಚೆನ್ನಾಗಿ ಕಾಯುತ್ತಿರಿ. ಇಲ್ಲ

**ನಿರ್ವಿಶಂಕಾಃ || ೩೩ || ಇಹಾಗತಂ ಮಾಂ ಸಹಿತಂ ಭವದ್ಭಿರ್ವನೌಕಸಶ್ಛಿದ್ರಮಿದಂ ವಿದಿತ್ವಾ । ಶೂನ್ಯಾಂ ಪುರೀಂ ದುಷ್ಪ್ರಸಹಾಂ ಪ್ರಮಥ್ಯ ಪ್ರಧರ್ಷಯೇಯುಸ್ಸಹಸಾ ಸಮೇತಾಃ || ೩೪ || ವಿಸರ್ಜಯಿತ್ವಾ ಸಹಿತಾಂಸ್ತತಸ್ತಾನ್ ಗತೇಷು ರಕ್ಷಸ್ಸು ಯಥಾನಿಯೋಗಂ । ವ್ಯದಾರಯದ್ವಾನರಸಾಗರೌಘಂ ಮಹಾಝುಷಃ ಪೂರ್ಣಮಿವಾರ್ಣವೌಘಂ " || ೩೫ || ತಮಾಪತಂತಂ ಸಹಸಾ ಸಮೀಕ್ಷ್ಯ ದೀಪ್ತೇಷು ಚಾಪಂ ಯುಧಿ ರಾಕ್ಷಸೇಂದ್ರಂ । ಮಹತ್ಸಮುತ್ಪಾಟ್ಯ ಮಹೀಧರಾಗ್ರಂ ದುದ್ರಾವ ರಕ್ಷೋಽಧಿಪತಿಂ ಹರೀಶಃ || ೩೬ || ತಚ್ಛೈಲಶೃಂಗಂ ಬಹುವೃಕ್ಷಸಾನುಂ ಪ್ರಗೃಹ್ಯ ಚಿಕ್ಷೇಪ ನಿಶಾಚ**

---

ರಾಗಿಯೂ, ತಿಷ್ಠತ - ಇರುವವರಾಗಿ. ||೩೩|| ಭವದ್ಭಿಃ - ನಿಮ್ಮಿಂದ, ಸಹಿತಂ - ಕೂಡಿರುವ, ಮಾಂ-ನನ್ನನ್ನು, ಇಹ - ಇಲ್ಲಿಗೆ, ಆಗತಂ - ಬಂದಿರುವವನನ್ನಾಗಿ, ವನೌಕಸಃ - ವಾನರರು, ಇದಂಛಿದ್ರಂ - ಈ ಅವಕಾಶವನ್ನು, ವಿದಿತ್ವಾ - ತಿಳಿದು, ಸಹಸಾ - ಜಾಗ್ರತೆಯಾಗಿ, ಸಮೇತಾಃ - ಗುಂಪುಗೂಡಿ, ಶೂನ್ಯಾಂ - ಬರಿದಾದ, ದುಷ್ಪ್ರಸಹಾಂ - ಸಹಿಸಲಸಾಧ್ಯವಾದ, ಪುರೀಂ - ಪಟ್ಟಣವನ್ನು, ಪ್ರಮಥ್ಯ-ಧ್ವಂಸಮಾಡಿ, ಪ್ರಧರ್ಷಯೇಯುಃ - ಹಾಳುಮಾಡಿಯಾರು. || ೩೪ || ತತಃ - ಬಳಿಕ, ತಾನ್ - ಆ ರಾಕ್ಷಸರನ್ನು, ವಿಸರ್ಜಯಿತ್ವಾ - ಹಿಂತಿರುಗಿಸಿ, ರಕ್ಷಸ್ಸು - ರಾಕ್ಷಸರು, ಯಥಾನಿಯೋಗಂ - ಆಜ್ಞಾನುಸಾರವಾಗಿ, ಗತೇಷು - ಹೋದವರಾಗಲು, ಮಹಾಝುಷಃ - ದೊಡ್ಡಮೀನು, ಪೂರ್ಣಂ - ಸಂಪೂರ್ಣವಾದ, ಅರ್ಣ......ವ - ಕಡಲಿನ ಪ್ರವಾಹವನ್ನಂತೆ, ವಾನ....ಘಂ - ವಾನರರೆಂಬ ಸಮುದ್ರಪ್ರವಾಹವನ್ನು, ವ್ಯದಾರಯತ್ - ಎರಡು ಭಾಗವಾಗಿ ಮಾಡಿದನು. || ೩೫ || ಯುಧಿ - ಯುದ್ಧಾರ್ಥವಾಗಿ, ಆಪತಂತಂ - ಬರುತ್ತಿರುವ, ದೀಪ್ತೇಷುಚಾಪಂ - ಹೊಳೆಯುತ್ತಿರುವ ಧನುರ್ಬಾಣಗಳುಳ್ಳ, ತಂರಾಕ್ಷಸೇಂದ್ರಂ - ಆ ರಾಕ್ಷಸಾಧಿಪತಿಯನ್ನು, ಸಮೀಕ್ಷ್ಯ - ಕಂಡು, ಹರೀಶಃ - ವಾನರಾಧಿಪತಿಯಾದ ಸುಗ್ರೀವನು, ಮಹತ್ - ದೊಡ್ಡದಾದ, ಮಹೀಧರಾಗ್ರಂ - ಪರ್ವತಶಿಖರವನ್ನು, ಸಮುತ್ಪಾಟ್ಯ - ಪೆಳಗಿಸಿಕೊಂಡು, ದುದ್ರಾವ - ಓಡಿಬಂದನು. || ೩೬ || ಬಹು....ನುಂ - ಅನೇಕ ವೃಕ್ಷಗಳುಳ್ಳ, ತಚ್ಛೈಲಶೃಂಗಂ - ಆ ಪರ್ವತಶಿಖರವನ್ನು, ಪ್ರಗೃಹ್ಯ - ಕಂಡು, ನಿಶಾಚರಾಯ - ರಾವಣನಿಗೋಸ್ಕರ,

---

ದಿದ್ದರೆ ನಾವೆಲ್ಲರೂ ಇಲ್ಲಿಗೈತಂದಿರುವುದರಿಂದ ಪಟ್ಟಣದಲ್ಲಿ ಯಾರೂ ಇಲ್ಲದೆ ಹೋಗಿ ಇದೇ ಸಮಯವೆಂದರಿತು ವಾನರರೆಲ್ಲರೂ ನುಗ್ಗಿ ಹೊರಟು ಲಂಕಾನಗರವೆಲ್ಲವನ್ನೂ ಹಾಳುಮಾಡಿಯಾರು. ಆದಕಾರಣ ನೀವೆಲ್ಲರೂ ಬಹು ಜಾಗರೂಕತೆಯಿಂದ ಪಟ್ಟಣವನ್ನು ಸಂರಕ್ಷಿಸುತ್ತಿರಬೇಕು" ಎಂದು ಹೇಳಿ ರಾಕ್ಷಸವೀರರೆಲ್ಲರನ್ನೂ ಆಯಾ ಕಾರ್ಯಗಳಲ್ಲಿ ನಿಯಮಿಸಿದನು. ಈ ರೀತಿ ರಾಕ್ಷಸವೀರರೆಲ್ಲರನ್ನೂ ನಿಯೋಗಿಸಿದ ಬಳಿಕ ಆ ರಾವಣಾಸುರನು ಮಹಾ ಮತ್ಸ್ಯವು ಸಮುದ್ರವೆಲ್ಲವನ್ನೂ ಉಲ್ಲಕಲ್ಲೋಲಗೊಳಿಸುವಂತೆ ವಾನರಸೇನೆಯೆಲ್ಲವನ್ನೂ ದಿಗ್ಭ್ರಾಂತವಾಗುವಂತೆ ಮಾಡಿದನು. ||೩೧—೩೫|| ಆ ರೀತಿ ಯುದ್ಧಸನ್ನದ್ಧನಾಗಿ ಬರುತ್ತಿರುವವನೂ, ಅತ್ಯಂತ ಪ್ರಕಾಶಮಾನವಾದ ಬಾಣಗಳೊಡನೆಯೂ, ಧನುಸ್ಸಿನೊಡನೆಯೂ ಕೂಡಿದವನೂ, ರಾಕ್ಷಸನಾಥನೂ ಆದ ರಾವಣಾಸುರನನ್ನು ನೋಡಿ ವಾನರಾಧಿಪತಿಯಾದ ಸುಗ್ರೀವನು ಬಹು ದೊಡ್ಡದಾದೊಂದು ಪರ್ವತವನ್ನು ಆಯುಧವನ್ನಾಗಿ ಗ್ರಹಿಸಿ ಅವನನ್ನು ಅಟ್ಟಿಬಂದನು. ಆ ಸುಗ್ರೀವನು ನಾನಾವಿಧಗಳಾದ ವೃಕ್ಷಗಳೊಡಗೂಡಿದ ಆ ಪರ್ವತಶಿಖರವನ್ನು ಆ ರಾವಣನ ಮೇಲೆಸೆವನು. ಹೀಗೆ ಸುಗ್ರೀವನಾ

ರಾಯ । ತಮಾಪತಂತಂ ಸಹಸಾ ಸಮೀಕ್ಷ್ಯ ಬಿಭೇದ ಬಾಣೈಸ್ತಪನೀಯಪುಂಖೈಃ ||೩೭|| ತಸ್ಮಿನ್ ಪ್ರವೃದ್ಧೋತ್ತಮಸಾನುವೃಕ್ಷೇ ಶೃಂಗೇ ವಿಕೀರ್ಣೇ ಪತಿತೇ ಪೃಥಿವ್ಯಾಂ । ಮಹಾಹಿಕಲ್ಪಂ ಶರಮಂತಕಾಭಂ ಸಮಾದದೇ ರಾಕ್ಷಸಲೋಕನಾಥಃ || ೩೮ || ಸತಂ ಗೃಹೀತ್ವಾಽನಿಲತುಲ್ಯವೇಗಂ ಸವಿಸ್ಫುಲಿಂಗಜ್ವಲನಪ್ರಕಾಶಂ । ಬಾಣಂ ಮಹೇಂದ್ರಾಶನಿತುಲ್ಯವೇಗಂ ಚಿಕ್ಷೇಪ ಸುಗ್ರೀವವಧಾಯ ರುಷ್ಟಃ || ೩೯ || ಸ ಸಾಯಕೋ ರಾವಣಬಾಹುಮುಕ್ತಃ ಶಕ್ರಾಶನಿಪ್ರಖ್ಯವಪುಃ ಶಿತಾಗ್ರಃ । ಸುಗ್ರೀವಮಾಸಾದ್ಯ ಬಿಭೇದ ವೇಗಾದ್ಗುಹೇರಿತಾ ಕ್ರೌಂಚಮಿವೋಗ್ರಶಕ್ತಿಃ || ೪೦ || ಸಸಾಯಕಾರ್ತೋ ವಿಪರೀತ

ಚಿಕ್ಷೇಪ - ಎತ್ತಿಹಾಕಿದನು, ಆಪತಂತಂ - ಬರುತ್ತಿರುವ, ತಂ - ಆ ಪರ್ವತಶಿಖರವನ್ನು, ಸಮೀಕ್ಷ್ಯ - ಕಂಡು, ಸಹಸಾ - ಜಾಗ್ರತೆಯಾಗಿ, ತಪನೀಯಪುಂಖೈಃ - ಭಂಗಾರದ ಕೊಂಕಿಗಳುಳ್ಳ, ಬಾಣೈಃ - ಬಾಣಗಳಿಂದ, ಬಿಭೇದ - ಭೇದಿಸಿದನು. || ೩೭ || ಪ್ರವೃ....ಕ್ಷೇ - ವೃದ್ಧಿ ಹೊಂದಿದ ಉತ್ತಮವಾದ ಜರಿಗಳೂ, ವೃಕ್ಷಗಳೂ ಉಳ್ಳ, ತಸ್ಮಿಂಶೃಂಗೇ - ಆ ಶಿಖರವು, ವಿಕೀರ್ಣೇ - ಪುಡಿಯಾಗಿ, ಪೃಥಿವ್ಯಾಂ- ಭೂಮಿಯಲ್ಲಿ, ಪತಿತೇ - ಬಿದ್ದುದಾಗಲು, ರಾಕ್ಷ....ಥಃ - ರಾಕ್ಷಸರಿಗೆ ಅಧಿಪತಿಯಾದ ರಾವಣನು, ಮಹಾಹಿಕಲ್ಪಂ - ದೊಡ್ಡ ಹಾವಿಗೆ ಸಮಾನವಾದ, ಅಂತಕಾಭಂ - ಯಮನಂತೆ ಬೆಳಗುವ, ಶರಂ - ಬಾಣವನ್ನು, ಸಮಾದದೇ - ಸಂಧಾನ ಮಾಡಿದನು. || ೩೮ || ಸಃ - ಆ ರಾವಣನು, ರುಷ್ಟಃ - ಕುಪಿತನಾಗಿ, ಅಶ....ಗಂ - ವಾಯುವೇಗವುಳ್ಳ, ಸವಿ....ಶಂ - ಕಿಡಿಗಳಿಂದ ಕೂಡಿದ ಅಗ್ನಿಯಂತೆ ಹೊಳೆವ, ಮಹೇಂ....ಗಂ - ಇಂದ್ರನ ವಜ್ರಾಯುಧಕ್ಕೆ ಸಮಾನವಾದ ವೇಗವುಳ್ಳ, ತಂಬಾಣಂ - ಆ ಸರಳನ್ನು, ಗೃಹೀತ್ವಾ - ತೆಗೆದು, ಸುಗ್ರೀ.....ಯ - ಸುಗ್ರೀವನ ಸಂಹಾರಕ್ಕಾಗಿ, ಚಿಕ್ಷೇಪ - ಎಸೆದನು. || ೩೯ || ರಾವ....ಕ್ತಃ - ರಾವಣನ ಭುಜಗಳಿಂದ ಬಿಡಲ್ಪಟ್ಟ, ಶಕ್ರಾ....ಪುಃ - ಇಂದ್ರನ ವಜ್ರಾಯುಧದಂತೆ ಬೆಳಗುವ ಆಕಾರವುಳ್ಳ, ಶಿತಾಗ್ರಃ - ಹದವಾದ ತುದಿಯುಳ್ಳ, ಸಸಾಯಕಃ - ಆ ಬಾಣವು, ಗುಹೇರಿತಾ - ಕುಮಾರಸ್ವಾಮಿಯಿಂದ ಪ್ರೇರಿಸಲ್ಪಟ್ಟ, ಉಗ್ರಶಕ್ತಿಃ - ಭಯಂಕರವಾದ ಶಕ್ತ್ಯಾಯುಧವು, ಕ್ರೌಂಚಮಿವ - ಕ್ರೌಂಚಪರ್ವತವನ್ನಂತೆ, ಸುಗ್ರೀವಂ - ಸುಗ್ರೀವನನ್ನು, ಆಸಾದ್ಯ- ಹೊಂದಿ, ವೇಗಾತ್ - ವೇಗದಿಂದ, ಬಿಭೇದ - ಭೇದಿಸಿದನು. ||೪೦|| ವೀರಃ - ಶೂರನಾದ, ಸಃ - ಆ

ಪರ್ವತಶಿಖರವನ್ನೆಸೆಯುತ್ತಲೇ ಅದು ತನಗಭಿಮುಖವಾಗಿ ಬರುತ್ತಿರುವುದನ್ನು ಕಂಡು ರಾವಣಾಸುರನು ಕೂಡಲೇ ಸುವರ್ಣಪುಂಖಿತಗಳಾದ ಬಾಣಗಳಿಂದ ಅದನ್ನು ಭೇದಿಸಿದನು. ಆಗ ರಾವಣಾಸುರನಿಂದ ಭೇದಿಸಲ್ಪಟ್ಟದ್ದೂ, ಅತ್ಯುನ್ನತ ವೃಕ್ಷಗಳೊಡಗೂಡಿರುವುದೂ, ಜರಿಗಳಿಂದ ಶೋಭಿಸುತ್ತಿರುವುದೂ ಆದ ಆ ಪರ್ವತಶಿಖರವು ನುಚ್ಚುನೂರಿಯಾಗಿ ಭೂಮಿಗೆ ಬಿದ್ದಿತು. ಆ ತರುವಾಯ ಮಹಾ ಪರಾಕ್ರಮಿಯಾದ ರಾವಣಾಸುರನು ಸರ್ಪಗಳಿಗೆ ಸಮಾನವಾದುದೂ, ಯಮೋಪಮವಾದುದೂ, ವಾಯುವೇಗಕ್ಕೆ ಸಮಾನವಾದ ವೇಗವುಳ್ಳುದೂ, ಹೊಗೆಯಿಲ್ಲದ ಬೆಂಕಿಯಂತೆ ಬೆಳಗುತ್ತಿರುವುದೂ, ದೇವೇಂದ್ರನ ವಜ್ರಾಯುಧಕ್ಕೆ ಸಮಾನವಾದುದೂ ಆದ ಒಂದು ಶ್ರೇಷ್ಠಬಾಣವನ್ನು ಸಂಧಾನಮಾಡಿ ಸುಗ್ರೀವನ ವಕ್ಷಸ್ಥಳಕ್ಕೆಸೆದನು. ಆ ಬಾಣವಾದರೋ ಸುಗ್ರೀವನೆದೆಯಲ್ಲಿ ರಂಧ್ರಮಾಡಿ ಕುಮಾರಸ್ವಾಮಿಯಿಂದ ಪ್ರಯೋಗಿಸಲ್ಪಟ್ಟ ಬಾಣವು ಕ್ರೌಂಚಪರ್ವತವನ್ನು ಭೇದಿಸಿಕೊಂಡು ಹೊರಹೋಗುವಂತೆ ಹೊರಬಂದಿತು. || ೩೭-೪೦ || ಆಗ ಮಹಾ ವೀರನಾದ ಆ ಸುಗ್ರೀವನು ರಾವಣಾ

ಚೇತಾಃ ಕೂಜನ್ ಪೃಥಿವ್ಯಾಂ ನಿಪಪಾತ ವೀರಃ । ತಂ ಪ್ರೇಕ್ಷ್ಯ ಭೂಮೌ ಪತಿತಂ ವಿಸಂಜ್ಞಂ ನೇದುಃ ಪ್ರಹೃಷ್ಟಾ ಯುಧಿ ಯಾತುಧಾನಾಃ ॥ ೪೧ ॥ ತತೋ ಗವಾಕ್ಷೋ ಗವಯಸ್ಸುದಂಷ್ಟ್ರಸ್ತಥರ್ಷಭೋ ಜ್ಯೋತಿಮುಖೋ ನಭಶ್ಚ । ಶೈಲಾನ್ಸಮುದ್ಯಮ್ಯ ವಿವೃದ್ಧಕಾಯಾಃ ಪ್ರದುದ್ರುವುಸ್ತಂ ಪ್ರತಿ ರಾಕ್ಷಸೇಂದ್ರಂ ॥೪೨॥ ತೇಷಾಂ ಪ್ರಹಾರಾನ್ ಸ ಚಕಾರ ಮೋಘಾನ್ ರಕ್ಷೋಧಿಪೋ ಬಾಣಗಣೈಃ ಶಿತಾಗ್ರೈಃ । ತಾನ್ವಾನರೇಂದ್ರಾನಪಿ ಬಾಣಜಾಲೈರ್ಬಿಭೇದ ಜಾಂಬೂನದಚಿತ್ರಪುಂಖೈಃ ॥ ೪೩ ॥ ತೇ ವಾನರೇಂದ್ರಾಸ್ತ್ರಿದಶಾರಿಬಾಣೈರ್ಭಿನ್ನಾ ನಿಪೇತುರ್ಭುವಿ ಭೀಮಕಾಯಾಃ । ತತಸ್ತು ತದ್ವಾನರಸೈನ್ಯ

ಸುಗ್ರೀವನು, ಸಾಯಕಾರ್ತಃ ಬಾಣಪ್ರಹಾರದಿಂದ ದೀನನಾಗಿ, ವಿಪರೀತಚೇತಾಃ - ವ್ಯತ್ಯಸ್ತವಾದ ಚೈತನ್ಯವುಳ್ಳವನಾಗಿ, ಕೂಜನ್ - ಕೂಗುತ್ತ, ಪೃಥಿವ್ಯಾಂ - ನೆಲದಲ್ಲಿ, ನಿಪಪಾತ - ಬಿದ್ದನು. ಭೂಮೌ - ನೆಲದಲ್ಲಿ, ಯುಧಿ - ಯುದ್ಧದಲ್ಲಿ, ಪತಿತಂ - ಬಿದ್ದಿರುವ, ವಿಸಂಜ್ಞಂ - ಪ್ರಜ್ಞಾಹೀನನಾದ, ತಂ - ಆ ಸುಗ್ರೀವನನ್ನು, ಪ್ರೇಕ್ಷ್ಯ - ಕಂಡು, ಯಾತುಧಾನಾಃ - ರಕ್ಕಸರು, ಪ್ರಹೃಷ್ಟಾಃ - ಸಂತೋಷಗೊಂಡವರಾಗಿ, ನೇದುಃ - ಕೋಲಾಹಲಧ್ವನಿ ಮಾಡಿದರು. ॥ ೪೧ ॥ ತತಃ - ಬಳಿಕ, ಗವಾಕ್ಷಃ - ಗವಾಕ್ಷನೂ, ಗವಯಶ್ಚ - ಗವಯನೂ, ಸುದಂಷ್ಟ್ರಃ - ಸುದಂಷ್ಟ್ರನೂ, ತಥಾ - ಹಾಗೆಯೇ, ಋಷಭಃ-ಋಷಭನೂ, ಜ್ಯೋತಿಮುಖಃ-ಜ್ಯೋತಿಮುಖನೂ, ನಭಶ್ಚ-ನಭನೂ, ವಿವೃದ್ಧಕಾಯಾಃ-ಪ್ರವೃದ್ಧಮಾನವಾದ ಶರೀರಗಳುಳ್ಳ, ಶೈಲಾನ್ - ಪರ್ವತಗಳನ್ನು, ಸಮುದ್ಯಮ್ಯ - ಎತ್ತಿಕೊಂಡು, ತಂರಾಕ್ಷಸೇಂದ್ರಂಪ್ರತಿ - ಆ ರಾವಣನನ್ನು ಕುರಿತು, ಪ್ರದುದ್ರುವುಃ - ಓಡಿಬಂದರು. ॥ ೪೨ ॥ ಸರಕ್ಷೋಧಿಪಃ - ಆ ರಾವಣನು, ತೇಷಾಂ - ಆ ವಾನರರ, ಪ್ರಹಾರಾನ್-ಪ್ರಹಾರಗಳನ್ನು, ಶಿತಾಗ್ರೈಃ-ತೀಕ್ಷ್ಣವಾದ ಕೊನೆಗಳುಳ್ಳ, ಬಾಣಗಣೈಃ - ಬಾಣಸಮೂಹಗಳಿಂದ, ಮೋಘಾನ್ - ವ್ಯರ್ಥಗಳನ್ನಾಗಿ, ಚಕಾರ - ಮಾಡಿದನು, ಜಾಂಬೂ... ಖೈಃ - ಭಂಗಾರದಿಂದ ಆಶ್ಚರ್ಯಕರವಾದ ಕೊನೆಗಳುಳ್ಳ, ಬಾಣಜಾಲೈಃ - ಬಾಣಸಮೂಹಗಳಿಂದ, ತಾನ್ವಾನರೇಂದ್ರಾನಪಿ - ಆ ವಾನರಶ್ರೇಷ್ಠರನ್ನೂ ಕೂಡ, ಬಿಭೇದ - ಭೇದಿಸಿದನು. ॥೪೩॥ ಭೀಮಕಾಯಾಃ - ಭಯಂಕರ ಶರೀರಗಳುಳ್ಳ, ತೇವಾನರೇಂದ್ರಾಃ - ಆ ವಾನರೋತ್ತಮರು, ತ್ರಿದ....ಣೈಃ - ದೇವಶತ್ರುವಾದ ರಾವಣನ ಬಾಣಗಳಿಂದ, ಭಿನ್ನಾಃ - ಭೇದಿಸಲ್ಪಟ್ಟವರಾಗಿ, ಭುವಿ - ಭೂಮಿಯಲ್ಲಿ, ನಿಪೇತುಃ - ಬಿದ್ದರು, ತತಸ್ತು - ಆ ಬಳಿಕಾದರೆ, ಸಃ - ಆ

ಸುರನಿಂದ ಪ್ರಯೋಗಿಸಲ್ಪಟ್ಟ ಬಾಣದಿಂದ ಪೀಡಿತನಾಗಿ ವಿಪರೀತವಾದ ಚಿತ್ತವುಳ್ಳವನಾಗಿ ನೆಲಕ್ಕುರಿಳಿದನು. ಈ ರೀತಿ ಪ್ರಜ್ಞೆತಪ್ಪಿ ಭೂಮಿಗೆ ಬಿದ್ದ ಸುಗ್ರೀವನನ್ನು ನೋಡಿ ರಾಕ್ಷಸವೀರರೆಲ್ಲರೂ ಪರಮಾನಂದಭರಿತರಾದರು. ಆಗ ಗವಾಕ್ಷ, ಗವಯ, ಸುದಂಷ್ಟ್ರ, ಜ್ಯೋತಿಮುಖ, ನಭ ಇವರೇ ಮೊದಲಾದ ವಾನರಯೂಥನಾಥರೆಲ್ಲರೂ ಪರ್ವತಗಳನ್ನು ಆಯುಧಗಳನ್ನಾಗಿ ಧರಿಸಿ ಅತ್ಯಧಿಕವಾಗಿ ಉಬ್ಬುತ್ತಿರುವ ಶರೀರಗಳುಳ್ಳವರಾಗಿ ರಾಕ್ಷಸಶ್ರೇಷ್ಠನಾದ ರಾವಣನಿಗೆದುರಾಗಿ ಓಡಿದರು. ಆಗ ರಾಕ್ಷಸೇಶ್ವರನಾದ ರಾವಣಾಸುರನು ಬಹು ತೀಕ್ಷ್ಣಗಳಾದ ಅಗ್ರಭಾಗಗಳುಳ್ಳ ಬಾಣಸಮುದಾಯಗಳಿಂದ ಆ ವಾನರರು ಹಿಡಿದಿದ್ದ ಆಯುಧಗಳನ್ನೆಲ್ಲವನ್ನೂ ನಿಷ್ಫಲಗಳನ್ನಾಗಿ ಮಾಡಿದನು ; ಸ್ವರ್ಣಪುಂಖಗಳಿಂದ ಚಿತ್ರತರಗಳಾದ ಬಾಣಗಳಿಂದ ಆ ವಾನರರೆಲ್ಲರನ್ನೂ ಓಡಿಸಿದನು ; ಅನೇಕರನ್ನು ಬಾಣಗಳಿಂದ ಭೇದಿಸಿದನು. ಹೀಗೆ ರಾವಣನ ಬಾಣಗಳಿಂದ ಭೇದಿಸಲ್ಪಟ್ಟವರೂ, ಮಹಾ ಶರೀರಿಗಳೂ ಆದ ಆ ವಾನರ

ಮುಗ್ರಂ ಪ್ರಚ್ಛಾದಯಾಮಾಸ ಸ ಬಾಣಜಾಲೈಃ || ೪೪ || ತೇ ವಧ್ಯಮಾನಾಃ ಪತಿತಾಃ
ಪ್ರವೀರಾ ನಾನದ್ಯಮಾನಾ ಭಯಶಲ್ಯವಿದ್ಧಾಃ | ಶಾಖಾಮೃಗಾ ರಾವಣಸಾಯಕಾರ್ತಾ
ಜಗ್ಮುಃ ಶರಣ್ಯಂ ಶರಣಂ ಸ್ಮ ರಾಮಂ || ೪೫ || ತತೋ ಮಹಾತ್ಮಾ ಸಧನುರ್ಧನುಷ್ಮಾ
ನಾದಾಯ ರಾಮಸ್ಸಹಸಾ ಜಗಾಮ | † ತಂ ಲಕ್ಷ್ಮಣಃ ಪ್ರಾಂಜಲಿರಭ್ಯುಪೇತ್ಯ ಉವಾಚ

---

ರಾವಣನು, ಉಗ್ರಂ - ಭಯಂಕರವಾದ, ತದ್ವಾ....ನ್ಯಂ - ಆ ಕಪಿಸೈನ್ಯವನ್ನು, ಬಾಣಜಾಲೈಃ - ಸರಳುಗಳ ತಂಡಗಳಿಂದ, ಪ್ರಚ್ಛಾ....ಸ - ಮುಚ್ಚಿಸಿದನು. ||೪೪|| ವಧ್ಯಮಾನಾಃ - ಹೊಡೆಯಲ್ಪಡುತ್ತಲಿರುವ, ಭಯಶಲ್ಯವಿದ್ಧಾಃ - ಭೀತಿಯೆಂಬ ಮುಳ್ಳಿನಿಂದ ತಿವಿಯಲ್ಪಟ್ಟವರಾಗಿ, ನಾನದ್ಯಮಾನಾಃ - ದೀನಧ್ವನಿಗೈಯುತ್ತಿರುವ, ಪ್ರವೀರಾಃ - ಶೂರರಾದ, ತೇ - ಆ ಕಪಿಯೂಥಪತಿಗಳು, ಪತಿತಾಃ - ಬಿದ್ದರು, ಶಾಖಾಮೃಗಾಃ - ವಾನರರು, ರಾವ....ರ್ತಾಃ - ರಾವಣನ ಬಾಣಗಳಿಂದ ಪೀಡಿತರಾಗಿ, ಶರಣ್ಯಂ - ರಕ್ಷಕನಾದ, ರಾಮಂ - ಶ್ರೀರಾಮನನ್ನು, ಶರಣ್ಯಂ - ರಕ್ಷಕನನ್ನಾಗಿ, ಜಗ್ಮುಃ - ಹೊಂದಿದರು. || ೪೫ || ತತಃ - ಬಳಿಕ, ಮಹಾತ್ಮಾ - ಮಹಾ ಧೈರ್ಯವಂತನಾದ, ಧನುಷ್ಮಾನ್ - ಧನುರ್ಧಾರಿಯಾದ, ಸರಾಮಃ - ಆ ಶ್ರೀರಾಮನು, ಸಹಸಾ - ಜಾಗ್ರತೆಯಾಗಿ, ಧನುಃ - ಬಿಲ್ಲನ್ನು, ಆದಾಯ - ತೆಗದುಕೊಂಡು, ಜಗಾಮ - ಬಂದನು, ಲಕ್ಷ್ಮಣಃ - ಲಕ್ಷ್ಮಣನು, ಪ್ರಾಂಜಲಿಃ - ಅಂಜಲಿಬದ್ಧನಾಗಿ, ಅಭ್ಯುಪೇತ್ಯ - ಬಂದು, ತಂ - ಆ ಶ್ರೀರಾಮನನ್ನು ಕುರಿತು, ಪರ....ರ್ಥ್ಯಂ -

---

ರೆಲ್ಲರೂ ನೆಲಕ್ಕುರುಳಿ ಮೂರ್ಛಿತರಾದರು. ಈ ಪ್ರಕಾರವಾಗಿ ರಾವಣಾಸುರನಿಂದ ಹೊಡೆಯಲ್ಪಟ್ಟು ದಿಕ್ಕಿಲ್ಲದೆ ಕೂಗಿಡುತ್ತಿದ್ದ ಆ ವಾನರರೆಲ್ಲರೂ ರಾವಣನ ಬಾಣಗಳಿಂದ ಬಾಧೆಪಟ್ಟು "ಕಾಪಾಡು ಕಾಪಾಡೆ"ಂದು ಕೂಗುತ್ತ ಶ್ರೀರಾಮಮೂರ್ತಿಯ ಬಳಿಗೈದಿದರು. || ೪೧–೪೫ || ಆಗ ಮಹಾನುಭಾವನಾದ ಶ್ರೀರಾಮಮೂರ್ತಿಯು ಆರ್ತರಾದ ಆ ವಾನರರ ಕೂಗನ್ನು ಕೇಳಿ ಕೂಡಲೇ ಧನುರ್ಬಾಣಗಳನ್ನು ಧರಿಸಿ ಬಹು ಜಾಗ್ರತೆಯಾಗಿ ಹೊರಟನು. ಆಗ ರಾಮಾನುಜನಾದ ಲಕ್ಷ್ಮಣಸ್ವಾಮಿಯು ಕೈಗಳನ್ನು ಜೋಡಿಸಿಕೊಂಡು ಶ್ರೀರಾಮಮೂರ್ತಿಯ ಬಳಿಗೈದಿ ಪರಮಾರ್ಥಯುಕ್ತವಾದ ಮಾತು

---

† ಈ ಶ್ಲೋಕದಲ್ಲಿನ ವಿಶೇಷಾರ್ಥವು:—ವಾನರರೆಲ್ಲರೂ, "ಕಾಪಾಡು, ಕಾಪಾಡೆಂ"ದು ಶ್ರೀರಾಮನನ್ನು ಕುರಿತು
ಕೂಗಿಕೊಂಡು ಓಡಿಬಂದರಷ್ಟೆ. ಇಷ್ಟರಿಂದಲೇ ಶರಣ್ಯನಲ್ಲಿ ಶರಣಾಗತಿಯನ್ನು ಪ್ರದರ್ಶಿಸಿದಂತಾಯಿತು. ಈಗ ಶರಣ್ಯ
ನಾದ ಶ್ರೀರಾಮಮೂರ್ತಿಯ ಕೃತ್ಯವನ್ನು ಈ ಶ್ಲೋಕದಿಂದ ಆದಿಕವಿಯು ನಿರೂಪಿಸುತ್ತಾನೆ. "ತತಃ - ಪ್ರಪತ್ತಿಯೂ
ಸಹ ಆರ್ತರಾದ ಆ ವಾನರರ ಪ್ರಪತ್ತಿಯಾದುದರಿಂದ ಅದಕ್ಕೆ ಸದ್ಯಃ ಫಲವೆಂಬುದನ್ನು ತೋರಿಸಿಕೊಡಲೋಸುಗ (ತತಃ-
ಪ್ರಪತ್ತ್ಯುತ್ತರಕ್ಷಣದಲ್ಲಿ) ಎಂದು ಪ್ರಯುಕ್ತವಾಗಿರುವುದು. "ಮಹಾತ್ಮಾ"—ಶರಣಾಗತಿಯ ತಾರತಮ್ಯವನ್ನರಿತಿರುವವನು,
ಧನುಷ್ಮಾನ್—ಉತ್ತಮ ಧಾನುಷ್ಕನಾದವನು—ಏತೇನ ಶರಣಾಗತರಿಗೆ ಬಂದಿರುವ ಆಪತ್ತನ್ನು ಕ್ಷಣಮಾತ್ರದಲ್ಲಿ ನಿವಾರಿಸು
ವವನಾದ, (ಧನುರ್ಯುದ್ಧ ಸಮರ್ಥನು) ಸಹಸಾ - ಲಕ್ಷ್ಮಣನು ತಾನು ಯುದ್ಧಕ್ಕಾಗಿ ಹೊರಡುವೆನೆಂದು ಹೇಳುವುದಕ್ಕೆ
ಮೊದಲೇ (ಜಾಗ್ರತೆಯಾಗಿ) ಎಂದರೆ ಆರ್ತರನ್ನು ಬಹುಜಾಗ್ರತೆಯಾಗಿ ಸಂರಕ್ಷಿಸಬೇಕೆಂಬ ತ್ವರೆಯಿಂದ (ಮುನ್ನುಗ್ಗಿದನು.)
ತಂ - ಆರ್ತರಕ್ಷಣ ತ್ವರೆಯಿಂದ ಹೊರಟಿರುವ ಶ್ರೀರಾಮನನ್ನು (ಅಣ್ಣನನ್ನು) ಲಕ್ಷ್ಮಣಃ - ಕೈಂಕರ್ಯ ಲಕ್ಷ್ಮೀಸಂಪನ್ನ
ನಾದ ಆ ಲಕ್ಷ್ಮಣನು, ಹೋಗದಿರುವಂತೆ ತಡೆಯಲು, ಪ್ರಾಂಜಲಿಃ - ಅಂಜಲಿಬದ್ಧನಾಗಿ, ಅಭ್ಯುಪೇತ್ಯ - ಹೀಗೆಂದಿರುವುದ
ರಿಂದ ಶ್ರೀರಾಮನು ತನ್ನ ಪಾರ್ಶ್ವದಲ್ಲಿ ಲಕ್ಷ್ಮಣನಿರುವುದನ್ನೂ ಗಮನಿಸದೆ ಹೊರಟುದಾಗಿ ತಿಳಿದುಬರುತ್ತದೆ. ಪರಮಾರ್ಥ
ಯುಕ್ತಂ - ಉಪಚಾರಕ್ಕಾಗಿಯಲ್ಲ; ಆದರೆ ನಿಜವಾದುದು—ಅಥವಾ ಶೇಷಿರೂಪನಾಗಿರುವ ಭಗವಂತನ ವಿಷಯದಲ್ಲಿ
ಶೇಷಭೂತನಾಗಿರುವವನಿಗೆ ಪರಮ ಪ್ರಯೋಜನಕರವಾದ ಮಾತನ್ನು ಹೇಳಿದನು. (ಗೋವಿಂದರಾಜರು)

**ವಾಕ್ಯಂ ಪರಮಾರ್ಥಯುಕ್ತಂ ॥ ೪೬ ॥ ¶ " ಕಾಮಮಾರ್ಯಸ್ಸುಪರ್ಯಾಪ್ತೋ ವಧಾಯಾಽಸ್ಯ ದುರಾತ್ಮನಃ । ವಿಧಮಿಷ್ಯಾಮ್ಯಹಂ ನೀಚಮನುಜಾನೀಹಿ ಮಾಂ ಪ್ರಭೋ! " ॥ ೪೭ ॥ ತಮಬ್ರವೀನ್ಮಹಾತೇಜಾ ರಾಮಸ್ಸತ್ಯಪರಾಕ್ರಮಃ । " ಗಚ್ಛ ಯತ್ನಪರಶ್ಚಾಪಿ ಭವ ಲಕ್ಷ್ಮಣ! ಸಂಯುಗೇ ॥೪೮॥ ರಾವಣೋಹಿ ಮಹಾವೀರ್ಯೋ ರಣೇಽದ್ಭುತಪರಾಕ್ರಮಃ । ತ್ರೈಲೋಕ್ಯೇನಾಪಿ ಸಂಕ್ರುದ್ಧೋ ದುಷ್ಪ್ರಸಹ್ಯೋ ನ ಸಂಶಯಃ ॥೪೯॥ ತಸ್ಯ ಚ್ಛಿದ್ರಾಣಿ ಮಾರ್ಗಸ್ವ ಸ್ವಚ್ಛಿದ್ರಾಣಿ ಚ ಲಕ್ಷಯ । ಚಕ್ಷುಷಾ**

ವಾಸ್ತವಿಕಾರ್ಥದಿಂದ ಕೂಡಿರುವ, ವಾಕ್ಯಂ - ಮಾತನ್ನು, ಉವಾಚ - **ಹೇಳಿದನು.** ॥ ೪೬ ॥ **ಹೇ ಪ್ರಭೋ** - ಎಲೈ ಸ್ವಾಮಿಯೇ, **ಆರ್ಯಃ** - ಪೂಜ್ಯನಾದ, ತ್ವಂ - ನೀನು, ದುರಾತ್ಮಃ - ದುರ್ಬುದ್ಧಿಯುಳ್ಳ, **ಅಸ್ಯ**-ಈ ರಾವಣನ, ವಧಾಯ-ಸಂಹಾರಕ್ಕಾಗಿ, ಕಾಮಂ-ಬಹಳವಾಗಿ, ಸುಪರ್ಯಾಪ್ತಃ-ಸಮರ್ಥನೇ ಸರಿ, **ಅಥಾಪಿ** - ಹಾಗಾದರೂ, ಮಾಂ - ನನ್ನನ್ನು, ಅನುಜಾನೀಹಿ - ಅಜ್ಞಾಪಿಸು, ನೀಚಂ - ನೀಚನಾದ ಇವನನ್ನು, ವಿಧಮಿಷ್ಯಾಮಿ - ಸಂಹರಿಸುವೆನು. ॥ ೪೭ ॥ ಮಹಾತೇಜಾಃ - ಬಹು ತೇಜೋವಂತನಾದ, ಸತ್ಯಪರಾಕ್ರಮಃ - ಸಫಲವಾದ ಪರಾಕ್ರಮವುಳ್ಳ, ರಾಮಃ-ಶ್ರೀರಾಮನು, **ತಂ** - ಆ ಲಕ್ಷ್ಮಣನನ್ನು ಕುರಿತು, ಅಬ್ರವೀತ್ - ನುಡಿದನು. ॥ ೪೮ ॥ ಹೇ ಲಕ್ಷ್ಮಣ - ಎಲೈ **ಲಕ್ಷ್ಮಣನೇ,** ಹಿ - ಯಾವ ಕಾರಣದಿಂದ, ರಣೇ - ಕಾಳಗದಲ್ಲಿ, ಮಹಾವೀರ್ಯಃ - ಮಹಾ ಸಾಮರ್ಥ್ಯವಂತನಾದ, ರಾವಣಃ - ರಾವಣನು, ಅದ್ಭು....ಮಃ - ಆಶ್ಚರ್ಯಕರವಾದ ಪರಾಕ್ರಮವುಳ್ಳವನಾದ **ಕಾರಣ,** ಸಂಕ್ರುದ್ಧಃ - ಕುಪಿತನಾದರೆ, ತ್ರೈಲೋಕ್ಯೇನಾಪಿ - ಲೋಕತ್ರಯದಿಂದಲೂ, ದುಷ್ಪ್ರಸಹ್ಯಃ-ಸಹಿಸಲಸಾಧ್ಯನು, ನಸಂಶಯಃ - ಸಂದೇಹವಿಲ್ಲ, ತತ್ - ಆ ಕಾರಣದಿಂದ, ಸಂಯುಗೇ - ಕಾಳಗದಲ್ಲಿ, ಯತ್ನಪರಶ್ಚ - ಪ್ರಯತ್ನದಲ್ಲಿ ಆಸಕ್ತನು, ಭವ - ಆಗು, ಗಚ್ಛ - ಹೋಗು. ॥ ೪೯ ॥ **ತಸ್ಯ** - ಆ ರಾವಣನ, ಛಿದ್ರಾಣಿ - ಚ್ಛಿದ್ರಗಳನ್ನು, ಮಾರ್ಗಸ್ವ - ಹುಡುಕು, ಸ್ವಚ್ಛಿದ್ರಾಣಿ -

ಗಳನ್ನು ಹೇಳುವವನಾಗಿ, " ರಘುಕುಲೋತ್ತಮಾ ! ಪೂಜ್ಯನಾದ ನೀನು ರಾವಣಾಸುರನನ್ನು ಸಂಹರಿಸಲು ಸರ್ವಥಾ ಸಮರ್ಥನಾಗಿಯೇ ಇರುವೆ. ಆದರೂ ದುರ್ಮಾರ್ಗನಾದ ಈ ರಾವಣಾಸುರನನ್ನು ನಾನು ಕೊಲ್ಲಬೇಕೆಂದು ನನಗೆ ಬಯಕೆಯಿರುವುದು. ಆದುದರಿಂದ ನಾನು ಇವನನ್ನು ಕೊಲ್ಲುವೆನು. ನನಗೆ ಅನುಜ್ಞೆಯನ್ನು ಕೊಡು " ಎಂದು ಹೇಳಿದನು. ಈ ಮಾತನ್ನು ಕೇಳಿ, ಮಹಾ ತೇಜಸ್ವಿಯೂ, ಸತ್ಯಪರಾಕ್ರಮಿಯೂ ಆದ ಶ್ರೀರಾಮಮೂರ್ತಿಯು ಲಕ್ಷ್ಮಣನನ್ನು ಕುರಿತು, " ವತ್ಸ ; ಲಕ್ಷ್ಮಣ! ನಿನಗಂತಹ ಅಭಿಲಾಷೆಯಿದ್ದರೆ ಹೋಗು. ಯುದ್ಧದಲ್ಲಿ ಅಧಿಕ ಪ್ರಯತ್ನವನ್ನೇ ಮಾಡುವವನಾಗು. ವತ್ಸ! ಈ ರಾವಣಾಸುರನು ಮಹಾ ವೀರ್ಯ ಸಂಪನ್ನನಾದವನು ; ಅದ್ಭುತವಾದ ಪರಾಕ್ರಮವುಳ್ಳವನು ; ಮೂರುಲೋಕದವರೂ ಒಂದುಗೂಡಿ ಬಂದರೂ ಕ್ರುದ್ಧನಾದ ಇವನನ್ನು ಸಂಹರಿಸಲಾರರು. ಯುದ್ಧಸಮಯದಲ್ಲಿ ರಾವಣಾಸುರನ ಛಿದ್ರಗಳನ್ನೂ, ನಿನ್ನಲ್ಲಿರುವ ಛಿದ್ರಗಳನ್ನೂ ಚೆನ್ನಾಗಿ ತಿಳಿಯುವವನಾಗು.

¶ ಇಲ್ಲಿ ಲಕ್ಷ್ಮಣನು ತಾನು ಶೇಷಿಭೂತನಾದ ಶ್ರೀರಾಮನಿಗೆ ಶಷಭೂತನಾದ ಅನುಜನಾಗಿರುವುದರಿಂದ ತಾನೇ ಯುದ್ಧಕ್ಕೆ ಸ್ವತಂತ್ರಿಸಿ ಹೊರಡದೆ ಆತನ ಆಜ್ಞೆಯನ್ನು ಪಡೆಯುತ್ತಾನೆ. ಅಲ್ಲದೆ ಧರ್ಮಜ್ಞನೂ ಸದ್ಗುಣಭೂಯಿಷ್ಠನೂ ಆದ ಶ್ರೀರಾಮನು ರಾವಣನನ್ನು ವಧಿಸಲು ಸರ್ವಥಾ ಸಮರ್ಥನೇ ಆಗಿದ್ದರೂ, ನೀಚನಾದ ಇವನನ್ನು ಶ್ರೀರಾಮನು ವಧಿಸುವುದಕ್ಕಿಂತಲೂ ಆ ಕಾರ್ಯವನ್ನು ತಾನೇ ಮಾಡುವುದಾಗಿ ಲಕ್ಷ್ಮಣನು ಹೇಳುತ್ತಾನೆ (ಗೋ+ರಾ)

ಧನುಷಾ ಽತ್ಮಾದ್ರಕ್ಷಾತ್ಮಾನಂ ಸಮಾಹಿತಃ" ॥ ೫೦ ॥ ರಾಘವಸ್ಯ ವಚಃ ಶ್ರುತ್ವಾ ಪರಿಷ್ವಜ್ಯಾಽಭಿಪೂಜ್ಯ ಚ । ಅಭಿವಾದ್ಯ ತತೋ ರಾಮಂ ಯಯೌ ಸೌಮಿತ್ರಿರಾಹವಂ ॥ ೫೧ ॥ ಸ ರಾವಣಂ ವಾರಣಹಸ್ತಬಾಹುರ್ದದರ್ಶ ದೀಪ್ತೋಽದ್ಯತಭೀಮಚಾಪಂ । ಪ್ರಚ್ಛಾದಯಂತಂ ಶರವೃಷ್ಟಿಜಾಲೈಸ್ತಾನ್ವಾನರಾನ್ ಭಿನ್ನವಿಕೀರ್ಣದೇಹಾನ್ ॥ ೫೨ ॥ ತಮಾಲೋಕ್ಯ ಮಹಾತೇಜಾ ಹನುಮಾನ್ಮಾರುತಾತ್ಮಜಃ । ನಿವಾರ್ಯ ಶರಜಾಲಾನಿ ಪ್ರದುದ್ರಾವ ಸರಾವಣಂ ॥೫೩॥ ರಥಂ ತಸ್ಯ ಸಮಾಸಾದ್ಯ ಭುಜಮುದ್ಯಮ್ಯ ದಕ್ಷಿಣಂ । ತ್ರಾಸಯನ್ ರಾವಣಂ ಧೀಮಾನ್ ಹನುಮಾನ್ವಾಕ್ಯಮಬ್ರವೀತ್ ॥೫೪॥ "ದೇವದಾನವ

ನಿನ್ನ ರಂಧ್ರಗಳನ್ನು, ಲಕ್ಷಯ - ನೋಡಿಕೋ, ಸಮಾಹಿತಃ - ಸಾವಧಾನಚಿತ್ತನಾಗಿ, ಚಕ್ಷುಷಾ - ನೇತ್ರದಿಂದಲೂ, ಧನುಷಾ - ಧನುರ್ವ್ಯಾಪಾರದಿಂದಲೂ, ಯತ್ನಾತ್ - ಪ್ರಯತ್ನದಿಂದಲೂ, ಆತ್ಮಾನಂ - ನಿನ್ನನ್ನು, ರಕ್ಷ - ಸಂರಕ್ಷಣೆಮಾಡಿಕೋ. ॥ ೫೦ ॥ ತತಃ - ಬಳಿಕ, ಸೌಮಿತ್ರಿಃ - ಲಕ್ಷ್ಮಣನು, ರಾಘವಸ್ಯ - ಶ್ರೀರಾಮನ, ವಚಃ - ಮಾತನ್ನು, ಶ್ರುತ್ವಾ - ಕೇಳಿ, ಪರಿಷ್ವಜ್ಯ - ಅಪ್ಪಿಕೊಂಡು, ಅಭಿಪೂಜ್ಯಚ - ಶ್ಲಾಘನೆಯನ್ನೂ ಮಾಡಿ, ರಾಮಂ - ಶ್ರೀರಾಮನನ್ನು ಕುರಿತು, ಅಭಿವಾದ್ಯ- ನಮಸ್ಕರಿಸಿ, ಆಹವಂ - ಯುದ್ಧವನ್ನು ಕುರಿತು, ಯಯೌ - ತೆರಳಿದನು. ॥ ೫೧ ॥ ವಾರ....ಹುಃ - ಆನೆಯ ಸೊಂಡಿಲಿನಂತಹ ಭುಜಗಳುಳ್ಳ, ಸಃ - ಆ ಲಕ್ಷ್ಮಣನು, ದೀಪ್ತೋ....ಪಂ - ಜಾಜ್ವಲ್ಯಮಾನವಾಗಿ ಎತ್ತಲ್ಪಟ್ಟ ಭಯಂಕರವಾದ ಬಿಲ್ಲುಳ್ಳ, ಶರ....ಲೈಃ-ಬಾಣವರ್ಷದ ತಂಡಗಳಿಂದ, ಭಿನ್ನ....ಹಾನ್- ಭೇದಿಸಿ ಪುಡಿಯಾದ ಶರೀರಗಳುಳ್ಳ, ತಾನ್ವಾನರಾನ್-ಆ ಕಪಿಗಳನ್ನು, ಪ್ರಚ್ಛಾದಯಂತಂ-ತುಂಬಿಸುತ್ತಿರುವ, ರಾವಣಂ - ರಾವಣನನ್ನು, ದದರ್ಶ - ಕಂಡನು. ॥೫೨॥ ಮಹಾತೇಜಾಃ - ಬಹು ತೇಜೋವಂತನಾದ, ಮಾರುತಾತ್ಮಜಃ-ವಾಯುಪುತ್ರನಾದ, ಸಹನೂಮಾನ್-ಆ ಆಂಜನೇಯನು, ತಂರಾವಣಂ- ಆ ರಾವಣನನ್ನು, ಆಲೋಕ್ಯ - ಕಂಡು, ಶರಜಾಲಾನಿ - ಬಾಣಸಮೂಹಗಳನ್ನು, ನಿವಾರ್ಯ - ತಡೆದು, ಪ್ರದುದ್ರಾವ - ಓಡಿಬಂದನು. ॥ ೫೩ ॥ ಧೀಮಾನ್ - ಬುದ್ಧಿಶಾಲಿಯಾದ, ಹನುಮಾನ್ - ಆಂಜನೇಯನು, ತಸ್ಯ - ಆ ರಾವಣನ, ರಥಂ - ತೇರನ್ನು, ಸಮಾಸಾದ್ಯ - ಹೊಂದಿ, ದಕ್ಷಿಣಂಭುಜಂ- ಬಲಗೈಯನ್ನು, ಉದ್ಯಮ್ಯ - ಎತ್ತಿ, ರಾವಣಂ - ರಾವಣನನ್ನು, ತ್ರಾಸಯನ್ - ಹೆದರಿಸುವವನಾಗಿ, ವಾಕ್ಯಂ - ಮಾತನ್ನು, ಅಬ್ರವೀತ್ - ನುಡಿದನು. ॥ ೫೪ ॥ ದೇವ....ರ್ವೈಃ - ದೇವತೆಗಳಿಂದಲೂ, ದಾನವರಿಂದಲೂ, ಗಂಧರ್ವರಿಂದಲೂ, ಸಹರಾಕ್ಷಸೈಃ - ರಾಕ್ಷಸರೊಡಗೂಡಿದ, ಯಕ್ಷೈಶ್ಚ - ಯಕ್ಷ

ನಿನ್ನದೃಷ್ಟಿಯಿಂದಲೂ, ನಿನ್ನಧನುಸ್ಸಿನಿಂದಲೂ ಬಹು ಎಚ್ಚರಿಕೆಯಿಂದ ನಿನ್ನನ್ನುನೀನು ಕಾಪಾಡಿಕೊ. ಹೋಗಿಬಾ" ಎಂದನು. ॥ ೪೭- ೫೦ ॥ ಶ್ರೀರಾಮಮೂರ್ತಿಯು ಈ ಪ್ರಕಾರವಾಗಿ ನುಡಿಯಲು ಲಕ್ಷ್ಮಣನು ಪರಮಸಂತುಷ್ಟನಾಗಿ ಆತನನ್ನು ಪೂಜಿಸಿ ಆಮೇಲೆ ಆತನನ್ನಾಲಿಂಗಿಸಿಕೊಂಡು ಆ ತರುವಾಯ ಆತನಿಗೆ ಪ್ರದಕ್ಷಿಣ ನಮಸ್ಕಾರವನ್ನೂಮಾಡಿ ಯುದ್ಧಕ್ಕೆಹೊರಟನು. (ಹೀಗೆ ಲಕ್ಷ್ಮಣನು ಹೊರಟು ಬರುವುದಕ್ಕೆ ಮೊದಲು) ಮಹಾ ಬಾಹುವೂ ವಾಯುಸೂನುವೂ ಆದ ಹನುಮಂತನು ಮಹಾ ಭಯಂಕರವಾದ ಧನುಸ್ಸುಳ್ಳವನಾಗಿ ಭಯಂಕರ ಶರೀರಿಗಳಾದ ವಾನರರನ್ನು ಬಾಣಪರಂಪರೆಯಿಂದ ಪೀಡಿಸುತ್ತಿದ್ದ ಆ ರಾವಣಾಸುರನನ್ನು ನೋಡಿ ಅವನ ಬಾಣಗಳನ್ನು ತಡೆದು ಅವನನ್ನಟ್ಟಿಹೋದನು. ಹೀಗೆ ಅವನ ರಥಸಮೀಪಕ್ಕೆ ಹೋಗಿ ಬಲಗೈಮುಷ್ಟಿಯನ್ನೆತ್ತಿ ಆ ರಾವಣಾಸುರನಿಗೆ ಭಯವನ್ನುಂಟುಮಾಡುತ್ತ, "ಎಲವೋ.

ಗಂಧರ್ವೈರ್ಯಕ್ಷೈಶ್ಚ ಸಹರಾಕ್ಷಸೈಃ । ಅವಧ್ಯತ್ವಂ ತ್ವಯಾ ಪ್ರಾಪ್ತಂ ವಾನರೇಭ್ಯಸ್ತು ತೇ ಭಯಂ ॥ ೫೫ ॥ ಏಷಮೇ ದಕ್ಷಿಣೋ ಬಾಹುಃ ಪಂಚಶಾಖಸ್ಸಮುದ್ಯತಃ । ವಿಧಮಿಷ್ಯತಿ ತೇ ದೇಹಾದ್ಭೂತಾತ್ಮಾನಂ ಚಿರೋಷಿತಂ" ॥ ೫೬ ॥ ಶ್ರುತ್ವಾ ಹನುಮತೋ ವಾಕ್ಯಂ ರಾವಣೋ ಭೀಮವಿಕ್ರಮಃ । ಸಂರಕ್ತನಯನಃ ಕ್ರೋಧಾದಿದಂ ವಚನಮಬ್ರವೀತ್ ॥ ೫೭ ॥ "ಕ್ಷಿಪ್ರಂ ಪ್ರಹರ ನಿಃಶಂಕಂ ಸ್ಥಿರಾಂ ಕೀರ್ತಿಮವಾಪ್ನುಹಿ । ತತಸ್ತ್ವಾಂ ಜ್ಞಾತವಿಕ್ರಾಂತಂ ನಾಶಯಿಷ್ಯಾಮಿ ವಾನರ !" ॥೫೮॥ ರಾವಣಸ್ಯ ವಚಃ ಶ್ರುತ್ವಾ ವಾಯುಸೂನುರ್ವಚೋಽಬ್ರವೀತ್ । "ಪ್ರಹೃತಂ ಹಿ ಮಯಾ ಪೂರ್ವಮಕ್ಷಂ

ರಿಂದಲೂ, ತ್ವಯಾ - ನಿನ್ನಿಂದ, ಅವಧ್ಯತ್ವಂ - ವಧಿಸಲಸಾಧ್ಯತ್ವವು, ಪ್ರಾಪ್ತಂ - ಹೊಂದಲ್ಪಟ್ಟಿತು, ವಾನರೇಭ್ಯಶ್ಚ - ವಾನರರಿಂದ, ತೇತು - ನಿನಗಾದರೆ, ಭಯಂ - ಭೀತಿಯು. ॥೫೫॥ ಪಂಚಶಾಖಃ - ಐದು ಅಂಗುಳಿಗಳುಳ್ಳ, ಏಷಃ - ಈ, ಮೇ - ನನ್ನ, ದಕ್ಷಿಣೋಬಾಹುಃ - ಬಲಭುಜವು, ಸಮುದ್ಯತಃ- ಎತ್ತಲ್ಪಟ್ಟುದಾಗಿ, ತೇ - ನಿನ್ನ, ದೇಹಾತ್ - ಶರೀರದಿಂದ, ಚಿರೋಷಿತಂ - ಬಹುಕಾಲದಿಂದಿರುವ, ಭೂತಾತ್ಮಾನಂ - ಜೀವನನ್ನು, ವಿಧಮಿಷ್ಯತಿ - ಹೊರಡಿಸುತ್ತದೆ. ॥ ೫೬ ॥ ಹನುಮತಃ - ಆಂಜನೇಯನ, ವಾಕ್ಯಂ - ಮಾತನ್ನು, ಶ್ರುತ್ವಾ - ಕೇಳಿ, ಭೀಮವಿಕ್ರಮಃ - ಭಯಂಕರ ಪರಾಕ್ರಮವುಳ್ಳ, ರಾವಣಃ - ರಾವಣನು, ಕ್ರೋಧಾತ್ - ಕೋಪದಿಂದ, ಸಂರ....ನಃ - ಕೆಂಗಣ್ಣುಗಳುಳ್ಳವನಾಗಿ, ಇದಂವಚನಂ - ಈ ಮಾತನ್ನು, ಅಬ್ರವೀತ್ - ನುಡಿದನು. ॥ ೫೭ ॥ ಹೇ ವಾನರ - ಎಲೈ ಕಪಿಯೇ, ಕ್ಷಿಪ್ರಂ - ಜಾಗ್ರತೆಯಾಗಿ, ನಿಶ್ಶಂಕಂ - ನಿರ್ಭಯವಾಗಿ, ಪ್ರಹರ - ಹೊಡೆ, ಸ್ಥಿರಾಂ - ಶಾಶ್ವತವಾದ, ಕೀರ್ತಿಂ - ಯಶಸ್ಸನ್ನು, ಅವಾಪ್ನುಹಿ - ಹೊಂದು, ತತಃ - ಬಳಿಕ, ಜ್ಞಾತವಿಕ್ರಾಂತಂ - ತಿಳಿಯಲ್ಪಟ್ಟ ಪರಾಕ್ರಮವುಳ್ಳ, ತ್ವಾಂ - ನಿನ್ನನು, ನಾಶಯಿಷ್ಯಾಮಿ - ನಾಶಮಾಡುವೆನು. ॥೫೮॥ ರಾವಣಸ್ಯ- ರಾವಣನ, ವಚಃ - ಮಾತನ್ನು, ಶ್ರುತ್ವಾ - ಕೇಳಿ, ವಾಯುಸೂನುಃ - ಆಂಜನೇಯನು, ಮಯಾ - ನನ್ನಿಂದ, ಪ್ರಹೃತಂ - ಪ್ರಹರಿಸಲ್ಪಟ್ಟ, ತವ - ನಿನ್ನ, ಸುತಂ - ಮಗನಾದ, ಅಕ್ಷಂ - ಅಕ್ಷನನ್ನು,

ರಾಕ್ಷಸಾಧಮನೇ ! ರಾವಣಾ, ದೇವದಾನವ ಗಂಧರ್ವಯಕ್ಷರಿಗೆ ನಿನ್ನಿಂದ ಅಪರಿಮಿತವಾದ ಭಯವುಂಟಾಗಿದ್ದಿತು. ಅಂತಹ ನಿನಗೀಗ ನಿಸ್ಸಂಶಯವಾಗಿ ವಾನರರಿಂದ ಭಯವು ಘಟಿಸಿರುವುದು. ಇದೋ ನೋಡು, ಈ ಬಲಗೈ ಮುಷ್ಟಿಯು ಬಹುಕಾಲದಿಂದಲೂ ನಿನ್ನಲ್ಲಡಗಿರುವ ಜೀವಾತ್ಮನನ್ನು ಎದ್ದೋಡುವಂತೆ ಮಾಡುವುದು" ಎಂದು ಗರ್ಜಿಸಿದನು. ॥೫೧–೫೬॥ ಮಹಾ ತೇಜಸ್ವಿಯಾದ ಹುನುಮಂತನಿಂತು ನುಡಿದುದನ್ನು ಕೇಳಿ ಭಯಂಕರ ಪರಾಕ್ರಮಿಯಾದ ರಾವಣಾಸುರನು ಕೋಪದಿಂದ ಕೆಂಪೊಗೆದ ಕಣ್ಣುಗಳುಳ್ಳವನಾಗಿ ಅವನನ್ನು ಕುರಿತು, "ಎಲೆಲಾ ; ವಾನರಾಧಮನೇ ; ಆಂಜನೇಯನೇ ! ಮೊದಲು ನೀನು ನನ್ನನ್ನು ಪ್ರಹರಿಸು. ಅಮಿತಪರಾಕ್ರಮಿಯಾದ ನನ್ನನ್ನು ಹೊಡೆದೆಯೆಂದು ನಿನಗೆ ಕೀರ್ತಿಯು ಬರುವುದು. ಈ ರೀತಿ ನೀನು ಕೀರ್ತಿಯನ್ನು ಗಳಿಸು. ಮೊದಲು ನಿನ್ನಿಂದ ಹೊಡೆತವನ್ನು ತಿಂದು ಆದರಿಂದ ನಿನ್ನ ಬಲಪರಾಕ್ರಮಗಳನ್ನರಿತುಕೊಳ್ಳುವೆನು. ಆಮೇಲೆ ನಿನ್ನನ್ನು ಸಂಹರಿಸುವದು ಬಹು ಸುಲಭವಾಗುವುದು" ಎಂದು ಹೇಳಿದನು. ರಾವಣಾಸುರನಿಂತು ನುಡಿಯಲು ವಾಯುಪುತ್ರನಾದ ಹನುಮಂತನು ಅವನನ್ನು ಕುರಿತು, "ಎಲಾ ರಾಕ್ಷಸಾಧಮಾ ; ರಾವಣಾ !!

ಸ್ಮರ ಸುತಂ ತವ " ||೫೯|| ಏವಮುಕ್ತೋ ಮಹಾತೇಜಾ ರಾವಣೋ ರಾಕ್ಷಸೇಶ್ವರಃ | ಆಜಘಾನಾಽನಿಲಸುತಂ ತಲೇನೋರಸಿ ವೀರ್ಯವಾನ್ || ೬೦ || ಸತಲಾಭಿಹತಸ್ತೇನ ಚಚಾಲಚ ಮುಹುರ್ಮುಹುಃ | ಸ್ಥಿತ್ವಾ ಮುಹೂರ್ತಂ ತೇಜಸ್ವೀ ಸ್ಥೈರ್ಯಂ ಕೃತ್ವಾ ಮಹಾಮತಿಃ | ಆಜಘಾನಾಽಭಿಸಂಕ್ರುದ್ಧಸ್ತಲೇನೈವಾಮರದ್ವಿಷಂ ||೬೧|| ತತಸ್ತಲೇನಾಭಿಹತೋ ವಾನರೇಣ ಮಹಾತ್ಮನಾ | ದಶಗ್ರೀವಸ್ಸಮಾಧೂತೋ ಯಥಾ ಭೂಮಿಚಲೇಽಚಲಃ || ೬೨ || ಸಂಗ್ರಾಮೇ ತಂ ತಥಾ ದೃಷ್ಟ್ವಾ ರಾವಣಂ ತಲತಾಡಿತಂ | ಋಷಯೋ ವಾನರಾಸ್ಸಿದ್ಧಾ ನೇದುರ್ದೇವಾಸ್ಸಹಾಸುರೈಃ || ೬೩ || ಅಥಾಽಶ್ವಾಸ್ಯ ಮಹಾತೇಜಾ ರಾವಣೋ ವಾಕ್ಯಮಬ್ರವೀತ್ | " ಸಾಧು ವಾನರ! ವೀರ್ಯೇಣ

---

ಸ್ಮರ - ಸ್ಮರಿಸಿಕೋ, ಇತಿವಚಃ - ಇಂತೆಂಬ ಮಾತನ್ನು, ಅಬ್ರವೀತ್ - ನುಡಿದನು. ||೫೯|| ಮಹಾತೇಜಾಃ - ಮಹಾ ತೇಜೋವಂತನಾದ, ರಾಕ್ಷಸೇಶ್ವರಃ - ರಾಕ್ಷಸರಾಜನಾದ, ವೀರ್ಯವಾನ್ - ಸಾಮರ್ಥ್ಯವಂತನಾದ, ರಾವಣಃ - ರಾವಣನು, ಏವಂ - ಈ ಪರಿ, ಉಕ್ತಃ - ಹೇಳಲ್ಪಟ್ಟವನಾಗಿ, ಅನಿಲಸುತಂ - ವಾಯುಪುತ್ರನನ್ನು, ತಲೇನ - ಅಂಗೈಯಿಂದ, ಉರಸಿ - ಎದೆಯಲ್ಲಿ, ಆಜಘಾನ - ಹೊಡೆದನು. ||೬೦|| ತೇನ - ಆ ರಾವಣನಿಂದ, ತಲಾಭಿಹತಃ - ಅಂಗೈಯಿಂದ ಹೊಡೆಯಲ್ಪಟ್ಟ, ಸಃ - ಆ ಆಂಜನೇಯನು, ಮುಹುರ್ಮುಹುಃ - ಬಾರಿಬಾರಿಗೂ, ಚಚಾಲಚ - ನಡುಗಿದನು, ತೇಜಸ್ವೀ - ಅಂತಸ್ಸಾರವುಳ್ಳ, ಮಹಾಮತಿಃ - ಮಹಾ ಬುದ್ಧಿಶಾಲಿಯಾದ ಆಂಜನೇಯನು, ಮುಹೂರ್ತಂ - ಮಹೂರ್ತಕಾಲ, ಸ್ಥಿತ್ವಾ - ನಿಂತು, ಸ್ಥೈರ್ಯಂ - ಸ್ಥಿರಚಿತ್ತತೆಯನ್ನು, ಕೃತ್ವಾ - ಮಾಡಿಕೊಂಡು, ಅಭಿಸಂಕ್ರುದ್ಧಃ - ಬಹು ಕೋಪಿಷ್ಠನಾಗಿ, ತಲೇನೈವ - ಅಂಗೈಯಿಂದಲೇ, ಅಮರದ್ವಿಷಂ - ದೇವಶತ್ರುವಾದ ರಾವಣನನ್ನು, ಆಜಘಾನ - ಹೊಡೆದನು. || ೬೧ || ತತಃ - ಬಳಿಕ, ಮಹಾತ್ಮನಾ - ಮಹಾ ಧೈರ್ಯವಂತನಾದ, ವಾನರೇಣ - ಕಪಿಯಿಂದ, ತಲೇನ - ಅಂಗೈಯಿಂದ, ಅಭಿಹತಃ - ಹೊಡೆಯಲ್ಪಟ್ಟ, ದಶಗ್ರೀವಃ - ದಶಕಂಠನು, ಭೂಮಿಚಲೇ - ಭೂಕಂಪದಲ್ಲಿ, ಅಚಲೋಯಥಾ - ಪರ್ವತದಂತೆ, ಸಮಾಧೂತಃ - ಕೊಡಹಲ್ಪಟ್ಟನು. ||೬೨|| ಸಂಗ್ರಾಮೇ - ಕಾಳೆಗದಲ್ಲಿ, ತಥಾ - ಹಾಗೆ, ತಲತಾಡಿತಂ - ಅಂಗೈಯಿಂದ ಹೊಡೆಯಲ್ಪಟ್ಟ, ರಾವಣಂ - ರಾವಣನನ್ನು, ದೃಷ್ಟ್ವಾ - ಕಂಡು,

---

ಹಿಂದೊಮ್ಮೆ ನಿನ್ನ ಮಗನಾದ ಅಕ್ಷಕುಮಾರನನ್ನು ಸಂಹರಿಸಿರುವೆನಲ್ಲವೆ? ಆ ವಿಷಯವನ್ನೀಗ ಸ್ಮರಿಸಿಕೊಂಡು ಅದರಿಂದಲೇ ನನ್ನ ಬಲಪರಾಕ್ರಮಗಳನ್ನರಿತುಕೊ" ಎಂದನು. ರಾಕ್ಷಸರೊಡೆಯನೂ, ಮಹಾ ತೇಜಸ್ವಿಯೂ ಆದ ರಾವಣಾಸುರನು ಆ ಹನುಮಂತನ ಈ ಮಾತುಗಳನ್ನು ಕೇಳಿ ಬಹಳವಾಗಿ ಕೋಪಗೊಂಡು ಅವನನ್ನು ತನ್ನ ಅಂಗೈಯಿಂದ ಬಲವಾಗಿ ಹೊಡೆದನು. || ೫೭–೬೦ || ಹೀಗೆ ರಾಕ್ಷಸರಾಜನಿಂದ ಹೊಡೆಯಲ್ಪಟ್ಟ ಆ ಕಪಿನಾಯಕನು ಸ್ವಲ್ಪಹೊತ್ತು ತತ್ತಳಿಸಿ ಹೋದನು. ಆ ತರುವಾಯ ಆತನು ಧೈರ್ಯವನ್ನು ತಾಳಿದವನಾಗಿ ಕೂಡಲೇ ಅಪರಿಮಿತವಾದ ಕೋಪವೂ ಉಳ್ಳವನಾಗಿ ದೇವಶತ್ರುವಾದ ಆ ರಾವಣನನ್ನು ತನ್ನ ಅಂಗೈಯಿಂದ ಬಲವಾಗಿ ಪ್ರಹರಿಸಿದನು. ಈ ಪ್ರಕಾರವಾಗಿ ಮಹಾತ್ಮನಾದ ಆ ಹನುಮಂತನು ಪ್ರಹರಿಸುತ್ತಲೇ ರಾವಣಾಸುರನು ಭೂಕಂಪವುಂಟಾದ ಸಮಯದಲ್ಲಿ ಪರ್ವತವು ಎಂತೋ ಅಂತು ನಡುಗಿಹೋದನು. ಆ ಸಮಯದಲ್ಲಿ ದೇವತೆಗಳೂ, ಋಷಿಪುಂಗವರೂ, ಸಮಸ್ತ ವಾನರರೂ ಆ ರಾವಣಾಸುರನು ಹನುಮಂತನ ತಲಪ್ರಹಾರ

ಶ್ಲಾಘನೀಯೋಽಸಿ ಮೇ ರಿಪುಃ" ॥ ೬೪ ॥ ರಾವಣೇನೈವಮುಕ್ತಸ್ತು ಮಾರುತಿ ರ್ವಾಕ್ಯಮಬ್ರವೀತ್ । "ಧಿಗಸ್ತು! ಮಮ ವೀರ್ಯೇಣ ಯಸ್ತ್ವಂ ಜೀವಸಿ ರಾವಣ! ॥ ೬೫ ॥ ಸಕೃತ್ತು ಪ್ರಹರೇದಾನೀಂ ದುರ್ಬುದ್ಧೇ! ಕಿಂ ವಿಕತ್ಥಸೇ । ತತಸ್ತ್ವಾಂ ಮಾಮಿಕಾ ಮುಷ್ಟಿರ್ನಯಿಷ್ಯತಿ ಯಮಕ್ಷಯಂ" ॥ ೬೬ ॥ ತತೋ ಮಾರುತಿವಾಕ್ಯೇನ ಕ್ರೋಧಸ್ತಸ್ಯ ತದಾಜ್ವಲತ್ । ಸಂರಕ್ತನಯನೋ ಯತ್ನಾನ್ಮುಷ್ಟಿಮುದ್ಯಮ್ಯ ದಕ್ಷಿಣಂ

ಋಷಯಃ - ಮುನಿಗಳು, ವಾನರಾಃ - ಕಪಿಗಳು, ಸಿದ್ಧಾಃ - ಸಿದ್ಧರು, ದೇವಾಃ - ದೇವತೆಗಳು, ಅಸುರೈಸ್ಸಹ - ಅಸುರರೊಡನೆ, ನೇದುಃ - ಧ್ವನಿಗೈದರು. ॥ ೬೩ ॥ ಅಥ - ಅನಂತರದಲ್ಲಿ, ಮಹಾ ತೇಜಾಃ - ಮಹಾ ತೇಜಸ್ವಿಯೂದ, ರಾವಣಃ - ರಾವಣನು, ಆಶ್ವಾಸ್ಯ - ಸಮಾಧಾನ ಮಾಡಿಕೊಂಡು, ವಾಕ್ಯಂ - ಮಾತನ್ನು, ಅಬ್ರವೀತ್ - ನುಡಿದನು, ಹೇ ವಾನರ - ಎಲೈ ಕಪಿಯೇ, ಸಾಧು - ಭಲೇ, ವೀರ್ಯೇಣ - ಪರಾಕ್ರಮದಿಂದ, ಮೇ - ನನಗೆ, ರಿಪುಃ - ಶತ್ರುವಾಗಿ, ಶ್ಲಾಘನೀಯಃ - ಶ್ಲಾಘ ನೀಯನು, ಅಸಿ - ಆದೆ. ॥೬೪॥ ರಾವಣೇನ - ರಾವಣನಿಂದ, ಏವಂ - ಈ ರೀತಿಯಾಗಿ, ಉಕ್ತಃ - ಹೇಳಲ್ಪಟ್ಟ, ಮಾರುತಿಸ್ತು - ಆಂಜನೇಯನಾದರೆ, ವಾಕ್ಯಂ - ಮಾತನ್ನು, ಅಬ್ರವೀತ್ - ನುಡಿದನು, ಹೇ ರಾವಣ - ಎಲೈ ರಾವಣನೇ, ಮಮ - ನನ್ನ, ವೀರ್ಯೇಣ - ಸಾಮರ್ಥ್ಯದಿಂದ, ಯಸ್ತ್ವಂ - ಯಾವ ನೀನು, ಜೀವಸಿ - ಬದುಕಿದ್ದೀಯೋ (ಅಂಥಾ ನನ್ನ ವೀರ್ಯವನ್ನು), ಧಿಗಸ್ತು - ನಿಂದಿಸು, ಹೇ ದುರ್ಬುದ್ಧೇ - ಎಲೈ ಪ್ರಹಾರ ತಾರತಮ್ಯವನ್ನರಿಯದವನೇ, ಕಿಂವಿಕತ್ಥಸೇ - ಆತ್ಮಶ್ಲಾಘನೆ ಯನ್ನೇಕೆ ಮಾಡಿಕೊಳ್ಳುವೆ, ಸಕೃತ್ - ಇನ್ನೊಂದಾವರ್ತಿ, ಇದಾನೀಂತು - ಈಗಲಾದರೆ, ಪ್ರಹರ - ಹೊಡೆ, ತತಃ - ಬಳಿಕ, ಮಾಮಿಕಾ - ನನ್ನ ಸಂಬಂಧವಾದ, ಮುಷ್ಟಿಃ - ಹಿಡಿಯು, ತ್ವಾಂ - ನಿನ್ನನ್ನು, ಯಮಕ್ಷಯಂ - ಯಮನ ಮನೆಯನ್ನು, ನಯಿಷ್ಯತಿ - ಹೊಂದಿಸುವುದು. ॥೬೫-೬೬॥ ತತಃ - ಬಳಿಕ, ಮಾರುತಿವಾಕ್ಯೇನ - ಆಂಜನೇಯನ ಮಾತಿನಿಂದ, ತಸ್ಯ - ಆ ರಾವಣನಿಗೆ, ತದಾ - ಆ ಕಾಲದಲ್ಲಿ, ಕ್ರೋಧಃ - ಕೋಪವು, ಅಜ್ವಲತ್ - ಪ್ರಜ್ವಲಿಸಿತು, ವೀರ್ಯವಾನ್ - ಸಾಮರ್ಥ್ಯವಂತನಾದ ರಾವಣನು, ಸಂರ....ನಃ - ಕೆಂಗಣ್ಣುಗಳುಳ್ಳವನಾಗಿ, ಯತ್ನಾತ್ - ಪ್ರಯತ್ನದಿಂದ, ದಕ್ಷಿಣಂಮುಷ್ಟಿಂ -

ದಿಂದ ತತ್ತಳಿಸಿ ಹೋದುದನ್ನು ನೋಡಿ ಪರಮಾಶ್ಚರ್ಯಭರಿತರಾದರು. ಆಮೇಲೆ ಸ್ವಲ್ಪ ಚೇತರಿಸಿಕೊಂಡು ಮಹಾ ತೇಜೋವಂತನಾದ ಆ ರಾವಣಾಸುರನು ಹನುಮಂತನನ್ನು ಕುರಿತು, "ಎಲೈ ವಾನರವೀರನೇ! ಭಲೇ; ಭಲೇ; ನೀನು ವೀರನೇ ಅಹುದು. ನೀನು ನನಗೆ ತಕ್ಕ ಶತ್ರುವೇ ಸರಿ. ನಿನ್ನ ಪರಾಕ್ರಮವು ಸ್ತುತ್ಯವಾದುದು" ಎಂದು ನುಡಿದನು. ॥೬೧–೬೪॥ ಆಗ ಹನುಮಂತನು ರಾವಣನ ಈ ಮಾತುಗಳನ್ನು ಕೇಳಿ ಅವನನ್ನು ಕುರಿತು, "ರಾವಣಾ! ಬಿಡುಬಿಡು; ನನ್ನ ಪರಾಕ್ರಮವನ್ನೇಕೆ ಹೊಗಳುವೆ. ನಾನು ಪ್ರಹರಿ ಸಿಯೂ ಶತ್ರುವಾದ ನೀನಿನ್ನೂ ಜೀವದಿಂದಿರುವೆಯಲ್ಲವೆ? ಇನ್ನು ನನ್ನ ಪರಾಕ್ರಮವನ್ನು ನಿಂದಿಸಲೇಬೇಕು. ಎಲವೊ; ಉಚಿತಾನುಚಿತಗಳನ್ನರಿಯದವನೇ! ಒಂದೇ ಪ್ರಹಾರಕ್ಕೇ ನನ್ನನೇಕೆ ಹೊಗಳುತ್ತೀಯೆ. ಇದೋ ನೋಡು; ನನ್ನ ಈ ಮುಷ್ಟಿಪ್ರಹಾರವು ನಿನ್ನನೀಗ ಯಮಸದನವನ್ನು ಸೇರಿಸುವುದು" ಎಂದು ಹೇಳಿದನು. ಹನುಮಂತನಿಂತು ನುಡಿದೊಡ ನೆಯೇ ರಾವಣಾಸುರನಿಗೆ ಮಿತಿಮೀರಿದ ಕೋಪವು ಉಕ್ಕೇರಿತು. ಕೂಡಲೇ ಮಹಾ ವೀರ್ಯ ಸಂಪನ್ನನಾದ ಆತನು ಕೋಪದಿಂದ ಕೆರಳಿದ ಕಣ್ಣುಗಳುಳ್ಳವನಾಗಿ ಬಲಗೈಯೆತ್ತಿ ಬಲವಾಗಿ

|| ೬೭ || ಪಾತಯಾಮಾಸ ವೇಗೇನ ವಾನರೋರಸಿ ವೀರ್ಯವಾನ್ | ಹನೂಮಾನ್ವಕ್ಷಸಿ ವ್ಯೂಢೇ ಸಂಚಚಾಲ ಹತಃ ಪುನಃ || ೬೮ || ವಿಹ್ವಲಂತು ತದಾ ದೃಷ್ಟ್ವಾ ಹನುಮಂತಂ ಮಹಾಬಲಂ | ರಥೇನಾಽತಿರಥಃ ಶೀಘ್ರಂ ನೀಲಂಪ್ರತಿ ಸಮಭ್ಯಗಾತ್ ||೬೯|| ರಾಕ್ಷಸಾನಾಮಧಿಪತಿರ್ದಶಗ್ರೀವಃ ಪ್ರತಾಪವಾನ್ | ಪನ್ನಗಪ್ರತಿಮೈರ್ಭೀಮೈಃ ಪರಮರ್ಮಾತಿಭೇದಿಭಿಃ | ಶರೈರಾದೀಪಯಾಮಾಸ ನೀಲಂ ಹರಿಚಮೂಪತಿಂ || ೭೦-೭೧ || ಸಶರೌಘಸಮಾಯುಕ್ತೋ ನೀಲಃ ಕಪಿಚಮೂಪತಿಃ | ಕರೇಣೈಕೇನ ಶೈಲಾಗ್ರಂ ರಕ್ಷೋಧಿಪತಯೇಽಸೃಜತ್ || ೭೨ || ಹನುಮಾನಪಿ ತೇಜಸ್ವೀ ಸಮಾ

ಬಲಗೈಮುಷ್ಟಿಯನ್ನು, ಉದ್ಯಮ್ಯ - ಎತ್ತಿಕೊಂಡು, ವಾನರೋರಸಿ - ಆಂಜನೇಯನ ಎದೆಯಲ್ಲಿ, ವೇಗೇನ - ವೇಗದಿಂದ, ಪಾತಯಾಮಾಸ - ಬೀಳಿಸಿದನು. ||೬೭-೬೮|| ಹನುಮಾನ್ - ಆಂಜನೇಯನು, ವ್ಯೂಢೇ - ಧೃಡವಾದ, ವಕ್ಷಸಿ - ಎದೆಯಲ್ಲಿ, ಪುನಃ - ಮತ್ತೂ, ಹತಃ - ಹೊಡೆಯಲ್ಪಟ್ಟವನಾಗಿ, ಸಂಚಚಾಲ - ನಡುಗಿಹೋದನು, ಅತಿರಥಃ - ಅತಿರಥನಾದ ರಾವಣನು, ತದಾ - ಆ ಕಾಲದಲ್ಲಿ, ಮಹಾಬಲಂ - ಬಹು ಬಲವಂತನಾದ, ಹನುಮಂತಂ - ಆಂಜನೇಯನನ್ನು, ವಿಹ್ವಲಂ - ವಿಹ್ವಲಚಿತ್ತನನ್ನಾಗಿ, ದೃಷ್ಟ್ವಾ - ಕಂಡು, ರಥೇನ - ತೇರಿನಿಂದ, ಶೀಘ್ರಂ - ಜಾಗ್ರತೆಯಾಗಿ, ನೀಲಂಪ್ರತಿ - ನೀಲನನ್ನು ಕುರಿತು, ಸಮಭ್ಯಗಾತ್ - ಬಂದನು. || ೬೮-೬೯ || ಪ್ರತಾಪವಾನ್ - ಪರಾಕ್ರಮಿಯಾದ, ರಾಕ್ಷಸಾನಾಂ - ರಕ್ಕಸರಿಗೆ, ಅಧಿಪತಿಃ - ಧೊರೆಯಾದ, ದಶಗ್ರೀವಃ - ರಾವಣನು, ಪರ....ಭಿಃ - ಇತರರ ಪ್ರಾಣಗಳನ್ನು ಭೇದಿಸುತ್ತಿರುವ, ಭೀಮೈಃ - ಭಯಂಕರಗಳಾದ, ಪನ್ನ....ಮೈಃ - ಸರ್ಪಗಳಿಗೆ ಸಮಾನವಾದ, ಶರೈಃ - ಬಾಣಗಳಿಂದ, ಹರಿಚಮೂಪತಿಂ - ವಾನರಸೇನಾಧಿಪತಿಯಾದ, ನೀಲಂ ನೀಲನನ್ನು, ಆದೀಪಯಾಮಾಸ-ಪ್ರಜ್ವಲಿಸುವಂತೆ ಮಾಡಿದನು. || ೭೦-೭೧ || ಶರೌ....ಕ್ತಃ- ಬಾಣತಂಡಗಳಿಂದ ಆಯಾಸಗೊಂಡ, ಕಪಿಚಮೂಪತಿಃ - ವಾನರಸೇನಾನಾಯಕನಾದ, ಸನೀಲಃ - ಆ ನೀಲನು, ಏಕೇನಕರೇಣ - ಒಂದು ಕೈಯಿಂದ, ಶೈಲಾಗ್ರಂ - ಬೆಟ್ಟದ ಶಿಖರವನ್ನು, ರಕ್ಷೋಧಿಪತಯೇ - ರಾವಣನಿಗಾಗಿ, ಅಸೃಜತ್ - ಬಿಟ್ಟನು. || ೭೨ || ತೇಜಸ್ವೀ - ಅಂತಸ್ಸಾರವುಳ್ಳ, ಹನುಮಾನಪಿ - ಆಂಜನೇಯನೂ ಕೂಡ, ಸಮಾಶ್ವಸ್ತಃ - ಸಮಾಧಾನ ಮಾಡಿಕೊಂಡು, ಮಹಾ

ಮುಷ್ಟಿಯನ್ನು ಬಿಗಿಹಿಡಿದು ಮಹಾ ವೇಗದಿಂದ ಆ ಹನುಮಂತನೆದೆಗೆ ಬಹು ತೀವ್ರವಾಗಿ ಹೊಡೆದನು. ಮಹಾ ಪರಾಕ್ರಮಿಯಾದ ರಾವಣಾಸುರನು ಈ ರೀತಿ ಪ್ರಹರಿಸಿದೊಡನೆಯೆ ಆ ಹೊಡತವನ್ನು ಸಹಿಸಲಾರದೆ ಹನುಮಂತನು ಬಹಳ ವಿಹ್ವಲನಾದನು. ಅನನ್ನು ನೋಡಿ ರಾವಣನು ಅವನನ್ನಲ್ಲಿಗೇ ತೊರೆದು ತನ್ನ ರಥವನ್ನು ವಾನರಯೂಥಪತಿಯಾದ ನೀಲನಿಗಭಿಮುಖವಾಗಿ ನಡೆಯುಸಿದನು. || ೬೫-೭೦ || ಆಗ ಅತ್ಯಧಿಕವಾದ ಪರಾಕ್ರಮವುಳ್ಳವನೂ, ರಾಕ್ಷಸರೊಡೆಯನೂ, ದಶಕಂಧರನೂ ಆದ ಆ ರಾವಣಾಸುರನು ಕಾಳಸರ್ಪಗಳಿಗೆ ಸಮಾನವಾದುದೂ, ಮಹಾ ಭಯಂಕರವಾದುದೂ, ಶತ್ರುವಿನ ಮರ್ಮವನ್ನು ಭೇದಿಸುವುದೂ ಆದ ಅನೇಕ ಬಾಣಗಳಿಂದ ಆ ನೀಲನನ್ನು ಹೊಡೆದನು. ಆ ಸಮಯದಲ್ಲಿ ವಾನರಸೇನಾನಾಯಕನಾದ ಆ ನೀಲನಾದರೋ ಆ ಬಾಣಗಳಿಂದ ಬಾಧಿತನಾಗಿ ಬಹಳವಾಗಿ ಕುಪಿತನೂ ಆಗಿ ಹೋದನು. ಕೂಡಲೇ ಅವನು ಒಂದೇ ಕೈಯಲ್ಲಿಯೇ ದೊಡ್ಡದೊಂದು ಪರ್ವತವನ್ನು ಪೆಳಗಿಸಿ ಹಿಡಿದು ಅಟ್ಟಿಬಂದು ಆ ರಾವಣನಮೇಲದನ್ನು ಪ್ರಯೋಗಿಸಿದನು. ಅಷ್ಟರಲ್ಲಿಯೇ

ಶ್ವಸ್ತೋ ಮಹಾಮನಾಃ । ವಿಪ್ರೇಕ್ಷಮಾಣೋ ಯುದ್ಧೇಪ್ಸುಸ್ಸರೋಷಮಿದಮಬ್ರವೀತ್ ‖ ೭೩ ‖ ನೀಲೇನ ಸಹಸಂಯುಕ್ತಂ ರಾವಣಂ ರಾಕ್ಷಸೇಶ್ವರಂ । “ ಅನ್ಯೇನ ಯುಧ್ಯಮಾನಸ್ಯ ನಯುಕ್ತಮಭಿಧಾವನಂ ” ‖ ೭೪ ‖ ರಾವಣೋಽಪಿ ಮಹಾತೇಜಾಸ್ತಚ್ಛೃಂಗಂ ಸಪ್ತಭಿಃ ಶರೈಃ । ಆಜಘಾನ ಸುತೀಕ್ಷ್ಣಾಗ್ರೈಸ್ತದ್ವಿಕೀರ್ಣಂ ಪಪಾತಹ ‖ ೭೫ ‖ ತದ್ವಿಕೀರ್ಣಂ ಗಿರೇಶ್ಶೃಂಗಂ ದೃಷ್ಟ್ವಾ ಹರಿಚಮೂಪತಿಃ । ಕಾಲಾಗ್ನಿರಿವ ಜಜ್ವಾಲ ಕ್ರೋಧೇನ ಪರವೀರಹಾ ‖ ೭೬ ‖ ಸೋಽಶ್ವಕರ್ಣಾನ್ ಧವಾನ್ ಸಾಲಾಂಶ್ಚೂತಾಂಶ್ಚಾಪಿ ಸುಪುಷ್ಪಿತಾನ್ । ಅನ್ಯಾಂಶ್ಚ ವಿವಿಧಾನ್ ವೃಕ್ಷಾನ್ನೀಲಶ್ಚಿಕ್ಷೇಪ

---

ಮನಾಃ - ಧೈರ್ಯವಂತನಾಗಿ, ವಿಪ್ರೇಕ್ಷಮಾಣಃ - ವಿಶೇಷವಾಗಿ ನೋಡಿ, ಯುದ್ಧೇಪ್ಸುಃ - ಕಾಳಗದಲ್ಲಿ ಇಷ್ಟವುಳ್ಳವನಾಗಿ, ನೀಲೇನಸಹ - ನೀಲನೊಡನೆ, ಸಂಯುಕ್ತಂ - ಸೇರಿರುವ, ರಾಕ್ಷಸೇಶ್ವರಂ- ರಾಕ್ಷಸಾಧಿಪತಿಯಾದ, ರಾವಣಂ - ರಾವಣನನ್ನು ಕುರಿತು, ಅನ್ಯೇನ - ಮತ್ತೊಬ್ಬನೊಡನೆ, ಯುಧ್ಯಮಾನಸ್ಯ-ಕಾಳಗವನ್ನು ಮಾಡುವವನನ್ನು ಕುರಿತು, ಅಭಿಧಾವನಂ-ಓಡಿಹೋಗುವಿಕೆಯು, ನಯುಕ್ತಂ- ಯೋಗ್ಯವಲ್ಲವು, (ಇತಿ - ಇಂತೆಂದು), ಸರೋಷಂ - ಕೋಪದಿಂದೊಡಗೂಡಿದಂತೆ, ಅಬ್ರವೀತ್ - ನುಡಿದನು. ‖ ೭೩ ೭೪ ‖ ಮಹಾತೇಜಾಃ - ಬಹು ತೇಜೋವಂತನಾದ, ರಾವಣೋಽಪಿ - ರಾವಣನೂ, ಸುತೀಕ್ಷ್ಣಾಗ್ರೈಃ - ಹದವಾದ ಕೊನೆಗಳುಳ್ಳ, ಸಪ್ತಭಿಶ್ಶರೈಃ - ಏಳು ಬಾಣಗಳಿಂದ, ತಚ್ಛೃಂಗಂ - ಆ ಪರ್ವತಶೃಂಗವನ್ನು, ಆಜಘಾನ - ಹೊಡೆದನು, ತತ್ - ಅದು, ವಿಕೀರ್ಣಂ - ಪುಡಿಯಾಗಿ, ಪಪಾತಹ - ಬಿದ್ದಿತಷ್ಟೆ. ‖೭೫‖ ಪರವೀರಹಾ - ಶತ್ರುಸಂಹಾರಕನಾದ, ಹರಿಚಮೂಪತಿಃ - ವಾನರಸೈನ್ಯಾಧಿಪತಿಯಾದ ನೀಲನು, ವಿಕೀರ್ಣಂ - ಸರಿದು, ಚೂರ್ಣಂ - ಚೂರ್ಣೀಭೂತವಾದ, ಗಿರೇಃ - ಪರ್ವತದ, ತಚ್ಛೃಂಗಂ - ಆ ಶಿಖರವನ್ನು, ದೃಷ್ಟ್ವಾ - ಕಂಡು, ಕ್ರೋಧೇನ - ಕೋಪದಿಂದ, ಕಾಲಾಗ್ನಿರಿವ - ಪ್ರಳಯಾಗ್ನಿಯಂತೆ, ಜಜ್ವಾಲ - ಉರಿಯುತ್ತಿದ್ದನು. ‖೭೬‖ ಸಃನೀಲಃ - ಆ ನೀಲನು, ಸಂಯುಗೇ- ಕಾಳಗದಲ್ಲಿ, ಪುಷ್ಪಿತಾನ್ - ಹೂಬಿಟ್ಟಿರುವ, ಅಶ್ವಕರ್ಣಾನ್ - ಬಿಳೀ ಮತ್ತೀಗಿಡಗಳನ್ನೂ, ಧವಾನ್ - ಕಗ್ಗಲೀಗಿಡಗಳನ್ನೂ, ಸಾಲಾನ್ - ವಸಲೀಗಿಡಗಳನ್ನೂ, ಚೂತಾಂಶ್ಚಾಪಿ - ಮಾವಿನ ಗಿಡಗಳನ್ನೂ, ಅನ್ಯಾಂಶ್ಚ - ಮತ್ತೆ ಕೆಲವಾದ, ವಿವಿಧಾನ್ - ನಾನಾವಿಧವಾದ, ವೃಕ್ಷಾನ್ - ಮರಗಳನ್ನೂ, ಚಿಕ್ಷೇಪ -

---

ಇತ್ತ ಮಹಾ ತೇಜಸ್ವಿಯೂ, ಮಹಾ ಮೇಧಾವಿಯೂ ಆದ ಹನುಮಂತನು ಎಚ್ಚೆತ್ತು ಬಹಳವಾಗಿ ಕೋಪಗೊಂಡು ರಾವಣಾಸುರನೊಡನೆ ಯುದ್ಧಮಾಡಲಪೇಕ್ಷೆಯುಳ್ಳವನಾಗಿ, ನೀಲನೊಡನೆ ಯುದ್ಧಮಾಡುತ್ತಿದ್ದ ಅವನನ್ನು ನೋಡಿ “ ಎಲವೆಲವೋ! ರಾವಣನೇ ! ರಾಕ್ಷಸಾಧಮನೇ! ನನ್ನೊಡನೆ ಯುದ್ಧಮಾಡುತ್ತಿದ್ದ ನೀನು ಈ ರೀತಿ ನನ್ನನ್ನು ತೊರೆದು ಇನ್ನೊಬ್ಬನನ್ನು ಕುರಿತು ಓಡಿಹೋಗುವುದೆಲ್ಲಿಯ ನ್ಯಾಯ? ಇದು ನಿನಗೆ ಸರ್ವಥಾ ಉಚಿತವಲ್ಲವು. ಬಾ ; ನನ್ನೊಡನೆಯೇ ಕಾದು ” ಎಂದು ಹೇಳಿದನು. ಆ ಸಮಯದಲ್ಲಿ ಮಹಾ ತೇಜೋವಂತನಾದ ರಾವಣನಾದರೊ ಬಹು ತೀಕ್ಷ್ಣಗಳಾದ ಏಳು ಬಾಣಗಳಿಂದ ನೀಲನು ಪ್ರಯೋಗಿಸಿದ ಪರ್ವತಶಿಖರವನ್ನು ಪುಡಿಗುಟ್ಟಿ ಆರ್ಭಟಿಸಿದನು ‖ ೭೧–೭೫ ‖ ಈ ರೀತಿ ತಾನು ಪ್ರಯೋಗಿಸಿದ ಪರ್ವತಶಿಖರವು ಪುಡಿಯಾದುದನ್ನು ನೋಡಿ ಮಹಾ ಪ್ರತಾಪನನಾದ ನೀಲನು ಪ್ರಳಯಕಾಲದ ಹುತಾಶನನಂತೆ ಕನಲಿ ಹೂವೊಳೆತಿರುವ ಮದ್ದೀಗಿಡಗಳನ್ನೂ, ಮಾವು, ಅಸಲೇ ಮೊದಲಾದ ಅನೇಕ ವೃಕ್ಷಗಳನ್ನೂ ಆ ರಾವಣನ ರಥದಮೇಲೆ ಬಲವಾಗೆಸೆ

ಸಂಯುಗೇ ॥ ೭೭ ॥ ಸತಾನ್ ವೃಕ್ಷಾನ್ ಸಮಾಸಾದ್ಯ ಪ್ರತಿಚಿಚ್ಛೇದ ರಾವಣಃ । ಅಭ್ಯವರ್ಷತ್ಸುಘೋರೇಣ ಶರವರ್ಷೇಣ ಪಾವಕಿಂ ॥ ೭೮ ॥ ಅಭಿವೃಷ್ಟಃ ಶರೌಘೇಣ ಮೇಘೇನೇವ ಮಹಾಚಲಃ । ಹ್ರಸ್ವಂ ಕೃತ್ವಾ ತದಾ ರೂಪಂ ಧ್ವಜಾಗ್ರೇ ನಿಪಪಾತಹ ॥ ೭೯ ॥ ಪಾವಕಾತ್ಮಜಮಾಲೋಕ್ಯ ಧ್ವಜಾಗ್ರೇ ಸಮುಪಸ್ಥಿತಂ । ಜಜ್ವಾಲ ರಾವಣಃ ಕ್ರೋಧಾತ್ತತೋ ನೀಲೋ ನನಾದಚ ॥ ೮೦ ॥ ಧ್ವಜಾಗ್ರೇ ಧನುಷಶ್ಚಾಗ್ರೇ ಕಿರೀಟಾಗ್ರೇಚ ತಂ ಹರಿಂ । ಲಕ್ಷ್ಮಣೋಽಥ ಹನೂಮಾಂಶ್ಚ ದೃಷ್ಟ್ವಾ ರಾಮಶ್ಚ ವಿಸ್ಮಿತಾಃ ॥ ೮೧ ॥ ರಾವಣೋಽಪಿ ಮಹಾತೇಜಾಃ ಕಪಿಲಾಘವವಿಸ್ಮಿತಃ । ಅಸ್ತ್ರಮಾಹಾರಯಾ

---

ಎಸೆದನು. ॥ ೭೭ ॥ ಸರಾವಣಃ - ಆ ರಾವಣನು, ತಾನ್ವೃಕ್ಷಾನ್ - ಆ ಮರಗಳನ್ನು, ಸಮಾಸಾದ್ಯ - ಹೊಂದಿ, ಪ್ರತಿಚಿಚ್ಛೇದ - ಕತ್ತರಿಸಿದನು, ಸುಘೋರೇಣ - ಮಹಾ ಭಯಂಕರವಾದ, ಶರವರ್ಷೇಣ-ಬಾಣವೃಷ್ಟಿಯಿಂದ, ಪಾವಕಿಂ-ಅಗ್ನಿಪುತ್ರನಾದ ನೀಲನನ್ನು ಕುರಿತು, ಅಭ್ಯವರ್ಷತ್-ಸುರಿಸಿದನು. ॥೭೮॥ ಮೇಘೇನ - ಮೇಘದಿಂದ, ಮಹಾಚಲಇವ - ದೊಡ್ಡ ಬೆಟ್ಟದಂತೆ, ಶರೌಘೇಣ - ಬಾಣವರ್ಷದಿಂದ, ಅಭಿವೃಷ್ಟಃ - ವರ್ಷಿಸಲ್ಪಟ್ಟ ನೀಲನು, ತದಾ - ತಕ್ಷಣದಲ್ಲಿ, ರೂಪಂ - ಆಕಾರವನ್ನು, ಹ್ರಸ್ವಂ - ಚಿಕ್ಕದನ್ನಾಗಿ, ಕೃತ್ವಾ - ಮಾಡಿಕೊಂಡು, ಧ್ವಜಾಗ್ರೇ - ಧ್ವಜದ ತುದಿಯಲ್ಲಿ, ನಿಪಪಾತಹ-ಬಿದ್ದನು. ॥ ೭೯ ॥ ಧ್ವಜಾಗ್ರೇ - ನಿಶಾನಿಯ ತುದಿಯಲ್ಲಿ, ಸಮುಪಸ್ಥಿತಂ - ಇರುವ, ಪಾವಕಾತ್ಮಜಂ - ಅಗ್ನಿಪುತ್ರನನ್ನು, ಆಲೋಕ್ಯ - ಕಂಡು, ರಾವಣಃ - ರಾವಣನು, ಕ್ರೋಧಾತ್ - ಕೋಪದಿಂದ, ಜಜ್ವಾಲ - ಉರಿಯುತ್ತಿದ್ದನು, ತತಃ - ಬಳಿಕ, ನೀಲಃ - ನೀಲನು, ನನಾದಚ - ಕೋಲಾಹಲವನ್ನು ಮಾಡಿದನು. ॥ ೮೦ ॥ ಧ್ವಜಾಗ್ರೇ - ಧ್ವಜಾಗ್ರದಲ್ಲಿಯೂ, ಧನುಷಸ್ಯ - ಬಿಲ್ಲಿನ, ಅಗ್ರೇ - ತುದಿಯಲ್ಲಿಯೂ, ಕಿರೀಟಾಗ್ರೇ - ಕಿರೀಟದ ಅಗ್ರಭಾಗದಲ್ಲಿಯೂ, ತಂಹರಿಂ - ಆ ನೀಲನನ್ನು, ದೃಷ್ಟ್ವಾ - ಕಂಡು, ಲಕ್ಷ್ಮಣಃ-ಲಕ್ಷ್ಮಣನು, ಅಥ-ಬಳಿಕ, ಹನೂಮಾಂಶ್ಚ-ಆಂಜನೇಯನೂ, ರಾಮಶ್ಚ-ಶ್ರೀರಾಮನೂ, ವಿಸ್ಮಿತಾಃ - ಆಶ್ಚರ್ಯಗೊಂಡರು. ॥ ೮೧ ॥ ಮಹಾತೇಜಾಃ - ಮಹಾ ಪರಾಕ್ರಮಿಯಾದ, ರಾವಣೋಽಪಿ - ರಾವಣನೂ ಕೂಡ, ಕಪಿ....ತಃ - ವಾನರನ ಲಘುತ್ವದಿಂದ ಆಶ್ಚರ್ಯಗೊಂಡವನಾಗಿ,

---

ದನು. ರಾವಣನಾದರೊ ತನ್ನ ಕೂರಂಬುಗಳಿಂದ ಆ ವೃಕ್ಷಗಳೆಲ್ಲವನ್ನೂ, ಕತ್ತರಿಸಿ ಕೆಡವಿ ಅಗ್ನಿಪುತ್ರನಾದ ಆ ನೀಲನನ್ನು ಅನೇಕ ಬಾಣಗಳ ಬಿರುಮಳೆಯಿಂದ ತುಂಬಿಸಿದನು. ಮೇಘವು ಬಿರುಮಳೆಯನ್ನು ಸುರಿಸುವಂತೆ ಆ ರಾವಣನು ಬಾಣದ ಮಳೆಯನ್ನು ಸುರಿಸುತ್ತಿರಲು ನೀಲನು ತನ್ನ ರೂಪವನ್ನು ಮೊಟಕುಮಾಡಿಕೊಂಡು ತಟಕ್ಕನೆ ಆ ರಾವಣನ ರಥದ ಧ್ವಜಾಗ್ರದಲ್ಲಿ ಹಾರಿಬಿದ್ದನು. ಹೀಗೆ ತನ್ನ ರಥದ ಧ್ವಜಾಗ್ರದಲ್ಲಿ ಸಂಚರಿಸುತ್ತಿರುವ ನೀಲನನ್ನು ನೋಡಿದೊಡನೆಯೇ ರಾವಣಾಸುರನು ಕೋಪೋದ್ದೀಪಿತನಾಗಿಹೋದನು. ॥ ೭೭—೮೦ ॥ ಆಗ ಮಹಾ ಪರಾಕ್ರಮವಂತನಾದ ನೀಲನಾದರೋ ಭಯಂಕರ ಸಿಂಹನಾದವನ್ನು ಮಾಡುತ್ತ, ಆ ರಾವಣನ ರಥದ ಅಗ್ರಭಾಗದಲ್ಲಿ ಮಾತ್ರವಲ್ಲದೆ ಅವನ ಧನುಸ್ಸಿನ ಮುಂಭಾಗದಲ್ಲಿಯೂ, ಕಿರೀಟದ ಅಗ್ರಭಾಗದಲ್ಲಿಯೂ ಬಗೆಬಗೆಯ ರೂಪಗಳನ್ನು ಧರಿಸಿ ಚಿತ್ರವಿಚಿತ್ರವಾಗಿ ಸಂಚರಿಸುತ್ತಿದ್ದನು. ಈ ರೀತಿ ಸಂಚರಿಸುತ್ತಿದ್ದ ನೀಲನನ್ನು ನೋಡಿ ಹನುಮಂತನೂ, ಶ್ರೀರಾಮಲಕ್ಷ್ಮಣರೂ ಪರಮಾಶ್ಚರ್ಯಭರಿತರಾದರು. ಆ ಸಮಯದಲ್ಲಿ ರಾವಣಾಸುರನು, ವಾನರೋತ್ತಮನಾದ ಆ ನೀಲನ ಲಾಘವದಿಂದ ತಾನೂ ಆಶ್ಚರ್ಯಚಕಿತನಾಗಿ ಪ್ರಜ್ವಲಿಸುತ್ತಿರು

ಮಾಸ ದೀಪ್ತಮಾಗ್ನೇಯಮದ್ಭುತಂ ॥ ೮೨ ॥ ತತಸ್ತೇ ಚುಕ್ರುಶುರ್ಹೃಷ್ಟಾ ಲಬ್ಧಲಕ್ಷಾಃ ಪ್ಲವಂಗಮಾಃ । ನೀಲಲಾಘವಸಂಭ್ರಾಂತಂ ದೃಷ್ಟ್ವಾ ರಾವಣಮಾಹವೇ ॥ ೮೩ ॥ ವಾನರಾಣಾಂ ನಿನಾದೇನ ಸಂರಬ್ಧೋ ರಾವಣಸ್ತದಾ । ಸಂಭ್ರಮಾವಿಷ್ಟಹೃದಯೋ ನಕಿಂಚಿತ್ ಪ್ರತ್ಯಪದ್ಯತ ॥೮೪॥ ಆಗ್ನೇಯೇನಾಽಥ ಸಂಯುಕ್ತಂ ಗೃಹೀತ್ವಾ ರಾವಣಃ ಶರಂ । ಧ್ವಜಶೀರ್ಷಸ್ಥಿತಂ ನೀಲಮುದೈಕ್ಷತ ನಿಶಾಚರಃ ॥ ೮೫ ॥ ತತೋಽಬ್ರವೀನ್ಮಹಾತೇಜಾ ರಾವಣೋ ರಾಕ್ಷಸೇಶ್ವರಃ । “ ಕಪೇ! ಲಾಘವಯುಕ್ತೋಽಸಿ ಮಾಯಯಾ ಪರಯಾಽನಯಾ ॥ ೮೬ ॥ ಜೀವಿತಂ ಖಲು ರಕ್ಷಸ್ವ ಯದಿ ಶಕ್ನೋಷಿ

ಅದ್ಭುತಂ - ಆಶ್ಚರ್ಯಕರವಾದ, ದೀಪ್ತಂ - ಪ್ರಜ್ವಲಿಸುತ್ತಿರುವ, ಆಗ್ನೇಯಮಸ್ತ್ರಂ - ಆಗ್ನೇಯಾಸ್ತ್ರವನ್ನು, ಆಹಾರಯಾಮಾಸ - ತೆಗೆದುಕೊಂಡನು. ॥ ೮೨ ॥ ತತಃ - ಬಳಿಕ, ಲಬ್ಧಲಕ್ಷಾಃ - ಹೊಂದಲ್ಪಟ್ಟ ಲಕ್ಷ್ಯಭೂತನಾದ ರಾವಣನುಳ್ಳ, ತೇಪ್ಲವಂಗಮಾಃ - ಆ ವಾನರರು, ಆಹವೇ - ಕಾಳಗದಲ್ಲಿ, ನೀಲ.....ತಂ - ನೀಲನ ಲಘುತ್ವದಿಂದ ಭ್ರಾಂತನಾದ, ರಾವಣಂ - ರಾವಣನನ್ನು, ದೃಷ್ಟ್ವಾ - ಕಂಡು, ಹೃಷ್ಟಾಃ - ಸಂತೋಷಗೊಂಡವನಾಗಿ, ಚುಕ್ರುಶುಃ - ಕೂಗಿದರು. ॥ ೮೩ ॥ ವಾನರಾಣಾಂ - ಕಪಿಗಳ, ನಾದೇನಚ - ಧ್ವನಿಯಿಂದಲೂ, ತದಾ - ಆ ಕಾಲದಲ್ಲಿ, ರಾವಣಃ - ರಾವಣನು, ಸಂಭ್ರ.....ಯಃ - ತ್ವರೆಯಿಂದ ಆಕ್ರಾಂತವಾದ ಮನಸ್ಸುಳ್ಳವನಾಗಿ, ಸಂರಬ್ಧಃ - ಕುಪಿತನಾಗಿ, ಕಿಂಚಿತ್ - ಯಾವ ಕಾರ್ಯವನ್ನೂ, ನಪ್ರತ್ಯಪದ್ಯತ - ಮಾಡಲಾರದೇ ಹೋದನು. ॥ ೮೪ ॥ ನಿಶಾಚರಃ - ರಾಕ್ಷಸನಾದ, ರಾವಣಃ - ರಾವಣನು, ಅಥ - ಬಳಿಕ, ಆಗ್ನೇಯೇನ - ಆಗ್ನೇಯಾಸ್ತ್ರದಿಂದ, ಸಂಯುಕ್ತಂ - ಕೂಡಿರುವ, ಶರಂ - ಬಾಣವನ್ನು, ಗೃಹೀತ್ವಾ - ತೆಗೆದುಕೊಂಡು, ಧ್ವಜ....ತಂ - ಧ್ವಜದ ಅಗ್ರಭಾಗದಲ್ಲಿ ಕುಳಿತಿರುವ, ನೀಲಂ - ನೀಲನನ್ನು, ಉದೈಕ್ಷತ - ನೋಡಿದನು. ॥ ೮೫ ॥ ತತಃ - ಬಳಿಕ, ಮಹಾತೇಜಾಃ - ಮಹಾ ಪರಾಕ್ರಮಿಯಾದ, ರಾಕ್ಷಸೇಶ್ವರಃ - ರಾಕ್ಷಸನಾಥನಾದ, ರಾವಣಃ - ರಾವಣನು, ಅಬ್ರವೀತ್ - ನುಡಿದನು, ಹೇ ಕಪೇ - ಎಲೈ ಚಂಚಲವಾದ ಪ್ರವೃತ್ತಿಯುಳ್ಳವನೇ, ವಾನರಃ - ವಾನರನೇ, ಲಾಘವಯುಕ್ತಃ - ಲಘುತ್ವದಿಂದೊಡಗೂಡಿದವನು, ಅಸಿ - ಆಗಿರುವೆ, ಶಕ್ನೋಷಿಯದಿ - ಸಮರ್ಥನಾದರೆ, ಜೀವಿತಂಖಲು - ಪ್ರಾಣವನ್ನಾದರೆ, ರಕ್ಷಸ್ವ - ಕಾಪಾಡಿಕೋ, ಪರಯಾ - ಶ್ರೇಷ್ಠ

ವುದೂ, ಮಹದದ್ಭುತವಾದುದೂ ಆದ ಆಗ್ನೇಯಾಸ್ತ್ರವನ್ನು ಬಿಲ್ಲಿನಲ್ಲಿ ಸಂಧಿಸಿದನು. ಆಗ ವಾನರರೆಲ್ಲರೂ, ತಮ್ಮ ಸೇನಾಪತಿಯಾದ ನೀಲನ ಲಾಘವವನ್ನೂ, ರಾವಣನ ಚಾತುರ್ಯವನ್ನೂ ನೋಡಿ ಮಹದಾನಂದಭರಿತರಾದರು. ಆಮೇಲೆ ಅವರೆಲ್ಲರೂ ಒಟ್ಟಾಗಿ ಸೇರಿ ಭೂಮ್ಯಂತರಿಕ್ಷಗಳೆರಡೂ ಭೇದಿಸಿ ಹೋಗುವಂತೆ ಮಹಾ ಸಿಂಹನಾದಗಳನ್ನು ಮಾಡಿ ಮೆರೆದರು. ಆ ಮಹಾ ಧ್ವನಿಯಿಂದ ರಾವಣನು ಸ್ವಲ್ಪಹೊತ್ತು ತಟಸ್ಥನಾಗಿದ್ದು ಏನುಮಾಡಬೇಕೆಂದು ಯೋಚಿಸುತ್ತ ನಿಂತನು. ಆ ಬಳಿಕ ಅವನು ಧೈರ್ಯವನ್ನವಲಂಬಿಸಿದವನಾಗಿ ಕ್ರೋಧೋದ್ದೀಪಿತನೂ ಆಗಿ ಆಗ್ನೇಯಾಸ್ತ್ರವನ್ನು ತೆಗೆದುಕೊಂಡು ತನ್ನ ಧ್ವಜಾಗ್ರದಲ್ಲಿದ್ದ ನೀಲನೆಂಬ ವಾನರವೀರನನ್ನು ನೋಡಿದನು. ॥ ೮೧—೮೫ ॥ ಆಗಲಾ ತೇಜಸಂಪನ್ನನಾದ ರಾವಣನು ಅವನನ್ನು ಕುರಿತು, “ ಎಲೈ ವಾನರನೇ! ಭಲೇ! ಮೆಚ್ಚಿದೆ; ಬಹು ದೊಡ್ಡ ಮಾಯೆಯನ್ನವಲಂಬಿಸಿ ಲಘುತ್ವವನ್ನು ಮೆರೆದೆ. ನೀನೀಗ ಅನೇಕ ರೂಪಗಳನ್ನು ಯಾರಿಗೂ ತಿಳಿಯದೆ ತಾಳುತ್ತಿರುವೆಯಲ್ಲವೆ? ಇರಲಿರಲಿ; ಇದೋ ನೀನು ಅಂತಹ ಸಾಮರ್ಥ್ಯ

ವಾನರ! । ತಾನಿ ತಾನ್ಯಾತ್ಮರೂಪಾಣಿ ಸೃಜಸಿ ತ್ವಮನೇಕಶಃ ॥೮೭॥ ¶ ತಥಾಪಿ ತ್ವಾಂ ಮಯಾ ಮುಕ್ತಸ್ಸಾಯಕೋಽಸ್ತ್ರಪ್ರಯೋಜಿತಃ । ಜೀವಿತಂ ಪರಿರಕ್ಷಂತಂ ಜೀವಿತಾದ್ಭ್ರಂಶಯಿಷ್ಯತಿ'' ॥೮೮॥ ಏವಮುಕ್ತ್ವಾ ಮಹಾಬಾಹೂ ರಾವಣೋ ರಾಕ್ಷಸೇಶ್ವರಃ । ಸಂಧಾಯ ಬಾಣಮಸ್ತ್ರೇಣ ಚಮೂಪತಿಮತಾಡಯತ್ ॥೮೯॥ ಸೋಽಸ್ತ್ರಯುಕ್ತೇನ ಬಾಣೇನ ನೀಲೋ ವಕ್ಷಸಿ ತಾಡಿತಃ । ನಿರ್ದಹ್ಯಮಾನಸ್ಸಹಸಾ ನಿಪಪಾತ ಮಹೀತಲೇ ॥೯೦॥ ಪಿತೃಮಾಹಾತ್ಮ್ಯಸಂಯೋಗಾದಾತ್ಮನಶ್ಚಾಪಿ ತೇಜಸಾ । ಜಾನುಭ್ಯಾಮಪತದ್ಭೂಮೌ ನಚ ಪ್ರಾಣೈರ್ವ್ಯಯುಜ್ಯತ ॥೯೧॥ ವಿಸಂಜ್ಞಂ ವಾನರಂ ದೃಷ್ಟ್ವಾ ದಶ

ವಾದ, ಅನಯಾಮಾಯಯಾ - ಈ ವಂಚನೆಯಿಂದ, ತ್ವಂ - ನೀನು, ತಾನಿತಾನಿ - ಆಯಾ, ಆತ್ಮರೂಪಾಣಿ - ನಿನ್ನ ಯೋಗ್ಯತೆಗೆ ಅನುರೂಪವಾದ ವ್ಯಾಪಾರಗಳನ್ನು, ಅನೇಕಶಃ - ಬಹಳವಾಗಿ, ಸೃಜಸಿ - ಸೃಷ್ಟಿ ಮಾಡುತ್ತಿರುವೆ, ತಥಾಪಿ - ಹಾಗಾದರೂ, ಜೀವಿತಂ - ಪ್ರಾಣವನ್ನು, ಪರಿರಕ್ಷಂತಂ - ಸಂರಕ್ಷಣೆ ಮಾಡಿಕೊಳ್ಳುತ್ತಿರುವ, ತ್ವಾಂ - ನಿನ್ನನ್ನು, ಮಯಾ - ನನ್ನಿಂದ, ಯುಕ್ತಃ - ಪ್ರಯೋಗ ಮಾಡಲ್ಪಟ್ಟ, ಅಸ್ತ್ರಪ್ರಯೋಜಿತಃ - ಆಗ್ನೇಯಾಸ್ತ್ರದಿಂದ ಸೇರಿಸಲ್ಪಟ್ಟ, ಸಾಯಕಃ - ಬಾಣವು, ಜೀವಿತಾತ್ - ಪ್ರಾಣದಿಂದ, ಭ್ರಂಶಯಿಷ್ಯತಿ - ಬೇರೆ ಮಾಡುವುದು, ಇತಿ - ಇಂತೆಂದು, ಅಬ್ರವೀತ್- ನುಡಿದನು. ॥ ೮೭-೮೮ ॥ ಏವಂ - ಈ ಪರಿ, ಉಕ್ತ್ವಾ - ಹೇಳಿ, ಮಹಾಬಾಹುಃ - ಮಹಾ ಭುಜಬಲಪರಾಕ್ರಮಿಯಾದ, ರಾಕ್ಷಸೇಶ್ವರಃ - ರಾಕ್ಷಸಾಧಿಪತಿಯಾದ, ರಾವಣಃ - ರಾವಣನು, ಅಸ್ತ್ರೇಣ - ಅಸ್ತ್ರದಿಂದ, ಬಾಣಂ - ಬಾಣವನ್ನು, ಸಂಧಾಯ - ಸೇರಿಸಿ, ಚಮೂಪತಿಂ - ಸೈನ್ಯಾಧಿಪತಿಯನ್ನು, ಅತಾಡಯತ್ - ಹೊಡೆದನು. ॥ ೮೯ ॥ ಸನೀಲಃ - ಆ ನೀಲನು, ಅಸ್ತ್ರಯುಕ್ತೇನ - ಅಸ್ತ್ರದಿಂದ ಯುಕ್ತವಾದ, ಬಾಣೇನ - ಬಾಣದಿಂದ, ವಕ್ಷಸಿ - ಎದೆಯಲ್ಲಿ, ತಾಡಿತಃ - ಹೊಡೆಯಲ್ಪಟ್ಟವನಾಗಿ, ಸಹಸಾ - ಜಾಗ್ರತೆಯಾಗಿ, ನಿರ್ದಹ್ಯಮಾನಃ - ದಹಿಸಲ್ಪಟ್ಟವನಾಗಿ, ಮಹೀತಲೇ - ನೆಲದಲ್ಲಿ, ನಿಪಪಾತ - ಬಿದ್ದನು. ॥ ೯೦ ॥ ಪಿತೃ....ತ್ - ತಂದೆಯಾದ ಅಗ್ನಿಯ ಪ್ರಭಾವದಿಂದಲೂ, ಆತ್ಮನಃ - ತನ್ನ, ತೇಜಸಾ - ಸಾಮರ್ಥ್ಯದಿಂದಲೂ, ಜಾನುಭ್ಯಾಂ - ಮೊಳಕಾಲುಗಳಿಂದ, ಭೂಮೌ - ನೆಲದಲ್ಲಿ, ಅಪತತ್ - ಬಿದ್ದನು, ಪ್ರಾಣೈಃ - ಪ್ರಾಣಗಳಿಂದ, ನವ್ಯಯುಜ್ಯತ - ಬಿಡಲ್ಪಡಲಿಲ್ಲ. ॥ ೯೧ ॥ ರಣೋ

ವಂತನೇ ಆದರೆ ನಿನ್ನ ಪ್ರಾಣಗಳನ್ನೀಗ ಕಾಪಾಡಿಕೊ. ನೀನು ಮಹಾ ಪ್ರಯತ್ನಪೂರ್ವಕವಾಗಿ ಪ್ರಾಣಗಳನ್ನುಳಿಸಿಕೊಳ್ಳಬೇಕೆಂದರೂ ಈ ನನ್ನ ಬಾಣವು ಬೇರೆ ನಿನ್ನನ್ನುಳಿಸುವುದಿಲ್ಲವು'' ಎಂದು ಹೇಳಿದನು. ಈ ರೀತಿ ನುಡಿದ ಬಳಿಕ ಮಹಾಭುಜನಾದ ಆ ರಾವಣನು ಆ ಆಗ್ನೇಯಾಸ್ತ್ರವನ್ನು ಕಪಿಸೇನಾಪತಿಯಾದ ನೀಲನಮೇಲೆ ಪ್ರಯೋಗಿಸಿದನು. ॥೮೬–೯೦॥ ಆ ಯಸ್ತ್ರವು ನೀಲನ ವಕ್ಷಸ್ಥಳಕ್ಕೆ ನಾಟಿಕೊಂಡಿತು. ಆಗಲವನು ಆದರಿಂದುರಿಯುತ್ತ ಬಹು ಬೇಗನೆ ನೆಲಕ್ಕುರುಳಿದನು. ಆದರೂ ಆ ವಾನರೋತ್ತಮನು ತನ್ನ ತಂದೆಯಾದ ಅಗ್ನಿದೇವನ ಮಹಾತ್ಮ್ಯೆಯಿಂದಲೂ, ತನ್ನ ತೇಜೋಬಲದಿಂದಲೂ ಕೆಳಗೆ ಬೀಳುವಾಗ ಮೊಣಕಾಲುಗಳ ಆಸರೆಯಿಂದ ನಿಂತು ಪ್ರಾಣಗಳಿಂದುಕೊಂಡನು. ಆ ರೀತಿ ಮೂರ್ಛೆ

¶ ಇಲ್ಲಿ ವಾನರಸೇನಾನಾಯಕನಾದ ನೀಲನು ರಾವಣನ ರಥಾಗ್ರಭಾಗದಲ್ಲಿಯೂ, ಧ್ವಜಾಗ್ರಭಾಗದಲ್ಲಿಯೂ, ಕಿರೀಟದ ಮೇಲೆಯೂ ಲಾಘವದಿಂದ ಓಡಾಡುತ್ತಿದ್ದುದರಿಂದ ಅವನು ಅನೇಕ ರೂಪಗಳನ್ನು ಏಕಕಾಲದಲ್ಲಿಯೇ ಧರಿಸಿದ್ದನೆಂದು ಆ ರಾವಣನು ಭ್ರಾಂತಿಪಟ್ಟುದಾಗಿ ಗ್ರಹಿಸಬೇಕು. (ಗೋ+ಮ)

ಗ್ರೀವೋ ರಣೋತ್ಸುಕಃ । ರಥೇನಾಂಬುದನಾದೇನ ಸೌಮಿತ್ರಿಮಭಿದುದ್ರುವೇ ॥೯೨॥ ಆಸಾದ್ಯ ರಣಮಧ್ಯೇತು ವಾರಯಿತ್ವಾ ಸ್ಥಿತೋ ಜ್ವಲರ್ । ಧನುರ್ವಿಷ್ಫಾರಯಾಮಾಸ ಕಂಪಯನ್ನಿವ ಮೇದಿನೀಂ ॥೯೩॥ ತಮಾಹ ಸೌಮಿತ್ರಿರದೀನಸತ್ತ್ವೋ ವಿಷ್ಫಾರಯಂತಂ ಧನುರಪ್ರಮೇಯಂ । "ಅಭ್ಯೇಹಿ ಮಾಮೇವ ನಿಶಾಚರೇಂದ್ರ! ನವಾನರಾಂಸ್ತ್ವಂ ಪ್ರತಿಯೋದ್ಧುಮರ್ಹಃ" ॥೯೪॥ * ಸತಸ್ಯ ವಾಕ್ಯಂ ಪ್ರತಿಪೂರ್ಣಘೋಷಂ

ತ್ಸುಕಃ - ಯುದ್ಧೇಚ್ಛೆಯುಳ್ಳ, ದಶಗ್ರೀವಃ - ದಶಕಂಠನು, ವಿಸಂಜ್ಞಂ - ಪ್ರಜ್ಞೆಯಿಲ್ಲದ, ವಾನರಂ - ವಾನರನನ್ನು, ದೃಷ್ಟ್ವಾ - ಕಂಡು, ಅಂಬುದನಾದೇನ - ಮೇಘದಂತೆ ಧ್ವನಿಯುಳ್ಳ, ರಥೇನ - ರಥದಿಂದ, ಸೌಮಿತ್ರಿಂ - ಲಕ್ಷ್ಮಣನನ್ನು ಕುರಿತು, ಅಭಿದುದ್ರುವೇ - ಅಟ್ಟಿಬಂದನು. ॥೯೨॥ ರಣಮಧ್ಯೇ - ಯುದ್ಧರಂಗದ ಮಧ್ಯದಲ್ಲಿ, ಲಕ್ಷ್ಮಣಂ - ಲಕ್ಷ್ಮಣನನ್ನು, ಆಸಾದ್ಯ - ಹೊಂದಿ, ವಾರಯಿತ್ವಾ - ಸುಗ್ರೀವಾದಿಗಳನ್ನು ನಿವಾರಿಸಿ, ಸ್ಥಿತಃ - ನಿಂತವನಾಗಿ, ಜ್ವಲರ್ - ಕೋಪಗೊಂಡು, ಧನುಃ - ಧನುಸ್ಸನ್ನೂ, ಮೇದನೀಂ-ಭೂಮಿಯನ್ನೂ, ಕಂಪಯನ್ನಿವ - ಕಂಪಿಸುವಂತೆ, ವಿಷ್ಫಾರಯಾಮಾಸ - ಟಂಕಾರ ಮಾಡಿದನು. ॥೯೩॥ ಅದೀನಸತ್ವಃ - ಧೈರ್ಯಯುಕ್ತವಾದ ಬಲವುಳ್ಳ, ಸೌಮಿತ್ರಿಃ - ಲಕ್ಷ್ಮಣನು, ಅಪ್ರಮೇಯಂ - ಅಪರಿಮಿತವಾದ, ಧನುಃ - ಬಿಲ್ಲನ್ನು, ವಿಷ್ಫಾರಯಂತಂ - ಟಂಕಾರ ಮಾಡುತ್ತಿರುವ, ತಂ - ರಾವಣನನ್ನು ಕುರಿತು, ಹೇ ನಿಶಾಚರೇಂದ್ರ - ಎಲೈ ರಾಕ್ಷಸ ರಾಜನೇ, ತ್ವಂ - ನೀನು, ವಾನರಾರ್ - ಕಪಿಗಳನ್ನು ಕುರಿತು, ಪ್ರತಿಯೋದ್ಧುಂ - ಯುದ್ಧ ಮಾಡುವುದಕ್ಕೆ, ನಾರ್ಹಃ - ಯೋಗ್ಯನಲ್ಲ, ಮಾಮೇವ ನನ್ನನ್ನು ಕುರಿತೇ, ಅಭ್ಯೇಹಿ - ಬಾ, ಇತ್ಯಾಹ - ಇಂತೆಂದು ಹೇಳಿದನು. ॥೯೪॥ ರಾಜಾ ರಾಕ್ಷಸರಾಜನಾದ, ಸರಕ್ಷಃ - ಆ ರಾವಣನು, ತಸ್ಯ - ಆ ಲಕ್ಷ್ಮಣನ, ಪ್ರತಿ....ಷಂ - ಸಂಪೂರ್ಣವಾದ ಧ್ವನಿಯುಳ್ಳ, ವಾಕ್ಯಂ - ಮಾತನ್ನು, ಉಗ್ರಂ -

ಯೊಂದಿದ್ದ ನೀಲನನ್ನು ನೋಡಿ ಯುದ್ಧೋತ್ಸಾಹವುಳ್ಳ ಆ ರಾವಣಾಸುರನು ಮೇಘಧ್ವನಿಯನ್ನನುಕರಿಸುವ ಧ್ವನಿಯುಳ್ಳ ರಥವನ್ನು ಬಹು ವೇಗವಾಗಿ ತಿರುಗಿಸಿ ಲಕ್ಷ್ಮಣನಿದ್ದೆಡೆಗೆ ಓಡಿಸಿದನು. ಹಾಗೆ ಬರುವಾಗ ಮಾರ್ಗಮಧ್ಯದಲ್ಲಿ ಅಡ್ಡಬಂದ ಮಹಾ ವಾನರರೆಲ್ಲರನ್ನೂ ತನ್ನ ಬಾಣಜಾಲದಿಂದ ದಿಕ್ಕುಪಾಲಾಗಿ ಚದುರಿಸುತ್ತ ಮುನ್ನುಗ್ಗಿದನು. ಆ ರೀತಿ ಮುಂದುವರಿದು ಕ್ರೋಧಾಗ್ನಿಯಿಂದುರಿಯುತ್ತ ಭೂಮಿಯೆಲ್ಲವೂ ಗಡಗಡನೆ ನಡುಗುವಂತೆ ಧನುಷ್ಟಂಕಾರ ಮಾಡಿದನು. ಆಗ ಅತ್ಯಧಿಕ ಪರಾಕ್ರಮವಂತನಾದ ಲಕ್ಷ್ಮಣಸ್ವಾಮಿಯು ಧನುಷ್ಟಂಕಾರ ಮಾಡುತ್ತಿದ್ದ ಆ ರಾವಣನನ್ನು ನೋಡಿ, "ಅಯ್ಯಾ ರಾಕ್ಷಸರಾಜನೇ! ರಾವಣನೇ!! ನೀನು ವಾನರರೊಡನೆ ಯುದ್ಧಮಾಡುವುದುಚಿತವಲ್ಲವು. ಆದುದರಿಂದ ನನ್ನೊಡನೆ ಯುದ್ಧಮಾಡು ಬಾ" ಎಂದನು. ॥೯೧-೯೪॥ ಹಾಗೆ ನುಡಿದ ಲಕ್ಷ್ಮಣನ ನುಡಿಯನ್ನು ಕೇಳಿ ರಾವಣನು, ಅವನ ಧನುಷ್ಟಂಕಾರವನ್ನೂ ಕೇಳಿದತರುವಾಯ ಮಹಾ ಕ್ರೋಧೋದ್ದೀಪಿತನಾಗಿ ತನಗಭಿ

* ಈ ಶ್ಲೋಕ ಮತ್ತು ಇದರ ಮುಂದಿನ ಶ್ಲೋಕ ಇವೆರಡರ ಪ್ರಸಿದ್ಧಾರ್ಥವು ಸ್ಪಷ್ಟವಾಗಿಯೇ ಇರುವುದು. ಗೂಢಾರ್ಥವಾದರೋ, "ಎಲೈ ರಾಘವನಾದ ಲಕ್ಷ್ಮಣಸ್ವಾಮಿಯೇ! ನಾನು ವಿಪರೀತ ಬುದ್ಧಿಯುಳ್ಳವನಾದರೂ, ಯಮಸದನವನ್ನೈದುವವನೇ ಆದರೂ, ಪಾಪಿಷ್ಠನೇ ಆದರೂ, ನಿನ್ನ ಬಿಲ್ಲಿನ ಟಂಕಾರದಿಂದ ಕುಪಿತನೇ ಆಗಿದ್ದರೂ ಮಹಾತ್ಮನಾದ ನೀನು ಇಷ್ಟು ಕಾಲಕ್ಕೆ ನನಗೆ ದರ್ಶನವಿತ್ತು ಅನುಗ್ರಹಿಸಿದೆ" ಎಂದು ತಿಳಿಯಬೇಕು. (ಮ)

ಜ್ಯಾಶಬ್ದಮುಗ್ರಂಚ ನಿಶಮ್ಯ ರಾಜಾ । ಆಸಾದ್ಯ ಸೌಮಿತ್ರಿಮವಸ್ಥಿತಂ ತಂ ಕೋಪಾನ್ವಿತೋ ವಾಕ್ಯಮುವಾಚ ರಕ್ಷಃ ॥೯೫॥ "ದಿಷ್ಟ್ಯಾಽಸಿ ಮೇ ರಾಘವ! ದೃಷ್ಟಿಮಾರ್ಗಂ ಪ್ರಾಪ್ತೋಽಂತಗಾಮೀ ವಿಪರೀತಬುದ್ಧಿಃ । ಅಸ್ಮಿನ್ ಕ್ಷಣೇ ಯಾಸ್ಯಸಿ ಮೃತ್ಯುದೇಶಂ ಸಂಸಾದ್ಯಮಾನೋ ಮಮ ಬಾಣಜಾಲೈಃ" ॥೯೬॥ ತಮಾಹ ಸೌಮಿತ್ರಿರವಿಸ್ಮಯಾನೋ ಗರ್ಜಂತಮುದ್ವೃತ್ತಶಿತಾಗ್ರದಂಷ್ಟ್ರಂ । "ರಾಜನ್ನಗರ್ಜಂತಿ ಮಹಾಪ್ರಭಾವಾ ವಿಕತ್ಥಸೇ ಪಾಪಕೃತಾಂ ವರಿಷ್ಠ! ॥೯೭॥ ಜಾನಾಮಿ ವೀರ್ಯಂ ತವ ರಾಕ್ಷಸೇಂದ್ರ! ಬಲಂ ಪ್ರತಾಪಂಚ ಪರಾಕ್ರಮಂಚ । ಅವಸ್ಥಿತೋಽಹಂ ಶರಚಾಪಪಾಣಿರಾಗಚ್ಛ

---

ಭಯಂಕರವಾದ, ಜ್ಯಾಶಬ್ದಂಚ - ಹೆದೆಯ ಶಬ್ದವನ್ನೂ, ನಿಶಮ್ಯ - ಕೇಳಿ, ಅವಸ್ಥಿತಂ - ನಿಂತಿರುವ, ತಂಸೌಮಿತ್ರಿಂ - ಆ ಲಕ್ಷ್ಮಣನನ್ನು, ಆಸಾದ್ಯ - ಹೊಂದಿ, ಕೋಪಾನ್ವಿತಃ - ಕೋಪಯುಕ್ತನಾಗಿ, ವಾಕ್ಯಂ - ಮಾತನ್ನು, ಉವಾಚ - ಹೇಳಿದನು. ॥೯೫॥ ಹೇ ರಾಘವ - ಎಲೈ ರಘುವಂಶೋತ್ಪನ್ನನೇ, ಅಂತಗಾಮೀ - ಕಡೆಗಾಲವನ್ನು ಹೊಂದಿದ, ವಿಪರೀತಬುದ್ಧಿಃ - ವ್ಯತ್ಯಸ್ತಬುದ್ಧಿಯುಳ್ಳ ನೀನು, ದಿಷ್ಟ್ಯಾ - ದೈವಾಧೀನದಿಂದ, ಮೇ - ನನ್ನ, ದೃಷ್ಟಿಮಾರ್ಗಂ - ದೃಷ್ಟಿಗೋಚರವನ್ನು, ಪ್ರಾಪ್ತೋಽಸಿ - ಹೊಂದಿದೆ, ಅಸ್ಮಿನ್‌ಕ್ಷಣೇ - ಈ ಕ್ಷಣದಲ್ಲಿಯೇ, ಮಮ - ನನ್ನ, ಬಾಣಜಾಲೈಃ - ಬಾಣಸಮೂಹಗಳಿಂದ, ಸಂಸಾದ್ಯಮಾನಃ - ಹೊಡೆಯಲ್ಪಟ್ಟವನಾಗಿ, ಮೃತ್ಯುದೇಶಂ - ಯಮಾಲಯವನ್ನು, ಯಾಸ್ಯಸಿ - ಹೊಂದುವೆ. ॥೯೬॥ ಸೌಮಿತ್ರಿಃ - ಲಕ್ಷ್ಮಣನು, ಅವಿಸ್ಮಯಾನಃ - ಆಶ್ಚರ್ಯಪಡೆದವನಾಗಿ, ಉದ್ವೃ....ಷ್ಟ್ರಂ - ಗುಂಡಾಗಿರುವ ಶುಭ್ರವಾದ ಕೊನೆಗಳುಳ್ಳ ಕೋರೆಗಳುಳ್ಳ, ಗರ್ಜಂತಂ - ಕೂಗುತ್ತಿರುವ, ತಂ - ಆ ರಾವಣನನ್ನು ಕುರಿತು, ಹೇ ರಾಜನ್ - ಎಲೈ ಅರಸೇ, ಪಾಪಕೃತಾಂ - ಪಾಪವನ್ನು ಮಾಡುವವರಲ್ಲಿ, ವರಿಷ್ಠ - ಶ್ರೇಷ್ಠನೇ, ಮಹಾಪ್ರಭಾವಾಃ - ಬಹು ಸಮರ್ಥರು, ನಗರ್ಜಂತಿ - ಗರ್ಜಿಸುವುದಿಲ್ಲ, ವಿಕತ್ಥಸೇ - ಆತ್ಮಶ್ಲಾಘನೆ ಮಾಡಿಕೊಳ್ಳುತ್ತೀಯೇ. ॥೯೭॥ ಹೇ ರಾಕ್ಷಸೇಂದ್ರ - ರಾಕ್ಷಸಾಧಿಪತಿಯೇ, ತವ - ನಿನ್ನ, ವೀರ್ಯಂಚಾಪಿ - ಪರಾಕ್ರಮವನ್ನೂ, ಬಲಂಚ - ದೇಹತ್ರಾಣೆಯನ್ನೂ, ಪ್ರತಾಪಂಚ - ಶತ್ರುನಿಗ್ರಹ ಸಾಮರ್ಥ್ಯವನ್ನೂ, ಪರಾಕ್ರಮಂ - ಶೌರ್ಯವನ್ನೂ, ಜಾನಾಮಿ - ತಿಳಿದಿದ್ದೇನೆ, ಅಹಂ - ನಾನು, ಶರಚಾಪಪಾಣಿಃ - ಧನುರ್ಬಾಣಗಳನ್ನು ಹಿಡಿದು, ಅವಸ್ಥಿತಃ - ನಿಂತಿದ್ದೇನೆ, ಮೋಘ....ನ - ವ್ಯರ್ಥವಾದ ಶ್ಲಾಘನೆಯಿಂದ, ಕಿಂ -

---

ಮುಖವಾಗಿ ಬರುತ್ತಿದ್ದ ಅವನ ಬಳಿಗೈದಿ, "ಎಲೈ ರಾಘವನೇ! ನೀನು ವಿಪರೀತ ಬುದ್ಧಿಯುಳ್ಳವನೂ, ಮೃತಿಯೊಂದಬಯಸಿರುವವನೂ ಆಗಿ ಅದೃಷ್ಟವಿಶೇಷದಿಂದ ಈಗ ನನ್ನ ಕಣ್ಣಿಗೆ ಬಿದ್ದೆ. ನೀನೀಗಲೇ ನನ್ನ ಬಾಣಗಳಿಂದ ಪ್ರಾಣಗಳನ್ನು ತೊರೆದು ಯಮಸದನವನ್ನೈದುತ್ತೀಯೆ" ಎಂದನು. ಆ ಮಾತುಗಳನ್ನು ಕೇಳಿ ಸುಮಿತ್ರಾಪುತ್ರನಾದ ಲಕ್ಷ್ಮಣನು ಬಹು ತೀಕ್ಷ್ಣಣಗಳಾದುವೂ, ಭಯಂಕರಗಳಾದುವೂ ಆದ ಕೋರೆಹಲ್ಲುಗಳುಳ್ಳ ಆ ರಾವಣಾಸುರನನ್ನು ತೃಣಪ್ರಾಯವನ್ನಾಗಿ ಭಾವಿಸಿ ಅವನನ್ನು ಕುರಿತು, "ಎಲಾ ರಾಕ್ಷಸಾಧಮನೇ! ಪಾಪಿಷ್ಠರಾದವರಲ್ಲಿ ನೀನು ಮಿಗಿಲಾದವನು. ಎಲವೊ! ಅಧಿಕ ಸಾಮರ್ಥ್ಯವಂತರಾದವರು ನಿನ್ನಂತೆ ಈ ರೀತಿ ವೃಥಾಭಾಷಣಗಳನ್ನಾಗಲಿ, ಸ್ವಪ್ರಶಂಸೆಯನ್ನಾಗಲಿ ಮಾಡುವುದಿಲ್ಲವು. ಅಯ್ಯಾ ರಾಕ್ಷಸಶ್ರೇಷ್ಠನೇ! ನಿನ್ನ ಬಲವನ್ನೂ, ಪರಾಕ್ರಮವನ್ನೂ, ಪ್ರತಾಪವನ್ನೂ ನಾನು ಚೆನ್ನಾಗಿಯೇ ಅರಿತಿರುವೆನು. ಆದುದರಿಂದಲೇ ನಾನೀಗ ಧನು

ಕಿಂ ಮೋಘವಿಕತ್ಥನೇನ " ॥ ೯೮ ॥ ಸ ಏವಮುಕ್ತಃ ಕುಪಿತಸ್ಸಸರ್ಜ ರಕ್ಷೋಧಿಪ ಸ್ಸಪ್ತಶರಾನ್ ಸುಪುಂಖಾನ್ । ತಾನ್ ಲಕ್ಷ್ಮಣಃ ಕಾಂಚನಚಿತ್ರಪುಂಖೈಶ್ಚಿಚ್ಛೇದ ಬಾಣೈ ರ್ನಿಶಿತಾಗ್ರಧಾರೈಃ ॥ ೯೯ ॥ ತಾನ್ ಪ್ರೇಕ್ಷಮಾಣಸ್ಸಹಸಾ ನಿಕೃತ್ತಾನ್ನಿಕೃತ್ತಭೋಗಾ ನಿವ ಪನ್ನಗೇಂದ್ರಾನ್ । ಲಂಕೇಶ್ವರಃ ಕ್ರೋಧವಶಂ ಜಗಾಮ ಸಸರ್ಜ ಚಾನ್ಯಾನ್ನಿ ಶಿತಾನ್ ಪೃಷತ್ಕಾನ್ ॥ ೧೦೦ ॥ ಸಬಾಣವರ್ಷಂತು ವವರ್ಷ ತೀವ್ರಂ ರಾಮಾನುಜಃ ಕಾರ್ಮುಕಸಂಪ್ರಯುಕ್ತಂ । ಕ್ಷುರಾರ್ಧಚಂದ್ರೋತ್ತಮಕರ್ಣಿಭಲ್ಲೈಃ ಶರಾಂಶ್ಚ ಚಿಚ್ಛೇದ ನಚುಕ್ಷುಭೇಚ ॥ ೧೦೧ ॥ ಸಬಾಣಜಾಲಾನ್ಯಥ ತಾನಿತಾನಿ ಮೋಘಾನಿ

ಏನು, ಆಗಚ್ಛ - ಯುದ್ಧಕ್ಕೆ ಬಾ. ॥ ೯೮ ॥ ಸರಕ್ಷೋಧಿಪಃ - ಆ ರಾಕ್ಷಸಾಧಿಪತಿಯು, ಏವಂ - ಈ ಪ್ರಕಾರವಾಗಿ, ಉಕ್ತಃ - ಹೇಳಲ್ಪಟ್ಟವನಾಗಿ, ಕುಪಿತಃ - ಕೋಪಗೊಂಡು, ಸುಪುಂಖಾನ್ - ಒಳ್ಳೇ ಕೊನೆಗಳುಳ್ಳ, ಸಪ್ತಶರಾನ್ - ಏಳು ಬಾಣಗಳನ್ನು, ಸಸರ್ಜ - ಬಿಟ್ಟನು, ಲಕ್ಷ್ಮಣಃ - ಲಕ್ಷ್ಮಣನು, ಕಾಂಚ....ಖೈಃ - ಭಂಗಾರದ ರೇಖೆಗಳಿಂದ ಆಶ್ಚರ್ಯಕರವಾದ ಕೊಂಕಿಗಳುಳ್ಳ, ನಿಶಿ....ರೈಃ - ತೀಕ್ಷ್ಣ ವಾದ ಹದಗಳುಳ್ಳ, ಬಾಣೈಃ - ಬಾಣಗಳಿಂದ, ತಾನ್ - ಆ ರಾವಣನ ಬಾಣಗಳನ್ನು, ಚಿಚ್ಛೇದ - ಕತ್ತರಿಸಿದನು, ಲಂಕೇಶ್ವರಃ - ರಾವಣನು, ಸಹಸಾ - ಜಾಗ್ರತೆಯಾಗಿ, ನಿಕೃತ್ತಭೋಗಾನ್ - ಕತ್ತ ರಿಸಿದ ಶರೀರಗಳುಳ್ಳ, ಪನ್ನ....ವ - ಸರ್ಪಗಳನ್ನಂತೆ, ನಿಕೃತ್ತಾನ್ - ಕತ್ತರಿಸಲ್ಪಟ್ಟ, ತಾನ್ - ಆ ಬಾಣ ಗಳನ್ನು, ಪ್ರೇಕ್ಷಮಾಣಃ - ನೋಡಿ, ಸಹಸಾ - ಜಾಗ್ರತೆಯಾಗಿ, ಕ್ರೋಧವಶಂ - ಕೋಪಾಧೀನ ವನ್ನು, ಜಗಾಮ - ಹೊಂದಿದನು, ಅನ್ಯಾನ್ - ಇತರವಾದ, ನಿಶಿತಾನ್ - ತೀಕ್ಷ್ಣವಾದ, ಪೃಷತ್ಕಾನ್ - ಬಾಣಗಳನ್ನು, ಸಸರ್ಜ - ಬಿಟ್ಟನು. ॥೯೯-೧೦೦॥ ಸರಾಮಾನುಜಃ - ಆ ಲಕ್ಷ್ಮಣನು, ಕಾಮು......ಕ್ತಂ- ಧನುಸ್ಸಿನಿಂದ ಪ್ರಯೋಗಿಸಲ್ಪಟ್ಟ, ತೀವ್ರಂ - ತೀಕ್ಷ್ಣವಾದ, ಬಾಣವರ್ಷಂ - ಬಾಣಗಳ ವೃಷ್ಟಿಯನ್ನು, ವವರ್ಷ - ಸುರಿಸಿದನು, ಕ್ಷುರಾ....ಲ್ಲೈಃ - ತುಂಡುಗತ್ತಿಗಳಂತಿರುವ ಬಾಣಗಳಿಂದಲೂ, ಅರ್ಧಚಂದ್ರಾ ಕಾರವಾದ ಬಾಣಗಳಿಂದಲೂ, ಉತ್ಕೃಷ್ಟವಾದ ಕಿವಿಗಳುಳ್ಳ ಬಾಣಗಳಿಂದಲೂ, ಭಲ್ಲಾಯುಧಗಳಿಂದಲೂ, ಶರಾಂಶ್ಚ - ರಾವಣನ ಬಾಣಗಳನ್ನು, ಚಿಚ್ಛೇದ - ಕತ್ತರಿಸಿದನು. ॥ ೧೦೧ ॥ ಸಃತ್ರಿ......ಜಃ - ಆ

ಬಾಣಗಳನ್ನು ಧರಿಸಿ ಯುದ್ಧಸನ್ನದ್ಧನಾಗಿ ಬಂದಿರುವೆನು. ನೀನೂ ಯುದ್ಧಸನ್ನದ್ಧನಾಗಿಬಾ, ನಿನ್ನನ್ನು ನೀನು ಹೊಗಳಿಕೊಳ್ಳುವುದರಿಂದ ಎಷ್ಟುಮಾತ್ರವೂ ಪ್ರಯೋಜನವಿಲ್ಲವು " ಎಂದು ಹೇಳಿದನು. ಲಕ್ಷ್ಮಣಸ್ವಾಮಿಯಿಂತು ನುಡಿಯಲು ರಾಕ್ಷಸಾಧಿಪತಿಯಾದ ಆ ರಾವಣಾ ಸುರನು ಬಹು ದೃಢವಾದ ಹಿಡಿಗಳುಳ್ಳ ಏಳು ಬಾಣಗಳನ್ನು ಆತನ ಮೇಲೆ ಪ್ರಯೋಗಿಸಿದನು. ಆ ಏಳು ಬಾಣಗಳನ್ನೂ ಮಹಾ ಶೂರನಾದ ಲಕ್ಷ್ಮಣನು ಬಹು ತೀಕ್ಷ್ಣವಾದ ಅಗ್ರ ಭಾಗ ಗಳುಳ್ಳವೂ, ಚಿತ್ರವಿಚಿತ್ರಗಳಾದ ಹಿಡಿಗಳುಳ್ಳವೂ ಆದ ಬಾಣಗಳಿಂದ ಭೇದಿಸಿದನು. ಆಗ ರಾಕ್ಷಸಾಧಿಪನಾದ ರಾವಣನು ಹೆಡೆಗಳನ್ನು ಕತ್ತರಿಸಿದ ಸರ್ಪಗಳಂತಿರುವ ಲಕ್ಷ್ಮಣನು ಮುರಿ ದಿಕ್ಕಿದ ತನ್ನ ಬಾಣಗಳನ್ನು ನೋಡಿ, ಅಪರಿಮಿತವಾಗಿ ಕೋಪಗೊಂಡನು. ॥ ೯೫-೧೦೦ ॥ ಹೀಗೆ ಮಹಾ ಕೋಪೋದ್ದೀಪಿತನಾಗಿ ಅತ್ಯಂತ ತೀಕ್ಷ್ಣಗಳಾದ ಬಾಣಗಳನ್ನು ಆ ಲಕ್ಷ್ಮಣನ ಮೇಲೆ ಮತ್ತೆ ಪ್ರಯೋಗಿಸಿದನು. ಆ ಸಮಯದಲ್ಲಿ ಮಹಾ ತೇಜಸ್ವಿಯಾದ ಲಕ್ಷ್ಮಣ ಸ್ವಾಮಿಯು ಎಷ್ಟುಮಾತ್ರವೂ ಭಯಪಡದೆ ಆ ರಾವಣನು ಸುರಿಸಿದ ಬಾಣದ ಮಳೆಯನ್ನು ಅನುಪಮವಾದ ಅರ್ಧಚಂದ್ರಾಕಾರವಾದ ಬಾಣಜಾಲಗಳಿಂದ ನಾಶಗೊಳಿಸಿದನು. ಈ ರೀತಿ

ಪಶ್ಯಂಸ್ತ್ರಿದಶಾರಿರಾಜಃ । ವಿಸಿಸ್ಮಿಯೇ ಲಕ್ಷ್ಮಣಲಾಘವೇನ ಪುನಶ್ಚ ಬಾಣಾನ್ನಿಶಿತಾನ್ಮುಮೋಚ ॥ ೧೦೨ ॥ ಸಲಕ್ಷ್ಮಣಶ್ಚಾಶುಶರಾನ್ ಶಿತಾಗ್ರಾನ್ಮಹೇಂದ್ರವಜ್ರಾಶನಿತುಲ್ಯವೇಗಾನ್ । ಸಂಧಾಯ ಚಾಪೇ ಜ್ವಲನಪ್ರಕಾಶಾನ್ ಸಸರ್ಜ ರಕ್ಷೋಧಿಪತೇರ್ವಧಾಯ ॥ ೧೦೩ ॥ ಸತಾನ್ ಪ್ರಚಿಚ್ಛೇದ ಹಿ ರಾಕ್ಷಸೇಂದ್ರಶ್ಛಿತ್ವಾಚ ತಾನ್ ಲಕ್ಷ್ಮಣಮಾಜಘಾನ । ಶರೇಣ ಕಾಲಾಗ್ನಿಸಮಪ್ರಭೇಣ ಸ್ವಯಂಭುದತ್ತೇನ ಲಲಾಟದೇಶೇ ॥ ೧೦೪ ॥ ಸಲಕ್ಷ್ಮಣೋ ರಾವಣಸಾಯಕಾರ್ತಶ್ಚಚಾಲ ಚಾಪಂ ಶಿಥಿಲಂ ಪ್ರಗೃಹ್ಯ । ಪುನಶ್ಚ ಸಂಜ್ಞಾಂ ಪ್ರತಿಲಭ್ಯ ಕೃಚ್ಛ್ರಾಚ್ಚಿಚ್ಛೇದ ಚಾಪಂ ತ್ರಿದಶೇಂದ್ರಶತ್ರೋಃ ॥ ೧೦೫ ॥

---

ರಾಕ್ಷಸರಾಜನು, ಅಥ - ಬಳಿಕ, ತಾನಿತಾನಿಬಾಣಜಾಲಾನಿ - ಆಯಾ ಬಾಣಸಮೂಹಗಳನ್ನು, ಮೋಘಾನಿ - ವ್ಯರ್ಥವಾದುವುಗಳನ್ನಾಗಿ, ಪಶ್ಯನ್ - ನೋಡಿ, ಲಕ್ಷ್ಮ.....ನ - ಲಕ್ಷ್ಮಣನ ಕರಲಾಘವದಿಂದ, ವಿಸಿಸ್ಮಿಯೇ - ಆಶ್ಚರ್ಯಗೊಂಡನು, ಪುನಶ್ಚ - ಮತ್ತೂ, ನಿಶಿತಾನ್ - ತೀಕ್ಷ್ಣವಾದ, ಬಾಣಾನ್ - ಬಾಣಗಳನ್ನು, ಮುಮೋಚ - ಬಿಟ್ಟನು. ॥ ೧೦೨ ॥ ಸಲಕ್ಷ್ಮಣಃ - ಆ ಲಕ್ಷ್ಮಣನು, ಶಿತಾಗ್ರಾನ್ - ಹರಿವಾದ ತುದಿಗಳುಳ್ಳ, ಮಹೇಂ....ಗಾನ್ - ದೇವೇಂದ್ರನ ವಜ್ರಾಯುಧಕ್ಕೂ ಸಿಡಿಲುಗಳಿಗೂ ಸಮಾನವಾದ ವೇಗಗಳುಳ್ಳ, ಜ್ವಲ.....ಶಾನ್ - ಅಗ್ನಿಯಂತೆ ಬೆಳಗುವ, ಶರಾನ್ - ಬಾಣಗಳನ್ನು, ಚಾಪೇ - ಧನುಸ್ಸಿನಲ್ಲಿ, ಸಂಧಾಯ - ಸಂಧಾನಮಾಡಿ, ರಕ್ಷೋಧಿಪತೇಃ - ರಾಕ್ಷಸರಾಜನ, ವಧಾಯ - ಸಂಹಾರಕ್ಕಾಗಿ, ಸಸರ್ಜ - ಬಿಟ್ಟನು. ॥ ೧೦೩ ॥ ಸರಾಕ್ಷಸೇಂದ್ರಃ - ಆ ರಾಕ್ಷಸಾಧಿಪತಿಯು, ತಾನ್ - ಆ ಬಾಣಗಳನ್ನು, ಪ್ರಚಿಚ್ಛೇದ - ಕತ್ತರಿಸಿದನು, ತಾನ್ - ಅವುಗಳನ್ನು, ಛಿತ್ವಾ - ಭೇದಿಸಿ, ಲಕ್ಷ್ಮಣಃ - ಲಕ್ಷ್ಮಣನು, ರಾವ.....ರ್ತಃ - ರಾವಣನ ಬಾಣದಿಂದ ದೀನನಾಗಿ, ಚಚಾಲ - ನಡುಗಿದನು, ಪುನಶ್ಚ - ಮತ್ತೂ, ಕೃಚ್ಛ್ರಾತ್ - ಕಷ್ಟದಿಂದ, ಸಂಜ್ಞಾಂ - ಪ್ರಜ್ಞೆಯನ್ನು, ಪ್ರತಿಲಭ್ಯ - ಹೊಂದಿ, ಶಿಥಿಲಂ - ಕೈಯಿಂದ ಬಿದ್ದ, ಚಾಪಂ - ಧನುಸ್ಸನ್ನು, ಪ್ರಗೃಹ್ಯ - ಹಿಡಿದು, ತ್ರಿದಶೇಂದ್ರಶತ್ರೋಃ - ಇಂದ್ರಶತ್ರುವಾದ ರಾವಣನ, ಚಾಪಂ - ಧನುಸ್ಸನ್ನು, ಚಿಚ್ಛೇದ - ಕತ್ತರಿಸಿದನು.

---

ಮಹಾ ಪರಾಕ್ರಮಿಯಾದ ಲಕ್ಷ್ಮಣನಿಂದ ತನ್ನ ಬಾಣಗಳೆಲ್ಲವೂ ವ್ಯರ್ಥವಾದುದನ್ನು ನೋಡಿ ಆ ರಾವಣನು ಪರಮಾಶ್ಚರ್ಯಭರಿತನಾಗಿ ಅವನ ಮೇಲೆ ಮಹಾ ತೀಕ್ಷ್ಣಗಳಾದ ಬಾಣಗಳನ್ನು ಮತ್ತೂ ತೀವ್ರವಾಗಿ ಪ್ರಯೋಗಿಸಿದನು. ಆಗ ಲಕ್ಷ್ಮಣನು ಕೋಪೋದ್ದೀಪಿತನಾಗಿ ಆ ರಾವಣಾಸುರನನ್ನು ಸಂಹರಿಸಿಯೇ ಬಿಡಬೇಕೆಂದು ಬಯಸಿ ಬಹು ಜಾಗ್ರತೆಯಾಗಿ, ದೇವೇಂದ್ರನ ವಜ್ರಾಯುಧಕ್ಕೆ ಸಮಾನವಾದುವೂ, ಅಗ್ನಿಗೆ ಸಮಾನವಾಗಿ ಪ್ರಕಾಶಿಸುತ್ತಿರುವುವೂ, ತೀಕ್ಷ್ಣವಾದ ಅಗ್ರಭಾಗಗಳುಳ್ಳವೂ ಆದ ಬಾಣಗಳನ್ನು ಆ ರಾವಣನ ಮೇಲೆ ಪ್ರಯೋಗಿಸಿದನು. ಆ ಸಮಯದಲ್ಲಿ ರಾವಣನಾದರೊ ಮಹಾ ಕ್ರೋಧಸಮನ್ವಿತನಾಗಿ ಆ ಬಾಣಗಳೆಲ್ಲವನ್ನೂ ಛೇದಿಸಿ ಪ್ರಳಯಕಾಲಾಗ್ನಿಗೆ ಸಮಾನವಾದ ಬಾಣಗಳನ್ನು ಲಕ್ಷ್ಮಣನ ಫಾಲಪ್ರದೇಶಕ್ಕೆ ಬಲವಾಗೆಸೆದನು. ಲಕ್ಷ್ಮಣನು ಆ ಬಾಣಘಾತವನ್ನು ತಾಳಲಾರದೆ ತತ್ತಳಿಸಿ ಹೋಗಿ ಸ್ವಲ್ಪ ಹೊತ್ತಾದ ಬಳಿಕ ಚೇತರಿಸಿಕೊಂಡು ಶಿಥಿಲವಾದ ತನ್ನ ಧನುಸ್ಸನ್ನು ಸರಿಪಡಿಸಿಕೊಂಡು ತೀವ್ರವಾದ ಸರಳುಗಳಿಂದ ಮಹೇಂದ್ರಶತ್ರುವಾದ ಆ ರಾವಣನ ಧನುಸ್ಸನ್ನು ಭಂಗಗೊಳಿಸಿ ಆ ತರುವಾಯ ಮತ್ತೂ ಮೂರು ಬಾಣಗಳನ್ನು ಅವನ ಮೇಲೆ ಪ್ರಯೋಗಿಸಿದನು.

ನಿಕೃತ್ತಚಾಪಂ ತ್ರಿಭಿರಾಜಘಾನ ಬಾಣೈಸ್ತದಾ ದಾಶರಥಿಃ ಶಿತಾಗ್ರೈಃ । ಸಸಾಯಕಾರ್ತೋ ವಿಚಚಾಲ ರಾಜಾ ಕೃಚ್ಛ್ರಾಚ್ಚ ಸಂಜ್ಞಾಂ ಪುನರಾಸಸಾದ ॥ ೧೦೬ ॥ ಸಕೃತ್ತಚಾಪಃ ಶರತಾಡಿತಶ್ಚ ಮೇದಾರ್ದ್ರಗಾತ್ರೋ ರುಧಿರಾವಸಿಕ್ತಃ । ಜಗ್ರಾಹಶಕ್ತಿಂ ಸಮುದಗ್ರಶಕ್ತಿಸ್ಸ್ವಯಂಭುದತ್ತಾಂ ಯುಧಿ ದೇವಶತ್ರುಃ ॥ ೧೦೭ ॥ ಸತಾಂ ವಿಧೂಮಾನಲಸನ್ನಿಕಾಶಾಂ ವಿತ್ರಾಸಿನೀಂ ವಾನರವಾಹಿನೀನಾಂ । ಚಿಕ್ಷೇಪಶಕ್ತಿಂ ತರಸಾ ಜ್ವಲಂತೀಂ ಸೌಮಿತ್ರಯೇ ರಾಕ್ಷಸರಾಷ್ಟ್ರನಾಥಃ ॥ ೧೦೮ ॥ ತಾಮಾಪತಂತೀಂ ಭರ

||೧೦೫|| ತದಾ - ಆಗ, ದಾಶರಥಿಃ - ದಶರಥಪುತ್ರನು, ಶಿತಾಗ್ರೈಃ - ತೀಕ್ಷ್ಣವಾದ ಕೊನೆಗಳುಳ್ಳ ತ್ರಿಭಿರ್ಬಾಣೈಃ - ಮೂರು ಬಾಣಗಳಿಂದ, ನಿಕೃತ್ತಚಾಪಂ - ಕತ್ತರಿಸಲ್ಪಟ್ಟ ಧನುಸ್ಸುಳ್ಳ ರಾವಣನನ್ನು, ಆಜಘಾನ - ಹೊಡೆದನು, ಸರಾಜಾ - ಆ ರಾಕ್ಷಸರಾಜನು, ಸಾಯಕಾರ್ತಃ - ಬಾಣದಿಂದ ಪೀಡಿತನಾಗಿ, ವಿಚಚಾಲ - ಮೂರ್ಛಿತನಾದನು, ಕೃಚ್ಛ್ರಾತ್ - ಕಷ್ಟದಿಂದ, ಪುನಃ - ಮತ್ತು, ಸಂಜ್ಞಾಂ - ಪ್ರಜ್ಞೆಯನ್ನು, ಆಸಸಾದ - ಹೊಂದಿದನು. ॥ ೧೦೬ ॥ ಕೃತ್ತಚಾಪಃ - ಕತ್ತರಿಸಲ್ಪಟ್ಟ ಧನುಸ್ಸುಳ್ಳ, ಶರತಾಡಿತಶ್ಚ - ಬಾಣಗಳಿಂದ ಹೊಡೆಯಲ್ಪಟ್ಟ, ಮೇದಾರ್ದ್ರಗಾತ್ರಃ - ಶರೀರದ ಕೊಬ್ಬಿನ ನೀರಿನಿಂದ ತೋಯಿಸಲ್ಪಟ್ಟ ಶರೀರವುಳ್ಳ, ರುಧಿರಾವಸಿಕ್ತಃ - ರಕ್ತದಿಂದ ತೋಯಿಸಲ್ಪಟ್ಟ, ಸಃದೇವಶತ್ರುಃ - ಆ ದೇವವೈರಿಯು, ಸಮುದಗ್ರಶಕ್ತಿಃ - ಸಂಪೂರ್ಣವಾದ ಸಾಮರ್ಥ್ಯವುಳ್ಳವನಾಗಿ, ಸ್ವಯಂಭುದತ್ತಾಂ - ಬ್ರಹ್ಮನಿಂದ ಕೊಡಲ್ಪಟ್ಟ, ಶಕ್ತಿಂ - ಶಕ್ತಿಯನ್ನು, ಯುಧಿ - ಕಾಳಗದಲ್ಲಿ, ಜಗ್ರಾಹ - ಗ್ರಹಿಸಿದನು. ॥ ೧೦೭ ॥ ಸರಾ......ಥಃ - ಆ ರಾಕ್ಷಸ ದೇಶಾಧೀಶ್ವರನಾದ, ವಿಧೂ......ಶಾಂ - ಹೊಗೆಯಿಲ್ಲದ ಅಗ್ನಿಗೆ ಸಮಾನವಾದ, ವಾನ......ನಾಂ - ವಾನರ ಸೈನ್ಯಗಳಿಗೆ, ವಿತ್ರಾಸಿನೀಂ - ಹೆದರಿಕೆಯನ್ನುಂಟುಮಾಡುವ, ಜ್ವಲಂತೀಂ - ಪ್ರಜ್ವಲಿಸುತ್ತಿರುವ, ತಾಂಶಕ್ತಿಂ - ಆ ಶಕ್ತ್ಯಾಯುಧವನ್ನು, ಸೌಮಿತ್ರಯೇ - ಲಕ್ಷ್ಮಣನಿಗೋಸ್ಕರ, ತರಸಾ - ಬಲದಿಂದ, ಚಿಕ್ಷೇಪ - ಎಸೆದನು. ||೧೦೮|| ಭರತಾನುಜಃ - ಭರತನಿಗೆ ತಮ್ಮನಾದ ಲಕ್ಷ್ಮಣನು, ಆಪತಂತೀಂ - ಬರುತ್ತಿರುವ, ತಾಂ - ಆ ಶಕ್ತಿಯನ್ನು, 'ಹುತಾಗ್ನಿಕಲ್ಪೈಃ -

॥೧೦೧-೧೦೫॥ ಆ ಬಾಣಗಳ ಬೇಗೆಯನ್ನು ತಾಳಲಾರದೆ ರಾವಣನು ಸ್ವಲ್ಪ ಹೊತ್ತು ಮೂರ್ಛೆಯೊಂದಿದ್ದು ಆ ತರುವಾಯ ಎಚ್ಚೆತ್ತುಕೊಂಡನು. ಈ ರೀತಿ ಕತ್ತರಿಸಲ್ಪಟ್ಟ ಧನುಸ್ಸುಳ್ಳವನೂ, ಬಾಣಪೀಡಿತನೂ, ಮೇದಸ್ಸಿನಿಂದ ತೋಯಿಸಿದ ಶರೀರವುಳ್ಳವನೂ, ರಕ್ತಸಿಕ್ತವಾದ ಸರ್ವಾವಯವಗಳುಳ್ಳವನೂ, ಯುದ್ಧದಲ್ಲಿ ಅತ್ಯಧಿಕ ಸಾಮರ್ಥ್ಯವಂತನೂ ಆದ ಆ ರಾವಣಾಸುರನು ಮಹಾಕ್ರುದ್ಧನಾಗಿ, ಕ್ರೂರವಾದ ಶಕ್ತ್ಯಾಯುಧವನು ಗ್ರಹಿಸಿದನು. ಆ ರಾಕ್ಷಸರಾಜನು ಹೊಗೆಯಿಲ್ಲದ ಬೆಂಕಿಯಂತೆ ಬೆಳಗುತ್ತಿರುವುದೂ, ವಾನರಸೇನೆಗೆ ಮಹದ್ಭಯವನ್ನುಂಟುಮಾಡುವುದೂ, ಮಹಾ ವೇಗವುಳ್ಳದೂ ಆದ ಆ ಶಕ್ತಿಯನ್ನು ಲಕ್ಷ್ಮಣನ ಮೇಲೆ ಪ್ರಯೋಗಿಸಿದನು. ಹೀಗೆ ರಾವಣನು ಪ್ರಯೋಗಿಸಿದ ಆ ಶಕ್ತ್ಯಾಯುಧವು ಬಹು ವೇಗವಾಗಿ ಬರುತ್ತಿರಲು ಮಹಾ ವೀರನಾದ ಲಕ್ಷ್ಮಣನು ಅಗ್ನಿಸಮಾನಗಳಾದ ಅನೇಕ ಬಾಣಗಳನ್ನು ಅದನ್ನು ಅಡ್ಡಗಿಸಲೋಸುಗ ಪ್ರಯೋಗಿಸಿದನು. ಹೀಗೆ ಆ ಬಾಣಗಳಿಂದ ತಡೆಯಲ್ಪಟ್ಟದೂ ಆ ಶಕ್ತಿಯು ಹಿಂತಿರುಗದೆ ವೇಗದಿಂದೈತಂದು ದಶರಥರಾಜಕುಮಾರನಾದ ಆ ಲಕ್ಷ್ಮಣಸ್ವಾಮಿಯ ವಿಶಾಲವಾದ ವಕ್ಷಸ್ಥಳಕ್ಕೆ ಹೊಡೆಯಿತು. ಹೀಗೆ ಮಹಾ ಶಕ್ತಿಯುಳ್ಳವನೂ, ರಘುಕುಲೋತ್ತಮನೂ ಆದ ಆ ಲಕ್ಷ್ಮಣನು ಆ ರಾವಣನು ಪ್ರಯೋಗಿ

ತಾನುಜೋಗ್ರೈರ್ಜಘಾನ ಬಾಣೈಶ್ಚ ಹುತಾಗ್ನಿಕಲ್ಪೈಃ । ತಥಾಪಿ ಸಾ ತಸ್ಯ ವಿವೇಶ ಶಕ್ತಿರ್ಬಾಹ್ವಂತರಂ ದಾಶರಥೇರ್ವಿಶಾಲಂ ॥೧೦೯॥ ಸಶಕ್ತಿಮಾನ್ ಶಕ್ತಿಸಮಾಹತಸ್ಸನ್ ಮುಹುಃ ಪ್ರಜಜ್ವಾಲ ರಘುಪ್ರವೀರಃ । ತಂ ವಿಹ್ವಲಂತಂ ಸಹಸಾಭ್ಯುಪೇತ್ಯ ಜಗ್ರಾಹ ರಾಜಾ ತರಸಾ ಭುಜಾಭ್ಯಾಂ॥ ೧೧೦ ॥ ¶ ಹಿಮವಾನ್ಮಂದರೋ ಮೇರುಸ್ತ್ರೈಲೋಕ್ಯಂ

ಹೋಮಮಾಡಲ್ಪಟ್ಟ ಅಗ್ನಿಗೆ ಸಮಾನವಾದ, ಉಗ್ರೈಃ - ಭಯಂಕರವಾದ, ಬಾಣೈಶ್ಚ - ಬಾಣಗಳಿಂದಲೂ, ಜಘಾನ - ಹೊಡೆದನು, ತಥಾಪಿ - ಹಾಗಾದರೂ, ಸಾಶಕ್ತಿಃ - ಆಶಕ್ತಿಯು, ತಸ್ಯ ದಾಶರಥೇಃ - ಆ ಲಕ್ಷ್ಮಣನ, ವಿಶಾಲಂ - ವಿಸ್ತಾರವಾದ, ಬಾಹ್ವಂತರಂ - ಭುಜಮಧ್ಯಪ್ರದೇಶವನ್ನು, ವಿವೇಶ - ಹೊಕ್ಕಿತು. ॥ ೧೦೯ ॥ ಶಕ್ತಿಮಾನ್ - ಸಾಮರ್ಥ್ಯವಂತನಾದ, ಸರಘುಪ್ರವೀರಃ - ಆ ರಘುವೀರನು, ಶಕ್ತಿಸಮಾಹತಃ - ಶಕ್ತಿಯಿಂದ ಹೊಡೆಯಲ್ಪಟ್ಟವನಾಗಿ, ಮುಹುಃ - ಬಾರಿಬಾರಿಗೂ, ಪ್ರಜಜ್ವಾಲ - ಸಂಕಟಪಟ್ಟನು, ವಿಹ್ವಲಂತಂ - ಪ್ರಜ್ಞಾಹೀನನಾದ, ತಂ - ಆ ಲಕ್ಷ್ಮಣನನ್ನು ಕುರಿತು, ರಾಜಾ - ರಾವಣನು, ಸಹಸಾ - ಜಾಗತ್ರೆಯಾಗಿ, ಅಭ್ಯುಪೇತ್ಯ - ಬಂದು, ತರಸಾ - ಬಲದಿಂದ, ಭುಜಾಭ್ಯಾಂ - ಭುಜಗಳಿಂದ, ಜಗ್ರಾಹ - ಹಿಡಿದುಕೊಂಡನು. ॥ ೧೧೦ ॥ ಹಿಮವಾನ್ - ಸಮಸ್ತ ಧೀರರಿಗೆ ಉಪಮಾನವಾದ ಹಿಮತ್ಪರ್ವತವಾದರೂ, ಮಂದರೋಪಿ - ಸಮಸ್ತ ಸಮುದ್ರಗಳಿಗೂ ಪ್ರಧಾನರೂಪವಾದ ಕ್ಷೀರಸಮುದ್ರವನ್ನು ಕ್ಷೋಭೆಗೊಳಿಸುವದರಲ್ಲಿ ಸಮರ್ಥವಾದ ಮಂದರಪರ್ವತವಾದರೂ, ಮೇರುಃ - ಸಮಸ್ತ ಕುಲಪರ್ವತಗಳಿಗೂ ತಿಲಕಪ್ರಾಯವಾದ ಮೇರುಪರ್ವತ

ಸಿದ ಶಕ್ತ್ಯಾಯುಧದಿಂದ ಘಾತಿತನಾಗಿ ತತ್ತಳಿಸಿ ಮೂರ್ಛೆಯೊಂದಿದನು. ಆ ಕೂಡಲೇ ರಾಕ್ಷಸರಾಜನಾದ ರಾವಣನು ವೇಗದಿಂದೈತಂದು ಆ ಲಕ್ಷ್ಮಣನನ್ನು ತನ್ನ ತೋಳುಗಳಿಂದ ಬಲವಾಗಿ ಅಮುಕಿ ಹಿಡಿದುಕೊಂಡನು. ॥ ೧೦೬—೧೧೦ ॥ ಹಾಗೆ ಹಿಡಿದುಕೊಂಡರೂ, ಆ ರಾವಣನು, ಮೇರುಮಂದರ ಹಿಮಗಿರಿಗಳನ್ನೂ ದೇವತೆಗಳೊಡಗೂಡಿದುವುಗಳನ್ನಾಗಿಯೇ

¶ ಇಲ್ಲಿ ಮೂರ್ಛಿತನಾದ ಲಕ್ಷ್ಮಣಸ್ವಾಮಿಯನ್ನು ಭುಜಗಳಿಂದೆತ್ತಲು ಪ್ರಯತ್ನಿಸಿದ ರಾವಣನನ್ನು ಕವಿಯು ಪರಿಹಾಸ್ಯ ಮಾಡುತ್ತಾನೆ.

" ಎಲಾ ರಾವಣಾ ! ನೀನು ವೀರರೆಲ್ಲರಿಗೂ ಉಪಮಾನವಾದ ಹಿಮಗಿರಿಯನ್ನು ಎತ್ತಿಹಿಡಿಯಲು ಸಮರ್ಥನೇ ಆಹುದು. ಹಿಂದೆ ಕೈಲಾಸಾದ್ರಿಯನ್ನು ಒಂದೇ ಕೈಯಿಂದಲೇ ಎತ್ತಿರುವೆ. ಸಮಸ್ತ ಸಾಗರಗಳಿಗೂ ಮುಖ್ಯತಮವಾದ ಕ್ಷೀರಸಾಗರವನ್ನೇ ಕ್ಷೋಭೆಗೊಳಿಸಿದ ಮಂದರಾದ್ರಿಯನ್ನೆತ್ತಿ ಹಿಡಿಯಲೂ ನೀನು ಸಮರ್ಥನೇ ಆಗಿರುವೆ. ಹಿಂದೆ ನಿನ್ನಿಂದ ನಿರ್ಜಿತರಾದ ನಿರ್ಜರರೇ ಸಮುದ್ರಮಥನ ಕಾಲದಲ್ಲಿ ಆ ಗಿರಿಯನ್ನು ಜರ್ಝರಿತವನ್ನಾಗಿ ಮಾಡಿದರೆಂದಬಳಿಕ ನೀನು ಮನಸ್ಸುಮಾಡಿದರೆ ಅದೆಷ್ಟರ ಕೆಲಸ. ಸಮಸ್ತ ಕುಲಾಚಲಗಳಿಗೂ ತಿಲಕಪ್ರಾಯವಾದ ಮೇರುಪರ್ವತ ಶಿಖರವನ್ನು ವಾಯುವೇ ಪೆಳಗಿಸಿ ಲಂಕಾನಗರದಲ್ಲಿ ಸಂಚರಿಸಿದನು. ಅಂಥ ವಾಯುವೇ ನಿನ್ನಧೀನನಾಗಿರುವನೆಂದಮೇಲೆ ಅಂಥ ಸಮರ್ಥನಾದ ನೀನು ಆ ಮೇರುಪರ್ವತವನ್ನೆತ್ತುವುದರಲ್ಲಿ ದಕ್ಷನೆಂದು ಹೇಳುವುದರಲ್ಲಿ ಸಂದೇಹವೇ ಇರುವುದಿಲ್ಲವು. ಪಂಚಾಶತ್ಕೋಟಿ ಯೋಜನಪರಿಮಿತವಾದ ಭೂಮಂಡಲವನ್ನೇ ಎತ್ತಿಹಿಡಿಯಲೂ ನೀನು ಸಮರ್ಥನಾಗಬಹುದು ಏಕೆಂದರೆ ನಿನ್ನ ಹಿಂದಿನವನಾದ ಹಿರಣ್ಯಕಶಿಪುವೇ ಅದನ್ನು ಸುರಳಿ ಸುತ್ತಿದ್ದನಲ್ಲವೇ? ಎಂದಮೇಲೆ ನಿನಗೆ ಅದೆಷ್ಟರ ಕೆಲಸ ದೇವತೆಗಳೊಡಗೂಡಿದ ತ್ರೈಲೋಕ್ಯವನ್ನಾದರೂ ನೀನು ಅಲುಗಾಡಿಸಲು ಶಕ್ತನೇ. ಏಕೆಂದರೆ ನಿನ್ನ ಮಗ ಇಂದ್ರಜಿತ್ತುವೇ ದೇವೇಂದ್ರನನ್ನು ಗೆದ್ದಿರುವನು. ನೀನಿಂತಹ ಮಹಾ ಸಮರ್ಥನೇ ಆದರೂ ನೀನು ವಿಷ್ಣುವಿನ ಚತುರ್ಭಾಗಾಂಶದವನಾದ ಲಕ್ಷ್ಮಣಸ್ವಾಮಿಯನ್ನು ಸ್ವಲ್ಪಮಾತ್ರವೂ ಅಲುಗಿಸಲಾರದಾದೆಯಲ್ಲವೆ ! ಅಯ್ಯೋ ಪಾಪ—ಪಾಪ !!

(ಗೋವಿಂದರಾಜರು)

ಪಾ ಸಹಾಮರ್ತ್ಯೈಃ । ಶಕ್ಯಂ ಭುಜಾಭ್ಯಾಮುದ್ಧರ್ತುಂ ನಸಂಖ್ಯೇ ಭರತಾನುಜಃ ||೧೧೧||
* ಶಕ್ತ್ಯಾ ಬ್ರಾಹ್ಮ್ಯಾಪಿ ಸೌಮಿತ್ರಿಸ್ತಾಡಿತಸ್ತು ಸ್ತನಾಂತರೇ । ವಿಷ್ಣೋರಚಿಂತ್ಯಂ ಸ್ವಂ ಭಾಗಮಾತ್ಮಾನಂ ಪ್ರತ್ಯನುಸ್ಮರತ್ || ೧೧೨ || ತತೋ ದಾನವದರ್ಪಘ್ನಂ ಸೌಮಿತ್ರಿಂ ದೇವಕಂಟಕಃ । ತಂ ಪೀಡಯಿತ್ವಾ ಬಾಹುಭ್ಯಾಮಪ್ರಭುರ್ಲಂಘನೇಽಭವತ್ ||೧೧೩||

ವಾದರೂ, ಅಮರ್ತ್ಯೈಸ್ಸಹ - ದೇವತೆಗಳೊಡಗೂಡಿದ, ತ್ರೈಲೋಕ್ಯಂವಾ - ಸ್ವರ್ಗಮರ್ತ್ಯಪಾತಾಳಗಳೆಂಬ ಲೋಕತ್ರಯವಾದರೂ, ಭುಜಾಭ್ಯಾಂ - ಭುಜಗಳಿಂದ, ಉದ್ಧರ್ತುಂ - ಎತ್ತುವುದಕ್ಕೆ, ಶಕ್ಯಂ - ಸಾಧ್ಯವು, ಭರತಾನುಜಃ - ಭರತನಿಗೆ ತಮ್ಮನಾದ ಲಕ್ಷ್ಮಣನು, ಸಂಖ್ಯೇ - ಕಾಳಗದಲ್ಲಿ, ಉದ್ಧರ್ತುಂ - ಮೇಲಕ್ಕೆತ್ತುವದಕ್ಕೆ, ನಶಕ್ಯಃ - ಸಾಧ್ಯನಾಗಲಿಲ್ಲ. || ೧೧೧ || ಬ್ರಾಹ್ಮ್ಯಾ - ಬ್ರಹ್ಮಸಂಬಂಧವಾದ, ಶಕ್ತ್ಯಾ - ಶಕ್ತಿಯಿಂದ, ಸ್ತನಾನಂತರೇ - ವಕ್ಷಸ್ಥಲದಲ್ಲಿ, ತಾಡಿತಃ - ಹೊಡೆಯಲ್ಪಟ್ಟ, ಸೌಮಿತ್ರಿಃ - ಲಕ್ಷ್ಮಣನು, ಸ್ವಂ - ಸ್ವಕೀಯವಾದ, ಆತ್ಮಾನಂ - ತನ್ನನ್ನು, ವಿಷ್ಣೋಃ - ಸರ್ವವ್ಯಾಪಕ ಚೈತನ್ಯಸ್ವರೂಪನಾದ ಶ್ರೀಮಹಾವಿಷ್ಣುವಿನ, ಅಚಿಂತ್ಯಂ - ಇಷ್ಟೆಂದು ಚಿಂತಿಸಲಶಕ್ಯವಾದ, ಭಾಗಂ - ಅಂಶವನ್ನಾಗಿ, ಪ್ರತ್ಯನುಸ್ಮರತ್ - ಸ್ಮರಿಸಿಕೊಂಡನು. ||೧೧೨|| ಅಥ - ಅನಂತರದಲ್ಲಿ, ದೇವಕಂಟಕಃ - ದೇವತೆಗಳಿಗೆ ಕಂಟಕನಾದ ರಾವಣನನ್ನು, ದಾನವದರ್ಪಘ್ನಂ - ರಾಕ್ಷಸರ ಗರ್ವವನ್ನು ಹೊಡೆಯುತ್ತಿರುವ, ಮಾನುಷಂ - ಮನುಷ್ಯಸಂಬಂಧವಾದ, ದೇಹಂ - ಶರೀರವನ್ನು, ಆಸ್ಥಿತಂ - ಹೊಂದಿದ, ವೈಷ್ಣವಂ - ವಿಷ್ಣುಸಂಬಂಧವಾದ, ಭಾಗಂ - ಅಂಶಭೂತನಾದ, ತಂ ಸೌಮಿತ್ರಿಂ - ಆ ಲಕ್ಷ್ಮಣನನ್ನು, ಬಾಹುಭ್ಯಾಂ - ಭುಜಗಳಿಂದ, ಪೀಡಯಿತ್ವಾ - ಬಾಧಿಸಿ, ತತಃ - ಆ ಲಕ್ಷ್ಮಣನು ತಾನು ವಿಷ್ಣ್ವಂಶಸಂಭೂತನೆಂದು ಸ್ಮರಿಸಿದುದರ ಮೇಲೆ, ಲಂಘನೇ - ಎತ್ತುವುದರಲ್ಲಿ, ಅಪ್ರಭುಃ - ಅಸಮರ್ಥನು, ಅಭವತ್ - ಆದನು. || ೧೧೩ || ಅಥ - ಅನಂತರದಲ್ಲಿ, ವಾಯುಸುತಃ - ವಾಯುಪುತ್ರನಾದ ಹನುಮಂತನು, ಕ್ರುದ್ಧಃ - ಕುಪಿತನಾಗಿ, ರಾವಣಂ - ರಾವಣನನ್ನು

ಎತ್ತಿ ಹಿಡಿಯಲು ತಕ್ಕ ಸಾಮರ್ಥ್ಯವುಳ್ಳವನಾದರೂ ತನ್ನ ಭುಜಗಳಿಂದ ಆ ಲಕ್ಷ್ಮಣನನ್ನು ಎತ್ತಲಾರದೆ ಹೋದನು. ಈ ಪ್ರಕಾರ ಆ ಲಕ್ಷ್ಮಣನು ಬ್ರಹ್ಮಸಂಬಂಧವಾದ ಆ ಶಕ್ತ್ಯಾಯುಧದಿಂದ ಸ್ತನಾಂತರದಲ್ಲಿ ಘಾತಿತನಾಗಿ ಕೆಳಗೆ ಬೀಳುವಾಗ ಅವನು ತಾನು ವಿಷ್ಣ್ವಂಶಸಂಭೂತನಾದುದರಿಂದ ತನ್ನ ನಿಜಸ್ವರೂಪವನ್ನು ಸ್ಮರಿಸಿಕೊಂಡನು. ಹೀಗೆ ವಿಷ್ಣ್ವಂಶಸ್ಮರಣೆಯುಳ್ಳವನೂ ಮಾನವದೇಹದಿಂದಿರುವವನೂ, ರಾಕ್ಷಸರ ಮದವನ್ನಡಗಿಸುವವನೂ, ಸುಮಿತ್ರಾನಂದನೂ ಆದ ಆ ಲಕ್ಷ್ಮಣನನ್ನು ದೇವಶತ್ರುವಾದ ಆ ರಾವಣನು ತನ್ನ ಭುಜಗಳಿಂದ ಬಲಾತ್ಕಾರವಾಗಿ ಹಿಡಿದೆತ್ತಿ ಕೊಂಡುಹೋಗಲಸಮರ್ಥನಾಗಿ ಹೋದನು. ಆ ಸಮಯದಲ್ಲಿ ವಾಯುಪುತ್ರನಾದ ಹನುಮಂತನು ಎಲ್ಲನನ್ನೂ ನೋಡುತ್ತಿದ್ದು ಮಹಾ ಕ್ರುದ್ಧ

* ಹಿಂದಿನ ಶ್ಲೋಕದಲ್ಲಿ ಲಕ್ಷ್ಮಣಸ್ವಾಮಿಗಿದ್ದ ಅಮಿತ ಶಕ್ತಿಯನ್ನೂ, ಅನುಪಮವಾದ ಶ್ರೈಷ್ಠ್ಯವನ್ನೂ ವರ್ಣಿಸಿ ಹೇಳಿದುದಾಯಿತು. ಇದೀಗ ಈ ಶ್ಲೋಕದಿಂದ ಆತನಿಗೆ ಅಂತಹ ಶ್ರೈಷ್ಠ್ಯವು ಬರಲು ಕಾರಣವನ್ನು ತಿಳಿಸುವನು. ಲಕ್ಷ್ಮಣನು ಬ್ರಹ್ಮಶಕ್ತಿಯಿಂದ ತಾಡಿತನಾಗಿ ಮೂರ್ಛೆಯೊಂದಿದರೂ ಸ್ವಸ್ವರೂಪವನ್ನು (ತಾನು ವಿಷ್ಣುವಿನ ಅಂಶಭೂತನೆಂಬ ವಿಷಯವನ್ನು) ಸ್ಮರಿಸಿಕೊಂಡನು.

ಲೋಕದಲ್ಲಿ ತನ್ನ ಸ್ವರೂಪವನ್ನು ತಾನೇ ತಿಳಿದುಕೊಳ್ಳದವನಿಗೆ ಕ್ಲೇಶಗಳು ಅಧಿಕ. ಸ್ವರೂಪಜ್ಞಾನಿಗೆ ಸುಖದುಃಖಗಳೇ ಇರುವುದಿಲ್ಲವೆಂಬ ತತ್ವವು ಇಲ್ಲಿ ಚೆನ್ನಾಗಿ ಪ್ರತಿಪಾದಿತವಾಗಿರುವುದು.

ಇಲ್ಲಿ ಲಕ್ಷ್ಮಣನು ಸ್ವಕೀಯಾಂಶವನ್ನು ಸ್ಮರಿಸಿದುದರಿಂದ ಆತನಿಗೆ ಅಂತಹ ಶ್ರೈಷ್ಠ್ಯವು ಬಂದಿತೆಂದು ಸುವಿದಿತವು.

¶ ಅಥೈನಂ ವೈಷ್ಣವಂ ಭಾಗಂ ಮಾನುಷಂ ದೇಹಮಾಸ್ಥಿತಂ । ಅಥ ವಾಯುಸುತಃ ಕ್ರುದ್ಧೋ ರಾವಣಂ ಸಮಭಿದ್ರವತ್ ॥ ೧೧೪ ॥ ಆಜಘಾನೋರಸಿ ಕ್ರುದ್ಧೋ ವಜ್ರಕಲ್ಪೇನ ಮುಷ್ಟಿನಾ । ತೇನ ಮುಷ್ಟಿಪ್ರಹಾರೇಣ ರಾವಣೋ ರಾಕ್ಷಸೇಶ್ವರಃ ॥೧೧೫॥ ಜಾನುಭ್ಯಾಮಪತದ್ಭೂಮೌ ಚಚಾಲಚ ಪಪಾತಚ । ಆಸ್ಯೈಸ್ಸನೇತ್ರಶ್ರವಣೈರ್ವವಾಮ ರುಧಿರಂ ಬಹು ॥ ೧೧೬ ॥ ವಿಘೂರ್ಣಮಾನೋ ನಿಶ್ಚೇಷ್ಟೋ ರಥೋಪಸ್ಥ ಉಪಾವಿಶತ್ । ವಿಸಂಜ್ಞೋ ಮೂರ್ಛಿತಶ್ಚಾಸೀನ್ನಚ ಸ್ಥಾನಂ ಸಮಾಲಭತ್ ॥೧೧೭॥ ವಿಸಂಜ್ಞಂ ರಾವಣಂ ದೃಷ್ಟ್ವಾ ಸಮರೇ ಭೀಮವಿಕ್ರಮಂ । ಋಷಯೋ ವಾನರಾ

ಕುರಿತು, ಸಮಭಿದ್ರವತ್ - ಓಡಿಬಂದನು, ಕ್ರುದ್ಧಃ - ಕೋಪಿಷ್ಠನಾಗಿ, ವಜ್ರಕಲ್ಪೇನ - ವಜ್ರಸದೃಶವಾದ, ಮುಷ್ಟಿನಾ - ಮುಷ್ಟಿಯಿಂದ, ಉರಸಿ - ವಕ್ಷಸ್ಥಳದಲ್ಲಿ, ಆಜಘಾನ - ಹೊಡೆದನು. ॥ ೧೧೪ ॥ ತೇನಮುಷ್ಟಿಪ್ರಹಾರೇಣ - ಆ ಮುಷ್ಟಿಪ್ರಹಾರದಿಂದ, ರಾಕ್ಷಸೇಶ್ವರಃ - ರಾಕ್ಷಸಾಧಿಪತಿಯಾದ, ರಾವಣಃ - ರಾವಣನು, ಜಾನುಭ್ಯಾಂ - ಮೊಳಕಾಲುಗಳಿಂದ, ಭೂಮೌ - ನೆಲದಲ್ಲಿ, ಅಪತತ್-ಬಿದ್ದನು, ಚಚಾಲಚ - ನಡುಗಿದನು, ಪಪಾತಚ - ಬಿಳಬೂ ಬಿದ್ದನು, ಸನೇತ್ರಶ್ರವಣೈಃ - ಕಣ್ಣುಗಳಿಂದಲೂ, ಕಿವಿಗಳಿಂದಲೂ ಒಡಗೂಡಿದ, ಆಸ್ಯೈಃ - ಮುಖಗಳಿಂದ, ಬಹು - ವಿಶೇಷವಾಗಿ, ರುಧಿರಂ-ರಕ್ತವನ್ನು, ವವಾಮ - ವಾಂತಿಮಾಡಿಕೊಂಡನು. ॥ ೧೧೫-೧೧೬ ॥ ವಿಘೂರ್ಣಮಾನಃ - ತಿರುಗುವವನಾಗಿ, ನಿಶ್ಚೇಷ್ಟಃ - ಪ್ರಜ್ಞೆತಪ್ಪಿ, ರಥೋಪಸ್ಥೇ - ರಥದಲ್ಲಿ, ಉಪಾವಿಶತ್ - ಕುಳಿತುಕೊಂಡನು, ವಿಸಂಜ್ಞಃ - ಪ್ರಜ್ಞೆಯಿಲ್ಲದವನು, ಮೂರ್ಛಿತಶ್ಚ - ಮೂರ್ಛಾಕ್ರಾಂತನೂ, ಆಸೀತ್ - ಆದನು, ಸ್ಥಾನಂ - ಪೂರ್ವಸ್ಥಾನವನ್ನು, ನಸಮಾಲಭತ್ - ಹೊಂದಲಿಲ್ಲವು. ॥ ೧೧೭ ॥ ಸಮರೇ - ಕಾಳೆಗದಲ್ಲಿ, ಭೀಮವಿಕ್ರಮಂ - ಭಯಂಕರ ಪರಾಕ್ರಮವುಳ್ಳ, ರಾವಣಂ - ರಾವಣನನ್ನು, ವಿಸಜ್ಞಂ - ಪ್ರಜ್ಞೆತಪ್ಪಿದವನನ್ನಾಗಿ, ದೃಷ್ಟ್ವಾ - ಕಂಡು, ಋಷಯಃ - ಮುನಿಗಳು, ಸರ್ವೇ - ಸಮಸ್ತರಾದ,

ನಾಗಿ ರಾವಣನಿಗಭಿಮುಖವಾಗಿ ಅಟ್ಟಿಬಂದು ವಜ್ರಾಯುಧಕ್ಕೆ ಸಮಾನವಾದ ತನ್ನ ಮುಷ್ಟಿಯಿಂದ ಆ ರಾವಣನೆದೆಯು ಬಿರಿದು ಹೋಗುವಂತೆ ಬಲವಾಗಿ ಪ್ರಹರಿಸಿದನು. ಆ ಹನುಮಂತನ ಮುಷ್ಟಿಘಾತದಿಂದ ರಾವಣನು ತತ್ತಳಿಸಿ ಹೋಗಿ ಗಡಗಡನೆ ನಡುಗಿಹೋದನು. ಆಗ ಆ ರಾವಣನ ಬಾಯಿಯಿಂದಲೂ, ಮೂಗಿನ ಹೊಳ್ಳೆಗಳಿಂದಲೂ, ಕಣ್ಣುಗಳಿಂದಲೂ, ಕಿವಿಗಳಿಂದಲೂ ರಕ್ತಪ್ರವಾಹವು ಹೊರಹೊರಟಿತು. ॥ ೧೧೧-೧೧೬ ॥ ಹೀಗೆ ರಕ್ತವನ್ನು ಕಾರುತ್ತ ತಲೆತಿರುಗಿ ತನ್ನ ರಥದಲ್ಲಿಯೇ ಬಿದ್ದು ಮೂರ್ಛೆ ಹೋದನು. ಈ ರೀತಿ ರಥದಲ್ಲಿ ಬಿದ್ದು ಮೂರ್ಛೆಗೊಂಡವನೂ, ಯುದ್ಧದಲ್ಲಿ ಅಧಿಕ ಪರಾಕ್ರಮವುಳ್ಳವನೂ ಆದ ಆ

¶ ಇಲ್ಲಿ ವಿಷ್ಣುಸ್ವರೂಪವು ನಿರವಯವಾದುದರಿಂದ ಆ ಸ್ವರೂಪಾಂಶವು ಹೇಗೆತಾನೆ ಹೇಳಲಾದೀತು ? ಎಂಬ ಸಂಶಯವು ಬರಬಹುದು. ಆದರೆ ಇಲ್ಲಿ ಸ್ವರೂಪದಲ್ಲಿ ಅಂಶತ್ವವು ಹೇಳಲ್ಪಟ್ಟಿರುವುದಿಲ್ಲ. ಗುಣಾವಿರ್ಭಾವ ತಾರತಮ್ಯದಿಂದ ಮಾತ್ರ ಅಂಶತ್ವವು ಹೇಳಲಾಗಿದೆಯಾದುದರಿಂದ ಆ ಬಗೆಯ ಸಂಶಯಕ್ಕೆ ಅವಕಾಶವೇ ಇರುವುದಿಲ್ಲವು.

" ಗುಣೈಃ ಷಡ್ಭಿಸ್ತ್ವೇತೈಃ ಪ್ರಥಮತರಮೂರ್ತಿಸ್ತವ ಬಭೌ । ತತಸ್ತಿಸ್ರಸ್ತೇಷಾಂ ತ್ರಿಯುಗಯುಗಳೈರ್ಹಿ ತ್ರಿಭಿರಭೂಃ । ವ್ಯವಸ್ಥಾಯಾಂ ಚೈಷಾಂ ನನು ವರದ ! ಸಾವಿಷ್ಕೃತಿವಶಾತ್ । ಭವಾನ್ ಸರ್ವತ್ರೈವ ತ್ವಗಣಿತ ಮಹಾಮಂಗಳಗುಣಃ " ಎಂಬ ಸ್ತುತ್ಯಾಧಾರದಿಂದ ಈ ರೀತಿ ಇಲ್ಲಿ ಅರ್ಥ ಪ್ರತಿಪಾದನೆ ಮಾಡಿದೆ. ಹಾಗಾದರೆ ಮಾನುಷರೂಪತ್ವೋಕ್ತಿಯೇಕೆ ? ಎಂದರೆ ಇಲ್ಲಿ ಮಾನುಷರೂಪತ್ವವು ಆವನಿಗಿದ್ದ ಮಾನುಷರೂಪಾಕೃತಿಕತ್ವದ್ಯೋತಕಾರ್ಥವು ಮಾತ್ರವೆಂದರಿಯಬೇಕು.

ಸ್ಸರ್ವೇ ನೇದುರ್ದೇವಾಸ್ಸವಾಸವಾಃ ‖ ೧೧೮ ‖ ಹನುಮಾನಪಿ ತೇಜಸ್ವೀ ಲಕ್ಷ್ಮಣಂ ರಾವಣಾರ್ದಿತಂ । ಅನಯದ್ರಾಘವಾಭ್ಯಾಶಂ ಬಾಹುಭ್ಯಾಂ ಪರಿಗೃಹ್ಯ ತಂ ‖ ೧೧೯ ‖ ವಾಯುಸೂನೋಸ್ಸುಹೃತ್ತ್ವೇನ ಭಕ್ತ್ಯಾ ಪರಮಯಾಚ ಸಃ । ಶತ್ರೂಣಾಮಪ್ರಕಂಪ್ಯೋಽಪಿ ಲಘುತ್ವಮಗಮತ್ಕಪೇಃ ‖ ೧೨೦ ‖ ತಂ ಸಮುತ್ಸೃಜ್ಯ ಸಾಶಕ್ತಿಸ್ಸೌಮಿತ್ರಿಂ ಯುಧಿ ದುರ್ಜಯಂ । ರಾವಣಸ್ಯ ರಥೇ ತಸ್ಮಿನ್ ಸ್ಥಾನಂ ಪುನರುಪಾಗತಾ ‖ ೧೨೧ ‖ ಆಶ್ವಸ್ತಶ್ಚ ವಿಶಲ್ಯಶ್ಚ ಲಕ್ಷ್ಮಣಶ್ಶತ್ರುಸೂದನಃ । ವಿಷ್ಣೋರ್ಭಾಗಮಮೀಮಾಂಸ್ಯಮಾತ್ಮಾನಂ ಪ್ರತ್ಯನುಸ್ಮರತ್ ‖೧೨೨‖ ರಾವಣೋಽಪಿ ಮಹಾತೇಜಾಃ ಪ್ರಾಪ್ಯ ಸಂಜ್ಞಾಂ

ವಾನರಾಶ್ಚ - ಕಪಿಗಳೂ, ಸವಾಸವಾಃ - ಇಂದ್ರನೊಡಗೂಡಿದ, ದೇವಾಶ್ಚ - ದೇವತೆಗಳೂ, ನೇದುಃ- ಸಂತೋಷದಿಂದ ಧ್ವನಿಮಾಡಿದರು. ‖ ೧೧೮ ‖ ತೇಜಸ್ವೀ - ಪರಾಕ್ರಮಿಯಾದ, ಹನುಮಾನಪಿ - ಆಂಜನೇಯನೂ ಕೂಡ, ರಾವಣಾರ್ದಿತಂ ಬಾಧಿಸಲ್ಪಟ್ಟ, ತಂಲಕ್ಷ್ಮಣಂ - ಆ ಲಕ್ಷ್ಮಣನನ್ನು, ಭುಜಾಭ್ಯಾಂ - ತೋಳುಗಳಿಂದ, ಪರಿಗೃಹ್ಯ - ಎತ್ತಿಕೊಂಡು, ರಾಘವಾಭ್ಯಾಶಂ - ರಾಮನ ಸಮೀಪವನ್ನು, ಅನಯತ್ - ಹೊಂದಿಸಿದನು. ‖ ೧೧೯ ‖ ಸಃ - ಆ ಲಕ್ಷ್ಮಣನು, ಶತ್ರೂಣಾಂ - ವೈರಿಗಳಿಗೆ, ಅಪ್ರಕಂಪ್ಯೋಽಪಿ - ಚಲಿಸಲಸಾಧ್ಯನಾದರೂ, ವಾಯುಸೂನೋಃ - ಆಂಜನೇಯನ, ಸುಹೃತ್ತ್ವೇನ - ಸ್ನೇಹಭಾವದಿಂದಲೂ, ಪರಮಯಾ - ಉತ್ತಮವಾದ, ಭಕ್ತ್ಯಾಚ - ಭಕ್ತಿಯಿಂದಲೂ, ಕಪೇಃ - ಆಂಜನೇಯನಿಗೆ, ಲಘುತ್ವಂ - ಲಾಘವವನ್ನು, ಅಗಮತ್ - ಹೊಂದಿದನು. ‖ ೧೨೦ ‖ ಸಾಶಕ್ತಿಃ - ಆ ಶಕ್ತಿಯು, ಯುಧಿ - ಕಾಳಗದಲ್ಲಿ, ದುರ್ಜಯಂ - ಜಯಿಸಲಸಾಧ್ಯನಾದ, ತಂಸೌಮಿತ್ರಿಂ - ಆ ಲಕ್ಷ್ಮಣನನ್ನು, ಸಮುತ್ಸೃಜ್ಯ - ಬಿಟ್ಟು, ರಾವಣಸ್ಯ - ರಾವಣನ, ತಸ್ಮಿನ್‌ರಥೇ - ಆ ರಥದಲ್ಲಿ, ಪುನಃ- ಮತ್ತೂ, ಸ್ಥಾನಂ - ತನ್ನ ಸ್ಥಳವನ್ನು, ಉಪಾಗತಾ - ಹೊಂದಿತು. ‖ ೧೨೧ ‖ ಶತ್ರುಸೂದನಃ - ಶತ್ರುಸಂಹಾರಕನಾದ, ಲಕ್ಷ್ಮಣಶ್ಚ - ಲಕ್ಷ್ಮಣನು, ಆತ್ಮಾನಂ - ತನ್ನನ್ನು, ವಿಷ್ಣೋಃ - ವಿಷ್ಣುವಿನ, ಭಾಗಂ - ಅಂಶವನ್ನಾಗಿ, ಅಮೀಮಾಂಸ್ಯಂ - ಸಂಶಯಗೋಚರವಲ್ಲದಿರುವದನ್ನಾಗಿಯೂ, ಪ್ರತ್ಯನುಸ್ಮರತ್ - ಸ್ಮರಿಸಿಕೊಂಡನು, ಆಶ್ವಸ್ತಃ - ಸಮಾಧಾನಗೊಳಿಸಲ್ಪಟ್ಟವನು, ವಿಶಲ್ಯಶ್ಚ - ವ್ರಣಗಳಿಂದ ರಹಿತನು, ಅಭವತ್ - ಆದನು. ‖೧೨೨‖ ಮಹಾತೇಜಾಃ - ಬಹು ತೇಜೋವಂತನಾದ, ರಾವಣೋಽಪಿ-

ರಾವಣಾಸುರನನ್ನು ನೋಡಿ ಋಷಿಗಳೂ, ವಾನರರೂ, ದೇವತೆಗಳೂ, ಗಂಧರ್ವರೂ ಪರಮಾನಂದಭರಿತರಾದರು. ಆಗ ಮಹಾ ತೇಜಸ್ವಿಯಾದ ಹನುಮಂತನು ರಾವಣನ ಶಕ್ತ್ಯಾಯುಧದಿಂದ ಪೀಡಿತನಾಗಿದ್ದ ಲಕ್ಷ್ಮಣನನ್ನು ತನ್ನ ಭುಜಗಳಿಂದೆತ್ತಿಕೊಂಡು ಅವನನ್ನು ರಘುಕುಲೋದ್ಭವನಾದ ಶ್ರೀರಾಮಮೂರ್ತಿಯ ಬಳಿಗೆ ಕರೆದೊಯ್ದನು. ಆಗ ಶತ್ರುಮರ್ದನನಾದ ಆ ಲಕ್ಷ್ಮಣನಾದರೋ ಆ ಹನುಮಂತನಲ್ಲಿನ ಮೈತ್ರಿಯಿಂದಲೂ, ಸರ್ವೋತ್ತಮವಾದ ಭಕ್ತಿಯಿಂದಲೂ ಅವನಿಗೆ ಸುಲಭಗ್ರಾಹ್ಯನಾದನು. ‖ ೧೧೭–೧೨೦ ‖ ಆ ಕೂಡಲೇ ರಾವಣನು ಪ್ರಯೋಗಿಸಿದ ಶಕ್ತ್ಯಾಯುಧವು ಶತ್ರುಗಳಿಂದ ಪರಮ ದುರ್ಜಯನಾದ ಆ ಲಕ್ಷ್ಮಣಸ್ವಾಮಿಯನ್ನು ತೊರೆದು ಹಿಂತಿರುಗಿ ತನ್ನ ಸ್ವಾಮಿಯಾದ ಆ ರಾವಣನ ರಥದಲ್ಲಿ ತನ್ನ ಸ್ಥಾನವನ್ನು ಹೊಂದಿತು. ತಿಳಿಯಲಸದಳವಾದ ಮಹಾ ವಿಷ್ಣುವಿನ ಅಂಶಾನುಸ್ಮರಣೆಯಿಂದ ಶತ್ರುನಾಶಕನಾದ ಆ ಲಕ್ಷ್ಮಣನು ಮೂರ್ಛೆಯನ್ನುತಿಳಿದೆದ್ದು ಯಾವ ವ್ರಣವೂ ಇಲ್ಲದವನಾದನು. ಆಗ ಮಹಾ ತೇಜಸ್ಸಂಪನ್ನನಾದ ಆ ರಾವಣಾಸುರನಾದರೋ ಎಚ್ಚೆತ್ತು

ಮಹಾಹವೇ । ಆದದೇ ನಿಶಿತಾನ್ ಬಾಣಾನ್ ಜಗ್ರಾಹಚ ಮಹದ್ಧನುಃ ॥ ೧೨೩ ॥ ನಿಪಾತಿತಮಹಾವೀರಾಂ ದ್ರವಂತೀಂ ವಾನರೀಂ ಚಮೂಂ । ರಾಘವಸ್ತು ರಣೇ ದೃಷ್ಟ್ವಾ ರಾವಣಂ ಸಮಭಿದ್ರವತ್ ॥೧೨೪॥ ಅಥೈನಮುಪಸಂಗಮ್ಯ ಹನುಮಾನ್ವಾಕ್ಯ ಮಬ್ರವೀತ್ । "ಮಮಪೃಷ್ಠಂ ಸಮಾರುಹ್ಯ ರಾಕ್ಷಸಂ ಶಾಸ್ತುಮರ್ಹಸಿ ॥ ೧೨೫ ॥ ವಿಷ್ಣುರ್ಯಥಾ ಗರುತ್ಮಂತಂ ಬಲವಂತಂ ಸಮಾಹಿತಃ" । ತಚ್ಛ್ರುತ್ವಾ ರಾಘವೋ ವಾಕ್ಯಂ ವಾಯುಪುತ್ರೇಣ ಭಾಷಿತಂ ॥ ೧೨೬ ॥ ಆರುರೋಹ ಮಹಾಶೂರೋ ಬಲ ವಂತಂ ಮಹಾಕಪಿಂ । ರಥಸ್ಥಂ ರಾವಣಂ ಸಂಖ್ಯೇ ದದರ್ಶ ಮನುಜಾಧಿಪಃ ॥೧೨೭॥

---

ರಾವಣನೂ ಕೂಡ, ಸಂಜ್ಞಾಂ - ಪ್ರಜ್ಞೆಯನ್ನು, ಪ್ರಾಪ್ಯ - ಹೊಂದಿ, ನಿಶಿತಾನ್ - ತೀಕ್ಷ್ಣವಾದ, ಬಾಣಾನ್ - ಬಾಣಗಳನ್ನು, ಮಹಾಹವೇ - ಮಹಾ ಯುದ್ಧದಲ್ಲಿ, ಆದದೇ - ತೆಗೆದುಕೊಂಡು, ಮಹತ್ - ದೊಡ್ಡದಾದ, ಧನುಶ್ಚ - ಬಿಲ್ಲನ್ನು, ಜಗ್ರಾಹ - ತೆಗೆದುಕೊಂಡನು. ॥೧೨೩॥ ರಾಘವಸ್ತು- ಶ್ರೀರಾಮನಾದರೆ, ರಣೇ-ಕಾಳಗದಲ್ಲಿ, ನಿಪಾ.....ರಾಂ-ಬೀಳಿಸಲ್ಪಟ್ಟ ಮಹಾ ಶೂರರುಳ್ಳ, ದ್ರವಂತೀಂ- ಓಡಿಹೋಗುತ್ತಿರುವ, ವಾನರೀಂ- ಕಪಿಗಳ ಸಂಬಂಧವಾದ, ಚಮೂಂ - ಸೈನ್ಯವನ್ನು, ದೃಷ್ಟ್ವಾ - ಕಂಡು, ರಾವಣಂ - ರಾವಣನನ್ನು ಕುರಿತು, ಸಮಭಿದ್ರವತ್ - ಅಟ್ಟಿಬಂದನು. ॥ ೧೨೪ ॥ ಅಥ - ಆ ಬಳಿಕ, ಹನುಮಾನ್ - ಹನುಮಂತನು, ಏನಂ - ಈ ಶ್ರೀರಾಮನನ್ನು ಕುರಿತು, ಉಪಸಂಗಮ್ಯ - ಬಂದು, ವಾಕ್ಯಂ - ಮಾತನ್ನು, ಅಬ್ರವೀತ್ - ನುಡಿದನು, ಮಮ - ನನ್ನ, ಪೃಷ್ಠಂ - ಪೃಷ್ಠವನ್ನು, ಬಲವಂತಂ - ಬಲಿಷ್ಠನಾದ, ಗರುತ್ಮಂತು - ಗರುಡನನ್ನು, ಸಮಾಹಿತಃ - ಸಮಾಧಾನಚಿತ್ತನಾದ, ವಿಷ್ಣುರ್ಯಥಾ - ವಿಷ್ಣುವಿನಂತೆ, ಸಮಾರುಹ್ಯ - ಏರಿ, ರಾಕ್ಷಸಂ - ರಾವಣನನ್ನು, ಶಾಸ್ತುಂ - ಸಂಹಾರ ಮಾಡುವುದಕ್ಕೆ, ಅರ್ಹಸಿ - ಯೋಗ್ಯನಾಗು. ॥ ೧೨೫ ॥ ಮಹಾಶೂರಃ - ಮಹಾ ವೀರನಾದ, ರಾಘವಃ - ಶ್ರೀರಾಮನು, ವಾಯುಪುತ್ರೇಣ - ಆಂಜನೇಯನಿಂದ, ಭಾಷಿತಂ - ಹೇಳಲ್ಪಟ್ಟ, ತದ್ವಾಕ್ಯಂ- ಆ ಮಾತನ್ನು, ಶ್ರುತ್ವಾ - ಕೇಳಿ, ಬಲವಂತಂ - ಬಲಿಷ್ಠನಾದ, ಮಹಾಕಪಿಂ - ಮಹಾ ವಾನರನನ್ನು, ಆರುರೋಹ - ಏರಿದನು. ॥ ೧೨೬ ॥ ಮನುಜಾಧಿಪಃ - ಮನುಷ್ಯನಾಥನಾದ ಶ್ರೀರಾಮನು, ಸಂಖ್ಯೇ - ಕಾಳಗದಲ್ಲಿ, ರಥಸ್ಥಂ - ರಥಾರೂಢನಾದ, ರಾವಣಂ - ರಾವಣನನ್ನು, ದದರ್ಶ - ಕಂಡನು, ॥೧೨೭॥

---

ಪುನಃ ಮಹಾ ತೀಕ್ಷ್ಣಗಳಾದ ಬಾಣಗಳನ್ನು ಬಿಲ್ಲಿನಲ್ಲಿ ಸಂಧಿಸಿ ನಿಂತನು. ಆ ಸಮಯದಲ್ಲಿ ರಘುಕುಲೋದ್ಭವನಾದ ಶ್ರೀರಾಮನು ಕೆಳಕ್ಕೆ ಬಿದ್ದು ತತ್ತಳಿಸಿಹೋದ ಮಹಾವೀರುಳ್ಳುದೂ, ದಿಕ್ಕೆಟ್ಟು ಅತ್ತಿತ್ತ ಓಡುತ್ತಿರುವುದೂ ಆದ ವಾನರಸೇನೆಯೆಲ್ಲವನ್ನೂ ನೋಡಿ ಆ ರಾವಣಾ ಸುರನಟ್ಟಿಹೋಗಲು ಸಿದ್ಧನಾದನು. ॥ ೧೨೦-೧೨೪ ॥ ಆಗ ಹನುಮಂತನು ಆತನ ಸಮಾಪ ಕ್ಕೈತಂದು ಆತನನ್ನು ಕುರಿತು, "ಓ ರಾಮಚಂದ್ರ! ವಿಷ್ಣುವು ಅತ್ಯಧಿಕಬಲಸಂಪನ್ನನಾದ ಗರುತ್ಮಂತನನ್ನೇರಿ ಯುದ್ಧಸನ್ನದ್ಧನಾಗಿ ಹೊರಡುವಂತೆ ನೀನು ನನ್ನ ಪೃಷ್ಠವನ್ನೇರಿ ಕುಳಿತು ಈ ರಾವಣಾಸುರನನ್ನು ಸಂಹರಿಸುವವನಾಗು" ಎಂದು ಅರಿಕೆ ಮಾಡಿದನು. ವಾಯುಪುತ್ರನಾದ ಹನುಮಂತನಿಂತು ನುಡಿದುದನ್ನು ಕೇಳಿ ರಘುಕುಲೋದ್ಭವನೂ, ಮಹಾ ಶೂರನೂ ಆದ ಶ್ರೀರಾಮಮೂರ್ತಿಯು ಮಹಾ ಬಲಾಢ್ಯನೂ, ಮಹಾ ಶೂರನೂ ಆದ ಅವನ ಭುಜಗಳನ್ನೇರಿ ಸಕಲಾಯುಧಸಂಪನ್ನನಾಗಿ ವೈರೋಚನಿಯನ್ನು ಸಂಹರಿಸಲು ಗರುಡಾರೂಢ ನಾಗಿ ಹೊರಟ ಮಹಾ ವಿಷ್ಣುವಿನಂತೆ ಶೋಭಿಸಿದನು. ಆಗಲಾತನು ಸಮಸ್ತ ಭೂತಗಳಿಗೂ

ತವಮಾಲೋಕ್ಯ ಮಹಾತೇಜಾಃ ಪ್ರದುದ್ರಾವ ಸರಾಘವಃ । ವೈರೋಚನಮಿವ ಕ್ರುದ್ಧೋ ವಿಷ್ಣುರಭ್ಯುದ್ಯತಾಯುಧಃ ॥ ೧೨೮ ॥ ಜ್ಯಾಶಬ್ದಮಕರೋತ್ತೀವ್ರಂ ವಜ್ರನಿಷ್ಪೇಷನಿಸ್ವನಂ । ಗಿರಾ ಗಂಭೀರಯಾ ರಾಮೋ ರಾಕ್ಷಸೇಂದ್ರಮುವಾಚಹ ॥ ೧೨೯ ॥ "ತಿಷ್ಠತಿಷ್ಠ! ಮಮ ತ್ವಂ ಹಿ ಕೃತ್ವಾ ವಿಪ್ರಿಯಮೀದೃಶಂ । ಕ್ವನು ರಾಕ್ಷಸಶಾರ್ದೂಲ! ಗತೋ ಮೋಕ್ಷಮವಾಪ್ಸ್ಯಸಿ ॥೧೩೦॥ ಯದೀಂದ್ರವೈವಸ್ವತಭಾಸ್ಕರಾನ್ವಾ ಸ್ವಯಂಭುವೈಶ್ವಾನರಶಂಕರಾನ್ವಾ । ಗಮಿಷ್ಯಸಿ ತ್ವಂ ದಶವಾ ದಿಶೋಽಥವಾ ತಥಾಪಿ ಮೇ ನಾಽದ್ಯ ಗತೋ ವಿಮೋಕ್ಷ್ಯಸೇ ॥ ೧೩೧ ॥ ಯಶ್ಚೈವ ಶಕ್ತ್ಯಾಽಭಿಹತಸ್ತ್ವಯಾದ್ಯ ಇಚ್ಛರ್ವಿಷಾದಂ ಸಹಸಾಭ್ಯುಪೇತಃ । ಸಏವ ರಕ್ಷೋಗಣರಾಜ! ಮೃತ್ಯುಸ್ಸಪುತ್ರ

ಮಹಾತೇಜಾಃ - ಬಹು ಪರಾಕ್ರಮಿಯಾದ, ಸರಾಘವಃ - ಆ ಶ್ರೀರಾಮನು, ತಂ - ಆ ರಾವಣನನ್ನು, ಆಲೋಕ್ಯ - ಕಂಡು, ಅಭ್ಯುದ್ಯತಾಯುಧಃ - ಎತ್ತಿದ ಆಯುಧವುಳ್ಳವನಾಗಿ, ಕ್ರುದ್ಧಃ - ಕೋಪಿಷ್ಠನಾದ, ವಿಷ್ಣುಃ - ಶ್ರೀಮಹಾವಿಷ್ಣುವು, ವೈರೋಚನಮಿವ - ವಿರೋಚನನ ಮಗನಾದ ಬಲಿಯನ್ನಂತೆ, ಪ್ರದುದ್ರಾವ-ಓಡಿಬಂದನು, ವಜ್ರ....ಸಂ-ವಜ್ರಾಯುಧದ ಘೋಷದಂತೆ ಧ್ವನಿಯುಳ್ಳ, ತೀವ್ರಂ - ತೀಕ್ಷ್ಣವಾದ, ಜ್ಯಾಶಬ್ದಂ-ಧನುಷ್ಟಂಕಾರವನ್ನು, ಅಕರೋತ್-ಮಾಡಿದನು, ರಾಮಃ-ಶ್ರೀರಾಮನು, ಗಂಭೀರಯಾ - ಗಂಭೀರವಾದ, ಗಿರಾ - ಮಾತಿನಿಂದ, ರಾಕ್ಷಸೇಂದ್ರಂ - ರಾವಣನನ್ನು ಕುರಿತು, ಉವಾಚಹ-ಹೇಳಿದನಷ್ಟೆ. ||೧೨೮-೧೨೯|| ಹೇ ರಾಕ್ಷಸಶಾರ್ದೂಲ - ಎಲೈ ರಾಕ್ಷಸಶ್ರೇಷ್ಠನೇ, ಮಮ-ನನಗೆ, ತ್ವಂ - ನೀನು, ಈದೃಶಂ - ಇಂಥಾ, ವಿಪ್ರಿಯಂ - ಅಪಕಾರವನ್ನು, ಕೃತ್ವಾ - ಮಾಡಿ, ಕ್ವ - ಎಲ್ಲಿ, ಗತಃ - ಹೋದವನಾಗಿ, ಮೋಕ್ಷಂ - ಬಿಡುಗಡೆಯನ್ನು, ಅವಾಪ್ಸ್ಯಸಿ - ಹೊಂದುವೆ, ತಿಷ್ಠತಿಷ್ಠ - ನಿಲ್ಲುನಿಲ್ಲು. || ೧೩೦ || ಇಂದ್ರ....ನ್ವಾ - ಇಂದ್ರನನ್ನೂ, ಯಮನನ್ನೂ, ಸೂರ್ಯನನ್ನೂ, ಗಮಿಷ್ಯಸಿ ಯದಿ - ಹೊಂದಿದವನಾಗಲಿ, ಅಥವಾ - ಹಾಗಲ್ಲದಿದ್ದರೆ, ದಶದಿಶಃ - ಹತ್ತುದಿಕ್ಕುಗಳಿಲ್ಲಾದರೂ, ಗಮಿಷ್ಯಸಿಯದಿ - ಓಡಿಹೋದವನಾಗಲಿ, ತಥಾಪಿ - ಹಾಗಾದರೂ, ಅದ್ಯ - ಈಗ, ಗತಃ - ನನ್ನ ಸಮೀಪವನ್ನು ಹೊಂದಿದ ನೀನು, ಮೇ - ನನ್ನ ದೆಸೆಯಿಂದ, ನವಿಮೋಕ್ಷ್ಯಸೇ - ಬಿಡಲ್ಪಡುವುದಿಲ್ಲ. || ೧೩೧ || ರಕ್ಷೋಗಣರಾಜ-ರಾಕ್ಷಸಯೂಥಾಧಿಪತಿಯೇ, ಅದ್ಯ-ಈಗ, ಇಚ್ಛರ್-ಯುದ್ಧೇಚ್ಛೆಯುಳ್ಳವನಾಗಿ, ಯಶ್ಚೈಷಃ - ಯಾವ ಲಕ್ಷ್ಮಣನು, ತ್ವಯಾ - ನಿನ್ನಿಂದ, ಶಕ್ತ್ಯಾ - ಶಕ್ತ್ಯಾಯುಧದಿಂದ, ಅಭಿಹತಃ - ಹೊಡೆಯಲ್ಪಟ್ಟವನಾಗಿ, ಸಹಸಾ - ಜಾಗ್ರತೆಯಾಗಿ, ವಿಷಾದಂ - ದುಃಖವನ್ನು,

ಭಯವುಂಟಾಗುವಂತೆ ಧನುಷ್ಟಂಕಾರವನ್ನು ಮಾಡಿ ರಾವಣನ ಸಮೀಪಕ್ಕೆ ಬಂದು ಗಂಭೀರವಾದ ಮಾತುಗಳಿಂದ ಅವನನ್ನು ಕುರಿತು, "ಎಲವೋ ರಾಕ್ಷಸಶ್ರೇಷ್ಠನೇ, ರಾವಣನೇ! ನಿಲ್ಲುನಿಲ್ಲು, ನನಗಿಂತಹ ಮಹದಪಕಾರವನ್ನು ಮಾಡಿ ಎಲ್ಲಿಗೋಡುವೆ; ಸ್ಥಿರವಾಗಿ ನಿಲ್ಲು. ಎಲಾ ರಾಕ್ಷಸನೇ! ನೀನು ದೇವೇಂದ್ರನ ಬಳಿಗೈದಿದರೂ, ಯಮನನ್ನು ಮರೆಹೊಕ್ಕರೂ, ಸೂರ್ಯನ ಬಳಿಗೆ ಹೋದರೂ, ಬ್ರಹ್ಮದೇವನನ್ನೇ ಶರಣುಹೊಂದಿದರೂ, ಅಗ್ನಿಯ ಸಹಾಯವನ್ನೇ ಪಡೆದರೂ, ಪರಮೇಶ್ವರನನ್ನೇ ಸೇರಿದರೂ, ಕಡೆಗೆ ದಶದಿಶೆಗಳಲ್ಲಡಗಿದರೂ ನಾನು ನಿನ್ನನು ಸಂಹರಿಸದೆ ಬಿಡುವುದಿಲ್ಲವು, ನೀನೆಲ್ಲಿಗೆ ಹೋದರೂ ನನ್ನ ಬಾಣಘಾತದಿಂದ ತಪ್ಪಿಸಿಕೊಳ್ಳಲಾರೆಯೆಂದರಿತುಕೊ. ॥ ೧೨೮-೧೩೧ ॥ ಎಲೈ; ಈಗ ನೀನು ಶಕ್ತ್ಯಾಯುಧದಿಂದ ಪ್ರಹರಿಸಿದ ಆ ಲಕ್ಷ್ಮಣನೇ ಇದೀಗ ಪುತ್ರಮಿತ್ರಾದಿಗಳೊಡಗೂಡಿದ ನಿನಗೆ ಮೃತ್ಯುರೂಪ

ದಾರಸ್ಯ ತವಾಽದ್ಯ ಯುದ್ಧೇ ॥ ೧೩೨ ॥ ಏತೇನ ಚಾತ್ಯದ್ಭುತದರ್ಶನಾನಿ ಶರೈರ್ಜನಸ್ಥಾನಕೃತಾಲಯಾನಿ । ಚತುರ್ದಶಾನ್ಯಾತ್ತವರಾಯುಧಾನಿ ರಕ್ಷಸ್ಸಹಸ್ರಾಣಿ ನಿಷೂದಿತಾನಿ" ॥ ೧೩೩ ॥ ರಾಘವಸ್ಯ ವಚಃ ಶ್ರುತ್ವಾ ರಾಕ್ಷಸೇಂದ್ರೋ ಮಹಾಕಪಿಂ । ವಾಯುಪುತ್ರಂ ಮಹಾವೀರ್ಯಂ ವಹಂತಂ ರಾಘವಂ ರಣೇ । ಆಜಘಾನ ಶರೈಸ್ತೀಕ್ಷ್ಣೈಃ ಕಾಲಾನಲಶಿಖೋಪಮೈಃ ॥ ೧೩೪ ॥ ರಾಕ್ಷಸೇನಾಹವೇ ತಸ್ಯ ತಾಡಿತಸ್ಯಾಪಿ ಸಾಯಕೈಃ । ಸ್ವಭಾವತೇಜೋಯುಕ್ತಸ್ಯ ಭೂಯಸ್ತೇಜೋ ವ್ಯವರ್ಧತ ॥ ೧೩೫ ॥

ಅಭ್ಯುಪೇತಃ - ಹೊಂದಿದವನಾದನೋ, ಅತಃ - ಈ ಕಾರಣದಿಂದ, ಸಏವ - ಆ ಲಕ್ಷ್ಮಣಾಭಿನ್ನನಾದ ನಾನೆ, ಅದ್ಯ - ಈಗ, ಯುದ್ಧೇ - ಕಾಳಗದಲ್ಲಿ, ಸಪುತ್ರದಾರಸ್ಯ - ಮಕ್ಕಳಿಂದಲೂ, ಹೆಂಡತಿಯರಿಂದಲೂ ಒಡಗೂಡಿದ, ತವ - ನಿನಗೆ, ಮೃತ್ಯುಃ - ಮೃತ್ಯುವು, (ಭವಿಷ್ಯಾಮಿ - ಆಗುವೆನು). (ಗೋ) ॥ ೧೩೨ ॥ ಏತೇನ - ಈ ನನ್ನಿಂದ, (ಈ ಲಕ್ಷ್ಮಣನಿಂದ) ಅತ್ಯ....ನಿ - ಅತ್ಯಾಶ್ಚರ್ಯಕರವಾದ ನೋಟಗಳುಳ್ಳ, ಜನ....ನಿ - ಜನಸ್ಥಾನದಲ್ಲಿ ಮಾಡಲ್ಪಟ್ಟ ಆವಾಸದಿಂದ, ಆತ್ತ....ನಿ - ಗ್ರಹಿಸಲ್ಪಟ್ಟ ಉತ್ತಮವಾದ ಆಯುಧಗಳುಳ್ಳ, ಚತುರ್ದಶಾನಿ - ಹದಿನಾಲ್ಕು ಸಂಖ್ಯೆಯುಳ್ಳ, ರಕ್ಷ....ಣಿ - ರಾಕ್ಷಸರ ಸಾವಿರಗಳು, ನಿಷೂದಿತಾ - ಹೊಡೆಯಲ್ಪಟ್ಟವುಗಳಾದವು. ॥೧೩೩॥ ರಾಘವಸ್ಯ - ಶ್ರೀರಾಮನ, ವಚಃ- ಮಾತನ್ನು, ಶ್ರುತ್ವಾ - ಕೇಳಿ, ರಾಕ್ಷಸೇಂದ್ರಃ - ರಾಕ್ಷಸಾಧಿಪತಿಯಾದ ರಾವಣನು, ರಣೇ - ಕಾಳಗದಲ್ಲಿ, ರಾಘವಂ - ಶ್ರೀರಾಮನನ್ನು, ವಹಂತಂ - ಹೊತ್ತಿರುವ, ಮಹಾವೀರ್ಯಂ - ಮಹಾಪರಾಕ್ರಮಿಯಾದ, ವಾಯುಪುತ್ರಂ - ವಾಯುಪುತ್ರನಾದ, ಮಹಾಕಪಿಂ - ಆಂಜನೇಯನನ್ನು, ಕಾಲಾ....ಮೈಃ - ಪ್ರಳಯಾಗ್ನಿಜ್ವಾಲೆಗೆ ಸಮಾನವಾದ, ತೀಕ್ಷ್ಣೈಃ - ಹದವಾದ, ಶರೈಃ - ಬಾಣಗಳಿಂದ, ಆಜಘಾನ - ಹೊಡೆದನು. ॥ ೧೩೪ ॥ ಆಹವೇ - ಕಾಳಗದಲ್ಲಿ, ರಾಕ್ಷಸೇನ - ರಾವಣನಿಂದ, ಸಾಯಕೈಃ - ಬಾಣಗಳಿಂದ, ತಾಡಿತಸ್ಯಾಪಿ - ಹೊಡೆಯಲ್ಪಟ್ಟವನಾದರೂ, ಸ್ವಭಾ....ಸ್ಯ - ಸ್ವಾಭಾವಿಕ ತೇಜಸ್ಸಿನಿಂದ ಕೂಡಿರುವ, ತಸ್ಯ - ಆ ಆಂಜನೇಯನಿಗೆ, ತೇಜಃ - ತೇಜಸ್ಸು, ಭೂಯಃ - ಮತ್ತೂ, ಅಭ್ಯವರ್ಧತ - ವೃದ್ಧಿಗೊಂಡಿತು. ॥ ೧೩೫ ॥ ತತಃ - ಬಳಿಕ, ಮಹಾತೇಜಾಃ - ಬಹು ತೇಜೋವಂತನಾದ ರಾಮನು, ರಾವಣೇನ - ರಾವಣನಿಂದ, ಕೃತವ್ರಣಂ - ಮಾಡಲ್ಪಟ್ಟ ಘಾಯ

ದಿಂದ್ಯೆತಂದಿರುವನೆಂದರಿತುಕೊ. ಇದೋ; ನಾನು ಪೂರ್ವದಲ್ಲಿ ಬಹು ತೀಕ್ಷ್ಣಗಳಾದ ಬಾಣಗಳನ್ನು ಪ್ರಯೋಗಿಸಿ ಜನಸ್ಥಾನದಲ್ಲಿದ್ದ ನಿನ್ನ ರಾಕ್ಷಸಸೇನೆಯಲ್ಲಿದ್ದ ಹದಿನಾಲ್ಕು ಸಾವಿರ ರಾಕ್ಷಸರನ್ನು, ಅವರೆಲ್ಲರೂ ವಿವಿಧಾಯುಧಗಳನ್ನು ಧರಿಸಿದ್ದರೂ, ಮಹಾ ಶೂರರೇ ಆಗಿದ್ದರೂ ಎಲ್ಲರನ್ನೂ ಯಮನಾಲಯಕ್ಕಟ್ಟಿದೆನು. ಇದೀಗ ಅದೇ ಬಾಣಗಳಿಂದ ನಿನ್ನನ್ನು ಸಂಹರಿಸಲು ಬಂದಿರುವೆನು" ಎಂದು ಹೇಳಿದನು. ॥ ೧೩೨–೧೩೩ ॥ ರಘುಕುಲೋದ್ಭವನಾದ ಶ್ರೀರಾಮಚಂದ್ರನೀರೀತಿ ಹೇಳಿದದನ್ನು ಕೇಳಿ ರಾವಣಾಸುರನು ಮಹಾ ಕುಪಿತನಾಗಿ ಪ್ರಳಯಕಾಲಾಗ್ನಿಗೆ ಸಮಾನವಾದುವೂ, ಮಹಾ ಜಾಜ್ವಲ್ಯಮಾನವಾದುವೂ, ಬಹು ತೀಕ್ಷ್ಣವಾದುವೂ ಆದ ಬಾಣಗಳನ್ನು ಶ್ರೀರಾಮನನ್ನು ಹೊತ್ತು ನಿಂತಿದ್ದ ಮಹಾ ಪರಾಕ್ರಮಿಯೂ, ವಾಯುದೇವನ ಪುತ್ರನೂ ಆದ ಹನುಮಂತನ ಮೇಲೆ ಪ್ರಯೋಗಿಸಿದನು. ಆ ಬಾಣಗಳಿಂದ ಘಾತಿತನಾದ ಹನುಮಂತನ ತೇಜಸ್ಸು ಮೊದಲಿಗಿಂತಲೂ ಅತ್ಯಧಿಕವಾಗಿ ವರ್ಧಿಸಿತು. ॥ ೧೩೪–೧೩೫ ॥ ಆಮೇಲೆ ರಾವಣಾಸುರನಂತು ಹನುಮಂತನನ್ನು ಗಾಯಪಡಿಸಿದುದನ್ನು

**ತತೋ ರಾಮೋ ಮಹಾತೇಜಾ ರಾವಣೇನ ಕೃತವ್ರಣಂ । ದೃಷ್ಟ್ವಾ ಪ್ಲವಗಶಾರ್ದೂಲಂ**
**ಕೋಪಸ್ಯ ವಶಮೇಯಿವಾನ್ ॥ ೧೩೬ ॥ ತಸ್ಯಾಭಿಚಕ್ರಮ್ಯ ರಥಂ ಸಚಕ್ರಂ ಸಾಶ್ವಧ್ವಜ**
**ಚ್ಛತ್ರಮಹಾಪತಾಕಂ । ಸಸಾರಥಿಂ ಸಾಶನಿಶೂಲಖಡ್ಗಂ ರಾಮಃ ಪ್ರಚಿಚ್ಛೇದ ಶರೈಸ್ಸು**
**ಪುಂಖೈಃ ॥ ೧೩೭ ॥ ಅಥೇಂದ್ರಶತ್ರುಂ ತರಸಾ ಜಘಾನ ಬಾಣೇನ ವಜ್ರಾಶನಿಸನ್ನಿ**
**ಭೇನ । ಭುಜಾಂತರೇ ವ್ಯೂಢಸುಜಾತರೂಪೇ ವಜ್ರೇಣ ಮೇರುಂ ಭಗವಾನಿವೇಂದ್ರಃ**
**॥ ೧೩೮ ॥ ಯೋ ವಜ್ರಪಾತಾಶನಿಸನ್ನಿಪಾತಾನ್ನ ಚುಕ್ಷುಭೇ ನಾಪಿ ಚಚಾಲ ರಾಜಾ ।**
**ಸರಾಮಬಾಣಾಭಿಹತೋ ಭೃಶಾರ್ತಶ್ಚಚಾಲ ಚಾಪಂಚ ಮುಮೋಚ ವೀರಃ ॥೧೩೯॥**

---

ಗಳುಳ್ಳ, ಪ್ಲವ.....ಲಂ - ವಾನರೋತ್ತಮನಾದ ಹನುಮಂತನನ್ನು, ದೃಷ್ಟ್ವಾ ಕಂಡು, ಕೋಪಸ್ಯ - ಕೋಪಕ್ಕೆ, ವಶಂ-ಸ್ವಾಧೀನತೆಯನ್ನು, ಏಯಿವಾನ್-ಹೊಂದಿದನು.
॥ ೧೩೬ ॥ ರಾಮಃ ಶ್ರೀರಾಮನು, ತಸ್ಯ - ಆ ರಾವಣನ, ಅಭಿಚಕ್ರಮ್ಯ - ಮತ್ತೂ ಸಮೀಪಕ್ಕೆ ಬಂದು, ಸಾಶ್ವ....ಕಂ - ಕುದುರೆಗಳಿಂದಲೂ, ಧ್ವಜದಿಂದಲೂ, ಛತ್ರಗಳಿಂದಲೂ, ಖಡ್ಗದಿಂದಲೂ, ಧ್ವಜಪಟಗಳಿಂದಲೂ ಒಡಗೂಡಿದ, ಸಸಾರಥಿಂ - ಸಾರಥಿಯಿಂದ ಕೂಡಿದ, ಸಾಶ....ಡ್ಗಂ - ವಜ್ರಾಯುಧದಿಂದಲೂ, ಶೂಲಾಯುಧದಿಂದಲೂ, ಖಡ್ಗದಿಂದಲೂ ಒಡಗೂಡಿದ, ತಸ್ಯ - ಆ ರಾವಣನ, ರಥಂ - ತೇರನ್ನು, ಸುಪುಂಖೈಃ - ದೃಢವಾದ ಕೊಂಕಿಗಳುಳ್ಳ, ಶರೈಃ - ಬಾಣಗಳಿಂದ, ಪ್ರಚಿಚ್ಛೇದ - ಕತ್ತರಿಸಿದನು.
॥ ೧೩೭ ॥ ಅಥ - ಅನಂತರದಲ್ಲಿ, ವಜ್ರಾ....ನ - ವಜ್ರಾಯುಧಕ್ಕೂ ಸಿಡಿಲಿಗೂ ಸಮಾನವಾದ, ಬಾಣೇನ - ಬಾಣದಿಂದ, ವ್ಯೂಢ....ಪೇ - ವಿಸ್ತಾರವೂ ಸುಂದರವೂ ಆದ, ಭುಜಾಂತರೇ - ವಕ್ಷಸ್ಥಲದಲ್ಲಿ, ಭಗವಾನ್ - ಪೂಜ್ಯನಾದ, ಇಂದ್ರಃ - ದೇವೇಂದ್ರನು, ವಜ್ರೇಣ - ವಜ್ರಾಯುಧದಿಂದ, ಮೇರುಮಿವ - ಮೇರುಪರ್ವತವನ್ನಂತೆ, ಇಂದ್ರಶತ್ರುಂ - ದೇವೇಂದ್ರನ ಶತ್ರುವಾದ ರಾವಣನನ್ನು, ತರಸಾ - ಬಲವಾಗಿ, ಜಘಾನ- ಹೊಡೆದನು.
॥ ೧೩೮ ॥ ಯೋರಾಜಾ - ಯಾವ ರಾಕ್ಷಸರಾಜನು, ವಜ್ರ.....ತ್ - ವಜ್ರಾಯುಧದ ಪ್ರಹಾರದಿಂದಲೂ ಸಿಡಿಲಿನ ಬೀಳುವಿಕೆಯಿಂದಲೂ, ನಚುಕ್ಷುಭೇ - ಶ್ರಮವನ್ನು ಹೊಂದಲಿಲ್ಲವೋ, ನಚಚಾಲ - ಚಲಿಸಲೂ ಇಲ್ಲವೋ, ವೀರಃ - ಶೂರನಾದ, ವೀರಃ - ಶೂರನಾದ, ಸೋಪಿ - ಅಂಥಾ ರಾವಣನೂ ಸಹಾ, ರಾಮ....ತಃ - ಶ್ರೀರಾಮನ ಬಾಣದಿಂದ ಹೊಡೆಯಲ್ಪಟ್ಟವನಾಗಿ, ಭೃಶಾರ್ತಃ- ಬಹು ಪೀಡಿತನಾಗಿ, ಚಚಾಲ - ನಡುಗಿದನು, ಚಾಪಂಚ - ಧನುಸ್ಸನ್ನೂ ಕೂಡ, ಮುಮೋಚ -

---

ನೋಡಿ ಶ್ರೀರಾಮನು ಅಪರಿಮಿತವಾದ ಕೋಪವನ್ನು ತಾಳಿ ಬಹಳವಾಗಿ ವಿಜೃಂಭಿಸಿ ಕೂಡಲೇ ಕೂರಂಬುಗಳನ್ನೆಸೆದು ಆ ರಾವಣನ ರಥಚಕ್ರಗಳನ್ನೂ, ಕುದುರೆಗಳನ್ನೂ, ಶ್ವೇತಚ್ಛತ್ರವನ್ನೂ, ಧ್ವಜಪತಾಕೆಗಳನ್ನೂ, ಶೂಲಖಡ್ಗಾದ್ಯಾಯುಧಗಳನ್ನೂ, ಸಾರಥಿಯನ್ನೂ ಭೇದಿಸಿ ಕೆಡವಿದನು; ಇದಾದ ತರುವಾಯ ಇನ್ನೂ ತೀಕ್ಷ್ಣವಾದ ಬಾಣಗಳನ್ನು ಆ ರಾಕ್ಷಸನಮೇಲೆ ಪ್ರಯೋಗಿಸಿದನು. ಆಮೇಲೆ ವಜ್ರಾಯುಧಕ್ಕೆ ಸಮಾನವಾದುದೂ, ಬಹು ತೀಕ್ಷ್ಣವಾದುದೂ ಆದೊಂದು ಬಾಣವನ್ನು ಸಂಧಿಸಿದ ಆ ಶ್ರೀರಾಮನು, ಬಹು ಜಾಗ್ರತೆಯಾಗಿ ದೇವೇಂದ್ರನಿಗೆ ಶತ್ರುವಾದ ಆ ರಾವಣನ ವಕ್ಷಸ್ಥಳಕ್ಕೆಸೆದು, ದೇವೇಂದ್ರನು ವಜ್ರಾಯುಧದಿಂದ ಪರ್ವತವನ್ನೆಂತೋ ಅಂತು ಭೇದಿಸಿದನು. ಮಹಾವೀರನೂ, ವಜ್ರಾಯುಧದ ಮತ್ತು ಸಿಡಿಲಿನ ಹೊಡೆತಕ್ಕೂ ಸ್ವಲ್ಪಮಾತ್ರವೂ ಚಲಿಸದವನೂ ಆದ ಆ ರಾವಣನು ಶ್ರೀರಾಮನು ಪ್ರಯೋಗಿಸಿದ ಆ ಬಾಣಘಾತದಿಂದ ಪರಮ ಪೀಡಿತನಾಗಿ ಕೈಲಿದ್ದ ಧನುರ್ಬಾಣಗಳನ್ನು ಜಾರಿಬಿಟ್ಟು

ತಂ ವಿಹ್ವಲಂತಂ ಪ್ರಸಮೀಕ್ಷ್ಯ ರಾಮಸ್ಸಮಾದದೇ ದೀಪ್ತಮಥಾರ್ಧಚಂದ್ರಂ ।
ತೇನಾರ್ಕವರ್ಣಂ ಸಹಸಾ ಕಿರೀಟಂ ಚಿಚ್ಛೇದ ರಕ್ಷೋಧಿಪತೇರ್ಮಹಾತ್ಮಾ ॥ ೧೪೦ ॥
ತಂ ನಿರ್ವಿಷಾಶೀವಿಷಸನ್ನಿಕಾಶಂ ಶಾಂತಾರ್ಚಿಷಂ ಸೂರ್ಯಮಿವಾಪ್ರಕಾಶಂ । ಗತ
ಶ್ರಿಯಂ ಕೃತ್ತಕಿರೀಟಕೂಟಮುವಾಚ ರಾಮೋ ಯುಧಿ ರಾಕ್ಷಸೇಂದ್ರಂ ॥ ೧೪೧ ॥
ಃ ಕೃತಂ ತ್ವಯಾ ಕರ್ಮ ಮಹತ್ಸುಭೀಮಂ ಹತಪ್ರವೀರಶ್ಚ ಕೃತಸ್ತ್ವಯಾಹಂ ।
ತಸ್ಮಾತ್ಪರಿಶ್ರಾಂತ ಇವ ವ್ಯವಸ್ಯ ನ ತ್ವಾಂ ಶರೈರ್ಮೃತ್ಯುವಶಂ ನಯಾಮಿ ॥ ೧೪೨ ॥

ಬಿಟ್ಟನು. ॥೧೩೯॥ ಮಹಾತ್ಮಾ - ಮಹಾ ಬುದ್ಧಿಶಾಲಿಯಾದ, ರಾಮಃ - ಶ್ರೀರಾಮನು, ವಿಹ್ವಲಂತಂ- ಭ್ರಾಂತಚಿತ್ತನಾದ, ತಂ - ಆ ರಾವಣನನ್ನು, ಪ್ರಸಮೀಕ್ಷ್ಯ - ಕಂಡು, ಅಥ - ಬಳಿಕ, ದೀಪ್ತಂ - ಪ್ರಜ್ವಲಿಸುವ, ಅರ್ಧಚಂದ್ರಂ - ಅರ್ಧಚಂದ್ರಾಕಾರ ಬಾಣವನ್ನು, ಸಮಾದದೇ - ತೆಗೆದುಕೊಂಡನು, ತೇನ - ಆ ಬಾಣದಿಂದ, ಅರ್ಕವರ್ಣಂ - ಸೂರ್ಯನ ಬಣ್ಣವುಳ್ಳ, ರಕ್ಷೋಧಿಪತೇಃ - ರಾವಣನ, ಕಿರೀಟಂ - ಕಿರೀಟವನ್ನು, ಸಹಸಾ - ಜಾಗ್ರತೆಯಾಗಿ, ಚಿಚ್ಛೇದ - ಕತ್ತರಿಸಿದನು. ॥೧೪೦॥ ರಾಮಃ- ಶ್ರೀರಾಮನು, ಯುಧಿ - ಕಾಳಗದಲ್ಲಿ, ನಿರ್ವಿ....ಶಂ - ವಿಷವಿಲ್ಲದ ಸರ್ಪಕ್ಕೆ ಸಮಾನನಾದ, ಶಾಂತಾರ್ಚಿಷಂ - ಉಪಶಾಂತವಾದ ಬೆಳಕುಳ್ಳ, ಸೂರ್ಯಮಿವ - ಸೂರ್ಯನಂತೆ, ಅಪ್ರಕಾಶಂ - ಬೆಳಕಿಲ್ಲದ, ಗತಶ್ರಿಯಂ - ಹೋದಕಾಂತಿಯುಳ್ಳ, ಕೃತ್ತ....ಟಂ - ಕತ್ತರಿಸಲ್ಪಟ್ಟ ಕಿರೀಟಗಳ ಸಮೂಹವುಳ್ಳ, ತಂರಾಕ್ಷಸೇಂದ್ರಂ-ಆ ರಾವಣನನ್ನು ಕುರಿತು, ಉವಾಚ ಹೇಳಿದನು. ॥ ೧೪೧ ॥ ತ್ವಯಾ-ನಿನ್ನಿಂದ, ಮಹತ್ - ದೊಡ್ಡದಾದ, ಸುಭೀಮಂ - ಭಯಂಕರವಾದ, ಕರ್ಮ - ಕೃತ್ಯವು, ಕೃತಂ - ಮಾಡಲ್ಪಟ್ಟಿತು, ತ್ವಯಾ - ನಿನ್ನಿಂದ, ಅಹಂ - ನಾನು, ಹತಪ್ರವೀರಶ್ಚ - ಹತರಾದ ಮಹಾ ವೀರರುಳ್ಳವರಾಗಿ, ಕೃತಃ - ಮಾಡಲ್ಪಟ್ಟೆನು, ತಸ್ಮಾತ್ - ಆದರಿಂದ, ಪರಿಶ್ರಾಂತಇವ - ಬಳಲಿದವನಂತೆ, ವ್ಯವಸ್ಯ- ನಿಶ್ಚಯಿಸಿ, ತ್ವಾಂ - ನಿನ್ನನ್ನು, ಶರೈಃ - ಬಾಣಗಳಿಂದ, ಮೃತ್ಯುವಶಂ - ಮೃತ್ಯುವಿನ ಸ್ವಾಧೀನವನ್ನು, ನನಯಾಮಿ-ಹೊಂದಿಸುವುದಿಲ್ಲ. ॥೧೪೨॥ ಹೇ ರಾತ್ರಿಂಚರರಾಜ-ಎಲೈ ರಾಕ್ಷಸೇಂದ್ರನೇ, ತ್ವಂ-ನೀನು,

ಗಡಗಡನೆ ನಡುಗಿ ಹೋದನು. ಆಗ ಶ್ರೀರಾಮನು ಪುನಃ ಅರ್ಧಚಂದ್ರಾಕಾರವಾದ ಬಾಣವನ್ನು ಪ್ರಯೋಗಿಸಿ ಅದರಿಂದಲೇ ಸೂರ್ಯನಿಗೆ ಸಮಾನವಾಗಿ ಹೊಳೆಯುತ್ತಿದ್ದ ಆ ರಾಕ್ಷಸರಾಜನ ಕಿರೀಟಗಳೆಲ್ಲವನ್ನೂ ಕೆಳಕ್ಕುರುಳಿಸಿದನು. ॥ ೧೩೬-೧೪೦ ॥ ಆ ಸಮಯದಲ್ಲಿ ವಿಷದ ಹಲ್ಲಿಲ್ಲದ ಸರ್ಪದಂತಿರುವವನೂ, ಕಿರಣಗಳಿಲ್ಲದ ಸೂರ್ಯನಂತಿರುವವನೂ, ಕುಗ್ಗಿದ ಶೌರ್ಯ ಸಂಪತ್ತುಳ್ಳವನೂ, ಭೇದಿಸಿ ಕೆಳಗುರುಳಿದ ಕಿರೀಟಗಳುಳ್ಳವನೂ, ರಾಕ್ಷಸರಾಜನೂ ಆದ ಆ ರಾವಣನನ್ನು ನೋಡಿ ಶ್ರೀರಾಮಮೂರ್ತಿಯು ಸ್ವಲ್ಪ ಮರುಕಗೊಂಡು, "ಅಯ್ಯಾ ರಾವಣನೇ! ನೀನು ಬಹು ಭಯಂಕರವಾದ ಯುದ್ಧವನ್ನು ಮಾಡಿದೆ. ಇಂಥ ನಿನ್ನನ್ನು ವಿರಥನನ್ನಾಗಿ ಮಾಡಿದುದರಿಂದ ಇದೀಗ ನಾನು ಮಹಾ ವೀರನಾದ ನಿನ್ನನ್ನು ಜಯಿಸಿದವನಾದೆ. ಇನ್ನು ನೀನು ಇಲ್ಲಿಂದ ಹಿಂತಿರುಗಿ ಹೋಗಿ ಸ್ವಲ್ಪ ವಿಶ್ರಮಿಸಿಕೊಂಡು ಬಾ. ನೀನೀಗ ಬಹಳವಾಗಿ ಆಯಾಸಗೊಂಡಿರುವೆಯಾದುದರಿಂದ ಈಗಲೇ ಈ ನನ್ನ ಬಾಣಗಳಿಂದ ನಿನ್ನನ್ನು ಯಮಪುರಿಗೆ ಕಳುಹಲಾರೆನು. ಹೋಗು; ನಿನಗೆ ಅಜ್ಞೆಯಿತ್ತಿರುವೆನು. ನೀನು ಯುದ್ಧದಲ್ಲಿ ಬಹಳವಾಗಿ ಪೀಡಿತನಾಗಿರುವೆ. ಎಲೈ ರಾವಣನೇ! ಇನ್ನು ಜಾಗ್ರತೆಯಾಗಿ ಲಂಕೆಗೆ

**ಗಚ್ಛಾಽನುಜಾನಾಮಿ ರಣಾರ್ದಿತಸ್ತ್ವಂ ಪ್ರವಿಶ್ಯ ರಾತ್ರಿಂಚರರಾಜ! ಲಂಕಾಂ । ಆಶ್ವಾಸ್ಯ ನಿರ್ಯಾಹಿ ರಥೀ ಚ ಧನ್ವೀ ತದಾ ಬಲಂ ದ್ರಕ್ಷ್ಯಸಿ ಮೇ ರಥಸ್ಥಃ ॥ ೧೪೩ ॥ ಸ ಏವ ಮುಕ್ತೋ ಹತದರ್ಪಹರ್ಷೋ ನಿಕೃತ್ತಚಾಪಸ್ಸಹತಾಶ್ವಸೂತಃ । ಶರಾರ್ದಿತಃ ಕೃತ್ತಮಹಾಕಿರೀಟೋ ವಿವೇಶ ಲಂಕಾಂ ಸಹಸಾ ಸ ರಾಜಾ ॥ ೧೪೪-೧೪೫ ॥**

ರಣಾರ್ದಿತಃ-ರಣದಲ್ಲಿ ಬಾಧಿಸಲ್ಪಟ್ಟವನಾದೆ, ಅನುಜಾನಾಮಿ-ಅಪ್ಪಣೆ ಕೊಡುವೆನು, ಗಚ್ಛ-ಹೊಗು, ಲಂಕಾಂ - ಲಂಕೆಯನ್ನು, ಪ್ರವಿಶ್ಯ - ಪ್ರವೇಶಿಸಿ, ಆಶ್ವಾಸ್ಯ - ಸಮಾಧಾನ ಮಾಡಿಕೊಂಡು, ರಥೀಚ - ರಥಾರೂಢನಾಗಿ, ಧನ್ವೀ - ಧನುರ್ಧಾರಿಯಾಗಿ, ನಿರ್ಯಾಹಿ - ಹೊರಟು ಬಾ, ತದಾ - ಆಗ, ರಥಸ್ಥಃ - ರಥಾರೂಢನಾಗಿ, ಮೇ - ನನ್ನ, ಬಲಂ - ಬಲವನ್ನು, ದ್ರಕ್ಷ್ಯಸಿ - ನೋಡುವೆ. ॥ ೧೪೩ ॥ ಹತ....ರ್ಷಃ - ಹೊಡೆಯಲ್ಪಟ್ಟ ಗರ್ವವೂ, ಸಂತೋಷವೂ ಉಳ್ಳ, ಸಃ - ಆ ರಾವಣನು, ಏವಂ - ಈ ಪರಿ, ಉಕ್ತಃ - ಹೇಳಲ್ಪಟ್ಟನು, ನಿಕೃತ್ತಚಾಪಃ - ಕತ್ತರಿಸಲ್ಪಟ್ಟ ಧನುಸ್ಸುಳ್ಳ, ಸಃ - ಆ ರಾವಣನು, ಹತಾಶ್ವಸೂತಃ - ಹೊಡೆಯಲ್ಪಟ್ಟ ಕುದುರೆಗಳೂ ಸಾರಥಿಯೂ ಉಳ್ಳವನಾದರೂ, ಶರಾರ್ದಿತಃ - ಬಾಣಗಳಿಂದ ಹೊಡೆಯಲ್ಪಟ್ಟ, ಕೃತ್ತ....ಟಃ - ಕತ್ತರಿಸಲ್ಪಟ್ಟ ದೊಡ್ಡ ಕಿರೀಟಗಳುಳ್ಳ, ಸರಾಜಾ - ಆ ರಾಜನಾದ ರಾವಣನು, ಸಹಸಾ - ಜಾಗ್ರತೆಯಾಗಿ, ಲಂಕಾಂ - ಲಂಕಾಪಟ್ಟಣವನ್ನು, ವಿವೇಶ - ಪ್ರವೇಶ ಮಾಡಿದನು. ॥ ೧೪೪ ॥ ಮಹಾಬಲೇ - ಬಹು ಬಲವಂತನಾದ, ದಾನ....ತ್ರೌ - ದಾನವರಿಗೂ, ದೇವತೆಗಳಿಗೂ ಶತ್ರುವಾದ, ತಸ್ಮಿನ್ರಜನೀಚರೇಂದ್ರೇ - ಆ ರಾಕ್ಷಸರಾಜನು, ಪ್ರವಿಷ್ಟೇ - ಪ್ರವೇಶ ಮಾಡಿದವನಾಗಲು, ರಾಮಃ - ಶ್ರೀರಾಮನು, ಪರಮಾಹವಾಗ್ರೇ - ಉತ್ತಮವಾದ ರಣಾಗ್ರದಲ್ಲಿ, ಲಕ್ಷ್ಮಣೇನಸಹ - ಲಕ್ಷ್ಮಣನೊಡಗೂಡಿದ, ಹರೀನ್ - ವಾನರರನ್ನು, ವಿಶಲ್ಯಾನ್ - ವ್ರಣರಹಿತರನ್ನಾಗಿ, ಚಕಾರ - ಮಾಡಿದನು. ॥ ೧೪೫ ॥ ತ್ರಿದಶೇಂದ್ರಶತ್ರೌ - ಇಂದ್ರಶತ್ರುವಾದ, ತಸ್ಮಿನ್ - ಆ ರಾವಣನು, ಪ್ರಭಿನ್ನೇ - ಪರಾಜಿತನಾಗಲೂ, ಸುರಾಸುರಾಃ - ದೇವರಾಕ್ಷಸರೂ, ಭೂತಗಣಾಃ - ಭೂತಸಮೂಹಗಳೂ, ದಿಶಶ್ಚ - ದಿಕ್ಪಾಲಕರು, ಸಸಾಗರಾಃ - ಸಮುದ್ರವಾಸಿಗಳಿಂದೊಡಗೂಡಿದ, ಸರ್ಷಿಮಹೋ

ತೆರಳು. ಮತ್ತೆ ರಥವನ್ನು ಸಜ್ಜುಗೊಳಿಸಿಕೊಂಡು, ಧನುರ್ಬಾಣಗಳನ್ನು ಧರಿಸಿ ಯುದ್ಧ ಸನ್ನದ್ಧನಾಗಿ ಬಂದು ನನ್ನ ಪರಾಕ್ರಮವನ್ನು ನೋಡುವೆಯಂತೆ ಹೋಗು" ಎಂದು ಹೇಳಿದನು. ಶ್ರೀರಾಮನಿಂತು ನುಡಿಯಲು ಆ ರಾವಣನು, ಕಳೆದ ಮದವೂ, ಸಂತೋಷವೂ ಉಳ್ಳವನಾಗಿ, ಭೇದಿಸಿ ಹೋದ ಧನುಸ್ಸುಳ್ಳವನೂ, ಹತನಾದ ಸಾರಥಿಯುಳ್ಳವನೂ, ಮಡಿದುರುಳಿದ ಕುದುರೆಗಳುಳ್ಳವನೂ, ಬಾಣಪೀಡಿತನೂ ಆಗಿ ಬಹು ಬೇಗನೆ ಲಂಕಾಪಟ್ಟಣಕ್ಕೆ ಹಿಂತಿರುಗಿದನು. ॥೧೪೧–೧೪೪॥ ಈ ರೀತಿ ರಾಕ್ಷಸರೊಡೆಯನೂ, ದೇವೇಂದ್ರನಿಗೆ ಪರಮ ಶತ್ರುವೂ ಆದ ಆ ರಾವಣನು ಲಂಕಾನಗರವನ್ನು ಪ್ರವೇಶಿಸುತ್ತಲೇ ಇತ್ತ ಶ್ರೀರಾಮಚಂದ್ರನು ಯುದ್ಧಭೂಮಿಯಲ್ಲಿ ಗಾಯಗೊಂಡು ಬಿದ್ದಿದ್ದ ವಾನರರನ್ನೂ, ವ್ರಣರಹಿತರನ್ನಾಗಿ ಮಾಡಿ ಉಪಚರಿಸಿದನು. ಈ ಪ್ರಕಾರವಾಗಿ ಮಹೇಂದ್ರಶತ್ರುವಾದ ಆ ರಾವಣಾಸುರನು ಘಾತಿತನಾಗಿ ಹಿಂತಿರುಗಿ ಹೊರಟುಹೋದ ತರುವಾಯ ದೇವದಾನವರೂ, ಭೂತಗಣಗಳೂ, ದಶದಿಶೆ

ತಸ್ಮಿನ್ ಪ್ರಭಿನ್ನೇ ತ್ರಿದಶೇಂದ್ರಶತ್ರೌ
ಸುರಾಸುರಾ ಭೂತಗಣಾ ದಿಶಶ್ಚ ।
ಸ ಸಾಗರಾಸ್ಸರ್ಷಿಮಹೋರಗಾಶ್ಚ
ತಥೈವ ಭೂಮ್ಯಂಬುಚರಾಶ್ಚ ಹೃಷ್ಟಾಃ ॥ ೧೪೬ ॥

**ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಏಕೋನಷಷ್ಟಿತಮಸ್ಸರ್ಗಃ.**



---

ರಗಾಃ - ಮುನಿಗಳೂ ದೊಡ್ಡ ಸರ್ಪಗಳು ಎಂಬಿವುಗಳಿಂದೊಡಗೂಡಿದ, ಭೂಮ್ಯಂಬುಚರಾಃ - ಭೂಮಿಯಲ್ಲಿ ಸಂಚರಿಸುವವರೂ, ಜಲವಾಸಿಗಳೂ, ತಥೈವ - ಹಾಗೆಯೇ, ಹೃಷ್ಟಾಃ - ಸಂತೋಷಗೊಂಡರು. ॥ ೧೪೬ ॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಏಕೋನಷಷ್ಟಿತಮಸ್ಸರ್ಗಃ.



---

ಗಳೂ, ಸಪ್ತಸಾಗರಗಳೂ, ಮಹರ್ಷಿಗಳೂ, ಮಹೋರಗರೂ, ಭೂಚರ ಜಲಚರರೂ ಪರಮಸಂತೋಷಭರಿತಗಳಾದರು. ॥ ೧೪೫-೧೪೬ ॥

ಇಂತಿದು ಶ್ರೀರಾಮಶರವಿದ್ಧ ರಾವಣಪರಾಭವ ವೃತ್ತಾಂತವೆಂಬ
ಐವತ್ತೊಂಬತ್ತನೆಯ ಸರ್ಗವು ಸಮಾಪ್ತವಾದುದು.

